ಶ್ರೀಃ

# ಕರ್ಣಾಟಕ
# ಸಾಹಿತ್ಯ ಪರಿಷತ್ಪತ್ರಿಕೆ

The Quarterly Journal of the Kannada Literary Academy, Bangalore

[ಪುಟ ೨೨] ಧಾತು, ಪುಷ್ಯ—ಈಶ್ವರ, ಜ್ಯೇಷ್ಠ [ಸಂಚಿಕೆಗಳು ೧—೨



[ವಾರ್ಷಿಕ ಚಂದಾ ರೂ. ೪] * [ಬಿಡಿ ಸಂಚಿಕೆ ರೂ. ೨—೪—೦

ಕರ್ಣಾಟಕ ಸಾಹಿತ್ಯ ಪರಿಷತ್ತು
ಹಾರ್ಡಿಂಜ್ ರಸ್ತೆ, ಬೆಂಗಳೂರು ನಗರ

[Vol. XXII, Nos. 1-2] [January-June, 1937

# ಪರಿಷತ್ಪತ್ರಿಕೆಯ ನಿಯಮಗಳು

---

ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯಿಂದ ನಿಯಮಿತವ[illegible] ಸಂಪಾದಕ ಮಂಡಲಿಯ ತೀರ್ಮಾನಗಳಲ್ಲಿ ಪರಿಷತ್ಪತ್ರಿಕೆಯ ಸ್ವರೂಪವನ್ನು ಕುರಿತದ್ದು ಈ ರೀ[illegible] ಇರುತ್ತದೆ (೫-೩-೧೯೩೪):—

ಪರಿಷತ್ಪತ್ರಿಕೆಯ ಪ್ರತಿಯೊಂದು ಸಂಚಿಕೆಯೂ ಸಾಧಾರಣವಾಗಿ ೬೦ ಪುಟಕ್ಕೆ ಕಡಮೆಯಿಲ್ಲ[illegible] ೧೦೦ಕ್ಕೆ ಹೆಚ್ಚಿಲ್ಲದೆ ಇರತಕ್ಕದ್ದು.

ಪರಿಷತ್ಪತ್ರಿಕೆಯಲ್ಲಿ ಸಾಮಾನ್ಯವಾಗಿ ಈ ಕೆಳಗಿನ ಭಾಗಗಳಿರತಕ್ಕದ್ದು :—

(೧) ಸ್ವತಂತ್ರ ಲೇಖನಗಳು —(ಕನ್ನಡಕ್ಕೂ ತತ್ಸಂಬಂಧವಾದ ಇತರ ಭಾಷೆಗಳಿಗೂ ಅನ[illegible] ತಕ್ಕುವು) ಭಾಷಾಶಾಸ್ತ್ರ, ಕಾವ್ಯಮೀಮಾಂಸೆ, ಸಾಹಿತ್ಯ ಚರಿತ್ರೆ, ಐತಿಹಾಸಿಕ ವಿಚಾರಗಳು. ಪ್ರಮಾಣ ಗ್ರಂಥಗಳ ಅನುವಾದಗಳು—ಸಂಸ್ಕೃತದಿಂದ, ಇಂಗ್ಲಿಷಿನಿಂದ, ಇತರ ಭಾಷೆಗಳಿಂದ. ಪುರಾತನ ಪ್ರಬಂಧಗಳು—ಪ್ರೌಢ ಕಾವ್ಯಗಳು, ಜನಪದ ಸಾಹಿತ್ಯ (ಲಾವಣಿ, ಇತ್ಯಾದಿ), ಶಾಸ[illegible] ಕೈಫಿಯತ್ತು, ಇತ್ಯಾದಿ. (೪) ಗ್ರಂಥ ವಿಮರ್ಶೆ—ಗ್ರಂಥ ಸ್ವೀಕಾರ. (೫) ಪರಿಷತ್ತಿನ, ಅದರ[illegible] ಗಳ ಮತ್ತು ಅದರ ಅಂಗ ಸಂಸ್ಥೆಗಳ ಕಾರ್ಯಕಲಾಪಗಳು. (೬) ಸಮಕಾಲೀನ ಪತ್ರಿಕೆ[illegible] ಬಂದಿರುವ ಮುಖ್ಯ ವಿಷಯಗಳು: ಕರ್ಣಾಟಕಕ್ಕೆ ಸಂಬಂಧಿಸಿದ ಲೇಖನಗಳ ಮುಖ್ಯಾಂ[illegible] (೭) ಸಂಪಾದಕೀಯ ಟೀಕೆಗಳು. (೮) ವಿನಿಮಯ ಪತ್ರಿಕೆಗಳ ಪಟ್ಟಿ. (೯) ಪರಿಷತ್ಪ್ರಕಟನೆ[illegible] ಪತ್ರಿಕೆಯ ಚಂದಾ ವಿವರ, ಇತ್ಯಾದಿ. (೧೦) ಕಾ॥ ನಿ॥ ಮಂಡಲಿಯ ಸದಸ್ಯರ ಪಟ್ಟಿ. (೧೧) ಸಂ[illegible] ಮಂಡಲಿಯ ಸದಸ್ಯರ ಪಟ್ಟಿ. (೧೨) ಪರಿಷತ್ತಿನ ಗ್ರಂಥಭಂಡಾರಕ್ಕೆ ಹೊಸದಾಗಿ ಸೇರಿದ ಗ್ರಂ[illegible]

ಪರಿಷತ್ಪತ್ರಿಕೆಯ ನಾಲ್ಕು ಸಂಚಿಕೆಗಳು ಈ ಕೆಳಗಿನ ತಿಂಗಳುಗಳಲ್ಲಿ ಪ್ರಕಟವಾಗತಕ್ಕದ್ದು :—

೧. ಜನವರಿ—ಪುಷ್ಯ. ೩. ಜುಲೈ—ಆಷಾಢ.
೨. ಏಪ್ರಿಲ್—ಚೈತ್ರ. ೪. ಅಕ್ಟೋಬರ್—ಆಶ್ವಯುಜ.

ಪರಿಷತ್ಪತ್ರಿಕೆಯ ಸಂಪಾದಕೀಯ ಕಾರ್ಯದ ಜವಾಬ್ದಾರಿಯನ್ನು ಸಂಪಾದಕರಿಗೆ ವಹಿಸತಕ್ಕದ್ದು. ಸಂಪಾದಕ ಮಂಡಲಿಯ ವ್ಯವಸ್ಥಾಪಕರು ಪತ್ರಿಕೆಯ ಸಂಪಾದಕರಾಗಿರತಕ್ಕದ್ದು. ಆವಶ್ಯಕತೆ ತೋರಿದ್ದ ಸಂದರ್ಭಗಳಲ್ಲಿ ಅವರು ಸಂಪಾದಕ ಮಂಡಲಿಯ ಸಲಹೆಗಳನ್ನು ತೆಗೆದುಕೊಳ್ಳತಕ್ಕದ್ದು. ಧಾರಾವಾಹಿ ವಾದ ಲೇಖನಗಳು ಒಂದು ಸಂಚಿಕೆಯಲ್ಲಿ ಸುಮಾರು ಹದಿನಾರು ಪುಟಗಳಷ್ಟು ಮಾತ್ರ ಇರತಕ್ಕದ್ದು.

[ಈ ತೀರ್ಮಾನಗಳನ್ನು ಕಾ॥ ನಿ॥ ಮಂಡಲಿ ತಾ॥ ೨೫-೩-೧೯೩೪ ಮತ್ತು ೧೯-೪-೧೯೩೪ ರಲ್ಲಿ ಅಂಗೀಕರಿಸಿತು.]

## ಸದಸ್ಯತ್ವದ ಮತ್ತು ಪತ್ರಿಕಾಗ್ರಾಹಕತ್ವದ ಕಾಲಾವಧಿ

(೧) ಪರಿಷತ್ತಿನ ಸದಸ್ಯತ್ವವು ಸಾಮಾನ್ಯವಾಗಿ ಸದಸ್ಯತ್ವಕ್ಕಾಗಿ ಬಂದ ಅಪೇಕ್ಷಾಪತ್ರವನ[illegible] ಕಾ॥ ನಿ॥ ಮಂಡಲಿ ಅಂಗೀಕರಿಸಿದ ತಾರೀಖಿನಿಂದ ೧೨ ತಿಂಗಳು ಮುಗಿಯುವವರೆಗೆ ನಡೆಯುವುದು.

(೨) ಸದಸ್ಯರಾದವರು ತಮ್ಮ ಅಪೇಕ್ಷಾಪತ್ರದಲ್ಲಿ ಪರಿಷತ್ಪತ್ರಿಕೆಯ ಗ್ರಾಹಕರಾಗಬೇಕೆಂ[illegible] ಅಪೇಕ್ಷೆಯನ್ನು ತಿಳಿಸಿದ್ದರೆ, ಅಂಥಾ ಗ್ರಾಹಕರ ಚಂದಾ ಹಣವನ್ನು ಸಾಮಾನ್ಯವಾಗಿ ಸದಸ್ಯತ್ವ ಕಾಲಾವಧಿಗೆ ಸಮವ್ಯಾಪಿಯೆಂದು ಗಣಿಸಲಾಗುವುದು.

(೩) ಪರಿಷತ್ಪತ್ರಿಕೆಯ ಗ್ರಾಹಕರಾದ ಸದಸ್ಯರು ತಮಗೆ ಮೇಲಿನ ನಿಯಮದ ಪ್ರಕಾರ ಸಲ್ಲು[illegible] ಪರಿಷತ್ಪತ್ರಿಕೆಯ ಸಂಚಿಕೆಗಳ ಜೊತೆಗೆ ಅದೇ ಸಂಪುಟದ ಹಿಂದಿನ ಸಂಚಿಕೆಗಳೂ ಬೇಕೆಂದು ಅಪೇಕ್ಷಿಸು[illegible] ಪಕ್ಷದಲ್ಲಿ, ಅಂಥ ಹಿಂದಿನ ಸಂಚಿಕೆಗಳು ಪರಿಷತ್ತಿನಲ್ಲಿ ಉಳಿದಿದ್ದು ದೊರೆಯುವುದಾದರೆ, ಅವುಗಳನ್ನು ಚಂದಾ ಕಾಲಕ್ಕೆ ಸೇರಿದ್ದಂತೆ ಲೆಕ್ಕಮಾಡಿ ಕೊಡಬಹುದು. ಇಂಥಾ ಸಂದರ್ಭದಲ್ಲಿ ಚಂದಾ ಹಣ[illegible] ಕಾಲಾವಧಿಯ ಎಣಿಕೆಯು ಬೇರೆಯಾಗುವುದು.

---

**ವಿಶೇಷ ಸೂಚನೆ.**—ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಗಿರುವ ಲೇಖನಗಳಲ್ಲಿಯ ಸಂಗತಿಗಳಿಗೂ ಅಭಿಪ್ರಾಯಗಳಿಗೂ ಆಯಾ ಲೇಖಕರು ಜವಾಬುದಾರರೇ ಏನ[illegible] ಅವು ಅವಶ್ಯವಾಗಿ ಪರಿಷತ್ತಿನವೆಂದು ಯಾರೂ ತಿಳಿಯತಕ್ಕದ್ದಲ್ಲ.

THE QUARTERLY JOURNAL
OF THE
KANNADA LITERARY ACADEMY

ol. XXII] JANUARY–JUNE 1937 [Nos. 1 & 2

## CONTENTS IN BRIEF

I. Proceedings of the **Twenty-third General Body Meeting** (Annual) held ; Bangalore on 2nd May 1937.

II. A Brief Report of the **Fourth Spring Literary Festival** organised by ie Academy and held at Bangalore from 2nd to 11th May 1937.

III. **Festival Welcome Speech**: *By Mr. D. V. Gundappa, Vice-President.*

"The various countries of the world are getting closer and closer as a sult of the rapid growth of Science. No nation can afford to exist by itself. Live together' is the motto of the present-day nations. Thus to live in fellow-ip with the rest of the world, ancient wisdom alone is not enough; knowledge Modern Science is also necessary. The main aim of the lectures of the estival is to spread scientific knowledge and modern thought among the masses he Kannada people and inform them about the world-forces and problems o-day. Incidentally, the Kannada language acquires strength and pliability, dled by lecturers who are experts in their subjects. Another aim is to correlate ature with actual life. Literature is not a hobby of the learned few; it isages all efforts, all things connected with the life of the people. It is essen- to the well-being of every individual. The Parishat is endeavouring to give broad connotation to the term 'Literature'."

IV. **Festival Opening Speech**: *By Rajamantrapravina N. Madhava Rao, .A., B.L., Member of Council, Government of Mysore.*

"To see that the teacher is taught and to make him the instrument as ell as the beneficiary of the propaganda (of the Parishat) appears to be a appy idea. If there has been a revival of interest in Kannada literature the country in recent times, some of the credit for this must necessarily to the Pandits and others who kept the lamp of vernacular studies burning nder discouraging circumstances. But a good deal of this credit belongs so to the modern authors who combine scholarship in English or the ciences with a genuine love of the mother-tongue which they have deli-erately chosen as the medium of expressing their thoughts and ideas for he benefit of the masses. They are helping to evolve a style which is bo mple and elegant."

V. **Presidential Speech at the Ladies' Day**: *By Mrs. N. Madhava Rao.*

"It is not enough for the growth of a society if only men are educated. household with an uneducated housewife is like a cart with one of its heels dislocated. It is only when a woman is educated that she can properly ring up her children in such a way that they may be useful to their country. esides being educated, women should be able to express to others in an attrac-ve way what they have learnt. It is the duty of educated women to spread nowledge among their illiterate sisters and among the village-folk. To carry is out, they must take to and encourage the study of the vernacular."

VI. **Birth-Day Celebration of His Highness the Maharaja of Mysore,** *the rand Patron of the Parishat.*

Brief Report of the Public Meeting held by the Parishat, on 19th June 937.

VII. **Poetry-Reading Classes:**

The Valedictory Ceremony of the Third Annual Session of this activ of the Parishat took place in the Parishat Hall on 4th August 1937 under Presidentship of *Rajadharmaprasakta K. Shankaranarayana Rao, B.A., B.* Acting Chief Judge of the Mysore High Court. Certificates of Proficiency v distributed among successful candidates. A detailed report is given.

VIII. **Persian and Urdu Words in Kannada :** *By Mr. D. K. Bheema Rao, M.A., Professor of Kannada, Osmania University, Hyderabad (Deccan).*

The author explains how Persian and Urdu words came to be in porated in the Kannada Language by the contact of Muhammadan inva with the Kannada country and gives some interesting examples of words from classical works of Kannada literature and proverbial sayings as as from official documents such as 'Kaiphiats' and 'Bhakhairs'.

IX. **Activities of the Parishat:** Important Topics :

(i) **Resolutions of the Managing Committee:**

Kannada in Aundh State—Closing of accounts relating to Propaga Work by Mr. V. B. Alur of Dharwar on behalf of the Parishat—Closing accounts relating to Literary Conferences held at Raichur and Bomba Grateful acknowledgment of presentation of 116 volumes of old periodic in English by the Basavangudi Union and Service Club, Bangalore.

(ii) **Literary and Cultural Activities:**

(1) *Lecture*: "Yasodhara Charitre"—By Prof. B. M. Srikantia, M.A., (2) Condolence Meeting in honour of the late *Praktanavimarsa Vichaksh Mahamahopadhyaya* R. Narasimhachar, M.A., M.R.A.S., with Sir K. P. Putta Chetty, Kt., C.I.E., LL.D., in the Chair. (3) *L.* "What is Science?"—By B. M. Sivaramaiah. (4) *L.* "Vachana Sāhitya"—By Sri Mahadeva Swami (5) *L.* "Kannada Kula" (The Kannada People)—By Mr. D. R. Bendre, (6) *L.* "The Nine Gems"—By Mr. B. Rama Rao, M.A., D.I.C. (Lond.), (7–8) *L.* "Sanātana Bhauta Vijnana" (Physics in Ancient India)—By Mr. Venkataramanaiya. (9) *L.* "Milinda Prasna"—By Mr. G. P. Rajaratnam,

X. **Members:** Enrolled during the quarter : 14 ; Institutions affiliated

XI. **Reports from Affiliated Institutions:** The Karnataka Sanghas of: Willingdon College, Sangli ; Mercara ; Chitaldrug ; Kolar ; The Training Coll Mysore ; Channarayapatna ; Kundapur.

XII. **Book Reviews and Acknowledgments:** Number of books revie 15 ; Number of books acknowledged : 170.

XIII. **Editorial Notes:** About ourselves—More encouragement neede the Parishat Journal—Books for review to be sent in duplicate—Change Editorship : Mr. D. C. Subbarayappa, B.A., B.L., appointed Editor and mner of the Editorial Board in place of Mr. A. R. Krishna Sastri, M. cknowledgment of the services of Mr. Sastri to the Journal—Congratulat to Mr. N. S. Subba Rao, M.A., on his appointment as Vice-Chancellor of Mysore University and on the conferment of the title of "*Rajakaryapravin*" him by His Highness the Maharaja—Congratulations to Mr. E. G. McAl M.A. (Edin.), Dip. Edn. (Edin.), V.D., J.P., on his being appointed as the Dir of Public Instruction in Mysore—Celebrations in Mysore City in memory of Highness the Maharaja late Mummadi Sri Krishnaraja Wadiyar—Import of the vernacular : Mysore University Convocation Address of Mr. Venkatarama Sastri, B.A., B.L., C.I.E.—Universities and the vernaculars: Pre dential Address of Mr. N. S. Subba Rao, M.A., at the Annamalai Univers Founder's Day Celebrations—Twenty-second Kannada Literary Conference Jamkhandi in December 1937.

**Appendices:** Report of the Second Conference of the Karnataka Sang —Recitation Competitions for Boys and Girls—Kannada *Habba*—Twen second Literary Conference at Jamkhandi.



ಸಂಪುಟ ೨೨] **ವಿ ಷ ಯ ಸೂ ಚಿ ಕೆ** [ಸಂಚಿಕೆಗಳು ೧-೨

# ವಿನಿಮಯ ಪತ್ರಿಕೆ ಮತ್ತು ಪ್ರಕಟನೆಗಳ ಪಟ್ಟಿ

**ತ್ರೈಮಾಸಿಕ ಪತ್ರಿಕೆಗಳು:**—೧. The Journal of the Mythic Soci ೨. The Journal of the Andhra Historical Research Society. ೩. T Journal of the Bharata Itihasa Samshodhaka Mandala. ೪. The Ma rashtra Sahitya Parishat Patrika. ೫. The Karnatak Historical Revi ೬. Journal of the Annamalai University. ೭. Journal of the Bom Branch of the Royal Asiatic Society. ೮. Indian Culture. ೯. Jou of the K. R. Cama Oriental Research Institute. ೧೦. Journal of In History. ೧೧. Journal of the International Mediterranean Associat ೧೨. Zeitschrift für Indologie und Iranistik. ೧೩. ಶ್ರೀಮನ್ ಮಹಾರಾಜ ಸಂಸ್ಕೃತ ಮಹಾಪಾಠಶಾಲಾ ಪತ್ರಿಕಾ. ೧೪. ಪ್ರಾಚೀನ ಕರ್ನಾಟಕ. ೧೫. ಪ್ರ ಕರ್ನಾಟಕ. ೧೬. ವಂಗೀಯ ಸಾಹಿತ್ಯ ಪರಿಷತ್ಪತ್ರಿಕೆ. ೧೭. The Jaina Antiqu (ಜೈನ ಸಿದ್ಧಾಂತ ಭಾಸ್ಕರ). ೧೮. Hindustani. ೧೯. ಹಳ್ಳಿಯ ಆಳು. ೨೦.

**ದ್ವೈಮಾಸಿಕ ಪತ್ರಿಕೆಗಳು:**—೧. Journal of the Bombay Univers ೨. ಆಂಧ್ರ ಸಾಹಿತ್ಯ ಪರಿಷತ್ ಪತ್ರಿಕೆ. ೩. ಶಿವಾನುಭವ. ೪. Bulletin of Museum of Fine Arts.

**ಮಾಸ ಪತ್ರಿಕೆಗಳು:**—೧. The Mysore Economic Journal. ೨. J Gazette. ೩. The Indian P.E.N. ೪. ಅಧ್ಯಾತ್ಮ ಪ್ರಕಾಶ. ೫. ಆಟ ಚಂದ್ರಿಕೆ. ೬. ಜಯಕರ್ನಾಟಕ. ೭. ಮೈಸೂರು ಸಹಕಾರ ಪತ್ರಿಕೆ. ೮. ರಂಗಭೂ ೯. ಸುಬೋಧ. ೧೦. ಸದ್ಬೋಧ ಚಂದ್ರಿಕೆ. ೧೧. ಮೈಸೂರು ವ್ಯವಸಾಯ ಕೋ ಸಂಘದ ಪತ್ರಿಕೆ. ೧೨. ಕಾದಂಬರೀ ಸಂಗ್ರಹ. ೧೩. ದೇಶೀಯ ವಿದ್ಯಾಶಾಲಾ ಪ ೧೪. ಮೈಸೂರು ಮಕ್ಕಳು. ೧೫. ಸದ್ಧರ್ಮದೀಪಿಕೆ. ೧೬. ಮಕ್ಕಳ ಪು ೧೭. ವಿವೇಕಾಭ್ಯುದಯ. ೧೮. ತ್ರಿವೇಣಿ. ೧೯. ಕತೆಗಾರ. ೨೦. ಭಾರತಿ. ೨೧. ಬಂಧು. ೨೨. ನಗುವನಂದ. ೨೩. ಭಾರತಿ (ತೆಲುಗು). ೨೪. ಕಥಾಕು ೨೫. ವೀರಶೈವ ಚಂದ್ರಿಕೆ. ೨೬. ಸಂಸ್ಕೃತ ಸಾಹಿತ್ಯ ಪರಿಷತ್ಪತ್ರಿಕೆ. ೨೭. ಸ ೨೮. ಹಂಸ. ೨೯. ವಿಮಾ ವಾಣಿಜ್ಯ. ೩೦. ವಿದ್ಯಾದಾಯಿನಿ. ೩೧. ವಿವಿಧ ವಿ ವಿಸ್ತಾರ. ೩೨. ವಿಶ್ವವಾಣಿ. ೩೩. ದಿವ್ಯ ಜ್ಯೋತಿ.

**ವಾರ ಪತ್ರಿಕೆಗಳು:**—೧. ರಾಜಹಂಸ. ೨. ಸ್ವದೇಶಾಭಿಮಾನಿ. ೩. ಕಂಠೀ ೪. ರಾಷ್ಟ್ರಬಂಧು. ೫. ಕರ್ನಾಟಕ ವೈಭವ. ೬. ಶರಣ ಸಂದೇಶ. ೭. ಬಸವ ೮. ಲೋಕಮತ. ೯. ಅರುಣೋದಯ. ೧೦. ಸಂಯುಕ್ತ ಕರ್ನಾಟಕ. ೧೧. ಕರ್ನಾ ಬಂಧು. ೧೨. ಪ್ರಜಾಮತ. ೧೩. ಜನ್ಮಭೂಮಿ. ೧೪. ವಿಶ್ವಕರ್ನಾಟಕ. ೧೫. ಅರ್ಥಸಾ ಪತ್ರಿಕೆ. ೧೬. ವೃತ್ತಾಂತ ಪತ್ರಿಕೆ. ೧೭. ವಿಶ್ವಬಂಧು. ೧೮. ಉದಯ. ೧೯. ಕರ್ನಾ ಟೈಮ್ಸ್. ೨೦. ತಾಯಿನಾಡು. ೨೧. ಪ್ರಭಾತ. ೨೨. ಮೈಸೂರು ಗೆಜೆಟ್. ೨೩. ನವಸಂ

**ದಿನ ಪತ್ರಿಕೆ:**—೧. ನವಜೀವನ.

**ಇತರ ಪ್ರಕಟನೆಗಳು:**—೧. ಇಂಡಿಯ ಸರ್ಕಾರದ ಶಾಸನದ ಇಲಾಖೆಯ ಪ್ರ ಗಳು. ೨. ಮೈಸೂರು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೩. ಹೈದರಾಬಾ ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೪. ಜಯಕರ್ನಾಟಕ ಗ್ರಂಥಮಾ ೫. ಮನೋಹರ ಗ್ರಂಥಮಾಲೆ. ೬. ವಿದ್ಯಾರಣ್ಯ ಗ್ರಂಥಮಾಲೆ. ೭. ಪ್ರೇಮ ಗ್ರಂಥಮಾ ೮. Indiana.

ಕರ್ನಾಟಕ

# ಸಾಹಿತ್ಯ ಪರಿಷತ್ಪತ್ರಿಕೆ

ಸಂಪುಟ ೨೨

೧೯೩೭

(ಧಾತು – ಈಶ್ವರ ಸಂವತ್ಸರ)




ಕರ್ನಾಟಕ ಸಾಹಿತ್ಯ ಪರಿಷತ್ತು
ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ
ಹಾರ್ಡಿಂಜ್ ರಸ್ತೆ, ಚಾಮರಾಜಪೇಟೆ
ಬೆಂಗಳೂರು

# ಇಪ್ಪತ್ತೆರಡನೆಯ ಸಂಪುಟದ ವಿಷಯ ಸೂಚಿಕೆ

---

895-38 ಬೆಂಗಳೂರು ಪ್ರೆಸ್





ದ್ವಿತೀಯ ಸಚಿವರಾದ ರಾಜಮಂತ್ರಪ್ರವೀಣ ಶ್ರೀಮಾನ್ ಎನ್. ಮಾಧವರಾವ್, ಬಿ.ಎ., ಬಿ.ಎಲ್. ಅವರು

[illegible]

# ಕರ್ಣಾಟಕ ಸಾಹಿತ್ಯ ಪರಿಷತ್ತು

## ೨೩ನೆಯ ಸಕಲ ಸದಸ್ಯ ಅಧಿವೇಶನ

(ವಾರ್ಷಿಕ)

ಬೆಂಗಳೂರು, ೨ನೆಯ ಮೇ ೧೯೩೭

---

ಕರ್ಣಾಟಕ ಸಾಹಿತ್ಯ ಪರಿಷತ್ತಿನ ಇಪ್ಪತ್ತೊಂದನೆಯ ವಾರ್ಷಿಕಾಧಿವೇಶನವು ಬೆಂಗಳೂರು ನಗರದಲ್ಲಿ ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರದಲ್ಲಿ ೧೯೩೭ನೆಯ ಮೇ ೨ನೆಯ ತಾರೀಖು ಭಾನುವಾರ ಬೆಳಗ್ಗೆ ೮ ಘಂಟೆಗೆ ಪ್ರಾರಂಭವಾಯಿತು. ಪರಿಷದುಪಾಧ್ಯಕ್ಷರಾದ ಶ್ರೀ॥ ಡಿ. ವಿ. ಗುಂಡಪ್ಪನವರು ಸಭಾಪತಿಗಳಾಗಿದ್ದರು.

ಅಧಿವೇಶನಕ್ಕೆ ಬಂದಿದ್ದ ಸದಸ್ಯರ ಸಂಖ್ಯೆ ೭೬. ಅವರ ಹೆಸರುಗಳು :—

ಮ॥ ರಾ॥ ಗಳಾದ—

(೧) ಅಶ್ವತ್ಥನಾರಾಯಣರಾವ್, ಬಿ. —ಬಿ.ಎ.

(೨) ಆಂಬ್ರೋಸ್ ಆನಂದ, ಕೆ. —ಬಿ.ಎ.

(೩) ಈಶ್ವರಮೂರ್ತಿಗಳು, ಜಿ. ಎ. —ಡಾ॥ ಬಿ.ಎ., ಎಲ್.ಎಂ.ಎಸ್.

(೪) ಕಪಿನೀಪತಿಭಟ್ಟರು, ಎಚ್. ಸಿ. —ಬಿ.ಎ., ಬಿ.ಇ.

(೫) ಶ್ರೀಮತಿ ಕಲ್ಯಾಣಮ್ಮನವರು, ಆರ್.

ಮ॥ ರಾ॥ ಗಳಾದ—

(೬) ಕೃಷ್ಣಮೂರ್ತಿಗಳು, ಕೆ. ಎಸ್.

(೭) ಕೃಷ್ಣಮೂರ್ತಿರಾವ್, ಎಸ್. ವಿ. —ಬಿ.ಎ., ಎಲ್‌ಎಲ್.ಬಿ.

(೮) ಕೃಷ್ಣರಾಯರು, ಅ. ನ.

(೯) ಕೃಷ್ಣರಾಯರು, ಜಿ. ಎಸ್.

(೧೦) ಕೃಷ್ಣರಾಯರು, ಟಿ.

(೧೧) ಕೃಷ್ಣಶಾಸ್ತ್ರಿಗಳು, ಎ. ಆರ್. —ಎಂ.ಎ.

(೧೨) ಗುಂಡಪ್ಪನವರು, ಎಲ್. —ಎಂ.ಎ.

(೧೩) ಗುಂಡಪ್ಪನವರು, ಡಿ. ವಿ.

ಮ॥ ರಾ॥ ಗಳಾದ—

(೧೪) ಗೋಪಾಲಕೃಷ್ಣರಾಯರು, ಕೆ. —ಬಿ.ಎ.

(೧೫) ಗೋಪಾಲಸ್ವಾಮಿ, ಎಸ್. —ಎಂ.ಎ.

(೧೬) ಗೋಪಾಲರಾಯರು, ಎಂ. ಎನ್.—ಬಿ.ಎ.

(೧೭) ಚಂದ್ರಶೇಖರಯ್ಯನವರು, ಕೆ. ಎಸ್.—(ಪ್ರತಿನಿಧಿ, ಸಂಗೀತ ಪ್ರೇಮಿ ಮಂಡಲಿ, ಬೆಂಗಳೂರು)

(೧೮) ಶ್ರೀಮತಿ ತಂಗಮ್ಮನವರು, ಪಿ. ಎನ್.—ಬಿ.ಎ.

ಮ॥ ರಾ॥ ಗಳಾದ—

(೧೯) ತಾಂದೋಣಿರಾಯರು, ಎ. —ಎಲ್.ಸಿ.ಇ., ಎಂ.ಐ.ಇ. (ಇಂಡ್.)

(೨೦) ತಿಪ್ಪಯ್ಯನವರು, ಎಂ. ಕೆ. —ಬಿ.ಎ.

(೨೧) ಶ್ರೀಮತಿ ತಿರುಮಲಾಂಬ

ಮ॥ ರಾ॥ ಗಳಾದ—

(೨೨) ದೊಡ್ಡವೀರಪ್ಪನವರು, ಜೆ. ವಿ.

(೨೩) ನರಸಿಂಗರಾಯರು, ಎಲ್. ಕೆ.

ಮು॥ ರಾ॥ ಗಳಾದ—

(೨೪) ನರಸಿಂಗರಾಯರು, ವೈ. —ಬಿ.ಎ., ಬಿ.ಎಲ್.

(೨೫) ನರಸಿಂಹಮೂರ್ತಿಗಳು, ಎಂ. —ಬಿ.ಎ.

(೨೬) ನರಸಿಂಹಮೂರ್ತಿಗಳು, ಎಸ್. —ಬಿ.ಎ.

(೨೭) ನರಸಿಂಹಾಚಾರ್ಯರು, ಪಿ. ಟಿ. —ಬಿ.ಎ.

(೨೮) ನರಸಿಂಹಾಚಾರ್ಯರು, ಎಂ. ಎ.—ಬಿ.ಎ.

(೨೯) ನಾರಾಯಣರಾಯರು, ಎಚ್. —ಬಿ.ಎ.

(೩೦) ನಾರಾಯಣರಾಯರು, ಎಚ್. ಎನ್.—ಎಂ.ಎ., ಬಿ.ಟಿ.

(೩೧) ನಾರಾಯಣರಾಯರು, ಎಲ್. —ಎಂ.ಎಸ್‌ಸಿ.,

(೩೨) ನಾರಾಯಣರಾಯರು, ಕೆ. —ಬಿ.ಎ.

(೩೩) ನಾರಾಯಣರಾಯರು, ಕೆ. ಎಸ್.—ಬಿ.ಎ.

(೩೪) ನಾರಾಯಣಯ್ಯಂಗಾರ್ಯರು, ಎಂ. ಎ.—ಎಂ.ಎ.

(೩೫) ಬ್ರಹ್ಮಸೂರಿಶಾಸ್ತ್ರಿಗಳು (ಪ್ರತಿನಿಧಿ, ಕ॥ ಸಂಘ, ಶ್ರವಣಬೆಳಗೊಳ)

(೩೬) ಬಿಂದೂರಾಯರು, ಎಸ್. ಜಿ.

(೩೭) ಭೀಮಾಚಾರ್, ಬಿ. ಎಸ್. —ಎಂ.ಎಸ್‌ಸಿ.

(೩೮) ಮಂಗೇಶರಾಯರು, ಪಿ. —ಬಿ.ಎ., ಎಲ್.ಟಿ.

(೩೯) ಮಾಧವರಾಯರು, ಸಿ. ಆರ್. —ಬಿ.ಎ.

(೪೦) ಮುಗಳಿ, ರಂ. ಶ್ರೀ.—ಎಂ.ಎ., ಬಿ.ಟಿ.

(೪೧) ರಂಗಣ್ಣನವರು, ಎಸ್. ವಿ. —ಎಂ.ಎ.

(೪೨) ರಂಗಸ್ವಾಮಿ ಅಯ್ಯಂಗಾರ್ಯರು, ಡಿ.—ಬಿ.ಎ.

(೪೩) ರಾಘವಾಚಾರ್ಯರು, ಕೆ. ವಿ. —ಎಂ.ಎ., ಬಿ.ಟಿ.

ಮು॥ ರಾ॥ ಗಳಾದ—

(೪೪) ರಾಜರತ್ನಂ, ಜಿ. ಪಿ.—

(೪೫) ರಾಜಾರಾಯರು, ಸಾ

(೪೬) ರಾಮಚಂದ್ರಯ್ಯನವ ಎನ್. ಎಸ್.—ಎ

(೪೭) ರಾಮರಾಯರು, ಎ. —ಬಿ.ಎ., ಎಲ್‌ಎಲ್

(೪೮) ರಾಮರಾಯರು, ಎಂ.

(೪೯) ರಾಮರಾಯರು, ಟಿ. —ಬಿ.ಎ.

(೫೦) ರಾವ್, ಎಸ್. ಎಸ್.— ಬಿ.ಇ.

(೫೧) ಶ್ರೀಮತಿ ಲಕ್ಷ್ಮಮ್ಮ

ಮು॥ ರಾ॥ ಗಳಾದ—

(೫೨) ವಾಸುದೇವಮೂರ್ತಿಗ —ಬಿ.ಎ.

(೫೩) ವೆಂಕಟಪ್ಪನವರು, ಬಿ. —ಎಂ.ಎಲ್.ಸಿ.

(೫೪) ವೆಂಕಟರಾಮಯ್ಯನವ ಸಿ. ಕೆ.—ಎಂ.ಎ., ಎಲ್‌ಎಲ್.ಬಿ.

(೫೫) ವೆಂಕಟಾಚಾರ್, ಬಿ.— ಬಿ.ಕಾಮ್.

(೫೬) ವೆಂಕಟೇಶ ಅಯ್ಯಂಗಾ ಎನ್.—ಬಿ.ಎ.

(೫೭) ವೆಂಕಟೇಶ ಐಯಂಗಾ ಎಂ.—ಎಂ.ಎ.

(೫೮) ವೆಂಕೋಬರಾಯರು, —ಬಿ.ಎ.

(೫೯) ವೆಂಕೋಬಾಚಾರ್ಯ —ಬಿ.ಎ., ಬಿ.ಟಿ.

(೬೦) ಶಂಕರಭಟ್ಟರು, ಕೆ.—

(೬೧) ಶರ್ಮನ್, ಟಿ. ಟಿ.

(೬೨) ಶಾಮರಾಜಯ್ಯಂಗಾ ಕೆ.—ಬಿ.ಎ., ಎಲ್

(೬೩) ಶಿವರಾಮಶಾಸ್ತ್ರಿಗಳು, —ಎಂ.ಎ

(೬೪) ಶ್ರೀಕಂಠಯ್ಯನವರು, —ಎಂ.ಎ., ಬಿ.ಎ

(೬೫) ಶ್ರೀನಿವಾಸಮೂರ್ತಿಗ ಎಂ. ಆರ್.—ಬಿ.ಎ.

ಋ॥ ರಾ॥ ಗಳಾದ—
(೬೬) ಶ್ರೀನಿವಾಸಯ್ಯಂಗಾರ್ಯರು, ಸಿ. ಎನ್., ಡಾ॥—ಡಿ.ಎಸ್‌ಸಿ.
(೬೭) ಶ್ರೀನಿವಾಸರಾಯರು, ಪಿ. —ಎಂ.ಎಸ್‌ಸಿ.
(೬೮) ಶೇಷಗಿರಿರಾವ್, ಡಿ. ವಿ.—ಬಿ.ಎ.
(೬೯) ಶೇಷಾಚಾರ್ಯರು, ಸಿ. —ಎಂ.ಎ.
(೭೦) ಸಿದ್ದಲಿಂಗಯ್ಯನವರು, ಎಂ., ಡಾ॥—ಎಂ.ಎ., ಬಿ.ಟಿ., ಪಿಎಚ್.ಡಿ.
(೭೧) ಸೀತಾರಾಮಯ್ಯನವರು, ವಿ. —ಎಂ.ಎ.

ಮ॥ ರಾ॥ ಗಳಾದ—
(೭೨) ಸುಬ್ಬರಾಯರು, ಆರ್.
(೭೩) ಸುಬ್ಬರಾಯಪ್ಪನವರು, ಡಿ. ಸಿ. —ಬಿ.ಎ., ಬಿ.ಎಲ್.
(೭೪) ಸುಂದರಶಾಸ್ತ್ರಿಗಳು, ಪಿ. —ವಿದ್ವಾನ್
(೭೫) ಹನುಮಂತನ್, ಎಂ. ಎಸ್. (ಪ್ರತಿನಿಧಿ, ಕ॥ ಸಂಘ, ಚೆನ್ನರಾಯಪಟ್ಟಣ)
(೭೬) ಹರಿಯಪ್ಪನವರು, ಎಚ್. ಎಲ್.—ಎಂ.ಎ.

ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ॥ ಎಸ್. ವಿ. ರಂಗಣ್ಣನವರು ತಾ॥ ೧೯—೩—೧೯೩೭ರಲ್ಲಿ ಎಲ್ಲ ಸದಸ್ಯರಿಗೂ ಕಳುಹಿಸಿದ್ದ ವಾರ್ಷಿಕಾಧಿವೇಶನದ ಆಹ್ವಾನ (ನೋಟೀಸ್) ಪತ್ರಿಕೆಯನ್ನು ಓದಿದರು.

ಮದರಾಸಿನಿಂದ ಶ್ರೀ॥ ಬೆನಗಲ್ ರಾಮರಾವ್, ಎಂ.ಎ., ಎಲ್‌ಎಲ್.ಬಿ., ಅವರೂ, ಹೈದರಾಬಾದಿನಿಂದ ಶ್ರೀ॥ ಡಿ. ಕೆ. ಭೀಮಸೇನರಾವ್, ಎಂ.ಎ., ಅವರೂ ಅಧಿವೇಶನಕ್ಕೆ ಬರಲು ಸಾಧ್ಯವಿಲ್ಲವೆಂದು ವಿಷಾದಿಸಿ ಕಾಗದ ಬರೆದಿದ್ದ ಸಂಗತಿಯನ್ನು ಸಭಾಪತಿಗಳು ಸಭೆಗೆ ಅರಿಕೆಮಾಡಿದರು.

ಅನಂತರ ಸಭಾಪತಿಗಳು ಸದಸ್ಯರಿಗೆ ಸ್ವಾಗತವನ್ನು ಬಯಸಿ ಭಾಷಣಮಾಡಿ, ಅದರಲ್ಲಿ ಈ ರೀತಿ ಹೇಳಿದರು:—

ವಾರ್ಷಿಕಾಧಿವೇಶನವು ಸಾಮಾನ್ಯವಾಗಿ ಪರಿಷತ್ತಿನ ಸಮ್ಮೇಳನ ನಡೆಯತಕ್ಕ ಸ್ಥಳದಲ್ಲಿ, ಸಮ್ಮೇಳನದ ದಿವಸಗಳ ಪೈಕಿ ಒಂದು ದಿವಸ, ನಡೆಯುವ ವಾಡಿಕೆ ಇತ್ತು. ಆದರೆ ಳೆದ ವರ್ಷ ಪರಿಷತ್ಸಮ್ಮೇಳನಕ್ಕೆ ಯಾವ ಸ್ಥಳದಿಂದಲೂ ಆಹ್ವಾನ ಬರಲಿಲ್ಲವಾದ ಕಾರಣ ಂದಲೂ, ಮತ್ತು ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವ ಮಂಡಲಿಯವರು ತಮ್ಮ ಉತ್ಸವದ ಅಂಗವಾಗಿ ಕನ್ನಡ ಸಾಹಿತ್ಯ ಸಮ್ಮೇಳನವೊಂದನ್ನು ತಾವೇ ನಡಸಬೇಕೆಂದು ಉದ್ದೇಶಿಸಿ ಆ ಉದ್ದೇಶವನ್ನು ಪರಿಷತ್ತಿಗೆ ತಿಳಿಸಿದ್ದುದರಿಂದಲೂ, ಕಾ॥ ನಿ॥ ಮಂಡಲಿ ದನ್ನೆಲ್ಲ ಪರ್ಯಾಲೋಚಿಸಿ, ೧೯೩೬ನೆಯ ಇಸವಿಯ ಸಾಹಿತ್ಯ ಸಭೆಯ ಜವಾಬ್ದಾರಿಯನ್ನು ಮಂಡಲಿಗೇ ಒಪ್ಪಿಸಿಕೊಡಬೇಕೆಂದು ತೀರ್ಮಾನಿಸಿತು. ಹೀಗೆ ಪರಿಷತ್ತಿನ ಕರ್ತೃತ್ವದಲ್ಲಿ ಮ್ಮೇಳನ ನಡೆಯಲಿಲ್ಲವಾಗಿ, ಕಳೆದ ಡಿಸೆಂಬರಿನಲ್ಲಿ ವಾರ್ಷಿಕಾಧಿವೇಶನವೂ ನಡೆಯಲು ಅನುಕೂಲಿಸಲಿಲ್ಲ. ಈ ವಾರ್ಷಿಕಾಧಿವೇಶನವನ್ನು ಹಂಪೆಯಲ್ಲಿ ವಿಜಯನಗರದ ಉತ್ಸವ ಕಾಲದಲ್ಲಿಯೇ ಸೇರಿಸಬೇಕೆಂಬ ಯೋಚನೆಗೆ ತಕ್ಕ ಕಾಲಾವಕಾಶ ಸ್ಥಳಾನುಕೂಲಗಳ ಅವಸೆ ತೋರದಿದ್ದುದರಿಂದ, ಮುಂದೆ ಬೆಂಗಳೂರಿನಲ್ಲಿ ನಡೆಯಲಿರುವ ವಿಶೇಷ ಸಾಹಿತ್ಯೋತ್ಸವ ಸಂದರ್ಭದಲ್ಲಿ ಈ ವಾರ್ಷಿಕಾಧಿವೇಶನವು ನಡೆಯಬಹುದೆಂದು ಕಾ॥ ನಿ॥ ಮಂಡಲಿ ತೀರ್ಮಾನಮಾಡಿತು. ಆ ತೀರ್ಮಾನದಂತೆ ಈಗ ಈ ಸಭೆ ಸೇರಿರುತ್ತದೆ. ಇದಕ್ಕೆ ಮೈಸೂರು ಪ್ರಾಂತದ ಹೊರಗಿನ ಸದಸ್ಯರೂ ಕೆಲವರು ಬಂದಿದ್ದಾರೆಂದು ವಿಜ್ಞಾಪನೆ ಮಾಡಲು ನನಗೆ ಸಂತೋಷವಾಗಿದೆ. ಮದುವೆ ಮುಂಜಿಗಳ ಕಾಲದಲ್ಲಿ ಬಂಧು ಬಳಗವೆಲ್ಲ ಒಂದು ಸೇರುವಹಾಗೆ ಈ ದಿವಸ ನಾವು ಸೇರಿದ್ದೇವೆ. ಈ ಉಪಮಾನವನ್ನು ಕೊಡುವಾಗ

ಇನ್ನೊಂದು ಮಾತನ್ನು ಹೇಳಬೇಕಾಗುತ್ತದೆ. ಅದಕ್ಕಾಗಿ ಮುಂಚೆಯೇ ಕ್ಷಮಾಪಣೆಯನ್ನು ಕೇಳುವವನಾಗಿದ್ದೇನೆ. ಮದುವೆಯ ಹಬ್ಬದ ಕಡೆಯಲ್ಲಿ "... ನಿಷ್ಠೂರ" ಎಂಬ ಒಂದು ಕಹಿ ಪ್ರಸಂಗ ಬರುವುದುಂಟಷ್ಟೆ? ಇಂದಿನ ನಮ್ಮ ... ದಲ್ಲಿ ಅಂಥಾದ್ದಕ್ಕೆ ಅವಕಾಶಕೊಡಬಾರದೆಂದು ಬೇಡುತ್ತೇನೆ. ಈ ದಿನದ ಕಾ... ಕೆಲವು ಬಹಳ ಮುಖ್ಯವಾದುವಾಗಿವೆ. ಕೆಲವು ತಮಗೆ ಪ್ರುತಪಡಿಸತಕ್ಕವಾಗಿವೆ; ... ಪರಿಷತ್ತಿನ ಪುರೋವೃದ್ಧಿಗೆ ಅವಸರದ್ದಾಗಿವೆ. ಹೀಗೆ ಕೆಲಸವು ಬಹಳವಾಗಿ... ತಾವುಗಳೆಲ್ಲ ಸಹಕರಿಸಿ ಅದನ್ನು ಬೇಗನೆ ಆಗಮಾಡಿಸಬೇಕೆಂದು ಬೇಡುತ್ತೇನೆ.

ಆಲೋಚ್ಯ ವಿಷಯಗಳಲ್ಲಿ ಮೊದಲನೆಯದು "೧೯೩೬ನೆಯ ವರುಷ... ಮತ್ತು ಅದರ ಅಂಗೀಕಾರ." ಈ ವಿಷಯದಲ್ಲಿ ನಾನು ನನ್ನ ಸ್ವಂತ ... ಯಿಂದ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ; ಹೋದ ವರ್ಷದಲ್ಲಿ ... ಎಷ್ಟು ಕೆಲಸವನ್ನು ಮಾಡಬೇಕೆಂದು ಅಪೇಕ್ಷೆಪಟ್ಟುಕೊಂಡಿದ್ದೆವೋ ... ನಡೆಯಲಿಲ್ಲವೆಂದು ನಾನು ಹೇಳಬೇಕಾಗಿದೆ. ಮತ್ತು ಅದಕ್ಕೆ ಮುಖ್ಯ... ನನ್ನ ಅಸಾಮರ್ಥ್ಯವೆಂದು ನಾನು ಒಪ್ಪಿಕೊಳ್ಳಬೇಕಾಗಿದೆ. ನನ್ನ ಸ್ವಂತ ... ಸರಿಯಾಗಿಲ್ಲದ ಕಾರಣದಿಂದಲೂ, ಗೃಹಕೃತ್ಯದ ನಿಮಿತ್ತಗಳ ಕಾರಣದಿಂದಲೂ ... ಪರಿಷತ್ತಿಗೆ ಹೆಚ್ಚು ಕಾಲವನ್ನು ವಿನಿಯೋಗಿಸಲು ಆಗದೆಹೋಯಿತು. ... ಹಿಂದಿನ ವರ್ಷಕ್ಕಿಂತ ಕಡಮೆಯಿಲ್ಲದೆ ಕೆಲಸ ನಡೆದಿದೆ ಎಂದು ಹೇಳಲು ... ಪಡುತ್ತೇನೆ. ಇದು ನಡೆದಿರುವುದು ಕಾ॥ ನಿ॥ ಮಂಡಲಿಯ ನನ್ನ ಸಹೋ... ಶ್ರಮದಿಂದ. ನಾನು ಈ ಸಂದರ್ಭದಲ್ಲಿ ಅವರನ್ನೆಲ್ಲರನ್ನೂ ಬಹು ಕೃತಜ್ಞ... ವಂದಿಸುತ್ತೇನೆ. ಅವರಲ್ಲಿ ಕೆಲವರು ನನಗೆ ಹಿರಿಯರಾಗಿದ್ದಾರೆ. ಅವರು ನನ್ನ ... ಗಳನ್ನು ಸ್ವೀಕರಿಸಬೇಕೆಂದು ಬೇಡುತ್ತೇನೆ. ಇನ್ನು ಕೆಲವರು ನನ್ನ ಲೋ... ಮರೆತು ಸಹಕರಿಸಿದ್ದಾರೆ. ಅದರಲ್ಲಿಯೂ ಶ್ರೀ॥ ಸಿ. ಕೆ. ವೆಂಕಟರಾಮಯ್ಯ... ವಿಶೇಷವಾಗಿ ಅಭಿನಂದಿಸಬೇಕಾಗಿದೆ. ಅವರ ಸೌಮ್ಯ, ಅವರ ಸೌಜನ್ಯ, ಅವ... ನಿಷ್ಠೆ—ಇವುಗಳಿಂದ ಪರಿಷತ್ತು ಬೆಳೆಯಿತು. ಅವರು ದೇಹಾಲಸ್ಯದ ಕಾರಣದಿಂ... ಪಡಿಸಿದಾಗ ಕಾ॥ ನಿ॥ ಮಂಡಲಿ ಅವರಿಗೆ ಬಿಡುಗಡೆ ಕೊಟ್ಟಿತು. ಆದರೆ ಇದು ... ವಾದ (absolute) ಬಿಡುಗಡೆಯಲ್ಲ; ಪುನಃ ಜಾಗ್ರತೆ ಪರಿಷತ್ತಿನ ಸೇವೆಗೆ ... ಬರಬೇಕೆಂದು ಕಾ॥ ನಿ॥ ಮಂಡಲಿಯೇ ಹೇಳಿರುತ್ತದೆ. ಗೌ॥ ಕೋಶಾಧ್ಯಕ್ಷರಾದ ... ಸೀತಾರಾಮಯ್ಯನವರು ಬಹು ಶ್ರಮವಹಿಸಿ ಕೆಲಸಮಾಡಿದ್ದಾರೆ. ವರದಿಯಲ್ಲಿ ... ಲೆಕ್ಕದ ಪಟ್ಟಿಗಳನ್ನು ನೋಡಿದರೆ ಅವರ ಶ್ರಮ ಎಷ್ಟರದು ಎಂಬುದು ನಿಮಗೇ ... ತ್ತದೆ. ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳ ವಿಷಯ ತಮಗೆಲ್ಲಾ ಗೊತ್ತಿದೆ. ... ಅನೇಕ ಸದ್ಗುಣಗಳ ಜೊತೆಗೆ ವಿಶೇಷವಾದ ವಿದ್ವತ್ ಸಂಪತ್ತೂ ಸೇರಿದೆ. ... ಪತ್ರಿಕೆಯ ಕೆಲಸದಲ್ಲಿ ಬಹಳ ಶ್ರಮ ವಹಿಸುತ್ತಿದ್ದಾರೆ. ಅವರು ನನ್ನಲ್ಲಿ ಹಿಂದಿ... ಒಂದೇ ವಿಧವಾದ ಮಮತೆ ಇಟ್ಟುಕೊಂಡಿದ್ದಾರೆ. ಶ್ರೀ॥ ಸಿ. ಕೆ. ವೆಂಕಟರಾಮ... ಬಿಡುಗಡೆ ಪಡೆದಮೇಲೆ ಶ್ರೀ॥ ಎಸ್. ವಿ. ರಂಗಣ್ಣನವರು ಅವರ ಕೆಲಸವನ್ನು ... ಕೊಂಡು, ಶ್ರೀ॥ ವೆಂಕಟರಾಮಯ್ಯನವರು ಇಲ್ಲಿ ಇಲ್ಲದಿದ್ದರೂ ಅವರ ಇನ್ನೊಂದು ... ಇಲ್ಲಿ ಇದೆ ಎಂದು ಅನ್ನಿಸಿದ್ದಾರೆ. ಶ್ರೀ॥ ವೆಂಕಟರಾಮಯ್ಯನವರು ಬಿಡು... ಬೇಕೆಂದು ಕೋರಿದಾಗ ಶ್ರೀ॥ ರಂಗಣ್ಣನವರು ಮುಂದೆ ಬಂದದ್ದು ಸ್ವಾಭಾವಿ... ಏಕೆಂದರೆ, ಅವರಿಬ್ಬರೂ ಬಹು ವರ್ಷಗಳ ಸ್ನೇಹಿತರು, ಸಹಪಾಠಿಗಳು, ಸಮಾನ... ಇವರೊಡನೆ ಕೆಲಸಮಾಡುವುದು ನನಗೆ ಒಂದು ಸಂತೋಷವಾಗಿದೆ. ಇಲ್ಲಿ ... ಒಬ್ಬರ ಹೆಸರನ್ನು ನಾನು ಹೇಳಬೇಕಾಗಿದೆ. ಅವರು ಶ್ರೀ॥ ಎಂ. ಆರ್. ಶ್ರೀ... ಮೂರ್ತಿಗಳು. ಹಿಂದಿನ ಮೂರು ವಿಶೇಷ ಸಾಹಿತ್ಯೋತ್ಸವಗಳಿಗೆ ಅವರು ... ದುಡಿದಿದ್ದಾರೆ, ಎಷ್ಟು ವಿಚಕ್ಷಣೆಯಿಂದ ಶ್ರಮಿಸಿದ್ದಾರೆ, ಎಂಬುದು ತಮಗೆಲ್ಲ... ಅವರಿಗೆ ಕೂಡ ನನ್ನ ವಂದನೆಗಳು ಸಲ್ಲತಕ್ಕದ್ದಾಗಿವೆ.

ಈ ನನ್ನ ಸಹೋದ್ಯೋಗಿಗಳನ್ನು ಕುರಿತು ಇಷ್ಟು ವಿವರವಾಗಿ ನಾನು ಏಕೆ ಮಾತನಾಡಿದೆನೆಂದರೆ, ಈಗ ಹೇಳಿದ ನಾಲ್ಕು ಮಂದಿಯೂ ಅವರವರ ಕೆಲಸದಿಂದ ಬಿಡುಗಡೆ ಕೊಡಿಸಬೇಕೆಂದು ಈಗಲೂ ಕೋರುತ್ತಾ ಇದ್ದಾರೆ. ಶ್ರೀ॥ ರಂಗಣ್ಣನವರು ಮುನ್ನೆಚ್ಚರಿಕೆ ಕೊಟ್ಟು, "ನನಗೆ ಅನೇಕ ಕೆಲಸಗಳಿವೆ, ಅದರ ಜೊತೆಗೆ ಇದು ಸಾಧ್ಯವಿಲ್ಲ" ಎಂದು ಹೇಳಿದ್ದಾರೆ. ಶ್ರೀ॥ ಕೃಷ್ಣಶಾಸ್ತ್ರಿಗಳವರೂ, ಶ್ರೀ॥ ವಿ. ಸೀತಾರಾಮಯ್ಯನವರೂ "ನಮಗೆ ಕೈಯಲ್ಲಿ ಬಹಳ ಕೆಲಸಗಳಿವೆ. ಸ್ವಲ್ಪ ವಿರಾಮ ಈಗ ಕೊಡಿ. ಮುಂದೆ ಪರಿಷತ್ತಿನ ಕೆಲಸಕ್ಕೆ ನಾವು ಸಿದ್ಧರಾಗಿಯೇ ಇದ್ದೇವೆ"—ಎಂದು ಹೇಳುತ್ತಿದ್ದಾರೆ. ಈ ಮೂರು ನಾಲ್ಕು ಜನರೂ ವಿಶ್ರಾಂತಿ ತೆಗೆದುಕೊಳ್ಳುವುದಾದರೆ, ಇಲ್ಲಿ ಕೆಲಸ ಹೇಗೆ ನಡೆಯಬೇಕೆಂಬುದರ ವಿಚಾರವಾಗಿ ನನಗೆ ಸಲಹೆ ಕೊಡಬೇಕೆಂದು ತಮ್ಮಲ್ಲಿ ನಾನು ಪ್ರಾರ್ಥಿಸುತ್ತೇನೆ.

## ಅಭಿಮತಾಧಿಕಾರ

ಹೀಗೆ ಸಭಾಪತಿಗಳು ಭಾಷಣಮಾಡಿದ ಬಳಿಕ, ಇತರ ಕಾರ್ಯೋಪಕ್ರಮಕ್ಕೆ ಮುಂಚೆ ಅವರು ಪರಿಷತ್ತಿನ ೨೭-ಕ. ನಿಬಂಧನೆಯನ್ನು ಸದಸ್ಯರ ಗಮನಕ್ಕೆ ತಂದು, ತಾ॥ ೧೮-೧-೧೯೩೭ಕ್ಕೆ ಹಿಂದೆ ಪರಿಷತ್ಸದಸ್ಯರಾಗಿದ್ದು ಅಧಿವೇಶನ ಕಾಲಕ್ಕೆ ಮುಂಚಿತವಾಗಿ ಸದಸ್ಯತ್ವದ ಚಂದಾ ಬಾಕಿಯನ್ನು ಸಲ್ಲಿಸಿರತಕ್ಕವರು ಮಾತ್ರವೇ ಈ ಅಧಿವೇಶನದಲ್ಲಿ ಆಗಬೇಕಾಗಿರುವ ತೀರ್ಮಾನಗಳ ಬಗ್ಗೆಯೂ ಚುನಾವಣೆಗಳ ಬಗ್ಗೆಯೂ ಅಭಿಮತ (Vote) ಕೊಡುವ ಅಧಿಕಾರವುಳ್ಳವರಾಗಿರುತ್ತಾರೆಂದು ತಿಳಿಸಿದರು; ಮತ್ತು ೨೭-ಖ. ನಿಬಂಧನೆಯ ಪ್ರಕಾರ ತಾ॥ ೧೬-೪-೧೯೩೭ರೊಳಗಾಗಿ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ಪರಿಷತ್ಕಾರ್ಯಾಲಯಕ್ಕೆ ತಿಳಿಸಿರುವ ಅಂಗಸಂಸ್ಥಾ ಪ್ರತಿನಿಧಿಗಳು ಮಾತ್ರವೇ ಮೇಲೆ ಹೇಳಿರುವ ಅಧಿಕಾರವುಳ್ಳವರಾಗಿರುತ್ತಾರೆಂದು ತಿಳಿಸಿದರು. ಆದರೆ ಶ್ರವಣಬೆಳಗೊಳದ ಕರ್ಣಾಟಕ ಸಂಘದಿಂದ ಬಂದಿದ್ದ ಶ್ರೀ॥ ಬ್ರಹ್ಮಸೂರಿಶಾಸ್ತ್ರಿಗಳು ಹಾಗೆ ಮುಂಚಿತವಾಗಿ ಹೆಸರನ್ನು ತಿಳಿಸದಿದ್ದರೂ ಅವರೇ ಅದರ ಅಧ್ಯಕ್ಷರಾದಕಾರಣದಿಂದ ಅವರಿಗೆ ಆ ಅಧಿಕಾರವನ್ನು ಕೊಡಬಹುದೆಂದು ಸಭೆಯು ತೀರ್ಮಾನಿಸಿತು.

ಅನಂತರ ಕಾರ್ಯಾರಂಭವಾಯಿತು.

## ವಿಷಯ ೧.—೧೯೩೬ನೆಯ ವರ್ಷದ ವರದಿ, ಇತ್ಯಾದಿ

"೧೯೩೬ನೆಯ ಇಸವಿಯ ವರದಿ, ಲೆಕ್ಕಗಳು ಮತ್ತು ಆಯವ್ಯಯ ಶೋಧಕರ ಅನುಮೋದನ ಪತ್ರಿಕೆ"*—ಇವುಗಳನ್ನು ಸಭೆಯ ಅಂಗೀಕಾರಕ್ಕಾಗಿ ಒಪ್ಪಿಸುವುದರಲ್ಲಿ ಗೌ॥ ಕಾರ್ಯದರ್ಶಿಗಳಾದ ಶ್ರೀ॥ ಎಸ್. ವಿ. ರಂಗಣ್ಣನವರು ವರದಿಯ ಪುಟ ೩, ಪಂಕ್ತಿ ೧೬ರಲ್ಲಿ "ಅನುಬಂಧ ೧೧" ಎಂಬುದಕ್ಕೆ ಬದಲಾಗಿ "ಅನುಬಂಧ ೮" ಎಂದೂ, ಪುಟ ೩೧ರ ಅಡಿ ಟಿಪ್ಪಣಿಯಲ್ಲಿ "೨೭೮-೪-೯ಕ್ಕೆ" ಬದಲಾಗಿ "೨೨೮-೪-೯" ಎಂದೂ—ತಪ್ಪಾಗಿ ಅಚ್ಚಾಗಿರುವುದನ್ನು ತಿದ್ದಿಕೊಳ್ಳಬೇಕೆಂದು ತಿಳಿಸಿ, ವರದಿಯ ಕೆಲವು ಭಾಗಗಳನ್ನು ಓದಿದರು. ಅನಂತರ ಶ್ರೀ॥ ಬೆಸಗಲ್

* ಈ ವರದಿ ಮೊದಲಾದುವುಗಳ ಮುದ್ರಿತ ಪ್ರತಿಗಳನ್ನು ಇದಕ್ಕೆ ಮುಂಚೆಯೇ [ತಾ॥ ೨೩-೪-೧೯೩೭ರಲ್ಲಿ] ಪರಿಷತ್ಸದಸ್ಯರೆಲ್ಲರಿಗೂ ಕಳುಹಿಸಿದ್ದಾಗಿತ್ತು.

ರಾಮರಾಯರವರು ತಾ॥ ೩೦–೮–೧೯೩೭ರಲ್ಲಿ,—ಪರಿಷತ್ತಿನ ಪ್ರಾರ್ಥನೆಯ ಮದರಾಸು ವಿಶ್ವವಿದ್ಯಾನಿಲಯವು 'Kanarese' ಎಂಬ ಬಳಕೆಯಲ್ಲಿದ್ದ ತೆಗೆದುಹಾಕಿ ಅದಕ್ಕೆ ಬದಲಾಗಿ 'ಕನ್ನಡ (Kannada)' ಎಂಬ ಪದವನ್ನು ಯೋಗಿಸತಕ್ಕದ್ದೆಂದು ಮಾಡಿದ ನಿರ್ಣಯದ ವಿಷಯವಾಗಿ ಅವರಿಗೆ ಕೃತಜ್ಞತೆಯನ್ನು ಸೂಚಿಸಿಲ್ಲವೆಂದು ಬರೆದಿದ್ದ ಪತ್ರವನ್ನೂ, ಅದಕ್ಕೆ ಪ್ರತ್ಯು ಪರಿಷದುಪಾಧ್ಯಕ್ಷರು ತಾ॥ ೧–೫–೧೯೩೭ರಲ್ಲಿ ಬರೆದಿದ್ದ ಪತ್ರವನ್ನೂ ಸ ಹೇಳಿದರು. ಈ ವಿಚಾರದಲ್ಲಿ ಪರಿಷದುಪಾಧ್ಯಕ್ಷರು ತಿಳಿಸಿರುವ ಕಾ ಸಾಕೆಂದು ಸಭೆ ಅಭಿಪ್ರಾಯಪಟ್ಟಿತು. ಬಳಿಕ ಶ್ರೀ॥ ಎಸ್. ವಿ. ರಂಗ ಈ ಕೆಳಗಿನ ಸೂಚನೆಯನ್ನು ಸಭೆಗೆ ಒಪ್ಪಿಸಿದರು:—

"ಕರ್ನಾಟಕ ಸಾಹಿತ್ಯ ಪರಿಷತ್ತಿನ ೧೯೩೬ನೆಯ ಇಸವಿ ಯನ್ನು ಈ ವಾರ್ಷಿಕಾಧಿವೇಶನವು ಅಂಗೀಕರಿಸುತ್ತದೆ."

ಇದನ್ನು ಗೌರವ ಕೋಶಾಧ್ಯಕ್ಷರಾದ ಶ್ರೀ॥ ವಿ. ಸೀತಾರಾಮ ಅನುಮೋದಿಸಿದರು.

ಸೂಚನೆ ಸರ್ವಾನುಮತದಿಂದ ಅಂಗೀಕೃತವಾಯಿತು.

## ವಿಷಯ ೨.—ವಂದನೆ

ಶ್ರೀ॥ ಎಂ. ಎ. ನರಸಿಂಹಾಚಾರ್ಯರವರ ಸಲಹೆಯಂತೆ ಸಭ ಈ ಕೆಳಗಿನ ಸೂಚನೆಯನ್ನು ಸಭೆಯು ಮುಂದಿಟ್ಟರು:—

"ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರು ಪರಿಷತ್ತಿಗೆ ಅಮೂಲ್ಯ ಸೇವೆಗಾಗಿ ಈ ಸಭೆ ಅವರನ್ನು ಮನಃಪೂರ್ವಕವಾಗಿ ತ್ತದೆ."

ಈ ಸೂಚನೆಯನ್ನು ಸಭೆಯು ಕರತಾಡನಗಳೊಡನೆ ಅಂಗೀಕಾರಮಾ

ಅನಂತರ ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರು ಉಪಾಧ್ಯ ಗೌ॥ ಕಾರ್ಯದರ್ಶಿಗಳಿಗೂ, ಸಭಿಕರಿಗೂ ಅವರ ವಿಶ್ವಾಸಕ್ಕಾಗಿ ವಂ ಸೂಚಿಸಿದರು.

## ವಿಷಯ ೩.—೧೯೩೭ರ ಆಯವ್ಯಯ

ಗೌರವ ಕೋಶಾಧ್ಯಕ್ಷರಾದ ಶ್ರೀ॥ ವಿ. ಸೀತಾರಾಮಯ್ಯನವರು ಸೂಚನೆಯನ್ನು ಸಭೆಗೆ ಒಪ್ಪಿಸಿದರು:—

"ಕರ್ನಾಟಕ ಸಾಹಿತ್ಯ ಪರಿಷತ್ತಿನ ೧೯೩೭ನೆಯ ಇಸವಿ ವ್ಯಯದ ಅಂದಾಜು ಪಟ್ಟಿಯನ್ನು ಈ ವಾರ್ಷಿಕಾಧಿವೇಶನವು ತ್ತದೆ."

ಗೌ॥ ಕಾರ್ಯದರ್ಶಿಗಳಾದ ಶ್ರೀ॥ ಎಸ್. ವಿ. ರಂಗಣ್ಣನವರು ಅನುಮೋದಿಸಿದರು.

ಇದು ಸರ್ವಾನುಮತದಿಂದ ಅಂಗೀಕೃತವಾಯಿತು.

## ವಿಷಯ ೪.—೧೯೩೭ರ ಆಯವ್ಯಯ ಶೋಧಕರು

ಕಳೆದ ೨-೩ ವರ್ಷಗಳಿಂದ ಶೋಧಕರಾಗಿದ್ದ ಶ್ರೀ॥ ವೈ. ಸುಬ್ರಹ್ಮಣ್ಯಂ, ಎಂ.ಎ., ಅವರು ತಮಗೆ ಇತರ. ಕೆಲಸಗಳ ಅವಸರ ಹೆಚ್ಚಾಗಿರುವುದರಿಂದ ಈ ಸಾರಿ ಶೋಧನೆಯ ಜವಾಬ್ದಾರಿಯನ್ನು ತಾವು ವಹಿಸಲಾಗಲಾರದೆಂದು ತಿಳಿಸಿದ್ದ ಸಂಗತಿಯನ್ನು ಸಭಾಪತಿಗಳು ಅರಿಕೆಮಾಡಿ, ಇದು ಕಾ॥ ಸಿ॥ ಮಂಡಲಿಯ ಕಾರ್ಯಗಳ ಮೇಲೆ ತನಿಖೆ ನಡಸತಕ್ಕ ವಿಚಾರವಾದದ್ದರಿಂದ ಕಾ॥ ಸಿ॥ ಮಂಡಲಿಯಲ್ಲಿಲ್ಲದ ಸದಸ್ಯರು ಯಾವ ಹೆಸರನ್ನಾದರೂ ಸೂಚಿಸಬಹುದೆಂದು ತಿಳಿಸಿದರು. ಆಮೇಲೆ ಶ್ರೀ॥ ಕೆ. ನಾರಾಯಣರಾಯರವರು ಈ ಕೆಳಗಿನಂತೆ ಸೂಚಿಸಿದರು:—

"೧೯೩೭ನೆಯ ವರ್ಷದ ಆಯವ್ಯಯದ ಲೆಕ್ಕಪತ್ರಗಳನ್ನು ಪರಿಶೋಧಿಸುವ ಜಾಗ್ಗೆ ಶ್ರೀ॥ ಎಂ. ಎ. ನರಸಿಂಹಾಚಾರ್ಯ, ಬಿ.ಎ., ಅವರು ಆಯವ್ಯಯ ಶೋಧಕರಾಗಿರಬೇಕೆಂದು ಈ ವಾರ್ಷಿಕಾಧಿವೇಶನವು ಪ್ರಾರ್ಥಿಸುತ್ತದೆ."

ಇದನ್ನು ಶ್ರೀ॥ ಕೆ. ಎಸ್. ನಾರಾಯಣರಾಯರವರು ಅನುಮೋದಿಸಿದರು; ಶ್ರೀ॥ ಆರ್. ಸುಬ್ಬರಾಯರವರು ಸಮರ್ಥಿಸಿದರು.

ಸೂಚನೆ ಸರ್ವಸಮ್ಮತಿಯಿಂದ ಅಂಗೀಕೃತವಾಯಿತು.

## ವಿಷಯ ೫.—ಚುನಾಯಿತರ ಅಧಿಕಾರಾರಂಭ

ಹೊಸ ಅಧಿಕಾರಿಗಳ ಚುನಾವಣೆಯಾಗುವುದಕ್ಕೆ ಮೊದಲು ಸಭಾಪತಿಗಳು ಚುನಾವಣೆಯಾದ ಹೊಸ ಅಧಿಕಾರಿಗಳು ತಮ್ಮ ಅಧಿಕಾರವನ್ನು ಯಾವಾಗಿನಿಂದ ಎಂದುವರೆಗೆ ನಡಸತಕ್ಕವರೆಂಬ ವಿಷಯವನ್ನು ಪ್ರಸ್ತಾವಿಸಿ, ಈ ಕೆಳಗಿನಂತೆ ಇರಬಹುದೆಂದು ಸೂಚನೆಕೊಟ್ಟರು:—

"ಹೊಸದಾಗಿ ಚುನಾಯಿತರಾದ ಕಾ॥ ಸಿ॥ ಮಂಡಲಿಯ ಸದಸ್ಯರೂ ಅಧಿಕಾರಿಗಳೂ ಸಹ ಹೊಸ ಕಾ॥ ಸಿ॥ ಮಂಡಲಿಯ ಮೊದಲನೆಯ ಅಧಿವೇಶನ ಮೊದಲುಗೊಂಡು ತಮ್ಮ ತಮ್ಮ ಅಧಿಕಾರಗಳನ್ನು ನಡಸಲು ಅರ್ಹರಾಗುವರು."

ಇದು ಸಭೆಯಿಂದ ಅಂಗೀಕೃತವಾಯಿತು.

## ವಿಷಯ ೬.—ಅಧ್ಯಕ್ಷರ ಚುನಾವಣೆ

ಅನಂತರ ಸಭಾಪತಿಗಳು ಪರಿಷತ್ತಿನ ಅಧ್ಯಕ್ಷರ ಚುನಾವಣೆ ಹಿಂದಿನ ಸಾರಿ ತಾ॥ ೬-೧೨-೧೯೩೪ರಲ್ಲಿ ರಾಯಚೂರಿನಲ್ಲಿ ನಡೆಯಿತೆಂದೂ, ೧೧-ಕ ನಿಬಂಧನೆಯ ಪ್ರಕಾರ ಈ ವರ್ಷ ಆ ಸ್ಥಾನದ ಚುನಾವಣೆಯೂ ನಡೆಯಬೇಕಾಗಿರುವುದೆಂದೂ, ಆದರೆ ಸದಸ್ಯರಿಗೆ ಮೊದಲು (ತಾ॥ ೨೩-೪-೧೯೩೭ರಲ್ಲಿ) ಕಳುಹಿಸಿದ್ದ ಆಲೋಚ್ಯ ವಿಷಯಗಳ ಪಟ್ಟಿಯಲ್ಲಿ ಪ್ರಮಾದದಿಂದ ಈ ವಿಷಯ ಹೇಗೋ ಬಿಟ್ಟುಹೋಗಿರುವುದೆಂದೂ, ಅದಕ್ಕಾಗಿ ಒಂದು ಪರಿಶಿಷ್ಟ ಪತ್ರಿಕೆಯನ್ನು ಮುದ್ರಿಸಿ ಹಾಜರಿರುವ ಸದಸ್ಯರಲ್ಲಿ ಹಂಚಲಾಗಿದೆಯೆಂದೂ ತಿಳಿಸಿ, ಈ ಪ್ರಮಾದವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿದರು.

ಬಳಿಕ ಈ ಕೆಳಗೆ ಕಾಣಿಸಿರುವ ಸೂಚನೆಯನ್ನು ಶ್ರೀ॥ ಎ. ವೆಂಕಟ... ಸಭೆಗೆ ಒಪ್ಪಿಸಿದರು:—

"ಪರಿಷತ್ತಿನ ಅಧ್ಯಕ್ಷರಾಗಿ ಅತ್ಯಂತ ಮಮತೆ ವಾತ್ಸಲ್ಯ... ಪರಿಷತ್ತನ್ನು ಕಾಪಾಡಿಕೊಂಡು ಬಂದಿರುವ ಮೈಸೂರು ಸಂಸ್ಥಾ... ಶ್ರೀಮತ್ ಯುವರಾಜರವರು, ಶ್ರೀ ಕಂಠೀರವ ನರಸಿಂಹರಾಜ ... ಬಹದ್ದೂರ್ ಮಹಾಸ್ವಾಮಿಯವರು, ಇನ್ನು ಮುಂದೆಯೂ ಈ ಪ... ಅಧ್ಯಕ್ಷಪದವಿಯನ್ನಲಂಕರಿಸಿ ಅನುಗ್ರಹಿಸಬೇಕೆಂದು ಈ ವಾರ್ಷಿಕ... ವಿನಯದಿಂದ ಪ್ರಾರ್ಥಿಸುತ್ತದೆ."

ಇದನ್ನು ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಅನುಮೋದಿಸಿದರು.

ಸದಸ್ಯರ ಸಂತೋಷ ಸೂಚಕವಾದ ಕೈಚಪ್ಪಾಳೆಗಳೊಡನೆ ಈ ಸೂಚನೆ... ಐಕಕಂಠ್ಯದಿಂದ ಅಂಗೀಕೃತವಾಯಿತು.

## ವಿಷಯ ೭.—ಉಪಾಧ್ಯಕ್ಷ ಸ್ಥಾನ

[ವಿವರಣೆ:—ಉಪಾಧ್ಯಕ್ಷ ಸ್ಥಾನದ ಚುನಾವಣೆಯು ತಾ" ೨೭-೧೨... ರಲ್ಲಿ ಬೊಂಬಾಯಿಯಲ್ಲಿ ನಡೆಯಿತಾದಕಾರಣ, ೧೧-ಕ ನಿಬಂಧನೆಯ ಅ... ಆ ಚುನಾವಣೆ ೧೯೩೭ನೆಯ ಡಿಸೆಂಬರಿಗೆ ಮುಂಚೆ ನಡೆಯಬೇಕಾಗಿಲ್ಲ.]

## ವಿಷಯ ೮.—ಗೌ॥ ಕಾರ್ಯದರ್ಶಿಯವರ ಚುನಾವಣೆ

ಶ್ರೀ॥ ಎ. ವೆಂಕಟಾಚಾರ್ ಅವರು ಈ ರೀತಿ ಸೂಚಿಸಿದರು:—

"ಶ್ರೀ॥ ಎಸ್. ಎ. ರಂಗಣ್ಣನವರು ಗೌ॥ ಕಾರ್ಯದರ್ಶಿಗಳಾಗಿ... ಕೇಳಿಕೊಳ್ಳತಕ್ಕದ್ದು."

ಇದನ್ನು ಶ್ರೀ॥ ಎ. ಎನ್. ರಾಮರಾಯರವರು ಅನುಮೋದಿಸಿದರು; ... ಎಸ್. ಗೋಪಾಲಸ್ವಾಮಿಯವರು ಸಮರ್ಥಿಸಿದರು.

ಸೂಚನೆ ಸರ್ವಾನುಮತದಿಂದ ಅಂಗೀಕೃತವಾಯಿತು.

## ವಿಷಯ ೯.—ಗೌರವ ಕೋಶಾಧ್ಯಕ್ಷರ ಚುನಾವಣೆ

ಶ್ರೀ॥ ಎ. ಎನ್. ರಾಮರಾಯರವರು ಹೀಗೆ ಸೂಚಿಸಿದರು:—

"ಶ್ರೀ॥ ಎ. ಸೀತಾರಾಮಯ್ಯನವರು ಗೌರವ ಕೋಶಾಧ್ಯಕ್ಷ... ವಂತೆ ಕೇಳಿಕೊಳ್ಳತಕ್ಕದ್ದು."

ಇದನ್ನು ಶ್ರೀ॥ ಎ. ವೆಂಕಟಾಚಾರ್ ಅವರು ಅನುಮೋದಿಸಿದರು. ... ಸರ್ವಾನುಮತದಿಂದ ಅಂಗೀಕೃತವಾಯಿತು.

## ವಿಷಯ ೧೦.—ಕಾ॥ ನಿ॥ ಮಂಡಲಿಯ ಸದಸ್ಯರ ಚುನಾವಣೆ

೧. **ಮೈಸೂರು ಪ್ರಾಂತ.**—ಈಗಿರುವ ಮೈಸೂರು ಪ್ರಾಂತದ ... ಮಂಡಲಿಯ ಸದಸ್ಯರುಗಳ ಹೆಸರುಗಳ ಜೊತೆಗೆ ಹನ್ನೆರಡು ಹೊಸ ಹೆಸ...

(೧೩ರಿಂದ ೨೪) ಮೈಸೂರು ಪ್ರಾಂತದ ಸದಸ್ಯರಿಂದ ಅಭ್ಯರ್ಥಿ ಪಟ್ಟಿಗೆ ಸೂಚಿತ ನಾದುವು :—

ಮ॥ ಗಳಾದ (೧) ಬಿ. ಎಂ. ಶ್ರೀಕಂಠಯ್ಯನವರು, (೨) ಎಂ. ಆರ್. ಶ್ರೀನಿವಾಸ ಮೂರ್ತಿಗಳು, (೩) ಟಿ. ಎಸ್. ವೆಂಕಣ್ಣಯ್ಯನವರು, (೪) ತಿರುಮಲೆ ತಾತಾಚಾರ್ಯ ಶರ್ಮರವರು, (೫) ಎ. ಆರ್. ಕೃಷ್ಣಶಾಸ್ತ್ರಿಗಳು, (೬) ಸಿ. ಕೆ. ವೆಂಕಟರಾಮಯ್ಯ ನವರು, (೭) ಎನ್. ವೆಂಕಟೇಶಯ್ಯಂಗಾರ್ಯರವರು, (೮) ಶ್ರೀಮತಿ ಆರ್. ಕಲ್ಯಾಣಮ್ಮನವರು, (೯) ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿಗಳು, (೧೦) ಶ್ರೀಮತಿ ನಾಗಮ್ಮನವರು, (೧೧) ಎ. ತಾಂದೋಣಿರಾಯರು, (೧೨) ವಿ. ವೆಂಕಟಪ್ಪನವರು, (೧೩) ಎಲ್. ನಾರಾಯಣರಾಯರು, (೧೪) ಎಸ್. ಜಿ. ಶಾಸ್ತ್ರಿಗಳು, (೧೫) ಎ. ಎನ್. ರಾಮರಾಯರು, (೧೬) ಡಿ. ಸಿ. ಸುಬ್ಬರಾಯಪ್ಪನವರು, (೧೭) ಪಿ. ಶ್ರೀನಿವಾಸ ರಾಯರು, (೧೮) ಮಹಾದೇವಸ್ವಾಮಿಗಳು, (೧೯) ಕೆ. ಗೋಪಾಲಕೃಷ್ಣರಾಯರು, (೨೦) ಜೆ. ವಿ. ದೊಡ್ಡವೀರಪ್ಪನವರು, (೨೧) ಕೆ. ಆಂಬ್ರೋಸ್ ಆನಂದ ಅವರು, (೨೨) ಅ. ನ. ಕೃಷ್ಣರಾಯರು, (೨೩) ಎಂ. ನರಸಿಂಹಮೂರ್ತಿಗಳು, (೨೪) ಶ್ರೀಮತಿ ತಿರುಮಲಾಂಬ ಅವರು.

ಸಭಾಪತಿಗಳು ಸಭೆಯ ಅನುಮತಿ ಪಡೆದು ಶ್ರೀ॥ ವಿ. ವೆಂಕಟಾಚಾರ್ ಅವರನ್ನೂ, ಶ್ರೀ॥ ಎನ್. ಶಿವರಾಮಶಾಸ್ತ್ರಿಗಳವರನ್ನೂ ಗಣಕ (Tellers) ರಾಗಿರ ಬೇಕೆಂದು ಬಯಸಿದರು.

ಅವರು ಅಭಿಮತ ಪತ್ರಗಳನ್ನು ನೋಡಿ ಲೆಕ್ಕಮಾಡಿ, ಚುನಾವಣೆಯ ಫಲಿತಾಂಶವನ್ನು ಸಭಾಪತಿಗಳಿಗೆ ಬರೆದು ತಿಳಿಸಿದರು. ಅದನ್ನು ಸಭಾಪತಿಗಳು ಸಭೆಗೆ ಓದಿದರು. ಚುನಾಯಿತರು :—

ಮ॥ ಗಳಾದ (೧) ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., (೨) ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., (೩) ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ., (೪) ಶ್ರೀಮತಿ ಆರ್. ಕಲ್ಯಾಣಮ್ಮನವರು, (೫) ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., (೬) ವಿ. ವೆಂಕಟಪ್ಪನವರು, ಎಂ.ಎಲ್.ಸಿ., (೭) ಎನ್. ವೆಂಕಟೇಶ ಅಯ್ಯಂಗಾರ್ಯರು, ಬಿ.ಎ., (೮) ತಿ. ತಾ. ಶರ್ಮರವರು, (೯) ಎ. ತಾಂದೋಣಿರಾಯರು, ಎಲ್.ಸಿ.ಇ., ಎಂ.ಐ.ಇ. (ಇಂಡ್.), (೧೦) ಡಿ. ಸಿ. ಸುಬ್ಬರಾಯಪ್ಪನವರು, ಬಿ.ಎ., ಬಿ.ಎಲ್., (೧೧) ಎಸ್. ಜಿ. ಶಾಸ್ತ್ರಿಗಳು, ಬಿ.ಎ., ಎಂ.ಎಸ್‌ಸಿ., ಎಫ್.ಸಿ.ಎಸ್., (೧೨) ಪಿ. ಶ್ರೀನಿವಾಸರಾಯರು, ಎಂ.ಎಸ್‌ಸಿ.

ಈ ಹೆಸರುಗಳನ್ನು ಸಭೆ ಕೈಚಪ್ಪಾಳೆಗಳೊಡನೆ ಅಂಗೀಕರಿಸಿತು.

೨. **ಬೊಂಬಾಯಿ ಪ್ರಾಂತ.**—ಈ ಪ್ರಾಂತದ ಸದಸ್ಯರು ಅಧಿವೇಶನದಲ್ಲಿ ತಕ್ಕಷ್ಟು ಮಂದಿ ಹಾಜರಿರುವರೆ, ಇಲ್ಲವೆ? ಇಲ್ಲದಿದ್ದರೆ ೧೦–೩ ನಿಬಂಧನೆಯ ಪ್ರಕಾರ ಹಿಂದೆ ಆ ಪ್ರಾಂತದ ಪ್ರತಿನಿಧಿಗಳಾಗಿದ್ದವರೇ ಈ ವರ್ಷವೂ ಕಾ॥ ನಿ॥ ಮಂಡಲಿಯ ಸದಸ್ಯರಾಗಿರತಕ್ಕದ್ದೆ? ಎಂದು ಸಭಾಪತಿಗಳು ಪ್ರಶ್ನೆಮಾಡಿದ್ದರಮೇಲೆ,

ಬೊಂಬಾಯಿ ಪ್ರಾಂತದ ಸದಸ್ಯರು ತಕ್ಕಷ್ಟು ಮಂದಿ ಅಲ್ಲಿಲ್ಲವೆಂದೂ, ನಿಬಂಧನೆ ಈ ಸಂದರ್ಭಕ್ಕೆ ಅನ್ವಯಿಸತಕ್ಕದ್ದೆಂದೂ ಸಭೆ ತೀರ್ಮಾನಿಸಿತು.

ಪುನರ್ನಿಯೋಜಿತರಾದವರು :—

ಮ॥ ಗಳಾದ (೧) ಏ. ಜಿ. ಕುಲಕರ್ಣಿ, ಎಂ.ಎ., ಎಲ್‌ಎಲ್.ಬಿ., ವೆಂಕಟೇಶ ಶ್ರೀನಿವಾಸ ಪಂಡಿತರು, ಎಂ.ಎ., ಎಲ್‌ಎಲ್.ಬಿ., (೩) ಎನ್.ಎ. ಅವರು, (೪) ಗೋವಿಂದ ರಾಮಾಚಾರ್ಯರು, ಎಂ.ಎ., ಎಲ್‌ಎಲ್.ಬಿ., ಮುಗದಾಳ್ ವೆಂಕಟರಾಯರು, ಬಿ.ಎ., (೬) ವ್ಯಾಕರಣತೀರ್ಥ ಚಂದ್ರ ಶಾಸ್ತ್ರಿಗಳು, (೭) ರಂಗಪ್ಪ ಪೋತ್ದಾರರು, ಬಿ.ಎ., (೮) ಎನ್. ಎಸ್. ಪುರೋಹಿತರು, (೯) ಏ. ಕೆ. ಗೋಕಾಕರು, ಎಂ.ಎ.

ಈ ಹೆಸರುಗಳನ್ನು ಸಭೆ ಕೈ ಚಪ್ಪಾಳೆಗಳೊಡನೆ ಅಂಗೀಕರಿಸಿತು.

**೩. ಮದರಾಸು ಪ್ರಾಂತ.**—ಈ ಪ್ರಾಂತದ ಸದಸ್ಯರು ಮೂರು ಮಾತ್ರ ಹಾಜರಿದ್ದರು. ಮೇಲಿನಂತೆ ೧೦–ಖ ನಿಬಂಧನೆಯನ್ನು ಈ ಪ್ರಾಂ ಅನ್ವಯಿಸಬಹುದೆಂದು ಕೆಲವು ಮಂದಿ ಸದಸ್ಯರು ಅಭಿಪ್ರಾಯಪಟ್ಟರು. ಆ ನಿಬಂಧನೆಯಲ್ಲಿರುವ "ತಕ್ಕಷ್ಟು ಮಂದಿ" ಎಂಬ ಪದದ ಅರ್ಥದ ವಿಷ ಚರ್ಚೆ ಹುಟ್ಟಲು, ಸಭಾಪತಿಗಳು ವಿಷಯವನ್ನು ಸಭೆಯ ಅಭಿಮತಕ್ಕೆ ೨೨ ಮಂದಿಯಿಂದ "ತಕ್ಕಷ್ಟು ಮಂದಿ" ಇರುವರೆಂತಲೂ ೨೨ ಮಂ ಇಲ್ಲವೆಂತಲೂ ಅಭಿಮತ ವ್ಯಕ್ತವಾಯಿತು. ಸಭಾಪತಿಗಳು ತಮ್ಮ ನಿರ್ಧಾ ಅಭಿಮತವನ್ನು ಕೊಟ್ಟು ಆ ವಿಷಯವನ್ನು ನಿರ್ಣಯಮಾಡಬೇಕೆಂದು ಸಭೆ ಕೇ ಸಭಾಪತಿಗಳು ಸಭೆಯಲ್ಲಿದ್ದ ಮದರಾಸಿನ ಸದಸ್ಯರೊಡನೆ ಗುಪ್ತವಾಗಿ ಮಾಡಿ, ಮದರಾಸು ಪ್ರಾಂತಕ್ಕಾಗಿ ಚುನಾವಣೆ ನಡೆಯುವುದು ಯುಕ್ತ ತೀರ್ಮಾನಿಸಿದರು. ಅದರಂತೆ ಚುನಾವಣೆಯ ಕ್ರಮ ಜರುಗಿತು.

ಮದರಾಸು ಪ್ರಾಂತದ ಸದಸ್ಯರಿಂದ ಈ ಕೆಳಗಿನ ಹೆಸರುಗಳು ಅಭ್ಯ ಪಟ್ಟಿಗೆ ಸೂಚಿತವಾದುವು:—

ಮ॥ ಗಳಾದ (೧) ಬೆನಗಲ್ ರಾಮರಾಯರು, (೨) ಬೆಲ್ಲೋಣಿ ಭೀಮ (೩) ಪಂಜೆ ಮಂಗೇಶರಾಯರು, (೪) ಕಡೆಂಗೋಡ್ಲು ಶಂಕರಭಟ್ಟರು, ( ರಮಾನಂದರಾಯರು, (೬) ಎಂ. ಎನ್. ಕಾಮತ್ ಅವರು, (೭) ವೈ. ನಾಗೇಶ (೮) ಎಸ್. ಶ್ರೀನಿವಾಸರಾಯರು.

ಸಭಾಪತಿಗಳು ಸಭೆಯ ಅನುಮತಿಪಡೆದು, ಶ್ರೀ॥ ಎಸ್. ಗೋಪಾ ಅವರೂ ಶ್ರೀ॥ ಕೆ. ಶಾಮರಾಜಯ್ಯಂಗಾರ್ಯರವರೂ ಗಣಕ (Tellers) ವಂತೆ ಪ್ರಾರ್ಥಿಸಿದರು. ಅವರು ಲೆಕ್ಕ ನೋಡಿ ವರದಿ ಮಾಡಿದ ಫಲಿತಾ ಸಭಾಪತಿಗಳು ಸಭೆಗೆ ಅರಿಕೆಮಾಡಿದರು.

ಚುನಾಯಿತರು :—ಮ॥ ಗಳಾದ (೧) ಪಂಜೆ ಮಂಗೇಶರಾಯರು, ಬಿ.ಎ., ಎಲ್.ಟಿ., (೨) ವಿದ್ವಾನ್ ಕಡೆಂಗೋಡ್ಲು ಶಂಕರಭಟ್ಟರು, (೩) ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ.

ಈ ಹೆಸರುಗಳನ್ನು ಸಭೆ ಕೈ ಚಪ್ಪಾಳೆಗಳೊಡನೆ ಅಂಗೀಕರಿಸಿತು.

**೪. ಉತ್ತರ ಕರ್ಣಾಟಕ ಪ್ರಾಂತ, ೫. ಹೈದರಾಬಾದು ಪ್ರಾಂತ, ೬. ಕೊಡಗು ಪ್ರಾಂತ.**—ಈ ಮೂರು ಪ್ರಾಂತಗಳಿಗೂ ೧೦-೩ ನಿಬಂಧನೆಯನ್ನನುಸರಿಸಿ, ಹಿಂದೆ ಆಯಾ ಸಂಸ್ಥಾನದ ಅಥವಾ ಪ್ರಾಂತದ ಪ್ರತಿನಿಧಿಗಳಾಗಿದ್ದವರೇ ಈ ವರ್ಷವೂ ಕಾ॥ ಸಿ॥ ಮಂಡಲಿಯ ಸದಸ್ಯರಾಗಿರಬಹುದೆಂದು ಸಭೆ ತೀರ್ಮಾನಿಸಿತು. ಹೀಗೆ ಪುನರ್ನಿಯೋಜಿತರಾದವರು :—

**ಉತ್ತರ ಕರ್ಣಾಟಕ ಪ್ರಾಂತ.**—ಮ॥ ಗಳಾದ (೧) ಕೆ. ಜಿ. ಕುಂದಣಗಾರರು, ಎಂ.ಎ., (೨) ಆರ್. ಎಸ್. ಮುಗಳಿ, ಎಂ.ಎ., ಬಿ.ಟಿ.

**ಹೈದರಾಬಾದು ಪ್ರಾಂತ.**—ಮ॥ ಗಳಾದ (೧) ಡಿ. ಕೆ. ಭೀಮಸೇನರಾಯರು, ಎಂ.ಎ., (೨) ರೆವರೆಂಡ್ ನಾನಪ್ಪ ದೇಸಾಯಿಯವರು.

**ಕೊಡಗು ಪ್ರಾಂತ.**—ಮ॥ ಬಿ. ಎಸ್. ಕುಶಾಲಪ್ಪನವರು, ಬಿ.ಎ., ಬಿ.ಇಡಿ.

ಈ ಹೆಸರುಗಳನ್ನು ಸಭೆ ಕೈ ಚಪ್ಪಾಳೆಗಳೊಡನೆ ಅಂಗೀಕರಿಸಿತು.

ಸಭಾಪತಿಗಳು ಹೀಗೆ ಹೊಸದಾಗಿ ಕಾ॥ ನಿ॥ ಮಂಡಲಿಗೆ ಸದಸ್ಯರಾಗಿ ಬಂದಿರುವ ಮಹನೀಯರನ್ನು ಅಭಿನಂದಿಸಿ ಅವರ ಸಹಕಾರವನ್ನು ಬೇಡಿದರು.

**ವಿಷಯ ೧೧.—ಪರಿಷತ್ತಿಗೆ ಒಂದು ದತ್ತಿ**

"ಬೆಂಗಳೂರಿನ ಶ್ರೀಮತಿ ಎ. ಶೇಷಮ್ಮನವರು 'ಅ. ಎ. ಭಾಸ್ಕರರಾಯ ಜ್ಞಾಪಕ ನಿಧಿ' ಎಂಬ ಒಂದು ನಿಧಿಯನ್ನು ಪರಿಷತ್ತಿನಲ್ಲಿ ಕನ್ನಡ ಸಾಹಿತ್ಯ ಸೇವೆಗಾಗಿ ಏರ್ಪಡಿಸಬೇಕೆಂಬ ಉದ್ದೇಶದಿಂದ ೧,೦೭೮ ರೂಪಾಯಿಗಳ ಬೆಲೆಯುಳ್ಳ ತಮ್ಮ ಮೈಸೂರು ಸರಕಾರದ ಇನ್‌ಷೂರೆನ್ಸ್ ಪಾಲಿಸಿಯನ್ನು ದಾನವಾಗಿ ಕೊಟ್ಟಿರುವುದರ ಅಂಗೀಕಾರ."

ಸಭಾಪತಿಗಳು ಈ ಮೇಲಿನ ವಿಷಯವನ್ನು ವರದಿ ಮಾಡಿದರು. ಶ್ರೀ॥ ಎಂ. ಎ. ನರಸಿಂಹಾಚಾರ್ಯರವರು ಈ ರೀತಿಯ ಧರ್ಮ ಹೊಸದೆಂದೂ, ಅದಕ್ಕಾಗಿ ಅವರಿಗೆ ನಮ್ಮ ಧನ್ಯವಾದಗಳನ್ನು ಸಮರ್ಪಿಸುವುದು ಅಗತ್ಯವೆಂದೂ ಹೇಳಿ ಈ ಕೆಳಗಿನ ಸೂಚನೆಯನ್ನು ಸಭೆಯ ಮುಂದಿಟ್ಟರು :—

"ಈ ಮಹೋಪಕಾರಕ್ಕಾಗಿ ಶ್ರೀಮತಿ ಎ. ಶೇಷಮ್ಮನವರಿಗೆ ಈ ವಾರ್ಷಿಕಾಧಿವೇಶನವು ಧನ್ಯವಾದಗಳನ್ನು ಸಮರ್ಪಿಸುತ್ತದೆ."

ಶ್ರೀ॥ ತಿ. ತಾ. ಶರ್ಮರವರು ಇದನ್ನು ಅನುಮೋದಿಸಿದರು.

ಸೂಚನೆ ಸರ್ವಾನುಮತದಿಂದ ಅಂಗೀಕೃತವಾಯಿತು.

## ವಿಷಯ ೧೨.—ಮುಂದಿನ ಸಮ್ಮೇಳನ

ಅನಂತರ ಸಭಾಪತಿಗಳು ಮುಂದಿನ ಸಮ್ಮೇಳನಕ್ಕೆ ಜಮಖಂಡಿ ಸಂಸ್ಥಾನ ಆಹ್ವಾನ ಬಂದಿರುವ ಸಂಗತಿಯನ್ನು ಸಭೆಗೆ ಅರಿಕೆಮಾಡಿದರು.

## ವಿಷಯ ೧೩.—ಋಣ ಪರಿಹಾರೋಪಾಯ

ಕಾ॥ ನಿ॥ ಮಂಡಲಿಯ ತಾ॥ ೧೧-೪-೧೯೩೭ರ ತೀರ್ಮಾನ.—"ಬೆಂಗ ಪ್ರೆಸ್ಸಿಗೆ ತಾ॥ ೧೦-೪-೧೯೩೭ರ ವರೆಗೆ ಸಲ್ಲಬೇಕಾಗಿರುವ ಮೊಬಲಗು ೧,೪೦೦-೦-೯ ಬಗ್ಗೆ ತಗಾದೆ ಬಲವಾಗಿರುವುದರಿಂದ ಆ ಬಾಕಿಯನ್ನು ತೀ ವಿಚಾರದಲ್ಲಿ ಮುಂದಿನ ಸಕಲ ಸದಸ್ಯರ ವಾರ್ಷಿಕಾಧಿವೇಶನದ ಸಲಹೆಯನ್ನು ತಕ್ಕದ್ದು."

ಈ ವಿಷಯವನ್ನು ಸಭೆಗೆ ವಿವರಿಸುತ್ತ ಗೌ॥ ಕೋಶಾಧ್ಯಕ್ಷರಾದ ಎ. ಸೀತಾರಾಮಯ್ಯನವರು ಪರಿಷತ್ತಿಗಿರುವ ಋಣಬಾಧೆಯ ಅಂಕಿ ಅಂಶ ಉದಾಹರಿಸಿ, ಬಾಕಿ ವಸೂಲಿಯ ಬಗ್ಗೆ ಪರಿಷತ್ತಿಗಿರುವ ಕಷ್ಟಗಳನ್ನು ಹಿಂದಿನ ವಿಶೇಷಾಧಿವೇಶನಗಳಲ್ಲಿ ಆದ (ಮಹಾಜನರಿಗೆ ಪ್ರಾರ್ಥನ ಪತ್ರ ಹೊರಡಿಸುವುದು, ಸರ್ಕಾರದವರನ್ನು ಹೆಚ್ಚಿನ ದ್ರವ್ಯಸಹಾಯಕ್ಕಾಗಿ ಬೇಡುವು ಇವೇ ಮೊದಲಾದ) ತೀರ್ಮಾನಗಳ ಬಗ್ಗೆ ನಡೆದಿರುವ ಸಂಗತಿಗಳನ್ನು ಮಾಡಿದರು.

ಸಭಾಪತಿಗಳು, ಇದಕ್ಕೆ ಅನುಬಂಧವಾಗಿ, ಹಿಂದಿನ ವಿಶೇಷ ಅಧಿವೇಶ ಶಾಶ್ವತ ನಿಧಿಯಿಂದ ೮೦೦ ರೂಪಾಯಿಗಳನ್ನು ಸಾಲ ತೆಗೆದ ವಿಷಯವನ್ನೂ ಸಲಹೆ ಸೂಚನೆಗಳನ್ನು ಕೊಟ್ಟ ಉಪಸಮಿತಿಯ ವರದಿಯ ವಿಷಯವನ್ನೂ ಆ ವಿಶೇಷಾಧಿವೇಶನದಲ್ಲಿ ತೀರ್ಮಾನವಾದಂತೆ ಪ್ರಾರ್ಥನ ಪತ್ರಿಕೆಗಳನ್ನು ಜನರಲ್ಲಿಗೆ ತೆಗೆದುಕೊಂಡುಹೋಗಿ ದ್ರವ್ಯ ಶೇಖರಮಾಡಲು ಪರಿಷತ್ತಿಗೆ ಸಹಾಯವಿಲ್ಲದ ಕಷ್ಟವನ್ನೂ, ದಿವಾನರವರಲ್ಲಿ "ಡೆಪ್ಯುಟೇಷನ್" ಹೋ ತಡವಾದದ್ದಕ್ಕೆ ಕಾರಣಗಳನ್ನೂ, ಅವರನ್ನು ಕಾಣಬೇಕೆಂದು ಬರೆದ ಪ ಪ್ರತ್ಯುತ್ತರವಾಗಿ ಈಚೆಗೆ ಬಂದಿರುವ ಕಾಗದದ ವಿಷಯವನ್ನೂ ಸಭೆಗೆ ಅರಿಕೆ ಈಗಿನ ಸಂದರ್ಭದಲ್ಲಿ ತಮಗೆ ಬೇರೆ ದಾರಿ ಯಾವುದೂ ತೋರದಿದ್ದ ಕಾ ಈ ಕೆಳಗಣ ಸಲಹೆಯನ್ನು ತಾವು ಸಭೆಯ ಪರ್ಯಾಲೋಚನೆಗಾಗಿ ಸೂಚಿಸಿದರು:

"(ಅ) ಮೇಲ್ಕಂಡ ಬೆಂಗಳೂರು ಪ್ರೆಸ್ಸಿನ ಬಾಕಿ ೧,೪೦೦ ರೂ. ಗ ತೀರಿಸುವ ಬಗ್ಗೆಯೂ, ಇತರ ಅವಸರದ ಬಾಕಿಗಳನ್ನು ತೀರಿಸುವ ಬಗ್ಗೆ ಪರಿಷತ್ತಿನ ಶಾಶ್ವತ ನಿಧಿಯ ಲೆಕ್ಕದಿಂದ ಈಗ ತೆಗೆದಿರುವ ೮೦೦ ರೂ. ಸಾಲದ ಜೊತೆಗೆ ಇನ್ನೂ ೧,೭೦೦ ರೂ. ಗಳನ್ನು—ಎಂದರೆ ೨,೫೦೦ ರೂ. ಗಳ ವರೆಗೆ—ಸಾಲ ತೆಗೆದು, ಜರೂರಾದ ಬಾಕಿಗಳನ್ನು ತಕ್ಕದ್ದು; ಮತ್ತು ಹಾಗೆ ಶಾಶ್ವತ ನಿಧಿಯಿಂದ ತೆಗೆದ ಸಾಲದ ಬಗ್ಗೆ ಮಂಡಲಿ ಪ್ರತಿ ತಿಂಗಳೂ ೫೦ ರೂ. ಗಳಿಗೆ ಕಡಮೆ ಇಲ್ಲದಂತೆ ಆ ಬಾಕಿ ವರೆಗೂ ಕಂತು ಕಟ್ಟುತ್ತಾ ಹೋಗತಕ್ಕದ್ದು."

ಅನಂತರ ಚರ್ಚೆಗೆ ಪ್ರಾರಂಭವಾಯಿತು. ಶ್ರೀ॥ ಎಂ. ನರಸಿಂಹಮೂರ್ತಿಯವರೂ, ಶ್ರೀ॥ ವೈ. ನರಸಿಂಗರಾಯರೂ, ಡಾ॥ ಎಂ. ಸಿದ್ದಲಿಂಗಯ್ಯನವರೂ, ಶ್ರೀ॥ ಎ. ಎನ್. ರಾಮರಾಯರೂ, ಶ್ರೀ॥ ಕೆ. ಎಸ್. ನಾರಾಯಣರಾಯರೂ, ಇನ್ನೂ ಕೆಲವರು ಸದಸ್ಯರೂ ಭಾಗವಹಿಸಿದ್ದರು. ಅನಂತರ ಶ್ರೀ॥ ವೈ. ನರಸಿಂಗರಾಯರು ಮೇಲಿನ ಸಲಹೆಯ ಜೊತೆಗೆ ಕೆಳಗೆ ಕಾಣಿಸಿರುವ ವಾಕ್ಯವನ್ನು ತಿದ್ದಾವಣೆಯಾಗಿ (Amendment) ಸೇರಿಸಬೇಕೆಂದು ಸೂಚಿಸಿದರು :—

"(ಅ) ಹೀಗೆ ಬಾಕಿ ತೀರಿಸಲು ಉಪಾಯಗಳೇನೆಂಬುದನ್ನು ಸೂಚಿಸಲು ಕಾ॥ ನಿ॥ ಮಂಡಲಿ ಒಂದು ಬೇರೆ ಉಪಸಮಿತಿಯನ್ನು ನಿಯಮಿಸಿ ಅದರ ಸಲಹೆಗಳನ್ನು ಆಲೋಚಿಸಿ ಕಾರ್ಯ ನಡಸತಕ್ಕದ್ದು."

ಡಾ॥ ಎಂ. ಸಿದ್ದಲಿಂಗಯ್ಯನವರು ಇದನ್ನು ಅನುಮೋದಿಸಿದರು. ಈ ತಿದ್ದಾವಣೆಯೊಡನೆ ಸೂಚನೆಯನ್ನು ಅಭಿಮತಕ್ಕೊಡ್ಡಲು, ೨೬ ಅನುಕೂಲವಾಗಿಯೂ ೭ ಪ್ರತಿಕೂಲವಾಗಿಯೂ ಇದ್ದುವು.

ಸೂಚನೆ ಬಹುಮತದಿಂದ ಅಂಗೀಕೃತವಾಯಿತು.

## ವಿಷಯ ೧೪.—ಖರ್ಚು ಉಳಿಕೆಯ ವಿಚಾರ

ಅನಂತರ ಶ್ರೀ॥ ಎಂ. ನರಸಿಂಹಮೂರ್ತಿಯವರು ಈ ಕೆಳಗಿನ ಸೂಚನೆಯನ್ನು ಸಭೆಯ ಮುಂದಿರಿಸಿದರು :—

"ಮೇಲ್ಕಂಡ ಸಾಲದ ಹಣವನ್ನು ತೀರಿಸಲು ಪರಿಷತ್ತಿನ ಚಾಲ್ತಿ ಖರ್ಚಿನಲ್ಲಿ—ಎಂದರೆ ಸಿಬ್ಬಂದಿಯ ವೆಚ್ಚ, ದೀಪದ ವೆಚ್ಚ, ಬರವಣಿಗೆಯ ಸಾಮಗ್ರಿ, ಪರಿಷತ್ಪತ್ರಿಕೆಯ ಹೊರತು ಮಿಕ್ಕ ಮುದ್ರಣದ ವೆಚ್ಚ, ಮರದ ಸಾಮಾನು, ಇತ್ಯಾದಿಗಳಲ್ಲಿ—ಉಳಿತಾಯಮಾಡಿ, ತಿಂಗಳಿಗೆ ರೂ. ೫೦ಕ್ಕೆ ಕಡಮೆ ಇಲ್ಲದಂತೆ ಸಲ್ಲಿಸತಕ್ಕದ್ದು."

ಶ್ರೀ॥ ಎ. ಎನ್. ರಾಮರಾಯರು ಇದನ್ನು ಅನುಮೋದಿಸಿದರು.

ಇದಕ್ಕೆ ೭ ಮಂದಿ ಅನುಕೂಲವಾಗಿಯೂ ೨೬ ಮಂದಿ ಪ್ರತಿಕೂಲವಾಗಿಯೂ ಅಭಿಮತಕೊಟ್ಟರು.

ಸೂಚನೆ ಬಹುಮತದಿಂದ ನಷ್ಟವಾಯಿತು.

## ವಿಷಯ ೧೫.—ಉಪಸಮಿತಿಯ ವಿವರ

ಶ್ರೀ॥ ಟಿ. ಟಿ. ಶರ್ಮರವರು ಈ ಕೆಳಗಿನ ಸೂಚನೆಯನ್ನು ಸಭೆಗೆ ಒಪ್ಪಿಸಿದರು:

"ಮೇಲಿನ (ವಿಷಯ ೧೩ರ) ನಿರ್ಣಯದಲ್ಲಿ ಪ್ರಸ್ತಾವಿಸಿರುವ ಋಣ ಪರಿಹಾರದ ಉಪಸಮಿತಿಯಲ್ಲಿ ಕಾ॥ ನಿ॥ ಮಂಡಲಿ ನಿಯಮಿಸಬಹುದಾದ ಇತರರೊಡನೆ—

(೧) ಶ್ರೀ॥ ಎಸ್. ಗೋಪಾಲಸ್ವಾಮಿಯವರು, ಎಂ.ಎ.
(೨) ,, ಎಲ್. ನರಸಿಂಹಮೂರ್ತಿಗಳು, ಬಿ.ಎ.
(೩) ,, ಕೆ. ಗೋಪಾಲಕೃಷ್ಣರಾಯರು, ಬಿ.ಎ.
(೪) ,, ಎ. ಎನ್. ರಾಮರಾಯರು, ಬಿ.ಎ., ಬಿ.ಎಲ್.
(೫) ,, ಎಂ. ಎ. ನಾರಾಯಣಯ್ಯಂಗಾರ್ಯರು, ಎಂ.ಎ.
(೬) ,, ವೈ. ನರಸಿಂಗರಾಯರು, ಬಿ.ಎ.
(೭) ,, ಪಿ. ಆರ್. ರಾಮಯ್ಯನವರು, ಬಿ.ಎಸ್‌ಸಿ.
(೮) ,, ಬಿ. ಪುಟ್ಟಯ್ಯನವರು, ಬಿ.ಎ.
(೯) ,, ವೈ. ಸುಬ್ರಹ್ಮಣ್ಯಂ, ಎಂ.ಎ.

—ಈ ಒಂಬತ್ತು ಮಂದಿ ಸದಸ್ಯರು ಇರತಕ್ಕದ್ದು; ಮತ್ತು ಆ ಉಪಸಮಿತಿ ತನ್ನ ವರದಿಯನ್ನು ಕೂಡಿದಮಟ್ಟಿಗೂ ಬರುವ (೧೯೩೭ನೆಯ) ... ತಿಂಗಳ ಅಂತ್ಯದೊಳಗಾಗಿ ಕಳುಹಿಸುವಂತೆ ಪ್ರಾರ್ಥಿಸತಕ್ಕದ್ದು."

ಇದನ್ನು ಶ್ರೀ॥ ಎಸ್. ಗೋಪಾಲಸ್ವಾಮಿಯವರು ಅನುಮೋದಿಸಿದರು.

ಸೂಚನೆ ಸರ್ವಾನುಮತದಿಂದ ಅಂಗೀಕೃತವಾಯಿತು.

## ವಿಷಯ ೧೬.—ಮೇಲಿನ ಉಪಸಮಿತಿಗೆ ಕೆಲವು ಸಲಹೆಗಳು

**೧. ಪರಿಷತ್ಪತ್ರಿಕೆಯ ವಿಚಾರ.**—ಶ್ರೀ॥ ಎ. ಆರ್. ಕೃಷ್ಣಶಾಸ್ತ್ರಿ... ಈ ಕೆಳಗಿನ ಸೂಚನೆಯನ್ನು ಸಭೆಯ ಮುಂದಿಟ್ಟರು:—

"ಈಗಿನ ಹಣದ ಮುಗ್ಗಟ್ಟಿನ ಪರಿಸ್ಥಿತಿಯನ್ನು ನಿವಾರಣೆಮಾಡುವ... ಪರಿಷತ್ಪತ್ರಿಕೆಯ ವೆಚ್ಚದಲ್ಲಿ ಉಳಿತಾಯಮಾಡುವ ಉದ್ದೇಶದಿಂದ, ಕಾ॥ ನಿ॥ ಸ... ಈ ವಿಷಯವನ್ನು ಪುನರಾಲೋಚನೆ ಮಾಡಿ, ಅವಶ್ಯವೆಂದು ತೋರಿದರೆ ಈ ಮು... ಮಾರ್ಪಾಟುಗಳನ್ನು ದ್ರವ್ಯಾನುಕೂಲ ತಕ್ಕಮಟ್ಟಿಗೆ ಉತ್ತಮಪಡುವವರೆಗು... ಬಹುದು:—

(i) ಪರಿಷತ್ತಿನ ಪ್ರಕಟನಾಂಗವಾಗಿ, ಈಗಿನ ಸಂಗ್ರಹ ಪ್ರತಿಗೆ ... ಅದೇ ಆಕಾರದಲ್ಲಿ, ಸುಮಾರು ೧೬ (16 Royal 8vo. pp.) ಪುಟಗಳ ... ತ್ರೈಮಾಸಿಕ ಸಮಾಚಾರ ಪತ್ರಿಕೆ (Bulletins) ಗಳನ್ನು ಒರಟು ಕಾಗದದ... ಅಚ್ಚುಹಾಕಿಸಿ ಪ್ರಕಟಿಸಿ ಅದನ್ನು ಎಲ್ಲ ವರ್ಗಗಳ ಸದಸ್ಯರಿಗೂ ಉಚಿತ... ಕಳುಹಿಸತಕ್ಕದ್ದು.

(ii) ಪರಿಷತ್ಪತ್ರಿಕೆಯನ್ನು ಈಗಿರುವಂತೆಯೇ ವರ್ಷಕ್ಕೆ ಎರಡುಸಲ ... ತಕ್ಕದ್ದು.

(iii) ಈ ಹೊಸ ಏರ್ಪಾಟಿನ ಇತರ ವಿವರಗಳನ್ನು ಕಾ॥ ನಿ॥ ಸ... ನಿಶ್ಚಯಿಸಬಹುದು."

ಶ್ರೀ॥ ಟಿ. ಟಿ. ಶರ್ಮರವರು ಇದನ್ನು ಅನುಮೋದಿಸಿದರು.

ಈ ವಿಷಯದಲ್ಲಿ ಸ್ವಲ್ಪ ದೀರ್ಘವಾದ ಚರ್ಚೆ ನಡೆಯಿತು. ಶ್ರೀ॥ ... ನರಸಿಂಹಮೂರ್ತಿಗಳೂ, ಶ್ರೀ॥ ತಿ. ತಾ. ಶರ್ಮರವರೂ, ಶ್ರೀ॥ ಎಸ್. ಗೋ...

ಸ್ವಾಮಿಯವರೂ, ಶ್ರೀ॥ ಎ. ಎನ್. ರಾಮರಾಯರವರೂ, ಇನ್ನೂ ಇತರರೂ ಚರ್ಚೆಯಲ್ಲಿ ಭಾಗವಹಿಸಿದ್ದರು. ಚರ್ಚೆಯಾದಮೇಲೆ ಶ್ರೀ॥ ಎಸ್. ಗೋಪಾಲಸ್ವಾಮಿಯವರು ಈ ಕೆಳಗಿನ ತಿದ್ದುವಣೆ ಸೂಚನೆಯನ್ನು (amendment) ಸಭೆಯ ಮುಂದಿಟ್ಟರು :—

"ಈ ಸೂಚನೆಯನ್ನು ಹಿಂದಿನ ನಿರ್ಣಯದಲ್ಲಿ ಕಾಣಿಸಿರುವ ಋಣ ಪರಿಹಾರದ ಉಪಸಮಿತಿಯ ಮುಂದೆ ಇರಿಸಿ, ಅದರ ತೀರ್ಮಾನ ದೊರೆಯುವ ವರೆಗೂ ಪತ್ರಿಕೆಯನ್ನು ಈಗಿನಂತೆಯೇ ನಡಸಿಕೊಂಡು ಹೋಗತಕ್ಕದ್ದು. ಆ ಉಪಸಮಿತಿ ಮೇಲಿನ ಏರ್ಪಾಟು ಖಂಡಿತವಾಗಿ ಅನಿವಾರ್ಯವೆಂದು ಅಭಿಪ್ರಾಯಕೊಟ್ಟಲ್ಲಿ ಆ ಬಳಿಕ ಮೇಲ್ಕಂಡ ಏರ್ಪಾಟುಗಳನ್ನು ಕೈಕೊಳ್ಳಬಹುದು."

ಶ್ರೀ॥ ಎ. ಎನ್. ರಾಮರಾಯರವರು ಇದನ್ನು ಅನುಮೋದಿಸಿದರು.

ಈ ತಿದ್ದುವಣೆಯೊಡಗೂಡಿದ ಸೂಚನೆ ಸರ್ವಾನುಮತದಿಂದ ಅಂಗೀಕೃತವಾಯಿತು.

ಈ ಮೇಲಣದರ ಜೊತೆಗೆ ಇನ್ನು ಕೆಲವು ಸಲಹೆಗಳನ್ನು ಮೇಲೆ ಪ್ರಸಕ್ತವಾಗಿರುವ ಉಪಸಮಿತಿಗೆ ಕಳುಹಿಸಬಹುದೆಂದು ತೀರ್ಮಾನವಾಯಿತು. ಅವು ಯಾವುವೆಂದರೆ:—

೨. ಪರಿಷತ್ತಿಗೆ ಸದಸ್ಯರುಗಳಿಂದಲೂ ಅಂಗಸಂಸ್ಥೆಗಳಿಂದಲೂ ಸದಸ್ಯತ್ವದ ಬಗ್ಗೂ ಪತ್ರಿಕೆಯ ಬಗ್ಗೂ ಸಲ್ಲಬೇಕಾದ ಹಣ ತಾ॥ ೧–೫–೧೯೩೭ರಲ್ಲಿ ರೂ. ೧,೭೯೭–೦–೦ ನಿಂತಿರುತ್ತದೆಯೆಂದೂ, ಎಲ್ಲ ಸದಸ್ಯರುಗಳಿಗೂ ಅಂಗಸಂಸ್ಥೆಗಳಿಗೂ ನಾಲ್ಕಾರುಸಲ ಜ್ಞಾಪಕ ಪತ್ರಗಳನ್ನು ಬರೆದದ್ದಾಗಿದೆಯೆಂದೂ ಆಳುಗಳನ್ನು ಕಳುಹಿಸಿದ್ದಾಗಿದೆಯೆಂದೂ, ಪರಿಷತ್ಪತ್ರಿಕೆಯನ್ನು ವಿ. ಪಿ. ಮೂಲಕ ಕಳುಹಿಸಿ ಅದನ್ನು ವಾಪಸು ಪಡೆದದ್ದಾಗಿದೆಯೆಂದೂ, ಈ ವಿಚಾರದಲ್ಲಿ ಪರಿಷತ್ತಿನ ಕಾರ್ಯಕರ್ತರು ಯಾವ ರೀತಿ ನಡೆಯಬೇಕೆಂಬ ಬಗ್ಗೆ ಸದಸ್ಯರು ಸಲಹೆಕೊಡಬೇಕೆಂದೂ ಸಭಾಪತಿಗಳು ಕೋರಿದರು. ಈ ವಿಷಯವನ್ನೂ ಮೇಲಿನ ಉಪಸಮಿತಿಯ ವಿಚಾರಕ್ಕೆ ತರತಕ್ಕದ್ದೆಂದು ತೀರ್ಮಾನಿಸಲಾಯಿತು.

೩. ಶ್ರೀ॥ ಕೆ. ನಾರಾಯಣರಾಯರವರು ಹಳೆಯ ಪರಿಷತ್ಪತ್ರಿಕೆ ಪ್ರಕಟನೆಗಳನ್ನು ಬೆಲೆ ಕಡಮೆಮಾಡಿ ಮಾರಿ ಸಾಲ ತೀರಿಸಬಹುದೆಂದು ಸೂಚಿಸಿದರು.

೪. ವರ್ಷದಲ್ಲೊಂದು ದಿನವನ್ನು ನಾಡಹಬ್ಬವೆಂದು ಗೊತ್ತುಮಾಡಿ, ಆಗ ಊರೂರಲ್ಲಿಯೂ ಸಾರ್ವಜನಿಕವಾಗಿ ಉತ್ಸವಗಳನ್ನು ನಡಸಿ, ಆ ಕಾಲದಲ್ಲಿ ಮನೆ ಮನೆಗೂ ಹೋಗಿ ಚಂದಾ ಎತ್ತಿ ಪರಿಷತ್ತಿಗೆ ಧನಸಹಾಯ ಸಂಪಾದಿಸಬಹುದೆಂದು ಕೆಲವರು ಸೂಚಿಸಿದರು.

೫. ಒಂದು ಲಾಟರಿಯ ಏರ್ಪಾಟಿನ ಮೂಲಕ ಹಣವನ್ನು ಶೇಖರಿಸಿ ಸಾಲ ತೀರಿಸುವ ಯೋಚನೆಮಾಡಬಹುದೆಂದು ಕೆಲವರು ಸದಸ್ಯರು ಸೂಚಿಸಿದರು.

ಈ ಎಲ್ಲ ಸಲಹೆಗಳನ್ನೂ ಮೇಲೆ ಪ್ರಸಕ್ತವಾಗಿರುವ ಸ
ಪರ್ಯಾಲೋಚನೆಗೆ ಕಳುಹಿಸಬಹುದೆಂದು ಸರ್ವಾನುಮತದಿಂದ ಗೊತ್ತಾ

## ವಿಷಯ ೧೭.—ಅಭಿಮಾನಿ ವರ್ಗ

ಶ್ರೀ॥ ಎ. ವೆಂಕಟಪ್ಪನವರು ಈ ಕೆಳಗಿನ ಸೂಚನೆಯನ್ನು ಒಪ್ಪಿಸಿದರು:—

"ಪರಿಷತ್ತಿನ ಸದಸ್ಯರಾಗಲು ಅನುಕೂಲವಿಲ್ಲದ [ಕನ್ನಡ ಪ್ರೇ
ಪರಿಷತ್ತಿನೊಡನೆ ಮಿಳಿತರಾಗಿ ಸಹಕರಿಸಲು ಸಾಧ್ಯವಾಗುವಂತೆ
ವರ್ಗವೊಂದನ್ನು ಏರ್ಪಡಿಸತಕ್ಕದ್ದು."

(*a*) ಅಭಿಮಾನಿಗಳು ವರ್ಷಕ್ಕೆ ಎಂಟು ಆಣೆಯಂತೆ ಕೊಟ್ಟು ಪ
ಉದ್ದೇಶ ಸಾಧನೆಗೆ ಕೂಡಿದಮಟ್ಟಿಗೂ ಸಹಾಯಮಾಡಲೊಪ್ಪುವ

(*b*) ಅಭಿಮಾನಿಗಳು ಈ ಮುಂದೆ ಕಾಣಿಸಿರುವ ಪ್ರಯೋಜ
ಪಡೆಯಬಹುದು:

(i) ಪರಿಷತ್ಸದಸ್ಯರಿಗೆ ಉಚಿತ ಆಹ್ವಾನವಿರುವ ಎಲ್ಲ ಸಭಾ
ಗಳಿಗೂ ಉಚಿತ ಪ್ರವೇಶ;

(ii) ವಾಚನಾಲಯದ ಮತ್ತು ಪುಸ್ತಕ ಭಂಡಾರದ ಉಪಯೋ

(iii) ಸದಸ್ಯರಿಗಾಗಿ ಏರ್ಪಟ್ಟಿರುವ ಪುಸ್ತಕ ಭಂಡಾರದ ನ
ಮೇರೆಗೆ ಪುಸ್ತಕ ಸಾಲವನ್ನು ಪಡೆಯುವುದು.

ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರು ಇದನ್ನು ಅನುಮೋದಿಸಿದರು.

ಶ್ರೀ॥ ಎಸ್. ಗೋಪಾಲಸ್ವಾಮಿಯವರು ಮೇಲಿನ "ಕನ್ನಡ ಪ್ರೇಮಿ
ಎಂಬುದಕ್ಕೆ ಬದಲಾಗಿ *ಮಹಿಳೆಯರೂ ವಿದ್ಯಾರ್ಥಿಗಳೂ* ಎಂದು ತಿದ್ದತಕ್ಕ
ಸೂಚಿಸಿದರು. ಇದನ್ನು ವಿಷಯ ಸೂಚಕರು ಒಪ್ಪಿಕೊಂಡರು.
ಆ ತಿದ್ದಾವಣೆಯೊಡನೆ ಮೇಲಿನ ಸೂಚನೆ ಸರ್ವಾನುಮತದಿಂದ
ವಾಯಿತು.

## ವಿಷಯ ೧೮.—ಲಾಂಛನ

ಅನಂತರ ಸಭಾಪತಿಗಳು ಈ ಕೆಳಗಿನ ಅರಿಕೆಯನ್ನು ಸಭೆಯ ಮುಂದಿರಿಸಿ

"ಪರಿಷತ್ತಿನ ಸದಸ್ಯರಿಗೂ ಅಭಿಮಾನಿಗಳಿಗೂ ಅಂಗ
ಸದಸ್ಯರಿಗೂ ಅವರ ಕರ್ಣಾಟಕ ಪ್ರೇಮದ ಗುರುತಾಗಿ ಇರುವಂತೆ
ಲಾಂಛನವನ್ನು ಲೋಹದಲ್ಲಿ ಮಾಡಿ ಹಂಚತಕ್ಕ ವಿಚಾರ."

ಇದನ್ನು ಸಭಿಕರು ಸಾಮಾನ್ಯವಾಗಿ ಒಪ್ಪಿ, ವಿವರಗಳನ್ನು ಕಾ॥ ಸ
ವಿಚಾರಮಾಡಬಹುದೆಂದು ಸೂಚಿಸಿದರು.

## ವಿಷಯ ೧೯.—ಕನ್ನಡ ಸಾಹಿತ್ಯ ಪರೀಕ್ಷೆಗಳು

ಶ್ರೀ॥ ತಿ. ತಾ. ಶರ್ಮರವರು ಈ ಕೆಳಗಿನ ಸೂಚನೆಯನ್ನು ಸಭೆಯ ಮುಂದಿರಿಸಿದರು :—

"ಜನಸಾಮಾನ್ಯದಲ್ಲಿ ಕನ್ನಡ ಸಾಹಿತ್ಯ ವ್ಯಾಸಂಗವನ್ನು ಪ್ರೋತ್ಸಾಹಪಡಿಸುವ ಉದ್ದೇಶದಿಂದ ಕ॥ ಸಾ॥ ಪರಿಷತ್ತು ಪ್ರಥಮ, ಮಧ್ಯಮ ಮತ್ತು ಪ್ರೌಢ ತರಗತಿಯ ಮೂರು ಪರೀಕ್ಷೆಗಳನ್ನು ಪ್ರತಿವರ್ಷವೂ ಅನುಕೂಲ ದೊರೆತಂತೆಲ್ಲ ಕನ್ನಡ ನಾಡಿನ ದೊಡ್ಡ ದೊಡ್ಡ ಊರುಗಳಲ್ಲಿ ನಡಸಿ, ತೇರ್ಗಡೆ ಹೊಂದಿದವರಿಗೆ ತಕ್ಕ ಪ್ರಶಸ್ತಿ ಪತ್ರಿಕೆಗಳನ್ನೂ ಬಿರುದುಗಳನ್ನೂ ಕೊಡತಕ್ಕದ್ದು. ಈ ಬಗ್ಗೆ ವಿವರಗಳನ್ನು ಆಲೋಚಿಸಿ ಒಂದು ವ್ಯವಸ್ಥಾಕ್ರಮವನ್ನೂ ಅದಕ್ಕೆ ಸಾಧಕವಾದ ಶಿಕ್ಷಣ ಅಭ್ಯಾಸಗಳ ಏರ್ಪಾಟು ಮೊದಲಾದ ಕಾರ್ಯವಿವರಗಳನ್ನೂ ಶಿಫಾರಸುಮಾಡಲು ಈ ಕೆಳಗೆ ಕಾಣಿಸಿರುವ ಸದಸ್ಯರುಗಳುಳ್ಳ ಸಮಿತಿಯನ್ನು ನಿಯಮಿಸಲಾಗಿದೆ:—

(೧) ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಕನ್ವೀನರು)
(೨) ,, ಮಾಸ್ತಿ ವೆಂಕಟೇಶಯ್ಯಂಗಾರ್ಯರು, ಎಂ.ಎ.
(೩) ,, ಎಸ್. ಜಿ. ಶಾಸ್ತ್ರಿಗಳು, ಬಿ.ಎ., ಎಂ.ಎಸ್‌ಸಿ., ಎಫ್.ಸಿ.ಎಸ್.
(೪) ,, ಡಿ. ಸಿ. ಸುಬ್ಬರಾಯಪ್ಪನವರು, ಬಿ.ಎ., ಬಿ.ಎಲ್.
(೫) ,, ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ.
(೬) ,, ಪಂಜೆ ಮಂಗೇಶರಾಯರು, ಬಿ.ಎ., ಎಲ್.ಟಿ.
(೭) ,, ದ. ರಾ. ಬೇಂದ್ರೆಯವರು, ಎಂ.ಎ.

ಕಾ॥ ನಿ॥ ಮಂಡಲಿ ಈ ಸಮಿತಿಯ ವರದಿಯನ್ನು ಪರ್ಯಾಲೋಚನೆ ಮಾಡಿ ತಕ್ಕ ಮುಂದಿನ ಕಾರ್ಯವನ್ನು ನಡಸತಕ್ಕದ್ದು."

ಇದನ್ನು ಶ್ರೀ॥ ಎಂ. ನರಸಿಂಹಮೂರ್ತಿಯವರು ಅನುಮೋದಿಸಿದರು.
ಸೂಚನೆ ಸರ್ವಾನುಮತದಿಂದ ಅಂಗೀಕೃತವಾಯಿತು.

## ವಿಷಯ ೨೦.—ಒಂದು ನಿಬಂಧನೆಯ ತಿದ್ದುಪಾಟು

ಶ್ರೀ॥ ನಂ. ವೆಂಕಟೇಶಯ್ಯಂಗಾರ್ಯರವರು ಈ ಕೆಳಗಿನ ಸೂಚನೆಯನ್ನು ಒಪ್ಪಿಸಿದರು :—

"ಪರಿಷತ್ತಿನ ನಿಬಂಧನೆಗಳಲ್ಲಿ ನಿಬಂಧನೆ ೧೦-ಗ ವನ್ನು ತೆಗೆದುಹಾಕತಕ್ಕದ್ದು."

[ಆ ನಿಬಂಧನೆ ಈ ರೀತಿ ಇದೆ:—"ಪರಿಷತ್ತಿನ ಅಧಿಕಾರಿಗಳ ಮತ್ತು ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಚುನಾವಣೆಯ ಕಾರ್ಯವನ್ನು, ಆ ಚುನಾವಣೆಗಳಿಗೆ ಸಂಬಂಧಪಟ್ಟು ಬಂದಿರುವ ತಿದ್ದುಪಡಿಗಳನ್ನು ಪರ್ಯಾಲೋಚಿಸಿ ನಿರ್ಣಯಿಸಿದ ಬಳಿಕ ಕೈಗೆ ತೆಗೆದುಕೊಳ್ಳತಕ್ಕದ್ದು."]

ಶ್ರೀ॥ ತಿ. ತಾ. ಶರ್ಮರವರು ಇದನ್ನು ಅನುಮೋದಿಸಿದರು.

ಶ್ರೀ॥ ಎಂ. ನರಸಿಂಹಮೂರ್ತಿಯವರು ಇದುವರೆಗೆ ರಾಯಚೂ
ಬೊಂಬಾಯಲ್ಲಾಗಲಿ ಪ್ರಸಕ್ತ ನಿಬಂಧನೆಯಿಂದ ತೊಂದರೆಯೇನೂ ಆಗಿಲ್ಲ
ಆದನ್ನು ಈಗ ತೆಗೆದುಹಾಕಬೇಕಾಗಿಲ್ಲವೆಂದೂ ಹೇಳಿದರು. ಅದಕ್ಕೆ ಉ
ರಾಯಚೂರಿನಲ್ಲಿಯೇ ಆದರಿಂದ ತೊಂದರೆಯಾಯಿತೆಂದೂ, ಆ ನಿಬಂಧ
ಅಮಾನತ್ತು (Suspend) ಮಾಡಿಯೇ ಕೆಲಸ ನಡಸಬೇಕಾಯಿತೆಂದೂ
ಜವಾಬು ಹೇಳಿದರು. ಸೂಚನೆಯ ಮೇಲೆ ಅಭಿಮತವನ್ನು ತೆಗೆದು
೨೩ ಅದಕ್ಕೆ ಅನುಕೂಲವಾಗಿಯೂ ೧ ಪ್ರತಿಕೂಲವಾಗಿಯೂ ಇದ್ದುವು.

ಬಹುಮತದಿಂದ ಸೂಚನೆ ಅಂಗೀಕೃತವಾಯಿತು.

## ವಿಷಯ ೨೧.—ವಿಶ್ವವಿದ್ಯಾನಿಲಯದಲ್ಲಿ ಕನ್ನಡ

ಶ್ರೀ॥ ಎಂ. ವಾಸುದೇವಮೂರ್ತಿ ಅವರು ತಾವು ಕಳುಹಿಸಿದ್ದ ಈ
ಸೂಚನೆಯನ್ನು ಸಭೆಯ ಮುಂದಿಟ್ಟರು:—

"ವಿಶ್ವವಿದ್ಯಾನಿಲಯದ ಅಥವಾ ಇತರ ವಿದ್ಯಾಸಂಸ್ಥೆಗಳ
ಪರೀಕ್ಷೆಗಳಿಗೆ ಹೋಗತಕ್ಕ ವಿದ್ಯಾರ್ಥಿಗಳು ಆಯಾ ಪರೀಕ್ಷೆಗಳಿಗಾ
ತೆಗೆದುಕೊಂಡಿರುವ ಯಾವುದಾದರೊಂದು ವಿಜ್ಞಾನ ವಿಷಯದ ಮೇ
ಮಟ್ಟಿಗೆ ಶೋಧನೆಗಳನ್ನು ನಡೆಯಿಸಿ ಒಂದೊಂದು ಪ್ರಬಂಧವನ್ನು
ತಕ್ಕುದೆಂಬ ನಿಯಮವು ಅನೇಕ ಕಡೆಗಳಲ್ಲಿ ಇರುತ್ತದಷ್ಟೆ.
ನಿಯಮವು ನಮ್ಮಲ್ಲಿಯೂ ಇರುವುದಾದರೆ ವಿದ್ಯಾವಂತರಾ
ಸ್ವತಂತ್ರವಾಗಿ ವಿಚಾರಮಾಡುವ ಶಕ್ತಿಯುಳ್ಳವರಾಗುವುದಕ್ಕೆ
ತಳಹದಿಯನ್ನು ಹಾಕಿದಂತಾಗುತ್ತದೆ. ಇಂತಹ ಪ್ರಬಂಧಗಳನ್ನು
ಶೋಧಕರು ಕನ್ನಡದಲ್ಲಿ ಒಪ್ಪಿಸುವುದಾದರೆ ಕನ್ನಡ ಭಾಷೆಯೂ
ರೀತಿಯಲ್ಲಿ ಮುಂದುವರಿಯಲವಕಾಶವಾಗುವುದು. ಇಂತಹ
ನಿಯಮವನ್ನು ಜಾರಿಗೆ ತರಲು ಸಹಾಯಮಾಡಬೇಕೆಂದು ವಿದ್ಯಾ
ಗಳನ್ನು ಕೇಳಿಕೊಳ್ಳುವುದರ ಮೂಲಕವೂ, ಹಾಗೆ ಒಪ್ಪಿಸುವ ಪ್ರವೇಶ
ಪರೀಕ್ಷೆಗೆ ಹೋಗುವವರ ಕನ್ನಡ ಭಾಷಾ ಪರಿಚಯಕ್ಕೆ ಒಂದು ಗುರುತುಸಮಾ
ವಂತೆ ಏರ್ಪಡಿಸುವುದರಿಂದಲೂ, ಹೀಗೆ ವರ್ಷ ವರ್ಷ ಶೇಖರವಾಗುವ
ಪ್ರಬಂಧಗಳನ್ನು ಸ್ಪಷ್ಟವಾಗಿ ಬರೆದು ರಟ್ಟುಹಾಕಿಸಿದ ಹಸ್ತಪ್ರ
ಪರಿಷತ್ತಿನ ಸರಸ್ವತೀ ಭಂಡಾರದಲ್ಲಿ ಇಡುವುದರ ಮೂಲಕವೂ, ಆ ಪ್ರಬಂಧ
ವಿಷಯಗಳನ್ನು ಸಂಕ್ಷೇಪವಾಗಿ 'ಪರಿಷತ್ಪತ್ರಿಕೆ', 'ಪ್ರಬುದ್ಧ ಕರ್ಣಾಟಕ'
ಮತ್ತು ಆ ರೀತಿಯ ಇತರ ಪತ್ರಿಕೆಗಳಲ್ಲಿ ಪ್ರಕಟವಾಗುವಂತೆ ಏರ್ಪಡಿ
ಮೂಲಕವೂ, ಸಾಧ್ಯವಾದರೆ ಪ್ರಬಂಧಗಳನ್ನು ಒಪ್ಪಿಸುವವರ
ನಿಬಂಧನೆಗಳನ್ನನುಸರಿಸಿ ಪರಿಷತ್ತಿನ ಪ್ರಶಸ್ತಿಯನ್ನು
ಮೂಲಕವೂ ಪರಿಷತ್ತು ಕನ್ನಡಕ್ಕೊಂದು ಹೊಸ ಅವಕಾಶವನ್ನು
ಬಹುದಾಗಿರುತ್ತದೆ."

ಇದನ್ನು ಶ್ರೀ॥ ಕೆ. ಗೋಪಾಲಕೃಷ್ಣರಾಯರು ಅನುಮೋದಿಸಿದರು.

ಈ ಸೂಚನೆಯನ್ನು ಮೇಲಿನ (೧೮ನೆಯ ವಿಷಯದಲ್ಲಿ ಕಾಣುವ) ಪರೀಕ್ಷಾ ಷಯಕ ಉಪಸಮಿತಿ ಆಲೋಚಿಸತಕ್ಕದ್ದೆಂದು ಸರ್ವಾನುಮತದಿಂದ ಅಂಗೀಕಾರ ವಾಯಿತು.

**ಷಯ ೨೨.—ಪರಿಷತ್ತಿಗೆ ಕಾರ್ಯ ಸಹಾಯಕರು**

ಅನಂತರ ಸಭಾಪತಿಗಳು ಈ ಕೆಳಗಿನ ಸೂಚನೆಯನ್ನು ಸಭೆಯ ಮುಂದಿರಿಸಿದರು :—

"ಪರಿಷತ್ತು ಈಗ ಕೈಕೊಂಡಿರುವ ಈ ಕೆಳಗೆ ಕಾಣಿಸಿರುವ ಐದು ಕಾರ್ಯಗಳ ವಿಷಯದಲ್ಲಿಯೂ, ಪರಿಷತ್ತು ಇನ್ನುಮುಂದೆ ಕೈಕೊಳ್ಳ ಬಹುದಾದ ಇತರ ಕಾರ್ಯಗಳಲ್ಲಿಯೂ, ಕಾ॥ ನಿ॥ ಮಂಡಲಿ ಕೋರುವ ಮೇರೆಗೆ ಸ್ವತಃ ಶ್ರಮವಹಿಸಿ ಸಹಾಯಮಾಡಲು ಪರಿಷತ್ಸದಸ್ಯರು ಮುಂದೆ ಬರಬೇಕೆಂದು ಈ ವಾರ್ಷಿಕಾಧಿವೇಶನವು ಬೇಡುತ್ತದೆ. ಈ ಬೇಡಿಕೆಯನ್ನು ಮನ್ನಿಸಿ ಸಹಾಯಮಾಡಲು ಒಪ್ಪುವವರಿಗೆ ಕಾ॥ ನಿ॥ ಮಂಡಲಿ ಉಚಿತ ತೋರಿದಂತೆ ಕರ್ತವ್ಯಗಳನ್ನು ಒಪ್ಪಿಸಿಕೊಡಬಹುದು.

**ಕಾರ್ಯಗಳು :—**

(೧) ಪುಸ್ತಕ ಭಂಡಾರ ಮತ್ತು ವಾಚನಾಲಯ.
(೨) ಸಂಚಾರೋಪನ್ಯಾಸದ ಏರ್ಪಾಟು.
(೩) ಪರಸ್ಥಳ ಸಾಹಿತ್ಯ ಸೇವೆ.
(೪) ಕರ್ಣಾಟಕ ಸಂಘಗಳ ಸಂಘಟನೆ ಮತ್ತು ವ್ಯವಹಾರ.
(೫) ಸದಸ್ಯ ಸಂಪಾದನೆ ಮತ್ತು ಪ್ರಚಾರ ಕಾರ್ಯ."

ಈ ಸೂಚನೆ ಸರ್ವಾನುಮತದಿಂದ ಅಂಗೀಕೃತವಾಯಿತು.

ಇದಾದಮೇಲೆ ಸಭಾಪತಿಗಳು ಚರ್ಚಾವಸರದಲ್ಲಿ ಯಾರಾದರೂ ಏನಾದರೂ ವೇಶವನ್ನೂ ಕಾವನ್ನೂ ತೋರಿಸಿದ್ದರೆ ಅದರಿಂದ ಯಾರೂ ಮನಸ್ಸಿನಲ್ಲಿ ಸಮಾಧಾನಪಟ್ಟುಕೊಳ್ಳತಕ್ಕದ್ದಲ್ಲವೆಂದು ಬಿನ್ನಯಿಸಿ, ಎಲ್ಲ ಸದಸ್ಯರನ್ನೂ ಅವರ ಹಕಾರಕ್ಕಾಗಿ ವಂದಿಸಿದರು.

ಸಭಾಪತಿಗಳಾಗಿ ಕಾರ್ಯಗಳನ್ನು ನಡಸಿದ್ದಕ್ಕಾಗಿ ಶ್ರೀ॥ ಡಿ. ವಿ. ಗುಂಡಪ್ಪ ವರಿಗೆ ಶ್ರೀ॥ ಕೆ. ನಾರಾಯಣರಾಯರವರೂ ಶ್ರೀ॥ ಪಂಜೆ ಮಂಗೇಶರಾಯರವರೂ ಭೆಯ ಪರವಾಗಿ ವಂದನೆಗಳನ್ನರ್ಪಿಸಿದರು.

ಎಸ್. ವಿ. ರಂಗಣ್ಣ,
ಗೌ॥ ಕಾರ್ಯದರ್ಶಿ,
ಕರ್ಣಾಟಕ ಸಾಹಿತ್ಯ ಪರಿಷತ್ತು.

೧೦ನೆಯ ಮೇ ೧೯೩೭.

---

## ಕರ್ಣಾಟಕ ಸಾಹಿತ್ಯ ಪರಿಷತ್ತು

# ನಾಲ್ಕನೆಯ ವಿಶೇಷ ಸಾಹಿತ್ಯೋತ್ಸವ

### ೨-೫-೧೯೩೭ರಿಂದ ೧೧-೫-೧೯೩೭

---

ಈ ಸಲದ ವಿಶೇಷ ಸಾಹಿತ್ಯೋತ್ಸವವು ಜರುಗಿದ್ದು ಒಂದು ಅಭಿನ... ವಾದ ಸಂಗತಿಯೇ ಸರಿ. ವರ್ಷವರ್ಷವೂ ನಡೆಯಬೇಕಾದ ಎಲ್ಲ ಸ... ಗಳಿಗೂ ನಮ್ಮಲ್ಲಿ ಸಾಧಾರಣವಾಗಿ ಅಂಟಿಕೊಳ್ಳುವ ನಿರುತ್ಸಾಹ... ಯಾವಾಗಲೋ ಅದನ್ನೂ ಸೋಕಿತೆಂದು ಕಾಣುತ್ತದೆ. ಪರಿಷತ್ತಿನ... ನಿರ್ವಾಹಕ ಮಂಡಲಿಯೇನೋ ತನ್ನ ೧೩-೧೨-೧೯೩೬ನೆಯ ತಾರೀಖಿನ... ದಲ್ಲಿ ಉತ್ಸವವನ್ನು ೧೯೩೭ನೆಯ ಮೇ ತಿಂಗಳಿನಲ್ಲಿ ಹೂಡಬೇಕೆಂದು ಸೂತ್ರ... ನಿರ್ಧರಿಸಿತು. ಆದರೆ ವ್ಯವಸ್ಥಾಪಕತ್ವವನ್ನು ಹೊತ್ತುಕೊಳ್ಳಲು ಮುಂ... ವರಾರು? ಅದು ಮೊದಲನೆಯ ಅಡ್ಡಿ. ಕೊನೆಗೊಂದು ಯಜ್ಞಪಶುವು... ಕೊರಳಿಗೆ ಅರಿಸಿನ ಹೂಮಾಲೆಯೂ ಬಿದ್ದಿತು. ಸುಲಭವಾದ ಕಾರ್ಯಸಾಧ... ದೆಂದರೆ, ಉತ್ಸವದ ವಿಚಾರದ ಪ್ರಕಟನೆಗಳು. ಅವು ೧೦-೨-೧೯೩೭ರಲ್ಲಿ ಮೈ... ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರವರಿಗೂ, ೨೫-೨-೧೯೩೭ನೆಯ ತಾ... ಕನ್ನಡ ನಾಡಿನ ಹೈಸ್ಕೂಲು ಮಿಡಲ್ ಸ್ಕೂಲುಗಳಿಗೂ, ೨೬-೨-೧೯... ತಾರೀಖಿನಲ್ಲಿ ವೃತ್ತಪತ್ರಿಕೆಗಳಿಗೂ ಕರ್ಣಾಟಕ ಸಂಘಗಳಿಗೂ, ತಾ॥ ೨೦-... ರಲ್ಲಿ ಬೊಂಬಾಯಿ, ಮದರಾಸು, ಹೈದರಾಬಾದು ಮತ್ತು ಕೊಡಗಿನ ವಿದ್ಯಾ... ಇಲಾಖೆಗಳ ಅಧಿಕಾರಿಗಳಿಗೂ ಹೋದುವು. ಆಮೇಲೆ ಎರಡನೆಯ ಇನ್ನೊ... ಅಡಚಣೆ, ಹೆಚ್ಚಾಗಿ ಸಾಹಿತ್ಯ ಸಂಘಗಳನ್ನು ಗೋಳುಗುಟ್ಟಿಸುವ ಪೀಡೆ... ದೇವಿಯ ಚಾಂಚಲ್ಯ ಫಲ. ಪರಿಷತ್ತು ತನ್ನ ಹೆಸರನ್ನು ಪದೇ ಪದೇ ಉ... ರೀತಿ ವಿಧಾಯಕಮಾಡಿರುವ ಆ ಮಂಗಳ ದೇವತೆಯ ಸಲುವಾಗಿ ಬಗೆಬಗೆ... ಪೂಜೆ, ತಪಸ್ಸುಗಳು ಏರ್ಪಟ್ಟವು. ಪಲ್ಲಗಟ್ಟಳೆ ಪ್ರಯತ್ನ, ಪಾವಿಸನ್ನು... ಈ ತರಹದ ಅನುಭವ ಪುನಃ ಪುನಃ ಉಂಟಾಗತೊಡಗಲು, ಕಾರ್ಯಸ... ಹೃದಯ ದೌರ್ಬಲ್ಯ ಹುಟ್ಟಿ, ಹೆಚ್ಚಿ, ಈ ಅಸಹಾಯ ಸ್ಥಿತಿಯಲ್ಲಿ ಉತ್ಸವವ... ನಿಲ್ಲಿಸಿ ಬಿಡಬಾರದು? ಎಂಬ ನಿರ್ದಾಕ್ಷಿಣ್ಯದ ಪ್ರಶ್ನೆ ಎದ್ದಿತು. ಆದರೂ ಕನ್ನಡದ ಅಂತಃಕರಣದಲ್ಲಿ ಬದುಕುವ ಬಯಕೆ ಬಹು ತೀಕ್ಷ್ಣವೆಂದು ತೋ... ನಿರಾಶೆಯ ಕಮರಿಯ ಮಗ್ಗುಲಿನಲ್ಲಿ ಹಾದುಹೋಗಬೇಕಾಗಿದ್ದರೂ ಅ... ಗಳನ್ನು ಬಡಿದು ಜೋಡಿಸಿ ಹಿಡಿದುಕೊಂಡು, ಗೋಪುರವನ್ನು ತೂರಾಡ... ಭಾರವಾದರೂ ಬೆದರದೆ, ನಿಧಾನವಾದರೂ ಬೇಸರಪಡದೆ, ಹೇಗೋ ವಿಶೇಷ... ರಥವನ್ನು ಮುಂದುವರಿಸಿದ್ದಾಯಿತು. ಉಪನ್ಯಾಸ, ನೋಟ, ನಾಟಕ, ...

ಸ್ಪರ್ಧೆ, ಪ್ರದರ್ಶನ, ಊಟ, ಉಪಚಾರ ಮುಂತಾದ ಉತ್ಸವದ ಹಲವಂಗಗಳಿಗೆ ಪೂರ್ವಸಿದ್ಧತೆಗಳು ಕ್ರಮವಾಗಿ ಒಂದೊಂದಾಗಿ ನಿರ್ಮಾಣವಾದುವು. ಕಷ್ಟಕೊರತೆಗಳ ಚಿಂತೆ, ಮುಖ್ಯವಾಗಿ ದ್ರವ್ಯಾಭಾವದ ಬಾಧೆ, ಒಂದು ಕಡೆ ಗುಡಿಸಲು ಕಟ್ಟಿಕೊಂಡು ಕುಳಿತೇ ಇತ್ತು. ಎಲ್ಲವೂ ಸಜ್ಜಾಗಿ ಕ್ಲುಪ್ತಕಾರ್ಯ ವಿವರಗಳನ್ನು ನೇಪಥ್ಯದ ಮೇಲಕ್ಕೆ ಕರೆಯುವ ಕ್ಷಣದಲ್ಲಿ ಕೂಡ ಆ ಕುರೂಪಿಯು ಅಲ್ಲಿಂದ ಕದಲಲಿಲ್ಲ. ಏನಾದರೇನು? ನಾಲ್ಕನೆಯ ವಿಶೇಷೋತ್ಸವವು ಮೇ ೨ನೆಯ ಮಧ್ಯಾಹ್ನ ೪ ಘಂಟೆಗೆ ಗೆಜ್ಜೆಯನ್ನು ಗಲುಕೆನ್ನಿಸಿ ತನ್ನ ಬೆಡಗಿನ ನಾಟ್ಯವನ್ನು ಆರಂಭಿಸಿಯೇ ಆರಂಭಿಸಿತು; ಮೇ ೧೧ರ ಪೂರ್ತ ವಯ್ಯಾರ ವೈಭವಗಳನ್ನು ಗೋಚರಗೊಳಿಸಿ ತನ್ನ ಸಂಕಲ್ಪವನ್ನು ಸಾಧಿಸಿಯೇ ಬಿಟ್ಟಿತು.

## ಪ್ರಾರಂಭೋತ್ಸವ

ತಾ॥ ೨-೫-೧೯೩೭ನೆಯ ಭಾನುವಾರ ಮಧ್ಯಾಹ್ನ ೪ ಘಂಟೆಗೆ ಸರಿಯಾಗಿ, ನಾಗಸ್ವರವೂ ಸ್ಕೌಟುಗಳ ಬ್ಯಾಂಡೂ ಮೊಳಗುತ್ತಿರಲು, ಸಮಾರಂಭ ನೇತೃಗಳಾದ **ರಾಜಮಂತ್ರಪ್ರವೀಣ ಶ್ರೀಮಾನ್ ಎನ್. ಮಾಧವರಾವ್,** ಬಿ.ಎ., ಬಿ.ಎಲ್., ಅವರು ಪರಿಷನ್ಮಂದಿರಕ್ಕೆ ದಯಮಾಡಿದರು. ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರೂ ಇತರ ಪರಿಷತ್ಪ್ರಮುಖರೂ ಅವರನ್ನು ಎದುರುಗೊಂಡು ಸಭೆಗೆ ಕರೆದುಕೊಂಡು ಬಂದರು. ಅವರು ಪೀಠವನ್ನಲಂಕರಿಸಿದ ಕೂಡಲೆ ಸಭಾಕಾರ್ಯಗಳು ಪ್ರಾರಂಭವಾದುವು. ಕಾರ್ಯಕ್ರಮವು ಈ ರೀತಿ ಇದ್ದಿತು:—

೧. ಪ್ರಾರ್ಥನೆ: ಶ್ರೀ॥ ಟಿ. ತಾತಾಚಾರ್, ಎಂ.ಎಸ್‌ಸಿ., ಅವರಿಂದ.

೨. ಸ್ವಾಗತ ಭಾಷಣ: ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀ॥ ಡಿ. ವಿ. ಗುಂಡಪ್ಪನವರಿಂದ.

೩. ಕೆಲವು ಸಂದೇಶ ಪತ್ರಗಳ ವಾಚನ: ಪರಿಷತ್ತಿನ ಗೌ॥ ಕಾರ್ಯದರ್ಶಿ ಶ್ರೀ॥ ಎಸ್. ವಿ. ರಂಗಣ್ಣ, ಎಂ.ಎ., ಅವರಿಂದ.

೪. ಭಾರತ ವಾಚನ: ಶ್ರೀ॥ ಎಸ್. ಜಿ. ಬಿಂದೂರಾಯರವರಿಂದ.

೫. ಅಧ್ಯಕ್ಷ ಭಾಷಣ.

೬. ಧನ್ಯವಾದಗಳು: ಪ್ರೊ॥ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಅವರಿಂದ.

೭. ಪುಷ್ಪ ವಿನಿಯೋಗ.

೮. ಮಂಗಳಗೀತ: ಸ್ಕೌಟುಗಳಿಂದ.

(ಸ್ವಾಗತ ಭಾಷಣವನ್ನೂ ಅಧ್ಯಕ್ಷ ಭಾಷಣವನ್ನೂ ಮುಂದೆ ಬೇರೆಯಾಗಿ ಅಚ್ಚು ಮಾಡಿಸಿದೆ.)

## ಉತ್ಸವದ ಅತಿಥಿಗಳು

ಪ್ರತಿದಿನವೂ ಸಭೆಯಲ್ಲಿ ಸುಮಾರು ೬೦೦ ಜನ ಹಾಜರಿರುತ್ತಿದ್ದರೆಂದು ಹೇಳಬಹುದು. ಈ ಸಂಬಂಧವಾಗಿ ದೊರೆತಿರುವ ಕೆಲವು ಸಂಖ್ಯಾವಿವರಗಳನ್ನು ಈ ಕೆಳಗೆ

ಕೊಟ್ಟಿದೆ. ಮಹಿಳೆಯರ ಸಂಖ್ಯೆಯು ಸುಮಾರು ೮೦ ರ ವರೆಗೂ ಇ... ದೂರಪ್ರದೇಶಗಳಾದ ಮದರಾಸು, ಬಳ್ಳಾರಿ, ಮಂಗಳೂರು, ... ಬೆಳಗಾಂವಿ, ಸಾಂಗ್ಲಿ ಮುಂತಾದ ಊರುಗಳಿಂದ ಕೆಲವು ಮಂದಿ ... ಆಹ್ವಾನಿತ ಮಹನೀಯರೂ ಇತರ ಅಭಿಮಾನಿಗಳೂ ದಯಮಾಡಿಸಿದ್ದರು.

| | |
|---|---|
| ಉಚಿತ ಪ್ರವೇಶ ಪತ್ರಗಳಿಗಾಗಿ ಹೆಸರನ್ನು ರಿಜಿಸ್ಟರ್‌ಮಾಡಿಸಿದ್ದ ಉಪಾಧ್ಯಾಯರು | ೪೦೭ (ಮಹಿಳೆಯರು ೫೭ ...) |
| ಉಚಿತ ಪ್ರವೇಶ ಪತ್ರಗಳನ್ನು ಪಡೆದ ಉಪಾಧ್ಯಾಯರು | ೨೬೪ (ಮಹಿಳೆಯರು ೪೦...) |
| ಉತ್ಸವದ ಉಪಯೋಗವನ್ನು ಪಡೆದ ಪಾಠಶಾಲೆಗಳು | ೧೪೦ |
| ಒಟ್ಟು ವಾರದ ಟಿಕೆಟ್ಟುಗಳನ್ನು ಕೊಂಡು ಕೊಂಡವರು | ೧೦೭ |
| ದಿನದ ಟಿಕೆಟ್ಟುಗಳನ್ನು ಕೊಂಡು ಕೊಂಡವರು (ಸರಾಸರಿ ದಿನಕ್ಕೆ) | ೨೯ |
| ಬೆಂಗಳೂರಿನಲ್ಲಿರುವ ಪರಿಷತ್ಸದಸ್ಯರು .. | ೧೬೫ |
| ಪರಿಷತ್ತಿನಿಂದ ಆಹ್ವಾನಿತರಾದವರು .. | ೨೫೦ |
| ಕಲಾ ಪ್ರದರ್ಶನ, ಗ್ರಂಥ ಪ್ರದರ್ಶನಗಳನ್ನು ಸಂದರ್ಶಿಸಿದ ಮಹಾಜನರು | ೬೦೦ |

ಈ ಸಲದ ಉತ್ಸವವು ಪರಿಷನ್ಮಂದಿರದ ಸ್ಥಳಸಂಕೋಚವನ್ನು ಕಣ್ಣಿಗೆ ತೋರಿಸಿಕೊಟ್ಟಿತು.

## ಉಪನ್ಯಾಸಗಳು

ವಿಶೇಷ ಸಾಹಿತ್ಯೋತ್ಸವದ ವ್ಯವಸ್ಥಾಪಕನ ಮೊದಲನೆಯ ಕರ್ತವ್ಯ ವಿಚಾರೋಪನ್ಯಾಸಗಳ ಸಮಂಜಸ ವಿರಚನೆ. ಈ ಅಂಶವನ್ನು ಪರಿಷತ್ತು ... ಮತ್ತು ಉತ್ಸವದಲ್ಲಿ ಭಾಗವಹಿಸಲಪೇಕ್ಷಿಸುವವರಾರೂ ಅದನ್ನು ಮರೆಯ... ಈ ಕೆಳಗೆ ಕೊಟ್ಟಿರುವ ಪಟ್ಟಿಯಂತೆ ಸಾಂಗವಾಗಿ ಸುಪ್ರಸನ್ನವಾಗಿ ಉಪ... ನೆರವೇರಿದುವು. ಒಂದು ನವೀನ ವಿಚಾರ: ಈ ಕಾರ್ಯಕ್ರಮದಲ್ಲಿ ... ಪರೀಕ್ಷೆಗಾಗಿ ವಿಚಾರಗೋಷ್ಠಿ (Symposium) ಎಂಬ ವೈತ್ಯಸ್ತ ... ಇಡಲಾಗಿತ್ತು; ಅದರ ವಿವರವನ್ನು ಮುಂದೆ ನಿರೂಪಿಸಿದೆ.

೧. ಮೇ ೩, ಸೋಮವಾರ ಬೆಳಗ್ಗೆ ೮-೩೦ರಿಂದ — **ಕುಮಾರವ್ಯಾಸ.**—ವಿದ್ವಾನ್ ಶ್ರೀ... ಕೆ. ಶಂಕರಭಟ್ಟರಿಂದ.

ಅಧ್ಯಕ್ಷರು:—ಶ್ರೀಮಾನ್ ಸಿ. ಕೆ. ... ರಾಮಯ್ಯನವರು, ಎಂ.ಎ., ಎಲ್...

| | |
|---|---|
| ೨. ಮೇ ೩, ಸೋಮವಾರ ಸಾಯಂಕಾಲ ೪-೩೦ ರಿಂದ ೫-೪೫ | **ಪಾಳಿ ಸಾಹಿತ್ಯ.**—ಶ್ರೀಮಾನ್ ಜಿ. ಪಿ. ರಾಜರತ್ನಂ, ಎಂ.ಎ., ಅವರಿಂದ. ಅಧ್ಯಕ್ಷರು :—ಶ್ರೀಮಾನ್ ಎಂ. ವೆಂಕಟೇಶ ಐಯಂಗಾರ್, ಎಂ.ಎ. |
| ೩. ಮೇ ೩, ಸೋಮವಾರ ಸಾಯಂಕಾಲ ೬ ರಿಂದ ೮ | **ವಿಶ್ವದ ಬೆಳೆವಣಿಗೆ.**—ಶ್ರೀಮಾನ್ ಪಿ. ಶ್ರೀನಿವಾಸರಾಯರು, ಎಂ.ಎಸ್‌ಸಿ., ಅವರಿಂದ. ಅಧ್ಯಕ್ಷರು :—ಶ್ರೀಮಾನ್ ಎಂ. ವೆಂಕಟೇಶ ಐಯಂಗಾರ್, ಎಂ.ಎ. |
| ೪. ಮೇ ೪, ಮಂಗಳವಾರ ಬೆಳಗ್ಗೆ ೮-೩೦ ರಿಂದ ೧೦ | **ವಿಮೆ.**—(ಮೈಸೂರು ಇನ್‌ಷ್ಯೂರೆನ್ಸ್ ಕಂಪೆನಿಯವರು ಇಡಿಸಿದ್ದ ಉಪನ್ಯಾಸ.) ಶ್ರೀಮಾನ್ ಬಿ. ಆರ್. ಸುಬ್ಬರಾವ್, ಎಂ.ಎ., ಡಿಪ್.-ಇನ್-ಕಾಂ., ಅವರಿಂದ. ಅಧ್ಯಕ್ಷರು :—ಪ್ರೊ॥ ಕೆ. ಬಿ. ಮಾಧವ,ಎಂ.ಎ., ಎ.ಐ.ಎ. (ಲಂಡನ್) |
| ೫. ಮೇ ೪, ಮಂಗಳವಾರ ಸಾಯಂಕಾಲ ೬ ರಿಂದ ೮ | **ಜ್ಯೋತಿರ್ವಿಜ್ಞಾನ.**—ಡಾ॥ ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ., ಅವರಿಂದ. |
| ೬. ಮೇ ೫, ಬುಧವಾರ ಸಾಯಂಕಾಲ ೬ ರಿಂದ ೭ | **ಮಲೇರಿಯ** (ಚಲನಚಿತ್ರ ಪ್ರದರ್ಶನ ಸಮೇತ).—ಡಾ॥ ಬಿ. ಅನಂತಸ್ವಾಮಿ ರಾವ್, ಬಿ.ಎಸ್‌ಸಿ., ಎಂ.ಬಿ.ಬಿ.ಎಸ್., ಇತ್ಯಾದಿ, ಅವರಿಂದ. ಅಧ್ಯಕ್ಷರು :—ರಾಜಸೇವಾಸಕ್ತ ಡಾ॥ ಬಿ. ಕೆ. ನಾರಾಯಣರಾಯರು, ಬಿ.ಎ., ಎಂ.ಬಿ.ಸಿ.ಎಂ., ಎಂ.ಆರ್.ಸಿ.ಎಸ್. ಇತ್ಯಾದಿ. |
| ೭. ಮೇ ೫, ಬುಧವಾರ ಸಾಯಂಕಾಲ ೭ ರಿಂದ ೮ | **ಕ್ಷಯರೋಗ.**—ಡಾ॥ ಪಿ. ಕೃಷ್ಣರಾಯರು, ಬಿ.ಎಸ್‌ಸಿ., ಎಂ.ಬಿ.ಬಿ.ಎಸ್., ಇತ್ಯಾದಿ, ಅವರಿಂದ. ಅಧ್ಯಕ್ಷರು :—ರಾಜಸೇವಾಸಕ್ತ ಡಾ॥ ಬಿ. ಕೆ. ನಾರಾಯಣರಾಯರು. |
| ೮. ಮೇ ೬, ಗುರುವಾರ ಸಾಯಂಕಾಲ ೬ ರಿಂದ ೮ | **ಚೌಬೀನೆ ಮರಗಳು.**—ಶ್ರೀಮಾನ್ ಎಲ್. ನಾರಾಯಣರಾವ್, ಎಂ.ಎಸ್‌ಸಿ., ಅವರಿಂದ. ಅಧ್ಯಕ್ಷರು :—ಶ್ರೀಮಾನ್ ಎಚ್. ಎಸ್. ನಾರಾಯಣರಾಯರು, ಬಿ.ಎ. |

| | |
|---|---|
| ೯. ಮೇ ೭, ಶುಕ್ರವಾರ ಬೆಳಗ್ಗೆ ೮-೩೦ ರಿಂದ ೧೦ | **ಮನುಷ್ಯನಿಗೆ ರಸಾಯನಶಾಸ್ತ್ರ ಆಗಿರುವ ಸೇವೆ.**—ಶ್ರೀಮಾನ್ ಸುಬ್ಬಾಜೋಯಿಸ್, ಎಂ.ಎಸ್. ಅವರಿಂದ. |
| ೧೦. ಮೇ ೮, ಶನಿವಾರ ಬೆಳಗ್ಗೆ ೮-೩೦ ರಿಂದ ೧೦ | **ಕನ್ನಡ ಭಾಷಾ ಶಾಸ್ತ್ರವಿಚಾ** ಎ. ಎನ್. ನರಸಿಂಹಯ್ಯ, ಎಂ.ಎ., ಪಿಎಚ್.ಡಿ., ಅವರಿಂದ. |
| | ಅಧ್ಯಕ್ಷರು :—ಪ್ರೊ॥ ಟಿ. ಎಸ್. ವೆ ನವರು, ಎಂ.ಎ. |
| ೧೧. ಮೇ ೮, ಶನಿವಾರ ಸಾಯಂಕಾಲ ೬ ರಿಂದ ೮ | **ಮೈಸೂರು ದೇಶದ ಸುವರ್ಣ ಸಂ** ಶ್ರೀಮಾನ್ ಬಿ. ರಾಮರಾವ್, ಡಿ.ಐ.ಸಿ. (ಲಂಡನ್), ಎಫ್.ಜಿ. ಅವರಿಂದ. |
| ೧೨. ಮೇ ೯, ಭಾನುವಾರ ಬೆಳಗ್ಗೆ ೮-೩೦ ರಿಂದ ೯-೩೦ | **ಹಳ್ಳಿಯವರ ಸಾಲದ ಹೊರೆ: ಕಾರಣಗಳು ಮತ್ತು ನಿವಾರಣೋಪಾಯಗಳು** (ಬೆಂಗಳೂರು ಸೆಂ ಕೋ-ಆಪರೇಟಿವ್ ಬ್ಯಾಂಕಿನವ ಆ ಬ್ಯಾಂಕಿನ ರಜತ ಮಹೋತ್ಸ ಸ್ಮಾರಕೋಪನ್ಯಾಸ).—ಶ್ರೀಮಾ ಜಿ. ಎಂ. ಮೇಕ್ರಿ, ಬಿ.ಎ., ಬಿ. ಅವರಿಂದ. |
| ೧೩. ಮೇ ೯, ಭಾನುವಾರ ಬೆಳಗ್ಗೆ ೯-೩೦ ರಿಂದ ೧೧ | **ರಾಷ್ಟ್ರಕೂಟರ ಮತ್ತು ಹೊ ಕಾಲದ ಕನ್ನಡ ನಾಡು.**—ಪಾ ಸಂದಿಮಠ, ಎಂ.ಎ., ಪಿಎಚ್.ಡಿ. |
| | ಅಧ್ಯಕ್ಷರು :—ಪ್ರೊ॥ ಬಿ. ಎಂ. ಶ್ರೀಕ ನವರು, ಎಂ.ಎ., ಬಿ.ಎಲ್. |

## ವಿಚಾರಗೋಷ್ಠಿ

| | |
|---|---|
| ೧. ಮೇ ೫, ಬುಧವಾರ ಬೆಳಗ್ಗೆ ೮-೩೦ ರಿಂದ | **ಪೂರ್ವ ಪಶ್ಚಿಮದ ದಾರ್ಶನಿಕ ಶಾಸ್ತ್ರ ಪದ್ಧತಿಗಳು :—** |
| | ೧. **ವೈದಿಕ ದರ್ಶನಗಳು.**—ವಿದ್ವಾನ್ ಎಚ್. ಎನ್. ರಾಘವೇಂದ್ರಾ ಎಂ.ಎ. |

ಪರಿಷತ್ತು

೨.

ಹರಿಂ
ವುದು.
ಸಂಗ
ಬಳಸಿ
ಸಂಭ

ಯರ
೯ ಬಾ
ರೀತಿ
ರನ್ನು
ಪುಣೆ
ಶ್ರೀ॥

೨. ಬೌದ್ಧ, ಜೈನ ಮತ್ತು ಚಾರ್ವಾಕ ದರ್ಶನಗಳು.—ಶ್ರೀ॥ ಎ. ಟಿ. ತಿರುನಾರಾಯಣಯ್ಯಂಗಾರ್ಯರು, ಎಂ.ಎ.

೩. ಪಾಶ್ಚಿಮಾತ್ಯ.—ಶ್ರೀ॥ ಎಂ. ಯಾಮುನಾಚಾರ್ಯರು, ಎಂ.ಎ.

ಉಪಸಂಹಾರ.—ಶ್ರೀ॥ ಜಿ. ಹನುಮಂತರಾಯರು, ಎಂ.ಎ.

೨. ಮೇ ೬, ಗುರುವಾರ ಬೆಳಗ್ಗೆ ೮-೩೦ ರಿಂದ

ಕನ್ನಡ ಸಾಹಿತ್ಯದ ಚರಿತ್ರೆ ಮತ್ತು ಲಕ್ಷಣಗಳು :—

೧. ಹಳಗನ್ನಡ ಸಾಹಿತ್ಯ.—ಶ್ರೀ॥ ಟಿ. ಎನ್. ಶ್ರೀಕಂಠಯ್ಯ, ಎಂ.ಎ.

೨. ನಡುಗನ್ನಡ ಸಾಹಿತ್ಯ.—ಶ್ರೀ॥ ಡಿ. ಎಲ್. ನರಸಿಂಹಾಚಾರ್ಯರು, ಎಂ.ಎ.

೩. ಹೊಸಗನ್ನಡ ಸಾಹಿತ್ಯ.—ಶ್ರೀ॥ ಆರ್. ಎಸ್. ಮುಗಳಿ, ಎಂ.ಎ., ಬಿ.ಟಿ.

ಅಧ್ಯಕ್ಷರು :—ಶ್ರೀ॥ ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ.

## ಉತ್ಸವದ ನೂತನ ಅಂಗಗಳು

ರಬ್ಬರು ಚೆಂಡನ್ನು ಅವುಕಿ ತುಳಿದಷ್ಟೂ ಅದು ಎತ್ತರಕ್ಕೆ ಹಾರುವುದು; ಹರಿಯುವ ನೀರಿನ ಪಾತ್ರವನ್ನು ಸಂಕೋಚಮಾಡಿದಷ್ಟೂ ಅದರ ಆಟೋಪ ಹೆಚ್ಚುವುದು. ಆದ್ದರಿಂದ ಈ ಸಾರಿ ಉತ್ಸವದ ಕಾರ್ಯಕ್ರಮವನ್ನು ನವೀನ ರೀತಿ ನೂತನ ಸಂಗತಿಗಳಿಂದ ಪುಷ್ಟಗೊಳಿಸಿ, ಹಿಂದಿನ ಉತ್ಸವಗಳಿಗಿಂತಲೂ ಅಧಿಕ ವೈವಿಧ್ಯವನ್ನು ಬಳಸಿತೀರಬೇಕೆಂಬ ಮನೋಭಾವ ನಮ್ಮಲ್ಲಿ ಮೂಡಿದ್ದು ಸ್ವಾಭಾವಿಕ. ಹೊಸ ಸಂಭವಗಳ ವಿವರ ಈ ರೀತಿ ಇತ್ತು:

೧. ಕಂಠಪಾಠ ಸ್ಪರ್ಧೆ.— ಈ ಸ್ಪರ್ಧೆಗೆ ಒಟ್ಟು ೨೬ ಮಂದಿ ಬಾಲಕ ಬಾಲಕಿಯರು ಸೇರಿದ್ದರು. ಸ್ಪರ್ಧೆಗಳು ಏಪ್ರಿಲ್ ೨೬ ಸೋಮವಾರ ನಡೆದುವು. ೯ ಬಾಲಕರೂ ೧೨ ಬಾಲಕಿಯರೂ (ಒಟ್ಟು ೨೧ ಮಂದಿ) ಭಾಗವಹಿಸಿದ್ದರು. ಉತ್ತಮ ರೀತಿಯಲ್ಲಿ ಪದ್ಯ ಹೇಳಿದ ೬ ಮಕ್ಕಳಿಗೆ ಸಾಹಿತ್ಯೋತ್ಸವದ ೩ನೆಯ ದಿನ ಪ್ರೇಕ್ಷಕರನ್ನು ತಮ್ಮ ಕೌಶಲ್ಯದಿಂದ ಆನಂದಗೊಳಿಸಲು ಅವಕಾಶ ಕಲ್ಪಿಸಿತ್ತು. ಪರಿಷತ್ತಿನ ಪುಣ್ಯೋದಯದಿಂದ ಆ ದಿವಸ ಕನ್ನಡಿಗರಿಗೆ ಪರಮಪೂಜ್ಯರಾದ, "ಆರ್ಯಕೀರ್ತಿ"ಯ ಶ್ರೀ॥ ಚ. ವಾಸುದೇವಯ್ಯನವರು ದಯಮಾಡಿ ಬಂದು ಆ ಕಾರ್ಯಭಾಗದಲ್ಲಿ

ಅಧ್ಯಕ್ಷರಾಗಿದ್ದರು. ಸ್ಪರ್ಧೆಗಳಲ್ಲಿ ಜಯಶೀಲರಾದವರಿಗೆ ಬಹುಮಾನ ಹಂಚಲು ಉಪಸಂಹಾರದ ದಿನ ಶ್ರೀ॥ ಬೆಳ್ಳಾವೆ ವೆಂಕಟನಾರಾಯಣ ಒಪ್ಪಿಕೊಂಡುದು ಅಂತೆಯೇ ಪರಿಷತ್ತಿನ ಸೌಭಾಗ್ಯ.

೨. **ಲಾವಣಿ ದೇವರನಾಮಗಳ ಹಾಡುಗಾರಿಕೆ.**— ಈ ಅಂಶಗಳಲ್ಲಿ ಸ್ಪರ್ಧೆಗಳನ್ನು ಇಡಬೇಕೆಂಬ ಉದ್ದೇಶವಿದ್ದಿತು; ಸಾಕಾದಷ್ಟು ಮಂದಿ ಸ್ಪ ಬರಲಿಲ್ಲವಾಗಿ ಅವನ್ನು ಸಂಕೋಚದಿಂದ ನಿಲ್ಲಿಸಬೇಕಾಯಿತು. ಆದರೂ ಈ ಆ ಅಭಿಲಾಷೆಯಲ್ಲಿ ಆದರ ಆಸಕ್ತಿಗಳನ್ನು ತೋರಿಸಿದ ಶ್ರೀ॥ ಗಳಾದ ಎಸ್. ರಾವ್, ಎಂ. ಹರಿನಾರಾಯಣ, ಬಿ.ಎಸ್‌ಸಿ., ಎಂ. ಎಸ್. ರಾಮರಾವ್, ಶ್ರೀನಿವಾಸಮೂರ್ತಿ — ಇವರುಗಳ ಸಹಾಯದಿಂದ ಉತ್ಸವದ ೬ನೆ (ಶುಕ್ರವಾರ, ಮೇ ೭) ಕೆಲವು ಲಾವಣಿ ದೇವರನಾಮಗಳನ್ನು ಹಾಡಿಸಿ, ಸಭಾ ಕುತೂಹಲ ಆಹ್ಲಾದಗಳನ್ನು ಉಂಟುಮಾಡಿದ್ದಾಯ್ತು.

೩. **ನಾಟಕಾಭಿನಯ.**—ಮೇ ೫ನೆಯ ಬುಧವಾರ ರಾತ್ರಿ ೯ ಬೆಂಗಳೂರಿನ ಕನ್ನಡ ಸಾಹಿತ್ಯ ಸಮಾಜದವರು ಶ್ರೀ॥ ಎಸ್. ಎನ್. ಅಜ್ಜಂಪು 'ಅಂಬಾ ಥಲ' ವೆಂಬ ನಾಟಕವನ್ನು ತುಂಬಿದ ಸಭೆಯ ಮುಂದೆ ಆಡಿ, ಉತ್ತ ಪೋಷಿಸಿದರು.

೪. **ಸ್ಕೌಟುಗಳ 'ಕ್ಯಾಂಪ್ ಫೈರ್'.**—ವಿಶೇಷ ಸಾಹಿತ್ಯೋತ್ಸವದ ಸೇವಕರಾಗಿ ಹಗಲೂ ಇರುಳೂ ದುಡಿಯುತ್ತಿದ್ದ ಯೂನಿವರ್ಸಿಟಿ ಸ್ಕೌಟ್ ಯುವಕರು ಮೇ ೮ನೆಯ ಶನಿವಾರ ರಾತ್ರಿ ೯ ಘಂಟೆಗೆ ತಮ್ಮ 'ಕ್ಯಾಂಪ್ ಎಂಬ ವಿನೋದದಂಗಡಿಯನ್ನು ಹರಡಿದರು. ಆಗ ಸಂಸ್ಕೃತ ಕಾಲೇಜಿನ ಮು ಮೈದಾನದಲ್ಲಿ ಒಂದು ದೊಡ್ಡ ಪರಿಷೆ ಕೂಡಿ, ಉತ್ಸವವೆಂಬ ಅಂಕಿತವು ಸ್ವಲ್ಪ ಸಾರ್ಥಕವಾದಂತೆ ತೋರಿತು.

೫. **ಅಂಗಸಾಧನೆಯ ಪ್ರದರ್ಶನ.**— ಶ್ರೀ॥ ಕೆ. ವಿ. ಅಯ್ಯರ್ ಹೆಸರನ್ನು ಕೇಳದವರು ಬಹು ವಿರಳ. ಅವರ ವಿಶ್ವಾಸದಿಂದ ಉತ್ಸವಕ್ಕೆ ಅಪೂರ್ವ ಕಳೆಯೇರಿತು. ಅವರು ಮೇ ೭ ಶುಕ್ರವಾರ, ಉತ್ಸವದ ೬ನೆ ೬-೩೦ ರಿಂದ ೮ರ ವರೆಗೆ ದೇಹ ಶಿಕ್ಷಣದಮೇಲೆ ಕೊಟ್ಟ ಉಪನ್ಯಾಸವನ್ನೂ ಅತ್ಯುತ್ತಮ ನಿದರ್ಶನವಾಗಿ ತೋರಿಸಿದ ಮಾಂಸಖಂಡದ ಚಲನೆವಲನೆ ಅಂಗಾಂಗಗಳ ಸುಪುಷ್ಟ ಬೆಳವಣಿಗೆಯ ಸೌಂದರ್ಯವನ್ನೂ ಮುಗ್ಧಗೊ ಶಾರೀರಕ ಭಂಗಿಗಳನ್ನೂ ಆ ಹೊತ್ತು ಸಭೆಯಲ್ಲಿದ್ದ ಅದೃಷ್ಟಶಾಲಿಗಳಾರೂ ಯುವಂತಿಲ್ಲ.

ಶ್ರೀ॥ ಬಿ. ಶ್ರೀಕಂಠಯ್ಯನವರ ಮೈತ್ರಿಯ ಫಲವನ್ನೂ ಉತ್ ಅನುಭೋಗಿಸಿತು. ಅವರ ದೇಶೀಯ ವ್ಯಾಯಾಮ ಶಾಲೆಯ ಬಾಲಕ ಬಾಲೆ ಉತ್ಸವದ ೭ನೆಯ ದಿನ (ಶನಿವಾರ ಮೇ ೮) ಮಧ್ಯಾಹ್ನ ೩-೩೦ ರಿಂದ ೫-೩೦

ತೋರಿಸಿದ ಗುಂಪಿನ ವ್ಯಾಯಾಮ ಪದ್ಧತಿಗಳು, ಡ್ರಿಲ್ಲು, ಕುಣಿತಗಳು ಮುಂತಾದ ವ್ಯಾಪಾರಗಳು ಎಷ್ಟು ಸಂತೋಷಜನಕವೋ ಅಷ್ಟು ಬೋಧಪ್ರದವಾಗಿಯೂ ಇದ್ದುವು.

೬. ನೃತ್ಯ.—೫ನೆಯ ದಿನ (ಗುರುವಾರ ಮೇ ೬), ರಾತ್ರಿ ೮ ಘಂಟೆಗೆ, ಪೂನಾದಿಂದ ಬಂದಿದ್ದ ಶ್ರೀ॥ ಲಕ್ಷ್ಮಣರಾವ್ ಭಾವಡೆಯವರಿಂದ ಸುಮಾರು ಒಂದು ಘಂಟೆಯ ಕಾಲ ಅದ್ಭುತವೂ ಮನೋಹರವೂ ಆದ ದೀಪ, ಕೃಷ್ಣ, ತಾಂಡವ ನೃತ್ಯಗಳು ನಡೆದುವು.

೭. ಕಲಾ ಪ್ರದರ್ಶನ.— ಶ್ರೀ॥ ಅ. ನ. ಕೃಷ್ಣರಾಯರು ಸೂಚಿಸಿದ ಒಳ್ಳೆಯ ಸಲಹೆಯಂತೆ ಈ ಸಾರಿ ಒಂದು ಚಿತ್ರಪಟಗಳ ಮತ್ತು ಫೋಟೋಗ್ರಾಫುಗಳ ಪ್ರದರ್ಶನ ವನ್ನು ಏರ್ಪಡಿಸಲಾಗಿತ್ತು. ಸಂಸ್ಕೃತ ಕಾಲೇಜಿನ ಮಹಡಿಯಮೇಲೆ ಬಲಭಾಗದ ಕೊಠಡಿಗಳಲ್ಲಿ ಒಟ್ಟು ೩೫೦ ಚಿತ್ರಗಳೂ ಫೋಟೋಗ್ರಾಫುಗಳೂ ಚಿತ್ತಾಕರ್ಷಕವಾದ ಬಗೆಯಲ್ಲಿ ಗೋಡೆಗೆ ಹಾಕಲ್ಪಟ್ಟು, ಹನ್ನೊಂದು ದಿನವೂ ಕಂಗೊಳಿಸುತ್ತಿದ್ದುವು. ವಿಶೇಷ ಸಾಹಿತ್ಯೋತ್ಸವಕ್ಕೆ ಬಂದಿದ್ದ ಸದಸ್ಯರು, ಉಪಾಧ್ಯಾಯರು, ಅತಿಥಿಗಳು, ಕಲಾ ಪ್ರದರ್ಶನವನ್ನು ನೋಡಲು ಪ್ರತ್ಯೇಕವಾದ ಟಿಕೆಟ್ಟನ್ನು ತೆಗೆದುಕೊಂಡು ಬಂದ ಕಲಾಭಿಮಾನಿಗಳು—ಎಲ್ಲರೂ (ಸುಮಾರು ೬೦೦ ಮಂದಿ) ಅವನ್ನು ದರ್ಶಿಸಿ, ಭಾವಿಸಿ, ಆತ್ಮವಿಕಾಸ ಪಡೆದರೆಂಬುದರಲ್ಲಿ ಸಂದೇಹವಿಲ್ಲ. ಕಲಾಪ್ರದರ್ಶನವು ವಿಶೇಷ ಕಠಿನ ವಾದ ಪ್ರಸಂಗ. ಅದನ್ನು ಕೈಗೊಂಡು, ಲೋಪವೊಂದೂ ಇಲ್ಲದಂತೆ ಕಡೆಹಾಯಿಸಿ, ತನ್ಮೂಲಕ ಉತ್ಸವದ ಶ್ರೇಯಸ್ಸಿಗಾಗಿ ದುಡಿದವರು ಶ್ರೀ॥ ಅ. ನ. ಕೃಷ್ಣರಾಯರು. ಅವರೊಡನೆ ಸಹಕರಿಸಿ ಕೆಲಸಮಾಡಿದವರು ಶ್ರೀ॥ ಗಳಾದ ಪಿ. ಶ್ರೀನಿವಾಸರಾಯರು, ಎ. ಸೀತಾರಾಮಯ್ಯನವರು, ಬಿ. ಚಂದ್ರಶೇಖರಯ್ಯನವರು ಮತ್ತು ಬಿ. ಅಶ್ವತ್ಥ ನಾರಾಯಣರಾಯರು—ಇವರುಗಳು. ಹೀಗೆ ಸಹಾಯಕರು ಸುಲಭವಾಗಿ ಸಿಕ್ಕಿದ್ದು ನಮ್ಮ ಸುಯೋಗ.

೮. ಲೇಖಕ ಗೋಷ್ಠಿ.—ಸಾಹಿತ್ಯೋತ್ಸವದ ನಡುವೆ ೭ನೆಯ ಮೇ ಶುಕ್ರವಾರ ಮಧ್ಯಾಹ್ನ ೧ ಘಂಟೆಗೆ ಕನ್ನಡ ಲೇಖಕ ಗೋಷ್ಠಿಯೊಂದು ಸೇರಿತು. ವೃದ್ಧ ಸಾಹಿತಿಗಳಾದ ಶ್ರೀ॥ ಪಂಜೆ ಮಂಗೇಶರಾಯರು ಅಧ್ಯಕ್ಷರಾಗಿದ್ದರು. ೬೫ ಕಿರಿಯ ಹಿರಿಯ ಸಾಹಿತಿಗಳು ಹಾಜರಿದ್ದರು. ಪರಿಷತ್ತಿನ ಉಪಾಧ್ಯಕ್ಷರು ತಮ್ಮ ಮುನ್ನುಡಿಯಲ್ಲಿ—ಕನ್ನಡ ಶಾರದೆಯ ಉಪಾಸಕರೆಲ್ಲರನ್ನೂ ಒಟ್ಟುಗೂಡಿಸಿ, ಪರಸ್ಪರ ಪರಿಚಯಕ್ಕೂ ಆ ಮೂಲಕ ಸ್ನೇಹ ಸಹಾನುಭೂತಿಗಳ ಬೆಳವಣಿಗೆಗೂ ಗೋಷ್ಠಿ ಗಳನ್ನಿಡಿಸಿ ಅವಕಾಶ ಕಲ್ಪಿಸುವುದೇ ಪರಿಷತ್ತಿನ ಮುಖ್ಯ ಆಕಾಂಕ್ಷೆಯೆಂದು ಹೇಳಿದರು. ಆಮೇಲೆ ಹನ್ನೆರಡು ಜನ ಸದಸ್ಯರು—ಸಾಹಿತ್ಯದ ನಿರ್ಮಾಣ ಮತ್ತು ಪ್ರಕಟನೆಯ ಕಾರ್ಯ; ಈಗ ಅಗತ್ಯವಾಗಿರುವ ವಿಜ್ಞಾನ ವಿಷಯಕ ಲಘು ಪುಸ್ತಕಗಳು; ಕವಿಗಳಿಗೆ ಬೇಕಾದ ಪ್ರಾಮಾಣಿಕತೆ, ವಿದ್ವತ್ತು, ಸ್ವಾತಂತ್ರ್ಯ; ಗ್ರಂಥಗಳನ್ನು ಜನತೆಗೆ ಮುಟ್ಟಿಸುವ ಉಪಾಯ; ಮಕ್ಕಳ ಸಾಹಿತ್ಯ; ಹಿರಿಯ ಕಿರಿಯ

ಸಾಹಿತಿಗಳ ಸಂಪರ್ಕ, ವಾತ್ಸಲ್ಯ; ಮುಂತಾದುವನ್ನು ಕುರಿತು ಭಾಷಣಮಾ
ಒಂದು "ಸಾಹಿತಿಗಳ ಸಂಘ" ಏರ್ಪಡಬೇಕೆಂದೂ, ಅದು ಸದ್ಯಕ್ಕೆ ಒ
ರೀತಿಯ ಉಲ್ಲಾಸ ಸಂಸ್ಥೆ (Social Club) ಯಾಗಿರಬೇಕೆಂದೂ ಆ ಸಭೆಯು ಸ
ನುಡಿಯಿತು. ಉಪಾಹಾರವಾದನಂತರ ಅಧ್ಯಕ್ಷರ ಸರಸ ಭಾಷಣದೊಡನೆ
ಲೇಖಕಗೋಷ್ಠಿಯು ಮುಗಿಯಿತು.

೯. **ಮಹಿಳೆಯರ ಸಭೆ.**—ಈ ಸಭೆಯು ಏರ್ಪಾಟು ತೀರ ಹೊಸದು
ಅತ್ಯಾವಶ್ಯಕವಾಗಿ ನಡೆಯಬೇಕಾಗಿದ್ದುದು. ನಮ್ಮ ಮಹಿಳೆಯರ ವಿಶ್ವಾ
ಸಹಾಯವೂ ಪರಿಷತ್ತಿಗೆ ಅಧಿಕವಾಗಿ ಬೇಕು. ಅವರು ಹೆಚ್ಚು ಹೆಚ್ಚಾಗಿ
ತಾಯ್ನುಡಿಯ ಸೇವೆ ಮಾಡಲು ಸಿದ್ಧರಾಗುವುದು ಅತ್ಯಾವಶ್ಯಕ. ಈ ವಿಷ
ಸ್ತ್ರೀಯರ ಗಮನಕ್ಕೆ ತರಬೇಕೆಂಬುದೇ ಪರಿಷತ್ತಿನ ಮೊದಲನೆಯ ಮಹಿಳಾ
ಆಶೆ. ಸಭೆಯು ಬಹುಮಟ್ಟಿಗೆ ಯಶಸ್ವಿಯಾಗಿ ನಡೆಯಿತೆಂಬುದು ಪರಿಷತ್ತಿನ
ಹೆಮ್ಮೆ; ಕನ್ನಡ ನಾಡಿಗೊಂದು ಶುಭ ಸೂಚನೆ. ಸಭೆಯ ವಿವರವನ್ನು ಕ
ಕೊಟ್ಟಿದೆ:

ತಾ॥ ೧೦-೫-೧೯೩೭ನೆಯ ಸೋಮವಾರ ಸಾಯಂಕಾಲ ೪
ಮಹಿಳೆಯರ ಸಭೆ ಸೇರಿತು. ಈ ಸಲದ ವಿಶೇಷ ಸಾಹಿತ್ಯೋತ್ಸವವನ್ನು ಏ
ಗೊಳಿಸಿದ ರಾಜಮಂತ್ರಪ್ರವೀಣ ಶ್ರೀಮಾನ್ ಎನ್. ಮಾಧವರಾಯರವರ ಧರ್ಮ
ಶ್ರೀಮತಿ ನ್ಯಾಪತಿ ನರಸಮ್ಮನವರೇ ಸಭೆಯ ಅಧ್ಯಕ್ಷತೆ ವಹಿಸಿದ್ದುದು
ಸಂತೋಷದ ಸಂಗತಿ.

ಸಭೆ ಪ್ರಾರಂಭವಾಗುವ ಮುನ್ನ ಶ್ರೀಮತಿ ನರಸಮ್ಮನವರು ಗ್ರಂಥಪ್ರ
ಕಲಾ ಪ್ರದರ್ಶನಗಳನ್ನು ನೋಡಿ ತಮ್ಮ ಮೆಚ್ಚಿಕೆಯನ್ನು ವ್ಯಕ್ತಪಡಿಸಿದರು.

ಪ್ರಾರ್ಥನೆಯೊಡನೆ ಸಭಾ ಕಾರ್ಯ ಪ್ರಾರಂಭವಾಯಿತು. ಆ ಬಳಿಕ ಈ ಕೆ
ಉಪನ್ಯಾಸಗಳಾದುವು:—

೧. "ನಮ್ಮ ಸ್ತ್ರೀಯರಿಗೆ ಕನ್ನಡ ಭಾಷೆಯ ಆವಶ್ಯಕತೆ."
—ಶ್ರೀಮತಿ ಎಸ್. ನಂಜಮ್ಮ, ಬಿ.ಎ., ಎಲ್.ಟಿ., ಅವರಿಂದ.

೨. "ಬೆಕ್ಕುಗಳು—ಅವುಗಳ ವೈಶಿಷ್ಟ್ಯ."
—ಶ್ರೀಮತಿ ಬಿ. ಎಸ್. ವೆಂಗಡಮ್ಮ, ಎಂ.ಎಸ್‌ಸಿ., ಅವರಿಂದ.

೩. "ಸಸ್ಯಜೀವನದ ವೈಚಿತ್ರ್ಯಗಳು ಮತ್ತು ರಹಸ್ಯಗಳು."
—ಶ್ರೀಮತಿ ಪದ್ಮ ಶೇಷಾದ್ರಿ, ಬಿ.ಎಸ್‌ಸಿ., ಅವರಿಂದ.

ಪರಿಷತ್ತು ನಡಸಿದ ಕಂಠಪಾಠ ಸ್ಪರ್ಧೆಯಲ್ಲಿ ಬಹುಮಾನಪಡೆದ ಬಾಲಿಕೆ
ಅಧ್ಯಕ್ಷರು ಬಹುಮಾನಗಳನ್ನು ಹಂಚಿದರು. ಆ ಬಾಲಕಿಯರು ತಮ್ಮ ಕಂ
ಕೌಶಲವನ್ನು ಮತ್ತೊಮ್ಮೆ ಪ್ರದರ್ಶಿಸಿ ಸಭೆಯನ್ನು ನಗೆಯಲ್ಲಿ ತೇಲಾಡಿಸಿದರು.

ಬಳಿಕ ಶ್ರೀಮತಿ ಲಲಿತಮ್ಮನವರು ಸುಶ್ರಾವ್ಯವಾಗಿ ಭಾರತ ವಾಚನಮಾ

ನವಜೀವನ ವ್ಯಾಯಾಮ ಶಾಲೆಯ ಬಾಲಕಿಯರು ಕೆಲವರು ವಿವಿಧ ಅಂಗ ಸಾಧನೆಗಳು, ಸೂರ್ಯನಮಸ್ಕಾರ ರೀತಿಗಳು, ಯೋಗಾಸನ ಮುಂತಾದವುಗಳನ್ನು ಪ್ರದರ್ಶಿಸಿದರು.

ಅನಂತರ ಅಧ್ಯಕ್ಷರಾದ ಶ್ರೀಮತಿ ನರಸಮ್ಮನವರ ಅಮೂಲ್ಯವಾದ ಭಾಷಣ ನಡೆಯಿತು. (ಇದನ್ನು ಬೇರೆಯಾಗಿ ಮುದ್ರಿಸಿದೆ.)

ಕೊನೆಯಲ್ಲಿ, ಪರಿಷತ್ತಿನ ಕಾ॥ ನಿ॥ ಮಂಡಲಿಯ ಸದಸ್ಯರಾದ ಶ್ರೀಮತಿ ಆರ್. ಕಲ್ಯಾಣಮ್ಮನವರು ಮಹಿಳೆಯರ ಪರವಾಗಿಯೂ ಪರಿಷತ್ತಿನ ಪರವಾಗಿಯೂ ಸಭಾಧ್ಯಕ್ಷರಾದ ಶ್ರೀಮತಿ ನರಸಮ್ಮನವರಿಗೆ ವಂದನೆಗಳನ್ನು ಸಮರ್ಪಿಸಿದರು.

ಹೂವು ಗಂಧವನ್ನು ಕೊಟ್ಟಮೇಲೆ, ರಾಷ್ಟ್ರಗೀತೆಯೊಡನೆ ಸಭೆ ಕೊನೆಗಂಡಿತು.

ಹೀಗೆ ವಿವಿಧ ವಿದ್ಯಮಾನಗಳನ್ನು ನಾಲ್ಕನೆಯ ವಿಶೇಷ ಸಾಹಿತ್ಯೋತ್ಸವದ ಅಂಗಗಳಾಗಿ ಒಟ್ಟುಗೂಡಿಸಿದುದರಲ್ಲಿ, ಕನ್ನಡ ನಾಡಿನ ಚೈತನ್ಯವು ಹೇಗೆ ಬಹುಮುಖವಾಗಿ ಹೊರಹೊಮ್ಮುತ್ತಿದೆಯೆಂಬುದನ್ನು ವ್ಯಕ್ತಪಡಿಸುವುದೇ ಮುಖ್ಯ ಆಶಯ. ನಾನಾ ಬಗೆಯ ಉದ್ಯಮ ಸಾಹಸಗಳ ಸಂಯೋಗದಿಂದ ಬಿಕ್ಕಟ್ಟಾದ ಸಮಯ ಇದು. ನಮ್ಮ ಕರ್ಣಾಟಕವೂ ನವಕರ್ಣಾಟಕ; ಇಪ್ಪತ್ತನೆಯ ಶತಮಾನಕ್ಕೇ ಸೇರಿದ್ದು; ಹದಿಮೂರು ಹದಿನಾಲ್ಕಕ್ಕಲ್ಲ—ಎಂಬುದನ್ನು ಮನಗಾಣಲು ಈ ಬಾರಿಯ ಉತ್ಸವವು ಅಲ್ಪಸ್ವಲ್ಪ ನೆರವಾಗಿದ್ದರೆ, ಪರಿಷತ್ತಿಗೆ ಅದೇ ಹೆಚ್ಚಿನ ತೃಪ್ತಿ.

## ಬದಲಾವಣೆಗಳು

ಪ್ರತಿಸಲವೂ ನಡೆಯುತ್ತಿದ್ದ ಏರ್ಪಾಟು ವ್ಯವಸ್ಥೆಗಳಲ್ಲಿಯೂ ಕಾರ್ಯಭಾಗ ಕಾರ್ಯನೀತಿಗಳಲ್ಲಿಯೂ ಹಲಕೆಲವು ಬದಲಾವಣೆಗಳನ್ನು ಈ ಬಾರಿ ಆಚರಿಸಲಾಯಿತು. ಅವಾವುವೆಂದರೆ:—

(೧) ಉಪನ್ಯಾಸ ಮಾಲೆಯಲ್ಲಿ ಎರಡು ವಿಚಾರ ಗೋಷ್ಠಿ (Symposium) ಗಳನ್ನು ಇಟ್ಟಿತ್ತು; ಎಂದರೆ, ಮೂರು ನಾಲ್ಕು ಜನರು ಒಂದು ವಿಷಯವನ್ನು ಕುರಿತು ಬೇರೆಬೇರೆ ದೃಷ್ಟಿಯಿಂದಲೋ ಅಥವಾ ಒಂದು ವಿಷಯದ ಬೇರೆಬೇರೆ ಭಾಗಗಳನ್ನು ಕುರಿತೋ ಅರ್ಧರ್ಧ ಘಂಟೆ ಮಾತನಾಡಿ ಆ ವಿಷಯದ ವಿಸ್ತೀರ್ಣವನ್ನೂ ವೈವಿಧ್ಯವನ್ನೂ ತಿಳಿದುಕೊಳ್ಳಲು ಸಹಾಯಮಾಡಿದರು.

(೨) ಉಪನ್ಯಾಸಾದಿಗಳು ನಡೆಯುವಾಗ ಸಭಾಮಂದಿರದಲ್ಲಿ ಜಗುಲಿಯ ಮೇಲೆ ಮಹಿಳೆಯರಿಗೆ ಪೀಠವನ್ನೇರ್ಪಡಿಸಿ, ಮರದ ವೇದಿಕೆಯನ್ನು ಜಗುಲಿಗೂ ಪಶ್ಚಿಮದ ಗೋಡೆಗೂ ಸಂಬಂಧಿಸಿದಂತೆ ಹಾಕಿದುದರಿಂದ, ಉಪನ್ಯಾಸವನ್ನು ಕೇಳುವುದಕ್ಕೂ ದೀಪಚಿತ್ರವನ್ನು ನೋಡುವುದಕ್ಕೂ ಹೆಚ್ಚು ಸೌಕರ್ಯವಾಯಿತು.

(೩) ಪರಿಷನ್ಮಂದಿರದಲ್ಲಿಯೂ ಅದರ ಆವರಣದಲ್ಲಿಯೂ ಜನಸಂದಣಿ ಗಲಭೆಗಳನ್ನು ಆದಷ್ಟು ಕಡಮೆಮಾಡಲು ಗ್ರಂಥ ಪ್ರದರ್ಶನವನ್ನು ಸಂಸ್ಕೃತ ಕಾಲೇಜಿನ ಮಹಡಿಯಮೇಲೆ ಏರ್ಪಡಿಸಿತ್ತು.

(೪) ಪರಿಷತ್ತಿನ ಕಚೇರಿಯನ್ನು ವಾಚನಾಲಯಕ್ಕೆ ವರ್ಗಾ

(೫) ವರ್ತಮಾನಗಳನ್ನು ತಿಳಿದುಕೊಳ್ಳುವುದಕ್ಕೂ ಟಿಕೆಟ್ಟು ಮುಂತಾ ತೆಗೆದುಕೊಳ್ಳುವುದಕ್ಕೂ ಕಚೇರಿಯಾಗಿ ನಿಯಮಿಸಿದ್ದ ಸ್ಟಾಲುಗಳ ಡೇ ಸ್ವಲ್ಪ ಹಿಂಭಾಗದಲ್ಲಿ ಹೊಡೆಯಿಸಿತ್ತು.

(೬) ಕಾರ್ಯಶಾಲೆ ಕಾರ್ಖಾನೆಗಳ ನೋಟಕ್ಕೆ ಹೋಗುವವರ ಹೆಸರು ಮೊದಲೇ ದಾಖಲುಮಾಡಿಕೊಂಡು, ಅವರು ಪರಿಷನ್ಮಂದಿರಕ್ಕೆ ಬಂದ ಟಿಕೆಟ್ಟುಗಳನ್ನು ಕೊಟ್ಟು, ಆ ಕ್ರಮವನ್ನನುಸರಿಸಿ ಬಸ್ಸುಗಳಲ್ಲಿ ಅವರನ್ನು ಕಾರ್ಯಶಾಲೆಗಳಲ್ಲಿ ಅವರನ್ನು ಗುಂಪುಗುಂಪಾಗಿ ವಿಭಾಗಿಸಿ, ಕಾರ್ಯ ಸುಲಭವೂ ಹೆಚ್ಚು ಪ್ರಯೋಜನಕರವೂ ಆಗುವಂತೆ ನಡಸಲಾಯಿತು. ಉಪಾಧ್ಯಾಯರೂ ಇತರ ಅತಿಥಿಗಳೂ ಅಲ್ಲಿಗೆ ಸೇರುವುದಕ್ಕೆ ಮುಂಚೆಯೇ ಎಚ್. ಎಲ್. ಹರಿಯಪ್ಪನವರು ಪ್ರತಿಯೊಂದು ಕಾರ್ಯಶಾಲೆಗೂ ತೋರಿಸಲು ಪೂರ್ವಸಿದ್ಧತೆಗಳನ್ನು ಮಾಡುತ್ತಿದ್ದರು.

(೭) ಕಾರ್ಖಾನೆ ಕಾರ್ಯಶಾಲೆಗಳ ನೋಟ ನಾಲ್ಕು ದಿನ ನಡೆಯಿ

(೮) ಪ್ರೇಕ್ಷಕರ ಬೈಸಿಕಲ್ಲುಗಳನ್ನು ಜೋಪಾನವಾಗಿ ಇಟ್ಟುಕೊ ಸ್ಕೌಟುಗಳು ಒಂದು ಆರು ಪೈ ರುಸುಮಿನ ಸಮರ್ಪಕವಾದ ಶಿಸ್ತನ್ನು ತಂದಿದ್ದರು.

## ಗ್ರಂಥ ಪ್ರದರ್ಶನ

ಎಂದಿನಂತೆ ಈ ಸಲವೂ ಕನ್ನಡ ಗ್ರಂಥ ಪ್ರದರ್ಶನವನ್ನು ಏರ್ಪಡಿಸಲಾ ೧೯೩೬ನೆಯ ಇಸವಿಯಲ್ಲಿ ಪ್ರಕಟವಾದ ಪುಸ್ತಕಗಳ ಸಂಖ್ಯೆ ನಮಗೆ ತಿಳಿದ ಮಟ್ಟಿಗೆ ೨೪೫. ಈ ಸಾರಿಯು ಗ್ರಂಥ ಪ್ರದರ್ಶನಕ್ಕೆ ೧೭೭ ಪ್ರಕಟನೆಗಳು ಬಂದಿ ಗ್ರಂಥ ಪ್ರದರ್ಶನದ ವ್ಯವಸ್ಥೆಯನ್ನು ಶ್ರೀ॥ ವಿ. ಸೀತಾರಾಮಯ್ಯನವರು, ಮತ್ತು ಶ್ರೀ॥ ಸಿ. ಎನ್. ರಾಘವಾಚಾರ್ಯರು, ಬಿ.ಎಸ್‌ಸಿ. ಅವರು ವಹಿಸಿಕೊ ಕಾರ್ಯವನ್ನು ದಕ್ಷತೆಯಿಂದ ನೆರವೇರಿಸಿಕೊಟ್ಟರು.

## ಎರಡನೆಯ ಸಕಲ ಕರ್ನಾಟಕ ಸಂಘ ಸಮ್ಮೇಳನ

ಉತ್ಸವದ ಮತ್ತೊಂದು ಅಂಗವಾದ ಸಕಲ ಕರ್ನಾಟಕ ಸಂಘ ಸಮ್ಮೇ ಮೇ ೪, ಮಂಗಳವಾರ ನಡೆಯಿತು. ಈ ಸಂಘ ಸಮ್ಮೇಳನಕ್ಕೆ ೧೮ ಸಂಘ ೩೦ ಪ್ರತಿನಿಧಿಗಳು ದಯಮಾಡಿಸಿದ್ದರು. ೧೨ ನಿರ್ಣಯಗಳು ಅಂಗೀಕೃತವಾ ಸಮ್ಮೇಳನದ ನಡವಳಿಕೆಗಳು ಬೇರೆ ವರದಿಯಾಗಿ ಪ್ರಕಟವಾಗಿವೆ. (ವರದಿ ಈ ಸಂಚಿಕೆಯ ಅನುಬಂಧವಾಗಿ ಸೇರಿಸಿದೆ.)

## ವಿಜ್ಞಾನ ಕಾರ್ಯಶಾಲೆಗಳ ನೋಟ

ಉತ್ಸವ ವಾರದಲ್ಲಿ ಪರಿಷತ್ತಿನ ಸದಸ್ಯರುಗಳೂ ಉಪಾಧ್ಯಾಯರುಗಳೂ ಒಟ್ಟು ವಾರದ ಸೀಸನ್ ಟಿಕೆಟ್ ಪಡೆದಿದ್ದವರೂ ಈ ಕೆಳಗಿನ ವಿಜ್ಞಾನ ಸಂಸ್ಥೆಗಳನ್ನು ನೋಡಿಕೊಂಡು ಬಂದರು :—

| | |
|---|---|
| (೧) ಮೇ ೩, ಸೋಮವಾರ ಮಧ್ಯಾಹ್ನ ೧೨-೩೦ರಿಂದ ೪ರ ವರೆಗೆ | ೧. ಮೈಸೂರು ಮಿಲ್ಸ್.<br>೨. ಪಿಂಗಾಣಿ ಕಾರ್ಖಾನೆ. |
| (೨) ಮೇ ೫, ಬುಧವಾರ ಮಧ್ಯಾಹ್ನ ೧೨-೩೦ರಿಂದ ೪ರ ವರೆಗೆ | ೩. ಸೆಂಟ್ರಲ್ ಕಾಲೇಜಿನ ವಿಜ್ಞಾನ ಮಂದಿರ.<br>೪. ಮೈಸೂರು ಸಾಬೂನು ಕಾರ್ಖಾನೆ.<br>೫. ಸೆಂಟ್ರಲ್ ಅಬ್‌ಸರ್‌ವೇಟರಿ.<br>೬. ಸರ್ಕಾರದ ಮುದ್ರಣಾಲಯ. |
| (೩) ಮೇ ೬, ಗುರುವಾರ ಮಧ್ಯಾಹ್ನ ೧೨-೩೦ರಿಂದ ೩ರ ವರೆಗೆ | ೭. ಎಲೆಕ್ಟ್ರಿಕ್ ಫ್ಯಾಕ್ಟರಿ. |
| (೪) ಮೇ ೭, ಶುಕ್ರವಾರ ಮಧ್ಯಾಹ್ನ ೧೨-೩೦ರಿಂದ ೩ರ ವರೆಗೆ | ೮. ಇಂಪೀರಿಯಲ್ ಡೈರಿ ಫಾರಂ. |

ಈ ಕಾರ್ಯಭಾಗದ ಸೂಕ್ಷ್ಮ ಜವಾಬ್ದಾರಿಯನ್ನು ಶ್ರೀ॥ ಎಚ್. ಎಲ್. ಹರಿಯಪ್ಪನವರು ಹೊತ್ತುಕೊಂಡು ಅತಿ ವಿಚಕ್ಷಣೆಯಿಂದ ಅದನ್ನು ಪರಿಪಾಲಿಸಿದರೆಂದು ಹೇಳಲು ನನಗೆ ಬಹು ಆನಂದ.

## ಕಾವ್ಯ ವಾಚನ

**೧. ಕಂಠಪಾಠ ಪ್ರದರ್ಶನ.—**

ಮೇ ೪, ಮಂಗಳವಾರ ಸಾಯಂಕಾಲ ೪ರಿಂದ

"ಕಿಂದರಿ ಜೋಗಿ" (ಪದ್ಯ), "ನಾಗರಿಕ ದೇವ ಸಂವಾದ":
ಪಿ. ಆರ್. ಶಾಂತಾ.
"ಕಿಂದರಿ ಜೋಗಿ": ಸಿ. ಎನ್. ಲೀಲಾವತೀಬಾಯಿ.
"ಕರ್ಣವೃತ್ತಾಂತ": ಟಿ. ಆರ್. ಜಯರಾವ್.
,, ವಿ. ಎಸ್. ಹನುಮಂತರಾವ್.
"ಕಿಂದರಿ ಜೋಗಿ": ಎಸ್. ಶ್ರೀಕಂಠೇಶ್ವರನ್.

**೨. ಕವನಗಳ ವಾಚನ.—**

ಮೇ ೪, ಮಂಗಳವಾರ ಸಾಯಂಕಾಲ ೫ ರಿಂದ

"ನಮ್ಮ ನಾಡು": ಶ್ರೀ॥ ಆರ್. ಎಸ್. ಮುಗಳಿ, ಎಂ.ಎ., ಬಿ.ಟಿ.
"ಶುಭ ವೃತ್ತಾಂತ" (ಪಾಳಿಯಿಂದ) ಮತ್ತು "ರತ್ನನ ಪದಗಳು":
ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ.
"ಹೊನ್ನಿಯ ಮದುವೆ": ವಿದ್ವಾನ್ ಶ್ರೀ॥ ಕೆ. ಶಂಕರಭಟ್ಟರು.

ಮೇ ೬, ಗುರುವಾರ ಸಾಯಂಕಾಲ ೪ ರಿಂದ

"ಬೆಕ್ಕು ಹಾರುತಿದೆ ನೋಡಿದಿರಾ" ಇತ್ಯಾದಿ:

ಶ್ರೀ॥ ಡಿ. ಚಂದ್ರಶೇಖರಯ್ಯನವರು, ಎಂ.ಎ.

೩. ಭಾರತ ವಾಚನ.—

ಮೇ ೫, ಬುಧವಾರ ಸಾಯಂಕಾಲ ೪-೩೦ ರಿಂದ

"ದೂರ್ವಾಸಾತಿಥ್ಯ" ('ಕುಮಾರವ್ಯಾಸ ಭಾರತ'ದಿಂದ):

ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್ಯ, ಬಿ.ಎ., ಬಿ.ಟಿ., ಅವರು

## ವಿವಿಧ ವಿನೋದಾವಳಿ

(ಮೇ ೬, ಗುರುವಾರ ಸಾಯಂಕಾಲ ೪ ರಿಂದ ೫-೩೦)

೧. "ಹಾಸ್ಯಾಭಿನಯಗಳು": ಶ್ರೀ॥ ಎಸ್. ನಾಗೇಶರಾವ್, ಬಿ.ಎ.

೨. "ಬೀದಿ ವೈದ್ಯ" (Quack Doctor): ಶ್ರೀ॥ ಎ. ಎಂ. ನಟೇಶ ಮೊದಲಿಯಾರ್, ಎಂ.ಎ.

೩. "ಬಂಡವಾಳವಿಲ್ಲದ ಬಡಾಯಿ" ನಿಂದ ಕೆಲವು ದೃಶ್ಯಗಳು: ಮಲ್ಲೇಶ್ವರದ ಕರ್ಣಾಟಕ್ ಹಿಂದೀ ಅಮೆಚೂರ್ ಸಂಘದವ

೪. "ನಮ್ಮ ಕಂಪೆನಿ": ಶ್ರೀ॥ ಎ. ಎಂ. ನಟೇಶ ಮೊದಲಿಯಾರ್, ಎ. ಮತ್ತು ಗೆಳೆಯರು.

(ರಾತ್ರಿ ೮ ರಿಂದ ೯):

೫. ತಾಂಡವ, ಕೃಷ್ಣ ಮತ್ತು ದೀಪ ನೃತ್ಯಗಳು: ಶ್ರೀ॥ ಲಕ್ಷ್ಮೀ ಭಾವಡೆ ಅವರಿಂದ.

## ಸಂಗೀತ

ಮೇ ೨, ಭಾನುವಾರ ರಾತ್ರಿ ೯ ರಿಂದ

೧. "ದೇವರನಾಮಗಳು": ಶ್ರೀ॥ ಕೆ. ಜಿ. ಸಂಪತ್ಕುಮಾರಾ ಬಿ.ಎ., ಬಿ.ಟಿ., ಅವರಿಂದ.

ಮೇ ೯, ಭಾನುವಾರ ಸಾಯಂಕಾಲ ೭ ರಿಂದ ೮-೩೦:

೨. "ದೇವರನಾಮಗಳು": ಸಂಗೀತ ವಿದ್ವಾನ್ ಶ್ರೀ॥ ಬಿ. ಎಸ್. ರಾಜಯ್ಯಂಗಾರ್ ಅವರಿಂದ.

## ಊಟ ತಿಂಡಿಯ ಏರ್ಪಾಟು

ಸಂಸ್ಕೃತ ಕಾಲೇಜಿನಲ್ಲಿಯೂ ಕೋಟೆ ಮಿಡಲ್ ಸ್ಕೂಲಿನಲ್ಲಿಯೂ ಬಿಡಾರದಲ್ಲಿ ಅತಿಥಿಗಳಾಗಿದ್ದವರಿಗೆ ಭೋಜನವಸತಿಯನ್ನು ಅನುಕೂಲಿಸ ೩೭ ಪರಸ್ಥಳದ ಮಹಸೇಯರು ಬಿಡಾರದಲ್ಲಿದ್ದರು. ಅವರಲ್ಲಿ ಒಬ್ಬರು ಮಹಿ ಈ ಕಾರ್ಯಭಾಗವು ಕಷ್ಟತರವಾದುದು; ನಯ ವಿವೇಕ ಧೈರ್ಯ

ಗಳೆಲ್ಲವೂ ಅದಕ್ಕೆ ಅತ್ಯಾವಶ್ಯಕ. ಯಾವೊಂದು ತೊಡಕೂ ಎಳ್ಳಷ್ಟು ಊನವೂ ಇಲ್ಲದಂತೆ ಈ ಏರ್ಪಾಟನ್ನು ನೆರವೇರಿಸಿಕೊಟ್ಟ ಮುಖ್ಯಸ್ಥರು ಶ್ರೀ॥ ಸಿ. ಆರ್. ಮಾಧವರಾಯರು, ಬಿ.ಎ., ಮತ್ತು ಅವರ ಸಹಾಯಕರು ಶ್ರೀ॥ ಗಳಾದ ಎಚ್. ಸೂರಪ್ಪನವರು, ಎನ್. ಎನ್. ರಾಜಾರಾಯರು, ಟಿ. ಎನ್. ಶಂಕರಪ್ಪನವರು ಮತ್ತು ಇ. ಪಾಂಡುರಂಗರಾಯರು. ಇವರಿಗೆ ಪರಿಷತ್ತಿನ ಅನಂತ ವಂದನೆಗಳು.

## ಉಪಸಂಹಾರ

ಮೇ ೯ನೆಯ ಭಾನುವಾರ ಸಾಯಂಕಾಲ ೪-೩೦ಕ್ಕೆ ನಾಲ್ಕನೆಯ ವಿಶೇಷ ಸಾಹಿತ್ಯೋತ್ಸವವು ಉಪಸಂಹಾರಗೊಂಡಿತು. ಒಂದು ವಾರ ಅವಿಚ್ಛಿನ್ನವಾಗಿ ತಿಳಿವು ನಲವುಗಳನ್ನು ಕೊಟ್ಟ ಉತ್ಸವದ ವೈಭವವು ಮುಗಿದುಹೋಗುವುದಲ್ಲಾ ಎಂಬ ವೇದನೆಯಿದ್ದರೂ ಕೊನೆಯವರೆಗೂ ಪ್ರತ್ಯಕ್ಷವಾಗಿ ಇರಬೇಕೆಂಬ ಶ್ರದ್ಧೆಯಿಂದಲೂ, ಶ್ರೀಮಾನ್ ರಾಜಯ್ಯಂಗಾರ್ಯರವರ ಮಧುರ ಸಂಗೀತವನ್ನು ಸವಿಯುವ ಆಕಾಂಕ್ಷೆಯಿಂದಲೂ ಉಪಾಧ್ಯಾಯರೂ, ಅತಿಥಿಗಳೂ, ಪರಿಷತ್ಸದಸ್ಯರೂ ಬಹು ಸಂಖ್ಯೆಯಲ್ಲಿ ಕಿಕ್ಕಿರಿದು ತುಂಬಿದ್ದರು.

ಮೊದಲು, ಶ್ರೀ॥ ಗಳಾದ ಟಿ. ಎ. ಕೃಷ್ಣಪ್ಪನವರು, ಉಪಾಧ್ಯಾಯರು, ಕಾನಕಾನಹಳ್ಳಿ ಮಿಡಲ್ ಸ್ಕೂಲ್; ಸಿ. ನರಸಿಂಹಮೂರ್ತಿಗಳು, ಉಪಾಧ್ಯಾಯರು, ಹೊಳವನಹಳ್ಳಿ ಮಿಡಲ್ ಸ್ಕೂಲ್; ಕೆ. ಎಸ್. ಕೃಷ್ಣಮೂರ್ತಿರಾಯರು, ಉಪಾಧ್ಯಾಯರು, ಕರ್ಲಮಂಗಲ ಮಿಡಲ್ ಸ್ಕೂಲ್; ಎ. ಎಸ್. ರಾಮರಾಯರು, ಉಪಾಧ್ಯಾಯರು, ಅಜ್ಜಂಪುರದ ಮಿಡಲ್ ಸ್ಕೂಲ್; ಕೆ. ಶ್ರೀನಿವಾಸರಾಯರು, ಉಪಾಧ್ಯಾಯರು, ಹೂಡಿ ಮಿಡಲ್ ಸ್ಕೂಲ್; ಸಿ. ವೆಂಕಟರಮಣಯ್ಯನವರು, ಸಂಸ್ಕೃತ ಪಾಠಶಾಲೆಗಳ ರಿಟೈರ್ಡ್ ಇನ್‌ಸ್ಪೆಕ್ಟರು; ಎ. ವೆಂಕಟಪ್ಪನವರು, ಎಂ.ಎಲ್.ಸಿ., ಪರಿಷತ್ತಿನ ಕಾ॥ ನಿ॥ ಮಂಡಲಿಯ ಸದಸ್ಯರು; ಬಿ. ರಾಮಸ್ವಾಮಯ್ಯನವರು, ಬಿ.ಎಸ್‌ಸಿ., ತಿಪಟೂರು ಕರ್ಣಾಟಕ ಸಂಘದ ಪ್ರತಿನಿಧಿಗಳು; ಮತ್ತು ಆರ್. ಸುಬ್ಬರಾಯರು ಪರಿಷತ್ಸದಸ್ಯರು—ಈ ಮಹನೀಯರುಗಳು, ಎಲ್ಲರ ಪರವಾಗಿ, ವಿಶೇಷ ಸಾಹಿತ್ಯೋತ್ಸವದ ವಿಚಕ್ಷಣೆಯ ಬಗ್ಗೆ ತಮ್ಮ ಮೆಚ್ಚಿಕೆಯನ್ನು ವ್ಯಕ್ತಪಡಿಸಿ, ಉತ್ಸವವನ್ನು ದಕ್ಷತೆಯಿಂದ ನಡಸಿದ ಪರಿಷದುಪಾಧ್ಯಕ್ಷರನ್ನೂ, ಗೌರವ ಕಾರ್ಯದರ್ಶಿಯವರನ್ನೂ, ಇತರ ಕಾರ್ಯಕರ್ತರನ್ನೂ ಶ್ಲಾಘಿಸಿ ಅವರಿಗೆ ವಂದನೆಗಳನ್ನು ಸಲ್ಲಿಸಿದರು.

ಉಪಾಧ್ಯಕ್ಷರ ಪ್ರಾರ್ಥನೆಯಂತೆ ಶ್ರೀ॥ ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಎ., ಅವರು ಕಂಠಪಾಠ ಸ್ಪರ್ಧೆಯಲ್ಲಿ ತೇರ್ಗಡೆಹೊಂದಿದ ವಿದ್ಯಾರ್ಥಿಗಳಿಗೆ ಬಹುಮಾನಗಳನ್ನು ಹಂಚಿದರು.

ಅನಂತರ, ಉಪಾಧ್ಯಕ್ಷರು ವಿಶೇಷ ಸಾಹಿತ್ಯೋತ್ಸವಕ್ಕಾಗಿ ನಾನಾರೀತಿಗಳಲ್ಲಿ ಸಹಾಯಮಾಡಿರುವ ಎಲ್ಲ ಸಂಸ್ಥೆಗಳಿಗೂ ಮಹನೀಯರಿಗೂ ಪರಿಷತ್ತಿನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ತಿಳಿಸಿ, ಉತ್ಸವಕ್ಕಾಗಿ ಶ್ರಮಿಸಿದ್ದ ಮಹನೀಯರಿಗೆ

ಹೂಮಾಲೆಗಳನ್ನು ಸಮರ್ಪಿಸಿದರು; ಮತ್ತು ವಿಶೇಷ ಸಾಹಿತ್ಯೋತ್ಸವ ಬರುತ್ತ ಹೆಚ್ಚು ಪರಿಣಾಮಕಾರಿಯಾಗಲು ಉಪನ್ಯಾಸಕರು ಕಾಲಕ್ರಮದಲ್ಲಿ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಸಿದ್ಧರಾಗಿ ಬರಬೇಕೆಂದೂ, ಪ್ರತಿಯೊಬ್ಬ ಉಪನ್ಯಾ ಕನ್ನಡದಲ್ಲಿ ಉಪನ್ಯಾಸಮಾಡುವ ಸಾಮರ್ಥ್ಯವನ್ನು ಒಂದು ಹದಕ್ಕೆ ತಂ ಬೇಕೆಂದೂ, ಉಪನ್ಯಾಸಗಳನ್ನು ಕೇಳುವುದಕ್ಕೆ ಬರುವ ಉಪಾಧ್ಯಾಯರು ವಿರುವಮಟ್ಟಿಗೆ ಒಂದೆರಡು ಪುಸ್ತಕಗಳನ್ನಾದರೂ ಕೊಂಡುಕೊಂಡು ಓದಿ ಸಾಹಿತ್ಯ ಪರಿಚಯವನ್ನು ಪಡೆಯಲು ಪ್ರಯತ್ನಪಡುವುದಲ್ಲದೆ ಕನ್ನಡ ಸಾಹಿತ್ಯಗಳ ವಿಷಯದಲ್ಲಿ ಇತರರಲ್ಲಿಯೂ ಉತ್ಸಾಹ ಶ್ರದ್ಧೆಗಳನ್ನು ಹುಟ್ಟಿಸಲು ಮಾಡಬೇಕೆಂದೂ ತಿಳಿಸಿ, ಭಾಷಣಮಾಡಿದರು.

ಸ್ಕೌಟು ದಳದವರು ಮೈಸೂರು ರಾಷ್ಟ್ರಗೀತೆಯನ್ನು ಹಾಡಿ ಶ್ರೀಮನ್ಮಹಾರಾಜರವರ, ಶ್ರೀಮದ್ಯುವರಾಜರವರ ಮತ್ತು ಕನ್ನಡ ಪ ಜಯಘೋಷಗಳೊಡನೆ ಸಭೆಯು ಮುಕ್ತಾಯವಾಯಿತು.

ಆ ಬಳಿಕ, ಸಂಗೀತ ವಿದ್ವಾನ್ ಶ್ರೀಮಾನ್ ಬಿ. ಎಸ್. ರಾಜಯ್ಯ ಅವರು ತಮ್ಮ ಸುಮಧುರವಾದ ಅದ್ಭುತ ಸಂಗೀತದಿಂದ ಎಲ್ಲರನ್ನೂ ತಣಿಸಿ

## ಸಂತೋಷ ಭೋಜನ

ಪರಿಷತ್ತಿಗೆ ಉಪಕಾರವನ್ನೆಸಗುವುದರಲ್ಲಿ ಆಯಾಸವನ್ನೇ ಕಾಣ ಮಹನೀಯರು ಎಂದರೆ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು. ಈ ವಿಶೇಷ ಸಾ ತ್ಸವವನ್ನು ಅವರು ಮೆಚ್ಚಿ, ಅದಕ್ಕಾಗಿ ಶ್ರಮಪಟ್ಟವರನ್ನೂ ಅದರ ದಾನಿಗಳ ಹಿತಚಿಂತಕರನ್ನೂ ಹಾಗೂ ಪರಿಷತ್ತಿನ ಅಭಿಮಾನಿಗಳನ್ನೂ,—ಒಟ್ಟು ಸುಮಾ ಮಂದಿ ಸ್ತ್ರೀ ಪುರುಷ ಅತಿಥಿಗಳನ್ನು ಆಹ್ವಾನಿಸಿ, ಮೇ ೧೧ ಮಂಗಳವಾ ರಾತ್ರಿ ೮ ಘಂಟೆಗೆ ಒಂದು ಸಂತೋಷ ಭೋಜನದಿಂದ ಅವರನ್ನು ತೃಪ್ತಿಪಡಿ ಪರಿಷನ್ಮಂದಿರದಲ್ಲಿ ಜ್ಞಾನ ಸಂತರ್ಪಣೆಯೇನೋ ಅವಿಚ್ಛಿನ್ನವಾಗಿ ನಡೆಯು ಮೃಷ್ಟಾನ್ನ ಸಂತರ್ಪಣೆಯಾದುದು ಇದೇ ಮೊದಲು. ಹೀಗೆ, ನಾಲ್ಕನೆಯ ಸಾಹಿತ್ಯೋತ್ಸವಕ್ಕೆ ನಮ್ಮ ಸಂಸ್ಕೃತಿಗನುರೂಪವಾದ ಸಕ್ಕರೆ ತುಪ್ಪದ ಮುಕ್ತಾಯವನ್ನು ಮಾಡಿ, ಪ್ರಾಸಂಗಿಕವಾಗಿ ಪರಿಷನ್ಮಂದಿರದಲ್ಲಿ ಭೂ ಯನ್ನೂ ಸಂವರಣಗೈದ ಶ್ರೀ॥ ಶ್ರೀಕಂಠಯ್ಯನವರಿಗೆ ಯಾವ ಮಾತುಗಳಲ್ಲಿ ಕೃ ಯನ್ನು ಹೇಳಬೇಕೋ ನನಗೆ ತಿಳಿಯದು.

## ಬಿರುನುಡಿ

ಈ ವರದಿಯನ್ನು ಮುಗಿಸುವ ಮುನ್ನ ವ್ಯವಸ್ಥಾಪಕನಾದ ನಾನ ಅನುಭವಕ್ಕೆ ಬಂದಿರುವ ಒಂದೆರಡು ಮಾತುಗಳನ್ನು ಆಡದಿದ್ದರೆ ನನ್ನ ಆತ್ಮಕ್ಕೆ ವಂಚನೆ. ವಿಶೇಷ ಸಾಹಿತ್ಯೋತ್ಸವವು ಮಹಾವೈಭವದಿಂದ ಸಾಗಿದ್ದೇನೋ ಉತ್ಸವದ ಏರ್ಪಾಟುಗಳನ್ನು ಮುಖ್ಯವಾಗಿ ಯಾರಿಗೋಸ್ಕರ ಮಾ

ಆ ಮಹಾಶಯರು ಕಾರ್ಯನಿರ್ವಾಹಕರ ಮೇಲೆ ಈಗ್ಗಿಂತಲೂ ಇನ್ನೂ ಸ್ವಲ್ಪ ಹೆಚ್ಚಾಗಿ ಕೃಪೆದೋರಬಹುದೆಂದು ನನ್ನ ಭಾವನೆ. ಉಚಿತ ಪ್ರವೇಶದ ಹಕ್ಕಿರುವ ಉಪಾಧ್ಯಾಯರುಗಳು ಸಕಾಲದಲ್ಲಿ ತಮ್ಮ ಹೆಸರುಗಳನ್ನು ಸೂಚಿಸುವುದು ಒಂದು ಅಪರಾಧವೆಂದು ನಾನು ಅಂಗೀಕರಿಸಲಾರೆ. ಹಾಗಾದರೆ ಏತಕ್ಕೆ ಉತ್ಸವ ಮೊದಲಾದಮೇಲೆ, ಕೊನೆಗೆ ನಾಳೆ ಮುಗಿಯಬೇಕು ಎಂದಿರುವಾಗ ಕೂಡ, ಅವರು ಪ್ರವೇಶ ಪತ್ರಗಳನ್ನು ಅಪೇಕ್ಷಿಸುವ ವ್ಯವಹಾರ? ಈ ವಿಚಾರದಲ್ಲಿ ಹೊರ ಊರು ಪಾಠಶಾಲೆಗಳವರಿಗಿಂತ ಬೆಂಗಳೂರಿನ ಉಪಾಧ್ಯಾಯರೇ ಹೆಚ್ಚು ತೊಂದರೆ ಕೊಡುತ್ತಾರೆಂದು ಹೇಳಲು ನನಗೆ ಅತ್ಯಂತ ವಿಷಾದ. ಎರಡನೆಯದಾಗಿ, ನನ್ನ ಗುರುತು ಯಾರಿಗೂ ಇಲ್ಲದಿರುವ ಪ್ರದೇಶದಲ್ಲಿ ಪ್ರವಾಸಮಾಡಬೇಕಾದಾಗ ಸಂಗಡ ಒಂದು ಪರಿಚಯ ಪತ್ರವನ್ನು ತೆಗೆದುಕೊಂಡು ಹೋದರೆ ನನಗೆ ಅದು ಅವಮಾನವಲ್ಲ. ಆದರೆ ಉತ್ಸವದ ಕೆಲವು ಅತಿಥಿಗಳು ಆ ಕ್ರಮವನ್ನು ಅಲ್ಲಗಳೆಯುವರು; ಏನು ಮಾಡುವುದು? ಪ್ರಾಯಶಃ ನನ್ನ ಆ ಅಭಿಪ್ರಾಯ ನನ್ನ ಮೂರ್ಖತನದ ಒಂದು ಚಿಹ್ನೆ. ಮತ್ತೊಂದು ಅನುಭವ: ಈ ಸಾರಿ ಸಾಧಾರಣವಾಗಿ ಎಲ್ಲ ಸಮಯದಲ್ಲಿಯೂ ಸಭಾ ಮಂದಿರದಲ್ಲಿ ಕುತೂಹಲಿಗಳ ದೊಡ್ಡ ವೃಂದವೇ ಕುಳಿತಿರುತ್ತಿದ್ದಿತು; ಆದರೆ ಒಂದೆರಡು ಉಪನ್ಯಾಸವಾಗುತ್ತಿದ್ದಾಗ ಜಾಗ ಕಣ್ಣಿಗೆ ಬೀಳುವಷ್ಟು ತೆರವು. ನಮ್ಮ ನಾಡಿನ, ನಮ್ಮ ನುಡಿಯ, ನಮ್ಮ ಗೆಳೆಯರು ಪರಿಷತ್ತಿನಮೇಲೆ ಪ್ರೀತಿಯಿಟ್ಟು, ದೇಹಶ್ರಮ, ಧನವ್ಯಯ, ಸಂಸಾರದ ಗತ್ಯ ಇವಾವುದನ್ನೂ ಲಕ್ಷಿಸದೆ ಜ್ಞಾನದಾನ ಮಾಡಲು ಸಿದ್ಧರಾಗಿರುವುದಕ್ಕಾಗಿ ನಾವು ಸದಾ ನಮ್ರಮಾನಸರಾಗಿರಬೇಕು; ಅಲ್ಲದೆ ವಿಶೇಷ ಸಾಹಿತ್ಯೋತ್ಸವದ ಬಲಭುಜ ಉಪನ್ಯಾಸ ತರಂಗ; ಕಾರ್ಖಾನೆ ಕಾರ್ಯಶಾಲೆಗಳ ದೃಶ್ಯ ಅದರ ಎಡಭುಜ; ಅಂದಮೇಲೆ ಹೆಚ್ಚಿನ ಟೀಕು ಟಿಪ್ಪಣಿ ಅನಾವಶ್ಯಕ. ಕಡೆಯದಾಗಿ, ಉತ್ಸವದಲ್ಲಿ ಸೇರಿದ್ದ ಸಮಸ್ತರಿಗೂ ಸ್ಥೂಲವಾಗಿ ಅನ್ವಯಿಸುವ, ನಡಸಿಕೊಟ್ಟ ಮಹಾಶಯರಿಗೆ ಹೆಚ್ಚಾಗಿ ಹೊಂದಿಕೊಳ್ಳುವ, ಒಂದು ಸಂಗತಿ: ಗಡಿಯಾರವೆಂಬುದು ಮನುಷ್ಯನು ತಯಾರಿಸಿದ ಒಂದು ಚಿಕ್ಕ ಯಂತ್ರವಿಶೇಷ ಅಹುದು. ಆದರೆ, ಅದರ ಮುಳ್ಳುಗಳು ಭ್ರಮೆ ವ್ಯಾಮೋಹವಿಲ್ಲದೆ ಎಳೆಯುವ ಗೀಟುಗಳನ್ನು ದಾಟದೆ, ನಮ್ಮ ಅಭೀಷ್ಟಗಳನ್ನು ಸಲ್ಲಿಸಿಕೊಳ್ಳುವುದು ಒಂದು ಕಲೆ. ಸರ್ವರಿಗೂ ಅದು ಸಿಕ್ಕಬಹುದಾದ್ದರಿಂದ ನಾವೆಲ್ಲರೂ ಸ್ಥಿರಪ್ರಯತ್ನಗೈಯುವುದು ಶ್ರೇಯಸ್ಕರವೆಂದು ನಾನು ಸೂಚಿಸುತ್ತೇನೆ.

## ಉಪಕಾರ ಸ್ಮರಣೆ

ಪರಿಷತ್ತಿನಂತಹ ಸಂಸ್ಥೆಗೆ ಕೃತಜ್ಞತಾ ಬುದ್ಧಿಯೇ ಉಗ್ರಾಣ, ಖಜಾನೆ; ವಂದನೆಯ ವಚನವೇ ನಜರು, ಬಹುಮಾನ. ನಾಲ್ಕನೆಯ ವಿಶೇಷ ಸಾಹಿತ್ಯೋತ್ಸವದ ಸಮಾಪ್ತಿಯಲ್ಲಿ ಪರಿಷತ್ತಿನ ಮಹಾಪೋಷಕರಾದ ನಮ್ಮ ಶ್ರೀಮನ್ಮಹಾರಾಜರವರ ಮತ್ತು ಪರಿಷತ್ತಿನ ಅಧ್ಯಕ್ಷರಾದ ಶ್ರೀಮದ್ಯುವರಾಜರವರ ಅಮೂಲ್ಯ ಸಹಾಯ ಪ್ರೋತ್ಸಾಹಗಳನ್ನು ಮೊದಲು ನೆನೆಯಬೇಕು. ನಮ್ಮ ದಿವಾನ್ ಸಾಹೇಬರವರ ಆಶ್ರಯದಲ್ಲಿ ಮೈಸೂರು ಸರ್ಕಾರದ ಅನೇಕ ಶಾಖೆಗಳು ನಮ್ಮ ಉತ್ಸವಕ್ಕೆ ಬೆಂಬಲ

ಕೊಟ್ಟು ಉಪಕಾರಮಾಡಿದುವು. ಸರ್ಕಾರದ ಅನೇಕ ಅಧಿಕಾರಿಗಳ ಅ
ಹಾಗೆಯೇ ನಮಗೆ ದೊರಕಿತು. ಸರ್ಕಾರದ ದ್ವಿತೀಯ ಸಚಿವರು, ಛೀ
ಯವರು, ವಿದ್ಯಾಭ್ಯಾಸದ ಇಲಾಖೆಯ ಅಧಿಕಾರಿಗಳು, ಮೈಸೂರು
ನಿಲಯ, ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲರು, ಇಂಟರ್‌ಮೀಡಿಯೆಟ್
ಸೂಪರಿಂಟೆಂಡೆಂಟರು, ಬೆಂಗಳೂರಿನ ಡೆಪ್ಯುಟಿ ಕಮಿಷನರು, ಪೊಲೀಸ್
ಲಾಲ್‌ಬಾಗಿನ ಸೂಪರಿಂಟೆಂಡೆಂಟರು, ಬೆಂಗಳೂರು ಸಿಟಿ ಮುನ್ಸಿ
ಕರ್ನಾಟಕದ ನಾನಾ ವೃತ್ತಪತ್ರಿಕೆಗಳು, ಏಪೆಕ್ಸ್ ಬ್ಯಾಂಕು, ಸಂಸ್ಕೃತ
ಪ್ರಿನ್ಸಿಪಾಲರು, ಕೋಟೆ ಮಿಡಲ್ ಸ್ಕೂಲಿನ ಮುಖ್ಯೋಪಾಧ್ಯಾಯರು,
ಸೆಂಟ್ರಲ್ ಕೋ-ಆಪರೇಟಿವ್ ಬ್ಯಾಂಕ್, ಮೈಸೂರು ಇನ್‌ಷ್ಯೂರೆನ್ಸ್
ಕರ್ನಾಟಕ ಹಿಂದೀ ಅಮೆಚೂರ್ ಸಂಘ, ಕನ್ನಡ ಸಾಹಿತ್ಯ ಸಮಾಜ, ಯ
ಸ್ಕಾ‌ಟ್ ದಳ, ಬೆಂಗಳೂರು ನಗರದ ಸ್ಕೂಲ್ ಬೋರ್ಡ್ ಆಫ್ಲೀಸರರು ಮ
ಕೈಕೆಳಗಿನ ಕೆಲವು ನೌಕರರು, ಉತ್ಸವದ ಕಾರ್ಯಭಾಗಗಳಲ್ಲಿ ಮುಖ್ಯ
ಹಲವು ಮಹಿಳೆಯರು ಮಹನೀಯರು, ದ್ರವ್ಯಸಹಾಯಮಾಡಿದ ಅನೇಕ
ಮಹಾಜನರು—ಎಲ್ಲರಿಗೂ ಎಲ್ಲ ಸಂಸ್ಥೆಗಳಿಗೂ ಪರಿಷತ್ತಿನ ಪರವಾಗಿ
ನನ್ನ ಹೃತ್ಪೂರ್ವಕ ಧನ್ಯವಾದಗಳನ್ನು ನಮ್ರತೆಯಿಂದ ಸಮರ್ಪಿಸುತ್ತೇನೆ.

ಎಸ್. ವಿ. ರಂಗಣ್ಣ,
ವ್ಯವಸ್ಥಾಪಕ,
ನಾಲ್ಕನೆಯ ವಿಶೇಷ ಸಾಹಿತ್ಯೋ
ಕರ್ನಾಟಕ ಸಾಹಿತ್ಯ ಪರಿಷ

೩೦ನೆಯ ಮೇ, ೧೯೩೭.

---

## ವಿಶೇಷ ಸಾಹಿತ್ಯೋತ್ಸವಕ್ಕೆ ಧನಸಹಾಯ ಮಾಡಿದವರು

| | | ರೂ. |
|---|---|---|
| I. | ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ಸನ್ನಿಧಿಯಿಂದ | ೧೦೦ |
| II. | ಸಂಸ್ಥೆಗಳಿಂದ: | |
| (೧) | ಬೆಂಗಳೂರು ಸೆಂಟ್ರಲ್ ಕೋ-ಆಪರೇಟಿವ್ ಬ್ಯಾಂಕ್ .. | ೨೫೦ |
| (೨) | ಮೈಸೂರು ಇನ್‌ಷೂರೆನ್ಸ್ ಕಂಪೆನಿ, ಬೆಂಗಳೂರು .. | ೭೫ |
| (೩) | ಕರ್ನಾಟಕ ಹಿಂದೀ ಅಮೆಚೂರ್ಸ್, ಮಲ್ಲೇಶ್ವರಂ .. | ೬೦ |
| (೪) | ಡಿಸ್ಟ್ರಿಕ್ಟ್ ಬೋರ್ಡ್, ಬೆಂಗಳೂರು .. .. | ೫೦ |
| (೫) | ಡಿಸ್ಟ್ರಿಕ್ಟ್ ಬೋರ್ಡ್, ಬಿಜಾಪುರ .. .. | ೨೫ |
| (೬) | ಕರ್ನಾಟಕ ಸಂಘ, ಶಿವಮೊಗ್ಗ .. .. | ೨೦ |
| (೭) | ,, ಸೆಂಟ್ರಲ್ ಕಾಲೇಜು, ಬೆಂಗಳೂರು | ೧೦ |
| (೮) | ಸಿಟಿ ಕೋ-ಆಪರೇಟಿವ್ ಬ್ಯಾಂಕ್, ಮೈಸೂರು .. | ೧೦ |
| (೯) | ಸಿಟಿ ಕೋ-ಆಪರೇಟಿವ್ ಸೊಸೈಟಿ, ಬೆಂಗಳೂರು .. | ೧೦ |
| (೧೦) | "ಫೈಟಾಂಗ್" ಸೊಸೈಟಿ, ಬೆಂಗಳೂರು .. | ೫ |
| | | ೬೦೫ |

| | | ರೂ. | ಆ. | ಪೈ |
|---|---|---|---|---|
| | [ಹಿಂದಿನಿಂದ ತೆಗೆದುಕೊಂಡು ಬಂದದ್ದು] .. | ೬೧೫ | ೦ | ೦ |
| (೧೧) | ಇಂಡಸ್ಟ್ರಿಯಲ್ ಮತ್ತು ಕಮರ್ಷಿಯಲ್ ಕೋ-ಆಪರೇಟಿವ್ ಸೊಸೈಟಿ, ಬೆಂಗಳೂರು .. | ೫ | ೦ | ೦ |
| (೧೨) | ಕರ್ಣಾಟಕ ಸಂಘ, ನಗರ .. .. | ೩ | ೧೩ | ೦ |
| (೧೩) | ಬಾಲಗಣಪತಿ ಸೇವಾ ಸಂಘ, ಬೆಂಗಳೂರು .. | ೩ | ೦ | ೦ |
| | | ೬೨೬ | ೧೩ | ೦ |

III. ಮಹಾಜನರಿಂದ:

| | | ರೂ. | ಆ. | ಪೈ |
|---|---|---|---|---|
| (೧) | ರಾವ್ ಬಹದೂರ್ ಶ್ರೀ॥ ಕೆ. ರಾಮಸ್ವಾಮಿಯವರು, ಜೆ.ಪಿ., ಬೊಂಬಾಯಿ .. .. .. | ೫೦ | ೦ | ೦ |
| (೨) | ಶ್ರೀ॥ ಬಿ. ಸಿ. ರಂಗಪ್ಪನವರು, ಬೆಂಗಳೂರು .. | ೨೫ | ೦ | ೦ |
| (೩) | ,, ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ., ಮದರಾಸು .. .. | ೧೮ | ೧೪ | ೦ |
| (೪) | ಧರ್ಮಪ್ರಕಾಶ ಶ್ರೀ॥ ಎಸ್. ಸಜ್ಜನರಾಯರು, ಬೆಂಗಳೂರು | ೧೫ | ೦ | ೦ |
| (೫) | ಶ್ರೀ॥ ವೈ. ಸುಬ್ರಹ್ಮಣ್ಯಂ, ಎಂ.ಎ., ಅವರು, ಬೆಂಗಳೂರು | ೧೦ | ೧೦ | ೦ |
| (೬) | ,, ಎಂ. ವೆಂಕಟನಾರಣಪ್ಪನವರು, ಬಿ.ಎ., ಬೆಂಗಳೂರು | ೧೦ | ೦ | ೦ |
| (೭) | ,, ಮಿರ್ಜಾ ಎಂ. ಅಜೀಜುಲ್ಲಾಬೇಗ್‌ರವರು, ಬೆಂಗಳೂರು | ೧೦ | ೦ | ೦ |
| (೮) | ರಾಜಸೇವಾಸಕ್ತ ಡಾ॥ ಬಿ. ಕೆ. ನಾರಾಯಣರಾಯರು, ಬಿ.ಎ., ಎಂ.ಬಿ.ಸಿ.ಎಂ., ಇತ್ಯಾದಿ, ಬೆಂಗಳೂರು .. | ೧೦ | ೦ | ೦ |
| (೯) | ಶ್ರೀ॥ ಮಿರ್ಲೆ ಎನ್. ಲಕ್ಷ್ಮೀನಾರಣಪ್ಪನವರು, ಬಿ.ಎ., ಬಿ.ಎಲ್., ಬೆಂಗಳೂರು .. .. | ೧೦ | ೦ | ೦ |
| (೧೦) | ಡಾ॥ ಎಂ. ಸಿದ್ಧಲಿಂಗಯ್ಯನವರು, ಎಂ.ಎ., ಪಿಎಚ್.ಡಿ., ಮೈಸೂರು .. .. .. | ೧೦ | ೦ | ೦ |
| (೧೧) | ಶ್ರೀ॥ ಬಿ. ವಿ. ನಂಜುಂಡಯ್ಯನವರು, ಬೆಂಗಳೂರು .. | ೧೦ | ೦ | ೦ |
| (೧೨) | ಒಬ್ಬರು ಅಭಿಮಾನಿಗಳು (ಶ್ರೀ॥ ಜಿ. ಶಾಂತವೀರಪ್ಪನವರ ಮೂಲಕ) .. .. .. | ೧೦ | ೦ | ೦ |
| (೧೩) | ಶ್ರೀ॥ ಆರ್. ಎಸ್. ಮುಗಳಿಯವರು, ಎಂ.ಎ., ಬಿ.ಟಿ., ಸಾಂಗ್ಲಿ .. .. | ೧೦ | ೦ | ೦ |
| (೧೪) | ಶ್ರೀ॥ ಬಿ. ಪುಟ್ಟಯ್ಯನವರು, ಬಿ.ಎ., ಬೆಂಗಳೂರು .. | ೧೦ | ೦ | ೦ |
| (೧೫) | ಪ್ರೊ॥ ಕೆ. ವಿ. ಐಯರ್ ಅವರು, ಡಿ.ಪಿಎಚ್.ಇ., ಬೆಂಗಳೂರು | ೭ | ೦ | ೦ |
| (೧೬) | ಶ್ರೀ॥ ಬಿ. ವಿ. ಸುಬ್ಬರಾಯರು, ಬೆಂಗಳೂರು .. | ೭ | ೦ | ೦ |
| (೧೭) | ಪ್ರೊ॥ ಕೆ. ಬಿ. ಮಾಧವ ಅವರು, ಎಂ.ಎ., ಎಫ್.ಆರ್.ಎ.ಎಸ್., ಎ.ಐ.ಎ., ಮೈಸೂರು .. | ೫ | ೬ | ೦ |
| (೧೮) | ಶ್ರೀ॥ ಎಚ್. ಎನ್. ರಾಘವೇಂದ್ರಾಚಾರ್ಯರು, ಎಂ.ಎ., ಮೈಸೂರು .. .. .. | ೫ | ೬ | ೦ |
| (೧೯) | ಶ್ರೀ॥ ಜಿ. ಹನುಮಂತರಾಯರು, ಎಂ.ಎ., ಮೈಸೂರು | ೫ | ೬ | ೦ |
| (೨೦) | ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., ಮೈಸೂರು | ೫ | ೬ | ೦ |
| (೨೧) | ಡಾ॥ ಎ. ಎನ್. ನರಸಿಂಹಯ್ಯನವರು, ಎಂ.ಎ., ಎಲ್.ಟಿ., ಪಿಎಚ್.ಡಿ, ಮೈಸೂರು .. | ೫ | ೬ | ೦ |
| | | ೮೭೭ | ೩ | ೦ |

| | | | ರೂ. |
|---|---|---|---|
| | [ಹಿಂದಿನಿಂದ ತೆಗೆದುಕೊಂಡು ಬಂದದ್ದು] | .. | ೮೭೭ |
| (೨೨) | ಶ್ರೀ॥ ಎಂ. ಹಿರಿಯಣ್ಣನವರು, ಎಂ.ಎ., ಮೈಸೂರು | .. | ೫ |
| (೨೩) | ಶ್ರೀ॥ ಬಿ. ವಿ. ರಾಮಯ್ಯಂಗಾರ್ರ್ಯರು, ಬೆಂಗಳೂರು | .. | ೫ |
| (೨೪) | ಡಾ॥ ಬಿ. ಅನಂತಸ್ವಾಮಿರಾಯರು, ಬಿ.ಎಸ್‌ಸಿ., ಎಂ.ಬಿ., ಬಿ.ಎಸ್., ಬೆಂಗಳೂರು .. | .. | ೫ |
| (೨೫) | ಶ್ರೀ॥ ಎಚ್. ಶ್ರೀನಿವಾಸಮೂರ್ತಿಗಳು, ಎಂ.ಎ., ಎಲ್‌ಎಲ್.ಬಿ., ಬೆಂಗಳೂರು .. | .. | ೫ |
| (೨೬) | ,, ಪಿ. ಸುಬ್ಬರಾಮಶೆಟ್ಟರು, ಬೆಂಗಳೂರು | .. | ೫ |
| (೨೭) | ,, ಕೆ. ಎಸ್. ತಿರುಪತಿಯವರು, ಬೆಂಗಳೂರು | .. | ೫ |
| (೨೮) | ಪ್ರೊ॥ ಎಲ್. ರಾಮರಾಯರು, ಎಂ.ಎ., ಎಫ್.ಜಿ ಎಸ್., ಬೆಂಗಳೂರು .. | .. | ೫ |
| (೨೯) | ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ., ಬೆಂಗಳೂರು .. | .. | ೫ |
| (೩೦) | ,, ವಿ ವೆಂಕಟಾಚಾರ್ಯರು, ಎಂ.ಎ., ಬಿ.ಕಾಂ., ಬೆಂಗಳೂರು .. . | .. | ೫ |
| (೩೧) | ,, ಬಿ. ಟಿ. ಕೇಶವಯ್ಯಂಗಾರ್ಯರು, ಬಿ.ಎ., ಬೆಂಗಳೂರು .. .. | .. | ೫ |
| (೩೨) | ,, ಬಿ. ವಿ. ವಿಠಲಮೂರ್ತಿಗಳು, ಬಿ.ಎಸ್‌ಸಿ., ಬೆಂಗಳೂರು .. .. | .. | ೫ |
| (೩೩) | ,, ಎಚ್. ವಿ. ಕೃಷ್ಣಯ್ಯನವರು, ಎಂ.ಎ., ಬೆಂಗಳೂರು | | ೫ |
| (೩೪) | ,, ಪಂಜೆ ಮಂಗೇಶರಾಯರು, ಬಿ.ಎ., ಎಲ್.ಟಿ., ಮಂಗಳೂರು .. | .. | ೫ |
| (೩೫) | ರಾಜಸೇವಾಸಕ್ತ ಶ್ರೀ॥ ಎಸ್. ಹಿರಿಯಣ್ಣಯ್ಯನವರು, ಎಂ.ಎ., ಬಿ.ಎಲ್., ಬೆಂಗಳೂರು | .. | ೫ |
| (೩೬) | ಶ್ರೀ॥ ಕೆ. ಗುರುದತ್ ಅವರು, ಬಿ.ಎ., ಬಿ.ಎಲ್., ಬೆಂಗಳೂರು | | ೫ |
| (೩೭) | ,, ಎಸ್. ಅಬ್ದುಲ್ ವಾಜಿದ್ ಅವರು, ಬಿ.ಎ., ಬೆಂಗಳೂರು .. | .. | ೫ |
| (೩೮) | ,, ಎಂ. ವರದರಾಜ ಅವರು, ಬೆಂಗಳೂರು | .. | ೫ |
| (೩೯) | ,, ಎಂ. ವಿ. ಗುಂಡೂರಾಯರು, ಬೆಂಗಳೂರು | .. | ೫ |
| (೪೦) | ,, ಟಿ. ರಾಮರಾಯರು, ಬೆಂಗಳೂರು | .. | ೫ |
| (೪೧) | ,, ವಿ. ವೇದವ್ಯಾಸಾಚಾರ್ಯರು, ಬಿ.ಎ., ಬೆಂಗಳೂರು | | ೫ |
| (೪೨) | ಶ್ರೀಮತಿ ಸುಭದ್ರಾಬಾಯಿಯವರು, ಬೆಂಗಳೂರು | .. | ೫ |
| (೪೩) | ಶ್ರೀ॥ ಕೆ. ಶ್ರೀನಿವಾಸನ್ ಅವರು, ಬೆಂಗಳೂರು | .. | ೫ |
| (೪೪) | ,, ಎ. ತಾಂದೋಣಿರಾಯರು, ಎಲ್.ಸಿ.ಇ., ಎಂ.ಐ.ಇ., ಬೆಂಗಳೂರು .. | .. | ೫ |
| (೪೫) | ,, ಬಿ. ವೆಂಕಟನಾರಾಯಣಪ್ಪನವರು, ಎಂ.ಎ., ಬೆಂಗಳೂರು .. | .. | ೫ |
| (೪೬) | ,, ಬಿ. ವಾಸುದೇವಮೂರ್ತಿಗಳು, ಬಿ.ಎ., ಎಲ್‌ಎಲ್.ಬಿ., ಬೆಂಗಳೂರು .. | .. | ೫ |
| | | | ೧,೦೦೨ |

| | | ರೂ. | ಆ. | ಪೈ |
|---|---|---|---|---|
| | [ಹಿಂದಿನಿಂದ ತೆಗೆದುಕೊಂಡು ಬಂದದ್ದು] | ೧,೦೦೨ | ೩ | ೦ |
| (೪೭) | ಶ್ರೀ॥ ಎ. ವಿ. ಕುರಡಿಯವರು, ಧಾರವಾಡ .. | ೫ | ೦ | ೦ |
| (೪೮) | ,, ಎ. ವೆಂಕಟೇಶಯ್ಯಂಗಾರ್ಯರು, ಬಿ.ಎ., ಬೆಂಗಳೂರು .. .. .. | ೪ | ೦ | ೦ |
| (೪೯) | ,, ಸಿ. ಸುಬ್ಬರಾಯರು, ಎಂ.ಎ.(ಆನರ್ಸ್), ಬೆಂಗಳೂರು | ೩ | ೦ | ೦ |
| (೫೦) | ಶ್ರೀಮತಿ ಡಿ. ಸಾಕಮ್ಮನವರು, ಬೆಂಗಳೂರು .. | ೩ | ೦ | ೦ |
| (೫೧) | ಡಾ॥ ಬಿ. ಸಂಜೀವರಾಯರು, ಎಂ.ಎ., ಪಿಎಚ್.ಡಿ., ಬೆಂಗಳೂರು .. .. | ೩ | ೦ | ೦ |
| (೫೨) | ಶ್ರೀ॥ ಬಿ. ಎ. ವೆಂಕಟರಾಮಯ್ಯನವರು, ಬೆಂಗಳೂರು .. | ೩ | ೦ | ೦ |
| (೫೩) | ,, ಎಂ. ಕೃಷ್ಣಮೂರ್ತಿಗಳು, ಎಂ.ಎ., ಎಲ್ಎಲ್.ಬಿ. ,, | ೩ | ೦ | ೦ |
| (೫೪) | ,, ಎಲ್. ಎಸ್. ರಾಜು ಅವರು, ಬಿ.ಎ., ಬಿ.ಎಲ್., ಬೆಂಗಳೂರು .. .. | ೩ | ೦ | ೦ |
| (೫೫) | ,, ಬಿ. ಸಂಜೀವರಾವ್, ಎಂ.ಎಸ್‌ಸಿ., ಬೆಂಗಳೂರು .. | ೩ | ೦ | ೦ |
| (೫೬) | ,, ಆಲಂಪಲ್ಲಿ ಆತ್ಮಾರಾಮಶೆಟ್ಟರು, ದೊಡ್ಡಬಳ್ಳಾಪುರ .. | ೩ | ೦ | ೦ |
| (೫೭) | ಶ್ರೀಮತಿ ಜಯಲಕ್ಷ್ಮಮ್ಮನವರು, ಬೆಂಗಳೂರು .. | ೩ | ೦ | ೦ |
| (೫೮) | ಶ್ರೀ॥ ಜಿ. ಪಿ. ರಾಜರತ್ನಂ ಅವರು, ಎಂ.ಎ., ಬೆಂಗಳೂರು | ೩ | ೦ | ೦ |
| (೫೯) | ,, ಎಲ್. ರಾಜಾರಾಯರು, ಬೆಂಗಳೂರು .. | ೨ | ೦ | ೦ |
| (೬೦) | ,, ವೈ. ವಿ. ಸುಬ್ರಹ್ಮಣ್ಯಂ ಅಂಡ್ ಬ್ರದರ್ಸ್, ಬೆಂಗಳೂರು | ೨ | ೦ | ೦ |
| (೬೧) | ,, ಪಿ. ಆರ್. ಜಗಪತಿ ನಾಯ್ಡು, ಎಂ.ಎಸ್‌ಸಿ., ಬೆಂಗಳೂರು | ೨ | ೦ | ೦ |
| (೬೨) | ,, ಬಿ. ಎಸ್. ಮಾಧವರಾಯರು, ಎಂ.ಎಸ್‌ಸಿ., ಬೆಂಗಳೂರು | ೨ | ೦ | ೦ |
| (೬೩) | ಶ್ರೀಮತಿ ಆರ್. ಎಸ್. ತಂಗಮ್ಮನವರು, ಬೆಂಗಳೂರು .. | ೨ | ೦ | ೦ |
| (೬೪) | ಶ್ರೀ॥ ಎ. ಜಿ. ಲಕ್ಷ್ಮೀನರಸಿಂಹಯ್ಯಂಗಾರ್ಯರು, ಬಿ.ಎ., ಬಿ.ಎಲ್., ಬೆಂಗಳೂರು .. .. | ೨ | ೦ | ೦ |
| (೬೫) | ,, ಎನ್. ಬಾಲಕೃಷ್ಣಯ್ಯನವರು, ಬಿ.ಎ., ಬಿ.ಎಲ್., ಬೆಂಗಳೂರು .. .. | ೨ | ೦ | ೦ |
| (೬೬) | ,, ವಿ. ರಾಮಕೃಷ್ಣಯ್ಯನವರು, ಬಿ.ಎ., ಬಿ.ಎಲ್., ದೊಡ್ಡಬಳ್ಳಾಪುರ .. .. | ೨ | ೦ | ೦ |
| (೬೭) | ,, ಎಂ. ಆರ್. ನರಸಿಂಹಯ್ಯಂಗಾರ್ಯರು, ಎಂ.ಎ., ಬೆಂಗಳೂರು .. .. | ೨ | ೦ | ೦ |
| (೬೮) | ಶ್ರೀಮತಿ ವಿ. ಅಮೃತಮ್ಮನವರು, ಬಿ.ಎ., ಎಲ್ಎಲ್.ಬಿ., ಬೆಂಗಳೂರು .. .. | ೨ | ೦ | ೦ |
| (೬೯) | ಶ್ರೀ॥ ಟಿ. ರಂಗಸ್ವಾಮಿಯವರು, ಬಿ.ಎ., ಬೆಂಗಳೂರು .. | ೨ | ೦ | ೦ |
| (೭೦) | ಶ್ರೀಮತಿ ಸೀತಮ್ಮನವರು, ಬೆಂಗಳೂರು .. | ೨ | ೦ | ೦ |
| (೭೧) | ಲೋಕಸೇವಾನಿರತ ಶ್ರೀ॥ ಡಿ. ಕೊಂಗಾಡಿಯಪ್ಪನವರು, ದೊಡ್ಡಬಳ್ಳಾಪುರ .. .. | ೨ | ೦ | ೦ |
| (೭೨) | ಶ್ರೀ॥ ಟಿ. ಎನ್. ಶ್ರೀಕಂಠಯ್ಯನವರು, ಎಂ.ಎ., ಮೈಸೂರು | ೨ | ೦ | ೦ |
| (೭೩) | ,, ಡಿ. ಎಲ್. ನರಸಿಂಹಾಚಾರ್ಯರು, ಎಂ.ಎ., ಮೈಸೂರು | ೨ | ೦ | ೦ |
| (೭೪) | ,, ಎಂ. ಕೆ. ತಿಪ್ಪಯ್ಯನವರು, ಬಿ.ಎ., ಬೆಂಗಳೂರು .. | ೨ | ೦ | ೦ |
| (೭೫) | ,, ಟಿ. ಆರ್. ರಾಮರಾಯರು, ಬಿ.ಎ., ಹೈದರಾಬಾದು | ೨ | ೦ | ೦ |
| | | ೧,೦೭೫ | ೩ | ೦ |

| | | ರೂ. |
|---|---|---|
| | [ಹಿಂದಿನಿಂದ ತೆಗೆದುಕೊಂಡು ಬಂದದ್ದು] | ೧,೦೭೫ |
| (೭೫) | ಶ್ರೀಮತಿ ಎಸ್. ನಂಜಮ್ಮನವರು, ಬಿ.ಎ., ಎಲ್.ಟಿ., ಬೆಂಗಳೂರು .. .. | ೩ |
| (೭೬) | ಶ್ರೀ॥ ಎಂ. ಮುದ್ದುಕೃಷ್ಣಪ್ಪನವರು, ಬೆಂಗಳೂರು .. | ೧ |
| (೭೭) | ,, ಜಿ. ಚನ್ನರಾಯ ರೆಡ್ಡಿಯವರು, ಬಿ.ಎ., ಬಿ.ಎಲ್. | ೧ |
| (೭೮) | ,, ಎಸ್. ಜಿ. ನರಸಿಂಹಯ್ಯನವರು, ಬಿ.ಎ , ಬೆಂಗಳೂರು | ೧ |
| (೭೯) | ,, ಸಿ. ಜಿ. ರಾಮಯ್ಯನವರು, ಬಿ.ಎ., ಬೆಂಗಳೂರು .. | ೧ |
| (೮೦) | ,, ಬಿ. ಎಚ್. ಕೃಷ್ಣ ಅವರು, ಬೆಂಗಳೂರು .. | ೧ |
| (೮೧) | ,, ಶಾಮಣ್ಣನವರು, ಬೆಂಗಳೂರು .. .. | ೧ |
| (೮೨) | ,, ಎಸ್. ರಾಘವಾಚಾರ್ಯರು, ಎಂ.ಎ., ಬೆಂಗಳೂರು | ೧ |
| (೮೩) | ,, ಡಿ. ರಂಗಸ್ವಾಮಯ್ಯಂಗಾರ್ಯರು, ಬಿ.ಎ., ಬೆಂಗಳೂರು | ೧ |
| (೮೪) | ,, ಎಸ್. ಶ್ರೀಕಂಠಯ್ಯನವರು, ಬೆಂಗಳೂರು .. | ೧ |
| (೮೫) | ,, ಎಂ. ಎಸ್. ರಾಮರಾಯರು, ಬೆಂಗಳೂರು .. | ೧ |
| (೮೬) | ,, ವೆಂಕಟಾದ್ರಿ ಪಂಡಿತರು, ಬೆಂಗಳೂರು .. | ೧ |
| IV. | 'ಮಹಿಳೆಯರ ಸಭೆ' ನಡೆದ ದಿನ ಮಹಿಳೆಯರು ಕೂಡಿಸಿ ಕೊಟ್ಟದ್ದು .. .. | ೧೬ |
| | ಒಟ್ಟು .. | ೧,೧೦೫ |

# ನಾಲ್ಕನೆಯ ವಿಶೇಷ ಸಾಹಿತ್ಯೋತ್ಸವ

## ಬೆಂಗಳೂರು, ಮೇ ೧೯೩೭

---

## ಉಪಾಧ್ಯಕ್ಷರ ಸ್ವಾಗತ ಭಾಷಣ

ಮಹಾಶಯರೆ, ತಮ್ಮಗಳನ್ನು ಈ ದಿನ ಬರಮಾಡಿಕೊಂಡು ನಾಲ್ಕನೆಯ ವರ್ಷದ ವಿಶೇಷ ಸಾಹಿತ್ಯೋತ್ಸವವನ್ನು ಪ್ರಾರಂಭಗೊಳಿಸುವ ಸುಯೋಗ ದೊರೆತಿರುವುದು ಪರಿಷತ್ತಿಗೆ ಅತ್ಯಂತ ಉಲ್ಲಾಸದ ಸಂಗತಿಯಾಗಿದೆ. ಪರಿಷತ್ತಿನ ಆಹ್ವಾನಕ್ಕೆ ತಾವುಗಳೆಲ್ಲ ಮನ್ನಣೆಕೊಟ್ಟು ಈ ಸಮಾರಂಭದಲ್ಲಿ ಸಹಕರಿಸಲು ನೆರವಾಗಿ ಬಂದಿರುವುದಕ್ಕಾಗಿ ಪರಿಷತ್ತಿನ ಕೃತಜ್ಞತೆಯನ್ನು ತಮ್ಮಲ್ಲಿ ಸಮರ್ಪಿಸಲು ಅಪ್ಪಣೆ ಬೇಡುತ್ತೇನೆ. ಪರಸ್ಥಳಗಳಿಂದ ಬಂದಿರುವ ನಮ್ಮ ಅತಿಥಿಗಳ ಅನುಕೂಲಕ್ಕಾಗಿಯೂ ತಮ್ಮೆಲ್ಲರ ಸಂತೋಷಕ್ಕಾಗಿಯೂ ನಾವು ಮಾಡಿರುವ ಏರ್ಪಾಟುಗಳಲ್ಲಿರುವ ಕೊರತೆಗಳನ್ನು ನಿಮ್ಮಗಳ ಸ್ನೇಹ ವಿಶ್ವಾಸಗಳು ಪರಿಪೂರ್ಣಗೊಳಿಸಿಯಾವೆಂದು ನಾವು ಕೋರಿ ನಿರೀಕ್ಷಿಸಿಕೊಂಡಿದ್ದೇವೆ.

ಈ ಹೊತ್ತು ಪ್ರಾರಂಭವಾಗಬೇಕಾಗಿರತಕ್ಕ ಉತ್ಸವ ಈ ಪರಿಷತ್ತಿನಲ್ಲಿ ಕಳೆದ ಮೂರು ವರ್ಷಗಳಿಂದ ನಡೆದುಕೊಂಡು ಬಂದಿದೆ. ಮೊದಲನೆಯ ಸಾರಿ ಅದನ್ನು ನಮ್ಮ ಸಂಸ್ಥಾನದ ದಿವಾನರವರೂ, ಪರಿಷತ್ತಿನ ಸಹಾಯಕರೂ ಆದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ.ಸಿ.ಐ.ಇ., ಅವರು ತಾ॥ ೬–೫–೧೯೩೪ರಲ್ಲಿ ಪ್ರಾರಂಭಗೊಳಿಸಿ ನಮ್ಮ ಸಮಾರಂಭವನ್ನು ಆಶೀರ್ವದಿಸಿದರು. ತಾ॥ ೨೫–೪–೧೯೩೫ರಲ್ಲಿ ನಮ್ಮ ಶ್ರೀಮನ್ಮಹಾರಾಜರವರ ಸಚಿವರಾದ ರಾಜಮಂತ್ರಪ್ರವೀಣ ಎಸ್. ಪಿ. ರಾಜಗೋಪಾಲಾಚಾರಿ, ಬಿ.ಎ., ಬಿ.ಎಲ್., ಅವರು ಎರಡನೆಯ ಸಲದ ಉತ್ಸವವನ್ನು ಉಪಕ್ರಮಗೊಳಿಸಿದರು. ಕನ್ನಡಿಗರಿಗೆ ಅತ್ಯಂತ ಮಾನ್ಯರೂ ಪ್ರಿಯರೂ ಆಗಿರುವ ರಾಜಸಭಾಭೂಷಣ ದಿವಾನ್ ಬಹದ್ದೂರ್ ಸರ್ ಕೆ. ಪಿ. ಪುಟ್ಟಣ್ಣಶೆಟ್ಟಿ, ಕೆಟಿ., ಸಿ.ಐ.ಇ., ಎಲ್ಎಲ್.ಡಿ., ಅವರು ಕಳೆದ ವರ್ಷ, ತಾ॥ ೬–೫–೧೯೩೬ರಲ್ಲಿ, ಈ ಉತ್ಸವವನ್ನು ಪ್ರಾರಂಭಗೊಳಿಸಿದರು. ಹೀಗೆ ಬೆಳೆದುಕೊಂಡುಬಂದ ಈ ಉತ್ಸವವನ್ನು ಈ ಸಲ ನಮ್ಮ ಶ್ರೀಮನ್ಮಹಾರಾಜರವರ ಸಚಿವರಾದ ರಾಜಮಂತ್ರಪ್ರವೀಣ ಶ್ರೀಮಾನ್ ಎನ್. ಮಾಧವರಾಯರವರು ಪ್ರಾರಂಭಮಾಡಲು ಇಲ್ಲಿಗೆ ದಯಮಾಡಿ ಬಂದಿರುವುದು ನಮ್ಮ ಭಾಗ್ಯವೆಂದು ನಾನು ತಿಳಿದುಕೊಂಡಿದ್ದೇನೆ. ಮೇಧಾಶಕ್ತಿಯಿಂದಲೂ, ಕಾರ್ಯವಿಚಕ್ಷಣೆಯಿಂದಲೂ ಶ್ರೀಮನ್ಮಹಾರಾಜರವರ ಆದರಣೆಗೂ, ಅವರ ಪ್ರಜೆಗಳ ವಿಶ್ವಾಸಕ್ಕೂ ಪಾತ್ರರಾಗಿರುವ ಇಂಥ ಮಹನೀಯರು ಪರಿಷತ್ತಿನ ಸಮಾರಂಭದಲ್ಲಿ ಮಿಳಿತರಾಗಿ ನಮಗೆ ಪ್ರೋತ್ಸಾಹವನ್ನೂ, ಹಿತಸೂಚನೆಗಳನ್ನೂ ಕೊಡಲು ದಯಮಾಡಿಸಿರುವುದು ನಮಗೆ ಅತ್ಯಂತ ಗೌರವಕರವಾಗಿದೆ.

ಈ ಮಹನೀಯರಿಂದ ಪರಿಷತ್ತಿಗೆ ಆಗಬಹುದಾದ ಉಪಕಾರಗಳು ಅನೇಕ. ಅವುಗಳಲ್ಲಿ ಮೊತ್ತ ಮೊದಲನೆಯದು ಯಾವುದೆಂದರೆ, ಇಂಥವರ ಸಂಪರ್ಕ ಈ ಸಂಸ್ಥೆಗೆ ಬರುವ ಗೌರವ. ಪರಿಷತ್ತಿಗೆ ಇಂಥ ಗೌರವ ಬಹು ಅವಶ್ಯ. ಶ್ರೀಮಾನ್ ಮಾಧವರಾಯರವರು ಈ ಸಂಸ್ಥೆಗೆ ದಯಮಾಡಿಸಿರುವುದು ಮೊದಲನೆಯ ಸಾರಿ. ಅವರಿಗೆ ತಮ್ಮೆಲ್ಲರ ಪರವಾಗಿ ಸ್ವಾಗತವನ್ನು ನೀಡಲು ಬೇಡುತ್ತೇನೆ. ಹೀಗೆ ಈ ಸುಮುಹೂರ್ತದಲ್ಲಿ ಪ್ರಾರಂಭವಾಗಿರುವ ಅವರ ಸ್ನೇ ಸಂತತವಾಗಿ ಬೆಳೆದು ಪರಿಷತ್ತಿಗೆ ಉಪಕಾರಕವಾಗಲೆಂದು ಹಾರೈಸಿ ಶ್ರೀಮಾನ್ ಮಾಧವರಾಯರವರು ಪದೇ ಪದೇ ಇಲ್ಲಿಗೆ ದಯಮಾಡಿ, ಇಲ್ಲಿ ತ್ತಿರುವ ಪ್ರಯತ್ನಗಳನ್ನು ಪರಾಂಬರಿಕೆಗೆ ತಂದುಕೊಂಡು, ವಾತ್ಸಲ್ಯ ಹಿತ ಗಳಿಂದ ಈ ಸಂಸ್ಥೆಯನ್ನು ಪಾಲಿಸಿಕೊಂಡು ಬರಬೇಕೆಂದು ಬೇಡುತ್ತೇನೆ.

ಪರಿಷತ್ತು ಸ್ಥಾಪನೆಯಾಗಿ ಇಂದಿಗೆ ಸರಿಯಾಗಿ ೨೨ ವರ್ಷಗಳು ಮುಗಿ ಈ ಸಂಸ್ಥೆಯ ಉದ್ದೇಶವನ್ನು ಒಂದು ವಾಕ್ಯದಲ್ಲಿ ಹೇಳಬೇಕಾದರೆ ಅದು " ವನ್ನು ಈಗಿನ ಪ್ರಪಂಚದ ಭಾಷೆಯನ್ನಾಗಿ ಮಾಡುವುದು " ಎಂದು ಹೇಳ ಈ ಸಂಸ್ಥೆ ಸ್ಥಾಪನೆಯಾದದ್ದು ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ರಾಗಿದ್ದ ಕಾಲದಲ್ಲಿ, ಮತ್ತು ಅವರ ಪ್ರೇರಣೆ ಪ್ರೋತ್ಸಾಹಗಳ ಬಲದಿಂದ. ಇದ ಈ ಸಂಸ್ಥೆಯ ಆಶಯವೆಂತಹುದೆಂಬುದನ್ನು ತಾವುಗಳು ಊಹಿಸಬಹು ಕನ್ನಡವನ್ನು ಕ್ರಿ. ಶ. ೧೫–೧೬ನೆಯ ಶತಮಾನಗಳ ಸ್ಥಿತಿಯಿಂದ ಕ್ರಿ. ಶ. ೨೦-ನೆ ಶತಮಾನಗಳ ಪರಿಸ್ಥಿತಿಗೆ ಎತ್ತಬೇಕಾಗಿದೆ. ನಮ್ಮ ಭಾಷೆಗೂ, ಅದರ ಜನದ ಮನಸ್ಸಿಗೂ ನವೀನತೆಯನ್ನು ಉಂಟುಮಾಡಿ ದೇಶದ ಪುನರುಜ್ಜೀ ಸಾಧಕವಾಗುವುದೇ ಈ ಪರಿಷತ್ತಿನ ಉದ್ದೇಶ.

## ಆಧುನಿಕ ವಿಚಾರೋಪನ್ಯಾಸಗಳು

ಇದಕ್ಕಾಗಿ ಪರಿಷತ್ತು ನಾನಾ ತೆರಗಳಲ್ಲಿ ಕೆಲಸಮಾಡುತ್ತ ಬಂದಿದೆ. ಮಹಾಪೋಷಕರಾದ ಶ್ರೀಮನ್ಮಹಾರಾಜರವರ ಔದಾರ್ಯದಿಂದಲೂ, ಪೋಷಕರೂ ಅಧ್ಯಕ್ಷರೂ ಆಗಿರುವ ಶ್ರೀಮದ್ಯುವರಾಜರವರ ಕೃಪೆ ದಿಂದಲೂ ಮತ್ತು ಅವರ ಸರಕಾರದ ಆಶ್ರಯದಿಂದಲೂ ಸಿದ್ಧವಾಗಿರುವ ಭವನಕ್ಕೆ ಪರಿಷತ್ತು ಬಂದಾಗಿನಿಂದ ಅದರ ಕಾರ್ಯಗಳು ಅಭಿವೃದ್ಧಿಯಾಗಲು ಅನುಕೂಲವಾಗಿದೆ. ಈ ರೀತಿ ಆಗಿರುವ ಅಭಿವೃದ್ಧಿಯಲ್ಲಿ ಮುಖ್ಯ ಈ ವಿಶೇಷ ಸಾಹಿತ್ಯೋತ್ಸವ. ಇದರ ಅಂಗಗಳು ಮೊದಲು ೩–೪ ಆಗಿ ವಾದುವು. ಈಗ ಈ ವರ್ಷ ೮–೯ ಆಗಿವೆ. ಅವುಗಳಲ್ಲಿ ಮೊದಲನೆಯದು ವಿಚಾರೋಪನ್ಯಾಸಗಳು. ಈ ವರ್ಷ ಇಂಥ ಉಪನ್ಯಾಸಗಳು ೧೫ ನಡೆಯುವು ಉಪನ್ಯಾಸ ವಿಷಯಗಳಲ್ಲಿ ಪ್ರಕೃತಿ ವಿಜ್ಞಾನ, ಸಮಾಜ ವಿಜ್ಞಾನಗಳಿಗೆ ಪಟ್ಟುವೇ ಹೆಚ್ಚಾಗಿವೆ. ವಿಜ್ಞಾನ ವಿಚಾರಕ್ಕೆ ಪ್ರತ್ಯಕ್ಷವಾಗಿ ಸಂಬಂಧಪಡ ಸಾಹಿತ್ಯ, ಇತಿಹಾಸ ಮುಂತಾದ ವಿಷಯಗಳನ್ನು ಕುರಿತ ಉಪನ್ಯಾಸ

ವೈಜ್ಞಾನಿಕ ದೃಷ್ಟಿಯನ್ನೂ ವೈಜ್ಞಾನಿಕ ಮಾರ್ಗವನ್ನೂ ಪ್ರದರ್ಶನ ಮಾಡತಕ್ಕವುಗಳಾಗಿರಬೇಕೆಂಬುದು ಪರಿಷತ್ತಿನ ತಾತ್ಪರ್ಯ. ಈ ಉಪನ್ಯಾಸಗಳಿಂದ ನಾವು ನಿರೀಕ್ಷಿಸುವ ಪ್ರತಿಫಲಗಳು ಸ್ಥೂಲವಾಗಿ ನಾಲ್ಕು ಬಗೆಯವು ಎಂದು ಎಣಿಸಬಹುದು. ಮೊದಲನೆಯದು, ಉಪನ್ಯಾಸ ಮಾಲಿಕೆಯ ಹೆಸರಿನಿಂದಲೇ ವ್ಯಕ್ತಪಡುವಂತೆ, ಪ್ರಕೃತ ಲೋಕಸ್ಥಿತಿಯ ಜ್ಞಾನವನ್ನು ನಮ್ಮ ಜನರಿಗೆ ಉಂಟುಮಾಡಿಕೊಡುವುದು. ಈಗಿನ ಪ್ರಪಂಚವು ಬದುಕುತ್ತಿರುವ ರೀತಿ ಯಾವುದು, ಅದರ ಮನಸ್ಸನ್ನು ಹಿಡಿದಿರುವ ಆಕಾಂಕ್ಷೆಗಳೂ ಆಲೋಚನೆಗಳೂ ಎಂಥವು, ಅದನ್ನು ಚಿಂತೆಗೀಡಾಗಿಸಿರುವ ಸಮಸ್ಯೆಗಳು ಎಂಥವು—ಎಂಬೀ ಜಗಜ್ಜೀವನದ ಮೂಲಾಂಶಗಳನ್ನು ನಮ್ಮ ಜನರಿಗೆ ಪರಿಚಯ ಮಾಡಿಸಿಕೊಡುವುದೇ ಈ ಉಪನ್ಯಾಸಗಳ ಆಶಯ. ವಿಸ್ತಾರವಾದ ಪ್ರಪಂಚವು ವಿಜ್ಞಾನದ ಪ್ರಭಾವದಿಂದ ಸಂಕೋಚವಾಗುತ್ತಿದೆ. ದೇಶ ವಿದೇಶಗಳಿಗಿರುವ ದೂರಗಳು ಕಡಮೆಯಾಗುತ್ತಿವೆ. ಏರೋಪ್ಲೇನ್, ರೇಡಿಯೋ ಮೊದಲಾದವುಗಳ ಪ್ರಭಾವದಿಂದ ಯೂರೋಪ್ ಅಮೆರಿಕಗಳ ಜೀವನಶಕ್ತಿಗಳು ದಿನ ಅರೆದಿನಗಳಲ್ಲಿ ಇಂಡಿಯವನ್ನು ಮುಟ್ಟುತ್ತಿವೆ. ಎಲ್ಲ ದೇಶಗಳೂ ಒಂದೇ ದೇಶವೆಂಬಂತೆ ಆಗುತ್ತಿವೆ. ಇದುವರೆಗೂ ಮದರಾಸಿನ ಬಳಿ ಬಂಗಾಳಾ ಸಮುದ್ರದಮೇಲೆ ಬಿರುಗಾಳಿ ಬೀಸಿ ಅಲೆಗಳು ಎದ್ದರೆ, ಬೆಂಗಳೂರಿನಲ್ಲಿ ಮೋಡ ಕವಿದು ಮಳೆ ಬರುವುದು ಸ್ವಾಭಾವಿಕವಾಗಿತ್ತು. ಈಗ ನ್ಯೂಯಾರ್ಕ್ ಪಟ್ಟಣದಲ್ಲಿ ಯಾವುದೋ ಬ್ಯಾಂಕು ದಿವಾಳಿ ಎದ್ದರೆ ಬೆಂಗಳೂರು ಪಟ್ಟಣದಲ್ಲಿರುವ ವರ್ತಕರಿಗೆ ಮನಸ್ಸು ತಲ್ಲಣಗೊಳ್ಳುವಂತೆ ಆಗುತ್ತದೆ. ಹೀಗೆ ದೇಶ ವಿದೇಶಗಳ ಜೀವನ ಸಾಮೀಪ್ಯವು ಹೆಚ್ಚುತ್ತಿರುವ ಕಾಲದಲ್ಲಿ ತಾನೇ ಬೇರೆಯಾಗಿ ಉಳಿದುಕೊಂಡಿರಲು ಯಾವ ಜನಾಂಗಕ್ಕೂ ಆಗಲಾರದು. ಸಮಸ್ತ ಪ್ರಪಂಚದೊಡನೆ ಬೆರೆತು ಬಾಳುವುದು ಎಲ್ಲ ಜನಾಂಗಗಳಿಗೂ ಈಗ ಅನಿವಾರ್ಯವಾಗಿ ಬಂದಿದೆ. "ಕಲೆಯಬೇಕು, ಕಲೆತು ಉಳಿಯಬೇಕು"—ಇದೇ ಈಗಿನ ಜನಾಂಗಗಳಿಗೆ ಧರ್ಮವಾಗಿದೆ. ಈ ಧರ್ಮವನ್ನು ನಾವು ಅನುಸರಿಸಬೇಕಾದರೆ ನಮ್ಮ ಮನಸ್ಸು ಬುದ್ಧಿಗಳು ವೇದ ಪುರಾಣಗಳಮೇಲೆ ಮಾತ್ರ ನೆಲಸಿದ್ದರೆ ಸಾಲದು. ಅದನ್ನು ಫಿಸಿಕ್ಸ್ ಕೆಮಿಸ್ಟ್ರಿಗಳ ಕಡೆಗೂ, ಪಾಲಿಟಿಕ್ಸ್ ಎಕನಾಮಿಕ್ಸ್‌ಗಳ ಕಡೆಗೂ ತಿರುಗಿಸಿ, ಪ್ರಾಚೀನವಾದದ್ದನ್ನು ನಾವು ಸ್ವಾಧೀನಪಡಿಸಿಕೊಂಡು ಇರುವಂತೆ ನವೀನವಾದದ್ದನ್ನೂ ಸ್ವಾಧೀನಕ್ಕೆ ತಂದುಕೊಳ್ಳಬೇಕು. ನಮ್ಮ ಕಾಲದಲ್ಲಿ ಅಬಿಸೀನಿಯ ದೇಶದ ದೃಷ್ಟಾಂತವು ನಮಗೆ ಎಚ್ಚರಿಕೆಯಾಗಿರುತ್ತದೆ. ಅಬಿಸೀನಿಯಾ ಜನರಲ್ಲಿ ದೇಶಾಭಿಮಾನಕ್ಕೆ ಕಡಮೆ ಇರಲಿಲ್ಲ, ಉತ್ಸಾಹಕ್ಕೆ ಕೊರತೆ ಇರಲಿಲ್ಲ, ಧೈರ್ಯ ಪರಾಕ್ರಮಗಳಿಗೆ ಕುಂದಿರಲಿಲ್ಲ, ಸ್ವಾತಂತ್ರ್ಯಪ್ರಿಯತೆಗೆ ಲೋಪವಿರಲಿಲ್ಲ. ತಲೆ ಎತ್ತಿ ನಿಂತು ಶತ್ರುವನ್ನಿದಿರಿಸಲು ಇರಬೇಕಾಗಿದ್ದ ನೀತಿ ಗುಣ ಸಂಪತ್ತೆಲ್ಲವೂ ಅಬಿಸೀನಿಯಾ ದೇಶಕ್ಕೆ ಯಥೇಷ್ಟವಾಗಿತ್ತು. ಅದಕ್ಕೆ ಇಲ್ಲದೆಹೋದದ್ದು ವಿಜ್ಞಾನದ ಬಲ. ವಿಜ್ಞಾನಸಿದ್ಧವಾದ ಯಂತ್ರೋಪಕರಣಗಳೂ, ಅದಕ್ಕಿಂತ ಹೆಚ್ಚಾಗಿ ವೈಜ್ಞಾನಿಕ ಸಂಸ್ಕಾರದಿಂದ ಉಂಟಾಗತಕ್ಕ ಕಾರ್ಯಯೋಗ್ಯತೆಯೂ ವ್ಯೂಹಶಿಕ್ಷೆಯೂ

ಅಬಿಸೀನಿಯಾದವರಲ್ಲಿಲ್ಲದಿದ್ದ ಕಾರಣ, ಆ ದೇಶವು ಇಟಲಿಯ ಹ ತಲೆಬಾಗಿಸಬೇಕಾಯಿತು. ಹೀಗೆ ಪ್ರಪಂಚ ಜೀವನದಲ್ಲಿ ಪರನು ಪ್ರಧಾ ಯಾದದ್ದು ವಿಜ್ಞಾನ ಮತ್ತು ಅದರ ಅಂಗವಾದ ಲೋಕ ಪರಿಜ್ಞಾನ. ಈ ಲೋಕ ಪರಿಜ್ಞಾನಗಳನ್ನು ಕನ್ನಡಿಗರಿಗೆ ಒದಗಿಸುವುದು ನಮ್ಮ ಉಪನ್ಯಾ ಮೊದಲನೆಯ ಫಲ.

ಎರಡನೆಯದಾಗಿ, ಈ ನಾನಾ ವಿಜ್ಞಾನ ವಿಷಯಗಳನ್ನು ಕುರಿತು ಆಯಾ ಗಳಿಗೆ ಅಧಿಕಾರಿಗಳಾಗಿರುವವರು ಮಾತನಾಡುವುದರಿಂದ, ಕನ್ನಡ ಭಾಷೆ ಶಾಸ್ತ್ರಗಳಿಗೆ ಪಳಗಿ, ವಿಜ್ಞಾನಾಂಶ ನಿರೂಪಣೆಗೆ ಅದರ ಸೌಲಭ್ಯ ಹೆಚ್ಚಾ ಈ ಸಂದರ್ಭದಲ್ಲಿ, ಪರಿಷತ್ತು ಈ ಭಾಗದಲ್ಲಿ ನಡಸಿರುವ ಪ್ರಯೋಗ ಪರ ತೃಪ್ತಿಕರವಾಗಿ ತೋರಿವೆಯೆಂದು ಹೇಳಲು ಸಂತೋಷವಾಗುತ್ತದೆ. ನಮ್ಮ ನಾಡಿನ ವೈಜ್ಞಾನಿಕರಲ್ಲಿ ಅತ್ಯಂತ ಪ್ರಸಿದ್ಧರಾಗಿರುವ ರಾವ್ ಬಹದ್ದೂರ್ ಪ್ರೊ ಬಿ. ವೆಂಕಟೇಶಾಚಾರ್ಯರೇ ಮೊದಲಾಗಿ ಅನೇಕ ಮಂದಿ ಪ್ರಸಿದ್ಧ ವಿಜ್ಞಾನಿ ಗಳು ಈ ಸಭಾಮಂದಿರದಲ್ಲಿ ಕನ್ನಡ ಭಾಷೆಯಲ್ಲಿ ನಾನಾ ಶಾಸ್ತ್ರವಿಚಾ ಕುರಿತು ಉಪನ್ಯಾಸಮಾಡಿ, ಬಹು ಗಹನಗಳೂ ಜಟಿಲಗಳೂ ಆದ ತತ್ತ್ವ ಸುಲಭವಾದ ರೀತಿಯಲ್ಲಿ ಜನರಿಗೆ ಬೋಧನೆಮಾಡುವುದು ಸಾಧ್ಯವೆ ತೋರಿಸಿಕೊಟ್ಟಿದ್ದಾರೆ. ವಿಷಯವು ಸ್ವಾಧೀನವಾಗಿರುವವರಿಗೆ ಮಾತು ಒದಗಿಬರುತ್ತದೆಂಬುದು ಅವರ ಉಪನ್ಯಾಸಗಳಿಂದ ಸ್ಪಷ್ಟಪಟ್ಟಿದೆ. ಇಂ ರೂಢಿಯಲ್ಲಿರುವ ಪ್ರತಿಯೊಂದು ಪಾರಿಭಾಷಿಕ ಪದಕ್ಕೂ ತಕ್ಕ ಪಾರಿಭಾ ವೊಂದು ಕನ್ನಡದಲ್ಲಿ ಸಿದ್ಧವಾಗಿದೆ ಎಂದು ನಾನು ಹೇಳುತ್ತಿಲ್ಲ. ಹೀಗೆ ಹೊ ಭಾಷಿಕ ಶಬ್ದಗಳ ರಾಶಿಯೊಂದನ್ನು ಕನ್ನಡದಲ್ಲಿ ಸೃಷ್ಟಿಮಾಡಬೇಕೆಂಬ ಯೋ ಮನಸ್ಸಿಗೆ ಯಾವಾಗಲೂ ಸರಿ ಎಂದು ತೋರಿಲ್ಲ. ಪಾರಿಭಾಷಿಕ ಶಬ್ದಗಳು ಭಾಷೆಯಲ್ಲಿದ್ದರೂ ಅವು ಇತರ ಭಾಷೆಗಳಿಗೆ ಅಂಕಿತ ನಾಮಗಳಂತೆ (Proper N ಯಥಾವತ್ತಾಗಿ ಗ್ರಾಹ್ಯವಾಗಬೇಕಾದವು. ಇಂಗ್ಲಿಷಿನ ಜಾರ್ಜ್ ಅಥವಾ ಅಥವಾ ಲಂಡನ್ ಎಂಬ ಹೆಸರುಗಳು ಕನ್ನಡದಲ್ಲಿ ಬೇರೆಯಾಗಬೇಕಾದದ್ದಿಲ್ಲ. ದೇಶದ ರಾಮು, ಲಕ್ಷ್ಮಿ, ಬೆಂಗಳೂರು ಎಂಬ ಹೆಸರುಗಳು ಇಂಗ್ಲಿಷಿನಲ್ಲಿ ಬೇ ಬೇಕಾದದ್ದೂ ಇಲ್ಲ. ಇದೇ ರೀತಿಯಲ್ಲಿ, ಸಂಸ್ಕೃತದ ತರ್ಕ ಮೀಮಾಂ ಪ್ರಕೃತಿ, ಪುರುಷ, ಅಕ್ಷರ, ಧರ್ಮ, ಕರ್ಮ, ಜೀವ, ಬ್ರಹ್ಮ—ಇವೇ ಮೊ ಪಾರಿಭಾಷಿಕ ಶಬ್ದಗಳಿಗೆ ಕನ್ನಡದಲ್ಲಿ ಪರ್ಯಾಯಪದಗಳೇನೂ ಇಲ್ಲ; ನಲ್ಲಿಯೂ ಇಲ್ಲ; ಜರ್ಮನ್, ಫ್ರೆಂಚ್ ಮೊದಲಾದ ಇತರ ಭಾಷೆಗಳಲ್ಲಿಯೂ ಈ ಯೂರೋಪಿಯನ್ ಭಾಷೆಗಳು ಸಹ ನಮ್ಮ ಸಂಸ್ಕೃತ ಪಾರಿಭಾಷಿಕ ಶಬ್ದ ಇರುವುದನ್ನು ಇರುವಹಾಗೆಯೇ ಉಪಯೋಗಿಸಿಕೊಳ್ಳುತ್ತಿವೆ. ಅದೇ ನೀತಿ ಅನುಸರಿಸಿ ನಾವೂ ಇಂಗ್ಲಿಷಿನ ಆಕ್ಸಿಜನ್, ಹೈಡ್ರೋಜನ್, ಪ್ಲಾಟಿನಂ, ಮೊದಲಾದ ಮಾತುಗಳನ್ನು ಹಾಗೆಯೇ ತಂದುಕೊಂಡರೆ ಅದರಿಂದ ಯಾವ

ಆಗಲಾರದು. ಅಷ್ಟೇ ಅಲ್ಲದೆ, ಅವುಗಳಿಗೆ ನಾವು ಬೇರೆ ಮಾತುಗಳನ್ನು ಕಲ್ಪನೆ ಮಾಡುವುದರಿಂದ ಅಪಕಾರವಾದೀತೆಂದು ನನಗೆ ಭಯವುಂಟು. ಇಂಡಿಯಾ ದೇಶವೆಲ್ಲವೂ ಒಂದಾಗಬೇಕು, ಪ್ರಪಂಚವೆಲ್ಲವೂ ಒಂದಾಗಬೇಕು—ಎಂದು ಆಶಿಸುತ್ತಿರುವ ಈ ಕಾಲದಲ್ಲಿ ಈ ಪಾರಿಭಾಷಿಕ ಶಬ್ದಗಳ ವಿಷಯದಲ್ಲಿ ನಾವು ಬೇರೆ ಬೇರೆಯಾಗಬೇಕೆಂದು ಆಶಿಪಡುವುದು ಸಾರ್ಥಕವಾಗದ ಪ್ರಯತ್ನ ಮಾತ್ರವಲ್ಲದೆ, ಅನರ್ಥಕಾರಿಯಾದ ಪ್ರಯತ್ನವೂ ಆದೀತೆಂದು ನಾನು ತಿಳಿದುಕೊಂಡಿದ್ದೇನೆ. ಮಿಕ್ಕ ಪ್ರಪಂಚವೆಲ್ಲವೂ ಅಂಗೀಕರಿಸಿಕೊಂಡಿರುವ ಪರಿಭಾಷಾ ಸಾಮಗ್ರಿಯನ್ನು ನಾವು ಅವಲಂಬಿಸುವುದರಿಂದ ನನುಗೆ ವ್ಯವಹಾರ ಸೌಲಭ್ಯವು ಮತ್ತಷ್ಟು ಹೆಚ್ಚುವುದು. ರಸಾಯನ ಶಾಸ್ತ್ರವನ್ನು ಪಾಠಹೇಳುವಾಗ 'ನೀರು' ಎಂಬ ಮೂಲದ್ರವ್ಯದಲ್ಲಿ ಹೈಡ್ರೊಜಿನ್ ಎರಡು ಭಾಗಗಳೂ, ಆಕ್ಸಿಜೆನ್ ಒಂದು ಭಾಗವೂ ಸೇರಿರುತ್ತವೆ ಎಂದು ಹೇಳಿದರೆ, ಅದರಿಂದ ಕನ್ನಡದ ಪರಿಶುದ್ಧತೆಗಾಗಲಿ ಗೌರವಕ್ಕಾಗಲಿ ಕುಂದಾಗಲಾರದೆಂದು ನಾನು ಭಾವಿಸಿದ್ದೇನೆ. ಪರಿಷತ್ತಿನಲ್ಲಿ ವಿಜ್ಞಾನ ವಿಷಯಗಳನ್ನು ಕುರಿತು ಉಪನ್ಯಾಸಗಳನ್ನು ಕೊಡುವವರು ಅವಶ್ಯವಾದ ಕಡೆ ಅವಶ್ಯವಾದಷ್ಟು ಮಾತ್ರ ಪಾರಿಭಾಷಿಕ ಶಬ್ದಗಳನ್ನು ಇಂಗ್ಲಿಷ್ ಮೊದಲಾದ ಅನ್ಯಭಾಷೆಗಳಿಂದ ಇರುವುದನ್ನು ಇರುವಂತೆಯೇ ಉಪಯೋಗಿಸಬಹುದೆಂದು ಪರಿಷತ್ತು ಒಪ್ಪಿಕೊಂಡಿದೆ.

ಮೂರನೆಯದಾಗಿ, ಈ ಉಪನ್ಯಾಸಗಳನ್ನು ಕೇಳಬರುವವರಲ್ಲಿ ಬಹು ಮಂದಿ ಉಪಾಧ್ಯಾಯರಾಗಿರುವುದರಿಂದ ಈ ಉಪನ್ಯಾಸಗಳು ಅವರ ಮೂಲಕ ಅವರ ಶಿಷ್ಯ ಸಮುದಾಯಕ್ಕೆ ಸಹಾಯಕವಾಗಬಹುದೆಂದು ಪರಿಷತ್ತು ನಂಬಿಕೊಂಡಿದೆ. ನಮ್ಮ ಉಪಾಧ್ಯಾಯರಲ್ಲಿ ಬಹು ಮಂದಿ ಸಣ್ಣ ಸಣ್ಣ ಊರುಗಳಲ್ಲಿರತಕ್ಕವರಾಗಿರುತ್ತಾರೆ. ನಾನಾ ಶಾಸ್ತ್ರಕ್ಷೇತ್ರಗಳಲ್ಲಿ ಹೊಸ ಹೊಸದಾಗಿ ಆಗುತ್ತ ಇರುವ ಪರೀಕ್ಷೆಗಳೇನು? ಸಿದ್ಧಾಂತಗಳೇನು? ಎಂಬುದನ್ನು ಅವರು ತಾವು ತಾವೇ ತಿಳಿದುಕೊಳ್ಳಲು ಅವರಿಗೆ ಪುಸ್ತಕ ಪತ್ರಿಕೆಗಳ ಸೌಲಭ್ಯ ಹೆಚ್ಚಾಗಿರುವುದಿಲ್ಲ. ಹೀಗೆ ಅವರು ಬೋಧನೆ ಮಾಡುವ ಪಾಠಗಳ ವಿಷಯಗಳು ಬೇಗ ಹಳೆಯದಾಗುತ್ತವೆ. ಅವರ ಮನಸ್ಸು ಪ್ರಪಂಚಕ್ಕಿಂತ ಹಿಂದೆ ಉಳಿದಿರುತ್ತದೆ. ಈ ಕೊರತೆಯನ್ನು ನಮ್ಮ ಉಪನ್ಯಾಸಗಳು ಸ್ವಲ್ಪಮಟ್ಟಿಗಾದರೂ ಪರಿಹರಿಸಬೇಕೆಂಬುದು ನಮ್ಮ ಆಶೆ. ಈ ಭಾಗದಲ್ಲಿ ಪರಿಷತ್ತಿನ ಪ್ರಯತ್ನವು ಉಪಯುಕ್ತವಾದದ್ದೆಂಬುದನ್ನು ನಮ್ಮ ವಿದ್ಯಾಭ್ಯಾಸದ ಇಲಾಖೆಯ ಅಧಿಕಾರಿಗಳೂ ಒಪ್ಪಿಕೊಂಡು, ಅದಕ್ಕಾಗಿ ತಕ್ಕ ಅನುಕೂಲಗಳನ್ನು ನಮಗೆ ಒದಗಿಸುತ್ತಿದ್ದಾರೆಂದು ತಿಳಿಸಲು ಸಂತೋಷವಾಗುತ್ತದೆ.

ನಾಲ್ಕನೆಯದಾಗಿ, ಸಾಹಿತ್ಯಕ್ಕೂ ಜನಜೀವನಕ್ಕೂ ಇರತಕ್ಕ ಅಥವಾ ಇರಬೇಕಾದ ಅಭೇದ್ಯವಾದ ಸಂಬಂಧವನ್ನು ಪ್ರತ್ಯಕ್ಷಪಡಿಸಲು ಈ ಉಪನ್ಯಾಸಗಳು ಸಾಧಕವಾಗುತ್ತವೆ. ನಮ್ಮಲ್ಲಿ ಸಾಮಾನ್ಯವಾಗಿ ಸಾಹಿತ್ಯವೆಂದರೆ ಅದು ಒಂದು ಕೇವಲ ಪಂಡಿತ ವರ್ಗದ ಹವ್ಯಾಸವೆಂದು ಜನರಲ್ಲಿ ಭಾವನೆ ಹರಡಿದೆ. ಬೇರೆ ಕೆಲಸವಿಲ್ಲದವರು ಕಾಲಯಾಪನೆಗಾಗಿ, ಸಾಮಾನ್ಯ ಜನಕ್ಕೆ ಅರ್ಥವಾಗದ ಮಾತುಗಳಲ್ಲಿ

ಬುದ್ಧಿ ಚಮತ್ಕಾರವನ್ನು ತೋರಿಸುವುದು ಸಾಹಿತ್ಯ ಎಂದು ಬಹುಮಂದಿ ಕೊಂಡಿರುವಂತಿದೆ. ಪರಿಷತ್ತಿನ ಸಾಹಿತಿಗಳು ಸಾಹಿತ್ಯ ಪದಕ್ಕೆ ಆ ಭಾವವನ್ನು ತೆಗೆದುಹಾಕಿ ಒಂದು ವಿಶಾಲವಾದ ಅರ್ಥವನ್ನು ಕೊಡುವುದ ಜನಜೀವನಕ್ಕೆ ಸಂಬಂಧಪಟ್ಟ ಎಲ್ಲ ಪ್ರಯತ್ನಗಳೂ, ಎಲ್ಲ ಪ್ರಯೋಗಗಳ ವ್ಯಾಪಾರಗಳೂ ಸಾಹಿತ್ಯ ಕ್ಷೇತ್ರಕ್ಕೆ ಒಳಪಟ್ಟವುಗಳಾಗಿರುತ್ತವೆ. ಆದರ ಸಾಹಿತ್ಯಕ್ಕೆ ಹೊರಗಣದಲ್ಲ. ವ್ಯವಸಾಯ, ವ್ಯಾಪಾರ, ಸರಕಾರ ಮೊದಲ ವ್ಯಾಪಾರಗಳು ಹೇಗೋ ಹಾಗೆಯೇ ಸಾಹಿತ್ಯವೂ ದೇಶದ ಪ್ರತಿಯೊಬ್ಬ ಸಮರ್ಪಕವಾದ ಬದುಕಿಗೂ ಆವಶ್ಯಕವಾಗಿ ಇರಬೇಕಾದ ಒಂದು ಎಂಬುದನ್ನು ಜನರ ಮನಸ್ಸಿಗೆ ತಿಳಿಸಲು ಪರಿಷತ್ತು ಪ್ರಯತ್ನ ಮಾ ಆ ಪ್ರಯತ್ನಕ್ಕೂ ಈ ಉಪನ್ಯಾಸಗಳು ಸಾಧಕವಾಗಬಹುದು.

ಹೀಗೆ ಬಹುಮುಖವಾದ ಪ್ರಯೋಜನಗಳನ್ನು ದೃಷ್ಟಿಯಲ್ಲಿ ಏರ್ಪಡಿಸಿರುವುದೇ ಈ ಆಧುನಿಕ ವಿಚಾರೋಪನ್ಯಾಸಮಾಲೆ.

## ಸಹಕಾರಿ ಕಾರ್ಯಗಳು

ಮೇಲೆ ಹೇಳಿದ ವಿಶೇಷೋಪನ್ಯಾಸಗಳಿಗೆ ಅಂಗವಾಗಿ, ಬೆಂಗಳೂ ಮುತ್ತಲೂ ಇರುವ ಪ್ರಯೋಗಶಾಲೆ ಕಾರ್ಖಾನೆಗಳನ್ನು ನಮ್ಮ ಹೋಗಿ ನೋಡಿಕೊಂಡುಬರುವಂತೆ ಈ ವರ್ಷವೂ ಏರ್ಪಾಟು ಮಾಡಿದೆ. ನಮ್ಮ ಜೀವನವನ್ನು ಹೇಗೆ ಬದಲಾಯಿಸುತ್ತಿದೆ ಎಂಬುದನ್ನು ಆ ಯಂತ್ರ ಗಳ ನೋಟದಿಂದ ಸ್ವಲ್ಪಮಟ್ಟಿಗೆ ಎಲ್ಲರೂ ಮುಂದಟ್ಟುಮಾಡಿಕೊಳ್ಳಲಾ ಈ ಅನುಕೂಲವನ್ನು ಏರ್ಪಡಿಸಿಕೊಟ್ಟಿರುವ ವಿಜ್ಞಾನ ಕಾರ್ಯಾಲಯಗಳ ಗಳಿಗೆ ಪರಿಷತ್ತು ಅತ್ಯಂತ ಕೃತಜ್ಞತೆಯುಳ್ಳದ್ದಾಗಿದೆ.

ಮೈಸೂರು ಸಂಸ್ಥಾನದಲ್ಲಿ ಇಂಥಾ ವಿಜ್ಞಾನ ಕಾರ್ಯಶಾಲೆಗಳ ಬೆಳೆಯುತ್ತಾ ಇದೆ. ಚನ್ನಪಟ್ಟಣದಲ್ಲಿ ಹೊಸದಾಗಿ ಸ್ಥಾಪಿತವಾಗಿರುವ ಕಾರ್ಖಾನೆ, ಮಂಡ್ಯದ ಸಕ್ಕರೆಯ ಕಾರ್ಖಾನೆ, ಭದ್ರಾವತಿ ಬಳಿಯ ಕಾರ್ಖಾನೆ, ಸಿಮೆಂಟಿನ ಕಾರ್ಖಾನೆ, ಕಾಗದದ ಕಾರ್ಖಾನೆ — ಹೀಗೆ ಕಾರ್ಖಾನೆಗಳು ಸ್ಥಾಪಿತವಾಗಿವೆ. ಇವುಗಳನ್ನೆಲ್ಲ ನಮ್ಮ ಉಪಾಧ್ಯಾ ಹೋಗಿ ನೋಡಿಕೊಂಡು ಬಂದರೆ ಅವರಿಗೂ, ಅವರ ಶಿಷ್ಯರಿಗೂ, ದೇಶಕ್ಕೂ ಹೆಚ್ಚಿನ ಉಪಯೋಗವಾಗುವುದೆಂಬುದರಲ್ಲಿ ಸಂದೇಹವಿಲ್ಲ. ದವರು ಈ ಸೂಚನೆಯನ್ನು ತಮ್ಮ ದಯಾಪೂರಿತವಾದ ಗಮನಕ್ಕೆ ತಂದು ತಕ್ಕ ಸೌಲಭ್ಯಗಳನ್ನು ಒದಗಿಸಿಕೊಡಬೇಕೆಂದು ಬೇಡಿಕೊಳ್ಳುತ್ತೇನೆ.

## ಗ್ರಂಥ ಪ್ರದರ್ಶನ

ಈ ಸಾಹಿತ್ಯೋತ್ಸವದ ಮೂರನೆಯ ಅಂಗ ಗ್ರಂಥ ಪ್ರದರ್ಶನ ವರ್ಷಗಳಲ್ಲಿ ನಾನು ವಿಜ್ಞಾಪನೆ ಮಾಡಿರುವಂತೆ, ಈ ಪ್ರದರ್ಶನದ ಉದ್ದೇಶ

ಸಾಹಿತ್ಯದ ಬೆಳವಣಿಗೆಯ ರೀತಿಯನ್ನು ಸಾಕ್ಷಾತ್ತಾಗಿ ತೋರಿಸಿಕೊಡುವುದು. ಕಳೆದ ೧೫ ತಿಂಗಳುಗಳಲ್ಲಿ ಒಟ್ಟಿಗೆ ಕನ್ನಡ ಗ್ರಂಥಗಳು ಸುಮಾರು ೨೯೫, ಎಂದರೆ ತಿಂಗಳಿಗೆ ೨೦ರಂತೆ ಪ್ರಕಟವಾಗಿವೆ ಎಂದು ತಿಳಿದುಬಂದಿದೆ. ಹೋದ ವರ್ಷದ ಸಂಖ್ಯೆ ೧೭೩. ಈ ವರ್ಷದ ಪುಸ್ತಕಗಳ ಪೈಕಿ ಸುಮಾರು ೧೭೭ ಗ್ರಂಥಗಳನ್ನು ಈ ದಿವಸ ಈ ಕಟ್ಟಡದ ಎದುರಿಗಿರುವ ಶ್ರೀ ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆಯ ಸಭಾ ಮಂಟಪದಲ್ಲಿರುವ ಪ್ರದರ್ಶನದಲ್ಲಿ ಕಾಣಬಹುದು. ವಿಷಯಾನುಸಾರವಾಗಿ ಎಣಿಸಿ ನೋಡಿದರೆ ಕಳೆದ ವರ್ಷದ ಗ್ರಂಥಾಭಿವೃದ್ಧಿಯ ಜಾತಿ ವಿವರವು ಈ ಕೆಳಗಿನಂತೆ ಕಾಣಬರುತ್ತದೆ:—

### ೧೯೩೭ ರ ಪುಸ್ತಕ ಪ್ರದರ್ಶನದ ಅಂಕಿಗಳು

| | ಸಂಖ್ಯೆ: ಪ್ರದರ್ಶನದಲ್ಲಿ | ಸಂಖ್ಯೆ: ಪ್ರಕಟವಾಗಿರುವುದು |
|---|---|---|
| ೧. ಪದ್ಯ ಕಾವ್ಯ .. .. .. | ೩೪ | ೪೬ |
| ೨. ನಾಟಕ .. .. .. | ೨೫ | ೨೫ |
| ೩. ಸಣ್ಣ ಕಥೆ .. .. .. | ೨೪ | ೪೨ |
| ೪. ಕಾದಂಬರಿ .. .. .. | ೧೬ | ೧೬ |
| ೫. ಚರಿತ್ರೆ .. .. .. | ೯ | ೧೫ |
| ೬. ಜೀವನ ಚರಿತ್ರೆ .. .. | ೮ | ೧೮ |
| ೭. ಪ್ರಕೃತಿ ವಿಜ್ಞಾನ .. .. | ೧ | ೧೦ |
| ೮. ಸಮಾಜ ವಿಜ್ಞಾನ .. .. | ೧೬ | ೨೨ |
| ೯. ಮತಾಚಾರ .. .. .. | ೧೬ | ೩೫ |
| ೧೦. ಸಾಹಿತ್ಯ ಪ್ರಬಂಧ .. .. | ೮ | ೧೩ |
| ೧೧. ಶಾಲಾ ಪುಸ್ತಕಗಳು .. .. | ೧೨ | ೨೪ |
| ೧೨. ಸಂಕೀರ್ಣ .. .. .. | ೮ | ೨೯ |
| ಒಟ್ಟು .. | ೧೭೭ | ೨೯೫ |

ಹಿಂದಿನ ವರ್ಷಗಳಲ್ಲಿ ನಾನು ಮಾಡಿರುವ ಪ್ರಾರ್ಥನೆಯನ್ನೇ ಈ ವರ್ಷ ಪುನರಪಿ ಮಾಡಬೇಕಾಗಿದೆ. ಕನ್ನಡದಲ್ಲಿ ಓದುಗರ ಸಂಖ್ಯೆ ಬೆಳೆಯುತ್ತಿಲ್ಲ. ಪುಸ್ತಕಗಳನ್ನು ಕೊಳ್ಳುವವರ ಸಂಖ್ಯೆ ಬೆಳೆದ ಹೊರತು, ಪುಸ್ತಕಗಳನ್ನು ಬರೆಯುವವರ ಸಂಖ್ಯೆಯಾಗಲಿ ಅಥವಾ ಬರೆದ ಪುಸ್ತಕಗಳ ಯೋಗ್ಯತೆಯಾಗಲಿ ಹೆಚ್ಚಲಾರದು. ಬಹುಮಂದಿ ಓದುವವರು ಸಿಕ್ಕಿಯಾರು, ಶ್ರಮಕ್ಕೆ ತಕ್ಕ ಫಲ ದೊರೆತೀತು—ಎಂಬ ಭರವಸೆ ಕಂಡ ಹೊರತು ಸಮರ್ಥರಾದವರು ಗ್ರಂಥಲೇಖನಕ್ಕೆ ಕೈಹಾಕಲಾರರು. ಗಿರಾಕಿಗೆ ತಕ್ಕಂತೆ ಸರಬರಾಯಿ ಎಂಬುದು ಸ್ವತಸ್ಸಿದ್ಧ ನ್ಯಾಯ. ಆದಕಾರಣ, ಕನ್ನಡ ಮಹಾಜನರು ತಮ್ಮ ಭಾಷೆಯ ಮೇಲ್ಮೆಯನ್ನು ಬಯಸುವುದು ದಿಟವಾದರೆ,

ಅವರಲ್ಲಿ ಅಕ್ಷರಸ್ಥರಾದವರೆಲ್ಲರೂ ತಮ್ಮ ಆದಾಯದಲ್ಲಿ ಒಂದು ಖಚಿತ ವನ್ನು ಪುಸ್ತಕ ಸಂಗ್ರಹಕ್ಕಾಗಿ ವಿಾಸಲಿಡಬೇಕು. ಸಾಮಾನ್ಯವಾಗಿ ೨೦ ರೂಪಾಯಿಗಳ ವರಮಾನ ಇರತಕ್ಕವರು ಅದರಲ್ಲಿ ಎಂಟು ಆಣೆ ಒಂದು ಗ್ರಂಥಕ್ಕೆ ವಿನಿಯೋಗಿಸಲು ಮನಸ್ಸು ಮಾಡಬೇಕು. ಹಾಗಾ ಕನ್ನಡ ಸಾಹಿತ್ಯ ಉಚ್ಛ್ರಾಯಸ್ಥಿತಿಗೆ ಬರುವ ಆಶೆಗೆ ಕಾರಣವಾಗಲಾರದು.

## ಕಲಾ ಪ್ರದರ್ಶನ

ಈ ವರ್ಷ ಗ್ರಂಥ ಪ್ರದರ್ಶನದೊಡನೆ, ನಮ್ಮ ಮಿತ್ರರಾದ ಶ್ರೀಮಾ ಕೃಷ್ಣರಾಯರವರ ಸಲಹೆಯ ಮೇರೆಗೆ, ಕಲಾ ಪ್ರದರ್ಶನವೊಂದನ್ನು ಪ್ರದರ್ಶನಕ್ಕೆ ಒಟ್ಟು ೧೪೫ ಚಿತ್ರಗಳು ಮತ್ತು ೧೦೦ ಫೋಟೋಗಳು ಇವುಗಳಲ್ಲಿ ಎಲ್ಲ ಪ್ರಸಿದ್ಧ ಚಿತ್ರಕಲಾ ಮತಗಳ ಮಾದರಿಗಳೂ ಇವೆಯೆಂದು ಹೇಳುತ್ತಾರೆ. ಪ್ರದರ್ಶನವನ್ನು ಎಷ್ಟು ಪರಿಪೂರ್ಣಸ್ಥಿತಿಗೆ ತರುವುದು ಅಷ್ಟುಮಟ್ಟಿಗೆ ಅದನ್ನು ಮಾಡಲು ಈ ಸಲ ಕಾಲಾವಕಾಶವಿಲ್ಲದ್ದರಿಂದ ಅಸ ಹೋಯಿತು. ಈ ವರ್ಷದ ಅನುಭವವನ್ನು ನೋಡಿಕೊಂಡು ಮುಂದೆ ಬೆಳಸಬೇಕೆಂದು ಪರಿಷತ್ತಿಗೆ ಆಶೆ ಇದೆ. ವಿಜ್ಞಾನವು ಹೇಗೆ ಸಾಹಿತ್ಯ ಜೀವಾಂಗವಾಗಿದೆಯೋ ಕಲೆಯೂ ಹಾಗೆಯೇ ಒಂದು ಜೀವಾಂಗವಾ ಬಹುಮಂದಿ ಕನ್ನಡಿಗರು ಕಲಾಭ್ಯಾಸದಲ್ಲಿ ನಿಪುಣರಾಗಿ ಪ್ರಸಿದ್ಧಿಗೆ ಬ ಅವರ ಕೃತಿಗಳನ್ನು ನೋಡಿ ತಾವೆಲ್ಲ ಸಂತೋಷಿಸುವಿರೆಂದು ನಾ ಕೊಂಡಿದ್ದೇನೆ.

## ಗಮಕ ಗೋಷ್ಠಿ

ಇನ್ನೊಂದು ಗಮಕಾಭ್ಯಾಸ. ಕಳೆದ ಎರಡು ವರ್ಷಗಳಲ್ಲಿ ಈ ವರ್ಷವೂ ಗಮಕಾಭ್ಯಾಸಕ್ಕಾಗಿ ಒಂದು ಗೋಷ್ಠಿಯನ್ನು ಏರ್ಪಾಟು ಗಮಕಶಿರೋಮಣಿಗಳಾದ ಶ್ರೀಮಾನ್ ಎಸ್. ಜಿ. ಬಿಂದೂರಾಯರವರು ಈ ಗೋಷ್ಠಿಯ ಜವಾಬ್ದಾರಿಯನ್ನು ವಹಿಸಿಕೊಂಡು ಪಾಠ ನಡಸು ೧೭–೧೮ ಮಂದಿ ವಿದ್ಯಾರ್ಥಿಗಳು—ಅವರಲ್ಲಿ ಇಬ್ಬರು ವಿದ್ಯಾರ್ಥಿನಿಯರು— ವಿದ್ಯೆಯನ್ನು ಕಲಿಯುತ್ತಿದ್ದಾರೆ. ಸ್ತ್ರೀಯರ ಸಂಖ್ಯೆ ಇನ್ನೂ ಹೆಚ್ಚಾಗಿರಬೇ ನಮ್ಮ ಆಶೆ. ಕಾವ್ಯವಾಚನವನ್ನು ಕಲಿತ ಹೆಂಗಸು ತನ್ನ ಮನೆಗೆ ಒಂ ಸಂಪತ್ತನ್ನು ತರುವವಳಾಗುತ್ತಾಳೆ. ತಾವೆಲ್ಲ ಈ ವಿಚಾರಕ್ಕೆ ಹೆಚ್ಚು ಕೊಟ್ಟು ಈ ಗಮಕ ವಿದ್ಯೆಯು ಇನ್ನೂ ಹೆಚ್ಚಾಗಿ ಪ್ರಚಾರವಾಗಲು ಮಾಡಬೇಕೆಂದು ಬೇಡುತ್ತೇನೆ. ಈಗ ನಡೆಯುತ್ತಿರುವ ಗಮಕ ಪಾಠವು ಬಳಿಕ, ಹಿಂದಿನ ವರ್ಷಗಳಲ್ಲಿ ನಡಸಿದಂತೆ ಒಂದು ಪರೀಕ್ಷೆ ನಡಸಿ ಹೊಂದಿದವರಿಗೆ ಪ್ರಶಸ್ತಿಪತ್ರಗಳನ್ನು ಕೊಡಲಾಗುವುದು.

ಕಳೆದ ಗಮಕ ಪ್ರಶಸ್ತಿಪತ್ರಗಳ ವಿನಿಯೋಗ ಕಾಲದಲ್ಲಿ ಸಭಾಧ್ಯಕ್ಷ ಉಪಕರಿಸಿದ ಶ್ರೀಮಾನ್ ಎನ್. ಎಸ್. ಸುಬ್ಬರಾವ್, ಎಂ.ಎ. (ಕ್ಯಾ

ಬಾರ್-ಅಟ್-ಲಾ ಅವರು, ಗಮಕ ವಿದ್ಯಾಭ್ಯಾಸವನ್ನು ನಾರ್ಮಲ್ ಸ್ಕೂಲುಗಳಲ್ಲಿ ಒಂದು ಪಾಠವಿಷಯವಾಗಿ ಸೇರಿಸುವಂತೆ ಸೂಚನೆಮಾಡಿದರು. ಆ ಯೋಚನೆ ಬೇಗ ಕಾರ್ಯರೂಪಕ್ಕೆ ಬರುವಂತಾಗಲೆಂದು ನಾನು ಈಗ ಮತ್ತೊಮ್ಮೆ ಪ್ರಾರ್ಥಿಸುತ್ತೇನೆ.

## ಗಾನ ಸ್ಪರ್ಧೆ

ಈ ವರ್ಷ ಹೊಸದಾಗಿ ಒಂದು ಗಾನಸ್ಪರ್ಧೆಯನ್ನು ಏರ್ಪಡಿಸಲು ಉದ್ದೇಶಿಸಿತ್ತು. ದೇವರನಾಮಗಳು, ಲಾವಣಿಗಳು ಮೊದಲಾದ ಕನ್ನಡ ಹಾಡುಗಳನ್ನು ಹಾಡುವ ಕಲೆಯನ್ನು ಪ್ರೋತ್ಸಾಹಪಡಿಸುವುದು ಈ ಸ್ಪರ್ಧೆಯ ಉದ್ದೇಶ. ಆದರೆ ತಕ್ಕಷ್ಟು ಮಂದಿ ಸ್ಪರ್ಧಿಗಳು ಬಾರದಕಾರಣ ಈ ಸ್ಪರ್ಧೆಯನ್ನು ನಡಸಲಾಗಲಿಲ್ಲವೆಂದು ಹೇಳಲು ಮನಸ್ಸಿಗೆ ಬಹು ಸಂಕೋಚವಾಗಿದೆ. ದೇವರನಾಮಗಳೂ ಲಾವಣಿಗಳೂ ಕನ್ನಡ ನಲ್ಲಿ ಬಹು ಹಿಂದಿನಿಂದ ಸ್ವಾಭಾವಿಕವಾಗಿ ಬೆಳೆದುಕೊಂಡುಬಂದಿರುವ ಸಾಹಿತ್ಯ. ಅಕ್ಷರಸ್ಥರಲ್ಲದ ಗಂಡಸರೂ ಹೆಂಗಸರೂ ದೇವರನಾಮಗಳನ್ನೂ ಲಾವಣಿಗಳನ್ನೂ ಬಹು ಸೊಗಸಾಗಿ ಹೇಳತಕ್ಕವರು ನಮ್ಮಲ್ಲಿ ಇರುತ್ತಾರೆ. ಹೀಗೆ ಜನಜನಿತವಾಗಿ ಬಂದಿರುವ ಈ ಸಾಹಿತ್ಯ ಕಲೆಯು ಈಚೀಚೆಗೆ ಅಷ್ಟು ಪ್ರಚಾರದಲ್ಲಿಲ್ಲ. ವಿದ್ವಾಂಸರಾದವರು ಕೆಲವರು ಅವುಗಳನ್ನು ಕೀಳುದರ್ಜೆಯದೆಂದು ಭಾವಿಸಿರುವುದೇ ಅದಕ್ಕೆ ಕಾರಣವೆಂದು ತೋರುತ್ತದೆ. ಆದರೆ ನಿಜವಾಗಿ ಕಾವ್ಯಮರ್ಮವನ್ನು ಅರಿತು ಸಾಹಿತ್ಯದ ಸವಿಯನ್ನು ಕಂಡವರು ಈ ಜನಪದ ಸಾಹಿತ್ಯವು ಬಹು ಬೆಲೆಯುಳ್ಳದ್ದೆಂಬುದನ್ನು ಒಪ್ಪಿಕೊಳ್ಳುವರು. ಈ ಜನಪದ ಸಾಹಿತ್ಯವನ್ನು ಪುನರುಜ್ಜೀವನಗೊಳಿಸುವ ಪ್ರಯತ್ನದಲ್ಲಿ, ನಮಗೆ ನಾನಾ ಸ್ಥಳಗಳಲ್ಲಿ ಹುಟ್ಟಿ ಬೆಳೆಯುತ್ತಿರುವ ಕರ್ಣಾಟಕ ಸಂಘಗಳು ಸಹಾಯಮಾಡಬೇಕಾಗಿದೆ. ನಮ್ಮ ಸಂಸ್ಥಾನದ ದಿವಾನರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಸಾಹೇಬರವರು ಎರಡು ವರ್ಷಗಳ ಕೆಳಗೆ ಜನಪದ ಸಾಹಿತ್ಯದ ಮೇಲ್ಮೆಯನ್ನು ಕುರಿತು ಆಡಿದ ಮಾತುಗಳು ತಮಗೆಲ್ಲರಿಗೂ ಜ್ಞಾಪಕದಲ್ಲಿರಬಹುದು. ಪರಿಷತ್ತು ಈ ವಿಷಯಕ್ಕೆ ಇನ್ನೂ ಹೆಚ್ಚು ಗಮನವನ್ನು ಕೊಡಬೇಕೆಂದು ಆಶೆಪಟ್ಟುಕೊಂಡಿದೆ. ತಾವೆಲ್ಲ ಇದಕ್ಕೆ ತಕ್ಕ ಸಹಾಯಕೊಡುವಿರೆಂದು ನಾನು ನಂಬಿಕೊಂಡಿದ್ದೇನೆ.

## ಕಂಠಪಾಠ ಸ್ಪರ್ಧೆ

ಈ ವರ್ಷ ಒಂದು ಕಂಠಪಾಠ ಸ್ಪರ್ಧೆಯನ್ನು ಏರ್ಪಾಟು ಮಾಡಲಾಗಿತ್ತು. ಇದಕ್ಕಾಗಿ ಬಂದಿದ್ದ ಸ್ಪರ್ಧಿಗಳ ಯೋಗ್ಯತಾ ಪರೀಕ್ಷೆ ಕಳೆದ ತಿಂಗಳು ತಾ॥ ೨೬ನೆಯ ಸೋಮವಾರದ ದಿವಸ ಪರಿಷನ್ಮಂದಿರದಲ್ಲಿ ನಡೆಯಿತು. ಶ್ರೀಮಾನ್ ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯನವರು, ಶ್ರೀಮಾನ್ ವಿ. ವೆಂಕಟಾಚಾರ್, ಎಂ.ಎ., ಬಿ.ಕಾಮ್., ಅವರು ಮತ್ತು ಶ್ರೀಮಾನ್ ಸಿ. ಆರ್. ಮಾಧವರಾವ್, ಬಿ.ಎ., ಅವರು— ಈ ಮಹನೀಯರುಗಳು ನಿರ್ಣಾಯಕರಾಗಿದ್ದುಕೊಂಡು ಆರು ಮಂದಿಗೆ ಪಾರಿತೋಷಿಕಗಳು ಸಲ್ಲುತ್ತವೆಂದು ಶಿಫಾರಸು ಮಾಡಿರುತ್ತಾರೆ. ಹೀಗೆ ಪ್ರಶಸ್ತಿ ಪಡೆದಿರುವ ಬಾಲಕ ಬಾಲಕಿಯರಲ್ಲಿ ಕೆಲವರ ಕಂಠಪಾಠದ ಸೊಬಗನ್ನು ತಮ್ಮಗಳಿಗೆ ವಿಶೇಷೋತ್ಸವ ಕಾಲದಲ್ಲಿ ತೋರಿಸಬೇಕೆಂದು ಉದ್ದೇಶವಿದೆ.

## ಲೇಖಕ ಗೋಷ್ಠಿ

ಈಚೀಚೆಗೆ ಕನ್ನಡದ ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆಗಳಲ್ಲಿ ಮಂದಿ ತರುಣ ಲೇಖಕರು ಕವಿತೆ, ಸಣ್ಣಕಥೆ ಮೊದಲಾದ ವಿವಿಧ ಪ್ರಬಂಧ ಬರೆದು ಪ್ರಕಟಗೊಳಿಸುತ್ತ ಇರುವುದನ್ನು ತಮ್ಮಲ್ಲಿ ಅನೇಕರು ಗಮನಿಸಿರು ಅವರಲ್ಲಿ ಬಹು ಮಂದಿ ತಮ್ಮ ನಿಜವಾದ ಹೆಸರುಗಳನ್ನು ಕೊಡದೆ ಸಂಕೇ ಗಳಿಂದ ಪ್ರಸಿದ್ಧಿಗೆ ಬರುತ್ತಿದ್ದಾರೆ. ಹೀಗೆ ಪ್ರಕಾಶವಾಗಿಯೂ ಗೋಪ್ಯವಾ ಸೇವೆಮಾಡುತ್ತಾ ಇರುವ ಸಾಹಿತಿಗಳನ್ನೆಲ್ಲ ಒಂದು ಗೋಷ್ಠಿಯಲ್ಲಿ ಸೇರಿಸ ಈ ವರ್ಷ ಪರಿಷತ್ತು ಪ್ರಯತ್ನಮಾಡಿದೆ. ಲೇಖಕರುಗಳನ್ನೆಲ್ಲ ಒ ಸೇರಿಸುವುದರಿಂದ ಅವರಲ್ಲಿ ಪರಸ್ಪರ ಪರಿಚಯವೂ ಸ್ನೇಹವೂ ಬೆಳೆ ಅವಕಾಶವಾಗುವುದು ಮಾತ್ರವಲ್ಲದೆ, ಅವರಿಗೆ ಇಂಥ ಸಂಪರ್ಕದಿಂದ ಒ ಪ್ರೋತ್ಸಾಹ ದೊರೆಯುವುದೆಂದೂ ಅವರು ಸಾಹಿತ್ಯ ಸಮಸ್ಯೆಗಳನ್ನು ಪರಸ್ಪರ ಚರ್ಚೆ ನಡಸಲು ಅವಕಾಶವಾಗಿ, ಆ ಮೂಲಕ ನಮ್ಮ ಬೆಳವಣಿಗೆಗೆ ಉಪಕಾರವಾದೀತೆಂದೂ ನಮಗೆ ನಂಬಿಕೆ ಇದೆ. ಈ ಪ್ರಯ ಯಥಾಕ್ರಮವಾಗಿ ನಡಸಲು ಈ ವರ್ಷ ಕಾಲಾವಕಾಶ ಸಾಲದ್ದಾಗಿ ಮಾಡಿರುವ ಪ್ರಾರಂಭವು ಕಾಲಕ್ರಮದಲ್ಲಿ ಪರಿಪೂರ್ಣವಾದೀತೆಂದು ನಮ್ಮ

## ಸಂಘ ಸಮ್ಮೇಳನ

ಕಳೆದವರ್ಷ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಮೇರೆಗೆ, ದೇಶದ ನಾನಾ ಭಾಗಗಳಲ್ಲಿರುವ ಕರ್ಣಾಟಕ ಸಂಘಗಳ ಪ್ರತಿ ಇಲ್ಲಿಗೆ ಬರಮಾಡಿಕೊಂಡು ಒಂದು ಸಂಘ ಸಮ್ಮೇಳನವನ್ನು ನಡಸಿದ್ದು ಜ್ಞಾಪಕದಲ್ಲಿರಬಹುದು. ಆ ಸಮ್ಮೇಳನವು ಮಾಡಿರುವ ಸೂಚನೆಯು ಈ ವರ್ಷವೂ ಅಂಥ ಸಮ್ಮೇಳನವೊಂದನ್ನು ಸೇರಿಸಲು ಏರ್ಪಾಟು ಮಾಡಿ ಅಂಥ ಕನ್ನಡ ಸಂಘಗಳು ಸುಮಾರು ೧೦೦ ಇವೆ ಎಂದು ಗೊತ್ತಾಗಿದೆ. ೩೨ ಸಂಘಗಳು ಮಾತ್ರ ಪರಿಷತ್ತಿಗೆ ಅಂಗಸಂಸ್ಥೆಗಳಾಗಿ ಸೇರಿವೆ. ಈ ಗಳೂ ಜನರಲ್ಲಿ ಕನ್ನಡದ ಅಭಿಮಾನವನ್ನೂ ಉತ್ಸಾಹವನ್ನೂ ಹೆಚ್ಚಿಸು ಮತ್ತು ಜ್ಞಾನಪ್ರಸಾರ ಮಾಡುವುದಕ್ಕೂ ಅಮೂಲ್ಯಗಳಾದ ಸಾಧನ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವೂ, ಶಿವಮೊಗ್ಗ, ಚನ್ನರಾಯಪಟ್ಟಣ, ಮಧುಗಿರಿ—ಇವೇ ಮೊದಲಾದ ಊರುಗಳ ಸಂಘಗಳೂ ಬಹು ಶ್ಲಾಘ್ಯವಾದ ರೀತಿಯಲ್ಲಿ ಕೆಲಸ ಮಾಡಿರುತ್ತವೆ. ಇನ್ನೂ ಪುಷ್ಟಿಯಾಗಿ ಬೆಳೆಯಲು ಅಡ್ಡಿಯಾಗಿರುವ ಸಂದರ್ಭಗಳು ಅವುಗಳನ್ನು ನಿವಾರಣೆ ಮಾಡುವುದು ಹೇಗೆ, ಮತ್ತು ಸಂಘಗಳು ಇನ್ನೂ ಜನರ ಆದರಣೆಯನ್ನು ಸಂಪಾದಿಸಲು ಯಾವ ರೀತಿ ಕೆಲಸ ಮಾಡಬೇಕು— ಮೊದಲಾದ ಪ್ರಶ್ನೆಗಳನ್ನು ಚರ್ಚಿಸಿ, ಅಭಿಪ್ರಾಯ ವಿನಿಮಯಮಾಡಿಕೊ

ಈ ಸಂಘ ಸಮ್ಮೇಳನದ ಉದ್ದೇಶವಾಗಿರುತ್ತದೆ. ಈ ಪ್ರಯತ್ನಕ್ಕೂ ತಾವುಗಳೆಲ್ಲ ಸಹಾನುಭೂತಿಯನ್ನು ತೋರುವಿರೆಂದು ನಾವು ನಿರೀಕ್ಷಿಸಿಕೊಂಡಿದ್ದೇವೆ.

## ಉಪಸಂಹಾರ

ಹೀಗೆ ೮-೯ ಕಾರ್ಯಭಾಗಗಳನ್ನು ಒಳಕೊಂಡಿರತಕ್ಕದ್ದು ಈ ವಿಶೇಷ ಸಾಹಿತ್ಯೋತ್ಸವ. ಈ ಉತ್ಸವದ ಪ್ರಯೋಜನವನ್ನು ನಮಗೆ ಸಂಬಂಧಪಟ್ಟವರೆಲ್ಲರೂ ಒಪ್ಪಿಕೊಂಡಿರುತ್ತಾರೆ. ಶ್ರೀಮನ್ಮಹಾರಾಜರವರೂ ಶ್ರೀಮದ್ಯುವರಾಜರವರೂ ಈ ಉತ್ಸವದ ವಿಷಯದಲ್ಲಿ ತಮ್ಮ ಅನುಮೋದನೆಯನ್ನು ಸಂತತವಾಗಿ ಅನುಗ್ರಹಿಸಿರುತ್ತಾರೆ. ನಮ್ಮ ಸರಕಾರದವರೂ, ವಿಶ್ವವಿದ್ಯಾನಿಲಯದವರೂ, ವಿದ್ಯಾಪ್ರಚಾರದ ಇಲಾಖೆಯವರೂ ಈ ಪ್ರಯತ್ನಕ್ಕೆ ತಮ್ಮ ಬೆಂಬಲವನ್ನು ಕೊಟ್ಟಿರುತ್ತಾರೆ. ಮಹಾಜನರು ಈ ಪ್ರಯತ್ನದ ವಿಷಯದಲ್ಲಿ ತಮ್ಮ ಮೆಚ್ಚಿಕೆಯನ್ನು ಬಹು ವಿಧಗಳಲ್ಲಿ ತಿಳಿಸಿರುತ್ತಾರೆ. ಇಂಥ ಉತ್ಸವಗಳನ್ನು ಬೇರೆಬೇರೆ ಊರುಗಳಲ್ಲಿ ನಡಸಬೇಕೆಂದು ಪರಿಷತ್ತಿಗೆ ಪ್ರಾರ್ಥನ ಪತ್ರಿಕೆಗಳು ಆಗಾಗ್ಗೆ ಬಂದಿರುತ್ತವೆ. ಆದರೆ ಅದು ಬಹು ಕಷ್ಟಸಾಧ್ಯವಾದ ಪ್ರಯತ್ನವೆಂಬ ಸಂಗತಿಯನ್ನು ನಾನು ಪುನಃ ವಿಜ್ಞಾಪಿಸಬೇಕಾಗಿದೆ. ನಮ್ಮ ಈ ಸಲದ ಸ್ಥಿತಿಯಂತೂ ನಮಗೆ ಹೆಚ್ಚಾದ ಕಳವಳವನ್ನುಂಟುಮಾಡಿದೆ. ಉಪನ್ಯಾಸಕರನ್ನು ಒದಗಿಸುವುದೂ ಅಧ್ಯಕ್ಷರನ್ನು ಒಪ್ಪಿಸುವುದೂ ನಮಗೆ ತಕ್ಕಷ್ಟು ಪ್ರಯಾಸದ ಕೆಲಸವಾಗಿದೆ. ಅದರ ಜೊತೆಗೆ ಹಣವನ್ನೂ ಒದಗಿಸಬೇಕಾಗಿ ಬಂದಿರುವುದು ನಮ್ಮನ್ನು ಕುಗ್ಗಿಸುತ್ತಿದೆ. ಈ ಉತ್ಸವಕ್ಕೆ ತಗಲುವ ವೆಚ್ಚ ಸುಮಾರು ರೂ. ೧,೫೦೦. ಈ ವರ್ಷ ನಮಗೆ ಇದುವರೆಗೆ ಸಂಗ್ರಹವಾಗಿರುವುದು ಒಟ್ಟು ಸುಮಾರು ೭೨೦ ರೂಪಾಯಿಗಳು. ಇದರಲ್ಲಿ ಶ್ರೀಮನ್ಮಹಾರಾಜರವರು ಅನುಗ್ರಹಿಸಿರುವ ೧೦೦ ರೂ. ಗಳು, ಸೆಂಟ್ರಲ್ ಕೋ-ಆಪರೇಟಿವ್ ಬ್ಯಾಂಕಿನವರು ವಿಶೇಷ ದಾನವಾಗಿ ಕೊಟ್ಟಿರುವ ೨೫೦ ರೂ. ಗಳು, ಮೈಸೂರು ಇನ್‌ಷೂರೆನ್ಸ್ ಕಂಪೆನಿ ಕೊಟ್ಟಿರುವ ೭೫ ರೂ. ಗಳು—ಇಂಥವುಗಳನ್ನು ಕಳೆದರೆ, ಇತರ ಮಹಾಜನರಿಂದ ಬಂದಿರುವ ಸಹಾಯ ಒಟ್ಟು ಸುಮಾರು ೨೯೫ ರೂ. ಗಳು ಮಾತ್ರ. ಇಷ್ಟನ್ನು ಸಂಪಾದಿಸಲು ಪರಿಷತ್ತಿನ ಸದಸ್ಯರುಗಳು ೪-೬ ಮಂದಿ ೧೦-೧೨ ದಿನ ಸುಮಾರು ನೂರಾರು ಮನೆಗಳಿಗೆ ಹೋಗಿ ಹತ್ತಾರು ಘಂಟೆಗಳ ಕಾಲವನ್ನು ವಿನಿಯೋಗಿಸಬೇಕಾಯಿತು. ಶ್ರೀಯುತರುಗಳಾದ ವಿ. ವೆಂಕಟಪ್ಪನವರು, ಪಿ. ಶ್ರೀನಿವಾಸರಾಯರು, ವಿ. ಸೀತಾರಾಮಯ್ಯನವರು, ಆರ್. ಸುಬ್ಬರಾಯರು, ಎಸ್. ಗೋಪಾಲಸ್ವಾಮಿಯವರು, ಎಸ್. ಮಂಜುನಾಥ್ ಅವರು—ಈ ಮಹನೀಯರುಗಳೂ ಅವರ ಸ್ನೇಹಿತರುಗಳೂ ಸಹಾಯದ್ರವ್ಯಕ್ಕಾಗಿ ಪೇಟೆ ಕೋಟೆಗಳಲ್ಲಿಯೂ ಕಛೇರಿಗಳಲ್ಲಿಯೂ ಸುತ್ತಾಡಿದ್ದಾರೆ. ಈ ಸುತ್ತಾಟದಿಂದ ಅವರಿಗೆ ಕೆಲವುಂದಿ ಮಹಾನುಭಾವರುಗಳ ಶೀಲಸ್ವಭಾವಗಳು ತಿಳಿಯುವಹಾಗಾಯಿತೇ ಹೊರತು ಪರಿಷತ್ತಿಗೆ ಯಾವ ಹೆಚ್ಚಿನ ಲಾಭವೂ ದೊರೆತಿಲ್ಲ. ಈ ಮಹನೀಯರುಗಳು ತಮ್ಮ ಅದಕ್ಷಿಣಾಕವಾದ ಪ್ರದಕ್ಷಿಣೆಗಳಲ್ಲಿ ಪಡೆದ ಅನುಭವಗಳನ್ನು ವರ್ಣಿಸುವುದಾದ್ದರೆ, ಅವು ಬಹು ಸ್ವಾರಸ್ಯವಾದ

## ಲೇಖಕ ಗೋಷ್ಠಿ

ಈಚೀಚೆಗೆ ಕನ್ನಡದ ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆಗಳ್ಲಿ ಮಂದಿ ತರುಣ ಲೇಖಕರು ಕವಿತೆ, ಸಣ್ಣಕಥೆ ಮೊದಲಾದ ವಿವಿಧ ಪ್ರಬಂ ಬರೆದು ಪ್ರಕಟಗೊಳಿಸುತ್ತ ಇರುವುದನ್ನು ತಮ್ಮಲ್ಲಿ ಅನೇಕರು ಗಮನಿಸಿ ಅವರಲ್ಲಿ ಬಹು ಮಂದಿ ತಮ್ಮ ನಿಜವಾದ ಹೆಸರುಗಳನ್ನು ಕೊಡದೆ ಸಂಕೇ ಗಳಿಂದ ಪ್ರಸಿದ್ಧಿಗೆ ಬರುತ್ತಿದ್ದಾರೆ. ಹೀಗೆ ಪ್ರಕಾಶವಾಗಿಯೂ ಗೋಪ್ಯವಾ ಸೇವೆಮಾಡುತ್ತಾ ಇರುವ ಸಾಹಿತಿಗಳನ್ನೆಲ್ಲ ಒಂದು ಗೋಷ್ಠಿಯಲ್ಲಿ ಸೇರಿಸ ಈ ವರ್ಷ ಪರಿಷತ್ತು ಪ್ರಯತ್ನಮಾಡಿದೆ. ಲೇಖಕರುಗಳನ್ನೆಲ್ಲ ಒ ಸೇರಿಸುವುದರಿಂದ ಅವರಲ್ಲಿ ಪರಸ್ಪರ ಪರಿಚಯವೂ ಸ್ನೇಹವೂ ಬೆಳೆ ಅವಕಾಶವಾಗುವುದು ಮಾತ್ರವಲ್ಲದೆ, ಅವರಿಗೆ ಇಂಥ ಸಂಪರ್ಕದಿಂದ ಒ ಪ್ರೋತ್ಸಾಹ ದೊರೆಯುವುದೆಂದೂ ಅವರು ಸಾಹಿತ್ಯ ಸಮಸ್ಯೆಗಳನ್ನು ಪರಸ್ಪರ ಚರ್ಚೆ ನಡಸಲು ಅವಕಾಶವಾಗಿ, ಆ ಮೂಲಕ ನಮ್ಮ ಬೆಳವಣಿಗೆಗೆ ಉಪಕಾರವಾದೀತೆಂದೂ ನಮಗೆ ನಂಬಿಕೆ ಇದೆ. ಈ ಪ್ರ ಯಥಾಕ್ರಮವಾಗಿ ನಡಸಲು ಈ ವರ್ಷ ಕಾಲಾವಕಾಶ ಸಾಲದ್ದಾಗಿ ಮಾಡಿರುವ ಪ್ರಾರಂಭವು ಕಾಲಕ್ರಮದಲ್ಲಿ ಪರಿಪೂರ್ಣವಾದೀತೆಂದು ನಮ್ಮ

## ಸಂಘ ಸಮ್ಮೇಳನ

ಕಳೆದವರ್ಷ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಮೇರೆಗೆ, ದೇಶದ ನಾನಾ ಭಾಗಗಳಲ್ಲಿರುವ ಕರ್ಣಾಟಕ ಸಂಘಗಳ ಪ್ರತಿನಿ ಇಲ್ಲಿಗೆ ಬರಮಾಡಿಕೊಂಡು ಒಂದು ಸಂಘ ಸಮ್ಮೇಳನವನ್ನು ನಡಸಿದ್ದು ಜ್ಞಾಪಕದಲ್ಲಿರಬಹುದು. ಆ ಸಮ್ಮೇಳನವು ಮಾಡಿರುವ ಸೂಚನೆಯ ಈ ವರ್ಷವೂ ಅಂಥ ಸಮ್ಮೇಳನವೊಂದನ್ನು ಸೇರಿಸಲು ಏರ್ಪಾಟು ಮಾಡಿ ಅಂಥ ಕನ್ನಡ ಸಂಘಗಳು ಸುಮಾರು ೧೦೦ ಇವೆ ಎಂದು ಗೊತ್ತಾಗಿದೆ. ೩೨ ಸಂಘಗಳು ಮಾತ್ರ ಪರಿಷತ್ತಿಗೆ ಅಂಗ ಸಂಸ್ಥೆಗಳಾಗಿ ಸೇರಿವೆ. ಈ ಗಳೂ ಜನರಲ್ಲಿ ಕನ್ನಡದ ಅಭಿಮಾನವನ್ನೂ ಉತ್ಸಾಹವನ್ನೂ ಹೆಚ್ಚಿಸು ಮತ್ತು ಜ್ಞಾನಪ್ರಸಾರ ಮಾಡುವುದಕ್ಕೂ ಅಮೂಲ್ಯಗಳಾದ ಸಾಧನ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವೂ, ಶಿವಮೊಗ್ಗ, ಚನ್ನರಾಯಪಟ್ಟಣ, ಮಧುಗಿರಿ—ಇವೇ ಮೊದಲಾದ ಊರುಗಳ ಸಂಘಗಳೂ ಬಹು ಶ್ಲಾಘ್ಯವಾದ ರೀತಿಯಲ್ಲಿ ಕೆಲಸ ಮಾಡಿರುತ್ತವೆ. ಇನ್ನೂ ಪುಷ್ಟಿಯಾಗಿ ಬೆಳೆಯಲು ಅಡ್ಡಿಯಾಗಿರುವ ಸಂದರ್ಭಗಳು ಅವುಗಳನ್ನು ನಿವಾರಣೆ ಮಾಡುವುದು ಹೇಗೆ, ಮತ್ತು ಸಂಘಗಳು ಇನ್ನೂ ಜನರ ಆದರಣೆಯನ್ನು ಸಂಪಾದಿಸಲು ಯಾವ ರೀತಿ ಕೆಲಸ ಮಾಡಬೇಕು— ಮೊದಲಾದ ಪ್ರಶ್ನೆಗಳನ್ನು ಚರ್ಚಿಸಿ, ಅಭಿಪ್ರಾಯ ವಿನಿಮಯಮಾಡಿಕೊ

ಈ ಸಂಘ ಸಮ್ಮೇಳನದ ಉದ್ದೇಶವಾಗಿರುತ್ತದೆ. ಈ ಪ್ರಯತ್ನಕ್ಕೂ ತಾವುಗಳೆಲ್ಲ ಸಹಾನುಭೂತಿಯನ್ನು ತೋರುವಿರೆಂದು ನಾವು ನಿರೀಕ್ಷಿಸಿಕೊಂಡಿದ್ದೇವೆ.

## ಉಪಸಂಹಾರ

ಹೀಗೆ ೮-೯ ಕಾರ್ಯಭಾಗಗಳನ್ನು ಒಳಕೊಂಡಿರತಕ್ಕದ್ದು ಈ ವಿಶೇಷ ಸಾಹಿತ್ಯೋತ್ಸವ. ಈ ಉತ್ಸವದ ಪ್ರಯೋಜನವನ್ನು ನಮಗೆ ಸಂಬಂಧಪಟ್ಟವರೆಲ್ಲರೂ ಒಪ್ಪಿಕೊಂಡಿರುತ್ತಾರೆ. ಶ್ರೀಮನ್ಮಹಾರಾಜರವರೂ ಶ್ರೀಮದ್ಯುವರಾಜರವರೂ ಈ ಉತ್ಸವದ ವಿಷಯದಲ್ಲಿ ತಮ್ಮ ಅನುಮೋದನೆಯನ್ನು ಸಂತತವಾಗಿ ಅನುಗ್ರಹಿಸಿರುತ್ತಾರೆ. ನಮ್ಮ ಸರಕಾರದವರೂ, ವಿಶ್ವವಿದ್ಯಾನಿಲಯದವರೂ, ವಿದ್ಯಾಪ್ರಚಾರದ ಇಲಾಖೆಯವರೂ ಈ ಪ್ರಯತ್ನಕ್ಕೆ ತಮ್ಮ ಬೆಂಬಲವನ್ನು ಕೊಟ್ಟಿರುತ್ತಾರೆ. ಮಹಾಜನರು ಈ ಪ್ರಯತ್ನದ ವಿಷಯದಲ್ಲಿ ತಮ್ಮ ಮೆಚ್ಚಿಕೆಯನ್ನು ಬಹು ವಿಧಗಳಲ್ಲಿ ತಿಳಿಸಿರುತ್ತಾರೆ. ಇಂಥ ಉತ್ಸವಗಳನ್ನು ಬೇರೆ ಬೇರೆ ಊರುಗಳಲ್ಲಿ ನಡಸಬೇಕೆಂದು ಪರಿಷತ್ತಿಗೆ ಪ್ರಾರ್ಥನ ಪತ್ರಿಕೆಗಳು ಆಗಾಗ್ಗೆ ಬಂದಿರುತ್ತವೆ. ಆದರೆ ಅದು ಬಹು ಕಷ್ಟಸಾಧ್ಯವಾದ ಪ್ರಯತ್ನವೆಂಬ ಸಂಗತಿಯನ್ನು ನಾನು ಪುನಃ ವಿಜ್ಞಾಪಿಸಬೇಕಾಗಿದೆ. ನಮ್ಮ ಈ ಸಲದ ಸ್ಥಿತಿಯಂತೂ ನಮಗೆ ಹೆಚ್ಚಾದ ಕಳವಳವನ್ನುಂಟು ಮಾಡಿದೆ. ಉಪನ್ಯಾಸಕರನ್ನು ಒದಗಿಸುವುದೂ ಅಧ್ಯಕ್ಷರನ್ನು ಒಪ್ಪಿಸುವುದೂ ನಮಗೆ ತಕ್ಕಷ್ಟು ಪ್ರಯಾಸದ ಕೆಲಸವಾಗಿದೆ. ಅದರ ಜೊತೆಗೆ ಹಣವನ್ನೂ ಒದಗಿಸಬೇಕಾಗಿ ಬಂದಿರುವುದು ನಮ್ಮನ್ನು ಕುಗ್ಗಿಸುತ್ತಿದೆ. ಈ ಉತ್ಸವಕ್ಕೆ ತಗಲುವ ವೆಚ್ಚ ಸುಮಾರು ರೂ. ೧,೫೦೦. ಈ ವರ್ಷ ನಮಗೆ ಇದುವರೆಗೆ ಸಂಗ್ರಹವಾಗಿರುವುದು ಒಟ್ಟು ಸುಮಾರು ೭೨೦ ರೂಪಾಯಿಗಳು. ಇದರಲ್ಲಿ ಶ್ರೀಮನ್ಮಹಾರಾಜರವರು ಅನುಗ್ರಹಿಸಿರುವ ೧೦೦ ರೂ. ಗಳು, ಸೆಂಟ್ರಲ್ ಕೋ-ಆಪರೇಟಿವ್ ಬ್ಯಾಂಕಿನವರು ವಿಶೇಷ ದಾನವಾಗಿ ಕೊಟ್ಟಿರುವ ೨೫೦ ರೂ. ಗಳು, ಮೈಸೂರು ಇನ್‌ಷೂರೆನ್ಸ್ ಕಂಪೆನಿ ಕೊಟ್ಟಿರುವ ೭೫ ರೂ. ಗಳು—ಇಂಥವುಗಳನ್ನು ಕಳೆದರೆ, ಇತರ ಮಹಾಜನರಿಂದ ಬಂದಿರುವ ಸಹಾಯ ಒಟ್ಟು ಸುಮಾರು ೨೯೫ ರೂ. ಗಳು ಮಾತ್ರ. ಇಷ್ಟನ್ನು ಸಂಪಾದಿಸಲು ಪರಿಷತ್ತಿನ ಸದಸ್ಯರುಗಳು ೪-೬ ಮಂದಿ ೧೦-೧೨ ದಿನ ಸುಮಾರು ನೂರಾರು ಮನೆಗಳಿಗೆ ಹೋಗಿ ಹತ್ತಾರು ಘಂಟೆಗಳ ಕಾಲವನ್ನು ವಿನಿಯೋಗಿಸಬೇಕಾಯಿತು. ಶ್ರೀಯುತರುಗಳಾದ ಎ. ವೆಂಕಟಪ್ಪನವರು, ಪಿ. ಶ್ರೀನಿವಾಸರಾಯರು, ಎ. ಸೀತಾರಾಮಯ್ಯನವರು, ಆರ್. ಸುಬ್ಬರಾಯರು, ಎಸ್. ಗೋಪಾಲಸ್ವಾಮಿಯವರು, ಎಸ್. ಮಂಜುನಾಥ್ ಅವರು—ಈ ಮಹನೀಯರುಗಳೂ ಅವರ ಸ್ನೇಹಿತರುಗಳೂ ಸಹಾಯ ದ್ರವ್ಯಕ್ಕಾಗಿ ಪೇಟೆ ಕೋಟೆಗಳಲ್ಲಿಯೂ ಕಛೇರಿಗಳಲ್ಲಿಯೂ ಸುತ್ತಾಡಿದ್ದಾರೆ. ಈ ಸುತ್ತಾಟದಿಂದ ಅವರಿಗೆ ಕೆಲವಂದಿ ಮಹಾನುಭಾವರುಗಳ ಶೀಲಸ್ವಭಾವಗಳು ತಿಳಿಯುವಹಾಗಾಯಿತೇ ಹೊರತು ಪರಿಷತ್ತಿಗೆ ಯಾವ ಹೆಚ್ಚಿನ ಲಾಭವೂ ದೊರೆತಿಲ್ಲ. ಈ ಮಹನೀಯರುಗಳು ತಮ್ಮ ಅದಕ್ಷಿಣಾಕವಾದ ಪ್ರದಕ್ಷಿಣೆಗಳಲ್ಲಿ ಪಡೆದ ಅನುಭವಗಳನ್ನು ವರ್ಣಿಸುವುದಾದರೆ, ಅವು ಬಹು ಸ್ವಾರಸ್ಯವಾದ

ಉಪನ್ಯಾಸಗಳಾದವೆಂದು ನಾನು ತಿಳಿದುಕೊಂಡಿದ್ದೇನೆ. ಆದರೆ ನಮ್ಮ ಕಾನೂನಿನಲ್ಲಿ ಮಾನಸಷ್ಟ ಪ್ರಕರಣವೊಂದು ಇರುತ್ತದೆಯಾಗಿ ನಾನು ಸಾರ್ವಜನಿಕವಾಗಿ ಉಪನ್ಯಾಸ ಕೊಡಬೇಕೆಂದು ಕೇಳಿಕೊಳ್ಳಲಾರೆ. ವರ್ಷ ಹೀಗೆ ಸುತ್ತಿ ಬಳಲುವುದು ನಮಗೆ ಅನಿವಾರ್ಯವಾಗುವ ಪಕ್ಷಕ್ಕೆ, ಈ ಬಹು ಕಾಲ ನಡೆಯಲಾರದೆಂದು ನಾನು ವಿಜ್ಞಾಪಿಸಬೇಕಾಗಿದೆ. ಸರ್ಕಾರ ಇತರ ವಿಧಗಳಲ್ಲಿ ಸಹಾಯ ಕೊಡುತ್ತಿದ್ದರೂ ಈ ವಿಶೇಷ ಸಾಹಿತ್ಯೋತ್ಸ ಯಾವ ದ್ರವ್ಯಸಹಾಯವನ್ನೂ ಕೊಡುತಾತ್ತ ಇಲ್ಲ. ನಾವು ಅನೇಕ ಮ್ಯುನಿ ಗಳಿಗೂ-ಬ್ಯಾಂಕುಗಳಿಗೂ ಅರ್ಜಿಗಳನ್ನು ಬರೆದುಕೊಂಡು ಯಾಚನೆಮಾಡಿ ಯಾವ ಮ್ಯುನಿಸಿಪಾಲಿಟಿಯೂ ಇದು ತನ್ನ ಕರ್ತವ್ಯದ ಒಂದು ಭಾಗವೆಂ ಕೊಂಡಂತೆ ತೋರುವುದಿಲ್ಲ. ಹಿಂದೀ ಪ್ರಚಾರಕ್ಕಾಗಿ ವೊಗದಿ ಸಲ್ಲಿಸ ಬೆಂಗಳೂರು ಸಿಟಿ ಮ್ಯುನಿಸಿಪಾಲಿಟಿಗೆ ಈ ಕನ್ನಡದ ಯೋಜನೆ ಬೇಕಾಗಿಲ್ಲ. ದನರು ದೊಡ್ಡ ಮನಸ್ಸು ಮಾಡಿ, ತಾವು ಈ ಕೆಲಸಕ್ಕಾಗಿ ಒಂದಿಷ್ಟು ವನ್ನು ಪ್ರತ್ಯೇಕವಾಗಿ ಕೊಟ್ಟು, ಮ್ಯುನಿಸಿಪಾಲಿಟಿಗಳಿಂದಲೂ ಒಂದಿಷ್ಟು ವನ್ನು ಕೊಡಿಸುವ ಏರ್ಪಾಟು ಮಾಡಿದ ಹೊರತು ಈ ಕೆಲಸ ಸಾರ್ಥ ನಡೆಯುವ ಆಶೆ ತೋರುವುದಿಲ್ಲ.

ಹೀಗೆ ಸರ್ಕಾರದ ಸಹಾಯವನ್ನು ಯಾಚಿಸುವುದರಲ್ಲಿ ಮಹಾಜನ ವನ್ನು ನಾನು ಮರೆತಿದ್ದೇನೆಂದು ಯಾರೂ ಭಾವಿಸಲಾಗದು. ಕನ್ನಡ ಮಹಾಜನರು ಈ ಕೆಲಸ ತಮ್ಮ ಸ್ವಂತದ್ದೆಂದು ಭಾವಿಸಿಕೊಳ್ಳಬೇಕಾದದ್ದು ವೆಂಬ ವಾದ ಸ್ವತಸ್ಸಿದ್ಧವಾಗಿದೆ. ಆದರೆ ಈಗ ಸದ್ಯಃ ಬೆಂಗಳೂರು ಈ ಭಾಗದಲ್ಲಿರುವ ಪರಿಸ್ಥಿತಿಯನ್ನು ಒಂದು ಕ್ಷಣ ಜ್ಞಾಪಕಕ್ಕೆ ತಂದುಕೊ ನಮ್ಮ ದೊಡ್ಡಪೇಟೆ, ಚಿಕ್ಕಪೇಟೆ, ತರಗುಪೇಟೆಗಳಲ್ಲಿ ತಿರುಗಾಡಿ ಕಣ್ಣಿಗೆ ಎದ್ದು ಕಾಣುವ ಅಂಗಡಿ ಮಳಿಗೆ ಕಾರ್ಖಾನೆಗಳು ಕನ್ನಡಿಗರವಲ್ಲ. ದೊಡ್ಡ ಅಧಿಕಾರಸ್ಥಾನಗಳಲ್ಲಿಯೂ ಕನ್ನಡಿಗರಾದವರನ್ನು ಹುಡುಕಿ ಬೇಕಾಗಿದೆ. ಊರಿನಲ್ಲಿ ಗಣ್ಯರೂ ಪ್ರಬಲರೂ ಆದವರು ಕನ್ನಡಿಗರಲ್ಲದ ಕನ್ನಡಕ್ಕೆ ಪ್ರೋತ್ಸಾಹ ಕೊಡಲಿಲ್ಲವೆಂಬ ಆಕ್ಷೇಪಣೆಯನ್ನು ಹೊರು ಮಹಾಜನರಾದರೂ ಯಾರು? ಈ ಮಾತನ್ನು ನಾನು ಬಹು ಹೆದರಿಕೆ ಬಹು ಸಂಕೋಚದಿಂದಲೂ ಆಡುತ್ತಿದ್ದೇನೆ. ಕನ್ನಡ ಮನೆಮಾತಲ್ಲದ ಸಾವಿರಾರುಮಂದಿ ಬೆಂಗಳೂರಿನಲ್ಲಿ ವ್ಯಾಪಾರಕ್ಕಾಗಿಯೋ ಉದ್ಯೋಗಕ್ಕಾ ಬಂದು ನೆಲಸಿದ್ದಾರೆ. ಅವರ ವ್ಯಾಪಾರಗಳೂ ಉದ್ಯೋಗಗಳೂ ಬೆಳೆದು ಯಾಗುತ್ತಿರುವುದು ಕನ್ನಡಿಗರು ಕೊಡುತ್ತಿರುವ ಆಶ್ರಯದಿಂದ. ಕನ್ನ ಹೀಗೆ ಜೀವನ ಸಂಪಾದಿಸಿಕೊಂಡು ಕನ್ನಡ ನಾಡಿನಲ್ಲಿ ನೆಲಸಿರತಕ್ಕವರು ಹುಟ್ಟುನುಡಿ ಯಾವುದಾಗಿದ್ದರೂ ಕನ್ನಡವನ್ನೂ ತಮ್ಮದೆಂದು ಭಾವಿಸಿ ಪ್ರೋತ್ಸಾಹಕೊಟ್ಟು ಕನ್ನಡಿಗರೊಡನೆ ಬೆರೆಯುವುದು ಧರ್ಮವೆಂದು

ಈ ವಿಷಯದಲ್ಲಿ ನಮ್ಮ ದಿವಾನರವರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಹಾಕಿರುವ ಘನವಾದ ಉದಾಹರಣೆಯನ್ನು ಮಹಾಜನರ ಗಮನಕ್ಕೆ ತರಲು ನಾನು ಬಹು ವಿನಯದಿಂದ ಅಪ್ಪಣೆ ಬೇಡುತ್ತೇನೆ. ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಈ ಪರಿಷತ್ತು ಸ್ಥಾಪನೆಯಾದ ಕಾಲದಿಂದ ಅದರ ಅಭಿವೃದ್ಧಿಯಲ್ಲಿ ಆಸಕ್ತರಾಗಿರುವುದು ಮಾತ್ರವೇ ಅಲ್ಲದೆ, ಅದಕ್ಕೆ ಕಟ್ಟಡವನ್ನು ನಿರ್ಮಾಣಗೊಳಿಸುವುದರಲ್ಲಿ ಅಸಾಧಾರಣವಾದ ಶ್ರದ್ಧೆ ಉತ್ಸಾಹಗಳನ್ನು ತೋರಿ, ಅಲ್ಲಿಂದೀಚೆಗೆ ನೂರಾರು ತೆರಗಳಲ್ಲಿ ನಮಗೆ ಪ್ರೋತ್ಸಾಹವನ್ನು ಕೊಟ್ಟು, ನಮ್ಮ ಸಹಾಯಕ ವರ್ಗದ ಸದಸ್ಯರಾಗಿ, ಆಗಾಗ ಇಲ್ಲಿಗೆ ಬಂದು ಈ ಸಂಸ್ಥೆಯ ಯೋಗಕ್ಷೇಮಗಳನ್ನು ವಿಚಾರಿಸಿಕೊಂಡು, ನಮ್ಮವರೇ ಆಗಿದ್ದಾರೆ. ನಮ್ಮ ಶ್ರೀಮನ್ಮಹಾರಾಜರವರ ಘೋಷಣೆಯನ್ನು ಅಪೇಕ್ಷಿಸಿಕೊಂಡು ಬಂದಿರುವ ಎಲ್ಲ ಕನ್ನಡೇತರ ಮಹಾಜನರೂ ಅದೇ ಮಾರ್ಗವನ್ನನುಸರಿಸುವುದು ಅವರ ಕೃತಜ್ಞತೆಗೆ ಲಕ್ಷಣವಾಗಿಯೂ ಅವರ ಧರ್ಮವಾಗಿಯೂ ಇರುತ್ತದೆ. ಈ ನನ್ನ ವಿನಯದ ಪ್ರಾರ್ಥನೆಯನ್ನು ಅವರು ಕ್ರೋಧಮಾತ್ಸರ್ಯಗಳಿಲ್ಲದವರಾಗಿ, ಸ್ನೇಹದೃಷ್ಟಿಯಿಂದ ಲಾಲಿಸಬೇಕೆಂದು ನಾನು ಹಾರೈಸುತ್ತೇನೆ.

ಮಹಾಶಯರೆ, ಕನ್ನಡದ ಮೇಲೆ ನಾವು ತೋರಿಸುವ ಪ್ರೀತಿ ಕೇವಲ ಆವೇಶ ಮಾತ್ರದ್ದಲ್ಲ. ಅದು ಅತ್ಯಂತ ಉಪಯೋಗದ ವಿಚಾರದಿಂದ ಕೂಡಿದ್ದು. ಭಾಷೆ ಎಂಬುದಕ್ಕೆ ಇರುವ ಬೆಲೆ ಕೇವಲ (sentimental) ಅಭಿಮಾನದ್ದಲ್ಲ. ಭಾಷೆಯೇ ಒಂದು ಪರಮೋದ್ದೇಶವಲ್ಲ. ಅದು ಮನುಷ್ಯ ಜೀವನಕ್ಕೆ ಆವಶ್ಯಕವಾದ ಒಂದು ಸಾಧಕ ಮಾತ್ರ. ಕನ್ನಡ ದೇಶದಲ್ಲಿರತಕ್ಕ ಜನರ ಮನಸ್ಸನ್ನೂ ಆತ್ಮವನ್ನೂ ಮುಟ್ಟಬೇಕಾದರೆ ಕನ್ನಡ ಅವಕ್ಕೆ ಯುಕ್ತವಾದ ಸಾಧನ. ನಾನು ಕನ್ನಡಕ್ಕೆ ಬೆಲೆ ಕಟ್ಟುವುದು ಈ ದೃಷ್ಟಿಯಿಂದ. ಕನ್ನಡ ನಾಡಿನ ಜನದಲ್ಲಿ ಒಂದು ಹೊಸ ತೇಜಸ್ಸೂ, ಒಂದು ಹೊಸ ಶಕ್ತಿಯೂ, ಒಂದು ಹೊಸ ಉಲ್ಲಾಸವೂ ಆವಿರ್ಭವಿಸಬೇಕಾದರೆ ಕನ್ನಡ ಸಾಹಿತ್ಯ ಅದಕ್ಕೆ ಒಂದು ಉಪಕರಣವಾಗುತ್ತದೆ. ಈ ನಂಬಿಕೆಯಿಂದ ನಾವು ಸಾಹಿತ್ಯ ಸೇವಕರಾಗಿರತಕ್ಕದ್ದು. ಈ ದೊಡ್ಡ ಉದ್ದೇಶವನ್ನು ತಾವು ಮನಸ್ಸಿಗೆ ತಂದುಕೊಂಡು ನೋಡುವುದಾದರೆ ಆಗ ತಮ್ಮಗಳ ಸಹಾನುಭೂತಿ ಸಹಾಯಗಳು ಪರಿಷತ್ತಿಗೆ ಸಂಪೂರ್ಣವಾಗಿ ದೊರೆಯುವುವೆಂಬ ಧೈರ್ಯ ನನ್ನ ಹೃದಯದಲ್ಲಿ ಆಳವಾಗಿರುತ್ತದೆ.

ಮಹನೀಯರೆ, ತಾವುಗಳು ಈ ಉತ್ಸವದ ವಾರದಲ್ಲಿ ಪ್ರತಿದಿನವೂ ಎರಡು ಹೊತ್ತೂ ಇಲ್ಲಿಗೆ ದಯಮಾಡಿ ಬಂದು, ತಮ್ಮ ಬಂಧುಮಿತ್ರರನ್ನೂ ಕರೆತಂದು, ಪರಿಷತ್ತಿನ ಅಭೀಷ್ಟಗಳು ಸಂಪೂರ್ಣವಾಗಿ ನೆರವೇರುವಂತೆ ಮಾಡಬೇಕೆಂದು ಬೇಡುತ್ತೇನೆ. ಶ್ರೀಮಾನ್ ಮಾಧವರಾಯ ಮಹಾಶಯರೆ, ತಾವು ಈ ಸಮಾರಂಭವನ್ನು ತಮ್ಮ ಅಮೃತ ವಾಣಿಯಿಂದ ಉಪಕ್ರಮಗೊಳಿಸಬೇಕೆಂದು ಬೇಡುತ್ತೇನೆ.

---

## ರಾಜಮಂತ್ರಪ್ರವೀಣ ಶ್ರೀಮಾನ್ ಎನ್. ಮಾಧವರಾ
## ಬಿ.ಎ., ಬಿ.ಎಲ್., ಅವರ ಪ್ರಾರಂಭ ಭಾಷಣ

---

### ಪರಿಷತ್ತಿನ ಪೂರ್ವ ಚರಿತ್ರೆ

ಮಹಿಳೆಯರೆ, ಮಹಾಶಯರೆ,

ಕರ್ಣಾಟಕ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ನಡೆಯುವ ... ವಿಶೇಷ ಸಾಹಿತ್ಯೋತ್ಸವದ ಈ ಪ್ರಾರಂಭ ಸಭೆಯಲ್ಲಿ ಅಧ್ಯಕ್ಷತೆ ವಹಿಸ... ಬಹಳ ಸಂತೋಷ. ಬಹು ಕಾಲದವರೆಗೆ ಉಪೇಕ್ಷೆಗೂ ಕ್ಷೀಣತೆಗೂ ... ಕನ್ನಡ ಸಾಹಿತ್ಯವನ್ನು ಮೇಲಕ್ಕೆತ್ತಬೇಕಾದರೆ ಸಂಘಶಕ್ತಿ ಬೇಕೆಂಬುದ... ಕನ್ನಡ ವಿದ್ವಾಂಸರ ಮತ್ತು ಅಭಿಮಾನಿಗಳ ತಂಡವೊಂದು ಈ ಪ... ಇಪ್ಪತ್ತೆರಡು ವರ್ಷಗಳ ಹಿಂದೆ ಸ್ಥಾಪಿಸಿತು. ಪರಿಷತ್ತು ಆಗ ಪ್ರಾ... ಮೂಡಿಸಿದ ಉತ್ಸಾಹ ಇನ್ನೂ ಹಾಗೆಯೇ ಕುಗ್ಗದೆ ಇದೆ; ಮತ್ತು ... ಆಶಾಜನಕವಾದ, ಏಳಿಗೆಯ ಚರಿತ್ರೆ ಈಗ ಪರಿಷತ್ತಿನ ಪಾಲಿಗೆ ಇದೆ.

ಪರಿಷತ್ತಿನ ಕೆಲಸ ದುರ್ಗಮವಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ. ... ದಲ್ಲಿ ದೇಶಭಾಷೆಗಳು ಶಾಲೆಯ ವಿದ್ಯಾಭ್ಯಾಸ ಕ್ರಮದಲ್ಲಿ "ಸಿ... (Cinderella) ಳಂತೆ (ಎಂದರೆ, ಉಪೇಕ್ಷಿತವಾಗಿ) ಇದ್ದುವು. ದೇಶ... ಬೋಧಕನ ಯಜಮಾನರಾಗಲಿ (Employers), ಸಹೋದ್ಯೋಗಿಗಳಾಗ... ತಕ್ಕ ಮನ್ನಣೆ ಕೊಡುತ್ತಿರಲಿಲ್ಲ; ಆ ಬೋಧಕನಾದರೋ ತನ್ನ ಬೋ... ವಿದ್ಯಾರ್ಥಿಗಳ ಆಸಕ್ತಿಯನ್ನು ಸೆಳೆದು ನಿಲ್ಲಿಸುವುದಕ್ಕಾಗಿ ಹಳಸು ಹಾಸ್ಯ... ಹುಡುಗಾಟಿಕೆಯಲ್ಲಿಯೂ ಕಾಲ ಕಳೆಯಬೇಕಾಗಿತ್ತು. ಈ ಪರಿಸ್ಥಿತಿಯ... ಭಾಷೆಗಳ ವ್ಯಾಸಂಗದಲ್ಲಿ ಜನಸಾಮಾನ್ಯಕ್ಕಿದ್ದ ಉಪೇಕ್ಷೆಯನ್ನು ವೃತ್ತಿ... ಸಾಂಸ್ಕೃತಿಕ ಮತ್ತು ವ್ಯಾವಹಾರಿಕ ವಿಷಯಗಳ ಪರಿಜ್ಞಾನಕ್ಕೆ ... ಭಾಷೆಯೊಂದೇ ವ್ಯಾಸಂಗಮಾಡಲು ತಕ್ಕದ್ದು ಎಂಬ ಭಾವನೆಯೂ ... ಪರಿಸ್ಥಿತಿಯನ್ನು ಇನ್ನೂ ಶೋಚನೀಯವನ್ನಾಗಿ ಮಾಡಿತು.

ಇವೆಲ್ಲ ಹಳೆಯ ಭಾವನೆಗಳಾಗಿ ಪರಿಣಮಿಸುತ್ತಿವೆ. ಸಾಹಿತ್ಯ ಪ್ರಪ... ಒಂದು ಹೊಸ ಬಗೆಯಿದೆ. ಹಿಂದಿನವೂ ಇಂದಿನವೂ ಆದ, ಎಲ್ಲ ಭಾರತೀಯ... ವಿಚಾರಗಳ ವಿಷಯದಲ್ಲಿಯೂ ಒಂದು ಹೆಮ್ಮೆ ಹರಡಿದೆ. ಮತ್ತು ರಾ... ಚಲನ ವಲನಗಳು ದೇಶಭಾಷೆಗಳ ಪುನರುಜ್ಜೀವನಕ್ಕೆ ಒಂದು ಹೆಚ್ಚಿನ ... ವನ್ನು ಕೊಟ್ಟಿವೆ.

### ರಾಜಕೀಯ ವಿಚಾರಕ್ಕೂ ಭಾಷಾ ವಿಚಾರಕ್ಕೂ ಸಂಬಂಧ

ಇಂಡಿಯಾ ದೇಶದಲ್ಲಿ, ರಾಜಕೀಯ ವಿಚಾರಕ್ಕೂ ಭಾಷಾ ವಿಚಾರಕ್ಕೂ ... ನಿಕಟ ಸಂಬಂಧವನ್ನು ನೆಹರು ವರದಿಯ (೧೯೨೮) ಒಂದು ಭಾಗವು ... ತಿಳಿಸುತ್ತದೆ; ಅದನ್ನು ಪುನಃ ಇಲ್ಲಿ ಹೇಳಬಹುದು. ಅದು ಹೀಗಿದೆ: "ವಿದ್ಯಾ...

ಸಾಮಾನ್ಯ ಸಂಸ್ಕೃತಿಯ, ಮತ್ತು ಜೀವನದ ಅನೇಕ ಶಾಖೆಗಳ ಶೀಘ್ರವಾದ ಬೆಳವಣಿಗೆ ಭಾಷೆಯಮೇಲೆ ನಿಂತಿದೆ ಎಂಬ ಅಂಶವು ಚೆನ್ನಾಗಿ ಮಾನ್ಯವಾಗಿದೆ. ಪರಭಾಷೆ ಬೋಧನ ಭಾಷೆಯಾಗಿದ್ದರೆ, ವ್ಯಾಪಾರ ವ್ಯವಹಾರಗಳೂ ನಾಡಿನ ಜೀವನವೂ ಕುಬ್ಜವಾಗಬೇಕು. ಪ್ರಜಾ ಸರಕಾರವು ಸಾರ್ವಜನಿಕ ಕಾರ್ಯಗಳಲ್ಲಿ ಪ್ರಯೋಜನಕಾರಿಯಾಗುವಂತೆ ಭಾಗವಹಿಸಬೇಕಾದರೆ ಆ ಸರಕಾರದ ತಿಳಿವಳಿಕೆ ಚೆನ್ನಾಗಿರಬೇಕು. ಮತ್ತು ಅದು ಸಾರ್ವಜನಿಕ ಕಾರ್ಯವಿಚಾರಗಳನ್ನು ಗ್ರಹಿಸಿಕೊಳ್ಳಲು ಶಕ್ತವಾಗಿರಬೇಕು. ಆದ್ದರಿಂದ, ನಾಡಿನ ರಾಜಕೀಯ ಮತ್ತು ವ್ಯವಹಾರ ವಿಚಾರಗಳನ್ನು ಜನತೆಗೆ ತಿಳಿಯುವ ಭಾಷೆಯಲ್ಲಿ ನಡಸುವುದು ಅವಶ್ಯಕವಾಗುತ್ತದೆ. ಪ್ರಾಂತಗಳ ವಿಚಾರದಲ್ಲಿ, ಆಯಾ ಪ್ರಾಂತೀಯ ಭಾಷೆಯೇ ಆಗಬೇಕು.'' ಈ ತತ್ತ್ವವನ್ನು ಕಾರ್ಯರೂಪಕ್ಕೆ ತರುವ ವಿಚಾರದಲ್ಲಿ ಇರುವ ತೊಂದರೆಗಳನ್ನು ನೆಹರು ಸಪುತಿಯೇ ತಿಳಿದುಕೊಂಡಿದ್ದಿತು; ಮತ್ತು, ಒರಿಸ್ಸಾ ಪ್ರಾಂತ ವಿನಾ ಭಾಷಾ ಪ್ರಾಂತಗಳೆನ್ನಿಸಿಕೊಳ್ಳಬಹುದಾದವುಗಳ ಪೈಕಿ ಯಾವುದೂ ಇನ್ನೂ ಹಾಗೆ ರೂಪುಗೊಂಡಿಲ್ಲ. ಉಳಿದುವು ಆದರ್ಶಗಾರನ ಕನಸು, ರಾಜಕೀಯ ಕುಶಲಿಯ ನಿರಾಶೆ ಎಂದು ಎಲ್ಲರಿಗೂ ತೋರಬಹುದು.

### ಪರಿಷತ್ತಿನ ಧ್ಯೇಯ

ಪರಿಷತ್ತು ಶುದ್ಧವಾಗಿ ಸಾಹಿತ್ಯ ಸಂಸ್ಥೆ; ಅದು ಯಾವ ಬಗೆಯ ರಾಜಕೀಯ ಕಾರ್ಯಗಳನ್ನೂ ಕೈಗೊಳ್ಳುವುದಿಲ್ಲ. ಆದರೆ, ಸ್ವಲ್ಪಮಟ್ಟಿಗೆ, ಕನ್ನಡ ನಾಡಿನ ಬೇರೆಬೇರೆ ಪ್ರಾಂತಗಳ ಸಾಹಿತಿಗಳನ್ನೂ ಮುಂದಾಳುಗಳನ್ನೂ ಒಟ್ಟುಗೂಡಿಸಿ ಅವರಲ್ಲಿ ಅನ್ಯೋನ್ಯ ಭಾವವನ್ನು ಬೆಳಸಲು ಪರಿಷತ್ತು ಪ್ರಯತ್ನಪಟ್ಟಿದೆ. ಅದರ ಸಮಿತಿಯಲ್ಲಿ ಕನ್ನಡ ನಾಡಿನ ಎಲ್ಲ ಪ್ರಾಂತಗಳವರೂ ಇದ್ದಾರೆ, ಮತ್ತು ಅವರು ಪರಿಷತ್ತಿನ ಕಾರ್ಯಗಳಲ್ಲಿ ತೀವ್ರವಾದ ಆಸಕ್ತಿಯನ್ನು ವಹಿಸಿ, ತಮ್ಮ ತಮ್ಮ ಪ್ರದೇಶಗಳು ಅಖಂಡವಾದ ಒಂದು ಭಾಷಾ ಪ್ರಾಂತದ ಭಾಗಗಳು ಎಂಬ ಭಾವನೆಯನ್ನು ಬೆಳಸಿ ಕಾಪಾಡುತ್ತಿದ್ದಾರೆ.

### ಪರಿಷತ್ತು ನಡಸಿರುವ ಕಾರ್ಯಕಲಾಪಗಳು

ಪ್ರಾಚೀನ ಕನ್ನಡ ಕಾವ್ಯಗಳನ್ನು ಸಂಪಾದಿಸಿ ಪ್ರಕಟಿಸುವುದು ಪರಿಷತ್ತಿನ ಉದ್ದೇಶಗಳಲ್ಲಿ ಒಂದು. ಇದನ್ನು ಪರಿಷತ್ತು ತನ್ನ ಶಕ್ತಿ ಉಪಪತ್ತಿ ಇರುವ ಮಟ್ಟಿಗೂ ನೆರವೇರಿಸಿದೆ. ಹೀಗೆ ಸಂಪಾದಿಸಿ ಪ್ರಕಟಿಸಿರುವ ಗ್ರಂಥಗಳಲ್ಲಿ ಪ್ರಸಿದ್ಧ ಕಾವ್ಯವಾದ 'ಪಂಪಭಾರತ', ಹಳಗನ್ನಡ ವ್ಯಾಕರಣವಾದ 'ಶಬ್ದಮಣಿದರ್ಪಣ'ವೆಂಬ ಪ್ರಾಚೀನಗ್ರಂಥ ಮತ್ತು ಜನಪ್ರಿಯವಾದ 'ಸೋಮೇಶ್ವರ ಶತಕ'—ಇವು ಮುಖ್ಯವಾದುವು. ಕನ್ನಡ ನಾಡಿನ ಸಾಹಿತ್ಯ ಕಾರ್ಯವನ್ನು ತಕ್ಕಂತೆ ಪ್ರಚಾರಮಾಡಲು ಒಂದು ತ್ರೈಮಾಸಿಕ ಪತ್ರಿಕೆಯನ್ನು ಸಹ ಕ್ರಮವಾಗಿ ಪ್ರಕಟಿಸುತ್ತಿದೆ.

ಕಳೆದ ಕೆಲವು ವರ್ಷಗಳಲ್ಲಿ, ನಾಡಿನಲ್ಲಿ ಹುಟ್ಟಿರುವ ನಾನಾ ಕರ್ಣಾಟಕ ಸಂಘಗಳನ್ನು ತನ್ನ ಅಂಗ ಸಂಸ್ಥೆಗಳಾಗಿ ಸ್ವೀಕರಿಸಿ, ತಾನು ಅವುಗಳ ಕೇಂದ್ರ ಸಂಸ್ಥೆಯಾಗಿ

ಕೆಲಸಮಾಡುತ್ತಿದೆ. ಈ ಸಂಘಗಳ ಕಾರ್ಯಕಲಾಪಗಳ ವರದಿಗಳನ್ನು ಪ... ಯಲ್ಲಿ ಪ್ರಕಟಪಡಿಸುತ್ತಿದೆ. ಇದರಿಂದ ಆ ಸಂಸ್ಥೆಗಳಲ್ಲಿ—ತಾವು ಒಂ... ಜನರ ಮೇಲ್ಮೆಗೆ ಕೆಲಸಮಾಡುತ್ತಿರುವ ಒಂದು ಮಹಾಸಂಸ್ಥೆಯ ... ಎಂಬ ಭಾವನೆ ಬೆಳೆಯುತ್ತಿದೆ.

## ಜನರಂಜಕವಾದ ಉಪನ್ಯಾಸಗಳು

ಕೆಲವು ವರ್ಷಗಳ ಹಿಂದೆ, ಪರಿಷತ್ತಿಗೆ ಸರಕಾರದ ಸಹಾಯದ ... ವಾಸವಾಗಿರುವ ತನ್ನ ಸ್ವಂತ ಕಟ್ಟಡವನ್ನು ಹೊಂದಲು ಸಾಧ್ಯವಾಯಿ... ಪರಿಷತ್ತಿನಲ್ಲಿ ಒಮ್ಮೊಮ್ಮೆ ಉಪನ್ಯಾಸಗಳನ್ನು ಏರ್ಪಡಿಸುತ್ತಿತ್ತು; ... ಈಗಿನ ಪರಿಷದುಪಾಧ್ಯಕ್ಷರು ಶ್ರೀಮಾನ್ ಡಿ. ವಿ. ಗುಂಡಪ್ಪನವ... ಪ್ರಕಾರ, ಜನಸಾಮಾನ್ಯದ ತಿಳಿವಳಿಕೆಗಾಗಿಯೂ ಮೇಲ್ಮೆಗಾಗಿಯೂ ... ಉಪನ್ಯಾಸಗಳು ಹೆಚ್ಚು ಸಂಖ್ಯೆಯಲ್ಲಿ ನಡೆಯುತ್ತ, ಪರಿಷತ್ತಿನ ಒ... ಕಾರ್ಯಕ್ರಮವಾಗಿ ಅವು ಪರಿಣಮಿಸಿವೆ. ಈಗ, ಒಟ್ಟು ವರ್ಷದಲ್ಲಿ ಉದ್ದೇಶಿಸಿರುವ ಎಲ್ಲ ಉಪನ್ಯಾಸಗಳ 'ಪಂಚಾಂಗ'ವೊಂದು ತಯಾರಾ... ತಪ್ಪದೆ ಉಪನ್ಯಾಸಗಳು ನಡೆಯುತ್ತವೆ. ಈ ಉಪನ್ಯಾಸಗಳನ್ನು ಕೆ... ಜೀವನದ ಬೇರೆಬೇರೆ ಶಾಖೆಗಳಲ್ಲಿದ್ದುಕೊಂಡು ತಮ್ಮ ತಮ್ಮ ವಿಷಯಗ... ರಾದವರು, ಮನ್ನಣೆಪಡೆದವರು; ಉಪನ್ಯಾಸಗಳ ವಿಷಯಗಳು ... ವಾದುವು. ಅವು ಜನಪ್ರಿಯವಾಗಿರುವುದು ಉಚಿತವಾಗಿಯೇ ಇದೆ.

## ವಿಶೇಷ ಸಾಹಿತ್ಯೋತ್ಸವದ ಪ್ರಯೋಜನ

ಪರಿಷತ್ತು ಕೈಗೊಂಡಿರುವ ಇನ್ನೊಂದು ಪ್ರಮುಖವಾದ ಕಾ... ಈಚೆಗೆ ಪ್ರಸಿದ್ಧವಾಗಿರುವ ವಿಶೇಷ ಸಾಹಿತ್ಯೋತ್ಸವವೆಂಬುದು. ಸಂಸ್ಥೆ... ಕಡೆಗಳಲ್ಲಿಯೂ ಮಕ್ಕಳಿಗೆ ಪಾಠ ಹೇಳುವ ಉಪಾಧ್ಯಾಯರುಗಳಿಗೆ, ಆಧು... ಗಳ ವಿಷಯಗಳನ್ನು ಕುರಿತು ಆಯಾ ವಿಷಯಗಳಲ್ಲಿ ಪ್ರವೀಣರಾದ ವಿದ್ವಾ... ಕೊಡುವ ಉಪನ್ಯಾಸಗಳನ್ನು ಕೇಳಲು ಅವಕಾಶ ಕಲ್ಪಿಸುವುದೇ ಈ... ಮುಖ್ಯೋದ್ದೇಶ. ಉಪಾಧ್ಯಾಯರಲ್ಲದೆ ಇತರರೂ ಉತ್ಸವದ ಪ್ರ... ಹೊಂದಲು ಅವಕಾಶವಿದೆ. ಒಟ್ಟಿನಲ್ಲಿ ಈ ಉತ್ಸವವು ಜನಸಾಮಾನ್ಯದಲ್ಲಿ... ವನ್ನು ಮೂಡಿಸಿದೆ.

## ಲೇಖಕ ಗೋಷ್ಠಿ

ವಾರ್ಷಿಕ ಸಮ್ಮೇಳನ ಮತ್ತು ಸಾಹಿತ್ಯೋತ್ಸವಗಳ ಸಂದರ್ಭಗಳಲ್ಲಿ ಕೆಲವು ವಿಶೇಷ ಕಾರ್ಯಕ್ರಮಗಳನ್ನೂ ಏರ್ಪಡಿಸುತ್ತದೆ. ಈಚೆಗೆ ... ಗಳಿಂದ ನಡೆಯುತ್ತಿರುವ ಲೇಖಕ ಗೋಷ್ಠಿ ಅಂಥ ವಿಶೇಷ ಕಾರ್ಯಗಳಲ್ಲಿ ಸಮ್ಮೇಳನ ಮತ್ತು ಉತ್ಸವ ಕಾಲಗಳಲ್ಲಿ ಸೇರುವ ಈ ಗೋಷ್ಠಿಗಳಲ್ಲಿ ತಮ್ಮ ತಮ್ಮ ಕೃತಿಗಳನ್ನು ಜನರಿಗೆ ಓದಿ ಪರಿಚಯಮಾಡಿಕೊಡಲು ಅವಕಾಶ ದೊರೆತಿದೆ. ತನ್ಮೂಲಕ, ಜನರು ಈಚೀಚಿನ ಯಾವ ಬಳ್ಳಿ...

ಕೃತಿಯಲ್ಲಿಯಾದರೂ ಆಸಕ್ತಿ ತೋರಿ ಅದನ್ನು ತಮ್ಮದಾಗಿ ಎಣಿಸಿ ಪ್ರೀತಿಸಲು ಕಲಿಯುತ್ತಿದ್ದಾರೆ. ಲೇಖಕರು ಸಭೆಗಳ ಮೆಚ್ಚಿಕೆಯಿಂದ ಪ್ರೋತ್ಸಾಹವನ್ನು ಹೊಂದಿದ್ದಾರೆ.

### ಇತರ ವಿಶೇಷ ಕಾರ್ಯಗಳು

ವಿಶೇಷ ಸಾಹಿತ್ಯೋತ್ಸವ ಸಂದರ್ಭಗಳಲ್ಲಿ ಏರ್ಪಾಟಾಗಿರುವ ಇತರ ಕೆಲವು ವಿಶೇಷ ಕಾರ್ಯಗಳು ಇವು: ಆಯಾ ವರ್ಷದಲ್ಲಿ ಪ್ರಕಟವಾಗಿರುವ ಕನ್ನಡ ಗ್ರಂಥಗಳ ಪ್ರದರ್ಶನ; ಕನ್ನಡ ನಾಡಿನ ಪ್ರಾಚೀನ ಕಲೆಯಾದ ಕಾವ್ಯ ವಾಚನವನ್ನು ಕಲಿಸಲು ತರಗತಿಗಳು; ಕನ್ನಡ ಅಕ್ಷರ ಸಂಸ್ಕರಣ ವಿಚಾರವನ್ನು ಪರ್ಯಾಲೋಚಿಸಲು ಒಂದು ಸಮ್ಮೇಳನ. ಈ ವರ್ಷ ಒಂದು ಕಲಾ ಪ್ರದರ್ಶನವನ್ನು ಏರ್ಪಡಿಸಲಾಗಿದೆ; ಇದು ಪ್ರಥಮ ಪ್ರಯತ್ನ.

### ನಿಘಂಟುವಿನ ರಚನೆ

ಕನ್ನಡದಲ್ಲಿ ಈಗ ಸಾಗುತ್ತಿರುವ ಒಂದು ಮಹಾಕಾರ್ಯವೆಂದರೆ ಇಂಗ್ಲಿಷ್-ಕನ್ನಡ ನಿಘಂಟುವಿನ ರಚನೆ. ಪರಿಷತ್ತು ಈ ಕೆಲಸದಲ್ಲಿ ವಿಶೇಷವಾದ ಆಸಕ್ತಿಯನ್ನು ವಹಿಸಿದೆ ಮತ್ತು ಪರಿಷತ್ತಿನ ಪ್ರಮುಖ ಸದಸ್ಯರಲ್ಲಿ ಕೆಲವರು ನಿಘಂಟುವಿನ ಕೆಲಸದಲ್ಲಿಯೂ ಭಾಗವಹಿಸಿದ್ದಾರೆ. ಇದು ಬಹು ದೊಡ್ಡ ಕಾರ್ಯವೇ ಆದರೂ, ನಿಘಂಟುವಿನ ಪ್ರಕಟನೆಯು ಸದ್ಯದಲ್ಲಿಯೇ ಆಗುವಂತೆ ಅದರ ಕೆಲಸ ಶೀಘ್ರವಾಗಿ ಸಾಗೀತೆಂದು ನಂಬುತ್ತೇನೆ.

### ಸಾಹಿತ್ಯೋತ್ಸವದಿಂದ ಉಪಾಧ್ಯಾಯರಿಗಾಗುವ ಪ್ರಯೋಜನ

ಪರಿಷತ್ತಿನೊಡನೆ ಹೆಚ್ಚಾಗಿ ಬಳಕೆಯುಳ್ಳ ನನ್ನ ಮಾನ್ಯ ಮಿತ್ರರೊಬ್ಬರು ನನಗೆ ಒದಗಿಸಿಕೊಟ್ಟ ಅಂಶಗಳ ಆಧಾರದಮೇಲೆ ಪರಿಷತ್ತಿನ ಕಾರ್ಯಕಲಾಪ ವಿವರಗಳ ಸಂಗ್ರಹವನ್ನು ತಮ್ಮ ಮುಂದೆ ಇರಿಸಿದ್ದೇನೆ. ಮುಖ್ಯವೂ ವಿವಿಧವೂ ಆದ ಆ ಕಾರ್ಯಗಳಲ್ಲಿ ಪ್ರಕೃತ ಈ ದಿನ ನಮಗೆ ಹೆಚ್ಚಾಗಿ ಸಂಬಂಧಿಸಿರುವುದು ವಿಶೇಷ ಸಾಹಿತ್ಯೋತ್ಸವ. ಅದರ ಹೆಸರು ಎಷ್ಟು ಆಕರ್ಷಕವಾಗಿದೆಯೋ ಅದರ ಕಾರ್ಯಭಾಗಗಳೂ ಅಷ್ಟೇ ಆಕರ್ಷಕವಾಗಿವೆ. ಉಪಾಧ್ಯಾಯನಿಗೆ ಕಲಿಸಿ, ಅವನನ್ನು ಪರಿಷತ್ತಿನ ಪ್ರಚಾರ ಕಾರ್ಯದ ಅನುಭೋಗಿಯೂ ಸಾಧಕನೂ ಆಗಿ ಮಾಡುವ ಈ ಆಲೋಚನೆ ಬಹು ಚೆನ್ನಾಗಿದೆ. ಈ ಉತ್ಸವಕ್ಕೆ ಸುಮಾರು ೪೦೦ ಅಥವಾ ೫೦೦ ಮಂದಿ ಉಪಾಧ್ಯಾಯರು ಬಂದು, ವಿಜ್ಞಾನ, ರಾಜ್ಯಶಾಸ್ತ್ರ ಮತ್ತು ಸಾಹಿತ್ಯಗಳಲ್ಲಿ ಆಗಿರುವ ಈಗಿನ ಬೆಳವಣಿಗೆಗಳನ್ನು ಕುರಿತ ಉಪನ್ಯಾಸಗಳನ್ನು ಕೇಳುವರೆಂದು ತಿಳಿದುಬಂದಿದೆ. ಈ ಉಪನ್ಯಾಸಗಳನ್ನು ತಮ್ಮ ತಮ್ಮ ವಿಷಯಗಳಲ್ಲಿ ವಿಶೇಷ ವ್ಯಾಸಂಗಮಾಡಿರುವವರು ಸರಳವಾದ ಕನ್ನಡದಲ್ಲಿ ಕೊಡುತ್ತಾರೆ. ಜೊತೆಗೆ, ವಿಜ್ಞಾನ ಕಾರ್ಯಶಾಲೆಗಳನ್ನೂ ಕಾರ್ಖಾನೆಗಳನ್ನೂ ಸಂದರ್ಶಿಸಿಕೊಂಡು ಬರಲು ಅನುಕೂಲ ಮಾಡಿದೆ. ಈ ಎಲ್ಲ ಕಾರ್ಯಕ್ರಮಗಳಲ್ಲಿಯೂ ಭಾಗವಹಿಸಿದ ಉಪಾಧ್ಯಾಯನು ತನ್ನ ಶಿಷ್ಯರಿಗೆ ಹೇಗೆ ಪಾಠ ಹೇಳಬೇಕು, ಮತ್ತು ತಾನು ಅವರಿಗೆ ಹೇಳುವ ಪಾಠ ಉಲ್ಲಾಸಕರವೂ ಪ್ರಯೋಜನಕರವೂ ವಾಸ್ತವಿಕವೂ (realistic) ಆಗಬೇಕಾದರೆ

ಏನು ಮಾಡಬೇಕು ಎಂಬುದನ್ನು ಅರಿತುಕೊಳ್ಳುವುದರಲ್ಲಿ ಸಂದೇಹವಿಲ್ಲ. ಭೂಗೋಳ ಮತ್ತು ಇತರ ಕೆಲವು ವಿಷಯಗಳನ್ನು ಕನ್ನಡದಲ್ಲಿ ಬೋಧಿಸು ರುವುದು ತನಗೆ ಕಷ್ಟಕರವೆಂದು ಆತನು ಭಾವಿಸಿರಬಹುದು. ಆದರೆ ಜಟಿಲವಾದ ವಿಷಯಗಳನ್ನು ಆ ವಿಷಯಗಳಲ್ಲಿ ಸಮರ್ಥರಾದವರು ಕ ತಿಳಿಸಬಲ್ಲರೆಂಬುದನ್ನು ಆತನು ಕಂಡುಕೊಂಡಮೇಲೆ, ತಾನೂ ಸಹ, ಕಾರ್ಯರಂಗದಲ್ಲಿ ಪ್ರಯೋಜನಕರವಾಗುವಂತೆ, ಈ ಭಾಷೆಯನ್ನು ಉಪ ಕೊಳ್ಳಲು ಅಷ್ಟಾಗಿ ಹಿಂಜರಿಯುವುದಿಲ್ಲ. ಜೀವನದ ಇತರ ಕ್ಷೇತ್ರ ನಮ್ಮಂತೆ ಉಪಾಧ್ಯಾಯರೂ ಸಹ ಸ್ವಾಭಾವಿಕವಾಗಿ ಅನುಕರ ಆದ್ದರಿಂದ, ಒಳ್ಳೆಯ ಮೇಲ್ಪಂಕ್ತಿಯನ್ನು ಕೂಡಲೆ ಅನುಸರಿಸುವರು.

## ಆಧುನಿಕ ಗ್ರಂಥಕರ್ತರ ಸೇವೆ

ಈಚೆಗೆ ನಮ್ಮ ನಾಡಿನಲ್ಲಿ ಕನ್ನಡ ಸಾಹಿತ್ಯ ವಿಷಯದಲ್ಲಿ ಮತ್ತೊ ಹುಟ್ಟುತ್ತಿರುವುದಾದರೆ, ಈ ಬಗ್ಗೆ ಸಲ್ಲತಕ್ಕ ಗೌರವದ ಒಂದು ಪಾಲು ವ್ಯಾಸಂಗದ ದೀಪವನ್ನು ಉರಿಯುತ್ತಿರುವಂತೆ ಕಾಪಾಡಿಕೊಂಡು ಬಂ ರಿಗೂ ಇತರರಿಗೂ ಅಗತ್ಯವಾಗಿ ಸಲ್ಲಬೇಕು. ಆ ಗೌರವದ ಬಹು ಇಂಗ್ಲಿಷ್ ಅಥವಾ ವಿಜ್ಞಾನಗಳ ಪಾಂಡಿತ್ಯದ ಜೊತೆಗೆ ಜನತೆಗೆ ಉಪ ವಂತೆ ತಮ್ಮ ಆಲೋಚನೆಗಳನ್ನೂ ಭಾವನೆಗಳನ್ನೂ ತಿಳಿಸಲು ಉದ್ದೇಶಪೂ ಕನ್ನಡವನ್ನೇ ಆರಿಸಿಕೊಂಡು ಮಾತೃಭಾಷೆಯಲ್ಲಿ ನೈಜಪ್ರೇಮವನ್ನಿಟ್ಟು ಆಧುನಿಕ ಗ್ರಂಥಕರ್ತರಿಗೂ ಸೇರಬೇಕಾಗಿದೆ. ಇವರು ಸರಳವಾದ ಕನ್ನಡ ಶೈಲಿಯ ವಿಕಾಸಕ್ಕೆ ಸಹಾಯಮಾಡುತ್ತಿದ್ದಾರೆ.

ಈಗಿನ ಕಾಲದ ಸಾಹಿತ್ಯದ ಮೇಲೆ ಇರುವ ಒಂದು ಆಕ್ಷೇಪಣೆಯ ಆಧುನಿಕ ಸಾಹಿತ್ಯವು ಕಥೆಗಳು ಮತ್ತು ಲಘು ಕವನಗಳನ್ನು ಮಾತ್ರ ಜೀವನ ಚರಿತ್ರೆ, ಐತಿಹಾಸಿಕ ಗ್ರಂಥಗಳು, ಪ್ರಯಾಣ ಪ್ರವಾಸ ಮುಂತಾದ ಇತರ ಸಾಹಿತ್ಯ ಪ್ರಭೇದಗಳನ್ನು ಬಹುಮಟ್ಟಿಗೆ ಬಿಟ್ಟುಬಿಟ್ಟಿದೆ ಅಲ್ಲದೆ, ಇತರ ಭಾಷೆಗಳಲ್ಲಿರುವ ಉತ್ತಮ ಗ್ರಂಥಗಳನ್ನು ಭಾಷಾಂತ ಕೆಲಸವನ್ನು ಸಾಕಷ್ಟು ಮಂದಿ ಕೈಕೊಂಡಿಲ್ಲವೆಂದೂ ಹೇಳುತ್ತಾರೆ. ಯಾ ಸಾಹಿತ್ಯದ ಬೆಳವಣಿಗೆಯಲ್ಲಿಯಾದರೂ ಪರಭಾಷೆಯ ಗ್ರಂಥಗಳ ಭಾಷಾಂ ಒಂದು ಸ್ಥಾನವಿದೆ. ಈ ಸಲಹೆಗಳ ವಿಚಾರವಾಗಿ ಏನೊಂದು ಬೆಲೆಯುಳ್ಳ ವನ್ನೇನೂ ಕೊಡಲಾರೆ. ಆದರೂ, ಪರಿಷತ್ತಿನ ವಿಚಾರದಲ್ಲಿ ಮಾತ್ರ, ಅದು ಈ ಸಾಹಿತ್ಯ ಸೃಷ್ಟಿಯಲ್ಲಿ ಇರಬಹುದಾದ ಕೋರೆ ಕೊರತೆಗಳನ್ನು ತನಗೆ ಸಾ ಮಟ್ಟಿಗೆ ತಿದ್ದಲು ಪ್ರಯತ್ನಪಡುವುದೆಂಬಲ್ಲಿ ನನಗೆ ಸಂದೇಹವಿಲ್ಲ.

## ಪರಿಸಮಾಪ್ತಿ

ಇನ್ನು, ಈ ದಿನದ ಉತ್ಸವ ಕಾರ್ಯದಲ್ಲಿ ಭಾಗವಹಿಸಲು ನನ್ನನ್ನು ಸಿರುವ ಪರಿಷತ್ತಿನ ಅಧಿಕಾರಿಗಳಿಗೆ ನನ್ನ ಕೃತಜ್ಞತೆಯನ್ನು ತಿಳಿಸಿ, ಗಳು ಸರ್ವವಿಧಗಳಲ್ಲಿಯೂ ಸಫಲವಾಗಲೆಂದು ಹಾರೈಸುತ್ತೇನೆ.

# ಮಹಿಳೆಯರ ಸಭೆಯ ಅಧ್ಯಕ್ಷಸ್ಥಾನವನ್ನು ಅಲಂಕರಿಸಿದ್ದ ಶ್ರೀಮತಿ ನ್ಯಾಪತಿ ನರಸಮ್ಮನವರ ಭಾಷಣ

ಪ್ರಿಯ ಸೋದರಿಯರೆ,

ಕರ್ಣಾಟಕ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ನಡೆಯುವ ಈ ನಾಲ್ಕನೆಯ ವಿಶೇಷ ಸಾಹಿತ್ಯೋತ್ಸವದ ಸ್ತ್ರೀಯರ ಸಭೆಯಲ್ಲಿ ಭಾಗಿಯಾಗಲು ನನಗೆ ಬಹಳ ಸಂತೋಷವಾಗಿದೆ.

ಸಾಹಿತ್ಯೋತ್ಸವದ ಕಾರ್ಯಕ್ರಮವು ವರ್ಷೇ ವರ್ಷೇ ಅಭಿವೃದ್ಧಿಯನ್ನು ಸೂಚಿಸುತ್ತಿದೆ. ಈ ಸಲ ಹೊಸದಾಗಿ ಕಲಾಪ್ರದರ್ಶನವೊಂದು ಏರ್ಪಾಟಾಗಿದೆ. ಇದೂ ಅಲ್ಲದೆ, ಪ್ರತ್ಯೇಕವಾಗಿ ಸ್ತ್ರೀಯರ ಸಭೆಯನ್ನು ಕೂಡಿಸಿ, ತನ್ಮೂಲಕ ಎಲ್ಲಾ ವರ್ಗಗಳ ಹೆಂಗಸರಿಗೂ ಪ್ರವೇಶಕ್ಕೆ ಅನುಕೂಲಪಡಿಸಿ, ಸ್ತ್ರೀಯರು ಕನ್ನಡ ಭಾಷೆಯ ಅಭಿಮಾನವನ್ನು ಹೆಚ್ಚಿಸಿಕೊಂಡು ಅದನ್ನು ಅಭಿವೃದ್ಧಿಗೊಳಿಸಲು ಅವಕಾಶ ಕಲ್ಪಿಸಿ ಕೊಟ್ಟದ್ದಕ್ಕಾಗಿ ಈ ಕರ್ಣಾಟಕ ಸಾಹಿತ್ಯ ಪರಿಷತ್ತಿಗೆ ವಂದನೆಗಳನ್ನು ಅರ್ಪಿಸುವುದು ನಮ್ಮ ಕರ್ತವ್ಯವಾಗಿದೆ.

ಪೂರ್ವಕಾಲದಲ್ಲಿದ್ದ ಸ್ತ್ರೀ ಶಿಕ್ಷಣಕ್ಕೂ ಆಧುನಿಕ ಸ್ತ್ರೀ ವಿದ್ಯಾಭ್ಯಾಸಕ್ಕೂ ಬಹಳ ವ್ಯತ್ಯಾಸವಿದೆ. ಪುರುಷರು ಗುರುಕುಲ ವಿದ್ಯಾಭ್ಯಾಸವನ್ನು ಮಾಡುತ್ತಿದ್ದಂತೆಯೇ ಸ್ತ್ರೀಯರು ಸಂಸ್ಕೃತ ಸಂಗೀತ ಮುಂತಾದುವುಗಳನ್ನು ಅಭ್ಯಸಿಸುತ್ತಿದ್ದರು. ಅನೇಕರು ಅವುಗಳಲ್ಲಿ ಪ್ರವೀಣತೆಯನ್ನು ಕೂಡ ಪಡೆಯುತ್ತಿದ್ದರು. ಪಾಶ್ಚಿಮಾತ್ಯರ ಸಂಪರ್ಕ ಉಂಟಾದ ಮೇಲೆ ವಿದ್ಯಾಭ್ಯಾಸಕ್ರಮವು ಪುರುಷರಂತೆಯೇ ಸ್ತ್ರೀಯರಿಗೂ ಒದಲಾಯಿಸಿತು. ಈಗ ಸ್ತ್ರೀಯರಿಗೆ ಭಾಷೆಯಲ್ಲಿ ಒಂದರಲ್ಲೇ ಅಲ್ಲದೆ, ವಿಜ್ಞಾನಶಾಸ್ತ್ರ ಗಣಿತಶಾಸ್ತ್ರ ಮೊದಲಾದವುಗಳಲ್ಲೆಲ್ಲಾ ಶಿಕ್ಷಣವನ್ನು ಕೊಡುತ್ತ ಇರುವರು. ಈ ಹೊತ್ತಿನ ಉಪನ್ಯಾಸಕಿಯರೆಲ್ಲಾ ನವೀನ ಕಾಲದ ವಿದ್ಯಾವತಿಯರು.

ಹಿಂದಿನಿಂದಲೂ ಸ್ತ್ರೀ ಶಿಕ್ಷಣದಲ್ಲಿ ಮೈಸೂರು ಸರಕಾರವು ಶ್ರದ್ಧೆ ವಹಿಸಿ ಸಹಾಯವನ್ನು ಕೊಡುತ್ತಿರುವುದರಿಂದ ಇಂಡಿಯಾ ದೇಶದ ಇತರ ಸಂಸ್ಥಾನಗಳಿಗಿಂತ ಇಲ್ಲಿ ಸ್ತ್ರೀ ವಿದ್ಯಾಭ್ಯಾಸವು ಬಹು ಮುಂದಕ್ಕೆ ಸಾಗಿದೆ. ಕೀರ್ತಿಶೇಷರಾದ ಶ್ರೀ ವಾಣೀವಿಲಾಸ ಸನ್ನಿಧಾನದವರಿಂದ ಬಹಳ ಪ್ರೋತ್ಸಾಹವೂ ಸಹಾಯವೂ ಈ ಉದ್ಯಮಕ್ಕೆ ಲಭಿಸಿದುವು. ಅವರ ಪ್ರಯತ್ನದಿಂದಲೇ ಮೈಸೂರಿನ ಮಹಾರಾಣಿ ಕಾಲೇಜು, ಬೆಂಗಳೂರಿನಲ್ಲಿರುವ ಹೆಂಗಸರ ಇಂಟರ್‌ಮೀಡಿಯಟ್ ಕಾಲೇಜು ಮೊದಲಾದುವು ಸ್ಥಾಪಿತವಾದುವು. ಇದಕ್ಕಾಗಿ ಮೈಸೂರಿನ ಮಹಿಳೆಯರೆಲ್ಲರೂ ಅವರಿಗೆ ಚಿರಋಣಿಗಳು. ಈಗ ಸರಕಾರದವರು ಬೆಂಗಳೂರಿನಲ್ಲಿ ಹೊಸದಾಗಿ ಪ್ರತ್ಯೇಕವಾದ ಕಟ್ಟಡವನ್ನು ಕಾಲೇಜಿಗಾಗಿ ಕಟ್ಟಿಸಿಕೊಟ್ಟು ಮಹೋಪಕಾರ ಮಾಡಿರುವರು.

ಈಗ ಅನೇಕ ಸ್ತ್ರೀಯರು ರಸಾಯನಶಾಸ್ತ್ರ, ಪ್ರಾಣಿಶಾಸ್ತ್ರ ಮೊದಲಾದ ವಿಜ್ಞಾನ ಭಾಗಗಳಲ್ಲಿ ಉನ್ನತ ಶಿಕ್ಷಣವನ್ನು ಪಡೆಯು... ಅವರಲ್ಲಿ ಕೆಲವರು ವೈದ್ಯಪರೀಕ್ಷೆಯಲ್ಲಿ ತೇರ್ಗಡೆಹೊಂದಿ ವೈದ್ಯವೃತ್ತಿ... ತ್ತಿರುವರು. ಇಂತಹ ಮಹಿಳೆಯರಿಂದ ದೇಶಕ್ಕೆ ಉಂಟಾಗುವ ಸಹಾಯವು... ಏತಕ್ಕೆಂದರೆ, ಸ್ತ್ರೀಯರ ರೋಗರುಜಿನಗಳನ್ನು ನೋಡಿ ಚಿಕಿತ್ಸೆಮಾಡಲು... ತಕ್ಕವರು.

ಹೀಗೆ ಅನೇಕ ವಿಷಯಗಳಲ್ಲಿ ಸ್ತ್ರೀಯರು ಮುಂದುವರಿಯುತ್ತಿರುವುದು ಜನಕವಾದ ಸಮಾಚಾರ. ಅವರಲ್ಲಿಯೂ ಕೂಡ ದೇಶವಾತ್ಸಲ್ಯ ಭಾಷಾ... ಬೆಳೆದು, ದೇಶಕ್ಕೂ ಭಾಷೆಗೂ ಅವರು ಬಹಳ ಶ್ರಮವನ್ನು ವಹಿಸು... ದೇಶಾಭಿಮಾನಿಗಳು ಇಂಡಿಯಾದೇಶದ ಎಲ್ಲ ಭಾಗಗಳಲ್ಲಿಯೂ ಮಾತನಾಡ... ಒಂದು ಭಾಷೆಯನ್ನು ಕಲಿಯಬೇಕೆಂಬುದಾಗಿ ಹೇಗೆ ಹಿಂದಿಯನ್ನು ಕಲಿ... ವರೋ, ಹಾಗೆಯೇ ನಮ್ಮ ಮಾತೃಭಾಷೆಯನ್ನು ಕಲಿಯಬೇಕಾದುದು ವೆಂದು ಅನೇಕ ಕರ್ಣಾಟಕ ಮಹಿಳೆಯರು ಕನ್ನಡ ಭಾಷೆಗೆ ಉತ್ತೇಜ... ಕೊಡುತ್ತಲಿರುವರು. ಇದರಿಂದ ವಿದ್ಯಾವತಿಯರು ತಮಗೆ ತಿಳಿದ ವಿಷ... ಅವಿದ್ಯಾವತಿಯರಿಗೂ ಗ್ರಾಮನಿವಾಸಿಗಳಿಗೂ ಬೋಧಿಸಲು ಅನುಕೂಲ...

ಸಮಾಜಾಭಿವೃದ್ಧಿಗೆ ಪುರುಷರು ಒಬ್ಬರೇ ಸುಶಿಕ್ಷಿತರಾದರೆ ಸಾಲದು... ಒಂದು ಚಕ್ರವು ಸರಿಯಿಲ್ಲದಿದ್ದರೆ ಹೇಗೆ ನಿಷ್ಪ್ರಯೋಜನವೋ ಹಾಗೆ ಸ... ಸ್ತ್ರೀಗೆ ಸರಿಯಾದ ಶಿಕ್ಷಣವಿಲ್ಲದಿದ್ದರೆ ಅದೊಂದು ದೊಡ್ಡ ಲೋಪ. ವಿದ್ಯಾವತಿಯಾದರೇನೇ ತನ್ನ ಮಕ್ಕಳನ್ನು ಸರಿಯಾಗಿ ತಿದ್ದಿ, ಅವರು... ಊರಿಗೂ ದೇಶಕ್ಕೂ ಹಿತಕಾರಿಗಳಾಗುವಂತೆ ಮಾಡಲು ಸಮರ್ಥ... ಆದರಿಂದ ದೇಶವೆಲ್ಲಾ ಸುಶಿಕ್ಷಿತರಾದ ಯುವಕ ಯುವತಿಯರ ಸೇ... ಕಂಗೊಳಿಸುವುದು.

ಹೆಂಗಸರು ವಿದ್ಯಾವತಿಯರಾಗುವುದು ಒಂದೇ ಅಲ್ಲದೆ, ತಮಗೆ ತಿ... ಗಳನ್ನು ಕೇಳುವವರ ಮನಸ್ಸನ್ನು ಆಕರ್ಷಿಸುವಂತೆ ಹೇಳಲು ಕಲಿ... ಪ್ರತಿಯೊಬ್ಬರೂ ಆರೋಗ್ಯಶಾಸ್ತ್ರ, ಸಮಾಜಶಾಸ್ತ್ರ, ಭೌತವಿಜ್ಞಾನ ಮು... ಗಳಲ್ಲಿ ನವೀನ ತತ್ತ್ವಗಳನ್ನು ತಿಳಿದಿರುವುದು ಅತ್ಯಾವಶ್ಯಕ. ವಿದ್ಯಾ... ಇವುಗಳನ್ನೆಲ್ಲಾ ಬೋಧಿಸುವುದೇನೋ ನಿಶ್ಚಯ; ಆದರೆ ಎಲ್ಲರಿಗೂ ಚೆ... ಕಲಿಯಲು ಅನುಕೂಲಗಳಿರುವುದಿಲ್ಲ. ಕರ್ಣಾಟಕ ಸಾಹಿತ್ಯ ಪರಿಷತ್ತು ... ಗಳನ್ನು ಕುರಿತ ಉಪನ್ಯಾಸಗಳ ಮೂಲಕವಾಗಿಯೂ ಮತ್ತು ಮೂ... ಗೊಂದುಸಲ ಪ್ರಕಟವಾಗುವ ಪರಿಷತ್ಪತ್ರಿಕೆಯ ಮೂಲಕವಾಗಿಯೂ ಸ... ಬೋಧನೆಯನ್ನು ನಡಸುತ್ತಿದೆ. ಈ ಸಾರಿ ವಿದ್ಯಾವತಿಯರಾದ ಸ್ತ್ರೀಯರ... ಬಂದು ಸ್ತ್ರೀಯರಿಗೆ ಉಪನ್ಯಾಸ ಕೊಡುವುದು ಇನ್ನೂ ಸಂತೋಷದ ಸಂ...

ಪರಿಷತ್ತು ಕಲ್ಪಿಸಿಕೊಟ್ಟಿರುವ ಅವಕಾಶವನ್ನು ಎಲ್ಲ ಮಹಿಳೆಯರೂ ಉಪಯೋಗಿಸಿಕೊಳ್ಳಬೇಕು. ಇದರಿಂದ, ಪ್ರತಿಯೊಬ್ಬರೂ ಆರೋಗ್ಯ, ನೈರ್ಮಲ್ಯ ಮುಂತಾದ ವಿಚಾರಗಳನ್ನು ತಿಳಿದುಕೊಂಡು ಸ್ವಲ್ಪ ಸ್ವಲ್ಪವಾದರೂ ಮನೆಗಳಲ್ಲಿ ಅವನ್ನು ಆಚರಿಸುವುದಕ್ಕೆ ಸಹಾಯವಾಗುವುದು. ಈಗಲೇ ಈ ಉದ್ಯಮಗಳ ಉಪಯೋಗವು ಕಾಣಬರದೆ ಹೋದರೂ ಮುಂದಿನ ಪ್ರಜಾವರ್ಗದವರು ಆರೋಗ್ಯಶಾಲಿಗಳೂ ದೃಢಕಾಯರೂ ಸುಸಂಸ್ಕೃತರೂ ಆಗಿ ಹೆಚ್ಚಿನ ದೇಶಸೇವೆಗೆ ನೆರವಾಗುವುದರಲ್ಲಿ ಸಂದೇಹವಿಲ್ಲ.

ಈ ದಿನ ಇಂತಹ ಸಾರವತ್ತಾದ ಭಾಷಣಗಳನ್ನು ಮಾಡಲು ಅರ್ಹತೆಯುಳ್ಳ ಮಹಿಳೆಯರನ್ನೆಲ್ಲಾ ಒಟ್ಟುಗೂಡಿಸಿ, ಸ್ತ್ರೀ ಸಮಾಜದ ಸೇವೆಯನ್ನು ಮಾಡಲು ಪ್ರಯತ್ನಿಸಿದ ಈ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಉದ್ದೇಶವು ಬಹಳ ಉತ್ತಮವಾದುದು.

ಈ ದಿವಸ ನನಗೆ ಈ ಮಹಿಳೆಯರ ಸಭೆಯಲ್ಲಿ ಭಾಗವಹಿಸಲು ಅವಕಾಶಕೊಟ್ಟ ಪರಿಷತ್ತಿನ ಅಧಿಕಾರಿಗಳಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು.

---

# ಶ್ರೀಮನ್ಮಹಾರಾಜರವರ ವರ್ಷ ವರ್ಧಂತಿ

ಸನ್ ೧೯೩೦ನೆಯ ಇಸವಿ ಜೂನ್ ೧೯ನೆಯ ತಾರೀಖು ಸಾಯಂಕಾಲ ೬ ಘಂಟೆಗೆ, ಆಳುವ ಮಹಾಸ್ವಾಮಿಯವರಾದ ಶ್ರೀ ಕೃಷ್ಣ... ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ. ಅವರ ವರ್ಷ ವರ್ಧಂ... ಪ್ರಯುಕ್ತ ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರದಲ್ಲಿ. ಶ್ರೇಯಃಪ್ರಾ... ಸೇರಿದ್ದಿತು. ಶ್ರೀಮಾನ್ ಡಿ. ಸಿ. ಸುಬ್ಬರಾಯಪ್ಪ, ಬಿ.ಎ., ಬಿ.ಎಲ್., ಅಗ್ರಾಸನವನ್ನಲಂಕರಿಸಿದ್ದರು. ಪರಿಷನ್ಮಂದಿರವು ಮೈಸೂರು ... ದಿಂದಲೂ, ತಳಿರು ತೋರಣಗಳಿಂದಲೂ ಅಲಂಕೃತವಾಗಿತ್ತು. ಪರಿಷತ್ಸಾ... ತುಂಬ ಪರಿಷತ್ಸದಸ್ಯರೂ, ಪುರಜನರೂ, ಅನೇಕ ಮಂದಿ ಗಣ್ಯ... ಮತ್ತು ಮಹಿಳೆಯರೂ ಬಂದು ಸೇರಿದ್ದರು.

ದೇವತಾ ಪ್ರಾರ್ಥನೆಯೊಡನೆ ಸಭಾಕಾರ್ಯ ಮೊದಲಾಯಿತು. ... ತರಗತಿಯ ವಿದ್ಯಾರ್ಥಿ ಶ್ರೀಮಾನ್ ಎಂ. ಹರಿನಾರಾಯಣ, ಬಿ.ಎಸ್... ಪ್ರಾರ್ಥನ ಪದ್ಯಗಳನ್ನು ಹಾಡಿದರು. ಅನಂತರ ಶ್ರೀಮಾನ್ ಕೆ. ಜಿ. ಸಂ... ಚಾರ್ಯ, ಬಿ.ಎ., ಬಿ.ಟಿ., ಅವರು ಕೆಲವು ಕನ್ನಡ ದೇವರನಾಮಗಳ... ಗಳನ್ನೂ, ಪಕ್ಕವಾದ್ಯಗಳೊಡನೆ, ಸುಶ್ರಾವ್ಯವಾಗಿ ಹಾಡಿದರು. ಶ್ರೀಮನ್ಮಹಾರಾಜರವರ ಶ್ರೇಯಃಪ್ರಾರ್ಥನೆಯುಳ್ಳ, ರಾಜಭಕ್ತಿ ಸೂಚಕವಾದ ನಿರ್ಣಯವನ್ನು ಸಭೆ ಕರತಾಡನಗಳೊಡನೆ ... ನಿರ್ಣಯವನ್ನು ಕೆಳಗೆ ಕೊಟ್ಟಿದೆ:—

> "ಕರ್ಣಾಟಕ ಸಿಂಹಾಸನಾಧೀಶ್ವರರೂ ಕರ್ಣಾಟಕ ಸಾಹಿತ್ಯ ಮಹಾಪೋಷಕರೂ ಆಗಿ ನಮ್ಮನ್ನಾಳುತ್ತಿರುವ ಮೈಸೂರು ... ಶ್ರೀಮನ್ಮಹಾರಾಜರವರು ಶ್ರೀ ಕೃಷ್ಣರಾಜೇಂದ್ರ ಒಡೆಯರ್ ... ಜಿ.ಸಿ.ಎಸ್.ಐ., ಜಿ.ಬಿ.ಇ., ಮಹಾಸ್ವಾಮಿಯವರ ವರ್ಷ ವರ್ಧಂ... ಪ್ರಯುಕ್ತ ಸೇರಿರುವ ಈ ಮಹಾಸಭೆಯು ಮಹಾಪ್ರ... ಜಗದೀಶ್ವರನು ಆಯುರಾರೋಗ್ಯ ವಿಜಯ ಐಶ್ವರ್ಯಾದಿ ಸಮಸ್ತ... ಗಳನ್ನೂ ಕರುಣಿಸಲೆಂದು ಪ್ರಾರ್ಥಿಸುತ್ತದೆ; ಮತ್ತು ತನ್ನ ... ವಿಶ್ವಾಸಗಳನ್ನು ಮಹಾಸ್ವಾಮಿಯವರಲ್ಲಿ ಅರಿಕೆಮಾಡಲು ಬೇಡುತ್ತದೆ."

ಮೇಲೆ ಕಂಡ ನಿರ್ಣಯದ ಇಂಗ್ಲಿಷ್ ಸಾರಾಂಶವನ್ನು ಟೆಲಿಗ್ರಾ... ಮಹಾಸ್ವಾಮಿಯವರಿಗೆ ಕಳುಹಿಸಲಾಯಿತು. ಮತ್ತೆ ಸಂಗೀತ ವಾ... ಸ್ವಲ್ಪ ಹೊತ್ತು ನಡೆಯಿತು.

ಕೊನೆಯಲ್ಲಿ ಪರಿಷದುಪಾಧ್ಯಕ್ಷರಾದ ಶ್ರೀಮಾನ್ ಡಿ. ವಿ. ಗುಂ... ಸಮಾಪ್ತಿ ಭಾಷಣವನ್ನು ಮಾಡಿದರು. ಸಭಿಕರಿಗೆ ಪುಷ್ಪವಿನಿಯೋಗ... ಜಯಜಯಕಾರಗಳೊಡನೆ ಸಭೆ ಮುಗಿಯಿತು.

---

# ಗಮಕ ಗೋಷ್ಠಿ

## ೧೯೩೭

---

## ಪ್ರಶಸ್ತಿ ಪ್ರದಾನೋತ್ಸವ

೧೯೩೭ನೆಯ ಇಸವಿ ಆಗಸ್ಟ್ ತಿಂಗಳು ೪ನೆಯ ತಾರೀಖು ಬುಧವಾರ ಸಾಯಂಕಾಲ ೬ ಘಂಟೆಗೆ, ಬೆಂಗಳೂರಿನ ಕರ್ಣಾಟಕ ಸಾಹಿತ್ಯ ಪರಿಷನ್ಮಂದಿರದಲ್ಲಿ, ಭಾರತ ಮೊದಲಾದ ಕಾವ್ಯಗಳ ಓದುಗಾರಿಕೆಯನ್ನು ಅಭ್ಯಾಸಮಾಡಿ ತೇರ್ಗಡೆ ಹೊಂದಿದ ಗಮಕ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಪತ್ರಿಕೆಗಳನ್ನು ಕೊಡುವ ಪ್ರಯುಕ್ತ ಸಾರ್ವಜನಿಕ ಸಭೆ ಸೇರಿತ್ತು. ಮೈಸೂರಿನ ಚೀಫ್ ಜಸ್ಟಿಸ್ ಅವರಾದ ರಾಜಧರ್ಮ ಪ್ರಸಕ್ತ ಶ್ರೀಮಾನ್ ಕೆ. ಶಂಕರನಾರಾಯಣರಾವ್, ಎಂ.ಎ., ಬಿ.ಎಲ್., ಅವರು ಸಭಾಧ್ಯಕ್ಷರಾಗಿದ್ದರು.

ಪರಿಷನ್ಮಂದಿರವು ಪರಿಷತ್ಸದಸ್ಯರಿಂದಲೂ, ಇತರ ಮಹಾಜನರಿಂದಲೂ, ಮಹಿಳೆಯರಿಂದಲೂ ತುಂಬಿದ್ದಿತು.

ಶ್ರೀಮಾನ್ ಎಸ್. ಜಿ. ಬಿಂದೂರಾಯರು ಪ್ರಾರ್ಥನ ಪದ್ಯಗಳನ್ನು ಹಾಡಿದರು. ಬಳಿಕ ಪರಿಷತ್ತಿನ ಗೌ॥ ಕಾರ್ಯದರ್ಶಿಯವರಾದ ಶ್ರೀಮಾನ್ ಎಸ್. ವಿ. ರಂಗಣ್ಣ, ಎಂ.ಎ. ಅವರು ಗಮಕಗೋಷ್ಠಿಯ ಸಂಗ್ರಹ ವರದಿಯನ್ನು ಓದಿದರು. (ವರದಿಯನ್ನು ಮುಂದೆ ಬೇರೆಯಾಗಿ ಅಚ್ಚುಮಾಡಿದೆ.)

ಅನಂತರ, ತೇರ್ಗಡೆಹೊಂದಿದ ಗಮಕ ವಿದ್ಯಾರ್ಥಿಗಳು ಕಾವ್ಯ ವಾಚನಮಾಡಿ, ತಾವು ಕಲಿತ ವಿದ್ಯೆಯನ್ನು ಪ್ರದರ್ಶಿಸಿ ಸಭಿಕರನ್ನು ಸಂತೋಷಪಡಿಸಿದರು.

ಆ ಬಳಿಕ ಸಭಾಧ್ಯಕ್ಷರಾದ ಶ್ರೀ॥ ಕೆ. ಶಂಕರನಾರಾಯಣರಾಯರವರು ಗಮಕ ಕಲೆಯ ಪುನರುಜ್ಜೀವನಕ್ಕಾಗಿ ಪರಿಷತ್ತು ಕೈಗೊಂಡಿರುವ ಪ್ರಯತ್ನವನ್ನು ಶ್ಲಾಘಿಸಿ, ಗಮಕ ಶಿಕ್ಷಕರಾದ ಶ್ರೀ॥ ಬಿಂದೂರಾಯರವರಿಗೆ ಎಲ್ಲರ ಪರವಾಗಿ ಕೃತಜ್ಞತೆಯನ್ನು ಸೂಚಿಸಿ, ಗಮಕ ಕಲೆಯ ಪ್ರಚಾರಕ್ಕೆ ಸರ್ವರೂ—ವಿಶೇಷವಾಗಿ ಮಹಿಳೆಯರು—ಹೆಚ್ಚು ಹೆಚ್ಚಾಗಿ ಪ್ರೋತ್ಸಾಹಕೊಡಬೇಕೆಂದು ಕೋರಿ ಭಾಷಣಮಾಡಿದರು. ಅವರ ಭಾಷಣದ ಸಾರಾಂಶವನ್ನು ಈ ಕೆಳಗೆ ಕೊಟ್ಟಿದೆ:—

### ಅಧ್ಯಕ್ಷ ಭಾಷಣ

"ಈ ಸಮಾರಂಭಕ್ಕೆ ನನ್ನನ್ನು ಬರಮಾಡಿಕೊಂಡು ಗೌರವಿಸಿದುದಕ್ಕಾಗಿ ಪರಿಷತ್ತಿನ ಅಧಿಕಾರಿಗಳಿಗೆ ನಾನು ಬಹಳ ಕೃತಜ್ಞನಾಗಿದ್ದೇನೆ. ಶ್ರೀ॥ ಬಿಂದೂರಾಯರವರೂ ಅವರ ಶಿಷ್ಯವರ್ಗದವರೂ ಈಗ ತಾನೆ ಭಾರತ ಪಠನಮಾಡಿ, ಗಮಕ ಕಲೆಯಿಂದ ಜನರ ಮನಸ್ಸನ್ನು ಹೇಗೆ ಆಕರ್ಷಣೆಮಾಡಬಹುದು, ಅವರಿಗೆ ಎಷ್ಟು ಆನಂದವನ್ನುಂಟುಮಾಡಬಹುದು ಎಂಬುದನ್ನು ನಿದರ್ಶನಗೊಳಿಸಿದ್ದಾರೆ. ಶ್ರೀ॥ ಬಿಂದೂರಾಯರವರಂತೂ ತಮ್ಮ ಜೀವಮಾನವನ್ನೇ ಅದಕ್ಕಾಗಿ ಧಾರೆಯೆರೆದಿದ್ದಾರೆ

ಎಂದು ಹೇಳಿದರೆ ಅದು ಅತಿಶಯೋಕ್ತಿಯಲ್ಲ. ಅವರು ಅನೇಕ ಪ್ರಾಂತಗಳ ಭಾರತ ಪಠನದಿಂದ ಕನ್ನಡದ ಸೇವೆ ಮಾಡಿರುವುದಲ್ಲದೆ, ಆ ಸೇವೆ ಸಾರ್ವ ನಡೆಯಬೇಕೆಂದು ಪರಿಷತ್ತು ಮಾಡುತ್ತಿರುವ ಪ್ರಯತ್ನದಲ್ಲಿ ಸಹಾ ನಿಂತು ತುಂಬಾ ಉಪಕಾರಮಾಡಿದ್ದಾರೆ. ಮೂರು ತಿಂಗಳುಗಳ ಕಾಲ ಈ ಊರಿನಲ್ಲಿಯೇ ನೆಲಸಿ, ೭-೮ ಮಂದಿ ಗಮಕಿಗಳನ್ನು ತಯಾರು ಇದಕ್ಕಾಗಿ ಅವರಿಗೆ ನಾವೆಲ್ಲ ಬಹಳ ಕೃತಜ್ಞರಾಗಿರಬೇಕಾಗಿದೆ.

"ನಾನು ಸಣ್ಣ ಹುಡುಗನಾಗಿದ್ದಾಗ ನಮ್ಮ ದೊಡ್ಡಮ್ಮ ದುಡಿದು ದುಡಿದು ಎಲ್ಲರೂ ವಿಶ್ರಾಂತಿ ಬೇಕೆಂದು ಬಯಸುವ ರಾತ್ರಿ ೯ ಗಂಟೆಯ ಹೊತ್ತಿಗೆ, ನಮ್ಮನ್ನೆಲ್ಲಾ ಹಾಸಿಗೆಯಮೇಲೆ ಮಲಗಿಸಿ ಹಾಡುಗಳನ್ನು ಹೇಳುತ್ತಿದ್ದರು. ಆದರಿಂದ ನಮಗೆ ಬಹು ಆನಂದವಾ ಆ ಸಂತೋಷದಲ್ಲಿ ಯಾವಾಗ ನಿದ್ದೆ ಬರುತ್ತಿತ್ತೋ ಗೊತ್ತಾಗುತ್ತಲೇ 'ಬ್ರಹ್ಮ ಕೊರವಂಜಿ,' 'ಅನುಭವಾಮೃತ'ದ ಪದ್ಯಗಳು, ಉದಯ ಕಾಲದ 'ಉದಯರಾಗ' ಪದ್ಯಗಳು—ಇಂಥ ಹಾಡುಗಳು ಅವರಿಗೆ ಅನೇಕವಾ ತ್ತಿದ್ದುವು. ಈಗಿನ ಸ್ಥಿತಿ ಬಹು ಶೋಚನೀಯವಾಗಿದೆ. ಈಗಿನ ಕಾ ಗಳಲ್ಲಿ ಆ ಬಗೆಯ ಹಾಡುಗಳು ಅಪೂರ್ವವಾಗಿ ಹೋಗಿವೆ. ಸ್ಕೂಲುಗಳ ಅವುಗಳ ಹೆಸರೇ ಇಲ್ಲ. ಇದರಿಂದ ಜನರ ಜೀವನದಲ್ಲಿ ಒಂದು ಆನಂದ ಬಿಟ್ಟಿದೆ. ಆ ಆನಂದ ಪುನರುಜ್ಜೀವನಗೊಳ್ಳಬೇಕಾದರೆ ಶ್ರೀ॥ ಮೇಲ್ಪಂಕ್ತಿಯನ್ನು ನಾವು ಇಟ್ಟುಕೊಂಡು, ಪರಿಷತ್ತು ಮಾತ್ರವೇ ಅ ರೆಲ್ಲರೂ ಬದ್ಧಕಂಕಣರಾಗಿ ಗಮಕ ಕಲೆಯ ಪುನರುಜ್ಜೀವನಕ್ಕೆ ಕೆಲಸಮಾ ಈಗಿನ ಜೀವನಭಾರವು ಹಗುರಗೊಳ್ಳಬೇಕಾದರೆ, ಎಲ್ಲ ಬಾಲಕರೂ ಬಾ ಗಮಕ ಕಲೆಯಲ್ಲಿ ಆದರ ತೋರಿ, ಅದನ್ನು ಅಭ್ಯಾಸಮಾಡಬೇಕು ದೇಹವೂ ಕೂಡ ಒಂದು ಯಂತ್ರದ ಹಾಗೆ. ಅದು ಕೆಲಸಮಾಡಿ ಅದಕ್ಕೆ ಪರಿಷ್ಕರಣ (over-hauling) ಅವಶ್ಯವಾಗುತ್ತದೆ. ನಮ್ಮ ಮೇಲೆ ಭಕ್ತಿರಸವನ್ನು ಹರಿಸಿ, ಗಾಯನರೂಪವಾದ ಕೀಲೆಣ್ಣೆ (lubrica ಹಾಕಿದರೆ, ಆಗ ದೇಹವೂ ಮನಸ್ಸೂ ಹಗುರವಾಗಿ, ಹೆಚ್ಚು ಕೆಲಸವನ್ನು ನಡಸಲು ಸಾಧ್ಯವಾಗುತ್ತದೆ. ಹೀಗೆ ಗಮಕವು ವಿಹಾರ (recreation)ವಾಗಿದೆ.

"ಧನವಂತರಾದವರು ಗಮಕ ಕಲೆಯನ್ನು ಅಭ್ಯಾಸಮಾಡಿ, ಮಿಲ ಮುಂತಾದ ನಿರ್ಗತಿಕರ ವಾಸಸ್ಥಳಗಳಿಗೆ ಹೋಗಿ ಅಲ್ಲಿ ವಾಚನಮಾಡಿದ ಆ ಬಡವರಿಗೆ ಎಷ್ಟು ಆನಂದವಾಗುತ್ತದೆ ಎಂಬುದನ್ನು ವಿವರಿಸಲು ಈ ಪುಣ್ಯಕೆಲಸ ಮಾಡಿದವರು ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾ ಸಂದೇಹವಿಲ್ಲ. ಇದನ್ನು ನೆನಪಿನಲ್ಲಿಟ್ಟುಕೊಂಡು, ಗಮಕ ಕಲೆಯನ್ನು ಮಾಡಿದವರು ಗ್ರಾಮಾಂತರಗಳಿಗೆ ಹೋಗಿ ಈ ಕಲೆಯನ್ನು ಪ್ರಚಾರಗೊ

ಪೂರ್ವಕಾಲದಲ್ಲಿ ಹೀಗೆ ಅನೇಕ ಹಾಡುಗಳನ್ನೂ ಶ್ಲೋಕಗಳನ್ನೂ ಪ್ರಚಾರಮಾಡುತ್ತಿದ್ದರು. ಇಂಥ ವಿಷಯಗಳಲ್ಲಿ ನಾವು ನಮ್ಮ ಹಿಂದಿನ ನಾಗರಿಕತೆಯನ್ನು ಮರೆಯದೆ, ನಮ್ಮ ಹಿಂದಿನ ಕಲೆಗಳನ್ನು ಪುನರುಜ್ಜೀವನಗೊಳಿಸಬೇಕು. ಈ ಗಮಕ ಕಲೆಯು ಸಾರೋದ್ಧಾರವಾಗಿ ನಡೆಯಲೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.''

ಮೇಲೆ ಕಂಡಂತೆ ಭಾಷಣವನ್ನು ಮಾಡಿ, ಸಭಾಧ್ಯಕ್ಷರು ಶ್ರೀಮಾನ್ ಬಿಂದೂರಾಯರವರಿಗೆ ಪರಿಷತ್ತಿನ ಕೃತಜ್ಞತಾ ಸೂಚಕವಾದ ಸಂಭಾವನೆಯನ್ನೂ, ಪರಿಷತ್ತು ತನ್ನ ಗುರುತಾಗಿ ಅವರಿಗೆ ಕೊಟ್ಟ, ಬೆಳ್ಳಿಯ ಚೌಕಟ್ಟಿನಿಂದ ಅಲಂಕೃತವಾದ ಗದುಗಿನ ಶ್ರೀ ವೀರನಾರಾಯಣಸ್ವಾಮಿಯ ಚಿತ್ರವನ್ನೂ ಸಮರ್ಪಿಸಿದರು; ಮತ್ತು ಗಮಕ ಕಲಾ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಪತ್ರಿಕೆಗಳನ್ನು ದಯಪಾಲಿಸಿದರು.

ತರುವಾಯ ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀಮಾನ್ ಡಿ. ವಿ. ಗುಂಡಪ್ಪನವರು ಸಭಾಧ್ಯಕ್ಷರಿಗೂ, ಶ್ರೀ॥ ಬಿಂದೂರಾಯರವರಿಗೂ, ಗಮಕವಿದ್ಯಾರ್ಥಿಗಳಿಗೂ, ಸಭಿಕರಿಗೂ ಪರಿಷತ್ತಿನ ವಂದನೆಗಳನ್ನು ಸಮರ್ಪಿಸುತ್ತ ಹೀಗೆ ಹೇಳಿದರು:—

## ಉಪಾಧ್ಯಕ್ಷರ ಭಾಷಣ

"ಈ ದಿನ ಈ ಗಮಕೋತ್ಸವಕ್ಕೆ ಕೆಲವು ಮಂದಿ ಸೋದರಿಯರು ಮಾತ್ರ ಬಂದಿದ್ದಾರೆ. ಇಂಥಾ ಉತ್ಸವಕ್ಕೆ ಅವರು ಇನ್ನೂ ಹೆಚ್ಚು ಮಂದಿ ಬರಬೇಕೆಂಬುದು ನನ್ನ ಆಕಾಂಕ್ಷೆ. ಗಂಡಸರಿಗಿಂತ ಈ ಕಲೆ ಹೆಂಗಸರಲ್ಲಿ ಹೆಚ್ಚು ಪ್ರಚಾರವಾಗಬೇಕು. ಗಮಕ ಕಲೆಯನ್ನು ಅಭ್ಯಾಸಮಾಡಿರುವ ಹೆಂಗಸು ತನ್ನ ಮನೆಗೆ ಒಂದು ಬೆಳಕನ್ನು ತರುವಳು. ವಿಶ್ರಾಂತಿಯಿಂದ ಮನಸ್ಸು ಸಮಾಧಾನವನ್ನು ಕಾಣುವಂತೆ ಮಾಡುವುದು ಗಮಕ ಕಲೆಯ ಮುಖ್ಯ ಗುಣ; ಅದು ತೀರ ಬಡವರಾದವರಿಗೂ ಕೂಡ ಒಂದು ಕ್ಷಣ ಮಾತ್ರ ನಿರ್ಮಲವಾದ ಅತ್ಯುತ್ತಮವಾದ ಸಂತೋಷವನ್ನುಂಟುಮಾಡತಕ್ಕದ್ದು. ಆದುದರಿಂದ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಬಂದು ಇದನ್ನು ಕಲಿಯಬೇಕೆಂದು ನಾನು ಪ್ರಾರ್ಥಿಸುತ್ತೇನೆ.

"ಗಮಕ ಕಲೆಯನ್ನು ಕಲಿಯಬೇಕೆಂದು ಬರುವವರಿಗೆ ತಕ್ಕಮಟ್ಟಿಗೆ ಭಾಷಾ ಪರಿಚಯವಿರಬೇಕು. ಪದ್ಯದ ಅರ್ಥವನ್ನು ತಿಳಿದುಕೊಂಡು ಅದರ ಭಾವಗ್ರಹಣ ಮಾಡಬಲ್ಲ ಶಕ್ತಿ ಇರಬೇಕು. ತಕ್ಕಮಟ್ಟಿಗೆ ರಾಗಜ್ಞಾನವಿರಬೇಕು—ಅಂದರೆ ಸುಮಾರು ೧೫–೨೦ ಕೀರ್ತನೆಗಳಷ್ಟಾದರೂ ಪಾಠವಾಗಿರಬೇಕು. ಹಾಗಿದ್ದರೆ ಮಾತ್ರ ಗಮಕ ಕಲೆಯನ್ನು ಕಲಿಯಲು ಸಾಧ್ಯ. ಮುಂದಿನ ವರ್ಷ, ಈಗಲೇ ಸ್ವಲ್ಪ ಪಾಠವಾಗಿರುವವರಿಗೆ ಒಂದು ಪ್ರತ್ಯೇಕವಾದ ತರಗತಿಯನ್ನು ಮಾಡಿ ಇನ್ನೂ ಹೆಚ್ಚಿನ ಶಿಕ್ಷಣ ಕೊಡಬೇಕೆಂಬ ಉದ್ದೇಶವಿದೆ.

"ಬಹು ಜನರು ಗಮಕ ತರಗತಿಗೆ ಸೇರಬೇಕೆಂಬ ತಮ್ಮ ಇಚ್ಛೆಯನ್ನು ಕಾಲಕ್ಕೆ ಸರಿಯಾಗಿ ತಿಳಿಸುವುದಿಲ್ಲ. ಇನ್ನು ಕೆಲವರು ಬರುತ್ತೇವೆಂದು ಬರೆದು ನಿಂತು ಬಿಡುತ್ತಾರೆ. ಕೆಲವರು ಪಾಠದ ಕೊನೆಯ ದಿನಗಳಲ್ಲಿ ಬರುತ್ತಾರೆ. ಚೆನ್ನಾಗಿ

ಭಾಷಾಜ್ಞಾನ ರಾಗಜ್ಞಾನಗಳುಳ್ಳ ಅನೇಕರು ಬರಬಹುದಾಗಿತ್ತು, ಬಂದಿಲ್ಲ. ಶಕ್ತಿ ಇರುವವರು ತಾವಾಗಿ ಮುಂದೆ ಬರಬೇಕು. ಹೆಣ್ಣುಮಕ್ಕಳು ಹೆಚ್ಚು ಮಂದಿ ಬರಬೇಕು.

"ಹೋದವರ್ಷ ಒಂದು ಗಾನಗೋಷ್ಠಿಯನ್ನೂ ನಡಸಿ ದೇವರನಾ ಇತರ ಹಾಡುಗಳನ್ನೂ ಹೇಳುವ ವಿದ್ಯೆಯನ್ನು ಕಲಿಸಲು ಏರ್ಪಡಿಸಿತ್ತು. ಹಾಗೆ ಮಾಡಬೇಕೆಂದು ಪರಿಷತ್ತು ಪ್ರಯತ್ನಪಟ್ಟಿತು. ಆದರೆ ಗಾ ಒಬ್ಬರು ಮಾತ್ರ ಬಂದುದರಿಂದ ಅದನ್ನು ನಡಸಲು ಸಾಧ್ಯವಾಗಲಿ ಅತ್ಯಂತ ವಿಷಾದಕ್ಕೆ ಕಾರಣವಾದ ಸಂಗತಿ. ತತ್ರಾಪಿ ನಮ್ಮ ಹೆಂಗಸ ಪ್ರೋತ್ಸಾಹ ದೊರೆತಿಲ್ಲ. ಇಲ್ಲಿ ಅನೇಕ ಮಹನೀಯರು ಬಂದಿದ್ದೀ ಮುಂತಾದ ಕಾವ್ಯಗಳನ್ನು ಅಭ್ಯಾಸಮಾಡಬಲ್ಲವರು ಅನೇಕ ಜನ ತಾವು ಪರಿಷತ್ತು ಕೈಗೊಂಡಿರುವ ಈ ಕೆಲಸವನ್ನು ಪ್ರೋತ್ಸಾ ಬೇಡುತ್ತೇನೆ. ಇದಕ್ಕೆ ಸಂಬಂಧಪಟ್ಟ ಪ್ರವೇಶಧನವನ್ನು ಕೊಡಲು ವಜಾಮಾಡಬೇಕೆಂದರೆ ವಜಾಮಾಡಿಸಬಹುದು.

"ಈ ಸಲದ ವಿಶೇಷ ಸಾಹಿತ್ಯೋತ್ಸವದ ಅಂಗವಾಗಿ ದೇವರನಾ ಯನ್ನು ಏರ್ಪಡಿಸಲಾಗಿತ್ತು. ನಮ್ಮಲ್ಲಿ ಹೆಂಗಸರು ಮನೆಮನೆಯಲ್ಲಿ ನಾಮಗಳನ್ನು ಬಹು ಲಕ್ಷಣವಾಗಿ ಹೇಳುವವರು ಇದ್ದಾರೆ. ಆದರೆ ತಕ್ಕಷ್ಟು ಮಂದಿ ಬರಲಿಲ್ಲ. ಇದಕ್ಕೆಲ್ಲಾ ನನಗೆ ತೋರುವುದು ಒಂ ಅದು ನಮ್ಮ ಜನಗಳ ಔದಾಸೀನ್ಯ. ಈ ತಾತ್ಸಾರ ಬುದ್ಧಿಯನ್ನು ಬೇಕು. ಈ ಗಮಕ ವಿದ್ಯೆ ಕನ್ನಡ ದೇಶದ ಒಂದು ವಿಶೇಷ ವಿದ್ಯೆ. ಕ ಇದು ಬಹು ಪ್ರಾಚೀನ ಕಾಲದಿಂದ ಬಂದುದು. ಇದನ್ನು ಚೆನ್ನಾ ಮಾಡುವುದರಿಂದ ಪ್ರಶಸ್ತಿ ಪತ್ರಿಕೆ ದೊರೆಯುವುದು ಮಾತ್ರವಲ್ಲ; ಯಲ್ಲಿಯೂ ಒಂದು ಹೊಸ ಜ್ಯೋತಿ ಉಂಟಾದಹಾಗೆ ಆಗುತ್ತದೆ; ಪ್ರಸಾದವನ್ನು ಎಲ್ಲರೂ ಸವಿಯುವಂತೆ ಆಗುತ್ತದೆ. ಆದಕಾರಣ ಈ ಪ್ರಯತ್ನಕ್ಕೆ ತಾವು ವಿದ್ಯಾರ್ಥಿಗಳನ್ನು ಕಳುಹಿಸಿ, ಹೆಚ್ಚಿನ ಪ್ರೋ ಕೊಡಬೇಕೆಂದು ಬೇಡುತ್ತೇನೆ.

"ಈ ದಿನ ಪ್ರಶಸ್ತಿ ಪತ್ರಿಕೆಗಳನ್ನು ಪಡೆದ ವಿದ್ಯಾರ್ಥಿಗಳು ಇಲ್ಲಿಗೆ ಮುಗಿಯಿತೆಂದು ತಿಳಿಯಬಾರದು. ಗಮಕ ಕಲೆ ಸಂತತವಾದ ಅಭ್ಯಾಸ ವಿದ್ಯೆ. ಈ ಮೂರು ತಿಂಗಳೂ ಪ್ರಾರಂಭಕಾಲ ಮಾತ್ರ. ಮು ಮನೆಯಲ್ಲಿ ಅವರು ಅಭ್ಯಾಸಮಾಡಿ ತರಬಿಯತ್ತು ಮಾಡಿಕೊಳ್ಳಬೇಕು.

"ಬಿಂದೂರಾಯರು ಪ್ರತಿದಿನವೂ ಮೂರು ಹೊತ್ತೂ ಪಾಠ ಕೆಲವು ವಿದ್ಯಾರ್ಥಿಗಳು ನಿಯಮಿತ ಕಾಲಕ್ಕಿಂತ ಹೆಚ್ಚು ಹೊತ್ತು ಹೇಳಿಸಿಕೊಂಡಿದ್ದಾರೆ. ಇನ್ನೊಂದು ವಿಷಯವನ್ನು ಹೇಳಿದರೆ ಕ್ಷ ಈ ಸಲ ಪಾಠಕ್ಕೆ ಬರುತ್ತಿದ್ದ ಇಬ್ಬರು ಹೆಣ್ಣುಮಕ್ಕಳ ಗಂಡಂ

ದಿನವೂ ಎರಡು ಹೊತ್ತೂ ಸಪತ್ನೀಕರಾಗಿ ಬಂದು ತಮ್ಮ ಹೆಂಡತಿಯರಿಗೆ ಪಾಠ ಕೇಳಿಸಿಕೊಂಡು ಹೋಗುತ್ತಿದ್ದರು. ಇದು ಸ್ತೋತ್ರಾರ್ಹವಾದ ಸಂಗತಿ ಎಂದು ನಾನು ತಿಳಿದುಕೊಂಡಿದ್ದೇನೆ. ಇನ್ನೂ ಹೆಚ್ಚುಮಂದಿ ನಮ್ಮ ಸಹೋದರರು ಹೀಗೆ ಮಾಡಬೇಕೆಂಬುದು ನನ್ನ ಕೋರಿಕೆ.

"ಬಿಂದೂರಾಯರ ಉಪಕಾರವನ್ನು ಮಾತಿನಿಂದ ವಿವರಿಸುವುದಕ್ಕೆ ಆಗುವುದಿಲ್ಲ. ಮುಖ್ಯವಾಗಿ ಮಹಾಕಾವ್ಯೋಪಾಸಕರು ಬಿಂದೂರಾಯರು. ಅವರ ವಿಷಯವಾಗಿ ಜನರ ಹೃದಯದಲ್ಲಿ ಏನು ಭಾವನೆ ಇರಬಹುದೆನ್ನುವುದನ್ನು ಅವರು ತಿಳಿಯಬಹುದಾಗಿದೆ; ನಮ್ಮಲ್ಲಿ ಕೃತಜ್ಞತೆ ಎಷ್ಟು ತುಂಬಿದೆ ಎನ್ನುವುದನ್ನು ಅವರು ತಿಳಿದವರಾಗಿದ್ದಾರೆ.

"ಬೆಂಗಳೂರು ಮೈಸೂರುಗಳಲ್ಲಿ ಅಥವಾ ಮೈಸೂರು ದೇಶದಲ್ಲಿ ಯಾವ ಒಳ್ಳೆಯ ಕೆಲಸ ಮಾಡಬೇಕಾದರೂ ಅದಕ್ಕೆ ಯಾರ ಸಹಾಯ ತೆಗೆದುಕೊಳ್ಳೋಣ ಎಂದು ಯೋಚಿಸಿದರೆ ಮೊದಲು ಮನಸ್ಸಿಗೆ ಬರುವ ಹೆಸರು ಶ್ರೀ॥ ಕೆ. ಶಂಕರ ನಾರಾಯಣರಾಯರದು. ಇಂಥವರು ಪರಿಷತ್ತಿನ ಕಾರ್ಯದಲ್ಲಿ ಮಿಳಿತರಾಗಿ ವರ್ಷಕ್ಕೆ ಒಂದು ಸಲವಾದರೂ ಬಂದು ಪರಿಷತ್ತಿನ ಕಾರ್ಯಗಳಲ್ಲಿ ಅವರಿಗಿರುವ ಆಸಕ್ತಿಯನ್ನು ತೋರಿಸಿಕೊಡುವುದು ಬಹಳ ದೊಡ್ಡ ಉಪಕಾರ. ಅವರು ಪರಿಷತ್ತಿನ ಮುಖ್ಯ ಕಾರ್ಯಗಳಲ್ಲಿ ಭಾಗವಹಿಸಿಕೊಂಡಿರತಕ್ಕದ್ದು ನಮಗೆ ಹೇಗೆ ಹೆಮ್ಮೆಯ ವಿಷಯವೋ ಹಾಗೆಯೇ ಅದು ಕನ್ನಡ ಜನತೆಗೂ ಒಂದು ಹೆಮ್ಮೆಯ ವಿಷಯ. ಇಂಥವರು ನಮ್ಮ ದೇಶಭಾಷೆಗೆ ಆಗಬೇಕಾಗಿರುವ ಸೇವೆಯನ್ನು ಇನ್ನೂ ಹೆಚ್ಚು ಹೆಚ್ಚಾಗಿ ಮಾಡುವಂತಾಗಲೆಂದು ಪ್ರಾರ್ಥಿಸುತ್ತೇನೆ."

ಕೊನೆಯಲ್ಲಿ, ಪರಿಷದುಪಾಧ್ಯಕ್ಷರು ಸಭಾಧ್ಯಕ್ಷರಿಗೆ ಹಾರ ತುರಾಯಿಗಳನ್ನು ಸಮರ್ಪಿಸಿದ ಬಳಿಕ ಸಭೆ ಮುಕ್ತಾಯವಾಯಿತು.

---

## ಗಮಕ ಗೋಷ್ಠಿಯ ವರದಿ

೧೯೩೫ನೆಯ ಇಸವಿಯ ಬೇಸಗೆಯ ರಜಾ ಕಾಲದಲ್ಲಿ ಒಂದು ಗಮಕ ಗೋಷ್ಠಿಯನ್ನೂ, ಕಳೆದ ವರ್ಷ ಗಮಕ ಮತ್ತು ಗಾನ ಗೋಷ್ಠಿಗಳನ್ನೂ ಪರಿಷತ್ತು ನಡಸಿದ್ದು ಗೊತ್ತಿರಿಯಷ್ಟೆ. ಆ ಗೋಷ್ಠಿಗಳು ಯಶಸ್ವಿಯಾದುವೆಂದು ಮಹಾಜನರು ತಮ್ಮ ಮೆಚ್ಚಿಕೆಯನ್ನು ಸೂಚಿಸಿದ್ದರಿಂದಲೂ, ಅನುಭವದಿಂದ ಹಾಗೆ ಕಂಡುಬಂದದ್ದರಿಂದಲೂ, ಈ ವರ್ಷವೂ ಸಹ ಬೇಸಗೆಯ ರಜಾ ದಿನಗಳಲ್ಲಿ, ಪರಿಷತ್ತಿನ ವಿಶೇಷ ಸಾಹಿತ್ಯೋತ್ಸವದ ಅಂಗವಾಗಿ, ಆ ಏರ್ಪಾಟುಗಳನ್ನು ಕೈಗೊಂಡು ನಡಸತಕ್ಕದ್ದೆಂದು ಕಾ॥ ನಿ॥ ಮಂಡಲಿ (ತಾ॥ ೧೦–೧–೧೯೩೭ರಲ್ಲಿ) ನಿಶ್ಚಯಿಸಿತು. ಅದೇ ಮೇರೆಗೆ, ಆ ಗೋಷ್ಠಿಯ ಉದ್ದೇಶ ನಿಯಮಾವಳಿಗಳನ್ನು ಒಳಗೊಂಡ ಪ್ರಸಿದ್ಧ ಪತ್ರಿಕೆಯನ್ನು ಅಚ್ಚುಮಾಡಿಸಿ (ತಾ॥ ೨೦–೨–೧೯೩೭ರಲ್ಲಿ) ಪ್ರಕಟಪಡಿಸಲಾಯಿತು.

ಪರಿಷತ್ತಿನ ಪ್ರಾರ್ಥನೆಯನ್ನು ಲಾಲಿಸಿ, ಪ್ರಸಿದ್ಧ ಗಮಕಿಗಳಾ
ಎಸ್. ಜಿ. ಬಿಂದೂರಾಯರವರು ಗಮಕ ಗೋಷ್ಠಿಗೂ, ಸಂಗೀತ ವಿ
ಶ್ರೀಮಾನ್ ಬಿ. ವೆಂಕಟಕೃಷ್ಣಪ್ಪ, ಬಿ.ಎ. ಅವರು ಗಾನ ಗೋಷ್ಠಿಗ
ಲು ದಯಮಾಡಿ ಒಪ್ಪಿಕೊಂಡರು.

ಪರಿಷತ್ತಿನ ಕೋರಿಕೆಗೆ ಉತ್ತರವಾಗಿ, ಗಮಕಾಭ್ಯಾಸಕ್ಕೆ
ಗಂಡಸರು, ೩ ಮಂದಿ ಹೆಂಗಸರು, ಒಟ್ಟು ೧೭ ಮಂದಿ ಅಪೇಕ್ಷಾ
ಕಳುಹಿಸಿದ್ದರು. ಅವುಗಳ ಪೈಕಿ ೧೦ ಗಂಡಸರು ಮತ್ತು ೩ ಹೆಂಗ
೧೩ ಮಂದಿಯ ಅಪೇಕ್ಷಾ ಪತ್ರಗಳನ್ನು ಅಂಗೀಕರಿಸಲಾಯಿತು.
ಕ್ಕಾಗಿ ಒಬ್ಬರೇ ವಿದ್ಯಾರ್ಥಿ ಮಾತ್ರ ಬಂದುದರಿಂದ ಗಾನ ಗೋಷ್ಠಿಯ
ಈ ಸಲದ ಮಟ್ಟಿಗೆ ಬಿಡಬೇಕಾಗಿ ಬಂದಿತು. ಇದು ಬಹು ವಿಷಾದದ

ಗಮಕಾಭ್ಯಾಸಕ್ಕಾಗಿ ಕಳೆದ ವರ್ಷ ಗೊತ್ತುಮಾಡಿದ್ದ ಪದ್ಯ
ಈ ವರ್ಷವೂ ಇಟ್ಟುಕೊಳ್ಳತಕ್ಕದ್ದೆಂದು ನಿಶ್ಚಯವಾಯಿತು. ಅವುಗಳ
ಕಂಡ ಕಾವ್ಯ ಭಾಗಗಳ ಅಭ್ಯಾಸವಾಯಿತು :—

೧. ಕುಮಾರವ್ಯಾಸ ಭಾರತ (ಉದ್ಯೋಗ ಪರ್ವ—ಮೊದಲನೆಯ ಸ
೨೫ ಪದ್ಯಗಳು).

೨. ಜೈಮಿನಿ ಭಾರತ (ಚಂದ್ರಹಾಸನ ಬಾಲ್ಯ—೧೦ ಪದ್ಯಗಳು).

೩. ಹರಿಶ್ಚಂದ್ರ ಕಾವ್ಯ (೨ನೆಯ ಸಂಧಿ—೫ ಪದ್ಯಗಳು).

ಗಮಕ ಗೋಷ್ಠಿಯು ತಾ॥ ೧೫-೪-೧೯೩೭ ಗುರುವಾರ ಬೆಳಗ್ಗೆ
ಗದುಗಿನ ಶ್ರೀ ವೀರನಾರಾಯಣಸ್ವಾಮಿಯ ಪೂಜೆಯೊಡನೆ ಉಪಕ್ರ
ತಾ॥ ೧೨-೭-೧೯೩೭ರ ವರೆಗೆ, ಸುಮಾರು ೩ ತಿಂಗಳುಗಳ ಕಾಲ
ನಡೆದುಕೊಂಡು ಬಂದಿತು.

ಪಾಠಕ್ರಮವು ಸಾಮಾನ್ಯವಾಗಿ ಪ್ರತಿದಿನವೂ ಬೆಳಗ್ಗೆ ೭ ಘಂ
ಮತ್ತು ಅಪರಾಹ್ನ ೪ ಘಂಟೆಯಿಂದಲೂ ಪ್ರಾರಂಭವಾಗಿ, ಸುಮಾರು
ಕಾಲ ನಡೆಯುತ್ತಿದ್ದಿತು. ಹೊತ್ತು ಹೊತ್ತಿನಲ್ಲಿಯೂ ಸರಾಸರಿ ೭ ಮಂ
ಗಳು ಹಾಜರಾಗಿರುತ್ತಿದ್ದರು.

ಪಾಠಗಳು ಬಹು ತೃಪ್ತಿಕರವಾಗಿ ನಡೆದಿವೆಯೆಂದು ಹೇಳಬಹುದು
ವಿದ್ಯಾರ್ಥಿಗಳು ತಮ್ಮ ವ್ಯಾಸಂಗದಲ್ಲಿ ಬಹು ಆಸಕ್ತಿಯನ್ನು ತೋರಿ
ವಿದ್ಯಾರ್ಥಿಗಳೂ ಗೊತ್ತುಮಾಡಿದ್ದ ಪದ್ಯಗಳನ್ನು ಕಂಠಪಾಠ
ಕೆಲವರಂತೂ ನಿಯಮಿಸಿದ್ದುದಕ್ಕಿಂತ ಹೆಚ್ಚು ವೇಳೆ ನಿಂತು, ವಿಶೇಷ
ಅಭ್ಯಾಸವನ್ನು ಮಾಡಿದ್ದಾರೆ. ಶ್ರೀಮಾನ್ ಬಿಂದೂರಾಯರವರು ತ
ಗಮನಿಸದೆ, ಅನುಕೂಲವಾದ ತಮ್ಮ ಕಾಲವೆಲ್ಲವನ್ನೂ ಶಿಕ್ಷಣಕ್ಕೆ
ಪರಿಷತ್ತಿಗೆ ವಿಶೇಷ ಉಪಕಾರವೆಸಗಿದ್ದಾರೆ.

ವಿದ್ಯಾರ್ಥಿಗಳ ಗುಣ ವಿಮರ್ಶೆಗಾಗಿ ಈ ಕೆಳಗಿನ ಮಹನೀಯರುಗಳನ್ನುಳ್ಳ ...ಂದು ಪರೀಕ್ಷಕ ಸಮಿತಿಯನ್ನು ಕಾ॥ ನಿ॥ ಮಂಡಲಿ (ತಾ॥ ೨೦–೬–೧೯೩೭ರಲ್ಲಿ) ಯಮಿಸಿತು :—

(೧) ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.

(೨) ಶ್ರೀ॥ ಬಿ. ವೆಂಕಟಕೃಷ್ಣಪ್ಪನವರು, ಬಿ.ಎ.

(೩) ,, ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ.

(೪) ಶ್ರೀಮತಿ ಆರ್. ಕಲ್ಯಾಣಮ್ಮನವರು

(೫) ಶ್ರೀ॥ ಡಿ. ವಿ. ಗುಂಡಪ್ಪನವರು

ತಾ॥ ೧೦–೭–೧೯೩೭ರ ಸಾಯಂಕಾಲ ೫॥ ಘಂಟೆಗೆ ಪರಿಷನ್ಮಂದಿರದಲ್ಲಿ ಗಮಕ ...ರೀಕ್ಷೆ ನಡೆಯಿತು.

(ಮೇಲೆ ಕಂಡ ಸಮಿತಿಯ ಜೊತೆಗೆ, ಗಮಕ ಶಿಕ್ಷಕರಾದ ಶ್ರೀ॥ ಬಿಂದೂರಾಯ ...ವರೂ, ಶ್ರೀಮಾನ್ ವಿ. ಸೀತಾರಾಮಯ್ಯನವರೂ ಪರೀಕ್ಷಾ ಕಾರ್ಯದಲ್ಲಿ ಭಾಗ ...ಹಿಸಿ ಸಹಕರಿಸಿದರು. ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಅನನುಕೂಲದ ...ಸೆಯಿಂದ ಬಂದಿರಲಿಲ್ಲವಾಗಿ ಅವರ ಸ್ಥಾನದಲ್ಲಿ ಶ್ರೀ॥ ಎಸ್. ವಿ. ರಂಗಣ್ಣನವರು ...ರೀಕ್ಷಕರಾಗಿದ್ದರು.)

ಪರೀಕ್ಷೆಯಲ್ಲಿ, (೧) ಪದೋಚ್ಚಾರಣೆ, (೨) ರಾಗಪ್ರಯೋಗ, (೩) ಒಟ್ಟಿನ ...ರಿಣಾಮ— ಈ ಅಂಶಗಳನ್ನು ಗಮನದಲ್ಲಿ ಇರಿಸಿಕೊಳ್ಳಲಾಗಿತ್ತು. ಒಟ್ಟಿನಮೇಲೆ, ...ಸಲದ ವಿದ್ಯಾರ್ಥಿಗಳ ದರ್ಜೆ ಕಳೆದ ಎರಡು ವರ್ಷಗಳ ವಿದ್ಯಾರ್ಥಿಗಳ ದರ್ಜೆಗಿಂತ ...ತ್ತಮವಾಗಿದೆಯೆಂದು ಪರೀಕ್ಷಕರು ಅಭಿಪ್ರಾಯಪಟ್ಟಿದ್ದಾರೆ. ಪರೀಕ್ಷೆಗೆ ...ಳಿತಿದ್ದ ಎಂಟು ಮಂದಿ ವಿದ್ಯಾರ್ಥಿಗಳ ಪೈಕಿ ಏಳು ಮಂದಿ, ಈ ಕೆಳಗೆ ಕಾಣಿಸಿರುವ ...ಮದಲ್ಲಿ, ತೇರ್ಗಡೆ ಹೊಂದಿದರು :—

(೧) ಶ್ರೀ॥ ಎಂ. ಹರಿನಾರಾಯಣ, ಬಿ.ಎಸ್‌ಸಿ.

(೨) ,, ಎಸ್. ನಾಗೇಶರಾವ್, ಬಿ.ಎ.

(೩) ,, ಬಿ. ನಂಜುಂಡಯ್ಯ

(೪) ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾವ್

(೫) ಶ್ರೀ॥ ಬಿ. ಕೆ. ಶಿವರಾಮಯ್ಯ

(೬) ಶ್ರೀಮತಿ ರಾಜಾಮಣಿ ನಾಗರಾಜರಾವ್

(೭) ಶ್ರೀ॥ ಎಂ. ಶಿವಸ್ವಾಮಿ

ಈ ಸಂದರ್ಭದಲ್ಲಿ, ಒಂದು ವಿಶೇಷ ಸಂಗತಿಯನ್ನು ಬಿನ್ನವಿಸಿಕೊಳ್ಳಬೇಕಾಗಿದೆ: ...ುನಿಸಿಪಲ್ ಪ್ರೈಮರಿ ಶಾಲೆಗಳ ಕೆಲವು ಉಪಾಧ್ಯಾಯಿನಿಯರು ಪ್ರೈಮರಿ ಶಾಲೆಯ ...ಠ್ಯಪುಸ್ತಕಗಳಲ್ಲಿ ಇರುವ ಪದ್ಯಗಳನ್ನು ಇಂಪಾಗಿ ಹಾಡುವ ಮಟ್ಟಿಗೆ ಗಮಕಾ...ಭ್ಯಾಸವನ್ನು ಮಾಡಲು ಕುತೂಹಲವುಳ್ಳವರಾಗಿರುವರೆಂದೂ, ಅವರಿಗೆ ಗಮಕ ...ಕ್ಷಣವನ್ನು ತಕ್ಕಮಟ್ಟಿಗೆ ಕೊಡಲು ಪರಿಷತ್ತು ಅವಕಾಶ ಕಲ್ಪಿಸಿಕೊಟ್ಟಲ್ಲಿ

ಪ್ರಯೋಜನವುಂಟೆಂದೂ ಬೆಂಗಳೂರು ಸ್ಕೂಲ್ ಬೋರ್ಡ್ ಆಫೀಸರ್ ಶ್ರೀ ಮಾಧವರಾಯರು ಪರಿಷದುಪಾಧ್ಯಕ್ಷರಿಗೆ (ತಾ॥ ೧೪-೬-೧೯೩ ಬರೆದಿದ್ದರು. ಆ ಉಪಾಧ್ಯಾಯಿನಿಯರಿಗೆ ಪಾಠಹೇಳುವ ಹೆಚ್ಚು ಶ್ರಮ ಬಿಂದೂರಾಯರವರು ದಯಮಾಡಿ ವಹಿಸಿಕೊಂಡರು. ಅದೇ ಮೇ ಉಪಾಧ್ಯಾಯಿನಿಯರು ತಾ॥ ೨೦-೬-೧೯೩೭ರಿಂದ ಇದುವರೆಗೆ ವಾ ದಿನಗಳಂತೆ ಸಾಯಂಕಾಲದ ಹೊತ್ತಿನಲ್ಲಿ ೧-೧॥ ಘಂಟೆಗಳ ಮಾಡಿರುತ್ತಾರೆ.

ಕನ್ನಡ ಪಾಠಹೇಳುವ ಎಲ್ಲ ಉಪಾಧ್ಯಾಯರುಗಳಿಗೂ ಗಮ ಮಟ್ಟಿಗೆ ಬಂದಿರಬೇಕು. ಕಿವಿಗೆ ಇಂಪಾಗಿರುವಂತೆಯೂ ಅರ್ಥ ವಿಶದ ಪದ್ಯ ವಾಚನಮಾಡಿದರೆ, ವಿವರಣೆಯ ಕೆಲಸ ಕಡಮೆಯಾಗಿ ಪದ್ಯವೂ ಬಾಲಕ ಬಾಲಕಿಯರ ಮನಸ್ಸಿಗೆ ಚೆನ್ನಾಗಿ ನಾಟುತ್ತವೆ. ಅಲ್ಲದೆ, ಹಳ್ಳಿ ಇರುವ ಉಪಾಧ್ಯಾಯರುಗಳು ಕನ್ನಡ ಸಾಹಿತ್ಯದ ಕಾವ್ಯಭಾಗದ ಸತ್ಯವನ್ನೂ ಒಟ್ಟು ಜನತೆಗೆ ಬೀರಲು ಸಹಾಯಕವಾಗುತ್ತದೆ. ವಿದ್ಯಾಭ್ಯಾಸಕ್ರಮದಲ್ಲಿ ಈ ಕಲೆಗೆ ಒಂದು ಗಣ್ಯವಾದ ಸ್ಥಾನ ವರ್ಷವರ್ಷವೂ ಸಾಧ್ಯವಿರುವಷ್ಟು ಮಂದಿ ಉಪಾಧ್ಯಾಯರುಗಳು ಕಲಿತು ಅವರು ತಮ್ಮ ವಿದ್ಯಾರ್ಥಿಗಳಿಗೆ ಅದನ್ನು ಹೇಳಿಕೊಡುವಂತೆ ಗಳು ಬೇಗನೆ ಅನುಕೂಲಪಡಿಸಿಕೊಡಬೇಕೆಂದು ಈ ಮೂಲಕ ವಿ ಬೇಡಿಕೊಳ್ಳುತ್ತೇವೆ.

ಹಿಂದಿನ ವರ್ಷಗಳಲ್ಲಿ ತೇರ್ಗಡೆ ಹೊಂದಿದ ಗಮಕ ವಿದ್ಯಾರ್ಥಿ ಕೆಲವು ಮಾತುಗಳನ್ನು ಈ ವರ್ಷ ಪ್ರಶಸ್ತಿ ಪತ್ರಿಕೆಗಳನ್ನು ಪಡೆಯು ಗಳಿಗೂ ಸಹ ಗಮನಕ್ಕೆ ತರಬೇಕಾಗಿದೆ. ನಮ್ಮ ಈ ತರುಣ ಗಮ ಅಭ್ಯಾಸವು ಇಂದಿಗೇ ಮುಗಿಯಿತೆಂದು ಭಾವಿಸಿಕೊಳ್ಳಬಾರದು. ಕನ್ನ ಪ್ರಚಾರವು ಈ ಗಮಕಿಗಳಿಂದ ಹೆಚ್ಚಾಗಿ ಆಗತಕ್ಕದ್ದೆಂದು ಪರಿಷತ್ತು ನೆಚ್ಚಿಕೊಂಡಿದೆ. ಆದ್ದರಿಂದ ಅವರು ಕಾವ್ಯಾಭ್ಯಾಸವನ್ನೂ ಗಮಕ ಸಂತತವಾಗಿ ಸಾಧನೆಮಾಡುತ್ತ ಬರಬೇಕು. ಗಮಕ ಕಲೆಯಲ್ಲಿ ಪ ಯಿಂದ ಮಾತ್ರ ಸಾಧ್ಯ. ಇಲ್ಲಿ ಅವರಿಗೆ ಕೊಟ್ಟಿರುವ ಶಿಕ್ಷಣ ಆ ಸಾಧ ಅವರು ಇನ್ನು ಮುಖ್ಯವಾಗಿ ಮಾಡಬೇಕಾದ ಕೆಲಸವೆಂದರೆ—ಮ ಕನ್ನಡ ಕಾವ್ಯಗಳ ವ್ಯಾಸಂಗ; ಅವುಗಳ ರಸವನ್ನು ತಾವು ಸವಿ ಹಂಚುವುದು. ಅವರು ತಮ್ಮ ಕಲೆಯ ಮೂಲಕ ಜನರಿಗೆ ಆನಂದ ದಲ್ಲದೆ, ನಮ್ಮ ಕನ್ನಡ ಸಾಹಿತ್ಯವು ಸೊಬಗಿನಲ್ಲಿಯಾಗಲಿ, ಸಮ ವಿಸ್ತಾರ ವೈವಿಧ್ಯಗಳಲ್ಲಿಯಾಗಲಿ, ಮಹತ್ವದಲ್ಲಿಯಾಗಲಿ, ಭರತ ಯಾವ ಸಾಹಿತ್ಯಕ್ಕೂ ಕಡಮೆಯಾದದ್ದಲ್ಲ; ಇದು ಬೆಳೆದ ಸಾಹಿತ್ಯ, ಸಾಹಿತ್ಯ, ಬೆಳಸಬೇಕಾದ ಸಾಹಿತ್ಯ; ಇದರಲ್ಲಿ ಕೇಳಿ ತಣಿಯಬಹುದಾ

ಒದಗಿ ಆಸಂದಿಸಬಹುದಾದ ಭಾಗವಿದೆ—ಒಂದು ನಮ್ಮ ಜನಕ್ಕೆ ಮನಸಗಾಣಿಸಿ, ಅವರಲ್ಲಿ ಭಾಷಾಭಿಮಾನವನ್ನೂ ಕಾವ್ಯಾಸಕ್ತಿಯನ್ನೂ ಬಿತ್ತಬೇಕಾಗಿದೆ. ಇಷ್ಟನ್ನು ಮಾಡಬೇಕಾದರೆ, ನಮ್ಮ ತರುಣ ಗಮಕಿಗಳು ಗಮಕ ಕಲೆಯಲ್ಲಿ ನೈಪುಣ್ಯ ಪಡೆಯುವುದರ ಜೊತೆಗೆ ಇನ್ನೂ ಹೆಚ್ಚಿನ ಶ್ರಮವಹಿಸಬೇಕು: ಅವಕಾಶ ದೊರೆತಂತೆ, ಅವಕಾಶ ದೊರಕಿಸಿಕೊಂಡು, ಊರು ಊರುಗಳಿಗೂ ಹಳ್ಳಿ ಹಳ್ಳಿಗಳಿಗೂ ಹೋಗಿ, ಕಾವ್ಯ ವಾಚನಮಾಡಬೇಕು; ಮತ್ತು, ಈ ಕೆಲಸವನ್ನು ಯಾವೊಂದು ಪ್ರತಿಫಲದ ನಿರೀಕ್ಷೆಯೂ ಇಲ್ಲದೆ, ನಾಡಿನ ಮೇಲ್ಮೆಯ ದೃಷ್ಟಿಯಿಂದ, ಮಾಡಬೇಕು. ನಮ್ಮ ಈ ಅಭಿಲಾಷೆ ಸಫಲವಾಗಬೇಕಾದರೆ ಮಹಾಜನರು ಗಮಕಿಗಳಿಗೆ ತಕ್ಕ ಪ್ರೋತ್ಸಾಹವನ್ನೂ ಸಹಕಾರವನ್ನೂ ಕೊಡಬೇಕು. ಮದುವೆ, ಮುಂಜಿ, ಸಂತೋಷಗೋಷ್ಠಿ ಮುಂತಾದ ಕಾರ್ಯಗಳಲ್ಲಿ ನಮ್ಮವರು ಕಾವ್ಯವಾಚನವನ್ನು ಏರ್ಪಡಿಸುವುದನ್ನು ರೂಢಿಯಾಗಿಟ್ಟುಕೊಳ್ಳಬಹುದು. ನಾಡಿನ ಎಲ್ಲ ಕರ್ಣಾಟಕ ಸಂಘಗಳೂ ಗಮಕಿಗಳನ್ನು ಬರಮಾಡಿಕೊಂಡು ಕಾವ್ಯ ವಾಚನವನ್ನು ತಮ್ಮ ಕಾರ್ಯಕ್ರಮದ ಒಂದು ಪ್ರಮುಖ ಅಂಗವಾಗಿ ಇರಿಸಿಕೊಳ್ಳುವುದನ್ನು ಹೆಚ್ಚು ಹೆಚ್ಚಾಗಿ ಬಳಕೆಗೆ ತಂದುಕೊಂಡರೆ, ಗಮಕಿಗಳಿಗೆ ಸೂಕ್ತ ಅವಕಾಶ ದೊರೆತು, ಗಮಕ ಕಲೆ ಬೇಗ ಅಭಿವೃದ್ಧಿ ಹೊಂದುವುದರಲ್ಲಿ ಸಂದೇಹವಿಲ್ಲ. ಈ ಕೆಲಸವನ್ನು ಈಗಾಗಲೇ ಅನೇಕ ಸಾಹಿತ್ಯ ಸಂಘಗಳು ಮಾಡುತ್ತಿರುವುದು ಸಂತೋಷಜನಕ.

ಈ ಸಲ ತೇರ್ಗಡೆ ಹೊಂದಿರುವ ವಿದ್ಯಾರ್ಥಿಗಳ ಪೈಕಿ ಒಬ್ಬರಾದ ಶ್ರೀಮಾನ್ ಬಿ. ಸಂಜುಂಡಯ್ಯನವರನ್ನು ಚೆನ್ನರಾಯಪಟ್ಟಣದ ಕರ್ಣಾಟಕ ಸಂಘದವರು (ಸಂಘದ ಪರವಾಗಿ) ಗಮಕಾಭ್ಯಾಸಕ್ಕಾಗಿ ಕಳುಹಿಸಿಕೊಟ್ಟು, ಒಂದು ಮೇಲ್ಪಂಕ್ತಿಯನ್ನು ಹಾಕಿದ್ದಾರೆ.

ಈ ವರ್ಷ ತೇರ್ಗಡೆಯಾಗಿರುವ ನಮ್ಮ ಗಮಕಿಗಳ ಪೈಕಿ ಇಬ್ಬರು ಮಹಿಳೆಯರಿರುವುದು ಒಂದು ಹೆಮ್ಮೆಯ ವಿಷಯ. ಬರುವ ವರ್ಷದಿಂದ ಇನ್ನೂ ಹೆಚ್ಚು ಮಂದಿ ವಿದ್ಯಾರ್ಥಿನಿಯರು ಬಂದು ಗಮಕಾಭ್ಯಾಸಮಾಡಬೇಕೆಂಬುದು ನಮ್ಮ ಹಿರಿಯಾಸೆ. ನಮ್ಮ ನಾಡಿನ ಮಹಿಳೆಯರಲ್ಲಿ ಕನ್ನಡ ಕಾವ್ಯಾಭಿರುಚಿ ಮೊಳೆತು ಬೆಳೆಯಬೇಕಾದರೆ, ಹೆಚ್ಚು ಸಂಖ್ಯೆಯಲ್ಲಿ ಸ್ತ್ರೀ ಗಮಕಿಗಳೂ ತಯಾರಾಗುವುದು ಆವಶ್ಯಕ. ಸ್ತ್ರೀ ಗಮಕಿಗಳು ಮಹಿಳೆಯರ ಸಭೆಗಳಲ್ಲಿಯೂ, ಮಹಿಳಾ ಸಂಘಗಳಲ್ಲಿಯೂ ಕಾವ್ಯ ವಾಚನಗಳನ್ನು ಮಾಡಿ, ಹೆಣ್ಣುಮಕ್ಕಳಿಗೆ ಕಾವ್ಯ ವಾಚನವನ್ನು ಕಲಿಸಿ, ಹೆಂಗಸರು, ಮಕ್ಕಳಲ್ಲಿ ಸಾಹಿತ್ಯದ ಸವಿಯನ್ನೂ ಸೊಬಗನ್ನೂ ಹರಡಬೇಕಾಗಿದೆ. ಆ ಮೂಲಕ ನಮ್ಮ ಸಾಹಿತ್ಯವು ಸಮಾಜವೆಲ್ಲದರಲ್ಲಿಯೂ ಹರಡಲು ದೊಡ್ಡ ಸಹಾಯವಾಗುತ್ತದೆ.

ಗಮಕ ಕಲೆಯ ತರಗತಿಯ ಏರ್ಪಾಟನ್ನು ಪರಿಷತ್ತು ವರ್ಷ ವರ್ಷವೂ ನಡಸಿಕೊಂಡು ಬರಬೇಕೆಂದು ಉದ್ದೇಶಿಸಿದೆ. ಇದಕ್ಕೆ ಸಾಕಾದಷ್ಟು ದ್ರವ್ಯದ ಉಪಪತ್ತಿ ಪರಿಷತ್ತಿಗೆ ಇರುವುದಿಲ್ಲ. ಶ್ರೀಮಾನ್ ಬಿಂದೂರಾಯರವರ ಔದಾರ್ಯದಿಂದ ಈ ಕಾರ್ಯವನ್ನು ಇದುವರೆಗೆ ನಡಸಿಕೊಂಡು ಬರಲು ಸಾಧ್ಯವಾಯಿತು.

ವರ್ಷವೊಂದಕ್ಕೆ ಈ ಬಗ್ಗೆ ಕನಿಷ್ಠಪಕ್ಷ ೨೦೦ ರೂಪಾಯಿಗ... ಪರಿಷತ್ತು ಸಿದ್ಧವಾಗಿರಬೇಕೆಂದು ಕಳೆದ ವರ್ಷದ ವರದಿಯಲ್ಲಿ ತಿಳಿಸ... ಅಭಿಮಾನಿಗಳೂ ಪರಿಷದಭಿಮಾನಿಗಳೂ ಆದ ಶ್ರೀ॥ ಬಿ. ಎಂ. ಶ್ರೀಕಂ... ಪರಿಷತ್ತಿನಲ್ಲಿ ಗಮಕ ಕಲಾಭ್ಯಾಸದ ಏರ್ಪಾಟಿಗಾಗಿ ೧,೦೦೦ ರೂ... ದತ್ತಿ ಕೊಟ್ಟಿರುವುದನ್ನು ಈ ಸಂದರ್ಭದಲ್ಲಿ ಮತ್ತೊಮ್ಮೆ ವಿಶೇಷ ಕೃತ... ಸ್ಮರಿಸಬೇಕಾಗಿದೆ. ಧನಿಕರೂ ಉದಾರಿಗಳೂ ಆದವರು ನಮ್ಮ ನಾಡಿನ... ಮಂದಿ ಇದ್ದಾರೆ. ಅವರು ಕನ್ನಡದ ಮೇಲೆ ಅಭಿಮಾನ ತೋರಿ ಪರಿಷತ್ತಿ... ಮಾಡಿದರೆ, ನಮ್ಮ ಆಸೆ ತೀರದ ಆಸೆಯೇನೂ ಅಲ್ಲ.

ಎಂದಿನಂತೆ ಈ ವರ್ಷವೂ ಗಮಕ ತರಗತಿಗಳು ಇಷ್ಟು ಯಶ... ಯಲು ಮುಖ್ಯವಾಗಿ ಕಾರಣರಾದವರು ಶ್ರೀ। ಎಸ್. ಜಿ. ಬಿಂದು... ಪರಿಷತ್ತು ಅವರಿಗೆ ಎಷ್ಟು ಕೃತಜ್ಞತೆಯುಳ್ಳದ್ದಾಗಿದ್ದರೂ ಅಲ್ಪವೇ... ಪರವಾಗಿ ವಿಶೇಷ ಆದರದಿಂದ ನಾವು ಅರ್ಪಿಸುವ ಹೃತ್ಪೂರ್ವಕ... ಪರಿಷತ್ತು ಅವರಿಗೆ ಕೊಡುವ ಕಾಣಿಕೆ: ಅವರು ಕೃಪೆಯಿಂದ ... ಅಷ್ಟನ್ನೇ ಸ್ವೀಕರಿಸಬೇಕು.

ನಾವು ಕೇಳಿಕೊಂಡ ಕೂಡಲೆ ಕೆಲವು ಮಂದಿ ಮಹನೀಯರು ಪರೀ... ಸಮ್ಮತಿಸಿ, ಪರೀಕ್ಷೆಯನ್ನು ನಡೆಸಿಕೊಟ್ಟು, ಸಹಾಯಮಾಡಿದ್ದಾರೆ... ಅವರಿಗೆ ತನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಮರ್ಪಿಸುತ್ತದೆ.

ಇಂದಿನ ಸಮಾರಂಭದ ಅಧ್ಯಕ್ಷರಾಗಬೇಕೆಂದು ಬೇಡಿದ ಒಡನೆಯೇ... ಒಪ್ಪಿಕೊಂಡ, ರಾಜಧರ್ಮಪ್ರಸಕ್ತ ಶ್ರೀ॥ ಕೆ. ಶಂಕರನಾರಾಯಣರಾ... ಬಿ.ಎಲ್. ಅವರಿಗೆ ಯಾವ ರೀತಿ ಕೃತಜ್ಞತೆಯನ್ನು ತಿಳಿಸಬೇಕೋ ... ಕನ್ನಡದ ಮೇಲೆ ಅವರಿಗಿರುವ ಆದರ ವಿಶ್ವಾಸಗಳು ಅಪಾರವಾದು... ಪರಿಷತ್ತಿನ ಆಜೀವ ಸದಸ್ಯರು ಮತ್ತು ಪರಿಷತ್ತಿನ ಏಳಿಗೆಯಲ್ಲಿ ತೀವ್ರಾ... ವರು. ಅವರು ಈ ದಿನ ಅಧ್ಯಕ್ಷರಾಗಿರುವುದು ನಮ್ಮೆಲ್ಲರ ಭಾಗ್ಯವಿಶೇಷ... ಕಲಾಭ್ಯಾಸನನ್ನು ಹೊಂದಿರುವ ತರುಣ ಗಮಕಿಗಳಿಗೆ ಅವರು ದಯಮಾಡಿ... ಪ್ರಶಸ್ತಿ ಪತ್ರಿಕೆಗಳನ್ನು ತಮ್ಮ ಶುಭ ಹಸ್ತದಿಂದ ದಯಪಾಲಿಸಿ ಆಶೀರ್ವದಿಸಿ, ತಮ್ಮ ಹರಕೆಯಿಂದ ಪರಿಷತ್ತಿನ ಉದ್ದೇಶ ಪ್ರಯತ್ನಗ... ಬೇಕೆಂದು ಬೇಡಿಕೊಳ್ಳುತ್ತೇವೆ.

ಬೆಂಗಳೂರು,
೬ನೆಯ ಆಗಸ್ಟ್ ೧೯೩೭.

ಎಸ್. ವಿ. ...
ಗೌರವ ಕಾ...

---

# ಕನ್ನಡದಲ್ಲಿ ಫಾರಸಿ ಉರ್ದು ಶಬ್ದಗಳು

ಶ್ರೀಮಾನ್ ಡಿ. ಕೆ. ಭೀಮಸೇನರಾಯರು, ಎಂ.ಎ., ಹೈದರಾಬಾದು

---

ಕನ್ನಡ ನುಡಿಯು ವೈಯಾಕರಣಿಗಳಾದ ನಾಗವರ್ಮ ಕೇಶಿರಾಜರ ಕಾಲದಲ್ಲಿ ಪರದೇಶೀಯ ಭಾಷಾಶಬ್ದಗಳ ಸಂಪರ್ಕವಿಲ್ಲದೆ ಶುದ್ಧವಾಗಿದ್ದಿತು. ಈ ಕಾರಣದಿಂದಲೇ ಕನ್ನಡದ ಪ್ರಾಚೀನಮಾರ್ಗವನ್ನು ಕೈಬಿಟ್ಟ ಹರಿಹರ, ರಾಘವಾಂಕ, ಪಾಲ್ಕುರಿಕೆ ಸೋಮ, ಬಸವ, ಚೆನ್ನಬಸವ ಮುಂತಾದವರ ಗ್ರಂಥಸ್ಥ ಭಾಷೆಯು ಕೇಶಿರಾಜನಿಗೆ ಪ್ರಮಾಣಭೂತವಾಗಲಿಲ್ಲ. ಕೇಶಿರಾಜನ ಈ ಕಟ್ಟು ವೇಗವಾಗಿ ಹರಿದು ಬರುತ್ತಿರುವ ಮಹಾಪೂರಕ್ಕೆ ಅಡ್ಡವಾಗಿ ಕಟ್ಟಿದ ಕಟ್ಟೆಯಂತಾಯಿತು; ಆದರೆ ಅದು ಕಳಚಿ ಕಾಲಾನುಕ್ರಮದಲ್ಲಿ ಕೊಚ್ಚಿಕೊಂಡು ಹೋಯಿತು. ಇದರ ಕಾರಣಗಳು ಹಲವು; ಕೆಲವನ್ನು ಈ ಕೆಳಗೆ ಪ್ರಸ್ತಾವಿಸಲಾಗಿದೆ.

ಹದಿಮೂರನೆಯ ಶತಮಾನವು ದಕ್ಷಿಣ ಹಿಂದುಸ್ಥಾನಕ್ಕೆ ಪರಮ ವಿಷಮ ಸಮಯವಾಗಿ ಪರಿಣಮಿಸಿದುದಲ್ಲದೆ, ಕನ್ನಡನಾಡಿನ ಅಧೋಗತಿಗೆ ಮೂಲವಾಯಿತೆನ್ನಬಹುದು. ಅದುವರೆಗೆ ಚಾಲುಕ್ಯರ ಅಧೀನರಾಗಿದ್ದ ಮಾಂಡಲಿಕರು ಸ್ವತಂತ್ರರಾದರು. ಕನ್ನಡ ನಾಡು ಒಡೆದುಹೋಗಿ ಮೂರು ವಿಭಾಗಗಳಾಗಿ ಅವರ ವಶವಾಯಿತು. ಅವರು ತಂತಮ್ಮೊಳಗೆ ಕಾದಾಡತೊಡಗಿದರು. ಈ ಸಂಧಿಯನ್ನು ಸಾಧಿಸಿ ಉತ್ತರ ಹಿಂದುಸ್ಥಾನದಿಂದ ಅಲಾವುದ್ದೀನ್, ಮಲ್ಲಿಕ್ ಕಾಫೂರ್ ಮುಂತಾದವರು ದಕ್ಷಿಣ ದೇಶವನ್ನು ಪ್ರವೇಶಿಸಿ ಇಲ್ಲಿ ನೆಲೆಗೊಂಡಿದ್ದ ಅರಸು ಮನೆತನಗಳನ್ನು ಧ್ವಂಸಮಾಡಿ, ಅವರ ಅಧೀನವಾಗಿದ್ದ ನಾಡನ್ನು ತಮ್ಮದನ್ನಾಗಿ ಮಾಡಿಕೊಂಡರು. ಅಂದಿನಿಂದ ಕನ್ನಡ ನಾಡು [illegible]ರವಾಗಿ ಮಹಮ್ಮದೀಯರ ವಶವಾದುದು ಇತಿಹಾಸದಿಂದ ವ್ಯಕ್ತವಾಗಿದೆ. ಕನ್ನಡ ನಾಡಿನಲ್ಲಿ ಇಸ್ಲಾಂ ಸಂಸ್ಕೃತಿಯ ಮತ್ತು ಭಾಷೆಯ ಸಂಬಂಧವು ಅಂದಿನಿಂದ ಹೆಚ್ಚಾಗಿ ಆಯಿತು. ಒಂದು ಭಾಷೆಯ ಶಬ್ದಗಳು ಮತ್ತೊಂದು ಭಾಷೆಯಲ್ಲಿ ಆಸ್ಪದವನ್ನು ಪಡೆಯಬೇಕಾದರೆ, ಆಯಾ ಭಾಷೆಗಳನ್ನಾಡುವವರು ಪರಸ್ಪರ ಕೂಡಿರಬೇಕಾದುದು ಅತ್ಯಾವಶ್ಯಕವಷ್ಟೆ. ಕನ್ನಡಿಗರೂ ಮಹಮ್ಮದೀಯರೂ ಎಡೆಬಿಡದೆ ಕಲೆತಿರಲು ಅವಕಾಶವುಂಟಾದುದು ಈ ೧೩ನೆಯ ಶತಮಾನದ ತರುವಾಯದಲ್ಲಿಯೇ. ಇದಕ್ಕೆ ಮುಂಚೆ ಮುಸಲ್ಮಾನ್ ಧರ್ಮಾವಲಂಬಿಗಳಾದ ವ್ಯಾಪಾರಿಗಳೂ, ಮತ ಪ್ರಚಾರಕರೂ ಆಗಾಗ ಈ ನಾಡಿನಲ್ಲಿ ಸುಳಿದಾಡುತ್ತಿದ್ದರೂ, ಅವರ ಭಾಷೆಯು ಕನ್ನಡದ ಮೇಲೆ ಅಷ್ಟೊಂದು ಪರಿಣಾಮವನ್ನುಂಟುಮಾಡಿರಲಾರದು. ಏಕೆಂದರೆ, ಅವರು ಇಲ್ಲಿ ಸ್ಥಿರವಾಗಿ ನೆಲೆಗೊಳ್ಳಲಿಲ್ಲ. ಬಹಮನೀ ರಾಜ್ಯ ಸ್ಥಾಪನೆಯಾಗಿ ಕಲುಬುರಿಗೆಯು ರಾಜಧಾನಿಯಾದೊಡನೆಯೇ ಕನ್ನಡ ನಾಡು ಮಹಮ್ಮದೀಯ ರಾಜರ ನೆಲೆವನೆಯಾಯಿತು; ಬರುಬರುತ್ತ ಅವರಿಗೆ ಇದೇ ತವರುಮನೆಯಾಯಿತು ತುಂಗಭದ್ರೆಯಿಂದ ಉತ್ತರ ಸೀಮೆಯ ಕರ್ನಾಟಕವೆಲ್ಲ ಬಹಮನೀ ರಾಜ್ಯಕ್ಕೆ

ಒಳಪಟ್ಟಿತು. ಮುಂದೆ ಬಹಮನೀ ಮನೆತನವು ಹಾಳಾಗಿ ಆ ರಾಜ್ಯ ಮಹಮ್ಮದೀಯ ಮಾಂಡಲಿಕರು ಸ್ವತಂತ್ರರಾದರು. ಬಿಜಾಪುರ, ಕನ್ನಡ ನಾಡಿನ ಎರಡು ಮುಖ್ಯವಾದ ರಾಜಧಾನಿಗಳಾದುವು. ಮತ್ತೊಂದು ರಾಜಧಾನಿಯೆಂದರೆ ವಿಜಯನಗರವೆ. ಹೀಗೆ ಕರ್ನಾಟಕ ವಿಭಾಗವಾಗಿ ಒಂದು ಭಾಗವನ್ನು ಒಬ್ಬ ಹಿಂದೂ ರಾಜನೂ, ಪ್ರತ್ಯೆ ಗಳನ್ನು ಮಹಮ್ಮದೀಯ ದೊರೆಗಳೂ ಆಳತೊಡಗಿದರು.

ಈ ರೀತಿ ನಾಲ್ಕುನೂರು ವರ್ಷಗಳವರೆಗೆ (ಕ್ರಿ. ಶ. ೧೩೪೭ರಿಂದ ಕನ್ನಡ ನಾಡು ಸುಲ್ತಾನರ ಆಳಿಕೆಗೊಳಪಟ್ಟುದರಿಂದ, ಕನ್ನಡ ಸಂಸ್ಕೃ ಭಾಷೆಯ ಮೇಲೆ ಇಸ್ಲಾಂ ಸಂಸ್ಕೃತಿ ಮತ್ತು ಭಾಷೆಯ ಪರಿಣಾಮ ಆಶ್ಚರ್ಯವಲ್ಲ. ಬಿಜಾಪುರದ ಆದಿಲ್‌ಷಾಹಿ ಮನೆತನದವರು ವಿ ಗಳಾಗಿದ್ದರು. ಇಬ್ರಾಹಿಂ ಆದಿಲ್‌ಷಾಹಿಯ ಕಾಲದಲ್ಲಿ ವಿದ್ವಾಂಸ ಬೆಂಬಲ ದೊರೆತುದರಿಂದ ಅವನ ಆಸ್ಥಾನದಲ್ಲಿ ಕವಿಗಳು ಬೆಳಗುತ್ತಿದ್ದ ಕಾಲದವರೆಗೆ ಫಾರಸಿ ರಾಜಭಾಷೆಯಾಗಿದ್ದಿತು. ಇವನು ಇದನ್ನು ಫಾರಸಿಯ ಸ್ಥಾನದಲ್ಲಿ 'ದಕ್ಖನಿ' ಎಂದು ಸಂಕೇತಗೊಂಡ 'ಉರ್ದು' ಆಸ್ಥಾನದ ಭಾಷೆಯನ್ನಾಗಿ ಏರ್ಪಡಿಸಿದನು. ಆ ಭಾಷೆಯಲ್ಲಿಯೇ ತಾ ಎಂಬ ಕಾವ್ಯವನ್ನೂ ರಚಿಸಿದನು. 'ದಕ್ಖನಿ' ಅಥವಾ 'ಉರ್ದು' ಭಾಷೆ ಸ್ಥಾನದ ಭಾಷೆಯಾದೊಡನೆಯೇ ಇದು ಬಹು ಶೀಘ್ರವಾಗಿ ನಾಡಿ ಕೊಂಡಿತು. ಈ ಭಾಷೆಯು ಮೊದಮೊದಲು ಸೇನೆಯಲ್ಲಿಯೂ, ಅಪೇ (ಪೇಟೆ)ಗಳಲ್ಲಿಯೂ ಹೆಚ್ಚಾಗಿ ಬಳಕೆಗೆ ಬಂದಿತು. ಈಗಲೂ ಹಿಂದ ಸಾಮಾನ್ಯವಾಗಿ ಪೇಟೆಯ ಭಾಷೆಯೆಂದರೆ 'ಉರ್ದು' ಎಂದು ಕೊಂಡಿದ್ದಾರೆ.

ವಿಜಯನಗರದ ದೊರೆಗಳ ಮತ್ತು ಸುಲ್ತಾನರ ಪರಸ್ಪರ ಪತ್ರ ಸಾಮಾನ್ಯವಾಗಿ ಫಾರಸಿ ಭಾಷೆಯಲ್ಲಾಗಲೀ, ಉರ್ದು ಭಾಷೆಯಲ್ಲಾ ಬೇಕಾಗಿದ್ದಿತು. ಈ ದೊರೆಗಳ ಅಧೀನದಲ್ಲಿದ್ದ ಮುನ್ಷಿಗಳು ಫಾರಸಿ, ಭಾಷೆಗಳನ್ನು ಚೆನ್ನಾಗಿ ಬಲ್ಲವರಾಗಿಯೂ, ಪತ್ರವ್ಯವಹಾರಗಳನ್ನು ಅದ ನಡಸಲು ಸಮರ್ಥರಾಗಿಯೂ ಇರುತ್ತಿದ್ದರೆಂಬ ಅಂಶವನ್ನು ಇತ್ತೀ ಅನೇಕ ಕೈಫಿಯತ್ತು, ಬಖೈರುಗಳ ಆಧಾರದಿಂದ ನಿರ್ಧರಿಸಬಹುದಾಗಿ ಸುಲ್ತಾನರ ಭಾಷೆಯನ್ನೂ ಸುಲ್ತಾನರು ರಾಜರ ಭಾಷೆಯನ್ನೂ ತ್ತಿದ್ದುದರಿಂದ, ಅವರವರ ಪರಸ್ಪರ ಸಂದರ್ಶನವಾದಾಗ ಸುಗಮವಾ ಯನ್ನು ನಡಸಲು ಅನುಕೂಲವಾಗಿರುತ್ತಿತ್ತು. ಹೀಗೆ ರಾಜ ಪಾತ್ರವಾದ ಈ ಭಾಷೆಗಳನ್ನು ಅಧಿಕಾರಿಗಳೂ ಸಾಮಾನ್ಯ ಜನರೂ ಉಪಯೋಗಿಸುತ್ತಾ ಬಂದರು. ಹೀಗಾಗಿ ಈ ಭಾಷೆಗಳು ಕಾಲಾನುಕ್ರಮದಲ್ಲಿ ಪರಿಣಾಮವನ್ನುಂಟುಮಾಡಿರಬೇಕು.

ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಹೈದರಾಲಿಯೂ, ಅವನ ಮಗನಾದ ಟೀಪೂ ಸುಲ್ತಾನನೂ ಮೈಸೂರು ಸಿಂಹಾಸನವನ್ನು ಆಕ್ರಮಿಸಿಕೊಂಡು ಅಲ್ಪಾವಧಿಯವರೆಗೆ ಆಳಿದರೂ, ಅವರ ಭಾಷೆಯ ಪರಿಣಾಮವು ಆ ಪ್ರಾಂತದ ಕನ್ನಡದ ಮೇಲೆ ಶಬ್ದದೃಷ್ಟಿಯಿಂದ ಶಾಶ್ವತವಾಗಿ ಆಯಿತು. ಅನೇಕ ಫಾರಸಿ ಶಬ್ದಗಳೂ ಉರ್ದು ಶಬ್ದಗಳೂ · ಮೈಸೂರು ಸೀಮೆಯ ಕನ್ನಡದಲ್ಲಿ ಬೆರೆತುಹೋದುವು. ಈ ಶಬ್ದಗಳೇ ಅನಂತರ ಆಳಿಕೆಗೆ ಬಂದ ಮೈಸೂರು ರಾಜರ ಕಾಲದಲ್ಲಿಯೂ, ಐರೋಪ್ಯ ಕಮಿಷನರುಗಳ ಕಾಲದಲ್ಲಿಯೂ ಬಳಕೆಯಲ್ಲಿ ನಿಂತುವು. ಈ ರೀತಿ ಬಳಕೆಗೆ ಬಂದು ನಿಂತಿರುವ ಶಬ್ದಗಳನ್ನು ಪಾರಿಭಾಷಿಕ ಶಬ್ದಗಳೆಂಬ ಕಾರಣದಿಂದ ಸಂಪೂರ್ಣವಾಗಿ ತ್ಯಾಜ್ಯಮಾಡುವುದು ಸಮಂಜಸವಾಗಿ ತೋರುವುದಿಲ್ಲ. ಏತಕ್ಕೆಂದರೆ, ಚಲಾವಣೆಯಲ್ಲಿರುವ ಯಾವ ಭಾಷೆಯೇ ಆಗಲಿ ಆಯಾ ಕಾಲದಲ್ಲಿ ತನ್ನ ಮಗ್ಗುಲಲ್ಲಿ ಪ್ರಚಾರದಲ್ಲಿರುವ ಇತರ ಭಾಷೆಗಳ ಸಂಪರ್ಕದಿಂದ ಪರಿಣಾಮವನ್ನು ಹೊಂದದೆ ಇರುವುದು ಸಾಧ್ಯವಲ್ಲ. ಆದರೂ ಅನಿರ್ವಾಹವಾದ ಸಂದರ್ಭದಲ್ಲಿ ಮಾತ್ರ ಇಂತಹ ಪರಭಾಷೆಯ ಪಾರಿಭಾಷಿಕ ಶಬ್ದಗಳನ್ನು ಉಪಯೋಗಿಸಿ, ಉಳಿದೆಡೆಗಳಲ್ಲೆಲ್ಲಾ ಸ್ವಭಾಷೆಯಲ್ಲಿಯೇ ದೊರೆಯಬಹುದಾದ ಉಚಿತವಾದ ಶಬ್ದಗಳನ್ನು ಉಪಯೋಗಿಸುತ್ತಾ ಬರಬೇಕೆಂಬುದೇ ಭಾಷಾಭಿಮಾನಿಗಳ ಸಂತತವಾದ ಆಶಯವಾಗಿರುವುದು.

ಇನ್ನು ಗ್ರಂಥಸ್ಥವಾಗಿರುವ ಕೆಲವು ಫಾರಸಿ ಮತ್ತು ಉರ್ದು ಶಬ್ದಗಳ ವಿಚಾರವನ್ನು ಸಂಗ್ರಹವಾಗಿ ಪ್ರಸ್ತಾವಿಸಬಹುದು.

ನಾಗವರ್ಮ, ಕೇಶಿರಾಜರ ಕಾಲದಲ್ಲಿ ಫಾರಸಿ ಭಾಷೆಯು ದಕ್ಷಿಣ ದೇಶದವರೆಗೆ ಹಬ್ಬಿರಲಿಲ್ಲ. ಆ ಕಾಲದಲ್ಲಿಯೂ ಮಹಮ್ಮದೀಯ ವ್ಯಾಪಾರಿಗಳೂ, ಮತಪ್ರಚಾರಕರೂ ಇಲ್ಲಿ ಸಂಚರಿಸುತ್ತಿದ್ದರೆಂದು ಮೇಲೆ ನಿರೂಪಿಸಿದೆ. ಇವರಾಡುವ ಮಾತು ಕನ್ನಡದ ಮೇಲೆ ಅಷ್ಟು ಪರಿಣಾಮವನ್ನುಂಟುಮಾಡದಿದ್ದರೂ ಹಲವು ಶಬ್ದಗಳು ಆಗಿನ ಕೆಲವು ಕನ್ನಡ ಗ್ರಂಥಗಳಲ್ಲಿ ನುಸುಳಿಕೊಂಡಿವೆ. ಕೇಶಿರಾಜನು ಪ್ರಯೋಗಿಸುವ "ಟೊಪ್ಪಿಗೆಯ ಮಾನಿಸಂ,"[1] ('ಶಬ್ದಮಣಿದರ್ಪಣ'—ಕ॥ ಸಾ॥ ಪರಿಷತ್ತಿನ ಪ್ರಕಟನೆ: ಸೂತ್ರ ೧೩೨, ಪ್ರಯೋಗಂ) "ಪೊಸ ಟೊಪ್ಪಿಗೆ." (ಶ. ದ: ಸೂತ್ರ ೭೫, ಪ್ರಯೋಗಂ) ಎಂಬಲ್ಲಿಯ **ಟೊಪ್ಪಿಗೆ** ಎಂಬ ಶಬ್ದವು ಇಂತಹ ಶಬ್ದಗಳಲ್ಲೊಂದು. ಕಿಟ್ಟೆಲ್ ನಿಘಂಟುವಿನಲ್ಲಿ ಈ ಶಬ್ದದ ವ್ಯುತ್ಪತ್ತಿಯನ್ನು ಕೊಟ್ಟಿಲ್ಲ. ಸಂಸ್ಕೃತಜ್ಞರು 'ಟೋಪಿಕಾ'ಎಂಬ ಶಬ್ದದಿಂದ ಇದು ಹುಟ್ಟಿರಬೇಕೆಂದು ಅಭಿಪ್ರಾಯಪಡುವರೇನೋ ? ಪ್ರತ್ಯೇಕವಾದ ಸಂದರ್ಭದಲ್ಲಿ ಕೇಶಿರಾಜನು ಈ ಶಬ್ದವನ್ನು ಪ್ರಯೋಗಿಸಿರುವುದರಿಂದ ಈ ಶಬ್ದವು ಅವನಿಗೆ ವಿಜಾತೀಯವಾಗಿ ತೋರಿರಬೇಕೆಂದು ಕಾಣುತ್ತದೆ.

---

1. 'ಟೊಪ್ಪಿಗೆಯ ಮಾನಿಸಂ' ಎಂಬುದು 'ಟೋಪೀವಾಲಾ' ಎಂಬುದರ ಭಾಷಾಂತರದಂತಿದೆ. ಇದನ್ನು ಷಷ್ಠೀ ವಿಭಕ್ತಿಯ 'ಕುಱುಪಿ'ಗಾಗಿ ಉದಾಹರಿಸಿದ್ದಾನೆ. (ಪುಟ ೧೧೭, ಸೂ. ೧೩೨.) 'ಟೊಪ್ಪಿಗೆ ಹಾಕು' ಎಂದರೆ ಮೋಸಮಾಡು ಎಂಬರ್ಥವು ರೂಢಿಯಲ್ಲಿ ಬಂದಿರುವುದು ಉರ್ದುವಿನಲ್ಲಿರುವ "ಅಚ್ಛಾ ಟೋಪಿ ಡಾಲೀಂಗೇ" ಎಂಬುದರಿಂದ. ಪಚ್ಚಟೊಪ್ಪಿಗೆ—ಬಸವ ಪುರಾಣ.

ಕನ್ನಡಿಗರ ಶೀರ್ಷಕವು ಟೊಪ್ಪಿಗೆಯಲ್ಲ. ಅದು ಅನ್ಯದೇಶೀಯ ಬೇಕೆಂದೂ, ಕನ್ನಡಕ್ಕೆ ಎರವಲಾಗಿ ಬಂದಿದೆ ಎಂದೂ ಹೇಳಬಹುದು.

**ಬೇಸಱ್** ಎಂಬ ಶಬ್ದದ ವ್ಯುತ್ಪತ್ತಿಯನ್ನು ಕಂಡುಕೊಳ್ಳುವುದು ಸಾಧ್ಯವಾಗಿದೆ. ಕೇಶಿರಾಜನು ಧಾತುಪಾಠದಲ್ಲಿ ಇದನ್ನು ಸೇರಿಸಿದ್ದಾನೆ. ಅರ್ಥವನ್ನುಳ್ಳ ಶಬ್ದವು ಫಾರಸಿ ಭಾಷೆಯಲ್ಲಿ ಸುಮಾರು ಇದೇ ರೂಪದಲ್ಲಿ 'ಬೇಜಾರು' ಎಂಬುದು. ಇದರಲ್ಲಿರುವ 'ಜ'ಕಾರವು ತೆಲುಗಿನಲ್ಲಿ ಉಚ್ಚಾರಣೆಗೆ ಸಮವಾಗಿದೆ. ತಮಿಳಿನಲ್ಲಿ ಈ ಶಬ್ದವು 'ವೇಜಾ ಫಾರಸಿ ಭಾಷೆಯಿಂದ ಇದು ದ್ರಾವಿಡ ಭಾಷೆಗಳಿಗೆ ಬಂದಿದೆಯೋ ಅಥವಾ ಭಾಷೆಯೊಂದರ ಶಬ್ದವೇ ಫಾರಸಿ ಭಾಷೆಗೆ ಹೋಗಿದೆಯೋ ಎಂಬ ಅಂಶ ಹಿಡಿಯಬೇಕಾಗಿದೆ. ಬೇಜ್ಜಾರಿನಲ್ಲಿರುವ ಜಕಾರವೂ, ಬೇಸಱ್ ಎಂಬ ರೇಫವೂ ಆಯಾ ಭಾಷೆಯ ವರ್ಣವೈಶಿಷ್ಟ್ಯವನ್ನು ವ್ಯಕ್ತಪಡಿಸುತ್ತವೆ.

**ಭರವಸ** ಎಂಬ ಶಬ್ದವು ಉರ್ದು ಭಾಷೆಯದೆಂಬುದರಲ್ಲಿ ಈ ಶಬ್ದವು 'ದಕ್ಖನಿ'ಯಿಂದ ಕನ್ನಡದಲ್ಲಿ ಬಹುಕಾಲದ ಹಿಂದೆಯೇ ಕೊಂಡಿದೆ. ೧೩೬೯ರಲ್ಲಿ ರಚಿತವಾದ ಭೀಮಕವಿಯ ಬಸವಪುರಾಣ ಎಷ್ಟೋಸಾರಿ ಪ್ರಯೋಗವಾಗಿದೆ. ಈ ಶಬ್ದವು ಮರಾಠಿ, ಹಿಂದಿ ಭಾಷೆ ಪ್ರಯೋಗದಲ್ಲಿದೆ. ಆದುದರಿಂದ ಹಿಂದಿ ಭಾಷೆಯಿಂದ, ಮರಾಠಿಯ ವಾಗಿ, ಈ ಶಬ್ದವು ಕನ್ನಡಕ್ಕೆ ಬಂದಿದ್ದರೂ ಇರಬಹುದು; ಇಲ್ಲವೆ 'ದಕ್ಖನಿ' ಭಾಷೆಯಿಂದ ಬಂದಿರಲೂ ಬಹುದು.

ಶ್ರೀಮಾನ್ ಗೋವಿಂದ ಪೈಗಳು ಸುಮಾರು ಇದೇ ಕಾಲದಲ್ಲಿ ವಂತೆ ಅಭಿಪ್ರಾಯಪಡುವ 'ಜೈಮಿನಿ ಭಾರತ'ದಲ್ಲಿ **ಫೌಜು** ಎಂಬ ಶಬ್ದ ವಾಗಿರುವುದು ಎಲ್ಲರಿಗೂ ತಿಳಿದಂಶವಷ್ಟೆ. 'ದಕ್ಖನಿ' ಭಾಷೆಯು ಈ ಫೌಜಿನಲ್ಲಿಯೇ ಬಳಕೆಯಲ್ಲಿದ್ದುಕೊಂಡು ಮುಂದೆ ಅದು ರಾಜ ಪ್ರವೇಶಿಸಿತು. ಕವಿಯು ಸೇನೆಯಲ್ಲಿ ಪ್ರಚಾರದಲ್ಲಿದ್ದ ಈ 'ದಕ್ಖನಿ' ದಿಂದಲೇ ಸೇನೆಯನ್ನು 'ಫೌಜು' ಎಂದು ಹೆಸರಿಸಿರುವಲ್ಲಿ ಔಚಿತ್ಯವಿದೆ ಷಟ್ಪದಿಕಾರರು ಪ್ರಾಯಿಕವಾಗಿ ಈ ಶಬ್ದವನ್ನು ಅಲ್ಲಲ್ಲಿ ಪ್ರಯೋಗಿಸುತ್ತ

ಹದಿನಾರನೆಯ ಶತಮಾನದ ಆದಿಭಾಗದಲ್ಲಿದ್ದ ಪುರಂದರದಾಸ ಅನೇಕ ಉರ್ದು ಶಬ್ದಗಳು ಪ್ರಯೋಗವಾಗಿವೆ. 'ತುರುಕರ' ವಿಚಾ ಒಂದು ಹಾಡನ್ನು ಅವರು ರಚಿಸಿದ್ದಾರೆ. ಆ ಹಾಡಿನಲ್ಲಿ ಅವರು ಉರ್ದು ಪದಗಳನ್ನು ಪ್ರಯೋಗಿಸಿದ್ದಾರೆ. ಆ ಪದಗಳಿಗೆ ಕನ್ನಡ ಅರ್ಥ "ಗುರುವಿನ ಗುಲಾಮನಾಗುವ ತನಕಾ। ದೊರೆಯದಣ್ಣಾ ಮುಕುತಿ" ಹಾಡಿನಲ್ಲಿ ಎರಡು ಉರ್ದು ಪದಗಳು ಕಂಡುಬರುತ್ತವೆ. ಒಂದು ಎಂಬುದು, ಇನ್ನೊಂದು **ತನಕ** ಎಂಬುದು. ಈ 'ತನಕ' ಎಂಬ ಶಬ್ದವ

2. ಶ. ದ., ಪು. ೨೪೬ :– ಬೇಸಱು – ಆಲಸ್ಯೇ.

ಆಗಿರಬೇಕೆಂದು ಎಷ್ಟೋ ಜನರು ಭಾವಿಸಿದಂತೆ ಕಂಡುಬರುತ್ತದೆ. ಆದರೆ ಇದು 'ದಕ್ಖನಿ'ಯಿಂದ ಕನ್ನಡಕ್ಕೆ ಬಂದ ಶಬ್ದವು. 'ತಕ್' ಎಂಬ ಉರ್ದು ಶಬ್ದದ ಮೂಲ ರೂಪವಾದ 'ತಲಕ್' ಎಂಬ ಶಬ್ದದಿಂದ ಕನ್ನಡದ 'ತನಕ' ಎಂಬ ಶಬ್ದವು ಹುಟ್ಟಿದೆ. ಕನ್ನಡದಲ್ಲಿ 'ಲ'ಕಾರದ ಉಚ್ಚಾರವು 'ನ'ಕಾರವಾಗಿ ಪರಿಣಮಿಸುವುದೂ, 'ಲ'ಕಾರವು ಎಷ್ಟೋ ಎಡೆಗಳಲ್ಲಿ 'ಸ'ಕಾರವಾಗಿ ರೂಪಾಂತರ ಹೊಂದುವುದೂ ಒಂದು ನಿಯಮಕ್ಕೆ ಒಳಪಟ್ಟಿದೆಯಷ್ಟೆ. ಕೇಶಿರಾಜನು ಹೇಳುವಂತೆ ಯ, ಲ, ವ ಕಾರಗಳು ಕನ್ನಡದಲ್ಲಿ ಅನುನಾಸಿಕಗಳು[3]. ಇಲ್ಲಿ 'ತಲಕ್' ಎಂಬುದು 'ತನಕ' ಎಂದು ಆಗಿರುವುದೂ ಇದೇ ನಿಯಮಕ್ಕೊಳಗಾಗಿಯೇ.

ಈ ಸಂದರ್ಭದಲ್ಲಿ '**ಹಕ್ಕು**' ಎಂಬ ಶಬ್ದದ ವ್ಯುತ್ಪತ್ತಿಯನ್ನು ಕುರಿತು ವಿವೇಚಿಸುವುದು ಯುಕ್ತವಾಗಿದೆ. ಹಕ್ಕು ಎಂಬ ಶಬ್ದವು ಕನ್ನಡ ನಾಡಿನಲ್ಲೆಲ್ಲಾ ಬಹಳವಾಗಿ ಬಳಕೆಯಲ್ಲಿದೆ. ಇದು ಕನ್ನಡ ಶಬ್ದವೇ ಆಗಿರಬೇಕೆಂಬಷ್ಟು ಭ್ರಮೆಯಾಗುವಂತೆ ಕನ್ನಡದಲ್ಲಿ ಬೆರೆತುಕೊಂಡುಹೋಗಿದೆ. ಆದುದರಿಂದ ಹಳಗನ್ನಡದಲ್ಲಿಯೂ ಈ ಶಬ್ದವು ಪ್ರಯೋಗವಾಗಿರಬೇಕೆಂದೂ, ಇದರ ರೂಪವು ಮತ್ತೊಂದು ತೆರನಾಗಿರಬೇಕೆಂದೂ, ಅದೇ 'ಪಕ್ಕು' ಎಂದೂ ಕೆಲವರು ತಿಳಿದುಕೊಂಡಿದ್ದಾರೆ. 'ಪಕ್ಕು' ಎಂಬ ಶಬ್ದವು ಪ್ರಾಚೀನ ಗ್ರಂಥಗಳಲ್ಲಿ ಪ್ರಯೋಗವಾಗಿದೆ. ಪೊನ್ನ ರನ್ನಾದಿಗಳು ಇದನ್ನು ಪ್ರಯೋಗಿಸಿದ್ದಾರೆ. "ಪಾಪಕ್ಕೆ ಪಕ್ಕಾಗನೇ" ಎಂಬಲ್ಲಿ ಪಾಪಕ್ಕೆ ಹಕ್ಕುದಾರನಾಗನೇ ಎಂಬೀ ಅರ್ಥವನ್ನು ಹೇಳುವ ವಾಡಿಕೆಯೂ ಉಂಟು. ಹಕ್ಕು ಎಂಬುದು ಹಳಗನ್ನಡದ 'ಪಕ್ಕು' ಎಂಬುದರಿಂದ ಹುಟ್ಟಿದುದಲ್ಲ. "ಪಾಪಕ್ಕೆ ಪಕ್ಕಾಗನೇ" ಎಂಬ ಮಾತಿನಲ್ಲಿರುವ 'ಪಕ್ಕು' ಎಂಬುದರ ಅರ್ಥವು 'ಗುರಿ,' 'ಈಡು' ಎಂದಾಗುವುದಲ್ಲದೆ 'ಹಕ್ಕುದಾರ' ಎಂದು ಆಗುವುದಿಲ್ಲ. 'ಹಕ್ಕು' ಎಂಬುದು ಅರಬ್ಬೀ ಭಾಷೆಯ ಶಬ್ದವು. ಅದು ಫಾರಸಿ, ದಕ್ಖನಿ ಭಾಷೆಗಳ ಮುಖಾಂತರವಾಗಿ ಕನ್ನಡಕ್ಕೆ ಬಂದಿದೆ. 'ಹಕ್', 'ಮುಸ್ತಹಕ್,' 'ಹಕ್ದಾರ್' ಈ ಎಲ್ಲ ಅರಬ್ಬೀ ಶಬ್ದಗಳಲ್ಲಿ ಈ ಶಬ್ದವು ಕಂಡುಬರುತ್ತದೆ. 'ಹಕ್' ಎಂದರೆ ಸತ್ಯ, ದೇವರು, ಎಂಬ ಅರ್ಥಗಳೂ ಉಂಟು. ಕನ್ನಡದಲ್ಲಿ ಬಳಕೆಯಲ್ಲಿರುವ ಹಕ್ಕುದಾರ ಎಂಬ ಶಬ್ದದೊಳಗಣ 'ದಾರ' ಎಂಬ ಪ್ರತ್ಯಯ ಒಂದರಿಂದಲೇ ಇದು ಕನ್ನಡ ಶಬ್ದವಲ್ಲವೆಂದು ತೀರ್ಮಾನಿಸಬಹುದಾಗಿದೆ. ಈ 'ದಾರ' ಎಂಬ ಪ್ರತ್ಯಯವು ಉರ್ದು ಭಾಷೆಯದು. ಅದು ವತನ್‌ದಾರ, ಕಸಬುದಾರ ಮುಂತಾದ ಪ್ರಯೋಗಗಳಲ್ಲಿ ಇರುವುದು. ಈ ಶಬ್ದಗಳೂ ಕೂಡ ಕನ್ನಡದಲ್ಲಿ ಹೆಚ್ಚಾಗಿ ಪ್ರಯೋಗವಾಗಿರುವುವು. 'ದಾರ' ಎಂಬ ಉರ್ದು ಪ್ರತ್ಯಯವನ್ನು ಅನೇಕ ಕಡೆ ಕನ್ನಡ ಶಬ್ದಗಳಿಗೂ ಹತ್ತಿಸಿಕೊಂಡು ಇದು ಕನ್ನಡ ಪ್ರತ್ಯಯವೇ ಆಗಿರಬೇಕೆಂದು ಭ್ರಮೆಯಾಗುವಂತೆ ಮಾಡಿಕೊಂಡಿರುವುದೂ ಉಂಟು.

---

3. ಶಬ್ದಮಣಿದರ್ಪಣ: ಸೂತ್ರ ೧೬, ಪುಟ ೧೭-೧೮. (ಕೊಲ್ಲಣಿಗೆ, ಅಲ್ಲಣಿಗೆ, ಹಲ್ಲಣಂ, ಇಲ್ಲಣಂ.)

ಇದುವರೆಗೆ ಪ್ರಾಚೀನ ಕನ್ನಡ ಗ್ರಂಥಗಳಲ್ಲಿ ಅಲ್ಲಲ್ಲಿ ಸುಸುಳಿಕೊಂಡಿರು ಫಾರಸಿ ಶಬ್ದಗಳನ್ನು ಕುರಿತು ವಿವೇಚಿಸಿದುದಾಯಿತು. ೧೭, ೧೮ನೆಯ ಗಳಲ್ಲಿ ಉರ್ದು ಭಾಷೆಯು ಸಾಮಾನ್ಯವಾಗಿ ದಕ್ಷಿಣ ಹಿಂದುಸ್ಥಾನ ಪ್ರಚಾರವಾಗಿದ್ದಿತು. ಕನ್ನಡ ನಾಡು ಮುಖ್ಯವಾಗಿ ಅದಕ್ಕೆ ಹೆಚ್ಚು ಕೊಟ್ಟಿತ್ತು. ಏಕೆಂದರೆ, ಇಲ್ಲಿಯ ರಾಜರು ಮಹಮ್ಮದೀಯರಾಗಿದ್ದುದ ಭಾಷೆಗಳು ಫಾರಸಿ ಉರ್ದುಗಳೇ ಆಗಿದ್ದುವು. ವಿಜಯನಗರ ಸಂಸ್ಥಾನ ಮಹಮ್ಮದೀಯ ಅಧಿಕಾರಿಗಳನ್ನು ನೇಮಿಸಿಕೊಂಡಿರುತ್ತಿದ್ದರು. ಟೀಪೂ ಕಾಲದಲ್ಲಿಯೂ ಫಾರಸಿ ಭಾಷೆಯು ಮೈಸೂರು ಪ್ರಾಂತದಲ್ಲಿ ಹೆಚ್ಚು ಪರಿಣಾಮವನ್ನುಂಟುಮಾಡಿತು. ಹೀಗಾಗಿ, ೧೭ನೆಯ ಶತಮಾನದಲ್ಲಿ ರಚಿತವಾ ಕಾವ್ಯಗಳಲ್ಲಿ ಅಲ್ಲಲ್ಲಿ ಹೆಚ್ಚಾಗಿ ಈ ಭಾಷೆಯ ಶಬ್ದಗಳು ಪ್ರಯೋಗವಾ ಕಾಣಬಹುದು. ಕ್ರಿ. ಶ. ೧೬೫೦ರಲ್ಲಿ ಗಂಗ ಕವಿಯಿಂದ ರಚಿತವಾದ 'ಕುಮಾ ಕಥೆ' ಅಥವಾ 'ಕುಮಾರ ರಾಮನ ಕಥೆ'ಯಲ್ಲಿ ಸುಮಾರು ೨೦-೩೦ ಗಳು ಯಥೋಚಿತವಾದ ಸ್ಥಳಗಳಲ್ಲಿ ಪ್ರಯೋಗವಾಗಿರುವುದನ್ನು ನೋ ಆ ಗ್ರಂಥವು ಅಚ್ಚಾಗಿಲ್ಲ; ಮೂಲ ಪ್ರತಿಯಿಂದ ಈ ಶಬ್ದಗಳನ್ನು **ಖುಷಿ, ಬಂದಿಖಾನಾ, ಬದನಾಮಿ,** ("ಮೂದಲಿಸುತ 'ಬಂದಿಖಾನ ಹಾಕಿ 'ಬದನಾಮಿ'ಯನು ಮಾಳ್ಪೆ ನೃಪರಾ" ಎಂಬೀ ಪ್ರಯೋಗವ ವನ್ನುಂಟುಮಾಡುತ್ತದೆ.) **ದಿವಾಣ, ಚಾವಡಿ, ಫೌಜು,** ತನಕ, (ಜಗಡ್ ಎಂಬ ಉರ್ದು ಶಬ್ದದಿಂದ) **ರೋಖ, ಬಾಜಾರ, ಸಲ್ಲಾ,** ತಬ ಅನೇಕ ಶಬ್ದಗಳನ್ನು ಕಾಣಬಹುದು.

ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳವರು ಪರಿಷ್ಕರಿಸಿ ಪ್ರಕಟಿಸಿದ ' ವಿಜಯ'ವು ಈ ದೃಷ್ಟಿಯಲ್ಲಿ ಬಹು ಮಹತ್ತ್ವವುಳ್ಳದಾಗಿದೆ. ಇದು ಗ್ರಂಥವಾದುದರಿಂದ ಅನೇಕ ಚರಿತ್ರಾಂಶಗಳನ್ನೊಳಗೊಂಡು ಇತಿಹಾಸ ಸಂ ಬಹು ಸಹಾಯಕವಾಗಿದೆ. ಈ ಗ್ರಂಥವನ್ನು ರಚಿಸಿದ ಕವಿಯು ಉರ್ದು ಭಾಷೆಗಳಲ್ಲಿ ಒಳ್ಳೆಯ ನಿಷ್ಣಾತನಾಗಿದ್ದನೆಂದು ತೋರುತ್ತದೆ. ಇವನು ತನ್ನ ಉರ್ದು ಫಾರಸಿ ಶಬ್ದಗಳನ್ನು ಧಾರಾಳವಾಗಿ ಪ್ರಯೋಗಿಸಿದ್ದಾನೆ. ಕೆಲವ ಗಳಲ್ಲಿ ಉರ್ದು ಖಂಡವಾಕ್ಯಗಳನ್ನೂ, ಉರ್ದು-ಕನ್ನಡ ಸಮಾಸಗಳನ್ನೂ ಭಾಷೆಯಲ್ಲಿ ಬಳಕೆಯಲ್ಲಿರುವ ಅನೇಕ ಪ್ರಯೋಗಗಳನ್ನೂ ಉಪಯೋಗಿ ಇಂತಹ ಸುಮಾರು ೬೦ ಶಬ್ದಗಳು ಪದೇ ಪದೇ ಈ ಗ್ರಂಥದಲ್ಲಿ ಬರುತ್ತವೆ. ಈ ಶಬ್ದಗಳು ತುಂಬ ವ್ಯಾವಹಾರಿಕ ಭಾಷೆಯಲ್ಲಿ ಬಂದುಹೋಗಿವೆ. ಆ ಶಬ್ದ ಇಲ್ಲಿ ಕೊಡಲು ಸಾಧ್ಯವಿಲ್ಲವಾದರೂ ಕೆಲವು ಪ್ರಯೋಗಗಳನ್ನು ಉದಾಹರಿಸ ಕವಿಯು ಕೆಲವೆಡೆಗಳಲ್ಲಿ ಉರ್ದು ಶಬ್ದಗಳನ್ನು ಕನ್ನಡ ಭಾಷಾನು ಮಾರ್ಪಡಿಸಿಕೊಂಡಿದ್ದಾನೆ: 'ಮುಸಲೆಹತ್' ಎಂಬುದನ್ನು ಮುಸಲ 'ಲೂಪ್' ಎಂಬುದನ್ನು **ಲೂಪಿಯೆಂದೂ,** 'ಮೆಹರ್‌ಬಾನಿ' ಯನ್ನು ಮೆಹ

ಎಂದೂ, 'ಉಮರಾ' ಎಂಬುದನ್ನು **ಉಮರಾವು** ಎಂದೂ, 'ಗನೀಮ್' (ವೈರಿ ಎಂಬರ್ಥದಲ್ಲಿ) **ಗನೀಬ** ಎಂದೂ ಮಾರ್ಪಡಿಸಿಕೊಂಡಿದ್ದಾನೆ. ಇದರಂತೆ ಇನ್ನೆಷ್ಟೋ ಶಬ್ದಗಳನ್ನು ರೂಪಾಂತರಿಸಿದ್ದಾನೆ. ಉರ್ದುವಿನಲ್ಲಿ ಹೇಳುವ 'ಜೇರ್‌ಮಹಾಸಿರಾ' ಎಂಬ ಶಬ್ದವನ್ನು ಕವಿಯು **ಜೇರುಮುತ್ತಿಗೆ** ಎಂದು ಪ್ರಯೋಗಿಸುತ್ತಾನೆ. 'ಮಹಾಸಿರಾ' ಎಂದರೂ 'ಮುತ್ತಿಗೆ' ಎಂದರೂ ಒಂದೇಯೇ. ಆದರೆ ಕವಿ 'ಜೇರ್' ಎಂಬುದನ್ನು ಮಾತ್ರ ಇರಿಸಿಕೊಂಡು ಕನ್ನಡ ಶಬ್ದದೊಡನೆ ಅದನ್ನು ಸಮಾಸಮಾಡಿದ್ದಾನೆ. ಹಾಗೆಯೇ **ಜೇರುಗೈಯು** ಎಂಬ ಪ್ರಯೋಗವೂ ಸಿಕ್ಕುತ್ತದೆ. ಇಲ್ಲಿ ಅರಿಸಮಾಸದೋಷವೆಂದು ಇದನ್ನು ತಿರಸ್ಕರಿಸಬೇಕೆ? ಇದರಂತೆ ಇನ್ನೆಷ್ಟು ಶಬ್ದಗಳನ್ನು ದೋಷಯುಕ್ತವೆಂದು ಅಲ್ಲಗಳೆಯುವುದು? **ನಜರುಗಾಣಿಕೆ, ಪಂಚಪಕೀರ** ಮುಂತಾದ ಶಬ್ದಗಳು ಅಡಿಗಡಿಗೆ ಬರುತ್ತವೆ. "ಫೌಜಂ ಲೂಪಿಸಿ," "ಪತ್ತೆ ಲಷ್ಕರಿ," "ಬಾವನ್ನ ಪಾತುಶಾಹ," "ಜಕೀರಿ ರಸ್ತು ಮುಸ್ತೈದು"—ಇವೆಲ್ಲವೂ ಖಂಡವಾಕ್ಯಗಳೇ. ಸಂಸ್ಕೃತ ಶಬ್ದಗಳಿಗೆ 'ಇಸು' ಪ್ರತ್ಯಯವನ್ನು ಸೇರಿಸಿ ಕ್ರಿಯಾರೂಪಗಳನ್ನು ಮಾಡಿಕೊಳ್ಳುವಂತೆ ಈ ಕವಿಯು ಉರ್ದು ಶಬ್ದಗಳಿಗೂ 'ಇಸು' ಪ್ರತ್ಯಯವನ್ನು ಹತ್ತಿಸಿ ಹೇರಳವಾದ ಕ್ರಿಯಾರೂಪಗಳನ್ನು ಸಿದ್ಧಿಸಿಕೊಂಡಿದ್ದಾನೆ: ಉದಾ:'ಫೇರಿಸಿ,' 'ಲೂಪಿಸಿ,' 'ಬಿಗಡಿಸಿ' ಮುಂತಾದುವುಗಳು. ಕವಿಯು ಪ್ರಯೋಗಿಸಿರುವ ಕೆಲವು ಶಬ್ದಗಳನ್ನು ಪರಿಶೀಲಿಸಿದರೆ, ಇವನಿಗೆ ಈ ಭಾಷೆಗಳಲ್ಲಿ ತುಂಬ ಪರಿಣತಿ ಇದ್ದಿತೆಂದು ಹೇಳಬೇಕಾಗುತ್ತದೆ: **ದಿಲಾಸ, ಹವಾಲೆ, ಹುಕುಮು, ದವಲತ್ತು, ಪಿತೂರಿ, ಫಿರಿಯಾದಿ, ಉಮರಾವು, ಗನೀಬ, ತರಥ, ಪತ್ತೆಲಷ್ಕರಿ**—ಇತ್ಯಾದಿ ಶಬ್ದಗಳು ಉರ್ದುಭಾಷೆಯಲ್ಲಿ ಪ್ರೌಢವಾದ ಶಬ್ದಗಳು.

ಮುಸಲ್ಮಾನಿ ಭಾಷೆಯ ಪರಿಣಾಮವು ಶಬ್ದದೃಷ್ಟಿಯಿಂದ ಇಷ್ಟು ಮಟ್ಟಿಗೆ ಆಗಿರಲು, ಚಂದ್ರಸಾಗರವರ್ಣಿ ಎಂಬ ಜೈನಕವಿಗೆ 'ಮುಲ್ಲಾಶಾಸ್ತ್ರ'ವೊಂದನ್ನು ಬರೆಯಲು ಅವಕಾಶ ದೊರೆಯಿತು[4]. ಕವಿಯು ಇದನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ್ದಾನೆ.

"ಬಸದಿಯೆಂಬುದಕಾಗ ಪ್ರೀತಿಕರ। ಹೆಸರಮಾಡಿ ಮುಸೂತಿಯೆಂದವ।
ನುಸುರಿದನು ಪ್ರಾಕೃತದಿ ಮೋಕ್ಷಕೆ ಮೊಖ್ಬವೆಂದೆಂಬ। ಹೆಸರಿಡಲು" ಎಂದೂ,

"ಅನ್ನವನು ಚರುವೆಂದು ದೇವರಿ। ಗನ್ನನೈವೇದ್ಯವನು ಮಾಡುವು
ದಿನ್ನು ಅನುಚಿತವೀಗ ಚುರಿಮುರಿಯೆಂದು ಅವಲಕ್ಕಿ।
ಯನ್ನು ಶರ್ಕರೆ ಸಹಿತ ದೇವರಿ। ಗನ್ನ ಮಾಡಿರಿ ಜುಮ್ಮರಾತ್ರಿಯೊ।
ಳೆನ್ನುತಲಿ ಬೆಸನಿತ್ತ ಸರ್ವರಿಗರಸ ಆ ಮುಲ್ಲಾ।" ಎಂದೂ,

"ಮುಲ್ಲವೆಂಬಂಕಿತವ ತನ್ನೊಳಗಲ್ಲವೆಂಬಂಕಿತವ ದೇವರೊಳು" ಎಂದೂ

ಇತ್ಯಾದಿಯಾಗಿ ಅನೇಕ ಪದ್ಯಗಳು ರಚಿತವಾಗಿವೆ.

ಕನ್ನಡದಲ್ಲಿ 'ಕೈಫಿಯತ್ತು'ಗಳೂ 'ಬಖೈರು'ಗಳೂ ಹೆಚ್ಚಿನ ಮಹತ್ತ್ವವನ್ನು ಪಡೆದಿವೆ. ಐತಿಹಾಸಿಕ ದೃಷ್ಟಿಯಿಂದ ಇವು ಎಷ್ಟು ಮುಖ್ಯವಾಗಿವೆಯೋ, ಭಾಷಾ

4 ಕವಿಚರಿತೆ—ಭಾಗ ೩, ಪುಟ ೧೬೯.

ದೃಷ್ಟಿಯಿಂದಲೂ ಅಷ್ಟೇ ಪ್ರಾಮುಖ್ಯತೆಯನ್ನು ಪಡೆದಿವೆ. ಕರ್ನಾಟ
ಪರಿಷತ್ತಿನವರೂ, 'ಜಯಕರ್ನಾಟಕ'ದ ಸಂಚಾಲಕರೂ ಕೆಲವು ಕೈಫಿಯ
ಪ್ರಕಟಿಸುವ ಮೂಲಕವಾಗಿ ತುಂಬ ಉಪಕಾರವನ್ನು ಮಾಡಿದ್ದಾರೆ. ಈ ಕೈ
ಗಳ ಭಾಷೆಯನ್ನು ಆದ್ಯಂತ ತಿಳಿದುಕೊಳ್ಳಬೇಕಾದರೆ ಉರ್ದು ಭಾಷೆ
ಸ್ವಲ್ಪವಾದರೂ ಬೇಕೆಂದು ತೋರುತ್ತದೆ. ಇವುಗಳನ್ನು ರಚಿಸಿದವ
ಗಳಾದ 'ಮುನ್ಷಿ'ಗಳಾಗಿದ್ದರೆಂದು ಹೇಳಬೇಕಾಗುತ್ತದೆ. ಕೈಫಿ
**ಬಖೈರು** ಎಂಬೀ ಶಬ್ದಗಳೇ ಉರ್ದು ಭಾಷೆಯುವು. 'ಅರ್ಕಾಡು' ಕೈಫಿ
ರಲ್ಲಿಯೇ ಸುಮಾರು ೧೪೬ ಉರ್ದು ಶಬ್ದಗಳು ಪ್ರಯೋಗವಾಗಿವೆ.
ಕೈಫಿಯತ್ತಿನ ಉದ್ದಕ್ಕೂ ಆಗಾಗ ಬರುತ್ತಲೇ ಇರುತ್ತವೆ. ಇಲ್ಲಿ
ಹಲವು ಶಬ್ದಗಳ ವೈಶಿಷ್ಟ್ಯವನ್ನು ತೋರಿಸಿದೆ:—

'ಖಾಸ ಚವರಿಬರದಾರಿ**ವಳ**ಕ್ಕೆ': ಇಲ್ಲಿ **ವಳ** ಎಂಬ ಕನ್ನಡ
ಪ್ರತ್ಯಯವನ್ನು 'ಚವರಿ ಬರದಾರಿ' ಎಂಬುದಕ್ಕೆ ಹತ್ತಿಸಿ
ಮಾಡಿಕೊಂಡಿದೆ. ಇದು ವ್ಯಾಕರಣ ದೃಷ್ಟಿಯಿಂದ ಮಹತ್ತ್ವವಾಗಿದೆ. 'ಪಳಕೊ
'ಬದ್ದಮಸಲತ್ತು,' 'ನಾಕಾರೆ, ಬೇಕೂಫ ನಾದಾನ್ ಹಲ್ಕೆ' ಇವೆಲ್ಲ ಭಾಷೆ
ಭಾಗಗಳು. 'ಜಾಹಿಲಿಯತ್' ಎಂಬ ಪದವನ್ನು ಭಾವನಾಮ
ಪ್ರಯೋಗಿಸಿದೆ. 'ಬದಲು ಮಾರ್ಗ' ಎಂಬುದನ್ನು ಬೇಕಾದರೆ ಅಡಿಸ
ಹೇಳಬಹುದು. ಸೇನೆ "ತೀನ್ ತೇರೆಯಾಗಿ" ಹೋಯಿತು: ಇಲ್ಲಿ
ರೂಢಿಯಲ್ಲಿರುವ ನುಡಿಕಟ್ಟನ್ನೇ (Idiom) ಪ್ರಯೋಗಿಸಿದ್ದಾನೆ.
ಖಾನರು **ವ** ಚಂದಾಸಾಹೇಬರು: ಇಲ್ಲಿ '**ವ**' ಎಂಬ ಸಮುಚ್ಚಯ
ಗಮನಿಸಬೇಕಾಗಿದೆ. 'ಇಸು' ಪ್ರತ್ಯಯವನ್ನು ಸೇರಿಸಿಕೊಂಡು ಪ್ರಯೋ
ಕ್ರಿಯಾರೂಪಗಳಾದ **ಜಮಾಯಿಸಿ, ಚಲಾಯಿಸಿ** ಎಂಬುವುಗಳು
ದಷ್ಟು ಸಾರಿ ಬರುತ್ತವೆ.

ಕೈಫಿಯತ್ತುಗಳ ಈ ಸಾಹಿತ್ಯ ಭಾಗವನ್ನವಲೋಕಿಸಿದರೆ ಕನ್ನಡ
ದಲ್ಲಿಯೂ ಉರ್ದು ಶಬ್ದ ಪ್ರಯೋಗದ ಚರ್ಚೆಯ ಆವಶ್ಯಕತೆ ಇದೆ
ವಿದಿತವಾಗುವುದು.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಹುಟ್ಟಿದ ಸನ್ನದು
ಇದೇ ಬಗೆಯ ಶಬ್ದಗಳು ಗುಂಪು ಗುಂಪಾಗಿ ದೃಗ್ಗೋಚರವಾಗುವುವು
ಭಯದಿಂದ ಅವುಗಳನ್ನು ಇಲ್ಲಿ ಸೇರಿಸಿಲ್ಲ.)

ವೇದಾಂತ, ಧರ್ಮಶಾಸ್ತ್ರ, ಗಣಿತ, ವೈದ್ಯ, ಜ್ಯೋತಿಷ ಮುಂ
ಗಳನ್ನು ಪ್ರತಿಪಾದಿಸುವಾಗ ಪಾರಿಭಾಷಿಕ ಶಬ್ದಗಳನ್ನು ಗ್ರಹಿಸುವ
ಕನ್ನಡ ಭಾಷೆ ಸಂಸ್ಕೃತಕ್ಕೆ ಹೇಗೆ ಋಣಿಯಾಗಿದೆಯೋ, ಹಾಗೆಯೇ
ಪಾರಿಭಾಷಿಕ ಶಬ್ದಗಳನ್ನು ತೆಗೆದುಕೊಳ್ಳುವುದರಲ್ಲಿ 'ಉರ್ದು'ವಿಗೆ
ಕರ್ನಾಟಕದ ಎಲ್ಲಾ ಭಾಗಗಳಲ್ಲಿಯೂ ಸರಕಾರಿ ದಫ್ತರುಗಳಿಗೆ

ಅಂಶಗಳಲ್ಲಿಯೂ, ಜಮೀನುಗಳಿಗೆ ಸಂಬಂಧಿಸಿದ ವಿಷಯಗಳಲ್ಲಿಯೂ ಉರ್ದು ಶಬ್ದಗಳನ್ನೇ ಬಳಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ.

ಕೈಫಿಯತ್ತುಗಳಲ್ಲಿಯೂ, ಬಖೈರುಗಳಲ್ಲಿಯೂ ಇತ್ತೀಚೆಗೆ ಪ್ರಕಟವಾದ ನಾಟಕಗಳು, ಸಣ್ಣ ಕತೆಗಳು, ವಿಮರ್ಶೆಗಳು, ಕವನಗಳು ಇವುಗಳಲ್ಲಿಯೂ ಪ್ರಯೋಗವಾಗಿರುವ ಉರ್ದು ಶಬ್ದಗಳನ್ನು ಸಂಗ್ರಹಿಸಲಾಗಿ, ಅವುಗಳ ಸಂಖ್ಯೆ ೭೦೦ಕ್ಕೆ ಮೇಲ್ಪಟ್ಟಿದೆ. ಕರ್ನಾಟಕದ ಬೇರೆ ಬೇರೆ ಭಾಗಗಳ ಗ್ರಂಥಕರ್ತರು ತಿಳಿದೂ, ತಿಳಿಯದೆಯೂ, ರೂಢಿಯಲ್ಲಿರುವ ಕಾರಣದಿಂದ, ಗದ್ಯ ಪದ್ಯಾತ್ಮಕವಾದ ತಮ್ಮ ಕೃತಿಗಳಲ್ಲಿ 'ಉರ್ದು' ಶಬ್ದಗಳನ್ನು ಪ್ರಯೋಗಿಸುತ್ತಿರುವರು.

ಈ ಉರ್ದು ಶಬ್ದಗಳು ಎಷ್ಟು ಮಟ್ಟಿಗೆ ಜನಸಾಮಾನ್ಯದಲ್ಲಿ ಬಳಕೆಯಲ್ಲಿ ಬಂದು ಹೋಗಿವೆಯೆಂದರೆ, ಗಾದೆಗಳಲ್ಲಿಯೂ ಪ್ರಾಸಕ್ಕಾಗಿ ಈ ಶಬ್ದಗಳನ್ನು ಉಪಯೋಗಿಸುತ್ತಾರೆ. ಗಾದೆಮಾತುಗಳಲ್ಲಿ ಈ ಶಬ್ದಗಳು ಪ್ರಯೋಗವಾಗಿರಬೇಕಾದರೆ ಇವುಗಳ ಪ್ರಾಚುರ್ಯ ಜನತೆಯಲ್ಲಿ ಹೆಚ್ಚಾಗಿರಬೇಕಷ್ಟೆ. 'ಫಾಯಿದೆ ನೋಡಿ ವಾಯಿದೆ ಕೊಳಕೊಂಡ': ಇಲ್ಲಿ **ಫಾಯಿದೆ, ವಾಯಿದೆ** ಎಂಬಿವುಗಳೆರಡೂ ಉರ್ದು ಭಾಷೆಯ ಶಬ್ದಗಳು. 'ಸಾವಿರ ಕುದುರೆ **ಸರದಾರ** ಮನೆ ಹೆಂಡಿತಿಗೆ **ಕಾಸ್ತಾರ** (ಪಿಂಜಾರ)', 'ಬಡಾಯಿ ಬಲ್ಲವನು **ಲಡಾಯಿ** ಬಲ್ಲನೆ,' '**ಅಂಬಾರಿ**ಯಲ್ಲಿ ಕೂತಿದ್ದರೂ ಮುಂಗಾರು ಬಿಡಲಿಲ್ಲ', 'ತುಣ್ಣ ಕುದುರೆಗೆ ಗಣ್ಣು **ಲಗಾಮು**'— ಎಲ್ಲ ಗಾದೆಗಳಲ್ಲಿ ಬಂದಿರುವ ಉರ್ದು ಶಬ್ದಗಳಿಂದ ಗಾದೆಯ ಬೆಡಗು ಹೆಚ್ಚಾಗಿದೆ.

ಅರ್ಥಪುಷ್ಟಿ ಮತ್ತು ಭಾವಪೋಷಣೆಯ ಸಂದರ್ಭದಲ್ಲಿ ಅಪ್ರಯತ್ನವಾಗಿ ಬರುವ ಉರ್ದು ಶಬ್ದಗಳು ಅಗಾಧವಾದ ಪರಿಣಾಮವನ್ನುಂಟುಮಾಡುವುವು:

'ಅಂಗಾಂಗವೆಲ್ಲಾ ತೆರವಿಲ್ಲದೆ ಮುಳ್ಳು ಹುಯ್ದಂತೆ ಹೇರಿರುವ ಜವಾಹಿರಿ';
'ಮೈಯೆಲ್ಲಾ ಮುಸುಕಿದ ದಪ್ಪವಾದ ಹಳೆಯ ಜರತಾರಿಯ ವಸ್ತ್ರ'.

ಇಲ್ಲಿ ಸಮಯೋಚಿತವಾಗಿ ಪ್ರಯೋಗವಾಗಿರುವ ಜವಾಹಿರಿ, ಜರತಾರಿ ಎಂಬೀ ಶಬ್ದಸಂಪತ್ತಿಯಲ್ಲಿ ಐಶ್ವರ್ಯದ ಭಾವವು ಕೊನೆಮುಟ್ಟಿದೆ.

"**ಬಾಜಾರ**ಕ್ಕೆ ಹೋಗಿ **ಸಾಮಾನ**ನ್ನು **ಚೌಕಾಶಿ**ಮಾಡಿ ತರುತ್ತಾಳೆ' ಎಂಬೀ ಮಾತಿನಲ್ಲಿ ಕಾರ್ಯನಿಪುಣತೆ ಎಷ್ಟು ಸ್ಪಷ್ಟವಾಗಿ ಕಾಣುತ್ತದೆ. ಇಲ್ಲಿ ಬಂದಿರುವ ಬಾಜಾರ, ಸಾಮಾನು, ಚೌಕಾಶಿ ಎಂಬೀ ಮೂರು ಶಬ್ದಗಳೂ ಉರ್ದು ಭಾಷೆಯವೇ. '**ಸಿಪಾಯಿ** ಸಾಲ **ವಸೂಲು**ಮಾಡಲಿಕ್ಕೆ ಬಂದನು. ಸಾಲ ವಸೂಲು ಆದಂತೆಯೇ ಸರಿ', 'ಈ ಹುಡುಗ **ಬಿಲ್ಕುಲು ಲಾಯಕ್ಕಿ**ಲ್ಲ,' 'ಗ್ರಾಮಸ್ಥರೆಲ್ಲ **ಪಂಚಾಯಿತಿ** ಸೇರಿದರು,' 'ಹಣಕ್ಕೆ **ಹಕ್ಕುದಾರರು** ಯಾರೂ ಇಲ್ಲ,' 'ಎಲ್ಲಿ ನೋಡುತ್ತಾನೋ ಕಾಣೆ ಬಂಬ **ಗಾಬರಿ**ಯಿಂದ,' 'ಊರಲ್ಲಿ ಅರ್ಧ **ಜಮೀನ**ನ್ನೆಲ್ಲ ತಾವೇ **ಗುತ್ತಿಗೆ**ಗೆ ಮಾಡಿದ್ದರು,' 'ತಿಂದು ಕೊಬ್ಬಿ **ಜೋರಾ**ಗಿದ್ದಾನೆ,' 'ಅವರು ಏನೇನೋ **ಮಸಲತ್ತು** ಮಾಡಿದರು,' 'ಎಲ್ಲಾ ಏರ್ಪಾಡೂ ಒಳ್ಳೇ **ಜಬರ್‌ದಸ್ತಿ**ಯಿಂದ ನಡೆಯಿತು.' ಮದುವೆಯಲಿ ಕಿನ್ನರರು ಹಿಡಿದಿರುವ ಹರಿ **ಹಿಲಾಲು**ಗಳ ಬೆಳಕಿನ ಪಸರು

ನಭದಲೆಂತೆಸೆದಿತ್ತೋ?', 'ಬಾಳಹೊನಲು ಬಂಜರ ಸೀಮೆಯನೆ ಬಂದು ... ಎಂಬೀ ವಾಕ್ಯಗಳಲ್ಲಿ ಉಕ್ತವಾಗಿರುವ ಉರ್ದು ಪದಗಳು ಭಾವಗ... ವುವೆಂಬುದರಲ್ಲಿ ಸಂದೇಹವಿಲ್ಲ.

ಇದೇ ರೀತಿ, ಮೇಲೆ ಸೂಚಿಸಿರುವ ಆರ್ಕಾಡು ಕೈಫಿಯತ್ತಿ... ವಾಗಿರುವ ಕನ್ನಡದ ನಿರೂಪಗಳಲ್ಲಿ ಅನೇಕ ಉರ್ದು ಪದಗಳು ಮಿಳಿತ... ಕಂಡುಬರುವುದು. ಸ್ಥಳಾಭಾವದಿಂದ ಈ ಸಂಬಂಧವಾದ ನಿರೂಪ... ಕೊಟ್ಟಿಲ್ಲ. ಇದರಲ್ಲಿ ಉಕ್ತವಾಗಿರುವ ಉರ್ದು ಪದಗಳಲ್ಲಿ ಕೆಲವ... ಇಲ್ಲಿ ಉದಾಹರಿಸಬಹುದು: ಜಮಿಾನ್‌ದಾರ್, ವಗೈರೆ, ಸಲೀಸು, ಬಂದೋಬಸ್ತು, ಇನಾಮತಿ, ಬಾರಾಬಲೂತಿ, ರುಸುಮು, ಹರಕತ್ತು, ದರಬಾರ್, ಮೊಕರರು, ಫಿರ್ಯಾದು, ಬಾಕಿ, ಕಚೇರಿ, ಸಮಾಜು, ಕಾಯಿದೆ, ದವಲತ್ತು, ಇತ್ಯಾದಿ. ಇದೇ ರೀತಿಯ ಎಷ್ಟೋ ಪದಗಳನ್ನು ದಫ್ತರಗಳಿಂದ ಉದಾಹರಿಸಬಹುದು. ಇವುಗಳ ಪ್ರಯೋಗವನ್ನು ... ರೂಢಿಗೆ ತರಬಹುದೆಂಬ ವಿಚಾರವಾಗಿ ನಮ್ಮ ಅಭಿಪ್ರಾಯವನ್ನು ಸೂಚಿಸಲಾಗಿದೆ. ಈ ದೃಷ್ಟಿಯಿಂದ, ಕನ್ನಡ ಗ್ರಂಥಗಳಲ್ಲಿ ಈಗಾಗಲೇ ... ವಾಗಿರುವ ಹಾಗೂ ವ್ಯವಹಾರ ಭಾಷೆಯಲ್ಲಿ ಬಳಕೆಯಲ್ಲಿರುವ ಫಾ... ಶಬ್ದಗಳನ್ನು ಒಟ್ಟಿಗೆ ಶೇಖರಿಸಿ ಕ್ರೋಢೀಕರಿಸುವುದು ಅಗತ್ಯವಾ... ಹೇಳಬೇಕಾಗಿದೆ. ಈ ಕೆಲಸವನ್ನು ಈ ಭಾಷೆಗಳಲ್ಲಿ ಪರಿಶ್ರಮ... ಪಂಡಿತರು ಯಾರಾದರೂ ಕೈಗೊಂಡು ನೆರವೇರಿಸಿದುದೇ ಆದ... ಉಪಕಾರವಾದೀತು.

---

# ಪರಿಷತ್ತಿನ ಕಾರ್ಯಕಲಾಪಗಳು

## ೧. ಕಾರ್ಯನಿರ್ವಾಹಕ ಮಂಡಲಿಯ ಈಚಿನ ಅಧಿವೇಶನಗಳಲ್ಲಿ ಆದ ಮುಖ್ಯ ನಿರ್ಣಯಗಳು

(೧೯೩೬ನೆಯ ಇಸವಿಯ ಅಕ್ಟೋಬರ್—ಡಿಸೆಂಬರ್ ತಿಂಗಳುಗಳಲ್ಲಿ ಆದ ಮುಖ್ಯ ನಿರ್ಣಯಗಳು ೧೯೩೬ರ ವರದಿಯಲ್ಲಿ ಬಂದಿವೆ)

### ೧೦-೧-೧೯೩೭, ಬೆಂಗಳೂರು

ಔಂಧ್ ಸಂಸ್ಥಾನದಲ್ಲಿ ಕನ್ನಡ.—

(೧೨) ೧೯೩೫ನೆಯ ಇಸವಿ ಡಿಸೆಂಬರ್ ತಿಂಗಳಿನಲ್ಲಿ ಬೊಂಬಾಯಿಯಲ್ಲಾದ ೨೧ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ೬, ೭, ೮ ಮತ್ತು ೧೧ನೆಯ ನಿರ್ಣಯಗಳನ್ನು ಉಚಿತಕಾರ್ಯ ನಡಸುವ ಬಗ್ಗೆ ಔಂಧ್ ಸಂಸ್ಥಾನದ ದಿವಾನ್ ಸಾಹೇಬರವರಿಗೆ ಕಳುಹಿಸಿ ಬರೆದ ಉಪಾಧ್ಯಕ್ಷರ ತಾ॥ ೧೯-೧೨-೧೯೩೬ರ ನಂ. ೪೭೮೪-೪೮೨೯/೩೬ರ ಪತ್ರಕ್ಕೆ ಔಂಧ್ ಸಂಸ್ಥಾನದ ದಿವಾನ್ ಸಾಹೇಬರ ತಾ॥ ೨೪-೧೨-೧೯೩೬ರ ಉತ್ತರ:—

"I am glad to receive your letter of the 19th instant together with enclosures, the contents of which were communicated to Srimanth Raja Saheb of Aundh. I shall let you know in due course as to what action is being taken by the Aundh Durbar about the Resolutions passed in the last session of the Kannada Conference. In general, however, I may assure you that in that part of the State where a majority of the people speak Kanarese, arrangement for teaching in Kanarese will be made in the Schools along with giving training in Marathi."

ನಿರ್ಣಯ.—"ಈ ಭರವಸೆಯನ್ನು ಕೊಟ್ಟಿರುವುದಕ್ಕಾಗಿ ಔಂಧ್ ಸಂಸ್ಥಾನದ ಪ್ರಭುಗಳವರನ್ನು ಈ ಕಾ॥ ನಿ॥ ಮಂಡಲಿ ವಂದಿಸುತ್ತದೆ."

### ೨೧-೩-೧೯೩೭, ಬೆಂಗಳೂರು

ಪ್ರಚಾರ ಕಾರ್ಯದ ಲೆಕ್ಕ.—

(೪) ಪ್ರಚಾರ ಕಾರ್ಯಕ್ಕಾಗಿ ಶ್ರೀ॥ ವಿ. ಬಿ. ಆಲೂರರವರ ಕಡೆಗೆ ಕೊಟ್ಟಿದ್ದ ೧೦೦ ರೂಪಾಯಿಗಳ ಲೆಕ್ಕದ ವಿವರಗಳನ್ನು ಕುರಿತು ಅವರಿಂದ ಬಂದಿರುವ ತಾ॥ ೨೨-೨-೧೯೩೭ರ ಪತ್ರ; ಮತ್ತು ಆ ಹಣವನ್ನು ಪರಿಷತ್ತಿನ ಲೆಕ್ಕಗಳಿಂದ ವಜಾ ಮಾಡುವ ವಿಚಾರ:—

"ಮೇಲ್ಕಂಡ ಪತ್ರವನ್ನು ಓದಿಸಿ ಕೇಳಲಾಯಿತು. ಅದರಲ್ಲಿ ಈ ವರೆಗೆ ೭೫ ರೂಪಾಯಿಗಳನ್ನು ಖರ್ಚುಮಾಡಿರುವಂತೆಯೂ ಇನ್ನೂ ೨೫ ರೂಪಾಯಿಗಳನ್ನು ಖರ್ಚುಮಾಡಿ ವಿವರವನ್ನು ತಿಳಿಸುವಂತೆಯೂ ಬರೆದಿರುತ್ತಾರೆ. ಪ್ರಚಾರ ಕಾರ್ಯಕ್ಕಾಗಿ ಕೊಟ್ಟ ನೂರು ರೂಪಾಯಿ ಮೊಬಲಗನ್ನೂ ಖರ್ಚಾದಂತೆ ಭಾವಿಸಿ, ಇನ್ನುಮುಂದೆ ಅದನ್ನು ಪರಿಷತ್ತಿನ ಲೆಕ್ಕಗಳಿಂದ ತೆಗೆದುಹಾಕಬಹುದು."

ರಾಯಚೂರು ಮತ್ತು ಬೊಂಬಾಯಿ ಸಮ್ಮೇಳನಗಳ ಲೆಕ್ಕಗಳ ತೀರ್ಮಾನ.—

(೫) ರಾಯಚೂರು ಮತ್ತು ಬೊಂಬಾಯಿ ಸಮ್ಮೇಳನಗಳ ಸ್ವಾಗತ ಸಮಿತಿಗಳ ಕಡೆಯಿಂದ ಪರಿಷತ್ತಿಗೆ ಬಂದಿರುವ ಲೆಕ್ಕಗಳ ತೀರ್ಮಾನ ವ್ಯವಸ್ಥೆಯ ವಿಚಾರ.—

ಈ ಸಂಬಂಧದಲ್ಲಿ ಈ ಕೆಳಗಿನ ಪತ್ರಗಳನ್ನು ಓದಿಸಿ ಕೇಳಲಾಗಿದೆ:—

(೧) ಪರಿಷತ್ತಿನ ಗೌ॥ ಕೋಶಾಧ್ಯಕ್ಷರು ರಾಯಚೂರು ಸ್ವಾ ಪತ್ರಗಳ ವಿಚಾರದಲ್ಲಿ ಕಂಡುಬಂದಿರುವ ಕೆಲವು ನ್ಯೂನತೆಗಳನ್ನು ತೋರಿ ಸ್ವಾಗತ ಸಮಿತಿಯಿಂದ ಇನ್ನೂ ಪರಿಷತ್ತಿಗೆ ರೂ. ೫೦-೧-೬ ಬಾಕಿ ಬರ ತಿಳಿಸಿ ಬರೆದಿರತಕ್ಕ ಪತ್ರ;

(೨) ಪರಿಷತ್ತಿನ ಗೌ॥ ಕೋಶಾಧ್ಯಕ್ಷರು ಬೊಂಬಾಯಿ ಸ್ವಾ ಪತ್ರಗಳ ವಿಚಾರದಲ್ಲಿ ಕಂಡುಬಂದಿರುವ ಕೆಲವು ನ್ಯೂನತೆಗಳನ್ನು ತೋರಿ ಸ್ವಾಗತ ಸಮಿತಿಯಿಂದ ಇನ್ನೂ ಪರಿಷತ್ತಿಗೆ ರೂ. ೯೬-೮-೦ ಬಾಕಿ ಬರ ತಿಳಿಸಿ ಬರೆದಿರತಕ್ಕ ಪತ್ರ;

(೩) ಬೊಂಬಾಯಿ ಸ್ವಾಗತ ಸಮಿತಿಯವರು ಪ್ರತಿನಿಧಿಗಳ 'ಫೀ' ರೂ. ೧-೮-೦ಯನ್ನು ಕಳುಹಿಸಿ, ಇಂಗ್ಲಿಷಿನ ಅಧ್ಯಕ್ಷ ಭಾಷಣದ ಮು ಸಂಬಂಧಪಟ್ಟ ಉಳಿದ ಹಣವನ್ನು ಕೊಡಲು ಸಾಧ್ಯವಿಲ್ಲವೆಂದು ತಿಳಿಸಿ ಬ

ತೀರ್ಮಾನ:— "ಈ ಎರಡು ಲೆಕ್ಕಗಳೂ ಪರಿಷತ್ತಿನ ಪುಸ್ತಕಗಳಲ್ಲಿ ಬಾಕಿಯಾಗಿ ನಿಂತಿರುವುದರಿಂದಲೂ ಅವು ವಸೂಲಾಗುವ ಸಂಭವ ತೋರ ಅವುಗಳನ್ನು ಲೆಕ್ಕಗಳಿಂದ ತೆಗೆದುಹಾಕಬಹುದು."

**ಪರಿಷತ್ತಿಗೆ ಪುಸ್ತಕಗಳ ದಾನ.—**

(೭) ಸರಸ್ವತೀ ಭಂಡಾರಕ್ಕೆ ಬೆಂಗಳೂರು ಬಸವನಗುಡಿ ಯೂನಿ ಸರ್ವಿಸ್ ಕ್ಲಬ್‌ನವರ ದಾನ:

(೧) Review of Reviews (೨೬ ಸಂಪುಟಗಳು), (೨) The S (೨೨ ಸಂ.), (೩) The Modern Review (೧೬ ಸಂ.), (೪) Tit-B (೫) The Educational Review (೧೩ ಸಂ.), (೬) The Indian Revie (೭) Popular Science Siftings (೯ ಸಂ.), (೮) Wide World (೨ Indian Economist (೧ ಸಂ.)— ಒಟ್ಟು ೧೧೬ ಸಂಪುಟಗಳು:—

"ಮೇಲೆ ಕಂಡ ಪತ್ರಿಕಾ ಸಂಪುಟಗಳ ದಾನಕ್ಕಾಗಿ ಬಸವನಗುಡಿ ಮತ್ತು ಯೂನಿಯನ್ನಿಗೆ ಪರಿಷತ್ತಿನ ಕಾ॥ ನಿ॥ ಮಂಡಲಿ ತನ್ನ ಕೃತಜ್ಞ ವಂದನೆಗಳನ್ನು ಸಮರ್ಪಿಸುತ್ತದೆ."

## ೨. ಉಪನ್ಯಾಸಾದಿ ಸಾರ್ವಜನಿಕ ಕಾರ್ಯಗಳು

(೧೯೩೬ರ ಡಿಸೆಂಬರ್ ಕಡೆಯವರೆಗಿನ ವಿವರಗಳು ೧೯೩೬ರ ವರದಿಯ

(೧) ಜನವರಿ ೯ನೆಯ ಶನಿವಾರ, ಪ್ರೊ॥ ಬಿ. ಎಂ. ಶ್ರೀಕಂಠಯ್ಯ ಬಿ.ಎಲ್. ಅವರು ಜನ್ನನ ಯಶೋಧರ ಚರಿತ್ರೆ ಎಂಬ ಕನ್ನಡ ಕಾವ್ಯ ಕನ್ನಡದಲ್ಲಿ ಉಪನ್ಯಾಸಮಾಡಿದರು.

(೨) ಜನವರಿ ೧೩ನೆಯ ಬುಧವಾರ, ಪ್ರಾಕ್ತನ ವಿಮರ್ಶ ವಿಚ ಮಹೋಪಾಧ್ಯಾಯ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯ, ಎಂ ಎ.ಎಸ್. ಅವರು ಕಾಲಾಧೀನರಾದುದಕ್ಕಾಗಿ ಸಂತಾಪ ಸೂಚಕ ಸಭೆ ರಾಜಸಭಾಭೂಷಣ ದಿವಾನ್ ಬಹದ್ದೂರ್ ಡಾಕ್ಟರ್ ಸರ್ ಕೆ. ಪಿ. ಪುಟ್ಟಣ್ಣ ಸಿ.ಐ.ಇ., ಎಲ್‌ಎಲ್.ಡಿ. ಅವರು ಸಭಾಧ್ಯಕ್ಷರಾಗಿದ್ದರು. ಮಾ॥ ಗಳಾದ ಪ್ರಸಕ್ತ ರಾವ್ ಬಹದ್ದೂರ್ ಎಂ. ಶಾಮರಾಯರು, ಎಂ.ಎ. ಅವರೂ, ಮಠದ ಶ್ರೀ ಮಹಾದೇವ ಸ್ವಾಮಿಗಳವರೂ, ಸ್ಯಾದ್ವಾದ ಭಿಷಜ್ಮಣಿ ವೃದ್ಧ

ಂಡಿತ ಎಂ. ಎಲ್ಲಪ್ಪ, ಎಲ್.ಎ.ಎಂ. ಅವರೂ, ಶ್ರೀಮಾನ್ ಬಿ. ಪುಟ್ಟಯ್ಯ, ಬಿ.ಎ. ವರೂ, ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರೂ ಭಾಷಣ ಳನ್ನು ಮಾಡಿದರು.

(೩) ಜನವರಿ ೧೬ನೆಯ ಶನಿವಾರ, ನಂಜನಗೂಡಿನಲ್ಲಿ ಪ್ಲೀಡರಾಗಿರುವ ಶ್ರೀಮಾನ್ . ಎಂ. ಶಿವರಾಮಯ್ಯನವರು ವಿಜ್ಞಾನ ಎಂದರೇನು ಎಂಬ ವಿಷಯವನ್ನು ಕುರಿತು, ಉಪಕರಣಗಳೊಡನೆ, ಕನ್ನಡದಲ್ಲಿ ಉಪನ್ಯಾಸಮಾಡಿದರು.

(೪) ಫೆಬ್ರುವರಿ ೧೩ನೆಯ ಶನಿವಾರ, ಬೆಂಗಳೂರು ಸರ್ಪಭೂಷಣ ಮಠದ ,ೀ ಮಹಾದೇವ ಸ್ವಾಮಿಗಳು ವಚನ ಸಾಹಿತ್ಯ ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸಮಾಡಿದರು.

(೫) ಫೆಬ್ರುವರಿ ೨೪ನೆಯ ಬುಧವಾರ, ಧಾರವಾಡದ ಶ್ರೀಮಾನ್ ದ. ರಾ. ಬೇಂದ್ರೆ, ಬಿ.ಎ. ಅವರು ಕನ್ನಡ ಕುಲ ಎಂಬ ವಿಷಯುವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಡಿದರು.

(೬) ಫೆಬ್ರುವರಿ ೨೭ನೆಯ ಶನಿವಾರ, ಮೈಸೂರು ಸರ್ಕಾರದ ಜಿಯಾಲಜಿ ಶಾಖೆಯ ಡೈರೆಕ್ಟರಾದ ಶ್ರೀಮಾನ್ ಬಿ. ರಾಮರಾವ್, ಎಂ.ಎ., ಡಿ.ಐ.ಸಿ. (ಲಂಡನ್), ಎಫ್.ಜಿ.ಎಸ್. ಅವರು ನವರತ್ನಗಳು ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸಮಾಡಿದರು.

(೭–೮) ಮಾರ್ಚಿ ೮ನೆಯ ಸೋಮವಾರ ಮತ್ತು ೯ನೆಯ ಮಂಗಳವಾರ, ಮೈಸೂರು ಸಂಸ್ಥಾನದ ಸಂಸ್ಕೃತ ಪಾಠಶಾಲೆಗಳ ರಿಟೈರ್ಡ್ ಇನ್‌ಸ್ಪೆಕ್ಟರ್ ಅವರಾದ ಶ್ರೀಮಾನ್ ಸಿ. ವೆಂಕಟರಮಣಯ್ಯನವರು ಸನಾತನ ಭೌತವಿಜ್ಞಾನ ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸಮಾಡಿದರು.

(೯) ಮಾರ್ಚಿ ೨೫ನೆಯ ಗುರುವಾರ, ಶ್ರೀಮಾನ್ ಜಿ. ಪಿ. ರಾಜರತ್ನಂ, ಎಂ.ಎ. ಅವರು ಮಿಲಿಂದ ಪ್ರಶ್ನೆ ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸಮಾಡಿದರು.

## ೧೯೩೬ನೆಯ ಇಸವಿ ಅಕ್ಟೋಬರ್ ತಿಂಗಳಿನಿಂದ ೧೯೩೭ನೆಯ ಇಸವಿ ಮಾರ್ಚಿ ತಿಂಗಳ ಕೊನೆಯವರೆಗೆ ಪರಿಷತ್ತಿಗೆ ಸೇರಿದ ಸದಸ್ಯರ ಪಟ್ಟಿ

ಅಂಗಸಂಸ್ಥೆಗಳು: ಸಾಮಾನ್ಯ.—(೧) ವಿಶ್ವವಿದ್ಯಾನಿಲಯ ಸಂಘ, ಬೆಂಗಳೂರು; ) ಸಂಗೀತ ಪ್ರೇಮಿ ಮಂಡಲಿ, ಬೆಂಗಳೂರು; (೩) ಕರ್ಣಾಟಕ ಸಂಘ, ಶಿರಾಳಕೊಪ್ಪ; ) ಕ॥ ಸಂಘ, ತುರುವೇಕೆರೆ; (೫) ಕ॥ ಸಂಘ, ವಿಲ್ಲಿಂಗ್‌ಡನ್ ಕಾಲೇಜು, ಸಾಂಗ್ಲಿ.

ಸಹಾಯಕ ಸದಸ್ಯರು.—(೧) ಮ॥ ರಾ॥ ಎ. ತಾಂಡೋಣಿರಾಯರು, ಎಲ್.ಸಿ.ಇ., ಎ.ಐ.ಇ. (ಆಜೀವ ಸದಸ್ಯತ್ವದಿಂದ ಸಹಾಯಕ ಸದಸ್ಯತ್ವಕ್ಕೆ ಬದಲಾವಣೆ).

ಸಾಮಾನ್ಯ ಸದಸ್ಯರು (ಪತ್ರಿಕೆ ಸಹಿತ).—ಮ॥ ರಾ॥ ಗಳಾದ (೧) ಪಂಡಿತ ೀ ಚಿದರೆಮಠದ ವೀರಭದ್ರಶಾಸ್ತ್ರಿಗಳು; (೨) ವಿ. ಬಿ. ಹಾಲಭಾವಿ ಅವರು, ಬಿ.ಎ., ಎಲ್.ಎಲ್.ಬಿ.

ಸಾಮಾನ್ಯ ಸದಸ್ಯರು (ಪತ್ರಿಕೆ ವಿನಾ).—ಮ॥ ರಾ॥ ಗಳಾದ (೧) ಕೆ. ಎನ್. ನಗಿರಯ್ಯನವರು, ಎಂ.ಎಸ್‌ಸಿ.; (೨) ಶ್ರೀಮತಿ ಸರಸ್ವತಮ್ಮನವರು; ) ಎನ್. ಎಸ್. ಸೂರ್ಯನಾರಾಯಣರಾಯರು, ಎಂ.ಎ.; (೪) ವೈ. ಕೆ. ಆನಂದ ರಾಯರು; (೫) ಸೋಸಲೆ ವೆಂಕಟನರಸಿಂಹಾಚಾರ್ಯರು; (೬) ಎಸ್. ಶ್ರೀನಿವಾಸಯ್ಯ ನವರು; (೭) ಬಿ. ಸಂಜೀವರಾಯರು, ಎಂ.ಎ.; (೮) ಜಿ. ಎಸ್. ಕೃಷ್ಣರಾಯರು; ) ಟಿ. ರಂಗಸ್ವಾಮಯ್ಯಂಗಾರ್ಯರು; (೧೦) ಎಂ. ಆರ್. ಅಣ್ಣಾಜಿರಾಯರು; ೧) ಟಿ. ಎ. ಪುಟ್ಟಸ್ವಾಮಿರಾಯರು, ಬಿ.ಎಸ್‌ಸಿ.

---

# ಅಂಗ ಸಂಸ್ಥೆಗಳ ವರದಿ

---

## ವಿಲ್ಲಿಂಗ್‌ಡನ್ ಕಾಲೇಜು ಕರ್ಣಾಟಕ ಸಂಘ, ಸಾಂಗ್ಲಿ

(೧೯೩೬: ಪ್ರಥಮ ಷಣ್ಮಾಸದ ವರದಿ)

ಘಟನೆಯನ್ನನುಸರಿಸಿ, ಪ್ರೊ॥ ರಂ. ಶ್ರೀ. ಮುಗಳಿಯವರ ಅಧ್ಯಕ್ಷತೆ... ಸದಸ್ಯರ ಕಾರ್ಯಕಾರೀ ಮಂಡಲಿಯು ನೇಮುಕವಾಯಿತು: ಶ್ರೀ॥ ಗಣ... ಎಂ. ಕುಲಕರ್ಣಿ ಅವರು (ಉಪಾಧ್ಯಕ್ಷ), ಡಿ. ಬಿ. ಟಂಕಸಾಲಿ ಅವರು (ಕಾ... ಎ. ಟಿ. ಪಾಟೀಲ, ಹಿರೇಗೌಡರು, ಹಬ್ಬು, ಶೀಮಿಕೇರಿ, ಗದ್ರೆ, ಆರ್. ಎಸ್... ವಿ. ಎಸ್. ದೇಶಪಾಂಡೆ, ಕಡಗದಕೈ, ಎ. ಬಿ. ಪಾಟೀಲ ಮತ್ತು ಮಿಸ್... ಗಳು ಸದಸ್ಯರು.

ವಿಶೇಷ ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ತೆರಳುವ ಮುನ್ನ (ತಾ ೧-... ಪ್ರೊ॥ ಗೋಕಾಕರು 'ಆಧುನಿಕ ಕನ್ನಡ ನಾಟ್ಯಸೃಷ್ಟಿ' ಎಂಬ ವಿಷಯವಾ... ಸಂಘದ ಆರಂಭ ಭಾಷಣವನ್ನು ಮಾಡಿದರು. ಸಂಘವು ಅವರಿಗೆ ಸು... ಬಯಸಿ ಒಂದು ಬೀಳ್ಕೊಡುವ ಸಮಾರಂಭವನ್ನು ಮಾಡಿತು. ವಿಜಯನ... ತ್ಸವದ ನಿಧಿಸಂಗ್ರಹಕ್ಕಾಗಿ ಬಂದಿದ್ದ ಶ್ರೀಮಾನ್ ಆಲೂರು ವೆಂಕಟರಾಯರು ... ಮಹತ್ತ್ವವನ್ನು ಕುರಿತು ಉಪನ್ಯಾಸಕೊಟ್ಟರು. ಈ ವರುಷ ಪ್ರಮು... ನಿಯಮಿತವಾಗಿ ಸಂಘದಲ್ಲಿ ನಡೆದುದೆಂದರೆ, 'ಅಭ್ಯಾಸ ಮಂಡಲ'ದ ಕಾ... ಸಾಮಾನ್ಯವಾಗಿ ಪ್ರತಿ ವಾರವೂ ಕನ್ನಡ ವಿದ್ಯಾರ್ಥಿಗಳು ಅತ್ಯುತ್ಸಾ... 'ಪ್ರಾಂತೀಯತೆ, ರಾಷ್ಟ್ರಭಾಷೆಯ ಅಗತ್ಯ' ಇತ್ಯಾದಿ ವಿಷಯಗಳನ್ನು ... ದಲ್ಲಿಯೇ ಚರ್ಚೆಗಳನ್ನು ನಡಸಿದ್ದಲ್ಲದೆ, ಶ್ರೀ॥ ಸಾಲಿಯವರ 'ಅಭಿಸಾ... ವಿವರವಾಗಿ ಅಭ್ಯಾಸವನ್ನೂ ಮಾಡಿದರು.

ಮುಂದಿನ ಷಣ್ಮಾಸದಲ್ಲಿ ಸಂಘದ ಪರವಾಗಿ ಒಂದು ಕೈಬರಹ... ಪ್ರಕಟಿಸುವ ನಿರ್ಧಾರವೂ ಆಯಿತು.

೨೨-೧-೧೯೩೭

ಡಿ. ಬಿ. ...
ಕಾರ್ಯ...

---

## ಕೊಡಗು ಕರ್ಣಾಟಕ ಸಂಘ, ಮಡಿಕೇರಿ

(ವಾರ್ಷಿಕ ವರದಿಯ ಸಂಗ್ರಹ: ೧-೧-೧೯೩೬ರಿಂದ ೩೦-೬-೧೯೩...

ಸಂಘವು ನಾಲ್ಕು ವರ್ಷಗಳನ್ನು ಮುಗಿಸಿಕೊಂಡು ಐದನೆಯ ವರ್ಷ... ಎಂದಿನಂತೆಯೇ ಜನರ ಪ್ರೋತ್ಸಾಹವು ದೊರೆತು ಈ ಸಂವತ್ಸರದ ಕಾ... ಜರುಗಿದುವು. ಆದರೆ ಸಂಘದ ಕಾರ್ಯಗಳು ಫಲಕಾರಿಯಾಗುವಂತೆ ... ಹೆಚ್ಚು ಪ್ರಯತ್ನಪಡಬೇಕೆಂದು ನಮ್ಮ ಕೋರಿಕೆ.

ಸಂಘದ ಅಧ್ಯಕ್ಷರು ಶ್ರೀ॥ ಐ. ಸಿ. ಸುಬ್ಬಯ್ಯ, ಎಂ.ಎ., ಬಿ.... ಉಪಾಧ್ಯಕ್ಷರು ಶ್ರೀ॥ ಬಿ. ಎಸ್. ಕುಶಾಲಪ್ಪ, ಬಿ.ಎ., ಡಿ.ಇ. ...

ಕಾರ್ಯದರ್ಶಿಗಳು, ಒಬ್ಬರು ಲೈಬ್ರೇರಿಯನ್ ಮತ್ತು ನಾಲ್ವರು ಕಾರ್ಯಕಾರೀ ಮಂಡಲಿಯ ಸದಸ್ಯರಿರುತ್ತಾರೆ.

ಕೊಡಗಿನ ಹೈಸ್ಕೂಲುಗಳಲ್ಲಿ ಉಪಸಂಸ್ಥೆಗಳನ್ನು ಸ್ಥಾಪಿಸಿ, ಆ ಮೂಲಕ ಬಾಲಕರಲ್ಲಿ ಕನ್ನಡ ಭಾಷಾಭಿರುಚಿಯನ್ನು ಉಂಟುಮಾಡಬೇಕೆಂದು ಸಂಘವು ಉದ್ದೇಶಿಸಿದೆ. ಕನ್ನಡದ ಅಭಿಮಾನಿಗಳಾದ ಉಪಾಧ್ಯಾಯರುಗಳ ಮತ್ತು ವಿದ್ಯಾರ್ಥಿಗಳ ಸಹಕಾರವಿಲ್ಲದೆ ಈ ಉದ್ದೇಶವು ಈಡೇರಲಾರದು. ಸಂಘದ ಸದಸ್ಯರ ಸಂಖ್ಯೆ ೨೬ರಿಂದ ೩೬ಕ್ಕೆ ಏರಿದೆ. ಎಲ್ಲರೂ ಸಾಧಾರಣ ಸದಸ್ಯರು.

ಜಮಾ ಖರ್ಚುಗಳ ವಿವರ: ಕಳೆದ ವರ್ಷದ ಶಿಲ್ಕು ರೂ. ೨೭೭-೪-೭; ವರ್ಷದ ವರಮಾನ ರೂ. ೩೯-೬-೩; ಖರ್ಚು ರೂ. ೨೪-೯-೯; ಸದ್ಯ ಬ್ಯಾಂಕಿನಲ್ಲಿ ಇರತಕ್ಕದ್ದು ರೂ. ೨೯೩-೧೫-೪. ಇದುವರೆಗೆ ಒಂದು ಕಾರ್ಯಕಾರೀ ಮಂಡಲಿಯ ಕೂಟವೂ ಒಂದು ಮಹಾಸಭೆಯ ಅಧಿವೇಶನವೂ ಸೇರಿವೆ. ಸಂಘದ ಪುಸ್ತಕ ಭಂಡಾರದಲ್ಲಿ ೧೧೭ ಉತ್ತಮ ಗ್ರಂಥಗಳು ಇವೆ. 'ಜಯಕರ್ನಾಟಕ' ಮಾಸಪತ್ರಿಕೆ ಸಂಘಕ್ಕೆ ಬರುತ್ತಿದೆ. ಕೊಡಗಿನಲ್ಲಿ ದೊರೆಯಬಹುದಾದ ಕನ್ನಡ ಗ್ರಂಥಗಳ ಹಸ್ತಪ್ರತಿಗಳನ್ನೂ, ಶಾಸನಗಳ ಪ್ರತಿಮಾಡಿಸಿ ಅವುಗಳನ್ನೂ ಭಂಡಾರದಲ್ಲಿ ಸಂಗ್ರಹಿಸಬೇಕೆಂಬ ಉದ್ದೇಶವಿದೆ. ಈ ಕಾರ್ಯದಲ್ಲಿ ಕೊಡಗಿನ ಮಹಾಜನರು ನೆರವಾಗಬೇಕು.

## ಸಾರ್ವಜನಿಕ ಕಾರ್ಯಗಳು

೮-೨-೧೮೩೬: ಉಪನ್ಯಾಸ—"ತ್ರಿಮತ ವೇದಾಂತ".—ಮೈಸೂರಿನ ವಿದ್ವಾನ್ ಶ್ರೀ॥ ಮಧುರಾ ಸುಂದರಾಚಾರ್ಯರವರಿಂದ.

೩-೩-೧೯೩೬ ಮತ್ತು ೮-೩-೧೯೩೬: ಭಾರತ ವಾಚನ (ಕುಮಾರವ್ಯಾಸ ಭಾರತದಿಂದ)—"ಅಕ್ಷಯ ಪಾತ್ರೆಯ ಮಹಿಮೆ"; "ಶ್ರೀ ಕೃಷ್ಣ ಸಂಧಾನ".—ಶ್ರೀ॥ ಕೆ. ಕೃಷ್ಣರಾಯರವರಿಂದ.

೩-೮-೧೯೩೬: ಕಾವ್ಯ ವಾಚನ—"ಸೀತಾ ಕಲ್ಯಾಣ".—ಶ್ರೀ॥ ಎಂ. ಎಸ್. ಅನಂತಪದ್ಮನಾಭರಾಯರಿಂದ (ಸ್ವತಃ ರಚಿಸಿರುವ 'ತುಲಸೀ ರಾಮಾಯಣ'ವೆಂಬ ಕಾವ್ಯದ ಭಾಗ).

೩-೯-೧೯೩೬: ಸಾಹಿತ್ಯ ವಾಚನ.—

(೧) "ಚಾರಲ್ಸ್ ಲೇಂಬ್" ಎಂಬ ಆಂಗ್ಲ ಕವಿಯ "ರೋಸ್‌ಮಂಡ್" ಎಂಬ ಕಥೆಯ ಕನ್ನಡ ಅನುವಾದ.—ಶ್ರೀ॥ ಜಿ. ಎಸ್. ಕೇಶವಾಚಾರ್ಯ, ಬಿ.ಎಸ್‌ಸಿ., ಬಿ.ಟಿ. ಅವರಿಂದ.

(೨) ಭಾಷಣ: "ಮುದ್ದಣಕವಿಯ ಪ್ರಶಸ್ತಿ"ಯನ್ನು ಕುರಿತು.—ಶ್ರೀ॥ ಪಿ. ಜಿ. ಅಯ್ಯಪ್ಪ, ಬಿ.ಎ., ಬಿ.ಎಲ್. ಅವರಿಂದ.

(೩) ನಾಟಕ ವಾಚನ: "ಶೃಂಗಿಯ ಶಾಪ" ಎಂಬ (ಸ್ವಂತ) ನಾಟಕದ ಒಂದು ದೃಶ್ಯ.—ಶ್ರೀ॥ ಎಂ. ಎಸ್. ಅನಂತಪದ್ಮನಾಭರಾಯರಿಂದ.

೦-೧೦-೧೯೩೬: ಕವನಗಳ ಹಾಡುಗಾರಿಕೆ.—ಕೊಡಗಿನ ಸುಪ್ರಸಿದ್ಧ ಕವಿಗಳಾದ ಶ್ರೀ॥ ಹರದಾಸ ಅಪ್ಪನೆರವಂಡ ಅಪ್ಪಚ್ಚ ಅವರು "ಭಕ್ತ ರತ್ನಾಕರ" ಎಂಬ ಸ್ವಂತ ಕವನಗಳ ಸಂಗ್ರಹದಿಂದ ಹಲವನ್ನು ಹಾಡಿದರು.

೪-೧೨-೧೯೩೬: ಉಪನ್ಯಾಸ—"ವಿಜಯನಗರದ ಸಂದೇಶ".—ಕೀರ್ತನಕೇಸರಿ ಶ್ರೀ॥ ಬಿ. ಶಿವಮೂರ್ತಿಶಾಸ್ತ್ರಿಗಳಿಂದ.

೭-೩-೧೯೩೭: (ಬೆಳಗ್ಗೆ ಮತ್ತು ಸಾಯಂಕಾಲ) ಉಪನ್ಯಾಸಗಳು—"... ಬೌದ್ಧ ಧರ್ಮಗಳ ಬಾಂಧವ್ಯ" ಮತ್ತು "ಹೊಸಗನ್ನಡ ... ಮುಖ".—ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರಿಂದ.

ತಾ॥ ೧೮-೭-೧೯೩೭, ಮಡಿಕೇರಿ.

ಪಿ. ಎಂ. ರಾಮರಾ...,
ಎಂ. ಎಸ್. ಅನಂತ...
ಗೌ॥ ಕಾ...

## ಕರ್ಣಾಟಕ ಸಂಘ, ಚಿತ್ರದುರ್ಗ

೨೨-೮-೧೯೩೬: ಉಪನ್ಯಾಸ—"ಅಂತರ ರಾಷ್ಟ್ರೀಯ ಸಮಿತಿ".—... ನಾರಣಯ್ಯಂಗಾರ್, ಎಂ.ಎ. ಅವರಿಂದ.

೯-೯-೧೯೩೬: ಉಪನ್ಯಾಸ—"ಗೃಹ ಚಿಕಿತ್ಸೆ".—ಡಾ॥ ಆರ್. ಕೆ. ... ಅವರಿಂದ.

೧೦-೯-೧೯೩೬: ಉಪನ್ಯಾಸ—"ರೈತನ ಸಾಲಗಳು, ಅದರ ಕಾರಣ ... ಗಳು".—ಶ್ರೀ॥ ಜಿ. ಎಂ. ಮೇಕ್ರಿ, ಬಿ.ಎ., ಎಲ್‌ಎಲ್.ಬಿ. ಅ...

೧೧-೧೦-೧೯೩೬: ಉಪನ್ಯಾಸ—"ಜೈನ ಸಾಹಿತ್ಯ".—ಶ್ರೀ॥ ಬಿ. ಎ... ಎಂ.ಎ. ಅವರಿಂದ.

೧೬-೧೦-೧೯೩೬ರಿಂದ ೨೨-೧೦-೧೯೩೬ರ ವರೆಗೆ: "ಭಾರತ ವಾಚನ"... ಶ್ರೀ॥ ಎಸ್. ಜಿ. ಬಿಂದೂರಾಯರವರಿಂದ.

೧೧-೧೨-೧೯೩೬: ಹರಿಕಥೆ—"ಇಂದ್ರಕೀಲ ವಿಜಯ".—ಶ್ರೀ॥ ... ಶಾಸ್ತ್ರಿಗಳವರಿಂದ.

೨೨-೧೨-೧೯೩೬: ನಾಟಕ ಪ್ರದರ್ಶನ—"ಮಂಜುಳಾ," "ಪುನರ್ಜನ್ಮ... ಸೋಲು".—ಸಂಘದ ನಟವರ್ಗದವರಿಂದ.

೧೫-೨-೧೯೩೭: ಕಾವ್ಯ ವಾಚನ—"ಪ್ರಭುಲಿಂಗಲೀಲೆ".—ಶ್ರೀ॥ ಎಸ್. ... ರಾಯರವರಿಂದ.

೬-೪-೧೯೩೭: ಉಪನ್ಯಾಸ—"ಹರಿಹರ ಕವಿಯು ಚಿತ್ರಿಸಿರುವ ... ಬಸವಣ್ಣ".—ಶ್ರೀ॥ ಟ. ಎಸ್. ವೆಂಕಣ್ಣಯ್ಯ, ಎಂ.ಎ. ಅವರಿಂ...

೧೨-೪-೧೯೩೭: ಭಾರತ ವಾಚನ.—ಶ್ರೀ॥ ಎಸ್. ಜಿ. ಬಿಂದೂರಾಯರ...

೧೮-೪-೧೯೩೭: ಉಪನ್ಯಾಸ—"ತಿರುವಳ್ಳುವರ್ ಕವಿಯ ಕುರಳ್".—ಶ್ರೀ॥ ... ಸೋಮಸುಂದರಂ ಪಿಳ್ಳೈ, ಎಂ.ಎ., ಎಲ್.ಟಿ. ಅವರಿಂದ.

೧೨-೬-೧೯೩೭: ಉಪನ್ಯಾಸ—"ವೇದಾಂತ ವಿಚಾರ"—ಶ್ರೀ॥ ... ಸ್ವಾಮಿಗಳವರಿಂದ.

೨೬-೬-೧೯೩೭: ಉಪನ್ಯಾಸ—"ಚಿತ್ರದುರ್ಗದ ಇತಿಹಾಸ".—ಶ್ರೀ... ಶ್ರೀನಿವಾಸ ಜೋಯಿಸರವರಿಂದ.

೯-೭-೧೯೩೭: ಉಪನ್ಯಾಸ—"ತಮಿಳು ಸಾಹಿತ್ಯದಲ್ಲಿ ಕಂಡುಬರುವ ...—ಶ್ರೀ॥ ಪಿ. ಎಂ. ಸೋಮಸುಂದರಂ ಪಿಳ್ಳೈ, ಎಂ.ಎ., ಎಲ್.ಟಿ. ...

ಉಂತಕಲ್ ಶ್ರೀನಿವಾ...
ಬಿ. ಕೆ. ರಾಮಚಂದ್ರ...
ಕಾ...

## ಕರ್ಣಾಟಕ ಸಂಘ, ಕೋಲಾರ

೮–೧೨–೧೯೩೬: ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವ.—

೧. ಉಪನ್ಯಾಸ: "ವಿಜಯನಗರದ ಚರಿತ್ರೆ".—ಶ್ರೀ॥ ಎಚ್. ಎಸ್. ಮಾಧವ ರಾವ್, ಬಿ.ಎ. ಅವರಿಂದ.

೨. ಕಾವ್ಯ ವಾಚನ: "ನಾಗರಿಕ"ದ ಹಲವು ಭಾಗಗಳು.—ಶ್ರೀ॥ ಎಂ. ವೆಂಕಟ ಕೃಷ್ಣಪ್ಪನವರಿಂದ; "ಅರುಣೋದಯ"ದ ಕೆಲವು ಗೀತೆಗಳು.—ಶ್ರೀ॥ ಕೆ. ಸೀತಾರಾಮಶಾಸ್ತ್ರಿಗಳವರಿಂದ.

೮–೧–೧೯೩೭: ಕಾವ್ಯವಾಚನ—"ಚಂಡಮಾರುತ" ಮತ್ತು "ಯಮುನ ಸೋಲು".—ಶ್ರೀ॥ ಎಚ್. ಎಸ್. ಮಾಧವರಾಯರವರಿಂದ; ಭಾರತ ವಾಚನ—ಶ್ರೀ॥ ಕೆ. ಸೀತಾರಾಮಶಾಸ್ತ್ರಿಗಳಿಂದ.

೮–೨–೧೯೩೭: ಶ್ರೀ ಪುರಂದರದಾಸರವರ ಪುಣ್ಯದಿನಾಚರಣೆ ಮತ್ತು ಶ್ರೀ ಸ್ವಾಮಿ ವಿವೇಕಾನಂದರವರ ಜಯಂತ್ಯುತ್ಸವ.—

೧. ಉಪನ್ಯಾಸಗಳು—"ಪುರಂದರದಾಸರ ಜೀವನ ಚರಿತ್ರೆ".—ಶ್ರೀ॥ ಎಚ್. ಎಸ್. ಮಾಧವರಾವ್, ಬಿ.ಎ. ಅವರಿಂದ; "ವಿವೇಕಾನಂದರ ಜೀವನ ಮಹತ್ವ".—ಶ್ರೀ॥ ವೆಂಕಟಕೃಷ್ಣಪ್ಪನವರಿಂದ.

೨. ದಾಸರ ಪದಗಳ ಹಾಡುಗಾರಿಕೆ.—ಸಂಗೀತ ವಿದ್ವಾನ್ ಶ್ರೀ॥ ಕೃಷ್ಣಮೂರ್ತಿ ಗಳಿಂದ.

೩. ಭಾರತ ವಾಚನ.—ಶ್ರೀ॥ ಕೆ. ಸೀತಾರಾಮಶಾಸ್ತ್ರಿಗಳವರಿಂದ.

೯–೩–೧೯೩೭: ಕಂಠಪಾಠ ಸ್ಪರ್ಧೆ (ಮಿಡಲ್ ಮತ್ತು ಹೈಸ್ಕೂಲ್ ಬಾಲಕ ಬಾಲಕಿಯರಿಗೆ).—

ಸ್ಪರ್ಧಿಗಳು: ಬಾಲಕರು ೯, ಬಾಲಕಿಯರು ೧೮; ಒಟ್ಟು ೨೭.

ಜಯಶೀಲರಾದವರಿಗೆ ಉತ್ತಮ ದರ್ಜೆಯ ಬಹುಮಾನಗಳನ್ನೂ ಉಳಿದವರಿಗೆ ಸಾಮಾನ್ಯ ಪಾರಿತೋಷಿಕಗಳನ್ನೂ ಹಂಚಲಾಯಿತು. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಂಠಪಾಠ ಸ್ಪರ್ಧೆಗಾಗಿ ನಿಯಮಿಸಿದ್ದ ಪದ್ಯಭಾಗಗಳನ್ನೇ ಸ್ಪರ್ಧೆಗೆ ನಿಯಮಿಸಲಾಗಿತ್ತು. ಬಹುಮಾನಗಳಲ್ಲಿ ಕೆಲವನ್ನು ಶ್ರೀ॥ ಕೈವಾರ್ ಅವರೂ, ಕೆಲವನ್ನು ಬೆಂಗಳೂರಿನ ಶ್ರೀ॥ ಎಸ್. ಕೆ. ನರಸಿಂಹಯ್ಯನವರೂ ದಯಮಾಡಿ ಕೊಟ್ಟು ಉಪಕಾರಮಾಡಿದರು.

ಎಂ. ವೆಂಕಟಕೃಷ್ಣಪ್ಪ,
ಗೌ॥ ಕಾರ್ಯದರ್ಶಿ.

---

## ಟ್ರೈನಿಂಗ್ ಕಾಲೇಜು ಕರ್ಣಾಟಕ ಸಂಘ, ಮೈಸೂರು

ತಾರೀಖು ೫–೮–೧೯೩೭ರಲ್ಲಿ ಟ್ರೈನಿಂಗ್ ಕಾಲೇಜಿನಲ್ಲಿ ಸಂಜೆ ೪–೩೦ಕ್ಕೆ, ಮ॥ ರಾ॥ ವೈ. ಚಂದ್ರಶೇಖರಶಾಸ್ತ್ರಿ, ಎಂ.ಎ. ಅವರ ಅಧ್ಯಕ್ಷತೆಯಲ್ಲಿ, ಪ್ರಾರಂಭ ಸಭೆ ಸೇರಿತು. ಮಂಗಳಾಚರಣೆಯಾದನಂತರ, ಈ ಕರ್ಣಾಟಕ ಸಂಘದ ಸ್ಥಾಪನೆಯ ಆವಶ್ಯಕತೆ, ಔಚಿತ್ಯ, ಪ್ರಯೋಜನಗಳನ್ನು ಕುರಿತು ಮ॥ ಎಂ. ವೆಂಕಟಕೃಷ್ಣಪ್ಪನವರೂ, ಮ॥ ವೈ. ಚಂದ್ರಶೇಖರಶಾಸ್ತ್ರಿಗಳವರೂ, ಪಂಡಿತ ಮ॥ ಟಿ. ಶ್ರೀನಿವಾಸರಂಗಾಚಾರ್ಯರೂ ವಿವರಿಸಿ ಭಾಷಣ

ಮಾಡಿದರು. ಅನಂತರ ಈ ಸಂಘವನ್ನು ಸ್ಥಾಪಿಸಿ ನಡೆಯಿಸಬೇಕೆಂದು ಸ... ತೀರ್ಮಾನವಾಯಿತು. ಮತ್ತು ಸಂಘವನ್ನು ಸಾಹಿತ್ಯ ಪರಿಷತ್ತಿಗೆ ಅಂ... ಸೇರಿಸಬೇಕೆಂಬ ಸೂಚನೆ ಬಂದು, ಅದು ಸರ್ವಾನುಮತದಿಂದ ಅಂ... (ಈ ಸಂಘವು ತಾ॥ ೨೪–೯–೧೯೩೭ರಲ್ಲಿ ಪರಿಷತ್ತಿನ ಅಂಗಸಂಸ್ಥೆಯಾಗಿ ... ಬಳಿಕ ಸಂಘದ ಕಾರ್ಯಕಾರಿ ಸಮಿತಿಯೊಂದು ನೇಮಕವಾಯಿತು.

೭–೯–೧೯೩೭　　　　ಎಂ. ವೆಂಕಟ...

ಗೌ॥ ಕಾರ್ಯ...

---

## ಕರ್ಣಾಟಕ ಸಂಘ, ಚೆನ್ನರಾಯಪಟ್ಟಣ

### (ಎರಡು ವರ್ಷಗಳ ಸಂಗ್ರಹ ವರದಿ)

ಈ ಸಂಘವನ್ನು ತಾ॥ ೧೨–೫–೧೯೩೪ರಲ್ಲಿ ಸ್ಥಾಪಿಸಲಾಯಿ... ೪೦ ಮಂದಿ ಸದಸ್ಯರಿದ್ದಾರೆ. ಮೊದಲನೆಯ ವರ್ಷ ಅನೇಕ ಮ... ಉಪನ್ಯಾಸಗಳನ್ನು ಕೊಟ್ಟರು; ಕಾವ್ಯ ವಾಚನಗಳೂ ನಡೆದುವು. ತಾ॥ ೧... ಪ್ರಥಮ ವಾರ್ಷಿಕೋತ್ಸವವು ನಡೆಯಿತು. ಎರಡನೆಯ ವರ್ಷದ ಕಾರ್ಯ... ವಾಗಿ ಇವು: (೧) ಉಪನ್ಯಾಸಗಳು, (೨) ನಾಟಕ ವಾಚನ, (೩) ... (೪) ಚರ್ಚಾ ಗೋಷ್ಠಿ, (೫) ಗ್ರಾಮಾಂತರಸೇವೆ, (೬) ನಾಟಕಾಭಿನಯ, ... ಪುರುಷರ ಜನ್ಮದಿನಾಚರಣೆ.

ಉಪನ್ಯಾಸಗಳ ವಿವರ: ವೀರಶೈವ ಸಾಹಿತ್ಯ ಸ್ವರೂಪ.—ಶ್ರೀ... ಶ್ರೀನಿವಾಸಮೂರ್ತಿ, ಬಿ.ಎ. ಅವರಿಂದ; ಸಾಹಿತ್ಯ ಮತ್ತು ಸಂಸ್ಕೃತಿ.—ಶ್ರೀ... ವೆಂಕಟೇಶಯ್ಯ, ಬಿ.ಎ., ಬಿ.ಟಿ. ಅವರಿಂದ; ಗೀತೆಯಲ್ಲಿ ಸಂಸಾರ ಚಿತ್ರ.—ಶ್ರೀ... ಶ್ರೀ॥ ಚಿದಂಬರಂ, ಅವರಿಂದ; ಮಾತೃ ಭಾಷೆ.—ಶ್ರೀ॥ ಎಸ್. ವೆಂಕಟೇ... ಅವರಿಂದ; ರೈತನ ಸಾಲಕ್ಕೆ ಕಾರಣಗಳು.—ಶ್ರೀ॥ ಜಿ. ಎಂ. ಮೇಕ್ರಿ, ಬಿ.ಎ., ... ಅವರಿಂದ; ಸರ್ವಮತ ಸಮನ್ವಯ ಮತ್ತು ರಾಮಕೃಷ್ಣ ಪರಮ... ಶ್ರೀವಾಸಾನಂದ ಸ್ವಾಮಿಗಳಿಂದ; ಆಯುರ್ವೇದದ ಇತಿಹಾಸ—ಶ್ರೀ... ರಾಮಸ್ವಾಮಿಯವರಿಂದ.

ಶ್ರೀ॥ ಗಳಾದ ಗೋವಿಂದದಾಸರು, ಬಿ. ವಿ. ಶ್ರೀನಿವಾಸಯ್ಯನವರು ... ರಾಮಣ್ಣನವರು ಕಾವ್ಯ ವಾಚನಗಳನ್ನು ನಡಸಿರುತ್ತಾರೆ. ಶ್ರೀ॥ ಗಳಾದ ... ಸುಬ್ಬಯ್ಯನರೂ ಕೆ. ಕೃಷ್ಣರಾಯರೂ ಭಾರತ ವಾಚನಗಳನ್ನು ನಡಸಿ ಉಪಕ... ಗ್ರಾಮಾಂತರದ ಕಾರ್ಯ ತಕ್ಕಮಟ್ಟಿಗೆ ನಡೆದಿದೆ: ಕಾಂತರಾಜಪುರ, ನುಗ್ಗೆಹಳ್ಳಿ ... ಪರವಾಗಿ ಕಾವ್ಯ ವಾಚನವೂ ಉಪನ್ಯಾಸಗಳೂ ನಡೆದಿವೆ. 'ನಾಗರಿಕ,' ... ಮೊದಲಾದ ನಾಟಕಗಳನ್ನು ಅಭ್ಯಾಸಮಾಡಿರುವುದಾಗಿದೆ. "ಆಷಾಢಭೂತಿ" ... ಭೂಮಿಯಮೇಲೆ ಪ್ರದರ್ಶಿಸಲಾಗಿದೆ. ಪುರಂದರದಾಸರು, ರಾಮಕೃಷ್ಣ ... ಸ್ವಾಮಿ ವಿವೇಕಾನಂದರು—ಈ ಮಹಾಪುರುಷರುಗಳ ಜನ್ಮದಿನಾಚರಣೆಯ... ಲಾಯಿತು. ತಾಲ್ಲೂಕಿನಲ್ಲಿರುವ ಭಾರತ ವಾಚನಕಾರರಿಗೆ ಪ್ರೋತ್ಸಾಹಕೊ... ದಿಂದ ಒಂದು ಭಾರತ ವಾಚನ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು.

೨೪–೭–೧೯೩೬　　　　ಎಂ. ಎಸ್. ಹನು...

ಗೌ॥ ಕಾರ್ಯ...

---

## ಕರ್ಣಾಟಕ ಸಾಹಿತ್ಯ ಸಂಘ, ಕುಂದಾಪುರ

ಕುಂದಾಪುರವು ದಕ್ಷಿಣ ಕನ್ನಡ ಜಿಲ್ಲೆಯ ಅಚ್ಚಗನ್ನಡ ತಾಲ್ಲೂಕು. ಜಿಲ್ಲೆಯ ...ತರ ತಾಲ್ಲೂಕುಗಳಲ್ಲಿ ತುಳು ಭಾಷೆ ಪ್ರಚಾರದಲ್ಲಿದೆ. ಕುಂದಾಪುರವು ಪ್ರಾಚೀನ ...ಾಲದಿಂದಲೂ ಕನ್ನಡ ಭಾಷಾ ಸೇವೆಯನ್ನು ಮಾಡಿಕೊಂಡು ಬಂದಿದೆ. ಆದರೂ ...ಈ ತಾಲ್ಲೂಕಿಗೆ ಒಂದು ಸ್ಥಿರವಾದ ಕರ್ಣಾಟಕ ಸಂಘವಿಲ್ಲದಿರುವುದು ಒಂದು ನ್ಯೂನತೆ ...ಯೆಂದು ಭಾವಿಸಿ, ಅದನ್ನು ಪರಿಹರಿಸಬೇಕೆಂಬ ಸದುದ್ದೇಶದಿಂದ ತಾ॥ ೮-೯-೧೯೩೫ರಲ್ಲಿ ...ಮೇಲೆ ಕಂಡ ಸಂಘವನ್ನು ಸ್ಥಾಪಿಸಲಾಯಿತು. ಅಂದಿನಿಂದ ೧೧-೧೦-೧೯೩೬ರವರೆಗೆ ...ಒಟ್ಟು ೨೩ ಸಭೆಗಳು ನಡೆದಿವೆ. ಅವುಗಳ ಪೈಕಿ ೧೭ ಉಪನ್ಯಾಸಗಳು, ೨ ಸಂಗೀತ ...ಕಚೇರಿಗಳು ಮತ್ತು ೪ ವಿಶೇಷ ಸಭೆಗಳು. ಈ ಸಭೆಗಳಲ್ಲದೆ, ತಾ॥ ೨೧-೧೧-೧೯೩೬ ...ಮತ್ತು ೨೨-೧೧-೧೯೩೬ರಲ್ಲಿ ಸಂಘದ ವರ್ಧಂತಿ ಮಹೋತ್ಸವ ನಡೆಯಿತು. ಈ ಸಂದರ್ಭ...ದಲ್ಲಿ ನಡೆದ ಸಾಹಿತ್ಯೋತ್ಸವಕ್ಕೆ ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರು ಅಧ್ಯಕ್ಷ...ರಾಗಿದ್ದರು.

೩೦-೩-೧೯೩೭

ಪಿ. ಕೆ. ಆಚಾರ್ಯ,
ಹೆಚ್. ಕೆ. ಶೆಟ್ಟಿ,
ಗೌ॥ ಕಾರ್ಯದರ್ಶಿಗಳು.

# ಗ್ರಂಥ ವಿಮರ್ಶೆ ಮತ್ತು ಸ್ವೀಕಾರ

---

೧. **ಹರ್ಷವರ್ಧನ.**—ಗ್ರಂಥಕರ್ತರು: ಶ್ರೀಮಾನ್ ಸಿ. ಕೆ. ವೆಂಕ... ನವರು, ಎಂ.ಎ., ಎಲ್ಎಲ್.ಬಿ.; ಕ್ರೌನ್ ಅಷ್ಟಪತ್ರ, ಪುಟ ೧೬೪; ... ಪುಸ್ತಕ ದೊರೆಯುವ ಸ್ಥಳ: ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ...

ಪ್ರಾಚೀನ ಭಾರತ ದೇಶದಲ್ಲಿ ಸಾಮ್ರಾಜ್ಯವನ್ನು ನೆಲೆಗೊಳಿಸಿ ಕನ್ನ... ವರೆಗೆ ಒಳ್ಳೆಯ ವೈಭವದಿಂದ ರಾಜ್ಯಭಾರಮಾಡಿದ ವೀರ ಪುರುಷರ ಜೀವ... ಬೇಕಾಗುವ ಆಧಾರಗಳನ್ನು ಸಂಗ್ರಹಿಸಿ, ಆ ರಾಜರನ್ನು ಕುರಿತು ಸ... ವಾದ ಜೀವನ ಚರಿತೆಗಳನ್ನು ರಚಿಸುವುದು ಕಷ್ಟತರವಾದ ಕೆಲಸ. ಹ... ಸಂಬಂಧಿಸಿದ ಮುಖ್ಯ ಗ್ರಂಥಗಳೆಂದರೆ ಬಾಣಕವಿಯ 'ಹರ್ಷಚರಿ... ಹ್ಯೂನ್‌ತ್ಸಾಂಗನ ಪ್ರವಾಸದ ಸಂಗತಿಗಳನ್ನು ತಿಳಿಸುವ ಗ್ರಂಥ. ... ಹೆಚ್ಚಾಗಿ ಆಧಾರವಾಗಿಟ್ಟುಕೊಂಡು ಇಂಗ್ಲಿಷಿನಲ್ಲಿ ಕೆಲವರು ಹರ್ಷನ... ಬರೆದಿರುವರು. ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರು ಇಂಗ್ಲಿಷಿನಲ್ಲಿ... ಗ್ರಂಥಗಳನ್ನೂ, ಸಂಸ್ಕೃತ 'ಹರ್ಷಚರಿತೆ'ಯನ್ನೂ, ಶ್ರೀ ಹರ್ಷಕವಿ... ವಾದುವುಗಳೆಂದು ಪ್ರತೀತಿಯಿರುವ ಗ್ರಂಥಗಳನ್ನೂ ಆಧಾರವಾಗಿ... ಈ ಗ್ರಂಥವನ್ನು ರಚಿಸಿರುವರು.

ಶ್ರೀ॥ ವೆಂಕಟರಾಮಯ್ಯನವರು ಕನ್ನಡ ಸಾಹಿತ್ಯದ ಬೆಳವಣಿಗೆಗಾ... ವಾಗಿ ಶ್ರಮಿಸುತ್ತಿರುವವರಲ್ಲಿ ಒಬ್ಬರು. ಅವರ ಸತತೋದ್ಯಮ... ಸಾಹಿತ್ಯಕ್ಕೆ ಬಹು ಮುಖ್ಯವಾದ ಸೇವೆಯಾಗುತ್ತಿದೆ. ಅವರ ಸಾಹಿತ್ಯ... ಹೆಚ್ಚಾಗಿ ಬೆಳೆದುಕೊಂಡುಬರಲಿ ಎಂಬುದು ನಮ್ಮ ಹಾರೈಕೆ.

'ಹರ್ಷವರ್ಧನ' ಎಂಬೀ ಗ್ರಂಥದಲ್ಲಿ ಎರಡನೆಯ ಅಧ್ಯಾಯದಿಂ... ಪೂರ್ವಿಕರ ವೃತ್ತಾಂತದೊಂದಿಗೆ, ಮುಖ್ಯ ಚರಿತೆ ಆರಂಭವಾಗುತ್ತದೆ... ದಿಗ್ವಿಜಯ ಪ್ರಕರಣದವರೆಗೆ ಚರಿತ್ರೆಯು ಧಾಟಿಯಲ್ಲಿ ಕಥೆಯನ್ನು... ನಡುನಡುವೆ ಲೇಖಕರ ವಿಮರ್ಶಾತ್ಮಕವಾದ ವಾಕ್ಯಗಳು ಬರುವುದರಿಂ... ೬೧, ೬೩, ಇತ್ಯಾದಿ) ಅಂಥ ಸಂದರ್ಭಗಳಲ್ಲಿ ಕಥಾ ಸೂತ್ರವು ತಟ... ಹೋದಂತಾಗಿದೆ—ಹೀಗಾಗಿ, ಅಲ್ಲಿಂದಲ್ಲಿ ಕಥೆಯನ್ನು ಹೊಂದಿಸಿಕೊಂಡು... ಸಾಮಾನ್ಯ ವಾಚಕರಿಗೆ ಪ್ರಯಾಸಕರವಾಗಿ ಪರಿಣಮಿಸಿದೆ. ಲೇಖಕರು... ಇಲ್ಲೊಮ್ಮೆ ಹೇಳುವ ವಿಮರ್ಶಾತ್ಮಕವಾದ ವಾಕ್ಯಗಳನ್ನು ಹರ್ಷ... ಕುರಿತು ವಿಮರ್ಶಿಸುವ ಸಂದರ್ಭದಲ್ಲಿ ಸೇರಿಸಿದ್ದರೆ ಉಚಿತವಾಗಿರು... ತೋರುವುದು. ಚರಿತೆ ಈ ವಿಧವಾಗಿ ಮುಂದಕ್ಕೆ ಸಾಗುತ್ತ ... ಅಧ್ಯಾಯಕ್ಕೆ ಬಂದು ಅಲ್ಲಿ ಒಮ್ಮೊಂದೊಮ್ಮೆ ಗುಪ್ತಗಾಮಿನಿಯಾಗಿದೆ.

ಅಧ್ಯಾಯಗಳಲ್ಲಿ ಹರ್ಷನ ರಾಜ್ಯದ ಸ್ಥಿತಿಗತಿಗಳನ್ನು ಪರಿಶೀಲಿಸಿರುವುದರಿಂದ ಹರ್ಷನ ಜೀವನ ಚರಿತೆ ಮುಂಡಕ್ಕೆ ಯಾವ ಪ್ರಕಾರ ನಡೆಯಿತೆಂಬುದು ಗೊತ್ತಾಗುವುದಿಲ್ಲ. ಬಾಣನ ಚರಿತೆಯೂ ಈ ದೃಷ್ಟಿಯಿಂದ ಅಸಂಪೂರ್ಣವಾಗಿದೆ; ಹರ್ಷನ ಮುಂದಿನ ಜೀವನಕ್ರಮವು ಹೇಗಿದ್ದಿರಬಹುದೆಂಬುದನ್ನು ಹ್ಯೂಯನ್‌ತ್ಸಾಂಗನ ಗ್ರಂಥದಿಂದ ಊಹಿಸಿಕೊಳ್ಳಬೇಕಾಗಿದೆ. ಹರ್ಷವರ್ಧನನು ಸಾಮ್ರಾಜ್ಯವನ್ನು ಸ್ಥಾಪಿಸಿದಮೇಲೆ ತನ್ನ ಉಳಿದ ಜೀವಮಾನವೆಲ್ಲವನ್ನೂ ರಾಜ್ಯಪರಿಪಾಲನೆಯಲ್ಲಿಯೂ, ವಿದ್ವಜ್ಜನರ ಸಭೆಗಳನ್ನು ನೆರೆಸುವುದರಲ್ಲಿಯೂ, ಸಾರ್ವಜನಿಕ ಕಾರ್ಯಗಳನ್ನು ಎಸಗುವುದರಲ್ಲಿಯೂ ವಿನಿಯೋಗಿಸಿರಬೇಕೆಂದು ತರ್ಕಿಸಬಹುದು. ರಾಜ್ಯಭಾರದ ಅಧ್ಯಾಯದಿಂದ ಮುಂದಿನ ಅಧ್ಯಾಯಗಳು ಬಹಳ ಮಹತ್ತ್ವವುಳ್ಳುವಾಗಿವೆ. ಹರ್ಷವರ್ಧನನ ಕಾಲದ ರಾಜ್ಯಾಂಗ ವ್ಯವಸ್ಥೆಯ ವಿವರಗಳನ್ನೂ, ಸಾಮಾಜಿಕ ಪರಿಸ್ಥಿತಿಯನ್ನೂ, ಧಾರ್ಮಿಕ ಚಳುವಳಿಯನ್ನೂ ಗ್ರಂಥಕರ್ತರು ಮನದಟ್ಟಾಗುವಂತೆ ಅನೇಕ ನಿದರ್ಶನಗಳೊಡನೆ ವಿಶದಗೊಳಿಸಿರುವರು.

ಗ್ರಂಥದಲ್ಲಿ ಅಲ್ಲಲ್ಲಿ ಸಾಧುವಲ್ಲದ ಕೆಲವು ಶಬ್ದರೂಪಗಳೂ, ಮತ್ತು ಅಚ್ಚಿನ ತಪ್ಪುಗಳೂ ಇವೆ. "ಧಾರಾಳವಾಗಿ ಹೇಳಬಹುದು" ಎಂಬ ಪ್ರಯೋಗವು ಮೇಲಿಂದ ಮೇಲೆ ಬರುತ್ತದೆ.

ಡಿ. ಕೆ. ಭೀ.

---

೨. **ಹೂವಿನ ಆಸೆ.**—(ಸಾಮಾಜಿಕ ನಾಟಕ) ಲೇಖಕರು: ಶ್ರೀಮಾನ್ ಎಂ. ವಿ. ಸೀತಾರಾಮಯ್ಯ, ಎಂ.ಎ. ಅವರು; ಕ್ರೌನ್ ಅ. ಪ. ಪುಟ ೮೦; ಬೆಲೆ: ೧೨ ಆಣೆ. ಪುಸ್ತಕ ದೊರೆಯುವ ಸ್ಥಳ: ಭಾರತಿ ಸಾಹಿತ್ಯ ಮಂದಿರ, ಅವೆನ್ಯೂ ರಸ್ತೆ, ಬೆಂಗಳೂರು ಸಿಟಿ.

ಬಾಲವಿಧವೆಯರ ಬಾಳಿನ ಗೋಳು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಬಹು ಜನರಿಗೆ ವಸ್ತುವನ್ನು ಒದಗಿಸಿಕೊಟ್ಟಿದೆ. ವಿಶೇಷವಾಗಿ ಸಣ್ಣ ಕತೆಗಳಲ್ಲಿ, ಇತ್ತೀಚೆಗೆ ನಾಟಕಗಳಲ್ಲಿ, ಈ ವಸ್ತುವು ಬಳಸಲ್ಪಟ್ಟಿದೆ. ಶ್ರೀ॥ ಎಂ. ವಿ. ಸೀತಾರಾಮಯ್ಯನವರು ತಾವು ಕಂಡು ಕೇಳಿದ ಬಾಲವಿಧವೆಯರ ಗೋಳು, ಅವರನ್ನು ಕಾಡುವ ಸುಪ್ತ ಆಸೆ ಕನಸುಗಳು ಇವುಗಳಿಂದ ತಲ್ಲಣಗೊಂಡಿದ್ದಾರೆ. ಬಾಲವಿಧವೆಯರ ಆಸೆಗಳು ಸ್ವಾಭಾವಿಕವಾದುವು, ನ್ಯಾಯವಾದುವು, ಸಲ್ಲಬೇಕಾದುವು ಎಂಬ ವಿಚಾರಗಳಿಗೆ ಲೇಖಕರು ಎಡೆ ಕೊಟ್ಟಿದ್ದಾರೆ. ಆ ನ್ಯಾಯವಾದ ಆಸೆಗಳು ಹೇಗೆ ಸಲ್ಲಬಹುದೆಂಬ ಪ್ರಶ್ನೆ ಅವರನ್ನು ಎದುರಿಸಿದೆ. ಈ ಪ್ರಶ್ನೆಯನ್ನು ಅವರು ತಮ್ಮ ರೀತಿಯಲ್ಲಿ ಬಿಡಿಸಲು ಯತ್ನಿಸಿದ್ದಾರೆ. ಅವರ ಮನಸ್ಸಿನಲ್ಲಿ ಮೂಡಿದ ಚಿತ್ರವೇ "ಈ ನಾಟಕದ ಮುಗ್ಧ ಬಾಲವಿಧವೆ ಸೀತೆಯ ಚಿತ್ರ." ಇದರಲ್ಲಿ ಏಳು ದೃಶ್ಯಗಳಿವೆ. ಮೊದಲನೆಯ ದೃಶ್ಯದಲ್ಲಿ ಕಂಡುಬರುವ ಸೀತೆಯ 'ಹೂವಿನ ಆಸೆ' ಒಮ್ಮೆ ಕುಗ್ಗಿ ಕೊನೆಯಲ್ಲಿ ಫಲಿಸುತ್ತದೆ.

ಸೀತೆ ಬಾಲವಿಧವೆ. ಅವಳು ಒಳ್ಳೆ ಜಾಣೆಯೆಂದೂ, ಸುಗುಣೆಯೆಂದೂ ಬೇರೆ ಬೇರೆ ಪಾತ್ರಗಳ ಮೂಲಕ ತಿಳಿದುಬರುತ್ತದೆ. ಅವಳು ಸವಿ ಸವಿಯಾಗಿ ಮಾತನಾಡುತ್ತಾಳೆ.

ಸುಬ್ಬು ಒಬ್ಬ ತಬ್ಬಲಿ. ಸೀತೆಯು ಅಪ್ಪನ ಮನೆಯಲ್ಲಿಯೇ ಬೆಳೆದಿದ್ದಾ ವಿಧವೆ ಸೀತೆಗೆ ಹೂವು ಮುಡಿದುಕೊಳ್ಳಬೇಕೆಂದು ಅದೆಷ್ಟೋ ಚಾಪ ಸುಬ್ಬುವಿನ ಗೆಳೆಯ. ದೇಶಸೇವೆ, ಭಾಷಾಸೇವೆ, ಸಮಾಜಸೇವೆ, —ಇವು ಅವನ ಪ್ರೀತಿಯ ವಿಷಯಗಳು. ಸಾಧ್ಯವಾದಾಗಲೆಲ್ಲ ಇವ 'ಲೆಕ್ಚರ್' ಹೊಡೆಯುತ್ತಾನೆ. ಮೊದಲನೆಯ ದೃಶ್ಯದಲ್ಲಿ ಸೀತೆಯು ಸುಬ್ಬು-ಸೀತೆಯರ ಸ್ನೇಹದ ಸಲಿಗೆ, ನಾಣುವಿನ ಪರಿಚಯ, ಸೀತೆ ಇವುಗಳು ಚಿತ್ರಿತವಾಗಿವೆ. ಎರಡನೆಯ ದೃಶ್ಯ ನಾಣುವಿನ ಮನೆ ತಾಯಿ ನರಸಕ್ಕನ ಪಾತ್ರದಲ್ಲಿ ನಾಟಕಕಾರರ ಕೌಶಲ್ಯ ಕಂಡುಬರುತ್ತ ಸಜೀವ ವಾಸ್ತವ ಪಾತ್ರ. ಆ ಮುದುಕಿ ವಾಡಿಕೆಯಂತೆ ಸಾಂಪ್ರದಾ ಯುಳ್ಳವಳು. ಮಗನ ಮದುವೆಗಾಗಿ ಹಂಬಲಿಸಿ ಹಾರೈಸುತ್ತಾಳೆ. ಕನ್ನೆ ಇದು ಎಲ್ಲರೂ ಕಾಣುವ, ಕೇಳುವ ಅನುಭವದ ಮಾತು. ಅವಳಲ್ಲಿ ಕ ಕೊಂಡಿದೆ. ಸೀತೆಯ ಕೊರಗು ಅವಳನ್ನು ಕೆರಳಿಸದೆ ಇಲ್ಲ. ಸುಖವಾಗಬೇಕೆಂದು ಧರ್ಮವನ್ನು ಬಿಡುವುದೆ? "ಯಾವ ಬೇಕಾದರೂ ಅವಳನ್ನು ಮದುವೆ ಮಾಡಿಕೊಳ್ಳಲಿ, ಅವಳು ಸುಖವಾ ಬೇಡ ಅನ್ನುವದಿಲ್ಲ. ನಿನಗೇಕೆ (ನಾಣುವಿಗೆ) ಸೀತೆಯ ಸುದ್ದಿ" ಎಂ ಹೇಳುವ ಮಾತು ಅರ್ಥಪೂರ್ಣವಾಗಿದೆ, ವೈಶಿಷ್ಟ್ಯಪೂರ್ಣವಾಗಿದೆ. ದೃಶ್ಯದಲ್ಲಿ) ಸೀತೆಯನ್ನು ನಾಣು ನಿಜವಾಗಿಯೂ ಮದುವೆಯಾಗ ತಿಳಿದಾಗ ತನಗೆ ಮೈಲಿಗೆಯಾಗುವದೆಂಬುದನ್ನು ಬಗೆಯದೆ ಅವನ ಗಲ್ಲವನ್ನು ಹಿಡಿದುಕೊಳ್ಳುತ್ತಾಳೆ. ಇದರಲ್ಲಿ ಅವಳ "ತಾಯ್ತನ" ವ್ಯಕ್ತ ನರಸಕ್ಕನ ಪಾತ್ರವು ಈ ನಾಟಕಕ್ಕೆ ಕಳೆಯನ್ನು ತಂದುಕೊಡಬಲ್ಲ ಹೇಳಬಹುದು.

ಸೀತೆಗೆ ತಾಯಿ ಇಲ್ಲ. ಮನೆಯಲ್ಲಿ ಚಿಕ್ಕಮ್ಮ ಸೀತೆಯನ್ನು ಕಾಣಲಾರಳು. ಸೀತೆಯ ಕನಿಕರಸ್ಥಿತಿಗೆ ಇದೂ ಒಂದು ಕಾರಣ. ಮೆಚ್ಚಾಗಿರಬೇಕೆಂಬ ಹಂಬಲ. ಕಮಲಮ್ಮನಿಗೆ ಇದು ಸೇರದು. ಮುಡಿಯುವ ಆಸೆ. ಕಮಲಮ್ಮ ಇದನ್ನು ಸಹಿಸಳು. ಸೀತೆ ಸುಬ್ಬು ಸೀತೆಯ ಬಾಲ್ಯದ ಒಡನಾಡಿ. ನ್ಯಾಯವಾಗಿ ಅವನೇ ಸೀತೆಯ ಯಾಗಬೇಕಿತ್ತು, ಆಗಿರಲಿಲ್ಲ. ಸೀತೆಗೆ ಈ ತೊಡಕು ತಿಳಿಯದು. ಬಾಲ್ಯ ಸಹಜವಾದ ಸಲಿಗೆಯಿಂದ, ಅವನೊಡನೆ ಚಿನ್ನಾಟವಾಡುತ್ತಾಳೆ. ಹೂವು ಮುಡಿಸುವ ಸಾಹಸವನ್ನೂ ಕೂಡ ಮಾಡುತ್ತಾನೆ. ಇದ ಕಮಲಮ್ಮ ಕಿಡಿಕಿಡಿಯಾಗುವದು ಸಹಜವಿದೆ. ತನ್ನ ಗಂಡ ಸೂರಪ್ಪನ ಹೇಳುತ್ತಾಳೆ. ಎಷ್ಟಾದರೂ ತಂದೆಯ ಹೃದಯ; ಆತನು ಸೀತೆ ಬೇಕೆಂದು ಬಯಸುತ್ತಾನೆ. ಆದರೆ ಧರ್ಮ, ಸಮಾಜ, ಸಂಪ್ರದಾಯ ಗಳು. ಸುಧಾರಕ ನಾಣು ಈ ತೊಡಕುಗಳನ್ನು ಎದುರಿಸಲು ಉಪನ್ಯಾಸ

ೂರಪ್ಪನಿಗೆ ಅದು ತಪ್ಪಲ್ಲವೆಂದು ತೋರಿದರೂ ಅದನ್ನು ನೆರವೇರಿಸುವ ಧೈರ್ಯ ೀಕಷ್ಟೇ. ಇದು ನಮ್ಮ ಸಮಾಜದ ನೈಜಸ್ಥಿತಿ. ಸೂರಪ್ಪನದು ಒಂದು ಪ್ರಾತಿ ಧಿಕ ಉದಾಹರಣೆ ಮಾತ್ರ. ಮಗಳಿಗೆ ಸುಖವಾಗಬೇಕೆಂಬ ಮನಸ್ಸಿದೆ; ಧೈರ್ಯವಿಲ್ಲ. ಾಣುವಿನ ಉಪನ್ಯಾಸ ಅವನಮೇಲೆ ಪರಿಣಾಮವನ್ನುಂಟುಮಾಡುತ್ತದೆ, ಆದರೆ ಾರ್ಯಪ್ರವೃತ್ತನನ್ನಾಗಿ ಮಾಡುವದಿಲ್ಲ. ಈ ಅವಾಂತರವನ್ನು ದೂರಮಾಡುವು ಕ್ಕೆ ಲೇಖಕರು ನಾಟಕದಲ್ಲಿ ಒಂದು ಹಾದಿಯನ್ನು ಹುಡುಕಿದ್ದಾರೆ. ಸೂರಪ್ಪ ಜ್ವರ ೀಡಿತನಾಗುತ್ತಾನೆ. ಮೃತ್ಯುಮುಖದಲ್ಲಿದ್ದು ಒಂದು ಉನ್ಮಾದಸ್ಥಿತಿಯಲ್ಲಿರುತ್ತಾನೆ. ೀತೆಯ ಸುಖದ ಕಲ್ಪನೆಯಿಂದ ಮಾತ್ರ ಆತನಿಗೆ ಸಮಾಧಾನವಾಗಬಲ್ಲದು. ಅಂತೆಯೇ ಭ್ರಾಮಕ ಸ್ಥಿತಿಯಲ್ಲಿ ಸೀತೆ ಪುನರ್ವಿವಾಹಮಾಡಿಕೊಳ್ಳಬಹುದೆಂದೂ, ಸುಬ್ಬು ನ್ನೀ ಮದುವೆಯಾಗಿ ಸುಖಹೊಂದಬೇಕೆಂದೂ ಆಶಿಸುತ್ತಾನೆ. ಅಲ್ಲದೆ ಸೀತೆಯ ುದುವೆ ಆಗುವುದು ಸಾಧ್ಯವಾದರೆ ತಾನು ಉಳಿಯಬಹುದೆಂದೂ ಸೂಚಿಸುತ್ತಾನೆ. ನ್ನ ಪತಿ ಉಳಿಯಬೇಕಾದರೆ ಸೀತೆಯು ಪತಿಯನ್ನು ಪಡೆದುಕೊಳ್ಳಬೇಕೆಂಬ ಮಾತಿಗೆ ಮಲಮ್ಮನಾದರೂ ಒಪ್ಪದೆ ಇರಲಾರಳು. ಅಂತು, ಈ ಸನ್ನಿವೇಶದಿಂದ ನಾಟಕ ಾರರು ನಾಟಕದಲ್ಲಿ ತಮ್ಮ ಉದ್ದೇಶವನ್ನು ಸಾಧಿಸಿಕೊಂಡಿದ್ದಾರೆ. ಸೂರಪ್ಪ ಣಮುಖವಾಗುತ್ತಾನೆ. ಆದರೆ ಈ ಸನ್ನಿವೇಶವು ದುರ್ಬಲವಾಗಿದೆ. ಇಂತಹ ರ್ಬಲ ಸನ್ನಿವೇಶ ನಾಟಕಕ್ಕೆ ಮಾತ್ರ ಒಪ್ಪಬಹುದು. ನಾಟಕದ ಅನುಕೂಲತೆ ್ಯವಹಾರದ ಅನುಕೂಲತೆಯಲ್ಲ, ಅದೇನಿದ್ದರೂ ನಾಟಕದಲ್ಲಿ. ಕಮಲಮ್ಮನ ಸ್ವಭಾವ ಲ್ಲಿ ಮಾರ್ಪಾಡಾಗುತ್ತದೆ. ಕೊನೆಗೆ ಸುಬ್ಬು ಸೀತೆಯ ವರನಾಗಿ ಅವಳಿಗೆ ೂವು ಮುಡಿಸುತ್ತಾನೆ. ಸೀತೆಯ **ಹೂವಿನ ಆಸೆ** ಫಲಿಸುತ್ತದೆ.

ಈ ಮಧ್ಯದಲ್ಲಿ ಇನ್ನೊಂದು ಅವಾಂತರವಿದೆ: ಅದು ನಾಣುವಿನ ಪಾತ್ರದ ಚಾರವಾಗಿ. ಸೀತೆಯನ್ನು ತಾನು ಮದುವೆಯಾಗಬೇಕೆಂಬ ಒಳ ಆಸೆ ಆತನನ್ನು ೊರೆಯುತ್ತಿತ್ತು. ಆದರೆ ಉದಾರ ಹೃದಯ ಆತನದು; ಸೀತೆ, ಸುಬ್ಬು ಇವರ ುಖಕ್ಕಾಗಿ ಸ್ವಾರ್ಥತ್ಯಾಗ ಮಾಡುತ್ತಾನೆ. ಸೀತೆಗೆ ಮದುವೆಯಾಗಬೇಕೆಂದು ೊದಲನೆಯ ದೃಶ್ಯದಲ್ಲಿ ಆತನು ವಾದಿಸುವಾಗ ವರನು ತಾನೇ ಎಂದು ನಂಬಿ ೊಂಡಿರುತ್ತಾನೆ. ಆದರೆ ವಿಧಿ ಬೇರೆಯಾಗಿದೆ. ಸೀತೆ, ಸುಬ್ಬು ಇವರ ಪ್ರಣಯ ೆಳೆದಿದೆ. ಅಲ್ಲದೆ ನಾಣುವಿನ ತಾಯಿಯೂ ಒಪ್ಪುವದಿಲ್ಲ. ಆತನಿಗೆ ತಾಯಿಯ ನಸ್ಸು ನೋಯಿಸುವದೂ ಬೇಡ, ಸ್ನೇಹಿತನ ಸುಖಕ್ಕೆ ಅಡ್ಡಬರುವದೂ ಬೇಡ. ಸುಖ, ಉಪಕಾರ ಬುದ್ಧಿ—ಇವೆರಡರ ತೊಡಕಿನ ಸ್ಥಿತಿಯ (clash) ಚಿತ್ರ ಸುಂದರ ಂದೇ ಹೇಳಬಹುದಾದರೂ, ಈ ಅವಾಂತರವಿಲ್ಲದಿದ್ದರೆ ಆತನ ಉಪನ್ಯಾಸ, ಸುಧಾರಕ ವೃತ್ತಿ ಇವುಗಳಿಗೆ ಇನ್ನೂ ಹೆಚ್ಚಿನ ಬೆಲೆ ಬರಬಹುದಾಗಿದ್ದಿತು. ಸುಬ್ಬು, ಸೂರಪ್ಪ ವರಿಗೆ ಪ್ರತಿಯಾಗಿ ನಾಣುವಿನಲ್ಲಿ ಕಂಡುಬರುವ ಸುಧಾರಕ ಧ್ಯೇಯ ಸ್ವಾರ್ಥ ೇರಿತವೆಂದು ಅನಿಸುವದಿಲ್ಲವೇ? ಅಲ್ಲದೆ ಆತನೇ ಹೇಳುವಂತೆ "ನಾನು ಬಗೆದದ್ದೇ ಂದು, ದೇವರು ನಡಸಿದ್ದೇ ಒಂದು (ಪು. ೨೩)". ಅದೇನಿದ್ದರೂ, ಕೊನೆಯಲ್ಲಿಯ

ಆತನ ವರ್ತನದಿಂದ ಗೌರವ ಉಂಟಾಗುತ್ತದೆ. ಆದರೂ ಆತನು ಕಾಶಿಯಲ್ಲಿ ಬಿಟ್ಟು, ಗಾಂಧಿ ಚಳವಳಿ ಸೇರುವ ನಿಶ್ಚಯಕ್ಕೆ ಸ್ನೇಹಿತೆಯ ನಿರಾಶೆಯೇ ಕಾರಣವಾದರೆ, ಅದು ಸ್ತುತ್ಯವಲ್ಲವಷ್ಟೇ.

ನಾಟಕದಲ್ಲಿಯ ಸಮಸ್ಯೆ ನವೀನವಲ್ಲವೆಂದು ಈ ಮೊದಲೇ ಹೇಳಿದೆ. ಶ್ರೀ॥ ಸೀತಾರಾಮಯ್ಯನವರು ಅದನ್ನು ಸುಂದರವಾಗಿ ನಿರ್ವಹಿಸಿದ್ದಾರೆಂದು ಹೇಳಬಹುದು. ಇನ್ನು ಈ ನಾಟಕದ ಶೈಲಿಯ ವಿಷಯವಾಗಿ ಒಂದು ಮಾತು. ಸಮಾಜದಲ್ಲಿಯ ಲೋಪದೋಷಗಳನ್ನು ತೋರಿಸುವಲ್ಲಿ ಎರಡು ರೀತಿಗಳು ಬರುತ್ತವೆ: ಒಂದು ಕನಿಕರದಿಂದ, ಸೌಹಾರ್ದದಿಂದ ವಸ್ತುಸ್ಥಿತಿಯನ್ನು ಸಹಾನುಭೂತಿ ಪರವಾಗಿ ಚಿತ್ರಿಸುವುದು; ಇನ್ನೊಂದು ತೀಕ್ಷ್ಣವಾದ ಇರಿತದಿಂದ ವ್ಯಂಗ್ಯವಾಗಿ ಟೀಕಿಸಿ ಸಮಾಜದ ಕಣ್ಣು ತೆರೆಯುವುದು. ಸ್ಥೂಲವಾಗಿ ಮೊದಲನೆಯದನ್ನು ಕನ್ನಡದಲ್ಲಿ ಶ್ರೀನಿವಾಸರ ಮಾರ್ಗವೆಂದೂ, ಎರಡನೆಯದನ್ನು ಶ್ರೀ ಕೈಲಾಸಂ ಮಾರ್ಗವೆಂದೂ ಹೇಳಬಹುದು. 'ಮಂಜುಳಾ' ಹಾಗೂ 'ಮುಕ್ಕಣ್ಣ ಪ...' ಈ ಎರಡು ನಾಟಕಗಳನ್ನು ಮಾದರಿಯೆಂದೂ ತೆಗೆದುಕೊಳ್ಳಬಹುದು. ... ಲೇಖಕರದು ಶ್ರೀನಿವಾಸರ ಮಾರ್ಗವೆಂದು ಹೇಳಬಹುದು. ತಿಳುವಳಿಕೆಯ ರೀತಿಯಲ್ಲಿ ಲೋಪವನ್ನು ಚಿತ್ರಿಸಿ, ಆ ಲೋಪಕ್ಕೆ ತಮ್ಮ ದೃಷ್ಟಿಯಿಂದ ಪರಿಹಾರವನ್ನು ಸೂಚಿಸಿದ್ದಾರೆ. ಆದರೆ ಪ್ರಕೃತ ನಾಟಕದಲ್ಲಿ ಬಾಲವಿಧವೆಯರ ... ಹೃದಯದ್ರಾವಕ ಚಿತ್ರವಿಲ್ಲ. ಅಂತೆಯೇ ಅದು ಅಷ್ಟೊಂದು ಪರಿಣಾಮವುದಕ್ಕೆ ... ತೋರುವದಿಲ್ಲ. ಬಾಲವಿಧವೆಯರ ದುಗುಡದ ಭೀಷಣತೆಯು ಕರುಳು ... ವಂತೆ ಇನ್ನೂ ತೀಕ್ಷ್ಣವಾಗಿ ಚಿತ್ರಿತವಾಗಿದ್ದರೆ ಸಮಾಜದ ... ಯಥಾರ್ಥ ಪರಿಣಾಮಕಾರಕ ಕಲ್ಪನೆ ಬರುತ್ತಿತ್ತು.

ಲೇಖಕರು "ಇದು ನನ್ನ ಮೊದಲ ನಾಟಕ" ವೆಂದು ಸಜ್ಜನ್ಯದಿಂದ ... ಶ್ರೀಯುತರು ಇನ್ನೂ ಹೆಚ್ಚು ಕಲಾಪೂರ್ಣವಾದ ಸಾಮಾಜಿಕ ... ಕೊಡಬಲ್ಲರೆಂದು ನಾವು ಆಶಿಸಬಹುದಾಗಿದೆ.

ಎಸ್. ...

---

## ೩. ವೈದ್ಯನ ಜಾಡ್ಯ ಅಥ್ವಾ ನೆರೆಹೊರ್ಕೆ ನೆರೆಹೊರ್ಕೆ...

ಲೇಖಕರು: ಶ್ರೀ॥ ಟಿ. ಪಿ. ಕೈಲಾಸಂರವರು; ಪ್ರಕಾಶಕರು: ಕತೆಗಾರ ಪ್ರ... ಬೆಂಗಳೂರು; ಕ್ರೌನ್ ೧. ಪ. ಪು. ೨೯; ಬೆಲೆ: ( ? ).

ಕರ್ನಾಟಕ ಸಾಮಾಜಿಕ ಪ್ರಹಸನಗಳ ಪಿತಾಮಹರೆಂದು ಯುಕ್ತವಾಗಿ ಕರೆದುಕೊಳ್ಳುವ "ಗುಂಡೂ" ಅವರ ಸಾಮಾಜಿಕ ಪ್ರಹಸನ ... ಶ್ರೀ॥ ಕೈಲಾಸಂ ಅವರ ಕಲಾಕೃತಿಯನ್ನು ಪುಸ್ತಕರೂಪದಲ್ಲಿ ಕಾಣ... ಬರುವುದು ಕನ್ನಡಿಗರಿಗೆ ಅಪೂರ್ವವಾದ ಹಾಗೂ ಅಚ್ಚುಮೆಚ್ಚಿನ ಸಂಗತಿ ಎಂದು ಬೇರೆ ಹೇಳಬೇಕಾಗಿಲ್ಲ.

ಶ್ರೀ|| ಕೈಲಾಸಂ ಅವರ ಚಿತ್ರಗಳು ಕಲ್ಪನೆಯ ಕೂಸುಗಳಲ್ಲವೆಂದೂ, ನಾವು ಕಾಣುವ, ಕೇಳುವ ವಾಸ್ತವ ಚಿತ್ರಗಳೆಂದೂ ಬೇರೆಯಾಗಿ ಹೇಳುವ ಆವಶ್ಯಕತೆ ಇಲ್ಲ. ಈ ಪ್ರಹಸನದಲ್ಲಿ ನೆರೆಹೊರೆಯ ಎರಡು ಕುಟುಂಬಗಳ ಗುಂಪುಗಳಿವೆ. ಎರಡೂ ಗುಂಪುಗಳಲ್ಲಿ ಸರಿಯಾಗಿ, ಸಮವಾಗಿ—ಆತ, ಆಕೆ, ಆಕೆಯ ತಾಯಿ ಇದ್ದಾರೆ. ರಂಗಣ್ಣ, ಸುಬ್ಬಣ್ಣ ಇವರು ಮನೆಯ "ಗಂಡಸರು." ರಂಗಣ್ಣನ ಮನೆಯಲ್ಲಿ ಆತನಿಗಿಂತ ಆಕೆ, ಆಕೆಯ ತಾಯಿ ಇವರ ಅಧಿಕಾರವೇ ಹೆಚ್ಚು. ಗಂಡ ತನ್ನ ಎಂಜಲೆಲೆಯನ್ನು ತಾನೇ ತೆಗೆಯಬೇಕು. ನೆರೆಹೊರೆಯ ಸುಬ್ಬಣ್ಣ ಇದನ್ನು ಕಂಡು ರಂಗಣ್ಣನ ವಿಷಯವಾಗಿ ಅಸಿಕರ ತೋರಿಸಿ, ತನ್ನ ಮನೆಯಲ್ಲಿಯ ತನ್ನ ಸ್ಥಿತಿ ಎಷ್ಟೋ ವಾಸಿ ಎಂದು ಜಂಭ ಕೊಚ್ಚುತ್ತಾನೆ. ರಂಗಣ್ಣನ ಜಾಡ್ಯಕ್ಕೆ ತಾನು ವೈದ್ಯನಾಗಬೇಕೆನ್ನುತ್ತಾನೆ. ಅಂತೆಯೇ "ತಮ್ಮನೇಲಿ ತಮ್ಮಿಂದ ಬದ್ಕಿರೋ ಇಬ್ಬರ್ಹೆಂಗಸ್ರಿದ್ರೂನೂವೆ . . . . ತಾವೇ ನಿಮ್ಮೆಂಜ್ಲೆಲೇನಾ . . . . ತೊಟ್ಟೀಲಿ ಹಾಕ್ತಿದ್ದದ್ನ ನೋಡಿ ನನ್ಗೆ ಯಾಕೋ . . . . ಕೋಪಿಸ್ಕೊಬೇಡಿ . . . . ಮನೆ ಯಜಮಾನ್ಗೆ ಮನೆಮಾತನ್ದು" ಇತ್ಯಾದಿಯಾಗಿ ಉಪನ್ಯಾಸ ಪ್ರಾರಂಭಿಸುತ್ತಾನೆ. "ರಾಜ್ಯಕ್ಕಾಗ್ಲೀ, ಗೃಹಗಳಿಗಾಗ್ಲೀ, ಮುಖ್ಯ ಪ್ರಾಣಿ ಗಂಡ್ಸೇ ಹೊರ್ತು ಹೆಂಗ್ಸಲ್ಲ" ಎಂಬ ಸೂತ್ರ ಹೇಳಿ, "ಯಜಮಾನ ತನ್ನ ಯಜಮಾನ್ಕೆ ಸಾಗಿಸ್ಬೇಕಾದ್ರೆ ಮನೆ ಹೆಂಗಸ್ರನ್ನ ಹತೋಟೀಲಿ, ಹದ್ನಲ್ಲಿ ಇಡಬೇಕೂ ಅಂಬೋ ಸೂಕ್ಷ್ಮಾನ್ನ" ರಂಗಣ್ಣನಿಗೆ ತಿಳಿಸಿ, ನೆರೆಹೊರ್ಕೆಯ ಋಣವನ್ನು ತೀರಿಸುವುದಕ್ಕೆ ಉದ್ಯುಕ್ತನಾಗುತ್ತಾನೆ. ರಂಗಣ್ಣನಿಗೋ ದಾರಿ ತೋರದು. ಸುಬ್ಬಣ್ಣ "ನಾನು ನನ್ ಸಂಸಾರಾನ ಆಳೋಹಾಗೆ ನೀವೂನೂ ನಾಳೆ ರಾತ್ರಿ ಇಷ್ಟೊಹೊತ್ತಿಗೆ ನಿಂ ಸಂಸಾರಾನ ಆಳಿ ಅನುಭವಿಸೋ ಸೂತ್ರ ಹೇಳ್ಕೊಡ್ತೇನೆ ಸ್ವಾಮಿ" ಎಂಬುದಾಗಿ ಸೂಚಿಸಿ, ರಂಗಣ್ಣನು ತನ್ನ ಹೆಂಡತಿಯನ್ನೂ ಅತ್ತೆಯನ್ನೂ ಅವರ ಊರಿನಲ್ಲಿ ಬಿಟ್ಟು ಬರಬೇಕೆಂದು ಬೋಧಿಸುತ್ತಾನೆ. ಅವರು ಈ ಮಾತನ್ನು ಮರೆಯಾಗಿದ್ದು ಕೇಳಿ ಗಾಬರಿಗೊಳ್ಳುತ್ತಾರೆ. ಆಗ ರಂಗಣ್ಣನ ಹೆಂಡತಿಯೂ ಆಕೆಯ ತಾಯಿಯೂ "ನಮ್ಮ ಗಂಡಸ್ಗೆ ದುರ್ಬೋಧ್ನೆಮಾಡೋಕ್ಹೊರ್‌ಟಿರೋ ನಿಮ್ಹಾಳು ಗಂಡಸ್ನ ಕಟ್ಟಾಪ್ಡನ್ಲಲ್ಲಿ ಇಟ್ಕೋಬೇಕು . . . . ನೀವೇ" ಎಂದು ಆತನ ಮನೆಯವರಿಗೆ ಸೂಚಿಸಬೇಕೆಂದೂ, ಹಾಗೂ "ನೆರೆಹೊರ್ಕೆ ನೆರೆಹೊರ್ಕೆನೇವೇಯೇ; ಗಂಡ್ಸು ಗಂಡಸ್ಗೆ ಗಂಡಸ್ತನದ ಸೂಕ್ಷ್ಮ ಹೇಳ್ಕೊಡೋ ಹಾಗೆ ಹೆಂಗ್ಸೂನೂವೆ ಹೆಂಗಸ್ತನದ ಸೂಕ್ಷ್ಮಾನ ಅವರಿಬ್ಬರ್ಗೂ ಹೇಳ್ಕೊಟ್ಟು . . . . ನಮ್ಮ ನಮ್ಮ ನೆರೆಹೊರ್ಕೆ ಋಣಾನ ತೀರಿಸ್ಕೊಳ್ಳೋದು" ಎಂಬುದಾಗಿ ನಿಶ್ಚಯಮಾಡಿಕೊಳ್ಳುತ್ತಾರೆ. ಆದರೆ ಈ ಉಪಾಯ ಫಲಿಸುವುದಿಲ್ಲ. ಅವರ ಮಾತುಗಳಿಗೆ ನೆರೆಹೊರೆಯ ಹೆಂಗಸರು ಒಪ್ಪುವುದಿಲ್ಲ. ಸುಬ್ಬಣ್ಣನ ಸಲಹೆಯಂತೆ ರಂಗಣ್ಣನು ತನ್ನ ಹೆಂಡತಿ, ಅತ್ತೆ ಇವರನ್ನು ಊರಿಗೆ ಹೊರಡಿಸುತ್ತಾನೆ. ಜಟಕ ಗಾಡಿ ಬರುತ್ತದೆ. ಟ್ರಂಕು, ಹಾಸಿಗೆ ಇವುಗಳು ಮನೆಯ ಹೊರಗೆ ಜಗುಲಿಗೆ ಬರುತ್ತವೆ. ಆಗ ಅವರು ಉಪಾಯಕಾಣದೆ ಸುಬ್ಬಣ್ಣನಿಗೇ ಮೊರೆ ಹೋಗಬೇಕೆನ್ನುತ್ತಾರೆ. ಸಾವಿತ್ರಮ್ಮ "ನಿನ್ಗಂಡನಿಗೆ ದುರ್ಬೋಧನೆ ಮಾಡಿದ ಆ ಧಾಂಡಿಗನ್ನೇ

ಹಿಡಿದು ಕಾಲಿನ್ನೊದ್ವಿದ್ದೋ, ಕಾಲಿಗ್ಬಿದ್ದೋ, ಹೇಗಾದ್ರೂ....
ಶಾಂತಿ" ಮಾಡಿಸುವಂತೆ ಸೂಚಿಸುತ್ತಾಳೆ. ಆ ಪ್ರಕಾರ ಅವರಿಬ್ಬರೂ
ಬೇಡಿಕೊಳ್ಳುತ್ತಾರೆ. "ತಪ್ಪಿಲ್ಲದ್ಪ್ರಾಣಿ ಪರಮಾತ್ಮ ಒಬ್ನೆ....
ತಪ್ಪಿದೆ, ಆತ್ನಲ್ಲೂ ತಪ್ಪಿದೆ.... ತಪ್ಪಿರೋದು ಆಶ್ಚರ್ಯವಲ್ಲ....
ತಪ್ನ ಒಬ್ಬರಿಗೊಬ್ರು ಒಪ್ಕೊಂಡು .... ಒಟ್ನಲ್ಲಿ ಒಬ್ಬರಿಗೊಬ್ರು
ವಾಗಿ ಸಂಸಾರ ಜರುಗ್ಸೋಕೆ ದಾರೀನ ನೀವು ಆತನಿಗೆ ಈಕ್ಷಣ
ನಿರ್ವ್ಯಾಜಣತನದ ಚಿಹ್ನೆ .... ನಿಮ್ಮ ನೆರೆಹೊರ್ಕೆ ಧರ್ಮ" ಎಂಬುದಾಗಿ
ಹೇಳಿದ ಮಾತಿಗೆ ಸುಬ್ಬಣ್ಣ ಒಪ್ಪಿಕೊಳ್ಳುತ್ತಾನೆ. ಗಂಡನಿಗೆ
ರೀತಿಯಲ್ಲಿ ಆತನ ಸೇವೆ ಮಾಡುತ್ತಾ ಅನುಕೂಲಳಾಗಿ ಇನ್ನುಮುಂದೆ
ಸೀತಮ್ಮ ಒಪ್ಪಿ ಗಂಡನಲ್ಲಿ ಕ್ಷಮೆಬೇಡುವುದಾದರೆ ಎಲ್ಲವನ್ನೂ
"ಸಾಮಾನುಗಳ್ನ ಜಟ್ಕಾದಿಂದ ತೆಗ್ಸಿ ಒಳಗ್ಹಾಕಿ ಜಟ್ಕಾನ
ಜವಾಬ್ದಾರೀನ" ವಹಿಸುತ್ತಾನೆ; ಹಾಗೆ ಮಾಡುತ್ತಾನೆ. ಟ್ರಂಕು
ಒಳಕ್ಕೆ ಒಯ್ಯುತ್ತಿರುವ ಹೊತ್ತಿಗೆ ಆತನ ಅತ್ತೆ ಪಾರ್ವತಮ್ಮ
ಮುಸುರೆಯನ್ನು ಏಕೆ ತೆಗೆಯಲಿಲ್ಲವೆಂದು ಸುಬ್ಬಣ್ಣನನ್ನು ದೂಷಿಸುತ್ತಾ
ಜಾಡ್ಯಕ್ಕೆ ಔಷಧ ಕೊಡಲಿರುವ ಈ ವೈದ್ಯನ ಜಾಡ್ಯ ಈಗ ಬಯಲಿ
"ಯಜಮಾನ ತನ್ನ ಯಜಮಾನ್ಕೆ ಸಾಗಿಸಬೇಕಾದ್ರೆ ಮನೆ ಹೆಂಗಸ್ನ
ಹದ್ನಲ್ಲಿ ಇಡಬೇಕೂ ಅಂಬೊ ಸೂಕ್ಷ್ಮಾನ್ನ" ರಂಗಣ್ಣನಿಗೆ ಬೋಧಿಸು
ಸಾಧಿಸುವುದು ಈತನಿಗೆ ಸಾಧ್ಯವಿಲ್ಲವೆಂಬ ವಸ್ತುಸ್ಥಿತಿ ಈಗ
"ನಮ್ಮನೆ ಹೆಂಗಸ್ರು ನನ್ಗೆ .... ನನ್ಭಾಗಕ್ಕೆ ನನ್ನ ಸಂತೋಷ
ತಲೆಬಾಗಿ ನಡೀತಿರೋವಾಗ" ಎಂಬುದಾಗಿ ಈತನು ಹಿಂದೆ ಹೇಳಿದ್ದು
ಬಡಾಯಿ ಎಂದು ಈಗ ಗೊತ್ತಾಗುತ್ತದೆ. ಮುಸುರೆ ತೆಗೆದು
ಬೇಕು ಎಂದು ಅತ್ತೆ ಕೋಪದಿಂದ ಹೇಳುತ್ತಾಳೆ. ಗೋಮ ಹಚ್ಚಿ
ತಂದ ಹೊರತು ಮನೆಯಲ್ಲಿ ಪ್ರವೇಶವಿಲ್ಲವಾಗಿ ಈತನ ಪತ್ನಿ
ಸುಬ್ಬಣ್ಣ "ಅಲ್ಕಾಣೆ, ಇಷ್ಟೊತ್ನಲ್ಲಿ.... ಈ ಕುಕ್ಕೆ ತುಂಬ
ತರೋದು ನಾನು" ಎಂದು ದೈನ್ಯದಿಂದ ಬೇಡಿಕೊಳ್ಳುತ್ತಿದ್ದರೂ
ಆಜ್ಞೆಯನ್ನು ವಿಧಿಸಿ, ತಾಯಿಯೊಡನೆ ಹೊರಟುಹೋಗುತ್ತಾಳೆ.
ರಂಗಣ್ಣನ ಮನೆಯವರ ನಗು ಉಕ್ಕಿಬರುವುದು ಸ್ವಾಭಾವಿಕವೇ.
ಅವರು ರಂಗಣ್ಣನ ಒಡೆತನಕ್ಕೆ ಒಳಗಾಗಿ ಆತನ ಆಜ್ಞೆಯನ್ನು
ಪಾಲಿಸುತ್ತಾರೆ. "ನೆನ್ನೆ ತಕ್ಕಮಟ್ಗೆ ಬಂದೋಬಸ್ತಲ್ಲಿ ಇದ್ದ...
ಈ ಹೊತ್ತು ಯಾಕೆ ಹೀಗೆ ಪಲ್ಟಿಹಾಕ್ತು" ಎಂದು ರಂಗಣ್ಣನಿಗೆ ಆಶ್ಚ
"ನೆನ್ನೆ ಏನು! ಈ ಹೊತ್ತು ಏನು! ಲಾಗಾಯ್ತ್ನಿಂದ ಒಂದೇ ಹಣೆ
ಎಂದು ನಿಜಸ್ಥಿತಿಯನ್ನು ಒಪ್ಪಿಕೊಳ್ಳುತ್ತಾನೆ. ರಂಗಣ್ಣ ಕನಿಕರಗೊಂಡು
ನೆರೆಹೊರ್ಕೇನೇವೇಯೇ!" ಎಂದು ಸಮಾಧಾನ ಹೇಳುತ್ತಾನೆ.

ಕಥೆ ಸ್ವಾರಸ್ಯಕರವಾಗಿದೆ; ಘಟನೆ ಅಸ್ವಾಭಾವಿಕವೆಂದೂ ತೋರುವುದಿಲ್ಲ. ...ನರೆ ಶ್ರೀ॥ ಕೈಲಾಸಂ ಅವರ ಉಳಿದ ನಾಟಕಗಳಲ್ಲಿಯ ಪರಿಸ್ಫುಟ ಪಾತ್ರಗಳು ಇಲ್ಲಿ ...ಡುಬರುವುದಿಲ್ಲ. ಇಲ್ಲಿ ಕಂಡುಬರುವುದು:—ಎರಡು ಗುಂಪುಗಳು ಮಾತ್ರ. ಸ್ವಲ್ಪ ...ಷ್ಟು ಕಡಮೆ ಎರಡೂ ಗುಂಪುಗಳಲ್ಲಿಯ ಪಾತ್ರಗಳು ಒಂದನ್ನೊಂದು ಹೋಲುತ್ತಿವೆ. ...ಕ್ಸ್‌ಪಿಯರಿನ ತೀರ ಮೊದಲಿನ **ವೇದಾಂತ** ನಾಟಕಗಳಲ್ಲಿಯ ಪಾತ್ರಗಳ ಗುಂಪು ...ಲ್ಲಿ ಕಂಡುಬರುವ ಸಮತೂಕವನ್ನು ವಿಮರ್ಶಕರು ಪ್ರಶಂಸನೀಯವೆಂದು ಹೇಳಿಲ್ಲ.

ಒಂದೆರಡೇ ಮಾತುಗಳನ್ನು ಆಡುತ್ತಿದ್ದರೂ ಜಟಕಾ ಜಾಫರನು ತನ್ನ ವೈಶಿಷ್ಟ್ಯ...ನ್ನು ತೋರುತ್ತಾನೆ. ಶ್ರೀ॥ ಕೈಲಾಸಂ ಅವರ ವಾಡಿಕೆಯ ಹಾಸ್ಯದ ಬುದ್ಬುದ ತರಂಗ...ಲ್ಲಿ ಹೆಚ್ಚಾಗಿ ಕಾಣುವದಿಲ್ಲ. ಆದರೆ 'ವೈದ್ಯನ ಜಾಡ್ಯ' ಸುಂದರವಾಗಿ, ಪರಿಣಾಮ...ರಕವಾಗಿ ಚಿತ್ರಿಸಲ್ಪಟ್ಟಿದೆ. ಸುಬ್ಬಣ್ಣನ ಪಾತ್ರ ರಚನೆಯಲ್ಲಿ ಶ್ರೀ॥ ಕೈಲಾಸಂ ಅವರ ...ನಾಚಾತುರ್ಯ ತಲೆದೋರದೆ ಇಲ್ಲ.

ಎಸ್. ಎಸ್. ಮಾ.

---

೪. **ಅಂತರಗಂಗೆ.**—(ಬೇರೆ ಬೇರೆ ಲೇಖಕರ ಕಥೆಗಳ ಸಂಗ್ರಹ) ಕ್ರೌನ್ ಅ. ಪ. ...ಗಳು ೧೮೫; ಬೆಲೆ: ೮ ಆಣೆ; ಪ್ರಕಾಶಕರು: 'ಫೆಯರ್‌ಟಾಂಗ್' ಸಂಘ, ...ಗಳೂರು.

ಕೆಲಗಾಲದಿಂದಿತ್ತ ನಮ್ಮ ಕನ್ನಡ ಸಾಹಿತ್ಯದಲ್ಲಿಯೂ 'ಸಣ್ಣ ಕತೆ' ಎಂಬ ...ಙ್ಮಯ ಭಾಗವು ಬೆಳೆಯುತ್ತಿದೆಯಷ್ಟೆ. ಅಂಥ ೧೪ ಸಣ್ಣ ಕತೆಗಳು ಈ ಗ್ರಂಥದಲ್ಲಿ ...ಕವಾಗಿವೆ.

ಈ ಕತೆಗಳ ಪೈಕಿ 'ಉಪದೇಶ' ಮತ್ತು 'ಅಂತರಂಗ' ಎಂಬ ಈ ಎರಡು ...ಗಳು ಭಾಷಾಂತರವಡೆದುವುಗಳೆಂದು ಪರಿವಿಡಿಯಿಂದಲೆ ಗೊತ್ತಾಗುತ್ತದೆ. ಕತೆಗಳ ...ನಾಕ್ರಮದಿಂದಲೂ ಈ ಅಂಶವು ವ್ಯಕ್ತವಾಗುತ್ತದೆ. ನಮ್ಮೆಣಿಕೆಯಂತೆ ಈ ಕತೆಗಳ ...ಷಾಂತರಿತ ಶೈಲಿ ಪ್ರಸನ್ನವಾಗಿಲ್ಲ. 'ಅಂತರಂಗ'ದಲ್ಲಿ ಕೊಲೆಗಾರನ ಮಾನ...ಪನ್ಯಾಸವು ಎಲ್ಲೆ ಮೀರಿದೆ. ಬಾಲವೊಂದೇ ದೊಡ್ಡದಾದಂತಾಗಿದೆ. ಗ್ರಂಥದ ...ಯ ಕತೆಯಲ್ಲಿ ('ಬಂಗಾರದ ಬೆಟ್ಟ') ಕೊಂತಯ್ಯನು ಬಂಗಾರವನ್ನು ಸಂಪಾದಿಸಿದ ... ಅದ್ಭುತವೇನೋ ಆಗಿದೆ; ಆದರೆ ಆಕರ್ಷಕವಲ್ಲ. ೫ನೆಯ 'ಪ್ರತೀಕ್ಷೆ'ಯಲ್ಲಿ ...ಭಜಕನು ಭಿನ್ನ ಭಿನ್ನ ಭಾವನಾ ಚಿತ್ರಗಳನ್ನು ಪ್ರದರ್ಶಿಸಲು ಹವಣಿಸಿದ್ದಾನೆ. ...ಣಿಕೆಯದು ವಾಚಕರ ಮನಸ್ಸನ್ನು ಸೆಳೆವಷ್ಟು ಜಾಣ್ಮೆವಡೆದಿರುವುದೋ ಎಂಬುದು ...ನೇಹದಲ್ಲಿಯೇ ಇದೆ. ೮ನೆಯದು 'ನಿಂಗನ ಪ್ರೇಮ,' ಮತ್ತು ೧೩ನೆಯದು ...ೂಳಿಟ್ಟ ನೆನಪು'—ಇವುಗಳ ವಿಷಯವಾಗಿ ಇಲ್ಲಿ ಒಂದು ಪ್ರಾಸಂಗಿಕವಾದ ...ತನ್ನು ಸೂಚಿಸಬೇಕಾಗಿದೆ. ಕತೆ, ನಾಟಕಗಳೀಗ ಪ್ರಾಂತೀಯವಾದ ಗ್ರಾಮ್ಯ...ಷೆಗಳಲ್ಲಿ ತಲೆಯೆತ್ತುತ್ತಿವೆ. ಹೃದಯವನ್ನು ಮುಟ್ಟಿನೋಡುವಲ್ಲಿ, ಭಾಷೆಯ ...ಭಾವಿಕತೆಯನ್ನು ಅರಿತುಕೊಳ್ಳುವಲ್ಲಿ, ಈ ಭಾಷಾ ಸ್ವರೂಪವು ಹೆಚ್ಚಿನ ಸಹಾಯ ...ಗಬಹುದೆಂದೇ ನಮ್ಮೆಣಿಕೆ. ಆದರೆ ಟಿಪ್ಪಣಿಯೊಂದೂ ಇಲ್ಲವಾದರೆ ಈ ಜನಪದ

ಸಾಹಿತ್ಯವೆಂಬುದು, ಕನ್ನಡದ ಭಿನ್ನ ಭಿನ್ನ ಪ್ರಾಂತೀಯರಿಗೆ ಕನ್ನ ಅನ್ಯರ ಪೆಟ್ಟಿಗೆಯೊಳಗಾದ ಗಂಟು. ಈ ಎರಡು ಕತೆಗಳ ಸಾರವೂ ಗೊತ್ತಾಗಲಿಲ್ಲ ಎಂದು ಮಾತ್ರವೆ ಹೇಳಬೇಕಾಗಿದೆ. ೭ನೆಯದರ '...ತೆ ಕತೆ' ಎಂಬ ಹೆಸರು ನಮಗೊಪ್ಪಲಿಲ್ಲ. ಹೆಸರಿನಲ್ಲಿಯೂ ಒಂದು ಬೇಕಲ್ಲವೆ? 'ನೀರ್ಕನ್ನೆ' ಅಲ್ಲವೆ 'ಗಾಳಿವೆಣ್ಣು' ಅಥವಾ ಬೇರಾವು ಒಳದೋರುವ ಹೆಸರನ್ನಿಡಬಹುದಾಗಿತ್ತು. ಹಳ್ಳಿಯವರಲ್ಲಿ ಈಗಲೂ ಪಿಶಾಚ ಪೀಡೆಯು, ಗಾಳಿ ಸೋಂಕಿನ ಸಂಬುಗೆಯನ್ನು ಈ ಕತೆ ... ಎನ್ನಬೇಕು. ೯ನೆಯದು 'ವೀಣೆ': ಇದರಲ್ಲಿ ತೋರುವ ವೀಣೆ ಕನ್ನಡ ನಾಡಿನದು. ಅದು ತಮಿಳರ ಕೈಯನ್ನೊಂದಿ ಜಲಪ್ರಯಾ... ನಗರದಲ್ಲಿಯೂ ಕೀರ್ತಿಯ ಮೂರ್ತಿಯಾಗಿ ಹಿಂದಿರುಗಿದ ... ಹೆಗ್ಗಳಿಕೆಯ ಕತೆ ಹೌದು. ಆದರೆ ಕತೆಯು ಮೆಯ್ಯಲ್ಲಿ, ಸುಡಿಗಟ್ಟಿ... ಸಾಲದೆಂದೇ ನಮ್ಮೆಣಿಕೆ. ೧೦ನೆಯದು 'ಸಾಧನೆ': ... ಮಾಂತ್ರಿಕವಿದ್ಯಾಸಾಧನೆಯಲ್ಲಿ ಆಕರ್ಷಕತೆ ತೋರಿಬರುವುದಿ... 'ಬಯಲು ಆಲಯದೊಳಗೋ' ಎಂಬುದು: ಇದು ಕ್ರಿಸ್ತನಿ... ಬುದ್ಧ ಭಿಕ್ಷುವೊಬ್ಬನ ನಡತೆಯಮೇಲೆ ಒಂದಿಷ್ಟು ಮಸಿ... ಚಾರಿತ್ರಿಕವಾಗಿ ನೋಡಿದರೆ, ಇದು ಸರಿಯೋ ತಪ್ಪೋ ಎಂದು ... ವಂತಿಲ್ಲ. ಅಂತೂ ಸಂನ್ಯಾಸಿಗಳೆಂಬವರ ಮೇಲೆ ತನಗಿರುವ ತುರಿಕೆ... ಚೆನ್ನಾಗಿ ಒರಸಿಕೊಂಡಿದ್ದಾನೆ. ತುರಿಗಜ್ಜಿಯನ್ನೊರಸುವಲ್ಲಿ ... ಆಮೇಲೆ ಇಲ್ಲವೆಂಬುದನ್ನು ಮರೆಯಬಾರದು. ೬ನೆಯದು 'ಹುಚ್ಚ'... 'ಎಲುಬಿನ ಪ್ರೇಮ': 'ಹುಚ್ಚ' ಎಂಬುದು ಮನೋವೇಧಕ... ವಾಗಿದೆ; ಮತ್ತಿನದು ನನ್ನೆಣಿಕೆಯಲ್ಲಿ ಮಾಸಿಹೋದಂತಿದೆ. ... ಬಾಲ': ಇದು ಚಿಕ್ಕ ಕತೆಗಳೊಳಗೆ ಚಿಕ್ಕದಾದಂತೆ ಚೊಕ್ಕಟ... ಡೊಂಕು ಬಾಲದ ಚಿತ್ರವನ್ನು ಈಗ ಅಲ್ಲಲ್ಲಿ ನೋಡಬಹುದು. ... ಭಾಗದ ಚಿತ್ರವು ಕನ್ನಡಿವಡೆದು ಮನೋಹರವಾಗಿದೆ.

ಹೀಗೆ ೧೩ ಕತೆಗಳ 'ಸ್ಥಾಲೀಪುಲಾಕ'ವನ್ನು ಮುಟ್ಟಿ... ಇನ್ನು ೩ನೆಯದಾದ 'ನಾದ–ನಾಮ–ಕ್ರಿಯೆ' ಉಳಿದಿದೆ. ಈ ಕತೆ... ಇದು ಸಾಹಿತ್ಯದೇವಿಯೊಡನೆ ತಾದ್ರೂಪ್ಯವಡೆಯುವ ಅತ್ಯುತ್ತಮ... ನಮ್ಮೆಣಿಕೆ. ಫಿಟೀಲ್ ವಾದಕನಾಗಿದ್ದ ಶ್ರೀನಿವಾಸಯ್ಯನ ಕೀರ್ತಿಗೆ... ನಾಮವನ್ನಿತ್ತು, ಕ್ರಿಯಾರೂಪದಲ್ಲಿ ಕತೆ ಅದನ್ನು ನೆಲೆಗೊಳಿಸಿದೆ ... ಕಲ್ಪಿತವಾಗಿರಲೂ ಬಹುದು. ಅಲ್ಲದೆ ಕಥಾಂಗಗಳಲ್ಲಿ ಕೆಲಕೆಲವು ಗಳಾಗಿರಲೂ ಬಹುದು. ಕಥಾರಚನಾ ಪದ್ಧತಿ ಲೇಖಕನ ಕೈ... ಭಾವಿಕನಾದ ಶ್ರೀನಿವಾಸಯ್ಯನ ಹಿಂದಿನ ಅವಸ್ಥೆಯನ್ನು, ಅಂದಿನ... ಲೇಖಕನು ವರ್ಣಿಸಿದನು; ತುಂಬಿದ ಸಭೆಯಲ್ಲಿ ಅವನ ...

ವೇರಿಸಿದನು ; ಹಿಂಜರಿದರೂ ಒತ್ತಾಯಿಸಿ 'ನಾದನಾಮಕ್ರಿಯೆ'ಯನ್ನು ಬಾರಿಸು ...ತೆ ಮಾಡಿದನು. ಮತ್ತೆ ಆಗುವುದಾಗಿಹೋದುದನ್ನು ಕಂಡು ಲೇಖಕನು ಅತ್ತು ...ಮ್ಮನ್ನೂ ಅಳಿಸಿದನು. ಕಥಾಗೋಳದಂತರದಲ್ಲಿ ಇದೊಂದು 'ಗಂಗೆ' ಹರಿಯು ...ವುದರಿಂದಲ್ಲವೇ ಇದು 'ಅಂತರಗಂಗೆ'?

ಮು. ತಿ.

---

೫. 'ವಾಲಿ'.—ಲೇಖಕರು: ಪಂಡಿತ ಕೆ. ಶ್ರೀಕಂಠಶಾಸ್ತ್ರಿಗಳು; ಕ್ರೌನ್ ೧. ಪ. ...ಗಳು ೯೮; ಬೆಲೆ: ೮ ಆಣೆ.

ಮೈಸೂರು ಮಹಾರಾಜರ ಹೈಸ್ಕೂಲಿನ ಕನ್ನಡ ಪಂಡಿತರಾದ ಶ್ರೀ॥ ಕೆ. ...ಕಂಠಶಾಸ್ತ್ರಿಗಳು ಬರೆದ ಪದ್ಯ ಕಾವ್ಯವಿದು. ಭಾಮಿನೀ ಷಟ್ಪದಿಯಲ್ಲಿ ರಚಿತವಾದ, ...ಲಿಯ ಸಾದ್ಯಂತ ಕಥೆಯಿದು.

ವಾಲಿಯ 'ಸುಂದರ ಚರಿತ್ರೆಯನ್ನು ಚಿತ್ರಿಸಬೇಕೆಂಬ' ತಮ್ಮ ಸದುದ್ದೇಶ ...ನ್ನು ಶ್ರೀ॥ ಶಾಸ್ತ್ರಿಗಳು ಪೂರ್ತಿಗೊಳಿಸಿದ್ದಾರೆ. ಆದರೆ ಚರಿತ್ರೆಯಂತೆ ಚಿತ್ರವೂ ...ದರವಾಗಿದೆಯೇ ಇಲ್ಲವೇ ಎಂಬುದನ್ನು ವಾಚಕರೂ ವಿಮರ್ಶಕರೂ ನಿರ್ಧರಿಸ ...ಕು. ನಾವಿಲ್ಲಿ ಆ ನಿರ್ಧಾರದ ಏಕದೇಶವನ್ನಾದರೂ ಪೂರ್ತಿಗೊಳಿಸಬೇಕಾಗಿದೆ. ...ದಲು ಕಥಾವಸ್ತುವನ್ನು ಸಂಗ್ರಹವಾಗಿ ವಿವರಿಸುವ:

"ಬ್ರಹ್ಮನ ಆನಂದಬಾಷ್ಪದಿಂದ ವಾನರ ಭಲ್ಲನೊಂದುದಯಿಸಿತು. ಕಪಿಯ ಚಪಲತೆ ...ವಾಗಿ ತಂದೆಯ ಎಚ್ಚರಿಕೆಯನ್ನು ಮರೆತು ಕಾಡುಗುಡ್ಡಗಳತ್ತ ಸರಿಯಿತು. ಮೇರು ...ತಪ್ರಾಂತದ ಗಿರಿಜಾವಿಹಾರದ ಕೊಳದಲ್ಲಿ ಧುಮುಕಿ ಹೆಣ್ಣಾಯಿತು. ಅದರ ...ದರ್ಯಕ್ಕೆ ಸೋತ ಇಂದ್ರನಿಂದ ವಾಲಿ, ಸೂರ್ಯನಿಂದ ಸುಗ್ರೀವ ಎಂಬ ಕಪಿಬಾಲಕ ...ಸಿದರು. ಹೆಂಗಸುತನವನ್ನುಳಿದು ಮಕ್ಕಳೊಡನೆ ಬಳಿಸಾರಿದ ತನ್ನ ಪುತ್ರಭಲ್ಲನಲ್ಲಿ ...ನು ಕರುಣಿಸಿದನು.' ಆ ಕಪಿಬಾಲಕರಿಗೆ ಕಿಷ್ಕಿಂಧಾರಾಜ್ಯವನ್ನೊದಗಿಸಿದನು. ಬಲ್ಲಿದ ...ದ್ದ ವಾಲಿಯು ತಮ್ಮನೊಡನೆ ಕಪಿಕುಲಾಧೀಶನಾಗಿ ನಾಡನ್ನಾಳತೊಡಗಿದನು. ...ಳಗೆ ನುಗ್ಗಿ ಪ್ರಜಾಪೀಡಕನಾದ ಗೋಲಭನೆಂಬ ಗಂಧರ್ವನ ಹೆಮ್ಮೆಯನ್ನು ಮುರಿ... ಆಮೇಲೆ ಸುಷೇಣನ ಮಗಳಾದ ತಾರೆಯನ್ನು ಕೈವಿಡಿದನು. ಅವರಿಗೆ ಅಂಗದ ...ಸಿದನು. ವಾಲಿ, ತಮ್ಮ ಸುಗ್ರೀವನಿಗೆ ರುಮೆಯನ್ನು ಮದುವೆಮಾಡಿಸಿದನು. ಆಮೇಲೆ ...ಣನ ದರ್ಪವನ್ನಡಗಿಸಿ, ದುಂದುಭಿ ಮಾಯಾವಿಗಳೆಂಬ ರಾಕ್ಷಸರನ್ನು ಸಂಹರಿಸಿದನು. ...ತಿಕರದಲ್ಲಿ ವಾಲಿಸುಗ್ರೀವರಿಗೆ ಮನಸ್ತಾಪವೊದಗಿತು. ಊರನ್ನುಳಿದ ಸುಗ್ರೀವನು ...ಂಗಾಶ್ರಮದ ಋಷ್ಯಮೂಕದಲ್ಲಿ ತನ್ನವರೊಡನೆ ನೆಲಸಿದನು. ಸೀತಾಪಹಾರದಿಂದ ...ಕವಡೆದು ತೊಳಲುವ ರಾಮಲಕ್ಷ್ಮಣರ ಸ್ನೇಹವನ್ನೊಂದಿದ ಸುಗ್ರೀವನು ವಾಲಿ ...ಡನೆ ಹೋರಾಡಿದನು. ಮರೆಯಲ್ಲಿದ್ದ ರಾಮನೇಟಿನಿಂದ ವಾಲಿ ವಶವಳಿದುಬಿದ್ದನು. ...ನನ್ನು ತೆಗಳಿದ ವಾಲಿ ಕಡೆಗೆ ಮನವರಿತು, ತಮ್ಮನಿಗೆ ಬುದ್ಧಿ ಹೇಳಿ, ಮೃತನಾದನು. ...ಗ್ರೀವನು ರಾಜ್ಯಾಭಿಷಿಕ್ತನಾದನು."

ಇದು ಕಥಾಸಾರ. ಶ್ರೀ॥ ಶಾಸ್ತ್ರಿಗಳವರು ತಮ್ಮ ಮುನ್ನುಡಿಯಲ್ಲಿ ...ಥೆಯೇನೋ ಹಳೆಯದೇ, ಆದರೂ ಕಥಾವಸ್ತು, ಸನ್ನಿವೇಶ ಇವುಗಳ ವಿನ್ಯಾಸ ...ದಲ್ಲಿ ನೂತನ ಮಾರ್ಗವನ್ನು ಅನುಸರಿಸಿದೆ' ಎನ್ನುತ್ತಾರೆ. ನೂತನ

ಮಾರ್ಗವೆನ್ನಬೇಕಾದರೆ ಆ ಸನ್ನಿವೇಶಾದಿಗಳು ಈಗಳೂ ಸಂಭವನೀಯ... ಆಕರ್ಷಕಗಳಾಗಿ ತೋರಬೇಕು. ಅಲ್ಲವಾದರೆ, ಇದ್ದ ಪುರಾಣಮಾರ್ಗ ... ತೊಲಗಿ ಮತ್ತೊಂದು ಪುರಾಣಮಾರ್ಗವಡಗಿಕೊಂಡಿದೆ, ಎಂದು ಮಾತ್ರವೇ ... ಬಹುದು. ವಾನರಭಲ್ಲನುದಿಸಿದ ರೀತಿ, ಅವನು ಹೆಣ್ಣಾಗಿ ಗಂಡಾದ ಪದ್ಧತಿ, ... ಮಕ್ಕಳುದಿಸಿದ ಮಾಟ, ಇವುಗಳಲ್ಲೆಲ್ಲ ಆ ಹಿಂದಿನ ಪುರಾಣ ಪದ್ಧತಿಯೇ ತೋರುತ್ತ... ವಾಲಿಯನ್ನು ರಾಮನು ಮರೆಯಲ್ಲಿದ್ದು ಹೊಡೆದುದು ತಪ್ಪೆಂದು ಶ್ರೀ॥ ... ಗಳವರು ವಾಲಿ ರಾಮರ ಸಂಭಾಷಣೆಯಲ್ಲಿ ಸಾಧಿಸಿದುದೊಂದು ನೂತನ... ವಾಗಿ ತೋರುತ್ತಿದೆ. ವಾಲಿ ರಾಮನನ್ನು ಕುರಿತೆನ್ನುತ್ತಾನೆ:—

> 'ಅಗಲದಿರು ಸೀತೆಯನು, ಯುವಕರ। ಬಗೆಯುಬಲ್ಲವ ನಾನು, ಧರ್ಮ... ಬಗೆಯು ದೂರಾಗುವುದು ವಿರಹಿಗೆ, ಮೇರೆದಪ್ಪುವನು ॥ ತೆಗಳು ತಪ್ಪದು ... ದಲಿ, ಜನ। ರಗಲುವರು ದೂರಕ್ಕೆಯೆಂದೆನೆ। ಬಗೆಗರಸಿ (ಗಿ?) ಗುಣ... ಕಣ್ಣೀರ್ಗರೆದನಾ ರಾಮು ॥' (ಪ. ೬೧, ಪಂಚಮ ತರಂ...

ಇಲ್ಲಿಯ 'ಧರ್ಮದ ಬಗೆಯು ದೂರಾಗುವುದು ವಿರಹಿಗೆ, ಮೇರೆದಪ್ಪು... ....ದೂರಕ್ಕೆ' ಎಂಬುದು ವಾಲಿಯ ಅನುಭವದ ಮಾತು ಎನ್ನುವ. ... ಅದನ್ನಾಲಿಸಿ ರಂಗಮಧ್ಯದಲ್ಲಿ ರಾಮನು 'ಕಣ್ಣೀರ್ಗರೆದನು' ಎಂಬುದು ... ಸ್ವಭಾವಕ್ಕೆ ಸರಿಯಾಗುವುದೆ? ಇನ್ನು, ಸೋದರನ ಸತಿಗಳುಪಿದುದು ದೋ... ಮೃಗವನ್ನು ಮರೆಯಲ್ಲಿದ್ದು ಹೊಡೆದುದು ಅದೊಂದು ಧರ್ಮ—ಎಂದು ಮೊದ... ವಾದದೆಡೆಯಲ್ಲಿ ಬರುವ ಈ ಮಾತುಗಳೆಲ್ಲ ಸಾಮಾನ್ಯವಾಗಿರುವುವಲ್ಲದೆ ... ಯುಕ್ತಿಯುಕ್ತವಾದುವಲ್ಲ. ಅಂತೂ, ವಾಲ್ಮೀಕಿ ರಾಮಾಯಣದಲ್ಲಿಯೂ ತ... ರಾಮಾಯಣದಲ್ಲಿಯೂ ತೋರುವಂತೆ, ಹೃದಯದ್ರಾವಕವಾದ ವಿಷಯಗಳು ಇ... ವಾಲಿ ರಾಮರ ವಾದದಲ್ಲಿ ತೋರುವುದಿಲ್ಲ. ಇನ್ನು ಗೋಲಭ ರಾವಣ ದು... ಮಾಯಾವಿಗಳ ಹೋರಾಟದ ಕಥಾಂಗಗಳು: ಏನಾದರೊಂದು ಸಂದರ್ಭ... ಸಕಾರಣವಾಗಿ ತಂದೊಡ್ಡಿ ಇವುಗಳನ್ನು ಪ್ರಮುಖ ಕತೆಗೆ ಸಂಧಿಸಿ ಸಂ... ಕಾಣದಂತೆ ಮಾಡಿದ್ದರೆ ಸನ್ನಿವೇಶವು ಹೊಸದಾಗುತ್ತಿತ್ತು. ರಾಮಾಯಣ... ಸುಗ್ರೀವನ ಕಥೆ ರಾಮನದರಲ್ಲಿ ಸಂಗಮವಾಗಿ ರಾಮಾಯಣ ಕಥೆಯ... ಹೊನಲಾಗಿ ಹರಿಯುತ್ತದೆ. ಇಲ್ಲಿ ಹಾಗಾಗಿಲ್ಲ. ಗೋಲಭನ ಕಥೆಯನ್ನು ... ಬಿಟ್ಟರೆ, ಪ್ರಕೃತ ಕಥೆಗೆ ವ್ಯಂಗ್ಯತೆಯೇ ಇಲ್ಲ. ಇದು ಸನ್ನಿವೇಶದ ನ್ಯೂನತೆಯೆ... ನಮ್ಮೆಣಿಕೆ.

ಈ ಕಾವ್ಯದ ರಚನೆ ಹಳೆಯ ಮಾರ್ಗಕ್ಕೇ ಸೇರಿದುದೆಂಬುದನ್ನು ಶ್ರೀ॥ ಶಾಸ್ತ್ರಿ... ಅಲ್ಲಗಳೆಯಲಾರರು. ಹಾಗಿರುವಲ್ಲಿ, ಕೆಲವೆಡೆ ಪ್ರಾಸಾಕ್ಷರನ್ಯಾಸದಲ್ಲಿ ಅ... ವೆಸಗಿದುದೇಕೋ ಗೊತ್ತಾಗಲಿಲ್ಲ:

೧. ಬಣ್ಣ ಬಣ್ಣದ ಬಿರಿದ ಪೂಗಳು
ಕಣ್ಗೆ ಹಬ್ಬವ ಮಾಡೆ .... (ತರಂ. ೧, ಪ. ೧೮)

೨. ಭೀತಿಯಿಂ ಪರಿಪರಿಸಿ ತಪದೊಳ್
ಶಾಂತಿಯಿಂ ನಿಲ್ವಂತೆ .... (ತರಂ. ೩, ಪ. ೫)

೩. ವಾಲಿಯೇ ದಿಟವೆಂದು ತೋರ್ಪನು
ಸೀಳ್ವೆನೆಂದವನೆಯ್ದೆ .... (ತರಂ. ೪, ಪ. ೩೦)

ಪ್ರಾಸಾಕ್ಷರದ ವ್ಯತ್ಯಸ್ತತೆಯನ್ನು ಅಷ್ಟೊಂದು ಗಣಿಸುವ ಪಂಗಡದಲ್ಲಿ ಸೇರಿದವರು ನಾವಲ್ಲ. ಆದರೆ, ಆ ಹಳೆಯ ದಾರಿಗನುವಾಗಿ ನಡೆದು ಎಡಹುವುದೇಕೆ? 'ಬಣ್ಣ .... । ಕಣ್ಣ ಹಬ್ಬವ,' ಇತ್ಯಾದಿಯಾಗಿ ಬದಲಿಸಿಕೊಳ್ಳಲಿಕ್ಕೆ ಎಡೆ ಇತ್ತಲ್ಲವೇ?

ತೃತೀಯ ತರಂಗದಲ್ಲಿ (ಪು. ೪೧, ಪ. ೯) ಶರತ್ಕಾಲದ ವರ್ಣನೆ ಇದೆ:— "ಮಳೆಯ ಜಗಿಯೊಡನಗಲೆ ಬೇಸರ, ಬಿಳಿಯ ಮುಗಿಲೊಡನೇರೆ ಹಾಸವು, ನಳಿನಿಯೊಡ ಬಿಚ್ಚುತ್ತೆ ಕಂಗಳು ನೋಡೆ ದೂರಗಳ ॥" ಮುಂತಾಗಿ ಆ ಕಾಲದ 'ನೆಲದ ಸಿರಿ'ಯ ವರ್ಣನೆ. ಇದರಿಂದ ದೂರದೇಶದ ಗುರಿಯನ್ನೀಕ್ಷಿಸುವ ಕಣ್ಣುಗಳಂತೆ ಆ ಕಾಲದಲ್ಲಿ ಕಮಲಗಳು ಅತಿನಿರ್ಮಲವಾಗುತ್ತಿವೆ ಎಂದು ವರ್ಣಿಸಿದಂತಾಯಿತು. ಈ ವರ್ಣನೆ ವಸಂತಕ್ಕೊಪ್ಪುವುದಲ್ಲದೆ ಶರದಕ್ಕೆ ಸಲ್ಲುವುದೇ?

ಮಕ್ಕಳೊಡನೆ ತಿರುಗಿಬಂದ ಭಲ್ಲನನ್ನೀಕ್ಷಿಸಿ ಬ್ರಹ್ಮನು ಸರಸ್ವತಿಯೊಡನೆ 'ನೋಡೌ ವರಸುಪೌತ್ರರ ....' ಎನ್ನುತ್ತಾನೆ. ನಮ್ಮ ವೈಯಕ್ತಿಕ ಭಾವನೆಯಂತೆ, ಹೆಂಡತಿಯನ್ನುದ್ದೇಶಿಸಿ ಗಂಡನು ಸಂಬೋಧಿಸುವಲ್ಲಿ "ನೋಡೌ–ಕೇಳೌ–ಆಲಿಸೌ' ಇತ್ಯಾದಿಯಾಗಿ ಸ್ತ್ರೀ ವಾಚಕವಾದ 'ಔ' ಪ್ರತ್ಯಯದೊಡಗೂಡಿದ ಕ್ರಿಯಾಪದವನ್ನುಪಯೋಗಿಸುವುದು ಸರಿಯಲ್ಲವೆಂದು ತೋರುತ್ತಿದೆ. 'ಔ' ಎಂಬುದು 'ಅವ್ವ' ಎಂಬುದರಿಂದೊಗೆದು ಪೂಜ್ಯಾರ್ಥಕ ಸ್ತ್ರೀಯರಲ್ಲಿ ಮಾತ್ರವೇ ಪ್ರಯೋಗಿಸಲರ್ಹವಾದುದೆಂದು ನಮ್ಮೆಣಿಕೆ.

ಈ ಕಾವ್ಯದಲ್ಲಿ ಬರಿಯ ಪದರಚನೆಯನ್ನು ನೋಡಿದರೂ ಅದು ಉಳಿಯ ಕೆಲಸದಲ್ಲೆ ನಿಂತಂತೆ ತೋರುವುದಲ್ಲದೆ, ಕೀಸುಳಿಯ ನುಣುಪಿನ ಕೆಲಸವನ್ನೊಂದಿದಂತೆ ತೋರುವುದಿಲ್ಲವೆಂದೇ ನಮ್ಮ ಭಾವನೆ. ಆದರೂ ಇಂಥ ಖಂಡ ಕಾವ್ಯಗಳು ಕನ್ನಡಕ್ಕೆ ಬೇಕಾಗಿವೆ ಎಂಬಲ್ಲಿ ಸಂದೇಹವಿಲ್ಲ. ಶ್ರೀ॥ ಶಾಸ್ತ್ರಿಗಳು ಎದೆಗೆಡದೆ ಈ ಸತ್ಕಾರ್ಯದಲ್ಲಿ ನಿರತರಾಗಬೇಕು. ಬಗೆಗೈಗಳೊಂದಾಗಿ ಗುರಿವಿಡಿದು ಕೃತಾರ್ಥತೆವಡೆಯಲಿಕ್ಕೆ ಶ್ರೀ॥ ಶಾಸ್ತ್ರಿಗಳಿಗೆ ಈ ಕೃತಿ ಪ್ರಸ್ತಾವನೆಯಾಗಲಿ.

ಮು. ತಿ.

---

**೬. ಮಿಲನ (ಪ್ರೇಮ ಕಾವ್ಯ).**—ಅನುವಾದಕರು: ಶ್ರೀ॥ ಸಿಂಪಿ ಲಿಂಗಣ್ಣನವರು; ಪ್ರಕಾಶಕರು: ಅರವಿಂದ ಗ್ರಂಥಮಾಲೆ, ಹಲಸಂಗಿ; ಕ್ರೌನ್ ಅ. ಪ. ಪುಟಗಳು ೧೪೪ + ೯೨; ಬೆಲೆ: ೧೨ ಆಣೆಗಳು.

ಈ ಗ್ರಂಥವು ಅರವಿಂದ ಗ್ರಂಥಮಾಲೆಯ ೩ನೆಯ ಕಮಲ. ಇದರ ಮೂಲ ಕವಿಗಳು ಸುಕೀರ್ತಿತರಾದ ಆಧುನಿಕ ಹಿಂದೀ ಸಾಹಿತ್ಯದಲ್ಲಿ ಹೆಸರುವಡೆದ ಶ್ರೀ ರಾಮ

ನರೇಶ ತ್ರಿಪಾಠಿಗಳು. ಮುದ್ರಣವು ಮನೋಹರವಾಗಿದೆ. ಸಂಪಾದಕರ ಮ
ಪ್ರಕಾಶಕರ ಮುನ್ನುಡಿಯೊಂದೂ, ವಿಲಸ ಕಥೆಯ ಸಂಗ್ರಹವಾದ ಗದ್ಯಾನು
ವೊಂದೂ ಆದಿಯಲ್ಲಿವೆ.

ವಿಮರ್ಶೆಗೆ ವೊದಲು ಕಾವ್ಯ ವಸ್ತುಸಂಗ್ರಹವನ್ನು ನಿರೀಕ್ಷಿಸುವುದು ತಕ್ಕ
ಅದು ಹೀಗಿದೆ:—

"ಕೇರಳದವರ ಪುಂಡಾಟಿಕೆಗೊಳಗಾದ ಬನವಾಸಿ ಅಸ್ತವ್ಯಸ್ತವಾಗಿತ್ತು. ಧಾ
ನಾದ ಅರಸನು ಪ್ರಜಾ ಪೀಡೆಗೆ ಮರುಗಿದನು. ತನ್ನ ಒಬ್ಬನೇ ಮಗನನ್ನು ಶರಣ
ವಶಕ್ಕೊಪ್ಪಿಸಿ ವೈರಾಗ್ಯವಡೆದನು. ಆ ಶರಣನ ಮಗಳಾದ ವಿಜಯೆಗೂ ಆ ರಾಜಕುಮಾ
ಅಲೌಕಿಕ ಪ್ರೇಮವು ಸಂಘಟಿಸಿತು. ಶತ್ರುಗಳಿಂದ ರಾಜ್ಯವನ್ನೆತ್ತುವುದೇ ಅವರ ಪ್ರ
ವಸ್ತುವಿನ ವಿಚಾರ. ಒಂದಿರುಳು ಇಬ್ಬರೂ ಹೊಳೆಯನ್ನು ದಾಟುವಲ್ಲಿ ನಾವೆ ಮುಳು
ಪ್ರಿಯನ ಶವವನ್ನಾದರೂ ಕಂಡುಹಿಡಿಯುವೆನೆಂದು ಹವಣಿಸುವ ಬಾಲೆಯನ್ನು ಒಬ್ಬ
ಕಂಡು ಸಮಾಧಾನಗೊಳಿಸಿ ತನ್ನ ಗುಡಿಸಲಿನಲ್ಲಿರಿಸಿದನು; ಮುಳುಗಿದವನನ್ನರಸಲಿಕ್ಕೆ
ತೆರಳಿದನು. ಬಾಲೆ ಬೇಸತ್ತು ಎಲ್ಲಿಯೋ ಹೋಗಿಬಿಟ್ಟಳು. ಹೊಳೆಯಲ್ಲಿ ತೇಲು
ಆ ವ್ಯಕ್ತಿಯನ್ನು ದಡಕ್ಕೊಯ್ದು ಮುನಿ ಉಪಚಾರವೆಸಗಿದನು. ಇತ್ತ ವಿಜಯೆ ತಿರು
ಕಷ್ಟಪಡುವ ನಾಡಿನವರ ಅವಸ್ಥೆಯನ್ನೆಲ್ಲ ಕಂಡಳು. ಅವರನ್ನು ಬೋಧಿಸಿ ಸ್ವಾತಂ
ಜ್ಯೋತಿಯನ್ನು ಬೀರುತ್ತಾ ತನ್ನ ಮರುಕವನ್ನೆಲ್ಲ ಮರೆತುಬಿಟ್ಟಳು. ಜನರಲ್ಲಿ ಜಾ
ಯಾಗುವುದನ್ನರಿತು ಕೇರಳದವರು ಮತ್ತೆ ನಾಡನ್ನು ಮುತ್ತಿದರು. ಜಾರದ
ವನ್ನೊದಗಿಸತೊಡಗಿದರು. ಹುರುಪೆದ್ದ ನಾಡವರೊಡನೆ ಆ ರಾಜಕುಮಾರನು
ನ್ನೆದುರಿಸಿದನು. ಆ ಸುದ್ದಿಯನ್ನು ಕೇಳಿದ ವಿಜಯೆ ಭೈರವಿಯಂತೆ ಜನಗಣದೊಡಗೂಡಿ ಕ
ವನ್ನೊಂದಿದಳು. ರಾಜಕುಮಾರನನ್ನು ಹಿಂಬಾಲಿಸಿ ರಣಾಂಗಣಕ್ಕಿಳಿದ ಆ ಮುನಿ ವೈ
ಆಘಾತದಿಂದ ಬಿದ್ದನು. ವಿಜಯೆ ಹಗೆಗಳನ್ನು ತತ್ತರದರಿದಳು. ಅಳಿದುಳಿದವರೋಡಿ
ಪ್ರಿಯ ದಂಪತಿಗಳೊಡಗೂಡಿದುದು ಆನಂದದ ಮೇಲಿನಾನಂದ. ಬಸವಳಿದ ಮುನಿಯೇ
ತಂದೆ—ಮಾವಯ್ಯ ಎಂಬುದನ್ನು ಅವರರಿತು ಮರುಕದಮೇಲೆ ಮರುಕ. ವೃದ್ಧ ರಾಜ
ಚಿರಂಜೀವಿಗಳಿಗೆ ಬುದ್ಧಿವಾದಗಳನ್ನೊರೆದು ಪರಲೋಕಗತನಾದನು. ವೀರ-ದಂಪತಿ
ಕನ್ನಡ ನಾಡನ್ನು ಸುಖವಾಗಿ ಆಳುತ್ತಿದ್ದರು."

ಮೂಲದಲ್ಲಿ ಕಥಾವಸ್ತು ಬನವಾಸಿಗಾಗಲಿ, ನಮ್ಮ ಯಾವುದೊಂದು ವಿ
ದೇಶಕ್ಕಾಗಲಿ ಸಂಬಂಧಿಸಿದುದಲ್ಲ. ಅದು ಆಧುನಿಕವಾದೊಂದು ವಿಶಿಷ್ಟ
ರಾಜಕೀಯ ಭಾವನಾ ಪ್ರವಾಹದಲ್ಲಿ ತೇಲಿಬಂದ ವಸ್ತುವೆಂದು ತೋರುತ್ತ
ಭಾಷಾಂತರಕಾರರು ಅದನ್ನು ಬನವಾಸಿಗೆ ಕಟ್ಟಿಕೊಂಡುದರಲ್ಲಿ ನಮ್ಮ ಆಕ್ಷೇಪ
ಆದರೆ, ದೇಶಪೀಡಾಕಾರಕತ್ವದ ಹೊರೆಯನ್ನು ನೆರೆಯ ಬಂಧುವಾದ ಕೇರಳ
ಹೊರಿಸಿದುದನ್ನೀಕ್ಷಿಸಿ ಸಮಗೊಂದಿಷ್ಟು ಬೇಸರವೇ ಆಯಿತು. ಚಾರಿತ್ರಿಕಾ
ವೇನೂ ಇಲ್ಲದೆ, ನೆರೆನಾಡಿಸಲ್ಲಪರಾಧವನ್ನು ಹೊರಿಸಿ, ಕಾವ್ಯ ವಸ್ತುವನ್ನು ಕಲ್ಪಿ
ವುದಾದರೂ ಚೆನ್ನಲ್ಲ. ಶ್ರೀ॥ ದೇವುಡುಗಳವರ 'ಮಯೂರ'ವೆಂಬ ಕಾದಂಬರಿ
'ನಾಡಿನ ಬಿಡುಗಡೆಗಾಗಿ....ಮುನಿಯೊಬ್ಬನ ಬಳಿಯಲ್ಲಿ' ಮಯೂರಶರ್ಮ
'ಬೋಧಿಸಲ್ಪಡುತ್ತಿದ್ದ'ಂತೆ ತೋರುವುದೆಂದೂ, ಅದರಾಧಾರದಮೇಲೆ ವಸ್ತು
ನ್ನೊಂದಿಷ್ಟು ಬದಲಾಯಿಸಿದುದಕ್ಕೆ 'ನಾಡುಗರು ತಪ್ಪುಹೊರಿಸಲಾರರೆಂದೂ ಭಾ
ಸಿದ್ದೇವೆ' ಎಂದೂ ಸಂಪಾದಕರು ಮುನ್ನುಡಿಯಲ್ಲಿ ಸೂಚಿಸಿದುದು ನ್ಯಾಯವೇ ಆ

'ಪ್ರೇಮ ಕಾವ್ಯ' ಎಂದೊಡನೆ ಹಲವರೆದೆಯಲ್ಲಿ ಅದೊಂದು ತರದ ಅನಾಗರಿಕ ಚಿತ್ರವು ಹೊಳೆವುದು ಸ್ವಾಭಾವಿಕವೇ. ಆದರೆ ಇದು ಅಂಥದಲ್ಲ. ಶುದ್ಧ ಶೃಂಗಾರದ ತಪಸ್ಸಿದು. ದೇಶೋದ್ಧಾರವೇ ಈ ತಪಸ್ಸಮಾಧಿಯ ಫಲ. ಹಿಂದೀ ಕಾವ್ಯವದು ಅತ್ಯುತ್ತಮ ಕೋಟಿಯನ್ನೊಂದಿದೆಯೆಂದು, ಆಧುನಿಕ ಹಿಂದೀ ಸಾಹಿತ್ಯ ಪ್ರೇಮಿಗಳು ಹೇಳುತ್ತಾರೆ. 'ರಸಿಕರು ಅನುವಾದದೊಳಗಿನ ನ್ಯೂನತೆಗಳ ಜಾಳಿಗೆಯಲ್ಲಿ ತೊಡಕಿಕೊಳ್ಳುವ ಉಸಾಬರಿಗೆ ಹೋಗದೆ ಮೂಲಕವಿಯ ಉದ್ದೇಶವಾರಿಧಿಯಲ್ಲಿ ಮನದಣಿ ಓಲಾಡುವರೆಂದು ನಂಬಿದ್ದೇವೆ' ಎಂದು ಸಂಪಾದಕರೇನೋ ಸೂಚಿಸಿದ್ದಾರೆ. ಮಾತ್ರವಲ್ಲ; ಮೂಲಾನುವಾದಗಳೆಂದರೆ, 'ಅವೆರಡೂ ಸೂರ್ಯ ಚಂದ್ರರಿದ್ದಂತೆ, ಒಂದರ ಪ್ರತಾಪವು ಇನ್ನೊಂದರಲ್ಲಿ ಕೇವಲ ಪ್ರಕಾಶ ಮಾತ್ರವಾಗಿ ತೋರುವುದು' ಎಂದೂ ಹೇಳುತ್ತಾರೆ. ಅದೇನೋ ಸರಿಯೆ. ಆದರೆ ಆ ಪ್ರಕಾಶವೂ ಮಾಸಿ ಹೋದಂತಾದರೆ ಅದನ್ನು ದೋಷವೆಂದೇ ಹೇಳದೆ ನಿವೃತ್ತಿ ಇಲ್ಲ.

ನಿಟ್ಟುಮುಗಿಲುಗಳೆಲ್ಲ ನಟ್ಟಿರುಳ ಕಾವಳದ
  ಶಾಂತ ನಿಶ್ಶಬ್ದದಲಿ ಮುಳುಗಿದಂತೆ।
ತೊಟ್ಟ ಮೌನದಲಿಷ್ಟು ಮಿಣುಕುತಿವೆ ತಾರೆಗಳು
  ಕತ್ತಲೆಯ ಭೀಕರಕೆ ನಡುಗುವಂತೆ.

ಪೊಡವಿಯೆಲ್ಲವು ಮೌನ, ಜಡಜೀವ ನಿದ್ದೆಯಲಿ,
  ಅಡಗಿಕೊಂಡಿದೆ ಅಂದು ಗಾಳಿ ಕೂಡ।
ಕಾಡಿನೊಳಗೆಲೆಮನೆಯದೊಂದೆ ಜಾಗ್ರತವಿಹುದು,
  ನೆನೆಸಲೆದೆ ನಡುಗುವುದು ನೆನಪು ಬೇಡ.

(ಪುಟ ೧, ಪ. ೧-೨—ಸನ್ನಾಹ)

ಹೆಚ್ಚಾಗಿ ಮೂಲದ ಒಂದು ಪದ್ಯವನ್ನನುವಾದಕರು ಎರಡರಿಂದ ಭಾಷಾಂತರಿಸಿದ್ದಾರೆ. ಮೂಲವನ್ನೀಕ್ಷಿಸಿರಿ:—

ನೀರವ ನಿಶಾ, ತಪೋವನ ನೀರವ
  ಶಾಂತ ದಿಶಾ ಆಕಾಶ।
ನೀರವ, ತಾರಾಗಣ ಕರಥೇತೇ
  ಝಿಲಮಿಲ ಅಲ್ಪಪ್ರಕಾಶ॥
ಪ್ರಕೃತಿ ಮೌನ, ಸಚರಾಚರ ನಿದ್ರಿತ
  ಅತಿ ನಿಸ್ತಬ್ಧ ಸಮೀರ।
ಜಾಗ್ರತ ಥಾ ದೀಪಕ-ಪ್ರಕಾಶಮೇಂ
  ಕೇವಲ ಏಕಕುಟೀರ॥

(ಪಹಲಾ ಸರ್ಗ—೧)

ನಮ್ಮೆಣಿಕೆಯಂತೆ ಈ ಪದ್ಯದಲ್ಲಿ ಕವಿ ಒಂದು ವಿಶಿಷ್ಟಾರ್ಥವನ್ನು ಸೂಸುತ್ತಾನೆ: 'ಪ್ರಪಂಚ ಪುರುಷನು ಮೈಮರೆತುಹೋಗಿದ್ದಾನೆ; ಅವನ ಸರವವಾಗಿದ್ದ ಅಂಗಗಳೆಲ್ಲ ನೀರವವಾಗಿವೆ; ಕಣ್ಣುಗಳೆನ್ನಬಹುದಾದ ನಕ್ಷತ್ರಗಳು ಅಲ್ಪಾಲ್ಪವಾಗಿ ಮಿನುಗುತ್ತಿವೆ; ಪ್ರಕೃತಿಯೂ ಮೌನವಾಗಿದೆ; ಸಚರಾಚರಗಳೊರಗಿವೆ; ಶ್ವಾಸವೆನ್ನಬಹುದಾದ ಗಾಳಿ ಸ್ತಬ್ಧವಾಗುತ್ತಿದೆ; ಎದೆಗುಡಿಸಲೊಂದರಲ್ಲಿ ಮಾತ್ರವೇ ದೀಪ ಚೇತನವಿದೆ' ಎಂಬುದು ಮೂಲದಾಶಯ. ಸೂಚನೆಯಾದ ಆದಿ ಪದ್ಯದಲ್ಲಿ ಇಡೀ

ವಿಶ್ವ (ವಿಶೇಷವಾಗಿ ನಮ್ಮ ಭಾರತಭೂಮಿಯ) ಚಿತ್ರವನ್ನು ಸೂಚಿಸಿ, ಇ ಅವರೆದೆಯಲ್ಲಿ ಚೈತನ್ಯಜ್ಯೋತಿಯಿದೆ, ಎಂಬ ಧ್ವನಿಯುನ್ನಂದವಾಗಿ ಹೊಳೆಯಿಸಿದ ಅದರ ಶ್ವಾಸೋಚ್ಛ್ವಾಸಗಳಂತಿರುವ ತರುಣ ಸ್ತ್ರೀ ಪುರುಷ ವ್ಯಕ್ತಿಗಳ ದರ್ಶನ ಮತ್ತೆ ಮಾಡಿಸುತ್ತಾನೆ. ಇಂಥ ಉನ್ನತಾಭಿಪ್ರಾಯದ ಪ್ರಕಾಶವೂ ಅನುವಾ ಮಾಸಿಹೋಗಿದೆಯೆಂದೇ ನಮ್ಮ ಭಾವನೆ. ಇಡೀ ಮಾತೃಭೂಮಿಗೆ ಸಂಬಂಧ ಕಾವ್ಯವಸ್ತುವನ್ನು ಅನುವಾದಕರು ನಮ್ಮ ಕನ್ನಡದ ಏಕದೇಶಕ್ಕೆ ಸೇರಿ ಆ ಪ್ರಕಾಶವೂ 'ತಾರಾಗಣ ಕರಥೇತೇ ಝಿಲಮಿಲ ಅಲ್ಪ ಪ್ರಕಾಶ'ವೆಂಬಂ ಎಂದು ತೋರುತ್ತಿದೆ. ಅನುವಾದದ 'ನಿಟ್ಟುಮುಗಿಲು, . . . . ನೆನೆಸಲೆದೆ ವುದು, ನೆನಪು ಬೇಡ' ಮೊದಲಾದ ಕೆಲವು ಹೆಚ್ಚಿನ ಪದಗಳು ದೀಪದ ಬ ತುದಿಯ ಅಕ್ಕಿ (ಕರಿ)ನಂತೆ ಕಾಂತಿಯನ್ನಡಗಿಸಿವೆ.

ಬಂದು ನೋಡಿದಳಲ್ಲಿ ನಿಂದೊಬ್ಬ ಮನುಜನನು
ಹೊದ್ದಿಹನು ಮೈದೊಗಲಿನುಡಿಗೆಗಳನು ।
ಚಿಂದಿ ಚಿಂದಿಯದೊಂದು ಹಳೆಯಂಗಿ ಹಿರಿದಾಗೆ
ಗತಿಯಿಲ್ಲ ತೆರದಿಡದೆ ಮೈಗಳನ್ನು ॥ (ಪುಟ ೬೯)

ಮೂಲವನ್ನೀಕ್ಷಿಸಿರಿ:—

ದೇಖಾ ಕೇವಲ ಚರ್ಮಾಚ್ಛಾದಿತ
ಏಕ ಮನುಜ ಕಂಕಾಲಿ ।
ಫಟಾ ಪುರಾನಾ ಏಕ ಅಂಗೋಛಾ
ವಹ ಪರಮ ಬೇಹಾಲಿ ॥

'ಕೇವಲ ಚರ್ಮಾಚ್ಛಾದಿತ ಏಕ ಮನುಜ ಕಂಕಾಲಿ'ಯ ಚಿತ್ರವು 'ಹೊದ್ದಿ ಮೈದೊಗಲಿನುಡಿಗೆಗಳನು'—ಎಂಬಲ್ಲಿ ಕಾಣಬಾರದು. 'ಏಕ ಅಂಗೋಛಾ...' ಎಂಬುದು 'ಚಿಂದಿ ಚಿಂದಿಯದೊಂದು ಹಳೆಯಂಗಿ'ಯಲ್ಲಿ ತೋರದು. ಮಾತ್ರ ಆ ಒಬ್ಬನೇ ಆದ ಬಡವನ 'ಮೈಗಳನ್ನು' ಎಂದರೇನು?

ಇನ್ನು 'ಥೇನಿಸುತ್ತೆ' (ಪುಟ ೨), 'ಕಿತ್ತಿ' (ಪುಟ ೩೧), 'ನೇಸ (ಪ್ರಥಮೈಕವಚನ—ಪುಟ ೩೩)—ಮೊದಲಾದ ಪದರೂಪಗಳು ಸರಿಯಲ್ಲ.

ತರುಣ ಕವಿಗಳು ದೋಷವನ್ನು ಎತ್ತಿತೋರಿದಲ್ಲಿ ಬೇಸರಿಸಬಾರದು. ಅ ಕನ್ನಡದ ಹೊನಲು ಆ ದೋಷಗಳನ್ನು ಮೀರಿ ಹರಿಯುತ್ತಿದೆ ಎಂಬುದು ಆನಂದಕ ಮುಂದಿನ ಅವರ ಕಾವ್ಯಪ್ರವಾಹವು ಇನ್ನಷ್ಟು ವಿಚಾರಪ್ಲುತವಾಗಿ ಹರಿಯಲಿ.

ಮು. ತಿ.

---

**೭. ಕೆಲವು ನೀಳ್ಗತೆಗಳು.**— ಬೇರೆ ಬೇರೆ ಲೇಖಕರಿಂದ: ಜಯಕರ್ನಾ ಗ್ರಂಥಮಾಲೆಯ ೧೯ನೆಯ ಪುಷ್ಪ; ಕ್ರೌನ್ ಅ. ಪ. ಪುಟಗಳು ೧೩೩; ಬೆಲೆ: ೧

ಆರು ಕತೆಗಳ ಗೊಂಚಲಿದು. "ಇಲ್ಲಿ ಸಂಗ್ರಹಿಸಿರುವ ಕತೆಗಳೆಲ್ಲ 'ಸಣ್ಣ (short story) ಎಂಬ ಸಾಹಿತ್ಯ ವಿಶೇಷವನ್ನೇ ಬಹ್ವಂಶದಿಂದ ಹೋಲು

ಆದರೂ ಅವುಗಳ 'ಸುದೀರ್ಘತೆ'ಯ ಮೂಲಕ 'ನೀಳ್ಗತೆ'ಗಳ ಜಾತಿಯಲ್ಲಿ ಸೇರಿಸಿದೆ'' ಎಂದು ಸಂಪಾದಕರೇ ಮುನ್ನುಡಿಯಲ್ಲೆನ್ನುವುದರಿಂದ ಹೆಸರಿನ ಸಾರ್ಥಕತೆಯನ್ನು ವಿಮರ್ಶಿಸಬೇಕಾಗಿಲ್ಲ. ಆದರೂ ಸಣ್ಣ ಕತೆಗಳು ಒಂದಿಷ್ಟು ನೀಳವಾದರೂ ಹೆಸರನ್ನೇ 'ನೀಳ್ಗತೆಗಳು' ಎಂದು ಮಾರ್ಪಡಿಸಬಹುದೆ? 'ಉದ್ದು ಉಬ್ಬಿದರೆ ಮದ್ದಳೆಯಾದೀತೇ' ಎಂಬ ಗಾದೆ ನೆನಪಾಗುತ್ತದೆ.

ಇವುಗಳೊಳಗೆ 'ಫ್ರೂಫೋನ್ಸ್' ಎಂಬುದು ಡೆನ್ಮಾರ್ಕಿನ ಜೆನ್ಸ್ ಪೀಟರ್ ಜೇಕಬ್ಸನ್ ಎಂಬವನ ಅದೇ ಹೆಸರಿನ ಕತೆಯ ಭಾಷಾಂತರವೆಂದು ಸಂಪಾದಕರೇ ಸೂಚಿಸಿದ್ದಾರೆ. ಹೀಗೆ ಭಾಷಾಂತರಿಸುವುದು ನಮಗೇನೋ ಅನುಸರಣೀಯವಾಗಿ ತೋರುತ್ತಿದೆ. ನಾವು ದೇಶ ಸನ್ನಿವೇಶಾದಿಗಳನ್ನು ಬದಲಾಯಿಸಿ ಭಾಷಾಂತರಿಸುವಲ್ಲಿ, ಬಹಳಮಟ್ಟಿಗೆ ಸಂಸ್ಕೃತಿಗೆ ಕುಂದೊದಗುತ್ತದೆಯೆಂದೇ ನಮ್ಮ ಭಾವನೆ. ಕತೆಯ ರಚನಾದಿಗಳೂ ಒಪ್ಪುವಂತಿವೆ. 'ಕನ್ನೆಯ ಸ್ನೇಹ' ಎಂಬುದೂ ಚೆನ್ನಾಗಿದೆ: 'ಎಲಿಸಳು' ಒಬ್ಬಳು ಜೀವನ ಪ್ರಣಯಿನಿಯಾಗಿ ಕಣ್ಣೆದುರಿನಲ್ಲಿ ನಿಲ್ಲುತ್ತಾಳೆ. ಆಕೆಯ ಆಶಾನಿರಾಶೆಗಳು ವಾಚಕರ ಭಾವನೆಗಳಲ್ಲಿ ಸಮರಸವಾಗುವಂತಿವೆ. 'ನಡೆದು ಬಂದ ಲಕ್ಷ್ಮಿ'—'ಕೌಸಲ್ಯಾನಂದ'—'ಬೀಬಿ ನಾಚ್ಚಿಯಾರ್'—'ಮೃಗಜಲ' ಎಂಬ ಉಳಿದವು ಈ ಗೊಂಚಲಿನಲ್ಲಿ ಅರಳಲಿಕ್ಕೆ ತಕ್ಕವುಗಳೇ. ಸಂಪಾದಕರೆಂದಂತೆ "ಚಿತ್ರಿತವಾದ ಜೀವನವು ವಿವಿಧತೆವಡೆದು ಕತೆಗಳ ಶೈಲಿಗಳೊಡನೆ ಮನೋಹರ ವಾಗಿದೆ.''

ಮು. ತಿ.

---

೮. **ಕಿಂದರಿಜೋಗಿ ಮತ್ತು ಇತರ ಕಥನ ಕವನಗಳು.**— ಕವಿಗಳು: ಶ್ರೀಮಾನ್ ಕೆ. ವಿ. ಪುಟ್ಟಪ್ಪನವರು, ಎಂ.ಎ.; ಪ್ರಕಾಶಕರು: ಕಾವ್ಯಾಲಯ, ಶಿವಮೊಗ್ಗ; ಕ್ರೌನ್ ೧/೧೬ ಪು. ೧೦೪; ಬೆಲೆ: ೧೨ ಆಣೆ.

ಹೊಸಗನ್ನಡಕ್ಕೆ ತುಂಬಾ ಪರಿಚಿತರಾದ ಶ್ರೀಮಾನ್ ಪುಟ್ಟಪ್ಪನವರು ಈ ಸಂಗ್ರಹ ದಲ್ಲಿ ತಮ್ಮ 'ಕಿಂದರಿಜೋಗಿ' ಮತ್ತು ಇತರ ಹತ್ತು ಕಥನ ಕವನಗಳನ್ನು ಬೆಳಕಿಗೆ ತಂದಿರುವರು. 'ಕಿಂದರಿಜೋಗಿ'ಯು ಬೇರೆಯಾಗಿ ಈ ಮೊದಲೇ ಪ್ರಕಟವಾಗಿ ಕನ್ನಡ ನಾಡಿನ ಎಲ್ಲ ಕಡೆಯಿಂದ ಮೆಚ್ಚುಗೆಯನ್ನು ಪಡೆದಿದೆ. ಈಗ ಅದೇ ಜಾತಿಯ ಇತರ ಕವನಗಳಿಗೆ ಮುಕುಟವಾಗಿ ಮಾಡಿ ಸಂಗ್ರಹ ರೂಪದಲ್ಲಿ ಅದನ್ನು ತಂದುದಕ್ಕಾಗಿ ಶಿವಮೊಗ್ಗೆಯ ಕಾವ್ಯಾಲಯವನ್ನೂ ಕವಿಗಳನ್ನೂ ಮನವಾರೆ ಅಭಿನಂದಿಸುತ್ತೇವೆ.

ಶ್ರೀಮಾನ್ ಪುಟ್ಟಪ್ಪನವರ ಕಾವ್ಯ ಕಥನ ಶಕ್ತಿಯು ಹುಟ್ಟಿದ ಹಾಗೂ ಬೆಳೆದ ಬಗೆಯು ಇದರಲ್ಲಿ ಚೆನ್ನಾಗಿ ವ್ಯಕ್ತವಾಗಿದೆ. ಒಂದು ಕಥೆ, ಸನ್ನಿವೇಶ ಇವನ್ನು ಮೂಲವಾಗಿಟ್ಟುಕೊಂಡು ಎಷ್ಟು ಸರಸವಾಗಿ ಕವನ ಕಥೆಯನ್ನು ಅವರು ಹೇಳಬಲ್ಲರು ಎಂಬುದಕ್ಕೆ ಈ ಸಂಗ್ರಹವು ಇಡಿಯಾಗಿ ಸಾಕ್ಷಿಯಾಗಿದೆ. ಇದರಲ್ಲಿ ಇಂಗ್ಲಿಷ್ ಕವನಗಳ ಅನುವಾದವಾಗಿದ್ದ ಕಥೆಗಳು ತಮ್ಮ ವಿಸ್ತಾರದಲ್ಲಿ, ಶೈಲಿಯಲ್ಲಿ ಸಹಜತೆಯನ್ನು ತುಂಬಿಕೊಂಡು ಕನ್ನಡ ಕಳೆಯಿಂದ ಮಿರುಗುತ್ತಿವೆ. 'ಕಿಂದರಿಜೋಗಿ'ಯು ಇದಕ್ಕೆ ಶ್ರೇಷ್ಠ ನಿದರ್ಶನ. ಇದರ ಓಟ, ನಗೆ, ಮಾತಿನ ಒಳ್ಳು ಇವನ್ನು ಯಾರು ಮೆಚ್ಚರು?

ಅನುವಾದವೆಂಬುದನ್ನು ಮರೆತರೂ ತಪ್ಪೇನು? ಹಾಸ್ಯ ವಾಙ್ಮಯವು ಕಡಿ ಯಾಗಿರುವ ಕನ್ನಡಕ್ಕೆ ಇದೊಂದು ನಿಚ್ಚದೊಡವಾಗಿ ಬಾಳುವುದೆಂದು ನಮ್ಮ ಭಾವ ಹೀಗೆಯೇ 'ಕುಮುದಿನಿ,' 'ಜಯಸಿಂಹನ ಕೊನೆಗಾಲ' ಸೊಗಸಾಗಿವೆ. ಎರಡನೆ ದರಲ್ಲಿ ಅನುವಾದ ವಿಸ್ತಾರವಿಲ್ಲ, ಯಥಾರ್ಥವಾದ ಭಾಷಾಂತರವಿದೆ. ಮೂ ಛಂದ, ನಾದಗುಣ, ಚಿತ್ರಸಾಮರ್ಥ್ಯ—ಇವು ಇದರಲ್ಲಿ ಸರಿಯಾಗಿ ಬಂದಿವ ಕೊನೆಯ ಭಾಷಣದಲ್ಲಿ ಮೂಲದ ಓಜಸ್ಸು, ಭಾವನೆ ಪ್ರಕಟವಾಗಿಲ್ಲ. ಜಯಸಿಂ ಎಂಬ ಹೆಸರೂ ಕೂಡ ಆರ್ಥರನ ಕಾಲ್ಪನಿಕ ಕಥಾರಚನೆಗೆ ಸರಿಹೋಗುವುದಿಲ್ಲ. ಅ ಐತಿಹಾಸಿಕ ಸಂಬಂಧವು ಬೇರೆಯಾಗಿದೆ.

ಇನ್ನಿತರ ಕವನಗಳು ಐತಿಹಾಸಿಕ ಹಾಗೂ ಸ್ವತಂತ್ರ ವಸ್ತುಗಳನ್ನವಲಂ ಬರೆದುವಾಗಿವೆ. ಅವುಗಳಲ್ಲೆಲ್ಲ ಸಣ್ಣ ಕತೆಯ ಎಳೆಯೊಂದನ್ನು ವರ್ಣನೆಯ ವಿಸ್ತಾ ದಿಂದ, ಶೈಲಿಯ ಸೊಬಗಿನಿಂದ ಬೆಳಸುವ ಕೈವಾಡವು ತೋರಿದೆ. ಕಲ್ಪನೆಯ ಉತ್ಕ ಭಾಷೆಯ ಚಂದ—ಇವು ಅವುಗಳ ಸೊತ್ತು. ಆದರೆ 'ಕಿಂದರಿಜೋಗಿ'ಯಲ್ಲಿ ತುಸುವಾ ತೋರಿದ ಅನವಶ್ಯ ಅತಿ ವಿಸ್ತಾರ, ವಿಕ್ಷಿಪ್ತ ಕಲ್ಪಕತೆ—ಇವುಗಳಲ್ಲಿ ಆಗಾಗ ಹಣ ವುದುಂಟು. ಕಥಾಂಶವು ಹೆಚ್ಚಾಗಿ ವರ್ಣನಾಂಶವು ಮಿತವಾಗಿದ್ದರೆ ಈ ಕವನಗ ಇನ್ನಿಷ್ಟು ಮೋಹಕವಾಗುತ್ತಿದ್ದವು. ಆದರೆ ಒಟ್ಟು ರೂಪದಲ್ಲಿ ತೋರಿದ ಶ್ರೀಮಾನ್ ಪುಟ್ಟಪ್ಪನವರ ಕಥನಕಲೆಯು ಕನ್ನಡ ನುಡಿಗೆ ಒಂದು ಹಿರಿದಾದ ಹೆಮ್ಮೆಯ ಮಾತು ರಸಿಕರು ಈ ಸಂಗ್ರಹವನ್ನು ಓದಿ ಕಾವ್ಯ, ಕಥೆ ಎರಡರ ಪಿಪಾಸೆಯನ್ನು ಹಿಂಗಿ ಕೊಳ್ಳಬೇಕೆಂದು ನಮ್ಮ ಬಿನ್ನಹ.

ರಂ. ಶ್ರೀ. ಮು.

---

೯. ಯುಗಾದಿ.—ಲೇಖಕರು: ಶ್ರೀ॥ ವಾಸುದೇವ ಅವರು, ಬೆಂಗಳೂರು ಕ್ರೌನ್ ಅ. ಪ. ಪು. ೨೮; ಬೆಲೆ: ೪ ಆಣೆ.

ಇದು ಶ್ರೀಮಾನ್ ಎಂ. ವಾಸುದೇವಮೂರ್ತಿಗಳ ಚಿಕ್ಕ ಕವನ ಸಂಗ್ರಹ ಇದರಲ್ಲಿ ಕನ್ನಡ ನಾಡು–ನುಡಿ ಮೊದಲಾದ ವಿಷಯಗಳು ಕವಿಯ ಚಿತ್ರಭಿತ್ತಿಯಲ್ಲಿ ಮೂಡಿ ಹೊರಪಟ್ಟ ಹತ್ತು-ಹದಿನೈದು ಕವನಗಳಿವೆ. ಅಂತಃಕರಣಕ್ಕೆ ಹಾಗೂ ಬುದ್ಧಿಗೆ ತೋರಿದ ಕೆಲವು ನಿಚ್ಚಳವಾದ ಮಾತುಗಳು ಇಲ್ಲಿ ಬಹುಮಟ್ಟಿಗೆ ಭಾಮಿನಿ ಷಟ್ಪದಿಯ ತಿಳಿಯಾದ ಹೊಸಗನ್ನಡದಲ್ಲಿ ರೂಪಗೊಂಡು ನಿಂತಿವೆ. ಸ್ಪಷ್ಟತೆ ಇವು ಕವನಗಳ ಮುಖ್ಯ ಗುಣ. 'ಯುಗಾದಿ,' 'ಕೃಷಿ,' 'ನವಯುಗ' ಇವುಗಳಲ್ಲಿ ಅದನ್ನು ಕಾಣಬಹುದು. ಕವಿಭಾವದ ಒಂದು ನೂತನ ಆವೇಶ, ಉತ್ಕಟತೆ ಇವುಗಳಲ್ಲಿಲ್ಲ. 'ಚೆನ್ನಕೇಶವ–ಗೋಮಟೇಶ್ವರ' ಈ ಪದ್ಯದಲ್ಲಿ ಮಾತ್ರ ಕಾವ್ಯಕಲ್ಪನೆಯ ಅಂಕುರವಿದೆ. ಆದರೆ ಅದು ಅದ್ಭುತವಾಗಿ ಬೆಳೆದಿಲ್ಲ. ಚಿಕ್ಕದಾದರೂ ಚೆಲುವಾದು ದೆಂದರೆ 'ಕಣಿವೆ–ಕೆರೆ' ಎಂಬ ಕವನ. ತತ್ತ್ವ, ನೀತಿಯನ್ನು ಹೊರಪಡಿಸಿ ಹವಣಿಸುವ ಇಲ್ಲಿಯ ಕಾವ್ಯಶಕ್ತಿಯು 'ಕಣಿವೆ–ಕೆರೆ'ಯಲ್ಲಿಯ ಕಲಾರೂಪವನ್ನು

ಹೆಚ್ಚು ಹೆಚ್ಚಾಗಿ ಸಾಧಿಸಬೇಕೆಂದು ನಮಗೆ ತೋರುವುದು. 'ಕನ್ನಡ ನಾಡಿನ ಸೊಬಗು' ತೀರ ಸಾಮಾನ್ಯ ಭಾವಗಳನ್ನು ವಿಷಮ ಶೈಲಿಯಲ್ಲಿ ಹೇಳಿದೆ. 'ಹುಟ್ಟಿದ ನಾಡಿನ ನೆನಹು'—ಇದರಲ್ಲಿಯ ಕಂದಪದ್ಯ ಸ್ಕಾಟ್ ಕವಿಯ ಮೂಲಬಂಧಕ್ಕೆ ಸರಿಯಾದ ವೃತ್ತವಾಗಿಲ್ಲ. ಕವಿಗೆ ವಿಷಯ, ವಿಚಾರ ಇವು ಮುಖ್ಯವಾಗಿ, ಕಲ್ಪನೆ, ಶೈಲಿ ಇವು ಕುದುರಿ ತೋರುವುದಿಲ್ಲ. ಕಾವ್ಯ ರಚನೆಗೆ ಅವಶ್ಯವಾದ ರಸಜೀವನವು ಇನ್ನಿಷ್ಟು ಉಜ್ವಲವಾಗಿ, ಈ ಕವಿಗಳ ಕೃತಿಗಳು ಕನ್ನಡ ಜನಕ್ಕೆ ಮೆಚ್ಚುಗೆಯಾಗ ಲೆಂದು ನಮ್ಮ ಹಾರೈಕೆ.

ರಂ. ಶ್ರೀ. ಮು.

---

**೧೦. ಲಲಿತ ಮಾರ್ಕಂಡೇಯ ಕಥಾ ಕಂದಮಾಲೆ.**—ಲೇಖಕರು: ಶ್ರೀ॥ ಮಾದನಹಳ್ಳಿ ಚೆನ್ನಕೃಷ್ಣಯ್ಯನವರು; ಪ್ರಕಾಶಕರು: ಶ್ರೀಮಾನ್ ನಾರಾಯಣರಾಯರು, ಮಾದನಹಳ್ಳಿ; ಡೆ. ಅ. ಪ. ಪು. ೩೦; ಬೆಲೆ: ೪ ಆಣೆ.

ಹಳೆಯ ಹಾಗೂ ಹೊಸ ಸಾಹಿತ್ಯಗಳ ಈ ಸಂಧಿಕಾಲದಲ್ಲಿ ಎಲ್ಲ ಬಗೆಯ ಬರೆವಣಿಗೆಗೆ ನಿಜವಾದ ಸ್ವಾತಂತ್ರ್ಯವಿರುವುದೊಂದು ಮುಖ್ಯ ಮಾತು. ಇಂಥ ಸ್ವಾತಂತ್ರ್ಯದ ಛತ್ರದಲ್ಲಿ ಬದುಕಿ ಬಾಳುವ ಕೃತಿಯೇ ಸತ್ತ್ವಯುತವಾದುದೆಂದು ಹೊಸ ವಿಮರ್ಶೆಯ ಶ್ರದ್ಧೆಯಿದೆ. ಪ್ರಸ್ತುತ ಕಾವ್ಯವನ್ನು ಶ್ರೀಮಾನ್ ಮಾದನಹಳ್ಳಿ ಚೆನ್ನಕೃಷ್ಣಯ್ಯನವರು ತಮ್ಮ ೧೪ ನೆಯ ವರ್ಷದಲ್ಲಿ ಬರೆದು ಈಗ ಪರಿಣತ ವಯಸ್ಸಿನಲ್ಲಿ ಪ್ರಕಟಗೊಳಿಸಿರುವರು. ಇದರಲ್ಲಿ, ಪುರಾಣಪ್ರಸಿದ್ಧವಾದ ಮಾರ್ಕಂಡೇಯ ಕಥೆಯು ಸುಮಾರು ೨೦೦ ಕಂದಪದ್ಯಗಳಲ್ಲಿ ರಚಿತವಾಗಿದೆ. ಒಂದು ಕಾವ್ಯಪರಂಪರೆಯು ಬೆಳೆಯುತ್ತ ಹೋದಂತೆ, ಅದರ ವೈಖರಿಯು ಆನುವಂಶಿಕವಾದ ಐಶ್ವರ್ಯದಂತೆ ಸಹಜಾತವಾಗಿ ಒಂದೊಂದು ತಲೆಮಾರಿಗೆ ಬರುವುದುಂಟು. ಅಂಥ ಸಹಜಕವಿತ್ವ, ಶಬ್ದಶಕ್ತಿ, ಸಂಪ್ರದಾಯದ ಅನುಸರಣ ಈ ಖಂಡ ಕಾವ್ಯದಲ್ಲಿ ಸ್ಫುಟವಾಗಿವೆ. ಬಾಲ್ಯದಲ್ಲಿ ಇಷ್ಟು ಸಲೀಲವಾಗಿ ಕಂದಪದ್ಯದಲ್ಲಿ ಕತೆಕಟ್ಟಿರುವುದು ಲೇಖಕರ ಒಂದು ಕಾವ್ಯ ಚಮತ್ಕೃತಿಯೇ ಸರಿ. ಇದನ್ನು ವಿಮರ್ಶೆಯ ನಿತ್ಯಪ್ರಮಾಣಗಳಿಂದ ತೂಗು ವುದು ಅಸಾಂಪ್ರತ. ಬಾಲ್ಯದ ಉತ್ಸಾಹದಲ್ಲಿ ಅಪಕ್ವ ಕಲ್ಪನೆ ಶೈಲಿಗಳು ಒಡೆದು ಕಾಣುತ್ತಿವೆ. ಅವುಗಳನ್ನು ವಿವರಿಸಬೇಕಾಗಿಲ್ಲ. ಮುಖ್ಯವಾಗಿ, ಸಾಂಪ್ರದಾಯಿಕ ಕಾವ್ಯದ ಸಂಸ್ಕಾರವು ಕವಿಬಾಲ್ಯದಲ್ಲಿ ಯಾವ ಅದ್ಭುತವನ್ನು ಎಸಗಬಲ್ಲುದು ಎಂಬುದಕ್ಕೆ ಮಾದರಿಯೆಂದು ಕನ್ನಡಿಗರು ಈ ಕೃತಿಯನ್ನು ಗಮನಿಸಬೇಕು.

ರಂ. ಶ್ರೀ. ಮು.

---

**೧೧. ಕನ್ನಡ ಒಗಟಗಳು.**—ಲೇಖಕಿ: ಶ್ರೀಮತಿ ಶ್ಯಾಮಲಾ ಅವರು; ಪ್ರಕಾಶಕರು: ಶ್ರೀಮಾನ್ ಶಾಮರಾವ ಎಚ್. ಜೋಶಿ ಅವರು, ಅಥಣಿ; ಕ್ರೌನ್ ಅ. ಪ. ಪು. ೨೦; ಬೆಲೆ: ೨ ಆಣೆ.

ಈ ಚಿಕ್ಕ ಪುಸ್ತಕದ 'ಒಗಟ'ಗಳು ಮೈಸೂರಿನ ಕಡೆಯವರಿಗೆ ಹೊಸ ಪರಿಯವು. ಈ ಕಡೆಯ ಒಗಟುಗಳು ಎಂದರೆ—ಒಂದು ವಸ್ತುವಿನ ಹೆಸರು ಹೇಳದೆ, ಅದರ ವಿಶಿಷ್ಟ ಲಕ್ಷಣಗಳನ್ನು ಹೇಳಿ, ಆ ವಸ್ತು ಯಾವುದು ಎಂದು ಕೇಳುವುದು. ಈ ಒಗಟುಗಳ

ಭಾಷೆ ಸಾಮಾನ್ಯವಾಗಿ ಛಂದೋಬದ್ಧವಾಗಿರುತ್ತದೆ. ಈ ಪುಸ್ತಕದ ಒಗಟು... ಸ್ವರೂಪವಿದು:

"ಮದುವೆಯ ಕಾಲದಲ್ಲಿ ಹೊಸ ಮದುವಣಗಿತ್ತಿಯರೂ ಬೇರೆ ಬೇರೆ ... ಸಮಯಗಳಲ್ಲಿ ಮೊದಲುಗಿತ್ತಿ-ಮುತ್ತೈದೆಯರೂ ತಮ್ಮ ತಮ್ಮ ಗಂಡಂದಿರ ಹೆಸರು... ಹೇಳುತ್ತಿರುವುದು ಅಖಿಲ ಕರ್ನಾಟಕಕ್ಕೆ ಸಾಮಾನ್ಯವಾದ ಸಂಗತಿಯು. ಆದರೆ ತುಂಗ... ಯಿಂದ ಉತ್ತರದ ಕನ್ನಡದಲ್ಲಿ ವಿಶೇಷವೊಂದುಂಟು. ಹೆಂಗುಸರು ತಮ್ಮ ಗಂಡ... ಹೆಸರುಗಳನ್ನು ಹೇಳಬೇಕಾದಾಗ, ಗಂಡಂದಿರ ಗುಣರೂಪಗಳನ್ನು ಸೊಗಸಾದ ಸವಿನುಡಿ... ಹೆಣೆದು, ಅದರಲ್ಲಿ ಆ ಹೆಸರನ್ನು ಪವಣಿಸಿ ಹೇಳುತ್ತಿರುವುದು ಇತ್ತಣವರ ರೂಢಿ. ಈ ... ಸವಿನುಡಿಯ ಹೆಣಿಕೆಗಳಿಗೆ 'ಒಗಟ'ಗಳೆಂಬ ಹೆಸರು ಬಳಕೆಯಲ್ಲಿದೆ."

ಒಗಟಗಳೆಲ್ಲವೂ ಪದ್ಯರೂಪದಲ್ಲಿವೆ. ಪುಸ್ತಕದ ಒಟ್ಟು ೯೯ ಒಗಟಗಳಲ್ಲಿ ಕೆಲ... 'ಈಶಸ್ತುತಿ' ರೂಪವಾದುವು; 'ಪರರ ನುಡಿ ನಮಗೇಕೆ' ಎಂಬವು ಕೆಲವು; ಮತ್ತೆ ಉಳಿದ ಹಲವು ಮದುವೆಯ ಕಾಲದಲ್ಲಿ ಮದುವಣಗಿತ್ತಿ ಅರಿಸಿನ ಕುಂಕುಮವಿಡುವು... ಗಂಧ ತೊಡೆಯುವುದು ಮುಂತಾದ 'ಉರುಟಣೆ'ಯ ಸಂಪ್ರದಾಯಗಳಿಗೆ ಸಂ... ಸಿದವು.

ಒಗಟುಗಳ ಭಾಷೆ ಸರಳವಾಗಿದೆ; ಪದ್ಯಬಂಧ ಹಿತವಾಗಿದೆ; ಅಲ್ಲೊಮ್ಮೆ ಇಲ್ಲೊಮ್ಮೆ ಮನೋಹರವಾದ ಭಾವವೂ ಸುಳಿಯುತ್ತದೆ. ಶ್ರೀಮತಿ ಶ್ಯಾಮ... ಅವರ ಒಗಟಗಳ ಸ್ವರೂಪ ಪರಿಚಯಕ್ಕಾಗಿ ಒಂದು ಉದಾಹರಣೆಯನ್ನು ಕೊ... ಬಹುದು:

ಸದ್ಗುಣದ ಪರಿಮಲವು ಒಳಗಿನಿಂದುಕ್ಕುತಿದೆ
ಹೊರಗೆ ಈ ಪರಿಮಲವನಿಡುವೆ ಮತ್ತೆ
. . . . ರಾಯರೇ! ಕಾಯ್ದ ಕೆನೆಹಾಲಿಗಿದು
ಕಲ್ಲುಸಕ್ಕರೆಯ ಸವಿ ಕಲಸಿದಂತೆ.

ಹೆಣ್ಣುಮಕ್ಕಳಿಗಾಗಿ ಒಬ್ಬಾಕೆ ಬರೆದ ಈ ಪುಸ್ತಕದ "ಕನ್ನಡ ಒಗಟುಗ... ನಾಡಿನ ಹೆಣ್ಣುಮಕ್ಕಳೆಲ್ಲರಲ್ಲಿಯೂ ಪ್ರಚಾರವಾಗಲೆಂದು ಹಾರೈಸುತ್ತೇವೆ.

ಎಂ. ವಿ. ಸೀ.

---

೧೨. ಕನ್ನಡ ಮರಾಟೆ ವಾದ ಅಥವಾ ಕರ್ನಾಟಕದಲ್ಲಿಯ ಮಹಾರಾಷ್ಟ್ರ ಪ್ರದೇಶ.— ಬೆಳಗಾವಿಯ ಸಾಹಿತ್ಯ ಸೇವಾ ಮಂಡಲದವರು ಸಂಗ್ರಹಿಸಿ ಬರೆದುದು. ಪ್ರಕಾಶಕರು: ಶ್ರೀ॥ ವೆಂಕಟೇಶ ಶ್ರೀನಿವಾಸ ಪಂಡಿತರು, ಸಂಪಾದಕರು, 'ಅರುಣೋದಯ,' ಬೆಳಗಾವಿ; ಕ್ರೌ ಅ. ಪ. ಪು. ೪೩; ಬೆಲೆ: ೪ ಆಣೆ.

ಹಿಂದೆ "ಕಾವೇರಿಯಿಂದಮಾ ಗೋದಾವರಿ ವರಮಿರ್ದ" ಕನ್ನಡ ನಾಡು ಬರುಬರುತ್ತ ಈಗ ಎಷ್ಟಿದೆ ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ದಕ್ಷಿಣದ ಕರ್ನಾಟಕವು ಈಗಲೂ ಬಹುಮಟ್ಟಿಗೆ ಕಾವೇರಿಯವರೆಗೆ ಇದೆ; ಆದರೆ ಉತ್ತರದ... ಗೋದಾವರಿಯವರೆಗೆ ಇಲ್ಲ. ಈಗ ಇರುವಷ್ಟು ಕನ್ನಡ ನಾಡಾದರೋ ನಾನಾ ಸರ್ಕಾರಗಳ ಆಡಳಿತಕ್ಕೆ ಒಳಪಟ್ಟಿದೆ. ಮೈಸೂರು ಸಂಸ್ಥಾನವನ್ನೂ ಕೊಡಗನ್ನೂ ಬಿಟ್ಟರೆ, ಮುಂಬಯಿ ಕರ್ನಾಟಕವೆನ್ನಿಸಿಕೊಳ್ಳುವ ಪ್ರದೇಶಗಳ ಗಡಿನಾಡಿನ...

ಮಹಾರಾಷ್ಟ್ರರ ಒತ್ತಡವೂ, ಮದರಾಸು ಕರ್ಣಾಟಕವೆನ್ನಿಸಿಕೊಳ್ಳುವ ಪ್ರದೇಶಗಳ ಗಡಿನಾಡಿನಲ್ಲಿ ಆಂಧ್ರರ ಒತ್ತಡವೂ ಬಹುಕಾಲದಿಂದ ಪ್ರಬಲವಾಗಿದೆ. ಈಗ ಇರುವಷ್ಟು ಕನ್ನಡ ನಾಡಾದರೂ, ಎಷ್ಟೇ ಸರ್ಕಾರಗಳಲ್ಲಿ ಹರಿದು ಹಂಚಿಹೋಗಿದ್ದರೂ, ಭಾಷಾದೃಷ್ಟಿಯಿಂದಲೂ ಸಾಂಸ್ಕೃತಿಕ ದೃಷ್ಟಿಯಿಂದಲೂ ಅಖಂಡವಾಗಿ ಉಳಿಯ ಬೇಕಾದರೆ, ಗಡಿನಾಡುಗಳಲ್ಲಿ ಕನ್ನಡಿಗರು ತಮ್ಮ ವಿಶಿಷ್ಟ ಹಕ್ಕುಗಳನ್ನೂ ಕಾಯ್ದು ಕೊಳ್ಳಬೇಕಾಗಿದೆ.

ಪ್ರಕೃತ ಗ್ರಂಥದಲ್ಲಿ, ಲೇಖಕರು ಬೊಂಬಾಯಿ ಕರ್ಣಾಟಕವೆಂದು ಸರ್ಕಾರ ದವರು ಕರೆದಿರುವ ಪ್ರದೇಶಗಳಲ್ಲಿ ಯಾವುಯಾವುವನ್ನು ಮಹಾರಾಷ್ಟ್ರರು ತಮ್ಮವೆಂದು ಹೇಳಿಕೊಂಡು ಆಕ್ರಮಿಸಲು ಪ್ರಯತ್ನಿಸುತ್ತಿರುವರೆಂಬದನ್ನು ತಿಳಿಸಿ, ಭಾಷಾವಾರು ಜನಸಂಖ್ಯೆಯ ಅಂಕಿಗಳು, ಐತಿಹಾಸಿಕ ಪ್ರಮಾಣಗಳು, ಸ್ಥಳಪುರಾಣಗಳು, ಊರ ಹೆಸರುಗಳು—ಮುಂತಾದ ಹಲವು ಆಧಾರಗಳನ್ನು ಕೊಟ್ಟು ಆ ಪ್ರದೇಶಗಳು ಹೇಗೆ ವಾಸ್ತವವಾಗಿಯೂ ಕನ್ನಡ ಪ್ರದೇಶಗಳೆಂಬುದನ್ನು ನಿರ್ವಿವಾದವಾಗಿ ಸ್ಥಾಪಿಸಿದ್ದಾರೆ. ಹಾಗೆ ಅವರು ಹೇಳುವ ಪ್ರದೇಶಗಳು ಯಾವುವೆಂದರೆ—ಧಾರವಾಡ, ಬೆಳಗಾವಿ, ಬಿಜಾಪುರ ಮತ್ತು ಕಾರವಾರ ಜಿಲ್ಲೆಗಳ ಕೆಲವು ಪ್ರದೇಶಗಳು; ಮಹಾರಾಷ್ಟ್ರರ ಪ್ರಾಬಲ್ಯಕ್ಕೆ ಹೆಚ್ಚಾಗಿ ಒಳಗಾಗಿರುವವು ಬೆಳಗಾವಿ, ಖಾನಾಪುರ ಮತ್ತು ಚಿಕ್ಕೋಡಿ ತಾಲ್ಲೂಕುಗಳು; ಸದ್ಯಕ್ಕೆ ಹೆಚ್ಚಾಗಿ ಅವರ ಕಣ್ಣಿಗೆ ಬಿದ್ದಿರುವುದು ಬೆಳಗಾವಿ ತಾಲ್ಲೂಕು. ಬೆಳಗಾವಿಯು ಅನೇಕ ಕಾರಣಗಳಿಂದ ಮಹಾರಾಷ್ಟ್ರವಾಗಿ ಕಂಡರೂ ಅದು ಹೇಗೆ ಶುದ್ಧ ಕನ್ನಡ ಪ್ರದೇಶವೆಂಬುದನ್ನು ವಿವರವಾಗಿ ಪ್ರತಿಪಾದಿಸಿದೆ.

ಮಹಾರಾಷ್ಟ್ರರು ಮೇಲೆ ಹೇಳಿದ ಪ್ರದೇಶಗಳ ವಿಷಯದಲ್ಲಿ ತೋರುತ್ತಿರುವ ಆಕ್ರಮಣವೃತ್ತಿ ಮುಂದುವರಿಯದಂತೆ ನೋಡಿಕೊಳ್ಳುವುದು ಎಲ್ಲ ಕನ್ನಡಿಗರ ಕರ್ತವ್ಯ—ಎಂಬುದು ಈ ಚಿಕ್ಕ ಗ್ರಂಥದ ಎಚ್ಚರಿಕೆ. ಗಡಿನಾಡಿನಲ್ಲಿ ತಮ್ಮ ಇರವಿನ ಅರಿವಿಲ್ಲದ ಕನ್ನಡಿಗರು ಕಣ್ಣುತೆರೆಯಲು ಈ ಗ್ರಂಥ ಬಹಳ ಸಹಾಯಕವಾಗಿದೆ.

ಎಂ. ವಿ. ಸೀ.

---

**೧೩. ಶ್ರೀ ಮಹಾದೇವಿಯಕ್ಕನವರ ಚರಿತ್ರೆ.**—ಲೇಖಕರು: ಶ್ರೀ॥ ಟಿ. ಯನ್. ಮಹದೇವಯ್ಯನವರು; ಪ್ರಕಾಶಕರು: ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠದ ಗ್ರಂಥಮಾಲೆ, ಬೆಂಗಳೂರು; ಕ್ರೌನ್ ಅ. ಪ. ಪು. ೩೩; ಬೆಲೆ: ೨ ಆಣೆ.

ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠದವರು, ೧೯೩೬ರಲ್ಲಿ ಅಕ್ಕನವರ ಹುಣ್ಣಿಮೆಯನ್ನು ನೆರವೇರಿಸಿದ ಸಂದರ್ಭದಲ್ಲಿ, ಪ್ರಕಟಪಡಿಸಿದ ಗ್ರಂಥವಿದು.

ಅಕ್ಕನವರ ಹೆಸರು ವೀರಶೈವ ಸಮಾಜದಲ್ಲಿ ಮನೆಮಾತು; ಇತರರೂ ವೈರಾಗ್ಯ ಶಿಖಾಮಣಿಯಾದ ಆ ಮಹಾ ಶಿವಶರಣೆಯ ಜೀವನ ಚರಿತ್ರೆಯನ್ನು ಸ್ವಲ್ಪಮಟ್ಟಿ ಗಾದರೂ ತಿಳಿದಿರಬೇಕಾದುದು ಅತ್ಯಗತ್ಯ. ಹಾಗೆ ತಿಳಿಯಬೇಕೆನ್ನುವವರಿಗೆ ಈ ಚಿಕ್ಕ ಗ್ರಂಥ ಅತ್ಯುಪಯುಕ್ತವಾಗಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು.

ಈ ಗ್ರಂಥದ ಲೇಖಕರು ಹರಿಹರನ "ಮಹದೇವಿಯಕ್ಕನ ರಗಳೆ," ಚಾಮ "ಪ್ರಭುಲಿಂಗಲೀಲೆ," ಚನ್ನಬಸವದೇವರ "ಮಹದೇವಿಯಕ್ಕನ ಪು ಮುಂತಾದ ಗ್ರಂಥಗಳನ್ನು ತುಲನಾತ್ಮಕ ದೃಷ್ಟಿಯಿಂದ ಪರಿಶೀಲಿಸಿ, ಸಂಗ್ರ ಈ ಜೀವನ ಚರಿತ್ರೆಯನ್ನು ಬರೆದಿದ್ದಾರೆ. ತಮ್ಮ ನಿರೂಪಣೆಯ ಹಾಸಿಗೆ ಅಕ್ಕನವರ ಕೆಲವು ಅಮೋಘವಾದ ವಚನಗಳ ಹೊಕ್ಕನ್ನು ಸೇರಿಸಿ, ಚಿ ಈ ಕಿರಿಯ ಕೃತಿಯನ್ನು ನೆಯ್ದಿದ್ದಾರೆ. "ಕನ್ನಡಿಗರ ಕೃಪೆಯಿದ್ದರೆ ಈ ಚರಿತ್ರೆಯನ್ನು ಇನ್ನೂ ದೊಡ್ಡದನ್ನಾಗಿ ಮಾಡಿ ಪ್ರಕಟಿಸುವ ಇಚ್ಛೆ" ಲೇ ಇದೆ. ಅವರ ಈ ಇಚ್ಛೆ ಫಲಿಸುವಂತಾಗಲೆಂಬುದು ನಮ್ಮ ಮನಃಪೂರ್ವ ಹಾರೈಕೆ.

ಎಂ. ಚಿ.

---

**೧೪. ಕಲೋಪಾಸಕ.**—ಲೇಖಕರು: ಶ್ರೀ॥ ವಿನಾಯಕರವರು; ಪ್ರ ಸಾಹಿತ್ಯ ಪ್ರಕಟನ ಮಂದಿರ, ಧಾರವಾಡ; ಕ್ರೌನ್ ಅ. ಪ. ಪು. ೧೧೫; ಬೆಲೆ: ರೂ

ಈ ಸಂಗ್ರಹದ ಕವಿತೆಗಳು ಸ್ವಲ್ಪ ನೀಳವಾಗಿರುವುದರಿಂದ ಅವಕ್ಕೆ ಗಳೆಂದು ಹೆಸರಿಟ್ಟಿರುತ್ತಾರೆ. ಸಾಮಾನ್ಯವಾಗಿ ಎಲ್ಲವೂ ಸರಳ ರಗಳೆಯ ದಾ ಬರೆದವಾಗಿವೆ. ಒಂದೆರಡು 'ಗೀತೆ'ಗಳ ರೀತಿಯಲ್ಲಿಯೂ ಇವೆ.

ಪುಸ್ತಕಕ್ಕೆ ಎರಡು ಮುನ್ನುಡಿಗಳಿವೆ: ಒಂದು ಶ್ರೀ॥ ದ. ರಾ. ಯವರದು; ಇನ್ನೊಂದು ಲೇಖಕರಾದ ಶ್ರೀ॥ ವಿ. ಕೃ. ಗೋಕಾಕರವರದು. ಪ್ರತಿಯೊಂದು ಕವಿತೆಗೂ ಒಂದೊಂದು ಮೊದಲುಮಾತು ಸೇರಿರುತ್ತದೆ. ಲೇ ತಮ್ಮ ಮುನ್ನುಡಿಯಲ್ಲಿ ತಮ್ಮ ಕವನಗಳ ಸ್ವರೂಪ, ಕಾರಣ, ಅವುಗಳ ಯೋ ನಿರ್ಣಯವನ್ನು ಮಾಡಬೇಕಾದ ವಿಧಾನ, ಹೇಗೆ ವಿಮರ್ಶೆಮಾಡಕೂಡದೆಂಬ —ಮುಂತಾದ ವಿಚಾರಗಳನ್ನು ಚರ್ಚಿಸಿರುತ್ತಾರೆ. "ವಿಮರ್ಶೆ ಸ್ಫುಟವಾಗಿ ಮಂಜಿನಂತಲ್ಲ" ಎಂದು ಅವರು ಮುನ್ನುಡಿಯಲ್ಲಿ ಹೇಳಿರುವ ನಿಯಮ ಪರಿಪಾಲಿಸಲು ಈ ವಿಮರ್ಶೆಯಲ್ಲಿ ಕೂಡಿದಮಟ್ಟಿಗೆ ಪ್ರಯತ್ನಿಸಲಾಗಿದೆ.

ಈ ಸಂಗ್ರಹದ ಕವನಗಳನ್ನು ಓದಿದಾಗ ಮೊತ್ತಮೊದಲು ತೋರುವ ಅವುಗಳ ಅಸ್ಪಷ್ಟತೆ. "ಮಹಾಶ್ವೇತೆ"ಯೆಂಬ ಮೊದಲ ಕವನದಲ್ಲಿ ಒಂದು ಹಾಡು ಬರುತ್ತದೆ. (ಈ ಕವನವನ್ನು ಇವರು 'ನಾಟಿಕೆ'ಯೆಂದು ಕರೆದಿರು ಅದು ಬೇರೆ ಚರ್ಚಾಸ್ಪದವಾದ ಸಂಗತಿಯಾಗಿದೆ.) ಈ ಗಿಣಿಗಳು ಎಲ್ಲವೂ ಯಾವಾಗ ಹಾಡುತ್ತವೆ? ಒಂದು ಮಾತ್ರ ಯಾವಾಗ ಏಕೆ ಹಾಡುತ್ತದೆ? ಹಾಡಿನ ಅಭಿಪ್ರಾಯವೇನು? ಎಂಬುದು ಎಷ್ಟೇ ಪ್ರಯತ್ನಪಟ್ಟರೂ ಸ್ಪಷ್ಟವಾ

ನಾವು ಗಳಹುವೆವೆಂದು ಗಳಪುವನು ಮಾನವನು
ನುಡಿಯಲಾವಿನಿದನಿಯಲಿ
ತಳಿರುಡೆಯ ಹೂಮುಡಿಯ ಕಳೆಯುತ್ತ ಮಾಮರವು
ನಿಮಿರುವುದು ನನೆಕೊನೆಯಲಿ.

ಈ ಪದ್ಯದಲ್ಲಿ ಅರ್ಥವೇನೋ ಸ್ಪಷ್ಟವಾಗಿದೆ—ಇದನ್ನು ಒಂದು ಗುಂಪು ಒಟ್ಟಿಗೆ ಹಾಡಿತೆನ್ನಬಹುದು—ಇದರ ಮುಂದಿನ ಪದ್ಯವನ್ನು ನೋಡಿ:

ಓದಿ ಪಂಡಿತವಕ್ಕಿಯಾಗದಿರಲೇ ಹಕ್ಕಿ
　ಜಾತಿಗಿಹ ಪ್ರೀತಿಯಿರಲಿ,
ಮನುಕುಲದ ವನಿಗೇಳಿ ಶುಕಸಂಕುಲದ ಬರವ
　ಮರೆವುದರ ಭೀತಿಯಿರಲಿ.

ಇದಕ್ಕೂ ಮೇಲಿನದಕ್ಕೂ ಏನು ಸಂಬಂಧ? ಇದನ್ನು ಅದೇ ಗಳಿಗೆಯಿಂದು ಹೇಗೆ ಹಾಡೀತು? ಇದರ ಅಭಿಪ್ರಾಯವಾದರೂ ಏನು? ಎಂಬ ಪ್ರಶ್ನೆಗಳು ಉತ್ತರ ವಿಲ್ಲದೆ ಉಳಿಯುತ್ತವೆ. ಒಟ್ಟಿನಲ್ಲಿ ಎಲ್ಲ ಪದ್ಯಗಳೂ ಒಂದಲ್ಲ ಒಂದು ರೀತಿಯಲ್ಲಿ ಅಸ್ಪಷ್ಟವಾಗಿವೆಯೆಂದು ಹೇಳಬಹುದು. ಅಲ್ಲಲ್ಲಿ ಬರುವ ಗದ್ಯಭಾಗಗಳಲ್ಲಿಯೂ ಅದೇ ಅಸ್ಪಷ್ಟತೆ ತೋರುತ್ತದೆ. ಉದಾಹರಣೆಯಾಗಿ "ತೀರದ ದಾರಿ" ಎಂಬ ಕವನಕ್ಕೆ ಮೊದಲು ಮಾತಿನಲ್ಲಿ ಬರೆದಿರುವ ಈ ವಾಕ್ಯಗಳನ್ನು ಗಮನಿಸಬಹುದು: "ಸುಕುಮಾರನಿಗೆ ಒಂದು ಕನಸು ಕಾಣಿಸುತ್ತಿರುತ್ತದೆ. ಆ ಕನಸೇ ಅವನ ಧ್ಯೇಯದ ಪ್ರತೀಕ. ಧ್ಯೇಯವಾದಿಯಾದ ಅವನು ಆ ಕನಸನ್ನು ಪಡೆಯಲು ಹವಣಿಸುತ್ತಾನೆ. ಅವನಿಗೆ ದೊರೆಯುವುದು ಅದರ ಬಹಿರಂಗ ಸಾಮ್ಯವು ಮಾತ್ರ. ಅವನಿಗೆ ಬೇಕಾದುದು ರತ್ನಪಕ್ಷಿಯಂತೆ ರೂಪುಗೊಂಡ ಆ ನೀಲವರ್ಣದ ಪಕ್ಷಿ." "ಸೆಳವು" ಎಂಬ ಕವನ ದಲ್ಲಿ 'ಶಕ್ತಿ' ಎಂಬ ಒಂದು ಪಾತ್ರವು ಹೇಳುವ: "ನಿನ್ನೆ ಸಾಕುವು ತಾನೆ ಅರಸಾಗ ಲಿಲ್ಲೆ?" ಎಂಬ ಪಂಕ್ತಿಯಲ್ಲಿ ಬರುವ ಸಂದರ್ಭವು ಎಷ್ಟು ಜನಕ್ಕೆ ಸ್ಫುಟವಾದೀತು? ಮೂರು ನಾಲ್ಕು ವರ್ಷಗಳ ಕೆಳಗೆ ಅಫ್ಘಾನಿಸ್ಥಾನದಲ್ಲಿ ನಡೆದ ಒಂದು ರಾಜ ಕೀಯ ಕ್ರಾಂತಿಗೆ ಸಂಬಂಧಪಟ್ಟ ಅಂಶವೊಂದನ್ನು ಇಲ್ಲಿ ಸೂಚಿಸಿದೆ. ಸಾಮಾನ್ಯ ವಾಚಕರಿಗೆ ಇದು ವ್ಯಕ್ತವಾಗದೆಂದು ತೋರುತ್ತದೆ.

ಸ್ಪಷ್ಟತೆಯೆಂಬ ಒಂದು ಅಂಶವನ್ನು ಮಾತ್ರ ಮೇಲೆ ಚರ್ಚಿಸಿದೆ. ಈ ಗ್ರಂಥಕ್ಕೆ ಸಂಬಂಧಿಸಿದ ಇನ್ನೂ ಕೆಲವು ಅಂಶಗಳು ಇಲ್ಲಿ ಚರ್ಚಾಸ್ಪದವಾಗಿವೆ. ಇವರ ಕಾವ್ಯದ ಮತವು:

"Imagination is the body of thought ;
Be it for thee to find its harness out"

ಎಂದು ಇವರ ಸ್ವಂತ ಮಾತಿನಲ್ಲಿಯೇ ಇರುತ್ತದೆ. ಈ ಅಭಿಪ್ರಾಯವು ಉತ್ತಮ ವಾದುದೇ ಸರಿ. ಎಲ್ಲರಲ್ಲಿಯೂ ಅವರವರ ಸಂಸ್ಕಾರಕ್ಕೆ ಉಚಿತವಾದ ಪ್ರತಿಭೆ ಯಿರುತ್ತದೆ, ಅದಕ್ಕನುಸಾರವಾಗಿ ಅವರ ಜ್ಞಾನ ರೂಪುಗೊಳ್ಳುತ್ತದೆ. ಕವಿ ಯಾದವನು ತನ್ನಲ್ಲಿರುವ ಅಮೂಲ್ಯವಾದ ಪ್ರತಿಭೆಗೆ ಹೊರಗೆ ಭಾಷೆಯಲ್ಲಿ ರೂಪು ಕೊಡುತ್ತಾನೆ. ಶ್ರೀಯುತ ಗೋಕಾಕರ ಭಾವನೆಗಳು ಬಹಳ ಸೂಕ್ಷ್ಮವಾಗಿಯೂ, ಅಲ್ಲಲ್ಲಿ ಬಹಳ ಚೈತನ್ಯವುಳ್ಳವುಗಳಾಗಿಯೂ ಇವೆ. ಕೆಲವು ಭಾವನೆಗಳು ಧೀರ ವಾದುವೂ ಸತ್ಯವಾದುವೂ ಆಗಿದ್ದರೂ, ಅವುಗಳಿನ್ನೂ ರೆಕ್ಕೆ ಪುಕ್ಕ ಬಲಿಯದ ಎಳೆಯ ಹಕ್ಕಿಯಂತೆ ಶಕ್ತಿಹೀನವಾಗಿ, ಅಪಕ್ವವಾಗಿ, ಅಪೂರ್ಣವಾಗಿ ಕಾಣಿಸುತ್ತಿವೆ.

ಉದಾಹರಣೆಗೆ 'ಪತನ' ಎಂಬ ಕವನವನ್ನು ತೆಗೆದುಕೊಳ್ಳಬಹುದು. ಇದರ ವಿಷ
ಅಮರಾವತಿಯನ್ನು ಆಶಿಸಿದ ಒಬ್ಬ ತಪಸ್ವಿಯು ಅಲ್ಲಿಗೆ ಹೋಗಿಯೂ, ಆ ದೇವ
ತೇಜಸ್ಸನ್ನು ತಾಳಲಾರದೆ ಕೆಳಗೆ ಬೀಳುವನು—ಎಂದಿಷ್ಟೇ ಇದೆ. ಅವನು
ಯಾಗಿ ಅಲ್ಲಿಗೆ ಹೋಗಲು ಅರ್ಹತೆಯನ್ನು ಪಡೆದಿರುವನೆಂದು ಬಹು
ಉದ್ಘೋಷಿಸಿದಮೇಲೆ ಅಲ್ಲಿಂದ ಬಿದ್ದನೆಂದು ಹೇಳುವಲ್ಲಿ ಯಾವ ಆಶಯವೂ ಸ
ವಾಗುವುದಿಲ್ಲ. ತಪಸ್ವಿ ಬಿದ್ದನೆಂದಿಟ್ಟುಕೊಳ್ಳೋಣ. ಬಿದ್ದರೇನು? ನಮಗೆ
ವಿಧದಲ್ಲಿಯೂ ಅವನು ಸಂಬಂಧಿಸಿದಂತೆ ಕಾಣುವುದಿಲ್ಲ. ಅವನ ಬೀಳು
ವನ್ನುಂಟುಮಾಡಲಾರದು, ಮರುಕವನ್ನು ಹುಟ್ಟಿಸಲಾರದು, ಬುದ್ಧಿ
ಕಲಿಸಲಾರದು. ನಾವು ಆ ಎತ್ತರಕ್ಕೆ ಏಣಿ ಹಾಕುತ್ತಿಲ್ಲ; ಹಾಕುತ್ತಿದ್ದರೂ
ಆ ತಪಸ್ವಿ ಹೋಗಿದ್ದ ಲೋಕವು ನಿಜವೆಂದು ತೋರುವುದಿಲ್ಲ; ಆದ್ದರಿಂದ
ಅಲ್ಲಿಗೆ ನಾವು ಹೋಗಲಾಶಿಸುವುದಿಲ್ಲ. ಹೀಗಾಗಿ, ಈ ಕವನದಲ್ಲಿ ಲೇಖಕ
ಏನೆಂಬುದು ಗೊತ್ತಾಗುವುದಿಲ್ಲ. ಅಲ್ಲದೆ, ನಿರರ್ಥಕವಾದ ಎಷ್ಟೋ ಸಾ
ಕವನದಲ್ಲಿ ಇವೆ; ಅವನ್ನು ಬಿಟ್ಟರೆ ಕವನಕ್ಕೆ ಕುಂದಿಲ್ಲ. ಮತ್ತೊಮ್ಮೆ
ವುದಾದರೆ, ಇವರ ಪ್ರಕೃತ ಕವನಗಳು ತೀರ ಅಸ್ಪಷ್ಟವಾದುವು; ನೀರಿನ ಹಬೆ
ಮಂಜಿನ ಮಬ್ಬಿನಂತೆ. ನಾವು ಹಬೆಯನ್ನು ಹಿಡಿದುಕೊಳ್ಳಲಾರೆವು;
ಮಬ್ಬಿನಾಚೆಗೆ ಇರುವ ಪದಾರ್ಥಗಳು ನಮಗೆ ಗೋಚರಿಸವು. ನಮ್ಮ
ಗಟ್ಟಿಯ ವಸ್ತುಗಳಾಗಬೇಕು; ನೋಟಕ್ಕೆ ಸ್ಫುಟವಾದ ರೂಪು ಬೇಕು;
ಗ್ರಹಣಕ್ಕೆ ಎಲಬು ರಕ್ತ ಮಾಂಸಗಳಿಂದ ಕೂಡಿ ಸಜೀವವಾಗಿರುವ ಭಾವ
ಬೇಕು.

ಎ. ಕೆ.

---

**೧೫. ಮೂರ್ತಿ.**— ಲೇಖಕರು: "ಅಂಬಿಕಾತನಯದತ್ತ"; ಕ್ರೌನ್
ಪು. ೪೨; ಬೆಲೆ: ೮ ಆಣೆ.

ಇದು ಶ್ರೀಯುತ ಬೇಂದ್ರೆಯವರ ಕೆಲವು ಕವನಗಳ ಸಂಗ್ರಹ.
ಎರಡು ಭಾಗಗಳಿವೆ: ಒಂದನ್ನು 'ಮೂರ್ತಿ' ಎಂದೂ, ಇನ್ನೊಂದನ್ನು
ಕಸ್ತೂರಿ' ಎಂದೂ ಕರೆದಿದ್ದಾರೆ. 'ಮೂರ್ತಿ' ಎಂಬ ಮೊದಲ ಭಾಗ
ಒಪ್ಪದೆಯೂ, ಕಾಮಕಸ್ತೂರಿ ಎಂಬ ಎರಡನೆಯ ಭಾಗ ಆದರಣೀಯವಾ
ತೋರುತ್ತದೆ. ಎರಡನೆಯ ಭಾಗದಲ್ಲಿ ಮೆರೆಯುವ ಅಭಿಪ್ರಾಯದ ಸೌ
ವಾಗಲೀ ಛಂದೋಗತಿಯ ಒಯ್ಯಾರವಾಗಲೀ ಒಂದನೆಯ ಭಾಗದಲ್ಲಿ ಸಿಕ್ಕು
ಅಷ್ಟೇ ಅಲ್ಲ; ಎರಡನೆಯ ಭಾಗದಲ್ಲಿ ಒಂದು ನಿರ್ದಿಷ್ಟವಾದ ಗುಣ ಕಾ
ಮೊದಲನೆಯುದರಲ್ಲಿ ಒಂದು ನಿರ್ದಿಷ್ಟವಾದ ದೋಷವಿದೆ ಎಂದು ನಮ್ಮ ಅಭಿಪ್ರಾ
ಅಸ್ಪಷ್ಟತೆಯೇ ಆ ದೋಷ. ಉದಾಹರಣೆಗೆ 'ಬಾಳು' ಎಂಬ ಕವಿತೆಯಲ್ಲಿ
ಈ ಪಂಕ್ತಿಗಳನ್ನು ನೋಡಬಹುದು:

ನೆಲದ ಹೊಟ್ಟೆ ಬದುಕನೋಡು—
ಗಟ್ಟಿಕಲ್ಲು ಹಿಟ್ಟು ಮುಟ್ಟ.
ಸದರು ಗುಂಡು ದುಂಡಿ ಬಂಡೆ
ಮುಟ್ಟಮಣ್ಣ ವಿವಿಧ ಬಣ್ಣ.
ಮಣಿಯ ಮಣಿಯ ಕಣಿಯ ಕಣಿಯ
ಗುಡ್ಡ ಮೊರಡಿ ಒಡ್ಡು ಸಾಲು.

ಹೀಗೆಯೇ ಇದು ಹೋಗತಕ್ಕುದಾಗಿದೆ. ಇಂಥ ಕವಿತೆಯನ್ನು ಓದುವಲ್ಲಿ ಅರ್ಥವು ಅಲಭ್ಯವಾಗಿರುವುದರಿಂದ ಕಾವ್ಯಾನಂದಕ್ಕೆ ಲೋಪ ಬರುವುದು. ಇನ್ನು 'ಕಾಮಕಸ್ತೂರಿ'ಗೆ ತಿರುಗೋಣ. 'ಕಾಮಕಸ್ತೂರಿ' ನಿಸ್ಸಂದೇಹವಾಗಿಯೂ ಸುವಾಸನೆಯನ್ನು ಬೀರುತ್ತಿದೆ. ಛಂದಸ್ಸಿನಲ್ಲಿ ವೈವಿಧ್ಯವೂ ಗತಿಯೂ ಇರುವಂತೆ ಭಾಷೆಯಲ್ಲಿ ಪ್ರಸಾದ ಗುಣವೂ ಇದೆ. ಒಂದು ಪದ್ಯವನ್ನು ಉದಾಹರಿಸಬಹುದು: ಆದರ ಭಾಷೆ ಬೇಂದ್ರೆಯವರು ಉಪಯೋಗಿಸುವಂಥ ಧಾರವಾಡದ ಜನತೆಯ ಭಾಷೆಯೆಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು—

### ಪಾರಿ ನೋಟ
(ಹೊಳಿಯ ಮೇಲೆ)

ಪಾರಿ ನೋಟ ಹಾರತಿತ್ತೊ ಹೊಳಿಮ್ಯಾಗ
ಹೊಸಾಹರೆ ಈಸತಿತ್ತೊ ಹೊಳಿಯಾಗ ॥ ಪ ॥ ॥ ೧ ॥

ಒಂದು ಬಳ್ಳಿ ಹೂ ಬಿಡಲಿತ್ತೋ ಹೊಳಿಮ್ಯಾಗ
ಗಾಳಿಯೊಂದು ಸುಳಿದಾಡತಿತ್ತೋ ಹೊಳಿಯಾಗ ॥ ॥ ೨ ॥

ಸೂಜಿಗಲ್ಲು ತಿರುಗತಿತ್ತೋ ಹೊಳಿಮ್ಯಾಗ
ಸೂಜಿಯೊಂದು ತೇಲತಿತ್ತೊ ಹೊಳಿಯಾಗ ॥ ॥ ೩ ॥

ಸೆರಗು ಒಂದು ಅಲೆದಾಡತಿತ್ತೊ ಹೊಳಿಮ್ಯಾಗ
ಬೆರಗು ಒಂದು ನಲಿದಾಡತಿತ್ತೊ ಹೊಳಿಯಾಗ ॥ ॥ ೪ ॥

ತುಂಬಿಯೊಂದು ಹಾಡತಿತ್ತೋ ಹೊಳಿಮ್ಯಾಗ
ತಾವರ್‍ಯೊಂದು ಬಾಯ್ಬಿಡತಿತ್ತೊ ಹೊಳಿಯಾಗ ॥

ಈ ಪದ್ಯವನ್ನು ಓದಿದರೆ ಅರ್ಥವಾಗುತ್ತದೆ, ಮೇಲಾಗಿ ಆನಂದವಾಗುತ್ತದೆ. ಈ ಕವಿತೆಯ ಭಾವ, ಮಾತುಗಳು, 'ಛಂದಸ್ಸು' ಎಲ್ಲವೂ ಸುಂದರ. ಹೀಗೆಯೇ ಗಮನಾರ್ಹವಾದ ಇನ್ನು ಕೆಲವು ಪದ್ಯಗಳ ಹೆಸರುಗಳನ್ನು ಹೇಳುವುದಾದರೆ— 'ಬಡವರ ಮಗಳು,' 'ನನ್ನವಳೇನ,' 'ಅವನು—ಅವಳು,' 'ಬರಿಗೊಡದ ಬಾಲಿ,' 'ಚಿತ್ರ'—ಇವುಗಳೆಲ್ಲಾ ಚೆನ್ನಾಗಿವೆ. ಇವುಗಳಲ್ಲಿ ಪ್ರತಿಯೊಂದನ್ನೂ ಉದಾಹರಿಸ ಲಿಷ್ಟವಾದರೂ ವಿಮರ್ಶೆಯಲ್ಲಿ ಅಷ್ಟಕ್ಕೆ ಅವಕಾಶವಿಲ್ಲವೆಂದು ವಿಷಾದಿಸಬೇಕಾಗಿದೆ.

ಎ. ಕೆ. ಪು.

---

## ೧೯೩೭ನೆಯ ಅಕ್ಟೋಬರ್ ಮೊದಲಿನಿಂದ ೧೯೩೭ನೆಯ ಮಾ ಕೊನೆಯವರೆಗೆ

### (i) ಪರಿಷತ್ತಿಗೆ ವಿಮರ್ಶೆಗಾಗಿ ಬಂದ ಗ್ರಂಥಗಳು

೧. ದಾಮಾಜಿಪಂತ.—ಶ್ರೀ॥ ಜಿ. ಎಸ್. ಲಕ್ಷ್ಮಣ ಪೈ ಅವರು, ೨. ಸಿ ಒರತೆಗಳು.—ಶ್ರೀ॥ ಹೊಯಿಸಳ ಮೊದಲಾದವರು, ೩. ನಮ್ಮ ಪುಸ್ತಕ.—ಸಂಪಾ ಶ್ರೀ॥ ದೇವುಡು ನರಸಿಂಹಶಾಸ್ತ್ರಿಗಳು, ಎಂ.ಎ., ೪. ಆಟದ ಬಯಲು.—ಶ್ರೀ ಅವರು, ೫. ಶಿಲಾಮುಖಿ.—ಶ್ರೀ॥ ಎಂ. ವಿ. ಸೀತಾರಾಮಯ್ಯನವರು, ೬. ಕಂಠೀರವ ದಸರಾ ಸಂಚಿಕೆ.—ಸಂಪಾದಕರಿಂದ, ೭. ಕಿಂದರಿ ಜೋಗಿ ಮತ್ತು ಕಥನ ಕವನಗಳು.—ಶ್ರೀ॥ ಕೆ. ವಿ. ಪುಟ್ಟಪ್ಪನವರು, ಎಂ.ಎ., ೮. The My University English-Kannada Dictionary.—Mr. B. Venkatanaranappa, Chief Editor: The English Kannada Dictionary Committee, Bangalore, ೯. U of Honesty in Trade.—Kimat B. Kushalani, B.E., ೧೦. ಯುಗಾದಿ.—ವಾ ೧೧. ಹೂವಿನ ಆಸೆ.—ಶ್ರೀ॥ ಎಂ. ವಿ. ಸೀತಾರಾಮಯ್ಯನವರು, ಎಂ.ಎ., ೧೨. ಪ್ರಾ ವಿದ್ಯಾಭ್ಯಾಸ ಪದ್ಧತಿಗಳು.—ಶ್ರೀ॥ ಎಂ. ವೆಂಕೋಬಾಚಾರ್ ಅವರು, ಬಿ.ಎ., ೧೩. ಪುಷ್ಪಮಾಲೆ.—'ಶ್ರೀ ಸ್ವಾಮಿ', ೧೪. ಭಾರತೀಯ ನವಜನ್ಮ (ಶ್ರೀ ಘೋಷರು).—ಅನುವಾದಕರು: ಶ್ರೀ॥ ಬೇಂದ್ರೆ ಅವರು, ೧೫. ಪಂಚಾಮೃತ.— ಕೆ. ವಿ. ಕೃಷ್ಣಭಟ್ಟರು, ೧೬. ಶ್ರೀ ಸಮರ್ಥ ರಾಮದಾಸಸ್ವಾಮಿಗಳ ಅವತಾರದ ರಹ ಶ್ರೀ ಶಂಕರ ಶ್ರೀ ಕೃಷ್ಣದೇವ ಇವರ ಗ್ರಂಥದ ಸಮಭಾಷಾಂತರ, ೧೭-೧೮. The Sri Bhashya (Sripati Panditacharya), Vols. I & II. ೧೯. ನಾಡಹಬ್ಬ.—ಶ್ರೀ ೨೦. ಒಳಸಂಚು.—ಶ್ರೀ॥ ಬಿ. ಎಸ್. ವೆಂಕಟರಾಮ್ ಅವರು, ೨೧. ಸನಾ ಪತ್ರಿಕೆ).—ಸಂಪಾದಕರು: ಬಾಲಚಂದ್ರ ಘಾಣೇಕರ ಅವರು, ೨೨. ಹಾಡಿನ ಚೀ ಶ್ರೀ 'ಹೊಯಿಸಳ'ರು, ೨೩. ಸಂಕ್ಷೇಪ ಶೈಲಪುರಿ ರಾಮಾಯಣ.—ಶ್ರೀ॥ ಲಕ್ಷ್ಮೀ ಅವರು, ೨೪. Garland of Wild Flowers.—Anglo-Kannada Magazine, P by the Malleswaram High School, Bangalore, ೨೫. ಗೋಮುಖ ವ್ಯಾಘ್ರ ಅ. ನ. ಕೃಷ್ಣರಾಯರು, ೨೬. ಕನ್ನಡ ಕಂದ (ಮಾಸಪತ್ರಿಕೆ).—ಸಂಪಾದಕರು: ಕರವೀರ ಮುಮ್ಮಿಗಟ್ಟಿ ಅವರು, ೨೭. ದಿನಚರಿ ಧ್ಯಾನ.—ಶ್ರೀ॥ ಡಿ. ಆರ್. ಚೆನ್ನ ಬಿ.ಎ., ೨೮. ರಾಜಾ ಮಲಯಸಿಂಹ (ಭಾಗ ೧).—ಶ್ರೀ॥ ಎಂ. ಎ. ಶ್ರೀನಿವಾಸಾಚಾ ೨೯. ವಿಜಯನಗರ ಸ್ಥಾಪಕರಾರೆಂಬುದಕ್ಕೆ ಸಂಬಂಧಪಟ್ಟ ದಾಖಲೆಗಳ ಸಂಗ್ರ ಶ್ರೀ॥ ವಿ. ಆರ್. ಹನುಮಂತಯ್ಯನವರು, ೩೦. ಕನ್ನಡಿಗರ ಕುಲಗುರು.—ಶ್ರೀ ಚೆನ್ನ ಅವರು, ಶ್ರೀ॥ ಸಿಂಪೀ ಲಿಂಗಣ್ಣನವರು, ೩೧. Tolstoy's Stories (ತೆಲು ಶ್ರೀ॥ ಎಚ್. ನಂಜುಂಡರಾಯರು, ರಾಜಕೀಯ ವಿಚಾರ ತರಂಗ.—ಶ್ರೀ॥ ಎಸ್. ಅಂಗಡಿ ಅವರು, ಬಿ.ಎ., ಎಲ್‌ಎಲ್.ಬಿ., ೩೩. ಸುಬೋಧ (ಮಾಸಪತ್ರಿಕೆ).—ಸಂ ರಿಂದ, ೩೪. ಬೆಳದಿಂಗಳು.—ಶ್ರೀ॥ ಜಿ. ಪಿ. ರಾಜರತ್ನಂ ಅವರು, ಎಂ.ಎ., ವಿದೇಶೀಯ ಲೋಕೋಪಕಾರಿಗಳು.—ಶ್ರೀಮಾನ್ ಎಲ್. ಸ್ವಾಮಿರಾಯರು, ೩೬. ಸೋಲೋ-ಗೆಲವೋ.—ಶ್ರೀ॥ ದೇವುಡು ನರಸಿಂಹಶಾಸ್ತ್ರಿಗಳು, ಎಂ.ಎ., ೩೭. Mimamsa-Prakash.—Anglo-Sanskrit Monthly Journal of the M. G. P. Poona, ೩೮. ನರಕದಲ್ಲಿ ನರಸಿಂಹ.—ಶ್ರೀ॥ ಆರ್. ವಿ. ಜಹಗೀರ್‌ದಾರ್ ಅವರು, ೩೯. ತರುಣ ಧಮನಿ.—"ಚಕ್ರಪಾಣಿ," ೪೦. ಆಳಿದ ಚಕ್ರವರ್ತಿ ಸಾ ಐದನೆಯ ಜಾರ್ಜ್‌ರವರು.—ಶ್ರೀ॥ ಕೆ. ದೊರೆಸ್ವಾಮಿ ಐಂಗಾರ್ ಅವರು, (ಆನರ್ಸ್), ೪೧. ಹಗಲುಗನಸುಗಳು.—ಶ್ರೀ॥ ಎ. ಎನ್. ಮೂರ್ತಿರಾಯರು, ೪೨. ಹೂಬಿಸಿಲು.—ಸೌ॥ ಶ್ಯಾಮಲಾ ಬೆಳಗಾಂವಕರ್ ಅವರು, ೪೩. ಭಾವಪ್ರ ಶ್ರೀ॥ ಹ. ಪಿ. ಜೋಶಿಯವರು, ಬಿ.ಎ.

## (ii) ಪರಿಷತ್ತಿಗೆ ಬಂದಿರುವ ಇತರ ಪುಸ್ತಕ ಪ್ರಕಟನೆಗಳು

೧. 5th Annual Report of the Gadag Chamber of Commerce, ೨. ಸಾಧ್ವಿ.—ಸಂಪಾದಕರಿಂದ, ೩. ಮತದಾರ ಪಟ್ಟಿಗಳು ಕನ್ನಡದಲ್ಲಿಯೇ ಬೇಕು.—ಕರ್ನಾಟಕ ಸಾಹಿತ್ಯ ಸೇವಾ ಮಂಡಲಿ, ಬೆಳಗಾಂವಿ, ೪. ತ್ರಿವೇಣಿ (ದಸರಾ ಸಂಚಿಕೆ).—ಸಂಪಾದಕರಿಂದ, ೫. ಪ್ರಭಾತ (ದಸರಾ ಸಂಚಿಕೆ).—ಸಂಪಾದಕರಿಂದ, ೬. ಸ್ವದೇಶಾಭಿಮಾನಿ (ದಸರಾ ಸಂಚಿಕೆ).—ಸಂಪಾದಕರಿಂದ, ೭. ಯುಗಾದಿ (ಕವನಗಳು).—ಶ್ರೀ॥ ಎಂ. ವಾಸುದೇವ ಮೂರ್ತಿಗಳು, ಬಿ.ಎ., ೮. Proceedings and Address of the First Indian Cultural Conference.—Hon. General Secretary, Indian Research Institute, Calcutta, ೯. Rules and Reports (Presidential Addresses) of the Indian Research Institute, Calcutta, ೧೦. Annual Report of the K. R. Kama Oriental Research Institute (for 1935), ೧೧. ಶಾಲಾ ಸಂವಿಧಾನ, ಸುಶಿಕ್ಷಣ ಮತ್ತು ಆರೋಗ್ಯ.—ಶ್ರೀ॥ ಸುಲ್ತಾನ್ ಮೊಹಿಯುದ್ದೀನ್‌ರವರು, ಎಂ.ಎ., ಎಲ್‌ಎಲ್.ಬಿ., ಎಂ.ಡಿ., ೧೨. ಪಂಪ ರಾಮಾಯಣ ಸಂಗ್ರಹ.—ಮೈಸೂರು ವಿಶ್ವವಿದ್ಯಾನಿಲಯ, ೧೩. ಜೈನ ನಿತ್ಯಕ್ರಿಯಾ ಸಂಗ್ರಹ.—ಶ್ರೀ॥ ಎಂ. ಎಸ್. ಪದ್ಮನಾಭ ಶಾಸ್ತ್ರಿಗಳು, ೧೪–೧೫. ಚಿತ್ರಾಂಗದಾ, ಸಂನ್ಯಾಸಿ ಮತ್ತು ಇತರ ಕಥೆಗಳು.—ಶ್ರೀ॥ ಕೆ. ವಿ. ಪುಟ್ಟಪ್ಪನವರು, ಎಂ.ಎ., ೧೬. ಸ್ವಾಗತ ಭಾಷಣ.—ಬೆಳಗಾಂವಿ ಸಾಹಿತ್ಯ ಸಮ್ಮೇಳನದ ಮೂರನೆಯ ಅಧಿವೇಶನ: ಸ್ವಾಗತಾಧ್ಯಕ್ಷರು, ಶ್ರೀ॥ ಮಲ್ಲೇಶ ಪ್ರಭುವಾಲಿ ಅವರು, ೧೭. ಭಾರತೀಯ ಸಾಹಿತ್ಯ ಪರಿಷತ್ ಔರ್ ಭಾಷಾಕ ಪ್ರಶ್ನ.—ಸಸ್ತಾ ಸಾಹಿತ್ಯ ಮಂಡಲಿ, ಡೆಲ್ಲಿ, ೧೮. ವಿಜಯನಗರ ಸಾಮ್ರಾಜ್ಯ.—ಶ್ರೀ॥ ದೇಸಾಯಿ ಪಾಂಡುರಂಗರಾಯರು, ಬಿ.ಎ. (ಆನರ್ಸ್), ೧೯. ಬೀಜಗಣಿತ.—ಮೈಸೂರು ಸರಕಾರ, ೨೦. ಮಹಾಭಾರತ (ದ್ರೋಣ ಪರ್ವ).—ಗೌ॥ ಓರಿಯಂಟಲ್ ಲೈಬ್ರೆರಿ, ಮೈಸೂರು, ೨೧. Report of the Administration of Mysore for 1935-36.—ಮೈಸೂರು ಸರಕಾರ, ೨೨–೧೨೭. Indian Review, 1904–15: 12 Vols. Educational Review, 1902–12: & 11, Vols. 1915–16: Vols. 13; The Strand, 1905–16: Vols. 22; Review of Reviews, 1902-16: Vols. 26; Modern Review, 1909-16: Vols. 16; Science Siftings, 1905, 1910–16: Vols. 9; Wide World, 1904: Vols. 2; Indian Economist, 1907: Vol. 1; Tit-Bits, 1908–16: Vols. 15—The Basavanagudi Union and Service Club, Bangalore.

# ಸಂಪಾದಕೀಯ ಟಿಪ್ಪಣಿಗಳು

ಪ್ರಸಕ್ತ ಸಂಚಿಕೆಯೊಂದಿಗೆ ಪರಿಷತ್ಪತ್ರಿಕೆಯ ೪೦ನೆಯ ಸಂಪುಟವು ಪ್ರಾ
ವಾಗುವುದಷ್ಟೆ. ಈ ಸಂಚಿಕೆಯು ಎರಡು ತ್ರೈಮಾಸಿಕಗಳ ಕೂಡುಸಂಚಿಕೆ

**ಸ್ವವಿಷಯ**

ಈಗ ಪ್ರಕಟವಾಗುವುದಕ್ಕೆ ಬದಲಾಗಿ ಕೆಲವು ತಿ
ಹಿಂದೆಯೇ ಪ್ರತ್ಯೇಕ ಸಂಚಿಕೆಗಳಾಗಿ ಪ್ರಕಟವಾಗಬೇಕಾ
ಕಾರಣಾಂತರಗಳಿಂದ ಸಾಧ್ಯವಾಗದೆ ಹೋದುದ
ವಿಷಾದಿಸುತ್ತೇವೆ. ಈ ಪತ್ರಿಕೆಗೆ ೪೧ ವರ್ಷಗಳು ತುಂಬಿ ಪ್ರಬುದ್ಧ
ಪ್ರಾಪ್ತವಾಗಿರುವ ಸಂಗತಿಯು ಕನ್ನಡ ಸಾಹಿತ್ಯದ ಬೆಳೆವಣಿಗೆಯಲ್ಲಿ ಬದ್ಧಾ
ಸೇವೆಯನ್ನು ಸಲ್ಲಿಸುತ್ತಿರುವ ಸಮಸ್ತ ಭಾಷಾಪ್ರೇಮಿಗಳಲ್ಲಿಯೂ ಹೆಮ್ಮೆ
ಹುಟ್ಟಿಸತಕ್ಕದ್ದಾಗಿದೆ. ಇಂತಹ ಸಂದರ್ಭದಲ್ಲಿ ಪತ್ರಿಕೆಯು ಇಷ್ಟು ದೀರ್ಘ
ಯಶಸ್ವಿಯಾಗಿ ನಡೆಯುತ್ತಾ ಬರುವಂತೆ ಸಹಾಯಮಾಡಿರುವ ಚಂದಾದಾ
ಗ್ರಾಹಕರು, ಲೇಖಕರು, ಗ್ರಂಥವಿಮರ್ಶಕರು ಮುಂತಾದ ಸಮಸ್ತ ಮಹನೀ
ಗಳಿಗೂ ಸಂಪಾದಕ ಮಂಡಲಿಯ ಪರವಾಗಿ ಕೃತಜ್ಞತಾಪೂರ್ವಕವಾದ ವ
ಗಳನ್ನು ಸಮರ್ಪಿಸುವುದಲ್ಲದೆ ಮುಂದೆಯೂ ಭಾಷಾಭಿಮಾನಿಗಳು ಇತೋಪ್ಯ
ವಾಗಿ ಪತ್ರಿಕೆಗೆ ಸಹಾಯಮಾಡುತ್ತಾ ಬರುವಂತೆ ಕರುಣಿಸಬೇಕೆಂದು ವಿ
ಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

ಈ ಸಂದರ್ಭದಲ್ಲಿ ಪತ್ರಿಕೆಯನ್ನು ಕಾಲಕಾಲಕ್ಕೆ ಸುಸೂತ್ರವಾಗಿ ತ
ಪಡಿಸುವ ವಿಚಾರದಲ್ಲಿ ಸಂಘಟಿಸಿರುವ ಕೆಲವು ತೊಂದರೆಗಳನ್ನು ನಮ್ಮ ವಾ
ಅವಗಾಹನೆಗೆ ತರತಕ್ಕದ್ದು ಅಪ್ರಕೃತವೆನಿಸಲಾರದು. ಮೊದಲನೆಯದಾಗಿ, ಪತ್ರಿ

**ಪತ್ರಿಕೆಗೆ ಬೇಕಾದ ಪ್ರೋತ್ಸಾಹ**

ಅಚ್ಚಿನ ವೆಚ್ಚಕ್ಕೆ ತಕ್ಕಷ್ಟು ವರಮಾನವು ಚಂದಾ ಮ
ಬಾರದೆ ಇರುವುದು. ಈ ವಿಚಾರವಾಗಿ ನಾವು ಪ್ರಾ
ಕೊಳ್ಳುವುದಿಷ್ಟೆ: ಇದುವರೆಗೆ ಪತ್ರಿಕೆಯ ಚಂದಾದಾ
ದಿರುವ ಪರಿಷತ್ಸದಸ್ಯರೂ, ಇತರ ಕನ್ನಡದ ಅಭಿಮಾನಿ
ಚಂದಾದಾರರಾಗುವುದರ ಮೂಲಕ ಸಹಾಯ ಮಾಡುತ್ತಾ ಬರಬೇಕು. ಈಗಾ
ಚಂದಾದಾರರಾಗಿರುವವರು ಮುಂದೆ ತಮಗೆ ಪತ್ರಿಕೆಯು ಬೇಕಿಲ್ಲವೆಂದು ಬಿ
ಹಿಂದಿನ ಪ್ರೋತ್ಸಾಹವನ್ನೇ ಮುಂದೆಯೂ ತೋರಿಸುತ್ತಾ ಬರಬೇಕು.

ಇನ್ನು. ಪತ್ರಿಕಾಚಾಲಕರಿಗಿರುವ ಮತ್ತೊಂದು ಹೆಚ್ಚಿನ ತೊಂದರೆ ಏ
ದೆಂದರೆ, ಲೇಖನಗಳನ್ನೂ ಗ್ರಂಥ ವಿಮರ್ಶೆಗಳನ್ನೂ ಸಕಾಲಕ್ಕೆ ಒದಗಿಸಿಕೊಳ್ಳು
ಈ ವಿಚಾರವಾಗಿ ನಾವು ಹೇಳಬಯಸುವುದೇನೆಂದರೆ—ಈ ಪತ್ರಿಕೆಯಲ್ಲಿ ಪ್ರಕ
ಅರ್ಹವಾದ ಪ್ರೌಢಲೇಖನಗಳನ್ನು ಬರೆಯಬಲ್ಲ ವಿದ್ವಾಂಸರಿಗಾಗಲಿ, ವಿಮರ್
ಬಂದ ಗ್ರಂಥಗಳನ್ನು ಪರಿಶೀಲಿಸಬಲ್ಲ ವಿಮರ್ಶಕರಿಗಾಗಲಿ ವಿಸ್ತಾರವಾದ ಕ್ಷ

ಪ್ರಾಂತದಲ್ಲಿ ಕೊರತೆ ಏನೂ ಇಲ್ಲ. ಮುಖ್ಯವಾಗಿ ಪತ್ರಿಕೆಯನ್ನು ತಮ್ಮದಾಗಿ ಭಾವಿಸಿ, ಅದರ ಪುರೋವೃದ್ಧಿಗಾಗಿ ಸಹಾಯಮಾಡುತ್ತಾ ಬರತಕ್ಕದ್ದು ತಮ್ಮ ಕರ್ತವ್ಯವೆಂದು ಕನ್ನಡನಾಡಿನ ಸಮಸ್ತ ವಿದ್ವನ್ಮಣಿಗಳೂ ದೃಢಸಂಕಲ್ಪಮಾಡಿ ಪತ್ರಿಕೆಗೆ ಲೇಖನಗಳನ್ನು ಕಳುಹಿಸುವುದರ ಮೂಲಕವೂ, ವಿಮರ್ಶೆಗಾಗಿ ಕಳುಹಿಸಿದ ಪುಸ್ತಕಗಳ ವಿಮರ್ಶೆಗಳನ್ನು ಸಾವಕಾಶ ಮಾಡದೆ ಬರೆದುಕಳುಹಿಸುವುದರ ಮೂಲಕವೂ, ಇತರ ವಿಧವಾಗಿಯೂ ಸಹಾಯಮಾಡುತ್ತಾ ಬರಬೇಕು.

ಈ ಸಂದರ್ಭದಲ್ಲಿ ವಿಮರ್ಶೆಗಾಗಿ ಪುಸ್ತಕಗಳನ್ನು ಕಳುಹಿಸುವ ಗ್ರಂಥಕರ್ತರಲ್ಲಿಯೂ, ಪುಸ್ತಕ ಪ್ರಕಾಶಕರಲ್ಲಿಯೂ ಒಂದು ಮನವಿ ಮಾಡಿಕೊಳ್ಳಬೇಕಾಗಿದೆ.

**ವಿಮರ್ಶೆಗಾಗಿ ಪುಸ್ತಕಗಳು: ಎರಡು ಪ್ರತಿಗಳು**

ಅದಾವುದೆಂದರೆ, ವಿಮರ್ಶೆಗಾಗಿ ಪುಸ್ತಕಗಳನ್ನು ಕಳುಹಿಸುವವರು ಒಂದೇ ಪ್ರತಿಯನ್ನು ಕಳುಹಿಸುವುದಕ್ಕೆ ಬದಲಾಗಿ ಎರಡು ಪ್ರತಿಗಳನ್ನು ಕಳುಹಿಸಬೇಕೆಂಬುದು. ಒಂದೇ ಒಂದು ಪ್ರತಿಯನ್ನು ಕಳುಹಿಸುವುದರಿಂದ ಅದನ್ನು ವಿಮರ್ಶಕರಿಗೆ ಕಳುಹಿಸಿ ಪುನಃ ಪರಿಷತ್ತಿನ ಸರಸ್ವತೀಭಂಡಾರಕ್ಕಾಗಿ ಹಿಂದಕ್ಕೆ ತರಿಸಿಕೊಳ್ಳುವುದೆಂದರೆ ಅಂಚೆಯ ವೆಚ್ಚವೂ ದುಬಾರಿ; ಅಲ್ಲದೆ ವಿಮರ್ಶಕರು ತಮ್ಮ ಶ್ರಮಕ್ಕೆ ಪ್ರತಿಯಾಗಿ ಪುಸ್ತಕವನ್ನು ಇರಿಸಿಕೊಳ್ಳುವುದಕ್ಕೂ ಆಗುವುದಿಲ್ಲ. ಈ ಕಾರಣದಿಂದ ಇನ್ನುಮುಂದೆ ವಿಮರ್ಶೆಗಾಗಿ ಪುಸ್ತಕಗಳನ್ನು ಕಳುಹಿಸುವವರು ದಯೆಯಿಟ್ಟು ಎರಡೆರಡು ಪ್ರತಿಗಳನ್ನು ಕಳುಹಿಸಬೇಕೆಂದು ಪ್ರಾರ್ಥಿಸುತ್ತೇವೆ.

**ಸಂಪಾದಕರ ಬದಲಾವಣೆ**

ಕಳೆದ ಮೂರು ವರ್ಷಗಳಿಂದಲೂ ಪರಿಷತ್ಪತ್ರಿಕೆಯ ಸಂಪಾದಕರೂ ಸಂಪಾದಕ ಮಂಡಲಿಯ ವ್ಯವಸ್ಥಾಪಕರೂ ಆಗಿದ್ದು ಈ ಪತ್ರಿಕೆಯ ಕೆಲಸ ಕಾರ್ಯಗಳನ್ನು ಅತ್ಯಂತ ಶ್ಲಾಘನೀಯವಾದ ರೀತಿಯಲ್ಲಿ ನಡಸಿಕೊಂಡುಬಂದು ಪರಿಷತ್ತಿಗೆ ದೊಡ್ಡ ಉಪಕಾರಮಾಡಿರುವ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ. ಅವರು ಕೆಲವು ಅನಿವಾರ್ಯಗಳ ದೆಸೆಯಿಂದ ತಮ್ಮ ಕೆಲಸದಿಂದ ಬಿಡುವು ಮಾಡಿಕೊಡಬೇಕೆಂದು ಪ್ರಾರ್ಥಿಸಿಕೊಳ್ಳಲಾಗಿ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ಅವರ ಕೋರಿಕೆಯನ್ನು ನಡಸಿಕೊಡಬಹುದೆಂದು ಬಹು ವಿಷಾದದಿಂದ ತೀರ್ಮಾನಿಸಿದುದಲ್ಲದೆ ಅವರ ಉಪಕಾರಕ್ಕಾಗಿ ಪರಿಷತ್ತಿನ ಪರವಾಗಿ ತನ್ನ ಮನಃಪೂರ್ವಕವಾದ ವಂದನೆಗಳನ್ನು ಅವರಿಗೆ ಸಮರ್ಪಿಸಿ, ಅವರು ಸಂಪಾದಕತ್ವದಿಂದ ವಿರಾಮ ಹೊಂದಿದರೂ ಕೂಡ ಸಂಪಾದಕ ಮಂಡಲಿಯ ಸದಸ್ಯರಾಗಿದ್ದುಕೊಂಡು ಪತ್ರಿಕೆಯ ಕಾರ್ಯದಲ್ಲಿ ಸಹಾಯಮಾಡುತ್ತಾ ಬರಬೇಕೆಂದೂ, ಅವರ ಸ್ಥಾನದಲ್ಲಿ ಶ್ರೀಮಾನ್ ಡಿ. ಸಿ. ಸುಬ್ಬರಾಯಪ್ಪ, ಬಿ.ಎ., ಬಿ.ಎಲ್. ಅವರಿಗೆ ಸಂಪಾದಕ ಮಂಡಲಿಯ ವ್ಯವಸ್ಥಾಪಕತ್ವವನ್ನೂ ಪರಿಷತ್ಪತ್ರಿಕೆಯ ಸಂಪಾದಕತ್ವವನ್ನೂ ವಹಿಸತಕ್ಕದ್ದೆಂದೂ ೩೧–೯–೧೯೩೭ರಲ್ಲಿ ಒಂದು ನಿರ್ಣಯವನ್ನು ಮಾಡಿತು. ಈ ನಿರ್ಣಯವು ಜಾರಿಗೆ ಬಂದ ಈ ಸಂದರ್ಭದಲ್ಲಿ ಶ್ರೀ॥ ಶಾಸ್ತ್ರಿಗಳು ಪತ್ರಿಕೆಯ ಪುರೋವೃದ್ಧಿಗಾಗಿ ಎಷ್ಟರಮಟ್ಟಿಗೆ ಶ್ರಮಿಸಿ ಕೆಲಸಮಾಡಿದ್ದಾರೆಂಬ ವಿಚಾರದಲ್ಲಿ ನಾವೇನೂ ಹೆಚ್ಚಿಸ

ಪ್ರಶಂಸೆ ಮಾಡಬೇಕಾಗಿಲ್ಲ: ಏಕೆಂದರೆ, ಅವರ ಸಂಪಾದಕತ್ವದಲ್ಲಿ ಪ್ರಕ
ಕಳೆದ ಮೂರು ವರ್ಷಗಳ ಪರಿಷತ್ಪತ್ರಿಕೆಯ ಸಂಪುಟಗಳೇ ಅವರ ಪ್ರೌಢಿಮೆ
ಘಂಟಾಘೋಷವಾಗಿ ಸಾರುತ್ತವೆ. ಇವುಗಳಲ್ಲಿ ಪ್ರಕಟವಾಗಿರುವ ಪ್ರತಿ
ಲೇಖನದಲ್ಲಿಯೂ ಇವರ ಕೈ ಚಳಕವು ಅಪ್ರತಿಹತವಾಗಿ ತೋರಿಬರುತ್ತಿದೆ;
ಇವರ ಉಭಯಭಾಷಾಪಾಂಡಿತ್ಯವೂ, ವಿಮರ್ಶಾತ್ಮಕ ದೃಷ್ಟಿಯೂ ಎತ್ತಿ ಕಾ
ಎಂದರೆ ಅತಿಶಯೋಕ್ತಿಯಾಗಲಾರದು. ಹೊಸ ಸಂಪಾದಕರಾದ ನಮಗೆ
ರೀತಿಯಲ್ಲಿ ಪತ್ರಿಕೆಯನ್ನು ಮುಂದೆಯೂ ನಡಸಿಕೊಂಡು ಬರಲು ತಕ್ಕ ಧೈ
ಸಹಾಯ ಸಂಪತ್ತಿಗಳೂ ದೊರೆಯುವಂತಾಗಲೆಂದು ನಿರೀಕ್ಷಿಸುತ್ತೇವೆ.

ಮೈಸೂರು ಸಂಸ್ಥಾನದ ವಿದ್ಯಾಶಾಖೆಯ ಮುಖ್ಯಾಧಿಕಾರಿಗ
ಶ್ರೀಮಾನ್ ಎನ್. ಎಸ್. ಸುಬ್ಬರಾವ್, ಎಂ.ಎ. (ಕ್ಯಾಂಟಬ್.), ಬಾರ್-ಅ

**ಶ್ರೀಮಾನ್ ಎನ್. ಎಸ್. ಸುಬ್ಬರಾಯರಿಗೆ ಅಭಿನಂದನ**

ಅವರು ಕನ್ನಡದ ಏಳಿಗೆಗಾಗಿ ಮಾಡಿರುವ ಉಪಕಾ
ಅಷ್ಟಿಷ್ಟೆಂದು ಹೇಳಿತೀರದು. ಎರಡು ವರ್ಷಗಳ
ಪರಿಷತ್ತಿನ ಸಾಹಿತ್ಯ ಸಮ್ಮೇಳನವು ಬೊಂಬಾಯಿ ನ
ನಡೆದಾಗ ಇವರು ಅದರ ಅಧ್ಯಕ್ಷಸ್ಥಾನವನ್ನ
ತನ್ಮೂಲಕ ಕನ್ನಡದ ವಿಚಾರವಾಗಿ ತಮಗಿರುವ ಸ್ನೇ
ಅಭಿಮಾನವನ್ನೂ, ಸಹಾನುಭೂತಿಯನ್ನೂ ವ್ಯಕ್ತಪಡಿ
ಈಚೆಗೆ ಹೈಸ್ಕೂಲು ವಿದ್ಯಾರ್ಥಿಗಳಿಗೆ ಭಾಷೆಯ ಹೊರತು ಇತರ ಪಾ
ಕನ್ನಡದಲ್ಲಿಯೇ ಕಲಿಸಿಕೊಡಬೇಕೆಂಬ ನಿಯಮವನ್ನು ಜಾರಿಗೆ ತಂದು,
ಕ್ರಮದಲ್ಲಿ ಕನ್ನಡಕ್ಕೆ ಒಂದು ಪ್ರಮುಖಸ್ಥಾನವನ್ನು ಕಲ್ಪಿಸಿಕೊಟ್ಟಿರುತ್ತಾರೆ.
ವಿಶ್ವವಿದ್ಯಾನಿಲಯಗಳ ಪ್ರಯೋಜನವು ಜನಸಾಮಾನ್ಯಕ್ಕೆ ಲಭಿಸಬೇಕಾದರೆ ಪ
ರಾದವರು ದೇಶಭಾಷೆಗಳ ಮೂಲಕ ಜ್ಞಾನಪ್ರಸಾರಣೆ ಮಾಡುತ್ತಾ
ಆಗಲಾರದೆಂಬ ದೃಢವಾದ ಅಭಿಪ್ರಾಯವನ್ನು ಇಟ್ಟುಕೊಂಡು ಈ ಅಭಿಪ್ರಾ
ಕಾರ್ಯಕಾರಿಯಾಗುವುದಕ್ಕೆ ಬೇಕಾಗುವ ಸಹಾಯ ಸಂಪತ್ತಿಗಳನ್ನು
ಕೊಡುವ ಏರ್ಪಾಡು ಮಾಡುತ್ತಾ ಬಂದಿರುತ್ತಾರೆ. ಇವೇ ಮುಂತಾದ
ಕನ್ನಡಕ್ಕೆ ಉಪಕಾರಮಾಡಿರುವ ಶ್ರೀಮಾನ್ ಸುಬ್ಬರಾಯರಿಗೆ ಇದೇ
ಜೂನ್ ತಿಂಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್ಸಲರ್ ಪದ
ಲಭ್ಯವಾದುದು ಕನ್ನಡಿಗರ ಭಾಗ್ಯೋದಯವೆಂತಲೇ ಭಾವಿಸಬೇಕು. ಈ ಸ
ಜೊತೆಗೆ ನಮ್ಮ ಶ್ರೀಮನ್ಮಹಾರಾಜರವರು ಈ ಸಾರಿಯ ದಸರಾ ಮಹೋ
ದರ್ಬಾರಿನಲ್ಲಿ ಶ್ರೀಮಾನ್ ಸುಬ್ಬರಾಯರಿಗೆ "ರಾಜಕಾರ್ಯಪ್ರವೀಣ"
ಅನ್ವರ್ಥವಾದ ಪ್ರಶಸ್ತಿಯನ್ನು ದಯಪಾಲಿಸುವುದರ ಮೂಲಕ ತಮ್ಮ
ಯನ್ನು ತೋರ್ಪಡಿಸಿರುತ್ತಾರೆ. ಈ ರೀತಿ ಒಂದರ ಹಿಂದೊಂದರಂತೆ ಎರಡು
ಸನ್ಮಾನಗಳು ಈ ಮಹನೀಯರಿಗೆ ಲಭಿಸಿದುದಕ್ಕಾಗಿ ಕನ್ನಡದ ಅಭಿಮಾನಿಗಳಿ
ಅಪಾರವಾದ ತೃಪ್ತಿಯೂ ಸಂತೋಷವೂ ಉಂಟಾಗಿರುತ್ತವೆ. ಈ ವಿಚಾ
ಪರಿಷತ್ತು ತನಗುಂಟಾದ ಸಂತೋಷವನ್ನು ವ್ಯಕ್ತಪಡಿಸಿ ತನ್ನ ಹೃತ್ಪೂರ್ವ

ಅಭಿನಂದನಗಳನ್ನು ಶ್ರೀಮಾನ್ ಸುಬ್ಬರಾಯರಿಗೆ ಈ ಮೊದಲೇ ಶ್ರುತಪಡಿಸಿಕೊಂಡಿರುತ್ತದೆ. ನಾವೂ ಸಹ ಈ ಸಮಯದಲ್ಲಿ ನಮ್ಮ ವಾಚಕರ ಪರವಾಗಿ ಇವರಿಗೆ ಅಭಿನಂದನೆಗಳನ್ನು ಸಮರ್ಪಿಸಲಪೇಕ್ಷಿಸುತ್ತೇವೆ.

ಶ್ರೀಮಾನ್ ಇ. ಜಿ. ಮೆಕ್ಕಾಲ್ ಫೈನ್ ಸಾಹೇಬರಿಗೆ ಅಭಿನಂದನ

ವೈಸ್-ಛಾನ್ಸಲರಾಗಿ ವರ್ಗಪಟ್ಟ ಶ್ರೀಮಾನ್ ಸುಬ್ಬರಾಯರ ಸ್ಥಾನದಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನ ಮುಖ್ಯ ಅಧ್ಯಾಪಕರಾಗಿದ್ದ ಶ್ರೀಮಾನ್ ಇ. ಜಿ. ಮೆಕ್ಕಾಲ್‌ಫೈನ್, ಎಂ.ಎ. (ಎಡಿನ್.), ಡಿಪ್ಲೊಮಾ ಎಜುಕೇಷನ್ (ಎಡಿನ್.), ಐ.ಡಿ., ಜೆ.ಪಿ. ಇವರನ್ನು ಮೈಸೂರು ಸಂಸ್ಥಾನದ ವಿದ್ಯಾಶಾಖೆಯ ಮುಖ್ಯಾಧಿಕಾರಿಗಳನ್ನಾಗಿ ನೇಮಿಸಿದುದರಿಂದ ಕನ್ನಡದ ಏಳಿಗೆಗೆ ಯಾವ ಭಾಗದಲ್ಲಿಯೂ ಚ್ಯುತಿಯುಂಟಾಗಲಾರದೆಂದು ದೃಢವಾಗಿ ನಂಬಬಹುದು. ಏಕೆಂದರೆ, ಇವರಿಗೆ ಈ ರೀತಿಯಾದ ಉನ್ನತ ಪದವಿಯು ದೊರೆತಾಗ ಪರಿಷತ್ತಿನ ಪರವಾಗಿ ಅಭಿನಂದನಗಳನ್ನು ಸಮರ್ಪಿಸಿದ ಸಂದರ್ಭದಲ್ಲಿ ಕಾರ್ಯದರ್ಶಿಯವರಿಗೆ ಇವರು ದಯಪಾಲಿಸಿದ ಉತ್ತರವು ಪೂರ್ಣ ಸಹಾನುಭೂತಿಯಿಂದ ಕೂಡಿದ್ದಾಗಿರುತ್ತದೆ. ಆಂಗ್ಲ ಭಾಷೆಯ ಇವರ ಉತ್ತರವನ್ನು ಈ ರೀತಿ ಕನ್ನಡಿಸಬಹುದು :—

> "ಮೈಸೂರು ವಿದ್ಯಾಶಾಖೆಯ ಮುಖ್ಯಾಧಿಕಾರಿಯಾಗಿ ನೇಮಕವಾದುದಕ್ಕಾಗಿ ನನಗೆ ಅಭಿನಂದನಗಳನ್ನು ಸಮರ್ಪಿಸಲು ಕರುಣಿಸಿದುದಕ್ಕಾಗಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳನ್ನು ದಯೆಯಿಟ್ಟು ತಿಳಿಸೋಣಾಗಲಿ. ಕನ್ನಡ ಭಾಷೆಯ ಪರಿಶ್ರಮವು ನನ್ನ ಹಿಂದೆ ಇದ್ದ ಅಧಿಕಾರಿಗಳಿಗಿದ್ದಷ್ಟು ನನಗೆ ಇಲ್ಲವಾದರೂ ಕೂಡ ಪರಿಷತ್ತಿಗಾಗಲಿ, ಈ ಸಂಸ್ಥಾನದಲ್ಲಿ ಕನ್ನಡದ ಪುರೋವೃದ್ಧಿಯಲ್ಲಿ ನಿರತವಾಗಿರುವ ಇತರ ಸಂಸ್ಥೆಗಳಿಗಾಗಲಿ ತಕ್ಕ ಪ್ರೋತ್ಸಾಹ ಮತ್ತು ಸಹಾಯಗಳನ್ನು ಒದಗಿಸಿಕೊಡುವ ವಿಚಾರದಲ್ಲಿ ನಾನು ಅವರಿಗಿಂತ ಕಡಮೆ ಎನಿಸಿಕೊಳ್ಳುವುದಿಲ್ಲವೆಂದು ತಮ್ಮ ಕಾರ್ಯನಿರ್ವಾಹಕ ಮಂಡಲಿಯವರು ದೃಢವಾದ ನಂಬುಗೆಯಿಂದಿರಬಹುದು."

ಈ ರೀತಿಯಾದ ಭರವಸೆಯನ್ನು ಕರುಣಿಸಿರುವುದಕ್ಕಾಗಿ ಶ್ರೀಮಾನ್ ಮೆಕ್ಕಾಲ್‌ಫೈನ್ ಸಾಹೇಬರು ಕನ್ನಡದ ಅಭಿಮಾನಿಗಳೆಲ್ಲರ ಕೃತಜ್ಞತೆಗೆ ಪಾತ್ರರಾಗಿರುತ್ತಾರೆ.

ಶ್ರೀ ಮುಮ್ಮಡಿ ಕೃಷ್ಣರಾಜಭೂಪರವರ ಸ್ಮಾರಕೋತ್ಸವ

ಕೀರ್ತಿಶೇಷರಾದ ಮಹಾರಾಜಾ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಸ್ಮಾರಕೋತ್ಸವವು ಮೈಸೂರು ರಾಜಧಾನಿಯಲ್ಲಿ ಸಂಜನಗೂಡು ಕರ್ಣಾಟಕ ಸಂಘದ ಆಶ್ರಯದಲ್ಲಿ ಕಳೆದ ಜೂಲೈ ತಿಂಗಳು ೨೫ನೆಯ ತಾರೀಖಿನ ದಿನ ವಿಶೇಷ ವಿಜೃಂಭಣೆಯಿಂದ ನಡೆಯಿತು. ಈ ಮಹನೀಯರು ನಮ್ಮ ಈಗಿನ ಪ್ರಭುವರ್ಯರವರ ತಾತಂದಿರು. ಇವರು ೧೭೯೪ರಲ್ಲಿ ಜನ್ಮಧಾರಣೆ ಮಾಡಿ ತಮ್ಮ ಐದನೆಯ ವಯಸ್ಸಿನಲ್ಲಿಯೇ ಮೈಸೂರು ಸಿಂಹಾಸನವನ್ನೇರಿ ೧೬ನೆಯ ವಯಸ್ಸಿನಲ್ಲಿ ರಾಜ್ಯಾಡಳಿತದ ಅಧಿಕಾರವನ್ನು ವಹಿಸಿದರು. ಸುಮಾರು ೨೧ ವರ್ಷಗಳ ಕಾಲ ರಾಜ್ಯಭಾರ ಮಾಡಿದನಂತರ ೧೮೩೧ರಲ್ಲಿ

ರಾಜ್ಯಾಡಳಿತವನ್ನು ಬ್ರಿಟಿಷ್ ಕಮಿಷನರ ಕೈಗೆ ಒಪ್ಪಿಸಬೇಕಾಯಿತು. ಅನಂತರ ಇವರ ದತ್ತುಪುತ್ರರಿಗೆ ರಾಜ್ಯಾಧಿಕಾರವನ್ನು ಒಪ್ಪಿಸಬಹು... ತೀರ್ಮಾನವು ೧೮೬೫ರಲ್ಲಿ ಆಯಿತು. ಇದಾದ ಮೂರು ವರ್ಷಗಳಮೇಲೆ ... ತಮ್ಮ ೭೪ನೆಯ ವಯಸ್ಸಿನಲ್ಲಿ ಸ್ವರ್ಗಸ್ಥರಾದರು.

ಇವರು ಕನ್ನಡದಲ್ಲಿಯೂ, ಸಂಸ್ಕೃತದಲ್ಲಿಯೂ ಪ್ರತಿಭಾಸಂಪನ್ನರಾ... ದಲ್ಲದೆ ಈ ಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ರಚಿಸಿರುತ್ತಾರೆ. ಅಲ್ಲದೆ ... ಆಸ್ಥಾನದಲ್ಲಿ ಸರ್ವಮತೀಯ ವಿದ್ವಾಂಸರುಗಳಿಗೂ ಆಶ್ರಯಕೊಡುತ್ತಿದ್ದರು. ... ಕಾಲದಲ್ಲಿ ಸಂಗೀತವೇ ಮುಂತಾದ ಲಲಿತಕಲೆಗಳಿಗೆ ವಿಶೇಷ ಪ್ರೋತ್ಸಾಹ... ಇವರು ಪಂಡಿತರನ್ನೂ, ವಿದ್ವಾಂಸರನ್ನೂ ಆದರಿಸಿ ಅವರಿಗೆ ಅಗ್ರಹಾರಗಳ... ಭೂಸ್ಥಿತಿಗಳನ್ನೂ ದಾನವಾಗಿ ಕೊಡುತ್ತಿದ್ದರು. ಇವರ ಹೆಸರು ಮೈಸೂ... ಸಂಸ್ಥಾನದ ಚರಿತ್ರೆಯಲ್ಲಿ ಆಚಂದ್ರಾರ್ಕವಾಗಿ ಸ್ಥಿರಗೊಂಡಿದೆ. ಇವರನ್ನು ಆಧು... ಮೈಸೂರಿನ ಪಿತೃವರೇಣ್ಯರೆಂದೇ ಕರೆಯಬಹುದು.

ಇಂತಹ ಪ್ರಸಿದ್ಧ ಸಾಹಿತ್ಯೋಪಾಸಕರ ಸ್ಮಾರಕೋತ್ಸವವು ಮೈಸೂ... ಒಂದು ಕರ್ಣಾಟಕ ಸಂಘದ ಆಶ್ರಯದಲ್ಲಿ ನೆರವೇರಿಸಲ್ಪಟ್ಟದ್ದು ಅಭಿನಂದನೀಯ... ಸರಿ. ಆದರೆ ಇಂತಹ ಉತ್ಸವಗಳು ಒಂದೇ ಸಾರಿಗೆ ಮುಕ್ತಾಯವಾಗದೆ ... ವರ್ಷವೂ ನಡೆಯುತ್ತಾ ಬರುವಂತಾಗಲೆಂದು ನಾವು ಆಶಿಸುತ್ತೇವೆ.

**ಮಾತೃಭಾಷೆಯ ಪ್ರಾಶಸ್ತ್ಯ**

ವಿದ್ಯಾಭ್ಯಾಸಕ್ರಮದಲ್ಲಿ ಮಾತೃಭಾಷೆಗೆ ಎಷ್ಟರಮಟ್ಟಿನ ಪ್ರಾಶಸ್ತ್ಯ... ತಕ್ಕದ್ದು ಆವಶ್ಯಕವೆಂಬ ವಿಚಾರದಲ್ಲಿ ಇತ್ತೀಚೆಗೆ ಎಲ್ಲೆಡೆಗಳಲ್ಲಿಯೂ ಪ್ರಚಂಡ... ಜಿಜ್ಞಾಸೆಗಳು ನಡೆಯುತ್ತಲಿವೆ. ಈ ಪೈಕಿ ಒಂದು ... ದವರು ರಾಜಕೀಯ ಭಾಷೆಯಾದ ಇಂಗ್ಲೀಷಿಗೆ ಪ್ರಾಧಾನ್ಯ... ಯಿದ್ದೇ ತೀರಬೇಕು; ಅದೀಗ ಅತ್ಯುತ್ಕೃಷ್ಟವಾದ ಸಾ... ವನ್ನೊಳಗೊಂಡಿರುವ ಭಾಷೆ; ಅದನ್ನು ಚೆನ್ನಾಗಿ ಅಭ್ಯಾ... ಮಾಡಿದಲ್ಲದೆ ವಿಜ್ಞಾನವೇ ಮುಂತಾದ ಗಹನ ವಿಚಾರಗಳನ್ನು ತಿಳಿಯುವು... ಅಸಾಧ್ಯ; ಅಲ್ಲದೆ ಪ್ರಪಂಚ ವ್ಯವಹಾರಕ್ಕೆ ಇಂಗ್ಲಿಷ್ ಭಾಷಾಜ್ಞಾನವು ಇಲ್ಲದೆ ... ಆಗುವುದೇ ಇಲ್ಲ—ಎಂಬೀ ರೀತಿಯಾಗಿ ವಾದಿಸುತ್ತಾರೆ. ಮತ್ತೊಂ... ತಂಡದವರು ಹಿಂದೂಸ್ಥಾನದಲ್ಲಿ ಸ್ವರಾಜ್ಯ ಪ್ರಾಪ್ತಿಯಾಗಿ ಪ್ರಜೆಗಳೆಲ್ಲರ ಏಕೀಭ... ವಾಗಬೇಕಾದರೆ ಹಿಂದೀ ಭಾಷೆಯನ್ನು ರಾಷ್ಟ್ರ ಭಾಷೆಯಾಗಿ ಮಾಡಿಕೊಂ... ಸರ್ವರೂ ಅಭ್ಯಾಸಮಾಡುತ್ತಾ ಬರಬೇಕು; ಆದಿಲ್ಲದಿದ್ದರೆ ಒಂದು ಪ್ರಾಂತದ... ಅಭಿಪ್ರಾಯವನ್ನು ಮತ್ತೊಂದು ಪ್ರಾಂತದವರು ಗ್ರಹಿಸಿಕೊಳ್ಳುವುದೇ ಕಷ್ಟ... ಹಿಂದೂ ಮುಸಲ್ಮಾನರ ಐಕಮತ್ಯವೂ ಇದರಿಂದಲೇ ಆಗಬೇಕು—ಎಂಬೀ ರೀತಿಯ... ವಾದಿಸುತ್ತಾರೆ. ಈ ಎರಡು ತಂಡಗಳವರ ಜಿಜ್ಞಾಸೆಗಳ ಮಧ್ಯೆ ಮಾತೃಭಾಷೆ... ಪಾಡು ತ್ರಿಶಂಕು ಸ್ವರ್ಗದಂತೆಯೇ ಎಂದು ಬೇರೆ ಹೇಳಬೇಕಾಗಿಲ್ಲ. ಪರಿಸ್ಥಿತಿ... ಈ ರೀತಿ ಇರುವ ಸಂದರ್ಭದಲ್ಲಿ ಮಾತೃಭಾಷೆಯ ಉತ್ಕರ್ಷಕ್ಕೆ ಸಹಕಾರಿಯಾಗುವ...

ವಿದ್ಯಾಭ್ಯಾಸದ ನೀತಿಯನ್ನು ಮಾರ್ಪಡಿಸುವ ಉದ್ಯಮವನ್ನು ಕೈಗೊಳ್ಳಬೇಕಾದರೆ ಅಸಾಧಾರಣವಾದ ಧೈರ್ಯ ಸಾಹಸಗಳು ಅಗತ್ಯ. ಇಂತಹ ಉದ್ಯಮವನ್ನು ಕೈಗೊಂಡು ಮೈಸೂರು ಸಂಸ್ಥಾನದ ಪಾಠಶಾಲೆಗಳಲ್ಲಿ ಪಾಠಪ್ರವಚನಗಳು ಮಾತೃಭಾಷೆಯಲ್ಲಿ ನಡೆಯಬೇಕೆಂಬ ನೀತಿಯನ್ನು ಆಚರಣೆಗೆ ತಂದ ಕೀರ್ತಿಯು ಶ್ರೀಮಾನ್ ಎನ್. ಎಸ್. ಸುಬ್ಬರಾಯರಿಗೆ ಸಲ್ಲತಕ್ಕದ್ದಾಗಿರುತ್ತದೆ. ಇವರು ಆಚರಣೆಗೆ ತಂದಿರುವ ವಿದ್ಯಾಭ್ಯಾಸದ ನೀತಿಯು ಸರ್ವಾದರಣೀಯವಾಗಿರುವುದೆನ್ನುವುದಕ್ಕೆ ಅನೇಕ ನಿದರ್ಶನಗಳನ್ನು ಸೂಚಿಸಬಹುದು. ಇದೇ ಪದ್ಧತಿಯನ್ನೇ ವಿದ್ಯಾಭ್ಯಾಸ ವಿಚಾರದಲ್ಲಿ ವಿಶೇಷವಾಗಿ ಮುಂದುವರಿದಿರುವ ತಿರುವಾಂಕೂರು ಸಂಸ್ಥಾನದ ಸರಕಾರದವರೂ, ಬೇರೆ ಕೆಲವು ಪ್ರಾಂತಗಳ ಸರಕಾರದವರೂ ಅನುಸರಿಸಿ ಆಯಾ ಸಂಸ್ಥಾನಗಳ ಪಾಠಶಾಲೆಗಳಲ್ಲಿ ಆಚರಣೆಗೆ ತಂದಿರುವುದು ಒಂದು ನಿದರ್ಶನ; ಹಿಂದೀ ಚಳುವಳಿಯು ವಿಶೇಷವಾಗಿ ನಡೆಯುತ್ತಿರುವ ಮದರಾಸಾಧಿಪತ್ಯದ ನಾನಾ ಪ್ರಾಂತಗಳಲ್ಲಿನ ಜನರು ಅಲ್ಲಿನ ಸರಕಾರದವರ ನೀತಿಯನ್ನು ಖಂಡಿಸಿ ಹಿಂದೀ ಭಾಷೆಯ ಪ್ರಚಾರದಿಂದ ಮಾತೃಭಾಷೆಯನ್ನು ಮೂಲೆಗೊತ್ತುವ ಏರ್ಪಾಡನ್ನು ಕೈಗೊಳ್ಳುವುದು ಸಮಂಜಸವಲ್ಲವೆಂದು ಏಕಕಂಠ್ಯರಾಗಿ ವಾದಿಸುತ್ತಿರುವುದು ಮತ್ತೊಂದು ನಿದರ್ಶನ.

ಮೈಸೂರು ವಿಶ್ವವಿದ್ಯಾನಿಲಯದ ಪಟ್ಟಪ್ರದಾನೋತ್ಸವದ ಭಾಷಣ

ಇದೇ ವಿಚಾರವನ್ನೇ ಪುಷ್ಟೀಕರಿಸಿ ಶ್ರೀಮಾನ್ ಟಿ. ಆರ್. ವೆಂಕಟರಾಮಾಶಾಸ್ತ್ರಿ, ಬಿ.ಎ., ಬಿ.ಎಲ್., ಸಿ.ಐ.ಇ. ಅವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ೨೯–೧೦–೧೯೩೬ರಲ್ಲಿ ನಡೆದ ಪಟ್ಟಪ್ರದಾನೋತ್ಸವ ಸಮಾರಂಭದಲ್ಲಿ ಅಮೋಘವಾದ ಭಾಷಣ ಮಾಡಿರುತ್ತಾರೆ. ಇವರ ಭಾಷಣದ ಕೆಲವು ಭಾಗಗಳ ಸಾರಾಂಶವನ್ನು ಈ ಕೆಳಗೆ ಕೊಟ್ಟಿದೆ:—

"ಈಗ್ಗೆ ಸುಮಾರು ನೂರು ವರ್ಷಗಳ ಹಿಂದೆ ಹಿಂದೂಸ್ಥಾನದಲ್ಲಿ ಆಚರಣೆಗೆ ತಂದ ಇಂಗ್ಲಿಷ್ ವಿದ್ಯಾಭ್ಯಾಸಕ್ರಮದಿಂದ ಹಾನಿಯುಂಟಾಗಿದೆಯೇ ಹೊರತು ಪ್ರಯೋಜನವಾಗಿಲ್ಲವೆಂದು ಕೆಲವರು ವಾದಿಸುವುದುಂಟು. ಇದನ್ನು ನಾನು ಸರ್ವಾತ್ಮನಾ ಒಪ್ಪುವುದಿಲ್ಲ. ನಾನೇ ಇದರಿಂದ ಎಷ್ಟೋ ಪ್ರಯೋಜನಗಳನ್ನು ಪಡೆದಿದ್ದೇನೆ. ಇದರಂತೆಯೇ ಈ ಪದ್ಧತಿಯನ್ನು ಅಲ್ಲಗಳೆಯುವ ಅನೇಕರು ಇದರಿಂದ ನಾನಾವಿಧವಾದ ಪ್ರಶಸ್ತಿಗಳನ್ನು ಪಡೆದು ಉನ್ನತಸ್ಥಿತಿಗೆ ಬಂದಿರುತ್ತಾರೆ. ಹೀಗಿದ್ದರೂ ಕೂಡ ಪರಕೀಯ ಭಾಷೆಯ ಮೂಲಕ ನಡೆಯುವ ವಿದ್ಯಾಭ್ಯಾಸದಲ್ಲಿ ಕುಂದುಕೊರತೆಗಳಿರುವುದು ಸ್ವಾಭಾವಿಕವೆಂದು ನಾವು ಒಪ್ಪಿಕೊಳ್ಳಲೇಬೇಕು. ಮೊದಲನೆಯದಾಗಿ ಅಂತಹ ಪರಕೀಯ ಭಾಷೆಯನ್ನು ಅಭ್ಯಾಸಮಾಡುವುದರಲ್ಲಿ ಚಿಕ್ಕಂದಿನ ಎಷ್ಟೋ ವರ್ಷಗಳು ವೃಥಾ ಕಳೆದುಹೋಗುವುವು. ಈ ರೀತಿ ವ್ಯರ್ಥವಾಗುವ ಕಾಲವನ್ನು ಜ್ಞಾನಾರ್ಜನೆಗಾಗಿ ವಿನಿಯೋಗಿಸಿದರೆ ಎಷ್ಟೋ ಪ್ರಯೋಜನವಾಗುವುದಿಲ್ಲವೇ? ಪರಕೀಯ ಭಾಷೆಯ ಅಭ್ಯಾಸದಿಂದ ಉಂಟಾಗುವ ಮತ್ತೊಂದು ಕೊರತೆ ಯಾವುದೆಂದರೆ— ವಿದ್ಯಾವಂತರಾದವರು ಜನಸಾಮಾನ್ಯದೊಡನೆ ಸುಲಭವಾಗಿ ಮಿಳಿತವಾಗದಂತೆ ಪ್ರತಿಬಂಧಕವುಂಟಾಗುವುದು. ಇದರಿಂದ ಇಂಗ್ಲಿಷ್ ಕಲಿತವನು ತಾನು ಕಲಿತಿರುವುದನ್ನು ಇತರರಿಗೆ ಪ್ರಸಾರ ಮಾಡುವುದಕ್ಕೆ ಸಾಧಕವಾಗುವುದಿಲ್ಲ. ಇದೆಲ್ಲಕ್ಕಿಂತ ಇಂಗ್ಲಿಷ್‌ನಲ್ಲಿ ಪರೀಕ್ಷೆಗಳನ್ನು ಕೊಟ್ಟು ಪ್ರಶಸ್ತಿಗಳನ್ನು ಪಡೆದದ್ದೇ ಆದರೆ, ಸರಕಾರದಲ್ಲಿ ಉದ್ಯೋಗಗಳು

ದೊರೆಯುವುವೆಂಬ ಆಶೋತ್ಪಾದನೆಯುಂಟಾಗುವುದು. ಇದನ್ನು ಹೀನಾಯ ಉದ್ದೇಶವೆಂದೇ ಒಪ್ಪಿಕೊಳ್ಳಬೇಕು.

ಈ ರೀತಿ ಪರಕೀಯ ಭಾಷಾಭ್ಯಾಸದಿಂದಾಗುವ ಕಷ್ಟನಿಷ್ಠುರ ಪರಿಶೀಲಿಸಿದ ನಾವು ಮಾತೃಭಾಷೆಯಿಂದ ಜ್ಞಾನಪ್ರಸಾರಣೆ ಮಾಡುವುದು ಎಂಬಂಶವನ್ನು ವಿಚಾರಮಾಡಬೇಕಾದದ್ದು ಆವಶ್ಯಕ. ಯಾವುದೊಂದು ಸಂಸ್ಕೃತಿಯು ಎಷ್ಟರಮಟ್ಟಿಗೆ ಔನ್ನತ್ಯಕ್ಕೆ ಬಂದಿರುವುದೆಂಬುದನ್ನು ತಿಳಿಯ ಬೇಕಾದರೆ ಅಂಥ ಜನತೆಯ ಭಾಷಾ ಸಂಸ್ಕೃತಿಯು ಎಷ್ಟರಮಟ್ಟಿನದೆನ್ನು ಪರಿಶೀಲಿಸಬೇಕು. ಯಾವ ಭಾಷೆಯನ್ನು ನಾವು ತೆಗೆದುಕೊಂಡರೂ ಮನಸ್ಸಿನ ಭಾವನೆಗಳನ್ನು ಮಾತುಗಳಿಂದ ತಿಳಿಯಪಡಿಸಲು ಸಾಧ್ಯವಾಗ ಬೇಕು. ಇದೇ ವಿಷಯವನ್ನು ಕಾಳಿದಾಸ ಮಹಾಕವಿಯು 'ರಘು ಆರಂಭದಲ್ಲಿ "ವಾಗರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ" ಶ್ಲೋಕಾರ್ಧದಲ್ಲಿ ವಿಶದಪಡಿಸಿರುತ್ತಾನೆ.

ಇಷ್ಟೆಲ್ಲಾ ಹೇಳಿದಮೇಲೆ ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಇಂಗ್ಲಿಷ ಯಿಂದಲೇ ಸಮಸ್ತ ಜ್ಞಾನಪ್ರಸಾರವೂ ನಡೆಯಬೇಕು; ಅದನ್ನು ಕಲಿತಲ್ಲದೆ ಮಾರ್ಗವೇ ಇಲ್ಲ—ಎಂಬುವುದನ್ನು ಒಪ್ಪುವುದಕ್ಕೆ ಆಗಲಾರದು. ಜ ದೇಶವಲ್ಲಿ ಲ್ಯಾಟಿನ್ ಭಾಷೆಗೆ ಬದಲಾಗಿ ಜರ್ಮನ್ ಭಾಷೆಯೇ ಪ್ರಚಾರಕ್ಕೆ ಅದರಲ್ಲಿಯೇ ಎಷ್ಟೋ ಜನ ಕವಿಗಳೂ, ದಾರ್ಶನಿಕರೂ ಪ್ರಸಿದ್ಧಿಗೆ ಬರಲಿ ಯೂರೋಪಿನಲ್ಲಿ ಲ್ಯಾಟಿನ್ ಭಾಷೆಗೂ, ಇಂಡಿಯದಲ್ಲಿ ಸಂಸ್ಕೃತ ಭಾಷೆಗೂ ಬ ಆಯಾ ದೇಶಭಾಷೆಗಳು ರೂಢಿಗೆ ಬಂದು ಜನತೆಗೆಲ್ಲಾ ಜ್ಞಾನಪ್ರಸಾರಣೆ ವುದಕ್ಕೆ ಸಹರಿಕಾಯಾಗಲಿಲ್ಲವೇ? ಇದೇ ರೀತಿ ಈಗಲೂ ಇಂಗ್ಲಿಷ್ ಭಾಷೆಗೆ ಬ ಮಾತೃಭಾಷೆಯನ್ನು ಜ್ಞಾನಪ್ರಸಾರಣೆಗೆ ಏತಕ್ಕೆ ಉಪಯೋಗಿಸಬಾರದು? ಉಪಯೋಗಿಸುವ ವಿಚಾರದಲ್ಲಿ ದುರ್ಗಮವಾದ ಕಷ್ಟನಿಷ್ಠುರಗಳಿರುವುದೇನೋ ಆದರೂ ಇಂತಹ ಕಷ್ಟನಿಷ್ಠುರಗಳನ್ನು ದೂರೀಕರಿಸಿ ಮಾತೃಭಾಷೆಯ ಜ್ಞಾನಪ್ರಸಾರಣೆಯ ಕಾರ್ಯವನ್ನು ಕೈಗೊಳ್ಳುವುದು ಅಗತ್ಯ. ಮೈ ಸಂಸ್ಥಾನದಲ್ಲಿ ಹೈಸ್ಕೂಲ್ ಶಿಕ್ಷಣವು ಕನ್ನಡದಲ್ಲಿ ನಡೆಯುವಂತೆ ಏರ್ಪಾಡು ವರೆಂಬುದನ್ನು ಕೇಳಿ ನಾನು ಹರ್ಷಿಸುವುದಲ್ಲದೆ ಇದೇ ರೀತಿಯ ಏರ್ಪಾ ಕಾಲೇಜುಗಳಲ್ಲಿಯೂ ಆಚರಣೆಗೆ ತರಬೇಕೆಂಬ ಗುರಿಯನ್ನು ಈ ಸಂಸ್ಥಾ ಇರಿಸಿಕೊಂಡಿರುವರೆಂದು ಭಾವಿಸುತ್ತೇನೆ. ನವೀನ ಸಂಸ್ಕೃತಿಗೆ ಸಂಬಂಧಪಟ್ಟ ವಿಷಯಗಳನ್ನೂ ಜನತೆಯ ಭಾಷೆಯಲ್ಲಿ ತಿಳಿಯಹೇಳುವುದು ಸುಲಭ ಸಾಧ್ಯ ವಿಷಯವಲ್ಲ. ಇದಕ್ಕೆ ತಕ್ಕ ಸಾಧನಗಳನ್ನು ಒದಗಿಸುವುದಕ್ಕೆ ಬಹು ಕಾಲ ಒಂದೆರಡು ದಶಮಾನಗಳಾದರೆ ಸಾಲದು. ಇನ್ನೂ ಹೆಚ್ಚಿನ ಕಾಲ ಶ್ರಮಿಸ ಆದರೂ ಕೂಡ ದೃಢಪ್ರಯತ್ನ ಮಾಡಿದ್ದೇ ಆದರೆ ನಾವು ನಿರೀಕ್ಷಿಸಿದ್ದ ಕಡಮೆಯ ಕಾಲದಲ್ಲಿಯೇ ಸಾಧ್ಯಪಡಿಸಿಕೊಳ್ಳಬಹುದು."

ಮಾತೃಭಾಷಾ ಪ್ರಚಾರದ ವಿಷಯವಾಗಿ ಮೈಸೂರು ಸಂಸ್ಥಾನದಲ್ಲಿ ಬಂದಿರುವ ಏರ್ಪಾಡು ಸರ್ವಸಮ್ಮತವಾದುದೆಂದು ಈ ರೀತಿ ಪ್ರಶಂಸಿಸಲ್ಪಟ್ಟಿರು

ವಿಶ್ವವಿದ್ಯಾನಿಲಯಗಳೂ ದೇಶಭಾಷೆಯೂ

ನಮ್ಮ ಸಂಸ್ಥಾನಕ್ಕೇ ಕೀರ್ತಿಪ್ರದವಾದ ಅಂಶವೆನ್ನು ಸಂಶಯವಿಲ್ಲ. ಇದೇ ವಿಚಾರವನ್ನು ಕುರಿತು ಮೈಸೂ ವಿಶ್ವವಿದ್ಯಾನಿಲಯದ ವೈಸ್-ಛಾನ್ಸಲರವರಾದ ಶ್ರೀಮಾ ಎನ್. ಎಸ್. ಸುಬ್ಬರಾಯರು ತಾ॥ ೩೦-೯-

ಅಣ್ಣಾಮಲೇ ನಗರದ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಆ ನಿಲಯದ ಸ್ಥಾ

ಸ್ಮಾರಕೋತ್ಸವದಲ್ಲಿ ಮಾಡಿದ ಅಧ್ಯಕ್ಷ ಭಾಷಣದಲ್ಲಿ ಪ್ರಸ್ತಾಪಿಸಿರುತ್ತಾರೆ. ಆ ಭಾಷಣದಲ್ಲಿ ಅವರು ವಿಶ್ವವಿದ್ಯಾನಿಲಯಗಳು ದೇಶಭಾಷೆಯ ಮೂಲಕ ಜನತೆಗೆ ಹೇಗೆ ಜ್ಞಾನಪ್ರಸಾರ ಮಾಡಬಹುದೆಂದೂ ಆ ಮೂಲಕ ಹೇಗೆ ದೇಶಭಾಷೆಯನ್ನು ಮೇಲಕ್ಕೆತ್ತಬಹುದೆಂದೂ ವಿವರಿಸಿರುತ್ತಾರೆ. ಅವರು ಆ ಸಂದರ್ಭದಲ್ಲಿ ಹೇಳಿದ ಮಾತುಗಳ ಸ್ಥೂಲವಾದ ಸಾರಾಂಶವನ್ನು ಇಲ್ಲಿ ಕೊಟ್ಟಿದೆ:—

"ಇಂಡಿಯಾ ದೇಶದಲ್ಲಿ ವಿಶ್ವವಿದ್ಯಾನಿಲಯಗಳಿಗೂ ಜನತೆಗೂ ನಡುವೆ ಭಾಷೆಯ ತೆರೆಯೊಂದು ಅಡ್ಡವಾಗಿದೆ; ಈ ದೇಶದಲ್ಲಿ ವಿಶ್ವವಿದ್ಯಾನಿಲಯಗಳು ಸ್ಥಾಪಿತವಾದಂದಿನಿಂದಲೂ ಪದವೀದಾನೋತ್ಸವಗಳ ಭಾಷಣಕರ್ತರು, ಅಂತಹ ನಿಲಯಗಳಲ್ಲಿ ಪದವಿಗಳನ್ನು ಸಂಪಾದಿಸಿದ ವಿದ್ಯಾರ್ಥಿಗಳಿಗೆ ಉಪದೇಶಮಾಡುತ್ತಾ ಬಂದಿರುವುದೇನೆಂದರೆ–ಇಂಗ್ಲಿಷ್ ಭಾಷೆಯಲ್ಲಿ ವಿದ್ಯೆಯನ್ನು ಕಲಿತ ನೀವುಗಳು ಆ ರೀತಿ ಕಲಿಯಲು ಸಾಧ್ಯವಾಗದೆ ಹೋದ ಸಾಮಾನ್ಯಜನರಿಗೆ ಅಂತಹ ವಿದ್ಯೆಯ ಫಲವನ್ನು ಅವರವರ ದೇಶಭಾಷೆಗಳ ಮೂಲಕ ಕಲಿಸಿಕೊಡುತ್ತಾ ಬರಬೇಕೆಂಬುದನ್ನು ನಿಮ್ಮ ಜೀವಮಾನದ ಧ್ಯೇಯವಾಗಿಟ್ಟುಕೊಳ್ಳಬೇಕು—ಎಂಬೀ ರೀತಿಯಾಗಿ ಉಪದೇಶಮಾಡುತ್ತಾ ಬಂದಿರುತ್ತಾರೆ. ಹೀಗಿದ್ದರೂ ಕೂಡ ಸಾಮಾನ್ಯಜನರಿಗೆ ದೇಶಭಾಷೆಯ ಮೂಲಕ ವಿದ್ಯೆಯನ್ನು ಕಲಿಸಿಕೊಡುವುದಕ್ಕಾಗಿ ಯಾವ ವಿಶ್ವವಿದ್ಯಾನಿಲಯಗಳವರೇ ಆಗಲಿ ಅಚ್ಚಿನ ಪುಸ್ತಕಗಳನ್ನೂ ತಯಾರಿಸಿಲ್ಲ; ಉಪನ್ಯಾಸಗಳನ್ನೂ ಏರ್ಪಡಿಸಿಲ್ಲ. ಅಂತಹ ನಿಲಯಗಳ ವಿದ್ಯಾರ್ಥಿಗಳಾದರೂ ಈ ಕೆಲಸವನ್ನು ಮಾಡಿಲ್ಲ. ಈಗಲೂ ಕೂಡ ವಿಶ್ವವಿದ್ಯಾನಿಲಯಗಳವರು ದೇಶಭಾಷೆಗಳ ವಿಚಾರವಾಗಿ ಆಗಲಿ ಅವುಗಳ ಮೂಲಕ ವಿದ್ಯೆ ಕಲಿಸುವ ವಿಚಾರವಾಗಿ ಆಗಲಿ ತಕ್ಕಷ್ಟು ಗಮನವನ್ನು ಕೊಡುತ್ತಿಲ್ಲ. ಸಣ್ಣ ವಯಸ್ಸಿನವರಿಗೆ ದೇಶಭಾಷೆಯಲ್ಲಿಯೇ ಪಾಠಗಳನ್ನು ಹೇಳಿಕೊಡುವುದರಿಂದ ಅವರಿಗೆ ವಿದ್ಯೆ ಕಲಿಸುವುದು ಎಷ್ಟೋ ಸುಲಭವಾಗುವುದಲ್ಲದೆ, ಗಹನವಾದ ವಿಷಯಗಳನ್ನೂ ಕೂಡ ದೇಶಭಾಷೆಯಲ್ಲಿ ಹೇಳಿಕೊಡುವುದು ಸಾಧ್ಯವೆಂಬುದನ್ನು ದೃಷ್ಟಾಂತಪಡಿಸಬಹುದು. ಈ ಧ್ಯೇಯಕ್ಕನುಸಾರವಾಗಿ ಹೈಸ್ಕೂಲುಗಳಲ್ಲಿ ಪಾಠಪ್ರವಚನಗಳನ್ನು ದೇಶಭಾಷೆಗಳ ಮೂಲಕ ನಡಸುವುದು ಉತ್ತಮವೆಂಬುದನ್ನು ಜನರೇನೋ ಒಪ್ಪಿದ್ದರೂ ಕೂಡ ವಿಶ್ವವಿದ್ಯಾನಿಲಯಗಳವರು ಈ ವಿಚಾರದಲ್ಲಿ ಸಾಕಾದಷ್ಟು ಉತ್ಸಾಹವನ್ನು ತೋರಿಸುತ್ತಿಲ್ಲವೆನ್ನುವುದು ವಿಷಾದಕರವೇ ಸರಿ."

**ದೇಶಭಾಷಾ ಪ್ರಚಾರದ ವಿಷಯದಲ್ಲಿ ಪರಿಷತ್ತಿನ ಮತ್ತು ಇತರ ಭಾಷಾಭಿಮಾನಿಗಳ ಸೇವೆ**

ಮೇಲಿನ ಭಾಷಣದಲ್ಲಿ ಶ್ರೀಮಾನ್ ಸುಬ್ಬರಾಯರಿಂದ ಸೂಚಿತವಾಗಿರುವ ಆಶಯವನ್ನು ಪರಿಷತ್ತಿನವರು ಸಾಧ್ಯವಾದಮಟ್ಟಿಗೆ ನೆರವೇರಿಸುತ್ತಾ ಬಂದಿರುವರೆಂಬ ಅಂಶವನ್ನು ಈ ಸಂದರ್ಭದಲ್ಲಿ ನಾವು ಸೂಚಿಸಬಹುದಾಗಿದೆ. ಬೆಂಗಳೂರು ನಗರದಲ್ಲಿರುವ ಪರಿಷನ್ಮಂದಿರದಲ್ಲಿ ವಿಜ್ಞಾನ ವಿಷಯಕವಾದ ಉಪನ್ಯಾಸಗಳು ಆಗಿಂದಾಗ ಕನ್ನಡದಲ್ಲಿ ನಡೆಯುವಂತೆ ಏರ್ಪಾಡುಮಾಡಿರುವುದಲ್ಲದೆ, ಇಂತಹ ಉಪನ್ಯಾಸಗಳ ಪ್ರಯೋಜನವು ಹಳ್ಳಿಯ ಉಪಾಧ್ಯಾಯರಿಗೂ, ಅವರ ಮೂಲಕ ಅಲ್ಲಿಯ ಸಾಮಾನ್ಯ ಜನರಿಗೂ ಲಭಿಸುವ ಏರ್ಪಾಡನ್ನು ಸಹ ಮಾಡಲಾಗಿದೆ. ಇಂತಹ ಪ್ರಸಾರಣೆಯು ಇನ್ನೂ ಹೆಚ್ಚು ಹೆಚ್ಚಾಗಿ ನಡೆಯಬೇಕಾದರೆ ಧನಸಹಾಯವು ಅಗತ್ಯ. ಇದಕ್ಕಾಗಿ ಒಂದು ಶಾಶ್ವತ ನಿಧಿಯನ್ನು ಕಲ್ಪಿಸುವ ಉದ್ದೇಶದೊಡನೆ,

ಬೆಂಗಳೂರು ಪಟ್ಟಣದಲ್ಲಿ ಪರೋಪಕಾರ ದೃಷ್ಟಿಯಿಂದ ಅನೇಕ ಸಾರ್ವಜನಿಕ ಸಂ ಗಳಿಗೆ ಉದಾರಹಸ್ತದಿಂದ ಧನಸಹಾಯ ಮಾಡಿ ಪ್ರಖ್ಯಾತರಾಗಿರುವ ಶ್ರೀಮಾ ರಾಜಸಭಾಭೂಷಣ ದಿವಾನ್ ಬಹದ್ದೂರ್ ಡಾಕ್ಟರ್ ಸರ್ ಕೆ. ಪಿ. ಪುಟ್ಟಣ್ಣ ಶ್ರವರು ಇಪ್ಪತ್ತು ಸಾವಿರ ರೂಪಾಯಿಗಳನ್ನು ಮೈಸೂರು ವಿಶ್ವವಿದ್ಯಾನಿಲಯ ದಾನವಾಗಿ ಒಪ್ಪಿಸಿರುವುದು ಸ್ತೋತ್ರಾರ್ಹವೇ ಸರಿ. ಇವರಂತೆಯೇ ಉದಾ ಹೃದಯರಾದ ಇತರ ಮಹನೀಯರುಗಳೂ ಈ ಭಾಗದಲ್ಲಿ ಸಹಾಯಮಾಡಿ ತಮ್ಮ ದೇಶಭಾಷೆಯ ಔನ್ನತ್ಯಕ್ಕೆ ನೆರವಾಗಬೇಕೆಂದು ಈ ಮೂಲಕ ಪ್ರಾರ್ಥಿಸುತ್ತೇವೆ.

ಕನ್ನಡ ಸಾಹಿತ್ಯ ಸಮ್ಮೇಳನವನ್ನು ಈ ಸಾರಿ ಜಮಖಂಡಿಯಲ್ಲಿ ನ ಬೇಕೆಂದು ಅಲ್ಲಿಯ ಕನ್ನಡದ ಅಭಿಮಾನಿಗಳು ಕೊಟ್ಟ ಆಹ್ವಾನವನ್ನು ಪರಿಷ ಕಾರ್ಯನಿರ್ವಾಹಕ ಮಂಡಲಿ ಈ ಹಿಂದೆಯೇ ಅಂಗೀಕರಿಸ ಆದರೆ ಕೆಲವು ವಿಘ್ನಗಳು ಬಂದೊದಗಿದ ಪ್ರಯು ಸಮ್ಮೇಳನವನ್ನು ಜಮಖಂಡಿಗೆ ಬದಲಾಗಿ ತಮ್ಮ ನಡಸಬೇಕೆಂದು ಬಳ್ಳಾರಿಯಿಂದಲೂ ಚೆನ್ನರಾಯಪಟ್ಟ ದಿಂದಲೂ ಆಹ್ವಾನಗಳು ಬಂದು ಆಲೋಚನೆಯಲ್ಲಿ ಈಗ ಆ ವಿಘ್ನಗಳೆಲ್ಲವೂ ದೂರೀಕೃತವಾಗಿ, ಸಮ್ಮೇಳನವು ಇದೇ ಡಿಸೆಂಬರ್ ಕೊನೆಯ ಭಾಗದಲ್ಲಿ ಜಮಖಂಡಿಯಲ್ಲಿಯೇ ನಡೆಯತಕ್ಕದ್ದೆಂದು ತೀರ್ಮಾನವಾ ವುದು ಎಲ್ಲ ಕನ್ನಡಿಗರಿಗೂ ಹರ್ಷಾಸ್ಪದವಾದ ಸಂಗತಿ. ಜಮಖಂಡಿ ಬನಹಟ್ಟಿಯ ಶ್ರೀ॥ ಪಂಡಿತಪ್ಪ ರಾಯಪ್ಪ ಚಿಕ್ಕೋಡಿ, ಬಿ.ಎ. ಅವರ ಅಧ್ಯಕ್ಷತೆ ಸ್ವಾಗತ ಮಂಡಲಿಯೊಂದು ಏರ್ಪಟ್ಟು, ಅಲ್ಲಿನ ವಕೀಲರಾದ ಶ್ರೀ॥ ಬಿಂದೂ ರಾಮರಾವ್ ನರಗುಂದಕರ್, ಬಿ.ಎ, ಎಲ್‌ಎಲ್.ಬಿ. ಅವರ ಕಾರ್ಯಾಧ್ಯಕ್ಷತೆ ಸಮ್ಮೇಳನದ ಸಿದ್ಧತೆಗಳು ಪ್ರಾರಂಭವಾಗಿರುವುದಾಗಿ ತಿಳಿಯಬಂದಿದೆ. ಈ ಸಮ್ಮೇ ನವು ವಿಶಿಷ್ಟ ವೈಭವಗಳಿಂದಲೂ ಯಶಸ್ವಿಯಾಗಿ ನಡೆಯಲೆಂದು ಹಾರೈಸುವ ನಮ್ಮ ಕರ್ತವ್ಯವಾದ ಪ್ರಯುಕ್ತ ಎಲ್ಲ ಪ್ರಾಂತಗಳ ಕನ್ನಡಿಗರೂ ಜಮಖಂ ದಯಮಾಡಿಸಿ ತಮ್ಮ ಬೆಂಬಲವನ್ನು ಕೊಟ್ಟು ಸಮ್ಮೇಳನವನ್ನು ಜಯಪ್ರದವನ್ನಾ ಮಾಡಬೇಕೆಂದು ಪರಿಷತ್ತಿನ ಪರವಾಗಿ ಈ ಮೂಲಕ ಪ್ರಾರ್ಥಿಸಿಕೊಳ್ಳುತ್ತೇ

ಸಮ್ಮೇಳನದ ತಾರೀಖುಗಳು ಮುಂತಾದ ವಿವರಗಳನ್ನು ಕುರಿತು ಪ ತ್ಕಾರ್ಯಾಲಯದವರೂ ಸ್ವಾಗತ ಸಮಿತಿಯವರೂ ಆಗಿಂದಾಗ್ಗೆ ಸಮಾಚಾರ ಪ ಗಳನ್ನು ಪ್ರಕಟಪಡಿಸುವವರಾಗಿದ್ದಾರೆ.

(ಮಾರ್ಜಿನ್ ಶೀರ್ಷಿಕೆ:) ೨೨ನೆಯ ಸಾಹಿತ್ಯ ಸಮ್ಮೇಳನ: ಜಮಖಂಡಿಯಲ್ಲಿ

---

# ಪ್ರಾಚ್ಯ ಲೇಖನ ಮಾಲೆ

[ಪ್ರಾಚ್ಯ ದೇಶಗಳ, ಮುಖ್ಯವಾಗಿ ಭರತಖಂಡದ, ಭಾಷೆ, ಸಾಹಿತ್ಯ, ಚರಿತ್ರೆ, ಸಂಸ್ಕೃತಿ ಮುಂತಾದುವುಗಳಮೇಲೆ ಇತರ ಪತ್ರಿಕೆಗಳಲ್ಲಿ ಈಚೆಗೆ ಬಂದಿರುವ ಮುಖ್ಯ ಲೇಖನಗಳು.]

---

**Journal of the University of Bombay, Vol. VI, Part 1, July 1937**

" Inscriptions of Gujarat: An Epigraphic Survey "
—*Mr. H. D. Sankaliya*

**Journal of Indian History, Vol. XVI, No. 1, April 1937**

" Mohenjo Daro—The Most Important Archæological Site in India "
—*Rev. H. Heras, S.J., M.A.*

[The consequence deduced by Sir John Marshall that this civilization probably is Dravidian is now fully confirmed by the decipherment by the present writer of about one thousand eight hundred inscriptions found in all these sites....The script of Mohenjo Daro is a picto-phonographic Script....The language used in these inscriptions most certainly belongs to the family of Dravidian languages. It must be older than all the Dravidian languages spoken in India at present, and may finally be acknowledged as the parent of all these languages.]

**The Indian Historical Quarterly, Vol. XIII, No. 2, June 1937**

1. " The Horse Balaha and the Indian Kings "
—*Prof. Dr. J. Przyluski, Ph.D.*
2. " The Beginnings of the Cālukyas of Kalyāṇi "
—*Mr. Sant Lall Katare, M.A.*
[The Cālukyas of Kalyāṇi were but the direct descendants of the Cālukyas of Bādāmi....Vikramāditya IV laid the foundation on which Taila II, his son, was to build the Cālukya Empire. Taila II became king in about 973–74 A.D.]
3. " Religious Toleration of Vijayanagara Rulers "
—*Mr. V. R. Ramachandra Dikshitar, M.A.*
["The Vijayanagara rulers identified themselves with every community and with every sect in their empire."]
4. " Janaka and Yāgnavalkya "
—*Dr. A. K. Coomaraswamy, D.Sc.*
5. " A South Indian (Malayalam) Evalution of Sanskrit: (t), (d) and (ṭ), (ḍ) "
—*Mr. L. V. Ramaswami Aiyar, M.A., B.L.*
6. " Religious Toleration in the Gupta Period "
—*Mr. Kunjagovinda Goswami, M.A.*

**Quarterly Journal of the Mythic Society, Vol. XXVIII, No. 1, July 1937**

1. " Social Life in the Rāmāyaṇa "
—*Prof. P. C. Dharma, M.A.*
2. " Dravidic Sandhi "
—*Mr. L. V. Ramaswami Aiyar, M.A., B.L.*
3. " Devas and Asuras "
—*Mr. N. K. Venkatesam Pantulu, M.A., L.T.*

**The Journal of Oriental Research, Vol. XI, No. 1, Jan.-March 1937**

1. " Sanskrit Learning in the Cōḷa Empire "
—*Prof. K. A. Nilakantha Sastri*
2. " Linguistic ' Preservations ' in Malayalam "
—*Mr. L. V. Ramaswami Aiyar, M.A., B.L.*

3. "The Number of Rasas" (continued from Vol. X, No. IV)
   —*Dr. V. Raghavan, M.A., Ph.D.*
4. "Recent Progress in the Archæology of Sumatra—Hindu-Buddhist P...
   —*Prof. K. A. Nilakantha Sastri*
5. "Bhartṛhari and the Bhāgavṛtti"
   —*Mr. O. P. Rangaswami, M.A., L.T.*
6. "A New Grant of the Ganga Sāmanta Varman"
   —*Mr. M. Somasekhara Sarma*

## The Jaina Siddhanta Bhaskara (Hindi), Vol. IV, No. 1

"ಭಾರತೀಯ ಕಥಾ ಸಾಹಿತ್ಯಕೇ ಆದಿ ಲೇಖಕ ಜೈನಾಚಾರ್ಯ"—Mr. K. P. Jain

[The *Bṛhat katha* of Guṇādhya was composed on the material ... by Kāṇabhūti, who is most probably the Jaina Kathākāra Kā... mentioned by Jinasenāchārya in his *Adipurana*.]

## Bulletin of the Museum of Fine Arts, Vol. XXXV, Nos. 20... June-August 1937

"The Rape of Nāgi: an Indian Gupta Seal"
—*Dr. A. K. Coomaraswamy, D.Sc.*

## Karnataka Historical Review, Vol. IV, Nos. 1 & 2, Jan.-July 1937

1. "Karnataka and Mohenjo Daro"
   —*Rev. H. Heras, S.J., M.A.*

   [The people of Karnātaka are apparently referred to in ... seal inscriptions of Mohenjo Daro. The sign used to mention th... read *Kaṇanir* (ಕಣನಿರ್), "people who have eyes." This ... refers to a tribe called so. The ancient word Kannaḍigas (... by which the people of modern Karnātaka are mentioned, seems t... a Saṁskṛita modification of Kaṇanir. Two dialectical forms of ... the fore-runners of the modern forms—already appear in the ... of Mohenjo Daro. Examples: ಕಲಕ್ (ಕಲಕು), the plural f... and *-or*: (*Paravir Pali* = the city of Paravas, *āḷor* = men... (*mūnālru* = twelve men). Besides, the sign which the modern ... of the Kannada Country depict on the walls of their houses is ofte... in the inscriptions of Mohenjo Daro and Harappa.]
2. "A Great Contribution of Vijayanagara to the Tamil Country"

   [The conquest of the Madhura Sultanate and the Restor... Hindu Orthodoxy.]

   —*Rao Saheb Prof. C. S. Srinivasa Chari, M.A.*
3. "A Muslim Contribution to Apabhraṁśa Literature"
   —*Mr. S. M. Katre*

   [A manuscript in the Government Manuscripts Library of the ... College, Poona; an interesting composition in Apabhraṁśa b... *Rahamana*; *Saṃnehya-rāsaya* (*sa-snehaka rasaka*); belongs to the ... of Kalidasa's *Megha-sandeśa*; date between 11th and 14th cen...
4. "Karnātaka Folk-lore"
   —*Mr. Narasimha Sastry Devudu, M.A.*
5. "The Aḷanda Stone Inscription of King Tribhuvanamalla Vikramāditya..."
   —*Mr. P. B. Desai, M.A.*

   [Old Kannada; date: 1082 A.D.: records a number of grants.]
6. "The Vīra Śaivas and their Contribution to Vijayanagara"
   —*Dr. B. A. Saletore, M.A., Ph.D.*
7. "Delhi Sultans as Patrons of Jaina Gurus of Karṇātaka"
   —*Dr. B. A. Saletore, M.A., Ph.D.*
8. "The Haridasa Movement in Karnātaka"
   —*Mr. Narayana Rao B. Kalamdani and Mr. Ananta Rao P. K...*
   *M.A., LL.B.*

939—37—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# ಕರ್ಣಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು

## ಎರಡನೆಯ ಸಕಲ ಕರ್ಣಾಟಕ ಸಂಘ ಸಮ್ಮೇಳನ

---

**ಬೆಂಗಳೂರು, ೪ನೆಯ ಮೇ ೧೯೩೭**

೧೯೩೬ನೆಯ ಇಸವಿಯ ಮೇ ತಿಂಗಳಲ್ಲಿ ವಿಶೇಷಸಾಹಿತ್ಯೋತ್ಸವದ ಅಂಗವಾಗಿ ನಡೆದ ಮೊದಲನೆಯ ಸಕಲ ಕರ್ಣಾಟಕ ಸಂಘ ಸಮ್ಮೇಳನವು, ಪ್ರತಿ ವರ್ಷವೂ ಪರಿಷತ್ತು ಅಂಥ ಸಂಘ ಸಮ್ಮೇಳನವನ್ನು ಸೇರಿಸಬೇಕೆಂದು ಒಂದು ನಿರ್ಣಯವನ್ನು ಮಾಡಿತು. ಅದನ್ನು ಒಪ್ಪಿಕೊಂಡು ಪರಿಷತ್ತಿನ ಕಾ|ನಿ| ಮಂಡಲಿ ಈ ಸಾರಿ—ಎಂದರೆ ೧೯೩೭ನೆಯ ಮೇ ತಿಂಗಳಲ್ಲಿ,—ವಿಶೇಷಸಾಹಿತ್ಯೋತ್ಸವದ ಭಾಗವಾಗಿ ಎರಡನೆಯ ಸ|| ಕ|| ಸಂಘ ಸಮ್ಮೇಳನವು ನಡೆಯಬೇಕೆಂದು ತಾ|| ೧೦-೧-೧೯೩೭ರಲ್ಲಿ ನಿರ್ಧರಿಸಿತು. ಅದನ್ನನುಸರಿಸಿ ಫೆಬ್ರುವರಿ ೨೦ರಲ್ಲಿ ೯೭ ಸಂಘಗಳಿಗೆ ಆಹ್ವಾನವನ್ನು ಕಳುಹಿಸಲಾಯಿತು. ಉತ್ತರವಾಗಿ ೨೧ ಸಂಘಗಳು ಪ್ರತಿನಿಧಿಗಳನ್ನು ಕಳುಹಿಸುವುದಾಗಿ ವಾಗ್ದಾನ ಕೊಟ್ಟವು.

೧೯೩೭ನೆಯ ಮೇ ೪ ಮಂಗಳವಾರ ಮಧ್ಯಾಹ್ನ ೧೨-೩೦ ಘಂಟೆಗೆ ಸಮ್ಮೇಳನದ ಮೊದಲನೆಯ ಸಭೆ ಸೇರಿತು. ಪರಿಷತ್ತಿನ ಪರವಾಗಿ ಕಾ|| ನಿ|| ಮಂಡಲಿಯ ಸದಸ್ಯರು ೧೨ ಮಂದಿ ಹಾಜರಿದ್ದರು. ಹಾಜರಿದ್ದ ಸಂಘಪ್ರತಿನಿಧಿಗಳು ೨೦.—

| ಸಂಖ್ಯೆ | ಸಂಘದ ಹೆಸರು | | ಪ್ರತಿನಿಧಿಗಳ ಹೆಸರು |
|---|---|---|---|
| | ಕರ್ಣಾಟಕ ಸಂಘಗಳು. | | |
| ೧. | ಮರಿಮಲ್ಲಪ್ಪನವರ ಹೈಸ್ಕೂಲು, ಮೈಸೂರು. | ಮ|| ರಾ|| | ಜಿ. ಆರ್. ರಂಗಸ್ವಾಮಿ, ಎಂ.ಎ., ಬಿ.ಟಿ. |
| ೨. | ಶಿವಮೊಗ್ಗ. | ,, | ಎಸ್. ವಿ. ಕೃಷ್ಣಮೂರ್ತಿರಾವ್, ಬಿ.ಎ., ಎಲ್ಎಲ್.ಬಿ. |
| ೩. | ತಿಪಟೂರು. | ,, | ಬಿ. ರಾಮಸ್ವಾಮಯ್ಯನವರು, ಬಿ.ಎಸ್‌ಸಿ. |
| ೪. | ಚೆನ್ನರಾಯಪಟ್ಟಣ. | ,, | ಸಿ. ಆರ್. ಶ್ರೀನಿವಾಸ ಅಯ್ಯಂಗಾರ್ |
| ೫. | ಶಾರದಾ ವಿಲಾಸ ಹೈಸ್ಕೂಲು, ಮೈಸೂರು. | ,, | ಕೆ. ವಿ. ನಾರಾಯಣ್ ಅವರು ಬಿ.ಎ. |
| ೬. | ನಂಜನಗೂಡು. | ,, | ಯಮ್. ಸುಬ್ರಹ್ಮಣ್ಯಯ್ಯನವರು. |
| ೭. | ಬೋರ್ಡ್ ಹೈಸ್ಕೂಲು, ಕೊಳ್ಳೇಗಾಲ. | ,, | ಎಚ್. ಜೆ. ಶಿವಶಂಕರಪ್ಪನವರು. |
| ೮. | ಮಲ್ಲೇಶ್ವರಂ, ಬೆಂಗಳೂರು. | ,, | ಎಸ್. ಗೋಪಾಲಸ್ವಾಮಿಯವರು, ಎಂ.ಎ.; ಸಿ. ಎಮ್. ರಾಘವಾಚಾರ್ಯರು, ಬಿ.ಎಸ್‌ಸಿ., ಎಮ್. ಎಲ್. ನಾರಾಯಣ್ ಅವರು, ಜಿ.ವಿ.ಎಸ್.ಸಿ., |
| ೯. | ಗೊರೂರು. | ,, | ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು. |
| ೧೦. | ವಿಲಿಂಗ್ಡನ್ ಕಾಲೇಜು, ಸಾಂಗ್ಲಿ. | ,, | ರಂ. ಶ್ರೀ. ಮುಗಳಿ ಅವರು, ಎಂ.ಎ., ಬಿ.ಟಿ. |

೧೧. ಸೆಂಟ್ರಲ್ ಕಾಲೇಜು, ಬೆಂಗಳೂರು. — ಮಾ॥ರಾ॥ ಬಿ. ಜಿ. ಎಲ್. ಸ್ವಾಮಿ
೧೨. ಮಹಾರಾಜರವರ ಕಾಲೇಜು, ಮೈಸೂರು. — ,, ಡಿ.ಎಲ್. ನರಸಿಂಹಾಚಾರ್ಯರು, ಎಂ.ಎ.
೧೩. ಕೋಲಾರ. — ,, ಕೆ. ಸೀತಾರಾಮಶಾಸ್ತ್ರಿಗಳು.
೧೪. ಶ್ರವಣಬೆಳಗೊಳ. — ,, ಬ್ರಹ್ಮಸೂರಿ ಶಾಸ್ತ್ರಿಗಳು.
೧೫. ಮೈಸೂರು ನಗರ. — ,, ಜಿ. ಹನುಮಂತರಾಯರು, ಎಂ.ಎ.
೧೬. ಮಿತ್ರಮಂಡಲಿ, ಮಂಗಳೂರು. — ,, ಎಸ್.ರಾಮಕೃಷ್ಣಾಚಾರ್, ಬಿ.ಎ.,ಬಿ.ಟಿ.
೧೭. ವಿಶ್ವವಿದ್ಯಾನಿಲಯದ ಸಂಘ, ಬೆಂಗಳೂರು. — ,, ಪಿ. ಶ್ರೀನಿವಾಸರಾಯರು, ಎಂ.ಎಸ್ಸಿ.
೧೮. ತರುಣರ ದಂಡು, ಮೈಸೂರು. — ,, ತೀ.ನಂ. ಶ್ರೀಕಂಠಯ್ಯನವರು, ಎಂ.ಎ.

## ಪರಿಷತ್ತಿನ ಕಾ॥ ನಿ॥ ಮಂಡಲಿಯ ಸದಸ್ಯರು

ಶ್ರೀಮಾನ್‌ಗಳಾದ:—

೧. ಡಿ. ವಿ. ಗುಂಡಪ್ಪನವರು
೨. ಎಸ್. ವಿ. ರಂಗಣ್ಣನವರು, ಎಂ.ಎ.
೩. ವಿ. ಸೀತಾರಾಮಯ್ಯನವರು, ಎಂ.ಎ.
೪. ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.
೫. ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ.
೬. ಶ್ರೀಮತಿ ಆರ್. ಕಲ್ಯಾಣಮ್ಮನವರು.
೭. ಎನ್. ವೆಂಕಟೇಶ ಆಯ್ಯಂಗಾರ್ಯರು, ಬಿ.ಎ.
೮. ಎ. ತಾಂದೋಣಿರಾಯರು, ಎಲ್.ಸಿ.ಇ., ಎಂ.ಎ.ಇ.
೯. ಡಿ. ಸಿ. ಸುಬ್ಬರಾಯಪ್ಪನವರು, ಬಿ.ಎ.,ಬಿ.ಎಲ್.
೧೦. ಪಿ. ಶ್ರೀನಿವಾಸರಾಯರು, ಎಂ.ಎಸ್ಸಿ.
೧೧. ಪಂಜೆ ಮಂಗೇಶರಾಯರು, ಬಿ.ಎ.,ಎಲ್.ಟಿ.
೧೨. ರಂ.ಶ್ರೀ. ಮುಗಳಿ ಆವರು, ಎಂ.ಎ.,ಬಿ.ಟಿ.

ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀಮಾನ್ ಡಿ. ವಿ. ಗುಂಡಪ್ಪನವರು ಸಮ್ಮೇಳನದ ಅಧ್ಯಕ್ಷರಾಗಿದ್ದರು. ಅವರು ಪ್ರತಿನಿಧಿಗಳಿಗೂ ಇತರ ಸದಸ್ಯರಿಗೂ ಸುಖಾಗಮನವನ್ನು ಬಯಸಿ, ಸಂಘಗಳ ಸಾಮಾನ್ಯ ಸ್ಥಿತಿಯನ್ನು ಕುರಿತು ಮಾತನಾಡುತ್ತ, ಕೆಲವು ಸಂಘಗಳಲ್ಲಿ ಯಾವುದೋ ನಿರುತ್ಸಾಹ ಜಾಡ್ಯವು ಹರಡಿರುವಂತೆ ತೋರುತ್ತದೆಯೆಂದೂ, ಸಂಘಗಳ ಚಾಲಕರು ತಮ್ಮ ಸಾಂಘಿಕ ಕರ್ತವ್ಯಗಳನ್ನು ತೀವ್ರ ಶ್ರದ್ಧೆಯಿಂದ ನೋಡಬೇಕಾದ ಕಾಲ ಈಗ ಬಂದಿದೆಯೆಂದೂ, ಸಂಘಗಳು ಬಲಪಟ್ಟು ಶಕ್ತಿಸಾಹಸಗಳಿಂದ ಕೆಲಸ ಮಾಡಿದ ಹೊರತು ಕನ್ನಡ ಸಮಾರಂಭವು ಸಾರ್ಥಕಪಡಲಾರದೆಂದೂ, ದೇಶ ಭಾಷಾಭಿಮಾನಿಗಳು ಈ ವಿಚಾರದಲ್ಲಿ ಬೇಗ ಎಚ್ಚರಗೊಳ್ಳಬೇಕೆಂದೂ ಸೂಚಿಸಿದರು.

ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಕನ್ನಡದ ಬೆಳೆವಣಿಗೆಗೆ ಬೇರೆ ಕಡೆಯಿಂದ ಅಡಚಣೆ ಬಂದಿದೆಯೆಂದೂ, ಭಾರತಮಾತೆಯ ಸಾಮ್ರಾಜ್ಯವನ್ನು ಕಟ್ಟುವ ದೊಡ್ಡ ಆರಂಭದ ಮಗ್ಗುಲಿನಲ್ಲಿ ಕನ್ನಡದ ಪಾಳೆಯಪಟ್ಟನ್ನು ಕಟ್ಟುವ ಪ್ರಯತ್ನ ಕೆಲವರ ಕಣ್ಣಿಗೆ ಸಣ್ಣದಾಗಿ ಕಂಡು, ಅದಕ್ಕೆ ಅವರಿಂದ ಪ್ರೋತ್ಸಾಹ ಸಹಾಯಗಳು ದೊರಕದೆ ಹೋದರೂ, ಒಟ್ಟಿನಮೇಲೆ ಸಂಘಗಳು ಆಸಕ್ತಿಯಿಂದ ಕೆಲಸಮಾಡುತ್ತಿವೆಯೆಂದೂ, ಕಾಲಕ್ರಮದಲ್ಲಿ ಇನ್ನೂ ಹೆಚ್ಚಾಗಿ ಮಾಡಿಯಾವೆಂದೂ ತಮ್ಮ ಅನುಭವದಿಂದ ಭರವಸೆಯನ್ನು ಕೊಟ್ಟರು.

ಮಂಗಳೂರು ಮಿತ್ರಮಂಡಲಿಯ ಶ್ರೀ॥ ರಾಮಕೃಷ್ಣಾಚಾರ್ಯರು ತಮ್ಮ ಸಂಸ್ಥೆಗೆ ಹಣದ ಕೊರತೆಯಿರುವುದಾಗಿಯೂ, ಆದರೂ ಹೋದವರುಷ ಕೆಲವು ಉಪನ್ಯಾಸಗಳನ್ನು ನಡಸಿದುದಾಗಿಯೂ, ಮುಂದೆ ಹೆಚ್ಚು ಪ್ರಯತ್ನಮಾಡುವುದಾಗಿಯೂ ಹೇಳಿದರು.

ಸಾಂಗ್ಲಿಯ ವಿಲಿಂಗ್‌ಡನ್ ಕಾಲೇಜಿನ ಶ್ರೀ॥ ಮುಗಳಿಯವರು ತಮ್ಮ ಸಂಘವು ೧೫ ವರ್ಷಗಳಿಂದ ಇರುವುದೆಂದೂ, ಅಲ್ಲಿ ಮರಾಠಿಯ ಮೋಹವು ದೊಡ್ಡ ಪ್ರತಿಬಂಧಕವಾಗಿದ್ದರೂ ತಮ್ಮ ಸಂಘವು ಒಂದು ಅಭ್ಯಾಸಗೋಷ್ಠಿಯನ್ನು ನಡಸುತ್ತಿದೆಯೆಂದೂ, "ಎಳೆದೋಟ"ವೆಂಬ ಕೈಬರೆಹದ ಪತ್ರಿಕೆಯನ್ನು ಪ್ರಕಟಿಸುತ್ತಿದೆಯೆಂದೂ, ಮುಂದೆ ಕನ್ನಡಕ್ಕೆ ಹೆಚ್ಚು ಉತ್ತೇಜನದೊರೆಯಬಹುದೆಂದೂ ಹೇಳಿದರು.

## ೨ನೆಯ ಸಕಲ ಕರ್ಣಾಟಕ ಸಂಘ ಸಮ್ಮೇಳನದ ವರದಿ
## ತಿದ್ದುಪಡಿ

---

೨ನೆಯ ಸಕಲ ಕರ್ಣಾಟಕ ಸಂಘ ಸಮ್ಮೇಳನದ ವರದಿಯ ೩ (iii)ನೆಯ ಪುಟದಲ್ಲಿ, ಎರಡನೆಯ ಪ್ಯಾರಾದಲ್ಲಿನ ೩–೪ನೆಯ ಸಂಕ್ತಿಗಳನ್ನು ಈ ಮುಂದೆ ತೋರಿಸಿರುವಂತೆ ತಿದ್ದಿಕೊಂಡು ಓದತಕ್ಕದ್ದು:—

"ಕೆಲವರ ಅಪಪ್ರಚಾರದಿಂದ ಸಂಘಕ್ಕೆ ಕಷ್ಟವೇನೋ ಇದೆ;
ಆದರೂ............" ಎಂಬುದಕ್ಕೆ ಬದಲಾಗಿ—
"ಸಂಘದ ಏಳಿಗೆಗೆ ಕೆಲವು ಅಡಚಣೆಗಳಿವೆ; ಅವು ನಿವಾರಣೆಯಾಗ
ಬಹುದು ಮತ್ತು............"ಎಂದು.

ವಂದನೆ ಸಮರ್ಪಿಸಿ, ಸಂಘಗಳ ಮೂಲಕ ತಾಯ್ನುಡಿಯ ಕೆಲಸ ಎಷ್ಟೊಂದು ಹೇಗೆ ಆಗಬೇಕೆಂಬುದನ್ನು ಸಂಕ್ಷೇಪವಾಗಿ ತಿಳಿಸಿದರು.

ಶ್ರೀ॥ ಡಿ. ವಿ. ಗುಂಡಪ್ಪನವರು ಸಭಾಧ್ಯಕ್ಷರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಿಗೆ ಸಂಘ ಪ್ರತಿನಿಧಿಗಳ ಪರವಾಗಿಯೂ ಪರಿಷತ್ತಿನ ಪರವಾಗಿಯೂ ವಂದನೆಗಳನ್ನು ಸಮರ್ಪಿಸಿದರು.

ಮಾರನೆಯ ದಿನ, (ಎಂದರೆ ಮೇ ೫ನೆಯ ಪ್ರಾತಃಕಾಲ ೭॥ ಘಂಟೆಗೆ) ಪ್ರತಿನಿಧಿಗಳಿಗಾಗಿ ಏರ್ಪಟ್ಟಿದ್ದ ಉಪಾಹಾರಕೂಟದೊಡನೆ ೨ನೆಯ ಸಕಲ ಕರ್ಣಾಟಕ ಸಂಘ ಸಮ್ಮೇಳನವು ಮುಕ್ತಾಯವಾಯಿತು.

ಎಸ್. ವಿ. ರಂಗಣ್ಣ,
ವ್ಯವಸ್ಥಾಪಕ.

---

ಸಾಂಗ್ಲಿಯ ವಿಲಿಂಗ್‌ಡನ್ ಕಾಲೇಜಿನ ಶ್ರೀ|| ಮುಗಳಿಯವರು ತಮ್ಮ ಸಂಘವು ೧೫ ವರ್ಷಗಳಿಂದ ಇರುವುದೆಂದೂ, ಅಲ್ಲಿ ಮರಾಠಿಯ ಮೋಹವು ದೊಡ್ಡ ಪ್ರತಿಬಂಧಕ ವಾಗಿದ್ದರೂ ತಮ್ಮ ಸಂಘವು ಒಂದು ಅಭ್ಯಾಸಗೋಷ್ಠಿಯನ್ನು ನಡಸುತ್ತಿದೆಯೆಂದೂ, "ಎಳೆದೋಟ"ವೆಂಬ ಕೈಬರೆಹದ ಪತ್ರಿಕೆಯನ್ನು ಪ್ರಕಟಿಸುತ್ತಿದೆಯೆಂದೂ, ಮುಂದೆ ಕನ್ನಡಕ್ಕೆ ಹೆಚ್ಚು ಉತ್ತೇಜನದೊರೆಯಬಹುದೆಂದೂ ಹೇಳಿದರು.

ಚೆನ್ನರಾಯಪಟ್ಟಣದ ಶ್ರೀ|| ಶ್ರೀನಿವಾಸ ಅಯ್ಯಂಗಾರ್ಯರು ತಮ್ಮ ಕರ್ಣಾಟಕ ಸಂಘವು ಹೇಗೆ ಮೂರು ವರ್ಷಗಳಿಂದ ಅಭಿವೃದ್ಧಿಹೊಂದುತ್ತಿದೆಯೆಂಬುದನ್ನು ವಿವರಿಸಿದರು: ಸದಸ್ಯರ ಸಂಖ್ಯೆ ೬೦ ಆಗಿದೆ, ಆರ್ಥಿಕ ಸ್ಥಿತಿ ಉತ್ತಮಗೊಳ್ಳುತ್ತಿದೆ; ಕೆಲವರ ಅಪಪ್ರಚಾರದಿಂದ ಸಂಘಕ್ಕೆ ಕಷ್ಟವೇನೋ ಇದೆ; ಆದರೂ ಪರಿಷತ್ತಿನ ಬೆಂಬಲದಿಂದ ಸಂಘವು ಮುಂದೆ ಹೋಗುವುದರಲ್ಲಿ ಯಾವ ಸಂದೇಹವೂ ಇಲ್ಲ—ಎಂದು ಹೇಳಿದರು.

ಆಮೇಲೆ, ಸಂಘಗಳಿಂದ ಬಂದಿದ್ದ ೧೩, ಪರಿಷತ್ತಿನಿಂದ ಬಂದಿದ್ದ ೯, ಒಟ್ಟು ೨೨ ಸೂಚನೆಗಳನ್ನು ವಿಮರ್ಶೆಮಾಡಿ, ಅವುಗಳಲ್ಲಿ ನಿರ್ಧಾರವಾದ ೧೨ನ್ನು ಬಹಿರಂಗ ಸಭೆಯ ಮುಂದಿಡಬಹುದೆಂದು ತೀರ್ಮಾನಿಸಲಾಯಿತು.

ಅದೇ ಮಧ್ಯಾಹ್ನ ಎರಡು ಘಂಟೆಗೆ ಸಮ್ಮೇಳನದ ಕಾರ್ಯಸಭೆ ಪ್ರಾರಂಭಿಸಿತು. ಪ್ರತಿನಿಧಿಗಳೂ ಕಾ|| ನಿ|| ಮಂಡಲಿಯ ಸದಸ್ಯರುಗಳೂ ಅಲ್ಲದೆ ಸುಮಾರು ೫೦ ಮಂದಿ ಇತರ ಹಿತಾಕಾಂಕ್ಷಿಗಳು ಹಾಜರಿದ್ದರು. ಶ್ರೀ|| ಡಿ. ವಿ. ಗುಂಡಪ್ಪನವರು ಬೇಡಿದ ಮೇರೆಗೆ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಅಧ್ಯಕ್ಷಪದವಿಯನ್ನು ವಹಿಸಿಕೊಂಡರು. ನಿರ್ಧಾರ ವಾಗಿದ್ದ ೧೨ ನಿರ್ಣಯಗಳೂ ಕ್ರಮವಾಗಿ ಚರ್ಚೆಯಾಗಿ ಸರ್ವಾನುಮತದಿಂದ ಅಂಗೀಕೃತ ವಾದುವು. ಅವುಗಳನ್ನು ಮುಂದೆ ಕೊಟ್ಟಿದೆ.

ಕಡೆಯಲ್ಲಿ ಅಧ್ಯಕ್ಷರು ಪ್ರತಿನಿಧಿಗಳ ಸಹನೆ ಸಹಾನುಭೂತಿ ಕಾರ್ಯಸೌಶೀಲ್ಯಗಳಿಗಾಗಿ ವಂದನೆ ಸಮರ್ಪಿಸಿ, ಸಂಘಗಳ ಮೂಲಕ ತಾಯ್ನುಡಿಯ ಕೆಲಸ ಎಷ್ಟೊಂದು ಹೇಗೆ ಆಗ ಬೇಕೆಂಬುದನ್ನು ಸಂಕ್ಷೇಪವಾಗಿ ತಿಳಿಸಿದರು.

ಶ್ರೀ|| ಡಿ. ವಿ. ಗುಂಡಪ್ಪನವರು ಸಭಾಧ್ಯಕ್ಷರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ ನವರಿಗೆ ಸಂಘ ಪ್ರತಿನಿಧಿಗಳ ಪರವಾಗಿಯೂ ಪರಿಷತ್ತಿನ ಪರವಾಗಿಯೂ ವಂದನೆಗಳನ್ನು ಸಮರ್ಪಿಸಿದರು.

ಮಾರನೆಯ ದಿನ, (ಎಂದರೆ ಮೇ ೫ನೆಯ ಪ್ರಾತಃಕಾಲ ೭½ ಘಂಟೆಗೆ) ಪ್ರತಿನಿಧಿ ಗಳಿಗಾಗಿ ಏರ್ಪಟ್ಟಿದ್ದ ಉಪಾಹಾರಕೂಟದೊಡನೆ ೨ನೆಯ ಸಕಲ ಕರ್ಣಾಟಕ ಸಂಘ ಸಮ್ಮೇಳನವು ಮುಕ್ತಾಯವಾಯಿತು.

ಎಸ್. ವಿ. ರಂಗಣ್ಣ,
ವ್ಯವಸ್ಥಾಪಕ.

---

೨ನೆಯ ಸಕಲ ಕರ್ಣಾಟಕ ಸಂಘ ಸಮ್ಮೇಳನವು ಅಂಗೀಕರಿಸಿದ

# ನಿರ್ಣಯಗಳು

೧. ಕನ್ನಡವನ್ನೇ ಎಲ್ಲ ಭಾಷೇತರ ವಿಷಯಗಳಿಗೂ ಬೋಧನ ಭಾಷೆಯನ್ನಾಗಿ ಪ್ರಚಾರಕ್ಕೆ ತರುವ ವಿಷಯದಲ್ಲಿ ದೇಶದ ವಿದ್ಯಾರ್ಥಿಗಳ ತಾಯಿ ತಂದೆ ಪೋಷಕರೆಲ್ಲರೂ ಉತ್ಸಾಹವನ್ನು ತೋರಿಸತಕ್ಕದ್ದು ಈಗ ಬಹಳ ಅವಶ್ಯವಾಗಿದೆ. ಚರಿತ್ರೆ, ಭೂಗೋಳ ಮೊದಲಾದ ವಿಷಯಗಳನ್ನೂ ಗಣಿತ ವಿಜ್ಞಾನಾದಿ ಶಾಸ್ತ್ರ ವಿಷಯಗಳನ್ನೂ ನಮ್ಮ ವಿದ್ಯಾರ್ಥಿಗಳಿಗೆ ಕನ್ನಡದ ಮೂಲಕ ಬೋಧಿಸುವುದರಿಂದ ಆ ವಿಷಯಗಳು ಅವರುಗಳ ಮನಸ್ಸಿಗೆ ಬೇಗನೆಯೂ ವಿಶದವಾಗಿಯೂ ಮತ್ತು ಸುಲಭವಾಗಿಯೂ ಗ್ರಾಹ್ಯ ವಾಗುವುದಲ್ಲದೆ, ಅವರ ಇಂಗ್ಲೀಷ್ ಭಾಷಾ ಜ್ಞಾನವೂ ಸಹ ಉತ್ತಮಗೊಳ್ಳಲು ಅನು ಕೂಲವಾಗುವುದೆಂದು ನೂರಾರು ಕಡೆ ನಡೆಸಿರುವ ಪ್ರಯೋಗ ಪರೀಕ್ಷೆಗಳಿಂದ ಸಿದ್ಧಾಂತ ವಾಗಿದೆ. ಕನ್ನಡದಲ್ಲಿ ಪಾಠ ನಡೆಯುವುದರಿಂದ ವಿದ್ಯಾರ್ಥಿಗಳ ಇಂಗ್ಲಿಷ್ ಸಾಮರ್ಥ್ಯಕ್ಕೆ ಕುಂದಾಗುವುದೆಂಬ ಹೆದರಿಕೆಗೆ ಕಾರಣವು ಲೇಶಮಾತ್ರವೂ ಇರುವುದಿಲ್ಲ. ಆದ್ದರಿಂದ ದೇಶದಲ್ಲಿಯ ವಿದ್ಯಾರ್ಥಿಗಳ ತಾಯಿತಂದೆ ಪೋಷಕರೆಲ್ಲರೂ ಪಾಠಶಾಲೆಗಳಲ್ಲಿ ಬೋಧನ ಕಾರ್ಯವು ಕೂಡಿದಮಟ್ಟಿಗೂ ಕನ್ನಡದ ಮೂಲಕವೇ ನಡೆಯಬೇಕೆಂದು ಸರ್ಕಾರದವರನ್ನು ಬೇಡಬೇಕೆಂದೂ ಮತ್ತು ಈ ಸುಧಾರಣೆಯಲ್ಲಿ ಸಹಕರಿಸಬೇಕೆಂದೂ ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಸೂಚಕರು :—ಶ್ರೀಮಾನ್ ವಿ. ವೆಂಕಟಪ್ಪನವರು, ಎಂ.ಎಲ್.ಸಿ.

ಅನುಮೋದಕರು :—ಶ್ರೀಮಾನ್ ಎಸ್. ವಿ. ಕೃಷ್ಣಮೂರ್ತಿರಾವ್,
ಬಿ.ಎ., ಎಲ್‌ಎಲ್.ಬಿ.

೨. ಸಂಘಗಳು ಆಗಾಗ ನಡೆಸುತ್ತಿರುವ ಉಪನ್ಯಾಸಾದಿ ಕಾರ್ಯಗಳ ಅಧಿಕಾರ ಯುತವಾದ ವರದಿಗಳು ಈಗ ಪರಿಷತ್ತಿಗೆ ಸಕಾಲದಲ್ಲಿ ಬರುತ್ತಾ ಇಲ್ಲವೆಂದು ತಿಳಿದುಬಂದಿದೆ. ಸಂಘಗಳ ಬಲವು ಹೆಚ್ಚಿ, ಅವುಗಳ ಕಾರ್ಯಕ್ರಮ ಸಫಲವಾಗಬೇಕಾದರೆ ಕೇಂದ್ರಸಂಸ್ಥೆ ಯಾದ ಪರಿಷತ್ತಿಗೆ ಸಂಘದ ಕಾರ್ಯ ವಿವರಗಳು ಆಗಾಗ ತಿಳಿದುಬರುವುದು ಅತ್ಯವಶ್ಯ ವಾಗಿರುವುದರಿಂದ, ಇನ್ನು ಮುಂದೆ ಪ್ರತಿಯೊಂದು ಕನ್ನಡ ಸಾಹಿತ್ಯ ಸಂಸ್ಥೆಯೂ, ಅದು ಅಂಗ ಸಂಸ್ಥೆಯಾಗಿರಲಿ ಇಲ್ಲದಿರಲಿ, ತಾನು ನಡೆಸುವ ಎಲ್ಲ ಕಾರ್ಯಗಳ ವರದಿಯನ್ನು ಸಂಕ್ಷೇಪವಾಗಿ ಗುರುತುಮಾಡಿ ಪರಿಷತ್ತಿನ ಕಾರ್ಯಾಲಯಕ್ಕೆ ಬೇಗನೆ ಕಳುಹಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

—ಅಧ್ಯಕ್ಷಸ್ಥಾನದಿಂದ ಸೂಚನೆ

೩. ಪ್ರತಿಯೊಂದು ಕರ್ಣಾಟಕ ಸಂಘವೂ ಈ ವರ್ಷ ಜೂನ್ ತಿಂಗಳೊಳಗಾಗಿ ಸಾರ್ವಜನಿಕ ಸಭೆಗಳನ್ನು ನಡೆಸಿ, ಈ ಕೆಳಗಿನ ನಿರ್ಣಯಗಳನ್ನು ಆ ಸಭೆಗಳಿಂದ ಅಂಗೀ ಕಾರ ಮಾಡಿಸಿ, ಆ ಸಂಗತಿಯನ್ನು ಸರ್ಕಾರಕ್ಕೂ, ತಕ್ಕ ಇತರ ಅಧಿಕಾರಸ್ಥಾನಗಳಿಗೂ ವೃತ್ತಪತ್ರಿಕೆಗಳಿಗೂ ಮತ್ತು ಪರಿಷತ್ತಿಗೂ ಸಹ ತಿಳಿಯಪಡಿಸತಕ್ಕದ್ದು:

(i) ಮೈಸೂರು ಸಂಸ್ಥಾನದ ಮಿಡಲ್ ಮತ್ತು ಹೈಸ್ಕೂಲುಗಳಲ್ಲಿ ಭಾಷೇತರ ವಿಷಯಗಳಾದ ಚರಿತ್ರೆ, ಭೂಗೋಳ, ಗಣಿತ ಮತ್ತು ವಿಜ್ಞಾನಶಾಸ್ತ್ರಗಳನ್ನು ಸಾಮಾನ್ಯವಾಗಿ ಕನ್ನಡದ ಮೂಲಕ ಬೋಧಿಸಬೇಕೆಂದು ಮೈಸೂರು ಸರ್ಕಾರದವರು ಮಾಡಿರುವ ಏರ್ಪಾಟನ್ನು........ಊರಿನ ಕರ್ಣಾಟಕ ಸಂಘವು ಕೂಡಿಸಿರುವ ಈ ಸಾರ್ವಜನಿಕ ಸಭೆಯು ಸಂಪೂರ್ಣವಾಗಿ ಅನುಮೋದಿಸಿ ಈ ದೇಶಭಾಷೋಪಕಾರಕ್ಕಾಗಿ ಮೈಸೂರು ಸರ್ಕಾರವನ್ನೂ ವಿದ್ಯಾಭ್ಯಾಸದ ಇಲಾಖಾ ಮುಖ್ಯಾಧಿಕಾರಿಗಳನ್ನೂ ವಂದಿಸುತ್ತದೆ.

(ii) ವಿಶ್ವವಿದ್ಯಾನಿಲಯವು ಕೊಡುತ್ತಿರುವ ಶಿಕ್ಷಣದ ಪ್ರಯೋಜನವು ದೇಶದ ಜನರಿಗೆ ಕೂಡಿದಷ್ಟು ಸಂಪೂರ್ಣವಾಗಿ ದೊರೆಯಬೇಕಾದರೆ ವಿಶ್ವವಿದ್ಯಾನಿಲಯದ ಪದವೀಧರರಾಗಿರತಕ್ಕ ವಿದ್ಯಾವಂತರು ತಮ್ಮ ನಾನಾ ಶಾಸ್ತ್ರಕಲೆಗಳ ಜ್ಞಾನವನ್ನು ಸಾರ್ವಜನಿಕ ಭಾಷೆಯಾದ ಕನ್ನಡದಲ್ಲಿ ಬೋಧಿಸಲು ಶಕ್ತರಾಗಿರಬೇಕು. ಇಂಥ ಭಾಷಾ ಸೌಲಭ್ಯವು ಅವರಿಗೆ ಉಂಟಾಗಬೇಕಾದರೆ ಅವರು ತಮ್ಮ ಪ್ರೌಢ ತರಗತಿಗಳಲ್ಲಿಯೂ ಸಹ ಕನ್ನಡ ಗ್ರಂಥಗಳ ಅಭ್ಯಾಸವನ್ನೂ ಮತ್ತು ಕನ್ನಡ ಪ್ರಬಂಧ ರಚನೆಯ ಅಭ್ಯಾಸವನ್ನೂ ಇರಿಸಿಕೊಂಡಿರುವುದು ಅತ್ಯಂತ ಅವಶ್ಯವಾಗಿರುತ್ತದೆ. ಈ ಕಾರಣದಿಂದ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಕನ್ನಡದ ವ್ಯಾಸಂಗವನ್ನು ವಿಶ್ವವಿದ್ಯಾನಿಲಯದ ಬಿ.ಎ., ಬಿ.ಎಸ್‌ಸಿ. ಪಾಸ್ ಮತ್ತು ಆನರ್ಸ್ ಪರೀಕ್ಷೆಗಳ ತನಕ ಪ್ರತಿಯೊಂದು ಶಾಖೆಯಲ್ಲಿಯೂ ಕನ್ನಡ ವ್ಯಾಸಂಗವು ನಿರ್ಬಂಧವಾಗಿ ನಡೆಯುವಂತೆ ಏರ್ಪಡಿಸಬೇಕೆಂದು ಅತಿವಿನಯದಿಂದ ಸೂಚಿಸುತ್ತದೆ.

(iii) ನಮ್ಮ ದೇಶದ ಡಿಸ್ಟ್ರಿಕ್ಟ್ ಬೋರ್ಡುಗಳು ಮುನಿಸಿಪಾಲಿಟಿಗಳು ಮೊದಲಾದ ಸ್ಥಳೀಯ ಸಂಸ್ಥೆಗಳು ನಡಸುವ ಕಾರ್ಯಕಲಾಪಗಳ ವರದಿಗಳು ಸಾರ್ವಜನಿಕವಾಗಿ ತಿಳಿಯಬೇಕಾದದ್ದು ಅತ್ಯಂತ ಅವಶ್ಯವಾಗಿರುವುದರಿಂದಲೂ ಮತ್ತು ಈ ಸಂಸ್ಥೆಗಳ ಸದಸ್ಯರುಗಳಲ್ಲಿ ಬಹುಮಂದಿ ಕನ್ನಡವನ್ನೇ ಹೆಚ್ಚಾಗಿ ತಿಳಿದವರಾದುದರಿಂದಲೂ ಅಂಥ ಸಂಸ್ಥೆಗಳ ಕಾರ್ಯಕಲಾಪಗಳು ಸಾಮಾನ್ಯವಾಗಿ ಕನ್ನಡದಲ್ಲಿ ನಡೆಯುವಂತೆಯೂ ಮತ್ತು ಕನ್ನಡದಲ್ಲಿಯೇ ಲಿಖಿತವಾಗಿ (Record) ನಿಲ್ಲುವಂತೆಯೂ ಸಾರ್ವತ್ರಿಕವಾದ ಆಜ್ಞಾಪತ್ರಿಕೆಯನ್ನೂ ಸರ್ಕಾರದವರು ದಯಪಾಲಿಸಬೇಕೆಂದು ಈ ಮಹಾಸಭೆಯು ಬೇಡುತ್ತದೆ.

(iv) ನಮ್ಮ ದೇಶದ ಸಾಮಾನ್ಯಜನರ ವ್ಯವಹಾರದ ಭಾಷೆಯು ಕನ್ನಡವೇ ಆಗಿರುವುದರಿಂದಲೂ ಕೋರ್ಟುಕಚೇರಿಗಳಲ್ಲಿ ಜನರು ಹೇಳಿಕೊಳ್ಳಬೇಕಾದ ಸಾಕ್ಷ್ಯಗಳನ್ನೂ ಮನವಿಗಳನ್ನೂ ದೇಶಭಾಷೆಯಾದ ಕನ್ನಡದಲ್ಲಿ ಹೇಳುವುದು ಅವರಿಗೆ ಸುಲಭವಾಗಿರುವುದರಿಂದಲೂ ಮತ್ತು ಅವರ ಅರಿಕೆಗಳೂ ಅವರ ವಾಙ್ಮೂಲಗಳೂ ಅವರ ಮಾತೇ ಆದ ಕನ್ನಡದಲ್ಲಿದ್ದರೆ ಅಪಾರ್ಥಗಳಾಗುವುದು ತಪ್ಪಿ, ತಪ್ಪುತರ್ಜುಮೆಗಳಾಗುವುದು ಕಡಮೆಯಾಗಿ ನ್ಯಾಯಸಿದ್ಧಿಸಲು ಹೆಚ್ಚು ಅನುಕೂಲವಾಗುವುದಾದಕಾರಣ ಇನ್ನು ಮುಂದೆ ಎಲ್ಲ ಪ್ರಥಮ ದರ್ಜೆಯ ನ್ಯಾಯಸ್ಥಾನಗಳಲ್ಲಿಯೂ ಕನ್ನಡವು ಸಾಮಾನ್ಯವಾಗಿ ವಿಚಾರಣೆಯ ಮತ್ತು ಲಿಖಿತದ (Record) ಭಾಷೆಯಾಗಿರುವಂತೆ ಏರ್ಪಡಿಸಬೇಕೆಂದು ಈ ಸಾರ್ವಜನಿಕ ಸಭೆಯು ಸರ್ಕಾರವನ್ನು ಪ್ರಾರ್ಥಿಸುತ್ತದೆ.

ಸೂಚಕರು:—ಶ್ರೀಮಾನ್ ಎಸ್. ವಿ. ಕೃಷ್ಣಮೂರ್ತಿರಾವ್, ಬಿ.ಎ.,ಎಲ್ಎಲ್.ಬಿ.
ಅನುಮೋದಕರು:—ಶ್ರೀಮಾನ್ ವಿ. ವೆಂಕಟಪ್ಪನವರು, ಎಂ.ಎಲ್.ಸಿ.
ಪರಿಪೋಷಕರು:—ಶ್ರೀಮಾನ್ ಎಚ್. ಜೆ. ಶಿವಶಂಕರಪ್ಪನವರು.
,, ಬ್ರಹ್ಮಸೂರಿ ಶಾಸ್ತ್ರಿಗಳು.
,, ಬಿ. ರಾಮಸ್ವಾಮಯ್ಯನವರು, ಬಿ.ಎಸ್‌ಸಿ.

೪. ಪ್ರತಿಯೊಂದು ಕರ್ಣಾಟಕ ಸಂಘವೂ ಇನ್ನು ಮುಂದೆ ಪ್ರತಿವರ್ಷವೂ ಕರ್ಣಾಟಕ ಸಾಹಿತ್ಯ ಪರಿಷತ್ತು ನಿರ್ಣಯಮಾಡಿ ತಿಳಿಸುವ ಒಂದು ದಿವಸವನ್ನು ಕನ್ನಡದ ಹಬ್ಬವೆಂದು ಆಚರಿಸತಕ್ಕದ್ದು. ಆ ದಿವಸ ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಕಾವ್ಯ ವಾಚನ, ಕನ್ನಡ ಹಾಡುಗಳ ಹಾಡುಗಾರಿಕೆ, ಕನ್ನಡದ ದೇಶದ ಸರ್ವವಸ್ತುಗಳ ಪ್ರದರ್ಶನ ಮುಂತಾದವುಗಳನ್ನೇರ್ಪಡಿಸಿ ಕನ್ನಡದ ವಿಷಯದಲ್ಲಿ ಜನರಿಗೆ ಉತ್ಸಾಹ ಅಭಿಮಾನಗಳು ಹೆಚ್ಚುವಂತೆ ಮಾಡತಕ್ಕದ್ದು ಮತ್ತು ಆ ದಿವಸ ಕನ್ನಡದ ಸೇವೆಗಾಗಿ ಮನೆಮನೆಗೂ ತಿರುಗಿ ಕಾಣಿಕೆಯನ್ನು ಎತ್ತತಕ್ಕದ್ದು. ಹೀಗೆ ಶೇಖರಿಸುವ ಒಟ್ಟು ಮೊಬಲಗಿನಲ್ಲಿ ಅರ್ಧವನ್ನು ತಮ್ಮ ಸಂಸ್ಥೆಗಾಗಿ ಇರಿಸಿಕೊಂಡು ಉಳಿದುದುದನ್ನು ಪರಿಷತ್ತಿನ ಶಾಶ್ವತ ನಿಧಿಗಾಗಿ ಕಳುಹಿಸತಕ್ಕದ್ದು.

ಸೂಚಕರು:—ಶ್ರೀಮಾನ್ ಗೊರೂರು ರಾಮಸ್ವಾಮಯ್ಯಂಗಾರ್ಯರು.
ಅನುಮೋದಕರು:—ಶ್ರೀಮಾನ್ ಆರ್. ಎಸ್. ಮುಗಳಿ, ಎಂ.ಎ.,ಬಿ.ಟಿ.
ಪರಿಪೋಷಕರು:—ಶ್ರೀಮಾನ್ ಎಸ್. ರಾಮಕೃಷ್ಣಾಚಾರ್, ಬಿ.ಎ.,ಬಿ.ಟಿ
,, ಎಚ್. ಜೆ. ಶಿವಶಂಕರಪ್ಪನವರು.

೫. ಪ್ರತಿಯೊಂದು ಸಂಘವೂ ತನ್ನ ಊರಿನಲ್ಲಿರತಕ್ಕ ವಿದ್ಯಾರ್ಥಿ ವಿದ್ಯಾರ್ಥಿನಿಯರ ವರ್ಗದಲ್ಲಿ ಭಾಷೋತ್ಸಾಹವನ್ನು ಹೆಚ್ಚಿಸಲು ಆಗಾಗ ತಕ್ಕ ಕಾರ್ಯವನ್ನು ಕೈಕೊಂಡು ಯಾವ ರೀತಿಯಲ್ಲಾದರೂ ಆ ಬಾಲಕ ಬಾಲಕಿಯರಿಗೂ ತನಗೂ ಸಂಬಂಧವಿರುವಂತೆ ಏರ್ಪಡಿಸಿಕೊಳ್ಳತಕ್ಕದ್ದು.

—ಅಧ್ಯಕ್ಷಸ್ಥಾನದಿಂದ ಸೂಚನೆ

೬. ಕರ್ಣಾಟಕ ಸಾಹಿತ್ಯ ಪರಿಷತ್ತು ಹೊರಡಿಸಿರುವ ಸಂಚಾರೋಪನ್ಯಾಸದ ಏರ್ಪಾಟಿನ ವಿಷಯದಲ್ಲಿ ಮೈಸೂರು ಸರ್ಕಾರವು ಸಹಾನುಭೂತಿಯನ್ನು ವ್ಯಕ್ತಪಡಿಸಿ ೧೬ ತಿಂಗಳುಗಳಾಗಿದ್ದಾಗ್ಯೂ ಈ ವಿಷಯದಲ್ಲಿ ಕಾರ್ಯ ಮುಂದೆಸಾಗದೆ ಇರುವುದಕ್ಕಾಗಿ ಈ ಸಮ್ಮೇಳನವು ವಿಷಾದಪಡುತ್ತದೆ. ಮತ್ತು ಈ ಕಾರ್ಯಕ್ಕಾಗಿ ತಕ್ಕ ಸಹಾಯವನ್ನು ಅಪೇಕ್ಷಿಸಿ ಪರಿಷತ್ತಿನವರು ಕೆಲವು ಡಿಸ್ಟ್ರಿಕ್ಟ್ ಬೋರ್ಡುಗಳವರಿಗೆ ಕಾಗದ ಬರೆದು ೫ ತಿಂಗಳಾದಾಗ್ಯೂ ಈ ಪ್ರಜೋಪಕಾರವಾದ ಕಾರ್ಯ ಇನ್ನೂ ಮುಂದುವರಿಯದೆ ಇರುವುದಕ್ಕಾಗಿ ಈ ಸಮ್ಮೇಳನವು ವಿಷಾದಪಡುತ್ತದೆ; ಮತ್ತು ಡಿಸ್ಟ್ರಿಕ್ಟ್ ಬೋರ್ಡುಗಳವರು ಈ ವಿಚಾರದಲ್ಲಿ ತೀವ್ರವಾದ ಆಸಕ್ತಿಯನ್ನು ತೋರಿ ಬೇಗನೆ ಈ ಉದ್ದೇಶವು ಸಾರ್ಥಕ

ಪಡುವಂತೆ ಸಹಕರಿಸಬೇಕೆಂದು ಡಿಸ್ಟ್ರಿಕ್ಟ್ ಬೋರ್ಡುಗಳ ಸದಸ್ಯರುಗಳನ್ನೂ ಮತ್ತು ಅಧ್ಯಕ್ಷರುಗಳನ್ನೂ ಈ ಸಮ್ಮೇಳನವು ಬೇಡುತ್ತದೆ.

ಸೂಚಕರು :—ಶ್ರೀಮಾನ್ ಪಂಜೆ ಮಂಗೇಶರಾಯರು, ಬಿ.ಎ.,ಎಲ್.ಟಿ.

ಅನುಮೋದಕರು :—ಶ್ರೀಮಾನ್ ಬ್ರಹ್ಮಸೂರಿ ಶಾಸ್ತ್ರಿಗಳು.

ಪರಿಪೋಷಕರು :—ಶ್ರೀಮಾನ್ ಎಚ್. ಜೆ. ಶಿವಶಂಕರಪ್ಪನವರು.

೭. ಹೋದ ವರುಷ ನಡೆದ ಸಕಲ ಕರ್ಣಾಟಕ ಸಂಘ ಸಮ್ಮೇಳನದಲ್ಲಿ ಸಂಘಗಳು ಜನಪದ ಸಾಹಿತ್ಯ ಮುಂತಾದ ಸಂಸ್ಕೃತಿಯ ಹೆಗ್ಗುರುತುಗಳನ್ನು ಶೇಖರಮಾಡಬೇಕೆಂದು ಒಂದು ನಿರ್ಣಯವಾಯಿತಷ್ಟೆ. ಆ ವಿಚಾರದಲ್ಲಿ ಯಾವ ಯಾವ ಸಂಘಗಳು ಎಷ್ಟೆಷ್ಟು ಕಾರ್ಯಭಾಗ ನಡಸಿವೆಯೋ ಗೊತ್ತಾಗಿಲ್ಲ. ಆದ್ದರಿಂದ ಎಲ್ಲ ಸಂಘಗಳೂ ಲಾವಣಿ, ಯಕ್ಷಗಾನ, ಗಾದೆ, ಒಗಟೆ, ಓಲೆಯಗರಿ ಪ್ರತಿ, ಸ್ಥಳ ಪುರಾಣ, ಇತಿಹಾಸ, ಕಟ್ಟು ಕಥೆ ಮುಂತಾದ ಸ್ವಾರಸ್ಯ ಸಾಮಗ್ರಿಗಳನ್ನು ಕೂಡಿಹಾಕಿ ಪ್ರಕಟಪಡಿಸುವ ಕೆಲಸಕ್ಕೆ ತಮ್ಮ ತೀವ್ರಗಮನವನ್ನು ಕೊಡಬೇಕೆಂದು ಈ ಸಮ್ಮೇಳನವು ಎಲ್ಲ ಸಂಘಗಳನ್ನೂ ಬೇಡುತ್ತದೆ. ಮತ್ತು ಕಾರ್ಯಕ್ರಮವನ್ನೂ ಫಲವನ್ನೂ ಪರಿಷತ್ತಿಗೆ ಆಗಾಗ ತಿಳಿಸುತ್ತಿರಬೇಕೆಂದೂ ಈ ಸಮ್ಮೇಳನವು ಬೇಡುತ್ತದೆ.

ಸೂಚಕರು :—ಶ್ರೀಮಾನ್ ಸಿ. ಆರ್. ಶ್ರೀನಿವಾಸಯ್ಯಂಗಾರ್.

ಅನುಮೋದಕರು :—ಶ್ರೀಮಾನ್ ಕೆ. ವಿ. ನಾರಾಯಣ್, ಬಿ.ಎ.,ಬಿ.ಟಿ.

೮. ಕನ್ನಡ ನಾಡಿನಲ್ಲಿ ಹುಟ್ಟಿ ಕೆಲಸಮಾಡುತ್ತಿರುವ ಕನ್ನಡ ಸಾಹಿತ್ಯ ಸಂಸ್ಥೆಗಳಲ್ಲಿ ಬಹು ಸಂಸ್ಥೆಗಳು ಇನ್ನೂ ಪರಿಷತ್ತಿಗೆ ಅಂಗ ಸಂಸ್ಥೆಗಳಾಗಿ ಸೇರದೆ ನಿಂತಿವೆ. ಅಂಥ ಸಂಸ್ಥೆಗಳೆಲ್ಲವೂ ಈ ವರ್ಷದ (೧೯೩೭ನೆಯ) ಸೆಪ್ಟಂಬರು ತಿಂಗಳೊಳಗಾಗಿ ಪರಿಷತ್ತಿನ ಅಂಗಸಂಸ್ಥೆಗಳಾಗಿ ಸೇರಿ ಮುಂದಿನ ಸಮ್ಮೇಳನ ವಾರ್ಷಿಕಾಧಿವೇಶನಗಳಲ್ಲಿ ಭಾಗವಹಿಸಲು ಅರ್ಹತೆ ಪಡೆಯಬೇಕೆಂದು ಈ ಸಮ್ಮೇಳನವು ಕೋರುತ್ತದೆ.

ಸೂಚಕರು :—ಶ್ರೀಮಾನ್ ಎಸ್. ವಿ. ಕೃಷ್ಣಮೂರ್ತಿರಾವ್, ಬಿ.ಎ.,ಎಲ್‌ಎಲ್.ಬಿ.

ಅನುಮೋದಕರು :—ಶ್ರೀಮಾನ್ ಬಿ. ರಾಮಸ್ವಾಮಯ್ಯನವರು, ಬಿ. ಎಸ್‌ಸಿ.

೯. ಪರಿಷತ್ತಿನ ಅಂಗ ಸಂಸ್ಥೆಗಳಾದ ಕರ್ಣಾಟಕ ಸಂಘಗಳು ತಮ್ಮ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿಗಳನ್ನು ಆಗಾಗ ಪರಿಷತ್ತಿನ ಕಛೇರಿಗೆ ಕಳುಹಿಸುತ್ತಿರಬೇಕೆಂದು ಪರಿಷತ್ತು ಹಲವುಸಾರಿ ಪರಿಷತ್ಪತ್ರಿಕೆಯ ಮೂಲಕ ಕೇಳಿಕೊಂಡಿರುವುದು ಸರಿಯಷ್ಟೆ. ಆದರೆ ಅನೇಕ ಸಂಘಗಳು ಹಾಗೆ ಮಾಡುತ್ತಿಲ್ಲ. ಆದ್ದರಿಂದ ಎಲ್ಲ ಸಂಘಗಳೂ ತಮ್ಮ ವರದಿಗಳನ್ನು ಪರಿಷತ್ತಿಗೆ ಕಾಲಕಾಲಕ್ಕೆ ಕಳುಹಿಸುವುದನ್ನು ತಮ್ಮ ಒಂದು ಮುಖ್ಯಕರ್ತವ್ಯವಾಗಿ ಭಾವಿಸಬೇಕೆಂದು ಈ ಸಮ್ಮೇಳನವು ಕೋರುತ್ತದೆ.

ಸೂಚಕರು :—ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ.

ಅನುಮೋದಕರು :—ಶ್ರೀಮಾನ್ ಎ. ತಾಂಡೋಣಿರಾಯರು, ಎಲ್.ಸಿ.ಇ.,ಎಂ.ಐ.ಇ.

೧೦. ಪ್ರೌಢಸಾಹಿತ್ಯದ ಅಭ್ಯಾಸಕ್ಕಾಗಿ ಸಮಸ್ತ ಕರ್ಣಾಟಕ ಸಂಘಗಳೂ ತರಗತಿಗಳನ್ನು ತೆರೆಯಬೇಕು. ಆ ಅಭ್ಯಾಸಕ್ಕಾಗಿ ಪರಿಷತ್ತು ಪಠ್ಯಪುಸ್ತಕಗಳನ್ನು

ನಿಯಮಿಸಬೇಕು. ವರ್ಷಾವಧಿಯಲ್ಲಿ ಪರಿಷತ್ತು ಪರೀಕ್ಷೆಯನ್ನು ನಡಸಿ ತೇರ್ಗಡೆ ಹೊಂದಿದವರಿಗೆ ಪ್ರಶಸ್ತಿ ಪತ್ರಗಳನ್ನು ಕೊಡಬೇಕು—ಎಂದು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಈ ಸೂಚನೆಯನ್ನು ಪರಿಷತ್ತಿನ ಕಾ|| ನಿ|| ಮಂಡಲಿಗೆ ಕಳುಹಿಸತಕ್ಕದ್ದು.

ಸೂಚಕರು:—ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು, ಎಂ.ಎ.

ಅನುಮೋದಕರು:—ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರು, ಎಂ.ಎ.

೧೧. (a) ಪ್ರಚಾರೋಪನ್ಯಾಸಗಳಿಗೆಂದು ಸ್ಥಳೀಯ ಸಂಘಗಳವರು ಅಪೇಕ್ಷಿಪಟ್ಟು, ಎಲ್ಲ ಖರ್ಚನ್ನು ವಹಿಸಿಕೊಂಡು ಸಾಮಾನುಗಳಿಗೆ ನಷ್ಟ ಸಂಭವಿಸಿದರೆ ಬದಲು ಕೊಡುವ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಸಿದ್ಧವಾಗಿದ್ದರೆ, ವಿಜ್ಞಾನ ವಿಷಯಗಳ ಉಪನ್ಯಾಸಗಳಿಗೆ ಬೇಕಾಗುವ ಚಿತ್ರಪಟಗಳು ಮತ್ತು ಸ್ಲೈಡುಗಳನ್ನು ಪರಿಷತ್ತಿನಿಂದಲೇ ಆಗಲಿ, ಅಥವಾ ಪರಿಷತ್ತು ಬೆಂಗಳೂರಿನಲ್ಲಿರುವ ಇತರ ವಿಜ್ಞಾನ ಸಂಸ್ಥೆಗಳಿಂದಲೇ ಆಗಲಿ ತೆಗೆದುಕೊಂಡು ನಿಯಮಿತ ಕಾಲಕ್ಕೆ ಎರವಲಾಗಿ ಕೊಡುವಂತೆ ಏರ್ಪಾಟುಮಾಡತಕ್ಕದ್ದು.

(b) ವಿಜ್ಞಾನ, ಸಹಕಾರ, ಅರ್ಥಶಾಸ್ತ್ರ, ಗ್ರಾಮಾಭಿವೃದ್ಧಿ ಮುಂತಾದ ವಿಷಯಗಳ ಸಂಬಂಧವಾಗಿ ಆಗಾಗ್ಗೆ ಇಂಗ್ಲೀಷಿನಲ್ಲಿ ಹೊರಬೀಳುತ್ತಿರುವ ಆಧುನಿಕ ಪುಸ್ತಕಗಳು, ಮತ್ತು ಮಾಸಪತ್ರಿಕೆಗಳು ಇವುಗಳ ಪುಸ್ತಕ ಭಂಡಾರವೊಂದನ್ನು ಪರಿಷತ್ತಿನಲ್ಲಿ ರಚಿಸಿಯೇ ಆಗಲಿ ಅಥವಾ ಬೆಂಗಳೂರಿನಲ್ಲಿರುವ ಇತರ ಸಂಸ್ಥೆಗಳ ಸಹಾಯದಿಂದಲೇ ಆಗಲಿ ಅಂತಹ ಪುಸ್ತಕ ಮಾಸಪತ್ರಿಕೆಗಳನ್ನು ಸ್ಥಳೀಯ ಸಂಘಗಳವರಿಗೆ ನಿಯಮಿತ ಕಾಲಕ್ಕೆ ಎರವಲಾಗಿ ಕೊಡತಕ್ಕದ್ದು. ಅವಶ್ಯತೋರಿದರೆ ಪರಿಷತ್ತು ಇದಕ್ಕಾಗಿ ಒಂದು ಪ್ರತ್ಯೇಕ ಶುಲ್ಕವನ್ನು ಹಾಕಬಹುದು.

ಸೂಚಕರು:—ಶ್ರೀಮಾನ್ ಎಸ್. ವಿ. ಕೃಷ್ಣಮೂರ್ತಿರಾವ್, ಬಿ.ಎ.,ಎಲ್‌ಎಲ್.ಬಿ.

ಅನುಮೋದಕರು:—ಶ್ರೀಮಾನ್ ಜಿ. ಆರ್. ರಂಗಸ್ವಾಮಿ, ಎಂ.ಎ.,ಬಿ.ಟಿ.

೧೨. ಪರಿಷತ್ತಿಗೂ ಸ್ಥಳೀಯ ಸಂಸ್ಥೆಗಳಿಗೂ ನಿಕಟವಾದ ಮೈತ್ರಿ ಬೆಳೆಯಲು ವರ್ಷಕ್ಕೊಂದು ಬಾರಿಯಾದರೂ ಪರಿಷತ್ತಿನ ಅಧಿಕಾರ ವರ್ಗದ ಸದಸ್ಯರೊಬ್ಬರಾದರೂ ಪ್ರಚಾರ ಸಂಚಾರ ನಡಸತಕ್ಕದ್ದು.

ಸೂಚಕರು:—ಶ್ರೀಮಾನ್ ಎಸ್.ವಿ. ಕೃಷ್ಣಮೂರ್ತಿರಾವ್, ಬಿ.ಎ.,ಎಲ್‌ಎಲ್.ಬಿ.

ಅನುಮೋದಕರು:—ಶ್ರೀಮಾನ್ ಬಿ. ರಾಮುಸ್ವಾಮಯ್ಯನವರು, ಬಿ.ಎಸ್‌ಸಿ.

---

ದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು ಸಿಟಿ.

# ಕರ್ಣಾಟಕ ಸಾಹಿತ್ಯ ಪರಿಷತ್ತು

**ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ, ಚಾಮರಾಜಪೇಟೆ, ಬೆಂಗಳೂರು ಸಿಟಿ**

---

**ಅಧ್ಯಕ್ಷರು:**

**ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾದ**
**ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ. ಸಿ. ಐ. ಇ.,**
**ಮಹಾಸ್ವಾಮಿಯವರು**

---

# ಬಾಲಕ ಬಾಲಕಿಯರ ಕಂಠಪಾಠ ಸ್ಪರ್ಧೆ

**೧೯೩೭**

## ನಿಯಮಗಳು

೧. ಬಾಲಕ ಬಾಲಕಿಯರಲ್ಲಿ ಕಾವ್ಯಪಾಠದ ಅಭ್ಯಾಸವನ್ನು ಪ್ರೋತ್ಸಾಹಿಸುವುದಕ್ಕಾಗಿ ಕರ್ಣಾಟಕ ಸಾಹಿತ್ಯ ಪರಿಷತ್ತು ಬಾಲಕರಿಗೂ ಬಾಲಕಿಯರಿಗೂ ಪ್ರತ್ಯೇಕವಾಗಿ ಎರಡೆರಡು, ಒಟ್ಟು ನಾಲ್ಕು, ಕಂಠಪಾಠ ಸ್ಪರ್ಧೆಗಳನ್ನು ಕಳೆದ ವಿಶೇಷ ಸಾಹಿತ್ಯೋತ್ಸವದ ಅಂಗವಾಗಿ ಏರ್ಪಡಿಸಿದ್ದುದು ಸರಿಯಷ್ಟೆ.

೨. ಈ ಸಾರಿ ಬಾಲಕಿಯರಿಗೆ ಮೂರು, ಬಾಲಕರಿಗೆ ಮೂರು, ಹೀಗೆ ಒಟ್ಟು ಆರು, ಕಂಠಪಾಠ ಸ್ಪರ್ಧೆಗಳನ್ನು ನಡಸಬೇಕೆಂದು ತೀರ್ಮಾನವಾಗಿದೆ.

೩. ಪ್ರೈಮರಿ ಸ್ಕೂಲ್ ವಿದ್ಯಾರ್ಥಿಗಳನ್ನು 'ಮಕ್ಕಳ ವರ್ಗ'ವೆಂದೂ, ಮಿಡಲ್ ಸ್ಕೂಲ್ ವಿದ್ಯಾರ್ಥಿಗಳನ್ನು 'ಕಿರಿಯರ ವರ್ಗ'ವೆಂದೂ, ಹೈಸ್ಕೂಲಿನ ವಿದ್ಯಾರ್ಥಿಗಳನ್ನು 'ಹಿರಿಯರ ವರ್ಗ'ವೆಂದೂ ವಿಂಗಡಿಸಲಾಗಿದೆ.

೪. ಪ್ರತಿಯೊಂದು ಸ್ಪರ್ಧೆಯಲ್ಲಿಯೂ ಎರಡು ಸಾಮಾನ್ಯ ಪಾರಿತೋಷಿಕಗಳನ್ನೂ, ಒಂದು ಅಥವಾ ಎರಡು ವಿಶೇಷ ಪಾರಿತೋಷಿಕಗಳನ್ನೂ ಕೊಡಲಾಗುವುದು.

೫. ಸ್ಪರ್ಧೆಗೆ ಸೇರಲಿಚ್ಛಿಸುವವರ ಪ್ರಾರ್ಥನ ಪತ್ರಿಕೆಯು ಎರಡು ಆಣೆ ಪ್ರವೇಶಧನದೊಂದಿಗೆ ೧೯೩೭ ನೆಯ ಅಕ್ಟೋಬರು ತಿಂಗಳು ೨೨ನೆಯ ತಾರೀಖಿನೊಳಗಾಗಿ ಪರಿಷತ್ತಿನ ಗೌ|| ಕಾರ್ಯದರ್ಶಿಗಳಿಗೆ, ಶಾಲೆಯ ಮುಖ್ಯೋಪಾಧ್ಯಾಯರ ಮೂಲಕ, ಬಂದು ಸೇರತಕ್ಕದ್ದು. ಆ ಕಾಲ ಮೀರಿದ ಮೇಲೆ ಬರತಕ್ಕ ಪತ್ರಿಕೆಗಳಿಗೆ ಗಮನ ಕೊಡಲಾಗುವುದಿಲ್ಲ. ಪ್ರಾರ್ಥನ ಪತ್ರಿಕೆಯನ್ನು ಕಳುಹಿಸಿ ಕೊಟ್ಟು ಸ್ಪರ್ಧೆಗೆ ಬಾರದವರ ಪ್ರವೇಶಧನವನ್ನು ಹಿಂದಕ್ಕೆ ಕೊಡಲಾಗುವುದಿಲ್ಲ.

೬. ಪರಿಷತ್ತಿನ ಕಚೇರಿಯಲ್ಲಿ ರಿಜಿಸ್ಟರು ಮಾಡಿಕೊಂಡ ಪ್ರತಿಯೊಬ್ಬ ಸ್ಪರ್ಧಿಗೂ ಪ್ರವೇಶ ಪತ್ರವೊಂದನ್ನು ಕಳುಹಿಸಲಾಗುವುದು. ಸ್ಪರ್ಧಿಗಳು ಸ್ಪರ್ಧೆಯ ದಿವಸ ಆ ಪತ್ರವನ್ನು ಅಗತ್ಯವಾಗಿ ತಂದಿರಬೇಕು.

೭. ಬರುವ ನವೆಂಬರ್— ೧೬, ೧೭, ೧೮ ನೆಯ ತಾರೀಖುಗಳಲ್ಲಿ ಪ್ರತಿದಿನವೂ ಸಂಜೆ ೫|| ಘಂಟೆಗೆ ಸ್ಪರ್ಧೆಗಳು ಜರುಗುವುವು. ಮೊದಲನೆಯ ದಿನ ಮಕ್ಕಳ ಸ್ಪರ್ಧೆ, ಎರಡನೆಯ ದಿನ ಕಿರಿಯರ ಸ್ಪರ್ಧೆ, ಮೂರನೆಯ ದಿನ ಹಿರಿಯರ ಸ್ಪರ್ಧೆ— ಈ ಕ್ರಮದಲ್ಲಿ ಸ್ಪರ್ಧೆಗಳನ್ನು ನಡಸಲಾಗುವುದು. ಕಾಲಾವಕಾಶ ಹೆಚ್ಚು ಬೇಕಾದಲ್ಲಿ ಇನ್ನೂ ಒಂದೆರಡು ದಿನಗಳನ್ನು ಸ್ಪರ್ಧೆಗಳಿಗೆ ಕೊಡಲಾಗುವುದು. ಈ ಏರ್ಪಾಟಿನಲ್ಲಿ ಬದಲಾವಣೆಗಳಾಗಲಿ ಹೆಚ್ಚುಗಟ್ಟಲೆಗಳಾಗಲಿ ಏನಾದರೂ ಇದ್ದರೆ ಆ ಅಂಶಗಳನ್ನು ಪರಿಷನ್ಮಂದಿರದ ನೋಟೀಸ್ ಬೋರ್ಡಿನ ಮೇಲೂ, ಸ್ಪರ್ಧಿಗಳ ಶಾಲೆಗಳ ಮುಖ್ಯೋಪಾಧ್ಯಾಯ ಮುಖ್ಯೋಪಾಧ್ಯಾಯಿನಿಯರ ಮೂಲಕವೂ, ತಿಳಿಯಪಡಿಸಲಾಗುವುದು.

೮. ಪರಿಷತ್ತು ಗೊತ್ತುಮಾಡುವ ಪರೀಕ್ಷಕರ ನಿರ್ಧಾರವೇ ಸ್ಪರ್ಧೆಯಲ್ಲಿ ಕೊನೆ... ತಕ್ಕದ್ದು.

೯. ಸ್ಪರ್ಧಿಗಳ ಸಂಖ್ಯೆ ಅಧಿಕವಾಗಿದ್ದಲ್ಲಿ ಅವರು ಒಂದಕ್ಕಿಂತ ಹೆಚ್ಚು ಪರೀಕ್ಷಕ... ತಕ್ಕದ್ದು.

೧೦. ತಕ್ಕಷ್ಟು ಮಂದಿ ಸ್ಪರ್ಧಿಗಳಿಲ್ಲದಿದ್ದರೆ ಸ್ಪರ್ಧೆಯನ್ನು ನಡಸದೆ ನಿಲ್ಲಿಸ...

೧೧. ಯಾವ ಕಾರಣದಿಂದಾಗಲೀ ಸ್ಪರ್ಧೆ ನಡೆಯದಿದ್ದಲ್ಲಿ ಸ್ಪರ್ಧಿಗಳು ಕೊಟ್ಟ... ಹಿಂದಕ್ಕೆ ಕೊಡಲಾಗುವುದು.

೧೨. ಸ್ಪರ್ಧೆಯಲ್ಲಿ ಕಾವ್ಯಭಾಗವನ್ನು ಕೇವಲ ಬಾಯಿಪಾಠವಾಗಿಯೇ ಹೇಳ... ಮುಂತಾದ ಇತರ ಯಾವ ಸಹಾಯವನ್ನೂ ಪಡೆಯಕೂಡದು.

೧೩. ಮುಂದೆ ಕಾಣುವ ಕಾವ್ಯಗಳಲ್ಲಿ ತಮಗೆ ಇಷ್ಟವಾದ ಪ್ರಕರಣದಿಂದ ... ಒಂದು ಸಂಗತ ಭಾಗವನ್ನು ಸ್ಪರ್ಧಿಗಳು ಆರಿಸಿಕೊಳ್ಳತಕ್ಕದ್ದು.

(೧) ಮಕ್ಕಳ ಸ್ಪರ್ಧೆ (ಪ್ರೈಮರಿ ಸ್ಕೂಲ್ ಬಾಲಕರು, ಬಾಲಕಿಯರಿಗೆ):–

(i) "ಗೋವಿನ ಕಥೆ"—೧೦ ಪದ್ಯಗಳು.

ಅಥವಾ

(ii) "ತೋಳನ ತೀರ್ಪು"—೪೦ ಪಂಕ್ತಿಗಳು

(ಶ್ರೀ|| ಜಿ. ಪಿ. ರಾಜರತ್ನಂ ಅವರ "ತುತ್ತೂರಿ" ಎಂಬ ಪುಸ್ತಕದಿಂದ)

(೨) ಕಿರಿಯರ ಸ್ಪರ್ಧೆ (ಮಿಡಲ್ ಸ್ಕೂಲ್ ಬಾಲಕರು, ಬಾಲಕಿಯರಿಗೆ):–

(i) "ನಳಚರಿತ್ರೆ" (ಕನಕದಾಸರದು)—೧೦ ಪದ್ಯಗಳು.

ಅಥವಾ

(ii) "ಘಂಟಾಕರ್ಣ"—೬೦ ಪಂಕ್ತಿಗಳು

(ಶ್ರೀ|| ಪುಟ್ಟಪ್ಪನವರ "ಕಿಂದರಿ ಜೋಗಿ ಮತ್ತು ಇತರ ಕಥನಕವನಗಳು" ಎಂ...

ಅಥವಾ

(iii) "ಚಟಾಕಿ" ("ಕಿರಿಯ ಕಾಣಿಕೆ" ಎಂಬ ಪುಸ್ತಕದಿಂದ)—೬೦ ಪಂಕ್ತಿಗಳು

(೩) ಹಿರಿಯರ ಸ್ಪರ್ಧೆ (ಹೈಸ್ಕೂಲು ಬಾಲಕರು, ಬಾಲಕಿಯರಿಗೆ):–

(i) "ಅನಾಥೆ"—೬೦ ಪಂಕ್ತಿಗಳು

(ಶ್ರೀ|| ಬಿ. ಎಂ. ಶ್ರೀಕಂಠಯ್ಯನವರ "ಇಂಗ್ಲಿಷ್ ಗೀತಗಳು" ಎಂಬ ಪು...

ಅಥವಾ

(ii) "ಸೀತಾವನವಾಸ" (ಜೈಮಿನಿ ಭಾರತದಿಂದ) ೬೦ ಪಂಕ್ತಿಗಳು—(...

ಅಥವಾ

(iii) "ಚಿಕ್ಕಮಲ್ಲಮ್ಮ" (ಶ್ರೀನಿವಾಸರ "ಚೆಲುವು" ಎಂಬ ಪುಸ್ತಕದಿಂದ)—...

[ಸ್ಪರ್ಧಿಗಳು ಮೇಲೆಕಂಡ ಪದ್ಯಭಾಗಗಳನ್ನು ಪರಿಷತ್ತಿನ ಕಚೇರಿಗೆ ಬಂದು ಪ್ರತಿಮಾಡಿಕೊಳ್ಳ...

ಎಸ್. ವಿ. ರಂಗಣ್ಣ, ಎಂ.ಎ.,
ಗೌ|| ಕಾರ್ಯದರ್ಶಿ.

ವಿ. ಟಿ. ತಿರುನಾರಾಯಣೈಯ್ಯಂಗಾ...
ವ್ಯವಸ್ಥಾಪಕ, ಕಂಠಪಾಠ ಸ್ಪ...

೧೫ನೆಯ ಸೆಪ್ಟೆಂಬರ್ ೧೯೩೬.



ಸುಬೋಧ ಮುದ್ರಣಾಲಯ, ಬೆಂಗಳೂರು.

# ಕರ್ಣಾಟಕ ಸಾಹಿತ್ಯ ಪರಿಷತ್ತು

**ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ, ಚಾಮರಾಜಪೇಟೆ, ಬೆಂಗಳೂರು ಸಿಟಿ**

ಅಧ್ಯಕ್ಷರು:
ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾದ
ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ. ಸಿ. ಐ. ಇ.,
ಮಹಾಸ್ವಾಮಿಯವರು

# — ಕನ್ನಡ ಹಬ್ಬ —

೧೯೩೭

ಈ ವರ್ಷ ಮೇ ತಿಂಗಳಿನಲ್ಲಿ, ವಿಶೇಷ ಸಾಹಿತ್ಯೋತ್ಸವದ ಸಂದರ್ಭದಲ್ಲಿ, ಪರಿಷತ್ತಿನಲ್ಲಿ ನಡೆದ ಎರಡನೆಯ ಸಕಲ ಕರ್ಣಾಟಕ ಸಂಘ ಸಮ್ಮೇಳನದಲ್ಲಿಯೂ ವಾರ್ಷಿಕಾಧಿವೇಶನದಲ್ಲಿಯೂ ಕನ್ನಡ ನಾಡಿನ ಎಲ್ಲ ಭಾಗಗಳಲ್ಲಿಯೂ ಕ್ಲುಪ್ತವಾದ ಒಂದು ದಿನವನ್ನು 'ಕನ್ನಡದ ಹಬ್ಬ'ವಾಗಿ ಆಚರಿಸಬೇಕೆಂದು ನಿರ್ಧಾರವಾಯಿತು. ಸಂಘ ಸಮ್ಮೇಳನದ ನಿರ್ಣಯವು ಈ ಕೆಳಗಿನಂತೆ ಇದೆ:—

> "ಪ್ರತಿಯೊಂದು ಕರ್ಣಾಟಕ ಸಂಘವೂ ಇನ್ನು ಮುಂದೆ ಪ್ರತಿವರ್ಷವೂ ಕರ್ಣಾಟಕ ಸಾಹಿತ್ಯ ಪರಿಷತ್ತು ನಿರ್ಣಯಮಾಡಿ ತಿಳಿಸುವ ಒಂದು ದಿವಸವನ್ನು ಕನ್ನಡದ ಹಬ್ಬವೆಂದು ಆಚರಿಸತಕ್ಕದ್ದು. ಆ ದಿವಸ ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಕಾವ್ಯವಾಚನ, ಕನ್ನಡ ಹಾಡುಗಳ ಹಾಡುಗಾರಿಕೆ, ಕನ್ನಡ ದೇಶದ ಸರ್ವ ವಸ್ತುಗಳ ಪ್ರದರ್ಶನ ಮುಂತಾದವುಗಳನ್ನೇರ್ಪಡಿಸಿ ಕನ್ನಡದ ವಿಷಯದಲ್ಲಿ ಜನರಿಗೆ ಉತ್ಸಾಹ ಅಭಿಮಾನಗಳು ಹೆಚ್ಚುವಂತೆ ಮಾಡತಕ್ಕದ್ದು ಮತ್ತು ಆ ದಿವಸ ಕನ್ನಡದ ಸೇವೆಗಾಗಿ ಮನೆಮನೆಗೂ ತಿರುಗಿ ಕಾಣಿಕೆಯನ್ನು ಎತ್ತತಕ್ಕದ್ದು. ಹೀಗೆ ಶೇಖರಿಸುವ ಒಟ್ಟು ನೊಬಲಗಿನಲ್ಲಿ ಅರ್ಧವನ್ನು ತಮ್ಮ ಸಂಸ್ಥೆಗಾಗಿ ಇರಿಸಿಕೊಂಡು ಉಳಿದುದನ್ನು ಪರಿಷತ್ತಿನ ಶಾಶ್ವತ ನಿಧಿಗಾಗಿ ಕಳುಹಿಸತಕ್ಕದ್ದು".

ಮೇಲಿನ ನಿರ್ಣಯವನ್ನು ಪರಿಷತ್ತಿನ ಕಾ॥ ನಿ॥ ಮಂಡಲಿ ಅನುಮೋದಿಸಿ, ಹಬ್ಬವನ್ನು ಆಚರಿಸುವ ವಿಚಾರವಾಗಿ ಪರಿಷತ್ತಿನ ಅಂಗಸಂಸ್ಥೆಗಳಿಂದ ಸಲಹೆ ಸೂಚನೆಗಳನ್ನು ತರಿಸಿಕೊಂಡು, ಅದನ್ನು (ತಾ॥ ೨೪—೮—೧೯೩೭ರಲ್ಲಿ) ಪರ್ಯಾಲೋಚಿಸಿ, ಹಬ್ಬವನ್ನು ಸ್ಥೂಲವಾಗಿ ಈ ಕೆಳಗೆ ಕಂಡ ನಿಯಮಗಳಿಗೆ ಅನುಸಾರವಾಗಿ ಆಚರಿಸತಕ್ಕದ್ದೆಂದು ನಿರ್ಣಯಿಸಿದೆ:—

## ನಿಯಮಗಳು

(೧) "ಕನ್ನಡ ಹಬ್ಬವನ್ನು ಪ್ರತಿ ವರ್ಷವೂ ನವರಾತ್ರಿಯಲ್ಲಿ, ಸರಸ್ವತೀ ಪೂಜೆಯ ದಿವಸ ಅಥವಾ (ಅದು ಅನುಕೂಲಿಸದಿದ್ದಲ್ಲಿ) ಅದಕ್ಕೆ ಸಮೀಪವಾದ ಭಾನುವಾರದ ದಿವಸ ಆಚರಿಸತಕ್ಕದ್ದು.

(೨) "ಆಚರಣೆಯ ಕ್ರಮವು ಯಾವುದಾದರೂ ಒಂದು ಮತದ ಅಥವಾ ಒಂದು ರಾಜಕೀಯ ಪಂಥದ ಸಂಬಂಧವನ್ನು ಪಡೆದುಕೊಂಡಂತೆ ತೋರುವುದಾಗದೆ ಕನ್ನಡ ನಾಡಿನ ಎಲ್ಲ ಜನರಿಗೂ, ವಿಶೇಷವಾಗಿ ಮುಸಲ್ಮಾನ ಮತ್ತು ಕ್ರಿಸ್ತ ಸೋದರರಿಗೂ, ಸಮ್ಮತವಾಗುವುದಾಗಿರಬೇಕು.

(೩) "ಆ ದಿನದ ಕಾರ್ಯಕ್ರಮ ಸಾಮಾನ್ಯವಾಗಿ ಈ ಕೆಳಗೆ ಕಂಡಂತೆ ಇರತಕ್ಕದ್ದು:

(i) ಪ್ರಾತಃಕಾಲ:—ಓಲಗ ಭಜನೆಗಳೊಡನೆ ಮೆರೆವಣಿಗೆ; ಮನೆಯಿಂದ ಮನೆಗೆ ಹೋಗಿ ಕಾಣಿಕೆ ಎತ್ತು

(ii) ಮಧ್ಯಾಹ್ನ:— ಸಾಧ್ಯವಾದರೆ ಒಂದು ಸಂತೋಷಕೂಟ; ಸಭೆ, ಕಾವ್ಯವಾಚನ, ಸಂಗೀತ, ಉಪನ್ಯಾಸ

(iii) ಸಂಜೆ:— ಮೆರೆವಣಿಗೆ

(iv) ರಾತ್ರಿ:— ಯಕ್ಷಗಾನ, ಲಾವಣಿ, ಹರಿಕಥೆ, ನಾಟಕ.

(೪) "ಈ ದಿನದ ಕಾರ್ಯಕ್ರಮಗಳೆಲ್ಲವೂ ಕೂಡಿದ ಮಟ್ಟಿಗೂ ಕನ್ನಡದಲ್ಲಿಯೇ ಇ

(೫) "ಅನುಕೂಲವಿದ್ದಕಡೆ ಈ ಉತ್ಸವ ಕಾರ್ಯಗಳನ್ನು ಎರಡು ದಿವಸಗಳಾ ಮೂರು ದಿವಸಗಳಾಗಲಿ ನಡಸಬಹುದು.

(೬) "ಈ ಹಬ್ಬದ ದಿನ ಮನೆಯಿಂದ ಮನೆಗೆ ಹೋಗಿ ವಸೂಲು ಮಾಡಿದ ವ ವಿಧಗಳಲ್ಲಿ ಶೇಖರಿಸಿದ ಹಣವನ್ನು ಬೇರೆಯಾಗಿ ತೆಗೆದಿಟ್ಟು, ಅದರಲ್ಲಿ ಅರ್ಧ ಭಾಗವನ್ನು ಸಲ್ಲಿಸತಕ್ಕದ್ದು. ಉಳಿದ ಅರ್ಧವನ್ನು ಆಯಾ ಸ್ಥಳದ ಕರ್ಣಾಟಕ ಸಂಘದ ಕಾರ್ಯ ಅಥವಾ ಸಂಘವಿಲ್ಲದಿದ್ದ ಕಡೆ ಅಂಥ ಸಂಘದ ಸ್ಥಾಪನೆಗಾಗಲಿ ಉಪಯೋಗಿಸತಕ್ಕದ್ದು."

ಕನ್ನಡ ನಾಡಿನಲ್ಲಿರುವ ಎಲ್ಲ ಕರ್ಣಾಟಕ ಸಂಘಗಳೂ ಇತರ ಸಂಸ್ಥೆಗಳೂ ಪರಿಷತ್ತಿ ವನ್ನು ಗಮನಕ್ಕೆ ತಂದುಕೊಂಡು, ಕನ್ನಡ ಹಬ್ಬವನ್ನು ಆಚರಿಸಬೇಕೆಂದು ಪರಿಷತ್ತು ಕ ಬೇಡುತ್ತದೆ. ಸಂಘಗಳು ಇಲ್ಲದಿರುವ ಸ್ಥಳಗಳಲ್ಲಿ ಅಲ್ಲಲ್ಲಿನ ಕನ್ನಡದ ಅಭಿಮಾನಿಗಳು ಈ ಸ ಯಾದರೂ ಒಂದು ಸಂಘವನ್ನು ಸ್ಥಾಪಿಸಿಕೊಂಡಾಗಲಿ ಅಥವಾ ಈ ಉದ್ದೇಶಕ್ಕಾಗಿಯೇ ಯಾಗಲಿ, ಹೇಗೆಯಾದರೂ, ಕನ್ನಡ ಹಬ್ಬವನ್ನು ಆಚರಿಸಬೇಕೆಂದು ಪರಿಷತ್ತು ಪ್ರಾರ್ಥಿಸುತ್ತ

ಕನ್ನಡ ಕಾವ್ಯಗಳ ಸೊಬಗೂ ಕನ್ನಡನುಡಿಯ ಸೊಂಪೂ ಹಳ್ಳಿಹಳ್ಳಿಗೂ ಮುಟ್ಟ ಕರ್ಣಾಟಕದಲ್ಲಿ ಮೂಡಿರುವ ನವಚೇತನವು ನಾಡಿನ ಮೂಲೆಮೂಲೆಯಲ್ಲಿಯೂ ಪ್ರ ಬೇಕಾದರೆ; ಆಧುನಿಕ ವಿಚಾರಗಳ ತಿಳಿವಳಿಕೆ ಜನಸಾಮಾನ್ಯಕ್ಕೆ ಉಂಟಾಗಬೇಕಾದರೆ; ರಾದಿಯಾಗಿ ಸರ್ವರೂ ನಲಿದು ಕನ್ನಡದ ಕಡೆಗೆ ಒಲಿಯಬೇಕಾದರೆ—ಕನ್ನಡ ಹಬ್ಬವನ್ನು ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯವೆಂದು ಬೇರೆ ಹೇಳಬೇಕಾಗಿಲ್ಲ. ಕನ್ನಡ ಹಬ್ಬವು ನಾ ಬೇಕು; ಈ ಹಬ್ಬವು ಕನ್ನಡ ನಾಡಿನಲ್ಲಿ ಅಲ್ಲದೆ, ಭರತಖಂಡದ ಯಾವ ಯಾವ ಭಾಗ ಗರಿರುವರೋ ಅಲ್ಲೆಲ್ಲ ವಿಜೃಂಭಿಸಬೇಕು. ಆದ್ದರಿಂದ, ಎಲ್ಲರೂ ಈ ಹಬ್ಬವನ್ನು ಆ ಭಾಗವಹಿಸಿ, ಕನ್ನಡಕ್ಕೂ ಪರಿಷತ್ತಿಗೂ ತಮ್ಮ ಸೇವೆಯನ್ನು ಸಲ್ಲಿಸಬೇಕೆಂದು ಮತ್ತೊಮ್ಮೆ ಪರವಾಗಿ ಬೇಡಿಕೊಳ್ಳುತ್ತೇನೆ.

ಎಸ್. ವಿ. ರಂಗಣ್ಣ,
ಗೌ॥ ಕಾರ್ಯ
ಕರ್ಣಾಟಕ ಸಾಹಿತ್ಯ ಪ
ಹಾರ್ಡಿಂಜ್ ರೋಡ್,
ಬೆಂಗಳೂರು

೧೮ನೆಯ ಸೆಪ್ಟೆಂಬರ್, ೧೯೩೭.

ಸುಬೋಧ ಮುದ್ರಣಾಲಯ, ಬೆಂಗಳೂರು.

# ಕರ್ಣಾಟಕ ಸಾಹಿತ್ಯ ಪರಿಷತ್ತು

**ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ, ಚಾಮರಾಜಪೇಟೆ, ಬೆಂಗಳೂರು ಸಿಟಿ**

ಅಧ್ಯಕ್ಷರು :
ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾದ
**ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್,** ಜಿ. ಸಿ. ಐ. ಇ.,
**ಮಹಾಸ್ವಾಮಿಯವರು**

## ೨೨ನೆಯ ಕನ್ನಡ ಸಾಹಿತ್ಯ ಸಮ್ಮೇಳನ

## ಜಮಖಂಡಿ ನಗರದಲ್ಲಿ

(ಜಮಖಂಡಿ ಸಂಸ್ಥಾನ)

### ಸಮಾಚಾರ ಪತ್ರಿಕೆ ೧.

ಈ ವರ್ಷ ಡಿಸೆಂಬರ್ ತಿಂಗಳಿನಲ್ಲಿ ನಡೆಯಬೇಕಾಗಿರುವ ೨೨ನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಜಮಖಂಡಿ ನಗರಕ್ಕೆ ಆಹ್ವಾನಿಸಬೇಕೆಂದು ಅಲ್ಲಿನ ಕನ್ನಡ ಪ್ರಮುಖ ಜನರು ಉದ್ದೇಶಪಟ್ಟು, ಜಮಖಂಡಿಯಲ್ಲಿ ವಕೀಲರಾಗಿರುವ ಶ್ರೀಮಾ॥ ಬಿಂದೂರಾವ್ ರಾಮರಾವ್ ನರಗುಂದಕರ್, ಬಿ.ಎ.,ಎಲ್‌ಎಲ್.ಬಿ., ಅವರ ಅಧ್ಯಕ್ಷತೆಯಲ್ಲಿ ಒಂದು ಸಾರ್ವಜನಿಕ ಸಭೆಯನ್ನು ತಾ॥ ೧೨-೪-೧೯೩೭ರಲ್ಲಿ ನಡಸಿದರು. ಜಮಖಂಡಿ, ಕುಂದಗೋಳ, ಹುನ್ನೂರು ಮತ್ತು ಬಿದ್ರಿ ಈ ಸ್ಥಳಗಳಿಗೆ ಸೇರಿದ ಅನೇಕಮಂದಿ ಗಣ್ಯರಾದ ಮಹನೀಯರುಗಳು ಸಭೆಯಲ್ಲಿ ಭಾಗವಹಿಸಿದ್ದರು. ಮೊದಲು ತಾತ್ಕಾಲಿಕ ಸ್ವಾಗತಮಂಡಲಿಯೊಂದು ಸರ್ವಾನುಮತದಿಂದ ನೇಮಕವಾಯಿತು; ಶ್ರೀ॥ ಬಿ. ಆರ್. ನರಗುಂದಕರ್ ಅವರು ಸ್ವಾಗತಾಧ್ಯಕ್ಷರಾಗಿ ಆರಿಸಲ್ಪಟ್ಟರು. ಆ ಬಳಿಕ "ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲದವರ ಕಡೆಗೆ ಜಮಖಂಡಿಯ ವತಿಯಿಂದ ೨೨ನೆಯ ಸಾಹಿತ್ಯ ಸಮ್ಮೇಳನದ ಅಧಿವೇಶನದ ಬಗ್ಗೆ ಆಮಂತ್ರಣ ಕೊಡಲು" ಸರ್ವಾನುಮತದಿಂದ ತೀರ್ಮಾನವಾದ ಪ್ರಕಾರ ಶ್ರೀ॥ ಬಿ. ಆರ್. ನರಗುಂದಕರ್ ಅವರು ತಾ॥ ೨೫-೪-೧೯೩೭ರಲ್ಲಿ ಲಿಖಿತಮೂಲಕವಾಗಿ ಆಹ್ವಾನವನ್ನು ಕಳಿಸಿದರು. ಹಾಗೆ ವಿಶ್ವಾಸಪೂರ್ವಕವಾಗಿ ಜಮಖಂಡಿಯವರು ಕಳಿಸಿಕೊಟ್ಟ ಆಹ್ವಾನವನ್ನು ಪರಿಷತ್ತಿನ ಕಾರ್ಯನಿರ್ವಾಹಕಮಂಡಲಿ ಸಂತೋಷ ಕೃತಜ್ಞತೆಗಳೊಡನೆ ತಾ॥ ೩೦-೫-೧೯೩೭ರಲ್ಲಿ ಸ್ವೀಕರಿಸಿತು. ಈಗ, ಸುಮಾರು ಎಪ್ಪತ್ತು ಮಹನೀಯರನ್ನೊಳಗೊಂಡ ಸ್ವಾಗತ ಮಂಡಲಿಯು ರಚಿತವಾಗಿದೆ; ಶ್ರೀ॥ ಪಂಡಿತಪ್ಪ ರಾಯಪ್ಪ ಚಿಕ್ಕೋಡಿ, ಬಿ.ಎ., ಅವರು ಸ್ವಾಗತಾಧ್ಯಕ್ಷರಾಗಿಯೂ, ಶ್ರೀ॥ ಬಿ. ಆರ್. ನರಗುಂದಕರ್ ಅವರು ಕಾರ್ಯಾಧ್ಯಕ್ಷರಾಗಿಯೂ ಇದ್ದಾರೆ.

ಈ ಸಲದ ಸಮ್ಮೇಳನವನ್ನು ಜಮಖಂಡಿಯಲ್ಲಿ ನಡಸಿ ಕೃತಾರ್ಥರಾಗಬೇಕೆಂದು ಅಲ್ಲಿನ ಕನ್ನಡದ ಅಭಿಮಾನಿಗಳು ಮೊದಲಿನಿಂದಲೂ ಕಂಕಣತೊಟ್ಟು ಬಹಳ ಉತ್ಸಾಹದಿಂದ ಕೆಲಸಮಾಡುತ್ತಿದ್ದಾರೆ. ನೆರೆಯೂರಾದ ಕುಂದಗೋಳದ ಕನ್ನಡ ಪ್ರಮುಖರು ಸ್ವಾಗತಮಂಡಲಿಗೆ ಬೆಂಬಲವಾಗಿ ನಿಂತಿದ್ದಾರೆ.

ಜಮಖಂಡಿ ಸಂಸ್ಥಾನವು ಧಾರವಾಡ ಜಿಲ್ಲೆಯಲ್ಲಿ ನೆಲಸಿದೆ. ಅಲ್ಲಿನ ಜನಸಂಖ್ಯೆಯಲ್ಲಿ ಸುಮಾರು ೧೦೦ಕ್ಕೆ ೭೫ ಮಂದಿಯಂತೆ ಕನ್ನಡಿಗರಿದ್ದಾರೆ. ಈ ಸಲದ ಸಮ್ಮೇಳನವು ಅಲ್ಲಿ ಕೂಡುವುದು ಜಮಖಂಡಿಯವರಿಗೆ ಮಾತ್ರವಲ್ಲದೆ ಸಮಸ್ತ ಕನ್ನಡಿಗರಿಗೂ ಹರ್ಷಾಸ್ಪದವಾದ ಸಂಗತಿ.

ಇದುವರೆಗೆ ನಡೆದ ಸಮ್ಮೇಳನಗಳೆಲ್ಲವೂ ಮೈಸೂರು ಹೈದರಾಬಾದು ಸಂಸ್ಥಾನಗಳಲ್ಲಿ ಇಲ್ಲವೆ ಬ್ರಿಟಿಷ್ ಕರ್ಣಾಟಕದಲ್ಲಿ ನಡೆದವಾಗಿವೆ. ಉತ್ತರ ಕರ್ಣಾಟಕ ಸಂಸ್ಥಾನಗಳ ಪ್ರಾಂತದಲ್ಲಿ ಸಮ್ಮೇಳನ ನಡೆಯುವುದು ಇದೇ ಮೊದಲು. ಕಳೆದ ಬಾರಿ ಪರಿಷತ್ಸಮ್ಮೇಳನವು ಬೊಂಬಾಯಿಯಲ್ಲಿ ನಡೆದುದು ಯಾವ ಹೆಮ್ಮೆಗೆ ಕಾರಣವೋ ಈ ಸಲದ್ದು ಜಮಖಂಡಿಯಲ್ಲಿ ನಡೆಯತಕ್ಕದ್ದೂ ಅದೇ ಹೆಮ್ಮೆಗೆ ಕಾರಣವಾಗಿದೆ. ಅಲ್ಲದೆ ಜಮಖಂಡಿಯ ಸಮ್ಮೇಳನವು ತನ್ನದೇ ಆದ ಒಂದು ವಿರಚನೆ ಮತ್ತು ವಿಶಿಷ್ಟತೆಯಿಂದ ಕಂಗೊಳಿಸಬೇಕೆಂಬುದು ನಮ್ಮೆಲ್ಲರ ಅಪೇಕ್ಷೆ. ಈ ಮುಂದಿನ ಸಮ್ಮೇಳನದಲ್ಲಿ ಕನ್ನಡ ಭಾಷಾಸಾಹಿತ್ಯಗಳ ಪುರೋಭಿ

ವೃದ್ಧಿಗೂ ಕನ್ನಡಿಗರ ಒಡಗೂಡುವಿಕೆಗೂ ಸಂಬಂಧಪಟ್ಟ ಅನೇಕ ಮಹತ್ವದ ಪ್ರಶ್ನೆಗಳು ವಿಚಾರಕ್ಕೆ ಬರುವುವಾಗಿವೆ. ಆದ್ದರಿಂದ, ಕನ್ನಡನಾಡಿನ ಎಲ್ಲ ಭಾಗಗಳಿಂದಲೂ ಅಭಿಮಾನಿಗಳು ತಂಡತಂಡವಾಗಿ ಬಂದು ಸಮ್ಮೇಳನವನ್ನು ಯಶಸ್ವಿಯಾಗಿ ಮಾಡಬೇಕೆಂದು ಪರಿಷತ್ತು ಬಹು ವಿನಯದಿಂದ ಪ್ರಾರ್ಥಿಸುತ್ತದೆ.

## ತಾರೀಖುಗಳು

ಸಮ್ಮೇಳನವು ೧೯೩೭ನೆಯ ಡಿಸೆಂಬರ್ ತಿಂಗಳ ಕಡೆಯ ವಾರದಲ್ಲಿ (ಕ್ರಿಸ್‌ಮಸ್ ರಜಾ ಕಾಲದಲ್ಲಿ) ಸೇರುವುದಾಗಿದೆ. ನಿಶ್ಚಯಿಸಿಯಾದ ತಾರೀಖುಗಳನ್ನು ಮುಂದಿನ ಸಮಾಚಾರ ಪತ್ರಿಕೆಯಲ್ಲಿ ತಿಳಿಸಲಾಗುವುದು.

## ಪ್ರಬಂಧ, ಭಾಷಣ, ನಿರ್ಣಯಗಳು ಇತ್ಯಾದಿ.

ಕಳೆದ ವರ್ಷ ನಡಸಿದ ಸಂಶೋಧಕಗೋಷ್ಠಿ, ಕವಿಗೋಷ್ಠಿ ಎಂಬ ಪ್ರತ್ಯೇಕವಾದ ಅಂಗಗಳಲ್ಲಿ ಕವಿಗೋಷ್ಠಿಯೊಂದನ್ನು ಇಟ್ಟುಕೊಳ್ಳಲು ಅವಕಾಶವಾಗಬಹುದು. ಕನ್ನಡಭಾಷಾ ಸಾಹಿತ್ಯ ವಿಚಾರಗಳಿಗೆ ಸಂಬಂಧಪಟ್ಟ ಭಾಷಣಗಳು, ಕನ್ನಡ ಸಾಹಿತ್ಯವಾಚನ, ಮುಂತಾದ ಕಾರ್ಯಗಳಿಗೆ ಎಂದಿನಂತೆ ಸಂಪೂರ್ಣ ಅವಕಾಶವಿರುವುದು. ಮೇಲೆ ಕಂಡ ಕಾರ್ಯಗಳಲ್ಲಿ ಭಾಗವಹಿಸಲಿಚ್ಛಿಸುವ ಮಹನೀಯರು ತಮ್ಮ ಉದ್ದೇಶವನ್ನೂ, ತಾವು ಮಾಡಬೇಕೆಂದಿರುವ ಭಾಷಣದ ಅಥವಾ ಓದಬೇಕೆಂದಿರುವ ಸಾಹಿತ್ಯ ವಿಭಾಗದ ಹೆಸರು, ವಿಷಯ ಮುಂತಾದ ತಪಸೀಲುಗಳನ್ನೂ, ಮತ್ತು ಸಮ್ಮೇಳನದಲ್ಲಿ ನಿರ್ಣಯಗಳನ್ನು ಸೂಚಿಸಬೇಕೆಂದಿರುವವರು ಆ ನಿರ್ಣಯಗಳನ್ನೂ ಪರಿಷತ್ತಿನ ಗೌ|| ಕಾರ್ಯದರ್ಶಿಗಳಿಗಾಗಲಿ ಸ್ವಾಗತ ಸಮಿತಿಯ ಕಾರ್ಯದರ್ಶಿಗಳಿಗಾಗಲಿ ತಾ|| ೧೫—೧೨—೧೯೩೭ರೊಳಗಾಗಿ ಬರೆಹದ ಮೂಲಕ ತಿಳಿಸಬೇಕೆಂದು ಪ್ರಾರ್ಥನೆ. ಕನ್ನಡ ನಾಡಿನ ವಿದ್ವಾಂಸರೂ, ಸಾಹಿತಿಗಳೂ, ಕಲಾಭಿಜ್ಞರೂ ಈ ಮೂಲಕ ಪರಿಷತ್ತು ಕೊಟ್ಟಿರುವ ಆಹ್ವಾನವನ್ನು ಸ್ವೀಕರಿಸಿ, ಸಮ್ಮೇಳನವನ್ನು ನಡಸಿಕೊಡಬೇಕೆಂದು ಬೇಡುತ್ತೇವೆ.

## ನಾಟಕ, ಯಕ್ಷಗಾನ, ಲಾವಣಿ.

ಸಮ್ಮೇಳನದಲ್ಲಿ ಈ ತರಹದ ಪ್ರದರ್ಶನಗಳಿಗೂ ಅವಕಾಶ ಕೊಡಬೇಕೆಂಬ ಉದ್ದೇಶವಿದೆ. ಕನ್ನಡ ನಾಡಿನ ನಾಟಕ ಸಂಘಗಳವರೂ, ಯಕ್ಷಗಾನ ಮಂಡಲಿಯವರೂ, ಲಾವಣಿಕಾರರೂ ಮುಂದಾಗಿ ತಾ|| ೧೫—೧೨—೧೯೩೭ರೊಳಗೆ ಪರಿಷತ್ತಿನ ಗೌ|| ಕಾರ್ಯದರ್ಶಿಗಳಿಗಾಗಲಿ ಅಥವಾ ಸ್ವಾಗತ ಮಂಡಲಿಯವರಿಗಾಗಲಿ ದರಖಾಸ್ತುಗಳನ್ನು ಹಾಕಿಕೊಳ್ಳಬೇಕೆಂದು ಬೇಡಿಕೆ. ಸಮ್ಮೇಳನಕ್ಕೆ ಸುಮಾರು ಒಂದು ವಾರ ಮುಂಚಿತವಾಗಿ, ಪರಿಷತ್ತು ಒಪ್ಪಿದ ದರಖಾಸ್ತುದಾರರಿಗೆ ಮಾತ್ರ ಉತ್ತರ ಬರೆಯಲಾಗುವುದು. ಪರಿಷತ್ತು ಒಪ್ಪಿದ ದರಖಾಸ್ತುದಾರರು ತಮ್ಮ ಪ್ರಯಾಣದ ವೆಚ್ಚ ಮುಂತಾದ ವಿಶಿಷ್ಟ ಖರ್ಚುಗಳನ್ನು ತಾವೇ ವಹಿಸಿಕೊಳ್ಳಲು ಸಿದ್ಧರಾಗಿರತಕ್ಕದ್ದು. ನಾಟಕ ಸಂಘದವರಾಗಲಿ ಯಕ್ಷಗಾನ ಮಂಡಲಿಯವರಾಗಲಿ ಇತರ ಬಗೆಯ ಪ್ರದರ್ಶನಕಾರರಾಗಲಿ ತಮ್ಮ ಪ್ರದರ್ಶನಗಳಿಗೆ ಸ್ವಾಗತ ಮಂಡಲಿಯ ಮೂಲಕ ಪರಿಷತ್ತಿನ ಒಪ್ಪಿಗೆ ಪಡೆದು ಪ್ರವೇಶಶುಲ್ಕವನ್ನು ಹಾಕಬಹುದು.

[ವಿಶೇಷ ಸೂಚನೆ:—ಈ ಸಂಬಂಧದಲ್ಲಿ ಪರಿಷತ್ತು ಕೆಲವು ನಿಯಮಗಳನ್ನು ಮಾಡಿದೆ. ಈ ಸಲ ಸಮ್ಮೇಳನ ನಿಶ್ಚಯಿಸಿಯಲ್ಲಿಯೇ ಕಾಲಾತೀತವಾದದ್ದರಿಂದ ನಿಯಮಗಳ ಉದ್ದೇಶ ಆಶಯಗಳನ್ನು ಮಾತ್ರ ಗಮನದಲ್ಲಿರಿಸಿಕೊಂಡಿದೆ; ಅವುಗಳನ್ನು ಅಕ್ಷರಶಃ ಪರಿಪಾಲಿಸುವುದು ಆಗಲಿಲ್ಲ.]

ಸಮಸ್ತಕರ್ಣಾಟಕದ ನಾನಾ ಭಾಗಗಳಲ್ಲಿರುವ ದೇಶಭಕ್ತರೂ, ಭಾಷಾಭಿಮಾನಿಗಳೂ, ಸಾಹಿತ್ಯೋಪಾಸಕರೂ, ಕಲಾಭಿಜ್ಞರೂ ಸಮ್ಮೇಳನಕ್ಕೆ ಬರುವರೆಂದು ಜಮಖಂಡಿಯ ಸ್ವಾಗತ ಸಮಿತಿಯು ನಿರೀಕ್ಷಿಸಿಕೊಂಡಿದೆ. ಎಲ್ಲರೂ ಬಂದು, ಸಮ್ಮೇಳನ ಕಾರ್ಯಗಳಲ್ಲಿ ಭಾಗವಹಿಸಿ, ತಾಯ್ನುಡಿಯ ಏಳಿಗೆಯ ಕೆಲಸಕ್ಕೆ ತಮ್ಮ ಬೆಂಬಲಕೊಡಬೇಕೆಂದು ಕರ್ಣಾಟಕ ಸಾಹಿತ್ಯ ಪರಿಷತ್ತು ಮತ್ತೊಮ್ಮೆ ಮನಃಪೂರ್ವಕವಾಗಿ ಪ್ರಾರ್ಥಿಸಿಕೊಳ್ಳುತ್ತದೆ.

ತಾ|| ೨೫—೧೧—೧೯೩೭,
ಬೆಂಗಳೂರು.

ಎಸ್. ವಿ. ರಂಗಣ್ಣ, ಎಂ.ಎ.,
ಗೌ|| ಕಾರ್ಯದರ್ಶಿ,
ಕ|| ಸಾ|| ಪರಿಷತ್ತು



ದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು ಸಿಟಿ.

THE QUARTERLY JOURNAL
OF THE
KANNADA LITERARY ACADEMY

Vol. XXII] JULY–SEPTEMBER 1937 No. 3

## CONTENTS IN BRIEF

**I. The Significance of the terms 'Haḷagannada' (Old Kannada) and 'Hosagannada' (Modern Kannada):** *By Mr. Kapatral Krishna Rao, Gulburga.*

Many modern Kannada scholars usually demarcate the history of Kannada language and literature into three stages or periods. Nripatunga (9th century A.D.) refers to a 'Haḷagannada', and on the basis of this reference, some scholars speak of a 'Pūrvada Haḷagannada' (Ancient Old Kannada) as existing before him. Some later poets of the 11th century wrote in a style which they termed as 'Hosagannada'. The use by the poets above referred to of these two terms 'Haḷagannada' and 'Hosagannada' does not signify periods of Kannada in any philological sense. By 'Haḷagannada' Nripatunga meant the 'old tradition' of writing poetry. He denounced breaches of this tradition noticed in his time. Many later poets also upheld the 'old tradition' in preference to the 'new tradition' which was coming into vogue under the name of 'Hosagannada'. The 'old tradition' advocated the use of native Kannada words, while writers in the 'new tradition' used Sanskrit words in profusion in their writings. Thus 'Haḷagannada' stood for the 'old tradition' of writing poetry and 'Hosagannada' for the 'new' one.

**II. Kopaṇa-Koppaḷa:** *By the late Mr. N. B. Sastry, Koppaḷa.*

In this article, the author discusses the identification of Kopaṇa, or Kopaṇa Nagara, mentioned by Nripatunga in his *Kavirājamārga* (9th century A.D.) as forming the boundary of the 'Tiruḷ Kannada Nāḍu' or pure Kannada country, with the modern Kopbāl (also called Koppaḷa) in the Nizam's State on the railway line from Gadag to Hospet and traces the beginnings of the history of Kopaṇa as far back as the 3rd century B.C.

**III. Gōpika Gita:** *By Mr. M. Nanjunda Sastry, Mysore.*

This is a Palm-leaf MS. recently discovered. It is a short work containing 87 lyrical pieces being addresses to Lord Sri Krishna by the love-lorn Gōpika maidens. It is inferred from a few references in the text that the author of this work was one Venkataranga, a Shree Vaishṇava Brahmin. But the work bears no reference to the date of its composition.

**IV. Kannada Habba** (*Kannada Festival*).

'Kannada Habba' was celebrated in the Parishat Hall on the evening of 10th October 1937 under the presidentship of Mr. Masti Venkatesa Iyengar, M.A. The Hall was full to overflowing and an interesting programme of items was gone through including readings from the *Kannada Bharata* and a performance on the *veena* and also a discourse on "The Kannada Country and its Language," by Mr. Devudu Narasimha Sastry, M.A., who made a powerful appeal to Kannadigas to do their utmost to continue the good work done so far for the advancement of the Kannada Country, its language and literature. In his presidential remarks, Mr. Venkatesa Iyengar exhorted the modern Kannada writers never to abate their efforts in enriching Kannada literature by their writings. A brief report of the function is given together with summaries of speeches.

V. **Activities of the Parishat:**

(i) **Resolutions of the Managing Committee:** Important Topics. Thanks to Srimati A. Seshamma, Head Mistress, Ārya Bālika Pā[illegible] Bangalore, for a donation of Rs. 1,078 made by her to the Paris[illegible] memory of her late son Mr. E. A. Bhaskara Rao, a distinguished K[illegible] short-story writer who was cut off in his youth while pursuing his stu[illegible] Germany—Thanks to Mr. Y. Subrahmanyam, M.A., for auditing the acc[illegible] of the Parishat for 1936—Expression of loyalty to His Highness Yuvaraja of Mysore, President of the Parishat—Thanks to the re[illegible] members of the Managing Committee—Report of the Second All-Kar[illegible] Conference of Karnataka Sanghas held on 4th May 1937—Appointment of Editorial Board and its Convener for 1937—Acceptance of portraits pre[illegible] to the Parishat—Arrangement of the Portrait Gallery in the Parishat H[illegible] Appointment of a Research Advisory Committee in connection wi[illegible] research work (of collecting rare words from Kannada inscriptions) u[illegible] taken by Messrs. K. V. Raghavachar, M.A., B.T., and L. Gundappa, M.A.—[illegible] Jubilee of the Parishat to take place on or about 3rd May in 1940—[illegible] Bhaskara Rao Memorial Essay Competition: Subject and Rules anno[illegible] Subject: A Critical Essay on "Torave Rāmāyaṇa" or "Poetical [illegible] of Kanaka Dāsaru."—Lending out carpets of the Parishat on a sm[illegible]

(ii) **Literary and Cultural Activities:**

(1) *Lecture*: "Kannada Inscriptional Literature"—By Mr. T. T. S[illegible] (2) Recitation Competitions for Boys and Girls. (3) Staging of K[illegible] plays in aid of the Parishat: By the Karnataka Hindi Amateurs, Bang[illegible] (4) *Lecture*: "Kannada Bālabōdhe and Script Reforms"—By Prof. [illegible] Srikantia, M.A., B.L. (5) Birthday celebrations of H. H. the Maharaja of M[illegible]

VI. **Members**: Enrolled during the quarter: 27; Institution affiliat[illegible]

VII. **Reports from Affiliated Institutions:** The Karnataka S[illegible] of: Shiralakoppa; Mercara; The Rajaram College, Kolhapur; Kund[illegible] Channarayapatna; The Willingdon College, Sangli; Shimoga; Rudrap[illegible] Madhugiri; and Sangeeta Premi Mandali, Bangalore.

VIII. **Book Reviews and Acknowledgments:** Number of b[illegible] reviewed: 13; Number acknowledged: 23.

IX. **Editorial Notes:** The late Mr. Panje Mangesa Rao, B.A., a well-known Kannada scholar and literateur of Mangalore and a mem[illegible] the Managing Committee of the Parishat—The 22nd Kannada Li[illegible] Conference held at Jamkhandi in December 1937 under the presiden[illegible] Mr. B. Venkatanarayanappa, M.A.—22nd Annual General Body Meeting of Parishat held at Jamkhandi on 30th December 1937—Change of the President of the Parishat: Mr. B. M. Srikantia, M.A., B.L., University of English and Hon. Prof. of Kannada, University of Mysore, elected in [illegible] of Mr. D. V. Gundappa, M.L.C., who held that office for the past four y[illegible] acknowledgment of the services of Mr. Gundappa and congratulati[illegible] Mr. Srikantia—Celebration of 'Kannada Habba' in Mysore City under presidentship of Prof. B. M. Srikantia—Sanskrit as the common lang[illegible] of India: A plea made in its favour by Dr. F. W. Thomas of the Oxford [illegible] versity at the 9th All-India Oriental Conference—Unveiling of the portr[illegible] Mr. C. Vasudevaiya, author of 'Kannada Bālabōdhe' and other st[illegible] Kannada prose works, under the auspices of the Malleswaram Karn[illegible] Sangha, Bangalore—Welcome to 'Śaraṇa Sāhitya', a monthly peri[illegible] in Kannada, started by Kirtana Kēsari B. Sivamurthy Sastry for dissemination of 'Śiva Śaraṇara Vachanagaḷu' or pithy sayings of Veera[illegible] saints—Congratulations to Srimati R. Kalyanamma, a member of the Ma[illegible] ing Committee of the Parishat, on her election as Vice-President of City Municipality of Bangalore.

X. **Illustrations:** Portraits of the late Mr. P. Mangesa Rao, B.A., and of Messrs. C. Vasudevaiya, B. Venkatanarayanappa, M.A., D. V. Gundappa, M.L.C. and B. M. Srikantia, M.A., B.L.



207-38 The Bangalore Press

# ವಿನಿಮಯ ಪತ್ರಿಕೆ ಮತ್ತು ಪ್ರಕಟನೆಗಳು

**ತ್ರೈಮಾಸಿಕ ಪತ್ರಿಕೆಗಳು:—** ೧. Journal of the Mythic ... ೨. Journal of the Andhra Historical Research Society ... Journal of the Bharata Itihasa Samshodhaka Mandala. ೪. ... rashtra Sahitya Parishat Patrika. ೫. The Karnatak Historical ... ೬. Journal of the Annamalai University. ೭. Journal of the ... Branch of the Royal Asiatic Society. ೮. Indian Culture. ೯. J... of the K. R. Cama Oriental Research Institute. ೧೦. Journal of ... History. ೧೧. Journal of the International Mediterranean Asso... ೧೨. Zeitschrift für Indologie und Iranistik. ೧೩. ಶ್ರೀಮನ್ ಮಹಾ... ಸಂಸ್ಕೃತ ಮಹಾಪಾಠಶಾಲಾ ಪತ್ರಿಕಾ. ೧೪. ಪ್ರಾಚೀನ ಕರ್ನಾಟಕ. ೧೫. ... ಕರ್ಣಾಟಕ. ೧೬. ವಂಗೀಯ ಸಾಹಿತ್ಯ ಪರಿಷತ್ಪತ್ರಿಕೆ. ೧೭. The Jaina An... (ಜೈನ ಸಿದ್ಧಾಂತ ಭಾಸ್ಕರ). ೧೮. Hindustani. ೧೯. ಹಳ್ಳಿಯ ಆಳು. ...

**ದ್ವೈಮಾಸಿಕ ಪತ್ರಿಕೆಗಳು:—** ೧. Journal of the Bombay Univ... ೨. ಆಂಧ್ರ ಸಾಹಿತ್ಯ ಪರಿಷತ್ ಪತ್ರಿಕೆ. ೩. ಶಿವಾನುಭವ. ೪. Bulletin ... Museum of Fine Arts.

**ಮಾಸ ಪತ್ರಿಕೆಗಳು:—** ೧. The Mysore Economic Journal. ೨. ... Gazette. ೩. The Indian P.E.N. ೪. ಅಧ್ಯಾತ್ಮ ಪ್ರಕಾಶ. ೫. ... ಚಂದ್ರಿಕೆ. ೬. ಜಯಕರ್ನಾಟಕ. ೭. ಮೈಸೂರು ಸಹಕಾರ ಪತ್ರಿಕೆ. ೮. ... ೯. ಸುಬೋಧ. ೧೦. ಸದ್ಬೋಧ ಚಂದ್ರಿಕೆ. ೧೧. ಮೈಸೂರು ವ್ಯವಸಾಯ ... ಸಂಘದ ಪತ್ರಿಕೆ. ೧೨. ಕಾದಂಬರೀ ಸಂಗ್ರಹ. ೧೩. ದೇಶೀಯ ವಿದ್ಯಾಶಾ... ೧೪. ಮೈಸೂರು ಮಕ್ಕಳು. ೧೫. ಸದ್ಧರ್ಮದೀಪಿಕೆ. ೧೬. ಮಕ್ಕಳ ... ೧೭. ವಿವೇಕಾಭ್ಯುದಯ. ೧೮. ತ್ರಿವೇಣಿ. ೧೯. ಕತೆಗಾರ. ೨೦. ಭಾರತಿ. ೨೧. ... ಬಂಧು. ೨೨. ನಗುವ ನಂದ. ೨೩. ಭಾರತಿ (ತೆಲುಗು). ೨೪. ಕನ್ನ... ೨೫. ವೀರಶೈವ ಚಂದ್ರಿಕೆ. ೨೬. ಸಂಸ್ಕೃತ ಸಾಹಿತ್ಯ ಪರಿಷತ್ಪತ್ರಿಕೆ. ೨೭. ... ೨೮. ಹಂಸ. ೨೯. ವಿಮಾ ವಾಣಿಜ್ಯ. ೩೦. ವಿದ್ಯಾದಾಯಿನಿ. ೩೧. ವಿಶ್ವ ... ವಿಸ್ತಾರ. ೩೨. ವಿಶ್ವವಾಣಿ. ೩೩. ದಿವ್ಯ ಜ್ಯೋತಿ.

**ವಾರ ಪತ್ರಿಕೆಗಳು:—** ೧. ರಾಜಹಂಸ. ೨. ಸ್ವದೇಶಾಭಿಮಾನಿ. ೩. ... ೪. ರಾಷ್ಟ್ರಬಂಧು. ೫. ಕರ್ನಾಟಕ ವೈಭವ. ೬. ಶರಣ ಸಂದೇಶ. ೭. ... ೮. ಲೋಕಮತ. ೯. ಅರುಣೋದಯ. ೧೦. ಸಂಯುಕ್ತ ಕರ್ನಾಟಕ. ೧೧. ... ಬಂಧು. ೧೨. ಪ್ರಜಾಮತ. ೧೩. ಜನ್ಮಭೂಮಿ. ೧೪. ವಿಶ್ವಕರ್ನಾಟಕ. ೧೫. ... ಪತ್ರಿಕೆ. ೧೬. ವೃತ್ತಾಂತ ಪತ್ರಿಕೆ. ೧೭. ವಿಶ್ವಬಂಧು. ೧೮. ಉದಯ. ೧೯. ... ಟೈಮ್ಸ್. ೨೦. ತಾಯಿನಾಡು. ೨೧. ಪ್ರಭಾತ. ೨೨. ಮೈಸೂರು ಗೆಜೆಟ್. ೨೩. ...

**ದಿನ ಪತ್ರಿಕೆ:—** ೧. ನವಜೀವನ.

**ಇತರ ಪ್ರಕಟನೆಗಳು:—** ೧. ಇಂಡಿಯ ಸರ್ಕಾರದ ಶಾಸನದ ಇಲಾಖೆಯ ಪ್ರ... ಗಳು. ೨. ಮೈಸೂರು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೩. ಹೈದರಾ... ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೪. ಜಯಕರ್ನಾಟಕ ಗ್ರಂಥ... ೫. ಮನೋಹರ ಗ್ರಂಥಮಾಲೆ. ೬. ವಿದ್ಯಾರಣ್ಯ ಗ್ರಂಥಮಾಲೆ. ೭. ಪ್ರೇಮ ಗ್ರಂಥ... ೮. Indiana.



ದಿವಂಗತ ಶ್ರೀ॥ ಪಂಜೆ ಮಂಗೇಶರಾವ್, ಬಿ.ಎ., ಎಲ್.ಟಿ. ಅವರು

ಜನನ : ಫೆಬ್ರುವರಿ ೧೭, ೧೮೭೪] [ನಿಧನ : ಅಕ್ಟೋಬರ್ ೨೫, ೧೯೩೭

ಪಡಿಯಚ್ಚು ಕೊಟ್ಟವರು : 'ಕರ್ಣಾಟಕ ಸಂಘ,' ಸೆಂಟ್ರಲ್ ಕಾಲೇಜ್, ಬೆಂಗಳೂರು

# 'ಹಳಗನ್ನಡ-ಹೊಸಗನ್ನಡ'ದ ಐತಿಹಾಸಿಕ ವಿವೇಚನೆ

ಶ್ರೀಮಾನ್ ಕಪಟರಾಳ ಕೃಷ್ಣರಾಯರು, ಕಲ್ಬುರ್ಗಿ

---

ಕನ್ನಡ ನುಡಿಯಲ್ಲಿ ಆಯಾ ಕಾಲಗಳಲ್ಲಿ ಕಾಣಬರುವ ಶಬ್ದಗಳ ರೂಪಭೇದ ಗಳಿಂದುಂಟಾದ ಅವಸ್ಥಾಭೇದಗಳನ್ನು ನಿರೂಪಿಸುವಾಗ ಪೂರ್ವದ ಹಳಗನ್ನಡ, ಹಳಗನ್ನಡ, ಹೊಸಗನ್ನಡ ಎಂಬ ಮೂರು ಅವಸ್ಥೆಗಳಿರುವುವೆಂದು ಕೆಲವರು ಆಧುನಿಕ ಪಂಡಿತರು ಅಭಿಪ್ರಾಯಪಡುತ್ತಾರೆ. ಅವರ ಅಭಿಪ್ರಾಯಗಳನ್ನು ಈ ಕೆಳಗೆ ಕ್ರೋಢೀಕರಿಸಿದೆ:—

(೧) ಮಿ॥ ರೈಸ್ ಸಾಹೇಬರು 'ಕರ್ಣಾಟಕ ಭಾಷಾಭೂಷಣ'ದ ಉಪೋದ್ಘಾತದಲ್ಲಿ ಈ ರೀತಿ ಹೇಳಿರುವರು:—

"From the 8th to the 14th century was the Haḷe Kannaḍa period, and that during which the language was brought to a high state of cultivation by a succession of gifted writers of the Jaina faith. They refer to the language preceding their time as Haḷe Kannaḍa, and denominate what they used as Hosa Kannaḍa, though it is what is now understood by us as Hale Kannaḍa. Hence the necessity for discriminating the three stages as above specified; but the limits assigned to them are not to be taken absolutely, and the periods in different parts of the Kannaḍa region may be found to overlap or run into one another."

(೨) ದಿವಂಗತ ಮ॥ ಆರ್. ನರಸಿಂಹಾಚಾರ್ಯರು ಮೇಲಿನ ಅಭಿಪ್ರಾಯವನ್ನೇ ವ್ಯಕ್ತಗೊಳಿಸಿರುವರು:—

"ಕನ್ನಡ ಭಾಷೆಗೆ ಪೂರ್ವದ ಹಳಗನ್ನಡ, ಹಳಗನ್ನಡ, ಹೊಸಗನ್ನಡ ಎಂಬ ಮೂರು ಅವಸ್ಥೆಗಳಿರುವಂತೆ ತೋರುತ್ತದೆ. ನೃಪತುಂಗನು ತನ್ನ ಕಾಲಕ್ಕೆ ಹಿಂದೆ ಹಳಗನ್ನಡವೆಂಬ ಭಾಷೆಯಿದ್ದಂತೆ ಹೇಳಿದ್ದಾನೆ...... ಆ ಕಾಲಗಳಲ್ಲಿ ಭಾಷೆಯಲ್ಲಿ ವಿಶೇಷವಾಗಿ ಕಾಣಬರುವ ರೂಪಭೇದಗಳಿಂದ ಅವಸ್ಥಾಭೇದಗಳನ್ನು ಸ್ಥೂಲವಾಗಿ ಹೀಗೆ ನಿರೂಪಿಸಬೇಕಾಗಿದೆ."

('ಕವಿಚರಿತೆ,' ಸಂಪುಟ ೧, ಉಪೋದ್ಘಾತ)

(೩) ದಿವಂಗತ ಮ॥ ಆರ್. ರಘುನಾಥರಾಯರು ಹೀಗೆ ಹೇಳುತ್ತಾರೆ:—

"ನೃಪತುಂಗನು ಪಳಗನ್ನಡವನ್ನು ಜರದ್ವಧುವಿಗೆ ಹೋಲಿಸಿ 'ದೊರೆಕೊಂಡಿರೆ ಸೊಗಯಿಸುಗುಂ ಪುರಾಣ ಕಾವ್ಯ ಪ್ರಯೋಗದೊಳ್' ಎಂದು ಹೇಳಿ, 'ತತ್ಕಾಲಂ ವಿರಸಂ ಕರಮವು ದೇಸಿಗೆ ಜರದ್ವಧೂ ವಿಷಯ ಸುರತರಸರಸಿಕತೆವೊಲ್' ಎಂದು ಹೇಳಿರುವದರಿಂದ ದೇಸಿಗೆ ವಿರುದ್ಧವಾದ ಪ್ರಾಚೀನ ಪ್ರಯೋಗಗಳನ್ನು ಕುರಿತು ಮಾತನಾಡುವಂತೆ ತೋರುವದು."

(೪) ಮ॥ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು ('ಜಯಕರ್ನಾಟಕ,' ವರ್ಷ ೪, ಸಂಚಿಕೆ ೮ರಲ್ಲಿ) ಬರೆದಿರುವ 'ಕನ್ನಡ' ಎಂಬ ಲೇಖನದಲ್ಲಿ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ:—

"ಈ ಹಳೆ ಬಾಸೆ (ಅಂದರೆ, ನೃಪತುಂಗನು ಹೇಳಿರುವ ಪಳಗನ್ನಡ) ತನ್ನ ಕಾ... ಪ್ರಯೋಗಾರ್ಹವಲ್ಲವೆಂದು ನೃಪತುಂಗನ ಅಭಿಪ್ರಾಯವು. (ಹಳಗನ್ನಡದ) ... ಪ್ರಯೋಗಗಳು ಆ ಹಿಂದಣ ಕಾಲದ ಕಾವ್ಯಗಳಲ್ಲಿ ಅರ್ಹಗಳು; ಈಗಿನ ಕಾಲದ ... ವಿರಸಗಳೆಂದು ರಸವತ್ತಾದ ಉಪಮಾನದಿಂದ ನಿರ್ಧರಿಸಿದ್ದಾನೆ."

ಈ ಎಲ್ಲ ಪಂಡಿತರ ಅಭಿಪ್ರಾಯಗಳಿಂದ ತಿಳಿದುಬರುವುದೇನೆಂದರೆ: ನೃಪತುಂಗನು ತನ್ನ ಕಾಲದ ಪಳಗನ್ನಡವನ್ನು ಜರದ್ವಧುವಿಗೆ ಹೋಲಿಸಿ... ಅವನು ಹೇಳಿರುವ 'ಪಳಗನ್ನಡ'ವನ್ನು ಪೂರ್ವದ ಹಳಗನ್ನಡವೆನ್ನಬಹುದು.

ಇನ್ನು ನೃಪತುಂಗನ ಕಾಲದ ಈ ಪಳಗನ್ನಡದ ಸ್ವರೂಪದ ವಿಷ... ದಿವಂಗತ ಮ॥ ಆರ್. ರಘುನಾಥರಾಯರನ್ನುಳಿದು ಎಲ್ಲರಲ್ಲಿ ಒಮ್ಮತವಿದೆ.

(೧) ಕವಿಚರಿತೆಕಾರರು ಈ ರೀತಿ ಅಭಿಪ್ರಾಯಪಟ್ಟಿರುತ್ತಾರೆ:—

"ಹಳಗನ್ನಡ ವ್ಯಾಕರಣಗಳಲ್ಲಿರುವ ಸೂತ್ರಗಳಿಂದ ಸಿದ್ಧಿಸದ 'ಸಂ... 'ಬಂದೊನ್,' 'ಒಕ್ಕಲುಳ್,' 'ಕೆಡುಗ' ಮೊದಲಾದ ಶಬ್ದರೂಪಗಳು ಲನೆಯ ... ದಲ್ಲಿಯೂ ಅದಕ್ಕೆ ಪೂರ್ವದಲ್ಲಿಯೂ ಹುಟ್ಟಿರುವ ಶಾಸನಗಳಲ್ಲಿ ದೊರೆಯುತ್ತವೆ....: ಶಬ್ದರೂಪಗಳ ಪ್ರಯೋಗ ಪ್ರಾಚುರ್ಯವು ಪೂರ್ವದ ಹಳಗನ್ನಡಕ್ಕೆ ಒಂದು ಗುರು... ದ್ದಂತೆ ತಿಳಿಯಬಹುದಾಗಿದೆ. ಹಳಗನ್ನಡಕ್ಕೂ ಹೊಸಗನ್ನಡಕ್ಕೂ ಇರುವ ಭೇದ... ವಾಗಿಯೇ ಇದೆ."

('ಕವಿಚರಿತೆ,' ಸಂಪುಟ ೧, ಉಪೋದ್ಘಾತ, ...)

(೨) 'ಕವಿರಾಜಮಾರ್ಗ'ದ ಮದ್ರಾಸು ಪ್ರತಿಯ ಸಂಪಾದಕ... ಗ್ರಂಥದ ಪ್ರಥಮ ಪರಿಚ್ಛೇದದ ೪೯ನೆಯ ಪದ್ಯವನ್ನು ಪಳಗನ್ನಡದ ಸ್ವ... ವನ್ನು ತಿಳಿಸುವ ಪದ್ಯವೆಂದು ಇಟ್ಟುಕೊಂಡು, ೫೦ನೆಯ ಪದ್ಯವನ್ನು 'ಪಳಗ... ನಿಂದೆ' ಎಂದು ಕರೆದಿದ್ದಾರೆ. (ಪದ್ಯಗಳು ಮುಂದೆ ಬೇರೆಯ ಸಂದ... ಉದಾಹೃತವಾಗಿವೆ.)

(೩) ಮ॥ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು (ತಮ್ಮ 'ಕನ್ನಡ' ಲೇಖನದಲ್ಲಿ) ಮೇಲೆ ಹೇಳಿದ ("ಪೊಡವಿ....ಪಳಗನ್ನಡಮುಂ" ಎಂಬ) ... ಪದ್ಯವನ್ನು ಕುರಿತು:—

"ಪ್ರಕರಣವನ್ನು ಹೇಳದ ಬಿಡಿ ಪದ್ಯವಾದುದರಿಂದಲೂ, ಆಗಿನ ಹಳಗನ್ನಡ... ರಿಂದಲೂ ಈ ಪದ್ಯದ ಸರಿಯಾದ ಅರ್ಥವು ಗೊತ್ತಾಗುವದಿಲ್ಲ. ಆದರೂ, ಇದು ... ದಿಂದ ಪೀಡಿತರಾಗಿ ದೊರೆಗೆ ಮೊರೆಯಿಟ್ಟರೂ ಇಷ್ಟಾರ್ಥ ಪ್ರಾಪ್ತಿಗೊಳ್ಳದ ಬ... ಅವಸ್ಥೆಯನ್ನು ತಿಳಿಯಿಸುವ ಪದ್ಯವೆಂಬುದು ನಿಜವು"

ಎಂದು ಹೇಳಿ, ಆ ಪದ್ಯದ ಅನ್ವಯಾರ್ಥವನ್ನು ವಿವರಿಸಿ, ವಿಭಕ್ತಿ ಪ್ರತ್ಯ... ವಿವೇಚನೆಮಾಡಿ ಪೂರ್ವದ ಹಳಗನ್ನಡದ ಸ್ವರೂಪವನ್ನು ನಿರ್ದೇಶಿಸಿರುತ್ತಾರೆ.

('ಜಯಕರ್ನಾಟಕ,' ಸಂಪುಟ ೪, ಸಂಚಿಕೆ ೮; ಪುಟಗಳು ೪೬...)

(೪) ಅದೇ ಪದ್ಯವನ್ನು ಕುರಿತು ದಿವಂಗತ ಮ॥ ಆರ್. ರಘುನಾಥರಾ... ಹೀಗೆಂದು ಹೇಳಿರುತ್ತಾರೆ:—

"ಈ ಪದ್ಯಕ್ಕೆ ಸರಿಯಾಗಿ ಅರ್ಥವಾಗಿಲ್ಲ. ಮ॥ ಎಸ್. ಜಿ. ನರಸಿಂಹಾಚಾ... ತಮಗೆ ಪದ್ಯವು ಅರ್ಥವಾಗಿಲ್ಲವೆಂದು ಬರೆದಿರುವರು. ಈ ಪದ್ಯಕ್ಕೆ ಅರ್ಥ ತಿಳಿಯ...

ಖಂಡಿತವಾಗಿ ಮಾತನಾಡುವುದಕ್ಕೆ ಅಸ್ಪದವಿಲ್ಲ. ಆದಾಗ್ಗೂ, 'ಪಟಗನ್ನಡ' ಎಂಬಲ್ಲಿ 'ಪೂರ್ವದಲ್ಲಿದ್ದ ಕನ್ನಡ' ಎಂದು ಅರ್ಥಮಾಡುವುದು ಸರಿಯಲ್ಲ. 'ಪಜವಾಸಿಸ' ಎಂಬಲ್ಲಿ ಹೇಗೆ ಅರ್ಥ ಹೇಳುತ್ತೇವೆಯೋ ಹಾಗೆಯೇ 'ಬಹುಕಾಲದಿಂದಿರುವ' ಎಂದು ಅರ್ಥ ಹೇಳಬೇಕು. ಪೊಸಗಾಡಿ, ಪೊಸಗಂಪು, ಪೊಸಗಟ್ಟಿಲೆ, ಪೊಸವೆಳ್ದಿಂಗಳ್, ಪೊಸವೆಳ್ಪು, ಪೊಸವೇಟ ಎಂಬುವು ಇತರ ಗ್ರಂಥಗಳಲ್ಲಿ ಕಾಣಬರುವುವು. 'ಪೊಸದು' ಎಂಬುದಕ್ಕೆ 'ಹೃದಯಂಗಮವಾದ,' 'ಸೊಗಯಿಪ' ಎಂಬ ಅರ್ಥವೂ ಉಂಟು. 'ಪೊಸಗನ್ನಡ' ಎಂದರೆ 'ಸೊಗಯಿಪ ಕನ್ನಡ.'"

ಈಗಿನ ಕಾಲದವರಾದ ನಾವು ಶಬ್ದಗಳ ರೂಪಭೇದಗಳಿಂದುಂಟಾದ ಅವಸ್ಥೆಯನ್ನನುಲಕ್ಷಿಸಿ ಈ ರೀತಿಯಾಗಿ ಹೇಳಬಹುದಾದರೂ ಪ್ರಾಚೀನ ಕವಿಗಳು ಇದೇ ದೃಷ್ಟಿಯನ್ನಿಟ್ಟುಕೊಂಡು ತಮ್ಮ ತಮ್ಮ ಗ್ರಂಥಗಳಲ್ಲಿ ಹಳಗನ್ನಡ ಹೊಸಗನ್ನಡದ ನಿರೂಪಣೆ ಮಾಡಿರುವರೆಂದು ಅವರ ಗ್ರಂಥಗಳ ಆಧಾರದಿಂದ ನಿರ್ಧರಿಸುವುದು ಸರಿಯಾದುದಲ್ಲ. ಇನ್ನು ನಾವು ನೃಪತುಂಗನು ಯಾವ ಬಗೆಯಿಂದ ಪಟಿಗನ್ನಡವನ್ನು ಪ್ರಸ್ತಾವಿಸಿರುವನು ಮತ್ತು ಅದರ ಸಂಬಂಧವಾಗಿ ಅವನ ಅಭಿಪ್ರಾಯವೇನಿತ್ತು ಎಂಬುದನ್ನು ಮೊದಲು ಚರ್ಚಿಸುವುದು ಆವಶ್ಯಕ. ನೃಪತುಂಗನು ಪಟಿಗನ್ನಡವನ್ನು ಉಲ್ಲೇಖಿಸಿರುವ ಪದ್ಯಗಳು ಎರಡು:

ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಮೆಂದೆ ಪಟಿಗನ್ನಡಮುಂ ॥
ಪೊಲಗೆಡಿಸಿ ನುಡಿವರಾಗಮ । ಬಲಹೀನರ್ ದೇಸಿಯಲ್ಲದೆಂದಱಿದಿರ್ದುಂ ॥ ೪೮ ॥

ಪೊಡವಿಪತಿ ಗೊರವನೆನೆ ಪೇೞ್ಪಡೆಯದುವದೆಕರಿಸಿ ಕಬ್ಬಿಗರ್ದೂಱಿನೆಯುಂ ॥
ಪಡವ ಸಮಱಿ ನಿಟ್ಟಸುಗೆ । ಮುಡಿಯೊಳಮಾರ್ಗೆಂದು ನುಡಿವ
ಪಟಿಗನ್ನಡಮುಂ ॥ ೪೯ ॥

ದೊರೆಕೊಂಡಿರೆ ಸೊಗಯಿಸುಗುಂ । ಪುರಾಣ ಕಾವ್ಯ ಪ್ರಯೋಗದೊಳ್ ತತ್ಕಾಲಂ ॥
ವಿರಸಂ ಕರಮವು ದೇಸಿಗೆ । ಜರದ್ವಧೂವಿಷಯ ಸುರತರಸರಸಿಕತೆವೋಲ್ ॥ ೫೦ ॥

ಈ ಪದ್ಯಗಳಲ್ಲಿ ಎರಡನೆಯ ಪದ್ಯಕ್ಕೆ ಅರ್ಥವಾಗಿಲ್ಲ. ಮೂರನೆಯ ಪದ್ಯದಲ್ಲಿ ಪಟಿಗನ್ನಡವನ್ನು 'ಜರದ್ವಧು'ವಿಗೆ ಹೋಲಿಸಿ ಅದನ್ನು ನಿಂದಿಸಿರುವದರಿಂದ ಆ ಕಾಲಕ್ಕೆ ಬಳಕೆಯಲ್ಲಿಲ್ಲದ ಪಟಿಗನ್ನಡವೊಂದು ಇತ್ತೆಂದು ಪ್ರತಿಪಾದಿಸಲ್ಪಡುತ್ತದೆ.

ನೃಪತುಂಗನ ನಿಂದೆಗೆ ಗುರಿಯಾದ ಪಟಿಗನ್ನಡವು ಯಾವುದು? ಅವನು ಯಾವ ಅಭಿಪ್ರಾಯವನ್ನಿಟ್ಟುಕೊಂಡು ಪಟಿಗನ್ನಡವನ್ನು ನಿಂದಿಸಿದ್ದಾನೆ? ಈಗಿನ ಕಾಲದ ಪಂಡಿತರಂತೆ ಶಬ್ದಗಳ ರೂಪಭೇದಗಳಿಂದುಂಟಾದ ಅವಸ್ಥೆಯನ್ನನುಲಕ್ಷಿಸಿ ಅವನು ಪಟಿಗನ್ನಡವನ್ನು ಉಲ್ಲೇಖಿಸಿದ್ದಾನೆಯೇ? ಬೇರೆ ಅರ್ಥದಲ್ಲಿ ಉಪಯೋಗಿಸಿದ್ದರೆ ಅದು ಯಾವುದು? ನೃಪತುಂಗನು ತನ್ನ ಗ್ರಂಥದಲ್ಲಿ 'ಕನ್ನಡ,' 'ತಿರುಳ್ಗನ್ನಡ,' 'ಕನ್ನಡಂಗಳ್' ಮತ್ತು 'ಪಟಿಗನ್ನಡ'ಎಂದು ನಾಲ್ಕು ಶಬ್ದಗಳನ್ನು ಉಪಯೋಗಿಸಿದ್ದಾನೆ. 'ಕನ್ನಡ' ಶಬ್ದವು ಕನ್ನಡ ನುಡಿ ಎಂಬರ್ಥದಲ್ಲಿ ಅನೇಕಸಲ ಬಂದಿರುವದು. ಕನ್ನಡ ನಾಡಿನ ಸೀಮೆಯನ್ನೂ ಕನ್ನಡ ನಾಡವರ ಪೆರ್ಮೆಯನ್ನೂ ಹೇಳುವಾಗ ಕನ್ನಡ, ಕನ್ನಡದ ತಿರುಳ್, ಕನ್ನಡದೊಳ್, ಕನ್ನಡಕ್ಕೆ ಎಂದು ಉಪಯೋಗಿಸಿದ್ದಾನೆ (ಪದ್ಯಗಳು: ೩೬–೪೨). ೪೬ನೆಯ ಪದ್ಯದಲ್ಲಿ 'ಕನ್ನಡಂಗಳ್' ಎಂದು ಬಹುವಚನದಲ್ಲಿ ಬಂದಿದೆ; ಮತ್ತು ೪೮, ೪೯ನೆಯ ಪದ್ಯಗಳಲ್ಲಿ 'ಪಟಿಗನ್ನಡ' ಶಬ್ದವು

ಪದ್ಯಕ್ಕೊಂದರಂತೆ ಎರಡುಸಲ ಬಂದಿದೆ. ಮುಂದೆ ಸಮಸಂಸ್ಕೃತ ಸಂಸ್ಕೃತಾವ್ಯಯಗಳನ್ನು ಹೇಳುವಾಗ (ಪದ್ಯ : ೫೧) ಪುನಃ 'ಕನ್ನಡ' ಶಬ್ದ ಉಪಯೋಗವಾಗಿರುವದು.

ನೃಪತುಂಗನು ಹೇಳುವ ವಿಷಯವು ಕಾವ್ಯಾಲಂಕಾರ ಶಾಸ್ತ್ರಕ್ಕೆ ಪಟ್ಟುದು. ಅವನು ಶಬ್ದಮಣಿದರ್ಪಣಕಾರನಂತೆ ಶಬ್ದಶಾಸ್ತ್ರವನ್ನು ಹೇ ಇದಲ್ಲದೆ ಅವನು ತನ್ನ ಕಾಲದ 'ಪೊಸಗನ್ನಡ'ವನ್ನು ಹೇಳಿಲ್ಲ. ತನ್ನ ಗ್ರ 'ಪೊಸಗನ್ನಡ' ಶಬ್ದವನ್ನು ಒಂದುಸಲವಾದರೂ ಉಪಯೋಗಿಸಿರುವದಿಲ್ಲ. ಬಂಧದಲ್ಲಿ ಸ್ವಲ್ಪವೂ ದೋಷ ಇರಕೂಡದೆಂದೂ (ಪ. ೪೩), ಆದುದರಿಂದ 'ಪಾಂಗಱಿದು ದೋಷಮಂ ಪಿಂಗಿಸಿ' (ಪ. ೪೪), 'ಪೆಱರಿಂ ಜಾಣರಿನೋದಿ ಕಬ್ಬಮಂ' (ಪ. ೪೫) ಎಂದು ಹೇಳಿ, ಅನಂತರ ಕನ್ನಡಂಗಳಲ್ಲಿ ದೇಶಿ ಇರುವದರಿಂದ ಅನೇಕ ದೋಷಗಳಿರುವವು; ಆ ದೋಷಗಳು ಇಂತಿ ಆದಿಶೇಷನು ಕೂಡ ಸರಿಪಡಿಸಿ ಹೇಳಲಾರನು (ಪ. ೪೬); ಹೀಗಿದ್ದರೂ ಪುರಾ ಮಾರ್ಗದಲ್ಲಿ ಸಂತತವಾಗಿ ಹೇಳಲ್ಪಟ್ಟಿರುವ ದೋಷಗಳನ್ನು ಚಿಂತಿಸಿ ತನಗೆ ತಿ ಸರಿಪಡಿಸಿ ಬುಧಜನರಿಗೆ ಕೆಲವನ್ನು ಹೇಳುತ್ತೇನೆಂದೂ ಪ್ರತಿಜ್ಞೆಮಾಡುವನು ( ಅನಂತರ ಸ್ಥಿರವಾದ ಕಾವ್ಯಕ್ಕೆ ಕಾವ್ಯಲಕ್ಷಣವು ಯಾವಾಗಲೂ ಆವಶ್ಯಕವಾ ಆಗಮಬಲಹೀನರು ಕಾವ್ಯದ ಪದ್ಧತಿಯಲ್ಲವೆಂದು ತಿಳಿದೂ ತಿಳಿದೂ ಪದಗಸ್ಥ ಪೊಲಗೆಡಿಸಿ ನುಡಿವರೆಂದು ಉದ್ವೇಗಪಡುತ್ತಾನೆ (ಪ. ೪೮). ಇಲ್ಲಿ ಮಾತನಾಡುವ ವಿಷಯವು ಕಾವ್ಯಲಕ್ಷಣಕ್ಕೆ ಸಂಬಂಧಪಟ್ಟುದು. ಬಲಹೀನರೆಂದರೆ, ಪೂರ್ವಕಾವ್ಯಗಳನ್ನು ಕಲಿಯದೆ 'ಪದದೊಳ್ ಜಾಣು ಅರಿಯದವರು. ಯಾಕೆಂದರೆ, ಆಗಮಕೋವಿದರು ಎಂಥವರೆಂಬುದನ್ನು ೯ನೆಯ ಪದ್ಯದಲ್ಲಿ ಈ ರೀತಿಯಾಗಿ ಹೇಳುವನು :—

> ಅದಱಿಂ ಪರಮಾಗಮ ಕೋ। ವಿದನಪ್ಪುದು ಪೂರ್ವಕಾವ್ಯರಚನೆಗಳಂ ತಾ
> ಮೊದಲೊಳ್ ಕಲ್ತಂಗಲ್ಲದೆ। ಪದದೊಳ್ ಜಾಣುಂ ಬೆಡಂಗುಮಕ್ಕುಮೆ ಕೃತಿಯೊ

'ಪೊಲ'ವೆಂದರೆ—'ದಿಟ್ಟಗೆ ಪೊಲನಾದುದು ಪೊಂಬೆಟ್ಟಂ' ಮತ್ತು 'ಪೊ ಯದ ನೆಲನಱಿಯದ ಮೂರುವಿಧವಱಿಯದ' ಎಂಬಲ್ಲಿ ಅರ್ಥವಾಗುವಂತೆ ವಸ್ತುವಾದ ಸ್ಥಳ ಎಂದೂ ಅಥವಾ ಬರಿಯ ಸ್ಥಳ, ಮಾರ್ಗ, ಪದ್ಧತಿ ಎಂದು ವಾಗಬಹುದು. 'ಪೊಲಗೆಡಿಸಿ' ಎಂದರೆ ಸ್ಥಳ ತಪ್ಪಿಸಿ, ಯಾವ ಸ್ಥಳದಲ್ಲಿ ಉಪ ಬೇಕೋ ಅದನ್ನು ತಪ್ಪಿಸಿ, ಬೇರೆ ರೀತಿಯಾಗಿ ಉಪಯೋಗಿಸುವುದು ಎಂ ಪ್ರಾಚೀನವಾದ ದೇಶಿಪದಗಳನ್ನು ಅರ್ಥಕ್ಕೆ ಸರಿಯಾಗಿ ಯೋಗ್ಯವಾದ ಉಪಯೋಗಿಸುತ್ತ ಬಂದಿರುವದರಿಂದ ಅವು ಕಾವ್ಯಕ್ಕೆ ಲಕ್ಷಣವಾ ಆದೊಂದು ಪದಪದ್ಧತಿ. ಮೊದಲನೆಯ ನಾಗವರ್ಮನು (೯೯೦) ತನ್ನ ಚಾತುರ್ಯವನ್ನು ಹೇಳಿಕೊಳ್ಳುವಾಗ—

> ರಚಿತಪದ ಪ್ರಸನ್ನ ಪರಿಪೂರ್ಣ ರಸಾವಹಮರ್ಥಯುಕ್ತಮಾ।
> ಗುಚಿತ ಪುರಾಣಮಾರ್ಗ ಪದಪದ್ಧತಿ ಬಂಧುರ ಬಂಧಮೆಂಬಿನಂ॥

ಎಂದು ಪುರಾಣಮಾರ್ಗದ ಪದಪದ್ಧತಿಯನ್ನು ಹೇಳಿರುವನು. ಈ ಪುರಾಣಮಾರ್ಗ ಪದಪದ್ಧತಿಯು ಕಾವ್ಯದ ಇತರ ಲಕ್ಷಣಗಳೊಡನೆ ಒಂದಾಗಿದೆ, ಮತ್ತು "ದೇಸೆಯೆ ದೇಸೆವೆತ್ತುದೆಂಬವೋಲಿರೆ" ಎನ್ನುವದರಿಂದ ದೇಸಿಗನುಸರಿಸಿರುವದೆಂದು ಹೇಳಿಕೊಳ್ಳುವನು. ಇಂತಹ 'ದೇಸೆ'ಯಾದ 'ಪದಪದ್ಧತಿ'ಯನ್ನು ಬಿಟ್ಟು ಬೇರೆ ರೀತಿಯಾಗಿ ಮನಬಲ್ಲಂತೆ ಪದಗಳನ್ನು ಪಯೋಗಿಸುವುದು ಪೂರ್ವಕಾವ್ಯಗಳನ್ನು ಓದಲಾರದ ಅನಭಿಜ್ಞರ ಕೆಲಸ. ಇಂಥವರು ಕಾವ್ಯಕ್ಕೆ ಲಕ್ಷಣವಾದ ಪಟಿಗನ್ನಡವನ್ನು ಕೆಡಿಸಿ ನುಡಿಯುತ್ತಾರೆಂದು ನೃಪತುಂಗನ ಅಭಿಪ್ರಾಯವು. ಅರ್ಥಾತ್ ಕಾವ್ಯಕ್ಕೆ ಲಕ್ಷಣವಾದ ಪಟಿಗನ್ನಡವನ್ನು ಪ್ರಶಂಸಿಸಿ ಅದು ದೇಸಿಯೆಂದೂ ಸಾಧುವೆಂದೂ ಹೇಳುತ್ತಾನೆ. ಇಂತಹ ಪಟಿಗನ್ನಡವನ್ನು ಕೆಡಿಸಿ ನುಡಿಯುವವನ್ನು ಮಾತ್ರ ಜರೆಯುತ್ತಾನಲ್ಲದೆ ಪಟಿಗನ್ನಡವನ್ನೇ ನಿಂದಿಸಿಲ್ಲ. ೪೯ನೆಯ ಪದ್ಯದಲ್ಲಿ ಪಟಿಗನ್ನಡವನ್ನು ಪೊಲಗೆಡಿಸಿ ನುಡಿವ ಉದಾಹರಣೆಗಳನ್ನು ಕೊಟ್ಟು ೫೦ನೆಯ ಪದ್ಯದಲ್ಲಿ ತನ್ನ ಅಭಿಪ್ರಾಯವನ್ನು ಹೇಳಿರುತ್ತಾನೆ. ೪೯ನೆಯ ಪದ್ಯಕ್ಕೆ ಇದುವರೆಗೂ ಸರಿಯಾಗಿ ಅರ್ಥವಾಗಿಲ್ಲ. ಈ ಪದ್ಯದ ಪಾಠದ ವಿಷಯದಲ್ಲೂ ಸಂಶಯವಿದೆ. ಆದಾಗ್ಯೂ ಪದ್ಯದ ಅನ್ವಯವು ಈ ರೀತಿಯಾಗಿ ಆಗಬಹುದೋ ಏನೋ?—

"ಪೊಡವಿಪತಿ ಗೊರವಂ ಎನೆ, ಪೇೞ್ವೆಡೆ ಆದುವದೆಕರಿಸಿ ಕಬ್ಬಿಗರ್ ದೂಱ್ ಎನೆ, ಯುಂ, ಹಡವ ಸಮಱಿ ನಿಟ್ಟಸುಗೆ, ಮುಡಿಯೊಳಂ ಆರ್ಗ್, ಎಂದು ನುಡಿವ ಪಟಿಗನ್ನಡಮಂ."

**ಅರ್ಥ :**—ಪೊಡವಿಪತಿ ಗೊರವಂ ಎನೆ = ಗೊರವ ಎಂದರೆ ಶಿವ, ಶೈವ ಸಂನ್ಯಾಸಿ ಶ್ರೇಷ್ಠ; ಪೃಥ್ವೀಪತಿಗೆ (ವಿಷ್ಣುವಿಗೆ ಹೋಲಿಸುವಂತೆ) ಶಿವನೊಡನೆ ಹೋಲಿಸಿ ಗೊರವ ಎನ್ನುವದು ;—ಪೇೞ್ವೆಡೆ=ಪೇೞ್ ಎನ್ನುವಲ್ಲಿ, ಆದುವದೆಕರಿಸಿ=ಸಂದೇಹಗೊಂಡು, ದೂಱ್ ಎನ್ನಲು ;—ಯುಂ = ಮತ್ತು (ಸಮುಚ್ಚಯಾರ್ಥದಲ್ಲಿ) ಹಡವ ಸಮಱಿ = ಹಡ (?) ವನ್ನು (ಪಡ = ಹಡ = ತೋಟದ ಪಡ ; ಪಡಸಾಲೆಯ 'ಪಡ' ವಿರಬಹುದು), ಸಮಱಿ = ಚಾರುಕರಣಗೈಯುವ ಎನ್ನುವಲ್ಲಿ, ನಿಟ್ಟಸುಗೆ (?) = (ಇಲ್ಲಿ ನಿಱಿಸುಗೆ ಇದ್ದರೂ ಇರಬಹುದು ; ಪಾಠವು ಸರಿಯಾಗಿಲ್ಲವೆಂದು ಮದ್ರಾಸು ಪ್ರತಿಯಲ್ಲಿ ಪ್ರಶ್ನಾರ್ಥಕ ಚಿಹ್ನವಿದೆ) ; ಮುಡಿಯೊಳಂ = ಮುಡಿ = ಕೊನೆಗಾಣಿಸು ಎನ್ನುವ ಸ್ಥಳದಲ್ಲಿ,—ಆರ್ = (ನಿರ್ದ್ರವೇ) ಎನ್ನುವುದು (ಇನ್ನೂ ನಮ್ಮ ಕಡೆಗೆ ದೀಪ ಮುಡಿ ಎನ್ನುವರು ; ದೀಪ ಆರಿಸು ಎನ್ನುವುದಿಲ್ಲ).

ಪೊಡವಿಪತಿಯು ಗೊರವ, ಪೇೞ್ ಎನ್ನುವಲ್ಲಿ ದೂಱ್ ಮತ್ತು ಸಮಱಿ ಎನ್ನುವ ಸ್ಥಳದಲ್ಲಿ ನಿಱಿವು, ಮುಡಿ ಎನ್ನುವಲ್ಲಿ ಆರ್ ಎಂದು ನುಡಿವ ಪಟಿಗನ್ನಡವು ಪುರಾಣಕಾವ್ಯ ಪ್ರಯೋಗದೊಳ್ ದೊರೆಕೊಂಡಿರೆ ತತ್ಕಾಲಂ ಸೊಗಯಿಸುಗುಂ; (ಆದರೆ) ಅವು (ಇಂತಹ ದೋಷಗಳು) ಜರದ್ವಧೂ ವಿಷಯ ಸುರತರಸರಸಿಕತೆವೋಲ್ ದೇಸಿಗೆ ವಿರಸಂ—ಎಂದು ೫೦ನೆಯ ಪದ್ಯದಲ್ಲಿ ತನ್ನ ಅಭಿಪ್ರಾಯವನ್ನು ಕೊಟ್ಟಿರುವನು. ೫೧ನೆಯ ಪದ್ಯದಲ್ಲಿ ದೇಶಿಪದಗಳ ಅನಾತತೆಯಿಂದುಂಟಾದ ದೋಷಗಳನ್ನು ಹೇಳಿ, ೫೨ನೆಯ ಪದ್ಯದಲ್ಲಿ ಪುರಾಣ ಕವಿಗಳ ಕಾವ್ಯಗಳಲ್ಲಿಯ ಕೆಲವು ದೋಷಗಳನ್ನು

ಸರಿಪಡಿಸಿ ಹೇಳುತ್ತೇನೆಂದು ಪ್ರತಿಜ್ಞೆಮಾಡಿರುವದರಿಂದ, ಈ ಶ...ನೆಯ ಪದ್ಧ... 'ಪುರಾಣಕಾವ್ಯ ಪ್ರಯೋಗದೊಳ್' ಎಂದು ಅದೇ ಅರ್ಥದಲ್ಲಿ ಕವಿಯು ... ಸಿರುವದು ಸ್ಪಷ್ಟವಿದೆ. ಅದಕ್ಕಾಗಿಯೇ 'ಅವು' ಎಂಬ ಬಹುವಚನದಿಂದ ... ಗಳನ್ನು ಸೂಚಿಸಿರುವನು. ಈ ಎಲ್ಲ ವಿವೇಚನೆಯಿಂದ 'ಜರದ್ವಧೂ ವಿಷಯ... ರಸರಸಿಕತೆ' ಎಂದಿರುವುದು ಪೞಗನ್ನಡಕ್ಕಲ್ಲ; ಪೞಗನ್ನಡವನ್ನು ಕೆಡಿಸಿ... ದೋಷಗಳಿಗಾಗಿ. ಇಲ್ಲಿ ಕವಿಯು ಶಬ್ದಗಳ ರೂಪಗಳನ್ನು ಕುರಿತು ... ಹಳಗನ್ನಡ ಹೊಸಗನ್ನಡದ ವಿಷಯವನ್ನು ಹೇಳಿರುವುದಿಲ್ಲ; ಪ್ರಾಚೀನ... ನಡೆದುಬಂದಿರುವ ಕಾವ್ಯಕ್ಕೆ ಲಕ್ಷಣವಾದ ದೇಶಿ ಪದಪದ್ಧತಿಯನ್ನು ಬಿಡಕೂ... ಸ್ಪಷ್ಟವಾಗಿ ಹೇಳಿರುತ್ತಾನೆ.

ನಮಗೆ ತಿಳಿದಮಟ್ಟಿಗೆ 'ಪೊಸಗನ್ನಡ' ಎಂಬ ಶಬ್ದವನ್ನು ಮೊದಲು ಪ್ರ... ಮಾಡಿರುವ ಕವಿಯೆಂದರೆ, 'ಚಂದ್ರರಾಜ' (೧೦೨೫). 'ಮದನತಿಲಕ' ಗ್ರಂ... 'ಪೇೞ್ದಿನೆಸೆಯೆ ಪೊಸಗನ್ನಡದಿಂ' ಎಂಬುದರಿಂದ ಈತನು ಆ ಕಾಲದ ಹಳಗನ್ನ... ಬಿಟ್ಟು ಹೊಸಗನ್ನಡದಲ್ಲಿ ಬರೆದಿರಬೇಕು ಎಂದು ಕವಿಚರಿತೆಕಾರರು ಅಭಿ... ಪಟ್ಟಿರುವರು (ಕ. ಚ., ಸಂ. ೧, ಪು. ೨೩). ಈ ಪೊಸಗನ್ನಡವು ... ಗಳಿಂದುಂಟಾದ ಕನ್ನಡ ಶಬ್ದಗಳಿಗೆ ಕವಿಯು ಹೊಸಗನ್ನಡವೆನ್ನುತ್ತಾನೆಂಬು... ಕೊಳ್ಳುವಷ್ಟು ಆಧಾರವಿಲ್ಲ. ಆದರೆ ಈ ಕವಿಯ ಕಾಲಾನಂತರ ಸುಮಾರು ... ಗಳಲ್ಲಿ ಆಗಿಹೋದ ನಯಸೇನನು (ಸುಮಾರು ೧೧೧೨) ತನ್ನ 'ಧರ್ಮಾಮೃತ'...

ಪೊಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮುಂ ಚಿಂ
ತಿಸಿ ಕೂಡಲಾರದಕ್ಕಟ । ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ॥

ಸಕ್ಕದಮುಂ ಪೇೞ್ವೊಡೆ ನೆಱೆ । ಸಕ್ಕದಮುಂ ಪೇೞ್ಗೆ ಸುದ್ಧಗನ್ನಡದೊಳ್...
ದಿಕ್ಕುವುದೇ ಸಕ್ಕದಮುಂ । ತಕ್ಕುದೆ ಬೆರಸಲ್ಕೆ ಘೃತಮುಮುಂ ತೈಲಮುಮಂ ॥

ಎಂದು ಬರೆದು ಆಗಿನ ಕಾಲದ ಹೊಸಗನ್ನಡದ ಕಲ್ಪನೆಯನ್ನು ಸ್ಪಷ್ಟಗೈದಿ... ಕನ್ನಡ ಕಾವ್ಯವನ್ನು ಬರೆಯುವಾಗ ಕೂಡಲಾರದ ಸಂಸ್ಕೃತ ಪದಗಳನ್ನು ಹೇ... ಉಪಯೋಗಿಸಿ ಹೊಸಗನ್ನಡದಲ್ಲಿ ಬರೆಯುತ್ತೇವೆಂದು ಹೇಳಿಕೊಳ್ಳುವ ಕ... ಉದ್ದೇಶವಾಗಿಟ್ಟುಕೊಂಡು ನಯಸೇನನು ಮಾತನಾಡುತ್ತಾನೆಂಬುದು ಸ್ಪ... ಈ ಕವಿಯು ಕನ್ನಡ ಸಂಸ್ಕೃತಗಳ ಬೆರಕೆಯನ್ನು ಕುರಿತು ಮಾತನಾಡುತ್ತ... 'ಪೞಗನ್ನಡ'ದ ಹೆಸರನ್ನು ಸಹ ಎತ್ತಿರುವದಿಲ್ಲ. ಸುಮಾರು ... ಆಗಿಹೋದ ಎರಡನೆಯ ನಾಗವರ್ಮನ 'ಕಾವ್ಯಾವಲೋಕನ'ದಲ್ಲಿ ಬಂದಿರುವ

ಪೞಗನ್ನಡಂ ಪುದುಂಗೊಳೆ । ಕೊೞೆ ಸಕ್ಕದಮುಂ ತಗುಳ್ಚಿ ಜಾಣ್ಕೆಡೆ ಮುತ್ತ...
ಮೆಱಿಸಂ ಕೋದಂತಿರೆ ಪೇೞ್ವೞಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮ...

ಎಂಬೀ ಪದ್ಯದಲ್ಲಿ ಪೞಗನ್ನಡವು ಅಂದರೆ ಪುರಾಣಮಾರ್ಗ ದೇಶಿ ಪದ... ಕಾವ್ಯದಲ್ಲಿ ಸರಿಯಾಗಿ ಹೊಂದಿಕೆಯಾಗುತ್ತಿರಲು ಕೊಳಚಾದ ಸಂಸ್ಕೃತ... ಸೇರಿಸಬಾರದೆಂದು ಕವಿಯು ಅಭಿಪ್ರಾಯಪಟ್ಟಿರುವನು. ಅಂದರೆ, ಪ್ರಾಚೀನ... ಪ್ರಯೋಗಗಳು ಅಂದವಾಗಿ ಹೊಂದಿಕೆಯಾಗುವಾಗ ಅವುಗಳ ಬದಲು ಸಂಸ್ಕೃತ...

ಉಪಯೋಗಿಸಿ ಕಾವ್ಯದ ಚೆಲುವಿಕೆಯನ್ನು ಕೆಡಿಸುವುದು ಸರಿಯಲ್ಲವೆಂಬುದೇ ಅವನ ಅಭಿಪ್ರಾಯ. ಇದರಿಂದ ತಿಳಿದುಬರುವದೇನೆಂದರೆ—ನೃಪತುಂಗನ ಕಾಲಕ್ಕೆ ಪೞಗನ್ನಡವು ಪೊಲಗೆಡಿಸಿ ಸುಡಿಯಲ್ಪಡುತ್ತಿದ್ದಿತು. ಆದರೆ ನಯಸೇನನ ಮತ್ತು ಎರಡನೆಯ ನಾಗವರ್ಮನ ಕಾಲದಲ್ಲಿ ಇಂತಹ ಕಾವ್ಯಕ್ಕೆ ಲಕ್ಷಣಗಳಾದ ಪ್ರಾಚೀನ ಕನ್ನಡ ಪ್ರಯೋಗಗಳೇ ಮೂಲೆಗೆ ಬಿದ್ದು, ಅವುಗಳ ಬದಲಾಗಿ ಸಂಸ್ಕೃತ ಪದಗಳು ತಲೆದೋರಿದುವು. ಪೞಗನ್ನಡದ ಬದಲು ಸಂಸ್ಕೃತವು ಪ್ರಯೋಗವಾಗುವ ಈ ಹೊಸ ಪದ್ಧತಿಯೇ ಆಗಿನ ಹೊಸಗನ್ನಡವಾಗಿದ್ದಿತು. ಪೞಗನ್ನಡದ ಪ್ರಯೋಗಗಳು ಬಳಕೆ ತಪ್ಪಿದ್ದರಿಂದ ಜನರಿಗೆ ತಿಳಿಯದಂತಾದವು. ಆದುದರಿಂದ ೧೧ನೆಯ ಕಾಲದ ಮೇಘಚಂದ್ರನು "ವಿತತ ಯಶೋನಿಧಿ ಪಂಪನ ಸುತಂಗೆ ತಿಳಿವಂತು ಪೊಚ್ಚಪೊಸಗನ್ನಡದಿಂ" ಬರೆದಂತೆ ಹೇಳಿಕೊಳ್ಳುತ್ತಾನೆ. ಸಂಸ್ಕೃತವು ಕನ್ನಡ ಕಾವ್ಯಗಳಲ್ಲಿ ಬೆರೆಯುತೊಡಗಿತು. ಸಂಸ್ಕೃತವನ್ನು ಕೂಡಿಸಲಾರದೆ ಕಾವ್ಯವನ್ನು ಬರೆಯುವದು ಕಷ್ಟವೆಂದು ಕೆಲವು ಜನರು ಅನ್ನತೊಡಗಿದರು. ಪ್ರಾಚೀನ ಸಂಪ್ರದಾಯಾನುವರ್ತಿಗಳಾದ ಕವಿಗಳಿಗೆ ಈ ಮಾತು ರುಚಿಸದಂತಾಗಿ ಪ್ರತಿಕ್ರಿಯೆಯುಂಟಾಗುತ್ತ ಕಡೆಗೆ ೧೩೩೫ರಲ್ಲಿ ಆಂಡಯ್ಯನು ಪ್ರತಿಭಟಿಸಿ ಈ ರೀತಿಯಾಗಿ ನುಡಿದಿರುವನು :—

ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮುಂ ।
ಬಗೆಗೊಳೆ ಪೇೞಲಾಱರಿನಿತುಂ ಸಲೆ ಮುನ್ನಿನ ಪೆಂಪನಾಳ್ದ ಕ ।
ಬ್ಬಿಗರದು ಮಾತನಾಡಿದವೊಲಂದವನಾಳ್ದಿರೆ ಪೇಳ್ದ ಬಲ್ಲ ನೆ ।
ಟ್ಟಗೆ ದೊರೆಕೊಂಡುದಿಂತಿವನೊಳಲ್ಲದೆ ಕೇಳ್ ದೊರೆಕೊಳ್ಳದಾರೊಳಂ ॥
ಎಂದು ತಮತಮಗೆ ಬಲ್ಲವ । ರೆಂದೊಡೆ ನಾನವರ ಬಯಕೆಯಂ ಸಲಿಸುವೆನಿ ॥
ನ್ನೆಂದಚ್ಚಗನ್ನಡದಿಂ ಬಿಗಿ । ವೊಂದಿರೆ ಕಬ್ಬಿಗರ ಕಾವನೊಲವಿಂದೊರೆದೆಂ ॥

ಸಂಸ್ಕೃತವನ್ನು ಬೆರಸದೆ ಕನ್ನಡ ಕಾವ್ಯವನ್ನು ಹೇಳಲು ಬರುವದಿಲ್ಲವೆನ್ನುವವರನ್ನು, ಅಚ್ಚಗನ್ನಡದಲ್ಲಿ ಕಾವ್ಯವನ್ನು ಬರೆದು ನಿರುತ್ತರರನ್ನಾಗಿ ಮಾಡಿದನು. ಇವನ ಅಚ್ಚಗನ್ನಡದಲ್ಲಿ ತದ್ಭವವೂ ಸೇರಿಕೊಂಡಿರುವದು. ತದ್ಭವಗಳಿಂದ ಕೂಡಿದ ಕನ್ನಡಕ್ಕೆ ಅಚ್ಚಗನ್ನಡವೆನ್ನುವದು ಕನ್ನಡ ಭಾಷೆಯ ಸಂಪ್ರದಾಯ. ಈ ಅಭಿಪ್ರಾಯವನ್ನು ಸಮರ್ಥಿಸುವ ಕೆಳಗಿನ ಕವಿವಾಕ್ಯಗಳನ್ನು ಪರಿಶೀಲಿಸಬಹುದು :—

ಅಚ್ಚಗನ್ನಡದ ಚೆಲ್ಪುಮುಂ ತದ್ಭವದ ಬೆಸುಗೆಯಂ
('ಕಬ್ಬಿಗರ ಕೈಪಿಡಿ')

ಕವಿಚತುರಾನನನೆಂದೆನಿ । ಸುವ ನಾಮದೆ ದೇಶಿ ತದ್ಭವಂ ತತ್ಸಮಮೆಂ ॥
ಬಿವಱಿಂದಮಚ್ಚಗನ್ನಡ । ವಿವರಣೆ ಚೆಲ್ವಾಗೆ ರಚಿಸಿದೆಂ ಚತುರಾಸ್ಯಂ ॥
('ಚತುರಾಸ್ಯ ನಿಘಂಟು')

ಇಂತು ನೆರೆ ಕರ್ಣಾಟ ಭಾಷೆಯೊಳ್ತರಿಸಂದ ।
ನಂತನಾಮಂಗಳೊಳ್ದೇಸೀಯ ಪಲವು ತೆರ ।
ನಂತವು ಮಹಾಶೇಷಗಂ ತಿಳಿಯಲಳವಲ್ಲ(ವ?)ವರೊಳು ಪಲಕೆಲ ಶಬ್ದಂ ॥
ಸಂತಸದೊಳಚ್ಚಗನ್ನಡ ಗೂಢಪದ ತತ್ಸ ।
ಮಂ ತದ್ಭವಗಳೆಂಬ ನಾಮಗಳನೋ ।
ರಂತೆ ವಿರಚಿಸಿದೆನೆಲ್ಲಾ ಕವೀಶ್ವರರುದಾಹರಣ ಸನ್ಮಾರ್ಗವಿಡಿದು ॥
(ತೋಂಟದಾರ್ಯನ 'ಕರ್ಣಾಟಕ ಶಬ್ದಮಂಜರಿ')

ಸಕ್ಕದಮಂ ಮಱಿಗೊಳ್ಳದೆ । ಚೊಕ್ಕಳಿಕೆಯಿನಚ್ಚಗನ್ನಡಂ ಪೇೞ್ವರ ಕ
ಯ್ವೊಕ್ಕ ನಿಧಿಯೆನಿಪಪಭ್ರಂ।ಶಕ್ಕಂ ದೇಶೀಯ ಪದಕಮುಂಟು ಸಮಾಸಂ ।
('ಶಬ್ದಮಣಿದರ್ಪಣ,' ಸೂ. ३

ಇಂತಹ ಅಚ್ಚಗನ್ನಡದಿಂದ ಕಾವ್ಯವನ್ನು ರಚಿಸುವುದು ಕನ್ನಡ ಸಂಪ್ರದಾ ವಾಗಿದ್ದು ಅನಾವಶ್ಯಕವಾದ, ಕೂಡಲಾರದ ಸಂಸ್ಕೃತವನ್ನು ಬೆರಸಿ ಬರೆ ಕಾವ್ಯದ ಲಕ್ಷಣವಲ್ಲವೆಂದು ತಿಳಿಯಲ್ಪಡುತ್ತಿದ್ದಿತು. ನೃಪತುಂಗನ ಪಳಗನ್ನಡದ ಪದಪದ್ಧತಿಯು ಹಿಂದೆಬಿದ್ದುದಲ್ಲದೆ, ಕನ್ನಡವೇ ಕಡಮೆಯಾ ನಡೆಯಿತು. ಆದುದರಿಂದ ಪಳಗನ್ನಡವನ್ನು ಮೂಲೆಗೆ ಬೀಳಗೊಡಬಾ ೧೩೦ರಲ್ಲಿ ಕೇಶಿರಾಜನು ಪ್ರಯೋಗಸಾರವೆಂಬ ಶಬ್ದಾರ್ಥ ನಿರ್ಣಯವನ್ನು ಕೈ ವಾಗ 'ಶಬ್ದಮಣಿದರ್ಪಣ'ದಲ್ಲಿ—

ಅಪರಿಮಿತ ವಿದ್ಯರೆನಿಸಿ । ರ್ದ ಪುರಾಣ ಕವೀಂದ್ರರಖಿಳ ಕಾವ್ಯಂಗಳ ಗೂ
ಢ ಪದಪ್ರಯೋಗಮಂ ನೆರೆ । ಪಿ ಪದಾರ್ಥಂಗಳನಣಂ ಮನಂಬುಗೆ ಪೇೞ್ವೆ

ಎಂದು ಹೇಳಿರುವನು.

ಈ ವಿಷಯದಲ್ಲಿ ಗಮನಿಸತಕ್ಕ ಇನ್ನೊಂದು ಅಂಶವೇನೆಂದರೆ—ಚಂದ್ರರಾ ಕನ್ನಡ ಕವಿಗಳ ಸಂಪ್ರದಾಯಕ್ಕನುಸರಿಸಿ ತನಗಿಂತ ಪೂರ್ವಕವಿಗಳನ್ನು ಸ್ತು ತನ್ನನ್ನು 'ವಿಪ್ರಕುಲಲಲಾಮಮಂ,' 'ದ್ವಿಜಾಂಭೋಧಿರಾಜಂ,' 'ಮನುಮುನಿ ಚಾರಮ್' ಎಂದು ಅಭಿಮಾನದಿಂದ ಹೇಳಿಕೊಂಡಿರುವದರಿಂದ ಬ್ರಾಹ್ಮಣನೆ ವ್ಯಕ್ತವಾಗುತ್ತದೆ. ಚಾಳುಕ್ಯ ರಾಜನಾದ ಜಯಸಿಂಹದೇವನ ಮಹಾಸಾಮಂ ಮಾಚನು ತನ್ನ ಪೋಷಕನೆಂದು ಹೇಳಿಕೊಳ್ಳುತ್ತಾನೆ. ಇದಲ್ಲದೆ 'ಕವಿಪತಿ 'ತಿರ್ದಿ ಬರೆದವಂ ಬ್ರಹ್ಮಂ ಸತ್ಕೃತಿ ಮದನತಿಲಕಮಿದು' ಎಂದೂ, 'ಪೇೞ್ವೆ ಪೊಸಗನ್ನಡದಿಂ' ಎಂದೂ ಬರೆಯುತ್ತಾನೆ. ಇವನನ್ನೇ ಗುರಿಯಾಗಿಟ್ಟು ನಯಸೇನನು 'ಪೊಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯನೆಂದು...... ಮಾತನಾಡುತ್ತಾನೆಂದು ಊಹಿಸಲಿಕ್ಕೆ ಆಸ್ಪದವಿದೆ. ಅಂತೂ ಪೊಸಗನ್ನ ಬರೆಯುತ್ತೇನೆಂದು ಹೇಳಿಕೊಳ್ಳುವ ಚಂದ್ರರಾಜನು ಬ್ರಾಹ್ಮಣನು. ಪೊಸ ವೆನ್ನುತ್ತ ಅನಾವಶ್ಯಕವಾದ ಸಂಸ್ಕೃತ ಪದಗಳನ್ನು ಕನ್ನಡದಲ್ಲಿ ಬೆರಕೆ ಕೂಡದೆನ್ನುವ ನಯಸೇನ, ನಾಗವರ್ಮ, ಆಂಡಯ್ಯ ಮುಂತಾದವರೆಲ್ಲರೂ ಕವಿಗಳು. ಕನ್ನಡ ವಾಙ್ಮಯದಲ್ಲಿ ಜೈನರು ಮೊದಲಿಗರು. ರಾಷ್ಟ್ರಕೂ ಕಾಲದಲ್ಲಿ ಜೈನರಿಗಿದ್ದ ಪ್ರಾಬಲ್ಯವು ಚಾಳುಕ್ಯರ ಕಾಲದಲ್ಲಿ ಕಡಮೆಯಾ ಬಂದಿತು.* ಚಾಳುಕ್ಯರ ಕಾಲದಲ್ಲಿ ನಾಗವರ್ಮಾಚಾರ್ಯ (೧೦೭೦), ಚಂದ್ರರಾಜ (೧೦೪೯), ಕರ್ಣಪ (೧೧೪೪), ಮಲ್ಲಿಕಾರ್ಜುನಭಟ್ಟ (೧೧ ದುರ್ಗಸಿಂಹ (೧೦೩೪) ಮುಂತಾದ ಬ್ರಾಹ್ಮಣ ಕವಿಗಳು ಕನ್ನಡ ಕಾವ್ಯ

* "That Jainism was largely prevalent among the Rashtrakutas and that it was the professed creed of many Kings are evident, as a good many Digambara works were composed during their sway........Jainism, during the period of the Chalukya revival, ceased to be the conquering faith that it was once."
('*Studies in South Indian Jainism*,' p. 1

ಬರೆಯತೊಡಗಿದರು. ಈ ಬ್ರಾಹ್ಮಣ ಕವಿಗಳಿಂದ ಕನ್ನಡದಲ್ಲಿ ಸಂಸ್ಕೃತ ಪ್ರಾಚುರ್ಯವು ಅನಾವಶ್ಯಕವಾಗಿ ಬೆಳೆದಂತೆ ಕಾಣುತ್ತದೆ. ಪ್ರಾಚೀನ ಪದಪದ್ಧತಿ ಸಂಪ್ರದಾಯಾನುವರ್ತಿಗಳಾದ ಜೈನ ಕವಿಗಳಿಗೆ ಕನ್ನಡದಲ್ಲಿ ಈ ರೀತಿಯಾಗಿ ಸಂಸ್ಕೃತ ಬೆರೆಯಿಸುವ ಹೊಸ ಪದಪದ್ಧತಿಯು ಸರಿದೋರಲಿಲ್ಲ. ಆದುದರಿಂದ ಬ್ರಾಹ್ಮಣರ ಈ ಹೊಸ ಪದಪದ್ಧತಿಯನ್ನು ಅವರು ಜರೆದು ಮಾತನಾಡುತ್ತಾರೆ. ಬರಬರುತ್ತ ಹಳೆಯ ಪದಪದ್ಧತಿಯು ಜನರಿಗೆ ತಿಳಿಯದಂತಾಯಿತು. ಅಂತೆಯೇ, ಮೇಘಚಂದ್ರನು ಜೈನನಾದಾಗ್ಯೂ ತಿಳಿವಂತು ಪೊಚ್ಚ ಪೊಸಗನ್ನಡದಿಂದ ಬರೆದಂತೆ ಹೇಳಿಕೊಳ್ಳುತ್ತಾನೆ. ತಿಳಿಯದಿರುವ ಗಡುಚಾದ ಕನ್ನಡಕ್ಕೆ ಹಳಗನ್ನಡವೆಂದೂ, ತಿಳಿವಂತೆ ಸುಲಭವಾಗಿರುವದೇ ಹೊಸಗನ್ನಡವೆಂದೂ ಇಂದಿಗೂ ಸಾಮಾನ್ಯ ಜನರ ತಿಳಿವಳಿಕೆಯಾಗಿದೆ.

ಈ ಎಲ್ಲ ವಿವೇಚನೆಯ ಮಥಿತಾರ್ಥವೇನೆಂದರೆ, ಕನ್ನಡ ದೇಶಿಪದಗಳು ವಿಶಿಷ್ಟ ಮಾರ್ಗದಲ್ಲಿ ಉಪಯೋಗಿಸಲ್ಪಡುತ್ತ ಬಂದಿರುವದರಿಂದ ಅವು ಕಾವ್ಯಕ್ಕೆ ಲಕ್ಷಣ ವಾದವು. ಈ ಪ್ರಾಚೀನ ಪದಪದ್ಧತಿಯೇ ಪಳಗನ್ನಡ. ಬರಬರುತ್ತ ಅವು ಜನರಿಗೆ ತಿಳಿಯದಂತಾಗಿ ಅವುಗಳ ಬದಲು ಸಂಸ್ಕೃತ ಮಿಶ್ರಿತ ಪದಪದ್ಧತಿಯು ಬಳಕೆಯಲ್ಲಿ ಬಂದಿತು. ಅದುವೆ ಆ ಕಾಲದ ಹೊಸಗನ್ನಡ.

ಸ್ವಲ್ಪದರಲ್ಲಿ ಹೇಳುವುದಾದರೆ, ಪ್ರಾಚೀನ ಮಾರ್ಗವು ಜೈನ ಕವಿಗಳದು; ನವೀನ ಮಾರ್ಗವು ಬ್ರಾಹ್ಮಣ ಕವಿಗಳದು. ಇದೇ ಆ ಕಾಲದ ಹಳಗನ್ನಡ ಹೊಸಗನ್ನಡದ ಕಲ್ಪನೆಯಾಗಿದೆ.

ಕನ್ನಡ ಪ್ರಾಚೀನ ಕವಿಗಳು ಹೇಳಿರುವ ಈ ಲಕ್ಷಣದಿಂದ ಕನ್ನಡ ಭಾಷೆಯ ಕಾಲವಿಭಾಗಮಾಡುವದಾದರೆ ಸುಮಾರು ಹನ್ನೊಂದನೆಯ ಶತಮಾನದ ವರೆಗೆ ಜೈನ ಕವಿಗಳ ಕಾಲವೆಂದೂ, ಅನಂತರ ಬ್ರಾಹ್ಮಣ ಕವಿಗಳ ಕಾಲವೆಂದೂ ಸ್ಥೂಲವಾಗಿ ಹೇಳಬಹುದು.*

———

* ಪ್ರೊಫೆಸರ್ ರಂಗನಾಥ ಮುಗಳಿ, ಎಂ.ಎ., ಬಿ.ಟಿ. ಅವರು ಈ ಲೇಖನವನ್ನು ಬರೆಯಲು ಪ್ರೋತ್ಸಾಹಿಸಿದುದಕ್ಕಾಗಿ ನಾನು ಅವರಿಗೆ ಋಣಿಯಾಗಿರುವೆನು. ಅವರ ಪ್ರೋತ್ಸಾಹವು ದೊರೆಯದಿದ್ದರೆ ನನ್ನ ವಿಚಾರಗಳು ಮೂರ್ತಿಗೊಂಡು ಪ್ರಕಾಶಕ್ಕೆ ಬರುತ್ತಿದ್ದಿಲ್ಲ.—ಕೃ. ಕ.

# ಕೊಪಣ—ಕೊಪ್ಪಳ

ದಿವಂಗತ ಶ್ರೀ॥ ನಾ. ಭಾ. ಶಾಸ್ತ್ರಿಗಳು, ಕೊಪ್ಪಳ

---

## ೧. ಸಂಶೋಧಕರ ಅಭಿಮತಗಳು

ಶ್ರೀಮನ್ನೃಪತುಂಗದೇವನು ಕನ್ನಡ ನಾಡಿನ ಎಲ್ಲೆಯನ್ನು,—

ಕಾವೇರಿಯಿಂದಮಾ ಗೋ। ದಾವರಿ ವರಮಿರ್ದ್ದ ನಾಡದಾ ಕನ್ನಡದೊಳ್।
ಭಾವಿಸಿದ ಜನಪದಂ ವಸು। ಧಾವಳಯ ವಿಲೀನ ವಿಶದ ವಿಷಯ ವಿಶೇಷಂ॥

ಎಂದು ಹೇಳಿ ಅದರೊಳಗಣ ತಿರುಳ್ಗನ್ನಡ ಪ್ರದೇಶವನ್ನು—

ಅದಱೊಳಗಂ ಕಿಸುವೊಳಲಾ। ವಿದಿತ ಮಹಾಕೊಪಣನಗರದಾ ಪುಲಿಗೆಱೆಯ
ಸದಭಿಸ್ತುತಮಪ್ಪೊಂಕುಂ। ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್।

ಎಂದು ವಿವರಿಸಿರುತ್ತಾನಷ್ಟೆ. ಈ ರೀತಿ ವಿವರಿಸಿರುವ ಸ್ಥಳಗಳಾವುವು ಎಂ... ಗೊತ್ತುಹಿಡಿಯುವುದು ಹತ್ತು ಹದಿನೈದು ವರುಷಗಳ ಹಿಂದೆ ಪಂಡಿತರಿಗೆ ಜ... ಬೇಕು. ನೃಪತುಂಗನಾಳುತ್ತಿದ್ದುದು ಮಾನ್ಯಖೇಟದಲ್ಲಿ. ಅದಿರುವುದು ... ದಲ್ಲಿ ಕಲ್ಯಾಣದ ಬಳಿ. ಮೇಲೆ ಹೇಳಿದವುಗಳಲ್ಲಿ 'ಪುಲಿಗೆಱೆ'ಯು ಪ್ರಸಿದ್ಧ... ಅದೀಗ 'ಲಕ್ಷ್ಮೇಶ್ವರ' ಎಂಬ ಹೆಸರಿನಿಂದ ಧಾರವಾಡ ಜಿಲ್ಲೆಯಲ್ಲಿದೆ. '... ಎಂಬುದು ಬೆಳಗಾವಿಯ ಜಿಲ್ಲೆಯಲ್ಲೀಗ 'ಒಕ್ಕುಂದ' ಎಂದು ಸ್ವಲ್ಪ ವ್ಯತ್ಯಸ್ತ... ಹೆಚ್ಚು ಕಡಮೆ ಅದೇ ಹೆಸರಿನಿಂದಿದೆ. ಇವು ತಿರುಳ್ಗನ್ನಡ ನಾಡಿನ ... ಗಡಿಗಳು.

ಮಾನುಷೀ ಸ್ವಭಾವವು ತನ್ನದನ್ನೇ ಶ್ರೇಷ್ಠವೆಂದೆಂದುಕೊಳ್ಳುವುದು ... ವಾದ ರೀತಿ. ಇದೇ ನೋಟದಿಂದ ವಿಮರ್ಶಿಸಿ ನೃಪತುಂಗನು ತನ್ನ ಮಾ... ವನ್ನು 'ತಿರುಳ್ಗನ್ನಡದ ನಾಡು' ಎಂದು ಗೌರವಾರ್ಥದಲ್ಲಿ ಹೇಳಿರಬೇ... ಅವನು ಹೇಳಿದುದು ಮಾನ್ಯಖೇಟವನ್ನು ಮಧ್ಯವನ್ನಾಗಿ ಮಾಡಿ. ಅದ... 'ಪುಲಿಗೆಱೆ,' 'ಒಂಕುಂದ'ಗಳು ತೆಂಕಣದ ಗಡಿಯ ಕಲ್ಲುಗಳು. ಉತ್ತರದ ಎ... ಗಳಾದ 'ಕೊಪಣ,' 'ಕಿಸುವೊಳಲು'ಗಳು ಮಾನ್ಯಖೇಟದ ಉತ್ತರಕ್ಕೆ ಗೋದಾ... ನೆರೆಯಲ್ಲಿರಬಹುದು ಎಂದು ಹತ್ತು ಹನ್ನೆರಡು ವರುಷಗಳ ಹಿಂದೆ ಪಂಡಿತ... ವಿದ್ದಿತು. ಇದೇ ಊಹೆಗನುಸಾರವಾಗಿ, ೧೯೧೮ನೆಯ ಮೇ ತಿಂಗಳಲ್ಲಿ ಧಾ... ದಲ್ಲಿ ನಡೆದ ನಾಲ್ಕನೆಯ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಮಾನ್ಯ ಅಧ್ಯಕ್ಷ... ದಿವಂಗತ ಶ್ರೀ॥ ಆರ್. ನರಸಿಂಹಾಚಾರ್ಯ, ಎಂ.ಎ., ಎಂ.ಆರ್.ಎ.ಎಸ್. ... ತಮ್ಮ ಭಾಷಣದಲ್ಲಿ:—[೧] "ನೃಪತುಂಗನು ಕಿಸುವೊಳಲು, ಕೊಪಣನಗರ, ... ಒಂಕುಂದ ಇವುಗಳ ಮಧ್ಯಪ್ರದೇಶವೇ ತಿರುಳ್ಗನ್ನಡನಾಡೆಂದು ಹೇ...

---

೧ 'ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ,' ಸಂಪುಟ ೩, ಪುಟ ೧೨೮.

ಆದಿಪಂಪನು [೨]"ಪುಲಿಗೆಱೆಯ ತಿರುಳ್ಗನ್ನಡದೊಳ್" ತನ್ನ ಗ್ರಂಥವನ್ನು ರಚಿಸುವುದಾಗಿ ಹೇಳುತ್ತಾನೆ. ಆದುದರಿಂದ ಧಾರವಾಡ ಜಿಲ್ಲೆಯ ಪುಲಿಗೆಱೆಯ ಕನ್ನಡವು ಪೂರ್ವದಲ್ಲಿ ಕವಿಗಳಿಗೆ ಆದರ್ಶಪ್ರಾಯವಿದ್ದಂತೆ ತಿಳಿಯುತ್ತದೆ. ಇದು ಈ ಪ್ರಾಂತದವರಿಗೆ ನಿಜವಾಗಿಯೂ ಹೆಮ್ಮೆಯನ್ನುಂಟುಮಾಡಬೇಕಾದ ವಿಷಯ" ಎಂದೂ, [೩]"ಕರ್ಣಾಟಕ ಕವಿತೆಯು ರಾಷ್ಟ್ರಕೂಟರ ಕಾಲದಲ್ಲಿ ಗೋದಾವರೀ ತೀರದಲ್ಲಿ ಕಿಸುವೊಳಲೇ ಮೊದಲಾದ ಸ್ಥಳಗಳಲ್ಲಿ ಉತ್ತಮಸ್ಥಿತಿಯಲ್ಲಿತ್ತು; ಹೀಗೆ ಕಿಸುವೊಳಲೇ ಮೊದಲಾದುವು ಗೋದಾವರಿಯ ನೆರೆಯಲ್ಲಿರಬೇಕು" ಎಂದೂ ಅಭಿಪ್ರಾಯಪಟ್ಟಿದ್ದಾರೆ. ಆದರೆ ಇತಿಹಾಸ ಲೋಕದ ವಿಶೇಷ ಶೋಧನೆಯಿಂದ ಅಲ್ಲಿಂದೀಚೆ [೪]೧೯೧೬ರಲ್ಲಿಯೂ, ಹಾಗೂ ೧೯೨೩ರಲ್ಲಿ ಪುನರ್ಮುದ್ರಿತವಾದ ಶ್ರವಣಬೆಳ್ಗೊಳದ ಶಾಸನಗಳ ಇಂಗ್ಲಿಷ್ ಭಾಷಾಂತರದ ೫೫ನೆಯ ಪುಟದ ಆದಿ ಬರೆಹದಲ್ಲಿ [೫]"ನಿಜಾಂ ಸಂಸ್ಥಾನದ ನೈಋತ್ಯದಲ್ಲಿರುವ ಕೊಪ್ಪಳ ಜೈನರ ಪುಣ್ಯಕ್ಷೇತ್ರವೆಂದೂ, ಈಗಿನ ಕೊಪ್ಪಳವೇ ಪೂರ್ವದ ಕೊಪಣವಾಗಿರಬೇಕು" ಎಂದೂ ಅಭಿಪ್ರಾಯಪಟ್ಟಿದ್ದಾರೆ.

ಸದ್ಯದಲ್ಲಿ ಗೊತ್ತಾದಂತೆ 'ಒಂಕುಂದ' ಬೆಳಗಾಂ ಜಿಲ್ಲೆಯಲ್ಲಿದೆ; 'ಕೊಪಣನಗರ' ಧಾರವಾಡ ಜಿಲ್ಲೆಗೆ ಹೊಂದಿ ರಾಯಚೂರ ಜಿಲ್ಲೆಯ ನೈಋತ್ಯದಲ್ಲಿದೆ; ಇದು ನಿಜಾಂ ಸಂಸ್ಥಾನದಲ್ಲಿ ಗದುಗಿನಿಂದ ಬಳ್ಳಾರಿಗೆ ಹೋಗುವ ಸದರನ್ ಮರಾಠಾ ರೈಲ್ವೆಯ ಸ್ವಾಲಿನಲ್ಲಿಯದೊಂದು 'ಸ್ಟೇಷನ್ನು'. 'ಪುಲಿಗೆಱೆ' ಧಾರವಾಡ ಜಿಲ್ಲೆಯಲ್ಲಿದೆ; 'ಕಿಸುವೊಳಲು' ಬಿಜಾಪುರ ಜಿಲ್ಲೆಯಲ್ಲಿಯ 'ಪಟ್ಟದಕಲ್ಲು' ಎಂಬುದು. ಈ ನಾಲ್ಕು ಊರುಗಳ ನಡುವಣ ನಾಡೆಂದರೆ ಅತಿ ಸಂಕ್ಷೇಪವೂ ಮಾನ್ಯಖೇಟವನ್ನು ಹೊರತಾದುದೂ ಆದ ನಾಡಾಯ್ತು ಎಂಬ ಅನುಮಾನದಿಂದ ಹಿಂದಕ್ಕೆ ಅವರ ತರ್ಕವು ಈ ರೀತಿಯಾಗಿರಬಹುದು.

೧೮೯೮ನೆಯ ಆಗಸ್ಟ ತಿಂಗಳಲ್ಲಿ ಬರೆದ 'ಕವಿರಾಜಮಾರ್ಗ'ದ ಮುನ್ನುಡಿಯಲ್ಲಿ (ಪುಟ ೧೫) ಶ್ರೀಮಾನ್ ಕೆ. ಬಿ. ಪಾಠಕರವರು 'ಕೊಪಣ' ಎಂಬುವುದೂ, ಗದಗಿಗೂ ಬಳ್ಳಾರಿಗೂ ಮಧ್ಯೆ ಇರುವ ರೈಲ್ವೆ ಸ್ಟೇಷನ್ ಆಗಿರುವ 'ಕೊಪ್ಪಳ' ಎಂಬುವುದೂ ಒಂದೇ ಎಂದು ಬರೆದಿದ್ದಾರೆ. ಆದರೆ ಇವರ ಈ ಊಹೆಗೆ ಕಾರಣವೇನೋ ತಿಳಿಯದು.

ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಪಾಲೋಟಗಿಯಲ್ಲಿಯ ಕಾಲನಿರ್ದೇಶವಿಲ್ಲದ ಒಂದು ಶಾಸನದಲ್ಲಿ [೬]ಕಜ್ಜುಗ ಎಂಬವನು 'ಕೊಪಣಪುರವರಾಧೀಶ್ವರ'ನೆಂದು ಉಲ್ಲೇಖವಿದೆ. ಇವನು ಶಿಲಾಹಾರ ಮನೆತನದವನು. ಇದಲ್ಲದೆ ಅದೇ ಊರಲ್ಲಿಯ ಶಿಲಾಹಾರ ಮನೆತನದ ಮಹಾಮಂಡಳೇಶ್ವರ ಗೋವಣರಸನ ಶಾಸನ (ಕಾಲ[೬] ಸು.

---

೨ 'ವಿಕ್ರಮಾರ್ಜುನ ವಿಜಯ,' ೧೪–೫೮.

೩ 'ಕರ್ಣಾಟಕ ಕವಿಚರಿತೆ,' ಸಂಪುಟ ೧, ಪ್ರಥಮ ಮುದ್ರಣದ ಅವತರಣಿಕೆ, ಪುಟ ೧೩.

೪ ಮೈಸೂರು ಶಾಸನ ಇಲಾಖೆಯ ೧೯೧೬ನೆಯ ವರ್ಷದ ರಿಪೋರ್ಟು, ಪುಟ ೮೩.

೫ 'ಎಪಿಗ್ರಾಫಿಯಾ ಕರ್ಣಾಟಿಕಾ,' ಪುಟ ೫೩, ನೋಟ ೧; ಪುಟ ೫೫, ನೋಟ ೩.

೬ 'ಎಪಿಗ್ರಾಫಿಯಾ ಇಂಡಿಕಾ,' ಸಂ. ೪, ನಂ. ೬, ಪುಟ ೫೫: ಇವುಗಳಲ್ಲಿ ಮೊದಲಿನದರ ಕಾಲವನ್ನು ಕ್ರಿ. ವ. ಸು. ೯೪೫ ಎಂದೂ, ಎರಡನೆಯದನ್ನು ೧೧ನೆಯ ಶತಕವೆಂದೂ ಡಾ॥ ಫ್ಲೀಟರವರು ಅನುಮಾನಿಸಿದ್ದಾರೆ.

ಕ್ರಿ. ಶ. ೧೧ನೆಯ ಶತಮಾನ) ದಲ್ಲಿಯೂ ಜೀಮೂತವಾಹನಾನ್ವಯ ಸು
ಗರುಡಧ್ವಜರಾದ ಶಿಲಾಹಾರರು 'ಕೊಪಣಪುರವರಾಧೀಶ್ವರ'ರೆಂದೇ ಉಲ್ಲೇ
ಇಲ್ಲಿಯ 'ಕೊಪಣ'ದ ಸ್ಥಳನಿರ್ದೇಶದ ವಿಷಯದಲ್ಲಿ ಈ ಶಾಸನಗಳ ಸಂಪಾದ
ಪ್ರೊಫೆಸರ್ ಕೀಲ್ ಹಾರ್ನ್ ಮತ್ತು ಶ್ರೀಮಾನ್ ಕೃಷ್ಣಶಾಸ್ತ್ರಿಗಳವರು ಏ
ವಾಗಿ ೭'ಕೊಪಣನಗರ' ಅಥವಾ ಮೇಲಿನ ಶಾಸನಗಳಲ್ಲಿದ್ದಂತೆ 'ಕುಪಣ
ಎಂಬುದೂ, ಈಗಿನ ನಿಜಾಂ ಪ್ರಾಂತದಲ್ಲಿಯ ಗದುಗಿನಿಂದ ಬಳ್ಳಾರಿಗೆ ಹೋ
ಸದರನ್ ಮರಾಠಾ ರೈಲ್ವೆ ಮಾರ್ಗದಲ್ಲಿರುವ ಕೊಪ್ಪಳವೂ ಒಂದೇ ಎಂದು ಒಪ್ಪಿ
ಇದಲ್ಲದೆ ಕಲುಬುರ್ಗಿ ಜಿಲ್ಲೆಯಲ್ಲಿಯ ಚಿಸುವಳ್ಳಿ, ಬಂಕೂರ ಮೊದಲಾದ ಕಡೆಗಳ
ಕೆಲವು ಅಪ್ರಕಾಶಿತ ಶಾಸನಗಳಲ್ಲಿಯೂ 'ಕೊಪಣಪುರವರಾಧೀಶ್ವರ ಶಿಲಾಹಾ
ಉಲ್ಲೇಖವಿದೆ. ೯ಕೆಲವರು ಇದರಿಂದ ಕೊಪಣವು ಕೆಲಕಾಲ (ಸು. ೧೧, ೧
ಶತಮಾನದಲ್ಲಿ) ಶಿಲಾಹಾರ ಮನೆತನದ ನೆಲೆವೀಡಾಗಿರಬೇಕೆಂದು ಅನುಮಾನಿ
ಇದು ಸರಿಯಲ್ಲ. ಕೊಪಣವು ಪವಿತ್ರತಮವಾದ ಪುಣ್ಯಕ್ಷೇತ್ರವು. ಅದು ಶಿಲಾ
ಆಳಿಕೆಗೆ ಒಳಪಟ್ಟಿರಬಹುದು. ಆದುದರಿಂದ ಗೌರವಕ್ಕಾಗಿ, ಹೆಮ್ಮೆ
ಸನ್ಮಾನಕ್ಕಾಗಿ, ಬಿರುದಿನಂತೆ ಹಾಗೆ ಉಪಯೋಗಿಸಿದ್ದಾಗಿದೆ. ಇದೇ ರೀ
ಕಲಚೂರ್ಯರನ್ನು 'ಕಾಳಾಂಜರಪುರವರಾಧೀಶ್ವರರು' ಎಂದು ಕರೆ
ವಾಡಿಕೆಯುಂಟು.

ಬರಬರುತ್ತಾ ಇತಿಹಾಸ ಲೋಕದಲ್ಲಿಯ ಒಂದೊಂದೇ ಕಲ್ಲುಗಳು
ಬೆಳಕಿಗೆ ಬರತೊಡಗಿದವು. ಒಂದರಲ್ಲಿ ಪಟ್ಟದಕಲ್ಲು ಕಿಸುವೊಳಲೆಂದು ಗೊತ್ತಾ
ಕಿಸುಕಾಡ ನಾಡ ಮುಖ್ಯ ಪಟ್ಟಣವು ಕಿಸುವೊಬಲು. ಕಿಸುವೊಬಲ ಸ
ಕಿಸುಕಾಡು ಅಥವಾ ಕಿಸುಕಾಡ ನಾಡು ಎಂದು ಹೆಸರು. ೯ನಮಗೆ ದೊ
ಚಾಲುಕ್ಯ ಚಕ್ರವರ್ತಿ ಶ್ರೀ ವಿನಯಾದಿತ್ಯ ಸತ್ಯಾಶ್ರಯವಲ್ಲಭ ನರೇಂದ್ರನು
ತಾಮ್ರ ಶಾಸನದಲ್ಲಿ:—

೧೦ "....मलापहारी नदीयु(?)त्तरतटे श्री रक्तापुर राजधानेन पट्टवर्धोत्सव संपाद
कुरुन्दमुपागतेन पाल्ययशोवृध्दये....सोलहोत्तर पंचशतीषु सकवर्ष प्रतीतीषु आ
संवत्सर प्रवर्तमाने वैशाख पोर्णमास्यो (?) बृहस्पतोवारे व्यतीपात श्रीमहाकूट दिव्
तीर्थस्नान महादान....षट्ठु (?) कर्म्मनियत कम्मेयान्वय काश्यपगोत्रचूडामणि
श्रीभास्करचौवेर भट्टाय श्रीकिसुक्काड्ड सप्तति ग्रामाभ्यन्तरे श्रीनिड्डुगुन्दिनमग्राम

೭–೮ 'ಎಪಿಗ್ರಾಫಿಯಾ ಇಂಡಿಕಾ,' ಸಂ. ೪, ನಂ. ೬, ಪುಟ ೫೯.

೯ ಶ್ರೀ ಮಲ್ಲಪ್ಪಾ ಗುರಪ್ಪಾ ಹಳ್ಳೀ ಹಾಳನೋಣಿ ಇಟಗಿ ತಾ॥ ಎಲ್ಲಬುರ್ಗಿ ಜಿಲ್ಲಾ ಕೊಪ್ಪ
ಸುಮಾರು ೪–೮ ವರ್ಷಗಳ ಕೆಳಗೆ ಹಾಳೂರ ಸ್ಥಳವನ್ನು ಅಗಿಯುವಾಗ ದೊರೆತಿತ್ತಂತೆ.
ಅವನಲ್ಲಿಯೇ ಇದೆ. ಇದನ್ನು ನಮಗೆ ನೋಡಲು ದೊರಕಿಸಿಕೊಟ್ಟದ್ದಕ್ಕಾಗಿ ವೇ॥ ಕೊ
ಇವರನ್ನು ಇಲ್ಲಿ ನೆನೆಯದಿರಲಾರೆವು.

೧೦ ".... ಮಲಾಪಹಾರೀ ನದೀಯು (?) ತ್ತರತಟೇ ಶ್ರೀ ರಕ್ತಾಪುರ ರಾಜಧಾನೇ
ವರ್ಧೋತ್ಸವ ಸಂಪಾದನಾನ್ವಿತ ಕುರುನ್ದಮುಪಾಗತೇನ ಪಾಲ್ಯಯಶೋವೃದ್ಧಯೇ.... ಸೋಲ
ಪಂಚಶತೀಷು ಸಕವರ್ಷ ಪ್ರತೀತೀಷು ಆನಂದ ಸಂವತ್ಸರ ಪ್ರವರ್ತಮಾನೇ ವೈಶಾಖ ಪೌರ್ಣ
(?) ಬೃಹಸ್ಪತೋ ವಾರೇ ವ್ಯತೀಪಾತ ಶ್ರೀ ಮಹಾಕೂಟ ದಿವ್ಯ ಮಹಾ ತೀರ್ಥಸ್ನಾನ ಮಹಾದಾ
ಷಟು (?) ಕರ್ಮ್ಮನಿಯುತ ಕಮ್ಮೆಯಾನ್ವಯ ಕಾಶ್ಯಪಗೋತ್ರ ಚೂಡಾಮಣಿ.... ಶ್ರೀ ಭಾಸ್ಕ

ग्राम सीमान्तर श्रीकुप्पेनामग्राम....कोडगनूरुनामग्राम....व्रिद्धहोळलुनामग्राम....करिमिडिनामग्राम....पलितपाषाणनामग्राम....जक्किलि....संकलूरुनामग्राम...."

ಮೊದಲಾದ ಸೀಮಾಂತರಗಳು ಹೇಳಲ್ಪಟ್ಟಿವೆ. ಮೇಲೆ ಹೇಳಿದ ಗ್ರಾಮ ಗಳೆಲ್ಲವೂ "ಕಿಸುಕರ್ಕ್ಕಾಡು ಸಪ್ತತಿ ಗ್ರಾಮಾಭ್ಯಂತರೇ" ಎಂದಿರುವುದರಿಂದ, 'ಕಿಸುಕಾಡ ನಾಡಿ'ನೊಳಗಣವು. ಸಂಸ್ಕೃತ ಶಾಸನಕಾರನು ಕನ್ನಡದ ಊರುಗಳ ಹೆಸರನ್ನು ಅನ್ವರ್ಥಕವಾಗಿ ಸಂಸ್ಕೃತಕ್ಕೆ ಪರಿವರ್ತಿಸಿಕೊಂಡಿರುವನು. ಉದಾಹರ ಣಾರ್ಥ: ವೃದ್ಧ = ಮುದು + ಹೊಳಲು (ಮುಧೋಳ); ಪಲಿತ = ನೆರೆ, ಪಾಷಾಣ = ಕಲ್ಲು: ನೆರೇಗಲ್ಲು; ಇದೇ ತೆರನಾಗಿ 'ಕಿಸುವೊಳಲು' ಎಂಬುದನ್ನು ಕಿಸು = ರಕ್ತ, ಪೊಳಲ್ = ಪುರ: ಹೀಗೆ ರಕ್ತಪುರವೆಂದು ಸಂಸ್ಕೃತಿಸಿರಬೇಕು. ಈಗಿನ ಪಟ್ಟದಕಲ್ಲು ಮಲಾಪಹಾರೀ ನದಿಯ ಉತ್ತರ ತಟದಲ್ಲಿದೆ. ಈ ಊರಿನ ಸುತ್ತುಮುತ್ತಲಿರುವ ಮೇಲೆ ಹೇಳಿದ ಗ್ರಾಮಗಳಿರುವುದೇ 'ಕಿಸುಕಾಡು' ಅಥವಾ 'ಕಿಸುವೊಳಲ' ನಾಡು.

ಹೀಗೆ ಪಟ್ಟದಕಲ್ಲು, ಲಕ್ಷ್ಮೇಶ್ವರ, ಒಕ್ಕುಂದ—ಇವುಗಳಲ್ಲಿಯ ಸ್ಥಾನಿಕ ಹಾಗೂ ಅನ್ಯ ಆಧಾರಗಳಿಂದ, ಅವು ಕ್ರಮವಾಗಿ 'ಕಿಸವೊಳಲು,' 'ಪುರಿಗೆಱೆ,' 'ಒಂಕುಂದ'ಗಳೆಂದು ತಿಳಿದುಬಂದಿದೆ. ಇನ್ನುಳಿದ 'ಕೊಪಣನಗರ' ಅಥವಾ 'ಕುಪಣನಗರ' ಎಂಬುದು ಯಾವುದೆಂಬ ಬಗೆಗೆ ಕೆಲವಿದ್ವಾಂಸರ ಅಭಿಮತಗಳನ್ನು ಹಿಂದೆಯೇ ಹೇಳಿದೆ. ಅವು ಬರಿಯ ಊಹೆಗಳು.

ಕರ್ಣಾಟಕ ಇತಿಹಾಸ ಸಂಶೋಧನೆಯಲ್ಲಿ ನುರಿತ ನನ್ನ ಮಿತ್ರರಾದ ಶ್ರೀಮಾನ್ ನಾರಾಯಣ ಶ್ರೀನಿವಾಸ ರಾಜಪುರೋಹಿತರು ಹಿಂದಕ್ಕೆ ೧೯೩೩ರಲ್ಲಿ ಇಲ್ಲಿಗೆ ಬಂದಿದ್ದಾಗ:—"ಏನು, ನಿಮ್ಮೂರಿಗೆ ಕೊಪಣಾ ಎಂದು ಕರೆಯುವಿರಿ. ಇಲ್ಲಿ ಒಂದಾದರೂ ಪ್ರಾಚೀನ ಕುರುಹುಗಳಿಲ್ಲವಲ್ಲಾ" ಎಂದರು. ಅವರು 'ಕೊಪಣ'ವು ಗೋದಾವರೀ ತೀರದಲ್ಲಿರಬೇಕೆಂಬಾಶಯದಿಂದ—'ಈ ಸಲ ಅಲ್ಲಿ ತಿರುಗಾಡಿ ನೋಡಿ ಕೊಂಡು ಬರುವೆನು' ಎಂದು ಹೇಳಿ, 'ಅಹಮ್ಮದನಗರ' ಜಿಲ್ಲೆಯಲ್ಲಿರುವ 'ಕೊಪರ ಗಾಂವ' ಮೊದಲಾದುವನ್ನು ಸಂದರ್ಶಿಸಿ ಸಂಶೋಧಿಸಿ ಬಂದರು. ಆದರೂ ಅವರಿಗೆ ಅಲ್ಲಿ 'ಕೊಪಣದ' ಉಲ್ಲೇಖವೆಲ್ಲಿಯೂ ಸಿಕ್ಕಲಿಲ್ಲವೇನೊ! ಆಮೇಲೆ ಗಂಗವಾಡಿ ತೊಂಬತ್ತಾರು ಸಾಸಿರ ಸೀಮೆಗೆ ಒಡೆಯನಾಗಿದ್ದ ರಕ್ಕಸಗಂಗ ರಾಚಮಲ್ಲನ (ಸುಮಾರು ಕ್ರಿ. ಶ. ೯೭೭–೯೮೪) ಸೇನಾಪತಿಯೂ, ಮಂತ್ರಿಯೂ ಆಗಿದ್ದ ಚಾವುಂಡರಾಯನ 'ಆದಿ ಪುರಾಣ'ದಲ್ಲಿಯ—

ಅಸಿಧಾರಾವ್ರತದಿಂದೆ ಪೆಂಪೆಸೆವಿನಂ ಮುಳ್ಗುಂದದೊಳ್ ಮೊನ್ನೆ ಸಂ
ನ್ಯಸನಕ್ಕೈದೆ ನಿವೃತ್ತಿಗೈದು ಕೊಪಣಾದ್ರೀಂದ್ರಕ್ಕೆ ವಂದಾಗಮೋ।
ಕ್ತ ಸಮಾಧಾನ ವಿಧಾನದಿಂ ಮುಡಿಪಿ ಮುಕ್ತಿಸ್ಥಾನಮಂ ಮುಂಚೆ ಸಾ
ಧಿಸಿಕೊಂಡೊಳ್ಪು ಕುಮಾರಸೇನ ಮುನಿಪಂಗಕ್ಕುಂ ಪೆರರ್ಗಕ್ಕುಮೇ॥

('ಚಾವುಂಡರಾಯ ಪುರಾಣ,' ಪು. ३; ಪ. ೧೫)

ಭಟ್ಟಾರಯ ಶ್ರೀ ಕಿಸುಕರ್ಕ್ಕಾಡು ಸಪ್ತತಿ ಗ್ರಾಮಾಭ್ಯನ್ತರೇ ಶ್ರೀ ನಿಡುಗುನ್ದಿನಾಮಗ್ರಾಮ ತದು (?) ಗ್ರಾಮ ಸೀಮಾನ್ತರ ಶ್ರೀ ಕುಪ್ಪೇನಾಮಗ್ರಾಮ .... ಕೋಡಗನೂರುನಾಮಗ್ರಾಮ .... ವ್ರಿದ್ಧಹೊಳಲು ನಾಮಗ್ರಾಮ .... ಕರಿಮಿಡಿನಾಮಗ್ರಾಮ .... ಪಲಿತಪಾಷಾಣನಾಮಗ್ರಾಮ .... ಜಕ್ಕಿಲಿ .... ಸಂಕಲೂರುನಾಮಗ್ರಾಮ ...."

ಎಂಬ ಪದ್ಯವೊಂದನ್ನು ನೋಡಿ, 'ಕೊಪಣ'ಕ್ಕೆ ಅದ್ರಿಯೊಂದಿರಬೇಕೆಂ ಊಹಿಸಿಯೂ, ಆಮೇಲೆ ಕೊಪ್ಪಳಕ್ಕೊಮ್ಮೆ ಬಂದಿದ್ದಾಗ, ಈ ಊರಲ್ಲಿ ೭೭೨ ಬಸದಿಗಳಿದ್ದವೆಂದು ಸಪ್ಪಿಮ್ಮಿಂದ ಕೇಳಿಯೂ, ಶಿಕಾರಿಪುರ ಶಾಸನ (ಕ್ರಿ. ಶ. ೧೦೦೫) ರಲ್ಲಿಯ,

ಊರೊಳ್ ತಪ್ಪದೆ ಬಸದಿಯ । ನೋರಂತಿರೆ ಮಾಡಿ ಬೆಳಗವತ್ತಿಯ ನಾಡಂ
ಧಾರಿಣಿಗೆ ನೆಗಟ್ದ ಕೊಪಣ । ಕ್ಕೋರಗೆ ಮಾಡಿದಸುದಾರ ನಿಧಿಯೇಚರಸಂ॥

ಎಂಬ ಪದ್ಯದಲ್ಲಿ ಧ್ವನಿತವಾದ ಕೊಪಣದ ಬಸದಿಯ ಬಾಹುಳ್ಯತೆಯಿಂದ ಊಹಿಸಿ ಕೊಪ್ಪಳವೇ ಕೊಪಣವೆಂದು "ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ ಸಂಪುಟ ೧೪, ಸಂಚಿಕೆ ೨, ಪುಟ ೧೨೪ರಲ್ಲಿ 'ತಿರುಳ್‌ಗನ್ನಡ ನಾಡು ಎಂಬುದೊಂದು ಲೇಖನದಲ್ಲಿ ಬರೆದಿದ್ದಾರೆ. ಆದರೆ ನೃಪತುಂಗದೇವನು ಹೇಳಿದ ಮೊದಲಾದ ಸ್ಥಳಗಳನ್ನು 'ತಿರುಳ್ಗನ್ನಡ ನಾಡಿ'ನಲ್ಲಿಯೇ ಹೇಳಿರಬೇಕೆಂಬ ಮೂಲವಾದ ಅಂಧಪರಂಪರಾಗತ ಊಹೆಯು ಇವರನ್ನೂ ಬಿಟ್ಟಿಲ್ಲ. ಆ ಲೇಖನದಲ್ಲಿ ಸಪ್ರಮಾಣವಾಗಿ (?) ಸಮರ್ಥಿಸಲೆತ್ನಿಸಿದ್ದಾರೆ.

ಕೊಪಣದಲ್ಲಿ 'ಅದ್ರೀಂದ್ರ'ವಿರಬೇಕೆಂಬ ಈ ಮೇಲಿನ ಆಧಾರಕ್ಕೆ ಪುಷ್ಟಿ ರನ್ನನ (ಕ್ರಿ. ವ. ಸು. ೯೯೩) 'ಅಜಿತನಾಥ ಪುರಾಣ'ದಲ್ಲಿ—

ಬಿಳಿಯರಳೆಯಂತೆ ಗಂಗಾ
ಜಳದಂತೆಸೆವಜಿತಸೇನ ಮುನಿಪತಿಯ ಗುಣಾ ।
ವಳಿಯಂತೆ ನೆಗಟ್ದ ಕೊಪಣಾ
ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ ॥

(ಸಂಧಿ ೧೨, ಪ. ೬)

ಈ ಎಲ್ಲ ಮೇಲಿನ ವಿವೇಚನೆಯಿಂದ ಕೊಪ್ಪಳವೇ 'ಕೊಪಣ'ವೆಂದು ರೆಲ್ಲರೂ ಅಭಿಮತಿಸಿದಂತೆ ನಿಷ್ಪನ್ನವಾಗುತ್ತದೆ. ಇದಲ್ಲದೆ, ಮುಂದೆ ವಿವೇಚಿಸುವ ಸ್ಥಾನಿಕ ಚಂದ್ರಬಂಡಿಯದೊಂದು ಶಾಸನದಿಂದ ಹಾಗೂ ವೇಂಕಟರಮಣನ ಗುಡಿ ಶಾಸನದಿಂದ ಇದು 'ಕೊಪಣ'ವೆಂದೂ, ಚಂದ್ರಬಂಡಿಯ ಮತ್ತೊಂದು ಶಾಸನ ಹಾಗೂ ನೇಮಿನಾಥ ಜಿನಾಲಯದಲ್ಲಿದ್ದ ಚತುರ್ವಿಂಶತಿ ತೀರ್ಥಂಕರ ಮೂರ್ತಿ ಪೀಠಸ್ಥವಾದ ಶಾಸನದಿಂದ ಇದು ತೀರ್ಥವೆಂದೂ ತಿಳಿಯುಬರುತ್ತದೆ.

## ೨. ಪ್ರಾಚೀನತೆ

ಇನ್ನು ಈ ಸ್ಥಳದ ಪ್ರಾಚೀನತೆಯನ್ನು ಕುರಿತ ವಿಚಾರವನ್ನು ತೆಗೆದುಕೊಂಡರೆ ಅದು ಕ್ರಿಸ್ತಪೂರ್ವ ೩ನೆಯ ಶತಮಾನದಾಚೆ ಹೋಗಿ ನಿಲ್ಲಬೇಕಾಗುತ್ತದೆ. ಕೊಪ್ಪಳದ ಪೂರ್ವ ಪಶ್ಚಿಮ ಮೇರೆಗಳಂತಿರುವ, ಗವಿಮಠದ, ಹಾಗೂ ಪಾಲ್ಕಿಗುಂಡಿನ ಬೆಟ್ಟಗಳಲ್ಲಿರುವ ಅಶೋಕ ಚಕ್ರವರ್ತಿಯ ಧರ್ಮಶಾಸನಗಳೇ ಇದಕ್ಕೆ ಸಾಕ್ಷಿ. ಈ ನಿಜಾಂ ಕರ್ನಾಟಕದಲ್ಲಿ ಈ ಮೊದಲೇ ಸಂಶೋಧಿತವಾದ ಮಸ್ಕಿ ಈ ರಾಜಲಿಪಿಗೆ, ಈ ಕೊಪಣದಲ್ಲಿಯ ಶಾಸನಗಳು ಬರಿಯ ೫೪ ಮೈಲು.

೧೧ 'ಎಪಿಗ್ರಾಫಿಯಾ ಕರ್ನಾಟಿಕಾ,' ಸಂ. ೮, ಭಾಗ ೧, ಪುಟ ೩೧೭.

ಇವುಗಳ ಸಂಶೋಧನಕ್ಕಿಂತ, ಎರಡು ವರ್ಷಗಳ ಪೂರ್ವದಲ್ಲಿ (೧೯೨೯) ಕಾಣಿಸಿಕೊಂಡ ಎರ್ರಗುರಿ ಎಂಬಲ್ಲಿಯವುಗಳಿಗೆ ಇವು ೯೪ ಮೈಲು ಅಂತರದಲ್ಲಿವೆ. ಹೀಗೆ ಉತ್ತರದಲ್ಲಿ (ಕೊಂಚ ಈಶಾನ್ಯವಾಗಿ) ಮಸ್ಕಿ; ಪೂರ್ವದಲ್ಲಿ ಎರ್ರಗುಡಿ; ಹಾಗೂ ದಕ್ಷಿಣದಲ್ಲಿ ಶಿದ್ದಾಪುರ (೬೦ ಮೈಲು); ಆದರೆ ಇಲ್ಲಿಯ ಶಾಸನಕ್ಕೆ ಅಥವಾ ಮಸ್ಕಿ, ಶಿದ್ದಾಪುರ ಇವೆಲ್ಲವುಗಳಿಗೆ ಪಶ್ಚಿಮವಾಗಿ ಇವನ ಶಾಸನಗಳಿಲ್ಲದುದರಿಂದ ದಕ್ಷಿಣ ಭಾರತದಲ್ಲಿಯ ಈ ಚಕ್ರವರ್ತಿಯ ರಾಜ್ಯದ ಎಲ್ಲೆಯನ್ನು ಇವುಗಳಮೇಲಿಂದ ಕಂಡುಹಿಡಿಯ ಬಹುದಾಗಿದೆ. ಇಲ್ಲಿಯ ಗವಿಮಠದಲ್ಲಿಯ ಶಾಸನವು ಸಂಪೂರ್ಣವಾಗಿ ದೊರೆತಿದ್ದರೂ, ಅದರಲ್ಲಿ ಈ ಪ್ರಾಂತದ, ಸ್ಥಳದ ಹಾಗೂ ಆ ರಾಜನ ಧರ್ಮೋಪದೇಶಕನ ಹೆಸರೂ ಉಲ್ಲಿಖಿತಗಳಾಗಿದ್ದರೆ ಈ ಪ್ರದೇಶದ ಐತಿಹಾಸಿಕ ಮಹತ್ವವು ಇನ್ನೂ ಹೆಚ್ಚು ಪ್ರಕಾಶ ಮಯವಾಗಿ ಕಾಣುತ್ತಿತ್ತು.

ಈ ಊರಿನ ಪಶ್ಚಿಮ ದಿಕ್ಕಿನ ಅಶೋಕ ಶಾಸನವಿರುವ ಪಾಲ್ಕೀಗುಂಡಿನ ಬೆಟ್ಟದಿಂದ ಪಶ್ಚಿಮಕ್ಕೆ ಇದೇ ಪರ್ವತಾವಳಿಯ ಮತ್ತೊಂದು ಸಾಲು ದಕ್ಷಿಣಕ್ಕೆ ಹಬ್ಬುತ್ತಹೋಗಿ ಅರ್ಧಚಂದ್ರಾಕಾರವಾಗಿ ಉತ್ತರಕ್ಕಿಳಿದುಬಂದಿದೆ. ಇದೇ ಇಂದ್ರಕೀಲ ಪರ್ವತವೆಂದು ಇಲ್ಲಿಯ ವೃದ್ಧ ಜನರು ಹೇಳುವರು; ಇಷ್ಟೇ ಅಲ್ಲ, ಅರ್ಜುನನು ಪಾಶುಪತಾಸ್ತ್ರ ಸಂಪಾದನೆಗಾಗಿ ತಪಗೈದ ಭಾರತದಲ್ಲಿನ ಆಖ್ಯಾನ ವನ್ನು ಹೇಳಿ ಅರ್ಜುನನ ಗುಂಡು ಎಂದರೆ ಅವನು ಅದರಮೇಲೆ ಕಾಲ ಹೆಬ್ಬೆಟ್ಟು ಊರಿ ತಪಸ್ಸು ಮಾಡಿದನೆಂದು ಒಂದು ಗುರುತನ್ನು ತೋರಿಸುವರು. ಹಂದಿಯ ಗುಂಡು, ಪಾಂಡವರವಟ್ಟಲ[೧೨] ಮೊದಲಾದ ಸ್ಥಳಗಳನ್ನೂ, ಅಲ್ಲಿರುವುದೊಂದು ಪುಟ್ಟ ಶಿವಾಲಯವನ್ನೂ ಈಶ್ವರನು ಅರ್ಜುನನಿಗೆ ಪ್ರತ್ಯಕ್ಷವಾದ ಸ್ಥಳವೆಂದೂ ತೋರಿಸುತ್ತಾರೆ.

ಇದಕ್ಕೀಗ 'ಮಳಿಮಲ್ಲಪ್ಪ' ಎಂದು ಹೆಸರು. ಈ ಹೆಸರಿನಿಂದ ಈ ಬೆಟ್ಟಕ್ಕೂ ಮಳಿಮಲ್ಲಪ್ಪನ ಗುಡ್ಡವೆಂದು ಎನ್ನುತ್ತಾರೆ. ಇದೊಂದು ಸೃಷ್ಟಿಸೌಂದರ್ಯ ಯುಕ್ತವಾದ ಸ್ಥಳ. ಈ ಗುಡ್ಡದ ತಲೆಯಮೇಲೊಂದು ವಿಸ್ತಾರವಾದ ಬಯಲು ಇದೆ. ಅಲ್ಲಿ ಬಹುಕಾಲದ ಹಿಂದೆ ಜನರು ಒಕ್ಕಲಾಗಿರಬೇಕೆಂಬುದರ ಚಿಹ್ನೆಗಳಿವೆ. ಆ ಬಯಲಿನಲ್ಲಿ ಪೂರ್ವಪಶ್ಚಿಮವಾಗಿ ಎರಡು ಮೂರು ಸಾಲು 'ಬಂಡೆಯ ಪೆಟ್ಟಿಗೆ' ಗಳಿವೆ. ದೊಡ್ಡ ಬಂಡೆಗಳು ಸುಮಾರು ೧೫ ಅಡಿ ಚಚ್ಚೌಕವಾಗಿಯೂ, ಸಣ್ಣವು ಸುಮಾರು ೮ ಅಡಿ ಚಚ್ಚೌಕವಾಗಿಯೂ ಉಂಟು. ಆ ಪೆಟ್ಟಿಗೆಗಳ ದಕ್ಷಿಣದ ಬಂಡೆ ಯಲ್ಲಿ ಸುಮಾರು ೮ ಅಂಗುಲ ವರ್ತುಲಾಕಾರವಾದುದೊಂದು ತೂತು. ಇಲ್ಲಿಯ ಜನರು ಇವುಗಳಿಗೆ 'ಮೋರೇರ ಅಂಗಡಿ' ಅಥವಾ 'ಮೋರೇರ ಅಗಸಿ' ಎಂದೆನ್ನು ತ್ತಾರೆ. ಇಲ್ಲಿಗೆ ೧೯೩೧ನೆಯ ಜೂನ್ ತಿಂಗಳಲ್ಲಿ ಕೊಪಣದಲ್ಲಿಯ ಐತಿಹಾಸಿಕ ವಸ್ತು

೧೨ ಹೈದರಾಬಾದ ಆರ್ಕಿಯಾಲಾಜಿಕಲ್ ಸೀರೀಜ ನಂ. ೧೦, ಪು. ೨೧ರಲ್ಲಿ ಮಿ॥ ಜಿ. ಯಾಜ್ದಾನಿಯವರು ನಮ್ಮಿಂದಲೇ ಕೇಳಿ 'ಈ ಬೆಟ್ಟಕ್ಕೂ ಪಾಲ್ಕೀಗುಂಡಿಗೂ ಮಧ್ಯೆ ಇರುವ ಪ್ರದೇಶಕ್ಕೆ ಪಾಂಡವರ ವಠಾರವೆಂಬ ಹೆಸರಿರುವುದು ಗಮನಿಸತಕ್ಕ ವಿಷಯ'— ಎಂದು ಬರೆದಿದ್ದಾರೆ. ಆದರೆ ಇದಕ್ಕೂ ಮುಗ್ಗುಲಲ್ಲಿರುವ ಚಿಕ್ಕ ಗುಟ್ಟೆಗೂ ಸಹ ಪಾಂಡವರ ವಠಾರ ಅಥವಾ ಪಾಂಡವರ ವಠಲ ಎಂದೆನ್ನುವ ರೂಢಿಯುಂಟು.

ಸಂಶೋಧನೆಗಾಗಿ ಇಲ್ಲಿಯ 'ಗೆಳೆಯರ ಗುಂಪಿನ' ಇತಿಹಾಸ ಶಾಖೆಯಾದ
ಕರ್ಣಾಟಕ ಇತಿಹಾಸ ಸಂಶೋಧಕ ಸಮಿತಿ'ಯವರಿಂದ ಆಹ್ವಾನಿತರಾಗಿ
ಹೈದರಾಬಾದ್ ಆರ್ಕಿಯಾಲಾಜಿಕಲ್ ಡಿಪಾರ್ಟ್‌ಮೆಂಟಿನ ಡೈರೆಕ್ಟರ
ಜಿ. ಯಾಜ್ದಾನಿಯವರನ್ನು ಕರೆದುಕೊಂಡುಹೋಗಿ ಇವುಗಳನ್ನು ತೋ
"These are Dolmens" ಎಂದು ಹೇಳಿದರು. ಎಷ್ಟೋ ಸಾವಿರ ವರುಷಗಳ
ಭೂಮಿಯಲ್ಲೆಲ್ಲ ಒಂದು ಜನಾಂಗವು ಸುತ್ತಾಡಿತಂತೆ; ಇವು ಆ ಜನರ ಗೋ
ಈ ತೆರನಾದ ಗೋರಿಗಳು ಈಜಿಪ್ತದಲ್ಲಿಯೂ, ಯೂರೋಪು ಖಂಡದ
ಗಳಲ್ಲಿಯೂ, ಏಸಿಯದಲ್ಲಿ ಏಸಿಯಾಮೈನರ, ಸಿಂಧ, ಬೆಂಗಾಲ, ನಿಜಾಂ ಸ
ರಾಯಗೀರ ಮೊದಲಾದೆಡೆಗಳಲ್ಲಿಯೂ ಇರುವವೆಂದು ಹೇಳಿದರು. ಆದರೆ ಆ
ಇವುಗಳು ಗುಡ್ಡದ ಬದಿಯಲ್ಲಿಯ ಹೊಲಗಳಲ್ಲಿಯಾಗಲೀ, ತೀರ ಗುಡ್ಡದ
ಯಾಗಲೀ ಇದ್ದುದು ಕಂಡುಬರುತ್ತದೆಯೇ ಹೊರತು ಇಲ್ಲಿನಂತೆ ತೀರ
ಮೇಲಿದ್ದುದು ವಿಚಾರಣೀಯವು—ಎಂದು ಹೇಳಿ, ಈ ಗೋರಿಗಳ ಪ್ರ
'Dolmens, Cairns, Cromlehs, Avenues' ಎಂದು ಇರುವುದಾ
ಇಲ್ಲಿರುವವು Dolmens[೧೩] ಎಂದರೆ 'Stone Chambers' ಎಂದೂ ಹೇ
ಆದರೆ ಇವುಗಳನ್ನು ಕುರಿತು "ಇಲ್ಲಿಯ ಜನರೆನ್ನುವ 'ಮೋರೇರ ಅಂಗಡಿ'
'ಮೋರೇರ ಅಗಸಿ' ಎಂಬುದನ್ನು ಅನ್ವರ್ಥಕವಾಗಿ ಗ್ರಹಿಸಿದರೆ,—ಈ ಹೆಸರು
ಕಾಲದಿಂದ ಪರಂಪರೆಯಾಗಿ ಬಂದುದೆಂದಾದರೆ,—ಈ Dolmens ಗಳನ್ನು ಮೌ
ಕಾಲಕ್ಕೆ ತರಬೇಕಾಗುತ್ತದೆ" ಎಂದು ಇನ್ನು ಸ್ವಲ್ಪದಿನಗಳಲ್ಲಿಯೇ ಪ್ರಸಿದ್ಧವಾಗ
ಹೈದರಾಬಾದ್ ಆರ್ಕಿಯಾಲಾಜಿಕಲ್ ಸೀರೀಸ್ ನಂ. ೧೨ 'ಕೊಪ್ಪಳದ ಕನ್ನಡ
ಗಳು'—ಎಂಬಲ್ಲಿ ಅವುಗಳ ಸಂಪಾದಕರಾದ ಮದರಾಸ್ ಸರ್ಕಲ್ ಶಾಸನದ ಇ
ಸೂಪರಿಂಟೆಂಡೆಂಟರು ಶ್ರೀಮಾನ್ ಸಿ. ಆರ್. ಕೃಷ್ಣಮಾಚಾರ್ಲು ಇವರು
ತ್ತಾರೆ. ಮತ್ತು ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನಲ್ಲಿಯ
ನ್ನಾಳ' ಎಂಬ ಹಳ್ಳಿಯಲ್ಲಿರುವ Stone Chamber—ಕಲ್ಲುಬಂಡೆಯ ಕೋಣೆ—
Stone Circles—ದೃಷದ್ವರ್ತುಲಗಳಿಗೆ 'ಮೋರಿಮಟ್ಟಿನ ಖಣಿ' ಎನ್ನುತ್ತಾರೆ
ಇವುಗಳಲ್ಲಿಯ 'ಮೋರೇರ ಅಂಗಡಿ,' 'ಮೋರಿಮಟ್ಟಿನ ಖಣಿ' ಎಂಬ ಶಬ್ದ
ಯೋಗದಿಂದ, ಇವುಗಳು ಮೌರ್ಯರಿಗೆ ಒಂದಿಲ್ಲೊಂದು ತೆರನಾಗಿ ಸಂಬಂ
ವಾಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.[೧೪]

ಮೇಲೆ ನಿರ್ದೇಶಿಸಿದ ಬೆಟ್ಟಕ್ಕೆ ಹೊಂದಿ ಕೆಳಬದಿಯಲ್ಲಿರುವ "ಎಂಜರ
ಬಯಲು" ಎಂಬ ತಪ್ಪಲು ಪ್ರದೇಶದಲ್ಲಿಯೂ ದುಂಡುಗಲ್ಲಿನಿಂದ ಕಟ್ಟಿದ
ಚಚ್ಚೌಕವಾದ ಕಟ್ಟೆಗಳಿರುವವು. ಇವುಗಳೇನೋ?

೧೩ ಹೈದರಾಬಾದ್ ಆರ್ಕಿಯಾಲಾಜಿಕಲ್ ಸೀರೀಸ್ ನಂ. ೧೦, ಪುಟ ೨೧.

* 'ಕೊಪ್ಪಳದ ಕನ್ನಡ ಶಾಸನಗಳು' ಎಂಬ ಗ್ರಂಥವು ಈ ಹಿಂದೆಯೇ (ಎಂದರೆ ೧೯
ಪ್ರಕಾಶಗೊಂಡಿದೆ. ಪ್ರಕೃತ ಲೇಖನವು ಅದಕ್ಕಿಂತ ಮುಂಚೆ ಬರೆದದ್ದು.—ಸಂ.

೧೪ ಹೈದರಾಬಾದ ಆರ್ಕಿಯಾಲಾಜಿಕಲ್ ಸೀರೀಸ್ ನಂ. ೧೨.

## ೩. ಪ್ರಸಿದ್ಧಿ ಮತ್ತು ಪವಿತ್ರತೆ

ಶ್ರೀಮನ್ನೃಪತುಂಗದೇವನು ಈ ಸ್ಥಳವನ್ನು 'ವಿದಿತ ಮಹಾ ಕೊಪಣನಗರ' ಎಂದಿರುವುದರಿಂದ ಇವನ ಕಾಲ (೮೧೫–೮೭೭)ಕ್ಕಿಂತ ಆದೆಷ್ಟೋ ಮುಂಚೆಯೇ ಇದು ಪ್ರಸಿದ್ಧವಾದ ನಗರವಾಗಿರಬೇಕು. ಆ ಅನಂತರ ಕವಿ ರನ್ನನು (ಕ್ರಿ. ಶ. ೯೯೩) ಅತ್ತಿಮಬ್ಬೆಯ ಚರಿತೆಯನ್ನು 'ನೆಗಟ್ದಿ ಕೊಪಣಾಚಳದಂತೆ ಪವಿತ್ರ'ವೆಂದು ಹೇಳುತ್ತಾನೆ. ಇದರಿಂದ ಈ ಸ್ಥಾನದ ಪ್ರಸಿದ್ಧತೆಯೂ ಪವಿತ್ರತೆಯೂ ಚೆನ್ನಾಗಿ ಅಭಿವ್ಯಕ್ತವಾಗುತ್ತವೆ. ಹಿಂದೆ ಉದಹರಿಸಿದ ೩೧೭ನೆಯ ಶಿಕಾರಿಪುರ ಶಾಸನದಲ್ಲಿನ 'ಧಾರಿಣಿಗೆ ನೆಗಟ್ದ ಕೊಪಣ' ಎಂಬುದರಿಂದಲೂ ಆ ಕಾಲಕ್ಕೆ (ಕ್ರಿ. ಶ. ೧೦೩೦) ಇದರ ನೆಗಟಿತ್ತಿಯು ವಿಶೇಷವಾಗಿರಬೇಕು.

'ಚಾವುಂಡರಾಯ ಪುರಾಣ'ದ 'ಅಸಿಧಾರಾವ್ರತದಿಂದೆ'ಎಂಬ ಪದ್ಯದಿಂದ ಜೈನರು ಕೊಪಣದಲ್ಲಿ ಮುಡಿಪುದನ್ನು ಎಂದರೆ ದೇಹಬಿಡುವುದನ್ನು ವಿಶೇಷ ಪುಣ್ಯಕರವೆಂದು ಆಗ್ಗೆ ಗಣಿಸುತ್ತಿರಬೇಕು. "ಪೆಂಪೆಸೆವಿಸಂ ಮುಳ್ಗುಂದದೊಳ್ ಸನ್ಯಸನಕ್ಕೈದೆ" ಅಲ್ಲಿ ಸಮಾಧಾನವು ದೊರೆಯದೆ ಆ ಸ್ಥಳವನ್ನು ತೊರೆದು "ಕೊಪಣಾದ್ರೀಂದ್ರಕ್ಕೆ" ಬಂದು 'ಆಗಮೋಕ್ತ ಸಮಾಧಾನ ವಿಧಾನದಿಂ ಮುಕ್ತಿಸ್ಥಾನಮಂ ಮುಂಚೆ ಸಾಧಿಸಿ ಕೊಂಡೊಳ್ಪು ಕುಮಾರಸೇನ ಮುನಿಪಂಗೆ ಅಕ್ಕುಂ ಪೆರರ್ಗ್ಗೆ ಅಕ್ಕುಮೇ' ಎಂದವನ ಪುಣ್ಯಜೀವನವನ್ನು ಕೊಂಡಾಡಿರುವುದರಿಂದ ಆ ಕಾಲಕ್ಕೆ ಕೊಪಣದ ಸ್ಥಾನ ಮಾಹಾತ್ಮ್ಯವು ಅತಿಶಯ ಉಜ್ವಲವಾಗಿದ್ದಿತೆಂದು ವ್ಯಕ್ತವಾಗುತ್ತದೆ.

ಭಾರತೀಯರಿಗೆ ಪವಿತ್ರ ಹಾಗೂ ಪುಣ್ಯತಮ ಸ್ಥಾನಗಳೆಂದರೆ ತೀರ್ಥಯಾತ್ರಾ ಸ್ಥಳಗಳು. ಈ ಊಹೆಗೆ ಆಧಾರವಾಗಿ ಈ ಸ್ಥಳದಲ್ಲಿಯ (ಹಿಂದೆ ಸೂಚಿಸಿದ) ಚಂದ್ರ ಬಂಡೆಯದೊಂದು ಶಾಸನದಲ್ಲಿ:—"ಕುಣ್ಡು ಕುನ್ದಾನ್ವಯದ ಏಕಚಟ್ಟುಗದ (?) ಭಟ್ಟಾರರ ಶಿಷ್ಯರ್ ಶ್ರೀ ಸರ್ವನನ್ದಿ ಬಟ್ಟಾರರಿಲ್ಲಿಳ್ದು ಊರ್ಗ್ಗನಿತ್ರೀರ್ತ್ಥಕಮುಪಕಾರಿಗಳಾಗಿ ಪಲಕಾಲ ತಪಂಗೆಯ್ದು ಸನ್ಯಾಸ ನೋನ್ತು ಮುಡಿಪಿದರ್" ಎಂದಿರುವುದರಿಂದ ಇದೊಂದು ತೀರ್ಥವೆಂಬುದೂ ಸ್ಪಷ್ಟವಾಯಿತು. ಇದಲ್ಲದೆ ಕ್ರಿ. ಶ. ಸುಮಾರು ೧೧೩೫ರಲ್ಲಿಯ ೩೮೪ನೆಯ ಶ್ರವಣಬೆಳ್ಗೊಳದ ಶಾಸನದಲ್ಲಿ ಕೊಪಣಕ್ಕೆ[೧೫] ಆದಿತೀರ್ಥವೆಂಬ ಗೌರವದ ವಿಶೇಷಣವಿದೆ. ಮತ್ತು ಅದೇ ಊರಿನ ಕ್ರಿ. ಶ. ೧೧೯೯ರ ೩೪೫ನೆಯ ಶಾಸನವು [೧೫]'ಕೊಪಣ ಮಹಾತೀರ್ಥದೊಳ್' ಎಂದೂ ಉದ್ಘೋಷಿಸುತ್ತಿದೆ. ಅದೇ ಸ್ಥಳದ ೪೭೫ನೆಯ ಶಾಸನವೊಂದು 'ಕೊಪಣತೀರ್ಥ'ದ ಎಂದು ಬರೆಯಲು ಮೊದಲು ಮಾಡಿದುದನ್ನು 'ಕೊಪಣತೀರ್ಥದ ಉಚ್ಚಾರ ಮಾತ್ರದಿಂದೆ ಮುಕ್ತಿ ಸಾಧಿಸಿತೋ' ಎನ್ನುವಂತೆ ಅಷ್ಟಕ್ಕೇ ಮುಗಿಸಿ ನಿಂತಿದೆ. ಕ್ರಿಸ್ತ ಶಕ ಸುಮಾರು ೧೫೩೦ರಲ್ಲಿ ಬರೆದ ೪೬ನೆಯ ನಗರ ತಾಲ್ಲೂಕಿನ ಮತ್ತೊಂದು ಶಾಸನವು—

ಕೊಪಣ ಮೊದಲಾದ ತೀರ್ಥದೊಳ್ । ಅಪರಿಮಿತ ದ್ರವ್ಯದಿಂ ದೇಹಜ್ಞವಿಧಿಯಿಂ ।
ಸ್ವಪವರ್ಗ್ಗದ ಫಲಕ್ಕಾಗಿಯೆ । ವಿಪುಲೋದಯಮಾಡಿ ಮೆಱೆದೆ ವಿದ್ಯಾನಂದ ॥

ಎಂದು ತೀರ್ಥಸ್ಥಳಗಳ ನಿರ್ದೇಶನದಲ್ಲಿ ಕೊಪಣವನ್ನೇ ಆದಿಯಲ್ಲಿ ದೃಷ್ಟಿಸಿದೆ.

೧೫ 'ಎಪಿಗ್ರಾಫಿಯಾ ಕರ್ನಾಟಿಕಾ,' ಸಂ. ೨.

ದಕ್ಷಿಣ ಆರ್ಕಾಟು ಜಿಲ್ಲೆಯ ಕಡ್ಡಲೂರು ತಾಲ್ಲೂಕಿನ ಮಂಜಕುಪ್ಪ ಹಾಗೂ 'ತಿರುವಲ್ಲಂ'[೧೬] ಎಂಬ ಸ್ಥಳಗಳಲ್ಲಿಯ ಚೋಳರಾಜನಾದ ರಾಜೇಂದ್ರನ ೨ನೆಯ ಹಾಗೂ ೩ನೆಯ ವರ್ಷಗಳ ಶಾಸನಗಳಲ್ಲಿ 'ಪೇರಾಱುನ್‌ಗಙ್ಕೈ' ದೊಡ್ಡ ತೊರೆ, ಹಳ್ಳ, ನದಿಯ ದಡದ ಬದಿಯಲ್ಲಿರುವ ಕೊಪ್ಪಂ ಎಂಬಲ್ಲಿ ಪಶ್ಚಿಮ ಚಾಲುಕ್ಯ ರಾಜನಾದ ೧ನೆಯ ಆಹವಮಲ್ಲ ಸೋಮೇಶ್ವರನಿಗೂ ವಾಯಿತೆಂದು ಹೇಳಿದೆ.

ಆ ಶಾಸನಗಳಲ್ಲಿ ಈ ಯುದ್ಧರಂಗಕ್ಕೆ 'ಶಿಪ್ಪಮಾತೀರ್ತ್ತ' 'ಪ್ರಖ್ಯಾತವಾದ ಮಹಾತೀರ್ಥ'ವೆಂಬ ಗೌರವದ ವಿಶೇಷಣವು ಕೊಡಲ್ಪ ಈ ಸ್ಥಳನಿರ್ಣಯದ ವಿಷಯದಲ್ಲಿ ಡಾಕ್ಟರ್ ಫ್ಲೀಟರವರು—'ಪೆರಾಱಿನ್‌ಗ ಎಂದರೆ 'ಪೆರ್ದೊರೆ'; ಕೃಷ್ಣಾನದಿಗೆ ಪೆರ್ದೊರೆ ಎಂದುದು ಆದೆಷ್ಟೋ ಕಡೆ ಕಂಡುಬಂದಿದೆ; ಆದುದರಿಂದ ಈ ಸ್ಥಳವು ಕೃಷ್ಣೆಯ ದಡದಲ್ಲಿದ್ದಿರಬೇಕು— ಅಭಿಮತದಿಂದ, ಕೃಷ್ಣಾತೀರದಲ್ಲಿರುವ ಹಳ್ಳಿಗಳಲ್ಲಿ ಎಲ್ಲಿಯಾದರೂ ಕ ಮೊದಲಿಗಿರುವ ಹೆಸರುಳ್ಳವುಗಳಿರುವವೊ ಎಂದು ಹುಡುಕಿ ಕಡೆಗೆ ಕೊಲ್ಹಾ ಆಗ್ನೇಯಕ್ಕೆ ಸುಮಾರು ಮೂವತ್ತು ಮೈಲಿನಲ್ಲಿ ಕೃಷ್ಣೆಯ ದಡದ 'ಖಿದ್ರಾಪುರ' ಅಥವಾ 'ಖೇದ್ರಾಪುರ'ವೆಂಬ ಸ್ಥಳವೇ ಇದೆಂಬ ಸಿದ್ಧಾ ಇಳಿದಿದ್ದಾರೆ.[೧೮] ಈ ಸಿದ್ಧಾಂತಕ್ಕೆ ಆಧಾರವಾಗಿ, ಆ ಸ್ಥಳದಲ್ಲಿರುವ ಕುಪ್ಪೇ ದೇವಾಲಯದಲ್ಲಿಯ ೧೧೩೬ನೆಯ ಶಕ ವರ್ಷದ ಒಂದು ಶಾಸನವನ್ನೂ ಗ್ರಹಿಸಿ ಇದು ಆ ಸ್ವಯಂಭೂ ಕುಪ್ಪೇಶ್ವರನಿಗೆ ಶಕ ವರ್ಷ ೧೧೩೬ನೆಯ ಶ್ರೀಮುಖ ಚೈತ್ರ ಸೂರ್ಯಪರ್ವ ಸೋಮವಾರದಂದು ಕೊಟ್ಟ ದಾನ ವಿಷಯ ಈ ಶಾಸನದಲ್ಲಿ ಆ ದೇವದೇವನಿಗೆ ಸ್ವಯಂಭೂ ಪದ ವಿಶೇಷಣವಿರುವುದ ಆ ಸ್ಥಳವು ಪವಿತ್ರವಾದುದಾಗಿರಬೇಕು ಎಂದರೆ ಅದು ತೀರ್ಥವಾಗಿರಬೇಕು, ಡಾಕ್ಟರ್ ಫ್ಲೀಟರವರು ಭ್ರಮಿಸಿ ಸಿದ್ಧಾಂತಿಸಿದುದನ್ನು "ಕೊಪ್ಪಳದ ಕನ್ನಡ ಗಳು" ಎಂಬಲ್ಲಿ ಶ್ರೀಮಾನ್ ಸಿ. ಆರ್. ಕೃಷ್ಣಮಾಚಾರ್ಲು ಅವರು 'ಕೊಪ್ಪಂ' ಎಂದರೆ ಕೊಪ್ಪಳವೆಂದೂ, ಆದಿರುವುದು 'ಪೇಱಾಱಿನ್‌ಗಙ್ಕೈ' ಹಿರಿಯ ಹಳ್ಳದಮೇಲೆ ಎಂದೂ ಸಿದ್ಧಾಂತಿಸಿದ್ದಾರೆ. "ಒಂದೇ ಒಂದು ಶಾ ತುಣುಕಿನಲ್ಲಿ ಹೇಳಿದ, ಬರಿಯ ಸ್ವಯಂಭೂ ಪದ ವಿಶೇಷಣ ಪ್ರಯೋಗದಿಂದ ತೀರ್ಥವಾಗಿರಬೇಕೆಂದು ಡಾ॥ ಫ್ಲೀಟರಂಥವರು ಭ್ರಮಿಸುವುದು ನ್ಯಾಯ ಎಂದು ಇವರ ಹೇಳಿಕೆ. 'ಎಲ್ಲ ಊರಲ್ಲಿರುವ ದೇವರಿಗೂ ಇದೇ ವಿಶೇಷ ಕೊಡಲ್ಪಟ್ಟಿದೆ' ಯಂತೆ, 'ಹಾಗಾದರೆ ಅದೂ ಒಂದು ತೀರ್ಥವಾಗಬೇಕಾಯಿ ಎಂದು ಕೃಷ್ಣಮಾಚಾರ್ಲು ಅವರ ಕೋಟಿಕ್ರಮ. ಇದಲ್ಲದೆ ಇತ್ತ ಸಮ್ಮತ ಕುಕ್ಕನೂರ ಪ್ರಸನ್ನಮಲ್ಲಿಕಾರ್ಜುನ ದೇವನನ್ನೂ ಸ್ವಯಂಭೂ ಪದ ವಿಶೇಷ

೧೬ *S. I. I.*, Vol. III, No. 55.
೧೭ *S. I. I.*, Vol. VII, No. 827.
೧೮ *Ep. Ind.*, Vol. XII, pp. 296 ff.

ಗೌರವಿಸಿದೆ. ಹೀಗೆ ಇನ್ನೂ ಅದೆಷ್ಟೋ ಉದಾಹರಣೆಗಳನ್ನು ತೋರಿಸಬಹುದು. ಈ ತೆರನಾಗಿ ಗೌರವಿಸಿ ಹೇಳುವುದೆಂದರೆ, "ವ್ರತಾನಾಮುತ್ತಮಂ ವ್ರತಂ" ಎಂದು ಪ್ರತಿಯೊಂದು ವ್ರತವನ್ನೂ ಹೇಳುವ ಸೂತಪುರಾಣಿಕನ ವಚನದಂತೆಯೇ ತಿಳಿಯಬಹುದು. "ಇಷ್ಟಾಗಿಯೂ ಆ ಸ್ಥಳವು ತೀರ್ಥವೆಂಬ ಗೌರವ ಪದದಿಂದ ಎಲ್ಲಿಯಾದರೂ ಉಕ್ತವಾಗಿದೆಯೇ ಎಂಬುದು ಡಾ॥ ಫ್ಲೀಟರವರಿಂದ ತಿಳುಹಿಸುವುದು ದುರ್ದೈವದಿಂದ ಬಿಟ್ಟು ಹೋಗಿದೆ. ಖೇದ್ರಾಪುರದಲ್ಲಿಯ ಕುಪ್ಪೇಶ್ವರನು ಸ್ವಯಂಭೂ ಪದ ವಿಶೇಷಣ ಭೂಷಣನಾದ ಮಾತ್ರಕ್ಕೆ ಅಥವಾ ಆ ದೇವಾಲಯವನ್ನು ಚಾಲುಕ್ಯ ದಂಡನಾಥನಾದೊಬ್ಬ ಕುಪ್ಪನು ಕಟ್ಟಿಸಿದ ಮಾತ್ರಕ್ಕೆ ಆ ಸ್ಥಳವು ಹಿಂದೆ ಹೇಳಿದ ತಮಿಳು ಶಾಸನದಲ್ಲಿ ಉಕ್ತವಾದ 'ಕೊಪ್ಪಂ' ಎಂಬ ಸ್ಥಳವಲ್ಲವೆಂದು ಶ್ರೀಮಾನ್ ಕೃಷ್ಣಮಾಚಾರ್ಲು ಅವರು ಆ ದೇವಾಲಯ ನಿರ್ಮಾಣದ ಬಗ್ಗೆ ಡಾ॥ ಫ್ಲೀಟರವರು ಸಾಧಿಸಿದ ಕೆಲ ಆಧಾರಗಳನ್ನು ಅಲ್ಲಗಳೆದು ತಮ್ಮ ಅಭಿಮತವನ್ನು "ಖೇದ್ರಾಪುರದಲ್ಲಿನ ಐತಿಹಾಸಿಕ ಸಂಪತ್ತಿನಲ್ಲಿ ಅದು ಮಹಾತೀರ್ಥವೆಂದಾಗಲೀ ತೀರ್ಥವೆಂದಾಗಲೀ ಆಧಾರ ಸಿಕ್ಕುವುದಿಲ್ಲ" ಹೀಗೆಂದು ಪ್ರಸ್ಥಾಪಿಸುತ್ತಾರೆ.

ಮೇಲೆ ನಿರ್ದೇಶಿಸಿದ ಆ ತಮಿಳು ಶಾಸನಗಳೊಂದರಲ್ಲಿ[೧೯] 'ಕೊಪ್ಪಂ' ಎಂಬುದಕ್ಕೆ 'ಶೆಪ್ಪ—ಮಾ—ತೀರ್ತ್ತ' ಎಂದೂ, ಇನ್ನೊಂದರಲ್ಲಿ[೨೦] 'ಶೆಪ್ಪ—ಅರುನ್—ತೀರ್ತ್ತ' ಎಂದೂ ವಿಶೇಷಣಗಳಿವೆ. ಈ ಎರಡೂ ಶಾಸನಗಳಿಗೆ ಸಮಾನವಾಗಿ, 'ಮಣಿಮಂಗಲಂ' ಶಾಸನದಲ್ಲಿ, 'ಶೆಪ್ಪ-ಮಾ-ನದೈ' ಎಂಬುದರ ಸಾಮ್ಯ ಭಾವಪೀಡನದಿಂದ 'ನಿಶ್ಚಯಾತ್ಮಕವಾದ ದೊಡ್ಡ ನಡತೆ' ಎಂದು ಡಾ॥ ಫ್ಲೀಟರವರು ಡಾ॥ ಬಾರ್ನೆಟ್ಟರವರ ಸಹಾಯದಿಂದ ಅಪಾರ್ಥಮಾಡಿದ್ದಾರೆ. ಆದರೆ ಆ ಶಾಸನದ ತೀರ ಸನಿಹವಾದ ಪರೀಕ್ಷಣದ ವಾಚನದಿಂದ, ಅದು "ಶೆಪ್ಪ-ಅರುನ್-ತೀರತ್ತಾ" ಎಂದಿರುವಂತೆ ತಿಳಿಯಬರುತ್ತದೆ. ಡಾ॥ ಹುಲ್ಷ್ ಅವರಿಂದ ನಿರ್ದಿಷ್ಟವಾದ ಈ ಪಾಠವನ್ನು ವಿವರಿಸುವುದೇನೂ ಜಡವೆನಿಸಲಿಕ್ಕಿಲ್ಲ; ಏತದ್ವಿರುದ್ಧವಾಗಿ, ಮೂಲದಲ್ಲಿಲ್ಲದುದನ್ನು ಹೊಂದಿಸುವುದು ವಿಶೇಷ ಕಠಿಣವೆನಿಸುವುದು. ಆದರೆ ಆ ಭಾಷಾಂತರವಿಲ್ಲಿ ಡಾ॥ ಫ್ಲೀಟರವರಿಂದ ಟಿಪ್ಪಣಿಗೊಂಡಿದೆ ಎಂದು ತೋರಿಸುತ್ತಿದೆ. ವೊಳಗರಹಳ್ಳಿಯ (Bn. 108) ಶಾಸನ ವಾಚನವು ತಪ್ಪಿಲ್ಲದೆ "ಶೆಪ್ಪ-ಮಾ-ತೀರ್ತ್ತ" ಎಂದಿದ್ದರೆ ಅದನ್ನು "ಶೆಪ್ಪು-ಮಾ-ತೀರ್ತ್ತ" ಎಂದರೆ ಪ್ರಖ್ಯಾತ ಮಹಾತೀರ್ಥವೆಂಬ ಅರ್ಥದಲ್ಲಿ ತಿದ್ದಬಹುದು; ಆದರೆ ತಮಿಳಿನಲ್ಲಿಯ ದೀರ್ಘ ಆ ಕಾರದ ಗುರುತೂ ರೇಫ ಹಾಗೂ ರಾ ಕಾರದ ಗುರುತೂ ಬಹುಶಃ ಒಂದೇ ಇರುವುದರಿಂದ, ಶ್ರೀಮಾನ್ ಕೃಷ್ಣಮಾಚಾರ್ಲು ಅವರು ಅದನ್ನು 'ಶೆಪ್-ಅಮುರ-ತೀರ್ತ್ತ' ಎಂದು ತೆಗೆದುಕೊಳ್ಳಬೇಕೆಂದು ಅಭಿಪ್ರಾಯಪಡುತ್ತಾರೆ.

ಆಮೇಲೆ ಕೊಪ್ಪಂ ಎಂಬ ವಿಷಯದಿಂದ ಯುಕ್ತವಾದ ಆ ಎಲ್ಲ ತಮಿಳು ಶಾಸನಗಳಲ್ಲಿ ಕೆಲವನ್ನು ಅನುವದಿಸಿ:—

೧೯ *Ep. Carn.*, Vol. IX, Bn. 108.

೨೦ *S. I. I.*, Vol. III, Pp. 60, 63.

ಸೆಪ್ಪರು[ಜ]ಕೀರ್ತಿಕ್ಕೊಳಪ್ಪ ತಗನ್ಯೆಯಿನ್³¹
ಸೆಪ್ಪೋರುನ್ ತೀರತ್ತ ಕೊಪ್ಪತ್ತಗ ವೈಯಿಲ್³²
ಶೆಜ್ಜಿರುಮಣಿಕ್ಕೊಪ್ಪತ್ತು ಆಹವಮಲ್ಲನೋಡು³³
ಕೊಪ್ಪತ್ತು ವಂದಳಿ ಚಾಳಿಕ್ಕಿವಂದೆಯ್ದಿಯ ಪರಿಹವಂ³⁴

ಮೇಲಿನ ಅವತರಣಿಕೆಗಳಲ್ಲಿ ಎಲ್ಲಕ್ಕೂ ಮೇಲಿನದು ನಮಗೆ ಹೆಚ್ಚು ಸ... ವಾಗಿದೆ. ಹೆಸರನ್ನು 'ಕೊಳಪ್ಪ' ಎಂದು ಹೇಳಿದೆ. 'ಕೊಪ್ಪಳ' ಎಂದು ... ಕೈ ತಪ್ಪಿನಿಂದ ಹೀಗಾಗಿದೆ ಎಂದು ಊಹಿಸಲೂ ಅವಕಾಶವಿದೆ. ಎಂದರೆ '... ಎಂಬ ಉಚ್ಚಾರಣೆಗೆ ಇದು ತೀರ ಹತ್ತಿರದ ಉಚ್ಚಾರಣೆಯಾಗಿದೆ. '... ಕಾಳಿಗದಲ್ಲಿ' ಎಂದು ಇಲ್ಲಿಯ ಅರ್ಥ. ಇನ್ನು ಎರಡನೆಯ ಅವತರಣಿಕೆ... 'ಸೆಪ್ಪೋರುನ್ ತೀರತ್ತ' ಎಂಬುದು 'ಶೆಪ್ಪ್-ಅರುನ್-ತೀರತ್ತ' ಎಂದಿರಬೇಕಾ... ಅಪಭ್ರಂಶರೂಪವು; ಇದು ಆ ಸ್ಥಳದ ಬಲಾಢ್ಯತೆಯ ನಿದರ್ಶಕವಾಗಿದೆ. ಈ... ವನ್ನು ಮನದಲ್ಲಿ ಕುರಿದರೆ, 'ತಾವು ನೋಡಿದ ಅಖಿಲ ಭಾರತದಲ್ಲಿನ ದು... ಇನ್ನೊಂದರ ಪ್ರತಿಷೇಧವಿಲ್ಲದೆಯೇ, ಅತ್ಯಂತ ಬಲಾಢ್ಯವಾದ ನೈಸರ್ಗಿಕ ... ದುರ್ಗವೆಂದರೆ, ಕೊಪಣ (ಕೊಪ್ಪಳ)ದ ದುರ್ಗವು'³⁵ ಎಂಬ ಸರ್ ಜಾನ್ ... ಸಾಹೇಬರ ವಾಕ್ಯವು ಕಣ್ಣೆದಿರು ಬರುತ್ತದೆ. ಈ ಊಹೆಗೆ ಬಲವಾಗಿ ... ಸುಮಾರು ೧೫೫೫ ಅಥವಾ ೭೦ರಲ್ಲಿದ್ದ ನಂಜುಂಡನೆಂಬ ಕವಿಯ 'ಪರದಾ... ರಾಮನ ಕಥೆ'³⁶ಯಲ್ಲಿ—'ಕೊಪಣವೊಂದು ಬಲಾಢ್ಯ ದುರ್ಗ'ವೆಂದೂ "ತಿಮ್ಮರಾಜನೆಂಬ 'ಕಂಪಿಲ' ರಾಜನ ಮಾಂಡಳಿಕನಿದ್ದ" ನೆಂದೂ ಹೇಳಿದೆ. ಕೊಪಣವು ಹಿಂದಿನ ಎಲ್ಲ ಇತಿಹಾಸ ಯುಗದಲ್ಲಿಯೂ ಹೆಚ್ಚಿನ ಸುರ... ಭದ್ರವಾದ ಸ್ಥಳವಾಗಿರಬೇಕು. ಅರ್ಥಾತ್ ಆಹವಮಲ್ಲದೇವನೂ ಇದ... ಆಯಕಟ್ಟಿನ ಸ್ಥಳವಾಗಿ ಯೋಜಿಸಿರಬೇಕು. ಆದಕ್ಕಾಗಿ ಇವನಿಗೂ ರಾಜೇ... ಚೋಳನಿಗೂ ಇಲ್ಲಿಯೇ ಕಾಳಗವಾಗಿರಬೇಕು.

ಇನ್ನು ಎರಡನೆಯ ವಿಷಯವೆಂದರೆ ಕೊಪ್ಪಂ ಎಂಬುದು 'ಪೆರಾಜು... ದೊಡ್ಡದೊಂದು ತೊರೆ, ಹಳ್ಳ ಅಥವಾ ನದಿಯ ದಡದಲ್ಲಿರುವುದೆಂಬುದು. ... ಎಂದು ಕೃಷ್ಣಾ ನದಿಗೂ, ಹಲವು ಕಡೆ ತುಂಗಭದ್ರೆಗೂ ಉಕ್ತವಾಗಿದೆ. ... ಶ್ರೀಮಾನ್ ಕೃಷ್ಣಮಾಚಾರ್ಲು ಅವರು,—'ಪೇರಾಱು' ಎಂದರೆ ದೊಡ್ಡ '... ಪೇರ್ ಎಂದರೆ ದೊಡ್ಡದು; ತೊಱೆ ಎಂದರೆ (ಝುರಿ) ಹಳ್ಳ—ಹೀಗೆ ಇದರ ಸಾ... ವನ್ನು 'ಹಿರಿಯ ಹಳ್ಳ' ಎಂದು ಮಾಡುತ್ತಾರೆ. ಈ ಹಿರಿಯ ಹಳ್ಳದ ... ಭಾಷಾಂತರವೇ ತಮಿಳಿನಲ್ಲಿ 'ಪೆರಾಱು' ಎಂದಾಗಿರಬೇಕೆಂದು ಇವ... ಕೊಪ್ಪಳವಿರುವುದು ಹಿರಿಯ ಹಳ್ಳದ ಎಡ ಬದಿಯ ದಂಡೆಯಲ್ಲಿ. ಮೇಲಾ...

೩೧ *S.I.I.*, Vol. V, No. 489, I. II.
೩೨ Same No. 644, 1. 19.
೩೩ *Ibid.* No. 647, 1, 2f.
೩೪ ಇದೇ ಶಾಸನ.
೩೫ Journal: *Hyderabad Archl., Society*, 1916, p. 93.
೩೬ See *Mysore Archl. Report ,or* 1929, p. 44.

ಪೂರ್ವದಲ್ಲಿ ಮಹಾತೀರ್ಥವಾಗಿತ್ತೆಂದು ಸ್ಥಳೀಯ ಹಾಗೂ ಅನ್ಯ ಐತಿಹಾಸಿಕ ಆಧಾರಗಳೂ ಸಾಕ್ಷ್ಯ ಹೇಳುತ್ತಿವೆ. ಆದುದರಿಂದ ಈ ವಾದಾರಂಭದ ತಮಿಳು ಶಾಸನದಲ್ಲಿ ಉಕ್ತವಾದ ಚೋಳ ಚಾಳುಕ್ಯ ಯುದ್ಧರಂಗವು ಇದೇ ಆಗಿರಬೇಕು ಎಂಬುದೇ ಶ್ರೀ ಕೃಷ್ಣಮಾಚಾರ್ಲು ಅವರ ಸಿದ್ಧಾಂತವು.[೨೭] ಇಂತು ಈ ಕೊಪಣವು ಬಹುಕಾಲದಿಂದ ಮಹಾನಗರವೊಂದೇ ಅಲ್ಲ, ತಿರುಳ್ಗನ್ನಡದ ಬೀಡೂ ಅಲ್ಲದೆ, ಮಹಾತೀರ್ಥವೂ, ನೈಸರ್ಗಿಕವಾದ ಭದ್ರವಾದ ಪ್ರಖ್ಯಾತ ದುರ್ಗವೂ ಆಗಿದ್ದಿತು.

## ೪. ಜಿನಾಲಯಗಳು

ಮತ್ತಿನ ಮಾತವಂತಿರಲಿ ಜೀರ್ಣ್ನ ಜಿನಾಶ್ರಯ ಕೋಟಿಯಂತ್ರಮಂ
ಚಿತ್ತಿರೆ ಮುನ್ನಿನಂತಿರಿಸಿತೂರ್ಗ್ಗಳೊಳಂ ನೆಱೆಮಾಡಿಸುತ್ತಮು।
ತ್ಯುತ್ತಮ ಪಾತ್ರದಾನದೊದವಂ ಮೆಱೆಯುತ್ತಿರೆ ಗಂಗವಾಡಿ ತೊಂ
ಭತ್ತಱು ಸಾಸಿರಂ ಕೊಪಣಮಾದುದು ಗಂಗಣದಂಡನಾಥನಿಂ॥

ಎಂಬ ಶ್ರವಣಬೆಳ್ಗೊಳದ ೧೨೭ನೆಯ ಶಾಸನವೂ, ಹಾಗೂ ಹಿಂದೆ ನಿರ್ದೇಶಿಸಿದ ೩೧೭ನೆಯ ಶಿಕಾರಿಪುರದ—

ಊರೊಳ್ ತಪ್ಪದೆ ಬಸದಿಯ। ನೋರಂತಿರೆಮಾಡಿ ಬೆಳಗವತ್ತಿಯ ನಾಡಂ॥
ಧಾರಿಣಿಗೆ ನೆಗಳ್ದ ಕೊಪಣ। ಕ್ಕೋರೆಗೆ ಮಾಡಿದನುದಾರ ನಿಧಿಯೇಚರಸಂ॥

ಎಂಬ ಶಾಸನವೂ ಕೊಪಣದಲ್ಲಿಯ ಜಿನಾಲಯಾಧಿಕ್ಯವನ್ನು ತೋರಿಸುತ್ತವೆ. ಇದಲ್ಲದೆ ಇದೇ ಶ್ರವಣಬೆಳ್ಗೊಳದ ೩೮೪ನೆಯ ನಂಬರಿನ (ಸುಮಾರು ಕ್ರಿ. ಶ. ೧೧೩೫) ಒಂದು ಶಾಸನವು—

ಮಾಡಿಸಿದಂ ಜಿನೇಂದ್ರ ಭವನಂಗಳನಾ ಕೊಪಣಾದಿ ತೀರ್ತ್ಥದಲು*
ರೂಢಿಯಿನೇಳ್ಗೆವೆತ್ತೆಸೆವ ಬೆಳ್ಗೊಳದಲು* ಬಹುಚಿತ್ರಭಿತ್ತಿಯಿಂ।
ನೋಡಿದರಂ ಮನಂಗೊಳಿಪುವೆಂಬಿನಮೇಚ ಚಮೂಪನರ್ತ್ಥಿಕೆಯ್
ಗೂಡೆ ಧರಿತ್ರಿ ಕೊಂಡು ಕೊನೆದಾಡೆ ಜಸಂ ನಲಿದಾಡೆ ಲೀಲೆಯಿಂ॥

ಎಂದು ಆ ಕೊಪಣಾದಿ ತೀರ್ಥದಲ್ಲಿ ಏಚ ಚಮೂಪನು ಜಿನೇಂದ್ರ ಭವನಂಗಳನ್ನು ಮಾಡಿಸಿದುದನ್ನು ಹೇಳುತ್ತಿದೆ. ಹೀಗೆ ಮೇಲಿನ ಎರಡು ಉದಾಹರಣೆಗಳಿಂದ ಗಂಗವಾಡಿಯಲ್ಲಿ ಗಂಗಣನೂ, ಬೆಳಗವತ್ತಿಯ ನಾಡಿನಲ್ಲಿ ಏಚರಸನೂ ಬಸದಿಗಳನ್ನು ಹೆಚ್ಚಾಗಿ ಕಟ್ಟಿಸಲು ಆಯಾ ನಾಡುಗಳನ್ನು ಕೊಪಣಕ್ಕೆ ಹೋಲಿಸಿದೆ. ಎಂದರೆ, ಗಂಗಣನೂ ಏಚರಸನೂ ತಂತಮ್ಮ ನಾಡುಗಳಲ್ಲಿ ಹೆಚ್ಚಾಗಿ ಬಸದಿಗಳನ್ನು ಕಟ್ಟಿಸಿ ಆಯಾ ನಾಡುಗಳನ್ನು ಕೊಪಣವನ್ನಾಗಿ ಮಾಡಿದರು. ಇನ್ನು ಮೂರನೆಯ ಉದಾಹರಣೆಯಲ್ಲಿ, ಮತ್ತೊಬ್ಬ ಏಚ ಚಮೂಪನು ಕೊಪಣಕ್ಕೆ ಬಂದಿದ್ದಾಗ ಅಲ್ಲಿ ಬಸದಿಗಳನ್ನು ಕಟ್ಟಿಸಿದ ಬಗ್ಗೆ ಉಲ್ಲೇಖವಿರುವುದು. ಈ ಆಧಾರಗಳಿಗೆ ಪುಷ್ಟಿಯಾಗಿ ಮುಂದೆ ವಿವೇಚಿಸಲಿರುವ ಸ್ಥಾನಿಕ ಶಾಸನಗಳಲ್ಲಿ:—

---

೨೭ ಇಲ್ಲಿ ಆಗಿನ ಕಾಲದಲ್ಲಿ (೧೦೫೨ ಕ್ರಿ. ಶ.) ಈ ಸ್ಥಳವು ಕೊಪ್ಪಳ ಎಂಬ ಅಂಕಿತದಿಂದ ಕರೆಯಲ್ಪಡುತ್ತಿತ್ತೋ ಎಂಬುದೊಂದು ವಿಚಾರಣೀಯ ವಿಷಯವು.

* ಈ ಕಾಲದ ಎಲ್ಲ ಶಾಸನಗಳಲ್ಲಿಯೂ ವ್ಯಂಜನಾಂತ ಶಬ್ದಗಳಿರುವುದಿಲ್ಲ; ಸಾಮಾನ್ಯವಾಗಿ ಅವು ಸ್ವರದಲ್ಲಿಯೇ ಅಂತ್ಯವಾಗುತ್ತವೆ. ಮಾತ್ರಾಧಿಕ್ಯ–ಅಕ್ಷರಾಧಿಕ್ಯಗಳನ್ನು ಲಕ್ಷಿಸದೆ ಲೇಖಕರು ಸ್ವರವನ್ನು ಸೇರಿಸಲು ಹಿಂಜರಿಯುವುದಿಲ್ಲ.

(i) ಈರಮ್ಮನ ಬಾವಿಯ ಶಾಸನ. ಇದರಲ್ಲಿ (೧) 'ಸಾಂತಲ... ಬಸದಿ'ಗೆ ಗೌರಾದೇವಿಯರ ಹಡಪದ ಲಖ್ಖ್ಪಾರ್ಯಸೆಂಬವನು ದತ್ತಿ... ವಾಗ, (೨) 'ಅರಸಿಯ ಬಸದಿ,' (೩) 'ತೀರ್ಥದ ಬಸದಿ,' (೪) 'ತಿಮ... ಬಸದಿ'—ಹೀಗೆ ನಾಲ್ಕು ಬಸದಿಗಳ ಉಲ್ಲೇಖವಿದೆ.

(ii) ಕೊಪ್ಪಳದ ಪಶ್ಚಿಮಕ್ಕಿರುವ ಪಾಲ್ಕೀಗುಂಡಿನ ಬೆಟ್ಟ... ಮೋರೇರ ಅಂಗಡಿಗಳು ಎಂಬ ಹೊದರಿನಲ್ಲಿರುವ ಒಂದು ಶಾಸನದಲ್ಲಿ (೫) ... ದೇವನ ಬಸದಿ' ಎಂಬೊಂದು ಜಿನಾಲಯದ ನಿರ್ದೇಶವಿದೆ.

(iii) ಇಲ್ಲಿಯ ನಿಜಾಂ ಕರ್ಣಾಟಕ ಇತಿಹಾಸ ಸಂಶೋಧಕ ... ಯವರ ಸಂಗ್ರಹದಲ್ಲಿರುವ ಜಿನಬಿಂಬಗಳ ಭಗ್ನ ಪೀಠಸ್ಥಗಳಾದ ಎರಡು... ಗಳಲ್ಲಿ (೬) 'ಕುಶಜಿನಾಲಯ' ವೆಂಬೊಂದು ಬಸದಿಯ ಹೆಸರು ಸಿಕ್ಕುತ್ತ...

(iv) ಊರ ಕೋಟೆಯ ನೈಋತ್ಯದಲ್ಲಿರುವ ಕೊತ್ತಲದ ... ಕೋಟೆಯ ಕೆಲಭಾಗವು ಬಿದ್ದಿದೆ. ಅದರಲ್ಲೊಂದು ಪದ್ಮಾಸನದಲ್ಲಿ... ಜಿನಬಿಂಬದಿಂಡವಿಷ್ಟೇ ಇದೆ. ಅದರ ಗದ್ದುಗೆಯಲ್ಲಿ:—

(೧) ಶ್ರೀ ಮೂಲ ಸಂ[ಘ*]ದ ೨೭ಬಲಕರಗಣದ ಪುಷ್ಪದಂತ ತೀರ್ಥ...
(೨) ರ ಸೌಥದಲಿ ಬೊಮ್ಮಿಸಮುಗ ಸಾಂಸಜಮಾಡಿದ ಪ್ರತಿಮೆ.

ಎಂದಿರುವುದರಿಂದ ಬಲಾತ್ಕಾರಗಣದ, (೮) 'ಪುಷ್ಪದಂತ ಜಿನಾಲಯ'... ನಿರ್ದೇಶಿಸಿದಹಾಗಾಯಿತು. ಕೊಪಣದಲ್ಲಿ ಚತುರ್ವಿಂಶತಿ ಜಿನಮು... ಗಳಿದ್ದವೆಂದು ಶ್ರವಣಬೆಳ್ಗೊಳದ ಖಳಚನೆಯ (ಕ್ರಿ. ಶ. ೧೧೫೮ ರ) ಶಾಸ...

ಪ್ರಿಯದಿಂದಂ ಪುಳ್ಳ ಸೇನಾಪತಿ ಕೊಪಣ ಮಹಾತೀರ್ಥದೊಳ್ ಧಾತ್ರಿ...
ರ್ಧಿಯುಮುಳ್ಳನ್ನಂ ಚತುರ್ವಿಂಶತಿ ಜಿನಮುನಿ ಸಂಘಕ್ಕೆ ನಿಶ್ಚಿಂತ...
ಕ್ಷಯದಾನಂ ಸಲ್ವ ಪಾಂಗಿಂ ಬಹುಕನಕಮನಾಕ್ಷೇತ್ರಜರ್ಗಿತ್ತು ಸ...
ತ್ತಿಯನಿನ್ತೀ ಲೋಕಮೆಲ್ಲಂ ಪೊಗಳೆ ಬಡಿಸಿದಂ ಪುಣ್ಯ ಪುಂಜೈಕಧಾಮ...

ಎಂದು ಹೇಳುತ್ತಿದೆ. ಇಲ್ಲಿದ್ದುದು ಮೂಲಸಂಘದ ಬಲಾತ್ಕಾರ... ಪುಷ್ಪದಂತ ಜಿನಾಲಯವು. ಹೀಗೆಯೇ ಮೂಲಸಂಘದ ದೇಸಿಗಗಣ... ದೇಸಿಗಣ—ಮೊದಲಾದವುಗಳ ಪುಷ್ಪದಂತ ಜಿನಾಲಯಗಳೂ ಇದ್ದಿರ... ಕಲ್ಪಿಸಬಹುದು. ಸಾರಾಂಶ,—ಅಲ್ಲಿರುವ ಇಪ್ಪತ್ತುನಾಲ್ಕು ಜಿನಸ... ಒಂದೊಂದು ಪುಷ್ಪದಂತ ಜಿನಾಲಯ ಉಳ್ಳವುಗಳೆಂದರೆ ಅತಿಶಯೋಕ್ತಿ... ವೇನೂ ತಟ್ಟದು. ಅಂತೆಯೇ ಸ್ಥಳೀಯರಲ್ಲಿ ಊರೊಳಗೆ ೭೭೨ ಬಸ... ವೆಂದು ಐತಿಹ್ಯವಿದೆ. ಮತ್ತು "ಇದು ಜೈನ ಬಸದಿಯ ಊರು. ಇಲ್ಲಿಯ... ಊರ್ಜಿತವಾಗುವುದಿಲ್ಲ. ಆದರೂ ಒಂದೇ ಒಂದು ಪಟ್ಟ" ಎಂದೂ ಹೇಳ... ಇಲ್ಲಿ ಪ್ರೇತದಹನ ಕಾಲಕ್ಕೆ ಅದರ ತಲೆಯೊಡೆಯುವುದಿಲ್ಲವಂತೆ. ...

* ಈ ಅಕ್ಷರವು ಶಾಸನದಲ್ಲಿ ಇಲ್ಲ. ೨೮ ಇದು ಬಲಾತ್ಕಾರಗಣದ ಎಂದಿರಬೇಕು.
೨೯ 'ಊರಾಗ ೭೭೨ ಬಸ್ತಿ, ಬಾಜಿನ ಕಲ್ಲಮೇಲೊಂದು ಕಿಸ್ತಿ' ಎಂಬುವೊಂದು ... ಇಲ್ಲಿಯ ವೃದ್ಧರು ಇದು ಜೈನರ ಶಾಸಿ ಎಂದು ಹೇಳುವಾಗ ಅನ್ನುತ್ತಿದ್ದರು.

ಬಸದಿಯ ಸ್ಥಾನ ಮಾಹಾತ್ಮ್ಯವನ್ನೇ ಹೇಳುತ್ತಾರೆ. ಈ ಎಲ್ಲ ಐತಿಹ್ಯಗಳ ಮಥಿತಾರ್ಥವೇನೆಂದರೆ, ಕೊಪಣವು ಬಸದಿಗಳ ಆಗರವಾಗಿತ್ತು; ಅದು ಜೈನರ ಕಾಸಿ ಎಂದರೆ ಅವರ ಪುಣ್ಯಕ್ಷೇತ್ರವಾಗಿತ್ತು; ಹಾಗೂ ಅದು ಈ ಕೊಪ್ಪಳವೇ ಎಂಬುದು ಸಿದ್ಧ.

ಮೇಲೆ ವಿವರಿಸಿದಂತೆ ಕೊಪಣದಲ್ಲಿದ್ದ ಚತುರ್ವಿಂಶತಿ ಜಿನ ಸಂಘಗಳು ಒಂದೊಂದರಲ್ಲಿ ೩೨ ಶಾಖಾ ಗಣಗಳುಳ್ಳವುಗಳಾಗಿಯೂ, ಈ ಎಲ್ಲವುಗಳಿಗೆ ನಾಲ್ಕು ಅಧಿ ಸಂಘಗಳಾಗಿಯೂ ಇದ್ದಿರಬೇಕು. ಹೀಗೆ ಕಲ್ಪಿಸಿದರೆ ಕೊಪಣದಲ್ಲಿ ೭೭೨ ಬಸದಿಗಳಿದ್ದಾವೆಂಬ ಸ್ಥಾನಿಕ ಜಾನಪದ ವಾಕ್ಯದಲ್ಲಿ ಹುರುಳುಂಟೆಂದು ಕಂಡುಬರುವುದು.

(v) ಕೊಪ್ಪಳದಲ್ಲಿ ಈಗಲೂ ಇರುವ ನೇಮಿನಾಥ ಜಿನಾಲಯದಲ್ಲಿ ಒಂದು ಚೌವ್ವೀಸ ತೀರ್ಥಕರ ಮೂರ್ತಿಯಿತ್ತು.[೩೦] ಆದರ ಗದ್ದುಗೆಯಲ್ಲಿಯ ಶಾಸನದಲ್ಲಿ (೯) 'ಕೊಪಣತೀರ್ಥದ ದಣ್ಣಾಯಕ ಬಸದಿ'ಯ ಉಲ್ಲೇಖವಿದೆ. ಇದಲ್ಲದೆ ಈಗಿರುವ ನೇಮಿನಾಥ ಜಿನಾಲಯದಲ್ಲಿ ಶಾಂತಿನಾಥ ಮೂರುತಿ ಇದೆ. ಆದನ್ನು ಆ ಜಿನಾಲಯವು ನಾಶವಾಗಲು ಇಲ್ಲಿ ತಂದಿರಿಸಿದುದಾಗಿ ಹೇಳುತ್ತಾರೆ. ಹೀಗೆ ಈ ಶಾಂತಿನಾಥ ಬಸದಿಯ ಉಲ್ಲೇಖವು ಹತ್ತ್ತನೆಯದು.

(vi) ಕೊಪ್ಪಳದ ನೈಋತ್ಯದಲ್ಲಿ (ಸುಮಾರು ೧೬ ಮೈಲು) ಉಪ್ಪಿನ ಬೆಟಗೇರಿ ಎಂಬ ಗ್ರಾಮದಲ್ಲಿನ ರಾಷ್ಟ್ರಕೂಟ ವಂಶದ ೩ನೆಯ ಕನ್ನರನ ಕಾಲದ ಒಂದು ಶಾಸನದಲ್ಲಿ ಕೊಪಣದಲ್ಲಿ (೧೧) 'ಜಯಧೀರ ಜಿನಾಲಯ' ವೆಂಬುದೊಂದು ಇತ್ತು ಎಂದು ಉಲ್ಲೇಖವಿದೆ.

(vii) ಮೊನ್ನೆ ಪ್ರಸಿದ್ಧವಾದ ಕೆಳದಿಯ ಸದಾಶಿವನಾಯಕನದೊಂದು ತಾಮ್ರಶಾಸನದಲ್ಲಿ[೩೧] :—

"ಈ ಧರ್ಮಕ್ಕೆ ಆವನಾನೊಬ್ಬ ಜೈನನಾದವ ತಪ್ಪಿದರೆ ಬೆಳುಗುಳದ ಗುಮ್ಮಟನಾಥ, ಕೊಪಣದ ಚಂದ್ರನಾಥ, ಉಜ್ಜಂತಗಿರಿಯ ನೇಮೇಶ್ವರ ಮೊದಲಾದ ಜಿನಬಿಂಬಗಳನೊಡೆದ ಪಾಪಕ್ಕೆ ಹೋಹರು."

೩೦ ಈ ಮೂರ್ತಿಯೂ ಹಾಗೂ ಪಂಚಪರಮೇಷ್ಠಿ ಎಂಬ ಮೂರ್ತಿಯೂ ಇವುಗಳ ಸಂಗಡ ಇನ್ನೂ ೫ ಸಣ್ಣ ಜಿನ ಮೂರ್ತಿಗಳೂ ಕೊಪ್ಪಳ ಜಿಲ್ಲೆಯ ಎಲಬುರ್ಗಿ ಎಂಬಲ್ಲಿ ಹೊಲದಲ್ಲಿಯ ದಿನ್ನೆಯನ್ನು ಅಗೆಯುವಾಗ ಸುಮಾರು ೨೦ ವರ್ಷಗಳ ಪೂರ್ವದಲ್ಲಿ ದೊರೆತವಂತೆ. ಅವುಗಳನ್ನು ಸರಕಾರದವರು ಕೊಪ್ಪಳದಲ್ಲಿಯ ಮೇಲೆ ಹೇಳಿದ ಜೈನ ಮಂದಿರಕ್ಕೆ ಕೊಟ್ಟಿದ್ದರು. ಆದರೆ ಹೈದರಾಬಾದಿನ ಆರ್ಕಿಯಾಲಾಜಿಕಲ್ ಡೈರೆಕ್ಟರರು ಇಲ್ಲಿಯ ಸಂಶೋಧನೆಗಾಗಿ ಬಂದಾಗ ಅವುಗಳನ್ನು ನೋಡಿ, ಇವು ಅತ್ಯಂತ ಸುಂದರವಾಗಿರುವುದರಿಂದ ತಮ್ಮ ಪ್ರಾಚೀನ ವಸ್ತುಸಂಗ್ರಹಾಲಯಕ್ಕೆ ತರಿಸಿಕೊಳ್ಳಬೇಕೆಂದು ಪ್ರಯತ್ನಿಸಲು, ಇಲ್ಲಿಯ ಜಹಗೀರ್ದಾರರಾದ ಸರ್ ಸಾಲಾರಜಂಗರವರು ಸ್ವಂತದ ಸರೋರನಗರದ ವಸ್ತುಸಂಗ್ರಹಾಲಯಕ್ಕೆ ಅವನ್ನು ಸಾಗಿಸಿದರು (೧೦–೧೯೩೧). ಈಗ ಅವು ಅಲ್ಲಿಯೇ ಇವೆ. ಇದೇ ಚತುರ್ವಿಂಶತಿ ತೀರ್ಥಂಕರ ಮೂರ್ತಿಯನ್ನೇ ನೋಡಿ ಶ್ರೀಯುತ ಆರ್. ನರಸಿಂಹಾಚಾರ್ಯರವರು ೧೯೧೬ರ ಮೈಸೂರ ಆರ್ಕಿಯಾಲಾಜಿಕಲ್ ರಿಪೋರ್ಟಿನಲ್ಲಿ (ಪುಟ ೮೩) ಇದು ಚಂದ್ರನಾಥ ಬಸದಿಯಲ್ಲಿದೆ ಎಂದೂ ಅದರಲ್ಲಿ ಕೊಪಣಕ್ಕೆ ತೀರ್ಥವೆಂಬ ವಿಶೇಷಣವಿದೆ ಎಂದೂ ಬರೆದಿದ್ದಾರೆ. ಆದರೆ ಆ ಬಸದಿ ಚಂದ್ರನಾಥ ಬಸದಿಯಲ್ಲ; ನೇಮಿನಾಥ ಜಿನಾಲಯವು.

೩೧ *Epigraphia Indica*, Part V, January 1931 ; p. 94.

ಎಂದಿರುವುದರಿಂದ ಕೊಪಣದಲ್ಲಿ ಚಂದ್ರನಾಥನ ಪ್ರಸಿದ್ಧವಾದ ಮೂರ್ತಿ... ಅರ್ಥಾತ್ ಜಿನಾಲಯವಿದ್ದಿರಬೇಕೆಂಬುದು ಸಿದ್ಧ.

ಇಷ್ಟೆಲ್ಲ ವಿವರಣೆಯ ಫಲಿತಾಂಶವೇನೆಂದರೆ:—ಕೊಪಣವು ... ಗಣನಾತೀತ ಜಿನಾಲಯಗಳುಳ್ಳದುದಾಗಿತ್ತು ಎಂಬುದನ್ನು ಸ್ಥಾನಿಕ ... ವಾಕ್ಯದಿಂದಲೂ, ಹಾಗೂ ಅನ್ಯ ಮತ್ತು ಸ್ಥಾನಿಕ ಐತಿಹಾಸಿಕ ಆಧಾರ... ಸಿದ್ಧಿಸಿ, ಆ ಅಪಾರ ಜಿನಾಲಯಗಳಲ್ಲಿ: (೧) ಸಾಂತಲದೇವಿಯರ ಬಸದಿ, ... ತಿಮುಂಬರಸಿಯ ಬಸದಿ, (೩) ತೀರ್ಥದ ಬಸದಿ, (೪) ಅರಸಿಯ ಬಸದಿ, (೫) ... ದೇವನ ಬಸದಿ, (೬) ದಣ್ಣಾಯಕ ಬಸದಿ, (೭) ಚಂದ್ರನಾಥ ಬಸದಿ, (೮) ... ನಾಥ ಬಸದಿ, (೯) ಕುಶ ಜಿನಾಲಯ, (೧೦) ಪುಷ್ಪದಂತ ಜಿನಾಲಯ, ... ಜಯಧೀರ ಜಿನಾಲಯ, (೧೨) ನೇಮಿನಾಥ ಜಿನಾಲಯ[೩೨] ಎಂಬ ... ಜಿನಾಲಯಗಳ ನಾಮಗಳನ್ನು ಐತಿಹಾಸಿಕ ರೀತ್ಯಾ ಸಂಶೋಧಿಸಿದಂತಾಯಿತು.

## ಉಪಸಂಹಾರ

ಇನ್ನು ಪ್ರಾಚೀನ ಕೊಪಣದ ಆ ಅಸಂಖ್ಯ ಜಿನಾಲಯಗಳೇನಾದುವು... ಸಂಶೋಧಿಸುವ.

ಪ್ರಾಚೀನತಮ ಕೊಪಣ ಮಹಾತೀರ್ಥದ ಕಾಲಕ್ಕೆ ಈಗಿರುವ ಕೆಳ... ದುರ್ಗವೂ ಬೆಟ್ಟದಮೇಲಿರುವ ಕೋಟೆ ಹಾಗೂ ಊರು ಸುತ್ತಲಿರುವ ಕೋಟೆ... ಗೋಡೆಯೂ ಇದ್ದಿರಲಾರವು. ಆಗ್ಗೆ ಕೊಪಣವು ಜಿನಾಲಯಗಳಿಂದಲೂ... ಮುನಿಗಳಿಂದಲೂ ಯುಕ್ತವಾಗಿ ಇಲ್ಲಿರುವ ಎಲ್ಲ ಬೆಟ್ಟಗಳಮೇಲೂ ಕೆಳಗೂ ... ವುದೊಂದು ಪವಿತ್ರ ಕ್ಷೇತ್ರವಾಗಿದ್ದಿತು. ಇಲ್ಲಿಯ ಹಳಬರು ಹಳೆಯ ಕೊಪ್ಪಳ... ಪಾಲ್ಕೀಗುಂಡಿನ ಬೆಟ್ಟವನ್ನೂ, ಚಂದ್ರಬಂಡೆಯನ್ನೂ, ಅಲ್ಲದೆ ಹಿರಿಯ ... ದಂಡೆಯ ಅನತಿ ದೂರದಲ್ಲಿರುವ ಬೈಲನ್ನೂ ತೋರಿಸುತ್ತಾರೆ.

ಈಗಿರುವ ದುರ್ಗವನ್ನೂ ಕೋಟೆಯ ಗೋಡೆಯನ್ನೂ ಯಾರು ಕ... ರೆಂಬುದು ಗೂಢವಾಗಿದೆ. ಕೋಟೆಯಮೇಲೆ ಎಲ್ಲಮ್ಮನ ದೇವಸ್ಥಾನವಿದೆ. ... ಸುತ್ತಣ ಕೋಟೆಯ ಗೋಡೆಯ ಕೆಲ ಕೊತ್ತಲಗಳ ಮಾದರಿಯು ಚಾಲುಕ್ಯ... ದ್ದಾಗಿದೆ. ಅನಂತರ ಬಿಜಾಪುರದ ಬಾದಶಹರೂ, ಟೀಪುವಿನ ಕಾಲದ ಕಿಲ್ಲೇದಾ... ಜೀರ್ಣೋದ್ಧಾರಮಾಡಿಸಿದಂತೆ ಕಾಣುತ್ತದೆ.

ಊರಲ್ಲಿದ್ದ ಹಾಗೂ ಬೆಟ್ಟದಮೇಲಿದ್ದ ಬಸದಿಗಳೆಲ್ಲವನ್ನು ಉಧ್ವಸ್ತ... ನಂತರ ಆ ಕಲ್ಲುಗಳಿಂದಲೇ ಊರ ಸುತ್ತಣ ಹಾಗೂ ಬೆಟ್ಟದಮೇಲಿನ ಕೋಟೆ... ಗೋಡೆಯನ್ನೂ ಕಟ್ಟಿದ್ದಾರೆ. ಇದು ಬರಿಯ ಊಹೆಯ ಸಿದ್ಧಾಂತವಲ್ಲ. ... ಕೋಟೆಯ ಗೋಡೆಯಲ್ಲಿ, ಬಸದಿಯ ಮಹಾದ್ವಾರದಮೇಲೆ ಇರುವ...

೩೨ ಈ ಜಿನಾಲಯವು ಈ ಹೊತ್ತಿಗೂ ಇದೆ.

ಜಿನಬಿಂಬಗಳೂ, ಚಿತ್ರಿಸಿ ಕಟ್ಟಿದ ಕಂಬ-ಬೋದು-ಗದ್ದುಗೆಗಳೂ ಹೇರಳವಾಗಿ ಕಾಣ ಬರುತ್ತಿವೆ. ಕೋಟೆಯ ದಕ್ಷಿಣ ಭಾಗದ 'ಕೊರವಿಯ ಕೊತ್ತಲ'ದಲ್ಲಿ ಇಪ್ಪತ್ತಕ್ಕೆ ಮೇಲ್ಪಟ್ಟ ಶಿಲಾಶಾಸನಗಳೂ ಅವುಗಳ ತುಣುಕುಗಳೂ ಗೋಡೆಗಲ್ಲುಗಳಾಗಿವೆ. ಇವುಗಳಲ್ಲಿ ಕೆಲ ಶಾಸನಶಿಲೆಗಳು ಅಚ್ಚ ಕರಿಯಕಲ್ಲಿನವಿರುವುವು. ಇವುಗಳಲ್ಲಿನ ಕೆಲ ಶಾಸನಾಕ್ಷರಗಳು ೯ರಿಂದ ೧೩ನೆಯ ಶತಮಾನದವರೆಗೂ ಇರುವವು. ಇದಲ್ಲದೆ ಕೆಲ ಬಿಳಿಯಕಲ್ಲಿನ ಕಂಬ, ತೊಲೆ ಇವುಗಳಮೇಲಿನವು ೬ನೆಯ ಶತಮಾನದ ಅಕ್ಷರ ಗಳಿರುವವು. ಇದಕ್ಕೆ ಶಾಸನಕೊತ್ತಲವೆಂದರೂ ಸಲ್ಲುವುದು. ಗೋಡೆಕಾರರು ಇದೇನನ್ನೂ ಲಕ್ಷಿಸದೆ ತವಮ್ಮ ಗೋಡೆಗೆ ನೀಟಾಗುವಂತೆ ಲೇಖನಗಳನ್ನು ಬುಡಕ್ಕೋ ಮಗ್ಗುಲಲ್ಲಿಯೋ ಮೇಲೆಯೋ ಮಾಡಿ ಕಟ್ಟಿಬಿಟ್ಟಿದ್ದಾರೆ. ಗೋಡೆ ಈಗ ಬಿರಿದುದರಿಂದ ನಮಗೀಗ ಹೀಗೆ ಹೇಳಲು ಎಡೆಯುಂಟಾಗಿದೆ.

ಪೂರ್ವಕಾಲದ ಕೊಪಣದಲ್ಲಿ ಕರಿಯಕಲ್ಲಿನ ಸುಂದರವಾದ ಜಿನಾಲಯುಗಳೂ ಇದ್ದಾವೆಂದು ಅನುಮಾನಿಸಬಹುದು. ಈ ಅನುಮಾನಕ್ಕೆ ಸ್ಥಿರತೆಯುಂಟಾಗುವಂತೆ, ಕೋಟೆಯಲ್ಲಿರುವ ವೇಂಕಟೇಶ ದೇವಾಲಯದ ಮಹಾದ್ವಾರದ ಬಲಕ್ಕೆ ಒಳಗಡೆ ಇರುವ ಪೋಳಿಯಲ್ಲಿಯೂ, ಎಡಕ್ಕಿರುವ ಸಾರ್ವಜನಿಕ ಶ್ರೀ ಗಜಾನನ ವಾಚನಾಲಯ ದಲ್ಲಿಯೂ ಸುಂದರವಾದ ಕೆತ್ತನೆಯ ಕೆಲಸದಿಂದೊಪ್ಪುವ ಕರಿಯಕಲ್ಲಿನ ನಾಲ್ಕು ಕಂಬಗಳಿವೆ. ಈ ಕಂಬಗಳ ನಾಲ್ಕೂ ಮಗ್ಗುಲಲ್ಲಿಯೂ ಪರ್ಯಂಕಾಸನದಲ್ಲಿ ಕುಳಿತ ಜಿನ ಬಿಂಬಗಳಿವೆ. ಇಂತಹ ಕಂಬಗಳೇ ಕೋಟೆಯ ದಕ್ಷಿಣಭಾಗದ ಒಳಬದಿಯಲ್ಲಿರುವ ಡಣೂಕನ ಬಾವಿಯಲ್ಲಿರುವ ಕೃಷ್ಣದೇವರ ಗುಡಿಯಲ್ಲಿಯೂ, ಊರ ದಕ್ಷಿಣದ ಎಲ್ಲೆ ಯಂತಿರುವ ಶ್ರೀ ಸಿರಸಪ್ಪೈಯನವರ ಮಠದ ಶಿವಾಲಯದಲ್ಲಿಯೂ ಹೊರಗೂ ಇರುವವು. ಹಿಂದೆ ಸೂಚಿಸಿದ ವೇಂಕಟೇಶ ದೇವಾಲಯವು ಜಿನಾಲಯದ ಮಾದರಿಯದಾಗಿದೆ. ಮಹಾದ್ವಾರದಮೇಲೆ ಇರಬಹುದಾದ ಜಿನಬಿಂಬವನ್ನು ಒಡೆದು ಆ ತೆಗ್ಗನ್ನು ಗಚ್ಚಿ ನಿಂದ ತುಂಬಿ ಶ್ರೀಕಾರ ಹಾಕಲೀಗ ಉಪಯೋಗಿಸಿದ್ದಾರೆ. ಚಂದ್ರಬಂಡೆಯಲ್ಲಿರುವ ಶಾಸನ ಸ್ಥಳಕ್ಕೆ ಹೋಗುವ ದಾರಿಯಲ್ಲಿ ಒಂದು ಸುಂದರ ಕೆತ್ತನೆಯ ತಲೆಯಿಂದೊಡ ಗೂಡಿದ ಭುವನೇಶ್ವರಿಯ ಒಡಕ ಕರಿಯಕಲ್ಲಿನ ಹಲಗೆ ಇದೆ. ನಿಜಾಂ ಕರ್ಣಾಟಕ ಇತಿಹಾಸ ಸಂಶೋಧಕ ಸಮಿತಿಯವರ ಸಂಗ್ರಹದಲ್ಲಿ ಸುಮಾರು ೨೦ ಅಂಗುಲ ಉದ್ದ, ೧೬ ಅಂಗುಲ ಅಗಲ ಇರುವುದೊಂದು; ೨ ಅಡಿ ಅಗಲ, ೪ ಅಡಿ ಉದ್ದ ಇರುವು ದೊಂದು—ಈ ರೀತಿ ಕರಿಯಕಲ್ಲಿನ ಎರಡು ಹಲಗೆಗಳಿವೆ. ಇವುಗಳಲ್ಲಿ ಅಂಗುಲಕ್ಕೊಂದ ರಂತೆ ಸಲಕ್ಷಣ ಜಿನಮೂರ್ತಿಗಳಿವೆ. ಹಿಂದೊಮ್ಮೆ ಸೂಚಿಸಿದ ಶಾಸನಕೊತ್ತಲದ ಒಳಬದಿಯಲ್ಲಿ ಒಂದು ಬಾವಿ; ಅದಕ್ಕೆ 'ಡಣೂಕನಬಾವಿ' ಎಂದು ಹೆಸರು. ಅದನ್ನು ಡಣೂಕ ಮುದ್ದನೆಂಬವನು ಕಟ್ಟಿಸಿದನೆಂದು ಹೇಳುತ್ತಾರೆ.[೬೬] ಇದು ೧೦—೧೨ ಆಳುದ್ದ ಆಳವಾದುದು. ತಳದಲ್ಲಿ ಉಸುಕಿದ್ದು, ಶಿಲೆಯು ಬಹು ದೊಡ್ಡದಾಗಿದೆ. ಇದು ಪೂರ್ವದಲ್ಲಿ ಕಟ್ಟಿದ್ದಿರದೆ ಹಾಗೆಯೇ ಹರಿಯುವ 'ಝುರಿ'ಯಾಗಿರಬೇಕೆಂದು ನನ್ನ

೬೬ 'ಡಣೂಕ' ಇದು 'ದಣ್ಣಾಯಕ' ಇದರ ತದ್ಭವವಾಗಿರಬಹುದೇ?

ಊಹೆ. ಕೊಪಣವು ಉಧ್ವಸ್ತವಾಗಿ ಜಿನಾಲಯಗಳೆಲ್ಲವೂ ನಾಶವಾದ
ಅಥವಾ ಅವುಗಳ ಮಹತ್ವವು ಕಡಮೆಯಾದನಂತರ ಅವೇ ಕಲ್ಲುಗಳಿಂದ
ಯನ್ನು ಕಟ್ಟಿದ್ದಾರೆ. ಇದನ್ನು ಪ್ರತ್ಯಕ್ಷವಾಗಿ ನೋಡಿ ಮನಗಾಣ
ಇಲ್ಲಿಯ ಕಲ್ಲುಗಳು ಬಿಳಿಯ ಬಸದಿಯವು. ಒರಟಾದ ಬಿಳಿಯಕಲ್ಲುಗ
ಕುಸುರಿನ ಕೆತ್ತನೆಯ ಕೆಲಸವು ಸೊಗಸಾಗಿ ಮಾಡಿದ್ದಾಗಿದೆ. ಇದರಿಂದಲೂ
ಕೊಪಣದಲ್ಲಿ ಬಿಳಿ, ಹಾಗೂ ಕರಿಯಕಲ್ಲಿನ ಸುಂದರವಾದ ಬಸದಿಗಳು ಇದ್ದ
ಬಲ ಬರುತ್ತಿದೆ. ಬಾವಿಯನ್ನು ಕಟ್ಟಿಸುವಾಗ ದೊಡ್ಡದಾದ ಆ ಶಿಲೆಗ
ಬಡೆದು ಸಣ್ಣದನ್ನಾಗಿ ಮಾಡಿ ಬಾವಿಗೆ ಉಪಯೋಗಿಸಿದ್ದಾಗಿದೆ. ಇದೇ
ಆ ತೀರ್ಥವಾಗಿರಬಹುದೇ?

ಕೊಪಣವು ಅತಿಪುರಾತನ ಕಾಲದಲ್ಲಿ ಈ 'ಡಣಾಕ'ನ ಬಾವಿಯ
ಸಮಾಂತರವಾದ ಪ್ರದೇಶದಲ್ಲಿ ಎಂದರೆ ಈಗಿರುವ ಊರಿನಿಂದ ಸುಮಾರು ೮-೧
ಕೆಳಬದಿಯಲ್ಲಿದ್ದಿರಬಹುದು. ಬಾವಿಗೆ ಬಸದಿಯ ಕಲ್ಲುಗಳನ್ನು ಉಪಯೋಗಿ
ಇದಕ್ಕೆ ಸಾಕ್ಷಿಯಾಗಿದೆ. ಪೂರ್ವದ ಜನರು ಕೆರೆಬಾವಿಗಳನ್ನು ಚಿರಸ್ಥಾಯಿ
ವಂತೆ ಕಟ್ಟುತ್ತಿದ್ದರು. ಆದರೀ ಬಾವಿಯ ಕಟ್ಟು ಹಾಗಿರದೆ ಎಲ್ಲಿಯವೋ
ಕಲ್ಲುಗಳನ್ನು ತಂದು ಜೋಡಿಸಿ ಕಟ್ಟಿದಂತಿದೆ. ಮತ್ತು ಊರು ಮೇಲೆ
ಏರಿದಂತೆ, ಅಷ್ಟಷ್ಟೇ ಕಟ್ಟಡವನ್ನು ಏರಿಸುತ್ತಾಹೋದ ಗುರುತೂ ಸ್ಪಷ್ಟ
ಕಾಣುತ್ತಿದೆ. ಈ ಮೇಲಿನ ಊಹೆಗೆ ಬಲವಾದ ಇನ್ನೊಂದು ಆಧಾ
ಹತ್ತೆಂಟು ವರ್ಷಗಳ ಹಿಂದೆ ಇಲ್ಲೊಬ್ಬ ಸದ್ಗೃಹಸ್ಥರು ತಮ್ಮ ಹಿತ್ತಿಲಲ್ಲಿ
ಬಾವಿ ತೋಡಿಸಿದರು. ಆಗ್ಗೆ ಆ ತೋಡಿದ ತೆಗ್ಗಿನಲ್ಲಿ ಒಂದೊಂದು ಆಳಿನ ಪ್ರ
ನಾಲ್ಕೈದು ಪದರಗಳಿದ್ದು, ಕಡೆಯ ಎರಡು ಪದರಗಳಲ್ಲಿ ಗಡಿಗೆ ಮ
ದೊರೆತವು.[೨೫] ಆ ಪದರಗಳು ಬಿದ್ದ ಮಣ್ಣಿನವೆಂಬಂತೆ ಸ್ಪಷ್ಟವಾಗಿ ಕಾಣುತ್ತಿ
ಒಂದೊಂದು ಪದರ ಬುಡಕ್ಕೆ ಸವಕಳಿಯಾದ ಭೂಮಿಯು ಕಾಣುತ್ತಿತ್ತು.
ವಿವರಣೆಯ ಫಲಿತಾಂಶವಾಗಿ ಪ್ರಾಚೀನ ಕೊಪಣವು ಅಷ್ಟು ಕೆಳಬದಿಯ
ಬೇಕೆಂದು ಅನುಮಾನಿಸಿದುದು ದೋಷವಾದೀತೆ?

ಇಂತು, ಕ್ರಿಸ್ತ ಪೂರ್ವ ೨೭೨ರ ಅಶೋಕ ಸಾಮ್ರಾಟನ ಕಾಲದಿಂದ ಬೌದ್ಧ
ಗಳ ವಿಹಾರವೂ, ಜೈನ ಯತಿಗಳ ಬಸದಿ ಸ್ಥಳವೂ ಕೋಟೆ ಕೊತ್ತಲಗಳಲ್ಲಿ
ಸಮರೋತ್ಸಾಹದಿಂದ ಮೈಮರೆವ ಯೋಧರ ಭೂಮಿಯೂ, ಅಲ್ಲದೆ ತಿರು
ಬೀಡೂ ಆದ ಕೊಪಣವೇ ಸದ್ಯದ ಕೊಪ್ಪಳವು.

---

೨೪ ಕೊಪಣವು ನೃಪತುಂಗನ ಕಾಲದಿಂದ (೮೧೫ ಕ್ರಿ. ಶ.) ಹಿಂದೆ ಹೇಳಿದ ಕೆಳದಿಯ
ನಾಯಕನ ತಾಮ್ರಶಾಸನ ಕಾಲದ (ಕ್ರಿ. ಶ. ೧೫೫೬) ವರೆಗೆ ಎಂದರೆ ಸುಮಾರು ಆರು ಶತಮಾ
ಪವಿತ್ರ ಕ್ಷೇತ್ರವಾಗಿದ್ದಿತು. ಆಮೇಲೆ ಹೀಗೆ ಅದರ ಉಲ್ಲೇಖ ಸಿಕ್ಕದ್ದರಿಂದಲೂ ವಿಜಯನಗರದ
ನಂತರ ಇಲ್ಲಿ ಮುಸಲ್ಮಾನೀ ಅರಸರ ಶಾಸನಗಳು ಸಿಕ್ಕುವುದರಿಂದಲೂ ಈ ಪವಿತ್ರ ಕ್ಷೇತ್ರ
ನಾಶವಾಗಿರಬೇಕು.

೨೫ ಇವುಗಳಲ್ಲಿಯ ಒಂದನ್ನು ಇಲ್ಲಿಗೆ ಹೈದರಾಬಾದ ಆರ್ಕಿಯಾಲಾಜಿಕಲ್ ಅಸಿಸ್ಟೆಂಟ್
ಬಂದಾಗ ಅವರಿಗೆ ಕೊಟ್ಟಿತ್ತು.

# ಗೋಪಿಕಾ ಗೀತೆ

ಶ್ರೀಮಾನ್ ಎಂ. ನಂಜುಂಡಶಾಸ್ತ್ರಿಗಳು, ಬಾಲಕನ್ನಡ ಸೇವಾ ಮಂಡಲಿ, ಮೈಸೂರು

---

ಗೋಪಿಕಾ ಗೀತೆಯು ಮಹಾಭಾಗವತದಲ್ಲಿ ದೊರೆಯುವ ಒಂದು ಸುಂದರ ಭಾವಗೀತ. ಬೃಂದಾವನದಲ್ಲಿ, ಕಾಳಿಂದೀತಡಿಯ ನಿಕುಂಜವನಗಳಲ್ಲಿ, ಗೋಪಿಯರು ಗೋಪಾಲಕೃಷ್ಣನನ್ನು ನೆನೆದು ಹಂಬಲಿಸಿದ ಪ್ರೇಮಗೀತವಿದು. ವೀರಶೈವ ವಾಙ್ಮಯವನ್ನು ಕುರಿತು ಶೋಧನೆಮಾಡುವ ಸಂದರ್ಭದಲ್ಲಿ 'ಕಾಲಜ್ಞಾನ'ದ ಪ್ರತಿಯ ಜತೆಗೆ ಈ ಗ್ರಂಥವು ದೊರೆಯಿತು. ಈ ಪುಟ್ಟ ಕಾವ್ಯವು ಹದಿನಾಲ್ಕು ಗರಿಗಳಲ್ಲಿ ಎಂದರೆ ಇಪ್ಪತ್ತೆಂಟು ಪುಟಗಳಲ್ಲಿ ಅಡಕವಾಗಿದೆ. ಇದರಲ್ಲಿ ನಾಲ್ಕು ಕೀರ್ತನೆಗಳಿವೆ; ಹತ್ತೊಂಬತ್ತು ಸಂಸ್ಕೃತ ಶ್ಲೋಕಗಳಿವೆ; ಎಂಬತ್ತಮೂರು ಪದಗಳಿವೆ. ಶ್ರೀಮದ್ಭಾಗವತ ದಶಮ ಸ್ಕಂಧದ ಮೂವತ್ತೊಂದನೆಯ ಅಧ್ಯಾಯದಲ್ಲಿ ಸಿಗುವ ಆ ಹತ್ತೊಂಬತ್ತು ಶ್ಲೋಕಗಳೇ ಇಲ್ಲಿ ಮಧ್ಯೆ ಮಧ್ಯೆ ಸೇರಿಸಲ್ಪಟ್ಟಿರುವುದು. ಒಂದು ಶ್ಲೋಕವಾದನಂತರ ಅದರ ಅರ್ಥವನ್ನು ವಿವರಿಸುವ ಹತ್ತಾರು ಚರಣಗಳು ವೃತ್ತ ಗಳನ್ನು ಅನುಸರಿಸಿ ಬೇರೆಬೇರೆ ಧಾಟಿಯಲ್ಲಿ ಬಂದು ಕಳೆಗೊಂಡಿವೆ. ಕೀರ್ತನೆಗಳ ಕೊನೆಯಲ್ಲಿ "ರನ್ನ ತಿರುಪತಿ ರಂಗಕೃಷ್ಣನೆ," "ರಂಗ ತಿರುಪತಿರಮಣ ವೆಂಕಟೊ ತುಂಗವಾಸನೆ," "ತಿರುಪತೀಶ ಗೋಪಾಲ। ಮುದ್ದು ವೇದವೇದ್ಯ ವೆಂಕಟೇಶ ಗೋಪಾಲ" ಮತ್ತು "ತಿರುಪತಿ ವೆಂಕಟ ಜೀವವನೆಮಗುಳುಹು" ಎಂದು ಕ್ರಮವಾಗಿ ಬಂದಿವೆ. ಇದರಿಂದ ಗೋಪಿಕಾ ಗೀತೆಯ ಕನ್ನಡ ಕರ್ತೃ ತಿರುಪತಿಯ ವೆಂಕಟರಂಗಾಖ್ಯನಾದ ವೈದಿಕ ಶ್ರೀವೈಷ್ಣವ ಬ್ರಾಹ್ಮಣನೆಂದು ಊಹಿಸಬಹುದು. ಪ್ರತಿಯನ್ನು ಬರೆದು ಮುಗಿಸಿದ ದಿವಸವಾಗಲಿ, ಕಾವ್ಯ ರಚನೆಯ ಕಾಲವಾಗಲಿ ತಿಳಿದುಬರುವುದಿಲ್ಲ.

ಸಾಮಾನ್ಯವಾಗಿ ವೈಷ್ಣವರು ಪೂಜೆಮಾಡುವಾಗಲೂ, ಮಂಗಳಾರತಿಯ ವೇಳೆಯಲ್ಲೂ, ಅನಂತರ ಸ್ತೋತ್ರಮಾಡುವಾಗಲೂ ಗೋಪಿಕಾಗೀತೆಗಳನ್ನು ಹೇಳು ವುದು ಸಂಪ್ರದಾಯವಾಗಿದೆ. ದನಿ ಚೆನ್ನಾಗಿಲ್ಲದಿದ್ದರೂ ಅದರ ಧಾಟಿ ದನಿಗೂಡಿಸುತ್ತದೆ. ಕನ್ನಡದ ಕವಿಯು ಅದೇ ಛಂದಸ್ಸನ್ನು ಅನುಸರಿಸಿ "ರಾಮ ರಕ್ಷಮಾಂ ಎಂಬ ವರ್ಣದಂತೆ" ಎಂದು ಶೀರ್ಷಿಕೆ ಬರೆದಿದ್ದಾನೆ. ಈ ಹಾಡು ಎಷ್ಟು ಮೋಹಕ ವಾಗಿದೆಯೆಂಬುದನ್ನು ಕೇಳಿ ತಣಿಯಬೇಕು. ಆನಂದ ರಾಮಾಯಣ ಕಾವ್ಯವನ್ನು ಓದುವಾಗ ಉಷಃಕಾಲದಲ್ಲಿ ಬಂಗಾರದ ಪಂಜರದಲ್ಲಿದ್ದ ಗಿಳಿಗಳು "ಜಯತು ರಾಘವೋ ಜಾನಕೀಯುತೋ। ಜಯತು ರಾಜರಾಜೇಶ ರಾಘವ॥" ಎಂಬುದನ್ನು ಹಾಡುವ ರೀತಿಯ ಗತ್ತು ಇಲ್ಲಿ ನೆನಪಿಗೆ ಬರುತ್ತದೆ.

'ವೆಂಕಟರಂಗ' ಕವಿಯು ಮೊದಲು ಒಂದು ಶ್ಲೋಕವನ್ನು ಬರೆದು, ಆಮೇಲೆ ಕನ್ನಡ ಚರಣಗಳನ್ನು ಬರೆದಿದ್ದಾನೆ. ಕಾವ್ಯವು ಹೀಗೆ ಪ್ರಾರಂಭವಾಗಿದೆ.—

ಜಯತಿತೇಧಿಕಂ ಜನ್ಮನಾವ್ರಜಃ । ಶ್ರಯತ ಇಂದಿರಾ ಶಶ್ವದತ್ರಹಿ॥
ದಯಿತ ದೃಶ್ಯತಾಂ ದೀಕ್ಷುತಾವಕಾ । ಸ್ತ್ವಯಿಧೃತಾಸವಃ ಸ್ತ್ವಾಂವಿಚಿನ್ವತೆ॥

* * * *

ಕೃಷ್ಣ ರಕ್ಷಿಸು ಕೃಷ್ಣ ಪಾಲಿಸು
ಕೃಷ್ಣ ತೋರಿಸು ವಿಷ್ಣುಮೂರ್ತಿಯು ।
ವೃಷ್ಣಿನಂದನ ಜಿಷ್ಣುಪಾಲನ
ಉಷ್ಣಕಿರಣ ಭ್ರಾಜಿಷ್ಣು ಕೃಷ್ಣನೆ ॥ ಪ ॥

ಪ್ರಾಣಕಾಂತನೆ ಪಾವನಾತ್ಮನೆ
ನೀನು ಜನಿಸಲು ನಿತ್ಯವ್ರಜವಿದು
ಜಾಣ ಜೈಸಿತು ಜಗವನೆಲ್ಲವ
ಮೀನು ತೇಜವ ಬಗೆಯುದಂದದಿ ॥ ೧ ॥

ಎಂದಿಗಗಲದೆ ಇಲ್ಲಿ ಲಕ್ಷ್ಮಿಯು
ಬಂದು ನಿಂದಳು ಬಾಣವಿಟ್ಟಳು
ನಂದಪುತ್ರನೆ ನಂಟರೆಲ್ಲರು
ನಿಂದು ನಿವಿಯಲು ನಮಗೆ ಕ್ಲೇಶವೆ ॥ ೨ ॥

ಹೊಕ್ಕು ವನಗಳ ಹೋದ ಬಳಿಯಲಿ
ಅಕ್ಕರಿಂದಲೆ ಅರಸಿ ನಿನ್ನನು
ದಿಕ್ಕುದಿಕ್ಕಲಿ ದಿಗಿಲು ಬೀಳುತ
ಸಿಕ್ಕಿಬಿದ್ದರೆ ಸೊರಗಿ ಬಂದೆವು ॥ ೩ ॥

ನಿನ್ನ ನಂಬಿದ ನಾವು ನಾಥನೆ
ಅನ್ಯರಂದದಿ ಅರಸತಕ್ಕವೆ?
ಇನ್ನು ಪ್ರಾಣವ ಇರಿಸಲಾಪೆವೆ?
ಚೆನ್ನಕೇಶವ ಚಕಿತರೀಕ್ಷಿಸು ॥ ೪ ॥

ಇರಿಸಿ ನಿನ್ನಲಿ ವಿಷ್ಣು ಪ್ರಾಣವ
ಇರುತಲಿರುವೆವು ಈ ಪ್ರಭಾವದಿ
ಪರಮ ಕಷ್ಟದಿ ಪ್ರಾಣೆಸಿರುವೆವು
ಪರಮಪುರುಷನೆ ಪಾಲಿಸೆಮ್ಮನು ॥ ೫ ॥

ನೀನೆಯಾದರು ನೋಡು ನಮ್ಮನು
ಮಾನದೊಡೆಯನೆ ಮೆಚ್ಚಿದವರನು
ಕಾಣಿಸೆಮ್ಮಯ ಕಣ್ಣಿಗಾದರು
ಶ್ರೀನಿಕೇತನೆ ಸಗುಣಮೂರ್ತಿಯೆ ॥ ೬ ॥

ನೋಡುವಿನಿಬರು ನಾವು ಬಳಲುತ
ಬೇಡಲೇತಕೆ ಬಯಸಿ ನಿನ್ನನು
ಕಾಡ ಕಾರಣವೇನುಯೆಂಬೆಯು
ನೋಡು ಹೇತುವ ನಾವು ಪೇಳ್ವೆವು ॥ ೭ ॥

ನೀನೆ ಕಷ್ಟವ ನಮಗೆ ಮಾಡಲು
ತ್ರಾಣ ತಗ್ಗಲು ತೊಡರಿಕೊಂಡೆವು
ಆ ನಿಧಾನವ ಅರುಹಿತೋರ್ಪೆವು
ಕಾಣು ಕಾಂತನೆ ಕಾದು ರಕ್ಷಿಸು ॥ ೮ ॥

ಇದರ ಮುಂದೆ ಇನ್ನೊಂದು ಸಂಸ್ಕೃತ ಶ್ಲೋಕವು ಬರುತ್ತದೆ. ಕಣ್ಣಿಗೆ ಕಾಣದ ಕೃಷ್ಣನನ್ನು ಗೋಪಿಯರು ವಿನಯದಿಂದ ಪ್ರಾರ್ಥಿಸಿ ಕರೆಯುತ್ತಿದ್ದಾರೆ. ಅವರು "ಅನ್ನುವ" ನುಡಿಗಳಲ್ಲಿ ಕಾವ್ಯ ಕಲ್ಪನೆಯ ಮೋಹಜ್ವಾಲೆಯಿಲ್ಲ. ಹೃದಯವನ್ನು ಮುಟ್ಟುವ ಮಾತಿದೆ; ಕನ್ನಡದ ಸೊಬಗಿದೆ. ಮೇಲೆ ಉದಾಹರಿಸಿರುವ ಪಾದಗಳಾವುದಕ್ಕೂ ವಿವರಣೆಯ ಆವಶ್ಯಕವಿಲ್ಲ. ತಾವಾಗಿಯೇ ಅರ್ಥ ಸ್ಪಷ್ಟತೆಯನ್ನು ಕೊಡುತ್ತಿವೆ. ಇನ್ನೂ ಹದಿನಾಲ್ಕು ಚರಣಗಳನ್ನು ಹಾಡಿ ಮುಗಿಸಿದರೆ ಮೊದಲನೆಯ ಕೀರ್ತನೆಯಾಗುವುದು. "ಕೃಷ್ಣ, ಈ ಅಶೇಷಕೆ ನೀನು ಏಕಸಾಕ್ಷಿ. 'ಕಾಯುವಿಡಿದಿಹೆ ಕಾಯೆ ವಿಶ್ವವ.' ನಿನ್ನ ದೃಷ್ಟಿಯು ನಮ್ಮನ್ನು ಹಿರಿದು ಸೆಳೆಯಿತು. ಭಯಗಳು ಎಷ್ಟು ಬಂದರೂ ನೀನು ಕಾಯಲಿಲ್ಲವೆ! ನಿನ್ನ ನಂಬಿದ ನಮ್ಮನ್ನು ಬನ್ನಬಡಿಸದೆ ಕಾಪಾಡು" ಎಂದು ಬೇಡುತ್ತಾರೆ:—

ಕೊಲುವೆ ಏತಕೆ ಕಾಣದೆಮ್ಮನು
ಕೊಲೆಯೆಯೆಂಬೆಯ ಕೇಳು ಕೇಶವ
ಕೊಲೆಯಿದಲ್ಲವೆ ಕಾಮು ಕೊಲ್ಲಲು
ಕೊಲಲು ಶಸ್ತ್ರದಿ ಕೊಲೆಯದಾಗದು ॥ ೧೩ ॥

ಅಳಿಸದುಳಿಸದೆ ಅಳಿಪುದೀ ಕೊಲೆ
ಉಳಿಸು ಉತ್ತಮ ಅಳಿಸಲದು ಸುಖ
ಬಳಲಿ ಬಾಡುವ ಭಯವ ಬೀರುವ
ಬಲುಹಿನೀ ಕೊಲೆ ಬೇಡ ಕೃಷ್ಣನೆ ॥ ೧೪ ॥

* * *

ಅನ್ಯ ಭಯುಗಳನಳಿವ ಮಹಿಮನೆ
ನಿನ್ನ ನಂಬಿದ ನಮ್ಮನಿಂದಿಗೆ
ಬನ್ನಬಡಿಪರೆ ಬಂದು ಭಾವಿಸು
ರನ್ನ ತಿರುಪತಿ ರಂಗ ಕೃಷ್ಣನೆ ॥ ೩೨ ॥

ಮುಂದಿನ ಕೀರ್ತನೆಯಲ್ಲಿಯೂ ಮೂವತ್ತೊಂದು ಚರಣಗಳಲ್ಲಿ ವಿರಹಾವಸ್ಥೆಯು ವರ್ಣಿಸಲ್ಪಟ್ಟಿದೆ. ಅದರಲ್ಲಿಯೂ ಯಾವ ರೀತಿಯಾದ ಅಶ್ಲೀಲತೆಯೂ ಇಲ್ಲ. "ಗರ್ವವೆಂದರೆ ಗುಣದ ಮೂಲದಿ ಸರ್ವ ಜನರಿಗೂ ಸೇರಿಯಿರುವುದು. ಗರ್ವ ಬರುವುದು ಜ್ಞಾನಬಲರಿಗೂ. ಆದ್ದರಿಂದ ಅಖಂಡ ಗರ್ವವನ್ನು ಕಡಿದು ಬಿಸುಡುವ ನಿನ್ನ ಮುಖವನ್ನು ಕರುಣಿಸಿ ತೋರಿಸು" ಎಂದು ಬೇಡುತ್ತಾರೆ ಇಲ್ಲಿ ಶ್ರೀಕೃಷ್ಣನ ಮುಗುಳು ನಗೆಗೂಡಿದ ಸುಂದರ ಮುದ್ದುಮುಖದ ಚಿತ್ರ ನಮ್ಮ ಮುಂದೆ ನಿಲ್ಲುತ್ತದೆ. ಅವನ ಕಥೆಯನ್ನು ನೆನೆದ ಮಾತ್ರಕ್ಕೆ ಆತ್ಮರಹರು. ಅಂತಹುದರಲ್ಲಿ ಅವನಲ್ಲಿಯೇ ನಿಂದ ಜೀವರು ಭಿನ್ನರಾದರೆ ಬದುಕಲಾಪರೆ? ಕವಿಗಳು ಈ ದಿವ್ಯ ಕಥೆಯನ್ನುದ್ಧರಿಸಿ ತಮ್ಮ ದೋಷಗಳನ್ನೆಲ್ಲಾ ನೀಗಿಕೊಳ್ಳುತ್ತಾರೆ. ಬರಿಯ ಕಥೆಯಲ್ಲೇ ಭಾಗ್ಯವು ಬರುವಾಗ ನಿನ್ನಲ್ಲೇ ಬೆರೆತು ಭರಿತಭಾವರಾದವರು ಬಿಡುತ್ತಾರೆಯೇ?— ಎಂಬೀ ಭಾವಗಳೆಲ್ಲಾ ಚೆಲುವಾಗಿ ಸಾಂದ್ರವಾಗಿವೆ.

ನಿನ್ನ ಕಥೆಯದು ನಿತ್ಯದಮೃತವು
ತನ್ನ ನಂಬಲು ತಪವ ತೆಗೆವದು
ಧನ್ಯ ಕವಿಗಳು ಧರಿಸುತಿರುವರು
ಮುನ್ನ ದೋಷವ ಮುಗಿಸಿ ಬಿಡುವರು ॥ ೨೦ ॥

ಕವಿಯು ಎಂದರೆ ಕಮಲಜನ್ಮನು
ದಿವಿಜರಿಂದಲು ಧರಿಸುವಮೃತವ
ಸವಿಯಲೊಲ್ಲದೆ ಸೇರದೆಸ್ಮೃತ
ಸವಿವ ಸತ್ಕಥಾಸಾರದಮೃತವ ॥ ೨೧ ॥

ವಿಮಲ ಕಥೆಯಿದು ವಿಧಿತವಾದರೆ
ಅಮರಲೀಸದು ಅಧಿಕ ಕಾಮ್ಯವ
ಅಮರರಮೃತವು ಅತಿಪ್ರಯಾಸವು
ಅಮರೆ ಆಗಿನ ಅಲ್ಪ ಸುಖವಿದು ॥ ೨೨ ॥

ಶ್ರವಣ ಮಾತ್ರಕೆ ಶುಭವನೀವುದು
ಭುವನಗಳಲಿದು ಬಹಳ ಭರಿತವು
ಧ್ರುವವು ಶಾಂತವು ಸುಖವು ಸರ್ವದಾ
ದಿವಿಜವಂದ್ಯನೆ ದಿವ್ಯ ಕಥೆಯಿದು ॥ ೨೩ ॥

ಈ ಮೇಲೆ ಉದಾಹರಿಸಿರುವ ಚರಣಗಳು ಕಾವ್ಯ ಪ್ರಶಸ್ತಿಗೂ ಸೇರಿವೆ.

* * * *

ಪಾವನಮೂರ್ತಿಯೆ ಪಶುಗಳ ಕಾಯುತಲಾ ವನದೊಳು ನೀನೇ
ದೇವರದೇವನೆ ಧಾವತಿಬಡಿಸುವೆ ಈ ವಿಧದಿರವೇಕೆ ।
ನಾವೀ ಕಷ್ಟವ ನೋಡೆವು ಕೂಡದು ತಾವನು ಸೇರಿನ್ನು
ಭಾವಜನಯ್ಯನೆ ತಿರುಪತಿ ವೇಂಕಟ ಜೀವವ ನಮುಗುಳುಹು ॥ ೧೧ ॥

ಕೊನೆಗೂ ಕವಿತೆಯು "ಪ್ರಸನ್ನನಾಗಿ ಜೀವವ ನಮುಗುಳುಹು" ಎಂ ಸಂಪೂರ್ಣವಾಗಿದೆ. ಕೃಷ್ಣನು ಪ್ರಸನ್ನನಾಗಿ ಗೋಪಿಯರನ್ನು ಸಮಾಧಾನ ಬಹುದು. ಶೃಂಗಾರ ಕಾವ್ಯವೆಂದರೆ ತಂಗಾಳಿ, ವಸಂತ, ಜಲಕೇಳಿ, ಗಾ ಸುರಾಪಾನ, ಲಜ್ಜಾಸ್ಪದ ಕ್ರೀಡಾದಿಗಳು—ಮುಂತಾದುವುಗಳ ವರ್ಣನೆ ಕೊಂಡು ಹೊರಡುವವರಿಗೆ 'ಗೋಪಿಕಾ ಗೀತೆ'ಯಲ್ಲಿ ಕಕ್ಕಾಬಿಕ್ಕಿಯಾಗ ಇಷ್ಟು ಶುದ್ಧವಾದ ಪ್ರಣಯಗೀತೆ ಇನ್ನಾವುದಿದೆಯೋ ನಾವು ಅರಿಯೆವು.

———

# ಕನ್ನಡ ಹಬ್ಬ

## (ಬೆಂಗಳೂರಲ್ಲಿ ಪರಿಷನ್ಮಂದಿರದಲ್ಲಿ ನಡೆದದ್ದು)

ಕನ್ನಡದ ವಿಷಯದಲ್ಲಿ ಜನರಿಗೆ ಉತ್ಸಾಹ ಅಭಿಮಾನಗಳು ಹೆಚ್ಚುವಂತೆ ಮಾಡಬೇಕೆಂಬ ತಾತ್ಪರ್ಯದಿಂದ ೧೯೩೭ನೆಯ ಇಸವಿ ಮೇ ತಿಂಗಳಿನಲ್ಲಿ ಪರಿಷತ್ತಿನಲ್ಲಿ ನಡೆದ ಎರಡನೆಯ ಸಕಲ ಕರ್ಣಾಟಕ ಸಂಘ ಸಮ್ಮೇಳನದಲ್ಲಿಯೂ ವಾರ್ಷಿಕಾಧಿವೇಶನದಲ್ಲಿಯೂ ಕನ್ನಡ ನಾಡಿನ ಎಲ್ಲ ಭಾಗಗಳಲ್ಲಿಯೂ ಇನ್ನು ಮುಂದೆ ಪ್ರತಿವರ್ಷವೂ ಕ್ಲುಪ್ತವಾದ ಒಂದು ದಿನ 'ಕನ್ನಡದ ಹಬ್ಬ'ವನ್ನು ಆಚರಿಸಬೇಕೆಂದು ನಿರ್ಧಾರವಾಯಿತು. ಆ ನಿರ್ಧಾರವನ್ನು ಕಾರ್ಯರೂಪಕ್ಕೆ ತರುವ ಉದ್ದೇಶದಿಂದ ಪರಿಷತ್ತಿನ ಕಾ॥ ನಿ॥ ಮಂಡಲಿ ಹಬ್ಬವನ್ನು ಆಚರಿಸುವ ವಿಚಾರವಾಗಿ ಪರಿಷತ್ತಿನ ಅಂಗ ಸಂಸ್ಥೆಗಳಿಂದ ಸಲಹೆ ಸೂಚನೆಗಳನ್ನು ತರಿಸಿಕೊಂಡು, ಪರ್ಯಾಲೋಚಿಸಿ, ಹಬ್ಬವನ್ನು ಆಚರಿಸಬೇಕಾದ ದಿನ, ಕಾರ್ಯಕ್ರಮ ಮುಂತಾದವುಗಳ ಬಗ್ಗೆ ಕೆಲವು ನಿಯಮಗಳನ್ನು ರಚಿಸಿತು.

ಈ ನಿಯಮಗಳಿಗೆ ಅನುಸಾರವಾಗಿ, ಕನ್ನಡ ನಾಡಿನಲ್ಲಿರುವ ಎಲ್ಲ ಕರ್ಣಾಟಕ ಸಂಘಗಳೂ, ಇತರ ಸಂಸ್ಥೆಗಳೂ ಪರಿಷತ್ತಿನ ಆಶಯವನ್ನು ಗಮನಕ್ಕೆ ತಂದುಕೊಂಡು ಕನ್ನಡ ಹಬ್ಬವನ್ನು ಆಚರಿಸಬೇಕೆಂದೂ, ಸಂಘಗಳು ಇಲ್ಲದಿರುವ ಸ್ಥಳಗಳಲ್ಲಿ ಅಲ್ಲಲ್ಲಿನ ಕನ್ನಡದ ಅಭಿಮಾನಿಗಳು ಈ ಸಂದರ್ಭದಲ್ಲಿಯಾದರೂ ಒಂದು ಸಂಘವನ್ನು ಸ್ಥಾಪಿಸಿಕೊಂಡಾಗಲಿ ಅಥವಾ ಈ ಉದ್ದೇಶಕ್ಕಾಗಿಯೇ ಒಟ್ಟುಗೂಡಿಯಾಗಲಿ, ಹೇಗಾದರೂ ಕನ್ನಡ ಹಬ್ಬವನ್ನು ಆಚರಿಸಬೇಕೆಂದೂ ಪರಿಷತ್ತು ಪ್ರಾರ್ಥಿಸಿಕೊಂಡಿತು. ಈ ಪ್ರಾರ್ಥನೆಗನುಸಾರವಾಗಿ ಹಲಕೆಲವು ಅಂಗ ಸಂಸ್ಥೆಗಳಲ್ಲಿ ಈ ಹಬ್ಬವು ಆಚರಿಸಲ್ಪಟ್ಟಿರುವುದಾಗಿ ತಿಳಿಯಬಂದಿದೆ. ಆದರೆ ಎಲ್ಲ ಕಡೆಗಳಿಂದಲೂ ಅಧಿಕಾರಯುತವಾದ ವರದಿಗಳು ಪರಿಷತ್ತಿಗೆ ತಲಪಿಲ್ಲ.

ಪರಿಷತ್ತಿನ ನಿವಾಸಸ್ಥಾನವಾದ ಬೆಂಗಳೂರು ನಗರದಲ್ಲೇನೋ ೧೦–೧೦–೧೯೩೭ನೆಯ ಭಾನುವಾರ ಸಾಯಂಕಾಲ ಈ ಹಬ್ಬವು ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರ ಅಧ್ಯಕ್ಷತೆಯಲ್ಲಿ ಬಹು ವಿಜೃಂಭಣೆಯಿಂದ ನೆರವೇರಿತು. ಪರಿಷನ್ಮಂದಿರದ ತುಂಬ ಮಹಾಜನರೂ ಮಹಿಳೆಯರೂ ಕಿಕ್ಕಿರಿದು ತುಂಬಿದ್ದರು.

ಕಾರ್ಯಕ್ರಮವು ಸಂಜೆ ೫ ಘಂಟೆಗೆ ಸರಿಯಾಗಿ ಪ್ರಾರಂಭವಾಯಿತು. ಶ್ರೀ॥ ಎಂ. ಹರಿನಾರಾಯಣ, ಬಿ.ಎಸ್‌ಸಿ. ಅವರು ಪ್ರಾರ್ಥನ ಗೀತಗಳನ್ನು ಹಾಡಿದ ಮೇಲೆ ಪರಿಷತ್ತಿನ ಸಹಾಯಕ ಕಾರ್ಯದರ್ಶಿಗಳಾದ ಶ್ರೀ॥ ಎ. ವಿ. ಸೀತಾರಾಮಯ್ಯ, ಎಂ.ಎ. ಅವರು ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರಿಂದ ರಚಿತವಾದ "ಕನ್ನಡ ತಾಯಿ ನೋಟ" ಎಂಬ ಕವನವನ್ನು ಓದಿದರು. ಅನಂತರ ಶ್ರೀ॥ ಡಿ. ಸಿ. ಸುಬ್ಬರಾಯಪ್ಪ, ಬಿ.ಎ., ಬಿ.ಎಲ್. ಅವರು ಪರಿಷತ್ತು ಈ ಹಬ್ಬವನ್ನು ಏರ್ಪಡಿಸಿದ್ದರ ಉದ್ದೇಶವನ್ನು ಸಂಕ್ಷೇಪವಾಗಿ ವಿವರಿಸಿ, ಪರಿಷದುಪಾಧ್ಯಕ್ಷರಾದ ಶ್ರೀ॥ ಡಿ. ವಿ. ಗುಂಡಪ್ಪನವರಿಂದ

ಇದೇ ವಿಚಾರವಾಗಿ ಬಂದಿದ್ದ ಸಂದೇಶವನ್ನು ಓದಿ ಹೇಳಿದರು. ಅದು ಈ ರೀತಿ ಇದೆ:—

## ಶ್ರೀ॥ ಡಿ. ವಿ. ಗುಂಡಪ್ಪನವರ ಸಂದೇಶ

ಕನ್ನಡ ನಾಡಿನ ನಾನಾ ವಿಭಾಗಗಳ ಜನತೆಯಲ್ಲಿ ಕಳೆದ ೨೫–೩೦ ವರ್ಷ ಒಂದು ಅಪೂರ್ವ ಜಾಗೃತಿಯೂ ಒಂದು ನವೀನ ಚೈತನ್ಯವೂ ತಲೆದೋರಿ ತ್ತಿರುವ ಸಂಗತಿ ಎಲ್ಲರಿಗೂ ತಿಳಿದದ್ದಾಗಿದೆ. ಕರ್ನಾಟಕ ಭೂಮಿಯಲ್ಲಿ ಕಂಗೊಳಿಸುವ ಚಿತ್ತಪರವಶಕಾರಿಯಾದ ಪ್ರಕೃತಿ ಸೌಂದರ್ಯ, ಕರ್ನಾಟಕದ ವಾದ ಪೂರ್ವ ಚರಿತ್ರೆ, ಅದರ ಪರಾಕ್ರಮಿಗಳಾದ ರಾಜಾಧಿರಾಜರುಗಳು, ಅದರ ದಕ್ಷರಾದ ಮಂತ್ರಿ ಮಾಂಡಲಿಕರುಗಳು, ಅದರ ತೇಜೋವಿಶಿಷ್ಟವಾದ ಸಾಹಿತ್ಯ ವಿಸ್ಮಯಕರವಾದ ಕಲಾ ಸಂಪತ್ತು, ಅದರ ಪವಿತ್ರ ಕ್ಷೇತ್ರಗಳು, ಅದರ ಮಹಾ ಮಹಿಮೆಗಳು—ಇವುಗಳನ್ನೆಲ್ಲ ಕನ್ನಡಿಗರು ನೆನೆನೆನೆದು ಹೆಮ್ಮೆಪಡುತ್ತಾರೆ. ಇಷ್ಟು ಮಹತ್ವವನ್ನು ಪಡೆದು ಪ್ರಕಾಶಿಸಿದ ಜನಾಂಗವು ಇನ್ನುಮುಂದೆಯೂ ಮೇಲ್ಮೆಯನ್ನು ಸಂಪಾದಿಸಿ ಯಶಸ್ವಿಯಾಗಬೇಕೆಂದು ಅವರು ಉತ್ಸಾಹಗೊಂ ಹೀಗೆ ಹೊರಹೊಮ್ಮಿ ಹರಿಯುತ್ತಿರುವ ಕರ್ನಾಟಕ ಭಕ್ತಿಯ ಮಹಾಪ್ರವಾಹದ ಇಂದು ನಡೆಯುವ ಕನ್ನಡ ಹಬ್ಬದ ಸಂತೋಷ.

ಜನದ ಮನಸ್ಸಿನಲ್ಲಿ ಅಂಕುರಿಸಿ ಬೆಳೆಯುತ್ತಿರುವ ಈ ಮಾತೃಭೂಮಿಯ ಭಕ್ತಿ ಒಂದು ಆಕಾರವನ್ನು ಕೊಟ್ಟು, ಅದನ್ನು ಕಾರ್ಯರಂಗಕ್ಕೆ ತಿರುಗಿಸಲು ಈಗ ವಾಗಿದೆಯೆಂದು ಕರ್ನಾಟಕ ಸಾಹಿತ್ಯ ಪರಿಷತ್ತೂ, ಅದಕ್ಕೆ ಸೋದರಪ್ರಾಯವಾ ಮಾಡುತ್ತಿರುವ ನೂರಾರು ಕರ್ನಾಟಕ ಸಂಘಗಳೂ, ಕರ್ನಾಟಕ ಏಕೀಕರಣ ಪರಿಭಾವಿಸಿ, ಇಂಥ ಉತ್ಸವಕ್ಕೆ, ಕನ್ನಡ ದೇಶಕ್ಕೆ ಸಾರ್ವಜನಿಕವಾದ ಉತ್ಸ ಆರ್ಷೇಯವಾಗಿ ಬಂದಿರುವ ನವರಾತ್ರಿಯ ದಿವಸಗಳು, ಅದರಲ್ಲಿ ಮುಖ್ಯವಾಗಿ ಪೂಜೆಯ ದಿವಸ, ಯುಕ್ತವಾದದ್ದೆಂದು ನಿಶ್ಚಯಿಸಿ, ಆ ಸಮಯದಲ್ಲಿ ಕನ್ನಡ ಜನ ಸ್ಥಳಗಳಲ್ಲೆಲ್ಲಾ ಅವರ ಕನ್ನಡ ದೇವಿಯ ಆರಾಧನೆಯನ್ನು ನಡಸತಕ್ಕದ್ದೆಂದು ಪ್ರ ಮಾಡಿಕೊಂಡಿರುತ್ತವೆ. ಈ ಆರಾಧನೆಯನ್ನು ಎಲ್ಲ ಕನ್ನಡಿಗರೂ ಮಾತೃಭೂ ನಂಬಿ ನಡಸುವುದು ಆವಶ್ಯಕರ್ತವ್ಯವೆಂದು ನಾನು ವಿಜ್ಞಾಪಿಸುತ್ತೇನೆ.

ಪ್ರಪಂಚಕ್ಕೆ ಭರತಖಂಡವು ಹೇಗೋ ಭರತಖಂಡಕ್ಕೆ ಕನ್ನಡ ದೇಶವು ಹೃದಯಪ್ರಾಯವಾಗಿರುತ್ತದೆ. ಕನ್ನಡ ಜನದ ಪ್ರಜ್ಞೆ ಸಂಸ್ಕೃತಿಗಳು ಭಾರತದ ಶಕ್ತಿ ಸಂಪತ್ತುಗಳೊಡನೆ ಸೇರಿದಲ್ಲದೆ ನಮ್ಮ ಭರತಖಂಡದಿಂದ ಲೋಕಕ್ಕೆ ಆಗಬೇಕಾ ಮಹದುಪಕಾರವು ಪರಿಪೂರ್ಣವಾಗಲಾರದು. ಭರತಖಂಡವು ಜಗತ್ತಿನಲ್ಲಿ ಬೇಕಾದರೆ ಕನ್ನಡವು ತಲೆ ಎತ್ತಿ ನಿಂತು, ತನ್ನೊಳಗಿರುವ ಬೆಳಕನ್ನು ಬೆಳಗಿ ದಶದಿಕ್ಕಿ ಬೀರುವುದು ಅತ್ಯಂತ ಅವಶ್ಯವಾಗಿದೆ. ಈ ತತ್ತ್ವವನ್ನು ಪ್ರತಿಯೊಬ್ಬ ಕನ್ನ ಮನಸ್ಸಿನಲ್ಲಿ ಸಂತತವಾಗಿ ನಿಲ್ಲಿಸಿಕೊಂಡು, ತನ್ನ ನಾಡಿನ ಮತ್ತು ತನ್ನ ನುಡಿಯ ಸರ್ವ ಪ್ರಯತ್ನದಿಂದಲೂ ದುಡಿಯುವುದು ಧರ್ಮವಾಗಿರುತ್ತದೆ.

ಕನ್ನಡ ನಾಡಿನಲ್ಲಿ ಇತರ ಭಾಷೆಗಳನ್ನು ಆಡುವ ಜನರು ಅಲ್ಲಲ್ಲಿ ನೆಲಸಿರುತ್ತಾರೆ. ಇಂಥವರು ಸಹ ಇಲ್ಲಿಂದ ಮುಂದಕ್ಕೆ ಕನ್ನಡವು ತಮ್ಮದೆಂದು ಸ್ವೀಕರಿಸುವುದು ನ್ಯಾಯವಾಗಿರುತ್ತದೆ. ಈಗಿನ ಕಾಲ ಇಂಡಿಯಾ ದೇಶದಲ್ಲಿ ಭಾಷೋಜ್ಜೀವನದ ಕಾಲವಾಗಿದೆ. ಇನ್ನುಮುಂದೆ ನಮ್ಮಗಳ ದೇಶಾಭಿಮಾನದಲ್ಲಿ ಭಿಮಾನವೆಂಬ ಅಂಶವು ಹಿಂದೆಂದೂ ಅದಕ್ಕೆ ಇಲ್ಲದಿದ್ದಷ್ಟು ಹೆಚ್ಚಾದ ಪ್ರಾ ಯನ್ನು ಪಡೆಯತಕ್ಕದ್ದಾಗಿದೆ. ಪೂರ್ವಕಾಲದಲ್ಲಿ ದೇಶಾಭಿಮಾನವೆಂಬುದು

ಆಳುವ ರಾಜರುಗಳನ್ನೋ ಅಥವಾ ಮತಧರ್ಮಗಳನ್ನೋ ಅವಲಂಬಿಸಿಕೊಂಡು ಇರುತ್ತಿತ್ತು. ಇನ್ನುಮುಂದೆ ಭಾಷಾಮಮತೆಯು ಭಾರತೀಯತೆಯ ಒಂದು ಮೂಲ ಸಾಮಗ್ರಿಯಾಗುತ್ತದೆ. ರಾಷ್ಟ್ರೀಯ ಮಹಾಸಭೆಯು (ಕಾಂಗ್ರೆಸ್) ಸಹ ಭಾಷಾ ಮೂಲಕವಾದ ಪ್ರಾಂತರಚನೆಯ ತತ್ತ್ವವನ್ನು ಸಂಪೂರ್ಣವಾಗಿ ಅಂಗೀಕರಿಸಿರುತ್ತದೆ. ಇನ್ನುಮುಂದೆ ಭರತಖಂಡದ ನಾನಾ ಪ್ರಾಂತಗಳ ಜನರ ಸಂಘಟನೆಯಾಗುವುದು ಮೊದಲು ಅವರವರ ಭಾಷೆಯ ಆಧಾರದಮೇಲೆ. ಹೀಗೆ ಸ್ವಭಾಷಾ ಸಂಸಿದ್ಧವಾದ ಜನಾಂಗಗಳ ಒಟ್ಟುಗೂಡುವಿಕೆಯಿಂದ ಆಗತಕ್ಕದ್ದು ಭಾರತೀಯ ಮಹಾಜಾನಪದ. ಪ್ರಕೃತ ಸಂದರ್ಭವು ಈ ರೀತಿ ಇರುವುದರಿಂದ ನಮ್ಮ ದೇಶದಲ್ಲಿ ಪ್ರತಿಯೊಬ್ಬ ಹೆಂಗಸೂ, ತನ್ನ ಮನೆಯ ಮಾತೂ ಮತದ ಮಾತೂ ಯಾವುದೇ ಆಗಿರಲಿ, ತನ್ನ ಸುತ್ತಮುತ್ತಲಿನ ಜನರು ಆಡುವ ಭಾಷೆಯೇ ತನ್ನ ಮುಖ್ಯ ಭಾಷೆಯೆಂದು ಪರಿಗಣಿಸುವುದು ಅವಶ್ಯವಾಗಿದೆ.

ಕನ್ನಡ ಜನವು ಈಗ ಒಂದು ಸರ್ಕಾರದ ಆಳಿಕೆಯಲ್ಲಿಲ್ಲ. ಕನ್ನಡನಾಡು ೧೯ ರಾಜಕೀಯ ಖಂಡಗಳಾಗಿ ಛಿದ್ರವಾಗಿ ಹೋಗಿದೆ. ಈ ಭಿನ್ನಭಿನ್ನತೆಯ ಜೊತೆಗೆ ಬಹು ಜನದಲ್ಲಿ ಬಗೆಬಗೆಯ ಭೇದಬುದ್ಧಿಗಳು ಹುಟ್ಟಿಕೊಂಡಿವೆ. ಮತದ ಕಾರಣದಿಂದ, ರಾಜಕೀಯದ ಕಾರಣದಿಂದ, ಪ್ರಾಂತ ಗಣನೆಯ ಕಾರಣದಿಂದ—ಹೀಗೆ ವಿವಿಧ ಕಾರಣಗಳಿಂದ ಕನ್ನಡಿಗರು ಏಕಮನಸ್ಕರಾಗದೆ, ಏಕಕಂಠರಾಗದೆ, ಬೇರೆ ಬೇರೆ ಸರಿದು ದುರ್ಬಲರಾಗಿ ನಿಂತಿದ್ದಾರೆ. ಇಷ್ಟೇ ಸಾಲದೆಂದು ಬಹು ಮಂದಿಯಲ್ಲಿ ಒಂದು ಉದಾಸೀನ ಭಾವವೂ ಒಂದು ನಿರುತ್ಸಾಹವೂ ನೆಲಸಿ ನಿಂತಿದೆ. ಈಗ ನಮ್ಮಲ್ಲಿ ಸಾಮಾನ್ಯವಾಗಿ ತೋರುವ ಅವಲಕ್ಷಣಗಳಲ್ಲಿ ಅತ್ಯಂತ ಶೋಚನೀಯವಾದದ್ದೆಂದರೆ ಬಹು ಜನರಲ್ಲಿರುವ ತಾತ್ಸಾರಬುದ್ಧಿ. ಯಾವುದರಲ್ಲಿಯೂ ಅವರಿಗೆ ಉತ್ಸಾಹವಿಲ್ಲ; ಯಾವುದರಲ್ಲಿಯೂ ನಂಬಿಕೆಯಿಲ್ಲ; ಯಾವುದರಲ್ಲಿಯೂ ಶ್ರದ್ಧೆಯಿಲ್ಲ. ಇಂಥ ಜನ ತಾವು ಚೆನ್ನಾಗಿ ಬಾಳುವುದು ಹೇಗೆ? ಇತರರಿಗೆ ಉಪಕಾರಿಗಳಾಗಿ ಕೀರ್ತಿಪಡೆಯುವುದು ಹೇಗೆ?

ಈಚೆಗೆ ಇತರ ಭಾಷೆಗಳ ಧಾಳಿ ಕಳವಳವನ್ನುಂಟುಮಾಡುವಷ್ಟು ಹೆಚ್ಚಾಗಿ ಕನ್ನಡದ ಮೇಲೆ ಬೀಳುತ್ತಿದೆ. ಪ್ರಬಲಸ್ಥಾನಗಳಲ್ಲಿ ಕುಳಿತು ಅಧಿಕಾರ ನಡಸುತ್ತಿರುವವರಲ್ಲಿ ಕನ್ನಡದಲ್ಲಿ ಮಮತೆ ಇರುವವರು ವಿರಳವಾಗಿದ್ದಾರೆ. ಕನ್ನಡಕ್ಕೆ ರಾಜಕೀಯ ಪ್ರಾಶಸ್ತ್ಯವಿಲ್ಲವಾಗಿದೆ; ಧನಿಕರ ಪೋಷಣೆ ದೊರೆಯದೆ ಹೋಗಿದೆ. ಇಷ್ಟೆಲ್ಲ ಕಷ್ಟಗಳು ಬಂದಿದ್ದರೂ ತನ್ನ ಒಂದು ಸ್ವಂತ ಜೀವಾಳದ ಮಹಿಮೆಯಿಂದಲೂ ಪೂರ್ವಿಕರು ಪಟ್ಟ ಶ್ರಮದ ಪುಣ್ಯದಿಂದಲೂ ಕನ್ನಡವು ಇನ್ನೂ ತನ್ನ ವರ್ಚಸ್ಸನ್ನೂ ಶಕ್ತಿಯನ್ನೂ ಮಾಸಿಕೊಳ್ಳದೆ ನಿಂತಿದೆ.

ಕನ್ನಡಕ್ಕೆ ಒದಗಿರುವ ವಿಪತ್ತುಗಳನ್ನು ತೊಲಗಿಸಿ ಅದರ ಅಭ್ಯುದಯವನ್ನು ನಿರಾತಂಕವಾಗಿ ಸಾಧಿಸಲು ನಾವು ಒಂದು ಪ್ರತಿಜ್ಞೆ ಮಾಡಬೇಕಾದ ಕಾಲ ಈ ಕನ್ನಡದ ಹಬ್ಬ. ಈ ದಿವಸ ಎಲ್ಲ ಜನವರ್ಗಗಳವರೂ, ಎಲ್ಲ ಮತಗಳವರೂ, ಎಲ್ಲ ಜಾತಿಗಳವರೂ ಎಲ್ಲ ರಾಜಕೀಯ ಪಕ್ಷಗಳವರೂ ಒಟ್ಟುಗೂಡಿ ಸೇರಿ, ತಮ್ಮ ಸಂಕುಚಿತ ಭಾವಗಳನ್ನು ತೊರೆದು ಕನ್ನಡ ನುಡಿಯ ಸೇವೆಗೂ ಕನ್ನಡ ನಾಡಿನ ಸೇವೆಗೂ ಇನ್ನುಮುಂದೆ ತಮ್ಮ ಸರ್ವಸ್ವವನ್ನೂ ವಿನಿಯೋಗಿಸುವಂತೆ ಮನಸ್ಸಾಕ್ಷಿಯಾಗಿ ದೀಕ್ಷೆ ಕೈಗೊಂಡಾರೆಂದು ನಾನು ನಂಬಿದ್ದೇನೆ. ಹೀಗೆ ಕನ್ನಡ ಜನ ಪ್ರತಿಜ್ಞೆಮಾಡಿ ಅದನ್ನು ಶ್ರದ್ಧೆಯಿಂದ ಆಚರಿಸಿದಲ್ಲದೆ ಕನ್ನಡವು ಜಗತ್ತಿನಲ್ಲಿ ಬಾಳಿ ಬೆಳೆಯುವ ಆಸೆಗೆ ಅವಕಾಶವಿರದು. ದೇಶಹಿತವನ್ನೂ ವಂಶಹಿತವನ್ನೂ ಬಯಸುವ ಪ್ರತಿಯೊಬ್ಬರಿಗೂ ಈ ವ್ರತ ಸಹಜಸಿದ್ಧವಾಗಿರುತ್ತದೆ.

ಈ ಶುಭ ದಿವಸ ತಾವು ಮಾಡುವ ಪವಿತ್ರ ಸಂಕಲ್ಪಗಳ ಪ್ರಭಾವದಿಂದಲೂ, ತಮ್ಮಗಳ ಭಕ್ತಿ ಪ್ರೇಮಗಳ ಮಹಿಮೆಯಿಂದಲೂ, ತಮ್ಮ ಉತ್ಸಾಹ ಶ್ರದ್ಧೆಗಳ ದಾರ್ಢ್ಯದಿಂದಲೂ ಕರ್ಣಾಟಕದ ಶಕ್ತಿ ತೇಜಸ್ಸುಗಳು ಅಭಿವೃದ್ಧಿ ಪಡೆಯಲಿ. ತಮ್ಮ ಸೇವಾತಿಶಯದಿಂದ ಕರ್ಣಾಟಕ ದೇವಿಯು ಪುನಃ ಸುಪ್ರಸನ್ನಳಾಗಿ ಲೋಕವನ್ನನುಗ್ರಹಿಸಲಿ. ಕನ್ನಡಿಗರು ಜಗಜ್ಜೀವನದಲ್ಲಿ ಮಾನ್ಯರಾಗಲಿ. ಜಯ ಕನ್ನಡಕ್ಕೆ.

ಅನಂತರ ಶ್ರೀ॥ ಎಂ. ಹರಿನಾರಾಯಣ ಅವರು "ಕುಮಾರವ್ಯಾಸ ಭಾ
'ವಿಶ್ವರೂಪದರ್ಶನ' ಭಾಗವನ್ನು ಸುಶ್ರಾವ್ಯವಾಗಿ ವಾಚನಮಾಡಿ ಸ
ಆನಂದಗೊಳಿಸಿದರು. ತರುವಾಯ ಶ್ರೀ॥ ದೇವುಡು ನರಸಿಂಹಶಾಸ್ತ್ರಿ
ಅವರು 'ಕನ್ನಡನಾಡು ಮತ್ತು ನುಡಿ'ಯ ವಿಚಾರವಾಗಿ ಭಾಷಣಮಾ
ಅದರ ಸ್ಥೂಲವಾದ ಸಾರಾಂಶವನ್ನು ಕೆಳಗೆ ಕೊಟ್ಟಿದೆ:

ಈ ದಿನ ಕನ್ನಡ ಹಬ್ಬ; ಇದು ಕನ್ನಡನಾಡಿನ, ನುಡಿಯ ಮತ್ತು ಜ
ಈ ಹಬ್ಬವನ್ನು ನಾವುಗಳೆಲ್ಲರೂ ಪ್ರತಿದಿನವೂ ಆಚರಿಸಬೇಕು; ಕಡೆಗೆ ವರ್ಷ
ದಿವಸವಾದರೂ ಇದನ್ನು ಆಚರಿಸುವುದು ನಮ್ಮ ಕರ್ತವ್ಯ. ಈಗ ಕೆಲದಿ
ಕನ್ನಡಿಗರು ಚಳಿಗೆ ಸೆಡೆದು ಹೊರಹೊರಡದ ಸೋಮಾರಿಗಳಂತೆ ಕರ್ತವ್ಯಪರಾ
ದ್ದರು. ಪ್ರತಾಪಶಾಲಿಗಳಾದ ಹಿಂದಿನ ಕರ್ಣಾಟಕದ ಮಹಾರಾಜಾಧಿರಾ
ಹೊರಗಿನವರನ್ನು ಗೆದ್ದು, ಮೇಲಿನಿಂದಲೂ ಅಕ್ಕಪಕ್ಕಗಳಿಂದಲೂ ಒತ್ತಿಕೊಂಡು
ವರನ್ನು ತಡೆಗಟ್ಟಿ, ಕನ್ನಡನಾಡು, ನುಡಿಗಳ ಹಿರಿಮೆಯನ್ನೂ ಎಲ್ಲೆಯನ್ನೂ ಸಂ
ಕಾಪಾಡಿದ ಆ ಶೌರ್ಯಸಾಹಸಗಳ ಚರಿತ್ರೆಯನ್ನು ಕನ್ನಡಿಗರೇ ಮರೆತಿದ್ದರು. ಈ
ನೆನಪುಂಟಾಗುತ್ತಿದೆ. ಇಂದು ಕರ್ಣಾಟಕದಲ್ಲಿ ಹೊಸ ಚೈತನ್ಯ ಹುಟ್ಟಿದೆ. ನಾ
ಬೇಗ ಬೇಗನೆ ಸಂಸ್ಕರಿಸುತ್ತಿದೆ. ಅದರ ಕುರುಹಾಗಿಯೇ ಈ ಹಬ್ಬವು ನಡೆ
ಇಂದು ನಾನು ಕಲ್ಪಿಸಿಕೊಂಡಿರುವ ಕನ್ನಡ ದೇವಿಯ ಸ್ವರೂಪದ ವೈಭವವನ್ನು
ವಾಗಿ ತಮ್ಮ ಮುಂದಿಡಲು ಪ್ರಯತ್ನಪಡುತ್ತೇನೆ.

ನಾನಾ ದೃಷ್ಟಿಗಳಿಂದ ಕನ್ನಡ ನಾಡು ಬಹು ಪ್ರಾಚೀನವಾದುದೆಂದು
ಬಂದಿದೆ. ಭೂಗರ್ಭಶಾಸ್ತ್ರಜ್ಞರು ಕರ್ಣಾಟಕದ ಭೂಮಿಯನ್ನು ಪರೀಕ್ಷಿ
ಇಂಡಿಯಾದೇಶದ ಎಲ್ಲ ಭಾಗಗಳಿಗಿಂತಲೂ ಪ್ರಾಚೀನವಾದುದೆಂದು ಸಿದ್ಧಾಂತಪ
ಮಹಾ ಕಾವ್ಯ ಪುರಾಣಗಳ ಆಧಾರವನ್ನು ನೋಡಿದರೆ, ಪ್ರಹ್ಲಾದನ ಕಾಲದಿಂದ
ಕಾಲದವರೆಗೂ ನಮ್ಮ ಕರ್ಣಾಟಕ ದೇಶ ಅವರ ಚರಿತ್ರೆಯಲ್ಲಿ ಕಂಡು
ಪ್ರಹ್ಲಾದನು ನಮ್ಮ ನಾಡಿಗೆ ಬಂದು ವೇದಾಂತವನ್ನು ಕಲಿತುಕೊಂಡು
ಶ್ರೀರಾಮನಿಗೆ ಹೆಂಡತಿಯನ್ನು ಹುಡುಕಿ ತಂದುಕೊಟ್ಟವರು ಕರ್ಣಾಟಕ
ಅರ್ಜುನನು ನಮ್ಮ ನಾಡಿಗೆ ಒಂದೆರಡುಸಲ ಬಂದು ಹೋದವನು; ನಮ್ಮ
ಗಳಲ್ಲಂತೂ ಪಾಂಡವರೈವರ ಹೆಸರುಗಳು ಎಷ್ಟೋ ಕಡೆ ಬರುತ್ತವೆ. ಸಿಂಧೂ
ಮೊಹೆಂಜೋ-ದಾರೋ ಸಂಸ್ಕೃತಿಯು ಕನ್ನಡಿಗರದೆಂದು ಫಾದರ್ ಹೀರಾಸ್
ಅಭಿಪ್ರಾಯಪಡುತ್ತಾರೆ. ಗ್ರೀಕ್ ನಾಟಕವೊಂದರಲ್ಲಿ ಓದುವ ಕೆಲವು ಮಾ
ಕನ್ನಡವೆಂದು ಊಹಿಸಲ್ಪಟ್ಟಿದೆ. ಈ ಆಧಾರಗಳು ನಮ್ಮ ನಾಡಿನ
ಸುಮಾರು ೫೦೦೦ ವರ್ಷಗಳ ಹಿಂದಿನವರೆಗೂ ತೆಗೆದುಕೊಂಡು ಹೋಗುತ್ತವೆ

ಈ ರೀತಿ ಪ್ರಶಸ್ತಿಹೊಂದಿರುವ ಕನ್ನಡ ನಾಡಿನ ಚರಿತ್ರೆಯು ಸ್ವರ್ಣಾ
ಬರೆದಿಡಲು ಅರ್ಹವಾದದ್ದು. ಅಶೋಕನ ಕಾಲದಿಂದ ಕನ್ನಡ ನಾಡಿನ ಚರಿತ್ರೆ
ಪ್ರಾರಂಭವಾಗುತ್ತಿದೆಯೆನ್ನಬಹುದು. ಕದಂಬರ ಮಯೂರಶರ್ಮನ ರಾಜ್ಯ
ವರೆಗೂ ಹಬ್ಬಿತ್ತು. ಇದು ಕ್ರಿ. ಪೂ. ೩ನೆಯ ಶತಮಾನದ ವಿಷಯ. ಕ್ರಿ. ಶ.
ಶತಮಾನದಲ್ಲಿ ಹರ್ಷವರ್ಧನನು ದಕ್ಷಿಣ ಹಿಂದೂಸ್ಥಾನವನ್ನೆಲ್ಲಾ ಗೆಲ್ಲಲು ಪ್ರಯತ್ನಿ
ಅವನನ್ನು ಸೋಲಿಸಿ ಹಿಂದಕ್ಕಟ್ಟಿದವನು ಕರ್ಣಾಟಕರ ಪುಲಿಕೇಶಿ. ಯಾದವ
ಎಂತಹುದೆಂಬುದನ್ನು ಚರಿತ್ರೆಯನ್ನು ಓದಿಯೇ ತಿಳಿಯಬೇಕು. ಕರ್ಣಾಟಕ
ಅವರಿಗೆ ಅತ್ಯಂತ ಋಣಿಯಾಗಿದೆ. ಹೊಯ್ಸಳರು ಅಪ್ರತಿಮವಾದ ಶಿಲ್ಪ
ನಮಗೆ ಕೊಟ್ಟಿದ್ದಾರೆ. ಹಳೆಯಬೀಡು ಬೇಲೂರುಗಳ ಶಿಲ್ಪಕಲೆಯನ್ನು ಆ ಮುಂದ
ದೇಶೀಯರು ಮೂಗಿನಮೇಲೆ ಬೆರಳಿಟ್ಟುಕೊಂಡು ಹೋಗಿದ್ದಾರೆ.

ಹೆಮ್ಮೆ ಪ್ರಚಂಡವಾಗಿ ಬೆಳೆಯಿತು. ಅವರು ವಿಜಯನಗರ ರಾಜ್ಯವನ್ನು ಕಟ್ಟಿದರು. ೧೪ ಮೈಲಿ ಅಗಲ ೧೦ ಮೈಲಿ ಉದ್ದವಿದ್ದ ಆ ರಾಜಧಾನಿಯ ಸಂಪತ್ತನ್ನು ನೋಡಿ ವಿದೇಶೀಯರು ಆಶ್ಚರ್ಯಪಟ್ಟು ಹೋಗಿದ್ದಾರೆ. ಕನ್ನಡಿಗರ ಸಂಸ್ಕೃತಿಯ ಪರಾಕಾಷ್ಠ ದೆಸೆಯನ್ನು ನಾವು ವಿಜಯನಗರ ಸಾಮ್ರಾಜ್ಯದಲ್ಲಿ ಕಾಣಬಹುದಾಗಿದೆ. ಇದಿಷ್ಟು ಹಿಂದಿನ ಮಾತಾಯಿತು.

ಇನ್ನು ಇಂದಿನ ನಮ್ಮ ಕರ್ತವ್ಯವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುತ್ತೇನೆ. ಇಂದು ಮೈಸೂರು ಕನ್ನಡಿಗರ ರಾಜಧಾನಿ ಎನ್ನಿಸಿಕೊಂಡಿದೆ. ಇಲ್ಲಿ ವಿದ್ಯಾವಂತರಿಗೆ ಕೊರತೆಯಿಲ್ಲ. ಆದರೆ ಅವರೆಲ್ಲರೂ ಒಮ್ಮನದಿಂದ ಕೆಲಸಮಾಡಬೇಕು. ಎಲ್ಲರೂ ಏಕಕಂಠದಿಂದ ಕನ್ನಡ ನನ್ನದು, ಕನ್ನಡ ನಾಡು ನನ್ನದು ಎಂದು ಹೇಳುವಹಾಗೆ ಆಗಬೇಕು. ಕನ್ನಡ ನಾಡಿನ ಹಿಂದಿನ ಕೀರ್ತಿಯ ಕಾಂತಿ ಕುಂದದಹಾಗೆ, ಹಿಂದಿನ ಔನ್ನತ್ಯದ ಬಿಕ್ಕಟ್ಟು ಬಿರುಕುಬಿಡದ ಹಾಗೆ ಕಾಯ್ದುಕೊಳ್ಳುವುದು ಇಂದಿನವರ ಕರ್ತವ್ಯ. ಇಂದು ನಮ್ಮ ನಾಡಿನ ಗೌರವವನ್ನು ಕಾಪಾಡಬೇಕು. ಹರ್ಷನೆದುರು ಪುಲಿಕೇಶಿ ನಿಂತ ಹಾಗೆ ಕನ್ನಡಿಗರು ಇತರರೆದುರಿನಲ್ಲಿ ನಿಲ್ಲಬೇಕಾಗಿದೆ. ನಾವು ಸಮರ್ಥರಾಗಿದ್ದರೆ ಹೊರಗಿನವರು ನಮಗೆ ಮನ್ನಣೆಕೊಡುತ್ತಾರೆ. ಹಾಗಿಲ್ಲದಿದ್ದರೆ ನಮ್ಮನ್ನು ಇತರರು ಅಲಕ್ಷ್ಯ ಮಾಡುತ್ತಾರೆ. ಇತರರ ದೃಷ್ಟಿಯಲ್ಲಿ ಚಿಕ್ಕವರಾಗದಂತೆ ನೋಡಿಕೊಳ್ಳುವುದು ಎಲ್ಲ ಕನ್ನಡಿಗರ ಕರ್ತವ್ಯ.

ಕನ್ನಡ ನಾಡು ಎಷ್ಟು ಪ್ರಾಚೀನವೋ, ಅದರ ಚರಿತ್ರೆ ಎಷ್ಟು ದೊಡ್ಡದೋ ಕನ್ನಡ ನುಡಿಯೂ ಅಷ್ಟೇ ಪ್ರಾಚೀನವಾದದ್ದು; ಹಾಗೆಯೇ ಹಿರಿದಾದದ್ದು. ಕನ್ನಡವನ್ನು ಕುರಿತು "ಇದರಲ್ಲೇನಿದೆ? ಇದನ್ನು ನೂಕು" ಎಂದು ಹೇಳುವ ಧೈರ್ಯ ಯಾರಿಗೂ ಬರಲಾರದು. ನೃಪತುಂಗನ ಕಾಲಕ್ಕೆ ಕನ್ನಡ ಸಾಹಿತ್ಯವು ಮಹಾವೃಕ್ಷದ ಹಾಗೆ ಶೋಭಿಸುತ್ತಿತ್ತು. ಅವನಿಂದ ಮುಂದೆ ಬಂದರೆ ಜೈನರ ಸಾಹಿತ್ಯಯುಗ; ಸಂಸ್ಕೃತದ ಮಾತುಗಳಿಗೆ ಕನ್ನಡದ ಮುದ್ರೆ ಬಿದ್ದು, ಮಹಾ ಚಂಪೂ ಕಾವ್ಯಗಳು ಬೆಳಕಿಗೆ ಬಂದ ಕಾಲ. ಆಮೇಲೆ ಕನ್ನಡ ನುಡಿಯ ಅಚ್ಚುಕಟ್ಟನ್ನು ತೋರಿಸುವ ವೀರಶೈವರ ವಚನಗಳ ಕಾಲ. ಕನ್ನಡ ನುಡಿಯ ಸೊಂಪನ್ನು ನೋಡಬೇಕಾದರೆ ಶಿವಶರಣರ ವಚನಗಳಲ್ಲಿ ನೋಡಬೇಕು. ಅಲ್ಲಿಂದ ಮುಂದೆ ಬ್ರಾಹ್ಮಣ ಕವಿಗಳ ಕಾಲ; ಬ್ರಾಹ್ಮಣ ಕವಿಗಳು ಉಪನಿಷತ್ತುಗಳ ಮಹಾತತ್ತ್ವಗಳನ್ನು ಹಾಡುಗಳಲ್ಲಿ ಬೋಧಿಸಿದರು. ಈ ಕಾಲದ ಕಾವ್ಯಗಳಲ್ಲಿ ಮುಖ್ಯವಾದವು 'ಜೈಮಿನಿ ಭಾರತ' ಮತ್ತು 'ಗದುಗಿನ ಭಾರತ'. 'ಗದುಗಿನ ಭಾರತ'ವಂತೂ ಈ ಕಾಲದ ಕಾವ್ಯರತ್ನ. ಮೈಸೂರು ದೊರೆಗಳು ಕನ್ನಡಕ್ಕೆ ಮಾಡಿರುವ ಉಪಕಾರ ಅನೋಘವಾದದ್ದು: ಚಿಕ್ಕದೇವರಾಜ ಒಡೆಯರು ಕನ್ನಡಕ್ಕೆ ದೊಡ್ಡ ಸೇವೆ ಸಲ್ಲಿಸಿದ್ದಾರೆ. ಶ್ರೀ ಮುಮ್ಮಡಿ ಕೃಷ್ಣದೇವರಾಜ ಒಡೆಯರು ರಾಮಾಯಣ, ಭಾರತ, ಭಾಗವತ ಮುಂತಾದ ಅನೇಕ ಗ್ರಂಥಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿಸಿದರು. ಈಗಿನ ಪ್ರಭುವರ್ಯರ ಕಾಲದಲ್ಲಿ ಮೈಸೂರಿಗೆ ವಿಶ್ವವಿದ್ಯಾನಿಲಯ ಬಂದಮೇಲೆ ಕನ್ನಡಕ್ಕೆ ಒಂದು ಹೊಸ ರೂಪ ಬಂತು. ಈ ದಿನ ಅವರು ಮಾಡುತ್ತಿರುವ ತಪಸ್ಸು ನಮ್ಮ ಅಭಿಮಾನವನ್ನು ಪ್ರಚೋದಗೊಳಿಸುತ್ತಿದೆ. ಅದರ ಫಲವಾಗಿಯೇ ನಾವು ಇಲ್ಲಿ ಸೇರಿದ್ದೇವೆ. ಅವರ ಆಶ್ರಯದಲ್ಲಿ ಬೆಳೆದುಕೊಂಡು ಬಂದಿರುವ ಪರಿಷತ್ತು ಕನ್ನಡಕ್ಕಾಗಿ ಹಗಲಿರುಳೂ ಶ್ರಮಿಸುತ್ತಿದೆ. ಈ ದಿನದ ಹಬ್ಬದಲ್ಲಿ ನಮ್ಮ ಮೊದಲನೆಯ ಕೆಲಸ ನಮ್ಮ ನಾಡಿನ ಹಿರಿಯ ಸಾಹಿತಿಗಳಾಗಿರುವವರಿಗೆ ನಮಸ್ಕಾರಮಾಡತಕ್ಕದ್ದು. ಮತ್ತು ಅವರು ಮಾಡುತ್ತಿರುವ ಕಾರ್ಯಕ್ಕೆ ಉತ್ತೇಜನಕೊಡತಕ್ಕದ್ದು. ಅವರು ಕನ್ನಡಮ್ಮನ ತೇರನ್ನು ಒಂದು ನೆಲೆಯಲ್ಲಿ ನಿಲ್ಲಿಸಿದ್ದಾರೆ. ನಾವು ಹಗ್ಗ ಹಿಡಿದು ಅದನ್ನು ಮುಂದಕ್ಕೆ ಎಳೆಯಬೇಕು. ನಾವು ಈ ಕೆಲಸಕ್ಕೆ ಮುಂದೆ ನುಗ್ಗಿದರೆ ಇತರರೂ ನಮ್ಮೊಡನೆ ಸೇರಿಕೊಳ್ಳುತ್ತಾರೆ. ನಾವು ನಮ್ಮ ಹಕ್ಕುಗಳನ್ನು ಕಾಯ್ದುಕೊಳ್ಳಬೇಕು; ಕನ್ನಡಮ್ಮನನ್ನು ಮೆರೆಸಬೇಕು. ತಾವೆಲ್ಲರೂ ಕನ್ನಡದ ರಕ್ಷಣೆಗೆ, ಕನ್ನಡದ ಮೇಲ್ಮೆಗೆ ಸಂಭ್ರಮದಿಂದ ಮುಂದೆ ಬಂದು ಕೆಲಸಮಾಡುತ್ತೀರೆಂದು ನಾನು ನಂಬಿದ್ದೇನೆ.

ಶ್ರೀ॥ ದೇವುಡು ಅವರ ಭಾಷಣವಾದಮೇಲೆ ಶ್ರೀ॥ ಎಲ್. ರಾಜಾರಾ ಅವರ ಸೋದರರಾದ ಶ್ರೀ॥ ಎಲ್. ಗೋಪಾಲರಾಯರೂ ವೀಣಾವಾ ಸಭಿಕರನ್ನು ಸಂತೋಷಪಡಿಸಿದರು. ಅನಂತರ ಅಧ್ಯಕ್ಷರಾದ ಶ್ರೀ॥ ಎಂ. ವೆಂ ಐಯಂಗಾರ್ಯರು ಭಾಷಣಮಾಡಿದರು. ಮುಂದಿನದು ಅವರ ಭಾ

ಸಾರಾಂಶ:—

ಶ್ರೀ॥ ಡಿ. ವಿ. ಗುಂಡಪ್ಪನವರು ಪರಿಷತ್ತಿನ ಉಪಾಧ್ಯಕ್ಷರಾದಮೇಲೆ ಅನೇಕ ಹೊಸ ಕಾರ್ಯಗಳನ್ನು ಕೈಗೊಂಡಿದೆ. ಅವುಗಳಲ್ಲಿ ಈ ಕನ್ನಡ ಹಬ್ಬವೂ ಈ ಹಬ್ಬದ ಉದ್ದೇಶ ಆಶಯಗಳನ್ನು ಅವರು ತಮ್ಮ ಸಂದೇಶದಲ್ಲಿಯೇ ತಿಳಿಸಿದ್ದಾರೆ. ಇದು ನಮಗೆ ದೊಡ್ಡ ಹಬ್ಬ. ದೇವಸ್ಥಾನಗಳಲ್ಲಿ ನಿತ್ಯ ಪಕ್ಷೋತ್ಸವ, ಮಾಸೋತ್ಸವ, ಸಂವತ್ಸರೋತ್ಸವ—ಎಂದು ನಾನಾವಿಧವಾದ ಉತ್ಸ ನಡೆಯುತ್ತವೆ. ಈ ಕನ್ನಡ ಹಬ್ಬ ಹಾಗೆಯೇ ಮನ್ವಂತರೋತ್ಸವವಾಗಿ ನಡೆಯ ನಾನು ಆಶಿಸುತ್ತೇನೆ. ಶ್ರೀ॥ ದೇವುಡು ನರಸಿಂಹಶಾಸ್ತ್ರಿಗಳ ಉತ್ತಮವಾದ ಭಾಷ ಕೇಳಿದ್ದೀರಿ; ಶ್ರೀ॥ ರಾಜಾರಾಯರ ಮತ್ತು ಗೋಪಾಲರಾಯರ ಮನೋ ವೀಣೆಯನ್ನು ಕೇಳಿದ್ದೀರಿ; ಕನ್ನಡ ನಾಡಿನಲ್ಲಿ ಎಂಥ ಸಂಸ್ಕೃತಿ ಇದೆ, ಎಂಥ ಕಲಾ ಗಳಿದ್ದಾರೆ, ಎಂಥ ಕಲಾವಂತರಿದ್ದಾರೆ ಎನ್ನುವುದು ಈ ಸಭಾಕಾರ್ಯ ನಡ ದೃಷ್ಟಾಂತಗೊಂಡಿದೆ. ಈ ಕನ್ನಡ ಹಬ್ಬದ ಕಲ್ಪನೆಯೇ ಕನ್ನಡಿಗರ ಉತ್ಕರ್ಷದ

ಈಗ್ಗೆ ಮೂವತ್ತು ವರ್ಷಗಳ ಹಿಂದೆ ಕನ್ನಡದ ವಿಷಯದಲ್ಲಿ ಹೀಗೆ ಉತ್ಸಾ ಕೆಲಸಮಾಡತಕ್ಕ ಜನರು ಇರಲಿಲ್ಲವೆಂದು ಹೇಳಬಹುದು. ಆದರೆ, ಆಗ ಇದ್ದವರು ಕೆಲಸವನ್ನು ಮಾಡಿದ್ದಾರೆ. ಆಗಲೂ ಒಂದು ರೀತಿ ಕೆಲಸ ನಡೆದಿದೆ. ಆದರೆ ಹಾಗೆ ಒಂದುಗೂಡಿ ಕೆಲಸಮಾಡುವ ದೃಷ್ಟಿ ಆಗ್ಗೆ ಬಂದಿರಲಿಲ್ಲ. ಒಟ್ಟಾಗಿಯೋ ಯಾಗಿಯೋ ಅಂತೂ ಅನೇಕರು ಸಂತತವಾಗಿ ಕೆಲಸಮಾಡಿ ಕನ್ನಡವನ್ನು ಬೆ ಗೊಳಿಸುತ್ತ ಬಂದಿದ್ದಾರೆ. ಪಂಪ, ರನ್ನ, ಬಸವಣ್ಣ, ಕುಮಾರವ್ಯಾಸ ಮೊದಲಾದವರು ಹಾದಿಯಲ್ಲಿಯೇ ನಡೆದರೂ ಹೊಸ ರೀತಿಯಲ್ಲಿ ನಡೆದು, ಕನ್ನಡದೇವಿಯ ನಡಸಿಕೊಂಡು ಬಂದ ಶಾಂತ ಕವಿಗಳು, ವಾಸುದೇವಾಚಾರ್ಯರು, ವೆಂಕಟಾಚಾ ಮುದ್ದಣ ಮೊದಲಾದ ಅನೇಕರು ಅನುಪಮವಾದ ಉಪಕಾರಮಾಡಿದ್ದಾರೆ.

ಈಗ ಕೆಲಸಮಾಡುತ್ತಿರುವವರ ಹೆಸರುಗಳು ಎಣಿಕೆಗೆ ಸಿಗುವಹಾಗಿಲ್ಲ. ಆರಂಭವಾಗಿ ಉತ್ಸಾಹದಿಂದ ಬೆಳೆಯುತ್ತಿರುವ ಈ ಪ್ರಯತ್ನಗಳನ್ನು ಕಂಡು ಪಡಬೇಕಾಗಿದೆ. ಈಗ ಕನ್ನಡಿಗರು ಯಾವುದಕ್ಕೂ ಭಯಪಡುವ ಕಾರಣವಿಲ್ಲ; ಧೈರ್ಯ ಕೆಲಸಮಾಡಬಹುದು. ಕನ್ನಡಿಗರಲ್ಲಿ ಒಂದು ಹೊಸ ಉತ್ಸಾಹ ಹುಟ್ಟಿದ ಈ ಗಳಲ್ಲಿಯೇ ಎಷ್ಟೋ ಕೆಲಸ ನಡೆದಿದೆ.

ಇನ್ನು ನೂರು ವರ್ಷಕ್ಕೆ ಎಷ್ಟು ನಡೆಯಬಹುದು? ಕನ್ನಡ ಪ್ರಪಂಚ ಇನ್ನೂ ಎಷ್ಟೋ ಒಳ್ಳೆಯ ಸ್ಥಿತಿಗೆ ಬರಬೇಕಾಗಿದೆಯೆಂದು ತೋರುತ್ತೆ. ಪ್ರತಿಯೊಬ್ಬರೂ ತಮ್ಮಿಂದ ಆಗುವಷ್ಟು ಮಟ್ಟಿಗೆ ಶ್ರಮಿಸಬೇಕು. ಪ್ರಪಂಚ ಯಾ ಒಂದು ರೀತಿಯಲ್ಲಿ ಮುಂದೆ ನುಗ್ಗುತ್ತಿದೆ. ನಮ್ಮ ಸಾಹಿತ್ಯವೂ ನಾವೂ ಒಂದು ಮುಂದುವರಿಯುತ್ತಿದ್ದೇವೆ. ಸಂಪ್ರದಾಯವನ್ನು ಬಿಟ್ಟು ಬರೆದರೆ ಕನ್ನಡ ತ್ತದೋ ಎಂಬ ಭಯ ಬೇಡ. ಒಂದು ಪದ್ಧತಿಯನ್ನು ಹಿಂದಿನವರು ಇಟ್ಟುಕೊಂಡ ನಾವು ಸ್ವಲ್ಪ ಅದನ್ನು ಎಳೆದು ಹಿಗ್ಗಿಸೋಣ.

ಶ್ರೀ॥ ದೇವುಡು ಅವರು ಹೇಳಿದಹಾಗೆ, ಹಿರಿಯರು ಕನ್ನಡದ ತೇರನ್ನು ತಂದು ನಿಲ್ಲಿಸಿದ್ದಾರೆ. ಅದನ್ನು ಮುಂದಕ್ಕೆ ಎಳೆಯುವ ಪುಣ್ಯವನ್ನಾದರೂ ನಾವು ಬೇಕು. ಇದು ನಮ್ಮ ಕರ್ತವ್ಯ ಎಂದು ತಿಳಿದು ನಾವೆಲ್ಲ ಆ ಕೆಲಸವನ್ನು

ಇಂಥ ಸಮಯವನ್ನು ಕಲ್ಪಿಸಿಕೊಟ್ಟದ್ದಕ್ಕೆ ಪರಿಷತ್ತಿಗೆ ನಾವು ಕೃತಜ್ಞರಾಗಿರಬೇಕು. ಪರಿಷತ್ತು ನಮ್ಮೆಲ್ಲರಿಗೂ ಪ್ರಿಯವಾದ ಸಂಸ್ಥೆ. ಅದರ ಆಸೆ ಕನಸುಗಳು ನಿಜವಾಗುವ ಹಾಗೆ ಮಾಡಬೇಕಾದುದು ನಮ್ಮ ಕರ್ತವ್ಯ. ಮುಂದಿನ ವರ್ಷ ಕನ್ನಡ ಹಬ್ಬದ ವೇಳೆಗೆ ನಾವು ಎಷ್ಟು ಕೆಲಸಮಾಡಿರುವೆವೆಂಬುದನ್ನು ನೋಡಬೇಕು. ಕನ್ನಡ ಪುಸ್ತಕಗಳನ್ನು ಓದಿಯೋ, ಓದಿಸಿಯೋ ಜನರು ಕನ್ನಡ ಗ್ರಂಥಗಳನ್ನು ಕುರಿತು ಹಲುಬುವ ಹಾಗೆ ಮಾಡಿ, ಇದಕ್ಕೆ ಹತ್ತರಷ್ಟು ಜನ ಬರುವ ಹಾಗೆ, ಹತ್ತರಷ್ಟು ಕೆಲಸಮಾಡುವ ಹಾಗೆ ಎಲ್ಲರೂ ಸಂಕಲ್ಪ ಮಾಡಬೇಕು. ನನಗೆ ಹಿರಿಯರಾಗಿರುವವರೂ ಚಿಕ್ಕವರಾಗಿರುವವರೂ ಕನ್ನಡ ಭಾಷೆ ಉತ್ತಮ ಸ್ಥಿತಿಗೆ ಬರಲು ಸಂತತವಾಗಿ ಪ್ರಯತ್ನಮಾಡಲಿ, ಆ ಮಾರ್ಗಕ್ಕೆ ಭಗವಂತನು ಅವರನ್ನು ಪ್ರೇರೇಪಿಸಲಿ, ಎಲ್ಲರೂ ಕನ್ನಡವನ್ನು ಉದ್ಧಾರಮಾಡಲಿ ಎಂದು ನಾನು ದೇವರನ್ನು ಪ್ರಾರ್ಥಿಸುತ್ತೇನೆ.

ಅಧ್ಯಕ್ಷರ ಭಾಷಣವಾದಮೇಲೆ ಶ್ರೀ॥ ಡಿ. ಸಿ. ಸುಬ್ಬರಾಯಪ್ಪನವರು ಕನ್ನಡ ಹಬ್ಬದಲ್ಲಿ ಸಹಕರಿಸಿ ಆ ಉತ್ಸವವನ್ನು ಅತ್ಯಂತ ಯಶಸ್ವಿಯಾಗುವಂತೆ ಮಾಡಿದ ಅಧ್ಯಕ್ಷರಿಗೂ, ಭಾಷಣಕಾರರಿಗೂ, ಗಮಕಿ ಗಾಯಕರುಗಳಿಗೂ ಪರಿಷತ್ತಿನ ಪರವಾಗಿ ಕೃತಜ್ಞತೆಯನ್ನು ಸಲ್ಲಿಸಿದರು. ಅಲ್ಲಿಗೆ ಅಂದಿನ ಸಮಾರಂಭವು ಮುಕ್ತಾಯವಾಯಿತು.

---

# ಪರಿಷತ್ತಿನ ಕಾರ್ಯಕಲಾಪಗಳು

---

## ೧. ಕಾರ್ಯನಿರ್ವಾಹಕ ಮಂಡಲಿಯ ಈಚಿನ ಅಧಿವೇಶನಗಳಲ್ಲಿ ಆದ ಮುಖ್ಯ ನಿರ್ಣಯಗಳು

### ೧೧-೪-೧೯೩೭, ಬೆಂಗಳೂರು

**ಶ್ರೀಮತಿ ಎ. ಶೇಷಮ್ಮನವರ ಉದಾರ ದಾನ: ದಿವಂಗತ ಶ್ರೀ॥ ಇ. ಎ. ಭಾಸ್ಕರರಾಯ ಜ್ಞಾಪಕನಿಧಿ.—**

(೧೦) ಶ್ರೀಮತಿ ಎ. ಶೇಷಮ್ಮನವರು ಪರಿಷತ್ತಿನಲ್ಲಿ ಒಂದು ಜ್ಞಾಪಕನಿಧಿಯನ್ನು ಏರ್ಪಡಿಸಬೇಕೆಂದು ಉದ್ದೇಶಪಟ್ಟಿರುವ ವಿಚಾರ:—

(೧) "ಬೆಂಗಳೂರು ಸಿಟಿ ಆರ್ಯ ಬಾಲಿಕಾ ಪಾಠಶಾಲೆಯ ಹೆಡ್ ಮಿಸ್ಟ್ರೆಸ್ ಆಗಿರುವ ಶ್ರೀಮತಿ ಎ. ಶೇಷಮ್ಮನವರು ತಮ್ಮ ಮಗ ದಿವಂಗತರಾದ ಶ್ರೀ॥ ಇ. ಎ. ಭಾಸ್ಕರರಾಯರ ಹೆಸರಿನಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತು ಒಂದು ಕನ್ನಡ ಸಾಹಿತ್ಯ ಪ್ರೋತ್ಸಾಹದ ಏರ್ಪಾಟನ್ನು ನಡಸುವುದಕ್ಕಾಗಿ ಒಂದು ಜ್ಞಾಪಕನಿಧಿಯನ್ನು ಏರ್ಪಡಿಸಬೇಕೆಂಬ ಉದ್ದೇಶದಿಂದ, ೧,೦೭೮ ರೂಪಾಯಿ ಬೆಲೆಯುಳ್ಳ ತಮ್ಮ ಮೈಸೂರು ಸರ್ಕಾರದ ಜೀವವಿಮಾದಾಯಪತ್ರವನ್ನು ಕರ್ಣಾಟಕ ಸಾಹಿತ್ಯ ಪರಿಷತ್ತಿಗೆ ದಾನಮಾಡಲು ನಿಶ್ಚಯಿಸಿರುವುದಕ್ಕಾಗಿ ಕಾ॥ ನಿ॥ ಮಂಡಲಿ ಶ್ರೀಮತಿ ಶೇಷಮ್ಮನವರನ್ನು ಮನಃಪೂರ್ವಕವಾಗಿ ವಂದಿಸಿ, ಅವರ ದಾನವನ್ನು ಅತ್ಯಂತ ಕೃತಜ್ಞತೆಯಿಂದ ಸ್ವೀಕರಿಸುತ್ತದೆ.

(೨) "ಈ ಏರ್ಪಾಟಿನ ಕ್ರಮ ವಿವರಗಳ ಬಗ್ಗೆ ಶ್ರೀ॥ ಶೇಷಮ್ಮನವರು ಪರಿಷತ್ತಿನ ಉಪಾಧ್ಯಕ್ಷರವರಿಗೆ ಬರೆದಿರುವ ತಾ॥ ೧೦-೪-೧೯೩೭ರ ಕಾಗದ, ಉಪಾಧ್ಯಕ್ಷರು ಶ್ರೀ॥ ಶೇಷಮ್ಮನವರಿಗೆ ಬರೆದಿರುವ ತಾ॥ ೧೦-೪-೧೯೩೭ ೧೬೩೩/೩೭ ಉಳ್ಳ ಕಾಗದವನ್ನೂ ಉಪಾಧ್ಯಕ್ಷರು ಅದರೊಡನೆ ಇರಿಸಿ ದಾನಪತ್ರದ ನಕಲಿನ ಕರಡು ಪ್ರತಿಯನ್ನೂ ಓದಿಸಿ ಕೇಳಲಾಗಿದೆ. ಶ್ರೀ॥ ಶೇಷಮ್ಮ ದಯಮಾಡಿ ಕಾ॥ ನಿ॥ ಮಂಡಲಿಯ ಈ ಅಧಿವೇಶನಕ್ಕೆ ಸ್ವತಃ ಬಂದು ತಮ್ಮ ಉದ್ದೇಶ ವಿವರಿಸಿರುತ್ತಾರೆ. ಅವರ ಸಮುಕ್ಷದಲ್ಲಿಯೇ ಅವರ ಅಭಿಪ್ರಾಯದ ಮೇರೆಗೆ ದಾನ ನಕಲನ್ನು ತಿದ್ದಿ ಅದಕ್ಕೆ ಅವರ ಒಪ್ಪಿಗೆಯನ್ನು ಪಡೆದದ್ದಾಗಿದೆ. ಹೀಗೆ ಒಪ್ಪಿತ ದಾನಪತ್ರವನ್ನು ಅಸಲು ಪ್ರತಿ ಮಾಡಿಸಿ ಶ್ರೀ॥ ಶೇಷಮ್ಮನವರಲ್ಲಿಗೆ ಕಳುಹಿ ರುಜುವಾದ ಬಳಿಕ ತರಿಸಿಕೊಳ್ಳತಕ್ಕದ್ದು; ಮತ್ತು ಅದೇ ಪತ್ರದ ಪ್ರತಿಯನ್ನು ಪರಿಷತ್ತಿನ ಉಪಾಧ್ಯಕ್ಷರು ರುಜು ಮಾಡಿ ಅವರಿಗೆ ದಾಖಲೆಗಾಗಿ ತಕ್ಕದ್ದು. ಮೇಲಿನ ಶ್ರೀ॥ ಶೇಷಮ್ಮನವರ ಕಾಗದವನ್ನೂ, ಅವರಿಂದ ರುಜು ದಾನಪತ್ರವನ್ನೂ ಸಹ ಮುಂದಿನ ನಡವಳಿಕೆಯ ಬಗ್ಗೆ ಪರಿಷತ್ತಿನಲ್ಲಿ ಇರಿಸಿಕೊಳ್ಳ

(೩) ಈ ಸಂಬಂಧವಾಗಿ ಶ್ರೀ॥ ಶೇಷಮ್ಮನವರು ಈ ದಿನ ಸಲ್ಲಿಸಿ ರೂಪಾಯಿಗಳನ್ನು ೧೯೩೭ನೆಯ ಇಸವಿಗೆ ಸಂಬಂಧಪಟ್ಟ ಪಾರಿತೋಷಿಕ ನಿಧಿಯ ಇರಿಸಿಕೊಳ್ಳತಕ್ಕದ್ದು; ಮತ್ತು ಈ ಪಾರಿತೋಷಿಕವನ್ನು ಮುಂದಿನ ಡಿಸೆಂಬರಿನಲ್ಲಿ ಸಮ್ಮೇಳನ ಕಾಲದಲ್ಲಿಯಾಗಲಿ ಅಥವಾ ಮುಂದಿನ ವಿಶೇಷ ಸಾಹಿತ್ಯೋತ್ಸವ ಯಾಗಲಿ ವಿನಿಯೋಗಮಾಡತಕ್ಕದ್ದು."

## ೨೧-೪-೧೯೩೭, ಬೆಂಗಳೂರು

೧೯೩೬ನೆಯ ಇಸವಿಯ ಲೆಕ್ಕ ಪರಿಶೋಧಕರಾದ ಶ್ರೀ॥ ವೈ. ಸುಬ್ರಹ್ಮಣ್ಯಂ, ಎಂ. ಅವರಿಗೆ ವಂದನೆ.—

(೪) "ಶ್ರೀ॥ ವೈ. ಸುಬ್ರಹ್ಮಣ್ಯಂ, ಎಂ.ಎ. ಅವರು ೧೯೩೬ನೆಯ ಆಯವ್ಯಯ ಲೆಕ್ಕಗಳನ್ನು ಪರಿಶೋಧನೆ ಮಾಡಿಕೊಟ್ಟಿರುವುದಕ್ಕಾಗಿ ಕಾ॥ ನಿ॥ ಅವರನ್ನು ವಂದಿಸುತ್ತದೆ. ಅವರು ಹಿಂದಿನ ವರ್ಷಗಳ ಲೆಕ್ಕದ ಕೆಲವು ಕುರಿತು ಮಾಡಿರುವ ಆಕ್ಷೇಪಣೆ ಸೂಚನೆಗಳನ್ನು ಗಮನಕ್ಕೆ ತಂದುಕೊಂಡದ್ದಾಗಿದೆ; ನ್ನನುಸರಿಸಿ ಇನ್ನುಮುಂದೆ ತಿದ್ದುಪಾಟುಗಳನ್ನು ನಡಸಕ್ಕದ್ದು."

## ೩೦-೫-೧೯೩೭, ಬೆಂಗಳೂರು

ಪುನರ್ನಿಯೋಜಿತ ಕಾ॥ ನಿ॥ ಮಂಡಲಿಯಲ್ಲಿ ಪರಿಷದುಪಾಧ್ಯಕ್ಷರ ಅರಿಕೆ.—

ಕಾರ್ಯಾರಂಭವಾಗುವ ಮೊದಲು ಉಪಾಧ್ಯಕ್ಷರು ಪುನರ್ನಿಯೋಜಿತವಾದ ಮಂಡಲಿಯ ಸದಸ್ಯರಿಗೆ ಸ್ವಾಗತವನ್ನು ಬಯಸಿ ಈ ರೀತಿ ಮಾತನಾಡಿದರು:—

"ತಮ್ಮಗಳಲ್ಲಿ ಬಹು ಮಂದಿ ಬಹಳಕಾಲದ ಮಿತ್ರರಾಗಿರುತ್ತೀರಿ. ಅಂತಹ ತಮ್ಮಗಳಿಗೆ ನನ್ನ ಸ್ವಾಗತವನ್ನು ಬಹು ಮಾತುಗಳಿಂದ ತಿಳಿಸಬೇಕಾದದ್ದಿಲ್ಲ. ಎಲ್ಲರೂ ನನ್ನ ಹೃದಯವನ್ನು ತಿಳಿದವರಾಗಿರುತ್ತೀರಿ. ತಮ್ಮಗಳೊಡನೆ ಕೆಲಸ ಮಾಡತಕ್ಕ ಅವಕಾಶ ಲಭಿಸಿರತಕ್ಕದ್ದು ನನ್ನ ಜೀವನದ ಭಾಗ್ಯವೆಂದು ಕೊಂಡಿದ್ದೇನೆ.

"ಈ ವರ್ಷ ಪರಿಷತ್ತಿನ ಜವಾಬ್ದಾರಿ ಇನ್ನೂ ಹೆಚ್ಚಾಗಿ ಬೆಳೆದಿದೆ. ಸ್ವಾಭಾವಿಕವೇ ಆಗಿದೆ. ಇದರಿಂದ ಈ ಹೊಸ ವರ್ಷದಲ್ಲಿ ಒಂದು ಹೆಚ್ಚಿನ ವನ್ನು ತಮ್ಮಗಳಿಂದ ಬಯಸಬೇಕಾಗಿದೆ. ಕಾ॥ ನಿ॥ ಮಂಡಲಿಯ

ಬೆಂಗಳೂರಿನಲ್ಲಿರತಕ್ಕ ಪ್ರತಿಯೊಬ್ಬರೂ ಪರಿಷತ್ತಿನ ಕಾರ್ಯಗಳಲ್ಲಿ, ಯಾವುದಾದರೊಂದು ನಿಷ್ಕರ್ಷೆಯಾದ ಭಾಗದ ಜವಾಬ್ದಾರಿಯನ್ನು ತೆಗೆದುಕೊಂಡು ಕೆಲಸ ಮಾಡುವುದು ಅವಶ್ಯವಾಗಿದೆ. ಪರಿಷತ್ತು ತಮ್ಮದೇ ಆಗಿರುವ ಕಾರಣ ನಾನು ಬೇಡಿರುವಂತೆ ಸಹಾಯ ನೀಡುವವರು ತಾವು ತಾವೇ ಮುಂದೆ ಬಂದು, ಒಬ್ಬೊಬ್ಬರು ಒಂದೊಂದು ಕೆಲಸವನ್ನು ವಹಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.''

ಅನಂತರ ಶ್ರೀ॥ ನಂ. ವೆಂಕಟೇಶಯ್ಯಂಗಾರ್ಯರು, ಕಳೆದ ೪ ವರ್ಷಗಳಿಂದಲೂ ಪರಿಷತ್ತಿನ ಉಪಾಧ್ಯಕ್ಷರಾಗಿ ಸಾಹಿತ್ಯ ಸೇವೆಯನ್ನು ಅತ್ಯಂತ ದಕ್ಷತೆಯಿಂದ ನಡಸಿಕೊಂಡು ಬಂದಿರುವುದಕ್ಕಾಗಿ ಶ್ರೀ॥ ಡಿ. ವಿ. ಗುಂಡಪ್ಪನವರಿಗೆ ಕಾ॥ ನಿ॥ ಮಂಡಲಿಯ ಇತರ ಸದಸ್ಯರ ಪರವಾಗಿ ವಂದನೆಗಳನ್ನು ಸಲ್ಲಿಸಿ, ಅವರು ಅದೇ ರೀತಿ ಇನ್ನುಮುಂದೆಯೂ ಹೀಗೆಯೇ ಬಹಳ ವರ್ಷಗಳ ಕಾಲ ಪರಿಷತ್ತಿನ ಕಾರ್ಯಗಳನ್ನು ನಡಸಿಕೊಂಡುಬರುವಂತೆ ಪ್ರಾರ್ಥಿಸಿ, ಆ ಕಾರ್ಯದಲ್ಲಿ ಕಾ॥ ನಿ॥ ಮಂಡಲಿಯ ಸದಸ್ಯರೆಲ್ಲರೂ ಅವರಿಗೆ ಒತ್ತಾಸೆ ಮಾಡುತ್ತೇವೆಂಬ ಭರವಸೆ ಕೊಟ್ಟರು.

**ಪರಿಷದಧ್ಯಕ್ಷರಾದ ಶ್ರೀಮದ್ಯುವರಾಜರವರಲ್ಲಿ ಕಾ॥ ನಿ॥ ಮಂಡಲಿಯ ರಾಜಭಕ್ತಿ ಸಮರ್ಪಣೆ.—**

(೧) ಪದ್ಧತಿಯ ಮೇರೆಗೆ ಈ ಕೆಳಗಿನ ನಿರ್ಣಯವು ಉಪಾಧ್ಯಕ್ಷರಿಂದ ಸೂಚಿತವಾಗಿ ಸಭೆಯಿಂದ ಕರತಾಡನಗಳೊಡನೆ ಅಂಗೀಕೃತವಾಯಿತು:—

"ಹೊಸದಾಗಿ ನಿಯೋಜಿತವಾಗಿರುವ ಈ ೧೯೩೭ನೆಯ ಇಸವಿಯ ಕಾ॥ ನಿ॥ ಮಂಡಲಿ ತನ್ನ ಈ ಮೊದಲನೆಯ ಅಧಿವೇಶನದಲ್ಲಿ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಪರಿಪಾಲಕರೂ ಆಗಿರುವ ಘನತೆವೆತ್ತ ಶ್ರೀಮದ್ಯುವರಾಜರವರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ. ಮಹಾಸ್ವಾಮಿಯವರ ಸನ್ನಿಧಾನದಲ್ಲಿ ತನ್ನ ರಾಜಭಕ್ತಿಪುರಸ್ಸರವಾದ ವಂದನೆಗಳನ್ನು ಸಮರ್ಪಿಸುತ್ತದೆ.''

**(೭) ವಾರ್ಷಿಕಾಧಿವೇಶನದ ವಿಷಯ ೧೩: ಋಣ ಪರಿಹಾರೋಪಾಯ; ಬೆಂಗಳೂರು ಪ್ರೆಸ್ಸಿನ ಬಾಕಿ.—**

"೧೯೩೬ನೆಯ ಇಸವಿಯ ಪರಿಷತ್ಪತ್ರಿಕೆಯ ಸಂಚಿಕೆಗಳು ಪೂರ್ತಿ ಸೇರಿ ಆಗುವ ಬೆಂಗಳೂರು ಪ್ರೆಸ್ಸಿನ ಬಿಲ್ಲುಗಳ ಮೊಬಲಗನ್ನು ಹಳೆಯ ಬಾಕಿ ಎಂದು ವ್ಯವಹರಿಸತಕ್ಕದ್ದು. ಆ ಬಾಕಿಯ ಬಗ್ಗೆ ಈಗ ಶಾಶ್ವತನಿಧಿಗೆ ಸೇರತಕ್ಕದ್ದಾಗಿ ಕೈಯಲ್ಲಿ ಉಳಿದಿರುವ ೨೯೦ ರೂ. ಗಳ ಜೊತೆಗೆ ಚಾಲ್ತಿ ಲೆಕ್ಕಗಳಿಂದ ೧೦ ರೂಪಾಯಿಗಳನ್ನು ಸೇರಿಸಿ ಒಟ್ಟು ೩೦೦ ರೂಪಾಯಿಗಳನ್ನು ಬೆಂಗಳೂರು ಪ್ರೆಸ್ಸಿಗೆ ಕೊಡತಕ್ಕದ್ದು. ಹಳೆಯ ಬಾಕಿಯ ಬಗ್ಗೆ ಇನ್ನೂ ಸಲ್ಲಬೇಕಾಗಿರುವ ಹಣದ ವಿಚಾರವನ್ನು ಮುಂದಿನ ಕಾ॥ ನಿ॥ ಮಂಡಲಿಯ ಅಧಿವೇಶನದಲ್ಲಿ ಆಲೋಚನೆ ಮಾಡತಕ್ಕದ್ದು.''

**(೭) ವಾರ್ಷಿಕಾಧಿವೇಶನದ ವಿಷಯ ೧೫: ಋಣ ಪರಿಹಾರದ ಉಪಸಮಿತಿಯ ವಿವರ.—**

"ಸಕಲ ಸದಸ್ಯರ ಅಧಿವೇಶನದ ತೀರ್ಮಾನದಮೇರೆಗೆ ರಚಿತವಾಗಬೇಕಾಗಿರುವ ಋಣ ಪರಿಹಾರದ ಉಪಸಮಿತಿಗೆ ಅಲ್ಲಿ ನೇಮಕವಾಗಿರುವ ೯ ಮಂದಿ ಸದಸ್ಯರ ಜೊತೆಗೆ ಈ ಕೆಳಗೆ ಕಾಣಿಸಿರತಕ್ಕ ಕಾ॥ ನಿ॥ ಮಂಡಲಿಯ ಸದಸ್ಯರು ಆ ಉಪಸಮಿತಿಯ ಸದಸ್ಯರಾಗಿರಬೇಕೆಂದು ಈ ಅಧಿವೇಶನವು ಕೋರುತ್ತದೆ:—

(೧) ಶ್ರೀ॥ಗಳಾದ ಎಸ್. ವಿ. ರಂಗಣ್ಣನವರು, ಎಂ.ಎ., (೨) ವಿ. ಸೀತಾರಾಮಯ್ಯನವರು, ಎಂ.ಎ., (೩) ಎ. ತಾಂದೋಣಿರಾಯರು, ಎಲ್.ಸಿ.ಇ., (೪) ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., (೫) ಶ್ರೀಮತಿ ಆರ್. ಕಲ್ಯಾಣಮ್ಮನವರು ಮತ್ತು (೬) ಡಿ. ಸಿ. ಸುಬ್ಬರಾಯಪ್ಪನವರು, ಬಿ.ಎ., ಬಿ.ಎಲ್. (ಅಧ್ಯಕ್ಷರು ಮತ್ತು ಕನ್ವೀನರು).''

(೮) ವಾರ್ಷಿಕಾಧಿವೇಶನದ ವಿಷಯ ೧೬: ಮೇಲಿನ ಉಪಸಮಿತಿಗೆ ಕೆಲವು ಸ...ಗಳು.—

ಇವುಗಳನ್ನು ಉಪಸಮಿತಿಯ ಮುಂದೆ ಇಡತಕ್ಕದ್ದು.

(೯) ವಾರ್ಷಿಕಾಧಿವೇಶನದ ವಿಷಯ ೧೭: ಅಭಿಮಾನಿ ವರ್ಗ.—

ಅಭಿಮಾನಿ ವರ್ಗಕ್ಕಾಗಿ ಬೇರೆ ಅಪೇಕ್ಷಾ ಪತ್ರಗಳನ್ನು ಅಚ್ಚುಮಾಡಿಸಬ...

ಅಭಿಮಾನಿ ವರ್ಗಕ್ಕಾಗಿ ಬರುವ ಅಪೇಕ್ಷಾ ಪತ್ರಗಳನ್ನು ಕಾರ್ಯ... ವಿಚಾರಮಾಡಿ ಅಂಗೀಕರಿಸಬಹುದು.

(೧೦) ವಾರ್ಷಿಕಾಧಿವೇಶನದ ವಿಷಯ ೧೮: ಲಾಂಛನದ ಏರ್ಪಾಟು.—

ಈ ವಿಚಾರದಲ್ಲಿ ಅಂಗಸಂಸ್ಥೆಗಳಿಂದಲೂ ಇತರ ಹಿತಕಾಂಕ್ಷಿಗಳಿಂದಲೂ ... ತರಿಸಿಕೊಂಡು ಆ ಬಳಿಕ ಪರ್ಯಾಲೋಚಿಸತಕ್ಕದ್ದು.

(೧೧) ವಾರ್ಷಿಕಾಧಿವೇಶನದ ವಿಷಯ ೧೯: ಕನ್ನಡ ಸಾಹಿತ್ಯ ಪರೀಕ್ಷೆಗಳು.—

ಸಕಲ ಸದಸ್ಯ ಅಧಿವೇಶನವು ನಿಯಮಿಸಿರುವ ಸಮಿತಿಯನ್ನು ತನ್ನ ... ಬೇಗ ಆರಂಭಿಸಿ ನಡಸಿಕೊಡುವಂತೆ ಪ್ರಾರ್ಥಿಸತಕ್ಕದ್ದು.

(೧೨) ವಾರ್ಷಿಕಾಧಿವೇಶನದ ವಿಷಯ ೨೧: ವಿಶ್ವವಿದ್ಯಾನಿಲಯದಲ್ಲಿ ಕನ್ನಡ (ಶ್ರೀಮಾನ್ ಎಂ. ವಾಸುದೇವಮೂರ್ತಿಯವರ ಸೂಚನೆ).—

ನಿರ್ಣಯದಲ್ಲಿಯೇ ಸೂಚಿಸಿರುವಂತೆ ಈ ಸಲಹೆಯನ್ನು ಪರೀಕ್ಷಾ... ಒಪ್ಪಿಸತಕ್ಕದ್ದು.

(೧೩) ವಾರ್ಷಿಕಾಧಿವೇಶನದ ವಿಷಯ ೨೨: ಪರಿಷತ್ತಿಗೆ ಕಾರ್ಯ ಸಹಾಯಕ...

ಈ ನಿರ್ಣಯದಂತೆ ಮುಂದೆ ಬಂದು ಪರಿಷತ್ತಿನ ಸರಸ್ವತೀ ಭಂಡಾರದ ... ಸಹಾಯಮಾಡಲು ಒಪ್ಪಿರುವ ಶ್ರೀ॥ ಕೆ. ಎಸ್. ಕೃಷ್ಣಮೂರ್ತಿಯವರಿಗೆ ... ಮಂಡಲಿ ವಂದನೆಯನ್ನು ಸಲ್ಲಿಸುತ್ತದೆ.

ನಿರ್ಣಯಾನುಸಾರ ಕಾರ್ಯ ಭಾಗಗಳನ್ನು ನಿರ್ವಹಿಸಲು ಈ ಕೆಳಗೆ ಸೂ... ಕಾರ್ಯ ಸಹಾಯಕರನ್ನು ಬೇಡತಕ್ಕದ್ದು:—

(೧) ಪುಸ್ತಕ ಭಂಡಾರ ಮತ್ತು ವಾಚನಾಲಯ
—ಶ್ರೀ॥ ಡಿ. ಸಿ. ಸುಬ್ಬರಾಯಪ್ಪನವರು, ಬಿ.ಎ., ಬಿ.ಎಲ್.

(೨–೩) ಸಂಚಾರೋಪನ್ಯಾಸದ ಏರ್ಪಾಟು ಮತ್ತು ಪರಸ್ಥಳ ಸಾಹಿತ್ಯ ಸೇ...
—ಶ್ರೀ॥ ಪಿ. ಶ್ರೀನಿವಾಸರಾಯರು, ಎಂ.ಎಸ್‌ಸಿ.

(೪–೫) ಕರ್ಣಾಟಕ ಸಂಘಗಳ ಸಂಘಟನೆ ಮತ್ತು ವ್ಯವಹಾರ; ಪ್ರಚಾ...
—ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.

(೬) ಪರಿಷತ್ತಿನ ಕಟ್ಟಡ, ಸ್ವತ್ತು, ಇತ್ಯಾದಿ
—ಶ್ರೀ॥ ಎ. ತಾಂಡೋಣೆರಾಯರು, ಎಲ್.ಸಿ.ಇ., ಎಂ.ಐ.ಇ.

(೧೪) ಹಿಂದಿನ ಕಾ॥ ನಿ॥ ಮಂಡಲಿಯ ಸದಸ್ಯರಿಗೆ ವಂದನೆ.—

ತಾ॥ ೧–೧–೧೯೩೬ರಿಂದ ಇದುವರೆಗೆ ಪರಿಷತ್ತಿನ ಕಾರ್ಯಗಳನ್ನು ನಡ... ಬಂದಿರುವುದಕ್ಕಾಗಿ, ಹಿಂದಿನ ಕಾ॥ ನಿ॥ ಮಂಡಲಿಯ ಸದಸ್ಯರುಗಳಿಗೆ ಈಗ ಕಾರ್ಯ... ಮಾಡುತ್ತಿರುವ ಈ ಮಂಡಲಿ ವಂದನೆಗಳನ್ನು ಸಲ್ಲಿಸುತ್ತದೆ.

**(೧೬) ತಾ॥ ೪-೫-೧೯೩೭ರಲ್ಲಿ ನಡೆದ ೨ನೆಯ ಸಕಲ ಕರ್ಣಾಟಕ ಸಂಘ ಸಮ್ಮೇಳನದ ವರದಿ.—**

ಸಂಘ ಸಮ್ಮೇಳನದ ವರದಿಯನ್ನು ಅಚ್ಚುಹಾಕಿಸಿ ಪ್ರಕಟಿಸತಕ್ಕದ್ದು.

ಈ ಸಮ್ಮೇಳನದಲ್ಲಿ ಭಾಗವಹಿಸಿ ಸಹಕರಿಸಿರುವ ಎಲ್ಲ ಕರ್ಣಾಟಕ ಸಂಘಗಳಿಗೂ ಸಂಘ ಪ್ರತಿನಿಧಿಗಳಿಗೂ ಕಾ॥ ನಿ॥ ಮಂಡಲಿ ತನ್ನ ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಈ ಸಮ್ಮೇಳನವು ಅಂಗೀಕರಿಸಿದ ೧೨ ತೀರ್ಮಾನಗಳನ್ನು ಕಾ॥ ನಿ॥ ಮಂಡಲಿ ಅನುಮೋದಿಸುತ್ತದೆ. ಇವುಗಳ ಪೈಕಿ ೧೦, ೧೧, ೧೨ನೆಯ ನಿರ್ಣಯಗಳ ವಿಚಾರವಾಗಿ ಈ ಮುಂದೆ ತೀರ್ಮಾನಿಸಿರುವಂತೆ ಕಾರ್ಯ ನಡಸತಕ್ಕದ್ದು. ಉಳಿದವುಗಳ ವಿಚಾರವಾಗಿ ಪರಿಷತ್ತಿನ ಕಚೇರಿ ತಕ್ಕ ಕಾರ್ಯವನ್ನು ನಡಸತಕ್ಕದ್ದು.

**(೧೭) ಸಂಘ ಸಮ್ಮೇಳನದ ನಿರ್ಣಯ ೧೦.—**

ಈ ನಿರ್ಣಯದ ವಿಚಾರವನ್ನು ೧೧ನೆಯ ನಿರ್ಣಯದಲ್ಲಿ ಹೇಳಿರುವ ಪರೀಕ್ಷಾ ವಿಷಯಕ ಉಪಸಮಿತಿಗೆ ವಹಿಸತಕ್ಕದ್ದು.

**(೧೮) ಸಂಘ ಸಮ್ಮೇಳನದ ನಿರ್ಣಯ ೧೧.—**

ಪರಿಷದಧಿಕಾರಿಗಳು ಈ ವಿಚಾರದಲ್ಲಿ ಈಗ ಇರತಕ್ಕ ಅನುಕೂಲ ಅನನುಕೂಲಗಳನ್ನು ಪರ್ಯಾಲೋಚನೆ ಮಾಡಿ ಸಲಹೆ ಕೊಡಬೇಕೆಂದು ಕೋರಿದೆ.

**(೧೯) ಸಂಘ ಸಮ್ಮೇಳನದ ನಿರ್ಣಯ ೧೨.—**

ಈ ಕೋರಿಕೆಯನ್ನು ಕಾ॥ ನಿ॥ ಮಂಡಲಿ ಅನುಮೋದಿಸಿ ಅದನ್ನು ಪರಿಷತ್ತಿನ ಅಧಿಕಾರಿಗಳು ಅದಷ್ಟುಮಟ್ಟಿಗೆ ನಡಸಿಕೊಡಬೇಕೆಂದು ಅಪೇಕ್ಷಿಸುತ್ತದೆ.

**(೨೦) ವಿಶೇಷ ಸಾಹಿತ್ಯೋತ್ಸವದ ಸಹಾಯಕರ್ತರಿಗೆ ವಂದನಾ ಸಮರ್ಪಣೆ.—**

"ಈ ಸಲದ ವಿಶೇಷ ಸಾಹಿತ್ಯೋತ್ಸವವನ್ನು ತಮ್ಮ ಉತ್ಸಾಹ ಶ್ರಮಗಳಿಂದ ಯಶಸ್ವಿಯಾಗಿ ನಡಸಿಕೊಟ್ಟಿರುವುದಕ್ಕಾಗಿ ಶ್ರೀ॥ ಎಸ್. ವಿ. ರಂಗಣ್ಣನವರಿಗೂ ಅವರ ಸಹೋದ್ಯೋಗಿಗಳಿಗೂ ಕಾ॥ ನಿ॥ ಮಂಡಲಿ ತನ್ನ ಮನಃಪೂರ್ವಕವಾದ ಕೃತಜ್ಞತೆಯನ್ನು ಸಲ್ಲಿಸುತ್ತದೆ. ಮತ್ತು ಉತ್ಸವದಲ್ಲಿ ಸಹಕರಿಸಿದ ಸಭಾಧ್ಯಕ್ಷರು, ಉಪನ್ಯಾಸಕರು, ಗಮಕಿಗಳು, ಅಭಿನಯಕಾರರು ಮೊದಲಾದ ವಿದ್ವಜ್ಜನರಿಗೂ, ದ್ರವ್ಯಸಹಾಯ ಕೊಟ್ಟ ಮಹನೀಯರಿಗೂ, ಸ್ವಯಂಸೇವಕರಿಗೂ, ಇತರ ವಿಧಗಳಲ್ಲಿ ಶ್ರಮಿಸಿ ಉಪಕಾರಮಾಡಿರುವ ಎಲ್ಲ ಅಭಿಮಾನಿಗಳಿಗೂ ಕಾ॥ ನಿ॥ ಮಂಡಲಿ ತನ್ನ ವಂದನೆಗಳನ್ನು ಸಲ್ಲಿಸುತ್ತದೆ. ಕಾರ್ಯಾಧಿಕಾರಿಗಳು ಈ ಎಲ್ಲರಿಗೂ ತಕ್ಕ ರೀತಿಯಲ್ಲಿ ಬರೆದು ಪರಿಷತ್ತಿನ ಕೃತಜ್ಞತೆಯನ್ನು ತಿಳಿಸತಕ್ಕದ್ದು."

**(೨೧) ೧೯೩೭ನೆಯ ವರ್ಷದ ಸಂಪಾದಕ ಮಂಡಲಿಯ ಮತ್ತು ಅದರ ವ್ಯವಸ್ಥಾಪಕರ ನೇಮಕ.—**

ಸನ್ ೧೯೩೭ನೆಯ ಇಸವಿಯ ಬಗ್ಗೆ ಈ ಕೆಳಗೆ ಕಾಣಿಸಿರುವಂತೆ ಸಂಪಾದಕ ಮಂಡಲಿಯನ್ನು ನಿಯಮಿಸಿದೆ. ಈ ಸಂಪಾದಕ ಮಂಡಲಿಯ ಉದ್ದೇಶ ಕಾರ್ಯಕ್ರಮಗಳು ಹಿಂದೆ ನಿಯಮಿಸಿರುವಂತೆ ಇರತಕ್ಕದ್ದು.

**ಇದರ ಸದಸ್ಯರು.**—ಮ॥ ರಾ॥ ಗಳಾದ (೧) ಡಿ. ವಿ. ಗುಂಡಪ್ಪನವರು (ಅಧ್ಯಕ್ಷರು), (೨) ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ., (೩) ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., (೪) ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., (೫) ನಂ. ವೆಂಕಟೇಶ ಅಯ್ಯಂಗಾರ್ಯರು, ಬಿ.ಎ., (೬) ಕೆ. ಜಿ. ಕುಂದಣಗಾರರು, ಎಂ.ಎ., (೭) ಬೆನಗಲ್

ರಾಮರಾಯರು, ಎಂ.ಎ., ಎಲ್‌ಎಲ್.ಬಿ., (೮) ಸರ್ವದರ್ಶನತೀರ್ಥ ವೈ... ಶಾಸ್ತ್ರಿಗಳು, (೯) ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರು, (೧೦) ಆರ್. ಎಸ್... ಯವರು, ಎಂ.ಎ., ಬಿ.ಟಿ., (೧೧) ವಿ. ಕೆ. ಗೋಕಾಕರು, ಎಂ.ಎ., (೧೩) ಎಸ್... ಮಾಳವಾಡ ಅವರು, ಎಂ.ಎ., (೧೪) ಬಿ. ಎಸ್. ಕುಶಾಲಪ್ಪನವರು, ಬಿ.ಎ., ... (೧೪) ಡಿ. ಕೆ. ಭೀಮಸೇನರಾಯರು, ಎಂ.ಎ., (೧೫) ವಿ. ಜಿ. ಕುಲಕರ್ಣಿ, ... ಎಲ್‌ಎಲ್.ಬಿ., (೧೬) ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. (ವ್ಯವಸ್ಥಾಪಕರು ... ಪತ್ರಿಕಾ ಸಂಪಾದಕರು.)

"ಸಂಪಾದಕಮಂಡಲಿಯ ವ್ಯವಸ್ಥಾಪಕರಾಗಿಯೂ ಪತ್ರಿಕಾ ಸಂಪಾದಕ... ಇದ್ದುಕೊಂಡು ಉಪಕಾರಮಾಡಿರುವ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿ... ಕಾ॥ ಸಿ॥ ಮಂಡಲಿ ತನ್ನ ಮನಃಪೂರ್ವಕವಾದ ಮೆಚ್ಚಿಕೆಯನ್ನೂ ವಂದನೆ... ಸಮರ್ಪಿಸುತ್ತದೆ."

(೨೬) ಭಾವಚಿತ್ರಪಟ ಸ್ವೀಕಾರ.—

ಪರಿಷತ್ತಿಗಾಗಿ ವ್ಯಕ್ತಿಗಳ ಭಾವಚಿತ್ರಗಳನ್ನೂ ಛಾಯಾಚಿತ್ರಗಳನ್ನೂ ತೆಗೆದು... ವಿಚಾರ:—

"ಈ ವಿಚಾರವನ್ನು ಪರ್ಯಾಲೋಚಿಸಿ ಸಲಹೆಕೊಡುವುದಕ್ಕಾಗಿ ಈ... ಮಹನೀಯರುಗಳನ್ನುಳ್ಳ ಉಪಸಮಿತಿಯನ್ನು ನಿಯಮಿಸಿದೆ: ಈ ಉಪಸಮಿತಿಯ... ಯನ್ನು ತರಿಸಿಕೊಂಡು ಈ ವಿಷಯವನ್ನು ಆಲೋಚಿಸತಕ್ಕದ್ದು."

ಉಪಸಮಿತಿಯ ಸದಸ್ಯರು.—ಶ್ರೀ॥ ಗಳಾದ (೧) ಟಿ. ಟಿ. ಶರ್ಮ... (೨) ಪಿ. ಶ್ರೀನಿವಾಸರಾಯರು, ಎಂ.ಎಸ್‌ಸಿ., (೩) ವಿ. ಸೀತಾರಾಮಯ್ಯನವರು... (ಕನ್ವೀನರು.)

(೨೭) ಸಭಾಮಂಟಪದಲ್ಲಿ ಚಿತ್ರಪಟ ಪ್ರದರ್ಶನ.—

"ಈಗ ಪರಿಷತ್ತಿನ ಸಭಾಮಂಟಪದಲ್ಲಿ ಹಾಕಿರುವ ಚಿತ್ರಪಟಗಳನ್ನು ಉಪಾಧ್ಯಕ್ಷರೂ ಕಾರ್ಯದರ್ಶಿಯವರೂ, ಕೋಶಾಧ್ಯಕ್ಷರೂ ಕಲೆತು ಉಚಿತ ಕಂಡಂತೆ ಬೇರೆ ... ಪ್ರದರ್ಶಿಸಬಹುದು."

(೨೮) ಇತರ ಸಂಸ್ಥೆಗಳ ಸಭಾಕಾರ್ಯಗಳ ಪ್ರವೇಶ ಶುಲ್ಕ.—

ಪರಿಷತ್ತಿನ ಸಭಾಮಂಟಪದಲ್ಲಿ ಇತರ ಸಂಸ್ಥೆ ತನ್ನ ಕಾರ್ಯ ನಡಸುವ ಸಂದ... ಪ್ರೇಕ್ಷಕರಿಂದ ಪ್ರವೇಶ ಧನವನ್ನು ವಸೂಲುಮಾಡುವುದಾದರೆ, ಆ ಪ್ರವೇಶ ಧನ... ಎಷ್ಟಿರಬೇಕೆಂಬ ವಿಚಾರ.—

"ಈ ವಿಷಯದಲ್ಲಿ ಇದುವರೆಗೆ ರೂಢಿಯಲ್ಲಿರುವ ರೀತಿಯೇ ಇನ್ನೂ ಕೆಲ... ನಡೆಯಬಹುದು. ಉಪಾಧ್ಯಕ್ಷರು ಉಚಿತ ತೋರಿದಂತೆ ಕೆಲವು ಪರಿಷತ್ಕಾರ್ಯ... ಗಳಲ್ಲಿ ೮ ಆಣೆಯ ಅಥವಾ ಹೆಚ್ಚಿನ ದರಗಳನ್ನು ಹಾಕಿ ಪರೀಕ್ಷಿಸಿ ನೋಡಿ, ... ವಾದ ಬಳಿಕ ಈ ವಿಷಯವನ್ನು ಪುನರಾಲೋಚನೆಮಾಡಬಹುದು."

(೨೯) ಸಂಶೋಧನ ಕಾರ್ಯ.—

ಬೆಂಗಳೂರು ಇಂಗ್ಲಿಷ್—ಕನ್ನಡ ನಿಘಂಟುವಿನ ಕಚೇರಿಯಲ್ಲಿರುವ ಶ್ರೀ॥ ... ರಾಘವಾಚಾರ್ಯರೂ, ಶ್ರೀ॥ ಎಲ್. ಗುಂಡಪ್ಪನವರೂ 'ಕಿಟೆಲ್'ರವರ ನಿಘಂಟು... ಪರಿಷ್ಕರಿಸಬೇಕಾಗಿದೆಯೆಂದೂ, ಅದಕ್ಕೆ ಪೂರ್ವಭಾವಿಯಾಗಿ ಕೆಲವು

ಕಾರ್ಯಗಳು ನಡೆಯಬೇಕಾಗಿವೆಯೆಂದೂ ಸೂಚಿಸಿ, ಈ ಕೆಲಸವನ್ನು ಕೈಕೊಳ್ಳಲು ಪರಿಷತ್ತು ತಕ್ಕ ಅನುಕೂಲಗಳನ್ನು ಕಲ್ಪಿಸಿಕೊಡಬೇಕೆಂದು ಕೋರಿ ಬರೆದಿರುವ ಅವರ ೨೧-೫-೧೯೩೭ನೆಯ ತಾರೀಖಿನ ಪತ್ರ:—

"ಇದನ್ನು ಓದಿಸಿ ಕೇಳಿ, ಅವರ ಸೂಚನೆಯನ್ನು ಕೃತಜ್ಞತೆಯಿಂದ ಅಂಗೀಕರಿಸಲಾಗಿದೆ. ಈ ಕಾರ್ಯದಲ್ಲಿ ಅವರಿಗೆ ಆಗಾಗ ತಕ್ಕ ಸಲಹೆಗಳನ್ನು ಕೊಡಲು ಈ ಕೆಳಗೆ ಕಾಣಿಸಿರುವ ಮಹನೀಯರು ಒಂದು ಉಪಸಮಿತಿಯಾಗಿರಬೇಕೆಂದು ಕಾ॥ ನಿ॥ ಮಂಡಲಿ ಪ್ರಾರ್ಥಿಸುತ್ತದೆ:—

(೧) ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಅಧ್ಯಕ್ಷರು), (೨) ಶ್ರೀ॥ ಟಿ. ಟಿ. ಶರ್ಮರವರು, (೩) ಶ್ರೀ॥ ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., (೪) ಶ್ರೀ॥ ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., (೫) ಡಾ॥ ಎ. ಎನ್. ನರಸಿಂಹಯ್ಯನವರು, ಎಂ.ಎ., ಎಲ್.ಟಿ., ಪಿಎಚ್.ಡಿ."

**(೪) ೧೯೩೭ನೆಯ ವರ್ಷದ ಆದಾಯ ವ್ಯಯದ ಅಂದಾಜು ಪಟ್ಟಿ (Budget).—**

ಈ ಕೆಳಗಿನ ಕಾರ್ಯಭಾಗಗಳಿಗಾಗಿ ಪ್ರತ್ಯೇಕವಾಗಿ ಹಣ ಒದಗಿಸಬೇಕಾಗಬಹುದೆಂಬುದನ್ನು ಗಮನಕ್ಕೆ ತಂದುಕೊಳ್ಳಲಾಯಿತು.—

(೧) ಸ್ಪರ್ಧೆ, ಗೋಷ್ಠಿ ಮೊದಲಾದುವು .. ರೂ. ೬೦

(೨) ಸಂಘಗಳ ಭೇಟಿ ಮುಂತಾದ ಪ್ರಚಾರ ಕಾರ್ಯಕ್ಕಾಗಿ ಪ್ರಯಾಣದ ಖರ್ಚು .. ರೂ. ೧೦೦

ತೀರ್ಮಾನ:—"ಈ ಮತ್ತು ಇಂಥ ಇತರ ಬಾಬುಗಳಿಗಾಗಿ ಸಂದರ್ಭಾನುಸಾರ ಇತರ ಬಾಬುಗಳ ಬಗ್ಗೆ ಗೊತ್ತಾಗಿರುವ ಹಣವನ್ನು ತಿರುಗಿಸಿಕೊಳ್ಳುವುದರಿಂದಲಾಗಲಿ (Re-appropriation) ಉಚಿತ ತೋರುವ ಇತರ ವಿಧದಲ್ಲಿಯಾಗಲಿ ಹಣವನ್ನು ಒದಗಿಸಿಕೊಳ್ಳಬಹುದು."

## ೨೦-೬-೧೯೩೭, ಬೆಂಗಳೂರು

**(೫) ಪರಿಷತ್ತಿನ ರಜತ ಮಹೋತ್ಸವ.—**

೧೯೪೦ನೆಯ ಇಸವಿಯ ಮೇ ೩ನೆಯ ತಾರೀಖಿನ ಹಿಂದೆ ಮುಂದೆ ಅನುಕೂಲವಾದ ದಿನದಿಂದ ೩-೪ ದಿನಗಳು ಈ ಉತ್ಸವವನ್ನು ನಡಸತಕ್ಕದ್ದು. ಅದಕ್ಕೆ ಅವಶ್ಯವಾದ ಪ್ರಚಾರ ಕಾರ್ಯವನ್ನೂ ಇತರ ಸಿದ್ಧತೆಯನ್ನೂ ಪರಿಷತ್ತಿನ ಕಾರ್ಯಾಲಯದವರು ಈಗಿನಿಂದಲೂ ನಡಸತಕ್ಕದ್ದು; ಮತ್ತು ಈ ವಿಚಾರದಲ್ಲಿ ಹೆಚ್ಚುಗಟ್ಟಲೆಯ ವಿಷಯಗಳನ್ನು ಆಗಾಗ ಕಾ॥ ನಿ॥ ಮಂಡಲಿಯ ಅವಗಾಹನೆಗೆ ತರತಕ್ಕದ್ದು.

**(೭) ದಿವಂಗತ ಇ. ಎ. ಭಾಸ್ಕರರಾಯ ಜ್ಞಾಪಕ ಸ್ಪರ್ಧೆ.—**

೧೯೩೭ನೆಯ ವರ್ಷದ ಸ್ಪರ್ಧೆಯ ಸಮಾಚಾರವನ್ನು ಕಾರ್ಯದರ್ಶಿಯವರು ಕೂಡಲೆ ಪ್ರಸಿದ್ಧಪಡಿಸತಕ್ಕದ್ದು. ಸ್ಪರ್ಧೆಗಾಗಿ ಬರುವ ಕನ್ನಡ ಸಾಹಿತ್ಯ ವಿಚಾರದ ಪ್ರಬಂಧಗಳು ೧೯೩೭ನೆಯ ಸೆಪ್ಟೆಂಬರ್ ೩೦ರ ಒಳಗಾಗಿ ಪರಿಷತ್ತಿನ ಕಚೇರಿಗೆ ಬರುವಂತೆ ಕೋರತಕ್ಕದ್ದು. ಸ್ಪರ್ಧೆಗೆ ಲೇಖನಗಳು ಬರುವ ಹೊತ್ತಿಗೆ ನಿಯಮಾನುಸಾರ ಒಂದು ಪರೀಕ್ಷಕ ಸಮಿತಿಯನ್ನು ಗೊತ್ತುಮಾಡತಕ್ಕದ್ದು.

ಸ್ಪರ್ಧೆಯ ವಿಷಯ: ಸ್ಪರ್ಧಿಗಳು 'ತೊರವೆಯ ರಾಮಾಯಣ'ದ ವಿಮರ್ಶೆ ಅಥವಾ 'ಕನಕದಾಸರ ಕೃತಿ'ಗಳ ವಿಮರ್ಶೆ ಎಂಬ ವಿಷಯವನ್ನು ಕುರಿತು, ಫೂಲ್ಸ್‌ಕ್ಯಾಪ್ ಆಕಾರದ ೨೦-೨೫ ಪುಟಗಳಷ್ಟರಲ್ಲಿ, ಲೇಖನಗಳನ್ನು ಬರೆದು ಕಳುಹಿಸತಕ್ಕದ್ದು.

(೮) ಪರಿಷತ್ತಿನ ಜಮಖಾನಗಳ ಎರವಲು.—

ಪರಿಷತ್ತಿನ ಉಪಯೋಗಕ್ಕೆ ಅವಶ್ಯವಿಲ್ಲದಿರುವಾಗ, ದಿನವೊಂದಕ್ಕೆ ಜಮಖಾನಕ್ಕೆ ಎರಡು ಆಣೆಯಂತೆ ರುಸುಮು ತೆಗೆದುಕೊಂಡು ಪರಿಷತ್ತಿನ ಜಮಖಾ... ಇತರರಿಗೆ ಎರವಲು ಕೊಡಬಹುದು.

ಜಮಖಾನಗಳು ಹರಿದುಹೋಗುವುದು, ಹಾಳಾಗಿ ಹೋಗುವುದು ... ಎಲ್ಲ ಬಗೆಯ ನಷ್ಟಗಳಿಗೂ ಎರವಲು ತೆಗೆದುಕೊಳ್ಳುವವರೇ ಜವಾಬ್ದಾರರಾಗಿರ...

## ೨. ಉಪನ್ಯಾಸಾದಿ ಸಾರ್ವಜನಿಕ ಕಾರ್ಯಗಳು

(೧) ಏಪ್ರಿಲ್ ೩ನೆಯ ಶನಿವಾರ, 'ವಿಶ್ವಕರ್ಣಾಟಕ' ಪತ್ರಿಕೆಯ ಸಂ... ಶ್ರೀಮಾನ್ ತಿರುಮಲೆ ತಾತಾಚಾರ್ಯ ಶರ್ಮ ಅವರು ಕನ್ನಡ ಶಾಸನ ಸಾ... ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸಮಾಡಿದರು.

(೨) ಏಪ್ರಿಲ್ ೨೬ನೆಯ ಸೋಮವಾರ, ವಿಶೇಷ ಸಾಹಿತ್ಯೋತ್ಸವದ ... ಏರ್ಪಡಿಸಿದ್ದ ಬಾಲಕಬಾಲಕಿಯರ ಕಂಠಪಾಠ ಸ್ಪರ್ಧೆ ನಡೆಯಿತು. ಒಟ್ಟು ... ಬಾಲಕ ಬಾಲಕಿಯರು ಸ್ಪರ್ಧೆಯಲ್ಲಿ ಭಾಗವಹಿಸಿದ್ದರು. ಶ್ರೀ॥ಗಳಾದ ... ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರೂ, ವಿ. ವೆಂಕಟಾಚಾರ್, ಎಂ.ಎ., ... ಅವರೂ ಮತ್ತು ಸಿ. ಆರ್. ಮಾಧವರಾವ್, ಬಿ.ಎ. ಅವರೂ ಪರೀಕ್ಷಕ... ಜಯಶೀಲರಾದವರು ೬ ಮಂದಿ: ೧ನೆಯ ಬಹುಮಾನ: (೧) ಚಿ॥ ಕುಮಾರಿ ಪಿ. ... (೨) ಚಿ॥ ಬಿ. ಎಸ್. ಶ್ರೀಕಂಠೇಶ್ವರನ್, (೩) ಚಿ॥ ಬಿ. ಆರ್. ಜಯರಾಜ್; ... ಬಹುಮಾನ: ಚಿ॥ ಕುಮಾರಿ ಸಿ. ಎನ್. ಲೀಲಾವತೀಬಾಯಿ; ೩ನೆಯ ಬಹುಮಾನ: ... ಚಿ॥ ಕುಮಾರಿ ಎ. ಎಸ್. ಅಲಮೇಲು, (೨) ಚಿ॥ ಕುಮಾರಿ ಎಸ್. ಎನ್. ಆಂ...

(೩-೧೧) ಮೇ ೨ನೆಯ ಭಾನುವಾರದಿಂದ ೧೦ನೆಯ ಸೋಮವಾರ ... ನಾಲ್ಕನೆಯ ವಿಶೇಷ ಸಾಹಿತ್ಯೋತ್ಸವ.—(ಇದರ ವಿವರವಾದ ವರದಿಯನ್ನು ಪರಿಷ... ಕಳೆದ ಸಂಚಿಕೆಯಲ್ಲಿ ಪ್ರಕಟಗೊಳಿಸಿದೆ.)

(೧೨) ಮೇ ೧೨ನೆಯ ಬುಧವಾರ, ಬೆಂಗಳೂರು 'ಕರ್ನಾಟಕ್ ... ಅಮೆಚೂರ್ಸ್' ಸಂಘದವರು, ದೇವ್ರಂಗೆ ದ್ಯಾವಿ, ಕಂಬ್ಳಿ ಸೇವೆ ಮತ್ತು ಬು... ದ್ಬಡಾಯಿ ಎಂಬ ನಾಟಕಗಳನ್ನು ವಿಶೇಷ ಸಾಹಿತ್ಯೋತ್ಸವದ ಸಹಾಯಾ... ಅಭಿನಯಿಸಿದರು. ಶ್ರೀ॥ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರ... ವಹಿಸಿದ್ದರು.

(೧೩) ೧೬ನೆಯ ಮೇ ಭಾನುವಾರ, ಬೆಂಗಳೂರು 'ಕರ್ನಾಟಕ್ ... ಅಮೆಚೂರ್ಸ್' ಸಂಘದವರು ಹೋಂ ರೂಲ್ ಮತ್ತು ಆಷಾಢಭೂತಿ ಎಂಬ ನಾಟ... ವಿಶೇಷ ಸಾಹಿತ್ಯೋತ್ಸವದ ಸಹಾಯಾರ್ಥವಾಗಿ ಅಭಿನಯಿಸಿದರು. ಶ್ರೀ॥ ಡಿ. ವಿ. ... ನವರು ಅಧ್ಯಕ್ಷತೆ ವಹಿಸಿದ್ದರು.

(೧೪) ೨೯ನೆಯ ಮೇ ಶನಿವಾರ, ಪ್ರೊ॥ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ... ಅವರು ಕನ್ನಡ ಬಾಲಬೋಧೆ ಮತ್ತು ಅಕ್ಷರ ಸಂಸ್ಕರಣ ಎಂಬ ವಿಷಯವನ್ನು ಕನ್ನಡದಲ್ಲಿ ಉಪನ್ಯಾಸಮಾಡಿದರು.

(೧೫) ಜೂನ್ ೧೯ನೆಯ ಶನಿವಾರ, ಶ್ರೀಮನ್ ಮಹಾರಾಜರವರ ವರ್ಧಂತ್ಯುತ್ಸವದ ಪ್ರಯುಕ್ತ ಶ್ರೇಯಃಪ್ರಾರ್ಥನಾ ಸಭೆ. (ವರದಿಯನ್ನೂ ಪ್ರಾರ್ಥನಾ ನಿರ್ಣಯವನ್ನೂ ಕಳೆದ ಸಂಚಿಕೆಯಲ್ಲಿ ಕೊಟ್ಟಿದೆ.)

## ೧೯೩೭ನೆಯ ಇಸವಿ ಏಪ್ರಿಲ್ ತಿಂಗಳಿನಿಂದ ಜೂನ್ ತಿಂಗಳ ಕಡೆಯವರೆಗೆ ಪರಿಷತ್ತಿಗೆ ಹೊಸದಾಗಿ ಸೇರಿದ ಸದಸ್ಯರ ಪಟ್ಟಿ

**ಅಂಗ ಸಂಸ್ಥೆಗಳು:** (೧) ಕರ್ಣಾಟಕ ಸಾಹಿತ್ಯ ಸಂಘ, ಕುಂದಾಪುರ (ಸಾಮಾನ್ಯ ಅಂಗ ಸಂಸ್ಥೆ).

**ಸಹಾಯಕರು.**—(೧) ಮ॥ ಪಿ. ರಾಮಾಚಾರ್ಯರು.

**ಆಜೀವ ಸದಸ್ಯರು.**—ಮ॥ ರಾ॥ ಗಳಾದ (೧) ಡಾ॥ ಸಿ. ಎಸ್. ಶ್ರೀನಿವಾಸಯ್ಯಂಗಾರ್ಯರು, ಡಿ.ಎಸ್‌ಸಿ., (೨) ಜಿ. ಹನುಮಂತರಾಯರು, ಎಂ.ಎ., (೩) ಡಾ॥ ಎಂ. ಸಿದ್ದಲಿಂಗಯ್ಯನವರು, ಎಂ.ಎ., ಬಿ.ಟಿ., ಪಿಎಚ್.ಡಿ. (ಸಾಮಾನ್ಯ ವರ್ಗದಿಂದ ಬದಲಾವಣೆ), (೪) ಮಿರ್ಜಾ ಎಂ. ಅಜೀಜುಲ್ಲಾ ಬೇಗ್ ಅವರು, (೫) ಎ. ಸಿ. ನಿರ್ವಾಣೆಗೌಡರು, ಬಿ.ಎ., (೬) ಸಾಲಿ ರಾಮಚಂದ್ರರಾಯರು.

**ಸಾಮಾನ್ಯ ಸದಸ್ಯರು (ಪತ್ರಿಕೆ ಸಹಿತ).**—ಮ॥ ರಾ॥ (೧) ಕೆ. ವಿ. ಸುಬ್ಬರಾಯರು, (೨) ಶ್ರೀಮತಿ ಪಿ. ಸ್ಟಿಫನ್, ಬಿ.ಎಸ್‌ಸಿ.

**ಸಾಮಾನ್ಯ ಸದಸ್ಯರು (ಪತ್ರಿಕೆ ರಹಿತ).**—ಮ॥ ರಾ॥ ಗಳಾದ (೧) ಬಿ. ಎಸ್. ಮಾಧವರಾಯರು, ಎಂ.ಎಸ್‌ಸಿ., (೨) ಬಿ. ನಾರಾಯಣರಾಯರು, (೩) ಬಿ. ಎಂ. ಚಿಕ್ಕ ಎಲ್ಲಪ್ಪನವರು, (೪) ಬಿ. ಅಶ್ವತ್ಥನಾರಾಯಣರಾಯರು, (೫) ಎಂ. ಎಸ್. ರಾಜಗೋಪಾಲ್ ಅವರು, (೬) ಎಚ್. ಶ್ರೀಕಂಠಯ್ಯ, ಬಿ.ಎ. ಅವರು, (೭) ಎಂ. ಆರ್. ನರಸಿಂಹ ಅಯ್ಯಂಗಾರ್ಯರು, ಎಂ.ಎಸ್‌ಸಿ., (೮) ಎನ್. ಶಿವರಾಮಶಾಸ್ತ್ರಿಗಳು, ಎಂ.ಎ., (೯) ಬಿ. ವೆಂಕಟೇಶಶಾಸ್ತ್ರಿಗಳು, ಬಿ.ಎ., ಬಿ.ಟಿ., (೧೦) ಕೆ. ವಿ. ದೊರೆಸ್ವಾಮಿಯವರು, ಎಂ.ಎ., ಬಿ.ಟಿ., (೧೧) ಟಿ. ಎಂ. ಸಿದ್ದನಂಜಪ್ಪನವರು, (೧೨) ಪ್ರೊ॥ ಕೆ. ವಿ. ಅಯ್ಯರ್ ಅವರು, (೧೩) ಹೊಸಕೋಟೆ ವೆಂಕಟಸುಬ್ಬಯ್ಯನವರು, (೧೪) ಬಿ. ಭೀಮರಾಯರು, (೧೫) ಪಂಡಿತ ಎಂ. ಪಿ. ಪೂಜಾರರು, (೧೬) ಜಿ. ಹನುಮಯ್ಯನವರು, (೧೭) ಬಿ. ಎಸ್. ನಾರಾಯಣರಾಯರು, (೧೮) ಎಚ್. ಸುಬ್ಬಾಜೋಯಿಸ್ ಅವರು, ಎಂ.ಎಸ್‌ಸಿ.

---

# ಅಂಗ ಸಂಸ್ಥೆಗಳ ವರದಿ

---

## ಕರ್ಣಾಟಕ ಸಂಘ, ಶಿರಾಳಕೊಪ್ಪ

೨೨-೭-೧೯೩೭: (೧) ಕಾವ್ಯಪಠನ: ಶ್ರೀ॥ ಗಳಾದ ಮುಳಗುಂದ ಹಾಲಪ್ಪ ಮತ್ತು ಕೆ. ವಿಠ್ಠಲರಾವ್ ಅವರುಗಳಿಂದ.

(೨) ಉಪನ್ಯಾಸ: "ಯಕ್ಷಗಾನ, ಬಯಲಾಟ".—ಶ್ರೀ॥ ಗುರುನಾಥ ಕೃಷ್ಣ ನಾಡಿಗೇರ್ ಅವರಿಂದ; ಅಧ್ಯಕ್ಷರು: ಶ್ರೀ॥ ಚನ್ನಮಲ್ಲಿಕಾರ್ಜುನ ಅವರು.

೩೦-೮-೧೯೩೭: (೧) ದೇವತಾ ಪ್ರಾರ್ಥನೆ.—ಶ್ರೀ॥ ಗಳಾದ ಚೌಥಾಯಿ ಹುಚ್ಚುರಾವ್ ಮತ್ತು ಕೆ. ವಿಠಲರಾವ್ ಅವರುಗಳಿಂದ.

(೨) ಕಾವ್ಯಪಠನ.—ಶ್ರೀ॥ ಬಿ. ಎಂ. ಮಹಾದೇವಯ್ಯನವರಿಂದ.

(೩) ಸಂಗೀತ.—ಆಸ್ಥಾನ ವಿದ್ವಾನ್ ಶ್ರೀ॥ ಚಿಕ್ಕರಾಮರಾಯರವರಿಂದ.

(೪) ಉಪನ್ಯಾಸ: "ಕನಕ ದಾಸರೂ ಅವರ ಕೃತಿಗಳೂ".—ಶ್ರೀ॥ ಮೂಗೂರು ಹನುಮಂತಾಚಾರ್ಯರುಗಳಿಂದ.

೧೮-೯-೧೯೩೭: (೧) ಕಾವ್ಯಪಠನ.—ಶ್ರೀ॥ ಗಳಾದ ಸದಾಶಿವಯ್ಯನವರು ಮೃತ್ಯುಂಜಯಪ್ಪನವರು.

(೨) ಉಪನ್ಯಾಸ: "ಕನ್ನಡ ವಚನ ಸಾಹಿತ್ಯ".—ಶಿವಯೋಗ ಶ್ರೀ ಶಿವಯೋಗಾರ್ಯರವರಿಂದ.

ಮೇಲೆ ಕಂಡ ಕಾರ್ಯಗಳಲ್ಲದೆ ಸಂಘವು ನೆರೆಯ ಗ್ರಾಮಾಂತರಗಳ ವಿದ್ಯೆ ಮತ್ತು ಭಾಷೆಯ ಪ್ರಚಾರ ಮಾಡುತ್ತಿದೆ. ತಾ॥ ೨೫-೧೦-೧೯೩೭ ಕೊಪ್ಪಕ್ಕೆ ೩ ಮೈಲಿಗಳ ದೂರದಲ್ಲಿರುವ ಉಡುಗಣಿ ಹೋಬಳಿಯ ಮಂಚಿಕೊಪ್ಪ ಉಪನ್ಯಾಸಾದಿ ಕಾರ್ಯಗಳಿಂದ ಕೂಡಿದ ಮನೋರಂಜಕವೂ ಬೋಧಪ್ರದವೂ ಯನ್ನು ನಡಸಿತು. ಅಲ್ಲಿ ನಡೆದ ಉಪನ್ಯಾಸಗಳ ವಿವರ ಈ ರೀತಿ ಇದೆ: ವಿದ್ಯಾ ಶ್ರೀ॥ ಮಲ್ಲಪ್ಪನವರಿಂದ; ಕನ್ನಡ ನಾಡೂ ಪರಭಾಷೆಗಳೂ.—ಶ್ರೀ॥ ಕೊಟ್ಟೂ ಬಿ.ಎ. ಅವರಿಂದ; ಆರೋಗ್ಯ.—ಡಾ॥ ಟಿ. ಸಿ. ಕಣ್ಣನ್ ಅವರಿಂದ; ಹಳ್ಳಿ ಗಳು ಮತ್ತು ಅವುಗಳ ಪರಿಹಾರ.—ಶ್ರೀ॥ ಎಂ. ಓಂಕಾರಯ್ಯನವರಿಂದ; ಗ್ರಾ ಭಾಷಾ ಸೇವೆ ಮಾಡುವ ಬಗೆ.—ಶ್ರೀ॥ ಶ್ರೀಪರಿಯವರಿಂದ.

ನಾಡಿಗ ರಾಮ
ಗೌ॥ ಕಾರ್ಯ

---

## ಕೊಡಗು ಕರ್ಣಾಟಕ ಸಂಘ, ಮಡಿಕೇರಿ

ತಾ॥ ೨೪-೮-೩೭ರಿಂದ ಸಂಘವು ಪರಿಷತ್ತಿಗೆ ಅಂಗ ಸಂಸ್ಥೆಯಾಗಿ ಈ ತಾರೀಖಿನಿಂದ ಸೆಪ್ಟಂಬರ್ ತಿಂಗಳ ಅಂತ್ಯದವರೆಗೆ ಒಂದು ವಾದ ವಿವಾದ ಮಾತ್ರ ಜರುಗಿತು.

೪-೯-೧೯೩೭: ವಾದ ವಿವಾದ ಕೂಟದ ವಿಷಯು:—"ಕಾವ್ಯವು ಆನಂ ಕೊಡುವ ಕಲೆಯೇ ಹೊರತು ನೀತಿ ಮತ್ತು ಮತಗಳ ಪ್ರಚಾರಮಾಡುವುದಕ್ಕೆ ಅಧ್ಯಕ್ಷರು:—ಶ್ರೀಮಾನ್ ಕೆ. ಪಿ. ತುಟ್ಟಪ್ಪ, ಬಿ.ಎ. ಅವರು; ವಾದಿಗಳು:—ಶ್ರೀ ಕೆ. ವಿ. ತಮ್ಮಯ್ಯ, ಬಿ.ಎ., ಬಿ.ಎಲ್. ಅವರು ಮತ್ತು ಶ್ರೀಮಾನ್ ಕೇಶವಾಚಾರ್ಯ, ಬಿ.ಎಸ್‌ಸಿ., ಬಿ.ಟಿ. ಅವರು; ಪ್ರತಿವಾದಿಗಳು:—ಶ್ರೀ ಡಿ. ಎಂ. ಸಿದ್ಧಲಿಂಗಯ್ಯನವರು ಮತ್ತು ಶ್ರೀಮಾನ್ ಸಿ. ಎಂ. ಪೂಣಚ್ಚ

ಕಾವ್ಯವು ನೀತಿ ಮತ್ತು ಮತಗಳ ಪ್ರಚಾರಮಾಡುವುದಕ್ಕೆಂದು ತೀರ್ಮಾನ

ನಮ್ಮ ಸದಸ್ಯ ವರ್ಗದ ಶ್ರೀ ಪೊನ್ನ್ಯಾಲ ಪರಮೇಶ್ವರಯ್ಯನವರಿಗೆ ಅವರು ಕೆಲವು ಕವನಗಳನ್ನು ಅಚ್ಚುಹಾಕಿಸುವುದರ ಸಲುವಾಗಿ ಸಂಘದಿಂದ ಹದಿನೈದು ಗಳ ಸಹಾಯ ದ್ರವ್ಯವನ್ನು ಕೊಡಲಾಯಿತು.

ಎಂ. ಎಸ್. ಅನಂತಪದ್ಮನಾಭರಾ
ಗೌ॥ ಕಾರ್ಯದರ್ಶಿ

---

## ಕರ್ಣಾಟಕ ಸಂಘ, ರಾಜಾರಾಂ ಕಾಲೇಜು, ಕೊಲ್ಲಾಪುರ

ಮರಾಠಿಯು ಮಾತೃಭಾಷೆಯಾದ ಕೊಲ್ಲಾಪುರದಲ್ಲಿ ಕರ್ನಾಟಕ ಸಾಗಿಸಿಕೊಂಡು ಹೋಗುವುದಕ್ಕೆ ಎಷ್ಟೋ ಎಡರು ತೊಡರುಗಳು ಅಡ್ಡಗಟ್ಟಿ ಸಹ ನಮ್ಮ ಸಂಘವು ಅವೆಲ್ಲವುಗಳನ್ನೂ ಎದುರಿಸಿ, ತಾ॥ ೩-೯-೧೯೩೭ ಈ ವರ್ಷದ ಉದ್ಘಾಟನ ಸಮಾರಂಭವನ್ನು ಕನ್ನಡದಲ್ಲಿ ಪ್ರಸಿದ್ಧ ನಾಟಕ ಧಾರವಾಡದ ಕರ್ನಾಟಕ ಕಾಲೇಜು ಪ್ರೊ॥ ಆರ್. ವಿ. ಜಾಗೀರ್‌ದಾರರವರಿಂದ

ಕಾಲೇಜಿನ ಅರ್ಥ ಶಾಸ್ತ್ರದ ಪ್ರೊಫೆಸರರಾದ ಡಾಕ್ಟರ್ ಎ. ಜಿ. ಪವಾರ, ಎಂ.ಎ., ಪಿ.ಎಚ್‌ಡಿ. ಯವರ ಅಧ್ಯಕ್ಷತೆಯಲ್ಲಿ ನೆರವೇರಿಸಿತು. ಶ್ರೀ॥ ಜಾಗೀರದಾರರು 'ಕನ್ನಡ ಗ್ರಂಥಕಾರರ ಸಮಸ್ಯೆಗಳು' ಎಂಬ ವಿಷಯದಮೇಲೆ ಉಜ್ವಲವಾದ ಭಾಷಣವನ್ನು ಮಾಡಿದರು. ಮುಂದೆ ಅದೇ ನಾಲ್ಕನೆಯ ತಾರೀಖಿನ ದಿವಸ ಬಾಗಲವಾಡಿ ಎಂಬವರಿಂದ ಇಂದ್ರಜಾಲದ ಆಟಗಳನ್ನು ಏರ್ಪಡಿಸಿತ್ತು. ಪ್ರೊ॥ ಕೆ. ಜಿ. ಕುಂದಣಗಾರರು ಸಂಘದ ಪರವಾಗಿ ಅವರಿಗೆ ಒಂದು ಬೆಳ್ಳಿಯ ಪದಕವನ್ನು ಅರ್ಪಿಸಿ ಗೌರವಿಸಿದರು. ತಾ॥ ೪–೧೦–೧೯೩೭ರಲ್ಲಿ ಕುಸುನೂರ ನಾರಾಯಣಾಚಾರ್ಯರವರು 'ಕನ್ನಡ ಲಿಪಿ' ಎಂಬ ವಿಷಯದಮೇಲೆ ಅತ್ಯಂತ ವಿದ್ವತ್ಪರಿಪೂರ್ಣವಾದ ಭಾಷಣವನ್ನು ಮಾಡಿದರು. ಆಗ್ಗೆ ಪ್ರೊಫೆಸರ್ ಶ್ರೀಮಾನ್ ಕೆ. ಜಿ. ಕುಂದಣಗಾರರು ಅಧ್ಯಕ್ಷ ಸ್ಥಾನದಲ್ಲಿದ್ದರು.

ಎಂ. ವಿ. ಗೌಡರ್,
ಎಂ. ಎಸ್. ಪಾಟೀಲ್,
ಕಾರ್ಯದರ್ಶಿಗಳು.

---

## ಕರ್ಣಾಟಕ ಸಾಹಿತ್ಯ ಸಂಘ, ಕುಂದಾಪುರ

ಜನವರಿಯಿಂದ ಸೆಪ್ಟೆಂಬರ ಅಂತ್ಯದವರೆಗೆ ೭ ವಿಶೇಷ ಸಭೆಗಳು ಜರುಗಿದುವು. ಈ ಸಭೆಗಳಲ್ಲಿ ಅನೇಕ ವಿದ್ವಾಂಸರು ಭಾಷಣಗಳನ್ನು ಮಾಡಿದರು. ಅಲ್ಲದೆ ೩ ಹರಿಕಥೆಗಳೂ, ೮ ಕಾರ್ಯನಿರ್ವಾಹಕ ಸಭೆಗಳೂ ಜರುಗಿದುವು. ಅನೇಕ ಮಹತ್ವದ ವಿಷಯಗಳು ಚರ್ಚಿಸಲ್ಪಟ್ಟುವು. ತಾ॥ ೧೦–೫–೧೯೩೭ರಲ್ಲಿ ಸಾರ್ವಜನಿಕ ಧರ್ಮಾರ್ಥ ವಾಚನಾಲಯವು ತೆರೆಯಲ್ಪಟ್ಟು ನಡೆಯುತ್ತಲಿದೆ. ತಾ॥ ೧೪–೯–೧೯೩೭ರಲ್ಲಿ ಜಿಲ್ಲಾ ಯಕ್ಷಗಾನ ಪರಿಷತ್ತು ಇಲ್ಲಿಯೇ ಪ್ರಸಿದ್ಧ ವಕೀಲರಾದ ಮ॥ ರಾ॥ ಕೆ. ನರಸಿಂಹ ಕಾಮತರ ಅಧ್ಯಕ್ಷತೆಯಲ್ಲಿ ಜರುಗಿತು. ಯಕ್ಷಗಾನ ಕಲೆಯ ವಿಷಯದಲ್ಲಿ ಪ್ರಬಂಧ ಸ್ಪರ್ಧೆಯೊಂದು ಏರ್ಪಟ್ಟು ಅತ್ಯುತ್ತಮವೆಂದು ನಿಷ್ಕರ್ಷಿತವಾದ ಎರಡು ಪ್ರಬಂಧಗಳಿಗೆ ಬಹುಮಾನಗಳು ಹಂಚಲ್ಪಟ್ಟುವು.

ತಾ॥ ೧೦–೧೦–೧೯೩೭ರಲ್ಲಿ, ಕನ್ನಡ ಹಬ್ಬವೂ ಕರ್ಣಾಟಕ ಏಕೀಕರಣ ದಿನವೂ ಬಹು ಸಂಭ್ರಮದಿಂದ ಜರುಗಿದುವು.

ಪಿ. ಕೆ. ಆಚಾರ್ಯ,
ಗೌ॥ ಕಾರ್ಯದರ್ಶಿ.

---

## ಕರ್ಣಾಟಕ ಸಂಘ, ಚೆನ್ನರಾಯಪಟ್ಟಣ

೧೭–೪–೧೯೩೭ ಮತ್ತು ೧೮–೪–೧೯೩೭: ತೃತೀಯ ವಾರ್ಷಿಕೋತ್ಸವ—ಕಾವ್ಯ ವಾಚನ.—ವಿದ್ವಾನ್ ರಾ. ಅನಂತಕೃಷ್ಣ ಶರ್ಮರವರಿಂದ.

ಉಪನ್ಯಾಸ: "ವಿಶಾಲ ಭಾರತ".—ಶ್ರೀ॥ ಎನ್. ಕಸ್ತೂರಿ, ಎಂ.ಎ., ಬಿ.ಎಲ್. ಅವರಿಂದ.

೮–೫–೧೯೩೭: ಉಪನ್ಯಾಸ—"ಹೊಸ ಕಾವ್ಯದ ಲಕ್ಷಣ".—ಶ್ರೀ॥ ರಂ. ಶ್ರೀ. ಮುಗಳಿ, ಎಂ.ಎ., ಬಿ.ಟಿ. ಅವರಿಂದ; ಕಾವ್ಯ ವಾಚನ—"ರತ್ನನ ಪದಗಳು"—ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರಿಂದ.

೧೧–೭–೧೯೩೭: ಉಪನ್ಯಾಸ—"ಕನ್ನಡ ಚಳುವಳಿಯ ಮುಖ್ಯ ತತ್ತ್ವ".—ಶ್ರೀಮಾನ್ ಸಿ. ಆರ್. ಶ್ರೀನಿವಾಸಯ್ಯಂಗಾರ್ಯರಿಂದ; ಸಾರ್ವಜನಿಕ ಸಭೆ, ಶ್ರೀಮಾನ್ ಸಿ. ವೆಂಕಟರಾಮಯ್ಯನವರ ಅಧ್ಯಕ್ಷತೆಯಲ್ಲಿ—ಎರಡನೆಯ ಸಂಘ ಸಮ್ಮೇಳನದ ಕೆಲವು ನಿರ್ಣಯಗಳನ್ನು ಅಂಗೀಕರಿಸಲಾಯಿತು.

೨೭-೭-೧೯೩೭ : ಹರಿಕಥೆ—"ಪಾರ್ಥಸಾರಥಿ".—'ಕುಮಾರವ್ಯಾಸ ಭಾರ' ಶ್ರೀ॥ ಎಸ್. ವೆಂಕಟರಾಮಯ್ಯ, ಬಿ.ಎ. ಅವರಿಂದ.

೧-೮-೧೯೩೭ : ಕೊಳಲು ಮತ್ತು ದೇವರನಾಮ.—ಶ್ರೀಮಾನ್ ಕೈಲಾಸಂ ಅವರಿಂದ.

೧೧-೮-೧೯೩೭ : ಹರಿಕಥೆ.—"ಉತ್ತರ ಗೋಗ್ರಹಣ".—ವಿದ್ವಾನ್ ರಾ ಶಾಸ್ತ್ರಿಗಳಿಂದ.

೧೯-೮-೧೯೩೭ : ಉಪನ್ಯಾಸ—"ಜೈಮಿನಿ ಭಾರತದ ಒಂದು ದೃಶ್ಯ".—ಶ್ರೀ ಚಕ್ರವರ್ತಿ ರಾಮಾನುಜಯ್ಯಂಗಾರ್, ಎಂ.ಎ., ಎಲ್.ಟಿ. ಅವರಿಂದ.

೨೪-೮-೧೯೩೭ : ಸತ್ಕಾರ ಕೂಟ.—ಕಾರ್ಯ ಮಂಡಲಿಯ ಸದಸ್ಯರಾದ ಶ್ರೀ ಎಂ. ಎಸ್. ರಾಮರಾಯರಿಗೆ.

೨೯-೮-೧೯೩೭ : ಸಂಗೀತ ಮತ್ತು ನರ್ತನ.—ಪುದುಕೋಟೆ ಶ್ರೀಮಾನ್ ನಾ ಭಾಗವತರಿಂದ.

೮-೯-೧೯೩೭ : ಉಪನ್ಯಾಸ—"ಸ್ಯಮಂತಕೋಪಾಖ್ಯಾನ".—ಸಾಹಿತ್ಯ ಎಸ್. ಕೃಷ್ಣಮೂರ್ತಿ ಶಾಸ್ತ್ರಿಗಳಿಂದ.

ಉಪನ್ಯಾಸ: "ಸಾಹಿತ್ಯ ಮತ್ತು ಲಕ್ಷಣ ಗ್ರಂಥಗಳು".—ಪಂಡಿ ಸಿ. ಕೃಷ್ಣ ಅವರಿಂದ.

೧೯-೯-೧೯೩೭ : ನಾಟಕಾಭಿನಯ—"ನಾರದಲೀಲೆ".—ಸಂಘದ ಸದಸ್ಯ

ಇದಲ್ಲದೆ, ಈ ತಾಲ್ಲೂಕಿನ ಗ್ರಾಮಗಳಲ್ಲಿ ಕನ್ನಡ ಪ್ರಚಾರ ನಡಸಲು ಮತ್ತು ಉಪನ್ಯಾಸಾದಿಗಳಲ್ಲಿ ಹೆಚ್ಚು ಅವಕಾಶವನ್ನು ಕಲ್ಪಿಸಿಕೊಡಲು ಏರ್ಪಾಡು ಪುರಪ್ರಮುಖರು ಈಗ ಹೆಚ್ಚು ಸಂಖ್ಯೆಯಲ್ಲಿ ಸದಸ್ಯರಾಗುತ್ತಿದ್ದಾರೆ. ಸಂಘವು ಒಂದು ಪುಸ್ತಕವನ್ನು ಪ್ರಕಟಿಸಲು ಆಲೋಚಿಸಿದೆ.

ಎಂ. ಎಸ್. ಹನುಮಂತನ್, ಬಿ.ಎ.,
ತಾ॥ ೨೦-೧೧-೧೯೩೭    ಎ. ಎನ್. ಲಕ್ಷ್ಮೀನಾರಾಯಣರಾವ್,
ಗೌ॥ ಕಾರ್ಯದರ್ಶಿಗಳು.

---

## ಕರ್ಣಾಟಕ ಸಂಘ, ವಿಲಿಂಗ್‌ಡನ್ ಕಾಲೇಜು, ಸಾಂಗ್ಲಿ

ಜುಲೈ ತಿಂಗಳಲ್ಲಿ ಈ ವರುಷದ ಸಂಘದ ಕಾರ್ಯಕಾರೀ ಮಂಡಲವು ಸ್ಥಾ ಟ್ಟಿತು. ಆಗಸ್ಟ್ ತಿಂಗಳಿನಲ್ಲಿ ಸಂಘದ ಉದ್ಘಾಟನ ಸಮಾರಂಭಕ್ಕೆ ಶ್ರೀಮಾನ್ ಕೆ. ಮಹಿಷಿ, ಬಿ.ಎ. (ಆನರ್ಸ್) ಇವರನ್ನು ಬರಮಾಡಿಕೊಂಡಿತ್ತು. ಇವರು " ಕನ್ನಡ ಸಾಹಿತ್ಯವು ಇಂಗ್ಲಿಷ್ ಸಾಹಿತ್ಯದಿಂದ ಏನು ಕಲಿಯತಕ್ಕದ್ದು" ಮೇಲೆ ಉಪನ್ಯಾಸಕೊಟ್ಟರು. ಅಭ್ಯಾಸ ಮಂಡಲದವರು ಹೋದ ಟರ್ಮಿನಲ್ಲಿ " ಭೇದವು ಇರಬೇಕೋ ಹೇಗೆ?", "ದೇವನಲ್ಲಿ ನಂಬಿಕೆಯು ಆವಶ್ಯಕತೆ" ಮುಂತಾಗಿ ನಾಲ್ಕು ಬೇರೆ ಬೇರೆ ವಿಷಯಗಳನ್ನು ಕುರಿತು ಚರ್ಚೆ ನಡಸಿದರು. ಈ "ಎಳದೋಟ"ವೆಂಬ ಕೈ ಬರಹದ ಪತ್ರಿಕೆ ಇನ್ನು ಕೆಲವು ದಿನಗಳ ಹೊರಡಲಿರುವದು.

ಜಿ. ಜಿ. ಕುಲಕರ್ಣಿ,
ಗೌ॥ ಕಾರ್ಯದ

## ಕರ್ಣಾಟಕ ಸಂಘ, ಶಿವಮೊಗ್ಗ

೫-೧-೧೯೩೭: ಉಪನ್ಯಾಸ—"ಲಕ್ಷ್ಮೀಶನ ಜೈಮಿನಿ ಭಾರತ".—ಶ್ರೀಮಾನ್ ಎಸ್. ನರಸಿಂಹಮೂರ್ತಿ, ಬಿ.ಎ. ಅವರಿಂದ.

೨-೨-೧೯೩೭: ಭಾರತ ವಾಚನ.—ಶ್ರೀ॥ ಎಸ್. ಜಿ. ಬಿಂದೂರಾಯರಿಂದ. ೫-೨-೧೯೩೭: ಕಾವ್ಯ ವಾಚನ—"ಮಾಯಾದೇವಿಯ ಬಾಲ್ಯ ಮತ್ತು ಮಾಯೆಯ ತಿರಸ್ಕಾರ" ('ಪ್ರಭುಲಿಂಗ ಲೀಲೆ'ಯಿಂದ).—ಶ್ರೀ॥ ಎಸ್. ಜಿ. ಬಿಂದೂರಾಯರಿಂದ. ೬-೨-೧೯೩೭: ಸಂಘದ ೬ನೆಯ ವಾರ್ಷಿಕೋತ್ಸವ.—ಅಧ್ಯಕ್ಷರು: ಶ್ರೀ॥ ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಅವರು. ೭-೨-೧೯೩೭: ಜಿಲ್ಲಾ ಸಂಘ ಸಮ್ಮೇಳನ.—ಅಧ್ಯಕ್ಷರು: ಶ್ರೀ॥ ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಅವರು; ಜಿಲ್ಲಾಧಿಕಾರಿಗಳಾದ ಶ್ರೀ॥ ಎಸ್. ನಾರಾಯಣರಾವ್, ಎಂ.ಎ. (ಆನರ್ಸ್) ಅವರು ಪ್ರಾರಂಭ ಭಾಷಣ ಮಾಡಿದರು. ೭-೨-೧೯೩೭: ಉಪನ್ಯಾಸ—"ಪಂಪ ಕುಮಾರವ್ಯಾಸರ ಭಾರತಗಳು".—ಶ್ರೀ॥ ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಅವರಿಂದ. ಸಂಗೀತ.—ಶ್ರೀ॥ ಡಿ. ಎಂ. ಸುಬ್ಬರಾಮಯ್ಯ, ಬಿ.ಎ., ಬಿ.ಟಿ. ಅವರಿಂದ.

೨೨-೩-೧೯೩೭: ಭಾರತ ವಾಚನ—"ದ್ರೌಪದಿ ವಸ್ತ್ರಾಪಹರಣ".—ಶ್ರೀ॥ ಎಸ್. ಜಿ. ಬಿಂದೂರಾಯರಿಂದ.

೧೮-೪-೧೯೩೭: ಉಪನ್ಯಾಸ—"ಬೌದ್ಧ ಧರ್ಮ".—ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರಿಂದ. ೧೯-೪-೧೯೩೭: ಕಾವ್ಯ ವಾಚನ—ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರಿಂದ.

೨-೫-೧೯೩೭: ಭಾರತ ವಾಚನ—ಶ್ರೀ॥ ಕೃಷ್ಣಗಿರಿ ಕೃಷ್ಣರಾಯರಿಂದ. ೧೧-೫-೧೯೩೭: ಉಪನ್ಯಾಸ ಮತ್ತು ಕಾವ್ಯ ವಾಚನ—"ಸಾಹಿತ್ಯದಲ್ಲಿ ಸವಿ".—ಶ್ರೀ॥ ರಂಗನಾಥ ಎಸ್. ಮುಗಳಿ, ಎಂ.ಎ., ಬಿ.ಟಿ. ಅವರಿಂದ. ೧೨-೫-೧೯೩೭: ಉಪನ್ಯಾಸ—"ಉಪನಿಷತ್ತುಗಳು".—ಶ್ರೀ॥ ವೈ. ಸುಬ್ಬರಾಯರಿಂದ. ೧೩-೫-೧೯೩೭: "ವೇದಾಂತವೂ ಈಗಿನ ಕೆಲವು ಸಮಸ್ಯೆಗಳೂ".—ಶ್ರೀ॥ ವೈ. ಸುಬ್ಬರಾಯರಿಂದ. ೧೪-೫-೧೯೩೭: "ಕನ್ನಡ ಪದ್ಯರಚನೆಯಲ್ಲಿ ನನ್ನ ಅನುಭವಗಳು".—ಶ್ರೀ॥ ಪಂಜೆ ಮಂಗೇಶರಾಯರು, ಬಿ.ಎ., ಎಲ್.ಟಿ. ಅವರಿಂದ.

೭-೬-೧೯೩೭: "ಕಾಳಿದಾಸ ಮತ್ತು ಹರೀಶ್ವರ".—ಕೀರ್ತನಕೇಸರಿ ಶ್ರೀ॥ ಬಿ. ಶಿವಮೂರ್ತಿಶಾಸ್ತ್ರಿಗಳು; ಅಧ್ಯಕ್ಷರು: ಶ್ರೀ॥ ಎಸ್. ನಾರಾಯಣರಾಯರು, ಎಂ.ಎ. (ಆನರ್ಸ್), ಜಿಲ್ಲಾಧಿಕಾರಿಗಳು. ೧೦-೬-೧೯೩೭: ಸಂಗೀತ ಕಛೇರಿ.—ಸಂಗೀತಭೂಷಣ ಶ್ರೀ॥ ಎಂ. ಎಸ್. ಶೆಲ್ವಪುಳ್ಳೆ ಅಯ್ಯಂಗಾರ್ಯರಿಂದ. ೧೭-೬-೧೯೩೭: ಕಥೆಗಳ ಓದುಗಾರಿಕೆ.—ಶ್ರೀ॥ ಎ. ಸೀತಾರಾಮ್, ಬಿ.ಎಸ್ಸಿ. ಅವರಿಂದ. ೨೫-೬-೧೯೩೭: ಉಪನ್ಯಾಸ—"ವೇದಗಳು".—ವೇದತೀರ್ಥ ಪಂ॥ ಚಿದರೆ ಮಠದ ವೀರಭದ್ರಶಾಸ್ತ್ರಿಗಳಿಂದ.

೩-೭-೧೯೩೭: ಸಾರ್ವಜನಿಕ ಸಭೆ.—ಹೈಸ್ಕೂಲುಗಳ ಶಿಕ್ಷಣ ಕ್ರಮದಲ್ಲಿ ಕನ್ನಡ ಭಾಷೆಗೆ ಪ್ರಾಶಸ್ತ್ಯಕೊಟ್ಟುದಕ್ಕಾಗಿ ಮೈಸೂರು ಸರ್ಕಾರದವರನ್ನು ಅಭಿನಂದಿಸುವುದಕ್ಕೂ, ವಿಶ್ವವಿದ್ಯಾನಿಲಯದಲ್ಲಿಯೂ, ಸ್ಥಳೀಯ ಸಂಸ್ಥೆಗಳಲ್ಲಿಯೂ, ನ್ಯಾಯಸ್ಥಾನಗಳಲ್ಲಿಯೂ ಕನ್ನಡಕ್ಕೆ ಪ್ರಮುಖಸ್ಥಾನ ಕೊಡಲು ಒತ್ತಾಯಪಡಿಸುವುದಕ್ಕೂ ಸೇರಿಸಿದ ಸಭೆ. ಅಧ್ಯಕ್ಷರು: ಜಿಲ್ಲಾ ಸ್ಕೂಲ್ ಬೋರ್ಡ್ ಅಧ್ಯಕ್ಷರಾದ ಶ್ರೀ॥ ಎಚ್. ಲಿಂಗಪ್ಪ, ಬಿ.ಎ., ಎಲ್ಎಲ್.ಬಿ. ಅವರು. ೧೫-೭-೧೯೩೭: ಉಪನ್ಯಾಸ—"ಕನ್ನಡ ನಾಟಕಗಳು".—ಶ್ರೀ॥ ದೇವುಡು ನರಸಿಂಹಶಾಸ್ತ್ರಿಗಳು, ಎಂ.ಎ. ಅವರಿಂದ. ಅಧ್ಯಕ್ಷರು: ಶ್ರೀ॥ ಎ. ವಾಸುದೇವ ರಾಯರು, ಬಿ.ಎ., ಜಿಲ್ಲಾ ವಿದ್ಯಾಧಿಕಾರಿಗಳು. ೨೫-೭-೧೯೩೭: ಉಪನ್ಯಾಸ—"ಸರ್ವಜ್ಞನ ವಚನಗಳು".—ಬೆಂಗಳೂರು ಶ್ರೀ ಸರ್ಪಭೂಷಣಸ್ವಾಮಿ ಮಠದ ಶ್ರೀ ನಿರಂಜನ ಶ್ರೀ ಮಹದೇವಸ್ವಾಮಿಗಳಿಂದ.

೪-೯-೧೯೩೭: ಉಪನ್ಯಾಸ—"ಕವಿ ಷಡಕ್ಷರದೇವ ಮತ್ತು … ವಿಲಾಸ".—ಶ್ರೀ॥ ಎಚ್. ಶ್ರೀನಿವಾಸರಾವ್, ಬಿ.ಎ., ಬಿ.ಎಲ್. ಅವರಿಂದ; … ಆಸ್ಥಾನ ಮಹಾವಿದ್ವಾನ್ ವೇ॥ ಬ್ರ॥ ಶ್ರೀ॥ ಪಂ॥ ಕುಕ್ಕೆ ಸುಬ್ರಹ್ಮಣ್ಯ … ೮-೯-೧೯೩೭: ಉಪನ್ಯಾಸ—"ಕನ್ನಡ ಲಿಪಿ".—ವೇದತೀರ್ಥ ಪಂ॥ … ವೀರಭದ್ರಶಾಸ್ತ್ರಿಗಳಿಂದ. ೨೦-೯-೧೯೩೭: ಉಪನ್ಯಾಸ—"ಯೂರೋಪು ಸಂಚಾ… ರಾಜಧರ್ಮಪ್ರವೀಣ ದಿವಾನ್ ಬಹದ್ದೂರ್ ಶ್ರೀ॥ ಪಿ. ಮಹದೇವಯ್ಯ, ಬಿ.ಎ., … ಅವರಿಂದ.

೬-೧೦-೧೯೩೭: ಸನ್ಮಾನ ಸಭೆ.—ಬೆಂಗಳೂರಿಗೆ ವರ್ಗವಾದ ಸಂಘದ ಗೌ… ಶ್ರೀ॥ ಎಸ್. ನಾರಾಯಣರಾವ್, ಎಂ.ಎ. (ಆನರ್ಸ್) ಅವರ ಗೌರವಾರ್ಥ. ೧೦-… ಮತ್ತು ೧೧-೧೦-೧೯೩೭: ಕನ್ನಡ ನಾಡ ಹಬ್ಬ.—ಅಧ್ಯಕ್ಷರು: ಜಿಲ್ಲಾ ವಿದ್ಯಾ… ಶ್ರೀ॥ ಎ. ವಾಸುದೇವರಾಯರು, ಬಿ.ಎ.; ಕಾರ್ಯವಿವರಗಳು: (೧) … "ನಾಡಹಬ್ಬದ ಆವಶ್ಯಕತೆ"—ಶ್ರೀ॥ ಎಸ್. ಎಸ್. ಮಾಳವಾಡ, ಎಂ.ಎ. … (೨) ಭಾರತ ವಾಚನ—ಶ್ರೀ॥ ಎಚ್. ಆರ್. ಮಾಧವರಾಯರಿಂದ; (೩) … ಕಲಾ ಪ್ರದರ್ಶನಗಳ ಪ್ರಾರಂಭೋತ್ಸವ; (೪) ಕಾವ್ಯ ವಾಚನ—"ಚಿತ್ರಾ… ಶ್ರೀ॥ ಟಿ. ಪ್ರಾಣೇಶಾಚಾರ್ಯ, ಬಿ.ಎ., ಬಿ.ಟಿ. ಅವರಿಂದ; (೫) ಸಂಗೀತ, … ಬಾಲಕಿಯರಿಂದ; (೬) ಉಪನ್ಯಾಸ—"ಆಧುನಿಕ ರಂಗಭೂಮಿ"—ಶ್ರೀ॥ … ಜಹಗೀರದಾರ್, ಎಂ.ಎ. (ಲಂಡನ್) ಅವರಿಂದ; (೭) "ರನ್ನಕವಿ"—ಶ್ರೀ॥ ಎಸ್. … ಮಾಳವಾಡ, ಎಂ.ಎ. ಅವರಿಂದ; (೮) ದಾಸರ ಮತ್ತು ಶಿವಶರಣರ … ಹಾಡಿಕೆ—ಶ್ರೀ॥ ವಿದ್ವಾನ್ ಶೇಷಪ್ಪನವರು, ಶ್ರೀ॥ ಮುನಿಯಾಜಿರಾವ್ ಮತ್ತು … ರಾಮುಭಟ್ಟರು ಇವರುಗಳಿಂದ. ೧೧-೧೦-೧೯೩೭: (೯) ಕಾವ್ಯ ವಾಚನ—… ಲೇಖಕರಾದ ಶ್ರೀ॥ ಗಳಾದ ಪಂಡಿತ ಭರಮೇಗೌಡರು, ಎನ್. ಎಸ್. … ಶ್ರೀನಿವಾಸಮೂರ್ತಿಗಳು, ಜಡೆ ನಾಗರಾಜರಾಯರು ಮತ್ತು 'ಸೋದರ ಸಂಘ'ದ … ಇವರುಗಳಿಂದ; (೧೦) ಲಾವಣಿಗಳು—(೧೧) ಉಪನ್ಯಾಸ—"ಕನ್ನಡ … ಬೆಳೆವಣಿಗೆ"—ಶ್ರೀ॥ ಎನ್. ನಾರಾಯಣಮೂರ್ತಿ, ಬಿ.ಎ. (ಆನರ್ಸ್) ಅವರಿಂದ; … ನಾಟಕಾಭಿನಯ (ರಾತ್ರಿ ೯ ಗಂಟೆಗೆ)—ಶ್ರೀ॥ ಶಿವರಾಮ ಕಾರಂತರ 'ನಾಟಕನಂ… ೧೬-೧೦-೧೯೩೭: ಕಾವ್ಯವಾಚನ ಮತ್ತು ಕನ್ನಡ ಗೀತಗಳ ಗಾನ.—ಶ್ರೀ॥ … ಸಂಪತ್ಕುಮಾರಾಚಾರ್ಯ, ಬಿ.ಎ., ಬಿ.ಟಿ. ಅವರಿಂದ. ೧೭-೧೦-೧೯೩೭: … ವಾಚನ.—ಶ್ರೀ॥ ಎಂ. ಹರಿನಾರಾಯಣ, ಬಿ.ಎ. ಅವರಿಂದ. ೨೪-೧೦-೧೯೩೭: … "ಭೂಕಂಪಗಳು".—ಶ್ರೀ॥ ಬಿ. ಎಂ. ಶಿವರಾಮಯ್ಯನವರಿಂದ. ೩೦-… ಸಂತಾಪ ಸೂಚಕ ಸಭೆ.—ಶ್ರೀಮಾನ್ ಪಂಜೆ ಮಂಗೇಶರಾಯರ ನಿಧನದ …

ಶ್ರೀ॥ ಎ. ಎನ್. ಮೂರ್ತಿರಾವ್, ಎಂ.ಎ. ಅವರ "ಹಗಲುಗನಸುಗಳು" ಗ್ರಂಥವನ್ನು ಸಂಘದಿಂದ ಪ್ರಕಟಿಸಲಾಗಿದೆ. ಶ್ರೀ॥ ವಿ. ಸೀತಾರಾಮಯ್ಯನವರ … ಬೆಳಕು" ಎಂಬ ಕವನ ಸಂಗ್ರಹವನ್ನು ಸಂಘದ ಪ್ರಕಟನೆಯನ್ನಾಗಿ ತೆಗೆದುಕೊ… ಶ್ರೀ॥ ಬೇಂದ್ರೆಯವರ "ನಾದಲೀಲೆ" ಎಂಬ ಕವನ ಸಂಗ್ರಹವು ಅಚ್ಚಿನಲ್ಲಿದೆ. … ಪ್ರಾರಂಭದಲ್ಲಿ ಸಂಘದ ಪುಸ್ತಕ ಭಂಡಾರದಲ್ಲಿ ೪೩೬ ಗ್ರಂಥಗಳಿದ್ದುವು. ಈಗ… ಸಂಖ್ಯೆ ೮೧೯ಕ್ಕೆ ಏರಿದೆ. ನಿವೃತ್ತ ಉಪಾಧ್ಯಾಯರಾದ ಶ್ರೀ॥ ಕೆ. ವಿ. ಸುಬ್ಬ… ಸಂಘದ ಪುಸ್ತಕ ಭಂಡಾರಕ್ಕೆ ೧೫೦ ರೂ. ಗಳ ಉದಾರ ಸಹಾಯಮಾಡಿರುತ್ತಾರೆ.

ಎಸ್. ವಿ. ಕೃಷ್ಣಮೂರ್ತಿ…
ಗೌ॥ ಕಾರ್ಯದರ್ಶಿ.

---

## ಕರ್ಣಾಟಕ ಸಂಘ, ರುದ್ರಪಟ್ಟಣ

೧೦–೧–೧೯೩೭: ಉಪನ್ಯಾಸ—"ವಿದ್ಯಾಭ್ಯಾಸ ಮತ್ತು ಚಮೂಶಿಕ್ಷಣ".—ಶ್ರೀ॥ ಎಚ್. ಗುರುರಾಜಾಚಾರ್ಯರಿಂದ; ಅಧ್ಯಕ್ಷರು: ಶ್ರೀ॥ ಪಿ. ವಿ. ಶ್ರೀಕಂಠಯ್ಯನವರು.

೨೦–೨–೧೯೩೭: ಉಪನ್ಯಾಸ—"ಗ್ರಾಮ ಕೈಗಾರಿಕೆಗಳಿಂದ ರೈತರ ದುಃಸ್ಥಿತಿ ಹೇಗೆ ಪರಿಹಾರವಾಗಬಹುದು".—ಶ್ರೀ॥ ಎಂ. ಆರ್. ಶಂಕರನಾರಾಯಣರಾಯರಿಂದ; ಅಧ್ಯಕ್ಷರು: ಶ್ರೀ॥ ಆರ್. ಟಿ. ರಾಮಸ್ವಾಮಯ್ಯನವರು.

೧೪–೩–೧೯೩೭: ಸಂಗೀತ.—ಸಂಗೀತಭೂಷಣಂ ಶ್ರೀ॥ ಆರ್. ವಿ. ಶ್ರೀಕಂಠಯ್ಯನವರಿಂದ.

೨೫–೪–೧೯೩೭: ಭಾರತ ವಾಚನ—"ದೂರ್ವಾಸಾತಿಥ್ಯ".—ರುದ್ರಪಟ್ಟಣಂ ಶ್ರೀ॥ ಗುಂಡೂರಾಮಯ್ಯನವರಿಂದ.

೨೯–೫–೧೯೩೭: ಉಪನ್ಯಾಸ—"ಆಹಾರ ದೋಷದಿಂದಾಗುವ ರೋಗಗಳು".—ಡಾ॥ ಎಂ. ವೆಂಕಟಾಚಾರ್ಯರಿಂದ.

### ವಿಶ್ವವಿದ್ಯಾನಿಲಯದ ಹದಿನಾಲ್ಕನೆಯ ಉಪನ್ಯಾಸಮಾಲೆ

೭–೬–೧೯೩೭: (೧) ಸ್ವಾಗತ ಭಾಷಣ.—ಶ್ರೀಮಾನ್ ಆರ್. ಟಿ. ರಾಮಸ್ವಾಮಯ್ಯನವರಿಂದ; (೨) ಉಪಕ್ರಮ ಭಾಷಣ.—ಶ್ರೀ॥ ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಅವರಿಂದ; (೩) ಕಾವ್ಯ ವಾಚನ.—ಶ್ರೀ॥ ಎನ್. ಶಿವರಾಮಶಾಸ್ತ್ರಿ, ಎಂ.ಎ. ಅವರಿಂದ; (೪) "ಭೌತಶಾಸ್ತ್ರ ಪ್ರಯೋಗಗಳು".—ಶ್ರೀ॥ ಎನ್. ಪರಮೇಶ್ವರನ್, ಎಂ.ಎ. ಮತ್ತು ಶ್ರೀ॥ ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ. ಅವರಿಂದ; (೫) ಉಪನ್ಯಾಸ—"ಪ್ರಾಥಮಿಕ ವಿದ್ಯಾಭ್ಯಾಸದ ಕೆಲವು ಸಮಸ್ಯೆಗಳು".—ಡಾ॥ ಎಂ. ಸಿದ್ಧಲಿಂಗಯ್ಯ, ಎಂ.ಎ., ಬಿ.ಟಿ., ಪಿಎಚ್.ಡಿ. ಅವರಿಂದ. ೮–೬–೧೯೩೭: ಉಪನ್ಯಾಸ—"ಅರ್ಥಶಾಸ್ತ್ರದ ವಿಚಾರ".—ಶ್ರೀ॥ ವಿ. ಸೀತಾರಾಮಯ್ಯ, ಎಂ.ಎ. ಅವರಿಂದ; ಕನ್ನಡ ನಾಟಕ ವಾಚನ.—ಶ್ರೀ॥ ಎ. ಎನ್. ಮೂರ್ತಿರಾವ್, ಎಂ.ಎ. ಅವರಿಂದ.

ಸಂಘದ ದ್ವಿತೀಯ ವಾರ್ಷಿಕೋತ್ಸವ.—ಅಧ್ಯಕ್ಷರು: ಶ್ರೀ॥ ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಅವರು.

೧೪–೭–೧೯೩೭: ಭಾರತ ವಾಚನ.—"ಇಂದ್ರಕೀಲ".—ಶ್ರೀ॥ ರು. ನಾ. ಸುಬ್ರಾಯರಿಂದ.

೧೪–೮–೧೯೩೭: ಉಪನ್ಯಾಸ—"ಭಾಷಾ ಶಾಸ್ತ್ರ".—ಶ್ರೀ॥ ಎಚ್. ಗುರುರಾಜಾಚಾರ್ಯರಿಂದ.

೧೫–೯–೧೯೩೭: ಸಂಗೀತ.—ಶ್ರೀ॥ ಶ್ರೀನಿವಾಸಮೂರ್ತಿಗಳಿಂದ.

೨೯–೧೧–೧೯೩೭

ಕೆ. ಆರ್. ವೆಂಕಟಾಚಾರ್ಯ,
ಗೌ॥ ಕಾರ್ಯದರ್ಶಿ.

---

## ಸಂಗೀತ ಪ್ರೇಮಿ ಮಂಡಲಿ, ಬೆಂಗಳೂರು

ಸಂಗೀತ ಕಲಾ ಸೇವಕರೂ, ಶ್ರೋತೃಗಳೂ ಕಲೆತು ಸಂಗೀತ ಕಲಾಭಿವೃದ್ಧಿಗಾಗಿ ಸಹಕರಿಸಿ ಕೆಲಸಮಾಡಲು ಬೆಂಗಳೂರು ನಗರದಲ್ಲಿ ಒಂದು ಸಂಸ್ಥೆಯು ಅವಶ್ಯಕವಾಗಿದ್ದುದರಿಂದ, ೧೯೩೬ನೆಯ ಫೆಬ್ರುವರಿ ತಿಂಗಳಲ್ಲಿ ಮೇಲ್ಕಂಡ ಮಂಡಲಿ ಸ್ಥಾಪಿತವಾಯಿತು. ೧೯–೩–೧೯೩೬ರಲ್ಲಿ ಮೈಸೂರು ಹೈಕೋರ್ಟಿನ ನ್ಯಾಯಾಧೀಶರಾದ ರಾಜಧರ್ಮಪ್ರಸಕ್ತ ಶ್ರೀ॥ ಕೆ. ಶಂಕರನಾರಾಯಣರಾವ್, ಎಂ.ಎ., ಬಿ.ಎಲ್. ಅವರ ಅಧ್ಯಕ್ಷತೆಯಲ್ಲಿ ಮಂಡಲಿಯ ಪ್ರಾರಂಭೋತ್ಸವ ನಡೆಯಿತು. ಈ ಮಂಡಲಿ ತಾ॥ ೨೨–೧೧–೧೯೩೬ರಲ್ಲಿ

ಕರ್ನಾಟಕ ಸಾಹಿತ್ಯ ಪರಿಷತ್ತಿನ ಅಂಗ ಸಂಸ್ಥೆಯಾಗಿ ಸೇರಿ, ಇಲ್ಲಿಯವರೆಗಿನ ಸಭೆ ಗಳನ್ನೆಲ್ಲಾ ಪರಿಷತ್ತಿನ ಸಭಾಮಂಟಪದಲ್ಲಿಯೇ ನಡಸಿದೆ. ೧೯೩೬ರಲ್ಲಿ ೭ ಸಂಗೀತ ಗಳೂ, ೩ ಹರಿಕಥೆಗಳೂ ನಡೆದಿವೆ. ೧೯೩೭ನೆಯ ಇಸವಿಯಲ್ಲಿ ಇದುವರೆಗಿ ಕಾರ್ಯವಿವರವನ್ನು ಮುಂದೆ ಕೊಟ್ಟಿದೆ:—

೩೧-೧-೧೯೩೬ರಿಂದ ೭-೨-೧೯೩೭ರವರೆಗೆ: ಶ್ರೀ ತ್ಯಾಗರಾಜರ ಆ (ಸಂಗೀತ, ಭಜನೆ, "ಆರ್ಕೆಸ್ಟ್ರ," ಇತ್ಯಾದಿ)

೧೧-೨-೧೯೩೭: ಪುರಂದರದಾಸರ ಪುಣ್ಯದಿನ—(೧) ದಾಸರ ದೇವ ಹಾಡಿಕೆ.—ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್, ಬಿ.ಎ., ಬಿ.ಟಿ. ಅವರ ಮಂಡಲಿಯ ಸದಸ್ಯರಿಂದ; (೨) ಉಪನ್ಯಾಸ—"ಪುರಂದರದಾಸರ ಜೀವನ" 'ಸುಬೋಧ' ಪತ್ರಿಕೆಯ ಸಂಪಾದಕರಾದ ಶ್ರೀ॥ ಎಂ. ರಾಮರಾಯರಿಂದ.

೧೯-೩-೧೯೩೭: ವೀಣೆ.—ಶ್ರೀ॥ ಎಂ. ಶಂಕರನಾರಾಯಣ ಶಾಸ್ತ್ರಿ

೪-೪-೧೯೩೭: ನಾಟಕಾಭಿನಯ—"ದಾಮಾಜಿ ಪಂತ್".—ಮಂ ಸದಸ್ಯರಿಂದ.

೧೫-೫-೧೯೩೭: ಸಂಗೀತ.—ಸಂ॥ ವಿದ್ವಾನ್ ಶ್ರೀ॥ ಬಿ. ಎಸ್. ರಾಮಮ

೧೭-೫-೧೯೩೭: ಪಿಟೀಲು ಕಛೇರಿ.—ಶ್ರೀ॥ ಶಂಕರಯ್ಯನವರು ಪಿಟೀಲು, ವಿ. ರಂಗನಾಥನ್‌ರವರು ಮೃದಂಗ.

೨೧-೬-೧೯೩೭: ಸಂಗೀತ.—ಶ್ರೀಮತಿ ಕುಮಾರಿ ಲಲಿತಮ್ಮನ ಹಾಡು ಗಾರಿಕೆ, ವಿದ್ವಾನ್ ಮುನಿಶಂಕರಪ್ಪನವರ ಪಿಟೀಲು, ಶ್ರೀ॥ ವಿ. ವಿ. ರಂಗನಾ ಮೃದಂಗ.

೧೫-೭-೧೯೩೭: ಸಂಗೀತ.—ಗಮಕ ವಿದ್ವಾನ್ ಶ್ಲೋಕಸಂಗೀತ ಶ್ರೀ ಸಂಪತ್ಕುಮಾರಾಚಾರ್, ಬಿ.ಎ., ಬಿ.ಟಿ. ಅವರ ಹಾಡುಗಾರಿಕೆ; ಶ್ರೀ ಚಂದ್ರನ್ ಅವರ ಪಿಟೀಲು; ಶ್ರೀ॥ ಟಿ. ಲಕ್ಷ್ಮಣಪ್ಪನವರ ಮೃದಂಗ.

೮-೮-೧೯೩೭: ಕೊಳಲು ಕಛೇರಿ.—ಶ್ರೀ॥ ಎಸ್. ಶ್ರೀನಿವಾಸ ಕೊಳಲು, ಶ್ರೀ॥ ಕೃಷ್ಣಪ್ಪನವರು—ಪಿಟೀಲು, ಶ್ರೀ॥ ವಿ. ವಿ. ರಂಗನಾಥ ಮೃದಂಗ. ೧೨—೮—೧೯೩೭: ಜಲತರಂಗ ವಾದ್ಯ ಕಛೇರಿ.— ದಕ್ಷಿಣಾದಿ ವಿದ್ವಾನ್ ಶ್ರೀ॥ ವಿ. ಎಸ್. ಗೋಪಾಲರಾಯರು—ಜಲತರಂಗ, ಶ್ರೀ॥ ವಿ. ನಾಥನ್ ಅವರು—ಮೃದಂಗ.

೨೭-೯-೧೯೩೭: ಸಂಗೀತ.—ಶ್ರೀ॥ ರಾಜಗೋಪಾಲಯ್ಯರ್ ಅವರ ಗಾರಿಕೆ, ಶ್ರೀ॥ ಶಂಕರಯ್ಯನವರು—ಪಿಟೀಲು, ಶ್ರೀ॥ ವಿ. ವಿ. ರಂಗನಾ ಮೃದಂಗ.

ದಿವಾನ್ ಬಹದ್ದೂರ್ ಶ್ರೀಮಾನ್ ಟಿ. ಭುಜಂಗರಾವ್, ಎಂ.ಎ., ಬಿ.ಎಲ್ ೧೯೩೬ನೆಯ ನವೆಂಬರ್ ತಿಂಗಳಲ್ಲಿ ಮಂಡಲಿಯ ಸಂಗೀತ ಶಾಲೆಯ ಪ್ರಾ ವನ್ನು ನೆರವೇರಿಸಿದರು. ಇವರು ಈ ಸಂಗೀತ ಶಾಲೆಗೆ ೧೦೦ ರೂಪಾಯಿಗಳ ದ್ರವ್ಯವನ್ನು ದಯಪಾಲಿಸಿದ್ದರಿಂದ ಮಂಡಲಿಯ ಕೃತಜ್ಞತೆಗೆ ಪಾತ್ರರಾಗಿದ್ದಾ ಕಾರ್ಯದರ್ಶಿಗಳಾದ ಶ್ರೀ॥ ಕೆ. ಎಸ್. ಚಂದ್ರಶೇಖರಯ್ಯನವರು ಶಾಲೆಯ ರಾಗಿರುವರು. ಸರಕಾರದ ವಿದ್ಯಾ ಇಲಾಖೆಯು ಪರೀಕ್ಷೆಗಳಿಗೆ ವಿದ್ಯಾರ್ಥಿಗಳನ್ನು ಮಾಡುವುದಲ್ಲದೆ, ಈ ಪಾಠಶಾಲೆಯಲ್ಲಿ ಪ್ರತಿ ಶುಕ್ರವಾರವೂ ಕನ್ನಡದ ದೇ ಗಳನ್ನೂ ಇತರ ಕೀರ್ತನೆಗಳನ್ನೂ ಹೇಳಿಕೊಡಲು ಒಂದು ಉಚಿತ ಪ್ರವೇಶ ಏರ್ಪಟ್ಟಿದೆ.

ಕೆ. ಎಸ್. ಚಂದ್ರಶೇಖರ
ಗೌ॥ ಕಾರ್ಯದರ್ಶಿ.

## ಕರ್ಣಾಟಕ ಸಂಘ, ಮಧುಗಿರಿ

೧೪-೮-೧೯೩೭: ಸಂಘದ ದ್ವಿತೀಯ ವಾರ್ಷಿಕೋತ್ಸವ.—ಅಧ್ಯಕ್ಷರು: ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್ಎಲ್.ಬಿ. ಅವರು. ೧೫-೮-೧೯೩೭: (೧) ಸಂಗೀತ.—ಕುಮಾರಿ ವೆಂಕಟಲಕ್ಷ್ಮಿಯಿಂದ; (೨) ಭಾರತ ಪಠನ.—ಶ್ರೀ॥ ಚಳ್ಳಕೆರೆ ಸೀತಾರಾಮ ಶಾಸ್ತ್ರಿಗಳಿಂದ; (೩) ಉಪನ್ಯಾಸ.—"ಕುಮಾರವ್ಯಾಸ ಕವಿಯ ದ್ರೌಪದಿ ಪಾತ್ರ".—ಮ॥ ಸಿ. ಕೆ. ವೆಂಕಟರಾಮಯ್ಯನವರಿಂದ; ಅಧ್ಯಕ್ಷರು: ಶ್ರೀ॥ ಜಿ. ನಾರಾಯಣರಾಯರು.

೨೧-೯-೧೯೩೭: ಹರಿಕಥೆ—"ಧ್ರುವ ಚರಿತ್ರೆ".—ಶ್ರೀ॥ ಬೇಲೂರು ಕೇಶವ ದಾಸರಿಂದ. ೨೩-೯-೧೯೩೭: ಹರಿಕಥೆ—"ಸುಭದ್ರಾ".—ಶ್ರೀ॥ ಬೇಲೂರು ಕೇಶವದಾಸರಿಂದ. ೨೫-೯-೧೯೩೭: ಗ್ರಾಮಾಂತರ ಪ್ರಚಾರ.—ಬೇಡತೂರಿನಲ್ಲಿ:—ಕಾವ್ಯವಾಚನ.—ಮ॥ ಎಂ. ರಾಜಾರಾವ್, ಎಂ.ಎ. ಮತ್ತು ಮ॥ ನಾರಾಯಣಾಚಾರ್ಯ ಅವರಿಂದ; (೨) ಉಪನ್ಯಾಸಗಳು: "ವಿಜ್ಞಾನ".—ಮ॥ ಬಿ. ರಾಮಸ್ವಾಮಯ್ಯ, ಬಿ.ಎ. ಅವರಿಂದ; "ಗ್ರಾಮ ನೈರ್ಮಲ್ಯ".—ಡಾ॥ ಕೃಷ್ಣಮೂರ್ತಿ, ಎಲ್.ಎಂ.ಪಿ. ಅವರಿಂದ; "ರೈತರ ಏಳಿಗೆ".—ಡಿಸ್ಟ್ರಿಕ್ಟ್ ಬೋರ್ಡ್ ಮೆಂಬರ್ ಮ॥ ಮಾಳರೆಡ್ಡಿ ಅವರಿಂದ; ಭಾರತ ವಾಚನ.—ಶ್ರೀ॥ ಎಸ್. ಸೀತಾರಾಮಯ್ಯ, ಬಿ.ಎ. ಅವರಿಂದ; ಲಾವಣಿಗಳು.—ಗ್ರಾಮಸ್ಥರಿಂದ; ಅಧ್ಯಕ್ಷರು: ಶ್ರೀ॥ ಬೇಲೂರು ಕೇಶವದಾಸರು. ೨೬-೯-೧೯೩೭: ಮಿಡಗೇಸಿಯಲ್ಲಿ:—ಹರಿಕಥೆ—"ಕಬೀರ್‌ದಾಸ್".—ಶ್ರೀ॥ ಬೇಲೂರು ಕೇಶವದಾಸರಿಂದ.

೬-೧೦-೧೯೩೭: ನಾಟಕ ವಾಚನ—"ಹೋಂ ರೂಲ್", "ನಾಗರಿಕ".—ಮ॥ ಸಿ. ಬಿ. ಜಯರಾವ್, ಬಿ.ಎ., ಬಿ.ಟಿ. ಅವರಿಂದ. ೭-೧೦-೧೯೩೭: (೧)ಕಾವ್ಯವಾಚನ—"ರಾಮಾಶ್ವಮೇಧ".—ಮ॥ ಬಿ. ಗೋಪಾಲಯ್ಯ, ಎಂ.ಎ., ಎಂ.ಎಲ್. ಅವರಿಂದ; (೨) ಸಂಗೀತ.—ಮ॥ ಪ್ರಾಣೇಶರಾವ್ ಮತ್ತು ಮ॥ ಸೀತಾರಾಮರಾವ್ ಅವರುಗಳಿಂದ. ೧೦-೧೦-೧೯೩೭: "ಕನ್ನಡ ಹಬ್ಬ"—(೧) ಸಂಗೀತ.—ಕುಮಾರಿ ಲಕ್ಷ್ಮಿ ಮತ್ತು ವೆಂಕಟಲಕ್ಷ್ಮಿ ಅವರುಗಳಿಂದ; (೨) ಭಾರತ ಪಠನ.—ಶ್ರೀ॥ ಎಸ್. ಸೀತಾರಾಮಯ್ಯ, ಬಿ.ಎ. ಅವರಿಂದ; (೩) ಭಾಷಣಗಳು—"ತತ್ತ್ವ ಮತ್ತು ವಿಜ್ಞಾನ".—ಮ॥ ಟಿ. ಸಂಜೀವಯ್ಯನವರಿಂದ; "ವಿಜ್ಞಾನ ಮತ್ತು ವೇದಾಂತ".—ಮ॥ ಬಿ. ರಾಮಸ್ವಾಮಯ್ಯ, ಬಿ.ಎಸ್‌ಸಿ. ಅವರಿಂದ; ಅಧ್ಯಕ್ಷರು: ಶ್ರೀ॥ ಎಸ್. ಶಾಮಶಾಸ್ತ್ರಿಗಳು. ೨೮-೧೦-೧೯೩೭: ಭಾರತ ಪಠನ.—ಶ್ರೀ॥ ಚಳ್ಳಕೆರೆ ಸೀತಾರಾಮಶಾಸ್ತ್ರಿಗಳಿಂದ. ೩೧-೧೦-೧೯೩೭: ಭಾರತ ಪಠನ.—ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್ಯ, ಬಿ.ಎ., ಬಿ.ಟಿ. ಅವರಿಂದ.

೧-೧೧-೧೯೩೭: ಹಾಡುಗಾರಿಕೆ—ಹೊಸ ಕವನಗಳು ಮತ್ತು ದಾಸರಪದಗಳು.—ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್ಯ, ಬಿ.ಎ., ಬಿ.ಟಿ. ಅವರಿಂದ. ೨೮-೧೧-೧೯೩೭: ಉಪನ್ಯಾಸ—"ಆಂಗ್ಲ ವಿದ್ಯಾಭ್ಯಾಸ ಪದ್ಧತಿ".—ಡಾ॥ ಕೆ. ಆರ್. ರಾಮಸ್ವಾಮಿ, ಎಂ.ಎ., ಪಿಎಚ್.ಡಿ. ಅವರಿಂದ; ಅಧ್ಯಕ್ಷರು: ಮ॥ ಎಂ. ರಾಜಾರಾವ್, ಎಂ.ಎ. ೨೯-೧೧-೧೯೩೭: ಕವಿತಾ ವಾಚನ.—ಮ॥ ಎಂ. ವಾಸುದೇವಮೂರ್ತಿ, ಎಲ್.ಎಜಿ. ಅವರಿಂದ.

೪-೧೨-೧೯೩೭

ಕೆ. ಎನ್. ಆಚಾರ್ಯ,
ಗೌ॥ ಕಾರ್ಯದರ್ಶಿ.

# ಗ್ರಂಥವಿಮರ್ಶೆ ಮತ್ತು ಸ್ವೀಕಾರ

**೧. ಆರೋಗ್ಯ, ಅದರ ಜ್ಞಾನ ಮತ್ತು ಸಾಧನ.**—ಲೇಖಕರು: ಡಾ॥ ಈಶ್ವರಮೂರ್ತಿಗಳು, ಬಿ.ಎ., ಎಲ್.ಎಂ.ಎಸ್., ಬಿ.ಎಸ್.ಎಸ್.ಸಿ.; ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಪ್ರಕಟನೆ; ಕ್ರೌನ್ ಅಷ್ಟಪತ್ರ; xi+೨೫೭; ಬೆಲೆ: ರೂ. ೧—೪—೦.

ಹಿಂದಿನ ಕಾಲದ 'ಆರೋಗ್ಯಶಾಸ್ತ್ರ'ವೆಂಬ ಪುಸ್ತಕವು ಇದುವರೆಗೂ ... ದಿಂದಿರುವುದು ಆಶ್ಚರ್ಯಕರವಾದ ವಿಷಯ. ಬೇರೊಂದು ಉತ್ತಮ ... ಹೊರಬೀಳದ್ದರಿಂದ ಅದು ಇದುವರೆಗೂ ಪ್ರಚಾರದಲ್ಲಿತ್ತೆಂದು ... ಊಹಿಸಬಹುದಾಗಿದೆ. ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಿಸಿದ ಪ್ರಕೃತ ಗ್ರಂಥವು ಆರೋಗ್ಯಶಾಸ್ತ್ರ ವಿಚಾರದಲ್ಲಿ ಕನ್ನಡದಲ್ಲೊಂದು ... ಗ್ರಂಥವಿಲ್ಲದಿದ್ದ ಕೊರತೆಯನ್ನು ನೀಗಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದು.

ಡಾ॥ ಜಿ. ಎ. ಈಶ್ವರಮೂರ್ತಿಯವರು ಆರೋಗ್ಯ ವಿಚಾರದಲ್ಲಿ ಬಹು ... ಹೊಂದಿದವರು. ಅವರು ಈ ವಿಚಾರವಾಗಿ ವೈದ್ಯ ವಿದ್ಯಾರ್ಥಿಗಳಿಗೆ ಪಾಠ ... ತಕ್ಕವರು. ಆದ್ದರಿಂದ, ನಮ್ಮ ದೇಶದ ವಿದ್ಯಾರ್ಥಿಗಳಿಗೂ ಜನಸಮುದಾಯಕ್ಕೂ ಆರೋಗ್ಯ ವಿಚಾರವನ್ನು ಪ್ರಚುರಪಡಿಸಲು ಯಾವ ಮಾರ್ಗದಲ್ಲಿ ಪ್ರ... ಬೇಕೆಂಬುದು ಅವರಿಗೆ ಚೆನ್ನಾಗಿ ಗೊತ್ತು. ಆದ್ದರಿಂದಲೇ ಅವರು ಈ ಕಷ್ಟದ ಕೆಲಸವನ್ನು ಬಹು ಸುಲಭ ರೀತಿಯಲ್ಲಿ ನಿರ್ವಹಿಸಿ ಕನ್ನಡಿಗರ ಕೃತಜ್ಞತೆಗೆ ... ರಾಗಿರುತ್ತಾರೆ.

ಇನ್ನು ಗ್ರಂಥದ ವಿಚಾರದಲ್ಲಿ ತೋರಿಬರುವ ಒಂದೆರಡು ಅಭಿಪ್ರಾಯಗಳನ್ನು ಈ ರೀತಿ ಸೂಚಿಸಬಹುದು:—

(೧) **ಚಿತ್ರಗಳು.**—ಇದರಲ್ಲಿರುವ ಚಿತ್ರಗಳೆಲ್ಲವೂ 'ಆರೋಗ್ಯಶಾಸ್ತ್ರ'ದಿಂದ ತೆಗೆದುಕೊಂಡವು. ಈ ಚಿತ್ರಗಳಲ್ಲಿ ಒಂದೂ ಸರಿಯಾದುದಲ್ಲ. ಶಾಸ್ತ್ರೀಯ ... ಲಾಗಲಿ, ಸುಲಭವಾಗಿ ಮನದಟ್ಟುವ ದೃಷ್ಟಿಯಿಂದಲಾಗಲಿ ಈ ಚಿತ್ರಗಳು ... ಯುಕ್ತವಾದವುಗಳಲ್ಲ. ಉತ್ತಮವಾದ ಚಿತ್ರಗಳನ್ನು ಬರೆಯಿಸಿ ಅಚ್ಚು ... ಬಹುದಾಗಿತ್ತು (ಉದಾಹರಣೆಗಳು—೪೯, ೫೮, ೬೭, ೨೫೪ ಮೊದಲಾದ ... ಇರುವುವು). ಈ ಚಿತ್ರಗಳನ್ನು ಮುಂದಿನ ಮುದ್ರಣದಲ್ಲಿ ಬದಲಾಯಿಸತಕ್ಕದ್ದು.

(೨) **ಪಾರಿಭಾಷಿಕ ಶಬ್ದಗಳು.**—ಕೆಲವು ಕನ್ನಡ ಶಬ್ದಗಳು ... ತೋರುವುದಿಲ್ಲ. ಉದಾಹರಣೆ: ೧. 'ನೀಚ ಮಲಿನ ರಕ್ತನಾಳ' (Inferior vena cava) —ಈ ಶಬ್ದಕ್ಕೆ ಬದಲಾಗಿ 'ಕೆಳಭಾಗದ ಮಲಿನ ರಕ್ತನಾಳ'ವೆಂದೂ, ೨. '...' (Syphilis) ಎಂಬ ಶಬ್ದಕ್ಕೆ—'ಸಿಫಿಲಿಸು' ಎಂದೂ, ೩. 'ಜೀವಸತ್ವ' (Vitamin) ಎಂಬ ಶಬ್ದಕ್ಕೆ—'ವೈಟಮಿನ್ನು' ಎಂದೂ, ೪. 'ಧಾವನೋದಕ' (Lotion)

ಶಬ್ದಕ್ಕೆ—'ಲೋಷಸ್ಸು' ಎಂದೂ, ೫. 'ರತಿರೋಗ' (Venereal disease) ಎಂಬ ಶಬ್ದಕ್ಕೆ—'ಮೇಹಜಪಾಡ್ಯ' ಎಂದೂ ಉಪಯೋಗಿಸುವುದು ಉತ್ತಮ.

**೧೦ನೆಯ ಅಧ್ಯಾಯದ ಬಗ್ಗೆ ಒಂದು ಸೂಚನೆ:** ಪುಸ್ತಕವನ್ನು ಮಿಡಲ್ ಸ್ಕೂಲುಗಳಿಗೆ ಪಠ್ಯ ಪುಸ್ತಕವನ್ನಾಗಿ ಆರಿಸಿದಲ್ಲಿ ಈ ಅಧ್ಯಾಯದ 'ದಾಂಪತ್ಯ' ವಿಚಾರವನ್ನು ತೆಗೆದುಹಾಕಬೇಕಾಗುತ್ತದೆ. ಏತಕ್ಕೆಂದರೆ, ನಮ್ಮ ಪಾಠಶಾಲೆಗಳಲ್ಲಿ 'Sex Education' ಮತ್ತು 'Social Hygiene' ವಿಚಾರಗಳನ್ನು ಚಿಕ್ಕ ಹುಡುಗರಿಗೆ ಹೇಳಿಕೊಡಬಹುದೇ, ಕೂಡದೇ, ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯ ಗಳಿವೆ. ಅದು ನಿರ್ಧರವಾಗುವವರೆಗೂ ಈ ಅಧ್ಯಾಯವನ್ನು ಪಾಠಕ್ರಮದಲ್ಲಿ ಸೇರಿಸಲು ಅವಕಾಶವಿಲ್ಲ. ಪಿ. ಕೈ.

---

೨. **ರಂಗವಲ್ಲಿ.**—ಬೇರೆ ಬೇರೆ ಬರೆಹಗಾರ್ತಿಯರಿಂದ; ಪ್ರಕಾಶಕರು: ಮನೋಹರ ಗ್ರಂಥ ಭಾಂಡಾರ, ಧಾರವಾಡ; ಕ್ರೌನ್ ಅಷ್ಟಪತ್ರ ಪುಟಗಳು ೧೪+೧೭೨; ಬೆಲೆ: ರೂ. ೧.

೩. **ಹೂಬಿಸಿಲು.**—ಕತೆಗಾರ್ತಿಯರು: ಸೌ॥ ಶ್ಯಾಮಲಾ ಬೆಳಗಾಂವಕರ ಅವರು; ಪ್ರಕಾಶಕರು: ಶ್ರೀ॥ ರಾಮಚಂದ್ರ ಪಾಂಡುರಂಗ ಬೆಳಗಾಂವಕರ, ಜಯಕರ್ನಾಟಕ ಕಾರ್ಯಾಲಯ, ಧಾರವಾಡ; ಕ್ರೌನ್ ಅಷ್ಟಪತ್ರ ಪುಟಗಳು ೮+೧೧೩; ಬೆಲೆ: ೧೦ ಆಣೆ.

ಈ ಸಣ್ಣ ಕಥೆಯ ಕಾಲದಲ್ಲಿ ಹೆಣ್ಣುಮಕ್ಕಳೂ ಲೇಖನ ಕಾರ್ಯವನ್ನು ಕೈಕೊಂಡು ತಮ್ಮ ಬಾಳಿನ ಅನುಭವ ಆಲೋಚನೆಗಳನ್ನು ಕಥಾರೂಪದಲ್ಲಿ, ಮೇಲಿನ ಎರಡು ಕಥಾ ಸಂಗ್ರಹಗಳಲ್ಲಿ ಅಂದವಾಗಿ ವಿವರಿಸಿರುವುದು ಅಭಿನಂದನೀಯವಾಗಿದೆ. ಆಯಾ ಪ್ರಕಾಶಕರು ಕೂಡ ಸ್ತ್ರೀಜನದ ರಚನಾ ಕಾರ್ಯಕ್ಕೆ ಪ್ರೋತ್ಸಾಹ ಉತ್ತೇಜನ ಗಳನ್ನು ಕೊಟ್ಟು ನಮ್ಮ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

**'ರಂಗವಲ್ಲಿ'.**—ಇದು ಬೇರೆ ಬೇರೆ ಹೆಣ್ಣುಮಕ್ಕಳು ಬರೆದ ಕಥಾಸಂಕಲನ ವಾಗಿದೆ. ಕನ್ನಡದ ಸಣ್ಣ ಕಥೆಗಳ ಜನಕರಾದ ಮಾನ್ಯ 'ಶ್ರೀನಿವಾಸ'ರು ಇದಕ್ಕೆ ಅಮೋಘವಾದ ಮುನ್ನುಡಿಯನ್ನು ಬರೆದಿದ್ದಾರೆ. ಸಂಕಲನವು 'ಮನುವಿನ ರಾಣಿ,' 'ಸುಖವೊ ದುಃಖವೊ,' 'ಕಳಕೊಂಡ ರತ್ನ' ಮೊದಲಾದ ಹದಿನಾಲ್ಕು ಕಥೆಗಳನ್ನು ಒಳಗೊಂಡಿದೆ. ಪ್ರತಿಯೊಂದು ಕಥೆಯ ವಿಮರ್ಶೆ ಅನವಶ್ಯವೆಂದು ಕಾಣುತ್ತದೆ. ಕಥೆಗಳ ವಸ್ತುವಾಗಿ ನಿಂತಿರುವುವು ಹೆಣ್ಣಿನ ಬಾಳಿನ ತೆರೆ ತರಂಗಗಳು; ಸಾಂಸಾರಿಕ ಬಯಕೆ ಬವಣೆಗಳು, ಪ್ರೀತಿ ಮೋಹಗಳು. ಬೇರೆ ಬೇರೆ ವೃತ್ತಿಯ ಸ್ತ್ರೀಯರು ಕೂಡ ಹೆಣ್ಣಿನ ಜೀವಲಕ್ಷಣವಾದ ಪ್ರೇಮಸ್ವಭಾವವುಳ್ಳವರೂ, ಸೇವಾಧರ್ಮವುಳ್ಳವರೂ ಆಗಿದ್ದಾರೆ. 'ರಂಗವಲ್ಲಿ' ಎಂಬ ಹೆಸರು ಸುಮಧುರವಾದರೂ 'ಇಟ್ಟ ಅಕ್ಕಿಗಳ'ಲ್ಲಿ ಮುಕ್ಕಾಲುಪಾಲು ದುಃಖಾಂತವಾಗಿವೆ. ಬೆಂದೊಡಲ ತರುಣಿಯರು ಕಗ್ಗತ್ತಲೆ ಯಲ್ಲಿ ದಾರಿ ಕಾಣುವರು, ಬೆಳಕನ್ನು ನೋಡುವರು. ಕತೆಗಾರ್ತಿಯರು ತಂತಮ್ಮ ಬಾಳಿನ ಅನುಭವ ಆಂದೋಲನಗಳನ್ನು ಕಥೆಯ ಪಾತ್ರಗಳ ಮೂಲಕ ರೂಪಿಸಿದ್ದಾರೆ. ಲೇಖಿಕೆಯರು ಸಮಾಜಸುಧಾರಣೆಗೆ ಹೊರಟಿಲ್ಲ; ಆದರೂ ಹೆಣ್ಣಿನ ಬದುಕನ್ನು

ಚಿತ್ರಿಸಹೊರಟ ಅವರು ಪ್ರಾಸಂಗಿಕವಾಗಿ ವಿಷಮವಿವಾಹ, ವಿಧವಾವಿವಾಹ ಗಳ ವಿಚಾರವನ್ನು ಮಾಡುತ್ತಾರೆ. ಹೆಂಗಸರ ಗುರಿಗಮ್ಯಗಳನ್ನು ಸೂಚಿಸುವ ಇದು ಸಾಮಾಜಿಕ ಕಥೆಗಾರರು ಮಾಡಬೇಕಾದ ಕೆಲಸವೇ ಸರಿ. 'ರಹಸ್ಯ' ಮುಂತಾದ ಕಥೆಗಳ ರೀತಿ ಚೆನ್ನಾಗಿದೆ. ಕತೆಯ ಮೊದಲೂ ಮುಕ್ತಾಯವೂ ಪೂರ್ಣವಾಗಿವೆ. 'ಮೋಹಿನಿ' ಚೆನ್ನಾಗಿದ್ದರೂ, ಹುಡುಗಿಯೊಬ್ಬಳು ರಾಘವ ನಂಥ ಪರಪುರುಷನ ಕೋಟು ತೆಗೆದಿರಿಸುವುದು ಇತ್ಯಾದಿ ವಿಷಯಗಳು ಅ... ವಾಗಿ ಕಾಣುತ್ತವೆ. ಅನೇಕ ಕತೆಗಾರ್ತಿಯರು ಇದೇ ತಾನೆ ಸಾಹಿತ್ಯ ಸೇವ... ಪ್ರಾರಂಭಿಸಿರುವುದರಿಂದ ಅವರ ಕಥೆಗಳು ಕಲಾ ಪೂರ್ಣವಾಗಿಲ್ಲವೆಂದು ... ಬಹುದು. ಆದರೆ ಅವು ಸತ್ಯಪೂರ್ಣವಾಗಿಲ್ಲವೆಂದು ಯಾರೂ ಹೇಳುವಂತಿಲ್ಲ. ... ಗಳ ಶೈಲಿ ಸರಳವಾಗಿದೆ. ಒಟ್ಟಿನಲ್ಲಿ 'ರಂಗವಲ್ಲಿ' ಸುಲಭ ಸಾಹಿತ್ಯ... ಅದು ಮಹಿಳೆಯರ ಬರಲಿರುವ ಕಲಾ ಕೃತಿಗಳಿಗೆ ಶುಭಸೂಚನೆಯಾಗು... ಆಶಿಸಬಹುದು.

**'ಹೂಬಿಸಿಲು'.**—ಇದರಲ್ಲಿ ಹತ್ತು ಕಥೆಗಳಿವೆ. ಇದೊಂದು ... ಗ್ರಂಥ; ಹೆಣ್ಣಿನ ಬಾಳಿನ ಬೆಳಕಿನಂತಿದೆ ಎನ್ನಬಹುದು. ಕತೆಗಳಲ್ಲಿ ಕೆಲವು-'... 'ನನ್ನನ್ನು ನೋಡಲಿಕ್ಕೆ ಬಂದಾಗ'—ಇವು ನಗುವಿನ ಲಹರಿಯಿಂದ ಹಿತಸಮ... ಗಳಿಂದ ಹಗುರಾಗಿದ್ದರೆ, 'ಕರಳ ಕತ್ತರಿ,' 'ದೊಡ್ಡಮ್ಮ ನೋಡಿದವರ' ಮುಂತಾ... ತೀವ್ರವಾದ ದುಃಖಭಾರದಿಂದ, ಹುಚ್ಚನ ಘೋರ ಸ್ಥಿತಿಯಿಂದ, 'ಮು... ಮಗನನ್ನು ವರಿಸಿದ ಬಾಲೆಯ' ತಹತಹ ತಳಮಳದಿಂದ, ಓದುಗರ ಮನ... ಕೊರಗಿಸುವಂಥವಾಗಿವೆ. 'ಮಹಾಶಿವರಾತ್ರಿ', 'ನಡೆದುಬಂದ ಲಕ್ಷ್ಮಿ' ಇ... ಕಥೆಗಳು ನೀಳ್ಗತೆಗಳಾಗಿದ್ದು, ಪಾತ್ರವೊಂದರ ಜೀವನವನ್ನು ಸುಂದರವಾಗಿ ... ವುದರಿಂದ ಚಾರಿತ್ರಾತ್ಮಕವಾಗಿವೆಯೆನ್ನಬಹುದು. 'ನಡೆದುಬಂದ ಲಕ್ಷ್ಮಿ' ದ್ರಾಂಪಕ್ಕನನ್ನೂ, 'ಚೆಂಗಳಕೆವ್ವ'ನಂತಿರುವ ಆಕೆಯ ಅಲಂಕೃತ ವೇಷ... ಮಗನಾದ ಸಹದೇವನು ಬೊಂಬಾಯಿಗೆ ಹೋಗಿ ಸುಧಾರಿಸಿ ಬಂದು ... ಯಲ್ಲಿದ್ದರೂ ತನ್ನ ಎಲ್ಲ ಗಳಿಕೆಯನ್ನು ಹಾಳುಮಾಡಿದರೂ, ಆತನಲ್ಲಿ, ಆತನ ಪ್ರ... ದ್ರೌಪದಿಯಲ್ಲಿ ದ್ರಾಂಪಕ್ಕ ಕರುಣೆ ಸ್ನೇಹಗಳನ್ನು ತೋರುವುದನ್ನು ... ಮರೆಯುವಂತಿಲ್ಲ.

ಸೌ॥ ಶ್ಯಾಮಲಾ ಅವರಿಗೆ ಕಥನಶಕ್ತಿ ಕಲ್ಪನಾಶಕ್ತಿಗಳೆರಡೂ ... ಯೆಂದು ಕಾಣುತ್ತದೆ. ಕಥಾ ಸಂಗತಿಗಳನ್ನು ಪಾತ್ರಗಳಿಗೆ ನಿರ್ಲಾಣವಾಗಿ ... ಕೊಂಡು, ಅವುಗಳ ಸ್ವಭಾವ ಚಿತ್ರಣ ಮಾಡುವುದರಲ್ಲಿ, ಅಂತಸ್ಥ ಯಾತನೆ ... ಮೂಡಿಸುವುದರಲ್ಲಿ, ಕಿರಿದರಲ್ಲಿ ಹಿರಿಯ ಭಾವವನ್ನು ಹೇಳುವುದರಲ್ಲಿ ... ಯವರು ಬಹು ಕುಶಲರು. ಮುಕ್ಕಾಲು ಪಾಲು ಕಥೆಗಳೆಲ್ಲ ಪಾತ್ರಗಳ ... ಮಹತ್ವದ ಪ್ರಸಂಗವೊಂದನ್ನು ಸಂಭಾಷಣೆಯಿಂದ ಸೂಚಿಸುತ್ತವೆ. ... ಕುತೂಹಲವನ್ನು ಹೆಚ್ಚಿಸುತ್ತವೆ.

ಸಾಮಾನ್ಯವಾಗಿ ಕತೆಗಾರ್ತಿಯರು ಪುರುಷಪಾತ್ರಗಳನ್ನು ಸ್ನೇಹ ಸೌಹಾರ್ದದಿಂದಲೇ ಕೆತ್ತಿದ್ದಾರೆ. ಈ ಮಾರ್ದವಕ್ಕೆ ನೀಲೆಯ ಗಂಡನಾದ ಶಿದ್ಲಿಂಗ ಗೌಡನೇಕೆ ವಂಚಿತನಾದನೋ ತಿಳಿಯದು. ಆತನನ್ನು 'ಕಡ್ಡಿಪುಡಿ ಕೆಂಚ', 'ಮದವಣಿಗ ಕತ್ತೆ', 'ಬಲಿತ ಕೋಣ' ಎಂದು ಮುಂತಾಗಿ ಕರೆಯುವುದು ಭಾಷೆಯ ಗೌರವಕ್ಕೂ, ಕತೆಗಾರ್ತಿಯರ ಸೌಜನ್ಯ ಸ್ವಭಾವಕ್ಕೂ ಕೊಂಚ ವ್ಯತಿರಿಕ್ತವಾಗಿದೆ ಯೆಂದು ತೋರುತ್ತದೆ. ಒಟ್ಟಿನಲ್ಲಿ 'ಹೂಬಿಸಿಲು' ಓದತಕ್ಕ ಗ್ರಂಥ.

ಡಿ. ಚಂ.

---

೪. **ಒಳಸಂಚು.**—ಗ್ರಂಥಕರ್ತರು: ಶ್ರೀಮಾನ್ ಬಿ. ಎಸ್. ವೆಂಕಟರಾಮ್ ಅವರು; ವಿಕ್ರಯಗಾರರು: ಸ್ಟ್ಯಾಂಡರ್ಡ್ ಬುಕ್ ಡಿಪೊ, ಬೆಂಗಳೂರು ನಗರ; ಬೆಲೆ: ೬ ಆಣೆ.

ನಾಟಕ ಕರ್ತರು ಸ್ವಾತಂತ್ರ್ಯ ಪ್ರೇಮವನ್ನು ತುಂಬಲು ರಂಗಭೂಮಿ ತಕ್ಕ ಸಾಧನವೆಂದು ತಿಳಿಯುವವರು. ಆ ದೃಷ್ಟಿಯಿಂದ ಈ ಐತಿಹಾಸಿಕ ನಾಟಕ ವನ್ನು ಚಿತ್ರಿಸಿದ್ದೇನೆ ಅನ್ನುತ್ತಾರೆ. ನಾಟಕ ರಚನೆಯಲ್ಲಿ ಅವರು ಹೊಸಬ ರಿರಬೇಕು. ಕಥೆ ಐತಿಹಾಸಿಕ ವಿಷಯವೆಂದರೂ ಒಂದೆರಡು ಐತಿಹಾಸಿಕ ಹೆಸರು ಗಳಿಷ್ಟೇ ಇವೆ. ನಾಟಕವನ್ನು ಪತ್ತೇದಾರಿ ಕಥೆಯಂತೆ ಹೆಣೆಯಲೆತ್ನಿಸಿ, ಅವರು ಕಲ್ಪಿಸಿದ ಉದ್ದೇಶವೇ ಕಾಣದಾಗಿದೆ.

ಶಿ. ಕಾ.

---

೫. **ಗೋಮುಖ ವ್ಯಾಘ್ರ.**—ಗ್ರಂಥಕರ್ತರು: ಶ್ರೀಮಾನ್ ಅ. ನ. ಕೃಷ್ಣ ರಾಯರು; ಪ್ರಕಾಶಕರು: ವಿಶ್ವವಾಣಿ ಪ್ರಚಾರ ಮಂದಿರ, ಬೆಂಗಳೂರು ನಗರ; ಬೆಲೆ: ೪ ಆಣೆ.

ಇದೊಂದು ಏಕಾಂಕ ಸಾಮಾಜಿಕ ನಾಟಕ. ನಾಟಕ ಕರ್ತರು ದಾಂಪತ್ಯ ಜೀವನದ ಒಂದು ಪ್ರಶ್ನೆಯನ್ನು ಇದರಲ್ಲಿ ಎತ್ತಿಕೊಂಡು, ಜತೆಹೋಗದ ಎರಡು ದಾಂಪತ್ಯಗಳನ್ನು ಉದಾಹರಿಸಿ ಒಂದು ಸಮಸ್ಯೆಯನ್ನು ಕಲ್ಪಿಸಿದ್ದಾರೆ. ಸಮಸ್ಯೆ ಯನ್ನು ಜನರ ಮುಂದಿರಿಸಿ, ಅದರ ತೀರ್ಮಾನವನ್ನು ಜನರಿಗೆ ಬಿಡಬೇಕೆನ್ನುವ ಅವರು—ಇಲ್ಲಿ ರಂಗಭೂಮಿಯಿಂದ 'ಶ್ಯಾಮು'ನನ್ನು ಕಿತ್ತು ತೀರ್ಮಾನದ ದಾರಿಯನ್ನು ಹಾಕಿದ್ದಾರೆ.

ಕನ್ನಡದಲ್ಲಿ ಇಂಥ ಪ್ರಶ್ನೆಯನ್ನು ಎತ್ತಿ ನಾಟಕದಲ್ಲಿ ಚಿತ್ರಿಸುವುದು ಇದೇ ಮೊದಲು ಎನ್ನಬಹುದು; ಅವಶ್ಯವೂ ಅಹುದು. ಆದರೆ ಈ ನಾಟಕದ ಪಾತ್ರಗಳ ಪಾತ್ರ ರಚನೆ ಮತ್ತು ಮನೋಧರ್ಮಗಳ ದೃಷ್ಟಿಯಿಂದ ಸಹಜವೆಂದು ಕಾಣುವುದಿಲ್ಲ; ಬರೆಹಗಾರರ ಬುದ್ಧಿಯ ಕೃತಕ ಸೃಷ್ಟಿಗಳಾಗಿಯೇ ಕಾಣುತ್ತವೆ.

ಶಿ. ಕಾ.

---

೬. ನಡುಮನೆಯಲ್ಲಿ (ಎಂಟು ಏಕಾಂಕ ನಾಟಕಗಳ ಸಂಗ್ರಹ).—ಗ್ರಂಥ... ಶ್ರೀಮಾನ್ ಎನ್. ಕೆ. ಕುಲಕರ್ಣಿ, ಬಿ.ಎ. ಅವರು; ಪ್ರಕಾಶಕರು: ಪ್ರೆಸ್... ನಾಲಯ, ಧಾರವಾಡ; ಕ್ರೌನ್ ಅ. ಪ. ಪು: ೧೧೫; ಬೆಲೆ: ೬ ಆಣೆ.

'ನಡುಮನೆ'ಯೆಂಬುದು ಕೊನೆಯ ಒಂದು ನಾಟಕದ ಹೆಸರು. ... ಪಾತ್ರಗಳು ೧೦–೧೨ ವರ್ಷದ ಬಾಲಿಕೆಯರಾದರೂ ಅವರ ಬಾಯಿ ... ಯೌವನವನ್ನೇ ಹೇಳುತ್ತವೆ. ಎಲ್ಲ ಪಾತ್ರಗಳೂ ಒಂದೇ ಪಾತ್ರದ ತುಂಡುಗಳು... ಹೆಸರುಗಳು ಮಾತ್ರ ಬೇರೆ ಬೇರೆಯೆಂದೂ ಹೇಳಬಹುದು.

'ಬಾರ್-ರೂಮು,' 'ಕಿವಿಮಾತು,' 'ಸಾಲಗಾರ್ತಿ' ನಾಟ... ಅನೇಕ ಜೀವಂತ ಮೂರ್ತಿಗಳನ್ನು ಕಾಣುತ್ತೇವೆ. ಮಾತು ಧಾರವಾಡ ಪ್ರಾಂ... ಬಳಕೆಯ ಮಾತಿಗಿರುವ ಎಲ್ಲ ಚೆಲುವೂ ಅಲ್ಲಿ ತುಂಬಿದೆ. 'ಸಾಲಗಾರ್ತಿ'... ಚೆಕೊವ (Checkhov) ನ ಒಂದು ನಾಟಕದ ಅನುಕರಣೆಯಂತೆ. ಅಂತು ... ಕೊನೆಯ ಗಳಿಗೆಯತನಕ ಬಹಳ ಸಹಜವಾಗಿ ಮುಂದುವರಿಯುವುದು; ... ಕೊನೆಯಲ್ಲಿ ಸಾಲಗಾರನು ಸಾಲಗಾರ್ತಿಯ ಕೈಹಿಡಿದು ಆಗುವ 'ಟ್ರಾನ್ಸ... ಮನೋವೃತ್ತಿಯು ನಮ್ಮ ಆವರಣಕ್ಕೆ ಒಪ್ಪುವುದಿಲ್ಲ. ಕೇವಲ ಕಲ್ಪನೆಯಾಗ...

ಈ ಲೇಖಕರಲ್ಲಿ ಹಾಸ್ಯಶಕ್ತಿ ಬಹಳವಾಗಿದೆ. ಆದರೆ ಹಾಸ್ಯವನ್ನು ... ಎಂದರೆ ತಮ್ಮ ಮಾತಿಗೆ ತಾವೇ ಮರುಳಾಗಿ, ನಾಟಕದ ಧ್ಯೇಯವನ್ನು ಹಾಳು... ಮಾಡುವ ಹೆದರಿಕೆ ಬಹಳ. ಜೀವನದ ಕಡೆಗೆ ಇನ್ನಷ್ಟು ಗಮನವಿರಿಸಿದರೆ... ನಾಟಕ ಸಾಹಿತ್ಯದಲ್ಲಿ ಇವರು ನಮಗೆ ಒಂದು ಅಪೂರ್ವ ಲಾಭವೆಂದೇ ಹೇಳ...

ಶಿ. ಕಾ.

---

೭. ಆಟದ ಬಯಲು (ಸಚಿತ್ರ).—ಲೇಖಕರು: ಶ್ರೀಮಾನ್ "... ಬೆಂಗಳೂರು ಸಿಟಿ; ಕ್ರೌನ್ ಅ. ಪ. ಪು. ೧೦ + ೪೬; ಬೆಲೆ: ೪ ಆಣೆ; ಮೈ... ಸಂಸ್ಥಾನದ ಡೆಪ್ಯೂಟಿ ಚೀಫ್ ಸ್ಕೌಟ್ ಕಮಿಷನರ್ ಮೇಜರ್ ವೈ. ವಿ. ಕೃಷ್ಣ... ಎಂ.ಬಿ.ಬಿ.ಎಸ್., ಡಿ.ಟಿ.ಎಂ. ಅವರ ಮುನ್ನುಡಿಯೊಡನೆ.

ಆಟವು ಮಗುವಿಗೆ ನೈಸರ್ಗಿಕವಾಗಿ ಆವಶ್ಯಕವಾದುದು. ಮೀನ... ನೀರೂ, ಪಕ್ಷಿಗಳಿಗೆ ಅಂತರಿಕ್ಷವೂ ಹೇಗೆ ಸಹಜವಾದ ಸನ್ನಿವೇಶಗಳೋ ಹಾಗೆ... ಬಯಲು ಮಕ್ಕಳಿಗೆ ಸಹಜವಾದ ಸನ್ನಿವೇಶ. ಈ ಸನ್ನಿವೇಶವು ಮಕ್ಕಳಿಗೆ ದೊ... ದಿರುವಲ್ಲಿ ಅವುಗಳ ಜೀವನವು ದುಃಖಮಯವಾಗಿ ಮಾನಸಿಕ ಮತ್ತು ... ಬೆಳವಣಿಗೆ ಸಮರ್ಪಕವಾಗಿ ಆಗಲಾರದು. ಮಕ್ಕಳ ವಿದ್ಯಾಭ್ಯಾಸ ... ವರಿಯುವುದಕ್ಕೆ ಆಟಗಳು ಬಹಳ ಮಟ್ಟಿಗೆ ಸಹಕಾರಿಯಾಗಿರುತ್ತವೆ. ಆದುದ... ಫ್ರೊಬೆಲ್, ಮಾಂಟಿಸೋರಿ ಮೊದಲಾದ ವಿದ್ಯಾ ಶಿಕ್ಷಣ ಸುಧಾರಕರು ... ಮೂಲಕ ಮಕ್ಕಳ ವಿದ್ಯಾಭ್ಯಾಸವನ್ನು ನಡೆಯಿಸಬಹುದೆಂದು ಸಾರಿರುತ್ತಾರೆ...

ಪಾಶ್ಚಾತ್ಯದೇಶಗಳಲ್ಲಿ ಹೆಚ್ಚಾಗಿ ಆಚರಣೆಯಲ್ಲಿರುವ ಆಟಗಳಲ್ಲಿ ಹಲ... ನಮ್ಮ ದೇಶದಲ್ಲಿ ಹೆಚ್ಚಾಗಿ ಆಚರಣೆಗೆ ಬಂದು ದೇಶೀಯ ಆಟಗಳೆಲ್ಲವೂ ಕ್ಷೀಣ...

ಬರುತ್ತಿರುವುವು. ಹೀಗೆಂದ ಮಾತ್ರಕ್ಕೆ ಪಾಶ್ಚಾತ್ಯ ದೇಶದ ಆಟಗಳನ್ನು ಆಚರಣೆಗೆ ತರಲೇಕೂಡದೆಂದು ಅಭಿಪ್ರಾಯವಲ್ಲ. "ಸದ್ಯಃ ಆಚರಣೆಯಲ್ಲಿರುವ ಪಾಶ್ಚಾತ್ಯ ದೇಶದ ಆಟಗಳಿಗೆ ಹೆಚ್ಚು ದ್ರವ್ಯವು ಬೇಕಾಗುತ್ತದೆ; ಆದುದರಿಂದ ಹೆಚ್ಚು ದ್ರವ್ಯವು ಬೇಡದಿರುವ ದೇಶೀಯ ಆಟಗಳು ಅನೇಕವಿರುವುದರಿಂದ ಇವುಗಳನ್ನು ಆಚರಣೆಗೆ ತರುವುದು ಉತ್ತಮ" ಎಂಬದಾಗಿ ಒಬ್ಬ ಮಹನೀಯರು ತಿಳಿಸಿರುತ್ತಾರೆ. ದೇಶೀಯ ಆಟಗಳನ್ನು ಆಚರಣೆಗೆ ತರಬೇಕೆಂಬ ಕೂಗನ್ನು ಅನೇಕ ಕಡೆಗಳಲ್ಲಿ ಕೇಳುತ್ತಿರುವೆವು. ಇಂತಹ ಸಮಯದಲ್ಲಿ ಪ್ರಕಟವಾಗಿರುವ ಈ ಪುಸ್ತಕದಿಂದ ಉಪಾಧ್ಯಾಯರಿಗೂ, ಬಾಲಕ ಬಾಲಿಕೆಯರಿಗೂ ಎಷ್ಟರಮಟ್ಟಿಗೆ ಪ್ರಯೋಜನ ವಾಗುತ್ತದೆಂಬುದನ್ನು ವಾಚಕರೇ ಊಹಿಸಬಹುದು.

ಗ್ರಂಥಕರ್ತರು ಆಟಗಳನ್ನು ೫ ಪಂಗಡಗಳಾಗಿ ವಿಂಗಡಿಸಿರುತ್ತಾರೆ. ಇವು ಯಾವುವೆಂದರೆ:—ಓಟ, ವೃತ್ತದ ಆಟ, ಪಂಗಡ ಆಟ, ಗುಂಪಿನ ಆಟ, ಬುದ್ಧಿಯ ಆಟ. ಪ್ರತಿ ಪಂಗಡದ ಆಟಗಳನ್ನೂ ವಿವರಿಸುವುದಕ್ಕೆ ಮುಂಚೆ ಆಟವಾಡುವುದಕ್ಕೆ ಉಪಯುಕ್ತವಾದ ಸೂಚನೆಯನ್ನು ಕೊಟ್ಟಿರುತ್ತಾರೆ. ಕೊನೆಯಲ್ಲಿ ಮಕ್ಕಳಿಗೆ ಆಶ್ಚರ್ಯವನ್ನುಂಟುಮಾಡತಕ್ಕ ಪ್ರಾಣಿಗಳ ನೆರಳು ಚಿತ್ರಗಳನ್ನು ಕೈಬೆರಳುಗಳಿಂದ ಹೇಗೆ ತೋರಿಸಬಹುದೆಂಬುದನ್ನೂ ಸಹ ಚಿತ್ರದ ಮೂಲಕ ತೋರಿಸಿರುತ್ತಾರೆ. ಪ್ರಾಣಿಗಳ ಕೂಗುಗಳನ್ನು ಅನುಕರಿಸುವುದನ್ನು ಮಕ್ಕಳು ಅಭ್ಯಾಸಮಾಡಿ 'ನೆರಳು ಪ್ರಾಣಿ'ಗಳು ಬಾಯಿಬಿಡುವಂತೆ ಮಾಡಿ ಕೂಗಬಹುದೆಂಬುದನ್ನೂ ಸಹ ಸೂಚಿಸಿರುತ್ತಾರೆ.

ಭಾಷಾ ಶೈಲಿ ಸುಲಭವಾಗಿದೆ. ಮುದ್ರಣ ಅಂದವಾಗಿದೆ. ಇವರಿಗೆ ಹೆಚ್ಚಾದ ಬೆಂಬಲ ದೊರೆತು ಇವರಿಂದ ಇಂತಹ ಅನೇಕ ಗ್ರಂಥಗಳು ಶೀಘ್ರದಲ್ಲಿಯೇ ಹೊರ ಬೀಳಲೆಂದು ಹಾರೈಸುತ್ತೇವೆ.

ಎಂ. ವೆಂ.

---

**೮. ಹಿಂದಿ ಹುಡುಗರ ಬುದ್ಧಿಮಾಪನವು.**—ಲೇಖಕರು: ಶ್ರೀಮಾನ್ ವೆಂಕಟರಾವ ವಿಠ್ಠಲ ಕಾಮತ್ ಅವರು, ಲೆಕ್ಚರರ್, ಸೆಕೆಂಡರಿ ಟ್ರೈನಿಂಗ್ ಕಾಲೇಜ್, ಮುಂಬಯಿ; ಪ್ರಕಾಶಕರು: ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್; ಕ್ರೌನ್ ಅ. ಪ. viii + ೧೩೧; ಬೆಲೆ: ರೂ. ೧–೦–೦ (ಈ ಪುಸ್ತಕದೊಡನೆ ಉಪಯೋಗಿಸತಕ್ಕ ಕಾರ್ಡುಗಳು, ಫಾರಂಗಳು ಮುಂತಾದುವು ಸಹ ಇವೆ).

ಇಪ್ಪತ್ತನೆಯ ಶತಮಾನವು ವಿಜ್ಞಾನ ಶಾಸ್ತ್ರಗಳ ಯುಗವೆಂದು ಹೇಳಲ್ಪಟ್ಟಿದೆ. ಈ ಶಾಸ್ತ್ರಗಳ ಪ್ರಭೆಯು ವಿದ್ಯಾಶಾಸ್ತ್ರದಮೇಲೂ ಬಿದ್ದು ಶಿಕ್ಷಣ ಪ್ರಪಂಚದಲ್ಲಿ ಅನೇಕ ಬದಲಾವಣೆಗಳು ಆಗಿವೆ ಮತ್ತು ಮುಂದೆಯೂ ಆಗುವಂತಿವೆ. ಈ ಬದಲಾವಣೆಗಳಲ್ಲಿ "ಬುದ್ಧಿಮಾಪನವು" ಆಧುನಿಕ ಮನಶ್ಶಾಸ್ತ್ರದ ಒಂದು ಅಂಗ ವಾಗಿರುತ್ತದೆ. ಭೌತಿಕ, ರಸಾಯನ ಮೊದಲಾದ ಶಾಸ್ತ್ರಗಳಲ್ಲಿ ವಿಷಯಗಳು ನಿಷ್ಕೃಷ್ಟ ವಾಗಿಯೂ, ಸಂದೇಹಕ್ಕೆ ಆಸ್ಪದವಿಲ್ಲದ ರೀತಿಯಲ್ಲಿಯೂ ನಿರೂಪಿಸಲ್ಪಟ್ಟಿರುವಂತೆ

ಶಿಕ್ಷಣದ ಪ್ರಪಂಚದಲ್ಲಿಯೂ ಸಹ ವಿಷಯಗಳನ್ನು ಶಾಸ್ತ್ರರೀತಿಯಲ್ಲಿ ಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಮನಶ್ಶಾಸ್ತ್ರಜ್ಞರು ಹಗಲಿರುಳೂ ಶ್ರಮಿಸುತ್ತಿರುವರು. "ಬುದ್ಧಿಮಾಪನದ" ವಿಷಯದಲ್ಲಿ ಹಲವು ಪ್ರಯತ್ನಗಳು ನಡೆದಿವೆ. ಇದರ ಉದ್ದೇಶ, ಚರಿತ್ರೆ, ಮಾಪನಮಾಡುವ ಕ್ರಮ, ಆಚರಣೆಯಲ್ಲಿರುವ ಕ್ರಮದಿಂದಾಗುತ್ತಿರುವ ಕೆಡುಕುಗಳು—ಇವೇ ಮೊದಲಾದುವುಗಳನ್ನು ಈ ವಿಮರ್ಶೆಯಲ್ಲಿ ತಿಳಿಸಲು ಸಾಧ್ಯವಿಲ್ಲ. ಪ್ರಾರಂಭದಲ್ಲಿ ಮಕ್ಕಳನ್ನು ರೀತಿಯಲ್ಲಿ ಪರೀಕ್ಷಿಸಿ ವಿದ್ಯಾಭ್ಯಾಸಕ್ಕೆ ತಳಹದಿಯಾದ ಮಕ್ಕಳ ಬುದ್ಧಿಶಕ್ತಿಯನ್ನು ಕಂಡುಹಿಡಿಯಬೇಕಾಗಿರುತ್ತದೆ. ಬುದ್ಧಿಮಾಪನದ ವಿಚಾರವನ್ನು ಗ್ರಂಥಗಳು ಇಂಗ್ಲಿಷ್ ಭಾಷೆಯಲ್ಲಿ ಅನೇಕವಿವೆ; ಆದರೆ ಕನ್ನಡ ಭಾಷೆಯಲ್ಲಿ ಅಪರೂಪವೆಂದೇ ಹೇಳಬೇಕು. ಎಲ್ಲ ಶಾಸ್ತ್ರಗಳನ್ನೂ ಕನ್ನಡ ಭಾಷೆಯಲ್ಲಿ ತಿಳಿಸಬೇಕೆಂಬ ಚಳವಳಿ ದಿನೇ ದಿನೇ ಅಭಿವೃದ್ಧಿಯಾಗುತ್ತಿರುವಾಗ ಈ ಹೊರಬಿದ್ದುದು ಶುಭಸೂಚನೆಯೇ ಸರಿ. ಇದರ ಗ್ರಂಥಕರ್ತರಾದ ಶ್ರೀ ವೆಂಕಟರಾವ ವಿಠ್ಠಲ ಕಾಮತ್‌ರವರಿಗೆ ಉಪಾಧ್ಯಾಯರೂ, ಕನ್ನಡ ಭಾಷಾಭಿಮಾನಿಗಳೂ ಚಿರಋಣಿಗಳಾಗಿರಬೇಕು.

ಈ ಪುಸ್ತಕದ ಹೆಸರು "ಹಿಂದಿ ಹುಡುಗರ ಬುದ್ಧಿಮಾಪನವು" ಎಂದಾಗಿದೆ. ಇದು ಅಷ್ಟು ತೃಪ್ತಿಕರವಾಗಿ ತೋರುವುದಿಲ್ಲ. ಈ ಹೆಸರು ಕೆಲವು ತಪ್ಪು ಭಾವನೆಗಳಿಗೆ ಅವಕಾಶಕೊಡುವಂತಿದೆ. ಪುಸ್ತಕವನ್ನು ಪೂರ್ತಿಯಾಗಿ ಓದಿದಮೇಲೆ, ಇದರಲ್ಲಿ ತಿಳಿಸಿರುವ ಬುದ್ಧಿಮಾಪನ ಕ್ರಮವನ್ನು ಇಂಡಿಯಾದ ಬಾಲಕ ಬಾಲಿಕೆಯರಿಗೆಲ್ಲಾ ಅನ್ವಯಿಸಬಹುದಾಗಿದೆಯೆಂಬ ಭಾವನೆ ಹುಟ್ಟುತ್ತದೆ. ಆದುದರಿಂದ "ಇಂಡಿಯಾ ದೇಶದ ಬಾಲಕ ಬಾಲಿಕೆಯರ ಬುದ್ಧಿಮಾಪನ" ಎಂಬ ಹೆಸರು ಉತ್ತಮ.

ಪ್ರಾರಂಭದಲ್ಲಿ ಗ್ರಂಥಕರ್ತರು ಬುದ್ಧಿಶಕ್ತಿಯ ಪರೀಕ್ಷೆಗಳನ್ನು ನಡೆಸಬೇಕಾದರೆ ಅನುಸರಿಸಬೇಕಾಗಿರುವ ಸಾಮಾನ್ಯ ಸೂಚನೆಗಳನ್ನು ಕೊಟ್ಟಿದ್ದಾರೆ. ಪರೀಕ್ಷೆಯ ಸ್ಥಳ, ಪರೀಕ್ಷಕನ ವರ್ತನ, ಪರೀಕ್ಷೆಯನ್ನು ಆರಂಭಿಸುವ ಬಗೆ, ಪ್ರಶ್ನೆಗಳನ್ನು ಕೊಡುವ ಪದ್ಧತಿ, ಬುದ್ಧಿಮಾನವನ್ನು ಗೊತ್ತುಮಾಡುವುದು, ಪರೀಕ್ಷೆಯ ಆದರ ಮಹತ್ವ, ಬುದ್ಧಿಪರೀಕ್ಷೆಯ ಉಪಯೋಗದ ವಿಷಯದಲ್ಲಿ ನೆನಪಿಡಬೇಕಾದ ಮಾತುಗಳು, ಪ್ರೌಢ ಜನರ ಬುದ್ಧಿಮಾನ—ಈ ವಿಷಯಗಳನ್ನು ಮನಶ್ಶಾಸ್ತ್ರದ ಪರಿಚಯ ಹೆಚ್ಚು ಇಲ್ಲದವರಿಗೆ ಕೂಡ ಸುಲಭವಾಗಿ ತಿಳಿಯುವಂತೆ ವಿವರಿಸಿದ್ದಾರೆ. ಎರಡರಿಂದ ೧೦ ವರ್ಷ ವಯಸ್ಸಿನ ಮಕ್ಕಳ ಬುದ್ಧಿಶಕ್ತಿಯನ್ನು ನಿರ್ಧರಿಸಲು ಸಹಕಾರಿಯಾದ ಪ್ರಶ್ನಮಾಲಿಕೆಗಳನ್ನು ಪ್ರತಿ ವಯಸ್ಸಿಗೂ ಪ್ರತ್ಯೇಕವಾಗಿ ಕೊಟ್ಟಿದ್ದಾರೆ. ಅನಂತರ ೧೨, ೧೪, ೧೬, ೧೮, ೨೨ ಈ ವಯಸ್ಸಿನವರ ಬುದ್ಧಿಶಕ್ತಿಯನ್ನು ಕಂಡುಹಿಡಿಯಲು ಸಹಕಾರಿಯಾದ ಪ್ರಶ್ನಮಾಲಿಕೆಗಳು ಮಾತ್ರ ಇರುತ್ತವೆ. ಪ್ರಶ್ನಮಾಲಿಕೆಯ ಕೊನೆಯಲ್ಲಿ ಕೆಲವು ವೈಕಲ್ಪಿತ (Alternative) ಪ್ರಶ್ನೆಗಳು

ಸೇರಿಸಿರುತ್ತಾರೆ ಈ ವೈಕಲ್ಪಿತ ಪ್ರಶ್ನೆಗಳ ವಿಷಯದಲ್ಲಿ "ಮುಖ್ಯ ಪ್ರಶ್ನೆಗಳಷ್ಟು ಇವು ವಿಶ್ವಾಸನೀಯವಲ್ಲ" ಎಂದು ಗ್ರಂಥಕರ್ತರೇ ತಿಳಿಸಿರುತ್ತಾರೆ. ಅಲ್ಲದೆ, ಈ ರೀತಿಯಾಗಿ ವೈಕಲ್ಪಿತ ಪ್ರಶ್ನೆಗಳನ್ನು ಸೇರಿಸುವುದು ಹೊಸ ಸಂಗತಿಯಾಗಿರುತ್ತದೆ. ಕೆಲವು ಪ್ರಶ್ನಮಾಲಿಕೆಗಳಲ್ಲಿ ಉತ್ತರಗಳ ಮಾದರಿಗಳನ್ನು ಕೊಟ್ಟು, ಸರಿ ತಪ್ಪು ಇವುಗಳನ್ನು ಸಹ ತಿಳಿಸಿದೆ. ಪರೀಕ್ಷಕರಿಗೆ ಇವು ಸ್ವಲ್ಪ ಸಹಾಯವಾಗುತ್ತವೆ. ಪ್ರಶ್ನಮಾಲಿಕೆಗಳನ್ನು ಸಿದ್ಧಪಡಿಸುವುದರಲ್ಲಿ ಗ್ರಂಥಕರ್ತರು ಬಹಳಮಟ್ಟಿಗೆ ಬುದ್ಧಿಶಕ್ತಿ ಪರೀಕ್ಷೆಗಳ ಮೂಲಪುರುಷರಾದ 'ಬಿನೆ' ಎಂಬವರ ಪ್ರಶ್ನೆಗಳನ್ನೇ ಭಾಷಾಂತರ ಮಾಡಿರುತ್ತಾರೆ. ಸಾಮಾನ್ಯವಾಗಿ ನಮ್ಮ ಮಕ್ಕಳ ಬಳಕೆಯಲ್ಲಿರುವ ವಾಕ್ಯಗಳನ್ನು ಕೆಲವು ಕಡೆಗಳಲ್ಲಿ ಸೇರಿಸಿದ್ದರೆ ಚೆನ್ನಾಗಿರುತ್ತಿತ್ತೆಂದು ತೋರುತ್ತದೆ. ಪ್ರಸ್ತಾವನೆಯಲ್ಲಿ ಗ್ರಂಥಕರ್ತರು ೧,೦೭೪ ಜನ ಹುಡುಗ ಹುಡುಗಿಯರ ಪರೀಕ್ಷೆಯನ್ನು ತೆಗೆದುಕೊಳ್ಳಲಾಗಿದೆಯೆಂದು ತಿಳಿಸಿರುತ್ತಾರೆ. ಯಾವ ಯಾವ ವಯಸ್ಸಿನವರು ಎಷ್ಟೆಷ್ಟು ಜನರಿದ್ದರು, ಶೇಕಡ ಎಷ್ಟು ಜನರು ಪರೀಕ್ಷೆಯಲ್ಲಿ ಉತ್ತೀರ್ಣರಾದರು—ಇವೇ ಮೊದಲಾದ ವಿವರಗಳನ್ನು ತಿಳಿಸಿಲ್ಲ. ಪ್ರತಿಯೊಂದು ವಯಸ್ಸಿಗೂ ಬಹುಶಃ ೮೩ ಮಕ್ಕಳು ಪರೀಕ್ಷಿಸಲ್ಪಟ್ಟಿರಬಹುದು. ಶಾಸ್ತ್ರದೃಷ್ಟಿಯಿಂದ ಈ ಸಂಖ್ಯೆ ಬಹಳ ಕಡಮೆಯೆಂದು ಹೇಳಬೇಕಾಗಿದೆ. ಬಿನೆಯವರ ಪ್ರಶ್ನೆಗಳನ್ನು ಮಾತ್ರ ಭಾಷಾಂತರಮಾಡಿ ಪರೀಕ್ಷಿಸಿದರೆ ನಮ್ಮ ಮಕ್ಕಳ ಬುದ್ಧಿಶಕ್ತಿಯನ್ನು ಪೂರ್ಣವಾಗಿ ಕಂಡುಹಿಡಿದಂತಾಗುವುದಿಲ್ಲ. ನಮ್ಮ ದೇಶದ ಸನ್ನಿವೇಶ, ಸಮಾಜಸ್ಥಿತಿ, ಮಾತೃಭಾಷೆ ಮೊದಲಾದುವುಗಳನ್ನು ಗಮನಕ್ಕೆ ತೆಗೆದುಕೊಂಡು ಕೆಲವು ಬದಲಾವಣೆಗಳನ್ನು ಮಾಡಿ ಪ್ರಶ್ನಮಾಲಿಕೆಗಳನ್ನು ತಯಾರಿಸಬೇಕು. ವಿವೇಚನಶಕ್ತಿಯನ್ನು ಪರೀಕ್ಷಿಸುವ ಪ್ರಶ್ನೆಗಳು (Reasoning Tests) ಇಲ್ಲಿ ಕಂಡುಬರುವುದಿಲ್ಲ. ಬುದ್ಧಿಶಕ್ತಿಯನ್ನು ಕಂಡುಹಿಡಿಯುವುದರಲ್ಲಿ ಇವು ಮುಖ್ಯವಾದವುಗಳೆಂದು ಎಲ್ಲರೂ ಒಪ್ಪಿರುತ್ತಾರೆ. ಒಟ್ಟಿನಲ್ಲಿ, ಈ ಪ್ರಶ್ನಮಾಲಿಕೆಗಳು ನಿಜವಾಗಿಯೂ ನಮ್ಮ ಮಕ್ಕಳ ಬುದ್ಧಿಶಕ್ತಿಯನ್ನು ನಿರ್ಧರಿಸುತ್ತವೆಯೇ ಎಂಬುದನ್ನು ಪರೀಕ್ಷಾಪ್ರಯೋಗಗಳ ಮೂಲಕ ಕಂಡುಹಿಡಿಯಬೇಕಾಗಿರುತ್ತದೆ.

ಯಾವ ಶಕ್ತಿಯನ್ನು "ಬುದ್ಧಿಶಕ್ತಿ" ಎಂದು ತಿಳಿಯಬೇಕು, ಬುದ್ಧಿ ಮತ್ತು ಜ್ಞಾನ (knowledge) ಇವುಗಳಿಗಿರುವ ವ್ಯತ್ಯಾಸ, ಬುದ್ಧಿಶಕ್ತಿಯ ಅಳತೆಯ ಚರಿತ್ರೆ (ಸಂಕ್ಷೇಪ), ಮಾಪನಮಾಡುವ ಕ್ರಮ, ಪ್ರಶ್ನೆಗಳನ್ನು ಸಿದ್ಧಪಡಿಸುವ ಕ್ರಮ, ಬುದ್ಧಿಶಕ್ತಿಯ ಬೆಳವಣಿಗೆ, ಬಾಲಕರ ವರ್ಗೀಕರಣಕ್ಕೆ ಬುದ್ಧಿಮಾಪನವು ಎಷ್ಟರಮಟ್ಟಿಗೆ ಸಹಕಾರಿಯಾಗುತ್ತದೆ—ಇವೇ ಮೊದಲಾದವುಗಳ ವಿಚಾರವಾಗಿ ಒಂದೆರಡು ಅಧ್ಯಾಯಗಳನ್ನು ಬರೆದಿದ್ದರೆ ಪುಸ್ತಕದ ಪ್ರಯೋಜನವು ಇನ್ನೂ ಹೆಚ್ಚುತ್ತಿತ್ತೆಂದು ಹೇಳಬೇಕಾಗಿದೆ. ಬುದ್ಧಿಮಾಪನದ ವಿಚಾರವಾಗಿ ಇಷ್ಟರಮಟ್ಟಿಗೆ ಕನ್ನಡ ಭಾಷೆಯಲ್ಲಿ ಬರೆಯಲ್ಪಟ್ಟಿರುವ ಪುಸ್ತಕಗಳಲ್ಲಿ ಇದು ಮೊದಲನೆಯದು. ಆದುದರಿಂದ ಇದನ್ನು ಓದತಕ್ಕವರಿಗೆ ಮೇಲೆ ತಿಳಿಸಿರುವ ವಿಷಯಗಳ ಪರಿಚಯವು ಇಲ್ಲದಿರುವಲ್ಲಿ, ಪುಸ್ತಕದಲ್ಲಿ

ವಿವರಿಸಲ್ಪಟ್ಟಿರುವ ಬುದ್ಧಿಮಾಪನ ಕ್ರಮವನ್ನು ಅನುಸರಿಸಿ ಬುದ್ಧಿಶಕ್ತಿ... ಕಂಡುಹಿಡಿಯುವುದು ಸ್ವಲ್ಪ ಕಷ್ಟವಾಗುತ್ತದೆ. ಈ ಕೊರತೆಯನ್ನು ಗ್ರಂಥ... ಕ್ಷಿಪ್ರದಲ್ಲಿಯೇ ನಿವಾರಿಸಬಹುದೆಂದು ನಿರೀಕ್ಷಿಸುತ್ತೇವೆ.

ಕನ್ನಡ ಭಾಷೆಯಲ್ಲಿ ಶಾಸ್ತ್ರ ಭಾಗಗಳನ್ನು ಕನ್ನಡಿಗರಿಗೆ ಸುಲಭವಾಗಿ ... ವಂತೆ ಬರೆಯುವುದು ಬಹಳ ಕಷ್ಟವೆಂಬುದು ತಿಳಿದ ವಿಷಯವಾಗಿರುತ್ತದೆ. ... ವೇಳೆ ಸರಿಯಾದ ಪರ್ಯಾಯ ಪದಗಳು ಸಿಕ್ಕದೆ ಶ್ರಮಪಟ್ಟು ಕೆಲವು ಪದ... ಉಪಯೋಗಿಸಬೇಕಾಗುತ್ತದೆ. ಇಂತಹ ಶಬ್ದಗಳನ್ನು ಎಲ್ಲರೂ ಒಪ್ಪುತ್ತಾ... ಹೇಳಲು ಆಗುವುದಿಲ್ಲ. ಹೀಗಿದ್ದರೂ, ಈ ಗ್ರಂಥಕರ್ತರು ಇಂತಹ ಕಷ್ಟ... ಕೆಲಸವನ್ನು ಕೈಕೊಂಡು ಈ ಪುಸ್ತಕವನ್ನು ರಚಿಸಿರುವುದಕ್ಕಾಗಿ ... ಅಭಿನಂದಿಸುತ್ತೇವೆ.

ಎಂ. ವೆ.

---

೯. **ಚಂದ್ರನಾಥ** (ದಿವಂಗತ ಡಾ॥ ಶರಚ್ಚಂದ್ರ ಚಟರ್ಜಿಯವರ ಕಾದಂ...; ಅನುವಾದಕರು: ಶ್ರೀಮಾನ್ ಗುರುನಾಥ ಜೋಶಿಯವರು; ಪ್ರಕಾಶಕರು: ... ಪ್ರಕಟನಾಲಯ, ಧಾರವಾಡ; ಕ್ರೌನ್ ಅಷ್ಟಪತ್ರ ಪುಟ ೧೩೦; ಕ್ರಯ: ೬ ಆಣೆ.

ಕನ್ನಡ ಗ್ರಂಥಪ್ರಕಟನೆಗೆ ಸಹಾಯಮಾಡಬೇಕೆಂಬ ಉದ್ದೇಶದಿಂ... ಧಾರವಾಡ ಪ್ರಾಂತದ ಪ್ರಸಿದ್ಧ ಸಾಹಿತಿಗಳು ಕೆಲವರು 'ಪ್ರೇಮ ಪ್ರಕಟನಾ... ವೆಂಬ ಒಂದು ಸಂಸ್ಥೆಯನ್ನು ಏರ್ಪಡಿಸಿಕೊಂಡು ತಿಂಗಳಿಗೊಂದು ಪುಸ್ತಕದಂತೆ ... ಹಾಕಿಸಿ ಪುಸ್ತಕಗಳು ಸುಲಭ ಬೆಲೆಗೆ ದೊರೆಯುವ ಏರ್ಪಾಡು ಮಾಡಿರುತ್ತಾ... ಇದರಿಂದ ಬರೆಹಗಾರರಿಗೆ ಮಾತ್ರವೇ ಅಲ್ಲದೆ ಓದುಗರಿಗೂ ಸಹ ತುಂಬ ... ವಾದೀತೆಂದು ನಿರೀಕ್ಷಿಸಬಹುದು.

ಪ್ರಸಕ್ತ ಪುಸ್ತಕವು ಮೇಲ್ಕಂಡ ಪ್ರಕಟನಾಲಯದಿಂದ ಹೊರಬಿದ್ದ ... ಗಳಲ್ಲೊಂದಾಗಿದೆ. ಇದು ಬಂಗಾಲದ ಪ್ರಸಿದ್ಧ ಕಾದಂಬರಿಕಾರರಾದ ಶರಚ್ಚಂದ್ರ ಚಟರ್ಜಿಯವರ ಬಂಗಾಳೀ ಕಾದಂಬರಿಯ ಕನ್ನಡ ಅನುವಾದ. ನೈಜವಾದ ದಾಂ... ಪ್ರೇಮಕ್ಕೆ ಸಮಾಜದ ವಿಧಿನಿಷೇಧಗಳಿಂದ ಪ್ರಾಪ್ತವಾಗಬಹುದಾದ ... ತೊಡರುಗಳಿಂದಲೂ ಪ್ರತಿಬಂಧಕವುಂಟಾಗಲಾರದೆಂಬುದೇ ಇದರಲ್ಲಿ ಸು... ಸಲ್ಪಟ್ಟಿರುವ ಮುಖ್ಯ ತತ್ತ್ವ. ಈ ತತ್ತ್ವವು ಸರಯೂ, ಚಂದ್ರನಾಥರೆಂಬ ಪಾತ್ರ... ವರ್ತನೆಯಿಂದ ಚೆನ್ನಾಗಿ ಸ್ಥಿರೀಕರಿಸಲ್ಪಟ್ಟಿದೆ.

ಕಥಾ ಸಂವಿಧಾನವೇನೋ ಸ್ವಾರಸ್ಯವಾಗಿದ್ದರೂ ಮುದ್ರಣ, ಭಾಷಾ... ಮುಂತಾದ ವಿಚಾರಗಳಿಗೆ ಸಾಕಾದಷ್ಟು ಗಮನಕೊಟ್ಟಿಡುವಂತೆ ಕಾಣುವು... ಅಕ್ಷರಸ್ಖಾಲಿತ್ಯಗಳು ಹೇರಳವಾಗಿವೆ. ಪೂರ್ಣವಿರಾಮ ಚಿಹ್ನೆಯನಂತರ ... ವಾಕ್ಯವು ಆರಂಭವಾಗುವಾಗ ಅನೇಕ ಕಡೆ ಸ್ಥಳವೇ ಬಿಟ್ಟಿಲ್ಲ. ಪಂಕ್ತಿ... ಕೊನೆಯಲ್ಲಿ ಬರುವ ಪದಗಳನ್ನು ಬಿಡಿಸಿ ಅಚ್ಚುಹಾಕುವಲ್ಲಿ ಓದಿದರೆ ... ವಾಗಿ ತೋರುವಂತೆ ಮುರಿದಿರುವುದು ಕಾಣಬರುತ್ತದೆ. ವ್ಯಾಕರಣ ದೋಷ...

ಹೇಳಲಾಗಿವೆ. ಗ್ರಂಥಕರ್ತರೂ, ಸಂಪಾದಕ ಮಂಡಲಿಯವರೂ ಈ ರೀತಿಯ ದೋಷಗಳು ಬೀಳದಂತೆ ಎಚ್ಚರವಹಿಸಿದುದೇ ಆದರೆ ಇಂತಹ ಗ್ರಂಥಗಳ ಪ್ರಯೋಜನವು ಇಮ್ಮಡಿಯಾಗುವುದರಲ್ಲಿ ಸಂದೇಹವಿಲ್ಲ.

ಡಿ. ಸಿ. ಸು.

---

೧೦. **ಹಳ್ಳಿಯ ಸಮಾಜ** (ದಿವಂಗತ ಡಾಕ್ಟರ್ ಶರಚ್ಚಂದ್ರ ಚಟರ್ಜಿಯವರ ಕಾದಂಬರಿ).—ಅನುವಾದಕರು: ಶ್ರೀಮಾನ್ ಆರ್. ವ್ಯಾಸರಾಯರು; ಪ್ರಕಾಶಕರು: ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ; ಕ್ರೌನ್ ಅಷ್ಟಪತ್ರ ಪುಟ ೧೭೬; ಕ್ರಯ: ೧೪ ಆಣೆ.

ಕನ್ನಡ ಗ್ರಂಥ ಪ್ರಕಟನೆಗೆ ಸಹಾಯಮಾಡಬೇಕೆಂಬ ಉದ್ದೇಶದೊಡನೆ ಧಾರವಾಡ ಪ್ರಾಂತದಲ್ಲಿ ಸ್ಥಾಪಿತವಾಗಿರುವ ಸಂಸ್ಥೆಗಳ ಪೈಕಿ 'ಮನೋಹರ ಗ್ರಂಥ ಪ್ರಕಾಶನ ಸಮಿತಿ'ಯೂ ಒಂದಾಗಿದೆ. ಈ ಸಂಸ್ಥೆಯ ಪ್ರೋತ್ಸಾಹದಿಂದ ಈಗಾಗಲೇ ೨೨ ಪುಸ್ತಕಗಳು ಪ್ರಕಟವಾಗಿವೆ.

ಪ್ರಸಕ್ತ ಕೃತಿಯು ಮೇಲ್ಕಂಡ ಪ್ರಕಟನಾಲಯದಿಂದ ಹೊರಬಿದ್ದ ಕೃತಿಗಳಲ್ಲೊಂದಾಗಿದೆ. ಇದೂ ಸಹ ಶರಚ್ಚಂದ್ರ ಚಟರ್ಜಿಯವರ "ಪಲ್ಲಿ ಸಮಾಜ" ಎಂಬುದರ ಅನುವಾದ. ಇದರಲ್ಲಿ ಗ್ರಾಮಜೀವನದ ಚಿತ್ರವು ಇದ್ದದ್ದು ಇದ್ದಂತೆಯೇ ಸ್ವಾಭಾವಿಕವಾಗಿ ಚಿತ್ರಿತವಾಗಿದೆ. ಎಲ್ಲ ಗ್ರಾಮಗಳಲ್ಲಿಯೂ ಒಬ್ಬರ ಪಜ್ಜಿತ್ತ ಇನ್ನೊಬ್ಬರಿಗೆ ಆಗದು. ಒಬ್ಬರ ಜೊತೆಯಲ್ಲಿ ಇನ್ನೊಬ್ಬರಿಗೆ ಮಾತಿಲ್ಲ. ಯಾವಾಗಲೂ ಜಗಳ–ಕದನ; ಕೋರ್ಟು–ಕಚೇರಿ, ಮೊಕದ್ದಮೆ, ಸುಳ್ಳುಸಾಕ್ಷಿ ಹೇಳುವುದು—ಇವುಗಳೇ ದಿನಚರಿಯ ಕಾರ್ಯಕಲಾಪಗಳು. ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹವಿಲ್ಲ. ಊರೊಟ್ಟಿನ ಕೆಲಸಕಾರ್ಯಗಳಿಗೂ ಹಾಗೆಯೇ. ಬಡವರ ಸಂಖ್ಯೆಯೇ ಹೆಚ್ಚು. ಸಾಲಗಾರರಾಗಿ ತೊಂದರೆಗೆ ಸಿಕ್ಕಿ ನರಳುವರು—ಇವೇ ಮುಂತಾದ ದೃಶ್ಯಗಳು ಚೆನ್ನಾಗಿ ಚಿತ್ರಿತವಾಗಿವೆ.

ಪುಸ್ತಕದ ಮುದ್ರಣವು ಅಂದವಾಗಿದೆ. ಅಶ್ಲೀಲವಾದ ಕೆಲವು ಮಾತುಗಳು ಅಲ್ಲಲ್ಲಿ ಪ್ರಯೋಗವಾಗಿರುವುದನ್ನು ಬಿಟ್ಟರೆ ಭಾಷಾ ಶೈಲಿಯು ನಿರಾಕ್ಷೇಪಕರವಾಗಿದೆ ಎಂತಲೇ ಹೇಳಬಹುದು. 'ಮನೋಹರ ಗ್ರಂಥ ಪ್ರಕಾಶನ ಸಮಿತಿ'ಯವರು ಇಂತಹ ಉಪಯುಕ್ತ ಗ್ರಂಥಗಳನ್ನು ಹೆಚ್ಚು ಹೆಚ್ಚಾಗಿ ಪ್ರಕಟಿಸುತ್ತಾ ಬಂದು ಕನ್ನಡ ಸಾಹಿತ್ಯದ ಬೆಳೆವಣಿಗೆಗೆ ಸಹಾಯಕರಾಗುತ್ತಾ ಬರಬೇಕೆಂಬುದೇ ನಮ್ಮ ಆಶಯ.

ಡಿ. ಸಿ. ಸು.

---

೧೧. ಪ್ರಭುವರ್ಯರ ಯೂರೋಪ್ ಪ್ರವಾಸ.—(ಶ್ರೀಮಾನ್ ಶ್ರೀಕಂಠಯ್ಯನವರ ಮುನ್ನುಡಿಯೊಡನೆ) ಲೇಖಕರು : ಶ್ರೀಮಾನ್ ಆರ್. ಎಸ್. ... ರಾಯರು, ಬೆಂಗಳೂರು ನಗರ; ಕ್ರೌನ್ ಅಷ್ಟಪತ್ರ ಪುಟ i-viii, ೩೦ ; ... ಮುದ್ರಣಕಾರರು : ಬೆಂಗಳೂರು ಪ್ರೆಸ್, ಬೆಂಗಳೂರು ಸಿಟಿ.

ದೇಶೀಯ ಸಂಸ್ಥಾನದ ರಾಜರು ಪಾಶ್ಚಾತ್ಯ ದೇಶದ ಪ್ರವಾ... ಕೈಗೊಳ್ಳುವುದೆಂದರೆ ಸಾಮಾನ್ಯವಾಗಿ ಭೋಗಾಭಿಲಾಷೆಯಿಂದಲೇ ಹೊರತು ... ಕ್ಷೇಮಕ್ಕಲ್ಲ; ಈ ಉದ್ದೇಶ ಸಾಧನೆಗಾಗಿ ಅವರು ತಮ್ಮ ಸಂಸ್ಥಾನದ ಬೊಕ್ಕ... ಬೇಕಾದಷ್ಟು ಹಣವನ್ನು ದುರ್ವಿನಿಯೋಗಮಾಡುವರು—ಎಂಬ ಪ್ರತೀ... ಜನಜನಿತವಾಗಿರುವುದು. ಆದರೆ ಇಂತಹ ಪ್ರತೀತಿಯು ಮೈಸೂರು ಸಂ... ಆದರ್ಶ ಪ್ರಭುವರ್ಯರಾದ ಶ್ರೀಮನ್ಮಹಾರಾಜ ಕೃಷ್ಣರಾಜ ಒಡೆಯರವರ ಪ್ರ... ವಿಚಾರವಾಗಿ ಸರ್ವಥಾ ಅನ್ವಯಿಸಲಾರದು.

ಆಳುವ ಮಹಾಸ್ವಾಮಿಯವರು ಕಳೆದ ವರ್ಷ ಯೂರೋಪಿನ ಪ್ರವಾ... ಕೈಗೊಂಡುದು ದೀರ್ಘಕಾಲ ಅವಿಶ್ರಾಂತವಾಗಿ ರಾಜ್ಯಭಾರಮಾಡಿ ಸ್ವಲ್ಪ... ಕಾಲ ವಿಶ್ರಾಂತಿಯನ್ನು ಪಡೆದು ತನ್ಮೂಲಕ ದೇಹಾರೋಗ್ಯವನ್ನು ವೃದ್ಧಿ... ಕೊಳ್ಳುವ ಉದ್ದೇಶದಿಂದ ಮಾತ್ರವೇ ಆಗಿದ್ದರೂ, ಅವರು ಇಂತಹ ಸುಸಂ... ಆಧುನಿಕ ಪ್ರಪಂಚದ ಪ್ರಗತಿ ಮನೋಭಾವವು ಪಾಶ್ಚಾತ್ಯ ಪ್ರಪಂಚದಲ್ಲಿ ಮ... ಮುಂದುವರಿಯುತ್ತಿರುವುದೆಂಬ ವಿಚಾರವಾದ ವಿವರಗಳನ್ನು ಸ್ವತಃ ... ಮಾಡಿಕೊಂಡು ತನ್ಮೂಲಕ ತಮ್ಮ ಪ್ರಜೆಗಳಿಗೆ ಹೆಚ್ಚು ಸೌಕರ್ಯಗಳನ್ನು ... ಕೊಡುವ ಕಾರ್ಯಭಾರಕ್ಕೆ ನೆರವಾಗುವಂತೆ ಉಪಯೋಗಪಡಿಸಿಕೊಂಡರು ... ಯಾವ ಅನುಮಾನವೂ ಇರಲಾರದು.

ಪ್ರಭುವರ್ಯರವರ ಪ್ರವಾಸವು (ಪ್ರಯಾಣ ಕಾಲವೂ ಸೇರಿ) ... ವರ್ಷದ ಜೂನ್ ೨೨ರಿಂದ ಅಕ್ಟೋಬರ್ ೨ರ ವರೆಗೆ ಸುಮಾರು ಮೂರು ... ಮಾತ್ರವೇ ಆಗಿದ್ದರೂ ಇಷ್ಟು ಅಲ್ಪಕಾಲದಲ್ಲಿಯೇ ಅವರು ಪ್ರೇಕ್ಷಣೀಯ ... ಸ್ಥಳಗಳನ್ನೆಲ್ಲಾ ಪರಾಮರ್ಶಿಸಿದುದು ಮಾತ್ರವೇ ಅಲ್ಲದೆ, ಅಲ್ಲಿನ ಪ್ರಜಾವರ್ಗದ ... ಪ್ರಮುಖರಾದ ಶ್ರೀಮಂತವರ್ಗದಿಂದಲೂ ಅಭೂತಪೂರ್ವವಾದ ಸ್ವಾಗತ ... ಗಳನ್ನು ಪಡೆದು ಮೈಸೂರು ಸಂಸ್ಥಾನದ ಕೀರ್ತಿಯನ್ನು ಆ ಪ್ರಾಂತ್ಯಗಳ ... ಶಾಶ್ವತಗೊಳಿಸಿದರು.

ಅಲ್ಲದೆ ಪಾಶ್ಚಾತ್ಯ ಪ್ರಪಂಚದ ಚಟುವಟಿಕೆಯ ಜೀವನದಲ್ಲಿ ... ಪ್ರವಾಹದಲ್ಲಿ ತಮ್ಮ ಜೀವನದ ದಿನಚರಿಯನ್ನು ವಿಶೇಷವಾಗಿ ... ಸತ್ಸಂಪ್ರದಾಯವನ್ನು ರಕ್ಷಿಸಿಕೊಂಡು ಎಲ್ಲ ಜನರ ಪ್ರೀತಿಗೌರವಗಳಿಗೆ ... ಕೊಂಡರು. ಪ್ರಭುವರ್ಯರ ಈ ಪ್ರವಾಸದಿಂದ ಅವರ ಆರೋಗ್ಯಲಾಭವು ... ಯಾದುದು ಮಾತ್ರವೇ ಅಲ್ಲದೆ ಸಂಸ್ಥಾನವು ಇತೋಪ್ಯತಿಶಯವಾಗಿ ವೃದ್ಧಿ... ವುದಕ್ಕೂ ಸಹಕಾರಿಯಾಯಿತು.

ಮೇಲೆ ಸೂಚಿಸಿದ ಅಂಶಗಳೆಲ್ಲವೂ ಈ ಸಣ್ಣ ಪುಸ್ತಕದಲ್ಲಿ ಗಂಭೀರವಾದ ಶೈಲಿಯಲ್ಲಿ ಚಿತ್ರಿತವಾಗಿವೆ. ಬೆಂಗಳೂರು ಪ್ರೆಸ್ಸಿನವರ ಮುದ್ರಣವು ಅಂದವಾಗಿದೆ. ಭಾವಚಿತ್ರಗಳು ಪುಸ್ತಕದ ಪ್ರಯೋಜನವನ್ನು ಇಮ್ಮಡಿಗೊಳಿಸಿವೆ. ಪ್ರವಾಸವು ಪೂರೈಸಿದ ತರುಣದಲ್ಲಿಯೇ ಈ ಪುಸ್ತಕವು ಪ್ರಕಟಿತವಾಗಿದ್ದರೆ ಚೆನ್ನಾಗಿತ್ತು. ಪುಸ್ತಕದ ಹೆಸರು "ಮೈಸೂರು ಪ್ರಭುವರ್ಯರ ಯೂರೋಪ್ ಪ್ರವಾಸ" ಎಂದಿರಬೇಕಾಗಿತ್ತು. ಡಿ. ಸಿ. ಸು.

---

೧೨. **ಮಾಕಂದ** (ಕವನಗಳ ಸಂಗ್ರಹ).—ಸಂಪಾದಕರು: ಶ್ರೀ॥ ಆನಂದಮಿತ್ರ ಅವರು, ಬೆಂಗಳೂರು; ಕ್ರೌನ್ ಅ. ಪ. ಪು. ೧೬; ಬೆಲೆ: ೨ ಆಣೆ.

ಈ ಸಂಗ್ರಹದಲ್ಲಿ ಒಟ್ಟು ೧೦ ಕವನಗಳಿವೆ. ಇವುಗಳ ಪೈಕಿ "ರಾಜಾನಂದನ" ಎಂಬವರು ೬ ಕವನಗಳನ್ನೂ, "ಆನಂದಮಿತ್ರ" ಮತ್ತು "ಪದ್ಮನಾಭ" ಎಂಬವರು ಎರಡೆರಡು ಕವನಗಳನ್ನೂ ರಚಿಸಿರುತ್ತಾರೆ. ಹೆಸರು ಮರಸಿಕೊಂಡಿರುವ ಈ ಲೇಖಕರು "ಇನ್ನೂ ಬಾಲಕರು; ೧೫–೧೬ ವರ್ಷ ವಯಸ್ಸಿನವರು" ಎಂದು ಗ್ರಂಥದ ಮುನ್ನುಡಿಯಿಂದ ಗೊತ್ತಾಗುತ್ತದೆ. ಇಷ್ಟು ಸಣ್ಣವಯಸ್ಸಿನ ಬಾಲಕರು ಬರೆದ ಕವನಗಳನ್ನು ವಿಮರ್ಶೆಯ ಕುಲುಮೆಗೆ ಹಾಕುವುದು ಕ್ರೂರತನವಾದೀತು. ಕನ್ನಡದ ಮೇಲ್ಮೆಯಲ್ಲಿ ಅವರಿಗಿರುವ ಉತ್ಸಾಹ ಶ್ರದ್ಧೆಗಳು ಹಲವು ಕವನಗಳಲ್ಲಿ ರೂಪುಗೊಂಡಿವೆ. ಪದ್ಯರಚನೆಯಲ್ಲಿ ವಯಸ್ಸಿಗೆ ಮೀರಿದ ಸಾಮರ್ಥ್ಯ ಕಂಡು ಬರುತ್ತದೆ. ಈ ತರುಣ ಲೇಖಕರ ಅನುಭವ ಸಂಪತ್ತಿ ಬೆಳೆದು, ಇವರಿಗೆ ಕಾವ್ಯದೇವಿ ಸಂಪೂರ್ಣವಾಗಿ ಒಲಿಯಲೆಂದು ಮನಃಪೂರ್ವಕವಾಗಿ ಹಾರೈಸುತ್ತೇವೆ.

ಎಂ. ವಿ. ಸೀ.

---

೧೩. **ತರುಣ–ಥಮನಿ** (ಕಾವ್ಯ ಖಂಡ).—ಲೇಖಕರು: ಶ್ರೀ॥ "ಚಕ್ರಪಾಣಿ"; ಪ್ರಕಾಶಕರು: ಸಾಹಿತ್ಯ ಸಂಘ, ಮಂಗಳೂರು; ಕ್ರೌನ್ ಅ. ಪ. ಪು. ೧೮; ಬೆಲೆ: ೪ ಆಣೆ.

"ಹುಲಿ ಬೇಟೆಗೆ ಹಯವೇರಿದ ವಿದ್ಯಾನಗರದ ರಾಮದೊರೆ" ಕಾಡಿನಲ್ಲಿ ಹುಲಿಯ ಹಿಡಿತಕ್ಕೆ ಸಿಕ್ಕುಬಿದ್ದ ಮಿಹಿರೆ ಎಂಬ ಮುಸಲ್ಮಾನ ತರುಣಿಯನ್ನು ಕಾಪಾಡಿ, ಅವಳನ್ನು ಮೋಹಿಸಿ, ಕುಲಭೇದವನ್ನು ತೊರೆದು, ಅವಳನ್ನು ವರಿಸಿದ ನಲ್ಮೆಯ ಕಥೆಯಿದು. ದೊಡ್ಡದೊಂದು ಐತಿಹಾಸಿಕ ಕಾವ್ಯವನ್ನು ಬರೆಯಬೇಕೆಂದು ಮೊದಲು ಉದ್ದೇಶಿಸಿ, ಪ್ರಾರಂಭಮಾಡಿ, ಕಥಾಸ್ವರೂಪಕ್ಕೆ ಐತಿಹಾಸಿಕ ಆಧಾರ ಸಾಲದೆಂದು ತಿಳಿದುಬಂದದ್ದರಿಂದ ಇದು 'ಕಾವ್ಯದ ಖಂಡ'ವಾಯಿತೆಂದು ಲೇಖಕರು ಸಂಕೋಚದಿಂದ 'ಪ್ರಸ್ತಾವ'ದಲ್ಲಿ ತಿಳಿಸುತ್ತಾರೆ. ಹಾಗೆ ಸಂಕೋಚಪಟ್ಟುಕೊಳ್ಳಲು ಕಾರಣವಿಲ್ಲವೆಂದು ನಮಗೆ ತೋರುತ್ತದೆ. ಏಕೆಂದರೆ, ಐತಿಹಾಸಿಕ ಯಥಾರ್ಥತೆ ಏನೇ ಇರಲಿ, ಈ ನಲ್ಮೆಯ ಕಥೆ ಚೆನ್ನಾಗಿ ರೂಪುಗೊಂಡಿದೆ, ಅಖಂಡವಾಗಿದೆ. ಕಥನ ಕವನ ಶೈಲಿ ಲೇಖಕರ ಕೈಯಲ್ಲಿ ಸರಾಗವಾಗಿ ಓಡುತ್ತದೆ. ಅಲ್ಲಲ್ಲಿ

ಬರುವ ಉಪಮಾನ ವಾಕ್ಯಗಳು ಮನೋಜ್ಞವಾಗಿವೆ. ಇನ್ನೂ ಉತ್ತಮ ಕಥೆಗಳನ್ನು ಶ್ರೀ॥ 'ಚಕ್ರಪಾಣಿ' ಯವರು ರಚಿಸಬಲ್ಲರು ಎಂಬ ಆಸೆಯನ್ನು 'ಧಮನಿ' ಹುಟ್ಟಿಸುತ್ತದೆ.

ಎಂ. ವಿ. ...

---

## ೧೯೩೭ನೆಯ ಏಪ್ರಿಲ್ ಮೊದಲಿನಿಂದ ಜೂನ್ ಕಡೆಯವ...

### (i) ಪರಿಷತ್ಪತ್ರಿಕೆಯಲ್ಲಿ ವಿಮರ್ಶೆಗಾಗಿ ಬಂದಿರುವ ಗ್ರಂಥಗಳು

೧. ಚಂದ್ರನಾಥ.—ಶ್ರೀ॥ ಗುರುನಾಥ ಜೋಶಿ ಅವರು, ೨. ... ಸಮಾಜ.—ಶ್ರೀ॥ ಆರ್. ವ್ಯಾಸರಾಯರು, ೩. ಉಗಾದಿ ಉಡುಗೊ... ಲೇಖಕರು) ಸಂಪಾದಕರು: ಶ್ರೀಮತಿ ಆರ್. ಕಲ್ಯಾಣಮ್ಮನವರು, ೪. ... (ಕವನ ಸಂಗ್ರಹ).—"ವಿನಾಯಕ" ಅವರು, ೫. ಸಾಹಿತ್ಯ ಮತ್ತು ... ಶ್ರೀ॥ ದ. ರಾ. ಬೇಂದ್ರೆ, ಎಂ.ಎ. ಅವರು, ೬. ಹಿಂದಿ ಹುಡುಗರ ಬುದ್ಧಿ... ಶ್ರೀ॥ ವೆಂಕಟರಾವ್ ವಿಠ್ಠಲ್ ಕಾಮತ್ ಅವರು, ೭. ಗ್ರಾಮೋದ್ಯೋಗ ... ಶ್ರೀ॥ ಪಾಟೀಲ ಕಲ್ಲನಗೌಡರು, ಬಿ.ಎ., ೮. ನಡುಮನೆಯಲ್ಲಿ.—ಶ್ರೀ॥ ... ಕುಲಕರ್ಣಿಯವರು, ಬಿ.ಎ., ೯. ಕನ್ನಡ ಕೈಪಿಡಿ.—ಮೈಸೂರು ವಿಶ್ವವಿದ್ಯಾನಿ...

### (ii) ಪರಿಷತ್ತಿನ ಪುಸ್ತಕ ಭಂಡಾರಕ್ಕೆ ಬಂದಿರುವ ಇತರ ಪುಸ್ತಕ ಪ್ರಕಟನೆಗಳು

೧. The Mandukyopanishad.—Swami Sri Nikhilananda, ೨. ... ಆಚೆ.—ವಿದ್ಯಾರಣ್ಯ ಗ್ರಂಥಮಾಲೆಯ ಪ್ರಕಾಶಕರಿಂದ, ೩. South Indian Ins... tions, ಮದರಾಸು ಪ್ರಾಚ್ಯ ಸಂಶೋಧನೆಯ ಇಲಾಖೆಯಿಂದ. ೪. ... ಉಡುಗೊರೆ.—ಸಂಪಾದಕರು: ಶ್ರೀಮತಿ ಆರ್. ಕಲ್ಯಾಣಮ್ಮನವರಿಂದ, ೫. ಕ... ಸಾಹಿತ್ಯ ಸಮ್ಮೇಳನದಲ್ಲಿ ಮಲ್ಲೇಶ್ವರದ ಕರ್ಣಾಟಕ ಕವಿ ಮಂಡಲಿಯ ಸದಸ್ಯ... ಕಾಣಿಕೆ, ೬–೭. Modern Mysore (2 Vols.)—Rajakaryaprasakta Ra... M. Shama Rao, M.A., ೮. ಬುದ್ಧದೇವ.—ಶ್ರೀ॥ ಸರೋವರ ಶ್ರೀನಿವಾಸ... ೯. ಪವಿತ್ರ ಜೀವನ (ಟಾಲ್‌ಸ್ಟಾಯಿಯವರ ಏಳು ಕಥೆಗಳು).—ಅನುವಾದಕರು: ಸಿಂಪೀ ಲಿಂಗಣ್ಣನವರು, ೧೦. ಪ್ರಾಥಮಿಕ ಶಾಲೆಯ ಭೂಪಟಗಳ ಪುಸ್ತಕ... ಮೈಸೂರು ಲ್ಯಾಂಡ್ ರೆವಿನ್ಯೂ ಕೋಡಿಗೆ ಅನುಸಾರವಾಗಿ ರಚಿಸಿದ ನಿಬಂ... ೧೨. ೧೯೩೮ನೆಯ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಗೊತ್ತಾದ ಪದ್ಯ ಗ್ರಂಥ... ೧೯೩೮ನೆಯ ಮಿಡಲ್ ಸ್ಕೂಲ್ ಮತ್ತು ಲೋವರ್ ಸೆಕೆಂಡರಿ ಪರೀಕ್ಷೆಗಳಿಗೆ ... ಕನ್ನಡ ಗ್ರಂಥಗಳು.—ಮೈಸೂರು ಸರ್ಕಾರದಿಂದ, ೧೪. ಕನ್ನಡ ಕೈಪಿಡಿ (ಸಂ... ಎರಡನೆಯ ಆವೃತ್ತಿ).—ಮೈಸೂರು ವಿಶ್ವವಿದ್ಯಾನಿಲಯದಿಂದ.

---

# ಸಂಪಾದಕೀಯ ಟಿಪ್ಪಣಿಗಳು

ಕಳೆದ ಒಂದು ವರ್ಷದಿಂದೀಚೆಗೆ ಮೂವರು ಪ್ರಸಿದ್ಧ ಸಾಹಿತಿಗಳನ್ನು ಕಳೆದು ಕೊಳ್ಳುವ ದೌರ್ಭಾಗ್ಯವು ಕನ್ನಡಿಗರಿಗೆ ಪ್ರಾಪ್ತವಾದುದು ಅತ್ಯಂತ ಶೋಚನೀಯವಾದ ಸಂಗತಿಯೆಂತಲೇ ಹೇಳಬೇಕು. ೧೯೩೬ನೆಯ ಡಿಸೆಂಬರ್ ತಿಂಗಳ ೬ನೆಯ ತಾರೀಖಿನಲ್ಲಿ ಕರ್ಣಾಟಕ ವಿದ್ವನ್ಮಂಡಲಿಯಲ್ಲಿ ಅಗ್ರಗಣ್ಯರೂ, ಪ್ರಸಿದ್ಧ ಕನ್ನಡ ಲೇಖಕರೂ, ಪರಿಷತ್ತಿನ ಪ್ರತಿಷ್ಠಾಪಕರಲ್ಲಿ ಒಬ್ಬರೂ ಆಗಿದ್ದು ನಾನಾ ವಿಧವಾದ ಭಾಷಾಸೇವೆಯನ್ನು ಮಾಡಿ ಪ್ರಖ್ಯಾತರಾಗಿದ್ದ ಶ್ರೀಮಾನ್ ಆರ್. ನರಸಿಂಹಾಚಾರ್ಯರು ಕಾಲಾಧೀನರಾದುದರಿಂದ ಕನ್ನಡದ ಒಂದು ದೊಡ್ಡ ಕಲಶವು ಬಿದ್ದುಹೋದಂತಾಯಿತು. ಈ ದುರ್ಘಟನೆಯು ಪ್ರಾಪ್ತವಾದ ಅತ್ಯಲ್ಪಕಾಲದೊಳಗಾಗಿಯೇ ಎಂದರೆ ೧೯೩೭ನೆಯ ಜೂನ್ ತಿಂಗಳ ೨೭ನೆಯ ತಾರೀಖಿನಲ್ಲಿ ಪ್ರಾಚೀನ ಕನ್ನಡ ಕಾವ್ಯಗಳನ್ನು ಉದ್ಧರಿಸುವುದೇ ಮೊದಲಾದ ಸಾಹಿತ್ಯ ವಿಚಾರಗಳಲ್ಲಿ ತಮ್ಮ ಜೀವನವನ್ನೇ ಧಾರೆ ಎರೆಯುತ್ತಿದ್ದ ಶ್ರೀಮಾನ್ ಎಂ. ಎ. ರಾಮಾನುಜಯ್ಯಂಗಾರ್ಯರು ಮೃತ್ಯುವಶರಾದುದರಿಂದ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಮತ್ತೊಂದು ಭಾರಿ ನಷ್ಟ ಪ್ರಾಪ್ತಿಯಾಯಿತು. ಈ ಎರಡು ಅಪಾರವಾದ ನಷ್ಟಗಳಿಂದುಂಟಾದ ಪರಿತಾಪವು ಇನ್ನೂ ಆರುವುದಕ್ಕೆ ಮುಂಚೆಯೇ ೧೯೩೭ನೆಯ ಅಕ್ಟೋಬರ್ ತಿಂಗಳ ೨೪ನೆಯ ತಾರೀಖಿನಲ್ಲಿ ಹಿರಿಯ ಕನ್ನಡ ಸಾಹಿತಿಗಳಲ್ಲಿ ಗಣ್ಯಸ್ಥಾನವನ್ನು ಪಡೆದಿದ್ದ ಶ್ರೀಮಾನ್ ಪಂಜೆ ಮಂಗೇಶರಾವ್, ಬಿ.ಎ., ಎಲ್.ಟಿ. ಅವರು ನಮ್ಮ ಕಣ್ಮರೆಯಾಗಿ ನಮ್ಮನ್ನು ದುಃಖ ಸಾಗರದಲ್ಲಿ ಮುಳುಗಿಸಿಬಿಟ್ಟಿದ್ದಾರೆ.

**ಕೀರ್ತಿಶೇಷರಾದ ಶ್ರೀಮಾನ್ ಪಂಜೆ ಮಂಗೇಶರಾಯರು**

ಶ್ರೀಮಾನ್ ಮಂಗೇಶರಾಯರು ಪರಿಷತ್ತಿನ ಆಜೀವ ಸದಸ್ಯರೂ, ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರೂ, ಮಂಗಳೂರಿನ ಪ್ರಸಿದ್ಧ ಕನ್ನಡ ವಿದ್ವನ್ಮಣಿಗಳೂ, ಕನ್ನಡ ನಾಡಿನಲ್ಲೆಲ್ಲಾ ಸನ್ಮಾನ್ಯರೂ ಆಗಿದ್ದರು. ಈಗ ಮೂರು ವರ್ಷಗಳ ಹಿಂದೆ ರಾಯಚೂರಿನಲ್ಲಿ ನಡೆದ ೨೦ನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನವನ್ನಲಂಕರಿಸಿ ಕನ್ನಡ ಭಾಷೋದ್ಧರಣದಲ್ಲಿ ತಮಗಿರುವ ನಿಕಟಪ್ರೇಮವನ್ನು ವ್ಯಕ್ತಪಡಿಸಿದ್ದರು. ಅಲ್ಲದೆ ಕಳೆದ ವರ್ಷದ ಮೇ ತಿಂಗಳಲ್ಲಿ ಬೆಂಗಳೂರು ನಗರದಲ್ಲಿ ನಡೆದ ವಿಶೇಷ ಸಾಹಿತ್ಯೋತ್ಸವದಲ್ಲಿ ಉತ್ಸಾಹಪೂರಿತವಾದ ಭಾಗವನ್ನು ವಹಿಸಿ ಎಲ್ಲರ ಮೆಚ್ಚಿಗೆಗೂ ಪಾತ್ರರಾಗಿದ್ದರು. ಇದೇ ಸಮಯದಲ್ಲಿ ಇಲ್ಲಿಯ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷಪೀಠವನ್ನಲಂಕರಿಸಿ ತಮ್ಮ ಅಮೋಘವಾದ ಭಾಷಣದಿಂದ ವಿದ್ಯಾರ್ಥಿಗಳ ಪ್ರೀತಿಗೌರವಗಳನ್ನು

ಸಂಪಾದಿಸಿದ್ದರು. ಇವರ ಜೀವನ ಚರಿತ್ರೆಯ ವಿಚಾರವಾಗಿ ತಿಳಿಯ... ವಿಚಾರಗಳನ್ನು ಈ ಕೆಳಗೆ ಸಂಗ್ರಹವಾಗಿ ಕೊಟ್ಟಿದೆ.

ಇವರು ಹುಟ್ಟಿದ್ದು ೧೭-೨-೧೮೭೪ರಲ್ಲಿ; ದೈವಾಧೀನರಾದದ್ದು ೧೯... ರಲ್ಲಿ; ಎಂದರೆ ತಮ್ಮ ೬೪ನೆಯ ವಯಸ್ಸಿನಲ್ಲಿ. ಇವರು ಬಿ.ಎ., ಎಲ್... ಗಳನ್ನು ಕೊಟ್ಟಿದ್ದರು. ಇವರು ಬಿ.ಎ. ಪರೀಕ್ಷೆಯಲ್ಲಿ ತೇರ್ಗಡೆಹೊಂದ... ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿ ಸೇವ... ಅನಂತರ ಕೆಲಕಾಲದಮೇಲೆ ವಿದ್ಯಾಶಾಖೆಯ ಇನ್‌ಸ್ಪೆಕ್ಟರಾಗಿ ಆಮೇಲೆ ... ಕಾಲೇಜಿನ ಮುಖ್ಯ ಅಧ್ಯಾಪಕರಾಗಿದ್ದು ಕೆಲಸದಿಂದ ನಿವೃತ್ತರಾಗುವ ... ಮಡಿಕೇರಿ ಹೈ ಸ್ಕೂಲಿನ ಹೆಡ್ಮಾಸ್ಟರಾಗಿದ್ದರು.

ಅಂತು ಇವರು ಶಿಕ್ಷಣಕಾರ್ಯದಲ್ಲಿಯೇ ತಮ್ಮ ಆಯುಷ್ಯದ ಹೆಚ್ಚು... ಕಳೆದರೆಂದು ಹೇಳಬಹುದು. ಮಕ್ಕಳ ಶಿಕ್ಷಣದ ವಿಚಾರದಲ್ಲಿ ಇವರ ... ಆಧುನಿಕ ರೀತಿಯದಾಗಿದ್ದಿತು. ಮಕ್ಕಳಿಗೆ ವಿದ್ಯೆ ಕಲಿಸಬೇಕಾದರೆ ... ಕವನ–ಕುಣಿತ, ಚಿತ್ರ–ಸಂಗೀತ ಇವುಗಳ ಸಹಾಯದಿಂದ ಕಲಿಸುವುದೇ ... ಮಾರ್ಗವೆಂದು ಭಾವಿಸಿ, ಆದರಂತೆ ಇವರು ಕಾರ್ಯತಃ ನಡಸುತ್ತಿದ್ದ... ಇವರು ಇನ್‌ಸ್ಪೆಕ್ಟರ್ ಕೆಲಸದಲ್ಲಿದ್ದಾಗ ಇತರ ಶಿಕ್ಷಕರೂ ಇದೇ ರೀತಿ ... ನೋಡಿಕೊಳ್ಳುತ್ತಿದ್ದರು. ಶಿಶುಹೃದಯವನ್ನು ಚೆನ್ನಾಗಿ ಅರಿತವರಾ... ಶಿಶುಗೀತೆಗಳು ಕನ್ನಡ ಸಾಹಿತ್ಯದಲ್ಲಿ ಮನ್ನಣೆಯ ಸ್ಥಾನವನ್ನು ಪಡೆ... ಇವರ ಭಾವಗೀತೆಗಳು ಲಾಲಿತ್ಯದಿಂದ ಕೂಡಿ ಚಿಕ್ಕಮಕ್ಕಳು ಹಾಡಿ... ಅನುಕೂಲಿಸುವಂತಿರುವುವು. ಸಣ್ಣಮಕ್ಕಳಿಗೆ ಉಪಯೋಗಕರವಾದ ಸಾ... ಪ್ರಚಾರಕ್ಕೆ ತರುವ ಉದ್ದೇಶದೊಡನೆ ಮಂಗಳೂರಿನಲ್ಲಿ 'ಬಾಲ ಸಾಹಿತ್ಯ... ವೆಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದ ಕೀರ್ತಿಯು ಇವರಿಗೆ ಸಲ್ಲತಕ್ಕ...

'ಸತ್ಯದೀಪಿಕೆ' ಎಂಬ ಮಂಗಳೂರಿನ ಮಾಸಪತ್ರಿಕೆಯಲ್ಲಿ ಅನೇಕ ... ಹಿಂದೆಯೇ ಇವರ ಹಲವು ಕವಿತೆಗಳು ಪ್ರಕಟವಾಗಿದ್ದುವು. ಇದೇ ಪತ್ರಿಕೆಯ... ನಾಮದಿಂದ ಇವರು ಬರೆಯುತ್ತಿದ್ದ ನಿತ್ಯನೈಮಿತ್ತಿಕ ವಿಚಾರವಾದ ... ಲಘುಹಾಸ್ಯದಿಂದಲೂ, ಕಟುವಾದ ಟೀಕೆಯಿಂದಲೂ ಕೂಡಿದವು... ಎಲ್ಲರ ಮೆಚ್ಚಿಗೆಗೂ ಪಾತ್ರವಾಗಿದ್ದುವು. ಒಂದು ದೃಷ್ಟಿಯಿಂದ ಇವರನ್ನು ... 'ಸಣ್ಣ ಕತೆಗಳ ಜನಕರು' ಎಂದು ಧಾರಾಳವಾಗಿ ಕರೆಯಬಹುದು. ಇವರ... ಉತ್ಕೃಷ್ಟವಾದ ಸಣ್ಣ ಕತೆಗಳು ಈಗ್ಗೆ ಸುಮಾರು ನಾಲ್ವತ್ತು ವರ್ಷಗಳ ... ಮಂಗಳೂರಿನ 'ಸುವಾಸಿನಿ' ಎಂಬ ಮಾಸಪತ್ರಿಕೆಯಲ್ಲಿ ಪ್ರಕಟವಾಗಿ ... ಬಂದಿದ್ದುವು.

ಶಿಶು ಸಾಹಿತ್ಯ, ಸಣ್ಣ ಕತೆ, ಲಘುಹಾಸ್ಯ—ಇವುಗಳಲ್ಲಿ ... ಅಲ್ಲದೆ ಸಾಹಿತ್ಯ ಸಂಶೋಧನ ವಿಚಾರವಾಗಿಯೂ, ಪ್ರೌಢ ಸಾಹಿತ್ಯ... ವಾಗಿಯೂ ಸಹ ಇವರಿಗೆ ವಿಶೇಷ ಆದರವೂ, ನೈಪುಣ್ಯವೂ ಇದ್ದುವ...

ಸಾಹಿತ್ಯದಲ್ಲಿ ಇವರಿಗಿದ್ದ ಅನುಭವವನ್ನು ಉಪಯೋಗಪಡಿಸಿಕೊಳ್ಳುವ ಉದ್ದೇಶ ದೊಡನೆ ಮೈಸೂರು ವಿಶ್ವವಿದ್ಯಾನಿಲಯದವರು ತಮ್ಮ ಆಶ್ರಯದಲ್ಲಿ ಪ್ರಕಟವಾಗುವ ಗ್ರಂಥಮಾಲೆಗಾಗಿ 'ಕುಮಾರವ್ಯಾಸ ಭಾರತ'ವನ್ನು ಸಂಗ್ರಹಿಸಿ ವಿಮರ್ಶಾತ್ಮಕವಾದ ಮುನ್ನುಡಿಯನ್ನು ಬರೆದುಕೊಡುವ ಕಾರ್ಯವನ್ನು ಕೆಲವು ಕಾಲದ ಹಿಂದೆ ಇವರಿಗೆ ವಹಿಸಿದ್ದರು. ಇವರ ಜೀವಿತಕಾಲದಲ್ಲಿಯೇ ಈ ಗ್ರಂಥವು ಪ್ರಕಟವಾಗದೆಹೋದರೂ ಇದು ಇವರ ಕೊನೆಯ ಕನ್ನಡದ ಸೇವೆಯ ಕುರುಹಾಗಿ ಉಳಿಯುವುದೆಂದು ಹೇಳಬಹುದು. ಇಷ್ಟೇ ಅಲ್ಲದೆ ಮೈಸೂರು ವಿಶ್ವವಿದ್ಯಾನಿಲಯದವರ ಆಶ್ರಯದಲ್ಲಿ ತಯಾರಾಗುತ್ತಿರುವ ಇಂಗ್ಲಿಷ್-ಕನ್ನಡ ನಿಘಂಟುವಿನ ರಚನೆಯಲ್ಲಿ ಮಂಗಳೂರು ಪ್ರಾಂತದವರ ಪರವಾಗಿ ಸಲಹೆಗಳನ್ನು ಕೊಡುವುದಕ್ಕಾಗಿ ಈ ಭಾಗದಲ್ಲಿ ವಿಶೇಷ ಅನುಭವವನ್ನು ಪಡೆದಿದ್ದ ಇವರನ್ನು ನೇಮಿಸಿಕೊಳ್ಳಬೇಕೆಂಬ ಸಲಹೆಯು ಮೈಸೂರು ಸರಕಾರದವರ ಪರ್ಯಾಲೋಚನೆಯಲ್ಲಿತ್ತು. ಆದರೆ ಇದು ಕಾರ್ಯ ಕಾರಿಯಾಗುವುದಕ್ಕೆ ಮುಂಚೆಯೇ ಇವರು ಕಾಲಾಧೀನರಾದ ಪ್ರಯುಕ್ತ ಇಂತಹ ಅನುಭವಸ್ಥರ ಸಹಾಯವು ನಿಘಂಟಿನ ರಚನೆಗೆ ದೊರೆಯದೆಹೋದಂತಾಯಿತು.

ಶ್ರೀಮಾನ್ ಮಂಗೇಶರಾಯರು ಕೆಲವು ದಿವಸಗಳು ಮಾತ್ರವೇ ವ್ಯಾಧಿಗ್ರಸ್ತ ರಾಗಿದ್ದು ಹೈದರಾಬಾದಿನಲ್ಲಿ ತಮ್ಮ ಮಕ್ಕಳ ಮನೆಯಲ್ಲಿ ಇಹಲೋಕವ್ಯಾಪಾರ ವನ್ನು ತ್ಯಜಿಸಿದರು. ಇವರು ತಮ್ಮ ಮರಣಕಾಲದಲ್ಲಿ ತಮ್ಮ ಬಂಧುಮಿತ್ರರನ್ನು ಮಾತ್ರವೇ ಅಲ್ಲದೆ ಕನ್ನಡ ತಾಯಿಯನ್ನೂ, ಪರಿಷತ್ತನ್ನೂ ಸ್ಮರಿಸಿಕೊಂಡರಂತೆ. ಇವರ ಕಡೆಯ ಕೋರಿಕೆಯ ಗುರುತಾಗಿ ಇವರ ಪರವಾಗಿ ಇವರ ಮಕ್ಕಳು ಪರಿಷತ್ತಿಗೆ ಐವತ್ತು ರೂಪಾಯಿಗಳನ್ನು ಕಳುಹಿಸಿಕೊಟ್ಟರು. ಅನ್ಯಾದೃಶವಾದ ಇವರ ಭಾಷಾ ಪ್ರೇಮಕ್ಕೆ ಇದಕ್ಕಿಂತಲೂ ಹೆಚ್ಚಿನ ನಿದರ್ಶನವಿನ್ನೇಕೆ?

ಇಂತಹ ಪ್ರಸಿದ್ಧ ಸಾಹಿತಿಗಳ ವಿಯೋಗದಿಂದುಂಟಾದ ದುಃಖವನ್ನು ಪ್ರದರ್ಶಿಸುವ ಉದ್ದೇಶದೊಡನೆ ಪರಿಷನ್ಮಂದಿರದಲ್ಲಿ ೫-೧೧-೧೯೩೭ರಲ್ಲಿ ಒಂದು ಸಂತಾಪ ಸೂಚಕ ಸಭೆಯು ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆ ಯಲ್ಲಿ ಸೇರಿತ್ತು. ಆ ಸಭೆಯಲ್ಲಿ ದಿವಂಗತರ ಬಂಧುವರ್ಗಕ್ಕೆ ಸೇರಿದ ಶ್ರೀ॥ ಗಳಾದ ಬೆನಗಲ್ ರಾಮರಾಯರೂ, ಎ. ವಿ. ಶಂಕರರಾಯರೂ ಮತ್ತು ಮಿತ್ರವರ್ಗಕ್ಕೆ ಸೇರಿದ ಶ್ರೀ॥ ಗಳಾದ ಮಾಸ್ತಿ ವೆಂಕಟೇಶಯ್ಯಂಗಾರ್ಯರೂ, ಧಾರವಾಡದ ದ. ರಾ. ಬೇಂದ್ರೆಯವರೂ, ಎ. ಸೀತಾರಾಮಯ್ಯನವರೂ ದಿವಂಗತರ ಜೀವನ ಚರಿತ್ರೆಯ ಪರಿಚಯವನ್ನು ಸಭೆಗೆ ಮಾಡಿಕೊಟ್ಟು ಅವರ ಜೀವಿತದ ಔನ್ನತ್ಯವನ್ನೂ, ಸರಳತೆ ಯನ್ನೂ, ಅವರು ಕನ್ನಡ ನಾಡಿಗೆ ಮಾಡಿರುವ ಉಪಕಾರವನ್ನೂ ಸ್ಮರಿಸಿ ಅವರಲ್ಲಿ ತಮಗಿರುವ ಗೌರವವನ್ನು ವ್ಯಕ್ತಪಡಿಸಿದರು. ಇದೇ ಸಮಯದಲ್ಲಿ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಿಂದ ಪರಿಷತ್ತಿಗೆ ದಾನವಾಗಿ ಕೊಡಲ್ಪಟ್ಟ ದಿವಂಗತರ ಭಾವಚಿತ್ರವನ್ನು ಅನಾವರಣ ಮಾಡಿದುದಲ್ಲದೆ ಸಭೆಯಿಂದ ಅಂಗೀಕೃತವಾದ ಸಂತಾಪ ಸೂಚಕ ನಿರ್ಣಯವನ್ನು ಅವರ ಮಕ್ಕಳಿಗೆ ಕಳುಹಿಸಲಾಯಿತು.

ಇದೇ ರೀತಿಯಾದ ಸಂತಾಪ ಸೂಚಕ ಸಭೆಗಳು ಮೈಸೂರು ಪ್ರಾಂತ ಮಾತ್ರವೇ ಅಲ್ಲದೆ ಇಡೀ ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿ ನಡೆದು ವಾರ್ತಾಪತ್ರಿಕೆಗಳಲ್ಲಿ ಪ್ರಕಟಿತವಾಗಿರುವುದನ್ನು ನೋಡಿದರೆ ಇವರು ಕರ್ಣಾಟಕ ಸಾಹಿತ್ಯ ಪ್ರಪಂಚದಲ್ಲಿ ಎಂತಹ ಗೌರವನೀಯವಾದ ಸ್ಥಾನವನ್ನು ಸಂಪಾದಿಸಿದ್ದರೆಂದು ವ್ಯಕ್ತವಾಗುವುದಲ್ಲದೆ ಇವರ ಕೀರ್ತಿಯು ಎಷ್ಟು ಸ್ಥಿರವಾಗಿ ನೆಲಸಿರುವುದೆಂದು ವಿಶದವಾಗುವುದು. ಸುಪ್ರಸಿದ್ಧರಾದ ಇಂತಹ ಮಹನೀಯರನ್ನು ಆದರ್ಶವಾಗಿಟ್ಟುಕೊಂಡು ಅವರಂತೆಯೇ ಕನ್ನಡದ ಮೇಲ್ಮೆಗಾಗಿ ದುಡಿಯುವುದು ಎಲ್ಲ ಕನ್ನಡಿಗರ ಮುಖ್ಯ ಕರ್ತವ್ಯವಾಗಿರುವುದೆಂದು ನಾವು ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ.

ಈ ಪತ್ರಿಕೆಯು ಕಳೆದ ಸಂಚಿಕೆಯಲ್ಲಿ ಸೂಚಿಸಿದ್ದಂತೆ ೨೧ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ೧೯೩೭ನೆಯ ಇಸವಿ ಡಿಸೆಂಬರ್ ತಿಂಗಳ ಕಡೆಯ ವಾರದಲ್ಲಿ ಜಮಖಂಡಿಯಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಈ ಸಂಬಂಧದಲ್ಲಿ ಪ್ರತಿ ದಿನವೂ ನಡೆದ ಕಾರ್ಯಕಲಾಪಗಳ ವಿವರವನ್ನೊಳಗೊಂಡ ವರದಿಯು ಈ ಪತ್ರಿಕೆಯ ಮುಂದಿನ ಸಂಚಿಕೆಯಲ್ಲಿ ಕ್ಷಿಪ್ರದಲ್ಲಿಯೇ ಪ್ರಕಟವಾಗುವುದು. ತತ್ಪ್ರಯುಕ್ತ ಮುಖ್ಯವಾದ ನಡೆವಳಿಕೆಗಳ ಸ್ಥೂಲಪರಿಚಯವನ್ನು ಮಾತ್ರ ಇಲ್ಲಿ ವಾಚಕರಿಗೆ ಮಾಡಿಕೊಡಲಪೇಕ್ಷಿಸುತ್ತೇವೆ.

**ಜಮಖಂಡಿಯ ಸಮ್ಮೇಳನ**

ಒಟ್ಟಿನಲ್ಲಿ ಈ ಸಮ್ಮೇಳನವು ಹಲವು ಬಗೆಯ ವೈಶಿಷ್ಟ್ಯಗಳಿಂದ ಕೂಡಿತ್ತೆಂದು ಧಾರಾಳವಾಗಿ ಹೇಳಬಹುದು. ಇಂತಹ ವೈಶಿಷ್ಟ್ಯಗಳಲ್ಲಿ ಮೊದಲನೆಯದು ಸ್ಥಳಮಾಹಾತ್ಮ್ಯ. ಜಮಖಂಡಿಯು ಕನ್ನಡ ನಾಡಾದರೂ ಮರಾಠಿಯು ಮಾತೃಭಾಷೆಯಾಗುಳ್ಳ ಶ್ರೀಮಂತ ರಾಜಾಸಾಹೇಬರ ಆಧಿಪತ್ಯಕ್ಕೊಳಪಟ್ಟ ಸಂಸ್ಥಾನ. ಇಂತಹ ಪ್ರಾಂತದಲ್ಲಿ ಕನ್ನಡಕ್ಕೆ ಎಷ್ಟುಮಟ್ಟಿನ ಪ್ರೋತ್ಸಾಹ ದೊರೆಯುವುದೋ ಏನೋ ಎಂಬ ಶಂಕೆಯು ಈ ಸಮ್ಮೇಳನದ ಏರ್ಪಾಡಿನ ಮೊದಲಿನಿಂದಲೂ ಬಾಧಿಸುತ್ತಲೇ ಇತ್ತು. ಇಂತಹ ಶಂಕೆಗೆ ಆಧಾರವಿಲ್ಲದೆ ಇರಲಿಲ್ಲ. ಆದರೆ ಸಮ್ಮೇಳನಾಧ್ಯಕ್ಷರನ್ನೊಡಗೊಂಡ ಮೈಸೂರು ಪ್ರತಿನಿಧಿಗಳ ತಂಡವು ಈ ಪ್ರಾಂತದ ಗಡಿಗೆ ಬಂದಿಳಿದ ತತ್ಕ್ಷಣ ಅಲ್ಲಿಯ ಕನ್ನಡ ಭಾಷಾ ಪ್ರೇಮಿಗಳಾದ ಜನರಿಂದ ದೊರೆತ ಅಭೂತಪೂರ್ವವಾದ ಸ್ವಾಗತ ಮತ್ತು ಹಾರ್ದವಾದ ಸತ್ಕಾರ—ಇವುಗಳಿಂದ ಈ ಶಂಕೆಯು ಬಹುಮಟ್ಟಿಗೆ ಪರಿಹಾರವಾಯಿತು. ಸಮ್ಮೇಳನವು ಪ್ರಾರಂಭವಾಗಿ ಮೂರು ದಿವಸಗಳೂ ಯಶಸ್ವಿಯಾಗಿ ನಡೆದ ಮೇಲಂತೂ ಇಂತಹ ಶಂಕೆಯನ್ನಿಟ್ಟುಕೊಳ್ಳಬೇಕಾದ ಅಗತ್ಯವೇ ಇಲ್ಲವೆಂದು ದೃಢಪಟ್ಟಿತು.

ಈ ರೀತಿ ಸಮ್ಮೇಳನವು ಯಶಸ್ವಿಯಾಗಿ ನೆರವೇರಲಿಕ್ಕೆ ಹಲವು ಸನ್ನಿವೇಶಗಳು ಘಟನಾವಳಿಗಳು ಅನಿರೀಕ್ಷಿತವಾಗಿ ಪ್ರಾಪ್ತವಾದದ್ದೇ ಮುಖ್ಯ ಕಾರಣವೆಂದು



'ಆರ್ಯಕೀರ್ತಿ' ಮೊದಲಾದ ಗ್ರಂಥಗಳನ್ನು ರಚಿಸಿರುವ
ಶ್ರೀ॥ ಚ. ವಾಸುದೇವಯ್ಯನವರು ,
ಬೆಂಗಳೂರು ಮಲ್ಲೇಶ್ವರದ ಕರ್ಣಾಟಕ ಸಂಘದವರು
೧೨-೧೨-೧೯೩೭ರಲ್ಲಿ ಇವರ ಭಾವಚಿತ್ರದ
ಅನಾವರಣೋತ್ಸವವನ್ನು ನಡಸಿದರು.

ಪಡಿಯಚ್ಚು ದೊರಕಿಸಿಕೊಟ್ಟವರು :
ಶ್ರೀ॥ ಎಸ್. ಜಿ. ನರಸಿಂಹಯ್ಯನವರು



ಜಮಖಂಡಿಯಲ್ಲಿ ೧೯೩೭ನೆಯ ಡಿಸೆಂಬರ್ ತಿಂಗಳಲ್ಲಿ
ನಡೆದ ೨೨ನೆಯ ಕನ್ನಡ ಸಾಹಿತ್ಯ ಸಮ್ಮೇಳನದ
ಅಧ್ಯಕ್ಷ ಪದವಿಯನ್ನಲಂಕರಿಸಿದ್ದ
ಶ್ರೀ॥ ಬೆಳ್ಳಾವೆ ವೆಂಕಟನಾರಾಯಣಪ್ಪನವರು,
ಎಂ.ಎ.

ಪಡಿಯಚ್ಚು ಕೊಟ್ಟವರು :
'ತಾಯಿನಾಡು' ಪತ್ರಿಕಾ ಸಂಪಾದಕರು



೧೯೩೪ರಿಂದ ೧೯೩೭ರ ಪೂರ್ತ
ಪರಿಷತ್ತಿನ ಉಪಾಧ್ಯಕ್ಷರಾಗಿದ್ದ
ಶ್ರೀ॥ ಡಿ. ವಿ. ಗುಂಡಪ್ಪನವರು.




೧೯೩೮ನೆಯ ಜನವರಿಯಿಂದ
ಪರಿಷತ್ತಿನ ಉಪಾಧ್ಯಕ್ಷರಾಗಿರುವ
ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು.

ಇಂತಹ ಘಟನಾವಳಿಗಳಲ್ಲಿ ಪ್ರಮುಖವಾದದ್ದೆಂದರೆ ಜಮಖಂಡಿಯ ಶ್ರೀಮಂತ ರಾಜಾಸಾಹೇಬರು ಸಮ್ಮೇಳನದ ವಿಷಯದಲ್ಲಿ ತಮ್ಮ ಸಂಪೂರ್ಣ ಸಹಾನುಭೂತಿಯನ್ನು ವ್ಯಕ್ತಪಡಿಸಿದ್ದು. ಇವರು ಸಮ್ಮೇಳನಕ್ಕೆ ತಾವೇ ಸಾಕ್ಷಾತ್ತಾಗಿ ದಯಮಾಡಿಸಲು ಶಕ್ಯವಾಗದೆಹೋದರೂ ತಮ್ಮ ದಿವಾನರಾದ ರಾವ್ ಬಹದ್ದೂರ್ ಶ್ರೀಮಾನ್ ಆರ್. ಕೆ. ಭಗವತ್‌ರವರನ್ನೂ, ಇತರ ಸಚಿವ ವರ್ಗದಧಿಕಾರಿಗಳನ್ನೂ ಕಳುಹಿಸಿಕೊಟ್ಟಿದ್ದರು. ಅಲ್ಲದೆ ಸಮ್ಮೇಳನಾಧ್ಯಕ್ಷರಿಗೂ, ಪರಿಷದಧಿಕಾರಿಗಳಿಗೂ ತಮ್ಮ ರಾಜಭವನದಲ್ಲಿ ಭೇಟಿಯನ್ನು ಕೊಟ್ಟು ಕುಶಲ ಪ್ರಶ್ನಾನಂತರ ಭಾಷಾ ವಿಚಾರದ ಮಾತನ್ನೆತ್ತಿ ಕನ್ನಡದ ಪುರೋಭಿವೃದ್ಧಿಯ ವಿಷಯದಲ್ಲಿ ತಮಗೆ ಪೂರ್ಣ ಸಹಾನುಭೂತಿಯುಂಟೆಂದು ವ್ಯಕ್ತಪಡಿಸಿದರು. ಇಷ್ಟೇ ಅಲ್ಲದೆ ಪರಿಷತ್ತಿನ ಪ್ರತಿನಿಧಿಗಳಲ್ಲಿ ಕೆಲವರು ಪ್ರಮುಖರನ್ನು ತಮ್ಮ ವಿಹಾರಮಂದಿರದಲ್ಲಿ ಏರ್ಪಡಿಸಿದ್ದ ದಿವ್ಯವಾದೊಂದು ಸತ್ಕಾರ ಕೂಟಕ್ಕೆ ಆಹ್ವಾನಿಸಿ, ವಿಶೇಷವಾಗಿ ಗೌರವಿಸಿದರು. ಸಮ್ಮೇಳನದ ಸಮಯಕ್ಕೆ ಸರಿಯಾಗಿ ಇವರು ದಯಪಾಲಿಸಿದ ಸಂದೇಶದಲ್ಲಿ ಭಾಷಾ ಸಾಮರಸ್ಯದ ವಿಚಾರವಾಗಿ ತಮ್ಮ ನಿಜವಾದ ಮನೋಭಾವವನ್ನು ಈ ರೀತಿ ವ್ಯಕ್ತಪಡಿಸಿರುತ್ತಾರೆ:—

> "ಜಮಖಂಡಿ ಶಹರದಲ್ಲಿ ಈ ಅಧಿವೇಶನವು ಸೇರುತ್ತಿರುವುದರಿಂದ ನಮಗೆ ಸಂತೋಷವಾಗಿದೆ. ಇದಕ್ಕೆ ಸ್ವತಃ ಬರಲು ನಮಗೆ ಶಕ್ಯವಾಗದಿದ್ದರೂ ಅದರ ಕಾರ್ಯದ ಕಡೆಗೆ ನಮ್ಮ ಲಕ್ಷ್ಯವು ಇದ್ದೇ ಇರುವದು. ಪ್ರಚಾರದಲ್ಲಿರುವ ನಮ್ಮ ಸಂಸ್ಥಾನದಲ್ಲಿಯ ಎಲ್ಲ ಭಾಷೆಗಳೂ ಒಂದೇ ಯೋಗ್ಯತೆಯವೆಂದು ನಾವು ತಿಳಿಯುತ್ತೇವೆ. ಮತ್ತು ಅವುಗಳ ಉತ್ಕರ್ಷದ ಸಲುವಾಗಿ ಶಕ್ಯವಿದ್ದ ಮಟ್ಟಿಗೆ ಯತ್ನಿಸುತ್ತಲೇ ಇರುವೆವು. ಅಂಗೀಕೃತ ಕಾರ್ಯವು ತಮ್ಮಂಥ ವಿದ್ವಾಂಸರ ಪರಿಶ್ರಮದಿಂದ ಚೆನ್ನಾಗಿ ಜರುಗಿ ಅಧಿವೇಶನವು ಸಂಪೂರ್ಣವಾಗಿ ಯಶಸ್ವಿಯಾಗಲೆಂದು ಇಚ್ಛಿಸುತ್ತೇವೆ. ತಿಳಿಯುವದು. ಲೋಭವಿರಲಿ. ಇಂತೀ ವಿನಂತಿಯು."

ಶ್ರೀಮಂತ ರಾಜಾಸಾಹೇಬರ ಈ ರೀತಿಯ ಮನೋಭಾವದ ಫಲವಾಗಿ ಜಮಖಂಡಿಯ ವಾಸಿಗಳಾದ ಕನ್ನಡ ಜನರಿಗೆ ಭಾಷಾ ವಿಚಾರವಾಗಿ ಈಗ ಇರುವ ಕಷ್ಟನಿಷ್ಠುರಗಳು ಪರಿಹಾರವಾಗಿ ಅನುಕೂಲಗಳು ಲಭ್ಯವಾದಾವೆಂದು ನಿರೀಕ್ಷಿಸಬಹುದು.

ಈ ಸಮ್ಮೇಳನದ ಮತ್ತೊಂದು ವೈಶಿಷ್ಟ್ಯವೆಂದರೆ—ಇದರ ಅಧ್ಯಕ್ಷಪದವಿಗೆ ಶ್ರೀಮಾನ್ ಬಿ. ವೆಂಕಟನಾರಾಯಣಪ್ಪ, ಎಂ.ಎ. ಅವರು ದೊರೆತದ್ದು. ವಯೋವೃದ್ಧರೂ, ಜ್ಞಾನವೃದ್ಧರೂ ಆಗಿ ಪರಿಷತ್ತು ಪ್ರಾರಂಭವಾದಂದಿನಿಂದಲೂ ಕನ್ನಡದ ಏಳಿಗೆಗಾಗಿ ನಾನಾ ಮುಖವಾಗಿ ದುಡಿಯುತ್ತಿರುವ ಮಹನೀಯರಿವರು. ಇವರು ತಮ್ಮ ವಿಚಾರವಾಗಿ ಅಧ್ಯಕ್ಷ ಭಾಷಣದಲ್ಲಿ ಕೊಟ್ಟಿರುವ ಚಿತ್ರವು ಗಮನಾರ್ಹವಾದದ್ದು. ಅದು ಈ ರೀತಿ ಇದೆ:—

"ಆದಿಯಲ್ಲಿ, ನನ್ನ ಚರಿತ್ರೆಯನ್ನು ಸ್ವಲ್ಪಮಟ್ಟಿಗೆ ತಮ್ಮಲ್ಲಿ ಹೇಳ ಹೊರತು ನನ್ನ ಚರ್ಯೆಯು ತಮಗೆ ಮನದಟ್ಟಾಗಲಾರದು. ನಾನು ವುದು ಸಾಹಿತ್ಯವಲ್ಲದಿದ್ದರೂ ನಿಜವಾದುದು. ನನ್ನ ಭಾಷೆಗೆ ನಾನು ಪಂಡಿತರ ಮಾರ್ಗವನ್ನನುಸರಿಸಿಯೇ ನಡೆಯುವವನಲ್ಲ; ಪಡೆಯಬೇಕೆಂಬ ಆಕಾಂಕ್ಷೆ ನನಗಿಲ್ಲ; ಕನ್ನಡ ಮಾತೆಯ ಸೇವೆಯನ್ನು ಮನವೊಪ್ಪಿದ ರೀತಿಯಲ್ಲಿ ಭಕ್ತಿಯಿಂದ ಮಾಡಿ ತೃಪ್ತಿಪಡಬೇಕೆಂಬ ಕೋರಿಕೆ. ನನ್ನ ಮನಸ್ಸಿಗೆ ನ್ಯಾಯವೆಂದು ತೋರಿದುದನ್ನು ಆಡಿಬಿಡುವುದು ನನ್ನಲ್ಲಿರುವ ದೊಡ್ಡ ಕೊರತೆ. ಇದು ಕೆಲವು ಅನೇಕರ ಮನಸ್ಸಿಗೆ ನೋವನ್ನುಂಟುಮಾಡಬಹುದು. ನಾನು ತಪ್ಪನ್ನು ಮಾಡಿದರೂ ಕನ್ನಡ ಮಾತೆಯಲ್ಲಿ ಹೆಚ್ಚು ಪ್ರೇಮ ಕೊಂಡಿರುವ ತುಂಟಮಗುವೆಂದು ಭಾವಿಸಿ, ನನ್ನನ್ನು ಕ್ಷಮಿಸ ಅತ್ಯಂತ ವಿನಯದಿಂದ ಬೇಡಿಕೊಳ್ಳುತ್ತೇನೆ."

ಇದೀಗ ಆತ್ಮಪ್ರಶಂಸೆಯನ್ನು ಒಪ್ಪದಿರುವ ಮಹನೀಯರ ಸ್ವಂತಮಾತು ಇನ್ನು ಇವರ ನೈಜವಾದ ಯೋಗ್ಯತೆಯನ್ನು ಅಧಿಕಾರಯುತ ಬೇರೆಯವರು ಯಾವ ರೀತಿ ಪ್ರಶಂಸಿಸಿರುವರೆಂಬುದನ್ನು ನೋಡುವ. ಸಂಸ್ಥಾನದ ದಿವಾನ್‌ರವರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ಪಕ್ಷಪಾತಿಗಳು. ಇವರು ಸಮ್ಮೇಳನಕ್ಕೆ ದಯಪಾಲಿಸಿದ ಸಂದೇಶದಲ್ಲಿ ಶ್ರೀ ವೆಂಕಟನಾರಾಯಣಪ್ಪನವರನ್ನು ಕುರಿತು ಈ ರೀತಿ ಪ್ರಶಂಸಿಸಿರುತ್ತಾರೆ:—

"ಶ್ರೀಮಾನ್ ಬಿ. ವೆಂಕಟನಾರಾಯಣಪ್ಪನವರು ಸಮ್ಮೇ ಅಧ್ಯಕ್ಷತೆಯನ್ನಲಂಕರಿಸುವುದು ವಿಶೇಷ ಸಂತೋಷಕರವಾಗಿದೆ. ಕರ್ಣಾಟಕ ಭಾಷಾ ಸಾಹಿತ್ಯಗಳಲ್ಲಿ ಪ್ರಖ್ಯಾತ ವಿದ್ವಾಂಸರು. ಸಾಹಿತ್ಯ ಪರಿಷತ್ತನ್ನು ಸ್ಥಾಪಿಸಲು ತೀವ್ರಾಸಕ್ತಿಯಿಂದ ಶ್ರಮಿ ಅವರ ಅಧ್ಯಕ್ಷತೆಯಲ್ಲಿ ಸಮ್ಮೇಳನವು ಯಶಸ್ವಿಯಾಗಿ ಜರುಗಿ ಪ್ರಯೋಜನಕರವಾಗಿ ಪರಿಣಮಿಸುವ ವಿಷಯವು ನನ್ನ ಮನಸ್ಸಿಗೆ ವಾಗಿದೆ."

ಶ್ರೀ॥ ವೆಂಕಟನಾರಾಯಣಪ್ಪನವರಂತೆ ನಿಷ್ಕಾಮ ಕರ್ಮದಿಂದ ಬಾಹ್ಯ ವಿಲ್ಲದೆ ಕನ್ನಡದ ಏಳಿಗೆಗಾಗಿ ದುಡಿಯುವ ಮಹನೀಯರು ಸಮ್ಮೇಳನದ ಪದವಿಗೆ ದೊರೆಯುವುದು ದುರ್ಲಭವೆಂದೇ ಹೇಳಬೇಕು. ಇವರ ಸ್ಫೂರ್ತಿದಾಯಕವಾಗಿರುವುದಲ್ಲದೆ ಕನ್ನಡದ ಉತ್ಕರ್ಷಕ್ಕೆ ಸಾಧಕವಾದ ಉಪಯುಕ್ತವಾದ ಸಲಹೆಗಳಿಂದ ತುಂಬಿರುವುದಾಗಿದೆ. ಇವುಗಳಲ್ಲಿ ಕೆಲವನ್ನು ಮಾತ್ರ ಈ ಕೆಳಗೆ ಕೊಟ್ಟಿರುತ್ತೇವೆ. ಅವು ಯಾವುವೆಂದರೆ:—

(೧) ಪರಿಷತ್ತಿನ ಕೆಲಸಗಳು ಸಾಂಗವಾಗಿ ನೆರವೇರಬೇಕಾದರೆ ನಮ್ಮ ಯೋಗ್ಯತೆಗೆ ತಕ್ಕಂತೆ ಕಾಣಿಕೆ ಸಲ್ಲಿಸಬೇಕು;

ಪರಿಷತ್ತಿನ ಸದಸ್ಯರ ಪಟ್ಟಿಯನ್ನು ದೊಡ್ಡದುಮಾಡುವ ಪ್ರಯತ್ನ ನಡಸಬೇಕು.

(೨) ಕನ್ನಡ ಭಾಷಾಭಿಮಾನಿಗಳೆಲ್ಲರೂ ಕರ್ಣಾಟಕ ಸಂಘಗಳ ಚಾಲಕರಿಗೆ ಬೆಂಬಲವಾಗಿ ನಿಂತು ಅವುಗಳಿಂದ ಫಲಪ್ರದವಾದ ಕಾರ್ಯಗಳು ನಡೆಯುವಂತೆ ಸಹಾಯಮಾಡಬೇಕು.

(೩) ಪದ್ಯಕಾವ್ಯಗಳನ್ನು ಹೆಚ್ಚಾಗಿ ರಚಿಸುವುದಕ್ಕೆ ಬದಲಾಗಿ ಇಂಗ್ಲಿಷ್ ಭಾಷೆಯಲ್ಲಿ ಮಕ್ಕಳಿಗಾಗಿಯೇ ಅಂದವಾದ ಚಿತ್ರಗಳಿಂದಲೂ, ಮುದ್ರಣ ದಿಂದಲೂ ಕೂಡಿದ ಪುಸ್ತಕಶ್ರೇಣಿಯನ್ನು ಹೊರಪಡಿಸಿರುವಂತೆ ಕನ್ನಡ ದಲ್ಲಿಯೂ, ಸಾಹಿತ್ಯ, ವಿಜ್ಞಾನ ಮೊದಲಾದ ವಿಷಯಗಳನ್ನು ಕುರಿತು ಅಂದವಾದ ಪುಸ್ತಕಗಳನ್ನು ಪ್ರಕಟಿಸಬೇಕು.

(೪) ಗ್ರಂಥಕರ್ತರು ನಮ್ಮ ಇತಿಹಾಸ ಪುರಾಣಗಳನ್ನು ಸ್ವೇಚ್ಛೆಯಾಗಿ ತಿದ್ದಿ ಹೊಲಸುಮಾಡುವ ಪ್ರಯತ್ನ ಮಾಡಬಾರದು.

(೫) ಪತ್ರಿಕಾಕರ್ತರು ಗ್ರಂಥವಿಮರ್ಶೆ ಮಾಡುವಾಗ ಗುಣದೋಷಗಳನ್ನು ತೂಕಮಾಡಿ ಮಿತಿಮೀರಿ ಹೊಗಳದೆಯೂ, ಮಿತಿಮೀರಿ ಖಂಡಿಸದೆಯೂ ಋಜುಮಾರ್ಗವನ್ನನುಸರಿಸಬೇಕು. ವಿಮರ್ಶೆಯು ಗ್ರಂಥದ ಪ್ರಮಾಣ ವನ್ನೂ ಅದರ ಯೋಗ್ಯತೆಯನ್ನೂ ಅನುಸರಿಸಿ ಮಿತಿಮೀರದಂತಿರಬೇಕು.

(೬) ಪತ್ರಿಕೆಗಳ ಭಾಷೆಯನ್ನೂ ಮುದ್ರಣವನ್ನೂ ಅಂದವಾಗಿರುವಂತೆ ಮಾರ್ಪಡಿಸಬೇಕು. ಒಂದೇ ಊರಿನಲ್ಲಿ ೩-೪ ಪತ್ರಿಕೆಗಳನ್ನು ಹೊರಡಿಸುವುದಕ್ಕೆ ಬದಲು ಲಕ್ಷಣವಾದ ಒಂದೇ ಪತ್ರಿಕೆಯನ್ನು ಪ್ರಕಟಿಸುವುದು ಉತ್ತಮ.

(೭) ಪ್ರಜ್ಞಾಶಾಲಿಗಳೂ, ಪಂಡಿತರೂ, ಕರ್ತವ್ಯದಕ್ಷರೂ ಆದ ಉಪಾಧ್ಯಾಯ ರನ್ನು ಮಾತ್ರವೇ ನಮ್ಮ ಬಾಲಕರ ಶಿಕ್ಷಣೆಗಾಗಿ ನಿಯಮಿಸಬೇಕು. ಇದಕ್ಕಾಗಿ ಯೋಗ್ಯತೆಗೆ ತಕ್ಕಂತೆ ಗುರುದಕ್ಷಿಣೆ ವಸೂಲುಮಾಡಬಹುದು.

(೮) ಇಷ್ಟಪಟ್ಟವರಿಗೆಲ್ಲ ಮಾಧ್ಯಮಿಕ ವರ್ಗದವರೆಗೆ ಶಿಕ್ಷಣವನ್ನು ಕೊಟ್ಟು ಇದಕ್ಕೆ ಮುಂದೆ ಹೋಗಬೇಕೆನ್ನುವವರಿಗೆ ಯೋಗ್ಯತೆ ಇದ್ದಲ್ಲಿ ಮಾತ್ರವೇ ಪ್ರವೇಶ ದೊರೆಯುವಂತೆ ಮಾಡಬೇಕು.

(೯) ಹಿಂದಿಯನ್ನಾಗಲಿ, ಸಂಸ್ಕೃತವನ್ನಾಗಲಿ ಕಡ್ಡಾಯವಾಗಿ ಕಲಿಸಬಾರದು. ಬೇಕಾದವರು ಕಲಿತುಕೊಳ್ಳಲಿ. ಅವರಿಗೆ ತಕ್ಕ ಪ್ರೋತ್ಸಾಹ ಕೊಡಬಹುದು.

(೧೦) ಮಹಾತ್ಮಾ ಗಾಂಧಿಯವರ 'ವಾರ್ಧಾ ಶಿಕ್ಷಣದ ಏರ್ಪಾಡ'ನ್ನು ನಿಷ್ಕಾರಣವಾಗಿ ಅಲ್ಲಗಳೆಯಬಾರದು.

ಮೇಲ್ಕಂಡ ಸಲಹೆಗಳು ಕಾರ್ಯಕಾರಿಯಾಗುವಂತೆ ಕನ್ನಡ ಭಾಷಾಭಿಮಾನಿ ಗಳೆಲ್ಲರೂ ಸಾಹಸಪಡುವವರಾಗಲೆಂತ ನಾವು ಹಾರೈಸುತ್ತೇವೆ.

ಸಮ್ಮೇಳನದ ಅಧ್ಯಕ್ಷಪದವಿಗೆ ಶ್ರೀಮಾನ್ ವೆಂಕಟನಾರಾಯಣಪ್ಪನವರಂತಹ ನುರಿತ ಸಾಹಿತಿಗಳು ದೊರೆತಂತೆಯೇ ಸಮ್ಮೇಳನದ ಪ್ರಾರಂಭೋತ್ಸವವನ್ನು ನೆರವೇ ಸುವ ಕಾರ್ಯಕ್ಕೆ ಶ್ರೀಮಾನ್ ಗಂಗಾಧರರಾವ್ ದೇಶಪಾಂಡೆಯವರಂತಹ ಸಮ ರಾಜಕಾರ್ಯಪಟುಗಳು ದೊರೆತದ್ದು ನಮ್ಮ ಭಾಗ್ಯೋದಯವೇ ಸರಿ. ಇವ ಮಾತೃಭಾಷೆಯು ಮಹಾರಾಷ್ಟ್ರವಾಗಿದ್ದರೂ ಕೂಡ ಇವರು ಕನ್ನಡದಲ್ಲಿ ವಾಗ್ವೈಖರಿಯುಳ್ಳ ಸ್ಫೂರ್ತಿದಾಯಕವಾದ ಭಾಷಣವನ್ನು ಮಾಡಿ ಸಮ್ಮೇಳನದಲ್ಲಿ ನೆರೆದಿದ್ದ ಜನರಲ್ಲಿ ಕನ್ನಡದಮೇಲೆ ಪ್ರೇಮವು ಉಕ್ಕಿಬರುವಂತೆ ಹುರಿದುಂಬಿಸಿದ ಇದೇ ರೀತಿ ಸ್ವಾಗತ ಮಂಡಲಿಯ ಅಧ್ಯಕ್ಷರಾದ ಶ್ರೀಮಾನ್ ಪಂಡಿತಪ್ಪ ರಾಯ ಚಿಕ್ಕೋಡಿ, ಬಿ.ಎ. ಅವರೂ ಸಹ ತಮ್ಮ ಭಾಷಣದಲ್ಲಿ ಇತಿಹಾಸ ಪ್ರಸಿದ್ಧವಾ ಜಮಖಂಡಿಯು ಕ್ರಿ. ಶ. ೯ನೆಯ ಶತಮಾನದಲ್ಲಿ ತಿರುಳ್ಗನ್ನಡದ ನಾಡಾಗಿತ್ತೆಂತಲೂ, 'ಕವಿರತ್ನ'ನೆಂಬ ಬಿರುದಿನಿಂದ ಪ್ರಸಿದ್ಧನಾದ ರನ್ನ ಮಹಾಕವಿಯು ಇಲ್ಲಿಗೆ ಸಮೀಪ ದಲ್ಲಿರುವ ಮುದುವೊಳಲಲ್ಲಿ ಜನ್ಮವೆತ್ತಿದನೆಂತಲೂ, ಈಗಲೂ ಜಮಖಂಡಿ ಸಂಸ್ಥಾನದಲ್ಲಿ ಸುಮಾರು ೧೦೦ಕ್ಕೆ ೮೦ ಜನರು ಕನ್ನಡ ಮಾತಾಡುವ ಜನರೇ ಇರುವರೆಂತಲೂ, ಈ ಕಾರಣಗಳಿಂದ ಕನ್ನಡ ಸಾಹಿತ್ಯ ಸಮ್ಮೇಳನವು ಇಲ್ಲಿ ನಡೆಯುವಂತೆ ಏರ್ಪಡಿಸಿದುದು ಯುಕ್ತವೇ ಆಗಿರುವುದೆಂತಲೂ, ಈ ಸಮ್ಮೇಳನಕ್ಕೆ ದಯಮಾಡಿಸಿರುವ ವಿದ್ವನ್ಮಣಿಗಳ ಸಹವಾಸದಿಂದ ಪವಿತ್ರಿತವಾದ ತಮ್ಮ ನಾಡಿನಲ್ಲಿ ಕನ್ನಡದ ಯಶೋದುಂದುಭಿಯು ಮತ್ತೆ ಮೊಳಗುವಂತಾಗಬೇಕೆಂತಲೂ ಅಪ್ಪಣೆಕೊಡಿಸಿ ಸರ್ವರಿಗೂ ಸ್ವಾಗತವನ್ನು ಬಯಸಿದರು. ಅಲ್ಲದೆ ತಮ್ಮಲ್ಲಿರುವ ಕೊರತೆಗಳನ್ನು ಕಡೆಗಣಿಸಿ ತಾವು ಹೃತ್ಪೂರ್ವಕ ವಾಗಿ ಸಲ್ಲಿಸುವ ಅಲ್ಪವಾದ ಆದರಾತಿಥ್ಯವನ್ನು ಮನ್ನಿಸಿ ಪ್ರೇಮದಿಂದ ಸ್ವೀಕರಿಸ ವವರಾಗಬೇಕೆಂತ ಅತಿಥಿಗಳನ್ನು ಕುರಿತು ಪ್ರಾರ್ಥಿಸಿಕೊಂಡರು. ಆದರೆ ವಸ್ತುತಃ ಇವರ ಆತಿಥ್ಯದಲ್ಲಿ ಯಾವುದೊಂದು ಕೊರತೆಯೂ ಕಾಣಬರಲಿಲ್ಲ. ಇದಕ್ಕೆ ಬದಲಾಗಿ ನಾನಾ ಪ್ರಾಂತಗಳಿಂದ ದಯಮಾಡಿಸಿದ್ದ ಪ್ರತಿನಿಧಿಗಳಿಗೆ ಅವರವರ ಭಿನ್ನರುಚಿಗಳಿಗನು ಗುಣವಾಗಿ ಇವರು ಏರ್ಪಡಿಸಿದ್ದ ಭೋಜನ ಸೌಕರ್ಯವು ವಿಶೇಷ ಶ್ಲಾಘನೀಯ ವಾಗಿದ್ದಿತು. ಈ ವಿಚಾರದಲ್ಲಿ ಶ್ರೀಮಾನ್ ಬಿಂದೂರಾವ್ ರಾಮರಾವ್ ನರಗುಂದಕರ್, ಬಿ.ಎ., ಎಲ್‌ಎಲ್.ಬಿ. ಅವರೂ, ಇವರ ಸಹೋದ್ಯೋಗಿಗಳಾದ ಶ್ರೀಮಾನ್ ಶಿವರಾಯರವರೂ, ಸ್ವಯಂ ಸೇವಕ ದಳದವರೂ ತೋರಿಸಿದ ಆದರಾತಿಶಯಗಳು ಚಿರಸ್ಮರಣೀಯವಾಗಿರುವುವು. ಇವರಂತೆಯೇ ಶ್ರೀ॥ಗಳಾದ ಆಲೂರು ವೆಂಕಟರಾಯರು, ಅಥಣಿ ಮನೋಹರರಾಯರು, ಹಾರನಹಳ್ಳಿ ಅನಂತರಾಯರು, ಕೋಲಾರದ ಲಕ್ಷ್ಮೀನಾರಾಯಣರಾಯರು ಮೊದಲಾದ ಸ್ನೇಹಿತರು ತೋರಿಸಿದ ಆದರಾತಿಥ್ಯಗಳೂ ಸಹ ಎಂದಿಗೂ ಮರೆಯದಂಥವುಗಳಾಗಿವೆ.

ಇಂತಹ ಅನುಕೂಲಗಳ ಮಧ್ಯೆ ಉಪಕ್ರಮವಾದ ಸಮ್ಮೇಳನವು ಮೂರು ದಿನಗಳೂ ಬೆಳಗಿನಿಂದ ಮಧ್ಯರಾತ್ರಿಯವರೆಗೆ (ಊಟ ಉಪಚಾರದ ಕಾಲ ಹೊರತು) ಅವಿಶ್ರಾಂತವಾಗಿ ನಡೆಯಿತು. ಈ ಕಾಲದಲ್ಲಿ ಉಪನ್ಯಾಸ, ಕಾವ್ಯ ವಾಚನ

ಕವಿಗೋಷ್ಠಿ, ಐತಿಹಾಸಿಕ ವಸ್ತು ಪ್ರದರ್ಶನ, ಕನ್ನಡ ವೃತ್ತಪತ್ರಿಕಾ ಪ್ರದರ್ಶನ, ಲಾವಣಿ, ಅಭಿನಯ, ನರ್ತನ, ನಾಟಕ, ಯೋಗಾಸನ ಪ್ರದರ್ಶನ, ಕರಡಿ ವಾದ್ಯ—ಮೊದಲಾದ ವಿಶೇಷ ಕಾರ್ಯಗಳು ಸಹ ನಡೆದುವು. ಸಾಹಿತ್ಯಕ್ಕೆ ಸಂಬಂಧಪಟ್ಟ ಇಂತಹ ಸಮ್ಮೇಳನಗಳಲ್ಲಿ ಸಾಹಿತ್ಯೋಪನ್ಯಾಸಗಳ ಹೊರತು ಬೇರೆ ಯಾವ ವಿನೋದವೂ ನಡೆಯುವುದು ಯುಕ್ತವಲ್ಲವೆಂದು ಕೆಲವರು ಅಭಿಪ್ರಾಯಪಡಬಹುದು. ಇದನ್ನು ನಾವು ಸರ್ವಾತ್ಮನಾ ಅನುಮೋದಿಸಲಾರೆವು. ಸಾಹಿತ್ಯದಂತಹ ಕಠಿಣ ಸಮಸ್ಯೆಗಳಿಗೆ ಸಾಮಾನ್ಯ ಜನರು ಕಿವಿಗೊಡುವಂತೆ ಆಕರ್ಷಿಸಬೇಕಾದರೆ ಮಧ್ಯೆ ಮಧ್ಯೆ ಕೆಲವು ವಿನೋದ ಪ್ರಕರಣಗಳನ್ನು ಸೇರಿಸಿದಲ್ಲದೆ ಸಾಧ್ಯವಲ್ಲವೆಂಬುದನ್ನು ಇಂತಹ ವಿಚಾರಗಳಲ್ಲಿ ಅನುಭವ ಪಡೆದಿರುವ ಯಾರೇ ಆಗಲಿ ಒಪ್ಪದೆ ಇರಲಾರರು.

ಮೈಸೂರು ಪ್ರಾಂತದ ಪ್ರತಿನಿಧಿಗಳು ಸಮ್ಮೇಳನವು ಮುಗಿದನಂತರ ಕೊಲ್ಹಾಪುರ, ಬೆಳಗಾಂವಿ, ಬಳ್ಳಾರಿ, ಗದಗ, ಬಿಜಾಪುರ ಮೊದಲಾದ ಕೆಲವು ಸ್ಥಳಗಳಿಗೆ ಹೋಗಿ ಅಲ್ಲಿನವರ ಅಪೇಕ್ಷೆಯಂತೆ ಸಾಹಿತ್ಯವೇ ಮೊದಲಾದ ವಿಚಾರವಾಗಿ ಉಪನ್ಯಾಸಗಳನ್ನು ಕೊಟ್ಟು ಅನಂತರ ತಮ್ಮ ಊರಿಗೆ ತೆರಳಿದರು.

ಮುಂದಿನ ಸಮ್ಮೇಳನವು ಬಳ್ಳಾರಿಯಲ್ಲಿ ನಡೆಯಬೇಕೆಂತ ಆಹ್ವಾನವು ಬಂದಿರುತ್ತದೆ. ಇದು ಕಾರ್ಯಕಾರಿಯಾಗಿ ಈ ವರ್ಷದ ಸಮ್ಮೇಳನದಂತೆಯೇ ಯಶಸ್ವಿಯಾಗಿ ನಡೆಯುವಂತಾಗಲೆಂದು ಹಾರೈಸುತ್ತೇವೆ.

ಜಮಖಂಡಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ೩೦-೧-೨-೧೯೩೭ ರಲ್ಲಿ ಪರಿಷತ್ತಿನ ೨೨ನೆಯ ವಾರ್ಷಿಕಾಧಿವೇಶನವು ನಡೆಯಿತು. ಇದರ ವಿವರಗಳನ್ನು ಈ ಪತ್ರಿಕೆಯ ಮುಂದಿನ ಸಂಚಿಕೆಯಲ್ಲಿ ಕೊಡಲಾಗುವುದು.

**ಪರಿಷತ್ತಿನ ವಾರ್ಷಿಕಾಧಿವೇಶನದ ವಿಶೇಷಾಂಶಗಳು**

ಈ ಅಧಿವೇಶನದಲ್ಲಿ ನಡೆದ ತೀರ್ಮಾನಗಳ ಪೈಕಿ ಪ್ರಮುಖವಾದುವುಗಳು ಮೂರು: (೧) ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರಲ್ಲಿ ಬದಲಾವಣೆ; (೨) ಪರಿಷತ್ತಿನ ಉಪಾಧ್ಯಕ್ಷರ ಬದಲಾವಣೆ; (೩) ಪರಿಷತ್ತಿನ ಅಧಿಕಾರಿಗಳು ಇನ್ನುಮುಂದಕ್ಕೆ ವರ್ಷಕ್ಕೊಂದಾವರ್ತಿ ಚುನಾಯಿತರಾಗಬೇಕೆಂಬ ನಿರ್ಧಾರ.

ಈ ಪೈಕಿ ಮೊದಲನೆಯ ತೀರ್ಮಾನದಂತೆ ಕಳೆದ ವರ್ಷ ಇದ್ದ ಮೈಸೂರು ಪ್ರಾಂತದ ಸದಸ್ಯರುಗಳ ಪೈಕಿ ಶ್ರೀ॥ ಗಳಾದ ಬಿ. ಎಂ. ಶ್ರೀಕಂಠಯ್ಯನವರು, ನಂ. ವೆಂಕಟೇಶ ಅಯ್ಯಂಗಾರ್ಯರು, ಎ. ತಾಂದೋಣಿರಾಯರು, ವಿ. ವೆಂಕಟಪ್ಪನವರು, ಎಸ್. ಜಿ. ಶಾಸ್ತ್ರಿಗಳು—ಇವರುಗಳ ಬದಲಾಗಿ ಶ್ರೀ॥ ಗಳಾದ ಅ. ನ. ಕೃಷ್ಣ ರಾಯರು, ಎಂ. ನರಸಿಂಹಮೂರ್ತಿಗಳು, ಎಂ. ಆರ್. ಶ್ರೀನಿವಾಸಮೂರ್ತಿಗಳು, ಟಿ. ಎನ್. ಶ್ರೀಕಂಠಯ್ಯನವರು, ಬಿ. ಶಿವಮೂರ್ತಿಶಾಸ್ತ್ರಿಗಳು ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರಾಗಿ ಚುನಾಯಿಸಲ್ಪಟ್ಟಿರುತ್ತಾರೆ; ಉಳಿದವರು ಹಿಂದಿನ ವರ್ಷ ಇದ್ದವರೇ ಈ ವರ್ಷಕ್ಕೂ ಚುನಾಯಿತರಾಗಿದ್ದಾರೆ. ಅಲ್ಲದೆ ಮೈಸೂರು ಅರಮನೆಯ ಪರವಾಗಿ ರಾವ್ ಬಹದ್ದೂರ್ ಬಿ. ವೆಂಕಟೇಶಾಚಾರ್ಯರ ಸ್ಥಾನದಲ್ಲಿ ಡಾಕ್ಟರ್

ಎಂ. ಎ. ಸಂಪತ್ಕುಮಾರನ್ ಅವರು ನೇಮಕವಾಗಿ ಬಂದಿರುತ್ತಾರೆ. ಬೊಂಬಾಯಿ ಪ್ರಾಂತದ ಪರವಾಗಿ ಕಳೆದ ವರ್ಷದ ಸದಸ್ಯರ ಪೈಕಿ ಶ್ರೀ॥ ಗಳಾದ ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳೂ, ರಂಗಪ್ಪ ಪೋತ್ದಾರರೂ ಉಳಿದುಬಂದಿರುತ್ತಾರೆ; ಇತರರು ಹೊಸಬರು. ಅವರುಗಳು ಯಾರೆಂದರೆ: ಶ್ರೀ॥ ಗಳಾದ ದ. ರಾ. ಬೇಂದ್ರೆಯವರು, ಸಾಲಿ ರಾಮಚಂದ್ರರಾಯರು, ಎಸ್. ಎಸ್. ಮಾಳವಾಡರು, ವಿ. ಬಿ. ನಾಯಕರು, ಆಲೂರು ವೆಂಕಟರಾಯರು, ಆರ್. ವಿ. ಜಹಗೀರ್‌ದಾರರು ಮತ್ತು ಶ್ರೀ ಬಸವಲಿಂಗ ಸ್ವಾಮಿಗಳು. ಉಳಿದ ಪ್ರಾಂತಗಳ ಬಗ್ಗೆ ಹಿಂದೆ ಇದ್ದವರೇ ಸದಸ್ಯರಾಗಿದ್ದಾರೆ. ಅನುಭವಶಾಲಿಗಳಾಗಿದ್ದ ಹಿಂದಿನ ಸದಸ್ಯರಲ್ಲಿ ಕೆಲವರು ಕಾರ್ಯನಿರ್ವಾಹಕ ಮಂಡಲಿಗೆ ಚುನಾಯಿತರಾಗದೆ ತಪ್ಪಿಹೋದುದಕ್ಕಾಗಿ ನಮ್ಮ ವಿಷಾದವನ್ನು ಸೂಚಿಸುವುದಲ್ಲದೆ ಹೊಸದಾಗಿ ಬಂದಿರುವ ತರುಣ ಸದಸ್ಯರ ಉತ್ಸಾಹಭರಿತವಾದ ಕಾರ್ಯಶ್ರದ್ಧೆಯಿಂದ ಪರಿಷತ್ತಿನ ಕಾರ್ಯಕಲಾಪಗಳು ಈಗ್ಗಿಂತಲೂ ಚೆನ್ನಾಗಿ ನಡೆಯುತ್ತಾ ಬರುವಂತಾಗ ಲೆಂದು ಹಾರೈಸುತ್ತೇವೆ.

ಈ ಸಾರಿಯ ವಾರ್ಷಿಕಾಧಿವೇಶನದಲ್ಲಿ ನಡೆದ ತೀರ್ಮಾನಗಳ ಪೈಕಿ ಅತ್ಯಂತ ಪರಿಣಾಮಕಾರಿಯಾದದ್ದೆಂದರೆ ಉಪಾಧ್ಯಕ್ಷರ ಬದಲಾವಣೆಗೆ ಸಂಬಂಧಪಟ್ಟದ್ದು.

**ಉಪಾಧ್ಯಕ್ಷರ ಬದಲಾವಣೆ: ಶ್ರೀಮಾನ್ ಡಿ. ವಿ. ಗುಂಡಪ್ಪನವರ ಸ್ಥಾನದಲ್ಲಿ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು**

ಪರಿಷತ್ತೆಂಬ ಯಂತ್ರಕ್ಕೆ ಮುಖ್ಯವಾದ ಕೀಲಿನಂತಿರುವುದು ಉಪಾಧ್ಯಕ್ಷ ಪದವಿ. ಈ ಕೀಲು ಭದ್ರವಾಗಿಲ್ಲದಿದ್ದರೆ ಪರಿಷದ್ಯಂತ್ರವು ಸುಗಮವಾಗಿ ತಿರುಗುವುದೇ ಅಸಾಧ್ಯ ವಾಗಬಹುದು. ಕಳೆದ ನಾಲ್ಕು ವರ್ಷಗಳಿಂದ ಉಪಾಧ್ಯಕ್ಷ ರಾಗಿದ್ದುಕೊಂಡು ಪರಿಷದ್ಯಂತ್ರವನ್ನು ವೇಗವಾಗಿ ಪ್ರಗತಿ ಮಾರ್ಗಕ್ಕೆ ತಿರುಗಿಸುತ್ತಿದ್ದ ಶ್ರೀಮಾನ್ ಡಿ. ವಿ. ಗುಂಡಪ್ಪ ನವರು ಗೃಹಕೃತ್ಯದ ಅನಿವಾರ್ಯಗಳ ದೆಸೆಯಿಂದಲೂ ಬೇರೆ ಕಾರ್ಯಗೌರವಗಳ ದೆಸೆಯಿಂದಲೂ ತಮಗೆ ಈ ಕೆಲಸ ದಿಂದ ಬಿಡುವು ಮಾಡಿಕೊಡಬೇಕೆಂದು ಕೆಲವು ಕಾಲದಿಂದ ಪ್ರಾರ್ಥಿಸುತ್ತಲೇ ಇದ್ದರು. ಇಂತಹ ದಕ್ಷರಾದವರನ್ನು ಏಕಾಏಕಿ ಬಿಟ್ಟುಕೊಡುವುದು ಅಸಾಧ್ಯ ಪ್ರಮೇಯವಾದ ಪ್ರಯುಕ್ತ ಇವರ ಪ್ರಾರ್ಥನೆ ಸಲ್ಲಿಸಿಕೊಡುವ ವಿಚಾರವನ್ನು ಇಲ್ಲಿಯವರೆಗೂ ಮುಂದುವರಿಸುತ್ತಾ ಬಂದದ್ದಾಯಿತು. ಕಟ್ಟಕಡೆಗೆ ಅನಿವಾರ್ಯ ಪ್ರಸಂಗವು ಒದಗಿದ ಪ್ರಯುಕ್ತ ಈ ಸಲದ ವಾರ್ಷಿಕಾಧಿವೇಶನದಲ್ಲಿ ಇವರ ಪ್ರಾರ್ಥನೆಯನ್ನು ಅಂಗೀಕರಿಸಲೇಬೇಕಾಯಿತು. ಶ್ರೀಮಾನ್ ಗುಂಡಪ್ಪನವರು ಪರಿಷತ್ತಿನ ಉಪಾಧ್ಯಕ್ಷ ಪದವಿಯಿಂದ ವಿಶ್ರಾಂತಿಯನ್ನು ಪಡೆಯುವ ಈ ಸಮಯದಲ್ಲಿ ಪರಿಷತ್ತಿಗೆ ಇವರು ಸಲ್ಲಿಸಿರುವ ಅಮೋಘವಾದ ಸೇವೆಯನ್ನು ಕುರಿತು ಸ್ವಲ್ಪಮಟ್ಟಿಗೆ ಪ್ರಸ್ತಾಪಿಸುವುದು ಅಗತ್ಯ. ಈ ವಿಚಾರವನ್ನು ನಮ್ಮ ಮಾತಿನಲ್ಲಿ ಹೇಳುವುದಕ್ಕಿಂತ ಉಚ್ಚ ಪದವೀಧರರ ಮಾತಿನಲ್ಲಿ ಹೇಳಿದಲ್ಲಿ ಹೆಚ್ಚು ಬೆಲೆ ಬರುವುದರಲ್ಲಿ ಸಂದೇಹವಿಲ್ಲ. ಇವರ ವಿಷಯವಾಗಿ ಮೈಸೂರು ಸಂಸ್ಥಾನದ ದಿವಾನ್‌ರವರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ರವರು ತಮ್ಮ ಸಂದೇಶದಲ್ಲಿ ಈ ರೀತಿ ಅಪ್ಪಣೆ ಕೊಡಿಸಿರುತ್ತಾರೆ:—

"ಶ್ರೀಮಾನ್ ಡಿ. ವಿ. ಗುಂಡಪ್ಪನವರ ಉಪಾಧ್ಯಕ್ಷತೆಯಲ್ಲಿ ಕನ್ನಡ ಭಾಷೆಯ ಮತ್ತು ಕನ್ನಡ ಸಾಹಿತ್ಯದ ಬೆಳವಣಿಗೆಗೆ ಸಾಧಕವಾದ ಕಾರ್ಯಕಲಾಪಗಳು ಹೆಚ್ಚು ಹೆಚ್ಚಾಗಿಯೂ ದಕ್ಷತೆಯಿಂದಲೂ ನಡೆಯುತ್ತಿವೆ. ಶ್ರೀ॥ ಗುಂಡಪ್ಪನವರೂ, ಅವರ ಸಹೋದ್ಯೋಗಿಗಳೂ ಸ್ವಾರ್ಥತ್ಯಾಗದಿಂದಲೂ, ಶ್ರದ್ಧೆಯಿಂದಲೂ ಪರಿಷತ್ತಿಗೆ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಅದಕ್ಕಾಗಿ ಅವರೆಲ್ಲರೂ ಕನ್ನಡಿಗರ ಮನಃಪೂರ್ವಕವಾದ ಅಭಿನಂದನೆಗಳಿಗೆ ಪಾತ್ರರಾಗಿದ್ದಾರೆ."

ಇದೇ ರೀತಿ ಇವರಿಗೆ ಬಿಡುವು ಕೊಡುವ ಸಂದರ್ಭದಲ್ಲಿ ಸಮ್ಮೇಳನದ ವಾರ್ಷಿಕಾಧಿವೇಶನವು ಈ ಕೆಳಗಿನ ನಿರ್ಣಯವನ್ನು ಸರ್ವಾನುಮತದಿಂದ ಅಂಗೀಕರಿಸಿರುತ್ತದೆ:—

"ಈಗ ನಾಲ್ಕು ವರ್ಷಗಳಿಂದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದು ಅವಿಶ್ರಾಂತವಾಗಿ ದುಡಿದು, ಅದರ ಕಾರ್ಯಕಲಾಪವನ್ನು ಬಹುಮುಖವಾಗಿ ಹಬ್ಬಿಸಿ ಬೆಳಸಿ ಪರಿಷತ್ತಿನ ಉದ್ದೇಶಗಳು ಸಿದ್ಧಿಸುವಂತೆಯೂ ಅದರ ಕೀರ್ತಿ ಹರಡುವಂತೆಯೂ ಸರ್ವರೀತಿಯಿಂದಲೂ ಕೆಲಸಮಾಡಿ ಈಗ ಆ ಸ್ಥಾನವನ್ನು ಬಿಟ್ಟುಕೊಟ್ಟಿರುವ ಶ್ರೀಮಾನ್ ದೇವನಹಳ್ಳಿ ವೆಂಕಟರಾಮಯ್ಯನವರ ಗುಂಡಪ್ಪನವರಿಗೆ ಪರಿಷತ್ತಿನ ಈ ವಾರ್ಷಿಕಾಧಿವೇಶನವು ತನ್ನ ಹೃತ್ಪೂರ್ವಕವಾದ ವಂದನೆಯನ್ನು ಸಲ್ಲಿಸುತ್ತದೆ; ಅಲ್ಲದೆ ಈ ಮಹನೀಯರು ಈವರೆಗಿನಂತೆಯೇ ಮುಂದೆಯೂ ಪರಿಷತ್ತಿನ ಕಾರ್ಯದಲ್ಲಿ ಆತ್ಮೀಯಭಾವದಿಂದ ಸಹಕರಿಸುವರೆಂದು ದೃಢವಾಗಿ ನಂಬಿದೆ."

ಅಲ್ಲದೆ ೨೧-೧-೧೯೩೭ರಲ್ಲಿ ನಡೆದ ಪರಿಷತ್ತಿನ ಹೊಸ ಕಾರ್ಯನಿರ್ವಾಹಕ ಮಂಡಲಿಯಲ್ಲಿ ಶ್ರೀಮಾನ್ ಗುಂಡಪ್ಪನವರ ಸೇವೆಯನ್ನು ಈ ಕೆಳಗೆ ಕಂಡಂತೆ ಪ್ರಶಂಸೆಮಾಡಲಾಗಿದೆ:—

"ಕಳೆದ ನಾಲ್ಕು ವರ್ಷಗಳಿಂದ ಪರಿಷತ್ತಿನ ಉಪಾಧ್ಯಕ್ಷರಾಗಿದ್ದುಕೊಂಡು, ಪರಿಷತ್ತಿನ ಕಾರ್ಯಕ್ಷೇತ್ರವನ್ನು ವಿಸ್ತಾರಗೊಳಿಸಿ, ಅದಕ್ಕೆ ಬರುತ್ತಿದ್ದ ಸರಕಾರದ ಸಹಾಯದ್ರವ್ಯವನ್ನು ಹೆಚ್ಚುಮಾಡಿಸಿ, ಸದಸ್ಯಸಂಪತ್ತನ್ನು ಬೆಳಸಿ, ಒಟ್ಟಿನ ಘನತೆಯನ್ನು ಹೆಚ್ಚಿಸಿ, ಅವಿಶ್ರಾಂತವಾಗಿ ದುಡಿದು ಪರಿಷತ್ತಿಗೆ ಬಹುವಿಧಗಳಲ್ಲಿ ಉಪಕಾರಗಳನ್ನು ಮಾಡಿ, ಈಗ ಉಪಾಧ್ಯಕ್ಷಪದವಿಯನ್ನು ಬಿಟ್ಟು ನಿವೃತ್ತಿಪಡೆದಿರುವ ಶ್ರೀಮಾನ್ ಡಿ. ವಿ. ಗುಂಡಪ್ಪನವರಿಗೆ ಪರಿಷತ್ತಿನ ಕಾ॥ ನಿ॥ ಮಂಡಲಿ ಪರಿಷತ್ತಿನ ಪರವಾಗಿ ತನ್ನ ಕೃತಜ್ಞತಾಪೂರ್ವಕವಾದ ವಿಶೇಷ ವಂದನೆಗಳನ್ನು ಸಮರ್ಪಿಸುತ್ತದೆ; ಮತ್ತು ತಮ್ಮ ಜ್ಞಾನಾನುಭವಗಳ ಸಹಾಯವನ್ನು ಇವರು ಇನ್ನುಮುಂದಕ್ಕೂ ಪರಿಷತ್ತಿಗೆ ಕೊಡುತ್ತಾಬರಬೇಕೆಂದು ಬೇಡುತ್ತದೆ."

ಮೇಲ್ಕಂಡ ಪ್ರಶಂಸೆಗಳ ಜೊತೆಗೆ ನಾವು ಹೇಳಬಯಸುವುದಿಷ್ಟೆ: ಶ್ರೀಮಾನ್ ಗುಂಡಪ್ಪನವರು ಉಪಾಧ್ಯಕ್ಷರಾಗಿ ಪರಿಷತ್ತಿಗೆ ಅಮೋಘವಾದ ಸೇವೆಯನ್ನು ಸಲ್ಲಿಸಿರುವುದು ಮಾತ್ರವೇ ಅಲ್ಲದೆ ಪರಿಷತ್ಪತ್ರಿಕೆಯ ಸಂಪಾದಕ ಮಂಡಲಿಯ

ಅಧ್ಯಕ್ಷರಾಗಿದ್ದುಕೊಂಡು ಈ ಪತ್ರಿಕೆಯ ಬೆಳವಣಿಗೆಗೆ ಉಪಯುಕ್ತವಾದ ಸಲಹೆಗಳನ್ನು ಕೊಡುತ್ತಾ ನಾನಾವಿಧವಾಗಿ ಸಹಾಯಮಾಡುತ್ತಾ ಬಂದಿರುತ್ತಾರೆ. ಇದಕ್ಕಾಗಿ ಇವರಿಗೆ ನಮ್ಮ ವಾಚಕರ ಪರವಾಗಿ ವಂದನೆಗಳನ್ನು ಸಮರ್ಪಿಸಿ, ಇವರು ಮುಂದೆ ಯಾವ ಘನವಾದ ಸಾರ್ವಜನಿಕ ಕಾರ್ಯದಲ್ಲೇ ನಿರತರಾಗಲಿ ಅಲ್ಲಿ ಇವರಿಗೆ ಸಮಸ್ತ ಸನ್ಮಂಗಳವೂ ಲಭಿಸುವಂತೆ ದೇವರು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಇನ್ನು ಶ್ರೀಮಾನ್ ಗುಂಡಪ್ಪನವರ ಸ್ಥಾನದಲ್ಲಿ ಪರಿಷತ್ತಿನ ಉಪಾಧ್ಯಕ್ಷ ಪದವಿಗೂ, ಪರಿಷತ್ಪತ್ರಿಕೆಯ ಸಂಪಾದಕ ಮಂಡಲಿಯ ಅಧ್ಯಕ್ಷ ಪದವಿಗೂ ದಯಮಾಡಿಸಿರುವ ಶ್ರೀಮಾನ್ ಶ್ರೀಕಂಠಯ್ಯನವರ ವಿಚಾರವಾಗಿ ಹೆಚ್ಚಿನ ಪ್ರಶಂಸೆ ಮಾಡಬೇಕಾದ ಅಗತ್ಯವಿಲ್ಲವೆಂತ ನಮ್ಮ ಭಾವನೆ. ಏತಕ್ಕೆಂದರೆ, ಅನ್ಯಾದೃಶವಾದ ಸರ್ವತೋಮುಖವೂ ಆದ ಇವರ ವಿದ್ಯಾವೈದುಷ್ಯವೂ, ನೈಜವೂ ಉತ್ಕಟವೂ ಆದ ಭಾಷಾಪ್ರೇಮವೂ ಸಹ ಸಮಸ್ತ ಕರ್ಣಾಟಕದಲ್ಲಿಯೂ ಸರ್ವಜನವಿದಿತವಾದ ಅಂಶಗಳೇ ಆಗಿವೆ. ಕನ್ನಡದ ಏಳಿಗೆಗೆ ತಮ್ಮ ತನು ಮನ ಧನಗಳನ್ನು ನಿವೇದನಮಾಡಿ ದುಡಿಯುತ್ತಿರುವವರಲ್ಲಿ ಇವರು ಅಗ್ರಗಣ್ಯರೆನಿಸಿ ಪ್ರಖ್ಯಾತರಾಗಿರುತ್ತಾರೆ. ಸುಪ್ರಸಿದ್ಧರಾದ ಇಂತಹ ವಿದ್ವನ್ಮಣಿಗಳು ಪರಿಷದ್ಯಂತ್ರವನ್ನು ಮುಂದೆ ಹೆಚ್ಚಿನ ಪ್ರಗತಿಮಾರ್ಗಕ್ಕೆ ನಡಸಲು ದೊರೆತದ್ದು ಕನ್ನಡಿಗರ ಭಾಗ್ಯೋದಯವೇ ಸರಿ. ವಿದ್ಯಾರ್ಥಿದಶೆಯಲ್ಲಿ ನಮ್ಮ ಸಹಪಾಠಿಗಳಾಗಿದ್ದ ಶ್ರೀಮಾನ್ ಶ್ರೀಕಂಠಯ್ಯನವರೊಡನೆ ಕಲೆತು ಯಥಾಶಕ್ತಿ ಕನ್ನಡದ ಸೇವೆಮಾಡುವ ಸುಯೋಗವು ಲಭಿಸಿರುವುದರಿಂದ ನಮಗುಂಟಾಗಿರುವ ಆನಂದಕ್ಕೆ ಪಾರವೇ ಇಲ್ಲ. ಇಂತಹ ಮಹನೀಯರ ನೇತೃತ್ವದಲ್ಲಿ ಪರಿಷತ್ತು ಇತೋಪ್ಯತಿಶಯವಾದ ಅಭಿವೃದ್ಧಿಯನ್ನು ಹೊಂದಿ ಸರ್ವರ ಮನ್ನಣೆಗೂ ಪಾತ್ರವಾಗುವಂತಾಗಲೆಂದೂ, ಪರಿಷತ್ಪತ್ರಿಕೆಯು ಹೆಚ್ಚು ಪ್ರಯೋಜನಕಾರಿಯಾಗುವಂತಾಗಲೆಂದೂ ಆಶಿಸುತ್ತೇವೆ.

ಪರಿಷತ್ತಿನ ಕೇಂದ್ರಸ್ಥಾನವಾದ ಬೆಂಗಳೂರು ನಗರದಲ್ಲಿ ೧೦-೧೦-೧೯೩೭ರಲ್ಲಿ ನಡೆದ ಕನ್ನಡ ಹಬ್ಬದ ವಿವರಗಳನ್ನು ಈ ಪತ್ರಿಕೆಯ ಬೇರೊಂದು ಕಡೆಯಲ್ಲಿ ಕೊಟ್ಟಿದೆ (ಪುಟ ೧೪೯–೧೬೪). ಕರ್ಣಾಟಕದ ಇತರ ಕೆಲವು ಭಾಗಗಳಲ್ಲಿಯೂ ಈ ಹಬ್ಬವು ಇದೇ ರೀತಿ ನಡೆದಿದ್ದರೂ ಆ ಸಂಬಂಧವಾದ ವರದಿಗಳು ನಮಗೆ ತಲಪಿಲ್ಲವಾದ್ದರಿಂದ ಪ್ರಯುಕ್ತ ವಿವರಗಳನ್ನು ಪ್ರಕಟಿಸಲು ಸಾಧ್ಯವಾಗದೆ

**ಕನ್ನಡ ಹಬ್ಬ: ಮೈಸೂರು ನಗರದಲ್ಲಿ**

ಹೋದುದಕ್ಕಾಗಿ ವಿಷಾದಿಸುತ್ತೇವೆ. ನಮ್ಮ ಸಂಸ್ಥಾನದ ರಾಜಧಾನಿಯಾದ ಮೈಸೂರು ನಗರದಲ್ಲಿ ಈ ಉತ್ಸವವು ವಿಶೇಷ ವಿಜೃಂಭಣೆಯಿಂದ ನಡೆಯಿತೆಂದು ವೃತ್ತಪತ್ರಿಕೆಗಳ ಮೂಲಕವೂ, ಇತರ ವಿಧವಾಗಿಯೂ ತಿಳಿಯಬಂದಿರುವುದರಿಂದ ಈ ವಿಚಾರದಲ್ಲಿ ನಮ್ಮ ವಾಚಕರ ಅವಗಾಹನೆಯ ಬಗ್ಗೆ ಒಂದೆರಡು ಅಂಶಗಳನ್ನು ಶ್ರುತಪಡಿಸಲಪೇಕ್ಷಿಸುತ್ತೇವೆ.

ಈ ಉತ್ಸವವು ೧೪-೧೨-೧೯೩೭ರಲ್ಲಿ ಮೈಸೂರು ನಗರದಲ್ಲಿ ಆ ನಗರದ ಮತ್ತು ಡಿಸ್ಟ್ರಿಕ್ಟಿನ ಕರ್ಣಾಟಕ ಸಂಘಗಳ ಆಶ್ರಯದಲ್ಲಿ ನಡೆಯಿತು. ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ಅಧ್ಯಕ್ಷಪದವಿಯನ್ನಲಂಕರಿಸಿದ್ದರು. ಉತ್ಸವವು 'ರಂಗಾಚಾರ್ಲು ಸ್ಮಾರಕ ಭವನ'ದಲ್ಲಿ ಅತ್ಯಂತ ವೈಭವದೊಡನೆ ನೆರವೇರಿತು. ಸ್ತ್ರೀಪುರುಷರೂ, ಆಬಾಲವೃದ್ಧರೂ ಅಸಂಖ್ಯಾತರಾಗಿ ಉತ್ಸವದಲ್ಲಿ ಭಾಗಿಗಳಾಗಿದ್ದರು. ಪ್ರಸಿದ್ಧರಾದ ಹಲವು ತರುಣ ಸಾಹಿತಿಗಳೂ, ಮಹಿಳೆಯರೂ ಕೇವಲ ಉತ್ಸಾಹ ಭರಿತರಾಗಿ ಶ್ರಮಿಸಿ ಉತ್ಸವದಲ್ಲಿ ಭಾಗವಹಿಸಿದುದೇ ಉತ್ಸವವು ಯಶಸ್ವಿಯಾಗಿಯೂ, ಜಯಪ್ರದವಾಗಿಯೂ ನಡೆಯಲು ಮುಖ್ಯಕಾರಣವೆನ್ನಬಹುದು. ಉಪನ್ಯಾಸ, ಕಾವ್ಯವಾಚನ, ಕಂಠಪಾಠಸ್ಪರ್ಧೆ, ಅಭಿನಯ, ನಾಟಕ—ಮುಂತಾದುವುಗಳೆಲ್ಲಾ ಉತ್ಕೃಷ್ಟವಾಗಿ ನಡೆದು ಜನರಿಗೆ ಮನೋರಂಜಕವಾಗಿದ್ದುವು. ಇವುಗಳ ಪೈಕಿ ಒಂದು ವಿಧವಾದ ಮೌನಾಭಿನಯವೆಂದು ಕರೆಯಬಹುದಾದ "ದೃಶ್ಯಾವಳಿ" ಗಳು* ಹೊಸ ಸಮೂನೆಯವುಗಳಾದುದರಿಂದ ಜನರಲ್ಲಿ ಕುತೂಹಲವನ್ನು ಹೆಚ್ಚಿಸುವಂಥವು ಗಳಾಗಿದ್ದುವು. ಉತ್ಸವದ ಪ್ರಯೋಜನವು ಹೆಚ್ಚು ಮಂದಿಗೆ ದೊರೆಯುವಂತೆ 'ಲೌಡ್ ಸ್ಪೀಕರ್'ನ (Loud Speaker) ಏರ್ಪಾಟು ಮಾಡಿದ್ದುದು ಒಂದು ವಿಶೇಷ. ಉತ್ಸವದ ಕೊನೆಯಲ್ಲಿ ಶ್ರೀಮಾನ್ ಶ್ರೀಕಂಠಯ್ಯನವರು ಮಾಡಿದ ಭಾಷಣವು ಸರ್ವರನ್ನೂ ಸುಷುಪ್ತಾವಸ್ಥೆಯಿಂದ ಎಚ್ಚರಗೊಳಿಸುವಂತಿತ್ತು. ಅದರ ಸಾರಾಂಶ ವನ್ನು 'ವಿಶ್ವಕರ್ಣಾಟಕ' ಪತ್ರಿಕೆಯಿಂದ ಉದ್ಧರಿಸಿ ಈ ಕೆಳಗೆ ಕೊಟ್ಟಿದೆ:—

ಕಾರ್ಯಕಲಾಪಗಳಾದ ತರುವಾಯ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ತಮಗರ್ಪಿಸಿದ ಹಾರವನ್ನು ಹಾಗೆಯೇ ಕನ್ನಡ ನಾಡಿನ ಭೂಪಟಕ್ಕೆ ಹಾಕಿ ಮುಂದೆ ಬಂದು, ಈ ರೀತಿ ಭಾಷಣಮಾಡಿದರು :—

"ಕನ್ನಡ ದಾಸನಾದ ನನಗೆ ನಿಮ್ಮ ಆಶೀರ್ವಾದ ಮತ್ತು ಪ್ರೇಮ ಬಲದಿಂದ ಅನೇಕ ಸಭೆಗಳಲ್ಲಿ ಅಧ್ಯಕ್ಷಸ್ಥಾನವನ್ನು ಅಲಂಕರಿಸುವ ಗೌರವ ದೊರತಿದೆ. ಆದರೆ, ಈ ದಿನದ ಸಭೆಯಲ್ಲಿ ಕಂಡಷ್ಟು ಶ್ರದ್ಧೆ, ಸಡಗರ, ಉತ್ಸಾಹ, ಕೋಲಾಹಲ ಮತ್ತೆಲ್ಲೂ ನಾನು ಕಂಡಿರಲಿಲ್ಲ. ಕನ್ನಡವನ್ನು ಕಂಡರೆ ಅಕ್ಕರೆ ಮತ್ತು ಗೌರವವುಳ್ಳವರು ಈ ದಿನದ ಉತ್ಸವದ ಆನಂದವನ್ನೂ, ಇದರಿಂದ ಆಗಬಹುದಾದ ಪರಿಣಾಮವನ್ನೂ ಮನಗಂಡಿರ ಬೇಕು."

ಎಂದು ನಿಲ್ಲಿಸಿ, ಕನ್ನಡನಾಡಿನ ಭೂಪಟವನ್ನು ನಿರ್ದೇಶಿಸಿ, ಮತ್ತೆ ಈ ರೀತಿ ಮುಂದುವರಿಸಿದರು :

* ಪಾಶ್ಚಾತ್ಯ ದೇಶಗಳಲ್ಲಿ 'Tableau' ಎಂಬ ಹೆಸರಿನಿಂದ ನಟರು ರಂಗಸ್ಥಳದಲ್ಲಿ ವಿಚಿತ್ರರೀತಿಯಿಂದ ನಿಂತು ಯಾವುದಾದರೂ ದೃಶ್ಯವನ್ನು ಅಭಿನಯಿಸಿ ತೋರಿಸುವುದಕ್ಕೆ 'ಮೌನಾಭಿನಯ' ಅಥವಾ 'ದೃಶ್ಯಾವಳಿ' ಎಂದು ಹೇಳಬಹುದು. ಇದೇ ರೀತಿ ಮೈಸೂರಿನಲ್ಲಿ ನಡೆದ ಉತ್ಸವದಲ್ಲಿ ನಾಟಕದ ಅಂಗ ಗಳಾದ ಅಭಿನಯ, ಸಾಹಿತ್ಯ, ಸಂಗೀತ—ಈ ಮೂರನ್ನೂ ಒಂದು ವಿಶೇಷರೀತಿಯಲ್ಲಿ ಜೋಡಿಸಿ ಪ್ರೇಕ್ಷಕರಿಗೆ ರಂಜನೆಯುಂಟಾಗುವಂತೆ ಕನ್ನಡ ಸಾಹಿತ್ಯದಲ್ಲಿ ಕೀರ್ತಿತವಾಗಿರುವ ಒಂದೊಂದು ಸನ್ನಿವೇಶವನ್ನು ಆರಿಸಿ ಕೊಂಡು ರಂಗಸ್ಥಳದ ಮುಂಭಾಗದಲ್ಲಿ ನಟರು ಕಥಾಸಂದರ್ಭವನ್ನು ಕೇವಲ ಅಭಿನಯದ ಮೂಲಕವೂ, ಆ ಅಭಿನಯಕ್ಕೆ ಅನುಗುಣವಾದ ಸಾಹಿತ್ಯಭಾಗವನ್ನು ರಂಗದ ಹಿನ್ನೆಲೆಯಿಂದ ವಾಚನಕಾರರು ಓದಿ ಭಾವವನ್ನು ಸ್ಪಷ್ಟಗೊಳಿಸುವಂತೆಯೂ, ಅಭಿನಯಕ್ಕೂ ವಾಚನಕ್ಕೂ ಹೊಂದಿಕೊಂಡು ಎರಡಕ್ಕೂ ಪುಷ್ಟಿ ಕೊಡುವಂತೆ ರಂಗದ ಹಿನ್ನೆಲೆಯಲ್ಲಿ ಸಂಕೀರ್ಣವಾದನವು ನಡೆಯುವಂತೆಯೂ ಏರ್ಪಡಿಸಿದ್ದುದು ತುಂಬಾ ಆಕರ್ಷಣೀಯವಾಗಿದ್ದಿತು.

"ಇಗೋ ಈ ಕನ್ನಡ ತಾಯಿ. ಈಕೆಯ ವಯಸ್ಸನ್ನು ನಾವು ಪರೀಕ್ಷಿಸಬೇಕಾ... ಕಂಡುಹಿಡಿಯಲೆಳಸಬೇಕಾಗಿಲ್ಲ. ಈ ತಾಯಿ ಬಹು ಕಾಲದಿಂದ ಬದುಕಿ ಬಂದಿ... ಬಹು ಮಂದಿ ವೀರಪುತ್ರರನ್ನೂ, ನಾರೀಮಣಿಗಳನ್ನೂ ಹೆತ್ತಿದ್ದಾಳೆ. ಅನೇಕ ಸಾಧು... ರಾಜಸಮ್ರಾಜರೂ ಈ ನಾಡಿನಲ್ಲಿ ಅವತಾರಮಾಡಿದ್ದಾರೆ.

"ಕನ್ನಡ ನಾಡಿನಲ್ಲಿ ದಿವ್ಯ ತೇಜಸ್ಸಿದೆ. ಪಂಪ, ರನ್ನ, ಕುಮಾರವ್ಯಾಸ, ... ಮುಂತಾದ ಕನ್ನಡ ಸಾಹಿತ್ಯ ರತ್ನಗಳನ್ನು ನೀವು ಕೇಳಿದ್ದೀರಿ. ಕನ್ನಡಿಗರಾದ ... ಯಾರಿಗೂ ತಲೆ ತಗ್ಗಿಸಬೇಕಾಗಿಲ್ಲ. ತಲೆಯೆತ್ತಿ ನಡೆಯಬೇಕಾಗಿದೆ. ನಮ್ಮ ... ಸ್ಥಾಪಿಸಿದ ರತ್ನಸಿಂಹಾಸನ ಇನ್ನೂ ನಡೆದುಕೊಂಡುಬರುತ್ತಿದೆ. ಕನ್ನಡ ನಾಡು ... ವಾಗಿಲ್ಲ. ಕನ್ನಡ ನಾಡಿನ ಭಾರವನ್ನು ಹೊತ್ತು ಮೈಸೂರು ನಿಂತಿದೆ, ನಮ್ಮ ... ಕೃಷ್ಣನ ಮೈಸೂರು!

"ಕನ್ನಡಿಗರು ನಮ್ಮ ಹಿಂದಿನವರು ಏನು ಮಾಡಿದರು; ಇಂದಿನವರೇನು... ತ್ತಿದ್ದಾರೆ; ಮುಂದಿನವರೇನು ಮಾಡಬೇಕು—ಎಂಬುದನ್ನು ತಿಳಿದು ವರ್ತಿಸಬೇಕು... ಮುಖ್ಯವಾಗಿ ನಮ್ಮ ಹೆಣ್ಣುಮಕ್ಕಳು ಕನ್ನಡಕ್ಕಾಗಿ ಕೊಂಚ ಕರುಳನ್ನು ಮರುಗಿಸಿ... ಕನ್ನಡ ತಾಯಿಯ ಸೇವೆಗಾಗಿ ಕೊಂಚ ಮನಸ್ಸುಮಾಡಿದರೆ, ಕನ್ನಡ ನಾಡಿನ ... ನುಡಿಯ ಭವಿಷ್ಯಕ್ಕೆ ಯಾವ ಭಯವೂ ಇಲ್ಲ.

"ಯಾವ ವಿಶ್ವಮಾತೆಯನ್ನು ನಾವು ಸೇವಿಸಿದರೂ ನಮ್ಮ ಮಾತೆಯನ್ನು ... ಬಿಡುವಂತಿಲ್ಲ. ನಮ್ಮ ತಾಯಿ ಎಷ್ಟೇ ಬಡವೆಯಾದರೂ ಆಕೆಯನ್ನು ... ಮಕ್ಕಳು ನೋಡಿಕೊಳ್ಳಬೇಕು. ವಾಸ್ತವವಾಗಿ ನಮ್ಮ ತಾಯಿ ಬಡವೆಯಲ್ಲ. ... ನಾವು ಹೆಮ್ಮೆಯಿಂದಿರಬಹುದಾಗಿದೆ. ಆಕೆಯ ಪಾದಪದ್ಮದಮೇಲೆ ಭಕ್ತಿ... ಪ್ರೀತಿಯಿಂದ ಹೂವಿಟ್ಟು, ಬೇಕಾದರೆ ಪ್ರಪಂಚವನ್ನೇ ಸುತ್ತಿಬರೋಣ. ... ಆಕ್ಷೇಪಣೆಯೂ ಇಲ್ಲ.

"ಕನ್ನಡವನ್ನು ಕುರಿತು ಹಲವರು ಹಲವಾಗಿ ಆಡುತ್ತಾರೆ. 'ಹಳ್ಳಿಯ ... ಅನ್ನುವವರು ಕೆಲವರು. 'ಅದರಲ್ಲೇನಿದೆ' ಎನ್ನುವವರು ಕೆಲವರು. ಬೆದರಿ... ಕೆಲವರು. ಕನ್ನಡ ತಾಯಿಗೆ ಹಾನಿ ತರದಂತೆ, ಅನ್ಯರ ಮಾತೆಯನ್ನು ಸೇವಿಸ... ವೆನ್ನುವವರು ಕೆಲವರು. ಇದೂ ಒಂದು ಬುದ್ಧಿವಂತಿಕೆಯೆ? ನಮ್ಮ ಮನೆಯಲ್ಲಿ ... ಯನ್ನು ಉಪವಾಸವಿರಿಸಿ, ಊರುತ್ಸವಕ್ಕೆ ಹೋಗುವುದೆ? ಪ್ರಪಂಚದ ಉತ್ಸ... ಮನೆಯನ್ನು ಬರಿದುಮಾಡುವುದೆ? ಕನ್ನಡಮಾತೆಯ ಮೂಲಕ ಭಾರತಮಾತೆ... ಸೇವಿಸೋಣ. ಕನ್ನಡಮಾತೆ ಉದ್ಧಾರವಾದರೆ ಭಾರತಮಾತೆಯೂ ವೃದ್ಧಿಯಾಗುತ್ತ...

ಕಡೆಯ ಮಾತಾಗಿ, "ನಮ್ಮ ತಾಯಿಯ ಅಡಿಯಲ್ಲಿ ನಿರ್ವಂಚನೆಯಿಂ... ಭಕ್ತಿಯಿಂದಲೂ ಒಂದು ಹೂವು ಹಾಕೋಣ. ಆಮೇಲೆ ಯಾವ ಎಲ್ಲೆಯಲ್ಲಾ... ಇರೋಣ. ಕನ್ನಡ ತಾಯಿಯನ್ನು ಮರೆಯದೆ ಆಕೆಯ ಮೂಲಕ ಸರ್ವ... ಸಾಧಿಸೋಣ. ತಾಯಿ ಹೆಮ್ಮೆಪಟ್ಟುಕೊಂಡರೆ ಮಕ್ಕಳು ಬದುಕಿಹೋಗುತ್ತಾರೆ. ... ತಾಯಿ ನಮ್ಮನ್ನು ಆಶೀರ್ವದಿಸಲಿ. ಆಕೆಯ ವಿಜಯಪತಾಕೆ ಹಾರಲಿ. ಈ ... ಎಲ್ಲೆಲ್ಲೂ ಬೆಳಗಲಿ. ಕನ್ನಡ ನಾಡು ದೊಡ್ಡದಾಗಲಿ." ಎಂದು ಹಾರೈಸಿ ಕುಳಿತರು.

ಮುಂದಿನ ವರ್ಷವೂ ಇದೇರೀತಿ ಕನ್ನಡ ಹಬ್ಬವು ಮೈಸೂರು ಸಂಸ್ಥಾನ... ಮಾತ್ರವೇ ಅಲ್ಲದೆ ಕರ್ಣಾಟಕದ ಸಮಸ್ತಭಾಗಗಳಲ್ಲಿಯೂ ವಿಜೃಂಭಣೆಯಿಂದ ನ... ಜನಸಾಮಾನ್ಯದಲ್ಲಿ ಕನ್ನಡದಮೇಲಿನ ಪ್ರೇಮವು ಹೆಚ್ಚುವಂತಾಗ... ಆಶಿಸುತ್ತೇವೆ. ಈ ಸಂದರ್ಭದಲ್ಲಿ ಉತ್ಸವದ ಕಾರ್ಯಕರ್ತರು ಕನ್ನಡವನ್ನು ... ಬಳಕೆಗೆ ತರಬೇಕಾದರೆ ಅನುಸರಿಸಬೇಕಾದ ಮಾರ್ಗಗಳು ಯಾವುವು ...

ವಿಚಾರವಾಗಿ ಹೊರಡಿಸಿರುವ ಪ್ರಕಟನೆಯಲ್ಲಿ ಉಪಯುಕ್ತವಾದ ಕೆಲವು ಸಲಹೆಗಳನ್ನು ಕೊಟ್ಟಿರುತ್ತಾರೆ. ಅವುಗಳನ್ನು ನಮ್ಮ ವಾಚಕರ ಅವಗಾಹನೆಗಾಗಿ ಈ ಕೆಳಗೆ ಕೊಟ್ಟಿರುತ್ತೇವೆ; ಕನ್ನಡದ ಅಭಿಮಾನಿಗಳೆಲ್ಲರೂ ಇವುಗಳನ್ನು ಆದಷ್ಟು ಮಟ್ಟಿಗೆ ಆಚರಣೆಗೆ ತರುವ ಪ್ರಯತ್ನಮಾಡಬೇಕೆಂಬುದೇ ನಮ್ಮ ಹಾರೈಕೆ:—

೧. ಮನೆಯ ಒಳಗೂ ಹೊರಗೂ ಸಾಧ್ಯವಾದವುಟ್ಟಿಗೆ ಕನ್ನಡವನ್ನೇ ಬಳಸುವುದು.

೨. ಕಾಗದಪತ್ರಗಳನ್ನು ಸಾಧ್ಯವಾದ ಮಟ್ಟಿಗೆ ಕನ್ನಡದಲ್ಲೇ ಬರೆಯುವುದು.

೩. ಮನೆಯವರಿಗೆ ಆಗಾಗ ಕನ್ನಡ ಸಾಹಿತ್ಯದ ಒಳ್ಳೆಯ ಗ್ರಂಥಗಳನ್ನು ಓದಿ ಹೇಳುವುದು.

೪. ಮನೆಯಲ್ಲಿ ಹೆಂಗಸರೂ ಮಕ್ಕಳೂ ಓದಲು ಬಯಸುವ ಕನ್ನಡ ಪುಸ್ತಕಗಳನ್ನೂ ಕನ್ನಡ ಪತ್ರಿಕೆಗಳನ್ನೂ ಅಸಡ್ಡೆಮಾಡದೆ ತಂದುಕೊಡುವುದು.

೫. ಮದುವೆ, ಮುಂಜಿ ಮೊದಲಾದುವುಗಳಲ್ಲಿ ಕನ್ನಡ ಪುಸ್ತಕಗಳನ್ನು ಉಡುಗೊರೆಯಾಗಿ ಓದಿಸುವ ಪದ್ಧತಿಯನ್ನು ಬಳಕೆಗೆ ತರುವುದು.

೬. ತಿಂಗಳಿಗೊಂದುಬಾರಿಯಾದರೂ ಪುಸ್ತಕದ ಅಂಗಡಿಗೆ ಹೋಗಿ "ಕನ್ನಡದಲ್ಲಿ ಹೊಸ ಪುಸ್ತಕ ಯಾವುದು ಬಂದಿದೆ?" ಎಂದು ವಿಚಾರಿಸುವುದು; ಇಷ್ಟಬಂದದ್ದನ್ನು ಕೊಂಡು ಓದುವುದು.

೭. 'ಕನ್ನಡದ ಏಳಿಗೆಗೆ ನಾನು ಏನು ಮಾಡಬಹುದು?' ಎಂದು ದಿವಸಕ್ಕೆ ಐದು ನಿಮಿಷವಾದರೂ ಶ್ರದ್ಧೆಯಿಂದ ಆಲೋಚಿಸುವುದು.

ಪ್ರಾಚ್ಯ ವಿದ್ವತ್ ಸಮ್ಮೇಳನದ ೯ನೆಯ ಅಧಿವೇಶನವು ೧೯೩೭ನೆಯ ಇಸವಿ ಡಿಸೆಂಬರ್ ೨೦ನೆಯ ತಾರೀಖು ಮೊದಲುಗೊಂಡು ತಿರುವನಂತಪುರದಲ್ಲಿ ನಡೆಯಿತಷ್ಟೆ.

**ಸಂಸ್ಕೃತ ಭಾಷೆ ರಾಷ್ಟ್ರಭಾಷೆಯಾಗ ಬಲ್ಲದೆ?**

ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತದ ಪ್ರೊಫೆಸರವರಾಗಿರುವ ಡಾ॥ ಎಫ್. ಡಬ್ಲ್ಯು. ಥಾಮಸ್ ಅವರು ಸಮ್ಮೇಳನದ ಅಧ್ಯಕ್ಷ ಪೀಠವನ್ನಲಂಕರಿಸಿದ್ದರು. ಅಲ್ಲದೆ, ಸಮ್ಮೇಳನದ ಅಂಗವಾಗಿ ನಡೆದ ಅನೇಕ ವಿದ್ವದ್ಗೋಷ್ಠಿಗಳಲ್ಲಿ ಒಂದಾದ ಪ್ರಾಚೀನ ಸಂಸ್ಕೃತ ಗೋಷ್ಠಿಗೂ ಅವರೇ ಅಧ್ಯಕ್ಷರಾಗಿದ್ದರು. ಆ ಗೋಷ್ಠಿಯ ಅಧ್ಯಕ್ಷರಾಗಿ ಅವರು ಸಂಸ್ಕೃತದ ಪ್ರಾಶಸ್ತ್ಯವನ್ನು ಕುರಿತು ಹೇಳಿದ ಕೆಲವು ವಾಕ್ಯಗಳನ್ನು ಈ ಕೆಳಗೆ ಕನ್ನಡಿಸಿದೆ:—

"ಸಂಸ್ಕೃತವು ಆಧುನಿಕ ಸಂಶೋಧನೆಗಳಿಂದ ಹೆಚ್ಚು ಹೆಚ್ಚು ಪ್ರಾಶಸ್ತ್ಯವನ್ನು ಸಂಪಾದಿಸಿದೆಯೇ ಹೊರತು ಕುಗ್ಗಿಹೋಗಿಲ್ಲ. ಭಾಷೆ ಮತ್ತು ಇತಿಹಾಸ ಸಂಶೋಧನೆಗಳಲ್ಲಿ ಸಂಸ್ಕೃತವು ಅತ್ಯಗತ್ಯವಾಗಿದೆ. ಇಂಡಿಯಾದೇಶದ ಮತ, ತತ್ತ್ವ, ದರ್ಶನಾದಿ ಶಾಸ್ತ್ರಗಳಲ್ಲಿ ಉಚ್ಚ ತರಗತಿಯ ಶಿಕ್ಷಣ ಪಡೆಯಬೇಕೆನ್ನುವವರಿಗೆ ಸಂಸ್ಕೃತ ಭಾಷೆಯ ಸಹಾಯ ಅವಶ್ಯವಾಗಿ ಬೇಕು.

"ದೊಡ್ಡ ದೊಡ್ಡ ನಗರಗಳಲ್ಲಿ ಇಂಗ್ಲಿಷ್ ಭಾಷೆಯ ಸಹಾಯ... ಆಧುನಿಕ ಸಮಾಜ ಜೀವನವನ್ನೂ, ಅಂತರರಾಷ್ಟ್ರೀಯ ರಾಜ... ವ್ಯವಹಾರಗಳನ್ನೂ ನಡಸಿಕೊಂಡು ಹೋಗಲು ಸಾಧ್ಯವಾ... ಎಂಬುದೇನೋ ಸರಿಯೆ. ಆದರೆ ಅಂಥ ಜೀವನವು ಪರಾಶ್ರ... ರಿಂದ ಮಾತೃಭೂಮಿಯಲ್ಲಿ ಬೇರುಬಿಡದೆ, ಸುತ್ತಮುತ್ತಿನ ಸ್ಥಿ... ಗಳಿಗೆ ಬಲಾತ್ಕಾರದಿಂದ ಹೊಂದಿಕೊಳ್ಳಬೇಕಾಗಿದೆಯೇ ಹೊರತು ... ವಾಗಿ ಬೆರೆಯಲಾರದು. ಭರತಖಂಡದಮೇಲೆ ಯೂರೋಪಿನ ಪ್ರ... ಭಾರ ಬೆನ್ನುಬಗ್ಗುವಷ್ಟು ಕುಳಿತುಬಿಟ್ಟಿದೆ; ಭರತಖಂಡವು ಪರಾ... ದಿಂದ ಎಷ್ಟುಮಟ್ಟಿಗೆ ತನ್ನ ಪ್ರಗತಿಯನ್ನು ಸಾಧಿಸಿಕೊಳ್ಳುತ್ತಿ... ಅಷ್ಟುಮಟ್ಟಿಗಾದರೂ ತನ್ನ ಸ್ವಶಕ್ತಿಯಿಂದ ಸಾಧಿಸ... ಶುಭೋದಯವನ್ನು ನಾವು ಕಾಣಬೇಕಾಗಿದೆ.

"ಭೂಮಿಯ ಬಹುಭಾಗಗಳಲ್ಲಿ ಹರಡಿರುವ ಇಂಗ್ಲಿಷ್ ... ನಿಸ್ಸಂದೇಹವಾಗಿ ಭರತಖಂಡದ ಅಂತರರಾಷ್ಟ್ರೀಯ ಭಾಷೆ... ನಿಲ್ಲುವುದು. ತನ್ನ ಒಳಗಿನ ವ್ಯವಹಾರಗಳಿಗೆ ಅದಕ್ಕೆ ಮತ್ತ... 'ಸಾರ್ವತ್ರಿಕ' ಭಾಷೆ ಬೇಡವೆ? ಬೇಕಾಗಿದ್ದಲ್ಲಿ, ಆ ಭಾಷೆ ಯಾ... ಸಂಸ್ಕೃತ ಆ ಭಾಷೆಯಾಗಲಾರದೆ? ಈ ಪ್ರಶ್ನೆಗೆ ಉತ್ತರ ... ಚೈತನ್ಯ ನನಗಿಲ್ಲ. ಆದರೆ ಕೆಲವು ಸ್ವಯಂವೇದ್ಯವಾದ ವಿಚಾ... ಅಂಥ ಸಾರ್ವತ್ರಿಕವಾದ ಭಾಷೆ ಇಲ್ಲದೆಯೇ ಇರಬಹುದು; ... ಎರಡು ಮೂರು ಕಡೆಗಳಲ್ಲಿ ಅಂಥ ಎರಡು ಮೂರು ಭಾಷೆ... ಪ್ರಚಾರದಲ್ಲಿರಬಹುದು; ಇಂಥ ಸಂದರ್ಭದಲ್ಲಿ ಸಮಸ್ಯೆ... ಮುಂದಕ್ಕೆ ಹಾಕಿದಹಾಗಾಯಿತೇ ಹೊರತು ಬಿಡಿಸಿದಂತಾಗ... ಜೀವಂತವಾಗಿರುವ 'ದೇಶಭಾಷೆ'ಗಳ ಪೈಕಿ ಒಂದು ಆ ಕಾರ್ಯ... ಮಾಡಬಹುದು: ಈ ಸಲಹೆಯನ್ನು ಕೊಡುವವರಿದ್ದಾರೆ ... ನಮಗೆ ತಿಳಿದ ವಿಷಯವೇ; ಆಧುನಿಕ ದೇಶಭಾಷೆಗಳು ... ವ್ಯವಹಾರಕ್ಕೆ ಅಗತ್ಯವಾದ ಇಂಗ್ಲಿಷ್ ಭಾಷೆಯ ಪದಗಳನ್ನು ... ತೆಗೆದುಕೊಳ್ಳಲು ಹಿಂಜರಿಯದಿರುವುದು ಮೇಲಿನ ಕಾರ್ಯ... ನಿರ್ವಹಿಸಲು ಒಂದು ದೊಡ್ಡ ಸಹಾಯವೆಂದೇ ಹೇಳಬೇಕಾಗಿದೆ.

"ಆದರೆ, ಈ ದೇಶದಲ್ಲಿ ಭಿನ್ನ ಭಾಷಾ ಪ್ರಾಂತಗಳು ಅನೇಕವಾ... ವುದರಿಂದಲೂ, ಈ ದೇಶವು ಒಕ್ಕೂಡಬೇಕಾದರೆ ಸರ್ವಜನಾದ... ವಾದ ಒಂದು ಭಾಷೆ ಅಗತ್ಯವಾದದ್ದರಿಂದಲೂ ಸಂಸ್ಕೃತವನ್ನು ... ಸುಲಭರೂಪಕ್ಕೆ ತಂದಪಕ್ಷದಲ್ಲಿ ಅದು ಸದ್ಯದ ಆವಶ್ಯಕತೆಗೆ ... ಕೊಳ್ಳಲಾರದೆ? ಈ ಪ್ರಶ್ನೆ ಅಸಾಧ್ಯವಾಗಿ ತೋರಬಹುದು. ... ವಿಚಾರಿಸತಕ್ಕದ್ದಾಗಿದೆ. ಎಲ್ಲ ಆಧುನಿಕ ವಿಷಯ ವಿಚಾರಗ...

ತಿಳಿಸಲು ಸಂಸ್ಕೃತ ಒದಗಿಬರುತ್ತದೆಯೆಂಬ ಅಂಶವನ್ನು ಈಗ ನೂರು ವರ್ಷಗಳ ಹಿಂದೆಯೇ ಡಾ॥ ಬ್ಯಾಲಂಟೈನ್ ಅವರೂ ಅವರ ಸಹೋದ್ಯೋಗಿಗಳೂ ಕಾಶಿಯಲ್ಲಿ ತಮ್ಮ ಪ್ರಸಿದ್ಧವಾದ ಪ್ರಯೋಗಗಳ ಮೂಲಕ ಪ್ರಸ್ತಾಪಿಸಿದ್ದಾರೆ. ಅಲ್ಲದೆ, ಯಾವುದಾದರೂ ಒಂದು ದೇಶಭಾಷೆ ಸಾರ್ವತ್ರಿಕ ಭಾಷೆಯಾಗುವ ಬದಲು ಸಂಸ್ಕೃತ ಆ ಸ್ಥಾನಕ್ಕೆ ಬರುವುದರಲ್ಲಿ ಮತ್ತೊಂದು ಗುಣವೆಂದರೆ: ಆರ್ಯ ದೇಶಭಾಷೆಯಾಗಲಿ ದ್ರಾವಿಡ ದೇಶಭಾಷೆಯಾಗಲಿ—ಅನೇಕ ದೇಶಭಾಷೆಗಳಲ್ಲಿ ಯಾವ ಪದದ ಸಂಸ್ಕೃತ ಪ್ರತಿಪದವಾದರೂ ಸಾಮಾನ್ಯವಾಗಿ ಎಲ್ಲ ದೇಶಭಾಷೆಗಳಲ್ಲಿಯೂ ರೂಢಿಯಲ್ಲಿರತಕ್ಕದ್ದೇ ಆಗಿರುತ್ತದೆ. ಮಧ್ಯ ಏಷ್ಯ ಮತ್ತು ಪೂರ್ವ ಏಷ್ಯಗಳ ಬಹುಭಾಗಗಳ ಮತಗ್ರಂಥಗಳಿಗೆ ಸಂಸ್ಕೃತ ಭಾಷೆ ಮೂಲಭೂತವಾಗಿರುವುದರಿಂದ, ಅನೇಕ ಪ್ರಾಚ್ಯದೇಶಗಳನ್ನು ಒಟ್ಟುಗೂಡಿಸಲು ಸಂಸ್ಕೃತ ಸಹಾಯಕವಾಗಬಹುದು.''

ಭರತಖಂಡದ ರಾಷ್ಟ್ರಭಾಷೆ ಇಂಗ್ಲಿಷ್ ಆಗತಕ್ಕದ್ದೆ, ಹಿಂದಿಯೆ ಎಂದು ಇನ್ನೂ ವಾದ ವಿವಾದಗಳು ನಡೆಯುತ್ತಲೇ ಇವೆಯಷ್ಟೆ. ಈ ಮಧ್ಯೆ, ಸಂಸ್ಕೃತಕ್ಕೆ 'ರಾಷ್ಟ್ರಭಾಷೆ'ಯ ಪಟ್ಟಗಟ್ಟಬಾರದೇಕೆ? ಎಂದು ಹೊಸ ಪ್ರಶ್ನೆಯೊಂದು ತಲೆಯೆತ್ತಿದೆ. ಈ ಪ್ರಶ್ನೆಯ ಸಾಧ್ಯಾಸಾಧ್ಯತೆಗಳು ಏನಾದರೂ ಇರಲಿ, ರಾಷ್ಟ್ರಭಾಷಾ ಸಮಸ್ಯೆಯನ್ನು ಬಿಡಿಸುವವರು ಇದನ್ನೂ ಗಮನಿಸಬೇಕಾಗಿದೆ.

**ಶ್ರೀಮಾನ್ ಚ॥ ವಾಸುದೇವಯ್ಯನವರ ಭಾವಚಿತ್ರದ ಅನಾವರಣ**

ಜನಜೀವನದಲ್ಲಾಗಲಿ, ರಾಜಕೀಯ, ಸಾಮಾಜಿಕ, ಸಾಹಿತ್ಯ ಮುಂತಾದ ಕ್ಷೇತ್ರಗಳಲ್ಲಾಗಲಿ ಲೋಕೋಪಕಾರಕವಾದ ಕೆಲಸಗಳನ್ನು ಮಾಡಿ ಜನ್ಮಸಾಫಲ್ಯ ಗೊಳಿಸಿಕೊಂಡಿರುವ ಮಹಾಪುರುಷರಿಗೆ ಅಮೌಲ್ಯವಾದ ತಮ್ಮ ಸೇವೆಗನುರೂಪವಾದ ಮನ್ನಣೆಯು ತಮ್ಮ ಜೀವಮಾನದಲ್ಲಿಯೇ ಲಭ್ಯವಾಗುವುದು ಅಪರೂಪವಾದ ಪ್ರಮೇಯವೆನ್ನುವುದು ಅನುಭವಸಿದ್ಧವಾದ ವಿಷಯ. ಹೀಗಿರುವಲ್ಲಿ ಬೆಂಗಳೂರು ನಗರಕ್ಕೆ ಸೇರಿದ ಮಲ್ಲೇಶ್ವರದ ಕರ್ಣಾಟಕ ಸಂಘದವರು ಸುಪ್ರಸಿದ್ಧ ಕನ್ನಡ ಸಾಹಿತಿಗಳಾದ ಶ್ರೀಮಾನ್ ಚ॥ ವಾಸುದೇವಯ್ಯನವರನ್ನು ೧೯೩೭ನೆಯ ಡಿಸೆಂಬರ್ ೧೨ನೆಯ ತಾರೀಖು ಸಾಯಂಕಾಲ ಅಲ್ಲಿಯ 'ರಾಮಭಜನಮಂದಿರ'ಕ್ಕೆ ಬರಮಾಡಿಕೊಂಡು ಅಲ್ಲಿ ನೆರೆದಿದ್ದ ವಿದ್ವತ್ಸಭೆಯಲ್ಲಿ ಅವರಿಗೊಂದು ಮಾನಪತ್ರವನ್ನರ್ಪಿಸಿ ಅವರ ಭಾವಚಿತ್ರವೊಂದನ್ನು ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಶ್ರೀಮಾನ್ ಎಂ. ಶಾಮರಾವ್, ಎಂ.ಎ. ಅವರಿಂದ ಅನಾವರಣ ಮಾಡಿಸಿದ್ದು ಸ್ತೋತ್ರಾರ್ಹವಾಗಿರುತ್ತದೆ. ಈ ಸಭೆಗೆ ಅನೇಕ ಮಂದಿ ಸಾಹಿತ್ಯಪ್ರೇಮಿಗಳಾದ ಮಹಿಳೆಯರೂ, ಮಹನೀಯರೂ ದಯಮಾಡಿಸಿದ್ದರು. ಪ್ರಾರ್ಥನೆ, ಸಂಗೀತ, ಗ್ರಂಥ ಪಠನ, 'ಗೋಪಿನ ಹಾಡಿ'ನ ಅಭಿನಯ ಇವುಗಳ ಮಧ್ಯೆ ಶ್ರೀ॥ ಗಳಾದ ಎಚ್. ರಂಗಾಚಾರ್ಯರು, ಎಂ. ಶಾಮರಾಯರು ಮತ್ತು

ಡಿ. ವಿ. ಗುಂಡಪ್ಪನವರು ಶ್ರೀಮಾನ್ ವಾಸುದೇವಯ್ಯನವರ ಸಾಹಿತ್ಯಸೇವೆಯ
ವಿಶೇಷವಾಗಿ ಪ್ರಶಂಸೆಮಾಡಿ ಇವರಿಂದ ರಚಿತವಾಗಿರುವ 'ಆರ್ಯಕೀರ್ತಿ
'ಶಿವಾಜಿಯ ಚರಿತ್ರೆ,' 'ಭೀಷ್ಮ ಚರಿತ್ರೆ' ಮುಂತಾದ ಗ್ರಂಥಗಳ ಕೀರ್ತಿ
ಯಾವ ರೀತಿ ಚಿರಸ್ಥಾಯಿಯಾಗಿರುವುದೆಂಬುದನ್ನು ವಿಶದಪಡಿಸಿದರು. ಇವರ
ಜೀವನವನ್ನು ಕುರಿತು ಪ್ರಶಂಸೆಮಾಡುತ್ತಾ ಶ್ರೀಮಾನ್ ಗುಂಡಪ್ಪನವರು—

ಅದ್ವೇಷ್ಟಾ ಸರ್ವಭೂತಾನಾಂ । ಮೈತ್ರಃ ಕರುಣ ಏವ ಚ ।
ನಿರ್ಮಮೋ ನಿರಹಂಕಾರಃ । ಸಮದುಃಖಸುಖಃ ಕ್ಷಮೀ ॥

ಸಂತುಷ್ಟಃ ಸತತಂ ಯೋಗೀ । ಯತಾತ್ಮಾ ದೃಢನಿಶ್ಚಯಃ ।
ಮಯ್ಯರ್ಪಿತ ಮನೋಬುದ್ಧಿ । ಯೋರ್ಗೀ ಮದ್ಭಕ್ತಃ ಸ ಮೇ ಪ್ರಿಯಃ ॥

ಸಮಃ ಶತ್ರೌಚ ಮಿತ್ರೇಚ । ತಥಾ ಮಾನಾಪಮಾನಯೋಃ ।
ಶೀತೋಷ್ಣ ಸುಖದುಃಖೇಷು । ಸಮಃ ಸಂಗವಿವರ್ಜಿತಃ ॥

ತುಲ್ಯನಿಂದಾಸ್ತುತಿರ್ಮೌನೀ । ಸಂತುಷ್ಟೋ ಯೇನಕೇನಚಿತ್ ।
ಅನಿಕೇತಸ್ಥಿರಮತಿ । ಭರ್ಕ್ತಿಮಾನ್ ಮೇ ಪ್ರಿಯೋ ನರಃ ॥

(ಭಗವದ್ಗೀತಾ: ಅಧ್ಯಾಯ ೧೨, ಶ್ಲೋಕಗಳು ೧೩–೧೪; ೧೮–೧೯)

ಎಂಬೀ ಭಗವದ್ಗೀತೆಯ ಶ್ಲೋಕಗಳಲ್ಲಿ ವಿವರಿಸಿರುವಂತೆ ಶ್ರೀಮಾನ್ ವಾಸುದೇವ
ನವರು ಸಮಸ್ತಸದ್ಗುಣಭರಿತರಾಗಿ ಸರ್ವರಿಗೂ ಆದರ್ಶಪ್ರಾಯರಾಗಿರು
ವಿವರಿಸಿದರು. ತಮಗೆ ಒಪ್ಪಿಸಿದ ಮಾನಪತ್ರಕ್ಕೂ, ತಮ್ಮ ವಿಚಾರವಾಗಿ ಹೇ
ಉಪಚಾರೋಕ್ತಿಗಳಿಗೂ ಹೃತ್ಪೂರ್ವಕವಾದ ವಂದನೆಗಳನ್ನು ಸಮರ್ಪಿಸಿ ಶ್ರೀಮಾ
ವಾಸುದೇವಯ್ಯನವರು ಈ ರೀತಿ ಭಾಷಣಮಾಡಿದರು:—

"ಮಹನೀಯರೆ,

"ಮಲ್ಲೇಶ್ವರದ ಕರ್ಣಾಟಕ ಸಂಘದ ಅಧಿಕಾರಿಗಳು ಸಾಮಾನ್ಯನಾದ ನ
ಪುರಸ್ಕರಿಸಿ ನನಗೆ ಸಲ್ಲದ ಪ್ರಾಶಸ್ತ್ಯವನ್ನು ಕೊಟ್ಟು ನನ್ನ ಭಾವಚಿತ್ರವನ್ನು ಕೃಪ
ಕ್ಕಿಟ್ಟಿದ್ದಾರೆ. ಇದು ಸನ್ಮಿತ್ರರಾದ ಅವರು ನನ್ನಲ್ಲಿ ಪ್ರೀತಿಪರವಶರಾಗಿ ಮಾ
ಕಾರ್ಯವೇ ಹೊರತು ಬೇರೆ ಏನೂ ಅಲ್ಲವೆಂದು ಎಣಿಸುತ್ತೇನೆ. ನಾನೇನೋ ಹಿ
ಪುಸ್ತಕಗಳನ್ನು ಬರೆದಿರುವುದು ಉಂಟು. ಅಷ್ಟು ಮಾತ್ರಕ್ಕೇ ನಾನು ಇಂದಿನ ಉ
ತಕ್ಕ ಪಾತ್ರನೆಂದು ಹೇಳಿಕೊಳ್ಳಲಾರೆ. ಆದರೂ ಈ ಸಂದರ್ಭದಲ್ಲಿ ಸಂಘ
ನನಗೊಂದು ಮಹೋಪಕಾರವನ್ನು ಮಾಡಿದಂತಾಯಿತು. ನನಗೆ ಈಗ ಆ ನೆಯ
ನಡೆಯುತ್ತಿದೆ. ವ್ಯಾಧಿಗ್ರಸ್ತನಾಗಿದ್ದೇನೆ. ಹೊರಗಿನ ಸಂಚಾರ ನಿಂತುಹೋ
ಈ ಸ್ಥಿತಿಯಲ್ಲಿ ಸಂಘದವರು ತಮ್ಮೆಲ್ಲರನ್ನೂ ಬರಮಾಡಿ ತಮ್ಮಗಳ ದರ್ಶನವನ್ನು
ಒದಗಿಸಿಕೊಟ್ಟು ನನ್ನನ್ನು ಕೃತಾರ್ಥನನ್ನಾಗಿ ಮಾಡಿರುತ್ತಾರೆ. ಮಹನೀಯರೆ!
ಹೃದಯಶಾದ ತಮ್ಮಗಳ ದರ್ಶನದಿಂದ ನಾನು ಆನಂದಭರಿತನಾದೆ.

"ಮ॥ ರಾ॥ ಗುಂಡಪ್ಪನವರು ವಿದ್ವಾಂಸರಾದರೂ ಮತ್ಸರಗ್ರಸ್ತರಲ್ಲ. ಗ್ರಂಥ
ಸಮಾಲೋಚನೆ ಮಾಡುವುದರಲ್ಲಿ ಛಿದ್ರಾನ್ವೇಷಿಗಳಲ್ಲ; ಗುಣಗ್ರಾಹಿಗಳು. ನನ್ನ
ವಿಷಯದಲ್ಲಿ ಅವರು ನನ್ನನ್ನು ಪ್ರಶಂಸೆಮಾಡಿರುವುದು ಅವರ ಸೌಜನ್ಯಕ್ಕೆ
ವಾಗಿರುವುದು.

"ಈ ದಿನ ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಎಂ. ಶಾಮರಾವ್, ಎಂ.ಎ. ಅವರು ಅಗ್ರಾಸನವನ್ನು ವಹಿಸಿರುವುದು ನನ್ನ ಪುಣ್ಯವೆಂದೆಣಿಸುತ್ತೇನೆ. ಅವರು ಸೆಂಟ್ರಲ್ ಕಾಲೇಜಿನಲ್ಲಿ ವಿದ್ಯಾರ್ಥಿ ದಶೆಯಲ್ಲಿದ್ದಾಗ ನನಗೆ ಅವರ ಪರಿಚಯವುಂಟಾಯಿತು. ಅಂದು ಮೊದಲುಗೊಂಡು ಅವರು ನನ್ನಲ್ಲಿ ಅವಿಚ್ಛಿನ್ನವಾದ ಅಭಿಮಾನವಿಟ್ಟಿದ್ದಾರೆ. ಪ್ರಾಜ್ಞರೂ, ಪೂಜ್ಯರೂ ಆದ ಅವರ ಅಭಿಮಾನವು ನನಗೆ ಒಂದು ಹೆಮ್ಮೆಯಾಗಿದೆ.

"ತಾವುಗಳೆಲ್ಲರೂ ನನ್ನಲ್ಲಿಟ್ಟಿರುವ ವಿಶೇಷ ವಾತ್ಸಲ್ಯಕ್ಕಾಗಿ ತಮಗೆ ಚಿರಋಣಿಯಾಗಿರುತ್ತೇನೆ. ಶ್ರೀರಾಮನು ತಮಗೂ, ತಮ್ಮ ಸಂತತಿಯವರಿಗೂ, ಮಲ್ಲೇಶ್ವರದ 'ಕರ್ಣಾಟಕ ಸಂಘ'ಕ್ಕೂ ಸಮಸ್ತ ಸನ್ಮಂಗಳವನ್ನೂ ಕರುಣಿಸಿ ಕಾಪಾಡಲೆಂಬುದೇ ನನ್ನ ಹೃತ್ಪೂರ್ವಕ ಪ್ರಾರ್ಥನೆಯಾಗಿರುತ್ತದೆ."

ಶ್ರೀಮಾನ್ ವಾಸುದೇವಯ್ಯನವರಿಗೆ ಈಗಾಗಲೇ ೮೫ ವರ್ಷ ವಯಸ್ಸಾಗಿರುತ್ತದೆ. ಇವರು ಇನ್ನೂ ಚಿರಕಾಲ ಆರೋಗ್ಯದಿಂದಿರುವಂತೆ ಸರ್ವಶಕ್ತನಾದ ಭಗವಂತನು ಅನುಗ್ರಹಿಸಬೇಕೆಂಬುದೇ ಕನ್ನಡ ಸಾಹಿತ್ಯಾಭಿಮಾನಿಗಳ ನಿರಂತರವಾದ ಹಾರೈಕೆ.

**'ಶರಣ ಸಾಹಿತ್ಯ' ಮಾಸಪತ್ರಿಕೆಗೆ ಸ್ವಾಗತ**

'ಶಿವಶರಣರ ವಚನ'ಗಳು ಕನ್ನಡ ಸಾಹಿತ್ಯದಲ್ಲಿ ಅಮೌಲ್ಯವಾದ ರತ್ನಭಾಂಡಾಗಾರವೆನ್ನಬಹುದು. ಇವುಗಳಲ್ಲಿ ಹಲವನ್ನು ವೀರಶೈವ ವಚನ ಸಾಹಿತ್ಯದಲ್ಲಿ ವಿಶೇಷ ಪರಿಶ್ರಮ ಪಡೆದಿರುವ ಪ್ರಸಿದ್ಧ ಸಾಹಿತಿಗಳು ಜನರ ಉಪಯೋಗಕ್ಕಾಗಿ ಪ್ರಕಟಪಡಿಸಿ ತುಂಬ ಉಪಕಾರ ಮಾಡಿರುತ್ತಾರೆ. ಇಷ್ಟಾದರೂ ಇನ್ನೂ ಅನೇಕ ವಚನಗಳು ಬೆಳಕಿಗೆ ಬಾರದೆ ಅಡಗಿಕೊಂಡಿರುವುದು ಸಾಹಿತ್ಯದೃಷ್ಟಿಯಿಂದ ಒಂದು ದೊಡ್ಡ ಕೊರತೆಯೆಂದೇ ಭಾವಿಸಬೇಕು. ಇಂತಹ ಕೊರತೆಯನ್ನು ನಿವಾರಿಸುವ ಉದ್ದೇಶದೊಡನೆ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರಾದ ಕೀರ್ತನಕೇಸರಿ ಶ್ರೀಮಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳು 'ಶರಣ ಸಾಹಿತ್ಯ' ಎಂಬ ಮಾಸಪತ್ರಿಕೆಯನ್ನು ಹೊರಡಿಸಿ ಇದರ ಪ್ರಾರಂಭೋತ್ಸವವನ್ನು ೧೯೩೭ನೆಯ ಡಿಸೆಂಬರ್ ೨೦ನೆಯ ತಾರೀಖಿನ ದಿವಸ ಪರಿಷನ್ಮಂದಿರದಲ್ಲಿ ನೆರವೇರಿಸಿದರು. ಸಾಹಿತ್ಯಪ್ರಚಾರಕ್ಕೆ ಸಂಬಂಧಪಟ್ಟ ಈ ಪತ್ರಿಕೆಗೆ ನಾವು ಸುಸ್ವಾಗತವನ್ನು ಬಯಸುವುದಲ್ಲದೆ ಇದು ಸಮಸ್ತ ಕನ್ನಡ ಸಾಹಿತಿಗಳ ಮನ್ನಣೆಗೆ ಪಾತ್ರವಾಗಿ ಚಿರಕಾಲ ಭಾಷಾಸೇವೆಗೆ ನೆರವಾಗುವಂತಾಗಲೆಂದು ಹಾರೈಸುತ್ತೇವೆ.

**ಶ್ರೀಮತಿ ಆರ್. ಕಲ್ಯಾಣಮ್ಮನವರಿಗೆ ದೊರೆತ ಸನ್ಮಾನಕ್ಕಾಗಿ ಅಭಿನಂದನ**

ಹಲವು ವರ್ಷಗಳಿಂದ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯೆಯರಾಗಿರುವ ಶ್ರೀಮತಿ ಆರ್. ಕಲ್ಯಾಣಮ್ಮನವರಿಗೆ ಇದೇ ವರ್ಷದ (೧೯೩೮ರ) ಜನವರಿ ತಿಂಗಳಲ್ಲಿ ನಡೆದ ಚುನಾವಣೆಯಲ್ಲಿ ಬೆಂಗಳೂರು ಪೌರಸಭೆಯ ಉಪಾಧ್ಯಕ್ಷಿಣೀ ಪದವಿಯು ದೊರೆತದ್ದಕ್ಕಾಗಿ ನಮ್ಮ ಹೃತ್ಪೂರ್ವಕವಾದ ಅಭಿನಂದನಗಳನ್ನು ಸಮರ್ಪಿಸಲಪೇಕ್ಷಿಸುತ್ತೇವೆ. ಶ್ರೀಮತಿ ಕಲ್ಯಾಣಮ್ಮನವರು ಕನ್ನಡದ ಪುರೋವೃದ್ಧಿಯಲ್ಲಿ ವಿಶೇಷ ಆಸಕ್ತಿ ವಹಿಸಿ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ನೆರವಾಗಿ ಸಾಹಿತ್ಯಸೇವೆ ಮಾಡುತ್ತಿರುವುದಲ್ಲದೆ ಮಹಿಳೆಯರ ಔನ್ನತ್ಯಕ್ಕಾಗಿಯೂ, ಪ್ರಜಾಕ್ಷೇಮಕ್ಕಾಗಿಯೂ

ನಾನಾ ವಿಧವಾಗಿ ದುಡಿಯುತ್ತಿರುತ್ತಾರೆ. ಇವರು ಬೆಂಗಳೂರು 'ಶಾರದಾ ಸ್ತ್ರೀ ಸಮಾಜ'ದ ಸ್ಥಾಪಕರೂ, 'ಸರಸ್ವತೀ' ಮಾಸಪತ್ರಿಕೆಯ ಸಂಪಾದಕಿಯರೂ ಆಗಿ ಬಹು ಕಾಲದಿಂದ ಸಮಾಜ ಸಂಸ್ಕರಣದಲ್ಲಿಯೂ, ಪ್ರಜಾಸೇವೆಯಲ್ಲಿಯೂ ನಿರತ ರಾಗಿರುತ್ತಾರೆ. ಅಲ್ಲದೆ ಮೈಸೂರು ಪ್ರಜಾಪ್ರತಿನಿಧಿ ಸಭೆ, ಪಠ್ಯಪುಸ್ತಕ ಸಮಿತಿ, ಪೌರಸಭೆ, ದಂಡಾಧಿಕಾರ ನ್ಯಾಯಸ್ಥಾನ—ಇವೇ ಮೊದಲಾದ ಸಾರ್ವಜನಿಕ ಸಂಸ್ಥೆಗಳ ಸದಸ್ಯೆಯರಾಗಿದ್ದುಕೊಂಡು ಅನೇಕ ಪ್ರಜೋಪಕಾರಕವಾದ ಕಾರ್ಯ ಗಳನ್ನು ನಡಸುತ್ತಿರುತ್ತಾರೆ. ಇಂತಹವರಿಗೆ ಬೆಂಗಳೂರಿನಂತಹ ಪ್ರಸಿದ್ಧ ಪಟ್ಟಣದ ಪ್ರಮುಖ ಪೌರಸಭೆಯಲ್ಲಿ ಇದುವರೆಗೆ ಯಾವ ಸ್ತ್ರೀಯರಿಗೂ ಲಭ್ಯವಾಗದ ಈ ಗೌರವ ಪದವಿಯು ದೊರೆತದ್ದು ಇಡೀ ಕರ್ನಾಟಕದ ಪ್ರಜೆಗಳಿಗೆಲ್ಲಾ ಸಂತೋಷ ದಾಯಕವಾದ ಅಂಶವಾಗಿರುತ್ತದೆ. ಇವರು ತಮ್ಮ ಅಧಿಕಾರದ ಅವಧಿಯಲ್ಲಿ ಬೆಂಗಳೂರು ನಗರನಿವಾಸಿಗಳಿಗೆ ಹೆಚ್ಚಿನ ಸೌಕರ್ಯಗಳನ್ನು ಒದಗಿಸಲು ಅನೇಕ ಪ್ರಯತ್ನಗಳನ್ನು ಮಾಡುವವರಾಗಲೆಂತಲೂ, ಇವರಿಂದ ಕರ್ನಾಟಕದಲ್ಲಿ ಇತೋಪ್ಯತಿಶಯವಾದ ಸಮಾಜ ಸೇವೆ ಸಾಹಿತ್ಯ ಸೇವೆಗಳು ಚಿರಕಾಲ ನಡೆಯುತ್ತಾ ಬರುವಂತೆ ದೇವರು ಅನುಗ್ರಹಿಸಲೆಂತಲೂ ಪ್ರಾರ್ಥಿಸುತ್ತೇವೆ.

---

# ಪ್ರಾಚ್ಯ ಲೇಖನ ಮಾಲೆ

---

[ಪ್ರಾಚ್ಯ ದೇಶಗಳ, ಮುಖ್ಯವಾಗಿ ಭರತಖಂಡದ, ಭಾಷೆ, ಸಾಹಿತ್ಯ, ಇತಿಹಾಸ, ಸಂಸ್ಕೃತಿ ಮುಂತಾದುವುಗಳ ಮೇಲೆ ಇತರ ಪತ್ರಿಕೆಗಳಲ್ಲಿ ಈಚೆಗೆ ಪ್ರಕಟವಾಗಿ ಬಂದಿರುವ ಮುಖ್ಯ ಲೇಖನಗಳು.]

**I. Journal of the Annamalai University, Vol. VII, No.**

1. "Some facts about the Tamil Calendar which deserve to be studied"—Mr. S. S. Bharati, M.A., B.L.
2. "'Siddhitraya' of Yāmunāchārya"—Edited with English translation and Notes by Mr. R. Ramanujachari and Mr. K. Srinivasachari.

**II. Quarterly Journal of the Mythic Society (New Series), Vol. XXVIII, No. 2, October 1937**

1. "Social Life in the Rāmāyana"—Prof. P. C. Dharma, M.A.
2. "The Common Ancestry of Rāstrakūta, Chālukya and Kadamba"—Mr. S. V. Viswanatha.
3. "The Tandonotham Bronzes"—Dr. C. Menakshi, M.A.,
4. "Dravidic Sandhi"—Mr. L. V. Ramaswami Aiyar, M.A.,

**III. Journal of the Andhra Historical Research Society, Vol. Parts I to V, 1936–37** (Jayanti Ramayya Pantulu Birthday Celebration Commemoration Volume)

1. "Dravidic Animal-names"—Mr. L. V. Ramaswami Aiyar, M.A., B.L.
2. "Krishnadēvarāya and the Portugese"—Prof. Gurti Venkat Rao, M.A., B.L.

3. " Karṇāṭa "—Dr. N. Venkataramanayya, M.A., Ph.D.

" Kannāḍu, from which the Kannaḍa language is said to have obtained its name, is identical with 'Kannadu' (Kaṇṇa-Vishaya) that lay at the foot of the Śrī Śaila Hill, the original home of the Śātakarṇis, Āndhra Kings. The Āndhras and the Karṇāṭakas appear to have remained a single united people during the time of Aśōka. The united Andhra Kingdom must have acquired the name of Karṇāṭa (Kannada) from the original home of the Śāta karṇis at the foot of the Śrī Śaila Hill: Karṇāta <Karṇāḍu> Kannāḍu, the country of the Śātakarṇis, Karṇa (abbr. of Śatakarṇa) kings. There are allusions in inscriptions and Telugu literature to show that the name Karṇāṭa was applicable to Telugu country and its language. Owing to historical circumstances Karṇāṭa (Kaṇṇa-Vishaya) came to denote exclusively the present Canarese country."

## IV. The Jaina Antiquary, Vol. III, No. 3, December 1937

" Pōdanapura and Takṣaśila "—Mr. Kamta Prasad Jain, M.R.A.S.

Pōdanapur, identified with Takṣaśila in the Punjab Province (also mentioned as Pōtana and Pōdana) is known in Jania Literature, including Kanarese Jaina Literature, as the Capital of Vāhubali (Bāhubali), son of Ṛsabhadēva, the first Tirthankara and it was famous for its colossal of Vāhubali. Jaina authors locate Pōdanapura on the bank of Godavari, and the location is justified by non-Jaina evidence as well. Places named Pōdanur, Pōtali, etc. are still found in South India; but Takṣaśila has never been styled or had in its neighbourhood, places of that name. Pōdanapura of the Jaina books was not Takṣaśila.

## V. The Indian P. E. N., Vol. III, No. 10, October 1937

" The Telugus and the Epic "—Mr. P. T. Raju.

## VI. " " Vol. III, No. 12, December 1937

" The Five Major Tamil Epics—Part I: *Silapadhikaram* "
—Diwan Bahadur K. S. Ramaswami Sastri.

## ಪ್ರಬುದ್ಧ ಕರ್ಣಾಟಕ—ಸಂಪುಟ ೧೯, ಸಂಚಿಕೆ ೧

೧. ಕೆಲವರು ವಚನಕಾರರು—ಶ್ರೀ॥ ಡಿ. ಎಲ್. ನರಸಿಂಹಾಚಾರ್, ಎಂ.ಎ.

೨. ಸಮಂತಭದ್ರನೇ 'ಶ್ರೀವಿಜಯ'ನಿರಬಹುದೇ?

—ಶ್ರೀ॥ ದ. ರಾ. ಬೇಂದ್ರೆ, ಎಂ.ಎ.

[" ಸಮಂತಭದ್ರಪಾದರೆ ಪರಮಾಗಮ ಸೂತ್ರವನ್ನು ಸಂಸ್ಕೃತದಲ್ಲಿ ಬರೆದರೆಂದೂ, ಅದರ ಅಭಿಪ್ರಾಯವನ್ನೇ ಶ್ರೀವಿಜಯನೆಂಬ ಬಿರುದಿನಿಂದ 'ಕವಿಮಾರ್ಗದಲ್ಲಿ' ಕನ್ನಡಿಸಿದರೆಂದೂ ಊಹಿಸಿದರೆ ತಪ್ಪೆ? "]

೩. ಈ ವರ್ಷ (೧೯೩೭ರಲ್ಲಿ) ನಡೆದ ಕಲ್ಕತ್ತಾ ವಿಶ್ವವಿದ್ಯಾನಿಲಯದ ಪದವೀ ದಾನೋತ್ಸವದಲ್ಲಿ ಶ್ರೀ॥ ರವೀಂದ್ರನಾಥ ಠಾಕೂರರವರು ಮಾಡಿದ ಭಾಷಣ

—ಅನುವಾದಕರು: ಶ್ರೀ॥ ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ. ಅವರು.

## ಜಯಕರ್ನಾಟಕ—ಏಪ್ರಿಲ್ ಮತ್ತು ಮೇ ೧೯೩೭

ದ್ರಾವಿಡ ಲಿಪಿಯಿಂದ ಬ್ರಾಹ್ಮೀ ಲಿಪಿಯ ಉತ್ಪತ್ತಿ (ಲೇಖಾಂಕ ೨-೩)

—ಶ್ರೀ॥ ಪ್ರ. ಗೋ. ಕುಲಕರ್ಣಿ.

**ಜಯಕರ್ನಾಟಕ— ಆಗಸ್ಟ್ ಮತ್ತು ಸೆಪ್ಟೆಂಬರ್ ೧೯೩೭**

ಬಾದಾಮಿಯ ಚಾಲುಕ್ಯರ ಕಾಲದ ಸಾಂಸ್ಕೃತಿಕ ಜೀವನ

—ಶ್ರೀ॥ ಪಾಂ. ಭೀ. ದೇಸಾಯಿ, ಎಂ.ಎ.

„ **ಅಕ್ಟೋಬರ್ ೧೯೩೭**

ಕರ್ನಾಟಕ ಸಂಶೋಧನೆಯಲ್ಲಿ ಒಂದು ಕ್ರಾಂತಿ

—ಶ್ರೀ॥ ದೇಸಾಯಿ ಪಾಂಡುರಂಗರಾಯರವರು, ಎಂ.ಎ.

"ಕ್ರಿಸ್ತ ಪೂರ್ವ ಸಾವಿರಾರು ವರ್ಷಗಳ ಹಿಂದಕ್ಕೆ ಸಿಂಧು ನದಿಮು... ಗಳಲ್ಲಿ ಕನ್ನಡದ ಹುಟ್ಟಿನ ಕುರುಹುಗಳನ್ನು ಎಣಿಸಿ ನೋಡಬೇಕಾಸ್ತು...

„ **ನವೆಂಬರ್ ೧೯೩೭**

ಮೊಹೆಂಜೊದಾರೋದ ಒಡಪು

—ಶ್ರೀ॥ ದೇಸಾಯಿ ಪಾಂಡುರಂಗರಾಯರವರು, ಎಂ.ಎ.

"ಏಳುಸಾವಿರ ವರ್ಷಗಳ ಹಿಂದಿನ ತಮಿಳು ಪದ್ಯ... ಎಂದು ಈಗಾಗಲೆ ತಮಿಳು ಸಂಶೋಧಕರು ಮೊಹೆಂಜೊ... ಚಿತ್ರಲಿಪಿಯನ್ನು ಕುರಿತು ಸಾಧಿಸುತ್ತಿರುವರು. ಕನ್ನಡಕ್ಕೂ ... ದೊರೆಯಬಹುದಾಗಿದೆ ಎಂದು ಈಗಿನ ಮಟ್ಟಿನ ಸಂಶೋಧನ... ವ್ಯಕ್ತವಾಗುತ್ತದೆ."

„ **ಡಿಸೆಂಬರ್ ೧೯೩೭**

ಬಾದಾಮಿಯ ಚಾಲುಕ್ಯರ ಕಾಲದ ಸಾಮಾಜಿಕ ಜೀವನ

—ಶ್ರೀ॥ ಪಾಂ. ಭೀ. ದೇಸಾಯಿಯವರು, ಎಂ.ಎ.

**ಶಿವಾನುಭವ—ಸಂಪುಟ ೧೨, ಸಂಚಿಕೆ ೧; ಅಕ್ಟೋಬರ್ ೧೯೩೭**

೧. ಹರಿಹರದೇವನು ಚಿತ್ರಿಸಿದ ಚನ್ನಯ್ಯ

—ಶ್ರೀ॥ ಚಂದ್ರಶೇಖರ ದೇವರು, ಅಡ್ನೂರ.

೨. ದಾಸಿಮಯ್ಯಗಳ ಕಾಲ ನಿರ್ಣಯ

—ಕೀರ್ತನಕೇಸರಿ ಶ್ರೀ॥ ಬಿ. ಶಿವಮೂರ್ತಿಶಾಸ್ತ್ರಿಗಳು.

„ **ಸಂಪುಟ ೧೨, ಸಂಚಿಕೆ ೩; ಡಿಸೆಂಬರ್ ೧೯೩೭**

೧. ಅಕ್ಕಮಹಾದೇವಿಯ ಜೀವನ ರಹಸ್ಯ

—ಪ್ರೊ॥ ಎಸ್. ಎಸ್. ಮಾಳವಾಡ, ಎಂ.ಎ.

---

1921—37 — ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# ಕರ್ಣಾಟಕ ಸಾಹಿತ್ಯ ಪರಿಷತ್ತು

**ಚಾಮರಾಜಪೇಟೆ, ಬೆಂಗಳೂರು ಸಿಟಿ.**

## ೨೨ನೆಯ ಕನ್ನಡ ಸಾಹಿತ್ಯ ಸಮ್ಮೇಳನ

## ಜ ಮು ಖಂ ಡಿ ಯ ಲ್ಲಿ

---

**೨ನೆಯ ಸಮಾಚಾರಪತ್ರಿಕೆ**

## ಅ ಧ್ಯ ಕ್ಷ ರು

೨೨ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಈ ಡಿಸೆಂಬರ್ ತಿಂಗಳಿನಲ್ಲಿ ಜಮಖಂಡಿಯಲ್ಲಿ ನಡೆಯುವಂತೆ ನಿಶ್ಚಯವಾಗಿದೆಯಷ್ಟೆ. ಅಲ್ಲಿಯ ಸ್ವಾಗತಮಂಡಲಿಯ ಸೂಚನೆಯಂತೆ ಪರಿಷತ್ತಿನ ಕಾರ್ಯನಿರ್ವಾಹಕಮಂಡಲಿಯು ಮಾಡಿದ ಪ್ರಾರ್ಥನೆಯನ್ನು ದಯವಿಟ್ಟು ಮನ್ನಿಸಿ, ಶ್ರೀಮಾನ್ ಬಿ. ವೆಂಕಟನಾರಾಯಣಪ್ಪ, ಎಂ.ಎ. ಅವರು ಸಮ್ಮೇಳನದ ಅಧ್ಯಕ್ಷರಾಗಲು ಸಮ್ಮತಿಸಿರುವರೆಂಬುದನ್ನು ತಿಳಿಸಲು ಸಂತೋಷಿಸುತ್ತೇನೆ. ಶ್ರೀ|| ಬಿ. ವೆಂಕಟನಾರಾಯಣಪ್ಪನವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಹಲವು ವರ್ಷಗಳಕಾಲ ಭೌತಶಾಸ್ತ್ರದ ಪ್ರೊಫೆಸರಾಗಿದ್ದು ನಿವೃತ್ತರಾಗಿ, ಈಗ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟುವಿನ ಮುಖ್ಯ ಸಂಪಾದಕರಾಗಿರುತ್ತಾರೆ. ಅವರು ಪರಿಷತ್ತಿನ ಸ್ಥಾಪಕರಲ್ಲಿ ಪ್ರಮುಖರಾದವರಾಗಿ ಬಹುವರ್ಷಗಳ ಕಾಲ ಪರಿಷತ್ತಿನ ಗೌ|| ಕಾರ್ಯದರ್ಶಿಗಳಾಗಿಯೋ ಅಥವಾ ಕೋಶಾಧಿಕಾರಿಗಳಾಗಿಯೋ, ಮತ್ತು ಪರಿಷತ್ಪತ್ರಿಕೆಯ ಸಂಪಾದಕರಾಗಿಯೂ ಕೆಲಸಮಾಡಿ, ಈ ಸಂಸ್ಥೆಯ ಪುರೋಭಿವೃದ್ಧಿಗಾಗಿ ಅವಿಚ್ಛಿನ್ನವಾಗಿ ದುಡಿದು, ಎಲ್ಲ ಕನ್ನಡಿಗರ ಕೃತಜ್ಞತೆಗೂ ಪಾತ್ರರಾಗಿದ್ದಾರೆ. ಮತ್ತು ತಮ್ಮ ವಿದ್ವತ್ತಿನಿಂದಲೂ ಕರ್ತವ್ಯನಿಷ್ಠೆಯಿಂದಲೂ ಅವರು ಎಲ್ಲರಿಗೂ ಮಾನ್ಯರೂ ಪ್ರಿಯರೂ ಆಗಿದ್ದಾರೆ. ಶ್ರೀ|| ವೆಂಕಟನಾರಾಯಣಪ್ಪನವರ ಅಧ್ಯಕ್ಷತೆಯಲ್ಲಿ ಸಮ್ಮೇಳನವು ಬಹು ಯಶಸ್ವಿಯಾಗುವುದೆಂದು ನಂಬಿದ್ದೇವೆ.

ಸಮ್ಮೇಳನದ ಕಾರ್ಯವಿವರಗಳನ್ನು ಈಗಾಗಲೇ ಮೊದಲನೆಯ ಸಮಾಚಾರ ಪತ್ರಿಕೆಯಲ್ಲಿ ತಿಳಿಸಿದ್ದಾಗಿದೆ. ಸಮ್ಮೇಳನವು ಇದೇ ಡಿಸೆಂಬರ್ ೨೯ನೆಯ ತಾರೀಖು ಮೊದಲುಗೊಂಡು ಮೂರು ದಿನಗಳು ನಡೆಯುವಂತೆ ಸದ್ಯಕ್ಕೆ ನಿಶ್ಚಯವಾಗಿದೆ. ಇತರ ಹೆಚ್ಚಿಗೆ ವಿವರಗಳನ್ನು ನಿಷ್ಕರ್ಷೆಯಾದಂತೆ ಮುಂದಿನ ಸಮಾಚಾರ ಪತ್ರಿಕೆಗಳಲ್ಲಿ ತಿಳಿಸಲಾಗುವುದು.

ಕನ್ನಡನಾಡಿನ ವಿದ್ವಜ್ಜನರೂ ಗ್ರಂಥಲೇಖಕರೂ ಈ ಸಮ್ಮೇಳನಕ್ಕೆ ದಯಮಾಡಿಸಿ ಉಪನ್ಯಾಸ, ಪ್ರಬಂಧವಾಚನ, ಕಾವ್ಯಗಾಯನ ಮೊದಲಾದ ರೀತಿಗಳಲ್ಲಿ ಭಾಗವಹಿಸಿ ಸಮ್ಮೇಳನದ ಬೆಲೆಯನ್ನು ಹೆಚ್ಚಿಸಬೇಕೆಂದು ಮತ್ತೊಮ್ಮೆ ಬೇಡುತ್ತೇವೆ.

ಕನ್ನಡನಾಡಿನ ನಾನಾ ಭಾಗಗಳ ಮಹಾಜನರು ಅಧಿಕ ಸಂಖ್ಯೆಯಲ್ಲಿ ಜಮಖಂಡಿಗೆ ದಯಮಾಡಿಸಿ ಬಂದು ಉತ್ಸಾಹದಿಂದ ಸಮ್ಮೇಳನದಲ್ಲಿ ನೆರೆಯಬೇಕೆಂದು ಪುನಃ ಬೇಡುತ್ತೇವೆ.

ತಾ|| ೩—೧೨—೧೯೩೭.

ಎಸ್. ವಿ. ರಂಗಣ್ಣ,
ಗೌ|| ಕಾರ್ಯದರ್ಶಿ.

ಸುಬೋಧ ಮುದ್ರಣಾಲಯ, ಬೆಂಗಳೂರು




೧೯೩೮ನೆಯ ಡಿಸೆಂಬರ್ ತಿಂಗಳಲ್ಲಿ ಜಮಖಂಡಿಯಲ್ಲಿ ನಡೆದ ೨೨ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ತೆಗೆದ ಚಿತ್ರ

# THE QUARTERLY JOURNAL
OF THE
# KANNADA LITERARY ACADEMY

Vol. XXII] **SAMMELAN SPECIAL NUMBER** No. 4

## CONTENTS IN BRIEF

I. **Twenty-Second Kannada Literary Conference : Brief Report.**

The 22nd Kannada Literary Conference was held at Jamkhandi on the 29th, 30th and 31st of December 1937, under the presidentship of Mr. B. Venkatanarayanappa, M.A., Retired Professor of Physics in the Central College at Bangalore, Chief Editor of the English-Kannada Dictionary in the University of Mysore and one of the Founders of the Karnataka Sahitya Parishat. Mr. Gangadhara Rao Deshponde, President of the Karnatak Provincial Congress Committee, opened the Conference. Over 300 delegates from all parts of the Kannada country attended the Conference. About 40 messages wishing every success to the Conference were received from distinguished personages. Besides the plenary sessions wherein problems relating to the Kannada language were discussed and resolutions adopted, the Conference arranged for Lectures in Kannada, a Poets' Gathering, Recitation of Poetry, Music, Folk Songs and Dances, Yogic and Physical Culture Demonstrations and Exhibitions of Kannada Periodicals and Historical Antiquities of the Kannada country.

II. **Inaugural Address :** *By Mr. Gangadhara Rao Deshponde.*

Mr. Deshponde expressed his appreciation for the message given by the Shrimant Raja Saheb of Jamkhandi extending his sympathy for the advancement of Kannada in his State. He thought it desirable for the people of this country speaking different languages to cultivate a feeling of good-will and fellowship. He made a powerful appeal to the Kannadigas to strive to increase the glory of the Karnataka. He struck a note of warning to the Marathi-speaking subjects of Jamkhandi to give the prime place of honour to Kannada, the language of the country; and pleaded that as they, who formed the minority, should learn the language of the majority.

III. **Welcome Address :** *By Mr. Panditappa Rayappa Chikkodi, B.A., Chairman of the Reception Committee.*

In welcoming the delegates and visitors, Mr. Chikkodi referred at the outset to the appropriateness of having selected Jamkhandi for holding this Conference, as it was famous as a centre of Kannada culture in the past and as Kannada was even now the mother-tongue of more than 80 per cent of its population. It was gratifying to observe, he added, that the Chief of Jamkhandi was showing sympathy for the advancement of Kannada in the State. He concluded with a plea for the introduction of the teaching of Haḷagannada as a classical language in all English schools.

IV. **Presidential Address :** *By Mr. B. Venkatanarayanappa, M.A.*

Mr. Venkatanarayanappa traced the origin and development of the Parishat for the past 22 years under the ægis of the Government of His Highness the Maharaja of Mysore who had so far contributed more than half a lakh of rupees towards its upkeep. The credit of having brought together lovers of Kannada in all parts of the Karnataka for the common purpose of advancing its literature belonged to the Parishat and for the proper fulfilment of this purpose, it was necessary that people of all parts of the Karnataka should work in a spirit of union. Though the Parishat had some substantial achievements to its credit, he thought that there were still many things to be

done. After referring in detail to the matters that still required atte[ntion] he made a few suggestions for the future.

He deplored the paucity of Kannada books published from year to [year] as compared with the output in other languages like Marathi and Guj[arati] and attributed such a state of affairs to the apathy of the public to[wards] Kannada books. He advocated co-operative enterprise in book produ[ction] and wished that more attention were paid to illustrated juvenile lite[rature] after the model of Stead's "Books for the Bairns". He deprecated [young] authors rushing to poetical composition without proper literary equipme[nt and] pleaded for greater attention being paid to the dissemination of sci[entific] knowledge through Kannada. Referring to newspapers in Kannada, he th[ought] that one well-conducted paper was better than several ill-conducted ones. [He] attached great importance to teaching in the primary stage. Referri[ng to] Mahatma Gandhi's Wardha Scheme of Education, he thought that it s[hould] not be rejected wholesale although there might be practical difficul[ties in] carrying out the same. He was in favour of restricting College Edu[cation] to those that were actually fitted for the same and diverting oth[ers to] Industrial and Technical Courses of Study. Touching on the relative i[mpor]tance to our people of English, Hindi and Sanskrit, he said that the st[udy of] English was indispensable, as it happened to be an international langu[age and] a repository of all modern sciences and thought; he could not, th[erefore,] understand the giving up of English in preference to Hindi. Major i[mpor]tance should be given to the mother-tongue, and it should not be m[ade to] suffer by the introduction of a compulsory study of either Hindi or S[anskrit]. He concluded by pleading for staunch and devout union am[ong] Kannadigas.

V. *Kavi Goshti:* (Poets' Gathering.)

A Poets' Gathering was held as a section of the Conference u[nder the] presidency of *Kavibhūshaṇa* Mr. Betageri Krishna Sarma of Dharw[ar] 40 writers read out their literary compositions in prose and verse. [A] report is given.

VI. **Presidential Speech at the Poets' Gathering:** *By Mr.* [Betageri] *Krishna Sarma.*

"If the ancient works of our forefathers were really great, why [should] our Kannada country be in death-like slumbers while her sisters wer[e wide] awake? Let us not, therefore, unduly praise the past; let us open o[ur eyes] to its defects and find our way to a brilliant future.... Our forefathe[rs con]cerned themselves entirely with the philosophical or the super-sensuo[us] and entirely ignored the sensuous Truth; most of them were mere pr[opagand]ists of religion rather than poets. Let us not, therefore, take what th[ey have] said as the final word about Truth. Let each individual poet chu[rn it] from out of the depths of his heart and let him set it in living langu[age for] the benefit of the common man."

VII. **Resolutions adopted by the Conference:**

Text in Kannada of 22 Resolutions adopted by the Conference i[s given.]

VIII. **Messages:**

Extracts from Messages received from the following persons [are] published: The Shrimant Raja Saheb of Jamkhandi; Sir Mirza M. [Ismail,] Dewan of Mysore; Mr. B. G. Kher, Prime Minister, Government of B[ombay;] Sir K. P. Puttanna Chetty; Mr. E. G. McAlpine, Director of [Public] Instruction in Mysore; Mr. R. R. Diwakar, Dharwar; Mr. [...] Patvardhan, Poona; and Mr. S. N. Angadi, President of the [...] District Board.

IX. **An Opinion about the Conference:**



Reprint of an article in Kannada, appearing in the *Jayakarnatak[a,]* Dharwar for February 1938 is published.

# ವಿನಿಮಯ ಪತ್ರಿಕೆ ಮತ್ತು ಪ್ರಕಟನೆಗಳ ಪಟ್ಟಿ

ತ್ರೈಮಾಸಿಕ ಪತ್ರಿಕೆಗಳು:—೧. Journal of the Mythic Society. ೨. Journal of the Andhra Historical Research Society. ೩. Journal of the Bharata Itihasa Samshodhaka Mandala. ೪. Maharashtra Sahitya Parishat Patrika. ೫. The Karnatak Historical Review. ೬. Journal of the Annamalai University. ೭. Journal of the Bombay Branch of the Royal Asiatic Society. ೮. Indian Culture. ೯. Journal of the K. R. Cama Oriental Research Institute. ೧೦. Journal of Indian History. ೧೧. Journal of the International Mediterranean Association. ೧೨. Zeitschrift für Indologie und Iranistik. ೧೩. ಶ್ರೀಮನ್ ಮಹಾರಾಜ ಸಂಸ್ಕೃತ ಮಹಾಪಾಠಶಾಲಾ ಪತ್ರಿಕಾ. ೧೪. ಪ್ರಾಚೀನ ಕರ್ನಾಟಕ. ೧೫. ... ಕರ್ಣಾಟಕ. ೧೬. ವಂಗೀಯ ಸಾಹಿತ್ಯ ಪರಿಷತ್ಪತ್ರಿಕೆ. ೧೭. The Jaina Antiquary (ಜೈನ ಸಿದ್ಧಾಂತ ಭಾಸ್ಕರ). ೧೮. Hindustani. ೧೯. ಹಳ್ಳಿಯ ಆಳು. ೨೦. ...

ದ್ವೈಮಾಸಿಕ ಪತ್ರಿಕೆಗಳು:—೧. Journal of the Bombay University. ೨. ಆಂಧ್ರ ಸಾಹಿತ್ಯ ಪರಿಷತ್ ಪತ್ರಿಕೆ. ೩. ಶಿವಾನುಭವ. ೪. Bulletin of the Museum of Fine Arts.

ಮಾಸ ಪತ್ರಿಕೆಗಳು:—೧. The Mysore Economic Journal. ೨. ... Gazette. ೩. The Indian P.E.N. ೪. ಅಧ್ಯಾತ್ಮ ಪ್ರಕಾಶ. ೫. ... ಚಂದ್ರಿಕೆ. ೬. ಜಯಕರ್ನಾಟಕ. ೭. ಮೈಸೂರು ಸಹಕಾರ ಪತ್ರಿಕೆ. ೮. ರಂಗ... ೯. ಸುಬೋಧ. ೧೦. ಸದ್ಬೋಧ ಚಂದ್ರಿಕೆ. ೧೧. ಮೈಸೂರು ವ್ಯವಸಾಯ ... ಸಂಘದ ಪತ್ರಿಕೆ. ೧೨. ಕಾದಂಬರೀ ಸಂಗ್ರಹ. ೧೩. ದೇಶೀಯ ವಿದ್ಯಾಶಾಲಾ ... ೧೪. ಮೈಸೂರು ಮಕ್ಕಳು. ೧೫. ಸದ್ಧರ್ಮದೀಪಿಕೆ. ೧೬. ಮಕ್ಕಳ ... ೧೭. ವಿವೇಕಾಭ್ಯುದಯ. ೧೮. ತ್ರಿವೇಣಿ. ೧೯. ಕತೆಗಾರ. ೨೦. ಭಾರತಿ. ೨೧. ... ಬಂಧು. ೨೨. ನಗುವ ನಂದ. ೨೩. ಭಾರತಿ (ತೆಲುಗು). ೨೪. ಕರ್ನಾಟಕ... ೨೫. ವೀರಶೈವ ಚಂದ್ರಿಕೆ. ೨೬. ಸಂಸ್ಕೃತ ಸಾಹಿತ್ಯ ಪರಿಷತ್ಪತ್ರಿಕೆ. ೨೭. ... ೨೮. ಹಂಸ. ೨೯. ವಿಮಾ ವಾಣಿಜ್ಯ. ೩೦. ವಿದ್ಯಾದಾಯಿನಿ. ೩೧. ವಿವಿಧ ... ವಿಸ್ತಾರ. ೩೨. ವಿಶ್ವವಾಣಿ. ೩೩. ದಿವ್ಯ ಜ್ಯೋತಿ.

ವಾರ ಪತ್ರಿಕೆಗಳು:—೧. ರಾಜಹಂಸ. ೨. ಸ್ವದೇಶಾಭಿಮಾನಿ. ೩. ... ೪. ರಾಷ್ಟ್ರಬಂಧು. ೫. ಕರ್ಣಾಟಕ ವೈಭವ. ೬. ಶರಣ ಸಂದೇಶ. ೭. ... ೮. ಲೋಕಮತ. ೯. ಅರುಣೋದಯ. ೧೦. ಸಂಯುಕ್ತ ಕರ್ಣಾಟಕ. ೧೧. ... ಬಂಧು. ೧೨. ಪ್ರಜಾಮತ. ೧೩. ಜನ್ಮಭೂಮಿ. ೧೪. ವಿಶ್ವಕರ್ಣಾಟಕ. ೧೫. ... ಪತ್ರಿಕೆ. ೧೬. ವೃತ್ತಾಂತ ಪತ್ರಿಕೆ. ೧೭. ವಿಶ್ವಬಂಧು. ೧೮. ಉದಯ. ೧೯. ... ಟೈಮ್ಸ್. ೨೦. ತಾಯಿನಾಡು. ೨೧. ಪ್ರಭಾತ. ೨೨. ಮೈಸೂರು ಗೆಜೆಟ್. ೨೩. ...

ದಿನ ಪತ್ರಿಕೆ:—೧. ನವಜೀವನ.

ಇತರ ಪ್ರಕಟನೆಗಳು:—೧. ಇಂಡಿಯ ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೨. ಮೈಸೂರು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೩. ಹೈದರಾಬಾದ್ ಸರ್ಕಾರದ ಶಾಸನಡ ಇಲಾಖೆಯ ಪ್ರಕಟನೆಗಳು. ೪. ಜಯಕರ್ನಾಟಕ ಗ್ರಂಥಮಾಲೆ. ೫. ಮನೋಹರ ಗ್ರಂಥಮಾಲೆ. ೬. ವಿದ್ಯಾರಣ್ಯ ಗ್ರಂಥಮಾಲೆ. ೭. ಪ್ರೇಮ ಗ್ರಂಥಮಾಲೆ. ೮. Indiana.

# ಇಪ್ಪತ್ತೆರಡನೆಯ ಕನ್ನಡ ಸಾಹಿತ್ಯ ಸಮ್ಮೇಳನ

## ಜಮಖಂಡಿ, ಡಿಸೆಂಬರ್ ೧೯೩೭

---

## ಕಾರ್ಯಕಲಾಪಗಳ ಸಂಗ್ರಹ ವರದಿ

ಇಪ್ಪತ್ತೆರಡನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಜಮಖಂಡಿಯಲ್ಲಿ, ಸರ್ ಪರಶುರಾಮ ಭಾವು ನಾಟಕ ಮಂದಿರದಲ್ಲಿ, ಸನ್ ೧೯೩೭ನೆಯ ಇಸವಿ ಡಿಸೆಂಬರ್ ತಿಂಗಳು ೨೯ನೆಯ ತಾರೀಖು ಬುಧವಾರ ಮೊದಲುಗೊಂಡು ಮೂರು ದಿವಸ ಅತ್ಯಂತ ವಿಜೃಂಭಣೆಯಿಂದ ನೆರವೇರಿತು.

ಈ ಸಮ್ಮೇಳನಕ್ಕೆ ಕನ್ನಡ ನಾಡಿನ ನಾನಾ ಭಾಗಗಳಿಂದ ಪರಿಷತ್ಸದಸ್ಯರೂ, ಸಂಸ್ಥೆಗಳ ಪ್ರತಿನಿಧಿಗಳೂ, ಇತರ ಭಾಷಾಭಿಮಾನಿಗಳೂ ಬಹುಸಂಖ್ಯೆಯಲ್ಲಿ ನೆರೆದಿದ್ದರು. ಸುಮಾರು ೩೦೦ ಮಂದಿ ಸಮ್ಮೇಳನಕ್ಕೆ ಪ್ರತಿನಿಧಿಗಳಾಗಿ ಬಂದಿದ್ದರು. ಪ್ರತಿ ದಿನವೂ ಒಟ್ಟು ಸಭಿಕರ ಸಂಖ್ಯೆ ಸುಮಾರು ೧,೫೦೦–೨,೦೦೦ದ ವರೆಗೂ ಇರುತ್ತಿದ್ದಿತು.

ಸಮ್ಮೇಳನ ಪ್ರಾರಂಭದ ದಿನ ಬೆಳಗ್ಗೆ ೮॥ ಘಂಟೆಗೆ ಸರಿಯಾಗಿ ಅಧ್ಯಕ್ಷರ ಮೆರವಣಿಗೆ ಅವರ ಬಿಡಾರದಿಂದ ಹೊರಟು ೯ ಘಂಟೆಯ ಹೊತ್ತಿಗೆ ಸಮ್ಮೇಳನ ಮಂದಿರವನ್ನು ಸೇರಿತು; ಆ ಕೂಡಲೆ ಸಮ್ಮೇಳನವು ಪ್ರಾರಂಭವಾಯಿತು.

### ಪ್ರಾರಂಭೋತ್ಸವ

ಶಾಲಾ ಬಾಲಕರು ಪ್ರಾರ್ಥನೆಯನ್ನು ಹಾಡಿದ ಬಳಿಕ, ಸ್ವಾಗತ ಗೀತಗಳ ಗಾನವಾಯಿತು. ಕಾರ್ಯಾರಂಭಕ್ಕೆ ಮೊದಲು ಸ್ವಾಗತ ಮಂಡಲಿಯ ಅಧ್ಯಕ್ಷರಾದ ಶ್ರೀ॥ ಪಂಡಿತಪ್ಪ ರಾಯಪ್ಪ ಚಿಕ್ಕೋಡಿಯವರು, ಜಮಖಂಡಿಯ ಶ್ರೀಮಂತ ರಾಜಾಸಾಹೇಬರವರು ಸಮ್ಮೇಳನಕ್ಕೂ ಕನ್ನಡದ ಪುರೋಭಿವೃದ್ಧಿಗೂ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿ ಕಳಿಸಿದ್ದ ಸಂದೇಶ ಪತ್ರವನ್ನು ಓದಿ, ತರುವಾಯ ಸಮ್ಮೇಳನ ಪ್ರಾರಂಭೋತ್ಸವವನ್ನು ನೆರವೇರಿಸುವಂತೆ ಶ್ರೀ॥ ಗಂಗಾಧರರಾವ್ ದೇಶಪಾಂಡೆಯವರನ್ನು ಪ್ರಾರ್ಥಿಸಿದರು. ಅದೇ ಮೇರೆಗೆ ಶ್ರೀ॥ ಗಂಗಾಧರರಾವ್ ದೇಶಪಾಂಡೆ ಅವರು ಸ್ಫೂರ್ತಿದಾಯಕವಾದ ಭಾಷಣಮಾಡಿ ಸಮ್ಮೇಳನವನ್ನು ಪ್ರಾರಂಭಗೊಳಿಸಿದರು. ಅವರು ತಮ್ಮ ಭಾಷಣದಲ್ಲಿ, ಕನ್ನಡ ನಾಡಿನಲ್ಲಿ ನೆಲಸಿರುವ ಮಹಾರಾಷ್ಟ್ರರೇ ಮುಂತಾದ ಇತರ ಭಾಷೆಗಳವರು—ಅಧಿಕಾರಿಗಳಾಗಲಿ ಪ್ರಜೆಗಳಾಗಲಿ—ಕನ್ನಡ ನಾಡು ನುಡಿಗಳ ವಿಷಯದಲ್ಲಿ ಯಾವ ಭಕ್ತಿ ವಾತ್ಸಲ್ಯಗಳಿಂದ ವರ್ತಿಸಬೇಕು ಎಂಬುದನ್ನು ಖಂಡಿತವಾಕ್ಕಿನಿಂದ ಸ್ಪಷ್ಟಪಡಿಸಿದರು. ಬಳಿಕ ಶ್ರೀ॥ ಚಿಕ್ಕೋಡಿಯವರು ಸರ್ವರಿಗೂ ಸ್ವಾಗತವನ್ನು ಬಯಸಿ ಭಾಷಣಮಾಡಿದರು.

ಅನಂತರ ಅವರ ಪ್ರಾರ್ಥನೆಯ ಮೇರೆಗೆ ಶ್ರೀ॥ ಗಳಾದ ಬಿ. ಆರ್. ಸರಗು ಅವರು, ಎ. ವಿ. ಸಾಬಡೆ ಅವರು, ಆರ್. ಎಸ್. ಮುಗಳಿ ಅವರು, ವೆಂಕಟೇಶಯ್ಯಂಗಾರ್ಯರು, ಟಿ. ಕೆ. ತುಕೋಳರು, ವ್ಯಾಕರಣತೀರ್ಥ ಚಂದ್ರ ಶಾಸ್ತ್ರಿಗಳು, ವಿ. ಬಿ. ನಾಯಕರು ಮತ್ತು ಕೊಡಗಿನ ಶ್ರೀಮತಿ ಗೌರಮ್ಮ ಇವರುಗಳು ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಸಮ್ಮೇಳನಾಧ್ಯ ಪದವಿಗೆ ಆರಿಸಲ್ಪಟ್ಟಿರುವುದನ್ನು ಅನುಮೋದಿಸಿ ಭಾಷಣಗಳನ್ನು ಮಾಡಿದ ಶ್ರೀ॥ ವೆಂಕಟನಾರಾಯಣಪ್ಪನವರು ಅಧ್ಯಕ್ಷಪೀಠದಿಂದ ವಿಚಾರಪರಿಪ್ಲು ಮತ್ತು ವಿಶೇಷ ಮಹತ್ವವುಳ್ಳ ಭಾಷಣವನ್ನು ಅಪ್ಪಣೆಕೊಡಿಸಿದರು. (ಭಾಷಣವ ಮುಂದೆ ಕ್ರಮವಾಗಿ ಕೊಟ್ಟಿದೆ.)

ಅಧ್ಯಕ್ಷರ ಭಾಷಣ ಪೂರೈಸಿದಮೇಲೆ ಪರಿಷತ್ತಿನ ಗೌರವ ಕಾರ್ಯ ಯವರಾದ ಶ್ರೀ॥ ಎಸ್. ವಿ. ರಂಗಣ್ಣ, ಎಂ.ಎ. ಅವರೂ, ಸ್ವಾಗತ ಮಂ ಗೌ॥ ಕಾರ್ಯದರ್ಶಿಗಳಾದ ಶ್ರೀ॥ ಆರ್. ಪಿ. ಕುಲಕರ್ಣಿಯವರೂ ಸಮ್ಮೇಳ ಯಶಸ್ವಿಯಾಗಲೆಂದು ಹಾರೈಸಿ ಬಂದಿದ್ದ ಸಂದೇಶಪತ್ರಗಳನ್ನೂ, ತಂತಿಸಮಾ ಗಳನ್ನೂ ಓದಿದರು.

### ಸಂದೇಶಗಳನ್ನು ಕಳುಹಿಸಿದ್ದ ಮಹನೀಯರು

ಶ್ರೀ॥ ಗಳಾದ (೧) ಜಮಖಂಡಿ ಸಂಸ್ಥಾನದ ಶ್ರೀಮಂತ ರಾಜಾಸಾಹೇಬರು, ಜಮಖಂಡಿಯ ರಾಜಾಸಾಹೇಬರ ಮಾತೃಶ್ರೀಯವರು, ಕೊಲ್ಲಾಪುರ, (೩) ಮೈ ಸಂಸ್ಥಾನದ ದಿವಾನ್ ಸಾಹೇಬರವರು, (೪) ಮೈಸೂರು ಸಂಸ್ಥಾನದ ವಿದ್ಯಾ ಇಲಾಖೆಯ ಡೈರೆಕ್ಟರು, (೫) ರಾಜಸಭಾಭೂಷಣ ದಿವಾನ್ ಬಹದ್ದೂರ್ ಸರ್ ಪುಟ್ಟಣ್ಣಶೆಟ್ಟರು, ಬೆಂಗಳೂರು, (೬) ಸರ್ ಛಾರಲ್ಸ್ ಟಾಥಂಟರ್ ಕ ಶ್ರೀಮನ್ಮಹಾರಾಜರವರ ಪ್ರೈವೇಟ್ ಸೆಕ್ರಿಟರಿಯವರು, ಮೈಸೂರು, (೭) ಬಿ. ಜಿ. ಅವರು, ಬೊಂಬಾಯಿ ಪ್ರಾಂತದ ಮುಖ್ಯ ಮಂತ್ರಿಗಳು, ಬೊಂಬಾಯಿ, (೮) ಎಸ್. ಅಯ್ಯಂಗಾರ್ಯರು, ಮೈಸೂರು ಸರ್ಕಾರದ ಚೀಫ್ ಇಂಜಿನಿಯರು, ಬೆಂ (೯) ಪ್ರೊ॥ ಡಿ. ಕೆ. ಭೀಮಸೇನರಾಯರು, ಹೈದರಾಬಾದು, (೧೦) ವೈ. ಕೆ. ರಾಮ ರಾಯರು, ಮೈಸೂರು, (೧೧) ರಾವ್ ಬಹದ್ದೂರ್ ಕೆ. ರಾಮಸ್ವಾಮಿ ಬೊಂಬಾಯಿ, (೧೨) ಎಂ. ಎಸ್. ಸರದಾರರು, ಬಿ.ಎ. (ಆಕ್ಸನ್.), ಬಾರ್-ಆಟ್ ಸೋಲಾಪುರ, (೧೩) ಪಂಡಿತ ತಾರಾನಾಥರು, ತುಂಗಭದ್ರೆ, (೧೪) ಆಯುರ್ವೇದ ಅನಂತಾಚಾರ್ಯ ಆದ್ಯ ಅವರು, ಬಿಜಾಪುರ, (೧೫) ರಾವ್ ಬಹದ್ದೂರ್ ಎಸ್. ಅಂಗಡಿ ಅವರು, ಬಿ.ಎ., ಬೆಳಗಾಂ, (೧೬) ವಾಮನ ಬಾಳಾಜಿ ದೇಸಾಯಿ ಬಿ. ಬೆಳಗಾಂ, (೧೭) ಪ್ರೊ॥ ಆರ್. ವಿ. ಜಹಗೀರ್‌ದಾರರು, ಎಂ.ಎ. (ಲಂಡನ್), ಧಾ (೧೮) ಶಂ. ಭಾ. ಜೋಶಿ ಅವರು, ಧಾರವಾಡ, (೧೯) ಬೆನಗಲ್ ರಾಮರಾವ್ ಎಂ.ಎ., ಎಲ್‌ಎಲ್.ಬಿ., ಬೆಂಗಳೂರು, (೨೦) ಬಿ. ಡಿ. ಬೆಳ್ವಿ ಅವರು, ಬೆ (೨೧) ನಾರಾಯಣರಾವ್ ಜೋಶಿ ಅವರು, ಬೆಳಗಾಂ, (೨೨) ವಿದ್ವಾನ್ ದೊಡ್ಡಪ್ಪ ಹೊಸಪೇಟೆ, (೨೩) ಜಯರಾಮಾಚಾರ್ಯರು, ಬಳ್ಳಾರಿ, (೨೪) ಭೀಮಾ ಚಿಮ್ಮಲಗಿಯವರು, ಹೈದರಾಬಾದು, (೨೫) ಕರ್‌ಮರ್‌ಕರ್ ಅವರು, ಧಾ (೨೬) ಎಸ್. ಆರ್. ಪೋತ್ದಾರರು, ಧಾರವಾಡ, (೨೭) ದಾತಾರ ಬಲವಂತರಾವ್ ಬೆಳಗಾಂ, (೨೮) ಡಾ॥ ಎಸ್. ಸಿ. ನಂದಿಮಠ ಅವರು, ಎಂ.ಎ., ಪಿಎಚ್.ಡಿ.,

(೨೯) ಕರ್ಣಾಟಕ ಸಂಘ, ಪೂನ, (೩೦) ಕೌಜಲಗಿ ಶ್ರೀನಿವಾಸರಾಯರು, ಬಿಜಾಪುರ, (೩೧) ಎ. ವಿ. ಪಟ್ಟವರ್ಧನ್ ಅವರು, ಪೂನ, (೩೨) ಕೆ. ಎಚ್. ಕಬ್ಬೂರ್ ಅವರು, ಬೊಂಬಾಯಿ, (೩೩) ಆರ್. ಎ. ಜಹಗೀರುದಾರರು, ಬೊಂಬಾಯಿ, (೩೪) ಕೊಣ್ಣೂರ್ ಅವರು, ಗದಗು, (೩೫) ಸೋಷಿಯಲ್ ಕರ್ಣಾಟಕ ಸೊಸೈಟಿ, ಪೂನ, (೩೬) ಹುಚ್ಚೇಶ್ವರ ಜಿ. ಮುದ್ಗಲ್ ಅವರು, ಬೊಂಬಾಯಿ, (೩೭) ಡಾ॥ ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್. ಅವರು, ಮೈಸೂರು, (೩೮) ಆರ್. ಆರ್. ದಿವಾಕರರು, ಧಾರವಾಡ (ಕ್ಯಾಂಪ್ ಹುಕ್ಕೇರಿ).

ಪರಿಷದುಪಾಧ್ಯಕ್ಷರಾದ ಶ್ರೀ॥ ಡಿ. ವಿ. ಗುಂಡಪ್ಪನವರು ಪ್ರಸಕ್ತ ವರ್ಷದಲ್ಲಿ ಪರಿಷತ್ತು ನಡಸಿದ ಮುಖ್ಯ ಕಾರ್ಯಕಲಾಪಗಳನ್ನೂ, ಪರಿಷತ್ತು ಇನ್ನುಮುಂದಕ್ಕೆ ಮಾಡಬೇಕೆಂದಿರುವ ಕಾರ್ಯಗಳನ್ನೂ ಸಭೆಗೆ ಅರಿಕೆಮಾಡಿ, ಮಹಾಜನರು ಇನ್ನೂ ಹೆಚ್ಚು ಹೆಚ್ಚಾಗಿ ಪರಿಷತ್ತಿಗೆ ಸಹಾಯಮಾಡುತ್ತ ಬರಬೇಕೆಂದು ಬಿನ್ನವಿಸಿ, ಪರಿಷದಧ್ಯಕ್ಷರ ಪರವಾಗಿ ಭಾಷಣಮಾಡಿದರು. ಅನಂತರ ಸಮ್ಮೇಳನದ ಅಂಗೀಕಾರದ ಬಗ್ಗೆ ಬಂದಿದ್ದ ನಿರ್ಣಯಗಳನ್ನು ಪರ್ಯಾಲೋಚಿಸುವ ಬಗ್ಗೆ (ಪರಿಷತ್ತಿನ ೩೫ನೆಯ ನಿಯಮಾನುಸಾರವಾಗಿ) **ವಿಷಯ ನಿರ್ಧಾರಕ ಮಂಡಲಿ** ರಚಿತವಾಯಿತು. ಅದರ ಸದಸ್ಯರು:

(i) **ಸಮ್ಮೇಳನಕ್ಕೆ ಬಂದಿದ್ದ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರು:—** ಶ್ರೀ॥ ಗಳಾದ (೧) ಡಿ. ವಿ. ಗುಂಡಪ್ಪನವರು, (೨) ಬಿ. ಎಂ. ಶ್ರೀಕಂಠಯ್ಯನವರು, (೩) ಸಿ. ಕೆ. ವೆಂಕಟರಾಮಯ್ಯನವರು, (೪) ಎ. ತಾಂದೋಣಿರಾಯರು, (೫) ಡಿ. ಸಿ. ಸುಬ್ಬರಾಯಪ್ಪನವರು, (೬) ಪಿ. ಶ್ರೀನಿವಾಸರಾಯರು, (೭) ವಿ. ಎಸ್. ಪಂಡಿತರು, (೮) ಗೋವಿಂದರಾಮಾಚಾರ್ಯರು, (೯) ಚಂದ್ರಶೇಖರ ಶಾಸ್ತ್ರಿಗಳು, (೧೦) ಆರ್. ಎಸ್. ಮುಗಳಿಯವರು, (೧೧) ಕೆ. ಜಿ. ಕುಂದಣಗಾರರು, (೧೨) ಎಸ್. ವಿ. ರಂಗಣ್ಣನವರು, (೧೩) ವಿ. ಸೀತಾರಾಮಯ್ಯನವರು, (೧೪) ರಂಗಪ್ಪ ಪೋತ್ದಾರರು, (೧೫) ಶ್ರೀಮತಿ ಆರ್. ಕಲ್ಯಾಣಮ್ಮನವರು.

(ii) **ಸಮ್ಮೇಳನಾಧ್ಯಕ್ಷರು:—**(೧೬) ಶ್ರೀ॥ ಬೆಳ್ಳಾವೆ ವೆಂಕಟನಾರಾಯಣಪ್ಪನವರು.

(iii) **ಸಮ್ಮೇಳನಕ್ಕೆ ಬಂದಿದ್ದ ಹಿಂದಿನ ಸಮ್ಮೇಳನಗಳ ಅಧ್ಯಕ್ಷರುಗಳು:—** (೧೭) ಶ್ರೀ॥ ಎಂ. ವೆಂಕಟೇಶಯ್ಯಂಗಾರ್ಯರು.

(iv) **ಸ್ವಾಗತ ಮಂಡಲಿಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು:—** ಶ್ರೀ॥ ಗಳಾದ (೧೮) ಪಿ. ಆರ್. ಚಿಕ್ಕೋಡಿ ಅವರು, (೧೯) ಆರ್. ಪಿ. ಕುಲಕರ್ಣಿ ಅವರು.

(v) **ಪರಿಷದುಪಾಧ್ಯಕ್ಷರು ನೇಮಿಸುವ ಇಬ್ಬರು ಪರಿಷತ್ಸದಸ್ಯರು:—** ಶ್ರೀ॥ ಗಳಾದ (೨೦) ಬಿ. ಶಿವಮೂರ್ತಿ ಶಾಸ್ತ್ರಿಗಳು, (೨೧) ಕೂಡಲಿ ಚಿದಂಬರಂ ಅವರು.

(vi) **ಸ್ವಾಗತ ಮಂಡಲಿಯವರು ನೇಮಿಸಿದ ಐದು ಮಂದಿ:—**ಶ್ರೀ॥ ಗಳಾದ (೨೨) ಬಿಂದೂರಾವ್ ನರಗುಂದಕರ್ ಅವರು, (೨೩) ಪಿ. ಎಂ. ಬೆಂಗಿ ಅವರು, (೨೪) ಎಸ್. ಎಚ್. ಪಾಟೀಲರು, (೨೫) ಮುರಿಗೆಯ್ಯ ಸ್ವಾಮಿ ಬಾಗೋಜಿ ಅವರು, (೨೬) ದಾಮೋದರರಾವ್ ಹುಲ್ಯಾಳ್‌ಕರ್ ಅವರು.

(vii) **ಪ್ರತಿನಿಧಿಗಳು ಆರಿಸಿದ ಹತ್ತು ಮಂದಿ:—**ಶ್ರೀ॥ ಗಳಾದ (೨೭) ಎಂ. ಪಿ. ವಾಲಿ ಅವರು, (೨೮) ಎಂ. ಎಸ್. ರೇಪಾಪೂರ್ ಅವರು, (೨೯) ಶ್ರೀಮತಿ ಗೌರಮ್ಮನವರು, (೩೦) ವಿ. ಬಿ. ನಾಯಕರು, (೩೧) ಎಸ್. ಟಿ. ಪಾಟೀಲರು, (೩೨) ಕೋಟಿ

ಶ್ರೀನಿವಾಸರಾಯರು, (೩೩) ಅಬ್ಕಾರ್ ಆರ್. ಎ. ಕುಲಕರ್ಣಿಯವರು, (೩೪) ... ಬಿಂದುಮಾಧವ ಅವರು, (೩೫) ಕೇಶವಶರ್ಮ ಅವರು.

ಆಮೇಲೆ, ಪರಿಷತ್ತಿನ ಮಹಾಪೋಷಕರಾದ ಮೈಸೂರು ಶ್ರೀಮನ್ಮ... ರಾಜರವರಲ್ಲಿಯೂ, ಪರಿಷತ್ತಿನ ಪೋಷಕರೂ ಅಧ್ಯಕ್ಷರೂ ಆದ ಶ್ರೀಮದ್ಯು... ರವರಲ್ಲಿಯೂ, ಜಮುಖಂಡಿ ಸಂಸ್ಥಾನದ ಶ್ರೀಮಂತ ರಾಜಾಸಾಹೇಬರವರ... ಸಮ್ಮೇಳನದ ರಾಜಭಕ್ತಿ ವಿಶ್ವಾಸಗಳನ್ನು ಸಮರ್ಪಿಸುವ ನಿರ್ಣಯ... ಸಮ್ಮೇಳನವು ಕೈಚಪ್ಪಾಳೆಗಳೊಡನೆ ಅಂಗೀಕರಿಸಿತು. ಸಮ್ಮೇಳನದ ಆಹ್ವಾ... ಮನ್ನಿಸಿ ಈ ಪ್ರಾರಂಭೋತ್ಸವಕ್ಕೆ ಜಮುಖಂಡಿ ಸಂಸ್ಥಾನದ ದಿವಾನ್ ಸಾಹೇ... ರವರಾದ ರಾವ್ ಬಹದ್ದೂರ್ ಶ್ರೀ॥ ಆರ್. ಕೆ. ಭಗವತ್ ಅವರೂ, ... ಮಂತ್ರಿಗಳೂ ದಯಮಾಡಿಸಿ ಅದು ಮುಗಿಯುವವರೆಗೂ ಇದ್ದುದು ... ಸಂತೋಷದ ವಿಷಯ.

## ಸಮ್ಮೇಳನದ ನಿರ್ಣಯಗಳು

ಸಮ್ಮೇಳನದ ಅಧಿವೇಶನವು ನಿಯಮಿಸಿದ ವಿಷಯ ನಿರ್ಧಾರಕ ಮ... ತಾ॥ ೫-೧೨-೧೯೩೭ರ (ಪ್ರಾರಂಭ ದಿನದ) ಮಧ್ಯಾಹ್ನ ಸಮ್ಮೇಳನಾಧ್ಯ... ಬಿಡಾರದಲ್ಲಿ ಸೇರಿ, ಸಮ್ಮೇಳನದ ಪರ್ಯಾಲೋಚನೆಗಾಗಿ ಪರಿಷತ್ತಿನ ಕಾ... ಮಂಡಲಿಯಿಂದಲೂ ಇತರ ಮಹಾಜನರಿಂದಲೂ ಬಂದಿದ್ದ ಒಟ್ಟು ೧೭ ನಿರ್ಣ... ಸೂಚನೆಗಳ ಪೈಕಿ ೧೧ ನಿರ್ಣಯಗಳನ್ನು ಸಮ್ಮೇಳನದ ಅಂಗೀಕಾರ... ಇರಿಸಿತು. ಆ ನಿರ್ಣಯ ಸೂಚನೆಗಳು ಅದೇ ದಿನ ಮಧ್ಯಾಹ್ನ ೪-೩೦ಕ್ಕೆ ಸೇ... ಸಮ್ಮೇಳನದ ಅಧಿವೇಶನದಲ್ಲಿ ಸರ್ವಾನುಮತದಿಂದ ಅಂಗೀಕೃತವಾದುವು.

ಮತ್ತೆ ತಾ॥ ೬-೧೨-೧೯೩೭ನೆಯ ಗುರುವಾರ (ಎರಡನೆಯ ದಿ... ಮಧ್ಯಾಹ್ನ ೨ ಘಂಟೆಗೆ ವಿಷಯ ನಿರ್ಧಾರಕ ಮಂಡಲಿ ಸಭೆ ಸೇರಿ, ಸ್ವಾಗತ ಮಂ... ಕಳುಹಿಸಿದ್ದ ೮ ನಿರ್ಣಯ ಸೂಚನೆಗಳ ಪೈಕಿ ೭ನ್ನು ಸಮ್ಮೇಳನದ ಅಂಗೀಕಾರ... ಇರಿಸಿತು. ಆ ನಿರ್ಣಯ ಸೂಚನೆಗಳನ್ನು ಅದೇ ದಿನ ಮಧ್ಯಾಹ್ನ ೩-೩೦ ಘಂ... ಸೇರಿದ ಸಮ್ಮೇಳನದ ಅಧಿವೇಶನವು ಸರ್ವಾನುಮತದಿಂದ ಅಂಗೀಕರಿಸಿತು.

ಅಂಗೀಕೃತವಾದ ನಿರ್ಣಯಗಳ ಸಂಖ್ಯೆ ೨೨; ಇವುಗಳ ಪೈಕಿ ೩ ರಾಜ... ಸೂಚಕ, ೪ ಸಂತಾಪ ಸೂಚಕ, ಉಳಿದುವು ಪರಿಷತ್ತಿಗೂ ಕನ್ನಡ ಭಾ... ಸಾಹಿತ್ಯ ವಿಚಾರಗಳಿಗೂ ಸಂಬಂಧಪಟ್ಟುವು. (ಈ ನಿರ್ಣಯಗಳನ್ನು ... ಬೇರೆಯಾಗಿ ಕೊಟ್ಟಿದೆ.) ಅವುಗಳನ್ನು ಮಹಾಜನರು ಅವಗಾಹನೆಗೆ ತಂದುಕೊಂ... ತಮ್ಮ ಸಹಾನುಭೂತಿ ಸಹಕಾರಗಳನ್ನು ಕೊಡಬೇಕೆಂದು ಪರಿಷತ್ತು ಬೇಡುತ್ತ...

## ಉಪನ್ಯಾಸಗಳು

ತಾ॥ ೫-೧೨-೧೯೩೭ರಲ್ಲಿ ಪೂರ್ವರಂಗವಾಗಿ ಶ್ರೀ॥ ಬಿ. ಎಂ. ಶ್ರೀಕಂಠಯ್ಯ... ನವರು "ಕನ್ನಡ ಭಾಷೆ ಮತ್ತು ಸಾಹಿತ್ಯ" ಎಂಬ ವಿಷಯವಾಗಿ ಉಪನ್ಯಾಸವ... ಕನ್ನಡ ಚಳವಳಿ ಮುಂದೆ ಹೇಗೆ ನಡೆಯಬೇಕೆಂಬುದನ್ನು ವಿಶದಗೊಳಿಸಿ...

ಅದೇ ದಿನ ಸಾಯಂಕಾಲ ಜಮಖಂಡಿಯ 'ಕನ್ನಡ ನಾಟ್ಯವಿಲಾಸಿ ಸಂಘ'ದವರು ಶ್ರೀ॥ ಆರ್. ಎಸ್. ಮುಗಳಿ ಅವರ "ನಾಮಧಾರಿ" ಎಂಬ ನಾಟಕವನ್ನು ಅಭಿನಯಿಸಿದರು; ಅವಕ್ಕೆ ಸಮ್ಮೇಳನಕ್ಕಾಗಿ ಬಂದಿದ್ದ ಪ್ರತಿನಿಧಿಗಳು ಪ್ರಮುಂತಾದವರನ್ನು ಆಹ್ವಾನಿಸಿದ್ದರು.

ತಾ॥ ೨೯-೧೨-೧೯೩೭ ಬುಧವಾರ (ಮೊದಲನೆಯ ದಿನ) ಸಾಯಂಕಾಲ ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರು "ಸಮ್ಮ ರನ್ನ" ಎಂಬ ವಿಷಯವಾಗಿಯೂ, ಶ್ರೀ॥ ಟಿ. ಕೆ. ತುಕೋಳರು "ಜೀವನದಲ್ಲಿ ಸಾಹಸದ ಸ್ಥಾನ" ಎಂಬ ವಿಷಯವಾಗಿಯೂ, ಕೀರ್ತನಕೇಸರಿ ಶ್ರೀ॥ ಬಿ. ಶಿವಮೂರ್ತಿ ಶಾಸ್ತ್ರಿಗಳು "ಶರಣ ಸಾಹಿತ್ಯ" ಎಂಬ ವಿಷಯವಾಗಿಯೂ ಭಾಷಣಮಾಡಿದರು.

ತಾ॥ ೩೦-೧೨-೧೯೩೭ ಗುರುವಾರ (ಎರಡನೆಯ ದಿನ) ಬೆಳಗ್ಗೆ ಶ್ರೀ॥ ಪ್ರಾಂ. ಭೀ. ದೇಸಾಯಿಯವರು "ಕರ್ಣಾಟಕದ ಇತಿಹಾಸ ಪರಂಪರೆ" ಎಂಬ ವಿಷಯವನ್ನು ಕುರಿತು ಉಪನ್ಯಾಸಮಾಡಿದರು.

ತಾ॥ ೩೧-೧೨-೧೯೩೭ ಶುಕ್ರವಾರ (ಮೂರನೆಯ ದಿನ) ಮಧ್ಯಾಹ್ನ —ಕವಿಗೋಷ್ಠಿಯ ಸಂಬಂಧದಲ್ಲಿ—ಶ್ರೀ॥ ತೀ. ನಂ. ಶ್ರೀಕಂಠಯ್ಯನವರು "ಸಾಹಿತ್ಯದ ಪ್ರಯೋಜನಗಳು" ಎಂಬ ವಿಷಯವನ್ನು ಕುರಿತು ಉಪನ್ಯಾಸಮಾಡಿದರು.

ಸಮ್ಮೇಳನ ಮುಗಿದ ಮಾರನೆಯ ದಿನ ಬೆಳಗ್ಗೆ ಗಣಪತಿ ಗುಡಿಯಲ್ಲಿ ಶ್ರೀ॥ ಮಾಸ್ತಿ ವೆಂಕಟೇಶಯ್ಯಂಗಾರ್ಯರು "ಹೊಸ ಕಣ್ಣು" ಎಂಬ ವಿಷಯವಾಗಿಯೂ, ಶ್ರೀ॥ ಎ. ಸೀತಾರಾಮಯ್ಯನವರು "ಇಂಡಿಯಾ ದೇಶದಲ್ಲಿ ಯಂತ್ರ ಕೈಗಾರಿಕೆಗಳ ಅಭಿವೃದ್ಧಿ" ಎಂಬ ವಿಷಯವಾಗಿಯೂ ಉಪನ್ಯಾಸಮಾಡಿದರು. ಸಮ್ಮೇಳನದ ಪ್ರತಿನಿಧಿಗಳಲ್ಲದೆ ಪುರಜನರೂ ಈ ಉಪನ್ಯಾಸಗಳನ್ನು ಕೇಳಲು ನೆರೆದಿದ್ದರು.

## ಕವಿ ಗೋಷ್ಠಿ

ತಾ॥ ೩೧-೧೨-೧೯೩೭ ಶುಕ್ರವಾರ ಬೆಳಗ್ಗೆ ಶ್ರೀ॥ ಬೆಟಗೇರಿ ಕೃಷ್ಣಶರ್ಮರವರ ಅಧ್ಯಕ್ಷತೆಯಲ್ಲಿ ಕವಿ ಸಮ್ಮೇಳನವು ಸೇರಿ ೮-೩೦ರಿಂದ ೧೨ರ ವರೆಗೂ, ಮಧ್ಯಾಹ್ನ ೩ರಿಂದ ೫ ಘಂಟೆಯವರೆಗೂ ನಡೆಯಿತು. ಅಧ್ಯಕ್ಷರಾದ ಶ್ರೀ॥ ಬೆಟಗೇರಿ ಕೃಷ್ಣಶರ್ಮರವರು ತಮ್ಮ ಪ್ರಾರಂಭ ಹಾಗೂ ಮುಕ್ತಾಯ ಭಾಷಣಗಳಲ್ಲಿ ಸಾಹಿತ್ಯದ ಜೀವಾಳವೇನು, ಹಳೆ ಹೊಸ ಸಾಹಿತ್ಯಗಳ ವ್ಯತ್ಯಾಸಗಳೇನು ಎಂಬ ವಿಚಾರಗಳನ್ನು ಕುರಿತು ತಮ್ಮ ಪ್ರಚೋದಕ ಅಭಿಪ್ರಾಯಗಳನ್ನು ವ್ಯಕ್ತಗೊಳಿಸಿದರು. ಸುಮಾರು ೪೦ ಮಂದಿ ಹಿರಿಯ ಕಿರಿಯ ಸಾಹಿತಿಗಳು ತಮ್ಮ ತಮ್ಮ ಮತ್ತು ಇತರರ ಸಾಹಿತ್ಯ ಕೃತಿಗಳನ್ನು ವಾಚನಮಾಡಿ ಸಭಿಕರನ್ನು ತೃಪ್ತಿಪಡಿಸಿದರು. (ಈ ಗೋಷ್ಠಿಯ ಕಾರ್ಯಕಲಾಪಗಳ ಸಂಗ್ರಹ ವರದಿಯನ್ನು ಬೇರೆಯಾಗಿ ಕೊಟ್ಟಿದೆ.)

## ಕಾವ್ಯ ವಾಚನ, ಗಾಯನ, ಕೀರ್ತನೆ

ತಾ॥ ೨೯-೧೨-೧೯೩೭ ಬುಧವಾರ ರಾತ್ರಿ ೧೦ ಘಂಟೆಗೆ ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್ಯರವರು ಗದುಗಿನ ಭಾರತದಿಂದ "ಕುಂತೀ ಕರ್ಣ ಸಂ... ಭಾಗವನ್ನು ಸುಶ್ರಾವ್ಯವಾಗಿ ವಾಚನಮಾಡಿದರು; ಆದೇ ರಾತ್ರಿ ಶ್ರೀ॥ ಜಯ... ಚಾರ್ಯರು 'ಕೀಚಕ ವಧೆ' ಎಂಬ ಮನೋಹರವಾದ ಕೀರ್ತನೆಯನ್ನು ನಡ...

ತಾ॥ ೩೦-೧೨-೧೯೩೭ ಗುರುವಾರ ಬೆಳಗ್ಗೆ ಶ್ರೀ॥ ಕೆ. ಜಿ. ಸಂಪತ್ಕುಮಾ... ಚಾರ್ಯರವರು ಕೆಲವು ಕನ್ನಡ ದೇವರನಾಮಗಳನ್ನೂ ಗೀತೆಗಳನ್ನೂ ಹಾ... ಮತ್ತು ಪಂಚಾಕ್ಷರಿ ಗವಾಯಿಗಳ ಇಂಪಾದ ಗಾಯನವಾಯಿತು. ಅದೇ... ಸಾಯಂಕಾಲ ಕೀರ್ತನಕೇಸರಿ ಶ್ರೀ॥ ಶಿವಮೂರ್ತಿಶಾಸ್ತ್ರಿಗಳು "ಕರ್ನಾಟ... ವಿಜಯ" ಎಂಬ ತಮ್ಮ ಪ್ರಸಿದ್ಧವಾದ ಕೀರ್ತನೆಯನ್ನು ನಡಸಿದರು.

## ಯೋಗಾಸನ, ವ್ಯಾಯಾಮ ಪ್ರದರ್ಶನಗಳು

ಮೈಸೂರು ಅರಮನೆಯ ಅಧಿಕಾರಿಗಳು ಅಲ್ಲಿನ ಯೋಗಶಾಲೆಯಲ್ಲಿ ... ಪ್ರೊಫೆಸರವರಾಗಿರುವ ಶ್ರೀ॥ ಕೃಷ್ಣಮಾಚಾರ್ಯರವರನ್ನೂ, ಅವರ ಶಿಷ್ಯ... ಗಳಾದ ಶ್ರೀ॥ ಸಿ. ಮಹದೇವ ಭಟ್ಟರು, ಶ್ರೀ॥ ಎಂ. ಜಿ. ಮದನಗೋಪಾಲ... ಅರಸರು, ಶ್ರೀ॥ ಎಂ. ಪುಟ್ಟರಾಜ ಅರಸರು ಇವರುಗಳನ್ನೂ ಸಮ್ಮೇಳನದಲ್ಲಿ ... ವಿದ್ಯೆಯನ್ನು ಪ್ರದರ್ಶಿಸಿ ಜನರಲ್ಲಿ ಯೋಗಾಭ್ಯಾಸದ ತಿಳಿವನ್ನು ... ಉದ್ದೇಶದಿಂದ ದಯಮಾಡಿ ಕಳುಹಿಸಿಕೊಟ್ಟಿದ್ದರು. ಶ್ರೀ॥ ಕೃಷ್ಣಮಾಚಾ... ಅವರ ಶಿಷ್ಯರುಗಳೂ ತಾ॥ ೩೦-೧೨-೧೯೩೭ ಗುರುವಾರ ಮಧ್ಯಾಹ್ನ ... ೩ರ ವರೆಗೆ ಕೆಲವು ಯೋಗಾಸನ ಕ್ರಮಗಳನ್ನು ಅದ್ಭುತವಾಗಿ ಪ್ರದರ್ಶಿ... ಪ್ರತಿ ಯೋಗಾಸನದ ವಿಚಾರವನ್ನೂ ಶ್ರೀ॥ ಕೃಷ್ಣಮಾಚಾರ್ಯರು ... ಹೇಳಿ ನೆರೆದಿದ್ದವರಿಗೆ ಉಪಯುಕ್ತವಾದ ತಿಳಿವಳಿಕೆಯನ್ನು ... ಸ್ವಾಗತಾಧ್ಯಕ್ಷರ ಸೂಚನೆಯ ಮೇರೆಗೆ, ಇವರ ಯೋಗಾಸನ ಪ್ರದರ್ಶನ... ತನ್ನ ಮೆಚ್ಚಿಗೆಯನ್ನು ವ್ಯಕ್ತಪಡಿಸಿ, ಸಮ್ಮೇಳನವು ಒಂದು ನಿರ್ಣಯ... ಅಂಗೀಕರಿಸಿತು.

ಅದೇ ದಿನ ಸಾಯಂಕಾಲ ೬-೩೦ಕ್ಕೆ ಬೆಂಗಳೂರಿನ ಶ್ರೀ॥ ಬಸ... ಸಂಸಿಯವರೂ, ಶ್ರೀ॥ ಪಟ್ಟಣ್ಣ ಚೆಟ್ಟಿಯವರೂ ಬಾಗಲಕೋಟೆಯ ಶ್ರೀ ಬಸವ... ಹೈಸ್ಕೂಲಿನ ಡ್ರಿಲ್ ಉಪಾಧ್ಯಾಯರಾದ ಶ್ರೀ॥ ಚೆಂದಗಿಯವರೂ, ಶಕ್ತಿಪ್ರದ... ಗಳನ್ನು ಮಾಡಿದರು. ಇವುಗಳನ್ನು ಸಭಿಕರು ಬಹುವಾಗಿ ಮೆಚ್ಚಿದರು.

## ಲಾವಣಿ ಮತ್ತು ಇತರ ವಿನೋದಗಳು

ತಾ॥ ೩೦-೧೨-೧೯೩೭ ಗುರುವಾರ ರಾತ್ರಿ ೧೧ ಘಂಟೆಯಿಂದ ಲಾವ... ಹಾಡುಗಾರಿಕೆ ನಡೆಯಿತು. ಇದನ್ನು ಸಾರ್ವಜನಿಕ ಮಾರ್ಕೆಟ್ ... ಏರ್ಪಡಿಸಿದ್ದುದರಿಂದ, ಸಮ್ಮೇಳನಕ್ಕೆ ಬಂದಿದ್ದವರಲ್ಲದೆ ಪುರಜನರೂ ಕೇಳಿ ... ಪಟ್ಟರು. ಶ್ರೀ॥ ಗಳಾದ ರಂಗಪ್ಪ ಕಟಗೇರಿ, ಡಿ. ಎಸ್. ರಾಮಸ್ವಾ...

ತುಂಗಳದ ಸತ್ಯಪ್ಪ— ಇವರುಗಳು ತಮ್ಮ ತಮ್ಮ ಅಪೂರ್ವ ಲಾವಣಿಗಳನ್ನು ಮನೋಹರವಾಗಿ ಹಾಡಿದರು. ಲಾವಣಿಗಳ ಹಾಡುಗಾರಿಕೆ ಬೆಳಗಿನ ಝಾವ ೨ ಘಂಟೆಯವರೆಗೂ ಸಾಗಿತು. ಇದನ್ನು ಕೇಳಲು ಸುಮಾರು ೧,೫೦೦–೨,೦೦೦ ಮಂದಿ ಕಿಕ್ಕಿರಿದು ನೆರೆದಿದ್ದರು.

ತಾ॥ ೩೦–೧೨–೧೯೩೭ ಗುರುವಾರ ಬೆಳಗ್ಗೆ ಕವಿಗೋಷ್ಠಿಯ ಸಮಯದಲ್ಲಿ ಧಾರವಾಡದ ಶ್ರೀ॥ ಶ್ರೀನಿವಾಸ ಕುಲಕರ್ಣಿಯವರು ಏಕಾಂಕ ಪ್ರಹಸನವೊಂದನ್ನು ತಾವು ಒಬ್ಬರೇ ಅಭಿನಯಿಸಿ ತೋರಿಸಿದರು.

ತಾ॥ ೩೧–೧೨–೧೯೩೭ ಶುಕ್ರವಾರ ಸಾಯಂಕಾಲ, ಶ್ರೀ॥ ಶ್ರೀನಿವಾಸ ಕುಲಕರ್ಣಿಯವರೂ ಅವರ ಗೆಳೆಯರೂ ತಮ್ಮ ನೃತ್ಯಗಳನ್ನು ಪ್ರದರ್ಶಿಸಿದರು. ಈ ನೃತ್ಯಗಳು ಸಭಿಕರಿಗೆ ವಿಶೇಷವಾದ ಆನಂದವನ್ನು ಒದಗಿಸಿದುವು.

ಮೇಲೆ ಕಂಡ ಸಾಯಂಕಾಲವೇ ೬½ ಘಂಟೆಯಿಂದ ಸಮ್ಮೇಳನ ಮಂದಿರದ ಮುಂಭಾಗದಲ್ಲಿ "ಕರಡಿ ಮಜಲು" ಎಂಬ ಉತ್ತರ ಕರ್ಣಾಟಕದ ವಿಶಿಷ್ಟವಾದ್ಯದ ಬಾಜನೆಯನ್ನು ಏರ್ಪಡಿಸಲಾಗಿತ್ತು. ಅದು ಅತಿರಮ್ಯವಾಗಿತ್ತು.

## ಪ್ರದರ್ಶನಗಳು

ಸಮ್ಮೇಳನದ ಅಂಗವಾಗಿ ಕರ್ಣಾಟಕ ಐತಿಹಾಸಿಕ ವಸ್ತುಗಳ ಪ್ರದರ್ಶನ ವೊಂದನ್ನೂ, ಕನ್ನಡ ವೃತ್ತಪತ್ರಿಕೆಗಳ ಪ್ರದರ್ಶನವೊಂದನ್ನೂ ಏರ್ಪಡಿಸ ಲಾಗಿತ್ತು. ಈ ಪ್ರದರ್ಶನಗಳ ಪ್ರಾರಂಭೋತ್ಸವವನ್ನು, ಸಮ್ಮೇಳನದ ಮೊದಲನೆಯ ದಿನ ಮಧ್ಯಾಹ್ನ ೪ ಘಂಟೆಗೆ, ಶ್ರೀ॥ ಮುದವೀಡು ಕೃಷ್ಣರಾಯರವರು ತಮ್ಮ ಉಜ್ವಲ ಭಾಷಣದಿಂದ ನೆರವೇರಿಸಿದರು.

## ವಿಶೇಷ ಸಭೆಗಳು

ತಾ॥ ೩೦–೧೨–೧೯೩೭ನೆಯ ಗುರುವಾರ ಪ್ರಾತಃಕಾಲ ೮॥ ಘಂಟೆಯಿಂದ ಮಧ್ಯಾಹ್ನ ೧೨॥ಯ ವರೆಗೆ ಪರಿಷತ್ತಿನ ೨೨ನೆಯ ವಾರ್ಷಿಕಾಧಿವೇಶನವು ಸಮ್ಮೇಳ ನಾಧ್ಯಕ್ಷರ ಬಿಡಾರದಲ್ಲಿ ನಡೆಯಿತು. ಆಲೋಚ್ಯ ವಿಷಯಗಳ ಪಟ್ಟಿಯ ಪ್ರಕಾರ ವಾರ್ಷಿಕ ವರದಿ ಮತ್ತು ಲೆಕ್ಕಗಳನ್ನು ಒಪ್ಪಿಸುವಿಕೆ, ಉಪಾಧ್ಯಕ್ಷರ ಮತ್ತು ಕಾ॥ ನಿ॥ ಮಂಡಲಿಯ ಸದಸ್ಯರ ಚುನಾವಣೆ ಮತ್ತು ಇತರ ವಿಷಯಗಳ ಪರ್ಯಾ ಲೋಚನೆ—ಇವು ಕ್ರಮವಾಗಿ ನಡೆದುವು. ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಈ ಸಲ ಹೊಸದಾಗಿ ಪರಿಷದುಪಾಧ್ಯಕ್ಷ ಪದವಿಗೆ ಸರ್ವಾನುಮತದಿಂದ ಚುನಾಯಿತ ರಾದರು; ನಾಲ್ಕು ವರ್ಷಗಳಿಂದ ಒಂದೇಸಮನಾಗಿ ಪರಿಷತ್ತಿನ ಪುರೋಭಿವೃದ್ಧಿಗಾಗಿ ಕೆಲಸಮಾಡಿ ಉಪಾಧ್ಯಕ್ಷ ಪದವಿಯನ್ನು ಈ ಸಲ ಬಿಟ್ಟ ಶ್ರೀ॥ ಡಿ. ವಿ. ಗುಂಡಪ್ಪ ನವರಿಗೆ ತನ್ನ ಅಭಿವಂದನೆಗಳನ್ನು ವ್ಯಕ್ತಪಡಿಸಿ, ವಾರ್ಷಿಕ ಸಭೆ ಒಂದು ನಿರ್ಣಯ ವನ್ನಂಗೀಕರಿಸಿತು. ಪರಿಷತ್ತಿನ ನಿಯಮಾವಳಿಯನ್ನು ವಿಮರ್ಶೆಮಾಡಿ, ಪರಿಶೋಧಿಸಿ, ತಿದ್ದುಪಾಟುಗಳನ್ನು ಸೂಚಿಸಿ, ನಿಯಮಗಳನ್ನು ಪುನರ್ಮುದ್ರಣಕ್ಕೆ ಸಿದ್ಧಮಾಡಿ ಕೊಡಲು ಒಂದು ಉಪಸಮಿತಿ ಏರ್ಪಾಟಾಯಿತು.

ಅದೇ ದಿನ ಬೆಳಗ್ಗೆ ಸಂಘ ಸಭಾ ಸಮ್ಮೇಳನವು (ಅಥಣಿಯ ಬಿಡಾ... ೧೧ ಘಂಟೆಯಿಂದ ಪ್ರಾರಂಭವಾಗಿ ಮಧ್ಯಾಹ್ನ ೧.೩೦ರ ವರೆಗೆ, ಧಾರವಾಡದ '... ಗರ ಸಂಘ'ದ ಆಶ್ರಯದಲ್ಲಿ ನಡೆಯಿತು. ಸಂಘ ಸಮ್ಮೇಳನದ ವ್ಯವಸ್ಥಾ... ಶ್ರೀ॥ ಬುರ್ಲಿ ಬಿಂದುಮಾಧವರಾಯರು. ಸುಮಾರು ೩೦ ಸಂಘ ಸಂ... ಪ್ರತಿನಿಧಿಗಳು ಹಾಜರಿದ್ದರು. ಕನ್ನಡದ ನಲುವಾಗಿ ಕೆಲಸಮಾಡುತ್ತಿರುವ ... ಸಂಘಗಳ ಸಂಘಟನೆಯಾಗಿ ಎಲ್ಲ ಸಂಘಗಳ ಕಾರ್ಯಗಳೂ ಏಕಮುಖವಾಗ... ಗೊತ್ತುವಳಿ ಮಾಡುವ ಉದ್ದೇಶದಿಂದ ಈ ಸಭೆ ಸೇರಿತ್ತು. ನಾ... ಗೊತ್ತುವಳಿಗಳು ಅಂಗೀಕೃತವಾದುವು.

## ಸಂತೋಷ ಕೂಟಗಳು

ತಾ॥ ೩೦-೧೨-೧೯೩೭ರ ಸಾಯಂಕಾಲ 'ಅಥಣಿ'ಯವರ ಬಿಡಾ... ಪರಿಷದಧಿಕಾರಿಗಳ, ಸ್ವಾಗತ ಸಮಿತಿಯ ಕಾರ್ಯಕರ್ತರ ಮತ್ತು ಕೆಲವು ... ಪ್ರತಿನಿಧಿಗಳ ಪರಸ್ಪರ ಪರಿಚಯ ಮಾತುಕತೆಗಳು ನಡೆದುವು. ಶ್ರೀ॥ ಗಾ... ಮಾಸ್ತಿ ವೆಂಕಟೇಶಯ್ಯಂಗಾರ್ಯರೂ, ಮುದವೀಡು ಕೃಷ್ಣರಾಯರೂ, ಡಿ. ... ಗುಂಡಪ್ಪನವರೂ ಸಣ್ಣ ಭಾಷಣಗಳನ್ನು ಮಾಡಿದರು. ಅಲ್ಪೋಪಾಹಾ... ಏರ್ಪಟ್ಟಿತ್ತು.

ತಾ॥ ೩೧-೧೨-೧೯೩೭ ಶುಕ್ರವಾರ ಬೆಳಗ್ಗೆ ಶ್ರೀ॥ ಆಲಬಾಳ ವೆಂಕಟರಾ... ಸಮ್ಮೇಳನಾಧ್ಯಕ್ಷರನ್ನೂ, ಇನ್ನು ಕೆಲವು ಮಿತ್ರರನ್ನೂ ಕಂಕಣವಾಡಿಗೆ (ಕೃ... ನದಿಯ ಬಳಿ) ಕರೆದುಕೊಂಡುಹೋಗಿ ಔತಣಮಾಡಿಸಿದರು.

ಇಷ್ಟಲ್ಲದೆ, ಜಮಖಂಡಿಯ ಕೆಲವು ದೊಡ್ಡಮನುಷ್ಯರು ಆಗಿಂದಾಗ್ಗೆ ... ಮಿತ್ರರನ್ನು ಬರಮಾಡಿಕೊಂಡು ಉಪಾಹಾರಗಳನ್ನಿತ್ತು ವಿಶ್ವಾಸ ತೋರಿಸಿದರು.

ಸಮ್ಮೇಳನ ಮುಗಿದ ಮಾರನೆಯ ದಿನ ಬೆಳಗ್ಗೆ ಸಮ್ಮೇಳನಾಧ್ಯಕ್ಷ... ಪರಿಷದಧಿಕಾರಿಗಳ, ಸ್ವಾಗತ ಮಂಡಲಿಯ ಕಾರ್ಯಕರ್ತರ, ಸ್ವಯಂಸೇ... ಮತ್ತು ಇತರರ 'ಗ್ರೂಪ್ ಫೋಟೋ' ತೆಗೆಯಲಾಯಿತು. (ಈ ಫೋಟೋ... ಚಿತ್ರವನ್ನು ಪ್ರಾರಂಭದಲ್ಲಿ ಕೊಟ್ಟಿದೆ.)

## ಉಪಸಂಹಾರ

ತಾ॥ ೩೧-೧೨-೧೯೩೭ ಶುಕ್ರವಾರ ಸಾಯಂಕಾಲ ೫-೩೦ ಘಂಟೆಗೆ ಸಮ್ಮೇಳನ... ಉಪಸಂಹಾರ ಕಾರ್ಯಕ್ರಮವು ಮೊದಲಾಯಿತು. ಸಮಸ್ತ ಕರ್ನಾಟ... ಪರವಾಗಿಯೂ ಶ್ರೀ॥ ಗಳಾದ ಬಿ. ಎಂ. ಶ್ರೀಕಂಠಯ್ಯನವರು, ಗೋ... ರಾಮಾಚಾರ್ಯರು, ಚಂದ್ರಶೇಖರಶಾಸ್ತ್ರಿಗಳು, ರಂ. ಶ್ರೀ. ಮುಗಳಿಯ... ಮತ್ತು ಪ್ಯಾಟಿ ಶಾಮರಾಯರು ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸಿದ... ಸ್ವಾಗತ ಸಮಿತಿಗೆ ಮೆಚ್ಚಿಕೆಯನ್ನೂ ವಂದನೆಗಳನ್ನೂ ತಿಳಿಸಿದರು.

ಅನಂತರ ಸಮ್ಮೇಳನಾಧ್ಯಕ್ಷರು ಸಣ್ಣದೊಂದು ಭಾಷಣಮಾಡಿ ಸಮ್ಮೇಳನ... ಉತ್ಸವಕ್ಕೆ ಶುಭಮಂಗಳ ಮಾಡಿದರು. ಆ ಬಳಿಕ ಬಳ್ಳಾರಿಯ ಕರ್ನಾಟಕ ಸಂ...

ಕಾರ್ಯದರ್ಶಿಯವರಾದ ಶ್ರೀ॥ ಬಿ. ಎಂ. ರೇವಣಸಿದ್ದಪ್ಪನವರು ತಮ್ಮೂರಿನವರ ಪರವಾಗಿ ಬಳ್ಳಾರಿಗೆ ಮುಂದಿನ ಸಮ್ಮೇಳನದ ಆಹ್ವಾನವನ್ನು ಕೊಟ್ಟರು. ಕೊನೆಯಲ್ಲಿ ಸ್ವಾಗತಾಧ್ಯಕ್ಷರಾದ ಶ್ರೀ॥ ಚಿಕ್ಕೋಡಿಯವರು ಸಮ್ಮೇಳನಾಧ್ಯಕ್ಷರಿಗೂ ಪರಿಷತ್ತಿಗೂ ಮತ್ತು ಸಮ್ಮೇಳನದ ಯಶಸ್ವಿತೆಗೆ ಕಾರಣಕರ್ತರಾದ ದಾತೃಗಳು, ಕಾರ್ಯಸಹಾಯಕರು, ಸ್ವಯಂಸೇವಕರು, ಭಾಷಣಕಾರರು, ಕವಿಸಮ್ಮೇಳನಾಧ್ಯಕ್ಷರು, ಗಮಕ ಗಾಯಕರು, ಲಾವಣಿಕಾರರು, ಕೀರ್ತನಕಾರರು, ಪ್ರದರ್ಶನ ಕರ್ತರು, ಪ್ರತಿನಿಧಿಗಳು ಮುಂತಾದವರಿಗೂ ಸ್ವಾಗತಸಮಿತಿಯ ಕೃತಜ್ಞತೆಯನ್ನು ತಿಳಿಸಿದಮೇಲೆ, ರಾಷ್ಟ್ರಗೀತೆಯೊಡನೆಯೂ ಜಯ ಜಯಕಾರಗಳೊಡನೆಯೂ ಸಮ್ಮೇಳನವು ಮುಕ್ತಾಯಗೊಂಡಿತು.

## ವಿಶೇಷ ಸಂಗತಿ

ಜಮಖಂಡಿಯ ಶ್ರೀಮಂತ ರಾಜಾಸಾಹೇಬರು ಸಮ್ಮೇಳನದ ವಿಷಯದಲ್ಲಿ ತಮ್ಮ ಸಂಪೂರ್ಣ ಸಹಾನುಭೂತಿಯನ್ನು ವ್ಯಕ್ತಪಡಿಸಿದ್ದಲ್ಲದೆ, ಸಮ್ಮೇಳನಾಧ್ಯಕ್ಷರನ್ನೂ, ಪರಿಷದಧಿಕಾರಿಗಳನ್ನೂ (ತಾ॥ ೩೦-೧೨-೧೯೩೭ರಲ್ಲಿ) ಕರಸಿಕೊಂಡು ಅವರೊಡನೆ ಮಾತುಕತೆ ನಡಸಿ ಕನ್ನಡದ ಪುರೋಭಿವೃದ್ಧಿಯ ವಿಷಯದಲ್ಲಿ ತಮ್ಮ ಸಹಾನುಭೂತಿಯ ಭರವಸೆಯನ್ನು ಮತ್ತೊಮ್ಮೆ ಕೊಟ್ಟರು. ಮತ್ತು ತಾ॥ ೩೧-೧೨-೧೯೩೭ರ ಸಾಯಂಕಾಲ ಸಮ್ಮೇಳನಾಧ್ಯಕ್ಷರನ್ನೂ, ಪರಿಷದಧಿಕಾರಿಗಳನ್ನೂ, ಸ್ವಾಗತ ಸಮಿತಿಯ ಅಧಿಕಾರಿಗಳನ್ನೂ, ಇತರ ಪ್ರಮುಖರನ್ನೂ ಆಹ್ವಾನಿಸಿ ಉಪಾಹಾರವಿತ್ತು ಸತ್ಕರಿಸಿದರು. ಇದು ಸಂತೋಷದ ಸಂಗತಿ.

## ವಂದನಾ ಸಮರ್ಪಣೆ

ಈ ೨೨ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಆಹ್ವಾನಕೊಟ್ಟು, ಅನೇಕ ಕಷ್ಟಗಳನ್ನು ಸಹಿಸಿ ಅದನ್ನು ತೃಪ್ತಿಕರವಾಗಿ ನಡಸಿಕೊಟ್ಟ ಜಮಖಂಡಿಯ ಸ್ವಾಗತ ಮಂಡಲಿಗೂ, ಸಮ್ಮೇಳನದ ಅಧ್ಯಕ್ಷಪದವಿಯನ್ನು ಒಪ್ಪಿಕೊಂಡು ಸಮ್ಮೇಳನವನ್ನು ಯಶಸ್ವಿಮಾಡಿಕೊಟ್ಟ ಶ್ರೀ॥ ಬೆಳ್ಳಾವೆ ವೆಂಕಟನಾರಾಯಣಪ್ಪನವರಿಗೂ, ಸಮ್ಮೇಳನದ ವಿಷಯದಲ್ಲಿ ಸಹಾನುಭೂತಿಯನ್ನು ವ್ಯಕ್ತಪಡಿಸಿ ಸಂದೇಶಗಳನ್ನು ಕಳುಹಿಸಿದ್ದ ಎಲ್ಲ ಮಹನೀಯರಿಗೂ ಮತ್ತು ಸಮ್ಮೇಳನದಲ್ಲಿ ಭಾಗವಹಿಸಿ ಸಹಕರಿಸಿದ ಸಕಲ ಸಾಹಿತಿಗಳಿಗೂ, ವಿದ್ವಜ್ಜನರಿಗೂ, ಕಲಾಕೋವಿದರಿಗೂ, ಸಮ್ಮೇಳನ ಪ್ರಚಾರ ಕಾರ್ಯದಲ್ಲಿ ನೆರವಾದ ಎಲ್ಲ ವೃತ್ತಪತ್ರಿಕಾಕರ್ತರಿಗೂ, ಸಮ್ಮೇಳನಕ್ಕೆ ದಯಮಾಡಿಸಿದ್ದ ಸಮಸ್ತರಿಗೂ ಪರಿಷತ್ತು ತನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಈ ಮೂಲಕ ಸಮರ್ಪಿಸುತ್ತದೆ.

---

# ಸಮ್ಮೇಳನದ ಪ್ರಾರಂಭದ ದಿನ ಹಾಡಿದ ಸ್ವಾಗತ ಪದ್ಯಗಳು

## ೧

(ರಾಗ: ಭೂಪ; ತಾಳ: ತ್ರಿತಾಳ)

ಜಯ ಭುವನೇಶ್ವರಿಯೇ ತಾಯೇ ।
ಜಯ ಭುವನೇಶ್ವರಿಯೇ ॥
ಕಾಯೌ ಎಮ್ಮಯ ನಾಡಿನ ಸಿರಿಯ ॥ಪಲ್ಲ॥

ಮರವಾಯಿತು ನಿನ್ನಿರವಿನಿತು ದಿನ ।
ತೆರವಾಯಿತು ಬಲವೀರ್ಯ ಸುಚೇತನ ॥
ಪೊರೆಯೌ ! ಪೊರೆಯೌ !! ನೀಡಿ ಸುದರ್ಶನ ।
ವರವೈಭವವನು ಕರುಣಿಸು ತಾಯೇ ॥೧॥

ಹಿಂದಿನ ಹಿರಿಯರ ಹಿಗ್ಗಿಸಿ ಪೊರೆದೆ ।
ಇಂದಿನ ಕಿರಿಯರನೇಕೌ ತೊರೆದೆ? ॥
ಮುಂದಿನ ಮಗುಗಳನಾದರು ಮರೆಯದೆ ।
ಅಂದಿನ ಕುಂದದ ಅಂದವ ತೋರೌ ॥೨॥

—ಮ. ಶ್ರೀ. ದೇಶಪಾಂಡೆ ...

## ೨

(ರಾಗ: ಬಾಗೇಶ್ರೀ; ತಾಳ: ಝಂಪೆ)

ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು ।
ಬದುಕು ಬಲುಹಿನ ನಿಧಿಯು ಸದಭಿಮಾನದ ಗೂಡು ॥ಪಲ್ಲ॥

ರಾಜನ್ಯರಿಪು—ಪರಶುಧರನ ಜನನಿಯ ನಾಡು ।
ಆ ಜಲಧಿಯನೆ ಜಗಿವ ಹಸುಮನುದಿಸಿದ ನಾಡು ॥
ಓಜೆಯಿಂ ಮೂರಿದರಸುಗಳ ಸಾಹಸದ ನಾಡು ।
ತೇಜವನು ನಮಗೀವ ವೀರವೃಂದದ ಬೀಡು ॥೧॥

ಲೆಕ್ಕಿಗ ಮಿತಾಕ್ಷರರು ಬೆಳೆದು ಮೆರೆದಿಹ ನಾಡು ।
ಜಕ್ಕಣನ ಶಿಲ್ಪಕಲೆಯಚ್ಚರಿಯ ಕರುನಾಡು ॥
ಚೊಕ್ಕ ಮತಗಳ ಸಾರಿದವರಿಗಿದು ನೆಲೆವೀಡು ।
ಬೊಕ್ಕಸದ ಕಣಜ ಜಯಸಿರಿಯು ನಲಿಯುವ ನಾಡು ॥೨॥

ಪಾವನೆಯರಾದ ಕೃಷ್ಣೆ ಭೀಮೆಯರ ತಾಯ್ನಾಡು ।
ಕಾವೇರಿ ಗೋದೆಯರು ಮೈದೊಳೆವ ಸಲುನಾಡು ॥
ಆವಗಂ ಬಗೆಯ ನಗಿಸುವ ಕಬ್ಬಿಗರ ಹಾಡು ।
ಕಾವ ಗದುಗಿನ ವೀರನಾರಾಯಣನ ಬೀಡು ॥೩॥

—ಹುಯಿಲಗೋಳ ನಾರಾಯಣರಾಯರು




ಜಮಖಂಡಿಯ ಸಮ್ಮೇಳನವನ್ನು ಆರಂಭಗೊಳಿಸಿದ
ಶ್ರೀ॥ ಗಂಗಾಧರರಾವ್ ದೇಶಪಾಂಡೆ ಅವರು



ಜಮಖಂಡಿಯ ಸಮ್ಮೇಳನದ ಸ್ವಾಗತಾಧ್ಯಕ್ಷರಾದ
ಶ್ರೀ॥ ಪಂಡಿತಪ್ಪ ರಾಯಪ್ಪ ಚಿಕ್ಕೋಡಿ, ಬಿ.ಎ. ಅವರು

೩
(ರಾಗ: ಸಾರಂಗ; ತಾಳ: ರೂಪಕ)

ಬನ್ನಿ ಬನ್ನಿ ದಯಮಾಡಿಸಿ ಕನ್ನಡ ನುಡಿ ತಾಯ ಸಭೆಗೆ ॥ ಪಲ್ಲ ॥
ಬಿನ್ನಪವಿದು ಹಂಗಿಗರಿಹೆವೆಂದು ಶರಣು ಶರಣು ತಮಗೆ ॥ ಅ. ಪ. ॥

ಚೆನ್ನ ಜಂಬುಕೇಶ ನಿರುತ ಕಾಯ್ವ ನಿಲ್ಲಿ ಕೃಪೆಯ ನೀಡಿ ।
ರನ್ನನು ಕವಿಚಕ್ರವರ್ತಿ ಮೆರೆದ 'ಗದಾಯುದ್ಧ' ಮಾಡಿ ॥
ಬಿನ್ನವ ಮತ ವೀರಶೈವ ಮತದ ಜನಗಳಿಹರು ಕೂಡಿ ।
ಕನ್ನಡರಸು ಚಾಳುಕ್ಯನು ಆಳ್ದ ನಾಡು ಇದುವೆ ನೋಡಿ ॥ ೧ ॥

ಮುನ್ನ ಪ್ರೊಮ್ಮೆ ಕನ್ನಡಮ್ಮ ತಣಿದಳಿಲ್ಲಿ ಕುಣಿದು ನಲಿದು ।
ಅನ್ಯ ನುಡಿಯ ಬಲಿಗೆ ಸಿಲುಕಿ ಬಳಲುತೀಗ ಕರೆವಳುಲಿದು ॥
ಇನ್ನು ಬಿಡದೆ ನಾವು ನೀವು ಭಿನ್ನರಲ್ಲವೆಂದು ತಿಳಿದು ।
ಮನ್ನಿಸುವದು ನೆರವ ನೀವು ಘನ್ನ ಮನಸಿನಿಂದಲೊಲಿದು ॥ ೨ ॥

ರನ್ನ ಕಡರಿ ಹುಡಿಯು ಮುತ್ತಿ ಕಳೆಗೆಡಿಸುವ ತೆರದಿ ಸೇರಿ ।
ದನ್ಯ ನುಡಿಯ ಮೋಹ ಬಿಡಿಸಿ ಕನ್ನಡದಲಿ ಹೇವನೂರಿ ॥
ಕನ್ನಡ ನುಡಿಯುರಿದು ಮೆರೆವ ಘನ್ನ ಚೆಲುವತನವ ತೋರಿ ।
ಉನ್ನತಿಕೆಯ ಮಾಳ್ಪ ಮನದಿ ಜಮಖಂಡಿಗೆ ದಯವ ಬೀರಿ ॥ ೩ ॥

—ಹುಯಿಲಗೋಳ ನಾರಾಯಣರಾಯರು

---

## ಶ್ರೀಮಾನ್ ಗಂಗಾಧರರಾವ್ ದೇಶಪಾಂಡೆ ಅವರ ಆರಂಭ ಭಾಷಣ

ಅಧ್ಯಕ್ಷರೆ, ಕನ್ನಡ ಭಾಷಾ ಬಾಂಧವರೆ ಮತ್ತು ಪ್ರೇಮಿಗಳೆ,

ಈ ಸಾಹಿತ್ಯ ಸಮ್ಮೇಳನವನ್ನು ಆರಂಭಮಾಡುವ ಸುಯೋಗವನ್ನು ನನಗೆ ದೊರಕಿಸಿಕೊಟ್ಟದ್ದಕ್ಕಾಗಿ ನಾನು ತಮ್ಮೆಲ್ಲರಿಗೂ ತುಂಬ ಖುಣಿಯಾಗಿದ್ದೇನೆ. ಒಂದು ದೃಷ್ಟಿಯಿಂದ ನಾನು ಈ ಸ್ಥಾನಕ್ಕೆ ಅರ್ಹನಲ್ಲ: ನಾನು ಸಾಹಿತಿಯಲ್ಲ; ಅದರಲ್ಲಿಯೂ ಕನ್ನಡ ಸಾಹಿತ್ಯಕ್ಕಾಗಿ ದುಡಿದವನಲ್ಲ. ಆದರೆ ಇನ್ನೊಂದು ದೃಷ್ಟಿಯಿಂದ, ಸಾಹಿತಿ ಇದ್ದೇನೆ, ಕನ್ನಡಿಗನಿದ್ದೇನೆ ಎಂದು ಹೇಳಬಲ್ಲೆ. ನಾನು ಹುಟ್ಟಿದ್ದು ಬೆಳೆದದ್ದು ಎಲ್ಲ ಕನ್ನಡ ದೇಶದಲ್ಲಿ. ನನ್ನ ಮರಣ ಕೂಡ ಕನ್ನಡ ದೇಶದಲ್ಲಿಯೇ ಆಗಬೇಕೆಂಬ ಹಂಬಲವಿದೆ. ನನ್ನ ಮಾತೃಶ್ರೀಯವರ ಮಾತು ಮರಾಠಿ; ನನ್ನ ತಂದೆಯವರ ಮಾತು ಕನ್ನಡ. ಆದ್ದರಿಂದ ನಾನು ಕನ್ನಡ ಬಲ್ಲವನಿದ್ದೇನೆ, ಕನ್ನಡ ದೇಶದವನಿದ್ದೇನೆ, ನನ್ನ ದೇಹದಲ್ಲಿ ಕನ್ನಡ ರಕ್ತ ಹರಿಯುತ್ತಲಿದೆ ಎಂದು ಖಂಡಿತವಾಗಿ ಹೇಳಬಲ್ಲೆ.

ನನ್ನ ಸ್ವಂತ ಕಥೆ ಇರಲಿ. ನಾನು ನನ್ನ ಸಾರ್ವಜನಿಕ ಕಾರ್ಯಗಳ ಪ್ರಾರಂಭಮಾಡಿದಮೇಲೆ, ಲೋಕಮಾನ್ಯ ತಿಲಕರವರು ೧೯೦೬ರಲ್ಲಿ ಕನ್ನಡ ದೇ ಪ್ರವಾಸಕ್ಕಾಗಿ ಬಂದಿದ್ದರು. ಆಗ ಅವರನ್ನು ಬರಮಾಡಿಕೊಂಡು ಅವ ಸುತ್ತುವ ಅವಕಾಶ ನನಗೆ ದೊರಕಿತು. ಆದರೆ ಅವರ ಭಾಷಣವನ್ನು ಭಾಷಾ ಮಾಡುವುದಕ್ಕೆ ಶ್ರೀ॥ ಮುದವೀಡು ಕೃಷ್ಣರಾಯರವರಿಗೆ ಅವರು ಹೇಳಿದರು. ನನ್ನ ಮನಸ್ಸಿಗೆ ಆ ಭಾಷಾಂತರ ನನ್ನಿಂದ ಆಗಲಿಲ್ಲವಲ್ಲ ಎಂದು ವಿಷಾದವಾ ಇದಾದ ಕೆಲವು ವರ್ಷಗಳಮೇಲೆ ಮಹಾತ್ಮಾ ಗಾಂಧಿಯವರೊಡನೆ ಕರ್ನಾಟಕಕ್ಕೆ ಬಂದೆ. ನನ್ನ ವಿಷಯ ಗಾಂಧಿಯವರಿಗೆ ಗೊತ್ತಿತ್ತು. ಅವರು " ಜನ್ಮ ಸಾರ್ವಜನಿಕ ಸೇವೆಯಲ್ಲಿ ಕಳೆಯುತಕ್ಕದ್ದಿದೆ; ನಿನ್ನ ಭಾಷೆ ಕನ್ನಡ; ಮೇಲೆಯೇ ನಿನಗೆ ಮಮತೆ; ನೀನು ನಿನ್ನ ಸೇವೆಯನ್ನು ಕರ್ನಾಟ ಸಮರ್ಪಿಸು'' ಎಂದು ಹೇಳಿದರು. ನಾನು ಒಪ್ಪಿ "ನಾನು ಕರ್ನಾಟಕ ನಿದ್ದೇನೆಂಬುದನ್ನು ಮರೆಯಲಿಕ್ಕಿಲ್ಲ'' ಎಂದು ಹೇಳಿದೆ. ಆಗ ಅವರು " ಕರ್ನಾಟಕದ ಸೇವೆ ಮಾಡಬೇಕಾದರೆ ಕನ್ನಡ ಭಾಷಾಜ್ಞಾನ ಮಾಡಿಕೊಳ್ಳ ಕರ್ನಾಟಕರು ಒಂದು ವಿಶೇಷ ಜನಸಮೂಹ ಇದ್ದಾರೆ; ನೀನು ಅವರ ಅವರ ಭಾಷೆ ಇವನ್ನು ತಿಳಿದುಕೊಂಡು ಸಂಪನ್ನನಾದರೆ ಆಗ ನಿನ್ನಿಂದ ರೀತಿಯಲ್ಲಿ ಅವರ ಸೇವೆಯಾಗುತ್ತೆ'' ಎಂದು ಹೇಳಿದರು. ನಾನು ಅವರು ಹೇ ಪ್ರಯತ್ನಪಟ್ಟೆ. ಆದರೂ ನನ್ನ ಕಡೆಯಿಂದ ಕರ್ನಾಟಕಕ್ಕೆ ಎಷ್ಟುಮಟ್ಟಿನ ಆಗಬೇಕಾಗಿತ್ತೋ ಅಷ್ಟು ರೀತಿಯಿಂದ ಆಗಲಿಲ್ಲ. ಇದು ನನ್ನ ದುರ್ದೈವ.

ನಾನು ಹಿಂದೆ ಲೋಕಮಾನ್ಯ ತಿಲಕರವರ ಸಮಕ್ಷದಲ್ಲಿ ಕನ್ನಡಿಗರ ಮಾಡುತ್ತೇನೆಂದು ಪ್ರತಿಜ್ಞೆಮಾಡಿದೆ. ಆ ಸೇವೆಯನ್ನು ಎಂದು ಪ್ರಾ ಮಾಡಿದೆನೋ ಅಂದೇ ನನ್ನ ಸಾಹಿತ್ಯಸೇವೆಯೂ ಪ್ರಾರಂಭವಾಯಿತು. ಸಾಹಿ ಮುಖ್ಯ ಉದ್ದೇಶ ಜನರಲ್ಲಿ ತಿಳಿವನ್ನು ಹರಡುವುದು; ರಾಜಕೀಯ, ಸಾಮಾ ಸಮಸ್ಯೆಗಳನ್ನು ಅವರಿಗೆ ತಿಳಿಸುವುದು. ಈ ರೀತಿಯಿಂದ ಒಂದು ಜನಾಂ ಅಥವಾ ಸಮಾಜದ ಸೇವೆ ಮಾಡುವುದೂ ಸಾಹಿತ್ಯದ ಒಂದು ಸೇವೆ ಎಂದು ನಾ ತಿಳಿದುಕೊಂಡಿದ್ದೇನೆ; ಮತ್ತು ಈ ಸೇವೆಯನ್ನು ನನ್ನ ಕೈಲಾದಷ್ಟು ಕರ್ನಾಟಕದಲ್ಲಿ ಮಾಡುತ್ತಾ ಇದ್ದೇನೆ. ನನ್ನ ಭಾಷೆ ಅಸ್ಪಷ್ಟವಾಗಿರು ಕಾಡುಮನುಷ್ಯನದೆಂದು ಅನ್ನಿಸಬಹುದು. ಆದರೆ ಕನ್ನಡದಲ್ಲಿ ನನಗಿರುವ ಅಭಿಮಾ ದೊಡ್ಡದು. ಆ ಅಭಿಮಾನದಿಂದ ನಾನು ಮಾಡುತ್ತಿರುವ ಸೇವೆ ಸಾಹಿತ್ಯ ಎಂದು ತಿಳಿದುಕೊಂಡಿದ್ದೇನೆ.

ಸಾಹಿತ್ಯವು ಸಮಾಜ ಜೀವನದ ಪ್ರತಿಬಿಂಬ. ಸಮಾಜವು ಸಾಹಿತ್ಯ ನಿರ್ಮಾಣಮಾಡಿತೇ ಹೊರತು ಸಾಹಿತ್ಯ ಸಮಾಜವನ್ನಲ್ಲ. ಒಂದು ಜನಾಂ ಜೀವನವು ಬದಲಾಯಿಸುತ್ತ ಹೋದಂತೆಲ್ಲಾ ಆ ಜನಾಂಗದ ಸಾಹಿತ್ಯ ಬದಲಾಯಿಸುತ್ತಾ ಹೋಗುತ್ತದೆ. ಸಾಹಿತ್ಯದ ಗ್ರಂಥಗಳನ್ನು ಬರೆದವರು ಜನಾಂ

ಅಭಿವೃದ್ಧಿಯನ್ನು ನೋಡಿಯೇ ಬರೆದರು. ಅವರ ಭಾಷೆ ಸಂಸ್ಕರಿಸಲು ಸಮಾಜ ಜೀವನದ ಬದಲಾವಣೆಯೇ ಕಾರಣವಾಯಿತು. ಕಾಡುಜನರ ಜೀವನದಲ್ಲಿ ಸಂಸ್ಕಾರ ವೇನೂ ಕಾಣದ್ದರಿಂದ ಅವರ ಭಾಷೆಯಲ್ಲಿ "ಸಾಹಿತ್ಯ" ಎಂಬ ಹೆಸರೂ ಬಾರದೆ ಹೋಯಿತು. ಆದರೆ ಕರ್ಣಾಟಕ ದೇಶ ಹೆಚ್ಚು ಸುಧಾರಿತ ದೇಶ. ಮಹಾ ಕವಿಗಳು ಕಾವ್ಯಗಳನ್ನು ಬರೆದ ದೇಶ. ಇದರಲ್ಲಿ ಪಾಂಡಿತ್ಯ ಪ್ರತಿಭೆಗಳಿಗೆ ಕುಂದಿಲ್ಲ. ಪ್ರಪಂಚದ ಉತ್ತಮ ಸಾಹಿತ್ಯಗಳನ್ನು ನೋಡಿ ನಮ್ಮಲ್ಲಿಯೂ ಸ್ವಲ್ಪ ಅಷ್ಟೇ ಉತ್ತಮವಾದ ಸಾಹಿತ್ಯ ಇದೆ ಎಂದು ನಾವು ಹೇಳಲು ಕೊರತೆ ಇಲ್ಲ. ಇಂಡಿಯಾ ದೇಶದಲ್ಲಿ ಕನ್ನಡ ನಾಡು ಎಲ್ಲಾ ಪ್ರಾಂತಗಳಿಗಿಂತ ಮುಂದೆ ಬರಬೇಕೆಂಬ ಆಕಾಂಕ್ಷೆ ನನಗಿದೆ. ಗುಜರಾತು, ಬಂಗಾಳಾ ಪ್ರಾಂತಗಳಲ್ಲಿ ಅನೇಕ ಮುಖಂಡರು ಹುಟ್ಟಿಕೊಂಡು ಭಾಷೆಯನ್ನು ಮುಂದಕ್ಕೆ ತಂದರು. ಅದೇ ರೀತಿಯಲ್ಲಿ, ನಮ್ಮೆಲ್ಲರ ಪ್ರಯತ್ನದಿಂದ ಕನ್ನಡ ನಾಡು ಮುಂದಕ್ಕೆ ಬಂದು ಭಾಷೆ, ಸಾಹಿತ್ಯ, ಸಂಸ್ಕೃತಿ— ಎಲ್ಲಾ ಬೆಳೆಯಲಿ ಎಂದು ಆಶಿಸುತ್ತೇನೆ.

ಒಂದು ಸಾಹಿತ್ಯದಲ್ಲಿ ಜನರಿಗೆ ಅಭಿಮಾನ ಹೇಗೆ ಬರುತ್ತದೆ! ಹಿಂದೂದೇಶದ ವರಿಗೆ ಕಾಳಿದಾಸನ ಹೆಸರನ್ನು ಎತ್ತಿದ ಕೂಡಲೆ ಒಂದು ಅಭಿಮಾನ ಬರುವುದುಂಟು. ಹಾಗೆಯೇ ರನ್ನನ ಹೆಸರು ಕೇಳಿದರೆ ನಮ್ಮ ಅಭಿಮಾನ ಕೆರಳುತ್ತದೆ. ಅದಕ್ಕೆ ಕಾರಣ ಅವನ ಕಾವ್ಯ; ಆ ಕಾವ್ಯದಲ್ಲಿ ಕಾಣಬರುವ ನಮ್ಮ ಸಾಹಿತ್ಯದ ಮೇಲ್ಮೆ. ಭಾಷಾಪ್ರೇಮ ಉಂಟಾಗುವುದು ಇಂಥ ಕೆಲವು ಕಾವ್ಯಗಳಿಂದ. ರನ್ನನ ಕಾವ್ಯ ಗಳಂಥ ಉತ್ತಮ ಕಾವ್ಯಗಳು ಹೆಚ್ಚಾಗಿ ಬರಬೇಕು. ಅಂದರೆ, ನಮ್ಮ ಜನಾಂಗ ಮುಂದೆ ಬಂದಿದ್ದಾರೆಂಬ ಚಿಹ್ನೆ ತೋರುತ್ತದೆ.

ನಮ್ಮ ಸಾಹಿತ್ಯ ಯೋಗ್ಯರೀತಿಯಿಂದ ಮುಂದುವರಿಯಬೇಕಾದರೆ ನಮ್ಮ ಜನರ ಸೇವೆಯನ್ನು ನಾವು ಯೋಗ್ಯ ರೀತಿಯಿಂದ ಮಾಡಬೇಕಾಗುತ್ತದೆ. ಈ ಸೇವೆ ಯನ್ನು ಹೇಗೆ ಮಾಡಬೇಕೆನ್ನುವುದನ್ನು ಮಹಾತ್ಮಾ ಗಾಂಧಿಯವರು ಎಲ್ಲರಿಗೂ ಹೇಳಿಕೊಟ್ಟಿದ್ದಾರೆ. ನಮ್ಮ ಜನರಲ್ಲಿ ಐಕಮತ್ಯ ಮತ್ತು ಪರಸ್ಪರ ಪ್ರೇಮವನ್ನು ಉತ್ಪನ್ನಮಾಡಬೇಕು. ನಮ್ಮ ದೇಶದ ಉದ್ಧಾರವಾಗಬೇಕಾದರೆ ಮಹಾರಾಷ್ಟ್ರ, ಕರ್ಣಾಟಕ, ಆಂಧ್ರ ಇವೇ ಮೊದಲಾದ ಪ್ರಾಂತಗಳಿಗೆ ಬೇರೆ ಬೇರೆ ಸಾಹಿತ್ಯಗಳಿದ್ದರೂ ಈ ಬೇರೆಬೇರೆ ಪ್ರಾಂತಗಳಿಗೆಲ್ಲಕ್ಕೂ ಒಂದೇ ರಾಷ್ಟ್ರದೇವತೆ ಇರುವ ಹಾಗೆ, ಈ ಎಲ್ಲ ಪ್ರಾಂತಗಳ ಸಾಹಿತ್ಯಗಳೂ ಒಂದೇ ಸಾಹಿತ್ಯ ಮೂರ್ತಿಗೆ ಕೈಕಾಲು; ಇತರ ಅಂಗ ಗಳಿದ್ದಹಾಗೆ ಭಾವಿಸಬೇಕು. ಒಂದು ಮೂರ್ತಿಗೆ ಯಾವ ಅಂಗ ಸ್ವಲ್ಪ ಕುಂದಾ ಗಿದ್ದರೂ ಸಮಗ್ರ ಮೂರ್ತಿಗೇ ಆ ಕುಂದು ತಗಲುತ್ತದೆ. ಈಗಿನ ಕಾಲದಲ್ಲಿ ಇತರ ಭಾಷಾ ಸಾಹಿತ್ಯಗಳು ಮುಂದುವರಿಯುತ್ತಿರುವಾಗ ಕನ್ನಡ ನುಡಿ ಹಾಗೆಯೇ ಬೆಳೆಯದೆಹೋದರೆ ಸಮಗ್ರ ಭರತಖಂಡದ ಸಾಹಿತ್ಯದಲ್ಲಿಯೇ ಒಂದು ಲೋಪವಾದೀತು. ನಾವು ಹಾಗಾಗುವುದನ್ನು ತಪ್ಪಿಸಬೇಕು. ಈ ವಿಶಾಲ ಭಾರತದ ದೃಷ್ಟಿಯಿಂದ ನಾವು ಕರ್ಣಾಟಕ ಭಾಷಾ ಸೇವೆಯನ್ನು ಮುಂದುವರಿಸಬೇಕಾಗಿದೆ.

ಈ ರಾಷ್ಟ್ರದೃಷ್ಟಿಯನ್ನೂ ಮರೆಯದೆ, ನಮ್ಮ ಜನಾಂಗದ ಸೇವೆಯನ್ನೂ ಮರೆ ಎಚ್ಚರವಾಗಿರಿ. ಸ್ವಭಾಷೆಯವರೂ ಪರಭಾಷೆಯವರೂ ಎಲ್ಲರೂ ನಮ್ಮ ತಮ್ಮಂದಿರೇ. ಅವರಲ್ಲಿ ನಮಗೆ ಸೌಹಾರ್ದವೂ ಬೇಕು ಮತ್ತು ಅವರೊ ಬೆರೆತಾಗ ನಾವು ಅಪಮಾನಸ್ಥಿತಿಗೆ ಸಿಲುಕದಂತೆ ನೋಡಿಕೊಳ್ಳಲೂ ಬೇಕು. ಅಲ್ಲ. ಈ ದೃಷ್ಟಿಯಿಂದ ನಾವು ಅವರೊಡನೆ ಸ್ಪರ್ಧಿಸಿ ಅವರಿಗಿಂತ ಇನ್ನೂ ಪ್ರ ಮಾನ ಸ್ಥಿತಿಗೆ ಬರಲು ಯತ್ನಿಸಬೇಕು. ಅವರಿಗೆ ನಾವು ಮಾರ್ಗದರ್ಶಕರಾ ವುದಾದರೆ ಬಹಳ ಸಂತೋಷ. ಇದೇ ದೊಡ್ಡ ದೃಷ್ಟಿಯಿಂದ ನಮ್ಮ ಸಾಹಿತ್ಯವನ್ನು ನಾವು ಬೆಳಸಿಕೊಳ್ಳುತ್ತಾ ಹೋಗಬೇಕು. ಜಗತ್ತು ಒಂದು ಬಗೆಯ ಅದರಲ್ಲಿ ಒಂದು ಹೂ ಬಿಟ್ಟರೆ ದುಂಬಿ ತಾನಾಗಿಯೇ ಅದರಮೇಲೆ ಬಂದು ಕೂ ದುಂಬಿಗೆ ಹೂ ಆಮಂತ್ರಣಕೊಡುವುದಿಲ್ಲ. ಆದರೂ ಆ ಹೂ ಅರಳಿ ತನ್ನ ಸೌಂದ ದಿಂದ, ಪರಿಮಳದಿಂದ ದುಂಬಿಯನ್ನು ಹೇಗೆ ಆಕರ್ಷಿಸುತ್ತದೆಯೋ ಹಾಗೆ ಜನ, ಕನ್ನಡ ಸಾಹಿತ್ಯ ಈಗ ಉತ್ತಮಸ್ಥಿತಿಗೆ ಬಂದು ಇತರರನ್ನು ತನ್ನ ಆಕರ್ಷಿಸುವಂತೆ ಆಗಬೇಕೆಂದು ನನ್ನ ಉತ್ಕಟ ಆಕಾಂಕ್ಷೆ.

ಅಶ್ವಿನೀಕುಮಾರ ದತ್ತರಂಥ ದೇಶಾಭಿಮಾನಿಗಳು ಮಹಾರಾಷ್ಟ್ರ ಪ್ರಾಂತ ತಮ್ಮ ರಾಜಕಾರಣವನ್ನು ಅಷ್ಟು ಹುರುಪಿನಿಂದ ಸಾಗಿಸಲು ಹೇಗೆ ಸಾಧ್ಯವಾ ಎಂದು ತಿಲಕರವರು ಯೋಚಿಸಿದಾಗ ಅವರಿಗೆ ಹೊಳೆದ ಮುಖ್ಯ ಕಾರಣ ಭಾಷೆಯ ಶಿಕ್ಷಣ. ಶ್ರೀ॥ ದತ್ತರವರು ತಮ್ಮ ಜನರಿಗೆ ಮಾತೃಭಾಷೆಯಲ್ಲಿ ಕೊಡಿಸಿ ಅವರನ್ನು ಪ್ರಬುದ್ಧರನ್ನಾಗಿ ಮಾಡಿದ್ದರಿಂದ ಅವರ ಜನಾಂಗದಲ್ಲಿ ತಿಳಿವಳಿಕೆಯುಂಟಾಗಿ ಅದರಿಂದ ಜನರಲ್ಲಿ ಒಗ್ಗಟ್ಟು ಬಂದಿತು. ಈ ಗುಟ್ಟನ್ನು ತಿಲಕರವರು "ಕುಮಾರಿ" ಎಂಬ ಪತ್ರಿಕೆಯನ್ನು ಹೊರಡಿಸಿದರು. ಆದರಿಂದ ಜನ ತಿಳಿವಳಿಕೆ ಹೆಚ್ಚಿತು. ಜನರು ರಾಜಕೀಯದಲ್ಲಿಯೂ ಮುಂದುವರಿದರು. ಪ್ರಾಂತಗಳವರು ಅವರ ಕಡೆ ಕಣ್ಣೆತ್ತಿ ನೋಡುವುದಕ್ಕೆ ಮೊದಲುಮಾಡಿ ಕನ್ನಡಿಗರಲ್ಲೂ ಹೀಗೆ ಆಗಬೇಕು. ಇತರರು ನಮ್ಮ ಕಡೆ ಕಣ್ಣೆತ್ತಿ ನೋಡುವ ಆಗಬೇಕು. ನಮ್ಮ ಸಾಹಿತ್ಯದ ಪ್ರಭಾವ ಇತರ ಸಾಹಿತ್ಯದಲ್ಲಿ ಮೂಡುವ ಮೇಲೆ ನಮ್ಮ ಭಾಷೆ ಸಣ್ಣದಾಗಲಿಕ್ಕಿಲ್ಲ.

ಈ ದಿನ ಅಂಥ ಸ್ಥಿತಿ ಬಂದಿದೆ. ಇಂದು ಕರ್ಣಾಟಕ ದೇಶಸ್ಥರಲ್ಲಿ ಉತ್ತಮ ಸಂಸ್ಕೃತಿ ಬೆಳೆಯುತ್ತಾ ಇದೆ. ಕನ್ನಡ ದೇಶದವರು ಅತಿಥಿಸತ್ಕಾರದಲ್ಲಿ ನಿಂದಲೂ ಬಹಳ ಹೆಸರುವಾಸಿಯಾಗಿದ್ದಾರೆ. ಪೂನಾದ ಕಡೆ ಯಾರಾ ಅಭ್ಯಾಗತರು ಬಂದರೆ ಇಂಥ ಕಡೆ 'ಖಾನಾವಳಿ' ಇದೆ ಎಂದು ಸೂಚಿಸುತ್ತಾ ಆದರೆ ಕನ್ನಡಿಗರ ಮನೆಗೆ ಯಾರಾದರೂ ಬಂದರೆ 'ಊಟಕ್ಕೆ ಏಳಿ' ಎಂದು ಆದರದಿಂದ ಊಟ ಹಾಕುತ್ತಾರೆ. ಕನ್ನಡಿಗರಲ್ಲಿ ಎಷ್ಟು ಬಡವರಾದರೂ ಬಂದ 'ಖಾನಾವಳಿ' ತೋರಿಸಲಿಕ್ಕಿಲ್ಲ. ಮನೆಯಲ್ಲಿ ಏನೂ ಇಲ್ಲದಿದ್ದರೆ ಅಥವಾ ಬಂದವನು ಊಟಮಾಡುವವನಲ್ಲದಿದ್ದರೆ ಬೆಲ್ಲವನ್ನಾದರೂ ಕೊಟ್ಟು ಸ್ವಲ್ಪ

ಮಾಡಿಕೊಂಡು ಕೂಡಿಯಿರಿ ಎಂದಾದರೂ ಹೇಳುತ್ತಾರೆ. ಈ ದೃಷ್ಟಿಯಿಂದ ನಾವು ಮಹಾರಾಷ್ಟ್ರರಿಗಿಂತ ಎಷ್ಟೋ ಮುಂದಿದ್ದೇವೆ ಎಂದು ಹೇಳುತ್ತೇನೆ. ಇದೇ ರೀತಿ ಸಾಹಿತ್ಯ ವಿಷಯದಲ್ಲಿಯೂ ನಾವು ಹಿಂದುಳಿಯಲಿಕ್ಕಿಲ್ಲ. ಈ ಅತಿಥಿ ಸತ್ಕಾರದ ಸಂಸ್ಕಾರವೇನಿದೆ ಅದು ಸಾಹಿತ್ಯವನ್ನೂ ಬೆಳಸುತ್ತದೆ ಎಂದು ಹೇಳುತ್ತೇನೆ.

ನಮ್ಮ ಜನಪದ ಸಾಹಿತ್ಯದಲ್ಲಿ ಒಂದು ಲಾವಣಿಯನ್ನು ತೆಗೆದುಕೊಳ್ಳೋಣ. ಕಿತ್ತೂರು ಚನ್ನಮ್ಮನ ಲಾವಣಿ—ಇದನ್ನು ಕೇಳಿದರೆ ಹೇಗೆ ನಮ್ಮ ಜನರಲ್ಲಿ ಸ್ಫೂರ್ತಿ ಹುಟ್ಟಲಿಕ್ಕಿಲ್ಲ? ಎಂದು ನನಗೆ ಅನ್ನಿಸುತ್ತದೆ. ಇಂತಹ ಸಾಹಿತ್ಯವನ್ನು ಓದಿದಾಗ ನಮ್ಮ ಅಭಿಮಾನ ಕೆರಳಿ, ಯಾರಾದರೂ ಅನ್ಯಾಯ, ಅಪಮಾನ ಮಾಡಿದರೆ ಅದಕ್ಕೆ ಪ್ರತೀಕಾರಮಾಡುವ ಶಕ್ತಿ, ಸ್ಫೂರ್ತಿ ಹುಟ್ಟುತ್ತದೆ. ಹೀಗೆ ಮಾನವನ ಅಂತರಂಗದ ಭಾವಗಳನ್ನು ಕೆರಳಿಸುವ ಸಾಹಿತ್ಯ ಹೆಚ್ಚು ಹೆಚ್ಚಾಗಿ ಬರಬೇಕು. ಅದು ಸಾಮಾನ್ಯ ಜನರ ಚಿತ್ರವನ್ನು ಕೊಡಬೇಕು. ಅದರಲ್ಲಿ ರೈತನ ಗುಡಿಸಿಲ ವರ್ಣನೆ, ಕೂಲಿಕಾರರ ಕಷ್ಟಸುಖಗಳ ವರ್ಣನೆ ಮುಂತಾದುವು ಬರಬೇಕು. ನಮ್ಮ ಬಾಳುವೆಗೆ ಬೇಕಾದ ಧಾನ್ಯ ಒದಗಿಸುವವನು ರೈತ; ಉಡಿಗೆ ತೊಡಿಗೆಗಳನ್ನು ಒದಗಿಸುವವನು ಕೂಲಿಕಾರ. ನಮ್ಮ ಜೀವನ ನೋಡಬೇಕಾದರೆ ಅವರನ್ನು ನೋಡ ಬೇಕು; ಚಿತ್ರಿಸಬೇಕಾದರೆ ಅವರ ಬಾಳುವೆಯನ್ನು ಚಿತ್ರಿಸಬೇಕು. ರೈತರ, ಕೂಲಿ ಕಾರರ ಸ್ಥಿತಿ ಏನು? ಅವರ ಜೀವನ ಹೇಗಿದೆ? ಅವರು ಹೇಗೆ ಮುಂದಕ್ಕೆ ಬಂದಾರು? ಅವರ ಜೀವನ ಉತ್ತಮಗೊಳ್ಳುವುದು ಹೇಗೆ? ಅವರ ಧ್ಯೇಯವೇನು, ನೀತಿಯೇನು— ಇವೇ ಮೊದಲಾದ ವಿಷಯಗಳನ್ನು ಕೂಡಿದ ಸಾಹಿತ್ಯದ ಆವಶ್ಯಕತೆ ಈಗ ನಮಗೆ ಹೆಚ್ಚಾಗಿದೆ.

ಕರ್ಣಾಟಕ ಪ್ರಾಂತ ಅನೇಕ ಮಹಾರಾಜರ, ಸರ್ಕಾರಗಳ ಆಳಿಕೆಗೆ ಒಳಪಟ್ಟಿದೆ. ಆದ್ದರಿಂದಲೇ ಕರ್ಣಾಟಕದಲ್ಲಿ ಆಗಾಗ ಭಾಷೆಗಳಿಗೆ ಜಗಳ ವಾಗುತ್ತಿರುವುದು. ಈಗ ಈ ಸಂಸ್ಥಾನದಲ್ಲಿಯೇ ನೋಡೋಣ. ನಾವು ಕರ್ಣಾಟಕ ಭಾಷೆಯವರು. ಆದರೆ ನಮಗೆ ಮಹಾರಾಷ್ಟ್ರರಾಜರು ಇದ್ದಾರೆ. ನಮ್ಮ ಜಿಲ್ಲೆ ಯಲ್ಲಿಯೇ ವಿಶೇಷ ಪ್ರಶ್ನೆಗಳು ಬರುತ್ತವೆ. ನಾವು ಪರಭಾಷೆಯವರು. ಅವರು ಅವರ ಭಾಷೋದ್ಧಾರ ಮಾಡಬೇಕೆಂದಿರುವಾಗ ನಮ್ಮ ಭಾಷೆ ಏನಾಗಬೇಕೆಂಬ ಪ್ರಶ್ನೆ ಬರುತ್ತದೆ. ಈಗ ನಾವು ಏನು ಮಾಡಬೇಕು? ಅವರು ಪರಸಾಹಿತ್ಯದವರು; ಆಗಂತುಕರಾಗಿ ಬಂದಿದ್ದಾರೆ; ಅವರು ನಮಗೆ ಬೇಡ—ಎಂದು ಹೇಳೋಣವೇ? ಅದು ಸಾಧ್ಯವಿಲ್ಲ. ಅವರ ಭಾಷೆಯನ್ನು ಅವಹೇಳನ ಮಾಡೋಣವೇ? ಅದೂ ಕೂಡದು, ತಪ್ಪು. ನಾವು ಹೇಗೆ ಅವರ ಭಾಷೆಯನ್ನು ಅವಹೇಳನ ಮಾಡು ವುದಿಲ್ಲವೋ ಹಾಗೆಯೇ ಅವರೂ ಕೂಡ ನಮ್ಮ ಭಾಷೆಗೆ ಅಪಮಾನಮಾಡಬಾರದು. ಅವರಿಗೆ ತಮ್ಮ ಭಾಷೆಯಮೇಲೆ ಪ್ರೇಮ ಹೇಗಿದೆಯೋ ನಮಗೂ ನಮ್ಮ ಭಾಷೆಯಮೇಲೆ ಪ್ರೇಮ ಹಾಗೆಯೇ ಇದೆಯೆಂದು ಅವರು ತಿಳಿದುಕೊಳ್ಳಬೇಕು. ಮೇಲಾಗಿ ಅವರು ಅಲ್ಪಸಂಖ್ಯಾತರು, ನಾವು ಬಹುಸಂಖ್ಯಾತರು. ಆದ್ದರಿಂದ

ಅವರು ನಮ್ಮ ಭಾಷೆಯನ್ನು ಕಲಿತು, ನಮ್ಮೊಡನೆ ಬೆರೆತು, ಪ್ರೀತಿಯಿ... ನಮ್ಮನ್ನು ಒಲಿಸಿಕೊಳ್ಳಬೇಕು. ಪ್ರೇಮವಿಲ್ಲದ ಕಡೆ ನಮ್ಮ ಮನಸ್ಸನ್ನು ... ಸೆಳೆದುಕೊಳ್ಳುವುದು ಸಾಧ್ಯವೇ ಇಲ್ಲ.

ಈಚೆಗೆ ಇನ್ನೂ ಒಂದು ದೊಡ್ಡ ತೊಂದರೆ ಬಂದಿದೆ. ಅದು ಎಲ್ಲ ಇಂಡಿ... ಭಾಷೆಗಳಮೇಲೂ ನಡೆಯುತ್ತಿರುವ ಇಂಗ್ಲಿಷಿನ ಆಕ್ರಮಣ. ಇದನ್ನು ನಾ... ಕಡಮೆಮಾಡಬೇಕು. ನಮ್ಮ ನೆರೆಮನೆಯವರು ಮರಾಠಿ ಮಾತನಾಡುತ್ತಿ... ನಾವು ಅವರೊಡನೆ ಮಾತನಾಡಬೇಕಾದರೆ ಇಂಗ್ಲಿಷಿನಲ್ಲಿ ಮಾತನಾಡುತ್ತೇ... ಇದು ಆಡಳಿತದ ಪ್ರಭಾವ. ಹೀಗಾದರೆ ನಮ್ಮ ಭಾಷೆಗಳು ಉಳಿಯುವುದೇ ... ಇನ್ನುಮೇಲೆ ಇಂಗ್ಲಿಷ್ ಕಲಿಯುವುದರ ಬದಲು ಮರಾಠಿ ಕಲಿಯಿರಿ. ... ಎಷ್ಟಾದರೂ ನಮ್ಮ ನೆರೆಭಾಷೆ. ಆದರೆ ಎಲ್ಲಕ್ಕೆ ಮೊದಲು ಮಾತೃಭಾಷೆ; ಅ... ಮುಂದಿನದು ನೆರೆಭಾಷೆಯಾಗಿರಲಿ. ಪರಭಾಷೆಗೆ ಮನ ಸೋಲಬೇಡಿರಿ.

ಮರಾಠಿ ಮಾತನಾಡುವ ನಮ್ಮ ಮಿತ್ರರಿಗೆ ಒಂದು ಮಾತನ್ನು ಹೇಳುತ್ತೇನೆ: ನೀವು ಈಗ ಕನ್ನಡಿಗರಲ್ಲಿದ್ದೀರಿ. ಅವರೊಡನೆ ಕೆಲಸಮಾಡಿ ನಿಮ್ಮ ಕಲ್ಯಾಣವಾ... ಬೇಕಾಗಿದೆ. ನಿಮ್ಮ ಸರ್ಕಾರ ಕನ್ನಡಿಗರನ್ನು ಮರೆತಿರಬಹುದು, ಕಡೆಗಾ... ಅಲಕ್ಷಿಸಿರಬಹುದು. ಅವರ ಅಲಕ್ಷ್ಯ ಹೀಗೆಯೇ ಮುಂದುವರಿದರೆ ಅವರು ಬಹು... ಕಾಲ ಉಳಿಯಲಾರರು. ನಮ್ಮ ಪ್ರೇಮವನ್ನು ಅವರು ಎಷ್ಟು ದಿವಸ ಸಂಪಾದ... ಮಾಡುವುದಿಲ್ಲವೋ ಅಷ್ಟು ದಿನ ಅವರು ನೆಮ್ಮದಿಯಿಂದ ಬದುಕಲಾ... ನಮ್ಮ ಭಾಷೆಯ ಸಂಸ್ಕಾರದ ಪ್ರೇಮ ನಮ್ಮಲ್ಲಿದೆ. ಅದನ್ನು ನಮ್ಮಿಂದ ದೂ... ಮಾಡಲು ಸಾಧ್ಯವಿಲ್ಲ. ಇಂಥ ಕಾಲದಲ್ಲಿ ಕರ್ನಾಟಕದಲ್ಲಿರುವ ಮಹಾರಾಷ್ಟ್ರೀ... ನಮ್ಮನ್ನು ಒಲಿಸಲು ಪ್ರಯತ್ನಮಾಡಬೇಕು. ಶ್ರೀಮಂತರೂ, ರಾಜರೂ ಯಾ... ಭಾಷೆಯ ಜನಾಂಗದಲ್ಲಿ ಇರುವರೋ ಆ ಜನಾಂಗದವರ ಪ್ರೇಮ ಸಂಪಾದಿಸಬೇ... ನಮ್ಮಲ್ಲಿ ಹಿಂದೆ ಶಿವಾಜಿ ಮಹಾರಾಜರು, ಪೇಷ್ವೆಗಳು ಎಲ್ಲರೂ ಆಯಾ ಪ್ರಾಂ... ಭಾಷೆಯನ್ನು ಬಿಟ್ಟುಹೋಗಲಿಲ್ಲ. ಆಯಾ ಪ್ರಾಂತದ ಜನರನ್ನು ಆಯಾ ಪ್ರಾಂ... ಭಾಷೆಯಿಂದಲೇ ಒಲಿಸಿಕೊಂಡರು. ಭಾಷಾಪ್ರತೀಕಾರ ಮಾಡಿದವರೆಲ್ಲ... ಹಾಳಾಗಿದ್ದಾರೆ. ಇದನ್ನು ನಾವು ಮರೆಯಬಾರದು. ಕನ್ನಡ ಭಾಷೆ... ಉದ್ಧಾರಮಾಡುವುದು ಕನ್ನಡ ದೇಶದಲ್ಲಿ ಆಳುತ್ತಿರುವ ಎಲ್ಲ ರಾಜರ ಕರ್ತ... ವೆಂಬುದನ್ನು ಅವರು ತಿಳಿದುಕೊಂಡು ಕನ್ನಡವನ್ನು ಉದ್ಧಾರಮಾಡಿ ಕನ್ನಡಪ್ರ... ಗಳ ಪ್ರೇಮವನ್ನು ಸಂಪಾದಿಸಬೇಕು. ಇಲ್ಲದಿದ್ದರೆ ಅವರೇ ಅವರ ರಾಜ್ಯ... ಬದುಕುವುದು ಕಷ್ಟವಾಗುತ್ತದೆ. ಜಮಖಂಡಿಯ ರಾಜಾಸಾಹೇಬರವರು ... ಇಲ್ಲಿ ಇಲ್ಲ. ಅವರು ಕನ್ನಡವನ್ನು ಪ್ರೇಮದೃಷ್ಟಿಯಿಂದ ನೋಡುತ್ತೇವೆ... ಸಂದೇಶ ಕಳುಹಿಸಿದ್ದಾರೆ. ಆದರೆ ಇಷ್ಟಕ್ಕೆ ಕನ್ನಡಿಗರು ಸಮಾಧಾನದಿಂದಿರಬೇಕೆ... ಕನ್ನಡ ಭಾಷೆ ಮುಂದುವರಿಯುತ್ತಾ ಇದೆ. ಕನ್ನಡಿಗರು ಮುಂದುವರಿಯು... ತ್ತಿದ್ದಾರೆ. ಅವರ ಆಸೆ ಆಕಾಂಕ್ಷೆಗಳು ನೆರವೇರದೆ ಬೇರೆ ಯತ್ನವಿಲ್ಲ. ಈ...

ನಮ್ಮ ರಾಜಾಸಾಹೇಬರು ಕಳುಹಿಸಿರುವ ಸಂದೇಶದಂತೆ ಇನ್ನುಮೇಲೆ ಕನ್ನಡಿಗರ ಆಸೆ ಆಕಾಂಕ್ಷೆಗಳು ಬೇಗನೆ ಪೂರ್ಣವಾಗಲಿ ಎಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

ಇಲ್ಲಿಯ ಅಕ್ಕಪಕ್ಕದ ರಾಜ್ಯಗಳು ಮರಾಠೀ ರಾಜ್ಯಗಳಾಗಿವೆ; ರಾಜಭಾಷೆ ಮತ್ತು ನೆರೆ ಭಾಷೆ ಮರಾಠಿ. ಆದ್ದರಿಂದ ನಾನು ನಮ್ಮ ಕನ್ನಡಿಗರಲ್ಲಿ ಒಂದು ಪ್ರಾರ್ಥನೆ ಮಾಡುತ್ತೇನೆ: ಅದೇನೆಂದರೆ—ನೆರೆಹೊರೆಯ ಜನರಲ್ಲಿ ಮಾತುಕತೆ ನಡಸಬೇಕಾದರೆ ಅವರು ಮರಾಠಿ ಭಾಷೆಯ ಪರಿಚಯ ಮಾಡಿಕೊಳ್ಳಬೇಕು. ಹಾಗೆಯೇ ನಮ್ಮ ಶ್ರೀಮಂತರಲ್ಲಿ ನಾನು ಪ್ರಾರ್ಥಿಸುವುದೇನೆಂದರೆ—ಅವರು ತಮ್ಮ ಕನ್ನಡ ಪ್ರಜೆಗಳಿಗೆ ಮೊದಲು ಕನ್ನಡ ಕಲಿಸಬೇಕು. ಮತ್ತು ಈ ದಿನ ಜಮಖಂಡಿ ರಾಜಾಸಾಹೇಬರು ಕೊಟ್ಟಿರುವ ಭರವಸೆಯನ್ನು ಕೇಳಿ ಇತರ ಉತ್ತರ ಕರ್ಣಾಟಕ ಸಂಸ್ಥಾನದ ರಾಜಾಸಾಹೇಬರುಗಳೂ ಕೂಡ ಹೀಗೆಯೇ ಕನ್ನಡಕ್ಕೆ ಪ್ರೋತ್ಸಾಹವನ್ನು ಕೊಡಲಿ ಎಂದು ಹಾರೈಸುತ್ತೇನೆ. ಈಗ ಎಲ್ಲ ಸರ್ಕಾರಗಳೂ ತಲೆಕೆಳಗಾಗುತ್ತಾ ಇವೆ. ರಾಜರುಗಳ ಬಲ ಕಡಮೆಯಾಗುತ್ತಾ ಇದೆ. ಕಾಂಗ್ರೆಸ್ ಸರ್ಕಾರ ಮುಂದೆ ಬರುತ್ತಿದೆ. ನಮ್ಮ ರಾಜರಲ್ಲಿ 'ಇದು ನನ್ನ ಸಂಸ್ಥಾನವಾದರೂ ಈ ಸಂಸ್ಥಾನ ನನಗಲ್ಲ, ನನ್ನ ಜನರಿಗೆ' ಎಂಬ ಭಾವನೆ ಬರುವವರೆಗೂ ಅವರ ಕಲ್ಯಾಣವಾಗಲಿಕ್ಕಿಲ್ಲ. ಅವರ ಪ್ರಜೆಗಳು ಕೋರುವಹಾಗೆ ಅವರ ಭಾಷೆಗೆ ಉತ್ತೇಜನ ಕೊಡದೆ, 'ನನ್ನ ಸಂಸ್ಥಾನದಲ್ಲಿ ನನ್ನ ಜನ್ಮಭಾಷೆಯ ಶ್ರೇಷ್ಠತ್ವ ಬರಬೇಕೆಂದು' ಉದ್ಧಟತನದಿಂದ ನಡೆದರೆ ನಾಳೆ ಬರುವ ಆಪತ್ತು ಅವರಿಗೆ ಇಂದೇ ಬರುವುದೆಂದು ನಾನು ಹೇಳಬಲ್ಲೆ. ಇಲ್ಲಿ ಕನ್ನಡ ದೇಶದ ಎಲ್ಲ ಭಾಷೆಯ ಜನರೂ ಬಂದಿದ್ದಾರೆ. ಕನ್ನಡ ದೇಶದಲ್ಲಿರುವ ಅವರೆಲ್ಲರೂ ಕನ್ನಡವನ್ನು ಕಲಿಯುವಹಾಗೆ ಆಗಬೇಕೆಂದು ಬೇಡುತ್ತೇನೆ.

ಮಹಾಶಯರೆ, ಇಲ್ಲಿ ದೊಡ್ಡ ದೊಡ್ಡ ಪಂಡಿತರು ಸೇರಿದ್ದೀರಿ. ಕರ್ಣಾಟಕದ ನಾನಾ ಪ್ರಾಂತಗಳ ವಿದ್ವಾಂಸರು ಬಂದು ಕೂಡಿದ್ದೀರಿ. ಬಹಳ ಹೊತ್ತಿನಿಂದ ನನ್ನ ನಯವಿಲ್ಲದ ಮಾತನ್ನು ಕೇಳಿದ್ದೀರಿ. ನನ್ನ ಒರಟುಮಾತಿನಿಂದ ತಮಗೆ ಬೇಸರ ವಾಗಿದ್ದರೆ ಕ್ಷಮಿಸಬೇಕೆಂದು ಬೇಡುತ್ತೇನೆ. ಕನ್ನಡ ಸಾಹಿತ್ಯ ಸಮ್ಮೇಳನದಂಥ ಮಹಾಸಭೆಯನ್ನು ಪ್ರಾರಂಭಗೊಳಿಸುವ ಸುಯೋಗವನ್ನು ದೊರಕಿಸಿಕೊಟ್ಟು, ಇಂಥ ವಿದ್ವಜ್ಜನರ ಸಭೆಯಲ್ಲಿ ಭಾಷಣಮಾಡಲು ಅವಕಾಶ ಒದಗಿಸಿಕೊಟ್ಟ ಶ್ರೀ॥ ಚಿಕ್ಕೋಡಿ ಅವರಿಗೆ ನನ್ನ ವಂದನೆಗಳನ್ನರ್ಪಿಸಿ ಈ ಸಾಹಿತ್ಯ ಸಮ್ಮೇಳನದ ಕಾರ್ಯಗಳು ನಿರ್ವಿಘ್ನವಾಗಿಯೂ ಯಶಸ್ವಿಯಾಗಿಯೂ ನಡೆಯಲೆಂದು ಹಾರೈಸುತ್ತೇನೆ.

---

# ಸ್ವಾಗತ ಮಂಡಲಿಯ ಅಧ್ಯಕ್ಷರಾದ
# ಶ್ರೀಮಾನ್ ಪಂಡಿತಪ್ಪ ರಾಯಪ್ಪ ಚಿಕ್ಕೋಡಿ, ಬಿ.ಎ. ಅವರ
# ಸ್ವಾಗತ ಭಾಷಣ

ಪ್ರತಿನಿಧಿಗಳೇ, ಸದ್ಗೃಹಸ್ಥರೇ, ಮುದ್ದು ಕನ್ನಡ ನುಡಿಯ ಅಭಿಮಾನಿಗಳೇ,

"ನುಡಿಯೇ ನಾಡಿನ ಜೀವ"ವೆಂಬ ನಾಣ್ನುಡಿಯನ್ನು ಮುಂದಿರಿಸಿಕೊ... ಕನ್ನಡ ನುಡಿಯನ್ನು ಎಲ್ಲ ಬಗೆಯಿಂದಲೂ ಏಳ್ಗೆಗೊಳಿಸುವದಕ್ಕಾಗಿ ... ಕಷ್ಟಗಳನ್ನು ಸಹಿಸಿಕೊಂಡು ಇಲ್ಲಿಯವರೆಗೆ ಬಂದ ತಮ್ಮೆಲ್ಲ ಮಹನೀಯ... ಬರಮಾಡಿಕೊಳ್ಳುವ ಭಾಗ್ಯವು ನನಗೆ ದೊರೆತುದಕ್ಕಾಗಿ ನಾನು ಆನಂದ... ನಾಗಿರುವೆನು. ನಿಸ್ಸೀಮವಾದ ಭಾಷಾಪ್ರೇಮವೂ, ಕನ್ನಡ ಮಾತೆಯ... ಅತುಲವಾದ ಅಭಿಮಾನವೂ ನಿಮ್ಮನ್ನು ಇಲ್ಲಿಯವರೆಗೆ ಬರಮಾಡಿದುದು ... ಇಲ್ಲದಿದ್ದರೆ, ರಾಜತೇಜದ ಛಾಯೆಯಿಂದ ಕೆಲಮಟ್ಟಿಗೆ ಶೋಭೆಯನ್ನು ಪಡೆದಿದ್ದ... ತಮ್ಮ ಮನಸ್ಸುಗಳನ್ನಾಕರ್ಷಿಸುವಷ್ಟು ಸೊಬಗನ್ನೂ ವೈಶಿಷ್ಟ್ಯವನ್ನೂ ... ದಿರುವ ಈ ಜಮಖಂಡಿ ಪಟ್ಟಣಕ್ಕೆ ತಾವೇತಕ್ಕೆ ಬರಲುದ್ಯುಕ್ತರಾಗುತ್ತಿ... ರೈಲಿನ ಸೌಕರ್ಯವಿಲ್ಲ; ಮೋಟರ ಬಸ್ಸುಗಳ ನಿಯಮಿತತೆಯ ಭರವಸೆ... ಇಲ್ಲ; ಹಾಗೂ ಹೀಗೂ ಇಲ್ಲಿಯವರೆಗೆ ಬಂದನಂತರ ಮನಮೆಚ್ಚುವ ಸೊ... ಸೌಂದರ್ಯಗಳಾದರೂ ಅಷ್ಟಕ್ಕಷ್ಟೇ! ಅಂದಮೇಲೆ ಕೇವಲ ಕರ್ತವ್ಯಜಾಗ್ರತೆಯಿ... ಪ್ರೇರೇಪಿತರಾಗಿ ಈ ಸಮ್ಮೇಲನಕ್ಕೊಂದು ನಿರತಿಶಯವಾದ ಶೋಭೆಯನ್ನು ... ಮಾಡಲು ಇಲ್ಲಿಗೆ ಆಗಮಿಸಿದಂಥ ತಮ್ಮೆಲ್ಲರ ಉಪಕಾರಗಳನ್ನು ನಾನು ಸ್ವಾ... ಮಂಡಲದ ಪರವಾಗಿ ನೆನೆಯುತ್ತೇನೆ. ನಮ್ಮಲ್ಲಿರುವ ಕೊರತೆಗಳನ್ನು ... ಕಡೆಗಣಿಸಿ ನಾವು ಹೃತ್ಪೂರ್ವಕವಾಗಿ ಸಲ್ಲಿಸುವ ಅಲ್ಪವಾದ ಆದರಾತಿಥ್ಯ... ಮನ್ನಿಸಿ ಪ್ರೇಮದಿಂದ ಸ್ವೀಕರಿಸುವಿರೆಂದು ನಂಬಿದ್ದೇನೆ.

ಇತಿಹಾಸ ಪ್ರಸಿದ್ಧವಾದ ಕುಂತಳದೇಶದ ಮುಕುಟಮಣಿಯಂತಿರು... ನಮ್ಮ ಈ ಜಮಖಂಡಿಯು ತನ್ನ ಪೂರ್ವದ ಐತಿಹಾಸಿಕ ಕುರುಹುಗಳಿಂದ ನಿಮ್ಮ... ಮನಸ್ಸನ್ನೆಳೆದುಕೊಳ್ಳದಿರಲಾರದು. ಇಲ್ಲಿಯ ಪುರಾತನದ ಜಂಬುಕೇಶ್ವ... ಗುಡಿಯು ದರ್ಶನೀಯವಾಗಿದೆ. ಇಲ್ಲಿಂದ ಎರಡು ಮೈಲಿನ ಮೇಲಿ... ರಾಮತೀರ್ಥವೆಂಬಲ್ಲಿರುವ ಉಮಾರಾಮೇಶ್ವರನ ಗುಡಿಯು ಭವ್ಯವಾಗಿದೆ. ... ಸಮೀಪದಲ್ಲಿಯೇ ಕೃಷ್ಣಾ ನದಿಯ ದಂಡೆಯಲ್ಲಿ ಶೂರ್ಪಾಲಿ ಗ್ರಾಮದಲ್ಲಿ ... ಪುರಾತನ ಕಾಲದ ನರಸಿಂಹದೇವರ ಗುಡಿಯು ಮನೋಹರವಾಗಿದೆ. ... ೧೪ ಮೈಲಿನ ಮೇಲಿರುವ ತೇರದಾಳ ಗ್ರಾಮದೊಳಗಿನ ಪ್ರಭುಸ್ವಾಮಿಯ ಗುಡಿ... ಇತಿಹಾಸ ಪ್ರಸಿದ್ಧವಾಗಿದೆ. ಸುಮಾರು ೧೧೬೦ರಲ್ಲಿದ್ದ ವೀರಶೈವ ಗುರುಗ... ಬಹು ಪ್ರಖ್ಯಾತರಾದ ಗುಹೇಶ್ವರಾಂಕಿತವಾದ ವಚನಗಳ ಕರ್ತರೂ ಜಗದ್ವ... ಆದ ಪ್ರಭುದೇವರು ತೇರದಾಳಕ್ಕೆ ಬಂದು ಅಲ್ಲಿ ೧೪ ವರ್ಷ ವಾಸವಾಗಿದ್ದ... ಅವರ ಈ ವಾಸದ ಅವಧಿಯೊಳಗಿನ ಅದ್ಭುತವಾದ ಗುರೂಪದೇಶದ ಪ್ರಭಾವ...

ಈ ಭಾಗದಲ್ಲೆಲ್ಲ ಪ್ರಭುದೇವರ ಗುಡಿಗಳು ಅಲ್ಲಲ್ಲಿ ಕಂಡುಬರುತ್ತವೆ. ಇಷ್ಟೇ ಅಲ್ಲ; ಜಮುಖಂಡಿಯು ಈಗ ಮಹಾರಾಷ್ಟ್ರ ಸಂಸ್ಥಾನಿಕರ ಆಳಿಕೆಯಲ್ಲಿದ್ದರೂ ಈ ಭಾಗವು ಕ್ರಿ. ಶ. ೯ನೆಯ ಶತಮಾನದಲ್ಲಿ ತಿರುಳ್ಗನ್ನಡದ ನಾಡಾಗಿತ್ತೆಂಬುದನ್ನು ನೀವು ನೆನೆದೊಡನೆಯೇ ನಿಮ್ಮಲ್ಲಿ ಅನಿರ್ವಚನೀಯವಾದ ಅಭಿಮಾನವು ಒಡಮೂಡುವುದರಲ್ಲಿ ಸಂದೇಹವಿಲ್ಲ. ಅಜರಾಮರವಾದ 'ಗದಾಯುದ್ಧ'ವೆಂಬ ಚಂಪೂ ಕಾವ್ಯವನ್ನು ಬರೆದು 'ಕವಿರತ್ನ'ನೆಂಬ ಬಿರುದಿನಿಂದ ಪ್ರಸಿದ್ಧನಾದ ರನ್ನ ಮಹಾಕವಿಯು ಇಲ್ಲಿಗೆ ಸಮೀಪದಲ್ಲಿರುವ ಮುದುವೊಳಲಲ್ಲಿ (ಈಗಿನ ಮುಧೋಳದಲ್ಲಿ) ಕ್ರಿ. ಶ. ೯೪೯ರಲ್ಲಿ ಜನ್ಮವೆತ್ತಿದುದಾಗಿ ಅದೇ ಕವಿಯ 'ಅಜಿತ ತೀರ್ಥಂಕರ ಪುರಾಣತಿಲಕ'ದೊಳಗಿನ ಕೆಳಗಿನ ಪದ್ಯದಿಂದ ತಿಳಿದುಬರುತ್ತದೆ:—

ಬೆಳುಗಲಿಯಯ್ನೂರ್‌ ಜಿರೊಳ ।
ಗ್ಗಳಮೆನಿಸುವ ಜಂಬುಖಂಡಿ ಯೆಪ್ಪತ್ತರ್ಕಂ ॥
ತಿಳಕಮೆನೆ ನೆಗಟ್ದ ಮುದುವೊಳಿ ।
ಲೊಳೆ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ ॥

ಮೇಲೆ ಹೇಳಿದ ತೆರದಾಳ ಗ್ರಾಮದಲ್ಲಿ, ಕ್ರಿ. ಶ. ೧೧೨೩ನೆಯ ಇಸವಿಯಲ್ಲಿ ಚಾಳುಕ್ಯ ರಾಜನಾದ ವಿಕ್ರಮಾದಿತ್ಯನ ಸಾಮಂತ ಗೊಂಕದೇವನು ಕನ್ನಡದಲ್ಲಿ ಶಾಸನವನ್ನು ಬರೆಯಿಸಿರುವನು. ಅಂದಮೇಲೆ ಈಗ ಮಹಾರಾಷ್ಟ್ರ ಭಾಷೆಯ ಸಂಸ್ಥಾನಿಕರ ಆಳಿಕೆಯಲ್ಲಿರುವ ಜಮುಖಂಡಿ, ಮುಧೋಳ, ಬೆಳುಗಲಿ, ತೇರದಾಳ ಈ ಊರುಗಳು ೧೦ನೆಯ ಶತಮಾನದಲ್ಲಿ ಶುದ್ಧವಾದ ಕನ್ನಡ ನಾಡುಗಳಾಗಿದ್ದವೆಂಬದು ಸ್ಪಷ್ಟವಾಗುತ್ತಿದೆ. ಹೀಗಿರಲು ನಮ್ಮ ಈ ಜಮುಖಂಡಿಯಲ್ಲಿ ಕನ್ನಡ ನುಡಿಯ ಏಳ್ಗೆಗಾಗಿ ಕರ್ಣಾಟಕ ಸಾಹಿತ್ಯ ಸಮ್ಮೇಳನವನ್ನು ನೆರೆಯಿಸಿದುದು ಕ್ರಮಪ್ರಾಪ್ತವೇ ಆಗಿದೆ.

ಸದ್ಯದಲ್ಲಾದರೂ ಜಮುಖಂಡಿ ಸಂಸ್ಥಾನದ ಒಟ್ಟು ೧,೧೪,೨೭೦ ಜನಸಂಖ್ಯೆಯಲ್ಲಿ ೮೫,೭೧೭ ಜನರು ಕನ್ನಡ ಮಾತಾಡುವವರಿದ್ದು, ೧೪,೯೩೪ ಜನರು ಮಾತ್ರ ಮರಾಠೀ ಮಾತಾಡುವವರಿದ್ದಾರೆ. ಉಳಿದವರಲ್ಲಿ ೧೨,೦೫೩ ಜನರು ಪಶ್ಚಿಮ ಹಿಂದೀ ಭಾಷೆಯನ್ನಾಡುವವರಿರುವರು. ಅಂದಮೇಲೆ ಈಗಲೂ ಸಹ ಈ ಸಂಸ್ಥಾನವು ಮುಖ್ಯವಾಗಿ ಕನ್ನಡ ನಾಡೇ ಆಗಿರುವುದೆಂಬದು ಸ್ಪಷ್ಟವಾಗುತ್ತದೆ. ಹೀಗಿದ್ದರೂ ಇಲ್ಲಿ ಕನ್ನಡ ನುಡಿಯು ಕಳೆಗುಂದಿದುದರ ಕಾರಣವು ನಮ್ಮ ಸ್ವಭಾಷಾಭಿಮಾನ ಶೂನ್ಯತೆಯೇ ಹೊರತು ಬೇರೆ ಯಾವದೂ ಅಲ್ಲವೆಂದರೆ ತಪ್ಪಾಗದು. ಕನ್ನಡಿಗರು ಉಳಿದ ದೇಶ ಭಾಷೆಗಳನ್ನು ಕಲಿಯಲೇ ಕೂಡದೆಂದು ಕೆಲವರು ಆಕ್ಷೇಪಿಸುವದನ್ನು ನಾವು ಕೇಳುತ್ತೇವೆ. ಆದರೆ ಕೇವಲ ಹೀಗೆ ಉಳಿದ ದೇಶಭಾಷೆಗಳನ್ನು ಕಲಿಯದಿರುವದರಿಂದ ನಮ್ಮ ಭಾಷೆಯ ಬೆಳವಣಿಗೆಯಾದೀತೆಂದು ನನಗೇನೂ ಅನ್ನಿಸುವದಿಲ್ಲ. ನಿಜವಾಗಿ ಹೇಳಬೇಕಾದರೆ ಒಂದು ಭಾಷೆಯ ನಿಜವಾದ ಪ್ರಗತಿಗಾಗಿ ಇತರ ಭಾಷೆಗಳೊಳಗಿನ ಉತ್ತಮೋತ್ತಮ ಗ್ರಂಥಗಳನ್ನು ಭಾಷಾಂತರಿಸುವದಾಗಲಿ, ಅನುವಾದಿಸುವದಾಗಲಿ

ಯೋಗ್ಯವಾದ ಮಾರ್ಗವಾಗಿದೆ. ಯಾವದಾದರೊಂದು ಪ್ರಾಂತದಲ್ಲಿ ಒಂ
ವಿಶಿಷ್ಟ ಭಾಷೆಯನ್ನಾಡುವವರ ಸಂಖ್ಯೆಯು ಹೆಚ್ಚಿಗಿದ್ದು ಇತರ ಭಾಷೆಗಳನ್ನಾ
ವವರ ಸಂಖ್ಯೆಯು ಕಡಮೆಯಾಗಿದ್ದರೆ, ಕಡಮೆ ಜನಸಂಖ್ಯೆಯ ಜನರು ಸ್ವ
ಭಾಷೆಯೊಂದಿಗೆ ಹೆಚ್ಚು ಜನಸಂಖ್ಯೆಯುಳ್ಳವರ ಭಾಷೆಯನ್ನಾದರೂ ಕಲಿಯು
ವಿಹಿತವಾಗಿದೆ. ಆದುದರಿಂದ ಕನ್ನಡ ಮಾತೃಭಾಷೆಯಾಗಿದ್ದವರ ಸಂಖ್ಯೆ
ಹೆಚ್ಚಾಗಿದ್ದ ಪ್ರಾಂತಗಳಲ್ಲಿ ಇತರ ಭಾಷೆಗಳನ್ನಾಡುವ ಕಡಮೆ ಸಂಖ್ಯೆಯುಳ್ಳ ಜ
ಕನ್ನಡ ಭಾಷೆಯನ್ನು ಕಲಿಯುವದೂ, ಅದರಂತೆಯೇ ಕನ್ನಡೇತರ ಭಾಷೆ
ಮಾತೃಭಾಷೆಗಳಾಗಿದ್ದವರ ಸಂಖ್ಯೆಯು ಹೆಚ್ಚಿಗಿದ್ದ ಪ್ರಾಂತಗಳಲ್ಲಿ ಸ್ವ
ಭಾಷೆಯನ್ನಾಡುವ ಜನರು ಇಂಥ ಕನ್ನಡೇತರ ಭಾಷೆಗಳನ್ನು ಕಲಿಯು
ಪರಸ್ಪರ ಸ್ನೇಹಸಂವರ್ಧಕವಾಗಿರುವದಲ್ಲದೆ ಇತರೇತರ ಭಾಷೆಗಳ ಬೆಳ
ಸಹಕಾರಿಯೂ ಆಗುವದರಲ್ಲಿ ಸಂದೇಹವಿಲ್ಲ. ಇದಲ್ಲದೆ ಆಧುನಿಕ ಕಾಲದಲ್ಲಿ ಸ
ಬೇರೆ ಪ್ರಾಂತಗಳೊಡನೆ ವಾಹನಸೌಕರ್ಯಗಳ ದೆಶೆಯಿಂದ ಸಂಘಟನೆಯು ಹೆ
ಬೆಳೆಯಹತ್ತಿರುವದರಿಂದ ಮಾತೃಭಾಷೆಯನ್ನುಳಿದು ಬೇರೆ ಯಾವದಾದ
ಉಪಭಾಷೆಯನ್ನು ಕಲಿಯುವದು ಅವಶ್ಯವೆನಿಸತೊಡಗಿದೆ. ವ್ಯಾಪ
ಉದ್ಯೋಗಗಳ ಬೆಳವಣಿಗೆಗಾದರೂ ಇದು ಅತ್ಯವಶ್ಯವು. ಮಾತೃಭಾಷೆಯ
ನಿಜವಾದ ಅಭಿಮಾನವನ್ನು ತಳೆದರೆ ಉಪಭಾಷೆಗಳು ಸಹಕಾರಿಗಳಾಗುವ
ವಿಘಾತಕವಾಗಲರಿಯವು. ಪರದೇಶಗಳಲ್ಲಿಯೂ ಕೂಡ ಫ್ರೆಂಚ್ ಇ
ಬೇರೆ ಯಾವದಾದರೊಂದು ಪ್ರಚಲಿತವಾದ ಭಾಷೆಯು ಉಪಭಾಷೆ
ಉಪಯೋಗಿಸಲ್ಪಡುವದುಂಟು. ಇದರಿಂದ ಉಳಿದ ಮಾತೃಭಾಷೆಗಳಿಗೆ ಹಾನಿ
ತಟ್ಟದೆ ಲಾಭವೇ ಉಂಟಾಗಿರುತ್ತದೆ.

ಇನ್ನೊಂದು ಮಾತು. ಇಲ್ಲಿ ಕನ್ನಡ ಸಾಹಿತ್ಯ ಸಮ್ಮೇಲನಕ್ಕೆ ಉದಾಸ
ಕರಣಿಗಳಾದ ನಮ್ಮ ಸಂಸ್ಥಾನದ ಶ್ರೀಮಂತ ರಾಜಾಸಾಹೇಬರು ಸಾ
ಸಹಾನುಭೂತಿಯನ್ನು ಪ್ರಕಟಿಸಿರುವರೆಂಬ ಸಂಗತಿಯನ್ನು ತಮಗೆ ತಿಳಿಸಲಿಕ್ಕೆ ಸ
ಆನಂದವೆನಿಸುತ್ತದೆ. ಇದಲ್ಲದೆ ಈ ಸಂಸ್ಥಾನದಲ್ಲಿ ಇತರ ಮರಾಠೀ ಸಂಸ್ಥಾನ
ಎಲ್ಲಿಯೂ ಇಲ್ಲದಷ್ಟು ಉತ್ತೇಜನವು ಕನ್ನಡ ಭಾಷೆಗೆ ದೊರೆಯುತ್ತಲೇ ಬ
ಈ ಸಂಸ್ಥಾನದೊಳಗಿನ ಒಟ್ಟು ೬೦ ಪ್ರಾಥಮಿಕ ಶಾಲೆಗಳಲ್ಲಿ ೪೬ ಅಂದರೆ ಸ
೭೫ಕ್ಕಿಂತಲೂ ಹೆಚ್ಚಿಗೆ ಕನ್ನಡ ಶಾಲೆಗಳಿವೆ. ಜಮುಖಂಡಿಯೊಳಗಿನ ಎಲ್ಲ ಮು
ಹೈಸ್ಕೂಲುಗಳಲ್ಲಿ ಮರಾಠಿ ಮತ್ತು ಕನ್ನಡ ಈ ಎರಡೂ ಭಾಷೆಗಳ ದ್ವಾರ
ಶಿಕ್ಷಣವು ಕೊಡಲ್ಪಡುತ್ತದೆ. ಇದೇ ಸಂಸ್ಥಾನಕ್ಕೆ ಸೇರಿದ ಬನಹಟ್ಟಿ ಗ್ರಾ
ದೊಳಗಿನ ಹೈಸ್ಕೂಲಿನಲ್ಲಿ ಕೇವಲ ಕನ್ನಡ ಭಾಷೆಯ ದ್ವಾರದಿಂದಲೇ ಶಿಕ್ಷಣ
ಕೊಡಲಾಗುವದು. ಸಂಸ್ಥಾನದ ಅಮಲದಾರರೂ ಕಾರಕೂನರೂ ಕನ್ನಡ
ಕಲಿಯಬೇಕೆಂದು ದರಬಾರದಿಂದ ಹುಕುಮು ಸಹ ಹೊರಡಿಸಲಾಗಿದೆ. ಜಮು
ಸಂಸ್ಥಾನವು ಕನ್ನಡ ಭಾಷೆಗೆ ಸಹಾನುಭೂತಿಯನ್ನು ತೋರಿಸುತ್ತ ಬಂದುದ

ಹಿಂದಕ್ಕೊಮ್ಮೆ ಕರ್ನಾಟಕ ಸಾಹಿತ್ಯ ಸಮ್ಮೇಳನದಲ್ಲಿ ಅಭಿನಂದನಪರವಾದ ಗೊತ್ತುವಳಿಯು ಸಹ ಪಾಸಾದದ್ದು ನನ್ನ ನೆನಪಿನಲ್ಲಿದೆ.

ಜಮಖಂಡಿ ಸಂಸ್ಥಾನದ ಒಂದು ತುದಿಯಿಂದ ಮತ್ತೊಂದು ತುದಿಯವರೆಗೂ— ಇಷ್ಟೇ ಅಲ್ಲ, ನೆರೆಯ ಸಂಸ್ಥಾನಗಳ ಹದ್ದಿನಲ್ಲಿಯೂ ಸಹ—ಕನ್ನಡ ನುಡಿಯ ಬಗ್ಗೆ ಅನ್ಯಾದೃಶವಾದ ಜಾಗೃತಿಯನ್ನುಂಟುಮಾಡಿದ ನನ್ನ ಪ್ರಿಯ ಕಕ್ಕಂದಿರಾದ ಕೈ॥ವಾ॥ ಚಿಕ್ಕೋಡಿ ತಮ್ಮಣ್ಣಪ್ಪನವರ ಬಗ್ಗೆ ನಾಲ್ಕು ಮಾತುಗಳನ್ನು ಇಲ್ಲಿ ಹೇಳದಿರಲಾರೆನು. ಮೊಟ್ಟಮೊದಲು ಮರಾಠೀ ಸಂಸ್ಥಾನಗಳ ಹದ್ದಿನಲ್ಲಿ ಕನ್ನಡದ ಸದ್ದು ಎಲ್ಲಿಯೂ ಕೇಳದಿರುವಾಗ, ಎಲ್ಲೆಲ್ಲಿಯೂ ವಿಷಮ ಪರಿಸ್ಥಿತಿಯೇ ಪಸರಿಸಿರುವಾಗ, ತಮ್ಮಣ್ಣಪ್ಪನವರು ಕೇವಲ ಮಾತೃಭಾಷೆಯಮೇಲಣ ಪ್ರೇಮದಿಂದ ಅದನ್ನು ತನುಮನಧನಗಳಿಂದ ಬೆಳೆಯಿಸಲಿಕ್ಕೆ ನಡುಕಟ್ಟಿ ನಿಂತರು. ಜಮಖಂಡಿ, ಸಾಂಗಲಿ, ಮುಧೋಳ ಸಂಸ್ಥಾನಗಳಲ್ಲಿ ಕನ್ನಡ ನುಡಿಯ ಪ್ರಾಶಸ್ತ್ಯಕ್ಕಾಗಿ ಹೃತ್ಪೂರ್ವಕವಾಗಿ ಹೆಣಗಾಡಿ ಸಾಕಷ್ಟು ಸಫಲತೆಯನ್ನು ಪಡೆದ ಶ್ರೇಯಸ್ಸು ಅವರಿಗೇ ಸಲ್ಲುವದು. ಇಷ್ಟಾದರೂ ಅವರು ಈ ಸಂಸ್ಥಾನಗಳ ಯಜಮಾನರಿಗೆ ಎಂದಿಗೂ ಅಪ್ರಿಯರಾಗಲಿಲ್ಲ. ಅವರ ಪ್ರೇಮವನ್ನೇ ಕೊನೆಯವರೆಗೂ ಸಂಪಾದಿಸಿ ತಾವು ಕೈಕೊಂಡ ಕಾರ್ಯಗಳಲ್ಲಿ ಶಕ್ಯವಿದ್ದಮಟ್ಟಿಗೆ ಯಶಸ್ಸು ಪಡೆದರು. ಆದರೆ ಹಾಯ್! ಆ ಧೀರವೀರನ ಸಿಂಹ ಗರ್ಜನೆಯು ಈಗ ಅಡಗಿತು! ನಿರ್ಘೃಣ ಕೃತಾಂತನು ಅವರನ್ನೆತ್ತಿಕೊಂಡುಹೋದನು. "ತಂಗಿಯರ ವೈಭವದ ಮುಂದೆ ನಮ್ಮ ಕನ್ನಡ ತಾಯಿಯು ಕಳೆಗುಂದಿ ಅವಮಾನಿತಳಾಗಿ ಮೋರೆಗೆ ಸೆರಗುಹಾಕಿಕೊಂಡು ಕಣ್ಣೀರನ್ನು ಸುರಿಸುತ್ತಿರುವಳು. ಪ್ರಿಯ ಕನ್ನಡಿಗರೇ ಅವಳನ್ನು ಕಣ್ಣೆತ್ತಿ ನೋಡಿರಿ" ಎಂದು ಕಾರುಣ್ಯದಿಂದ ನುಡಿದಂಥ, "ಅಪೂರ್ವವಾದ ಉತ್ಸಾಹವನ್ನು ತಾಳಿ ಅಂತಃಕರಣಪೂರ್ವಕವಾಗಿ ಯತ್ನಗಳನ್ನೆಸಗಿ ಅವಳಿಗೆ ಪೂರ್ವ ವೈಭವವನ್ನು ತಂದುಕೊಟ್ಟು ಹಿಂದಕ್ಕೊಮ್ಮೆ ಕನ್ನಡ ನಾಡಿನ, ಕನ್ನಡ ನುಡಿಯ ಮತ್ತು ಕನ್ನಡದ ಸಿರಿಯ ಹೆಸರು ಭಾರತವರ್ಷದಲ್ಲಿ ದುಂದುಭಿ ರವದಿಂದ ನಾದಗೊಂಡಿದ್ದಂತೆಯೇ ಅದನ್ನು ಈಗಲಾದರೂ ನಾದಗೊಳಿಸಿರಿ ಎಂದು ತಾಯ್ನುಡಿಯ ಸಂದೇಶವಿರುವುದು. ಅದನ್ನು ಕೊನೆಗಾಣಿಸುವದು ನಮ್ಮೆಲ್ಲರ ಕರ್ತವ್ಯವಾಗಿದೆ" ಎಂದು ಸಿಂಹಗರ್ಜನೆಯಿಂದ ಕನ್ನಡಿಗರನ್ನು ಉತ್ತೇಜಿತರನ್ನಾಗಿ ಮಾಡಿದಂಥ ಆ ಧೀರವೀರನ ಆ ಸಿಂಹಗರ್ಜನೆಯನ್ನು ಇನ್ನು ನಾವು ಕೇಳೆವು! ಅವರ ಮರಣದಿಂದ ಕನ್ನಡ ಭಾಷೆಯ ಬೆಳವಣಿಗೆಗೆ ವಜ್ರಾಘಾತವಾದಂತಾಯಿತು. ಅವರ ಆಕಾಂಕ್ಷೆಯನ್ನು ಈಡೇರಿಸಿ ಅವರ ಆತ್ಮಕ್ಕೆ ತೃಪ್ತಿಯನ್ನೀಯುವದು, ಬಾಂಧವರೇ! ನಿಮ್ಮನ್ನೇ ಕೂಡಿದೆ. ಇದೇ ಸಮಯದಲ್ಲಿ ಪ್ರಾಕ್ತನ ವಿಮರ್ಶವಿಚಕ್ಷಣ ರಾವ ಬಹಾದ್ದೂರ ಆರ್. ನರಸಿಂಹಾಚಾರ್ಯರ ಮತ್ತು ಶ್ರೀಮಾನ್ ಪಂಜೆ ಮಂಗೇಶ ರಾಯರ ನಿಧನದಿಂದ ಕನ್ನಡ ಭಾಷೆಗೆ ಉಂಟಾದ ತುಂಬಿಬರಲಾರದಷ್ಟು ಹಾನಿಯನ್ನು ನಾನು ನಿರ್ದೇಶಿಸದಿರಲಾರೆನು.

ಕಳೆದ ಎಳೆಂಟು ವರ್ಷಗಳಲ್ಲಿ ಕನ್ನಡ ಭಾಷೆಯ ಬಗ್ಗೆ ಜಾಗೃತಿಯು ಇಲ್ಲಿ

ಬೆಳೆಯುತ್ತ ನಡೆದಿರುವುದೆಂದು ಹೇಳಲಿಕ್ಕೆ ನನಗೆ ಆನಂದವೆನಿಸುತ್ತದೆ. ಪರ... ಗಳಿಂದ ಭಾಷಾಭಿಮಾನಿಗಳಾದ ಶ್ರೀಮಾನ್ ಬೇಂದ್ರೆಯವರು, ಆರ್. ವ್ಹಿ. ಜಹ... ದಾರರು, ಬೇಲೂರು ಕೇಶವದಾಸರು, ಸಾಲಿ ರಾಮಚಂದ್ರರಾಯರು ಇತ್ಯಾದಿ... ವಿದ್ವಜ್ಜನರು ನಮ್ಮ ವಿನಂತಿಯನ್ನು ಮನ್ನಿಸಿ ಇಲ್ಲಿಗೆ ಆಗಮಿಸಿ ತಮ್ಮ ... ವಾದ ಭಾಷಣಗಳಿಂದ ಕನ್ನಡದ ಬಗ್ಗೆ ಹೆಚ್ಚಾದ ಅಭಿಮಾನವನ್ನು ಬೆಳೆಯಿಸ... ಅದರಲ್ಲಿಯೂ ಅಖಿಲ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಅಮೃತಯೋಗವು ... ಈ ವರ್ಷ ಸುದೈವದಿಂದ ಲಭಿಸಿರುವುದರಿಂದ ಈ ಸಾಹಿತ್ಯೋತ್ಸವಕ್ಕೆ ಬಂ... ತಮ್ಮೆಲ್ಲ ವಿದ್ವನ್ಮಣಿಗಳ ಸಹವಾಸದಿಂದ ನಮಗೆ ದ್ವಿಗುಣಿತವಾದ ಉತ್ಸಾ... ಒಂದಿದೆ. ಬೆಳುಗಲಿನಾಡಿನ ಬಳಿಗಾರ ರನ್ನನಿಗೆ—ಕರ್ಣಾಟಕ ಕವಿಚಕ್ರ... ಜನ್ಮವಸಿತ್ತ, ಮಹಾಶಿವಶರಣರಾದ ಪ್ರಭುದೇವರ ಚತುರ್ದಶ ವರ್ಷಗಳ ಸ... ಯೋಗದಿಂದ ಚಿರಪುನೀತವಾದ ನಮ್ಮ ನಾಡಿನಲ್ಲಿ ಕನ್ನಡದ ಯಶೋದುಂದು... ಮತ್ತೆ ಮೊಳಗುವದೆಂದು ನಾನು ಬಲವಾಗಿ ಆಶಿಪಡುತ್ತೇನೆ.

ನಮ್ಮಲ್ಲಿ ಪುರಾತನವಾದ ಹಳಗನ್ನಡ ಭಾಷೆಯಲ್ಲಿ ಉಚ್ಚತಮ ಗ್ರಂ... ಭಾಂಡಾರವಿದೆಯೆಂದು ನಾವು ಹೆಮ್ಮೆಪಡುತ್ತೇವೆ. ಆದರೆ ನಮ್ಮ ... ಹೊಸಗನ್ನಡದಮೇಲೆ ಅದು ತನ್ನ ಕಿರಣಗಳನ್ನು ಹರಡುವಂತೆ ಮಾಡಲು ... ಪ್ರಯತ್ನಿಸಿಲ್ಲ. ಮರಾಠಿ, ಗುಜರಾಥಿ, ಬಂಗಾಲಿ ಮೊದಲಾದ ಪ್ರಾಕೃತ ... ಗಳಿಗೆ ಮೂಲವಾದ ಸಂಸ್ಕೃತ ಭಾಷೆಯನ್ನು ಶ್ರೇಷ್ಠತಮವಾದ ಭಾ... (Classical Language) ದೃಷ್ಟಿಯಿಂದ ಹೈಸ್ಕೂಲಿನೊಳಗಿನಿಂದಲೇ ... ಮಾಡಲಿಕ್ಕೆ ಅವಕಾಶವನ್ನು ಕೊಡಲಾಗಿರುವದರಿಂದ ಆ ಭಾಷೆಗಳು ... ಹೊಂದುತ್ತಲಿವೆ. ಗ್ರೀಕ, ಲ್ಯಾಟಿನ್ ಮೊದಲಾದ ಪುರಾತನ ಭಾಷೆಗಳ ಅ... ದಿಂದಲೇ ಇಂಗ್ಲಿಷ್ ಭಾಷೆಯ ಬೆಳವಣಿಗೆಯು ಹೆಚ್ಚುವುದೆಂದು ಅರಿತು ಇಂ... ವಿಶ್ವವಿದ್ಯಾಲಯಗಳಲ್ಲಿ ಈ ಪುರಾತನ ಭಾಷೆಗಳ ಅಭ್ಯಾಸಕ್ಕೆ ಪ್ರಾರಂಭದಿಂ... ಅವಕಾಶವನ್ನು ಕೊಡಲಾಗಿದೆ. ಅದರಂತೆಯೇ ಹಳಗನ್ನಡವನ್ನು ಅಭ್ಯಾಸ... ಅದರ ಯೋಗದಿಂದ ಹೊಸಗನ್ನಡವನ್ನು ಬೆಳೆಯಿಸಲಿಕ್ಕೆ ಅನುಕೂಲವಾಗು... ಇಂಗ್ಲಿಷ್ ಶಾಲೆಗಳಲ್ಲಿ ಹಳಗನ್ನಡವನ್ನು ಪುರಾತನ ಭಾಷೆಯಂತೆ (Class... Language) ಅಭ್ಯಾಸಕ್ಕೆ ಅವಕಾಶವನ್ನು ಕೊಡಲನುವಾಗುವಂಥ ಯೋಜನೆ... ತಯಾರಿಸುವುದಕ್ಕಾಗಿ ಯತ್ನಿಸುವುದು ಅವಶ್ಯವಿದೆ.

ಅಖಿಲ ಕರ್ಣಾಟಕದ, ಅದರಲ್ಲಿಯೂ ವಿಶೇಷತಃ ನಮ್ಮ ... ಕೊರತೆಗಳ ವಿಷಯವಾಗಿ ತಾವು ವಿಚಾರಮಾಡಿ ಯೋಗ್ಯವಾದ ನಿರ್ಣಯಗಳ... ಮಾಡಿಯೇ ಮಾಡುವಿರಿ. ಈ ಸಮ್ಮೇಲನಕ್ಕೆ ಉತ್ಸಾಹದಿಂದ ಬಂದಿರುವ ತಮ್ಮ... ಉಪಕಾರಗಳನ್ನು ಮತ್ತೊಮ್ಮೆ ನೆನೆದು ನಾನು ವಿರಮಿಸುವೆನು.

———

# ಸಮ್ಮೇಳನದ ಅಧ್ಯಕ್ಷರಾದ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಎ. ಅವರ ಭಾಷಣ

ಮಾನ್ಯರೆ, ಅಖಿಲ ಕರ್ಣಾಟಕದ ಭಾಷಾವತ್ಸಲರೂ ದೇಶಸೇವಾತತ್ಪರರೂ ಪಂಡಿತರೂ ಕಲಾಕೋವಿದರೂ ನೆರೆದಿರುವ ಈ ವಿದ್ವತ್ಸಭೆಗೆ ಆರಂಭದಲ್ಲಿ ನನ್ನ ವಿನಯಪೂರ್ವಕವಾದ ಪ್ರಣಾಮವನ್ನರ್ಪಿಸುತ್ತೇನೆ. ನನ್ನನ್ನು ತಾವೆಲ್ಲರೂ ಗೌರವದಿಂದ ಈ ಪವಿತ್ರ ಪೀಠದಲ್ಲಿ ಕುಳ್ಳಿರಿಸಿದುದಕ್ಕಾಗಿ ಬಹಳ ಹೆಮ್ಮೆಪಡಬೇಕಾದರೂ, ಈ ವಿದ್ವತ್ಪೀಠದ ಕರ್ತವ್ಯಗಳನ್ನು ತಕ್ಕಂತೆ ನೆರವೇರಿಸುವ ದಕ್ಷತೆ ನನ್ನಲ್ಲಿಲ್ಲವೆಂದು ಪೂರ್ಣವಾಗಿ ತಿಳಿದಿರುವುದರಿಂದ, ನನ್ನ ಮನಸ್ಸಿಗೆ ಬಹಳ ಕಾತರವುಂಟಾಗಿದೆ. ಕನ್ನಡ ಭಾಷಾಪಾಂಡಿತ್ಯದಲ್ಲಿ ಅಗ್ರಸ್ಥಾನವನ್ನು ಪಡೆದಿದ್ದ ರಾವ್ ಬಹಾದ್ದೂರ್ ಶ್ರೀಮಾನ್ ರಾ. ನರಸಿಂಹಾಚಾರ್ಯರು ಧಾರವಾಡದಲ್ಲಿ ನಡೆದ ನಾಲ್ಕನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸುವಲ್ಲಿ, ತಾವು "ಅಲ್ಪಜ್ಞ"ರೆಂದೂ ಈ ಭಾರ ವಹಿಸುವ ಶಕ್ತಿ ತಮಗಿಲ್ಲವೆಂದೂ ಹೇಳಿರುವರಲ್ಲದೆ, ಅಲ್ಲಿಂದೀಚೆಗೆ ನಡೆದ ಸಮ್ಮೇಳನಗಳಲ್ಲಿ ಅಧ್ಯಕ್ಷತೆ ವಹಿಸಿದ್ದ ಇತರ ದೊಡ್ಡ ಪಂಡಿತರೂ ತಾವು "ಪಂಡಿತಪುತ್ರ"ರೆಂದೂ "ಅರ್ಹರಲ್ಲ"ವೆಂದೂ ಹೇಳಿರುವಲ್ಲಿ, ನಾನು ತಮ್ಮ ಮುಂದೆ ಏನು ಹೇಳಿಕೊಳ್ಳಬೇಕೊ ತಿಳಿಯದಿದೆ. 'ಮಹಾತ್ಮರು ಅಡಿಯಿಡಲು ಸಹ ಭಯಪಡುವ ಸ್ಥಳಕ್ಕೆ ಅವಿವೇಕಿ ನುಗ್ಗಿಹೋಗುವನು' ಎಂಬ ಇಂಗ್ಲಿಷ್ ನಾಣ್ನುಡಿಯಂತೆ ನಾನು ವರ್ತಿಸಬೇಕಾಗಿದೆ. ನನ್ನ ಪರಮ ಮಿತ್ರರುಗಳಾದ ಶ್ರೀಮಾನ್ ಡಿ. ವಿ. ಗುಂಡಪ್ಪನವರಿಗೂ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಿಗೂ ನನ್ನಲ್ಲಿರುವ ಪ್ರೀತಿ ವಿಶ್ವಾಸಗಳೇ ನನ್ನನ್ನು ಈ ಸ್ಥಿತಿಗೆ ತಂದಿರುವುವಾದರೂ ನನಗೆ ತೊಂದರೆ ಮಾಡಬೇಕೆಂಬ ಭಾವನೆ ಅವರಲ್ಲಿ ಎಳ್ಳಷ್ಟೂ ಇರಲಿಲ್ಲವೆಂದು ನಾನು ನಿಜವಾಗಿಯೂ ತಿಳಿದಿದ್ದೇನೆ. ನನ್ನಿಂದ ಒದಗುವ ಕುಂದು ಕೊರತೆಗಳನ್ನು ಈ ಸಾಹಿತ್ಯಪಟುಗಳಿಬ್ಬರೂ ನಿವಾರಣೆ ಮಾಡಲು ಕೇವಲ ದಕ್ಷರಾಗಿರುವಲ್ಲಿ ನನ್ನ ನೀರಸವಾದ ಭಾಷಣಕ್ಕೆ ತಾವು ಕಳವಳಪಡಬೇಕಾದುದಿಲ್ಲ.

ಆದಿಯಲ್ಲಿ, ನನ್ನ ಚರಿತ್ರೆಯನ್ನು ಸ್ವಲ್ಪಮಟ್ಟಿಗೆ ತಮ್ಮಲ್ಲಿ ಹೇಳಿಕೊಂಡ ಹೊರತು ನನ್ನ ಚರ್ಯೆಯು ತಮಗೆ ಮನದಟ್ಟಾಗಲಾರದು. ನಾನು ಹೇಳುವುದು ಸಾಹಿತ್ಯವಲ್ಲದಿದ್ದರೂ ನಿಜವಾದುದು. ನನ್ನ ಭಾಷೆಗೆ ನಯವಿಲ್ಲ; ನಾನು ಪಂಡಿತರ ಮಾರ್ಗವನ್ನನುಸರಿಸಿಯೇ ನಡೆಯುವವನಲ್ಲ; ಗೌರವ ಪಡೆಯಬೇಕೆಂಬ ಆಕಾಂಕ್ಷೆ ನನಗಿಲ್ಲ; ಕನ್ನಡ ಮಾತೆಯ ಸೇವೆಯನ್ನು ನನ್ನ ಮನವೊಪ್ಪಿದ ರೀತಿಯಲ್ಲಿ ಭಕ್ತಿಯಿಂದ ಮಾಡಿ ತೃಪ್ತಿಪಡಬೇಕೆಂಬುದೇ ನನ್ನ ಕೋರಿಕೆ. ನನ್ನ ಮನಸ್ಸಿಗೆ ನ್ಯಾಯವೆಂದು ತೋರಿದುದನ್ನು ಭಯವಿಲ್ಲದೆ ಆಡಿಬಿಡುವುದು ನನ್ನಲ್ಲಿರುವ ದೊಡ್ಡ ಕೊರತೆ. ಇದು ಕೆಲವು ಸಂದರ್ಭಗಳಲ್ಲಿ ಅನೇಕರ ಮನಸ್ಸಿಗೆ ನೋವನ್ನುಂಟುಮಾಡಬಹುದು. ನಾನು ಯಾವ ತಪ್ಪನ್ನು ಮಾಡಿದರೂ ಕನ್ನಡ ಮಾತೆಯಲ್ಲಿ ಹೆಚ್ಚು ಪ್ರೇಮವನ್ನಿಟ್ಟುಕೊಂಡಿರುವ ತುಂಟ ಮಗುವೆಂದು ಭಾವಿಸಿ, ನನ್ನನ್ನು ಕ್ಷಮಿಸಬೇಕೆಂದು ಅತ್ಯಂತ

ವಿನಯದಿಂದ ಬೇಡಿಕೊಳ್ಳುತ್ತೇನೆ. ನಾನು ನನ್ನ ವಿಷಯವಾಗಿ ಇಲ್ಲಿ ಕೊಟ್ಟಿರುವ ಚಿತ್ರವು ಸರಿಯಾದುದೇ ಅಲ್ಲವೇ ಎಂಬುದನ್ನು ನನ್ನ ಆಪ್ತ ಸ್ನೇಹಿತರೆಲ್ಲರೂ ನಿರ್ಣಯ ಮಾಡಬಲ್ಲರು. ನನ್ನ ಭಾಷಣದಲ್ಲಿ ಕನ್ನಡ ಸಾಹಿತ್ಯದ ಪೆಂಪಾಗಲಿ ಪಿರ್ಮೆಯಾಗಲಿ ಕಾಣಬರದು. ಈ ಕೊರತೆಯನ್ನು ನನ್ನ ಮಿತ್ರರಿಬ್ಬರೂ ಪರಿಹರಿಸುವರು. ನನ್ನ ಮುಖ್ಯೋದ್ದೇಶವು ನಾನಾ ಪ್ರಾಂತಗಳಲ್ಲಿರುವ ನನ್ನ ಕನ್ನಡ ಬಂಧುಗಳೆಲ್ಲ ಒಂದಾಗಬೇಕೆಂದೂ, ದಾಯಾದ್ಯ ಮತ್ಸರಗಳಿಗೆಡೆಗೊಡದೆ ಒಕ್ಕಟ್ಟಿನಿಂದ ಕೆಲಸ ಮಾಡಬೇಕೆಂದೂ, ನಮಗೆ ಈಗ ಒದಗಿರುವ ಪೀಡೆಗಳನ್ನು ನಿವಾರಿಸಿ ಕನ್ನಡಿಗರು ಇತರರಿಗೆ ಯಾವ ವಿಧದಲ್ಲಿಯೂ ಕಡಮೆಯಲ್ಲವೆಂಬ ನಿದರ್ಶನವನ್ನು ಕೊಡಬೇಕೆಂದೂ ಇರುವುದರಿಂದ ಅಂತಹ ಸುಸಂಧಿಯೊದಗಲು ನಾವು ಏನು ಮಾಡ ಬೇಕೆಂಬ ಕೆಲವು ಸೂಚನೆಗಳನ್ನು ತಮ್ಮ ಮುಂದಿಡುವುದೇ ಆಗಿದೆ. ಈ ಸೂಚನೆ ಗಳು ಕೇವಲ ಗಾಳಿಗೋಪುರಗಳಾಗಿರಬಹುದು; ಆದರೆ ನನ್ನ ಹೃದಯದಿಂದ ಬಂದವು. ಆದುದರಿಂದ ತಮಗೆ ಅವು ಒಪ್ಪಿಗೆಯಾಗದಿದ್ದರೂ ನನ್ನನ್ನು ಆಕ್ಷೇಪಿಸ ಬಾರದೆಂದು ಕೇವಲ ನಮ್ರನಾಗಿ ಬೇಡಿಕೊಳ್ಳುತ್ತೇನೆ.

ನಾವು ಈಗ ನೆರೆದಿರುವ ಸಂಸ್ಥಾನದ ಹೆಸರು ನನ್ನ ಸ್ಮೃತಿಯಲ್ಲಿ ಸುಮಾರು ಅರುವತ್ತು ವರ್ಷಗಳಿಂದಲೂ ಇದೆಯೆಂದು ಹೇಳಿದರೆ ತಮಗೆ ಆಶ್ಚರ್ಯ ವಾಗದು. ನಾನು ಚಿಕ್ಕ ಹುಡುಗನಾಗಿದ್ದಾಗ ನನ್ನ ಹುಟ್ಟೂರಾದ ತುಮಕೂರಿಗೆ ಜಮುಖಂಡಿ ನಾಟಕ ಮಂಡಲದವರು ಬಂದು ಈಗಿನ ರೀತಿಯಲ್ಲಿ ನಾಟಕ ಪ್ರದರ್ಶನ ಮಾಡಿದರು; ಪಾತ್ರಗಳ ಭಾಷೆ ಕನ್ನಡವೊ ಮಹಾರಾಷ್ಟ್ರವೊ ನನಗೆ ನೆನಪಿಲ್ಲ; ಕನ್ನಡವೆಂದೇ ನಂಬೋಣ. ಆಗಿನ ಕಾಲದಲ್ಲಿ ಬಯಲಾಟ ಬೊಂಬೆಯಾಟಗಳಲ್ಲದೆ ಈಗಿನ ರೀತಿಯ ನಾಟಕಗಳು ಅಷ್ಟು ಪ್ರಚಾರದಲ್ಲಿರಲಿಲ್ಲ; ಪ್ರಯಾಣ ಸೌಕರ್ಯ ಗಳಂತು ಇಲ್ಲವೆಂದೇ ಹೇಳಬೇಕು. ಹೀಗಿದ್ದರೂ, ಅಷ್ಟು ದೂರ ದೇಶಸಂಚಾರ ಮಾಡಲು ಹೊರಟ ಜಮುಖಂಡಿಗಳ ಸಾಹಸವೆಷ್ಟೆಂದೆನ್ನೋಣ! ಅಂದಿನಿಂದಲೂ ಜಮುಖಂಡಿಯೆಂದರೆ ಸಾಹಸದ ನೆಲೆಯೆಂದೂ ಕಲಾಪ್ರದರ್ಶನದ ಬೀಡೆಂದೂ ನನ್ನ ಭಾವನೆ. ಇಷ್ಟೇ ಅಲ್ಲ; ಅತಿಶಯವಾದ ಕನ್ನಡ ಭಾಷಾಪ್ರೇಮವುಳ್ಳವರೂ ಚಿಕ್ಕಂದಿಯ ಮಿತ್ರರೂ ಆಗಿದ್ದ ರಬಕವಿಯ ಶ್ರೀ॥ ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿಯವರು ಈ ಸಂಸ್ಥಾನಗಳ ವಿಷಯವಾಗಿ ಪ್ರತಿ ವರ್ಷವೂ ಸಾಹಿತ್ಯ ಸಮ್ಮೇಳನದಲ್ಲಿ ತಮ್ಮ ಠರಾವುಗಳಿಗೆ ಮೊದಲು ಮಾನ್ಯಕೊಟ್ಟು ಕನ್ನಡದಲ್ಲಿ ವಿಶ್ವಾಸ ತೋರಿದವರು ಜಮುಖಂಡಿಯ ದೊರೆಗಳು. ಈಗಿನ ಮಹನೀಯರೂ ತಮ್ಮ ಮಾತೃಭಾಷೆಯಾದ ಮಹಾರಾಷ್ಟ್ರದಲ್ಲೆಷ್ಟೊ ಅಷ್ಟೇ ಮಮತೆಯನ್ನು ಕನ್ನಡದಲ್ಲಿಯೂ ಇಟ್ಟು ಕೊಂಡಿರುವರೆಂದು ನಂಬುತ್ತೇನೆ.

ನಾವು ನಿನ್ನೆಯ ದಿನ ಬೆಳಗ್ಗೆ ರೈಲಿಳಿದು ಜಮುಖಂಡಿಯ ಮಾರ್ಗವಾಗಿ ಬರುತ್ತಿದ್ದಾಗ ದಾರಿಯುದ್ದಕ್ಕೂ ನಮಗಾಗಿ ಕಾದಿದ್ದು ನಮ್ಮನ್ನಿದಿರುಗೊಂಡು ತಮ್ಮ ಊರಿಗೆ ಕರೆದುಕೊಂಡುಹೋಗಿ ನಮಗೆ ಸತ್ಕಾರಮಾಡಿದ ನನ್ನ

ಬಂಧುಗಳ ಮುಖದಮೇಲೆ ಕರ್ಣಾಟಕದೇವಿ ತಾಂಡವವಾಡುತ್ತಿದ್ದುದನ್ನು ನೋಡಿ ನಮಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಈ ಪ್ರಾಂತಕ್ಕೆ ಬರುವವರೆಗೂ ನಮಗೆ ಜಮುಖಂಡಿಯ ಮತ್ತು ಅದರ ನೆರೆಯ ಜನರು ಕೇವಲ ಮಹಾರಾಷ್ಟ್ರರೆಂದೇ ಭಾವನೆಯಿದ್ದಿತು. ಈಗ ಜಮುಖಂಡಿಯವರು ನಮಗೆ ಕೇವಲ ಸಮೀಪ ಬಂಧುಗಳೆಂದೂ, ಅವರಿಂದ ಕರ್ಣಾಟಕದ ಏಳಿಗೆಯ ಕಾರ್ಯವು ಯಶಸ್ವಿಯಾಗಿ ನಡೆಯುವುದೆಂದೂ ಭರವಸೆಯುಂಟಾಗಿದೆ.

ಶ್ರೀಮಾನ್ ಪಂಡಿತಪ್ಪ ರಾಯಪ್ಪ ಚಿಕ್ಕೋಡಿಯವರು ತಮ್ಮ ತೀರ್ಥರೂಪರಂತೆಯೇ ಆದಿಯಿಂದಲೂ ಕರ್ಣಾಟಕ ಮಾತೆಯಲ್ಲಿ ಅದೇ ಪ್ರೇಮವಿಟ್ಟುಕೊಂಡು ಕನ್ನಡ ಭಾಷೆಯ ಅಭಿವೃದ್ಧಿಗೆ ವಿಶೇಷ ಪ್ರೋತ್ಸಾಹ ಕೊಡುತ್ತಿರುವುದು ಕನ್ನಡಿಗರ ಸುದೈವವೆಂದೇ ಹೇಳಬೇಕಲ್ಲವೆ!

ಇಂದು ನಮ್ಮ ಕನ್ನಡ ಮಾತೆಯ ವೈಭವದ ಹಬ್ಬ. ಆಕೆಯ ಮಕ್ಕಳು ಎಲ್ಲ ಪ್ರಾಂತಗಳಿಂದಲೂ ಬಂದು ಇಲ್ಲಿ ನೆರೆದಿರುವರು. ನನ್ನ ಮಿತ್ರರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಈಗಾಗಲೆ ಈ ಹಬ್ಬದ ಸವಿಯೂಟವನ್ನು ತಮಗೆ ಹೆಚ್ಚಾಗಿ ಉಣಿಸಿರುತ್ತಾರೆ. ಮುಂದೆ ಈ ಉತ್ಕಟ ಭಾಷಾಭಿಮಾನಿಗಳೂ, ನನ್ನ ಮಿತ್ರರುಗಳಾದ ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ್ಯರೂ, ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರೂ ಇದೇ ಉಣಿಸನ್ನು ತಮಗೆ ಹೆಚ್ಚಾಗಿ ಕೊಡುವವರಾಗಿದ್ದಾರೆ. ತಮಗೆ ಈ ಸೀಯುಣಿಸಿನಿಂದ ಬಾಧೆಯುಂಟಾಗಬಹುದೆಂಬ ಶಂಕೆ ಹುಟ್ಟಿ ಅದರ ತೀವ್ರತೆಯನ್ನು ಕಡಮೆಮಾಡುವ ಉದ್ದೇಶದಿಂದ ನಾನು ಸ್ವಲ್ಪ ಬೇವಿನ ಚಿಗುರನ್ನು ತಮಗೆ ಮೆಲ್ಲಲು ಕೊಡುವೆನು. ಇದನ್ನು ತಾವು ತಪ್ಪಾಗಣಿಸಬಾರದೆಂದು ನನ್ನ ಬೇಡಿಕೆ.

ಇನ್ನು, ಕಾರ್ಯರಂಗಕ್ಕೆ ಇಳಿಯೋಣ. ಮೊದಲನೆಯ ಪ್ರಸ್ತಾವವು ಕರ್ಣಾಟಕ ಸಾಹಿತ್ಯ ಪರಿಷತ್ತಿನದು. ಈ ಸಂಸ್ಥೆಯು ಈಗ ೨೨ ವರ್ಷಗಳ ಹಿಂದೆ ಮೈಸೂರು ಶ್ರೀಮನ್ಮಹಾರಾಜರವರ ಉದಾರಾಶ್ರಯದಲ್ಲಿ ದೇಶವತ್ಸಲರಾದ ಸರ್ ಶ್ರೀ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರಿಂದ ಸ್ಥಾಪಿತವಾಯಿತು. ಇದನ್ನು ಆದಿಯಿಂದಲೂ ಅಖಿಲ ಕರ್ಣಾಟಕ ಸಂಸ್ಥೆಯೆಂದೇ ಮೈಸೂರಿನವರು ಭಾವಿಸಿಕೊಂಡಿರುತ್ತಾರೆ. ಇಷ್ಟು ಕಾಲ ಈ ಸಂಸ್ಥೆಯು ಒಂದೇ ಸಮನಾಗಿ ಕೆಲಸ ಮಾಡುತ್ತಿರುವುದು ಮೈಸೂರು ಶ್ರೀಮನ್ಮಹಾರಾಜರವರ ಸರ್ಕಾರದ ಉದಾರಾಶ್ರಯದಿಂದ. ಇದುವರೆಗೆ ಅರ್ಧ ಲಕ್ಷ ರೂಪಾಯಿಗಳಮೇಲೆ ಆ ಸರ್ಕಾರದ ಸಹಾಯ ದೊರೆತಿರಬಹುದು. ಇನ್ನುಮುಂದೆಯೂ ಈ ಸಹಾಯ ದೊರೆಯಬೇಕಾದರೆ ಎಲ್ಲ ಪ್ರಾಂತಗಳ ಕನ್ನಡಿಗರೂ ಒಕ್ಕಟ್ಟಿನಿಂದ ಕೆಲಸಮಾಡಿದ ಹೊರತು ಸಾಗುವಂತಿಲ್ಲ. ಈ ೨೨ ವರ್ಷಗಳಲ್ಲಿ ಪರಿಷತ್ತು ಕನ್ನಡಕ್ಕೆ · ಎಷ್ಟು ಅಮೂಲ್ಯವಾದ ಪ್ರೋತ್ಸಾಹ ವಿತ್ತಿದೆಯೆಂಬ:ದನ್ನು ಆದಿಯಿಂದಲೂ ಪ್ರಕಟವಾಗುತ್ತಿರುವ 'ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ'ಯ ಸಂಚಿಕೆಗಳನ್ನು ಓದುವುದರಿಂದಲೂ ಪರಿಷತ್ತಿನ "ಹನ್ನೆರಡು ವರ್ಷದ

ಕಾರ್ಯಕಲಾಪ''ದ ವರದಿಯಿಂದಲೂ ತಿಳಿಯಬಹುದು. ಕನ್ನಡ ನಾಡಿನ ನಾನಾ ಭಾಗಗಳ ಕನ್ನಡ ಭಾಷಾಭಿಮಾನಿಗಳನ್ನು ಒಟ್ಟುಗೂಡಿಸಿ ಅವರಲ್ಲಿ ಭ್ರಾತೃಭಾವ ಹುಟ್ಟಿಸಿ ಕನ್ನಡ ಸಾಹಿತ್ಯವನ್ನು ಇಷ್ಟುಮಟ್ಟಿಗೆ ಮುಂದುವರಿಸಿದ ಕೀರ್ತಿ ಪರಿಷತ್ತಿಗೆ ಸಲ್ಲುವುದು. ೧೯೧೫ನೆಯ ಇಸವಿಯಲ್ಲಿ ಬೆಂಗಳೂರಲ್ಲಿ ನೆರೆದ ಮೊದಲ ಪರಿಷತ್ಸಮ್ಮೇಳನದ ವೈಭವವನ್ನು ನೋಡಿದವರು ಈ ಸಭೆಯಲ್ಲಿ ಕೆಲವರು; ಅಂದಿನ ಕನ್ನಡದ ಕಡುಗಲಿಗಳಲ್ಲಿ ಅನೇಕರು ಈಗ ಅದೃಶ್ಯರಾಗಿರುವರು; ಕೆಲ ಕನ್ನಡಕ್ಕಾಗಿ ಇನ್ನೂ ದುಡಿಯುತ್ತಿರುವರು. ಆದರೆ ಇಷ್ಟು ದೀರ್ಘಕಾಲಕ್ಕೂ ಪರಿಷತ್ತಿನ ಉದ್ದೇಶಗಳು ಇನ್ನೂ ನೆರವೇರದೆ ಇರುವುದು ನಮ್ಮ ದುರ್ದೈವ ಹೇಳಬೇಕು. ಮಹಾರಾಷ್ಟ್ರರಂತೆ ಕನ್ನಡಿಗರಲ್ಲಿ ಒಕ್ಕಟ್ಟಿಲ್ಲ: ನಮ್ಮ ನಾಡಿನ ಹೆಸರನ್ನು 'ಕರ್ಣಾಟಕ' ಎಂದು ಕೆಲವರೂ, 'ಕರ್ನಾಟಕ' ಎಂದು ಮತ್ತೆ ಕೆಲ ಹಠ ಹಿಡಿದು ಬರೆಯಲು ಸಾಧಿಸುತ್ತ ಬಂದು, ಒಂದು ಶಬ್ದಕ್ಕೆ ಏಕರೂಪತೆ ಕೊ ಕೂಡ ಒಪ್ಪದ ನಾವು ಒಕ್ಕಟ್ಟಾಗುವುದು ಹೇಗೆ?

ಕರ್ಣಾಟಕ ಸಾಹಿತ್ಯ ಪರಿಷತ್ತು ಮಾಡಬೇಕಾದ ಮುಖ್ಯ ಕಾರ್ಯ ಯಾವುವೆಂದೂ, ಅವು ಕಾರ್ಯರೂಪಕ್ಕೆ ಬರಬೇಕಾದರೆ ಏನು ಮಾಡಬೇಕೆಂ ೧೯೧೮ನೆಯ ಇಸವಿಯಲ್ಲಿ ಮೈಸೂರು ಅರ್ಥಸಾಧಕ ಸಮಾಜದ ಉಪಸಂಘ ಆಲೋಚಿಸಿ ಒಂದು ತೀರ್ಮಾನಕ್ಕೆ ಬಂದು ಆ ವಿಷಯಗಳನ್ನು ಕುರಿತು ಸಲಹೆ ಬರೆದುಕಳುಹಿಸುವಂತೆ ಕರ್ಣಾಟಕದ ಎಲ್ಲ ಪ್ರಾಂತಗಳವರಿಗೂ ಆಹ್ವಾನ ಎಲ್ಲ ಪ್ರಾಂತಗಳಿಂದಲೂ ಸಲಹೆಗಳೇನೊ ಬಂದುವು; ಆದರೆ ಕಾರ್ಯ! ನೋಡಿರಿ, ಇವೇ ಆ ವಿಷಯಗಳು :—

(೧) ಕನ್ನಡ ನಾಡಿನ ಬೇರೆ ಬೇರೆ ಭಾಗಗಳಲ್ಲಿರುವ ಭಾಷಾಭಿಜ್ಞರಲ್ಲಿ ಐಕಮತ್ಯವನ್ನೂ, ಪರಸ್ಪರ ಸೌಹಾರ್ದವನ್ನೂ ಹೆಚ್ಚಿಸುವುದಕ್ಕಾಗಿ ಉತ್ತಮೋತ್ತಮೋಪಾಯಗಳನ್ನು ನಿರ್ಧರಿಸುವುದು;

(೨) ಕನ್ನಡ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಪ್ರಚಾರದಲ್ಲಿರುವ ಗ್ರಾಂಥಿಕ ಭಾಷೆಯನ್ನು ಒಂದೇ ರೂಪಕ್ಕೆ ತರಲು ತಕ್ಕ ಮಾರ್ಗವನ್ನು ನಿಶ್ಚಯಿಸುವುದು;

(೩) ಕನ್ನಡವನ್ನೋದುವ ವಿದ್ಯಾರ್ಥಿಗಳಿಗೆ ಎಲ್ಲ ವಿದ್ಯಾಶಾಲೆಗಳಲ್ಲಿಯೂ ಪಾಠದ ಪುಸ್ತಕಗಳು ಒಂದೇ ಆಗಿರುವುದಕ್ಕೆ ಬೇಕಾದ ಪ್ರಯತ್ನ ಗಳನ್ನು ಮಾಡುವುದು;

(೪) ಕನ್ನಡವನ್ನಾಡುವ ಜನಸಾಮಾನ್ಯದಲ್ಲಿ ಲೋಕವ್ಯವಹಾರ ಜ್ಞಾನವು ಸುಲಭವಾಗಿ ಹರಡುವಂತೆ ತಕ್ಕ ಪುಸ್ತಕಗಳನ್ನು ಬರೆಯಿಸಿ ಪ್ರಕಟ ಮಾಡುವುದಕ್ಕೆ ಸಾಧಕವಾದ ಉತ್ತಮೋಪಾಯಗಳನ್ನು ನಿರ್ಣ ಯಿಸುವುದು;

(೫) ಕನ್ನಡದಲ್ಲಿ ಬರೆಯುವ ಭೌತಿಕಾದಿ ನಾನಾ ಶಾಸ್ತ್ರಗಳಲ್ಲಿ ಪ್ರಯೋಗಿಸ ಬೇಕಾದ ಪಾರಿಭಾಷಿಕ ಶಬ್ದಗಳನ್ನು ನಿರ್ಣಯಿಸುವುದಕ್ಕೆ ತಕ್ಕ ಉತ್ತಮೋಪಾಯಗಳನ್ನು ಪರಿಶೀಲಿಸುವುದು.

ಇವನ್ನು "ಸದುದ್ದೇಶ ಪಂಚಕ"ವೆಂದು ಒಬ್ಬ ಪಂಡಿತರು ಹೇಳಿರುತ್ತಾರೆ. ಈ ಉದ್ದೇಶಗಳಲ್ಲಿ ಒಂದಾದರೂ ಅವಶ್ಯಕವಲ್ಲದುದು ಉಂಟೆ? ಈ ೨೨ ವರ್ಷಗಳಲ್ಲಿ ಈ ಉದ್ದೇಶಗಳು ತಕ್ಕಮಟ್ಟಿಗಾದರೂ ಫಲವಾಗುವಂತೆ ನಾವೇನು ಮಾಡಿರುವೆವು?

ಪ್ರತಿ ಸಾಹಿತ್ಯ ಸಮ್ಮೇಳನದಲ್ಲಿಯೂ ಅನೇಕ ಠರಾವುಗಳನ್ನು ಏಕಕಂಠತೆಯಿಂದ ಹೊರಡಿಸುವೆವು. ಆದರೆ ಅವುಗಳ ವಿಷಯವಾಗಿ ನಮ್ಮಮೇಲಿರುವ ಜವಾಬ್ದಾರಿಯನ್ನು ಎಷ್ಟು ಮಟ್ಟಿಗೆ ಲಕ್ಷ್ಯಕ್ಕೆ ತಂದುಕೊಂಡಿರುವೆವು? ಉದಾಹರಣೆಗಾಗಿ, ಕೆಲವು ಗೊತ್ತುವಳಿಗಳನ್ನು ತೆಗೆದುಕೊಳ್ಳೋಣ:—

[೪/೧೪] ಕನ್ನಡ ಭಾಷೆಯಲ್ಲಿ ಪುಸ್ತಕಗಳನ್ನು ಪ್ರಕಟಮಾಡುವವರು ಒಂದು ಪ್ರತಿಯನ್ನು ಪರಿಷತ್ತಿಗೆ ಉಚಿತವಾಗಿ ಕೊಡಬೇಕು.

ಇದನ್ನು ಎಷ್ಟು ಮಂದಿ ಬರೆಹಗಾರರು ಲಕ್ಷ್ಯಕ್ಕೆ ತಂದುಕೊಂಡಿರುವರು?

[೪/೨, ೧೨/೩, ೧೪/೧೯, ೧೭/೮, ೧೯/೭, ೨೪] ಕರ್ಣಾಟಕ ಕ್ರಮಿಕ ಪುಸ್ತಕಗಳನ್ನು ಏಕರೂಪತೆಗೆ ತರುವುದು.

ಈ ಕಾರ್ಯವನ್ನು ನಡಸಲು ದೊಡ್ಡ ದೊಡ್ಡ ಭಾಷಾಪ್ರೇಮಿಗಳ ಮಂಡಲಿಗಳು ಏರ್ಪಟ್ಟುವು; ಆದರೆ ಕಾರ್ಯವೇನೂ ನಡೆಯಲಿಲ್ಲ.

[೪/೧೨, ೬/೧೭, ೧೯/೧೭] ಕನ್ನಡದಲ್ಲಿ ವಿಶ್ವಕೋಶ ರಚನೆ.

ಇಷ್ಟು ಭಾರಿ ಕೆಲಸವು ಹಣವಿಲ್ಲದೆ ನಡೆಯುವ ಬಗೆ ಹೇಗೆ?

[೧೯/೯] ಪಂಪಾ ಕ್ಷೇತ್ರ ಜೀರ್ಣೋದ್ಧಾರಕ ಸಭೆ.

[೬/೧೧] 'ಶ್ರೀ ಕೃಷ್ಣರಾಜ ವಾಣೀವಿಲಾಸ' ಭಾರತದ ಪುನರ್ಮುದ್ರಣ.

[೬/೧೭] ಕನ್ನಡ ಭಾಷೆಯ ಪ್ರಸಾರಕ್ಕೆ ದೊಡ್ಡದೊಂದು ಗ್ರಂಥಪ್ರಕಾಶ ಮಂಡಲಿ ಇರುವುದು ಅವಶ್ಯ. ಪುಸ್ತಕ ಪ್ರಕಟನೆಯೇ ಮುಖ್ಯೋದ್ದೇಶವುಳ್ಳ "ಜಾಯಿಂಟ್-ಸ್ಟಾಕ್ ಕಂಪೆನಿ" ಏರ್ಪಾಡಾಗಬೇಕು.

[೯/೭] ೧, ೨, ೩ನೆಯ ಇಯತ್ತೆಯ ಬಾಲಕರಿಗಾಗಿ ಅಧಿಕ ಪಾಠಗಳ ಪುಸ್ತಕಗಳನ್ನು ತೃಪ್ತಿಕರವಾಗಿ ಬರೆಯಿಸಬೇಕು.

[೧೪/೨೦] ಕರ್ಣಾಟಕಕ್ಕೆಲ್ಲ ಒಂದೇ ಬಾಲಬೋಧೆಯಾಗಬೇಕು.

ಬಾಲಬೋಧೆಯ ವಿಷಯವಾಗಿ ನನ್ನದೊಂದು ವಿಜ್ಞಾಪನೆ: ಆಡುವ ಭಾಷೆಯಲ್ಲಿ ಪ್ರಾಂತಪ್ರಾಂತಕ್ಕೂ ವ್ಯತ್ಯಾಸವಿರುವುದು ಸಹಜ. ಇದು ಎಲ್ಲ ದೇಶಗಳಲ್ಲೂ ಉಂಟು. ಬಾಲಕರು ಓದುವ ಪುಸ್ತಕಗಳಲ್ಲಿ ಅವರು ಮನೆಯಲ್ಲಾಡುವ ಮಾತುಗಳಿದ್ದರೆಯೇ ವಿಷಯ ಅವರ ಮನಸ್ಸಿಗೆ ಹತ್ತುವುದು. ಆದಕಾರಣ, ಮೊದಲೇ ಬಾಲಬೋಧೆಗೆ ಕೈಹಾಕದೆ ಭಾಷೆಯನ್ನು ಏಕರೂಪತೆಗೆ ತರುವ ಕಾರ್ಯವನ್ನು ಮೇಲಿನ ತರಗತಿಯ ಪುಸ್ತಕಗಳಮೇಲೆ ಮೊದಲು ನಡಸಬೇಕು. ಹೀಗೆ ಮಾಡಿದಲ್ಲಿ ಕನ್ನಡ ಭಾಷೆಯು ಎಂದಿಗಾದರೂ ಏಕರೂಪಕ್ಕೆ ಬಂದು ಕನ್ನಡಿಗರನ್ನು ಒಗ್ಗೂಡಿಸಲು ಸಾಧ್ಯವಾಗಬಹುದು.

ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ಪ್ರಚಾರದಲ್ಲಿರುವ ಇಂಗ್ಲಿಷ್ ಭಾಷೆಯನ್ನು ನೋಡಿರಿ. ಎಲ್ಲ ಪ್ರಾಂತಗಳಲ್ಲೂ, ಎಲ್ಲ ದೇಶಗಳಲ್ಲೂ ಪ್ರಕಟವಾಗುವ ಇಂಗ್ಲಿಷ್

ಗ್ರಂಥಗಳ ಭಾಷೆಯು ಒಂದೇ ಅಚ್ಚಿನಲ್ಲಿ ಎರಕ ಹೊಯ್ದಂತಿರುವುದು; ಅದರ ಭಾ
ಭಾಷೆಯಲ್ಲಿ ಪ್ರಾಂತ ಪ್ರಾಂತಕ್ಕೂ ವ್ಯತ್ಯಾಸಗಳು ಕಾಣಬರುವುವು. ಇಂಗ್ಲೆಂಡಿ
ಆಡುವ ಭಾಷೆಗೂ ಸ್ಕಾಟ್ಲೆಂಡಿನಲ್ಲಿ ಆಡುವ ಭಾಷೆಗೂ ಎಷ್ಟೋ ವ್ಯತ್ಯಾಸಗಳು

ಈ ಸಂದರ್ಭದಲ್ಲಿ, ಮುಂದೆ ಹೇಳುವ ಅಸಮಾಧಾನ ಆಕ್ಷೇಪಣೆಗಳ
ನೋಡಿರಿ:—

ಧಾರವಾಡ ಪ್ರಾಂತದ ಕೆಲವು ಗ್ರಂಥಗಳ ಭಾಷೆಯು "ಮೈಸೂರಿನ ಭಾ
ಹತ್ತಿರಹತ್ತಿರವಾಗಿ ಬರುತ್ತಿರುವುದು ನಮಗೆ ಸಂತೋಷಕರವಾದ ವಿಷ
ಎಂದು ಪರಿಷತ್ತಿನ ಗ್ರಂಥ ವಿಮರ್ಶಕಾರರು ಬರೆದರು. ಅದಕ್ಕೆ 'ಕರ್ಮವೀರ'
ಸಂಪಾದಕರು ರೇಗಿಬಿದ್ದು, "ಸಾ. ಪ. ಪತ್ರಿಕೆಯಲ್ಲಿ ಮೈಸೂರ ಪ್ರಾಂ
ಅಭಿಮಾನವು ಪ್ರಮಾಣ ಮೀರಿರುತ್ತದೆಂಬುದು ನಮ್ಮ ಮೊದಲನೆಯ ಆ
ಕರ್ನಾಟಕದ ಎಲ್ಲ ಭಾಗದೊಳಗಿನ ಕನ್ನಡಕ್ಕಿಂತಲೂ ಮೈಸೂರ ಕನ್ನಡವೇ ಶ್ರೇ
ತರದ್ದೆಂದು ಇದರ ಸಂಪಾದಕರ ಕಲ್ಪನೆಯಿದ್ದಂತೆ ತೋರುತ್ತದೆ. ಇದು ಕ
ಭಾಷೆಯ ಅಭಿವೃದ್ಧಿಯ ದೃಷ್ಟಿಯಿಂದ ಎಳ್ಳಷ್ಟೂ ಹಿತಕರವಲ್ಲವೆಂದು
ಪೂರ್ವಕವಾಗಿ ಅರಿಕೆಮಾಡಿಕೊಳ್ಳುತ್ತೇವೆ" ಎಂದು ಬರೆದಿರುತ್ತಾರೆ.

[೧೦/೩] ಕನ್ನಡ ನಾಡಿನ ಚರಿತ್ರೆ ಬರೆಯಿಸಬೇಕು.

[೧೩/೯, ೧೪/೩೩, ೧೬/೧೦] ಅಖಿಲ ಕರ್ಣಾಟಕಕ್ಕೆ ಒಂದು ವಿಶ್ವವಿದ್ಯಾನಿಲಯವಾಗ
ಬೇಕು.

[೧೫/೧೦, ೧೮/೧೨] ಹೊಸಗನ್ನಡ ವ್ಯಾಕರಣ ರಚನೆ.

[೧೬/೭] ಮುದ್ರಿತವಾದ ಪ್ರಾಚೀನ ಅರ್ವಾಚೀನ ಕನ್ನಡ ಪುಸ್ತಕಗಳೆಲ್ಲವೂ
ಒಂದು ಕಡೆ ಇರುವಂತೆ ಕರ್ಣಾಟಕ ಸಾಹಿತ್ಯ ಪರಿಷತ್ತಿನವರು ಒಂದು
ದೊಡ್ಡ ಪುಸ್ತಕಾಲಯವನ್ನು ಏರ್ಪಡಿಸಬೇಕು.

ಈ ವಿಷಯವನ್ನು ಇಷ್ಟು ವಿಸ್ತರಿಸಿ ಹೇಳುವುದಕ್ಕೆ ಕಾರಣ ತಿಳಿಸಬೇಕಾ
ನಾನು ಪರದೂಷಣೆಗಾಗಿ ಇದನ್ನು ಹೇಳಿದೆನೆಂದು ತಿಳಿಯಲಾಗದು. ಮೇಲೆ
ಕೆಲಸಗಳನ್ನು ಮಾಡುವ ಜವಾಬ್ದಾರಿ ಹೊತ್ತ ಕೆಲವು ಮಂಡಲಿಗಳಲ್ಲಿ ನಾನೂ
ಸದಸ್ಯನಾಗಿದ್ದೇನೆ. ಒಪ್ಪಿಕೊಂಡ ಕೆಲಸವನ್ನು ಮಾಡದೆ ನಿರ್ಲಕ್ಷ್ಯದಿಂದಿದ್ದರೆ ನಾ
ದೋಷಿಗಳಾಗುವುದಿಲ್ಲವೆ? ಅಖಿಲ ಕರ್ಣಾಟಕಕ್ಕೆ ಒಂದು ವಿಶ್ವವಿದ್ಯಾನಿಲಯ
ಈಗಿನ ಪರಿಸ್ಥಿತಿಯಲ್ಲಿ ಸಾಧ್ಯವಾಗಲಾರದೆಂದು ತೋರುತ್ತದೆ.

ಈ ಸಂದರ್ಭದಲ್ಲಿ ತಮಗೆ ಸಂತೋಷವನ್ನುಂಟುಮಾಡುವ ಒಂದು ಸ
ಯನ್ನು ಬಿನ್ನಯಿಸುತ್ತೇನೆ. ಪೋಸ್ಟಲ್ ಇಲಾಖೆಯ ಮೇಲಧಿಕಾರಿ
ಪೋಸ್ಟಾಫೀಸಿನ ಮನಿಯಾರ್ಡರು ನಮೂನೆ ಮೊದಲಾದ ಅನೇಕ ವಿಕೃತ ಕನ್ನ
ಭಾಷೆಯ ನಮೂನೆಗಳನ್ನು ತಿದ್ದಿ ಸರಿಪಡಿಸುವುದಕ್ಕಾಗಿ ಪರಿಷತ್ತಿಗೆ ಕಳುಹಿಸಿ
ಈ ಕೆಲಸವನ್ನು ಪರಿಷತ್ತು ಒಪ್ಪಿಕೊಂಡು ಮಾಡಿ ಕಳುಹಿಸಿತು. ಹಾಗೆ ತಿ
ಕನ್ನಡದ ನಮೂನೆಗಳನ್ನು ಪೋಸ್ಟಾಫೀಸಿನ ಅಧಿಕಾರಿಗಳು ಮುದ್ರಿಸಿದ್ದಾರೆ

ಮುಂಬಯಿ ಮತ್ತು ಮದ್ರಾಸು ಪ್ರಾಂತಗಳಲ್ಲಿ ಚಲಾವಣೆಯಲ್ಲಿರಬಹುದು. ಅಲ್ಲಿಂದೀಚೆಗೆ ಬಂದ ಪೋಸ್ಟಾಫೀಸಿನ ಸೇವಿಂಗ್ಸ್ ಬ್ಯಾಂಕ್ ನಿಬಂಧನೆಗಳ ಇಂಗ್ಲಿಷ್ ಪುಸ್ತಕವನ್ನು ಪರಿಷತ್ತಿನಲ್ಲಿ ಸುಲಭವಾದ ಬಳಕೆಯ ಕನ್ನಡಕ್ಕೆ ಪರಿವರ್ತನೆಮಾಡಿ ಹಿಂದಕ್ಕೆ ಕಳುಹಿಸಲಾಯಿತು. ಇದು ಮದ್ರಾಸಿನಲ್ಲಿ ಮುದ್ರಣವಾಗಿದೆ. ಪ್ರತಿಗಳು ಕನ್ನಡ ನಾಡಿನ ಪೋಸ್ಟಾಫೀಸುಗಳಲ್ಲಿ ದೊರೆಯುಬಹುದು.

ಕರ್ಣಾಟಕ ಸಾಹಿತ್ಯ ಪರಿಷತ್ತು ಏನೂ ಕೆಲಸಮಾಡಲಿಲ್ಲವೆಂದು ಆಗಾಗ್ಗೆ ದೂರು ಕೇಳುತ್ತೇವೆ. ನಾವೆಲ್ಲರೂ ಸೇರಿದುದೇ ಅಲ್ಲವೆ ಪರಿಷತ್ತು! ಕೆಲಸ ಮಾಡದೆ ನಮ್ಮನ್ನು ನಾವೇ ದೂರಿಕೊಂಡಲ್ಲಿ ಸಾರ್ಥಕವೇನು? ಯಾವ ಕೆಲಸಕ್ಕೂ ಹಣ ಬೇಕು. ಪರಿಷತ್ತು ಇಷ್ಟು ಮಟ್ಟಿಗೆ ಕೆಲಸಮಾಡುತ್ತಿರುವುದು ಮೈಸೂರು ಶ್ರೀಮನ್ಮಹಾರಾಜರ ಉದಾರಾಶ್ರಯದಿಂದ. ನಾವೆಲ್ಲರೂ ನಮ್ಮ ಯೋಗ್ಯತೆಗೆ ತಕ್ಕಂತೆ ಕಾಣಿಕೆ ಸಲ್ಲಿಸದಿದ್ದರೆ ಪರಿಷತ್ತಿನ ಕೆಲಸಗಳು ನಡೆಯುವುದೆಂತು? ಪರಿಷತ್ತಿನ ಸದಸ್ಯರ ಪಟ್ಟಿಯನ್ನು ನೋಡಿರಿ, ಎಷ್ಟು ಪುಟ್ಟದಾಗಿದೆ!

ಕನ್ನಡಿಗರಿಗೆ ತಮ್ಮ ಭಾಷೆಯಲ್ಲಿ ಅಭಿಮಾನ ಹುಟ್ಟಿಸಿ ಭಾಷಾಭಿವೃದ್ಧಿಮಾಡಲು ಪರಿಷತ್ತು ಹೊಸ ಮಾರ್ಗಗಳನ್ನು ಹುಡುಕುತ್ತಿದೆ: ಈಗ ನಾಲ್ಕು ವರ್ಷಗಳಿಂದಲೂ ಬಹಳ ವಿಜೃಂಭಣೆಯಿಂದ ನಡೆಯುತ್ತಿರುವ ವಿಶೇಷ ಸಾಹಿತ್ಯೋತ್ಸವಗಳಿಂದ, ಕನ್ನಡ ಭಾಷಣಮಾಡಲು ಬಾರದೆಂದು ಇಂಗ್ಲಿಷಿನಲ್ಲೇ ಭಾಷಣಮಾಡುತ್ತಿದ್ದ ಅನೇಕ ಮಂದಿ ಪ್ರಮುಖ ಕನ್ನಡಿಗರನ್ನು ಕನ್ನಡದಲ್ಲಿ ಮಾತನಾಡುವಂತೆ ತಯಾರಿಸಿದೆ. ವಿಜ್ಞಾನ ವಿಷಯಗಳನ್ನೂ ಇತರ ಆಧುನಿಕ ವಿಚಾರಗಳನ್ನೂ ಆಯಾ ಭಾಗದಲ್ಲಿ ಇಂಗ್ಲಿಷ್ ಶಿಕ್ಷಣ ಹೊಂದಿ ಪಾಂಡಿತ್ಯ ಪಡೆದ ಕನ್ನಡಿಗರು ಜನಸಾಮಾನ್ಯಕ್ಕೆ ಅರ್ಥವಾಗುವಂತೆ ಕನ್ನಡದಲ್ಲಿಯೇ ಹೇಳುತ್ತಿರುವರು. ಇದೇನೂ ಆಶ್ಚರ್ಯವಲ್ಲ; ಏಕೆಂದರೆ, ಈ ಕೆಲಸಕ್ಕಾಗಿಯೇ ಟೊಂಕ ಕಟ್ಟಿ ನಿಂತಿರುವ ಇಬ್ಬರು ಮುಖಂಡರಿರುತ್ತಾರೆ. ಅಂಥವರು ಹಠ ಹಿಡಿದಲ್ಲಿ ಯಾವುದು ತಾನೆ ಅಸಾಧ್ಯವಾದೀತು?

**ಕನ್ನಡ ಪ್ರವಾಹವು ಬಿರುಸಾಗಿ ಹರಿಯಲು ಆರಂಭಿಸಿದೆ.**—ಕನ್ನಡ ನಾಡಿನಲ್ಲಿ ಕರ್ಣಾಟಕ ಸಂಘಗಳು ದಿನೇ ದಿನೇ ಹೆಚ್ಚು ಹೆಚ್ಚಾಗಿ ಸ್ಥಾಪನೆಯಾಗುತ್ತಿವೆ; ಇಷ್ಟೇ ಅಲ್ಲ, ಈ ಪ್ರವಾಹವು ಇತರ ಪ್ರಾಂತಗಳಿಗೂ ಹರಿಯಲು ಆರಂಭಿಸಿದೆ. ಇದು ಕನ್ನಡದ ಏಳಿಗೆಗೆ ಶುಭ ಸೂಚನೆ. ಸಂಘಗಳು ಬಹಳ ಹುರುಪಿನಿಂದ ಕೆಲಸಮಾಡುತ್ತಿವೆ. ಇದಕ್ಕೆ ತಕ್ಕ ಚಾಲಕರು ದೊರೆತಿರುವರು. ಆದರೆ ಅವರಿಗೆ ತಕ್ಕಷ್ಟು ಬೆಂಬಲವಿಲ್ಲ. ಕನ್ನಡ ಭಾಷಾಭಿಮಾನಿಗಳೆಲ್ಲರೂ ಆ ಮಹನೀಯರುಗಳಿಗೆ ಬೆಂಬಲವಾಗಿ ನಿಂತು ಈ ತೊರೆಯು ಜೀವನದಿಯಾಗೇರ್ಪಡುವಂತೆಯೂ ಕರ್ಣಾಟಕ ಕ್ಷೇತ್ರವು ಹಿಂದಿನಂತೆಯೇ ವಾಙ್ಮಯಾದಿ ಪುಷ್ಪ ಫಲ ಸಮೃದ್ಧವಾಗುವಂತೆಯೂ ಸಹಾಯ ಮಾಡಬೇಕೆಂದು ಬೇಡಿಕೊಳ್ಳುತ್ತೇನೆ.

**ಗ್ರಂಥ ರಚನೆ ಮತ್ತು ಪತ್ರಿಕಾ ಪ್ರಕಟನೆ.**—ಕನ್ನಡ ನಾಡಿನಲ್ಲಿ ಗ್ರಂಥ ರಚನೆಯ ಕಾರ್ಯವು ಹೆಚ್ಚು ಹೆಚ್ಚಾಗಿ ನಡೆಯುತ್ತಿದೆ. ಕರ್ಣಾಟಕ ಸಾಹಿತ್ಯ

ಪರಿಷತ್ತಿನ ಗ್ರಂಥ ಪ್ರದರ್ಶನಕ್ಕಾಗಿ ಎಲ್ಲ ಕನ್ನಡ ಪ್ರಾಂತಗಳಿಂದಲೂ ಬಂದ ಪುಸ್ತ ಗಳಲ್ಲಿ, ೧೯೧೫ನೆಯ ಇಸವಿಯಿಂದ ೧೯೩೪ನೆಯ ಇಸವಿಯ ವರೆಗಿನ ೧೯ ವರ್ಷಗಳಲ್ಲಿ ೨,೩೮೭ ಗ್ರಂಥಗಳಾದರೂ ಪ್ರಕಟವಾಗಿರುವಂತೆ ತಿಳಿಯಬರುತ್ತದೆ. ಪ್ರದರ್ಶನಕ್ಕೆ ಬಾರದಿರುವ ಅನೇಕ ಪುಸ್ತಕಗಳಿರಬಹುದು. ಪ್ರತಿ ವರ್ಷವೂ ಸರಾಸರಿ ೧೩೦ ಕನ್ನ ಗ್ರಂಥಗಳು ಪ್ರಕಟವಾದಂತಾಯಿತು. ೧೯೩೫ನೆಯ ವರ್ಷದ ಲೆಕ್ಕದಿಂದ, ೧೯೩ ಕನ್ನ ಪ್ರಕಟವಾದ ೧೭೩ ಗ್ರಂಥಗಳು ಪ್ರದರ್ಶನಕ್ಕೆ ಬಂದಿವೆ. ಇವುಗಳಲ್ಲಿ ಎಷ್ಟು ಗ್ರಂಥಗಳು ಜಳ್ಳೊ ಎಷ್ಟು ಗಟ್ಟಿಯೊ ಎಂಬ ವಿಚಾರ ಬೇರೆ. ಇವುಗಳಲ್ಲಿ ಅನೇ ಗ್ರಂಥಗಳ ವೇಷ ಭೂಷಣಗಳು ನಮ್ಮ ದರಿದ್ರಾವಸ್ಥೆಯನ್ನು ಬಿಚ್ಚಿ ತೋರಿಸುತ್ತ ಇದನ್ನು ಪರಿಹರಿಸಿ ನಾವೂ ನಮ್ಮ ದೇಶದ ಇತರ ಭಾಷಾ ಬಂಧುಗಳೊ ಹೆಮ್ಮೆಯಿಂದ ನಡೆಯುವುದಕ್ಕೆ ತಕ್ಕಷ್ಟು ಪ್ರಯತ್ನ ಮಾಡಬೇಡವೆ?

ಡಿವಾನ್ ಬಹಾದ್ದೂರ್ ಶ್ರೀಮಾನ್ ಎಸ್. ಟಿ. ಕಂಬಳಿಯವರು ಮುಂ ಸಮ್ಮೇಳನದ ತಮ್ಮ ಭಾಷಣದಲ್ಲಿ ಕೊಟ್ಟಿರುವ ಲೆಕ್ಕದಿಂದ, ಮುಂಬಯಿ ಇಲಾ ಯಲ್ಲಿಯೇ ೧೯೩೨ ರಿಂದ ೧೯೩೪ರ ವರೆಗೆ ಒಟ್ಟು ೩೭೫ ಕನ್ನಡ ಗ್ರಂಥ ಪ್ರಕಟವಾದಂತೆ ತಿಳಿಯಬರುತ್ತದೆ. ಇದೇ ಕಾಲದಲ್ಲಿ, ಗುಜರಾತಿ ಭಾಷೆ ೧,೮೩೦ ಗ್ರಂಥಗಳೂ, ಮರಾಠಿಯಲ್ಲಿ ೧,೯೬೩ ಗ್ರಂಥಗಳೂ ಪ್ರಕಟವಾಗಿವೆಯಂ ಮುಂಬಯಿ ಇಲಾಖೆಯಲ್ಲಿ ಕನ್ನಡ ದೈನಂದಿನ ಪತ್ರಿಕೆಗಳು ೪, ವಾರ ಪತ್ರಿ ಪಕ್ಷಪತ್ರಿಕೆಗಳು ೧೬, ಮಾಸ ಪತ್ರಿಕೆಗಳು ೨೦ ಇರುವುವಂತೆ. ಗುಜರಾ ಯಲ್ಲಿ ಈ ಸಂಖ್ಯೆಗಳು ೧೯, ೯೬, ೧೯೫; ಮರಾಠಿಯಲ್ಲಿ ೨೩, ೮೪, ೧ ಈ ಅಂಕಿಗಳಿಂದ ಗುಜರಾತಿ ಮರಾಟಿ ಭಾಷೆಗಳು ಕನ್ನಡದ ಆರರಷ್ಟು ಮುಂದುವರಿದಿರುವಂತೆ ತೋರುವುದಿಲ್ಲವೆ!

ಪರಿಷತ್ತಿನ ಗ್ರಂಥ ಪ್ರದರ್ಶನಕ್ಕೆ ೧೯೩೫ರಲ್ಲಿ ಬಂದ ೧೭೩ ಪುಸ್ತಕಗಳಲ್ಲಿ

| | | | | | |
|---|---|---|---|---|---|
| ಪದ್ಯ ಕಾವ್ಯಗಳು | .. | ೨೪ | ಕಾದಂಬರಿ | .. | ೧ |
| ಮತಾಚಾರ, ಧರ್ಮ | .. | ೨೩ | ಸಮಾಜ ವಿಜ್ಞಾನ | .. | ೧ |
| ಜೀವನ ಚರಿತ್ರೆ | .. | ೧೭ | ಸಣ್ಣ ಕಥೆ | .. | |
| ಸಾಹಿತ್ಯ ಪ್ರಬಂಧ, ವಿಮರ್ಶೆ | | ೧೫ | ಶಾಲಾ ಪುಸ್ತಕ | .. | |
| ನಾಟಕ | .. | ೧೪ | ಪ್ರಕೃತಿ ವಿಜ್ಞಾನ | .. | |

ಪದ್ಯ ಕಾವ್ಯಗಳು ಹೆಚ್ಚಾಗಿ ಬರಬೇಕಾದುದು ನಮಗೆ ಹೊಟ್ಟೆ ತುಂಬಿರುವಾ ಹಸಿದಿರುವಾಗಲ್ಲ. ಸಾಹಿತ್ಯಕ್ಷೇತ್ರದಲ್ಲಿ ಹೆಚ್ಚು ಪ್ರವೇಶವಿಲ್ಲದವರೂ ಕವನಕಟ್ಟ ಹೊರಟಿದ್ದಾರೆ. ಬಹುಶಃ ಇದನ್ನು ಅರಿತೇ ನಮ್ಮ ಪೂರ್ವಿಕರು ಸಾಹಿ ಈ ಪ್ರದೇಶಕ್ಕೆ ಸಾಮಾನ್ಯರು ಹಾರಲಾಗದ ಬೇಲಿ ಹಾಕಿದ್ದು! ಇಂತಹ ಬೇ ಇರಬಾರದೆಂದು ಆಧುನಿಕ ಕನ್ನಡ ಪಂಡಿತರು ಕೂಡ ಅದನ್ನು ಕಿತ್ತುಹಾಕುತ್ತಿದ್ದಾ ಇದು ದೇಶಕ್ಕೆ ಉಪಕಾರವೆಂದು ನಾನು ಎಣಿಸುವುದಿಲ್ಲ. 'ಹುಟ್ಟಿನಿಂ ಕವಿಯಾಗಬೇಕೆ ಹೊರತು ಕಟ್ಟಿನಿಂದಲ್ಲ' ಎಂಬ ನಾಣ್ಣುಡಿಯು ಪಾಶ್ಚಾತ್ಯರಲ್ಲಿ

ನಮ್ಮಲ್ಲಿಯೂ, ರೂಢಿಯಲ್ಲಿಲ್ಲವೆ? ಕನ್ನಡ ಗ್ರಂಥಗಳನ್ನು ಕೊಳ್ಳುವಷ್ಟು ಹಸಿದಿರುವವರಾಗಲಿ, ಭಾಷಾ ಪ್ರೇಮಿಗಳಾಗಲಿ ಸಾಕಾದಷ್ಟು ಮಂದಿ ನಮ್ಮಲ್ಲಿ ಇನ್ನೂ ಹುಟ್ಟಿಲ್ಲ. ಬರೆಯುವವರನೇಕರು ತಮ್ಮ ಆತ್ಮತೃಪ್ತಿಗಾಗಿಯೇ ಬರೆಯುತ್ತಿರುವರು. ಇಂಥವರು ಸಾಮಾನ್ಯವಾಗಿ ಬಡವರೇ ಆದುದರಿಂದ ಗ್ರಂಥದ ವೇಷ ಭೂಷಣಗಳಿಗೆ ಹೆಚ್ಚು ಗಮನ ಕೊಡಲಾರರು. ಆದಕಾರಣ ಮುದ್ರಣದ ತಪ್ಪುಗಳೂ ವಿಕಾರ ಮುದ್ರಣವೂ ಕೈಲಾಸ ಪಾವಡದಂತಹ ಕಾಗದವೂ ನಮ್ಮ ಸರಸ್ವತಿಯನ್ನು ಅಂದಗೆಡಿಸುತ್ತಿವೆ. ಹೀಗೆ ಹೇಳಿದ ಮಾತ್ರಕ್ಕೆ ಎಲ್ಲ ಪುಸ್ತಕಗಳೂ ಇದೇ ಮಾದರಿಯವೆಂದು ನಾನು ಹೇಳಿದಂತೆ ತಾವು ಗ್ರಹಿಸಬಾರದು. ಬಹು ಕಾಲದಿಂದಲೂ ಕೆಲವು ಮಂದಿ ಉಭಯಭಾಷಾ ಅಥವಾ ತ್ರಿಭಾಷಾ ಪಂಡಿತರು ತಾವು ರಚಿಸಿ ಪ್ರಕಟಿಸುವ ಗ್ರಂಥಗಳನ್ನು ಎಲ್ಲ ವಿಷಯಗಳಲ್ಲೂ ಪಾಶ್ಚಾತ್ಯ ಪುಸ್ತಕಗಳ ಮಟ್ಟಕ್ಕೆ ಏರಿಸಲು ಪ್ರಯತ್ನಿಸಿ ಜಯಶೀಲರಾಗಿದ್ದಾರೆ. ಇಂತಹ ಕಲಾಭಿಮಾನಿ ಪಂಡಿತರ ಸಂಖ್ಯೆಯು ದಿನೇ ದಿನೇ ಹೆಚ್ಚುತ್ತಿದೆ. ಅಂತಹ ಪುಸ್ತಕಗಳಿಗೂ ಗಿರಾಕಿಯಿಲ್ಲ. ಸರ್ಕಾರದವರು ದಯವಿಟ್ಟು ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕವನ್ನಾಗಿ ಮಾಡಿದ ಹೊರತು ಯಾವ ಪುಸ್ತಕಕ್ಕೂ ಮನ್ನಣೆ ದೊರೆಯದು. ಕರ್ಣಾಟಕ ಸಾಹಿತ್ಯ ಪರಿಷತ್ತಿನಲ್ಲಿ ಪ್ರಕಟವಾದ ಕನ್ನಡ ಗ್ರಂಥಗಳ ಗತಿಯೂ, ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಿಸುತ್ತಿರುವ ಕನ್ನಡ ಗ್ರಂಥಗಳ ಗತಿಯೂ ಇದೇ ರೀತಿಯೇ. ನಾವು ಸಹಕಾರತತ್ತ್ವವನ್ನನುಸರಿಸಿ ಆ ಮೇರೆಗೆ ನ್ಯಾಯವಾಗಿ ನಡೆಯುತ್ತಬಂದ ಹೊರತು ನಮ್ಮ ಪ್ರಕಟನೆಗಳಿಗೆ ಬೆಲೆಯೇರದು. ಪ್ರತಿಯೊಬ್ಬರೂ ತಾವಾಗಿಯೇ ಸ್ವತಂತ್ರವಾಗಿ ಗ್ರಂಥ ಪ್ರಕಟನ ಮಾಡುವುದಕ್ಕೆ ಬದಲಾಗಿ ೪-೫ ಮಂದಿ ಒಟ್ಟುಗೂಡಿ ಸಹಕರಿಸಿ ಈ ಕೆಲಸವನ್ನು ಕೈಕೊಂಡರೆ ನಮ್ಮ ಭಾಷೆಗೆ ನಾನಾ ವಿಧಗಳಲ್ಲಿ ಸಹಾಯವಾದೀತು. ಇಂಗ್ಲಿಷಿನಲ್ಲಿ ನೋಡಿರಿ, ಎಲ್ಲ ದರ್ಜೆಯವರಿಗೂ ಹೊಂದುವ, ನಾನಾ ವಿಷಯಗಳ ಮೇಲೆ ಬರೆದ, ಪುಟ್ಟ, ಸಣ್ಣ, ದೊಡ್ಡ, ಪುಸ್ತಕ ಶ್ರೇಣಿಗಳು ಎಷ್ಟಿರುವುವು! ನಾವು ನಮ್ಮ ಬಾಲಕರಿಗಾದರೂ ಅಂದವಾಗಿ ಮುದ್ರಿಸಿ ಸಲಕ್ಷಣವಾದ ಚಿತ್ರಗಳನ್ನು ಹಾಕಿದ ಅಂಥ ಪುಸ್ತಕ ಶ್ರೇಣಿಯನ್ನು ಒದಗಿಸಿಕೊಡುವುದು ನಮ್ಮ ಕರ್ತವ್ಯವಲ್ಲವೆ? ಹಿಂದೆ ಇಂಗ್ಲಿಷಿನಲ್ಲಿ 'ಸ್ಟೆಡ್' ಎಂಬ ಹೆಸರಿನ ದೊಡ್ಡ ಪತ್ರಿಕಾಕರ್ತ ಮಹಾಶಯನು 'Books for the Bairns' (ಮಕ್ಕಳಿಗೆ ಪುಸ್ತಕಗಳು) ಎಂಬ ಹೆಸರಿನಿಂದ ಅಂದವಾದ ಚಿತ್ರಗಳಿಂದಲೂ, ಮುದ್ರಣದಿಂದಲೂ ಕೂಡಿದ ಸಣ್ಣ ಸಣ್ಣ ಪುಸ್ತಕ ಶ್ರೇಣಿಯನ್ನು ಹೊರಡಿಸಿ ಇಂಗ್ಲಿಷನ್ನೋದುವ ಬಾಲಕ ಬಾಲಿಕೆಯರಿಗೆ ಮಹೋಪಕಾರ ಮಾಡಿದನು. ಈ ಶ್ರೇಣಿಯಲ್ಲಿ ನಾನಾ ತೆರದ ಸಾಹಿತ್ಯ, ಹಾಸ್ಯ, ಶಾಸ್ತ್ರ ಮೊದಲಾದ ವಿಷಯಗಳ ಮೇಲೆ ಅತಿ ಸುಲಭ ಶೈಲಿಯಲ್ಲಿ ಮನಸ್ಸಿಗೆ ಹಿಡಿಯುವಂತೆ ಬರೆದ ನೂರಾರು ಪುಸ್ತಕಗಳಿದ್ದುವು. ಇಂಗ್ಲಿಷಿನಲ್ಲಿ ಸಣ್ಣ ಪುಸ್ತಕಗಳನ್ನಾದರೂ ದೊಡ್ಡ ಪಂಡಿತರೇ ಬರೆಯುವುದು. ಆದರಿಂದ, ವಿಷಯ ಸುಲಭವಾಗಿ ನಾಟುವ ವಯಸ್ಸಿನಲ್ಲಿ ತಪ್ಪುತಿಳಿವಳಿಕೆ ಹುಟ್ಟದಂತಾಗಿ, ಸರಿಯಾದ ಜ್ಞಾನಕ್ಕೆ ಹಾದಿಮಾಡಿದಂತಾಗುವುದು. ಈ ವಿಷಯವನ್ನು ನಾವೆಲ್ಲರೂ ಚೆನ್ನಾಗಿ ಗಮನಿಸಬೇಕು. ಹಿಂದೆ ನನ್ನ ಪ್ರಿಯ ಮಿತ್ರರೊಬ್ಬರು,

ಮೂರು ಭಾಷೆಗಳಲ್ಲಿ ದೊಡ್ಡ ಪಂಡಿತರು, ದೇಶಾಭಿಮಾನಿಗಳು, ಭಾಷಾಭಿಮಾನಿಗಳು, ಕೇವಲ ದಕ್ಷರು: ಇವರು ಮೇಲೆ ಹೇಳಿದ ಪುಸ್ತಕ ಶ್ರೇಣಿಯಂತೆ ಕನ್ನಡದಲ್ಲಿಯೂ ಒಂದು ಶ್ರೇಣಿಯನ್ನು ಹೊರಡಿಸಬೇಕೆಂದು ದೊಡ್ಡ ಪ್ರಯತ್ನ ಮಾಡಿದರು. ಈ ಪ್ರಯತ್ನವು ಫಲಕಾರಿಯಾಗಿದ್ದಲ್ಲಿ ಇದುವರೆಗೆ ಕನ್ನಡ ಮಾತೆಯು ವೇಷ ಬದಲಾಗಿ ಹೋಗುತ್ತಿತ್ತು. ನಮ್ಮ ದುರ್ದೈವ, ಮಾಡುವುದೇನು!

ಈ ಸಂದರ್ಭದಲ್ಲಿ ನಾನು ಗ್ರಂಥಕರ್ತರನ್ನು ಮೊರೆಯಿಟ್ಟು ಬೇಡಿಕೊಳ್ಳುವುದು: ನಮ್ಮ ಇತಿಹಾಸ ಪುರಾಣಗಳನ್ನು ತಿದ್ದಲು ಹೊರಡಬೇಡಿರಿ. ಅವುಗಳಲ್ಲಿ ಅತ್ಯುಕ್ತಿಗಳಿರಬಹುದು, ತಪ್ಪುಗಳಿರಬಹುದು, ಅವಿವೇಕಗಳಿರಬಹುದು; ಆದರೂ ಅವು ನಮ್ಮ ಸಂಸ್ಕೃತಿಗೆ ಕಾರಣವಾದವು; ನನ್ನಂಥವರಿಗೆ ಪವಿತ್ರವಾದವು. ತಿದ್ದು ವುದರಿಂದ ಕೆಲವರ ಮನಸ್ಸಿಗೆ ಎಷ್ಟು ನೋವುಂಟಾಗುವುದೆಂಬುದನ್ನು ಅವರು ಅರಿಯರು. ನನ್ನ ಮಿತ್ರರೊಬ್ಬರು ಒಂದು ದೊಡ್ಡ ಗದ್ಯಗ್ರಂಥವನ್ನು ಸುಂದರ ವಾಗಿಯೂ ಸರಳವಾಗಿಯೂ ಇರುವ ಭಾಷೆಯಲ್ಲಿ ಬರೆದು ಪುಸ್ತಕಕ್ಕೆ ಆಧಾರ ರೂಪನ್ನು ಕೊಟ್ಟಿರುತ್ತಾರೆ. ಅದರಲ್ಲಿ, ನನ್ನಂಥವರಿಗೆ ಪೂಜ್ಯಭಾವನೆಯುಳ್ಳ ಪೂಜ್ಯ ವ್ಯಕ್ತಿಯೊಂದನ್ನು ಕೆಸರಿನಲ್ಲಿ ಹಾಕಿ ತುಳಿದು ಅಲ್ಲಿಂದ ಮರಳಿ ಎಬ್ಬಿಸಿ ಶುದ್ಧಿಮಾಡ ಯತ್ನಿಸಿದ್ದಾರೆ. ಈ ಅಪಚಾರವನ್ನು ನಾನು ಎಂದಿಗೂ ಮರೆಯಲಾರೆ. ಈ ಪುಸ್ತಕದ ಮಾತೃಕೆಯು ಮಹಾರಾಷ್ಟ್ರದೆಂದು ತಿಳಿಯಬರುತ್ತದೆ.

ಪತ್ರಿಕಾಕರ್ತರಲ್ಲಿ ಒಂದು ವಿನಯಪೂರ್ವಕವಾದ ವಿಜ್ಞಾಪನೆ: ಗ್ರಂಥಪರೀಕ್ಷೆ ಮಾಡುವಾಗ, ಆ ಗ್ರಂಥವನ್ನು ನೀವೇ ಬರೆದಿದ್ದಲ್ಲಿ ಇತರರು ಅದನ್ನು ಯಾವ ವಿಮರ್ಶೆ ಮಾಡಬೇಕೆಂಬ ಅಭಿಪ್ರಾಯ ನಿಮ್ಮಲ್ಲಿ ಸ್ವಾಭಾವಿಕವಾಗಿರುತ್ತದೆಯೋ ಆ ಮಾರ್ಗವನ್ನೇ ಹಿಡಿಯಿರಿ; ಬಡ ಗ್ರಂಥಕರ್ತರನ್ನು ನೋಯಿಸಬೇಡಿರಿ. ದೋಷಗಳನ್ನು ತೂಕಮಾಡಿ, ಮಿತಿಮೀರಿ ಹೊಗಳದೆಯೂ, ಮಿತಿಮೀರಿ ಖಂಡಿಸದೆಯೂ ಋಜುಮಾರ್ಗವನ್ನನುಸರಿಸಿರಿ. ಬರಿ ತಪ್ಪುಗಳನ್ನು ಮಾತ್ರ ಎತ್ತಿ ತೋರಿಸಿ ಒಪ್ಪವಾದವುಗಳನ್ನು ಹೇಳದೆಯೇ ಬಿಡುವುದು ನ್ಯಾಯವಲ್ಲ. ನಿಮ್ಮ ವಿಮರ್ಶನ ಲೇಖನದ ಪ್ರಮಾಣವು ಗ್ರಂಥದ ಪ್ರಮಾಣವನ್ನೂ, ಅದರ ಯೋಗ್ಯತೆಯನ್ನೂ ಅನುಸರಿಸಿ ಮಿತಿ ಮೀರದಿರಲಿ. ಮುಖ್ಯವಾಗಿ, ಕಷ್ಟಪಟ್ಟು ಬರೆದವನ ಮನಸ್ಸನ್ನು ನೋಯಿಸಬೇಡಿರಿ. ಕನ್ನಡ ಪತ್ರಿಕಾಕರ್ತರೆ! ನಿಮ್ಮಲ್ಲಿಯೂ ಅನೇಕರು ನಿಮಗಾಗುತ್ತಿರುವ ಕಷ್ಟನಷ್ಟಗಳನ್ನು ಲಕ್ಷ್ಯಮಾಡದೆ ದೇಶಸೇವೆಗಾಗಿಯೋ ಆತ್ಮ ತೃಪ್ತಿಗಾಗಿಯೊ ಪತ್ರಿಕೆಯನ್ನು ನಡಸುತ್ತಿರುವಿರಿ ಎಂದು ನಂಬುತ್ತೇನೆ. ಆದರೆ ಪತ್ರಿಕೆಗಳ ಮುದ್ರಣಾದಿಗಳು ಅಂದವಾಗಿಲ್ಲ, ಭಾಷೆಯು ವಿಕಾರ. ಪತ್ರಿಕೆಗಳ ತಕ್ಕಮಟ್ಟಿಗಾದರೂ ಕಡಮೆಮಾಡಿರಿ. ಒಂದೇ ಊರಿನಲ್ಲಿರುವ ಪತ್ರಿಕಾಕರ್ತ ರಾದರೂ ಸಹಕರಿಸಿ ೩-೪ ಪತ್ರಿಕೆಗಳಿಗೆ ಬದಲಾಗಿ ಸಲಕ್ಷಣವಾದ ಒಂದೇ ಪತ್ರಿಕೆ ಯನ್ನು ಹೊರಡಿಸುವುದು ಉತ್ತಮವಲ್ಲವೆ! ಇದು ಸುಲಭಸಾಧ್ಯವೋ ಅಲ್ಲವೋ ಎಂಬುದು ನನಗೆ ತಿಳಿಯದು; ಆದರೂ ಪ್ರಯತ್ನಮಾಡುವುದು ಅವಶ್ಯಕ.

**ವಿಜ್ಞಾನ ಮೊದಲಾದ ಆಧುನಿಕ ಶಾಸ್ತ್ರಗ್ರಂಥಗಳು.**—ನಾವು ಈಗ ಭರತಖಂಡದ ಪ್ರಜೆಗಳು ಮಾತ್ರವೇ ಅಲ್ಲ, ಇಡೀ ಭೂಭಾಗದ ಪ್ರಜೆಗಳು. ಹೀಗಿರುವಲ್ಲಿ, ಪಾಶ್ಚಾತ್ಯ ದೇಶಗಳಲ್ಲಿ ಶಾಖೋಪಶಾಖೆಗಳಾಗಿ ಹಬ್ಬಿರುವ ವಿಜ್ಞಾನದ ಕಡೆಗೆ ನಾವು ಲಕ್ಷ್ಯಕೊಡದಿದ್ದರೆ ನಮಗೆ ಉಳಿಗಾಲವೆಲ್ಲಿಯದು! ನಮ್ಮ ದೇಶವನ್ನು ಕೈಗಾರಿಕೆಗಳ ರಂಗವನ್ನಾಗಿ ಮಾಡಬೇಕೆನ್ನುತ್ತೇವೆ; ಆದರೆ ಅದಕ್ಕೆ ಬೇಕಾದ ವಿಜ್ಞಾನದ ಸುಲಭ ಸೂತ್ರಗಳನ್ನೂ ಅರಿಯದ ನಮಗೆ ಅದು ಹೇಗೆ ಸಿದ್ಧಿಸೀತು? ನಮ್ಮಲ್ಲಿ ಸರ್ ಸಿ. ವಿ. ರಾಮನ್, ಸರ್ ಜಗದೀಶಚಂದ್ರ ಬೋಸ್, ಆಚಾರ್ಯ ಸರ್ ಪಿ. ಸಿ. ರೇ ಮೊದಲಾದ ಕೆಲವು ಮಂದಿ ಪ್ರಸಿದ್ಧ ವೈಜ್ಞಾನಿಕರಿರಬಹುದು. ಇಂಡಿಯಾದಂತಹ ಭೂಖಂಡಲ್ಲಿ ಅಂತಹವರು ನೂರಾರು ಮಂದಿ ಇರಬೇಕಲ್ಲವೆ! ನಮ್ಮ ನೆಲವೂ ಸನ್ನಿವೇಶಗಳೂ ವಿಜ್ಞಾನ ವೃಕ್ಷದ ಬೆಳವಣಿಗೆಗೆ ಹೊಂದುವಂತಿಲ್ಲ. ಈಗ ೨೦ ವರ್ಷಗಳ ಹಿಂದೆ ಬೆಂಗಳೂರಿನಲ್ಲಿ 'ಕರ್ಣಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ' ಎಂಬ ವಿಜ್ಞಾನ ಪಂಡಿತ ಮಂಡಲಿ ಏರ್ಪಟ್ಟು, ಸುಲಭವಾದ ಕನ್ನಡ ಭಾಷೆಯಲ್ಲಿ ಬರೆದ, ಅಂದವಾದ ಹೊರ ರೂಪನ್ನು ಕೊಟ್ಟ, ಸಲಕ್ಷಣವಾದ ಚಿತ್ರಗಳನ್ನು ಹಾಕಿ ರಚಿಸಿದ 'ವಿಜ್ಞಾನ' ವೆಂಬ ಮಾಸಪತ್ರಿಕೆಯೊಂದನ್ನು ಪ್ರಕಟಿಸಿತು. ಅದನ್ನು ಜನರು ಪುರಸ್ಕರಿಸದೆ ಹೋದುದಂತಿರಲಿ; ಆಗ ಮೈಸೂರು ವಿದ್ಯಾಖಾತೆಯ ಅಧ್ಯಕ್ಷರಾಗಿದ್ದ ಸುಪ್ರಸಿದ್ಧರೂ, ಉದ್ದಾಮ ಪಂಡಿತರೂ, ಸಾಹಿತ್ಯ ಚರಿತ್ರಾದಿ ವಿದ್ಯಾ ಪಕ್ಷಪಾತಿಗಳೂ ಆದ ಮಹನೀಯರು ಈ ಪತ್ರಿಕೆಯನ್ನು ನೋಡಿ ಇದರಿಂದ ಅಷ್ಟೇನೂ ಉಪಯೋಗವಾಗಲಾರದೆಂದೂ, ಇದಕ್ಕೆ ಬದಲಾಗಿ ವಿಜ್ಞಾನ ಪಠ್ಯ ಪುಸ್ತಕಗಳನ್ನು ಶಾಲೆಗಳ ಉಪಯೋಗಕ್ಕಾಗಿ ಬರೆದರೆ ಒಳ್ಳೆಯದೆಂದೂ ಪತ್ರಿಕಾ ಕರ್ತರಿಗೆ ಬೋಧನೆಮಾಡಿದರು. ಇದನ್ನು ಕೇಳಿ ವಿಜ್ಞಾನ ಮಂಡಲಿಯು ನಿರಾಶೆಗೊಂಡು ಮನಮರುಗಿ ತನ್ನ ಸದುದ್ದೇಶವನ್ನು ತೊರೆದುಬಿಡಬೇಕಾಯಿತು. ವಿಜ್ಞಾನಶಿಶುವು ಎರಡೇ ವರುಷ ಕಾಲ ಜೀವದಲ್ಲಿದ್ದು ಅಂತರಿಸಿತು. ಮುಂದೆ ಯಾದರೂ ನಾವು ವಿಜ್ಞಾನವನ್ನು ಪುರಸ್ಕರಿಸದೆ ತಿರಸ್ಕರಿಸುತ್ತಹೋದಲ್ಲಿ ನಮಗೆ ಖಂಡಿತವಾಗಿಯೂ ಉಳಿಗಾಲವಿಲ್ಲ.

**ಇಂಗ್ಲಿಷ್-ಕನ್ನಡ ನಿಘಂಟು.**—ಮೈಸೂರಿನ ದಿವಾನರಾದ ಸರ್ ಮಿರ್ಜಾ ಮಹಮ್ಮದ್ ಇಸ್ಮೈಲ್ ಅವರ ಸಲಹೆಯ ಮೇರೆಗೆ ಮೈಸೂರು ವಿಶ್ವವಿದ್ಯಾನಿಲಯವು ೧೯೩೨ನೆಯ ವರ್ಷದ ಅಂತ್ಯದಲ್ಲಿ ಸಪ್ರಮಾಣವಾದ ದೊಡ್ಡ ಇಂಗ್ಲಿಷ್-ಕನ್ನಡ ನಿಘಂಟುವೊಂದನ್ನು ರಚಿಸಲು ಏರ್ಪಡಿಸಿತು. ಈಗ ನಾಲ್ಕು ವರ್ಷಗಳಿಂದಲೂ ಕೆಲಸ ನಡೆಯುತ್ತಿದೆ. ಇದಕ್ಕೆ ಸುಪ್ರಸಿದ್ಧರಾದ ಕನ್ನಡ ಸಾಹಿತಿಗಳುಳ್ಳ ಒಂದು ಸಂಪಾದಕ ಮಂಡಲಿಯಿದೆ. ನಿಘಂಟುವು ತಯಾರಾದಂತೆಲ್ಲ ಅದನ್ನು ೧೨ ಬೇರೆಬೇರೆ ಭಾಗಗಳಾಗಿ ಪ್ರಕಟಿಸುವಂತೆ ನಿರ್ಣಯಿಸಿದೆ. ೯೬ ದೊಡ್ಡ ಅಳತೆಯ ಪುಟಗಳುಳ್ಳ ಭಾಗಗಳೆರಡು ಈಗ ಪ್ರಕಟವಾಗಿವೆ; ಮೂರನೆಯ ಭಾಗವು ಇಷ್ಟರಲ್ಲಿಯೇ ಪ್ರಕಟವಾಗುತ್ತದೆ.

ಆರಂಭದಲ್ಲಿಯೇ, ಇತರ ಪ್ರಾಂತಗಳ ಕನ್ನಡ ಪಂಡಿತರನ್ನೂ ಸಂಪಾದಕ ಮಂಡಲಿ ಯಲ್ಲಿ ಸೇರಿಸಬೇಕೆಂಬ ಅಭಿಪ್ರಾಯವಿದ್ದಿತು. ಆದರೆ ಹೆಚ್ಚು ವೆಚ್ಚವಾಗುವುದೆಂಬ

ಭಯದಿಂದಲೂ ಕೆಲಸ ಸಾವಕಾಶವಾಗಬಹುದೆಂಬ ಶಂಕೆಯಿಂದಲೂ ಆ ಯನ್ನು ಆಗ್ಗೆ ಮಾಸಸಿಕವಾಡಲಾಯಿತು. ಈಚೆಗೆ, ಬೆಳಗಾಂವಿಯ ಡಾ ಸಂದೀಮಠ ಅವರನ್ನೂ, ಮಂಗಳೂರಿನ ಶ್ರೀಮಾನ್ ಉಳ್ಳಾಳ ಮಂಗೇಶರಾಯ ಸಂಪಾದಕ ಮಂಡಲಿಗೆ ದಯವಿಟ್ಟು ಸಹಾಯಮಾಡುವಂತೆ ವಿಶ್ವವಿದ್ಯಾ ದವರು ಒಪ್ಪಿಸಿರುತ್ತಾರೆ. ಆ ಮಹನೀಯರಿಬ್ಬರೂ ಸಂತೋಷದಿಂದ ನಿಘಂಟು ಕೆಲಸದಲ್ಲಿ ತೊಡಗಿರುತ್ತಾರೆ. ೧೯೪೩ನೆಯ ವರ್ಷದ ಈ ನಿಘಂಟುವಿನ ಕೆಲಸವು ಪೂರ್ತಿಯಾದೀತೆಂದು ನಿರೀಕ್ಷಿಸಲಾಗಿದೆ. ಭಾಷೆಯಲ್ಲಿರುವ ವಿಜ್ಞಾನಾದಿ ಆಧುನಿಕ ಶಾಸ್ತ್ರಗಳ ವಿಷಯಗಳನ್ನೊಳ ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಲು ಈ ನಿಘಂಟುವು ಎಲ್ಲ ಕನ್ನಡಿ ಸಹಾಯವಾಗಬಹುದೆಂದು ಊಹಿಸಲಾಗಿದೆ. ಸುಪ್ರಸಿದ್ಧರಾದ ಕಿಟ್ಟೆಲ್ ಬಹಳ ಶ್ರಮಪಟ್ಟು ರಚಿಸಿರುವ ಕನ್ನಡ–ಇಂಗ್ಲಿಷ್ ನಿಘಂಟುವು ಇಂಗ್ಲಿಷ್- ನಿಘಂಟುವಿನ ರಚನೆಗೆ ಬಹಳಮಟ್ಟಿಗೆ ಸಹಾಯವಾಗುತ್ತಿದೆ.

**ಪ್ರಾಥಮಿಕ ಶಿಕ್ಷಣ.**—ನಮ್ಮ ದೇಶದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ತಕ್ಕಷ್ಟು ಗಮನಕೊಡುತ್ತಿಲ್ಲ; ಗಮನವೇ ಕೊಡುತ್ತಿಲ್ಲವೆನ್ನಬಹುದು. ಇದು ಸುಲಭಸಾಧ್ಯವಾದುದಲ್ಲ; ಹಣ ಹೇರಳವಾಗಿದ್ದ ಹೊರತು ಸಮರ್ಪಕ ನಡೆಯದು. ನಮ್ಮ ಮಿದುಳು ಚುರುಕಾಗಿರುವುದು ಬಾಲ್ಯದಲ್ಲಿಯೇ; ಆಗ ವಿದ್ಯೆಯು ಶಾಶ್ವತವಾಗಿ ನಿಲ್ಲುವುದು. ವಯಸ್ಸು ಬರುತ್ತ ಬರುತ್ತ ಮಂದವಾಗಿ ಹೋಗುವುದು. ಆದಕಾರಣ, ಬಾಲ್ಯದಲ್ಲಿ ತಕ್ಕ ಶಿಕ್ಷಣ ಕೊಟ್ಟರೆ ಅದು ಮುಂದೆ ಫಲಕಾರಿಯಾಗುವುದು; ಇಲ್ಲದಿದ್ದರೆ ಮುಂದೆ ಏನು ಮಾಡಿದರೂ ಈ ಕುಂದು ಸರಿಹೋಗುವುದಿಲ್ಲ. ಇದಕ್ಕಾಗಿ ಪ್ರಜ್ಞಾಶಾಲಿಗಳೂ ಕರ್ತವ್ಯ ದಕ್ಷರೂ ಆದ ಉಪಾಧ್ಯಾಯರನ್ನು ನಮ್ಮ ಬಾಲಕರ ಶಿಕ್ಷಣೆಗಾಗಿ ನಿಯ ಬೇಕು. ಇದು ನಮ್ಮ ಈಗಿನ ಆರ್ಥಿಕ ಪರಿಸ್ಥಿತಿಯಲ್ಲಿ ಸಾಧ್ಯವೇ ಇಲ್ಲ. ಹಾಗಿರಲಿ; ನಮ್ಮ ಪ್ರಾಥಮಿಕ ಪಾಠಶಾಲೆಗಳ ಉಪಾಧ್ಯಾಯರು ತಕ್ಕ ಯನ್ನು ಸಂಪಾದಿಸಿಕೊಳ್ಳುವ ಸ್ಥಿತಿಯಲ್ಲಿರುವರೇನು? ಇಲ್ಲ, ಅವರಿಗೆ ವೇತನಗಳು ಅರಹೊಟ್ಟೆಗೆ ಕೂಡ ಸಾಲದು. ಹೀಗಿರುವಲ್ಲಿ, ಹಸಿವಿನಿಂದ ನಮ್ಮ ಉಪಾಧ್ಯಾಯರು ನಮ್ಮ ಬಾಲಕರಿಗೆ ತಕ್ಕ ಶಿಕ್ಷಣ ಕೊಡುವುದು ಪ್ರಾಥಮಿಕ ಶಾಲೆಗಳಲ್ಲಿ ಬಹಳ ಚಾಲಾಖಾಗಿರುವ ನಮ್ಮ ಬಾಲಕರನೇಕರು ಮುಂದೆ ಹೋಗುತ್ತ ದಡ್ಡರಾಗಿ ಪರಿಣಮಿಸಿದುದನ್ನು ನನ್ನ ಅನುಭವದಲ್ಲಿ ತ್ತೇನೆ. ಅವರಲ್ಲಿ ಸಹಜವಾಗಿರುವ ಬುದ್ಧಿಶಕ್ತಿಯು ಅವರಿಗೆ ಒದಗುವ ವಿದ್ಯಾ ದಿಂದ ಅಳಿದುಹೋಗುವುದು. ಹೀಗೆ, ನಮ್ಮ ಪ್ರಾಥಮಿಕ ಪಾಠಶಾ ಅನೇಕವು ಬಾಲಬುದ್ಧಿ ಮಾಂದ್ಯಕ ಕಾರಖಾನೆಗಳಾಗಿ ಏರ್ಪಟ್ಟಿವೆ. ಸಂಪೂರ್ಣವಾಗಿ ಸರ್ಕಾರದ ತಪ್ಪೆಂದು ಹೇಳಲಾಗುವುದಿಲ್ಲ. ಜನರು ಹಣ ಕೊಡದಿದ್ದರೆ ಸರ್ಕಾರದವರು ಏನು ಮಾಡಲಾದೀತು? ಎಲ್ಲೆಲ್ಲಿಯೂ

ಸಾರ್ವಜನಿಕ ನಿರ್ಬಂಧ ವಿದ್ಯಾಭ್ಯಾಸ'ದ ಕೋಲಾಹಲವೇ ಕೋಲಾಹಲ. ಅದು ಸಾಧ್ಯವೇ ಎಂಬ ವಿಷಯವನ್ನು ಮಾತ್ರ ಯಾರೂ ಸರಿಯಾಗಿ ಯೋಚಿಸುವಂತೆ ತೋರುವುದಿಲ್ಲ. ಅತ್ಯಂತ ಕೀಳು ದರ್ಜೆಯ ಉಪಾಧ್ಯಾಯನಿಗೆ ತಿಂಗಳೊಂದಕ್ಕೆ ಮೂವತ್ತು ರೂಪಾಯಿಗಳ ವೇತನವಾದರೂ ಕೊಡದೆಹೋದಲ್ಲಿ ಅಂಥವನಿಂದ ನಮ್ಮ ಬಾಲಕರ ಶಿಕ್ಷಣೆ ಸಮರ್ಪಕವಾಗಿ ನಡೆಯುವುದು ಹೇಗೆ? ಈಗ ಅನೇಕ ಮಂದಿ ಪ್ರಾಥಮಿಕ ಶಾಲೆಯ ಉಪಾಧ್ಯಾಯರಿಗೆ ತಿಂಗಳೊಂದಕ್ಕೆ ಹತ್ತು ಹದಿನೈದು ರೂಪಾಯಿಗಳಿಗಿಂತಲೂ ಹೆಚ್ಚು ವೇತನ ಬರುವಂತಿಲ್ಲ. ಇಂಥವರಿಗೆ ಕೆಲವುವೇಳೆ ದೊಡ್ಡ ಸಂಸಾರವೂ ಇರುತ್ತದೆ; ಇವರು ಜೀವನ ಮಾಡುವುದು ಹೇಗೆ? ಇಂಥವರಿಂದ ನಮ್ಮ ಬಾಲಕರಿಗೆ ಕೊಡಿಸಿದ ಶಿಕ್ಷಣವು ಎಷ್ಟು ಫಲಪ್ರದವಾದೀತು? ಪಾಶ್ಚಾತ್ಯ ದೇಶಗಳಲ್ಲಿ ಎಲ್ಲರಿಗೂ ಪುಕ್ಕಟೆಯಾಗಿ ಬಲವಂತದಿಂದ ವಿದ್ಯೆ ಕಲಿಸುವರೆಂದರೆ, ಅವರ ಯೋಗ್ಯತೆ ಮಾತ್ರ ನಮಗಿಲ್ಲದೆ, ನಾವೂ ಹಾಗೆಯೇ ಮಾಡಬೇಕೆಂದು ಬಯಸುವುದರಿಂದ ಕೇಡೇ ಹೊರತು ಪ್ರಯೋಜನವಿಲ್ಲ. ಒಂದು ಉದಾಹರಣೆ ಕೊಡುವೆನು: ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿ ಓಹಿಯೊ ಎಂಬುದು ಒಂದು ರಾಷ್ಟ್ರ; ಇದರ ವಿಸ್ತೀರ್ಣ ಮೈಸೂರು ದೇಶದ ಸುಮಾರು ಒಂದೂವರೆಯಷ್ಟು. ೧೯೩೦ನೆಯ ಇಸವಿ ಜೂನ್ ತಿಂಗಳಿಗೆ ಅಂತ್ಯವಾದ ಒಂದು ವರ್ಷಕ್ಕೆ ವಿದ್ಯಾಭ್ಯಾಸಕ್ಕೆಂದು ಆ ದೇಶದಲ್ಲಿ ಹುಟ್ಟುವಳಿಯಾದ ಮೊಬಲಗು ೫೫ ಕೋಟಿ ರೂಪಾಯಿಗಳು; ಇದರ ಜೊತೆಗೆ ಪತ್ರಗಳು ಮತ್ತು ಇತರ ದಾನ ವಸ್ತುಗಳನ್ನು ಮಾರಿದುದರಿಂದ ಬಂದ ಮೊಬಲಗು ಸುಮಾರು ೧೮ ಕೋಟಿ ರೂಪಾಯಿಗಳು; ಒಟ್ಟಿಗೆ ೭೩ ಕೋಟಿ ರೂಪಾಯಿಗಳು. ಓಹಿಯೊ ರಾಷ್ಟ್ರದ ವಿಸ್ತೀರ್ಣವನ್ನು ಮೈಸೂರು ದೇಶದ ಗಾತ್ರಕ್ಕೆ ಕುಗ್ಗಿಸಿದಲ್ಲಿ ವಿದ್ಯಾಭ್ಯಾಸಕ್ಕಾಗಿ ೧೯೩೦ನೆಯ ಇಸವಿಯಲ್ಲಿ ಎತ್ತಿಟ್ಟ ಮೊಬಲಗಿನ ಗಾತ್ರವು ೫೫।೦ ಕೋಟಿಗಿಂತಲೂ ಹೆಚ್ಚಾಗುವುದು. ಮೈಸೂರು ದೇಶದಲ್ಲಿ ಆ ವರ್ಷ ಒಟ್ಟು ವಿದ್ಯಾಭ್ಯಾಸಕ್ಕಾಗಿ ವೆಚ್ಚಮಾಡಿದ ಮೊಬಲಗು ೬೦॥೦ ಲಕ್ಷ ರೂಪಾಯಿಗಳಿಗೆ ಮೀರಲಿಲ್ಲ. ಆನೆಗೊಂದು ಬರೆ ಎಂದರೆ ಸೊಳ್ಳೆಗೂ ಒಂದು ಬರೆಯೆ!

ಪ್ರಾಥಮಿಕ ಶಿಕ್ಷಣವು ಮಕ್ಕಳ ಮಾತೃಭಾಷೆಯಲ್ಲೇ ಆಗಬೇಕೆಂಬುದಕ್ಕೆ ಯಾರೂ ಪ್ರತಿ ಹೇಳುವಂತಿಲ್ಲ. ೧೪ ವರ್ಷ ವಯಸ್ಸಾಗುವ ವರೆಗೂ ಮಕ್ಕಳಿಗೆ ಮತ್ತಾವ ಭಾಷೆಯನ್ನೂ ಕಲಿಸಲು ಯತ್ನಿಸದೆ ಮಾತೃಭಾಷೆಯಲ್ಲಿಯೇ ಶಿಕ್ಷಣ ಕೊಟ್ಟಲ್ಲಿ ಅವರು ಕಲಿತ ವಿದ್ಯೆಯು ಸಾರ್ಥಕವಾಗುವುದು. ಶಕ್ತಿಯಿಲ್ಲದಿದ್ದರೂ ಪಾಶ್ಚಾತ್ಯ ದೇಶಗಳನ್ನು ಅನುಕರಣ ಮಾಡಬೇಕಾಗಿರುವುದರಿಂದ ನಮ್ಮ ಸರ್ಕಾರದ ಪ್ರಾಥಮಿಕ ಪಾಠಶಾಲೆಗಳು ಉತ್ತಮಗೊಳ್ಳುವ ಸಂಭವ ತೋರುವುದಿಲ್ಲ. ಆದಕಾರಣ ನಾವು ಹಿಂದಿನಂತೆ ಮಠಗಳನ್ನು ತೆರೆದು ನಮಗೆ ಬೇಕಾದಂತೆ ಯೋಗ್ಯ ಶಿಕ್ಷಣ ಕೊಡಲು ಏರ್ಪಾಟುಮಾಡಿಕೊಳ್ಳುವುದು ಉತ್ತಮ. ಅಮರವನ್ನೂ ಬಾಯಿ ಪಾಠವನ್ನೂ ಕಡ್ಡಾಯವಾಗಿ ಕಲಿಸಬೇಕು; ದೇವರಿರುವನೆಂದು ಬೋಧಿಸಬೇಕು;

ಪುಕ್ಕಟೆಯ ವಿದ್ಯಾಭ್ಯಾಸಕ್ಕೆ ಕೈಹಾಕಬಾರದು; ಗುರುದಕ್ಷಿಣೆಯು ಯೋಗ್ಯ ತಕ್ಕಂತೆ ವಸೂಲಾಗುತ್ತಹೋಗಬೇಕು, ಆಗ ತಾಯಿ ತಂದೆಗಳಿಗೂ ತಮ್ಮ ಮಕ್ಕ ವಿದ್ಯಾಶಿಕ್ಷಣದಲ್ಲಿ ಆಸಕ್ತಿ ಹುಟ್ಟುವುದು.

**ಮಹಾತ್ಮಾ ಗಾಂಧಿಯುವರ ವರ್ಧಾ ಶಿಕ್ಷಣ ವ್ಯವಸ್ಥೆ.**—ಪ್ರಾಥ ಶಿಕ್ಷಣದ ಸದ್ಯದ ದುಸ್ಥಿತಿಯನ್ನು ತಪ್ಪಿಸಿ ನಮ್ಮ ದೇಶದ ಮಕ್ಕಳಿಗೆ ತಕ್ಕ ಹಾಕಬೇಕೆಂಬ ಉದ್ದೇಶದಿಂದ ಗಾಂಧಿಯವರು ಒಂದು ಶಿಕ್ಷಣ ವ್ಯವಸ್ಥೆ ಏರ್ಪಡಿಸಿರುತ್ತಾರೆ. ಇದರಲ್ಲಿ ಕೇಂದ್ರ ಸ್ಥಾನವನ್ನು ಮಗು ತನ್ನ ಕೈ ಮಾಡಬೇಕಾದ ಕೈಕೆಲಸಕ್ಕೆ ಕೊಟ್ಟಿದ್ದಾರೆ. ಶಿಕ್ಷಣವು ಈ ಕೆಲಸಕ್ಕನುಗುಣ ನಡೆಯಬೇಕು. ಬಾಲಕ ಬಾಲಿಕೆಯರೆಲ್ಲರಿಗೂ ಒತ್ತಾಯದಿಂದ ಶಿಕ್ಷಣ ಕೊಡ ಮುಖ್ಯವಾದ ಈ ಕೈಕೆಲಸಗಳು ಯಾವುವೆಂದರೆ: (೧) ನೂಲುವುದು, ನೆಯ್ಯು (೨) ಮರಗೆಲಸ; (೩) ಭೂವ್ಯವಸಾಯ; (೪) ಹಣ್ಣು ಹಂಪಲು ಮತ್ತು ಯನ್ನು ಬೆಳೆಯುವುದು; (೫) ತೊಗಲುಗೆಲಸ; (೬) ಆಯಾ ಪ್ರಾಂ ಅನುಕೂಲಿಸುವಂತಹ ಇತರ ಯಾವುದಾದರೂ ಕೈಕೆಲಸ. ಈ ಶಿಕ್ಷಣವು ಮಗು ಮಾತೃಭಾಷೆಯಲ್ಲಿಯೇ ಏಳು ವರ್ಷ ನಡೆಯಬೇಕು. ಕಲಿಸಬೇಕಾದ ವಿಷಯ (೧) ಈ ಶಿಕ್ಷಣಕ್ಕೆ ಆಧಾರವಾದ ಕೈಕೆಲಸ; (೨) ಮಾತೃಭಾಷೆ; (೩) ಅಂಕಗ (೪) ಸಾಮಾಜಿಕ ವಿಚಾರಗಳು; (೫) ಪ್ರಕೃತಿಶಾಸ್ತ್ರ ವಿಚಾರಗಳು—ಈ ಕೊ ಭಾಗದಲ್ಲಿ (a) ಸಸ್ಯಗಳು, ಪೈರು, ಬೆಳೆ, ಪ್ರಾಣಿಗಳು, ಪಕ್ಷಿಗಳು, ಮೊದಲಾದುವು, (b) ಸಸ್ಯಶಾಸ್ತ್ರ, (c) ಪ್ರಾಣಿಶಾಸ್ತ್ರ, (d) ಮನುಷ್ಯ ಶಾಸ್ತ್ರ, (e) ಆರೋಗ್ಯಶಾಸ್ತ್ರ, (f) ರಸಾಯನಶಾಸ್ತ್ರ, (g) (h) ಅಂಗವ್ಯಾಯಾಮ; (೬) ರೇಖನ; (೭) ಸಂಗೀತ; (೮) ಹಿಂದೂಸ್ತಾ ಹುಡುಗಿಯರಿಗೆ ಕೆಲವು ಇಯತ್ತೆಗಳಲ್ಲಿ ಗೃಹಕೃತ್ಯಶಾಸ್ತ್ರ. ಮಕ್ಕಳು ಮಾಡು ಕೆಲಸದ ಫಲವಾಗಿ ಒದಗುವ ಪದಾರ್ಥಗಳನ್ನು ಮಾರಿ ಬಂದ ಹಣವನ್ನು ಶಿಕ್ಷ ವೆಚ್ಚಕ್ಕಾಗಿ ಉಪಯೋಗಿಸುತ್ತಹೋದಲ್ಲಿ ಕ್ರಮೇಣ ಈ ಶಿಕ್ಷಣದ ವೆಚ್ಚವೆಲ್ಲ ಈ ಉತ್ಪನ್ನಗಳಿಂದಲೇ ಕಳೆದುಹೋಗುವುದೆಂದು ಮಹಾತ್ಮರ ನಂಬಿಕೆ.

ಇದನ್ನು ನೋಡಿದರೆ, ಮಕ್ಕಳಿಗೆ ಇಂತಹ ಶಿಕ್ಷಣ ಕೊಡಬಲ್ಲ ಎಷ್ಟು ಮಂದಿ ದೊರೆಯುವರು? ಅಸಾಧ್ಯವಾಗಿ ತೋರುವ ಈ ಕೆಲಸವನ್ನು ಕೊಡುವ ೧೦–೧೫ ರೂಪಾಯಿಗಳ ವೇತನದಿಂದಲೇ ನಡಸಲು ಸಾಧ್ಯವೇ? ಶಂಕೆಯಾಗುವುದು. ಇಂಡಿಯಾ ದೇಶದ ಪ್ರಜಾ ಸಂಖ್ಯೆಯಲ್ಲಿ ಶೇಕಡ ಈ ಶಾಲೆಗಳಿಗೆ ಹೋಗುವ ಮಕ್ಕಳು ಇರುವರೆಂದರೆ ಸುಮಾರು ೩ ಕೋಟಿ ಮಕ್ಕ ಶಿಕ್ಷಣ ಕೊಡಬೇಕಾಗುವುದು; ಮೂವತ್ತು ಮಂದಿ ಮಕ್ಕಳಿಗೆ ಒಬ್ಬ ಉಪಾಧ್ಯಾ ನಂತೆ ೧೦ ಲಕ್ಷ ಉಪಾಧ್ಯಾಯರು ಬೇಕಾಗುವುದು; ಇವರ ವೇತನಕ್ಕಾಗಿ ತಿಂಗಳೊಂದಕ್ಕೆ ಪ್ರತಿ ಉಪಾಧ್ಯಾಯನಿಗೂ ಮೂವತ್ತು ರೂಪಾಯಿಗಳಂತೆ ೩ ಕೋ ರೂಪಾಯಿಗಳು ತಗಲುವುದು.

ಮಹಾತ್ಮರು ದೂರದರ್ಶಿಗಳು, ಬಹಳ ಅನುಭವಶಾಲಿಗಳು, ಕೇವಲ ನಿಸ್ವಾರ್ಥರು. ಇಂತಹ ಮಹನೀಯರು ಬಹು ದೂರ ಯೋಚಿಸಿ ದಕ್ಷರಾದ ದೊಡ್ಡ ವಿದ್ಯಾಧಿಕಾರಿಗಳ ಅನುಮತಿಪಡೆದಿರುವ ಈ ವ್ಯವಸ್ಥೆಯು ನಮಗೆ ತಿಳಿಯದ ಮಾತ್ರಕ್ಕೇ ನಾವು ಅದನ್ನು ಅಲ್ಲಗಳೆಯಬಾರದು.

**ಮಾಧ್ಯಮಿಕ ಮತ್ತು ಪ್ರೌಢ ವರ್ಗದ ಶಿಕ್ಷಣ.**—ಮಾಧ್ಯಮಿಕ ಶಿಕ್ಷಣ ವನ್ನು ಮಾತೃಭಾಷೆಯಲ್ಲಿಯೇ ಕೊಡಬೇಕೆಂದರೆ ಅದಕ್ಕೆ ಅಡ್ಡಿಬರುವವರು ಅನೇಕ ಮಂದಿ. ಇಂಥವರಿಗೆ ಇಂಗ್ಲಿಷ್ ಭಾಷೆಯಮೇಲಿನ ಮೋಹ ಇನ್ನೂ ತಪ್ಪಿಲ್ಲ. ಆದರೆ ಅನೇಕ ವಿಷಯಗಳನ್ನು ತಲೆಯಲ್ಲಿ ತುಂಬಿ ಯಾವುದೂ ಚೆನ್ನಾಗಿ ಹತ್ತದಂತೆ ಮಾಡುವುದಕ್ಕಿಂತ ಕೆಲವು ಉಪಯುಕ್ತ ವಿಷಯಗಳನ್ನು ಮಾತ್ರ ಚೆನ್ನಾಗಿ ಕಲಿಸುವುದು ಉತ್ತಮ. ಇಷ್ಟಪಟ್ಟವರಿಗೆಲ್ಲ ಈ ಮೆಟ್ಟಲ ವರೆಗೂ ಶಿಕ್ಷಣಕೊಡುವುದು ಆವಶ್ಯಕವೆಂದು ತೋರುವುದು. ಇದಕ್ಕೆ ಮುಂದೆ ಹೋಗಬೇಕೆನ್ನುವವರಿಗೆ, ಯೋಗ್ಯತೆಯಿದ್ದಲ್ಲಿ ಮಾತ್ರ ಪ್ರವೇಶ ದೊರೆಯುವಂತೆ ಮಾಡಬೇಕು. ಈಗ ತಡೆಯೇ ಇಲ್ಲದಿರುವುದರಿಂದ ದಡ್ಡರು ಕೂಡ ಇಂದಿಲ್ಲದಿದ್ದರೆ ನಾಳೆ, ನಾಳಿದ್ದು ಪ್ರೌಢ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ ಪ್ರಶಸ್ತಿಪತ್ರವನ್ನು ಪಡೆಯುವರು. ಇದರಿಂದ ಅವರಿಗೂ ಹಾನಿಯೇ, ದೇಶಕ್ಕೂ ಹಾನಿಯೇ. ಬಗೆ ಬಗೆಯ ಕಸಬುಗಳಲ್ಲಿ ಬಹು ಕಾಲದಿಂದ ಪಳಗಿ ಹೊಟ್ಟೆಹೊರೆದುಕೊಳ್ಳುತ್ತಿದ್ದವರನ್ನು ಸಫಲವಾಗದ ಆಶೆಯ ಬಲೆಯಲ್ಲಿ ತೊಡರಿಸಿ ದೇಶದ ಸಮತಾಭಾವಕ್ಕೆ ಕುಂದುತರುವುದು ನ್ಯಾಯವಲ್ಲ. ಇದರಿಂದ ಎಲ್ಲೆಲ್ಲಿ ಯಾವಯಾವ ತೊಂದರೆಗಳು ಮೂಡುವುವೊ ಹೇಳಬಲ್ಲವರಾರು? ಈ ಪರಿಸ್ಥಿತಿಗೆ ಜೀವವಿಜ್ಞಾನದಿಂದ ಅನೇಕ ಉದಾಹರಣೆಗಳನ್ನು ಕೊಡಬಹುದು. ಚಿತ್ರವಾದ ಒಂದು ಉದಾಹರಣೆಯನ್ನು ಮಾತ್ರ ಇಲ್ಲಿ ಕೊಡುವೆನು: ಸುಪ್ರಸಿದ್ಧ ಇಂಗ್ಲಿಷ್ ಜೀವ ವೈಜ್ಞಾನಿಕನಾದ ಛಾರ್ಲ್ಸ್ ಡಾರ್ವಿನ್ ಎಂಬ ಪಂಡಿತನು ಒಂದು ಸಮಸ್ಯೆಯನ್ನು ಹೀಗೆ ಕೊಟ್ಟಿರುತ್ತಾನೆ:—"ಯಾವುದಾದರೂ ಒಂದು ಪ್ರದೇಶದಲ್ಲಿ 'ಕ್ಲೋವರ್' ಎಂಬ ಸಸ್ಯದ ಬೀಜಸಮೃದ್ಧಿಯು ಆ ಪ್ರಾಂತದಲ್ಲಿರುವ ಅವಿವಾಹಿತ ವೃದ್ಧ ಸ್ತ್ರೀಯರ ಸಂಖ್ಯೆಯನ್ನನುಸರಿಸಿಹೋಗುತ್ತದೆ." ಈ ತೊಡಕನ್ನು ಮುಂದೆ ಹೇಳುವಂತೆ ಬಿಡಿಸಬಹುದು:—ಕ್ಲೋವರಿನ ಸಸ್ಯಾಂಡವು ಪುಷ್ಪಪರಾಗದ ಮೂಲಕ ಗರ್ಭ ತಾಳುವುದು ಒಂದು ದುಂಬಿಯ ಮಾಧ್ಯಸ್ಥಿಕೆಯಿಂದ; ಎಂದರೆ, ದುಂಬಿಯ ಮೈಗೆ ಹತ್ತಿಕೊಂಡಿರುವ ಹೂವಿನಧೂಳು ಮತ್ತೊಂದು ಹೂವಿನ ಗರ್ಭಕೋಶಕ್ಕೆ ಹತ್ತಿ ಕೊಂಡರೆ ಅದರಲ್ಲಿಯ ಅಂಡವು ಫಲವಂತವಾಗುವುದು. ಈ ದುಂಬಿಗಳ ಗೂಡುಗಳನ್ನೂ, ಅವು ಶೇಖರಿಸಿಡುವ ಆಹಾರವನ್ನೂ ಅಲ್ಲಿಯ ಹೊಲದಿಲಿಗಳು ನಾಶಮಾಡುವುವು; ಆದಕಾರಣ, ಈ ಹೊಲದಿಲಿಗಳು ಹೆಚ್ಚಿದಹಾಗೆಲ್ಲ ದುಂಬಿಗಳ ಸಂಖ್ಯೆ ಕಡಮೆಯಾಗುವುದು. ಈ ಇಲಿಗಳ ಸಂಖ್ಯೆಯು, ಅವನ್ನು ಹಿಡಿದುತಿನ್ನುವ ಬೆಕ್ಕುಗಳು ಆ ಪ್ರಾಂತದಲ್ಲಿ ಎಷ್ಟಿವೆಯೆಂಬುದರಮೇಲೆ ಹೋಗುವುದು. (ಪಾಶ್ಚಾತ್ಯ ದೇಶಗಳಲ್ಲಿ) ಅವಿವಾಹಿತರಾದ ಮುದುಕಿಯರು ಸಾಮಾನ್ಯವಾಗಿ ಬೆಕ್ಕುಗಳನ್ನು ಹೆಚ್ಚಾಗಿ ಸಾಕುವುದರಿಂದ,

ಮುದುಕಿಯರ ಸಂಖ್ಯೆ ಹೆಚ್ಚಿದಷ್ಟೂ ಬೆಕ್ಕುಗಳ ಸಂಖ್ಯೆ ಹೆಚ್ಚುವುದು. ಆದುದ ಇಂಥ ಮುದುಕಿಯರ ಸಂಖ್ಯೆ ಹೆಚ್ಚಿದಷ್ಟೂ ಕ್ಲೋವರುಬೀಜದ ಬೆಳೆ ಹೆಚ್ಚು ವುದು.

**ಇಂಗ್ಲಿಷು, ಹಿಂದಿ, ಸಂಸ್ಕೃತ.**—ಇಂಗ್ಲಿಷು ಭಾಷೆ ನಮಗೆ ಬೇ ವಿಲ್ಲವೆಂದೂ, ಇಂಡಿಯಾ ದೇಶದ ಜನರೆಲ್ಲರೂ ಅದಕ್ಕೆ ಬದಲಾಗಿ ಹಿಂದಿಯನ್ನು ಕಲಿ ಬೇಕೆಂದೂ ಹೇಳುವವರನೇಕರು ನಮ್ಮಲ್ಲಿ ಈಚೆಗೆ ಹುಟ್ಟಿದ್ದಾರೆ. ಜನರು ಹಿಂ ಭಾಷೆಯನ್ನು ಕಲಿಯುವುದರಲ್ಲಿ ನಮಗೆ ಯಾವ ಅಭ್ಯಂತರವೂ ಇಲ್ಲ; ಅದು ಪ್ರ ಭಾಷೆಯೇ. ಆದರೆ ಈಗ ನಾವು ಸಮಸ್ತ ಭೂಭಾಗದ ಪ್ರಜೆಗಳಾಗ ಎಲ್ಲೆಲ್ಲಿಯೂ ಹರಡಿಕೊಂಡಿರುವ ಪ್ರಪಂಚ ಭಾಷೆಯಾದ ಇಂಗ್ಲಿಷನ್ನು ಬಿಟ್ಟರೆ ನಾ ಹಿಂದುಳಿದವರಾಗಿ ಕೇಡಿಗೀಡಾಗುವೆವು. ಪ್ರಪಂಚ ವ್ಯವಹಾರಕ್ಕೆ ಬೇಕಾದ ಇಂಗ್ಲಿಷನ್ನು ನಾವು ಸಲಕ್ಷಣವಾಗಿ ಕಲಿಯಲೇಬೇಕು. ಆಧುನಿಕ ಶಾಸ್ತ್ರವಿ ಗಳೆಲ್ಲವೂ ನಮಗೆ ದೊರೆಯುವುದು ಇಂಗ್ಲಿಷಿನಲ್ಲಿಯೇ. ಇದನ್ನು ಬಿಟ್ಟು ಹಿಂದಿಯ ಕಲಿಯುವುದರಿಂದ ನಷ್ಟವೇ ವಿನಾ ಆದಾಯವಿಲ್ಲ. ಹಿಂದಿಯನ್ನು ಶಾಲಾ ವಿದ್ಯಾ ಗಳೆಲ್ಲರಿಗೂ ಕಡ್ಡಾಯವಾಗಿ ಕಲಿಸಬೇಕೆಂಬುದು ನ್ಯಾಯವಲ್ಲ. ಹೊರೆ ಹೊರ ಈಗಲೇ ಬೆನ್ನುಬಗ್ಗಿರುವ ನಮ್ಮ ವಿದ್ಯಾರ್ಥಿಗಳ ಪಾಠಕ್ರಮದಲ್ಲಿ ಹಿಂದಿಯ ಸೇರಿಸಿದರೆ ಹೊರೆ ಮತ್ತೂ ಹೆಚ್ಚಾಗುವುದು; ಇತರ ಅವಶ್ಯ ವ್ಯಾಸಂಗ ಗಳಿಗೆ, ಮುಖ್ಯವಾಗಿ ಮಾತೃಭಾಷೆಗೆ, ಕೃಷಿ ಸಾಲದೆ ಕೊರತೆಯುಂಟಾಗು ಈ ಬಲವಂತದಿಂದ ಪ್ರಯೋಜನವೇನೂ ಕಾಣುವುದಿಲ್ಲ. ಇದು ಹೆಚ್ಚು ನಡೆಯುವುದೆಂಬ ಭರವಸೆಯಾದರೂ ಏನು? ಶಾಲಾ ವಿದ್ಯಾರ್ಥಿಗಳಲ್ಲ ಹಿಂದಿಯನ್ನು ಕಲಿಸಲು ಉಪಾಯಗಳಿಲ್ಲವೆ? ಸಂಸ್ಕೃತ ಪಕ್ಷಪಾತಿಗಳಾ ಭಾರತೀಯರೆಲ್ಲರೂ ಸಂಸ್ಕೃತವನ್ನು ಅಗತ್ಯವಾಗಿ ಕಲಿಯಬೇಕೆನ್ನುವರು; ಇದನ್ನು ಯಾರೂ ಬೇಡವೆನ್ನುವುದಿಲ್ಲ; ಆದರೆ ಪಾಠಶಾಲೆಗಳಲ್ಲಿ ಕಡ್ಡಾಯ ಮಾತ್ರ ಕಲಿಸಬಾರದು; ಬೇಕಾದವರು ಸಂತೋಷವಾಗಿ ಕಲಿತುಕೊ ಅಂಥವರಿಗೆ ತಕ್ಕ ಪ್ರೋತ್ಸಾಹ ಕೊಡೋಣ.

**ಪ್ರೌಢ ವಿದ್ಯಾಭ್ಯಾಸ ಪಡೆದವರ ನಿರುದ್ಯೋಗ ಸಮಸ್ಯೆ.**—ಈ ಸಮ ಯನ್ನು ಬಿಡಿಸಲು ಹತ್ತಾರು ವರ್ಷಗಳಿಂದ ಇಂಡಿಯಾ ದೇಶದ ನಾನಾ ಪ್ರಾಂ ಗಳಲ್ಲಿ ಸಭೆಗಳು ಸೇರಿ ಬೇಕಾದಷ್ಟು ಚರ್ಚೆಮಾಡಿವೆ. ಆದರೆ ಈ ಸಂಕಟ ಪಾರಾಗುವ ಮಾರ್ಗವನ್ನು ಯಾರೂ ಸರಿಯಾಗಿ ತೋರಿಸಿಲ್ಲ; ನಮ್ಮ ಸ್ಥಿತಿಯಲ್ಲಿ ತೋರಿಸಲು ಸಾಧ್ಯವೂ ಇಲ್ಲ. ನಮ್ಮ ದೇಶದ ನಿರುದ್ಯೋಗ ಸಮಸ್ಯೆ ಪಾಶ್ಚಾತ್ಯ ದೇಶಗಳ ಸಮಸ್ಯೆಯಷ್ಟು ತೊಡಕಾಗಿಲ್ಲ. ಯಾವ ಉದ್ಯೋಗ ಮಾಡದೆ ಅಲೆಯುತ್ತ ಸುಖವಾಗಿ ಹೊಟ್ಟೆಹೊರೆದುಕೊಳ್ಳುತ್ತಿರುವವರು ನಮ್ಮ ಭಾರತಭೂಮಿಯಲ್ಲಿ ಎಷ್ಟು ಮಂದಿಯಿಲ್ಲ! ಇಂತಹ ಸ್ಥಿತಿಯು ಪಾಶ್ಚಾತ್ಯ ದೇಶ ಎಂದಿಗೂ ನಡೆಯಲಾರದು.

೧೯೩೪ನೆಯ ವರ್ಷದ ಅಂತ್ಯಭಾಗದಲ್ಲಿ ಇಂಡಿಯಾ ಸಂಯುಕ್ತ ಪ್ರಾಂತಗಳ ಗವರ್ನರವರು ತಮ್ಮ ಮಂತ್ರಿಗಳೊಡಗೂಡಿ, ಈ ನಿರುದ್ಯೋಗ ವಿಚಾರವನ್ನು ಕೂಲಂಕಷವಾಗಿ ಚರ್ಚೆಮಾಡಿ ಇದನ್ನು ತಕ್ಕ ಮಟ್ಟಿಗೆ ಕಡಮೆಮಾಡಲು ಸಲಹೆಗಳನ್ನು ಕೊಡುವ ಉದ್ದೇಶದಿಂದ ಸರ್ ತೇಜ್ ಬಹಾದ್ದೂರ್ ಸಪ್ರೂ ಅವರ ಅಧ್ಯಕ್ಷತೆಯಲ್ಲಿ ೮ ಮಂದಿಯುಳ್ಳ ಒಂದು ಮಂಡಲಿಯನ್ನು ನಿಯಾಮಕಮಾಡಿದರು. ಈ ಮಂಡಲಿಯು ನಾನಾ ಪ್ರಾಂತಗಳನ್ನು ಸುತ್ತಿ ಅನೇಕ ಮಂದಿಯ ಸಾಕ್ಷ್ಯವನ್ನು ಪಡೆದು ೪೦೦ ದೊಡ್ಡ ಪುಟಗಳುಳ್ಳ ಒಂದು ವರದಿಯನ್ನು ಒಪ್ಪಿಸಿರುತ್ತದೆ. ಈ ಪ್ರಶ್ನೆಯಮೇಲೆ ಇದಕ್ಕಿಂತಲೂ ಉತ್ತಮವಾದ ವರದಿಯು ಮತ್ತಾವುದೂ ಇಲ್ಲವೆಂದು ತೋರುವುದು. ಅನೇಕ ವಿಷಯಗಳು ಇದರಿಂದ ತಿಳಿಯಬರುತ್ತವೆ. ಮುಖ್ಯವಾಗಿ, ಈ ಪಂಡಿತ ನಿರುದ್ಯೋಗಿಗಳಲ್ಲಿ ಅನೇಕಾನೇಕ ಮಂದಿಗೆ ಈಗಿನ ಸ್ಥಿತಿಯಲ್ಲಿ ಸರ್ಕಾರದವರು ಏನು ಮಾಡಲೂ ಸಾಧ್ಯವಿಲ್ಲವೆಂಬುದೇ ಇದರ ಪಲ್ಲವಿ. ಕೋಮುವಾರು ಪ್ರಾತಿನಿಧ್ಯದ ತೊಡರಿನಲ್ಲಿ ಯಾರಿಂದಲೂ ಏನುಮಾಡಲೂ ಆಗುವುದಿಲ್ಲ. ಆದರೂ, ಮುಂದೆ ಹೇಳುವ ಉಪಾಯಗಳನ್ನು ಸರ್ಕಾರದವರು ಧೈರ್ಯವಾಗಿ ಕೈಕೊಂಡಲ್ಲಿ, ಜನರಿಗೆ ಕ್ರಮೇಣ ಈ ತೊಂದರೆ ಬಹುಮಟ್ಟಿಗೆ ತಪ್ಪಬಹುದೆಂದೂ ಸರ್ಕಾರಕ್ಕೂ ಕ್ಷೇಮವಾಗಬಹುದೆಂದೂ ತೋರುವುದು:—

(೧) ಸರ್ಕಾರಿ ಉದ್ಯೋಗಗಳ ಆಕರ್ಷೆಯನ್ನು ಬಲಗುಂದಿಸುವುದು: ಎಂದರೆ, ಮುಂದೆ ನೇಮಿಸುವ ಅಧಿಕಾರಿವರ್ಗಕ್ಕೆ ವಿರಾಮವೇತನಗಳು (Pension) ಇಲ್ಲದಂತೆ ಮಾಡಿ, ಇತರ ಕಾರ್ಯ ಸಂಸ್ಥೆಗಳಲ್ಲಿರುವಂತೆಯೇ ಒಂದು ಭಾವ್ಯ ಸಹಾಯಕ ನಿಧಿಯನ್ನು (Provident Fund) ಏರ್ಪಡಿಸುವುದು.

(೨) ಸರ್ಕಾರದ ಅನೇಕ ಮಂದಿ ದೊಡ್ಡ ಅಧಿಕಾರಿಗಳಿಗೆ ಈಗ ಕೊಡುತ್ತಿರುವ ಭಾರಿ ವೇತನಗಳನ್ನು ಕ್ರಮೇಣ ಮುಂದೆ ಬಲುಮಟ್ಟಿಗೆ ತಗ್ಗಿಸುವುದು.

(೩) ವಿಶ್ವವಿದ್ಯಾನಿಲಯದ ಪದವಿಗಳ ಹಂಬಲನ್ನು ಮುರಿದುಹಾಕುವುದು: ಎಂದರೆ, ಸರ್ಕಾರದ ಉದ್ಯೋಗಗಳಿಗೆ ಬೇಕಾದ ಯೋಗ್ಯತೆಯನ್ನು ವಿಶ್ವವಿದ್ಯಾನಿಲಯದ ಮಾನದಿಂದ ಅಳೆಯದೆ, ಇದಕ್ಕಾಗಿಯೇ ಪ್ರತ್ಯೇಕವಾಗಿ ಏರ್ಪಡಿಸಿದ ಪರೀಕ್ಷೆಗಳಿಂದ ನಿರ್ಧರಿಸುವುದು.

(೪) ಭಾರಿ ವೇತನ ಪಡೆಯುವ ಅಧಿಕಾರಿಗಳ ಮೇಲೂ, ಇತರ ವಿಧಗಳಲ್ಲಿ ಹೆಚ್ಚು ಸಂಪಾದನೆ ಮಾಡುವವರ ಮೇಲೂ, ಸಿರಿವಂತರ ಮೇಲೂ, ದೇಶಕ್ಷೇಮಕ್ಕೆಂದು, ತಕ್ಕ ಪ್ರಮಾಣದ ತೆರಿಗೆಯನ್ನು ಹಾಕುವುದು.

ಈ ಸಲಹೆಗಳು ಕ್ರಾಂತಿಕಾರಕಗಳೆಂದು ಯಾರೂ ಹೇಳಲಾರರು.

**ಉಪಸಂಹಾರ.**—ಮಹನೀಯರೆ! ಪರಿಷತ್ತಿನ ಅಧಿಕಾರಿಗಳು ನನ್ನನ್ನು "ಘನ ವಿದ್ವಾಂಸ"ನೆಂದು ಹೊಗಳಿರುವುದಕ್ಕಾಗಿ ಮನಸ್ಸಿಗೆ ನೋವಾಗುತ್ತದೆ. ನಮ್ಮಲ್ಲಿ ಹೊಗಳುಭಟ್ಟತನವು ಮೊದಲಿಂದಲೂ ಸಹಜ ಗುಣವಾಗಿರುವುದು. ಇನ್ನು ಮೇಲಾದರೂ ಈ ಕುಟ್ಟುಹುಳುವನ್ನು ನಿರ್ಮೂಲವಮಾಡಿ ಯಥಾರ್ಥವಾದಿತ್ವವನ್ನು

ಅಭ್ಯಾಸ ಮಾಡದಿದ್ದರೆ ನಮಗೆ ಕೇಡು ತಪ್ಪದು. ನಾಣ್ಣುಡಿಯಂತೆ, ಯಾ ಸಂದರ್ಭದಲ್ಲಿ ಎಷ್ಟುಮಟ್ಟಿಗೆ ಹೇಳಬೇಕೊ ಅಷ್ಟುಮಾತ್ರ ಹೇಳಿ ಅನ್ಯರ ಮನಸ್ಸನ್ನು ನೋಯಿಸದೆಯೂ, ತಾನೂ ನೋಯದೆಯೂ ತಪ್ಪಿಸಿಕೊಂಡು ತಿರುಗುವವನೇ ಧನ್ಯ. ಕನ್ನಡಿಗರ ಪಾಂಡಿತ್ಯವನ್ನೂ ಹಿರಿಮೆಯನ್ನೂ ತಿಳಿಯಬೇಕಾದರೆ ನನ್ನ ಹಿಂದೆ ಈ ಪೀಠವನ್ನಲಂಕರಿಸಿದ್ದ ಮಹನೀಯರ ಭಾಷಣಗಳನ್ನು ಓದಿರಿ. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಅಧಿಕಾರಿಗಳು ಈ ಭಾಷಣಗಳನ್ನು ಪ್ರತ್ಯೇಕವಾಗಿ ಮುದ್ರಿಸಿ ಕನ್ನಡಿಗ ರೆಲ್ಲರಿಗೂ ಸುಲಭವಾಗಿ ದೊರೆಯುವಂತೆ ಮಾಡಬೇಕೆಂಬುದೇ ನನ್ನ ಬೇಡಿಕೆ. ಬಾಂಧವರೇ! ಸ್ವಾತಂತ್ರ್ಯ ಬೇಕೆಂದು ಸುಮ್ಮನೆ ಗಲಭೆಮಾಡುವುದರಿಂದ ಪ್ರಯೋಜನ ವಿಲ್ಲ. ಅದಕ್ಕೆ ತಕ್ಕ ಯೋಗ್ಯತೆಯನ್ನು ಮೊದಲು ಸಂಪಾದಿಸಿಕೊಳ್ಳಬೇಕು. ದೇಶಭಕ್ತಿ, ರಾಜಭಕ್ತಿ, ಆತ್ಮಭಕ್ತಿ ಮೊದಲಾದ ಸದ್ಗುಣಗಳನ್ನು ಜನಸಾಮಾನ್ಯರಿಗೆ ಕಲಿಸಲು ಯತ್ನಿಸೋಣ. ಕನ್ನಡಿಗರೊಳಗೆ ಎಷ್ಟೋ ಒಳ್ಳೆಯ ಮುತ್ತುಗಳಿವೆ; ಕೆಲವು ಆಣಿಮುತ್ತುಗಳು. ಆದರೆ ಅವೆಲ್ಲವೂ ಒಟ್ಟುಗೂಡದೆ ಬಿಡಿಬಿಡಿಯಾಗಿವೆ. ಅವಕ್ಕೆ ರಂಧ್ರ ಕೊರೆದು ಅವನ್ನು ಚಿನ್ನದ ಸರಿಗೆಯಿಂದ ಕೋದು ಆ ಸರವನ್ನು ನಮ್ಮ ಕನ್ನಡ ಮಾತೆಯ ಕೊರಳಿಗೆ ಹಾಕಿ ಆಕೆಯ ಸಿರಿ ಸಹಜವಾದುದೆಂದು ತೋರಿಸೋಣ. ಸರ್ವೇಶ್ವರನು ಕನ್ನಡಿಗರೆಲ್ಲರಲ್ಲಿಯೂ ಏಕೀಭಾವವನ್ನು ಬೆಳೆಯಿಸಿ ಕನ್ನಡದೇಶ ಹಿಂದಿನ ಉಚ್ಚಾಯಸ್ಥಿತಿಗೇರುವಂತೆ ಅನುಗ್ರಹಿಸಲಿ.

---

## ಕವಿ ಗೋಷ್ಠಿಯ ಸಂಗ್ರಹ ವರದಿ

(ಬೆಳಗ್ಗೆ ೮-೩೦ರಿಂದ ಮಧ್ಯಾಹ್ನ ೧೨ರ ವರೆಗೆ)

ಸಮ್ಮೇಳನದ ಅಂಗವಾಗಿ ಕವಿ ಗೋಷ್ಠಿ ತಾ॥ ೩೧-೧೨-೧೯೩೭ರ (ಶನಿ ದಿನ) ಬೆಳಗ್ಗೆ ೮-೩೦ಕ್ಕೆ ಪ್ರಾರಂಭವಾಯಿತು. ಶ್ರೀಮಾನ್ ಆರ್. ಎಸ್. ಮು ಎಂ.ಎ, ಬಿ.ಟಿ. ಅವರು ಕವಿಭೂಷಣ ಶ್ರೀಮಾನ್ ಕೃಷ್ಣಶರ್ಮ ಬೆಟಗೇರಿ ಅವ ಸಭೆಗೆ ಪರಿಚಯಮಾಡಿಕೊಟ್ಟು, ಅವರನ್ನು ಗೋಷ್ಠಿಯ ಅಧ್ಯಕ್ಷ ಪದವಿಗೆ ಸ ಅಧ್ಯಕ್ಷರಾಗುವಂತೆ ಪ್ರಾರ್ಥಿಸಿದರು. ಮೈಸೂರಿನ ಶ್ರೀ॥ ತೀ. ನಂ. ಶ್ರೀಕಂ ಎಂ.ಎ. ಅವರೂ, ರಬಕವಿಯ ಶ್ರೀ॥ ಈಶ್ವರ ಸಣಕಲ್ಲ ಅವರೂ ಶ್ರೀ॥ ಮುಗ ಪ್ರಾರ್ಥನೆಯನ್ನು ಸಮರ್ಥಿಸಿ ಮಾತನಾಡಿದರು. ಅದೇ ಮೇರೆಗೆ, ಕವಿ ಶ್ರೀ॥ ಕೃಷ್ಣಶರ್ಮ ಬೆಟಗೇರಿಯವರು ಅಧ್ಯಕ್ಷ ಪೀಠವನ್ನಲಂಕರಿಸಿ ಸ್ಫೂರ್ತಿ ವಾಗಿ ಭಾಷಣಮಾಡಿದರು. (ಭಾಷಣವನ್ನು ಬೇರೆಯಾಗಿ ಮುಂದೆ ಕೊಟ್ಟ ಆಮೇಲೆ ಈ ಕೆಳಗೆ ಕಾಣಿಸಿರುವಂತೆ ಸಾಹಿತ್ಯವಾಚನ ನಡೆಯಿತು:—

| ಓದಿದವರು | ಓದಿದ ವಿಷಯು |
|---|---|
| (೧) ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ್ಯರು, ಎಂ.ಎ. | "ಚಿಕ್ಕಮಲ್ಲಮ್ಮ" (ಕವನ) |
| (೨) ,, ಆರ್. ಎಸ್. ಮುಗಳಿ ಅವರು, ಎಂ.ಎ., ಬಿ.ಟಿ. | "ಬಡವನೆಂದಳಲದಿರು" (ಶ್ರೀ॥ ಈಶ್ವರ ಸಣಕಲ್ಲರ ಕವನ) ಮತ್ತು ಸ್ವಂತ ಕವನಗಳು ಕೆಲವು |
| (೩) ಶ್ರೀಮತಿ ಆರ್. ಕಲ್ಯಾಣಮ್ಮನವರು | ಭಾಷಣ: "ಸಾಹಿತ್ಯದಲ್ಲಿ ಸ್ತ್ರೀಯರ ಸ್ಥಾನ" |
| (೪) ಶ್ರೀಮಾನ್ ಎಸ್. ವಿ. ಅಡ್ಡಣಗಿಯವರು, ಬೆಳಗಾಂವಿ | "ಕಣ್ತೆರೆದು ನೋಳ್ಪರಾರು?" (ಕವನ) |
| (೫) ,, ವಿ. ಸೀತಾರಾಮಯ್ಯನವರು, ಎಂ.ಎ. | 'ಶ್ರೀನಿವಾಸರ' ಕೆಲವು ಕವನಗಳು |
| (೬) ,, ದುರ್ದಂಡಯ್ಯನವರು, ಮುಂಡಗನೂರು | "ರಾಷ್ಟ್ರಗೀತೆ" ಮತ್ತು "ಸಾಹಿತ್ಯ ಪರಿಷತ್ತಿನ ವರ್ಣನ" (ಇಟ್ಟಣಗಿಯ ಪಂಡಿತ ಸದಾಶಿವಶಾಸ್ತ್ರಿಗಳ ಕವನಗಳು); "ಜಮಖಂಡಿಯ ಸಮ್ಮೇಳನ" ಮತ್ತು "ಕನ್ನಡ ಮಾತೆಯ ಗೀತೆ" (ಸ್ವಂತ ಕವನಗಳು). |
| (೭) ,, ಪಂಡಿತ ಸಿ. ಕೃಷ್ಣ ಅವರು, ಚೆನ್ನರಾಯಪಟ್ಟಣ | "ಕನ್ನಡ ಭಾಷಾ ಪ್ರಭೇದಗಳು" (ಭಾಷಣ) |
| (೮) ಶ್ರೀಮತಿ ಗೌರೀದೇವಿಯವರು, ಇಂಚಲಮಠ | "ಸಾಹಿತ್ಯವೂ ಸ್ತ್ರೀಯರೂ" (ಪ್ರಬಂಧ) |
| (೯) ಶ್ರೀಮಾನ್ ದ. ರಾ. ಬೇಂದ್ರೆಯವರು, ಎಂ.ಎ. | "ಭೂಮಿತಾಯಿಯ ಹಾಡು", "ಮನದನ್ನೆ" (ಕವನಗಳು) |
| (೧೦) ,, ಎಸ್. ಎಚ್. ಪಾಟೀಲರು, ಬಿ.ಎ., ಎಲ್ಎಲ್.ಬಿ., ಕುಂದಗೋಳ | "'ಧಾತೃ'ವಿಗೆ" (ಕವನ) |
| (೧೧) ,, ಟಿ. ಎಂ. ಆರ್. ಸ್ವಾಮಿ ಅವರು, ಬೆಂಗಳೂರು | "ಕನ್ನಡಕೆ ಹೋರಾಡು ಕನ್ನಡದ ಕಂದ" (ಕವನ) |
| (೧೨) ,, ಅ. ನ. ಕೃಷ್ಣರಾಯರು, ಬೆಂಗಳೂರು | "ಸಾಹಿತ್ಯ ಜೀವನ" (ಭಾಷಣ) |
| (೧೩) ,, ಮನೋಹರರಾವ್ ದೇಶಪಾಂಡೆ ಅವರು, ಅಥಣಿ | "ಕೆಳೆಯ ಕುಂಜ" (ವಚನ) |
| (೧೪) ,, ಆನಂದಕವಿ ಕುರಗುಂದ ಅವರು | "ಬಾಯೆನ್ನ ಗುದ್ದಲಿಯೆ", "ಸೂಜಿದಾರದ ಕದನ" (ಕವನಗಳು) |
| (೧೫) ,, ಸಿ. ಆರ್. ಶ್ರೀನಿವಾಸ ಅಯ್ಯಂಗಾರ್ಯರು, ಚೆನ್ನರಾಯಪಟ್ಟಣ | "ಶ್ರೀ ಚಿಕ್ಕದೇವರಾಜ ಒಡೆಯರ ಕಾಲದ ಸಾಹಿತ್ಯ" (ಭಾಷಣ) |
| (೧೬) ,, ಮುದವೀಡು ಕೃಷ್ಣರಾಯರು, ಧಾರವಾಡ | ಕೆಲವು ಗೀತಗಳು ಮತ್ತು ಕವನಗಳು |

| | ಓದಿದವರು | ಓದಿದ ವಿಷಯ |
|---|---|---|
| (೧೭) | ಶ್ರೀಮಾನ್ ಬಾಲೇಹೊಸೂರು ರಾಮರಾಯರು, ಶಿರಹಟ್ಟಿ | ಒಂದು ಕವನ |
| (೧೮) | ,, ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು, ಬೆಂಗಳೂರು | "ಕನ್ನಡ ನಾಡು" (ಕವನ) |
| (೧೯) | ,, ಬೆಟಗೇರಿ ಕೃಷ್ಣಶರ್ಮ ಅವರು | "ಕಾರ ಹುಣ್ಣಿಮೆ" (ಕವನ) |
| (೨೦) | ,, ಅಲತಗಿ ಮಾಸ್ತರು, ರಬಕವಿ | "ಪ್ರತಿಭೆಗೆ" (ಕವನ) |
| (೨೧) | ,, ಬಸಪ್ಪ ಚೆನ್ನಪ್ಪ ಹುಲ್ಯಾಳಡು | "ಕರ್ನಾಟಕದ ಮಹಿಮೆ" |

(ಮಧ್ಯಾಹ್ನ ೨ರಿಂದ ೩॥ಯ ವರೆಗೆ)

| | | |
|---|---|---|
| (೨೨) | ,, ಜಿ. ಎಸ್. ಕೇಶವಾಚಾರ್ಯರು, ಬಿ.ಎ., ಬಿ.ಟಿ., ಮಡಿಕೇರಿ | "ಸೃಷ್ಟಿ ವರ್ಣನೆ" (ಕವನ) |
| (೨೩) | ,, ಸದಾಶಿವ ಕುಲಕರ್ಣಿ ಅವರು | "ಕರ್ನಾಟ ಗೀತ" (ಕವನ) |
| (೨೪) | ,, ಪ್ರಹ್ಲಾದ ನರೇಗಲ್ಲ ಅವರು, ಬಿಜಾಪುರ | "ಸಮುದ್ರ ಗೀತ" (ಶ್ರೀ॥ ವಿ. ಕೆ. ಗೋಕಾಕರ ಕವನ) |
| (೨೫) | ,, ಗುರುಬಸಪ್ಪನವರು, ಗೋಕಾಕ್ | "ಕಣ್ಣೀರು" (ಕವನ) |
| (೨೬) | ,, ದತ್ತಾತ್ರೇಯ ಬಾಲಕೃಷ್ಣ ಕುಲಕರ್ಣಿ ಅವರು | ಒಂದು ಕವನ |
| (೨೭) | ,, ದತ್ತಾತ್ರೇಯ ಗುಂಡೋ ಕುಲಕರ್ಣಿ ಅವರು | "ಕನ್ನಡ ಗೀತೆ", "ಬೆಳ್ಳಿ" (ಕವನ |
| (೨೮) | ,, ಕೇಶವಶರ್ಮರು, ಗಲಗಲಿ | "ಶಾಲೆಯ ಹುಡುಗರು" (ಶ್ರೀ॥ ಉಪೇ ... ಶರ್ಮರ ಕವನ) |
| (೨೯) | ,, ಡಿ. ಎಲ್. ಕೆರೂರ್ ಅವರು | ಶ್ರೀ॥ ಜಿ. ಪಿ. ರಾಜರತ್ನಂ ಅವರ "ಗು... ಗೊಡಲಿ"ಯ ಒಂದು ಭಾಗ |
| (೩೦) | ,, ಕೃಷ್ಣಮೂರ್ತಿ ಪುರಾಣಿಕರು | "ಬಾಯಿ ತೆರೆ ಭೂಮಿತಾಯಿ", "ಗೋ... (ಕವನಗಳು) |
| (೩೧) | ,, ನಾ. ಶ್ರೀ. ಗಲಗಲಿ ಅವರು | ಶ್ರೀ॥ ಕೆ. ವಿ. ಪುಟ್ಟಪ್ಪನವರ "ಚಂದ್ರ ಹಾಸನ ಭಾಷಣ" (ದೃಶ್ಯದ ಭಾಗ) ಮತ್ತು ಒಂದು ಸ್ವಂತ ಕವನ |
| (೩೨) | ,, ಬಿ. ಆರ್. ಜೋಶಿ ಅವರು | ಶ್ರೀ॥ ಕೇಶವ ಶರ್ಮ ಗಲಗಲಿಯವರ ಹಾಡುಗಳು |
| (೩೩) | ,, ರೋಹಡೇಕರ್ ಅವರು | "ಮಾತೆಯ ಮನದಾಸೆ" (ಕವನ) |

| ಓದಿದವರು | ಓದಿದ ವಿಷಯು |
|---|---|
| (೩೪) ಶ್ರೀಮಾನ್ ಶ್ರೀಕೃಷ್ಣ ಅವರು, ಬಿಜಾಪುರ | "ಮರಳಿದಾಗ" (ಕವನ) |
| (೩೫) ,, ಸಾಲಿ ರಾಮಚಂದ್ರ ರಾಯರು | ಕೆಲವು ಕವನಗಳು |

ಕಡೆಯಲ್ಲಿ, ಅಧ್ಯಕ್ಷರಾದ ಶ್ರೀ॥ ಬೆಟಗೇರಿಯವರು ನಾನಾ ಲೇಖಕರು ಓದಿದ ಬರೆಹಗಳನ್ನು (ಮುಖ್ಯವಾಗಿ ಕವನಗಳನ್ನು) ಕುರಿತು ಕೆಲವು ಮಾತುಗಳನ್ನು ಹೇಳಿದರು.—ಇದುವರೆಗೆ ಓದಿದ ಕವನಗಳೆಲ್ಲವುಗಳ ಪಲ್ಲವಿ ಒಂದೇ: ಕನ್ನಡದ ವಿಚಾರದಲ್ಲಿ ಒಂದು ಕಳವಳ, ಒಂದು ಕರುಣೆ. ಇದು ಸಾಕೆಂದು ತೋರುತ್ತದೆ. ಶ್ರೀ॥ ಆಲೂರರ 'ಗತವೈಭವ' ಕನ್ನಡಿಗರ ಅಭಿಮಾನವನ್ನು ಚಿಮ್ಮಿಸಲು ಸಾಕಾಗಿದೆ. ಈಗ ಬೇಕಾಗಿರುವುದು ವೈಯಕ್ತಿಕ ಹೃದಯಮಂಥನ; ಪ್ರಪಂಚದ ಸುಖ, ದುಃಖ ಇವುಗಳ ವಾಸ್ತವ ಚಿತ್ರ. ಕಾವ್ಯ ಬರೆಯಬೇಕೆಂಬ ಇಚ್ಛೆಯೊಂದೇ ಸಾಲದು. ಪ್ರತಿಭೆ ಬೇಕು. ಶಬ್ದ ಶಕ್ತಿಯ ಪರಿಚಯಮಾಡಿಕೊಳ್ಳಬೇಕು. ಸಾಧನೆ ಬೇಕು. ಅಲ್ಲದೆ, ಕವಿ ತಾನು ಬರೆದ ಕಾವ್ಯವನ್ನು ತಾನೇ ಇಂಪಾಗಿ, ತನ್ನ ಆಶಯ ಅಭಿಪ್ರಾಯಗಳನ್ನು ಇತರರಿಗೆ ಬಗೆಮುಟ್ಟಿಸುವ ರೀತಿಯಲ್ಲಿ ಓದಲು ಕಲಿತಿರಬೇಕು. ಎಂದರೆ, ಕವಿ ಗಮಕ ಕಲೆಯನ್ನೂ ಅಭ್ಯಾಸಮಾಡಬೇಕು — ಎಂದು ಮುಂತಾಗಿ ತಿಳಿಸಿದರು. ಶ್ರೀ॥ ಮುಗಳಿಯವರು ಅಧ್ಯಕ್ಷರಿಗೆ ವಂದನೆಗಳನ್ನು ಸಮರ್ಪಿಸಿದ ಮೇಲೆ ಗೋಷ್ಠಿ ಮುಗಿಯಿತು.

---

## ಕವಿ ಗೋಷ್ಠಿಯ ಅಧ್ಯಕ್ಷರಾಗಿದ್ದ ಕವಿಭೂಷಣ ಶ್ರೀಮಾನ್ ಬೆಟಗೇರಿ ಕೃಷ್ಣಶರ್ಮರವರ ಪ್ರಾರಂಭ ಭಾಷಣ

ನನ್ನ ನಚ್ಚಿನ ಕನ್ನಡಿಗ ಕನ್ನಡಿತಿಯರೆ,

ಸ್ವಸ್ವರೂಪವನ್ನೇ ಮರೆತುಬಿಟ್ಟಿದ್ದ ನಮಗೆ ಇದುವರೆಗೆ ಬೇಕಾಗಿದ್ದ ಮಾತೆಂದರೆ ನಮ್ಮ 'ಉಜ್ವಲ'ವಾದ ಇತಿಹಾಸದ ವಿಷಯದಲ್ಲಿ ಜಾಗೃತವಾದ ಹೆಮ್ಮೆ; ನಮ್ಮ ಸಾಹಿತ್ಯ-ಸಂಸ್ಕೃತಿಗಳ ವಿಚಾರದಲ್ಲಿ ಅಳಿಯದಂತಿರುವ ಅಭಿಮಾನ. ಹೀಗೆಂತಲೇ ನಮಗಿಂತ ಮೊದಲಿಗೆ ಎಚ್ಚತ್ತ ಕನ್ನಡ ಹಿರಿಯರು ನಮ್ಮ ಇತಿಹಾಸ ಸಂಸ್ಕೃತಿಗಳ ಹಿರಿಮೆಯನ್ನು ಸ್ವರವೆತ್ತಿ ಸಾರಿಯೇ ಸಾರಿದರು; ಇನ್ನೂ ಸಾರುತ್ತಿರುವರು. ನಮ್ಮ ಸಾಹಿತ್ಯದ ಸ್ವಾರಸ್ಯ-ಸತ್ತ್ವಗಳನ್ನು ಹಾಡಿಯೇ ಹಾಡಿದರು; ಈಗಲೂ ಹಾಡುತ್ತಿರುವರು. ನಮ್ಮ ಆಚಾರ-ವಿಚಾರ ಪರಂಪರೆಯ ಮೇಲ್ಮೆಯನ್ನು ಹೊಗಳಿಯೇ ಹೊಗಳಿದರು; ಇದುವರೆಗೂ ಹೊಗಳುತ್ತಿರುವರು. ಈಗ ಕನ್ನಡ ನಾಡು ಸಂಪೂರ್ಣ ಜಾಗೃತವಾಗಿದೆ. ಇಲ್ಲಿಯ ಜನರಿಗೆ ಸ್ವಸ್ವರೂಪದ ಅರಿವು ಸಾಕಷ್ಟಾಗಿದೆ. ಚೆದರಿ ಚೆಲ್ಲಾಪಿಲ್ಲಿಯಾಗಿದ್ದ ತಮ್ಮ ಜನಾಂಗವನ್ನು ಮರಳಿ ಸರ್ವಾಂಗ ಸುಂದರವಾಗಿ ಕಟ್ಟಬೇಕೆಂಬ ಬಯಕೆ ಕನ್ನಡಿಗರಲ್ಲಿ ತಲೆದೋರಿದೆ. ಈ ಸಂದರ್ಭದಲ್ಲಿ ನಮ್ಮ

ಜನತೆಯು ಕೇವಲ ಕುರುಡುನಂಬುಗೆಯ ಕೋಲನ್ನು ಹಿಡಿದು ನಡೆಯದೆ ಶ್ರ ಮನದಿಂದ ತಮ್ಮ ಹಿಂದುಮುಂದುಗಳನ್ನೆಲ್ಲ ಚೆನ್ನಾಗಿ ವಿಚಾರಿಸಿ ವಿವೇಕ ಹಜ್ಜೆಗಳನ್ನು ಮುಂದೆ ಹಾಕಬೇಕಾದುದು ಅತ್ಯಾವಶ್ಯಕವಾಗಿದೆ.

ನಮ್ಮ ಹಳೆಯದೆಲ್ಲವನ್ನೂ ಹೆಮ್ಮೆಯಿಂದ ಕಂಡು ಅದನ್ನೇ ಅನುಸರಿ ದಿನಗಳು ಈಗ ಉಳಿದಿಲ್ಲ. ನಮ್ಮ ಹಿಂದಣವರ ಪ್ರತಿಯೊಂದು ಕೃತಿಯೂ ಹಿರಿ ಆಗಿದ್ದಲ್ಲಿ ಕನ್ನಡ ನಾಡು ಕಂಗೆಟ್ಟು ಕಾಲು ಮುರಿದುಕೊಂಡು ಬೀಳುತ್ತಿದ್ದಿತೇ ನೂರಾರು ವರ್ಷಗಳವರೆಗೂ ಅಂಧಕಾರವನ್ನು ತಂದುಕೊಳ್ಳುತ್ತಿದ್ದಿತೇಕೆ? ಸಮಸ್ತ ಭಾರತದ ಮಿಕ್ಕ ಪ್ರಾಂತಗಳು ಎಚ್ಚತ್ತು ಕರ್ತವ್ಯೋನ್ಮುಖವಾದಾಗಲೂ ನ ನಾಡು ಮಾತ್ರ ಕುಂಭಕರ್ಣನ ನಿದ್ರೆಯಲ್ಲಿ ಬಿದ್ದುಕೊಂಡುದೇಕೆ? ಈ ಮಾತ ಕುರಿತು ವಿಮರ್ಶಿಸಿ ನೋಡಿದರೆ, ಮುಂದುವರಿಯುತ್ತಿರುವ ಲೋಕದೊ ನಡೆಯುವಂತಹ ಸಾಹಸ-ಸತ್ತ್ವಯುಕ್ತ ಕಾರ್ಯಗಳನ್ನು ನಮ್ಮವರು ಅನು ಮಾಡಲಿಲ್ಲವೆಂಬ ಅಭಿಪ್ರಾಯವನ್ನೇ ತಳೆಯಬೇಕಾಗುವುದು. ಕನ್ನಡಿಗರು ತಮ್ಮ ಇತಿಹಾಸ, ಸಾಹಿತ್ಯ, ಸಂಸ್ಕೃತಿಗಳನ್ನು ಹೊಗಳಿಕೊಳ್ಳುವುದರಲ್ಲಿ ವೇಳೆಗಳೆಯುವುದಕ್ಕಿಂತ ಅವುಗಳಲ್ಲಿಯ ತಪ್ಪೊಪ್ಪುಗಳನ್ನು ತೂಕಮಾಡುವುದು ಅವಶ್ಯವಾಗಿದೆ. ಕನ್ನಡ ನಾಡಿನ ಭವಿಷ್ಯವನ್ನು ನಿಜವಾಗಿ ಉಜ್ವಲಗೊಳಿ ಬೇಕಾಗಿದ್ದರೆ ನಾವು ನಮ್ಮ ಮುಂದಿನ ಅಡಿಯನ್ನು ಯಾವ ದಾರಿಯಲ್ಲಿ ಇ ಬೇಕೆಂಬುದನ್ನು ಕುರಿತು ವಿಚಾರಿಸುವುದು ಅತ್ಯಗತ್ಯವಾಗಿದೆ.

ಇಲ್ಲಿ ನೆರೆದ ಹಲವು ಜನ ಹಿರಿಯರೆದುರು ನಾನೊಬ್ಬ ತರುಣ! ಅಸಂತೃ ಮನಸ್ಸಿನ—ಅತೃಪ್ತ ಹೃದಯದ—ಪ್ರಕ್ಷುಬ್ಧ ಭಾವನೆಗಳ ತರುಣ! ಕನ್ನಡ ಜನ ರೆಲ್ಲರೂ ಅಸಂತುಷ್ಟ ಮಾನಸರೂ ಅತೃಪ್ತ ಹೃದಯರೂ ಆಗಿರಬೇಕೆಂದು ನನ್ನ ಉತ್ಕ ವಾದ ಆಶೆ. ನಾಡಿನ ಸಜೀವಜೀವನಕ್ಕೆ ಜನತೆಯ ಈ ಬಗೆಯ ಅಸಂತುಷ್ಟ ಅತೃಪ್ತಿಗಳೇ ಸಾಧನಗಳಾಗುವುವು; ಇಂತಹ ಜನತೆಯುಳ್ಳ ನಾಡಿನ ಜನ ಜೀವನವು ದಿವ್ಯಸಾಹಿತ್ಯಕ್ಕೆ ಹಲವು ತೆರದ ವಸ್ತು-ಸಂನಿವೇಶ-ಪಾತ್ರ ಸಮುದಾ ಗಳನ್ನು ಒದವಿಸಿಕೊಡಲು ಕಾರಣವಾಗುವುದು. ಮಾನವನು ಆಶೆ-ಆಕಾಂಕ್ಷೆ ಕಡೆಗೋಲಿನಿಂದ ತನ್ನ ಎದೆಯ ಕಡಲನ್ನು ಎಡೆಬಿಡದೆ ಕಡೆದುಕೊಳ್ಳುವುದರಿಂದ ಸಜೀವ ಸಾಹಿತ್ಯ ರತ್ನಗಳ ಉತ್ಪತ್ತಿಯಾಗುವುದು; ಸತ್ಯಸಂಶೋಧನೆಯ ಕಾರ್ಯ ಸುಗಮವಾಗಿ ನಡೆಯುವುದು. ಇದರಿಂದಲೇ ವ್ಯಕ್ತಿಯ—ತನ್ಮೂಲಕ ರಾಷ್ಟ್ರದ ಅಭ್ಯುದಯವಾಗುವುದು.

* * * * *

ಸತ್ಯದ ಸಂಶೋಧನವೇ ಸಾಹಿತ್ಯದ ತಳಹದಿ; ಸತ್ಯದ ದರ್ಶನವೇ ಅದರ ಜೀವ ಆದರೆ ಸತ್ಯವು ಕೊನೆಯಿಲ್ಲದುದೆಂದು ಎಲ್ಲ ಬಲ್ಲವರ ಹೇಳಿಕೆ. ಬೇರೆ ಬೇರೆ ಕಾಲ ಸಾಹಿತಿಗಳು ಈ ಅನಂತವಾದ ಸತ್ಯದ ಒಂದೆರಡು ಕಿರಣಗಳನ್ನೋ ಕಿರಣಾಂಶ ಗಳನ್ನೋ ಕಂಡು, ಅಹಂಕಾರಕ್ಕೆ ಸಿಲ್ಕಿ, ಅದನ್ನೇ ಸತ್ಯದ ಸಂಪೂರ್ಣ ಸ್ವರೂಪವೆಂ

ಹೇಳುತ್ತ ನಡೆಯುವರು. ಜನಸಾಮಾನ್ಯರು ಅವರು ಹೇಳಿದುದೇ ಸತ್ಯವೆಂದು ನಂಬಿ ಕಣ್ಣು ಮುಚ್ಚಿ ಅವರ ಅನುಯಾಯಿಗಳಾಗಿಬಿಡುವರು. ಹೀಗಾಗುವುದರಿಂದ ಜನರು ಸತ್ಯಸಂಶೋಧನದ ಒಳನೋಟವನ್ನು ಕಳೆದುಕೊಂಡವರಾಗಿ, ನಾಡಿಗೆ ನಾಡನ್ನೇ ಪಾತಾಳ ಖಾತಕ್ಕೆ ನೂಕುವರು. ಹೀಗೆ ಆಗದಿರಬೇಕಾದರೆ ವ್ಯಕ್ತಿಗಳ ಹೃದಯ ಮಂಥನದ ಕಾರ್ಯವು ಅವಿಚ್ಛಿನ್ನವಾಗಿ—ಅಖಂಡವಾಗಿ ನಡೆದಿರಬೇಕು. ಅದಕ್ಕೆ ದೇಶ, ಕಾಲ, ಕುಲಗಳ ಯಾವ ಮರ್ಯಾದೆಯನ್ನೂ ಹಾಕಲಾಗದು.

ಅಸಂತುಷ್ಟ ಹೃದಯದ ಮಾನವ ಕುಲದ ಜೀವನದ ಕತೆಯನ್ನೆ ನಮ್ಮ ಪುರಾಣಗಳು 'ಸಮುದ್ರ ಮಥನ'ದ ರೂಪಕ ಕಥೆಯನ್ನಾಗಿ ಕಟ್ಟಿವೆ. ಅಂದು ಸುರರೂ ಅಸುರರೂ ಸೇರಿ ಕಡಲನ್ನು ಕಡೆದರು. ಅದರಿಂದ ಹೊರಟ ವಸ್ತುಗಳ ಹಿಂದೆ ಹುದುಗಿದ್ದ ತತ್ತ್ವವೇನೆಂಬುದನ್ನು ಕುರಿತು ನಮ್ಮವರಾರಾದರೂ ವಿಚಾರಮಾಡಿರಬಹುದೇ? ಅಂದಿನ ಕಡಲ ಕಡೆತದಿಂದ ಹೊರಟ ವಸ್ತುಗಳಲ್ಲಿ ಬರೀ ಶ್ರೇಯಸ್ಸಾಧಕವಾದ ಜಪತಪಗಳ ಸಾಧನಗಳಿರಲಿಲ್ಲ; ತಾಳ ಕಟಿದು ಬಾಯ್ಬಿಟ್ಟು ಕೂಗುವ ಭಕ್ತಿದೇವತೆಯಿರಲಿಲ್ಲ; ಯಾವುದೂ ಬೇಡವೆಂದು ಹೊರಡುವ ಸಂನ್ಯಾಸಿಯ ವೈರಾಗ್ಯ ಸಾಧಕ ಪದಾರ್ಥಗಳಿರಲಿಲ್ಲ. ಅಲ್ಲಿ ಹೊರಟ ವಸ್ತುಗಳೆಲ್ಲವೂ ಮಾನವನ ಇಹಲೋಕದ ಜೀವನವನ್ನೇ ರಸದುಂಬಿಸುವಂತಹವು. ಅಂದು ಸುರಾಸುರರು ತಮ್ಮ ಸಾಗರ ಮಂಥನದಿಂದ ಭಾಗ್ಯಪ್ರದಾಯಿನಿಯಾದ ಮಹಾಲಕ್ಷ್ಮಿಯನ್ನು ಪಡೆದು ಸ್ವೀಕರಿಸಿದರು. ಭೋಗ ಜೀವನದ ಸೊಗಸನ್ನು ಹೆಚ್ಚಿಸುವ ಕೌಸ್ತುಭಮಣಿ (ಜಪಮಣಿಯಲ್ಲ), ಪಾರಿಜಾತ ಪುಷ್ಪ, ಸುರೆ, ರಂಭಾದಿ ದೇವಾಂಗನೆಯರು—ಇವೆಲ್ಲವನ್ನೂ ಹೊಂದಿದರು. ವೀರವೃತ್ತಿಯನ್ನು ಮೆರೆಯಿಸುವಂತಹ ಐರಾವತ, ಉಚ್ಚೈಃಶ್ರವಸ್ಸುಗಳನ್ನು ದೊರಕಿಸಿದರು. ಬೇಡಿದುದನ್ನು ನೀಡಲು ಸಮರ್ಥವಾದ ಕಾಮಧೇನು, ಕಲ್ಪತರು, ಚಿಂತಾರತ್ನಗಳನ್ನು ಪಡೆದು ಹಿಗ್ಗಿದರು. ಕಡಲ ಕಡೆತದ ಕಾಲದಲ್ಲಿ ಕಾಲಕೂಟದಂತಹ ಭೀಕರ ವಿಷವೂ ಹೊರಕ್ಕೆ ಬಂದಿತು. ಅದರ ಕಷ್ಟವನ್ನು ಕಳೆಯುವುದಕ್ಕಾಗಿ ಓಷಧೀಶನಾದ ಚಂದ್ರನನ್ನೂ ದೇವ ವೈದ್ಯನಾದ ಧನ್ವಂತರಿಯನ್ನೂ ಹುಟ್ಟಿಸಿದರು. ಆಮೇಲೆ ಅಮೃತವನ್ನು ಪಡೆದು, ಕುಡಿದು, ಬಿಡುಗಣ್ಣರಾದರು; ಅದರಿಂದಲೇ ನಿರ್ಜರರಾದರು, ನಿರ್ಮರ್ತ್ಯರಾದರು. ನಾವೂ ಹಾಗೆ ಬಿಡುಗಣ್ಣರೂ, ನಿರ್ಜರರೂ, ನಿರ್ಮರ್ತ್ಯರೂ ಆಗಬೇಕಿದ್ದಲ್ಲಿ ನಮ್ಮ ಎದೆಯ ಕಡಲನ್ನು ಅವಿರತವಾಗಿ ಕಡೆಯುತ್ತಿರಬೇಕು. ಈ ಕಡೆತಕ್ಕೆ ತಡೆಯೆಂಬುದೇ ಇರಕೂಡದು. ಈ ಕಡೆತದಿಂದಲೇ 'ಭಾವಚಿಂತಾರತ್ನ'ಗಳನ್ನೂ 'ಅನುಭವಾಮೃತ'ವನ್ನೂ ಲೋಕದ ಕಣ್ಣೆದುರು ತಂದು ಇರಿಸುತ್ತಿರಬೇಕು. ಈ ಬಗೆಯ 'ಭಾವರತ್ನ,' 'ಅನುಭವಾಮೃತ' ಗಳನ್ನೊಳಗೊಂಡ ಶಬ್ದಪಾತ್ರವೇ ನಿಜವಾದ ಸಾಹಿತ್ಯ! ಇಂತಹ ಸಾಹಿತ್ಯವೇ ಮಾನವರನ್ನು ಅಮರ್ತ್ಯರನ್ನಾಗಿಸುವ ಅಮೃತ!

* * * *

ನನ್ನ ಅಸಂತುಷ್ಟ ಹೃದಯವು ನಮ್ಮ ಕನ್ನಡಿಗರ ಭೂತ-ವರ್ತಮಾನ ಜೀವನವನ್ನು ಯಾವ ರೀತಿಯಲ್ಲಿಯೂ ಸಂಪೂರ್ಣ ಜೀವನವೆಂದು ಒಪ್ಪಿಕೊಳ್ಳಲಾರದು.

ನಮ್ಮ ಹಿರಿಯರು ಎಷ್ಟೇ ರಾಜ್ಯಗಳನ್ನು ಕಟ್ಟಿರಲಿ, ಎಷ್ಟೇ ಕಲೆಗಳನ್ನು ಕಂಡು ಬೆಳೆಯಿಸಿರಲಿ, ಎಷ್ಟೇ ಸಂಸ್ಕೃತಿ ಪರಂಪರೆಗಳನ್ನು ಕಾಯ್ದು ಮುಂದುವರಿ ಅವಾವುವೂ ಸಂಪೂರ್ಣತೆಯಿಂದ ಕೂಡಿದುವಲ್ಲವೆಂದು ನನ್ನ ಭಾವನೆ. ಏಕೆ ಸಂಪೂರ್ಣ ಜೀವನವು ಸತ್ಯ ವಸ್ತುವಿಗೊಂದಕ್ಕೆ ಇರುವುದು. ಸಂಪೂರ್ಣತೆಗೆ ವಿಚ್ಛಿತ್ತಿಯಿರದು; ಕನ್ನಡಿಗರ ವೈಭವಜೀವನಕ್ಕೂ ಸಂಸ್ಕೃತಿಪರಂಪ ವಿಚ್ಛಿತ್ತಿಯಿದೆ. ಯಾವುದೊಂದು ನಾಡಿನಲ್ಲಿ ಯಾವುದೇ ಒಂದು ತತ್ತ್ವದ ಕೊನೆ ಕಂಡುಬಿಟ್ಟೆವೆಂಬ ಭಾವನೆಯು ಬಲಿಯುತ್ತ ಹೋದಂತೆಲ್ಲ ಆ ನಾಡಿನ ಮೊದಲಾಗುವುದು. ಈ ಮಾತನ್ನು ಸಿದ್ಧಗೊಳಿಸಲಿಕ್ಕೆ ಪ್ರಪಂಚದ ಇತಿಹಾ ಬೇಕಾದಷ್ಟು ಪ್ರತ್ಯಕ್ಷ ಪ್ರಮಾಣಗಳು ಸಿಕ್ಕುವುವು. ದೂರವೇಕೆ? ನಮ್ಮ ನಾಡನ್ನೇ ಉದಾಹರಣೆಗೆ ತೆಗೆದುಕೊಳ್ಳೋಣ! ಕನ್ನಡಿಗರು ನಾವೆಲ್ಲ ಸಂಸ್ಕೃ ಕೊನೆಯ ಮೆಟ್ಟಿಲನ್ನು ಏರಿದೆವೆಂಬ ಕುಣಿದಾಟವನ್ನು ನಡೆಯಿಸಿದಾಗಲೆಲ್ಲ ನಾಡಿನ ಬಾಳನ್ನು ಆಳವಾದ ಕಂದರದಲ್ಲಿ ಕೆಡಹುತ್ತ ಬಂದಿರುವೆವು. ನಮ್ಮ ಆಧ್ಯಾತ್ಮಿಕ ಸತ್ಯವೊಂದನ್ನೇ ಗುರಿಯಾಗಿಟ್ಟುಕೊಂಡು, ಆಧಿಭೌತಿಕ ಸತ್ಯದ ಕುರುಡುನೋಟದಿಂದ ನೋಡಿದರು. ಆಧ್ಯಾತ್ಮಿಕ ಸತ್ಯದಂತೆಯೇ ಆಧಿಭೌತಿಕ ಸ ಅನಾದ್ಯನಂತವಾದುದು. ಇವೆರಡೂ ಸತ್ಯಗಳ ಕೊನೆಯನ್ನು ಕಾಣಬೇ ಸಂಶೋಧಕರು ತಮ್ಮ ಕರ್ಮಯೋಗವನ್ನು ಅನಂತಕಾಲದವರೆಗೂ ನ ಬೇಕಾಗುವುದು. ಹೀಗೆ ಮಾಡದೆ ನಡೆದುಕೊಂಡುಬಂದ ಮಾತನ್ನು 'ನಮ್ಮವರು ಎಂದೋ ಸತ್ಯದ ಕೊನೆಯ ರೇಖೆಯನ್ನು ಕಂಡಿದ್ದಾರೆ' ಎಂಬ ಸಮಾಧಾನದಿಂದ ಹೊರಟುಬಿಟ್ಟರೆ, ಮಾನವನ ಮನಸ್ಸಿನ ಅಸಂತುಷ್ಟಿ ಆತ್ಮ ಹಿಂಗಿಹೋಗುತ್ತವೆ. ಇದರಿಂದ ಆತನ ಸತ್ಯ ಸಂಶೋಧನೆಯ ಕಾರ್ಯದಲ್ಲಿ ಯುಂಟಾಗಿ, ಅವನು ಖಂಡಿತವಾಗಿ ಹೇಡಿಯೂ ನಿಷ್ಕ್ರಿಯನೂ ಆಗುತ್ತಾ ಕನ್ನಡಿಗರ ಇದುವರೆಗಣ ಇತಿಹಾಸದ ಪ್ರತಿಯೊಂದು ಅಂಗದಲ್ಲಿಯೂ ಈ ಸಿದ್ಧಿಯ ಅನೇಕ ಪುನರಾವೃತ್ತಿಗಳನ್ನು ಕಾಣಬಹುದಾಗಿದೆ. ಈಗ ಉದಾಹರಣೆ ನಮ್ಮ ಸಾಹಿತ್ಯ ಜೀವನವೊಂದನ್ನೇ ಮುಂದಿಟ್ಟುಕೊಂಡು ವಿಮರ್ಶಿಸೋಣ!

* * * *

ನಮ್ಮ ಪ್ರಾಚೀನರಲ್ಲಿ ಕವಿಗಳಾಗಿ ಹಾಡಿಹೋದವರು ಎಣಿಕೆಯಿಲ್ಲ ಜನರು. ಅನೇಕ ವಿಪ್ಲವೋಪದ್ರವಗಳಲ್ಲಿ ಸಿಲುಕಿ ಅಳಿದುಳಿದವರ ಕಾವ್ಯ ಗ್ರಂಥಗಳೇ ನಮಗೆ ಸಾವಿರಗಟ್ಟಲೆಯಾಗಿ ಸಿಕ್ಕುವುವು. ಗ್ರಂಥಗಳಲ್ಲಿ ಅಡಕ ಶ್ರಾವಣ ಸಾಹಿತ್ಯವಾಹಿನಿಯೊಂದು ನಮ್ಮಲ್ಲಿ ತಲೆಮಾರಿನಿಂದ ತಲೆಮಾರಿಗೆ ಬಂದು ಕನ್ನಡ ಜನಪದದಲ್ಲಿ ರೂಢವಾಗಿರುವುದು. ಇದರಲ್ಲಿಯೂ ಅಳಿದುದೆಷ್ಟೋ ಉಳಿದುದೆಷ್ಟೋ! ಒಂದು ಮಾತನ್ನು ಮಾತ್ರ ಇಲ್ಲಿ ಹೇಳಲೇಬೇಕಾಗಿದೆ. ಗ್ರಂ ವಾಗಿರುವ ಚಾಕ್ಷುಷ ಸಾಹಿತ್ಯಕ್ಕಿಂತ, ಜನಸಮೂಹದ ಬಾಯಿ ಕಿವಿಗಳಲ್ಲಿ ಕೊಂಡುಬಂದಿರುವ ಶ್ರಾವಣ ಸಾಹಿತ್ಯದಲ್ಲಿ ಸಾಹಿತ್ಯದ ನೈಜಗುಣಗಳಾದ ಮೈ

ರಸಾನುಭೂತಿಯೂ, ಪ್ರಾಮಾಣಿಕತೆಯೂ, ಸಹಜತೆಯೂ ಹೆಚ್ಚಾಗಿರುವುವು. ಮಧುರಕವಿಯಂತಹ ಸಂಪ್ರದಾಯಶರಣರು ಈ ಸಹಜ ಸಾಹಿತ್ಯವನ್ನು ಬೀಳುಗಳೆದು ಬೈಯಲೊಲ್ಲರೇಕೆ? ಇದರೊಳಗಿನ ಕಾವ್ಯಸತ್ತ್ವವು ವಿಮರ್ಶಕರ ಮನಸ್ಸನ್ನು ಸೆಳೆದುಕೊಂಡು ಖಂಡಿತ ಇದನ್ನು ಚಿರಜೀವಿಯನ್ನಾಗಿಸಬಲ್ಲುದು.

ನಮ್ಮ ಪ್ರಾಚೀನ ಸಾಹಿತಿಗಳು ಹೆಚ್ಚಾಗಿ ಬೋಧಕರಾಗಿಯೇ ಸಾಹಿತ್ಯ ರಂಗಕ್ಕೆ ಇಳಿದಿದ್ದಾರೆ. ಪಂಪ, ರನ್ನ, ನೇಮಿಚಂದ್ರ ಇವರನ್ನುಳಿದು ಮಿಕ್ಕ ಯಾವ ಜೈನಕವಿಗಳೂ—ಅವರ ದೃಷ್ಟಿಯಲ್ಲಿದ್ದ—ಲೌಕಿಕ ಕಾವ್ಯಗಳನ್ನು ಬರೆಯಲಿಲ್ಲ. ಬರೆದವರೆಲ್ಲರೂ ಜೈನ ತೀರ್ಥಂಕರರ ಭವಭವಾಂತರಗಳ ಅಸ್ವಾಭಾವಿಕ ಘಟನೆಗಳನ್ನು ಸಾಂಪ್ರದಾಯಿಕ ಕಾವ್ಯದ ಧಾಟಿಯಲ್ಲಿ ಕಟ್ಟಿ ಹೇಳಿದರು. ಇವರೆಲ್ಲರೂ ನಡೆದು ಕೊಂಡುಬಂದಿದ್ದ ಒಂದು ಪಂಥದ ಪ್ರಚಾರಕರಾದುದರಿಂದ ಸತ್ಯದ ಅನಂತತೆಯ ದೃಷ್ಟಿಯನ್ನೇ ಕಳೆದುಕೊಂಡುಬಿಟ್ಟವರು; ಮತಾಭಿಮಾನದ ಮತ್ತಿನಿಂದ ಸಹಜ ಬುದ್ಧಿಯನ್ನು ಹಾಳುಮಾಡಿಕೊಂಡವರು. ಇವರೆಲ್ಲರಿಗೂ ಜಿನಧರ್ಮವೇ ಕೊನೆಯ ಸತ್ಯ. ಅದರಿಂದ ಅಲ್ಲಾಡುವುದಕ್ಕೆ ಇವರ ಮನಸ್ಸೇ ಒಪ್ಪದು.

ಜೈನ ಸಾಹಿತಿಗಳ ತರುವಾಯ ಮುಂದೆ ಬಂದ ವೀರಶೈವ ವಚನಕಾರರಲ್ಲಿ ಸತ್ಯಸಂಶೋಧನೆಯ ಸ್ವತಂತ್ರ ಕೃಷಿಯೂ ಹಂಬಲೂ ಸ್ಪಷ್ಟವಾಗಿ ಕಾಣುತ್ತವೆ. ಇದರಿಂದಲೇ ವಚನ ಸಾಹಿತ್ಯದಲ್ಲಿ ಸ್ವಾತಂತ್ರ್ಯವೂ ಮನಃಕ್ಷೋಭೆಯೂ ಪ್ರಾಮಾಣಿಕತೆಯೂ ಹೆಚ್ಚಾಗಿ ಕಂಡುಬರುವುವು. ಮೊದಮೊದಲಿನ ವಚನಕಾರರು ತಮ್ಮ ಹೃದಯಮಂಥನದಿಂದ ಹೊರಟ ಅನುಭವಾಮೃತವನ್ನು ತಮ್ಮ ಸಾಹಿತ್ಯದಲ್ಲಿ ತುಂಬು ತುಂಬಾಗಿ ಹುದುಗಿಸಿರುವರು. ಆದರೆ ಇವರ ಬೆನ್ನಹಿಂದೆ ಬಂದ ವೀರಶೈವ ಪುರಾಣ ಸಾಹಿತಿಗಳು ಮಾತ್ರ ಸತ್ಯಸಂಶೋಧನೆಗಾಗಿ ಮುಂದೆ ಬಾರದೆ, ಜನಸಾಮಾನ್ಯರಿಗೆಂದು ಶಿವಶರಣರ ಪವಾಡದ ಅದ್ಭುತ ಕತೆಗಳನ್ನು ಹೇಳುವುದಕ್ಕೆ ಹೊರಟರು. ಹೇಳಿ ಕೇಳಿ ಪುರಾಣಿಕರಿವರು. ಪುರಾತನರ ಆಚಾರ-ವಿಚಾರಗಳ ಹೊರತು ಇನ್ನೇನು ಹೇಳುವರು? ಇವರ ಸಾಹಿತ್ಯವು ಕೊಟ್ಟ ವೇಷಭೂಷಣಗಳೇನೋ ಹೊಸ ದಾರಿಯವಾದರೂ ಜೀವ-ದೇಹಗಳೆಲ್ಲ ವೀರಶೈವ ಪಂಥದ ಮಾತುಕತೆಗಳಿಂದ ಹುದುವಟ್ಟಂತಹವು. ಇವರೂ ತಮ್ಮ ಪುರಾತನರು ಹೇಳಿದ ಮಾತೇ ಕೊನೆಯ ಸತ್ಯವೆಂದು ಸಾರುವ ಡಂಗುರಿಗರಾದರು. ಆದುದರಿಂದಲೇ ಇವರ ಸಾಹಿತ್ಯವು ಅಸ್ವಾಭಾವಿಕತೆ-ಅಪ್ರಾಮಾಣಿಕತೆಗಳ ಮುದ್ದೆಯಾಗಿ ಕುಳಿತಿತು. ಸ್ವಾನುಭವವನ್ನು ಕಾಣದ ಸಾಹಿತ್ಯರಾಶಿಗೆ ಬೆಲೆಯೆಲ್ಲಿಯದು?

ಇನ್ನು ಬ್ರಾಹ್ಮಣ ಕವಿಗಳು ಮುಂದುವರಿದು ಮಾಡಿದ ಹೆಚ್ಚಿನ ಸತ್ಯಾನುಭವ ದರ್ಶನಕಾರ್ಯವಾದರೂ ಏನಿದೆ? ಎಲ್ಲರೂ ಸನಾತನ ಸಂಪ್ರದಾಯದ ಶರಣರು. ಇವರಲ್ಲಿಯು ಕೆಲವರು ಸಂಸ್ಕೃತ ಭಾಷೆಯಲ್ಲಿದ್ದ ಇತಿಹಾಸ-ಪುರಾಣಗಳನ್ನು ಕನ್ನಡಿಸಿದರು; ಇನ್ನು ಕೆಲವರು ಶ್ರೀ ಶಂಕರಾಚಾರ್ಯರ ಅದ್ವೈತಮತದ ಪ್ರಚಾರಕರಾದರು; ಮತ್ತೆ ಹಲವರು ಶ್ರೀ ಮಧ್ವಾಚಾರ್ಯರ ದ್ವೈತಮತದ

ಪ್ರಸಾರಕರಾದರು. ಇವರೆಲ್ಲರೂ ಸೇರಿ ಮಾಡಿದುದೇನು? ಭಕ್ತಿ–ಜ್ಞಾನ ಹೆಸರಿನಿಂದ ಜನರಲ್ಲಿ ವೈರಾಗ್ಯವೃತ್ತಿಯನ್ನು ಹೆಚ್ಚಿಸಿದರು. ಇಹಲೋಕ ಜೀವನಕ್ಕೆ ಅವಶ್ಯವಾಗಿದ್ದ ಮಹತ್ತ್ವಾಕಾಂಕ್ಷೆಯನ್ನು ಮುಗಿಸಿಬಿಟ್ಟರು. ಇಲ್ಲದ ಸುಖದ ಆಶೆಯನ್ನು ತೋರಿಸಿ, ಇದ್ದ ಸುಖದ ದಾರಿಗಳನ್ನು ತೊರೆಯಿಸಿ, ಜನತೆಯಲ್ಲಿ ಹೇಡಿತನವನ್ನೂ ನಿರಾಶೆಯನ್ನೂ ಹಬ್ಬಿಸಿದರು. ಇದರಿಂದ ಇಹಪರಗಳೆರಡೂ ಹೊರಟುಹೋಗಿ, ವೈಯಕ್ತಿಕ ಹೃದಯಮಂಥನಕ್ಕೆ ಮಾರ್ಗವೇ ಇಲ್ಲದಾಗಿ, ದೈವವಾದದ ಕುರುಡತನವು ಮಾತ್ರ ಹೆಚ್ಚಿತು. ಪೌರುಷಕ್ಕೆ ಎಡೆಯೇ ಇಲ್ಲದಾ ಯಿತು. ಕುಮಾರವ್ಯಾಸ, ಲಕ್ಷ್ಮೀಶ ಮೊದಲಾದ ಕವಿಗಳು ಸಂಸ್ಕೃತ ಪುರಾಣ ಗಳನ್ನು ಮೂಲಕ್ಕಿಂತ ಹೆಚ್ಚು ರಂಜಕವಾಗಿ ಕನ್ನಡಿಸಿರಬಹುದು; ಆದರೆ ಅವುಗಳ ಸತ್ಯದ ವಿಚಾರದಲ್ಲಿ ಪುರಾತನರ ಮಾತುಗಳೇ ಪ್ರಮಾಣವಾಗಿರುವುವು.

* * * *

ಕೃತ್ರಿಮತೆಯ ಯಾವ ಸೋಂಕೂ ಇಲ್ಲದ ಉಪನಿಷತ್ಕಾಲದ ಋಷಿಗಳು ಸತ್ಯದ ಅನಂತತೆಯನ್ನು ಚೆನ್ನಾಗಿ ಕಂಡುಹಿಡಿದಿದ್ದರೇನೋ! ಏಕೆಂದರೆ, ಸತ್ಯದ ಸಂಪೂರ್ಣ ದರ್ಶನವಾಗುವುದು ಸಹಜವಲ್ಲವೆಂದು ಅವರು ತುಂಬ ನಂಬಿಕೊಂಡಿದ್ದ ರೆಂದು ತೋರುವುದು. ಆದರಿಂದಲೇ ಅವರು

"ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ।
ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ॥"

ಎಂದು ಮೊದಲಾಗಿ ಜ್ಞಾನಾಭಿಮಾನಿ ದೈವತವನ್ನು ಪ್ರಾರ್ಥಿಸಿರುವರು. ಸತ್ಯ ಸಂಶೋಧನೆಯ ಕಾರ್ಯದ ದೃಷ್ಟಿಯಿಂದ ನೋಡಿದಲ್ಲಿ ಉಪನಿಷತ್ಕಾಲ ಸಂಪೂರ್ಣ ಪ್ರಾಮಾಣಿಕಯುಗವೆಂದು ಹೇಳಬಹುದು. ಉಪನಿಷತ್ತಿನ ಋಷಿಗಳು ತಮ್ಮ ವೈಯಕ್ತಿಕ ಕೃಷಿಯ ಫಲವಾಗಿ ಒಬ್ಬೊಬ್ಬರು ಒಂದೊಂದು ವಿಧದ ಸತ್ಯದರ್ಶನ ವನ್ನು ಕುರಿತು ನುಡಿದಿರುವರು. ಆದರೆ ಅವರ ಹಿಂದಿನಿಂದ ಬಂದ ಉಪದೇಶಕರೆಲ್ಲರೂ ಬೇರೆ ಬೇರೆ ಋಷಿಗಳ ಬೇರೆ ಬೇರೆ ಅನುಭವಗಳನ್ನು ತಮ್ಮ ಮೂಗಿನ ನೇರಕ್ಕೆ ಸಮನ್ವಯಗೊಳಿಸಲು ಪ್ರಯತ್ನಿಸಿ ಆ ಅನುಭವಗಳ ಅರ್ಥವನ್ನು ಹಿಗ್ಗುಮುಗ್ಗಾಗಿ ಎಳೆದಾಡಲು ತೊಡಗಿದರು. ಈ ಎಳೆದಾಟದ ಕಾಲದ ಯಾವ ಭಾಷೆಯ ಸಾಹಿತ್ಯ ದಲ್ಲಿಯೂ ಸತ್ಯಸಂಶೋಧನೆಯ ಹಂಬಲಿಕೆ ಕಾಣದು; ತನ್ನ ಮಾತೇ ಕೇವಲ ಸತ್ಯವೆಂದು ಹೇಳುವ ಹೆಗ್ಗಳಿಕೆ ಮಾತ್ರ ಸಾಕಷ್ಟು ಕಾಣುವುದು. ಮಿಕ್ಕ ಭಾಷಾ ಸಾಹಿತ್ಯದಂತೆಯೇ ಕನ್ನಡ ಸಾಹಿತ್ಯದ ಹಣೆಬರೆಹವೂ ಆಗಿದೆಯೆಂದಮೇಲೆ ನಾವಷ್ಟೇ ನಿರಾಶರಾಗಬೇಕೇತಕ್ಕೆ? ಹಳಹಳಿಸುತ್ತ ಸುಮ್ಮಗೆ ಕುಳಿತುಕೊಳ್ಳ ಬೇಕೇತಕ್ಕೆ? ಹಿಂದೆ ನಮ್ಮಿಂದ ನಡೆದುಹೋಗಿದ್ದ ತಪ್ಪುಗಳನ್ನೂ ಒಪ್ಪುಗಳನ್ನೂ ಚೆನ್ನಾಗಿ ಹಿಂಜಿ, ಹಿಗ್ಗಲಿಸಿ—ನೋಡಿಕೊಂಡು ಮುಂದೆ ಹಜ್ಜೆಗಳನ್ನು ಹೊಂದಿಸಿ ಪ್ರಾಮಾಣಿಕ ಬುದ್ಧಿಯಿಂದ ನಮ್ಮ ನಮ್ಮ ಸತ್ಯಾನುಭವಗಳನ್ನು ಸಜೀವ ಭಾಷೆಗಳಲ್ಲಿ

ಹುದುಗಿಸಿ ಕನ್ನಡ ಜನತೆಯೆದುರು ಇರಿಸೋಣ! ಅದರ ಮುಖಾಂತರವಾಗಿ ಕನ್ನಡ ಸಾಹಿತ್ಯದ ಭವಿಷ್ಯವನ್ನು ನಿಜವಾಗಿಯೂ ಉಜ್ವಲಗೊಳಿಸೋಣ!

* * * *

ಸೋದರ ಸೋದರಿಯರೆ, ನನ್ನ ಈ ಮಾತು ಅನೇಕರಿಗೆ ರುಚಿಸಿರಲಾರ ದೆಂಬುದನ್ನು ನಾನು ಬಲ್ಲೆ; ಆದರೆ ಎನಿಸಿದುದನ್ನು ಆಡದಿರುವುದು ಅಧರ್ಮವೆಂದು ನನ್ನ ಪ್ರಾಮಾಣಿಕ ಅಭಿಪ್ರಾಯ. ನಮ್ಮ ಮುಂಬರುವ ಸಾಹಿತ್ಯದ ಜೀವ ಜೀವಾಳವು ಯಾವ ಬಗೆಯದಾಗಿರಬೇಕೆಂಬುದನ್ನು ಇದುವರೆಗಿನ ನನ್ನ ಮಾತು ಸ್ಫುಟಗೊಳಿಸಿರಬಹುದು. ಇನ್ನು ನಮ್ಮ ಸಾಹಿತ್ಯದ ರೂಪ, ವೇಷ, ಭಾಷೆ, ಬಣ್ಣ—ಇವೆಲ್ಲ ಹೇಗೆ ಹೇಗೆ ಇರಬೇಕೆಂಬುದನ್ನು ನಾನೀಗ ಚರ್ಚಿಸುತ್ತ ವೇಳೆಗಳೆಯ ಲಾರೆ; ಏಕೆಂದರೆ ಬಹು ಜನ ಸಾಹಿತಿಗಳು ಇಲ್ಲಿ ತಮ್ಮ ಮನಸ್ಸನ್ನು ತಣಿಸುವುದಕ್ಕೆ ಕಾದಿದ್ದಾರೆ. **ಜಯ ಕರ್ನಾಟಕ!**

---

## ಸಮ್ಮೇಳನದ ನಿರ್ಣಯಗಳು

೧. ಜಮಖಂಡಿಯ ಪಟ್ಟಣದಲ್ಲಿ ಸೇರಿರುವ ಈ ಕನ್ನಡ ಸಾಹಿತ್ಯ ಸಮ್ಮೇಳನವು ಜಮಖಂಡಿಯ ಸಂಸ್ಥಾನದ ಪ್ರಭುಗಳಾದ ಶ್ರೀಮಂತ ರಾಜಾಸಾಹೇಬರವರ ಸನ್ನಿಧಿಯಲ್ಲಿ ತನ್ನ ಮನಃಪೂರ್ವಕವಾದ ಭಕ್ತಿ ವಿಶ್ವಾಸಗಳನ್ನು ಸಮರ್ಪಿಸುತ್ತದೆ; ಮತ್ತು ಅವರು ಕೃಪೆಮಾಡಿ ಅನುಗ್ರಹಿಸಿರುವ ಸಂದೇಶದಲ್ಲಿ ವ್ಯಕ್ತಪಡಿಸಿರುವ ಸಹಾನುಭೂತಿ ಪ್ರೋತ್ಸಾಹಗಳಿಗಾಗಿ ಅವರನ್ನು ಹೃತ್ಪೂರ್ವಕ ವಾಗಿ ವಂದಿಸುತ್ತದೆ. ಶ್ರೀಮಂತ ರಾಜಾಸಾಹೇಬರವರು ಕನ್ನಡ ಪ್ರಜೆಗಳನ್ನು ಬಹು ಸಂಖ್ಯಾಕವಾಗಿ ಉಳ್ಳ ಜಮಖಂಡಿಯ ಸಂಸ್ಥಾನದಲ್ಲಿ ಕನ್ನಡದ ಓದಿಗೂ ಕನ್ನಡ ಭಾಷೆ ಸಾಹಿತ್ಯಗಳ ಪುರೋಭಿವೃದ್ಧಿಗೂ ಯಥೇಚ್ಛ ಸಹಾಯವನ್ನೂ ಪ್ರೋತ್ಸಾಹವನ್ನೂ ಕೊಡುವುದಲ್ಲದೆ, ಜಮಖಂಡಿಯ ಕನ್ನಡ ಪ್ರಜೆಗಳೂ ಕರ್ಣಾಟಕ ಸಾಹಿತ್ಯ ಪರಿಷತ್ತೂ ಆಗಿಂದಾಗ್ಗೆ ಮಾಡುವ ಬೇಡಿಕೆಗಳನ್ನು ಸಹಾನು ಭೂತಿಯಿಂದ ಮನ್ನಿಸಿ ಅವನ್ನು ಕೃಪೆಯಿಟ್ಟು ನಡಸಿಕೊಡುತ್ತ ಬರಬೇಕೆಂದು ಈ ಸಮ್ಮೇಳನವು ಅತ್ಯಂತ ವಿನಯದಿಂದ ಪ್ರಾರ್ಥಿಸುತ್ತದೆ.

—ಸಮ್ಮೇಳನಾಧ್ಯಕ್ಷರಿಂದ

೨. ಜಮಖಂಡಿಯ ನಗರದಲ್ಲಿ ಸೇರಿರುವ ೨೨ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ದಿವ್ಯಸನ್ನಿಧಿಯಲ್ಲಿ, ಮಹಾಸ್ವಾಮಿಯವರು ಕನ್ನಡದ ಮತ್ತು ಕನ್ನಡಿಗರ ವಿಷಯದಲ್ಲಿ ತೋರುತ್ತಿರುವ ದಯೆ ಮಮತೆಗಳಿಗಾಗಿ ತನ್ನ ಮನಃಪೂರ್ವಕವಾದ ಕೃತಜ್ಞತೆಯನ್ನೂ, ಭಕ್ತಿವಿಶ್ವಾಸ ಗಳನ್ನೂ ಸಮರ್ಪಿಸಲು ಅಪ್ಪಣೆ ಬೇಡುತ್ತದೆ; ಮತ್ತು ಮಹಾಸ್ವಾಮಿಯವರು ಕರ್ಣಾಟಕ ಸಾಹಿತ್ಯ ಪರಿಷತ್ತನ್ನು ಇನ್ನುಮುಂದಕ್ಕೂ ಅಭಿಮಾನದಿಂದಲೂ,

ಔದಾರ್ಯದಿಂದಲೂ ಪರಿಪೋಷಿಸಿ ಬೆಳಸಬೇಕೆಂದು ಅತ್ಯಂತ ವಿನಯದಿಂ ಪ್ರಾರ್ಥಿಸುತ್ತದೆ.

—ಸಮ್ಮೇಳನಾಧ್ಯಕ್ಷ

೩. ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರು ಕರ್ಣಾಟಕ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಕನ್ನಡದ ಮತ್ತು ಕನ್ನಡಿಗರ ಏಳಿಗೆ ಅತ್ಯಂತ ವಾತ್ಸಲ್ಯದಿಂದ ಅನುಗ್ರಹಮಾಡುತ್ತಿರುವುದಕ್ಕಾಗಿ ಜಮಖಂ ನಗರದಲ್ಲಿ ಸೇರಿರುವ ೨೨ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಮಹಾಸ್ವಾ ಯವರಲ್ಲಿ ತನ್ನ ಮನಃಪೂರ್ವಕವಾದ ಕೃತಜ್ಞತೆಯನ್ನೂ, ಪ್ರೀತಿ ವಿಶ್ವಾಸ ಸಮರ್ಪಿಸಲು ಅಪ್ಪಣೆ ಬೇಡುತ್ತದೆ; ಮತ್ತು ಮಹಾಸ್ವಾಮಿಯವರು ಇದೇ ಮರುಕ ಔದಾರ್ಯಗಳಿಂದ ಕನ್ನಡದ ಉದ್ಧಾರಕ್ಕೆ ಆಶ್ರಯದಾತರಾಗಿರಬೇ ವಿನಯದಿಂದ ಬೇಡುತ್ತದೆ.

—ಸಮ್ಮೇಳನಾಧ್ಯಕ್ಷ

೪. ಮೈಸೂರು ಸರ್ಕಾರದ ಪ್ರಾಚ್ಯ ಸಂಶೋಧನ ಇಲಾಖೆಯ ಡೈರೆಕ್ಟರೂ, ಸುಪ್ರಸಿದ್ಧ ವಿದ್ವಾಂಸರೂ, ಬಹು ಭಾಷಾಪಂಡಿತರೂ, ಕನ್ನಡ ಸಾಹಿತ್ಯ ಪಾರಂಗತರೂ, ಹಲವು ಪ್ರೌಢ ಕನ್ನಡ ಗ್ರಂಥಗಳ ಕರ್ತರೂ, ಪರಿ 'ಆಶ್ರಯದಾತ' ವರ್ಗದ ಸದಸ್ಯರೂ ಆಗಿ ಪ್ರಾಕ್ತನ ವಿಮರ್ಶ ರಾವ್ ಬಹದ್ದೂರ್, ಮಹಾಮಹೋಪಾಧ್ಯಾಯ ಮುಂತಾದ ಬಿರುದು ಹೊಂದಿ ಸಕಲಜನ ಸನ್ಮಾನ್ಯರಾಗಿದ್ದ ಶ್ರೀಮಾನ್ ರಾ. ನರಸಿಂಹಾಚಾ ಎಂ.ಎ., ಎಂ.ಆರ್.ಎ.ಎಸ್. ಅವರು (ಬೆಂಗಳೂರಿನಲ್ಲಿ ತಾ॥ ೬-೧೨-೧೯೩ ಸ್ವರ್ಗಸ್ಥರಾದುದಕ್ಕಾಗಿ ಈ ಸಮ್ಮೇಳನವು ತನ್ನ ಅಪಾರ ದುಃಖ ವ್ಯಕ್ತಪಡಿಸುತ್ತದೆ.

—ಸಮ್ಮೇಳನಾಧ್ಯಕ್ಷ

೫. ಪರಿಷತ್ತಿನ ಆಜೀವ ಸದಸ್ಯರಾಗಿದ್ದು, ಅನೇಕ ಪ್ರಾಚೀನ ಕನ್ನ ಗ್ರಂಥಗಳನ್ನು ಸಂಪಾದಿಸಿ, ಪರಿಶೋಧಿಸಿ, ತಮ್ಮ 'ಕಾವ್ಯಕಲಾನಿಧಿ'ಯ ಮೂ ಪ್ರಚುರಪಡಿಸಿ, ಕನ್ನಡಲೋಕಕ್ಕೆ ಅಮೂಲ್ಯವಾದ ಉಪಕಾರಮಾಡಿ ಮೈಸೂರಿನ ಸುಪ್ರಸಿದ್ಧ ಕನ್ನಡ ವಿದ್ವಾಂಸರು ಶ್ರೀಮಾನ್ ಎಂ. ಎ. ರಾಮಾ ಅಯ್ಯಂಗಾರ್ಯರವರು (ಮೈಸೂರಿನಲ್ಲಿ ತಾ॥ ೨೭-೬-೧೯೩೭ರಲ್ಲಿ) ದೈವಾ ರಾದುದಕ್ಕಾಗಿ ಈ ಸಮ್ಮೇಳನವು ತನ್ನ ಅಪಾರ ದುಃಖವನ್ನು ವ್ಯಕ್ತಪಡಿಸುತ್ತದೆ.

—ಸಮ್ಮೇಳನಾಧ್ಯಕ್ಷ

೬. ಪರಿಷತ್ತಿನ ಆಜೀವ ಸದಸ್ಯರೂ, ಕಾರ್ಯನಿರ್ವಾಹಕ ಮಂಡ ಸದಸ್ಯರೂ ರಾಯಚೂರಿನಲ್ಲಿ ನಡೆದ ೨೦ನೆಯ ಕನ್ನಡ ಸಾಹಿತ್ಯ ಸಮ್ಮೇ ಅಧ್ಯಕ್ಷರೂ ಆಗಿ, ದೊಡ್ಡ ಕನ್ನಡ ವಿದ್ವಾಂಸರೂ, ಪ್ರಮುಖ ಸಾಹಿತಿಗಳೂ, ಕನ್ನ ನಾಡಿನಲ್ಲೆಲ್ಲ ಸನ್ಮಾನ್ಯರೂ ಆಗಿದ್ದ ಮಂಗಳೂರಿನ ಶ್ರೀಮಾನ್ ಪಂಜೆ ಮಂ ರಾಯರು (ಹೈದರಾಬಾದಿನಲ್ಲಿ ತಾ॥ ೨೫-೧೦-೧೯೩೭ರಲ್ಲಿ) ಸ್ವರ್ಗಸ್ಥರಾದುದ ಈ ಸಮ್ಮೇಳನವು ತನ್ನ ಅಪಾರ ದುಃಖವನ್ನು ವ್ಯಕ್ತಪಡಿಸುತ್ತದೆ.

—ಸಮ್ಮೇಳನಾಧ್ಯಕ್ಷ

೭. ಧಾರವಾಡದ ಕರ್ಣಾಟಕ ಕಾಲೇಜಿನಲ್ಲಿ ಕನ್ನಡದ ಪ್ರೊಫೆಸರೂ, ಕನ್ನಡದ ಅಭಿಮಾನಿಗಳೂ, ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರೂ, ಸಂಪಾದಕ ಮಂಡಲಿಯ ಸದಸ್ಯರೂ ಆಗಿದ್ದ ಶ್ರೀ॥ ಎ. ಟಿ. ಸಾಸನೂರ್, ಎಂ.ಎ. ಅವರು (ತುಂಗಭದ್ರೆಯಲ್ಲಿ ತಾ॥ ೧೪-೫-೧೯೩೭ರಲ್ಲಿ) ಕಾಲಾಧೀನರಾದು ದಕ್ಕಾಗಿ ಈ ಸಮ್ಮೇಳನವು ತನ್ನ ಅಪಾರ ದುಃಖವನ್ನು ವ್ಯಕ್ತಪಡಿಸುತ್ತದೆ.

—ಸಮ್ಮೇಳನಾಧ್ಯಕ್ಷರಿಂದ

೮. ಮೈಸೂರು ಸಂಸ್ಥಾನದ ಎಲ್ಲ ಹೈಸ್ಕೂಲುಗಳಲ್ಲಿಯೂ ಎಲ್ಲ ಭಾಷೇತರ ವಿಷಯಗಳನ್ನೂ ಕನ್ನಡದ ಮೂಲಕ ಕಲಿಸತಕ್ಕದ್ದೆಂದು ಏರ್ಪಾಟು ಮಾಡುವುದರ ಮೂಲಕ ಕನ್ನಡಕ್ಕೆ ಅತಿಶಯವಾದ ಪ್ರೋತ್ಸಾಹಕೊಟ್ಟಿರು ವುದಕ್ಕಾಗಿ ಮೈಸೂರು ಶ್ರೀಮನ್ಮಹಾರಾಜರವರ ಸರ್ಕಾರದವರನ್ನೂ, ಮೈಸೂರು ವಿದ್ಯಾಭ್ಯಾಸದ ಇಲಾಖೆಯವರನ್ನೂ ಈ ಸಮ್ಮೇಳನವು ಮನಃಪೂರ್ವಕವಾಗಿ ವಂದಿಸುತ್ತದೆ.

ಸೂಚಕರು :—ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.
ಅನುಮೋದಕರು :—ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರು,
ಎಂ.ಎ., ಎಲ್ಎಲ್.ಬಿ.

೯. ಮುಂಬಯಿ, ಮದರಾಸು, ಹೈದರಾಬಾದು, ಕೊಡಗು, ಉತ್ತರ ಕರ್ಣಾಟಕ ಸಂಸ್ಥಾನಗಳು—ಈ ಪ್ರಾಂತಗಳ ಕನ್ನಡ ಪ್ರದೇಶಗಳ ಶಾಲೆಗಳೆಲ್ಲ ದರಲ್ಲಿಯೂ ಮೈಸೂರಿನ ವಿದ್ಯಾಭ್ಯಾಸದ ಇಲಾಖೆಯ ಮಾದರಿಯನ್ನನುಸರಿಸಿ ಭಾಷೇತರ ವಿಷಯಗಳನ್ನು ಕನ್ನಡದ ಮೂಲಕವೇ ಕಲಿಸುವಂತೆ ಏರ್ಪಾಡು ಮಾಡಿ, ಕನ್ನಡಕ್ಕೆ ಪ್ರಾಮುಖ್ಯತೆಯನ್ನು ಕೊಡಬೇಕೆಂದು ಈ ಸಮ್ಮೇಳನವು ಮೇಲಿನ ಸರಕಾರಗಳ ಅಧಿಕಾರಿಗಳನ್ನು ವಿನಯದಿಂದ ಪ್ರಾರ್ಥಿಸುತ್ತದೆ.

ಸೂಚಕರು :—ಶ್ರೀ॥ ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು
ಅನುಮೋದಕರು :—ಶ್ರೀ॥ ರಂಗನಾಥ ಶ್ರೀನಿವಾಸ ಮುಗಳಿಯವರು,
ಎಂ.ಎ., ಬಿ.ಟಿ.

೧೦. ಕನ್ನಡನಾಡಿನ ಸಂಸ್ಕೃತಿ ಮತ್ತು ಭಾಷೆಯ ಏಕೀಕರಣಕ್ಕೆ ಕನ್ನಡ ಹಬ್ಬವನ್ನು ಅಥವಾ ನಾಡಹಬ್ಬವನ್ನು ನಾಡಿನ ಎಲ್ಲೆಡೆಗಳಲ್ಲಿಯೂ ನೆರವೇರಿಸು ವುದು ಬಹಳ ಸಹಾಯಕವಾಗಿರುವುದರಿಂದ ಈ ವಿಷಯದಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ ಮಾಡಿರುವ ಏರ್ಪಾಟನ್ನು ಈ ಸಮ್ಮೇಳ ನವು ಅನುಮೋದಿಸುತ್ತದೆ.

ಸೂಚಕರು :—ಶ್ರೀ॥ ರಾಘವೇಂದ್ರರಾವ್ ಕುಲಕರ್ಣಿ ಅವರು
ಅನುಮೋದಕರು :—ಶ್ರೀ॥ ವೆಂಕಟರಾವ್ ಆಳ್ವಾಬಳರವರು,
ಬಿ.ಎ., ಎಲ್ಎಲ್.ಬಿ,

೧೧. ೧೯೪೦ರಲ್ಲಿ ನಡೆಯುವ ಕರ್ನಾಟಕ ಸಾಹಿತ್ಯ ಪರಿಷತ್ತಿನ ರಜತ ಮಹೋತ್ಸವಕ್ಕೆ ಅಖಿಲ ಕರ್ನಾಟಕದ ಭಾಷಾಭಿಮಾನಿಗಳು ಉದಾರವಾಗಿ ದ್ರವ್ಯದಾನಮಾಡಿ ಆ ಉತ್ಸವವನ್ನು ಯಶಸ್ವಿಯಾಗಿ ನೆರವೇರಿಸಲು ಸಹಾಯ ಮಾಡಬೇಕೆಂದು ಈ ಸಮ್ಮೇಳನವು ಬೇಡುತ್ತದೆ.

ಸೂಚಕರು :—ಶ್ರೀ॥ ಗೋವಿಂದರಾವ ಮಾಚಾರ್ಯರು, ಎಂ.ಎ., ಎಲ್‌ಎಲ್.ಬಿ.

ಅನುಮೋದಕರು :—ಶ್ರೀ॥ ಎಸ್. ಎಚ್. ಪಾಟೀಲರು, ಬಿ.ಎ., ಎಲ್‌ಎಲ್.ಬಿ.

೧೨. ಪರಿಷತ್ತು ಹೊಸದಾಗಿ ಏರ್ಪಡಿಸಿರುವ ಅಭಿಮಾನಿವರ್ಗದ ವಿಧಾನದಿಂದ ಕನ್ನಡ ನಾಡಿನ ಮಹಿಳೆಯರೂ ವಿದ್ಯಾರ್ಥಿಗಳೂ ತಮ್ಮ ಕನ್ನಡದ ಸೇವೆಯನ್ನು ಸಲ್ಲಿಸಲು ಅಪೂರ್ವ ಸಮಯ ಒದಗಿದೆ; ಇದನ್ನು ಲಕ್ಷಿಸಿ, ಕನ್ನಡ ನಾಡಿನ ಮಹಿಳೆಯರೂ, ವಿದ್ಯಾರ್ಥಿಗಳೂ ವರ್ಷಕ್ಕೆ ೮ ಆಣೆ ಚಂದಾ ಹಣವನ್ನು ಸಲ್ಲಿಸಿ ಪರಿಷತ್ತಿನ ಅಭಿಮಾನಿಗಳಾಗಿ ಸೇರಬೇಕೆಂದು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಸೂಚಕರು :—ಶ್ರೀಮತಿ ಆರ್. ಕಲ್ಯಾಣಮ್ಮನವರು

ಅನುಮೋದಕರು :—ಶ್ರೀಮತಿ ಗೌರಮ್ಮ ಮುರಗೋಡ ಅವರು

೧೩. ಮುಂಬಯಿ ವಿಶ್ವವಿದ್ಯಾನಿಲಯದಲ್ಲಿ ಪ್ರಾಚೀನಭಾರತ, ಮಹಾರಾಷ್ಟ್ರ, ಮೊಗಲ್—ಈ ಕಾಲಗಳ ಇತಿಹಾಸಕ್ಕೆ ಕೊಟ್ಟಿರುವಂತೆ ಕರ್ನಾಟಕ ಇತಿಹಾಸಕ್ಕೂ ಅವಕಾಶ ಕಲ್ಪಿಸಿಕೊಡಬೇಕೆಂದು ಈ ಸಮ್ಮೇಳನವು ಮುಂಬಯಿ ವಿಶ್ವವಿದ್ಯಾನಿಲಯಕ್ಕೂ, ವಿದ್ಯಾಖಾತೆಗೂ ವಿನಂತಿ ಮಾಡುತ್ತದೆ.

ಸೂಚಕರು :—ಶ್ರೀ॥ ಮುರಿಗೆಯ್ಯ ಸೋಮಯ್ಯ ಜಂಗಿನ ಅವರು

ಅನುಮೋದಕರು :—ಶ್ರೀ॥ ಸಾಲಿ ರಾಮಚಂದ್ರರಾಯರು

೧೪. ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಿಸುತ್ತಿರುವ ಇಂಗ್ಲಿಷ್-ಕನ್ನಡ ನಿಘಂಟುವಿನಲ್ಲಿ ಕರ್ನಾಟಕದ ಎಲ್ಲ ಭಾಗದ ಪದಗಳೂ ಸಮಾವೇಶವಾಗುವ ಉದ್ದೇಶದಿಂದ ಈಗಿರುವ ಸದಸ್ಯರ ಜೊತೆಗೆ ಉತ್ತರ ಕರ್ನಾಟಕದ ಇನ್ನಿಬ್ಬರು ಸದಸ್ಯರನ್ನು ಸೇರಿಸಿಕೊಂಡು ಈ ನಿಘಂಟುವಿನ ಉಪಯುಕ್ತತೆಯು ಇನ್ನೂ ಹೆಚ್ಚಾಗಿ ಆಗುವಂತೆ ಮಾಡಬೇಕೆಂದು ಮೈಸೂರು ವಿಶ್ವವಿದ್ಯಾನಿಲಯದವರನ್ನು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಸೂಚಕರು :—ಶ್ರೀ॥ ಪಂಡಿತಪ್ಪ ರಾಯಪ್ಪ ಚಿಕ್ಕೋಡಿ ಅವರು, ಬಿ.ಎ.

ಅನುಮೋದಕರು :—ಶ್ರೀ॥ ಬಿಂದೂರಾವ್ ರಾಮರಾವ್ ಸರಗುಂದ ಅವರು, ಬಿ.ಎ., ಎಲ್‌ಎಲ್.ಬಿ.

೧೫. ಕನ್ನಡ ನಾಡಿನ ಎಲ್ಲ ಪ್ರಾಂತಗಳಲ್ಲಿಯೂ ಈಗ ಕನ್ನಡ ಶಾಲೆಗಳಿಲ್ಲದ ಸ್ಥಳಗಳಲ್ಲಿ ಅಲ್ಲಿಯ ಸರಕಾರಗಳು ಕನ್ನಡ ಶಾಲೆಗಳನ್ನು ಸ್ಥಾಪಿಸಬೇಕೆಂದೂ ಜನದ ಮಾತಾದ ಕನ್ನಡವನ್ನು ಆಡಳಿತದ ಭಾಷೆಯನ್ನಾಗಿ ಅಂಗೀಕರಿಸಬೇಕೆಂದೂ ಆಯಾ ಪ್ರಾಂತದ ಅಧಿಕಾರಿಗಳನ್ನು ಈ ಸಮ್ಮೇಳನವು ಬೇಡಿಕೊಳ್ಳುತ್ತದೆ.

ಸೂಚಕರು :—ಶ್ರೀ॥ ಡಿ. ವಿ. ಗುಂಡಪ್ಪನವರು, ಎಂ.ಎಲ್.ಸಿ., ಇತ್ಯಾದಿ
ಅನುಮೋದಕರು :—ಶ್ರೀ॥ ಶಂ. ಭಾ. ಜೋಶಿ ಅವರು

೧೬. (i) ಕನ್ನಡ ನಾಡಿನ ಬೇರೆ ಬೇರೆ ಪ್ರಾಂತಗಳ ಪ್ರಾಥಮಿಕ ವಿದ್ಯಾಭ್ಯಾಸದ ಕ್ರಮದಲ್ಲಿಯ ಪಠ್ಯಪುಸ್ತಕಗಳು ಏಕೀಕೃತ ಕರ್ಣಾಟಕದ ಭಾಷೆ, ಇತಿಹಾಸ, ಸಂಸ್ಕೃತಿಗಳಿಗೆ ಸರಿಹೋಗುವಂತೆ ಏಕರೂಪವಾಗಿ ಬರೆಯಲ್ಪಟ್ಟು ಸಾರ್ವತ್ರಿಕವಾಗಿ ಬಳಕೆಯಲ್ಲಿ ಬರುವಂತೆ ಕನ್ನಡ ನಾಡಿನ ಎಲ್ಲ ಸರಕಾರಗಳಿಗೆ, ವಿಶೇಷವಾಗಿ ಬ್ರಿಟಿಷ್ ಕರ್ಣಾಟಕದ ಮುಂಬಯಿ ಹಾಗೂ ಮದರಾಸು ಪ್ರಾಂತಗಳ ಮಂತ್ರಿ ಮಂಡಲಗಳಿಗೆ, ಈ ಸಮ್ಮೇಳನವು ಬಿನ್ನವಿಸಿಕೊಳ್ಳುತ್ತದೆ.

(ii) ವಿದ್ಯಾಭ್ಯಾಸ ಪದ್ಧತಿಯಲ್ಲಿ ಮೂಲಭೂತವಾದ ಹಾಗೂ ವಿಧಾಯಕವಾದ ಮಾರ್ಪಾಟುಗಳನ್ನು ಮಾಡಬೇಕೆಂದು ಉದ್ಯುಕ್ತವಾದ ಮುಂಬಯಿ, ಮದರಾಸು ಪ್ರಾಂತೀಯ ಸರಕಾರಗಳು ಈ ವಿಷಯದಲ್ಲಿ ಕೂಡಲೆ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸಹಕಾರ ಸಹಾಯಗಳೊಂದಿಗೆ ಒಂದು ಸಮಿತಿಯನ್ನು ನಿಯಮಿಸಿ ಕಾರ್ಯಾರಂಭವನ್ನು ಮಾಡಬೇಕೆಂದು ಈ ಸಮ್ಮೇಳನವು ವಿನಯ ಪೂರ್ವಕವಾಗಿ ಬೇಡಿಕೊಳ್ಳುತ್ತದೆ.

ಸೂಚಕರು :—ಶ್ರೀ॥ ಮುದವೀಡು ಕೃಷ್ಣರಾಯರು
ಅನುಮೋದಕರು :—ಶ್ರೀ॥ ಕೆ. ಜಿ. ಕುಂದಣಗಾರರು, ಎಂ.ಎ.

೧೭. ಕರ್ಣಾಟಕದ ಎಲ್ಲ ಕಡೆಗೆ ಕನ್ನಡವಲ್ಲದೆ ಮರಾಠಿ, ಉರ್ದು, ತೆಲುಗು, ತಮಿಳು ಮೊದಲಾದ ಮಾತೃಭಾಷೆಗಳ ವಿಷಯಕವಾದ ಪ್ರಾಥಮಿಕ ಶಾಲೆಗಳಲ್ಲಿ ಆಯಾ ಮಾತೃಭಾಷೆಗಳೊಡನೆ ಕನ್ನಡದ ಅಭ್ಯಾಸವು ಅವಶ್ಯ ವಿಷಯವಾಗಬೇಕೆಂದು ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ. ಹಾಗೂ ಅಲ್ಲಿಯ ಬೇರೆ ಬೇರೆ ಸರಕಾರಗಳೂ, ಸ್ಥಾನಿಕ ಶಿಕ್ಷಣ ವ್ಯವಸ್ಥಾಪಕರೂ ಸಹ ಈ ವಿಷಯದಲ್ಲಿ ಮೇಲೆ ಕಾಣಿಸಿದ ಧೋರಣವನ್ನು ಇಟ್ಟುಕೊಳ್ಳಬೇಕೆಂದು ಈ ಸಮ್ಮೇಳನವು ಬೇಡಿಕೊಳ್ಳುತ್ತದೆ.

ಸೂಚಕರು :—ಶ್ರೀ॥ ಮುರಿಗೆಯ್ಯ ಸೋಮಯ್ಯ ಜಂಗಿನ ಅವರು
ಅನುಮೋದಕರು :—(೧) ಶ್ರೀ॥ ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು
(೨) ಶ್ರೀ॥ ಬಿ. ಎಂ. ರೇವಣಸಿದ್ದಯ್ಯನವರು

೧೮. (i) ಹೈದರಾಬಾದು ಕರ್ಣಾಟಕದ ಭಾಗದಲ್ಲಿ ಇಷ್ಟು ದಿನಗಳವರೆಗೆ ಮಿಡಲ್ ಸ್ಕೂಲುಗಳಲ್ಲಿ ನಡೆಯುತ್ತಿದ್ದ ಕನ್ನಡ ಭಾಷೆಯ ಶಿಕ್ಷಣಕ್ರಮವು ನಿಲ್ಲಿಸಲ್ಪಟ್ಟ ಬಗ್ಗೆ ಈ ಸಮ್ಮೇಳನಕ್ಕೆ ಅತ್ಯಂತ ವಿಷಾದವಾಗಿದೆ. ಇದರಿಂದ ಹೈದರಾಬಾದು ಸಂಸ್ಥಾನದ ಕನ್ನಡ ಪ್ರಜೆಗಳಿಗೆ ಮಾತೃಭಾಷೆಯ ಶಿಕ್ಷಣಕ್ಕೆ ಎರವಾಗುವ ದುರವಸ್ಥೆ ಒದಗುವ ಮೂಲಕ ಆ ಸಂಸ್ಥಾನದ ಅಧಿಕಾರಿಗಳು ಈಗಿನ ಉಪಕ್ರಮವನ್ನು ಬದಲಿಸಿ ಮೊದಲಿನಂತೆಯೇ ಅಲ್ಲಿ ಎಲ್ಲ ಕಡೆಗೂ ಕನ್ನಡ ಭಾಷೆಯ ಶಿಕ್ಷಣವು ಮುಂದು ವರಿಯುವಂತೆ ಅನುಕೂಲವನ್ನು ಕಲ್ಪಿಸಿಕೊಡಬೇಕೆಂದು ಈ ಸಮ್ಮೇಳನವು ಅಲ್ಲಿಯ ಅಧಿಕಾರಿಗಳನ್ನು ಪ್ರಾರ್ಥಿಸುತ್ತದೆ.

(ii) ಹೈದರಾಬಾದು ಸಂಸ್ಥಾನಕ್ಕೆ ಅಧೀನವಾಗಿರುವ ಸಾಲಾರಜಂಗ್ ಬಹಾದ್ದೂರ್ ಅವರ ಜಹಗೀರಿನಲ್ಲಿ ಪ್ರಾಥಮಿಕ ಶಿಕ್ಷಣವು ಕನ್ನಡದಲ್ಲಿ ನಡೆಯುವಂತೆ ಏರ್ಪಾಟುಮಾಡಿದ್ದಕ್ಕಾಗಿ ಈ ಸಮ್ಮೇಳನವು ಸಾಲಾರಜಂಗ್ ಬಹಾದ್ದೂರರವರನ್ನು ಅಭಿನಂದಿಸುತ್ತದೆ; ಆದರೆ ಈ ಶಿಕ್ಷಣಕ್ಕೆ ಇಟ್ಟಿರುವ ಮಾಸಿಕ ಫೀಯನ್ನು ತೆಗೆದು ಹಾಕಿ ಅದನ್ನು ಪುಕ್ಕಟೆಯಾಗಿ ಮಾಡಬೇಕೆಂದೂ, ಕನ್ನಡ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯವಾಗಿ ಕಲಿಸಬೇಕೆಂದೂ ಈ ಸಮ್ಮೇಳನವು ಅವರನ್ನು ಪ್ರಾರ್ಥಿಸುತ್ತದೆ.

ಸೂಚಕರು :—ಶ್ರೀ॥ ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು

ಅನುಮೋದಕರು :—ಶ್ರೀ॥ ವಿ. ಬಿ. ಪುರಾಣಿಕ ಅವರು

೧೯. ಜಮಖಂಡಿಯ ಸಂಸ್ಥಾನದ ನಿವಾಸಿಗಳೆಲ್ಲರೂ ತಮ್ಮ ತಮ್ಮ ಮಕ್ಕಳನ್ನು ಕನ್ನಡ ಶಾಲೆಗಳಿಗೇ ಕಳುಹಿಸಬೇಕೆಂದೂ, ವ್ಯಾಪಾರಸ್ಥರು ತಮ್ಮ ಲೆಕ್ಕಪತ್ರಗಳನ್ನೂ ಪತ್ರವ್ಯವಹಾರವನ್ನೂ ಕನ್ನಡದಲ್ಲಿಯೇ ನಡಸಬೇಕೆಂದೂ ಈ ಸಮ್ಮೇಳನವು ಬಿನ್ನವಿಸುತ್ತದೆ.

ಸೂಚಕರು :—ಶ್ರೀ॥ ಪಂಚಪ್ಪ ಕೋರಿ ಅವರು

ಅನುಮೋದಕರು :—ಶ್ರೀ॥ ಚೆನ್ನಪ್ಪ ಕಲ್ಲೂರ ಅವರು

ಪರಿಪೋಷಕರು :—ಶ್ರೀಮತಿ ಗೌರಮ್ಮ ಮುರಗೋಡ ಅವರು

೨೦. ಜಮಖಂಡಿ ಅಸೆಂಬ್ಲಿಯಲ್ಲಿ ಕನ್ನಡ ದಫ್ತರು ಆಗುವುದನ್ನು ಕುರಿತ ಚರ್ಚೆಯ ಬಗ್ಗೆ ಜಮಖಂಡಿ ಸರ್ಕಾರದವರು ಹಾಕಿರುವ ನಿರ್ಬಂಧವನ್ನು ತೆಗೆದುಹಾಕಬೇಕೆಂದು ಈ ಸಮ್ಮೇಳನವು ವಿನಯಪೂರ್ವಕವಾಗಿ ಬೇಡಿಕೊಳ್ಳುತ್ತದೆ.

ಸೂಚಕರು :—ಶ್ರೀ॥ ದಾಮೋದರ ಹುಲ್ಯಾಳ್ಕರ್ ಅವರು

ಅನುಮೋದಕರು :—ಶ್ರೀ॥ ಸಾಬಡೆ ವಕೀಲ್ ಅವರು

೨೧. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಕನ್ನಡವನ್ನು ಭಾಷಾ ವಿಷಯವನ್ನಾಗಿ ಕಲಿಸುವಂಥ ಶಿಕ್ಷಕರೆಲ್ಲರೂ ಸಾಹಿತ್ಯ ಸಮ್ಮೇಳನಕ್ಕೆ ತಮ್ಮ ತಮ್ಮ ಶಾಲೆಗಳಿಂದ ಪ್ರತಿನಿಧಿಗಳಾಗಿ ಬರುವಂತೆ ಏರ್ಪಾಡನ್ನು ಮಾಡಬೇಕೆಂದು ಕರ್ನಾಟಕದ ಎಲ್ಲ ಶಿಕ್ಷಣಸಂಸ್ಥೆಗಳ ಸಂಚಾಲಕರಿಗೂ ಶಾಲಾ ಖಾತೆಯ ಅಧಿಕಾರಿಗಳಿಗೂ ಈ ಸಮ್ಮೇಳನವು ವಿಜ್ಞಾಪಿಸಿಕೊಳ್ಳುತ್ತದೆ.

ಸೂಚಕರು :—ಶ್ರೀ॥ ಪ್ರ. ಗೋ. ಕುಲಕರ್ಣಿ ಅವರು

ಅನುಮೋದಕರು :—ಶ್ರೀ॥ ಶಾಮರಾವ್ ಗಜೇಂದ್ರಗಡ ಅವರು

೨೨. ಕನ್ನಡ ನಾಡಿನ ಭಾಗಗಳಲ್ಲಿರುವ ಕೆಲವು ರೈಲ್ವೆ ಸ್ಟೇಶನ್ನುಗಳ ಅವುಗಳ ಹೆಸರನ್ನು ಕನ್ನಡವಲ್ಲದ ಒಂದೇ ಬೇರೆ ಭಾಷೆಯಲ್ಲಿ ವಿಶೇಷವಾದ ದೊಡ್ಡ ಹಲಗೆಗಳಲ್ಲಿ ಪ್ರಮುಖವಾಗಿ ಪ್ರಕಟಿಸಿರುವುದು ಕಂಡುಬಂದ ಮೂಲಕ ಈ ಸಮ್ಮೇಳನಕ್ಕೆ ವಿಷಾದವಾಗುತ್ತದೆ. ಈ ಸಂಬಂಧದಲ್ಲಿ ರೈಲ್ವೆಯ ವರಿಷ್ಠಾಧಿಕಾರಿಗಳಿಗೆ ಆ ಹೆಸರುಹಲಗೆಗಳನ್ನೆಲ್ಲ ಕನ್ನಡದಲ್ಲಿಯೇ ಹಚ್ಚುವಂತೆ ಏರ್ಪಾಟುಮಾಡಲು ಅವಶ್ಯ



ಜಮಖಂಡಿ ಸಂಸ್ಥಾನದ ರಾಜಾಸಾಹೇಬರವರಾದ

**ಶ್ರೀಮಂತ ಶಂಕರರಾವ್ ಅಪ್ಪಾಸಾಹೇಬರವರು**

(ಜಮಖಂಡಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ವಿಷಯದಲ್ಲಿ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿ ದಯಪಾಲಿಸಿದ ಇವರ ಸಂದೇಶವನ್ನು ಈ ಸಂಚಿಕೆಯ ೨೭೧ನೆಯ ಪುಟದಲ್ಲಿ ಕೊಟ್ಟಿದೆ)

ಬಿನ್ನವಿಸುತ್ತದೆ. ಈ ಕಾರ್ಯದಲ್ಲಿ ಕರ್ಣಾಟಕದ ಬೇರೆ ಸಂಸ್ಥೆಗಳೆಲ್ಲವೂ ಪರಿಷತ್ತಿಗೆ ಯೋಗ್ಯವಾದ ಬೆಂಬಲವನ್ನೀಯಬೇಕೆಂದೂ ಈ ಸಮ್ಮೇಳನವು ನಿರ್ಣಯಿಸುತ್ತದೆ.

ಸೂಚಕರು :—ಶ್ರೀ॥ ಮುರಿಗೆಯ್ಯ ಸೋಮಯ್ಯ ಜಂಗಿನ ಅವರು

ಅನುಮೋದಕರು :—ಶ್ರೀ॥ ಮುದವೀಡು ಕೃಷ್ಣರಾಯರು

---

# ಸಮ್ಮೇಳನದ ಶ್ರೇಯಸ್ಸನ್ನು ಕೋರಿ ಬರೆದು ಬಂದ ಕೆಲವು ಸಂದೇಶಗಳು

೧

## ಜಮಖಂಡಿ ಸಂಸ್ಥಾನದ ಶ್ರೀಮಂತ ರಾಜಾಸಾಹೇಬರವರಿಂದ

"ಜಮಖಂಡಿ ಶಹರದಲ್ಲಿ ಈ ಅಧಿವೇಶನವು ಸೇರುತ್ತಿರುವುದರಿಂದ ನಮಗೆ ಸಂತೋಷವಾಗಿದೆ. ಇದಕ್ಕೆ ಸ್ವತಃ ಬರಲು ನಮಗೆ ಶಕ್ಯವಾಗದಿದ್ದರೂ ಅದರ ಕಾರ್ಯದ ಕಡೆಗೆ ನಮ್ಮ ಲಕ್ಷ್ಯವು ಇದ್ದೇ ಇರುವುದು. ಪ್ರಚಾರದಲ್ಲಿರುವ ನಮ್ಮ ಸಂಸ್ಥಾನದಲ್ಲಿಯ ಎಲ್ಲ ಭಾಷೆಗಳೂ ಒಂದೇ ಯೋಗ್ಯತೆಯವೆಂದು ನಾವು ತಿಳಿಯುತ್ತೇವೆ. ಮತ್ತು ಅವುಗಳ ಉತ್ಕರ್ಷದ ಸಲುವಾಗಿ ಶಕ್ಯವಿದ್ದಮಟ್ಟಿಗೆ ಯತ್ನಿಸುತ್ತಲೇ ಇರುವೆವು.

"ಅಂಗೀಕೃತ ಕಾರ್ಯವು ತಮ್ಮಂಥ ವಿದ್ವಾಂಸರ ಪರಿಶ್ರಮದಿಂದ ಚೆನ್ನಾಗಿ ಜರುಗಿ ಅಧಿವೇಶನವು ಸಂಪೂರ್ಣವಾಗಿ ಯಶಸ್ವಿಯಾಗಲೆಂದು ಇಚ್ಛಿಸುತ್ತೇವೆ."

---

೨

## ಮೈಸೂರು ಸಂಸ್ಥಾನದ ದಿವಾನ್ ಸಾಹೇಬರವರಾದ ಸರ್ ಮಿರ್ಜಾ ಎಂ. ಇಸ್ಮೈಲ್, ಕೆ.ಸಿ.ಐ.ಇ., ಒ.ಬಿ.ಇ. ಅವರಿಂದ

"....ಶ್ರೀಮಾನ್ ಬಿ. ವೆಂಕಟನಾರಾಯಣಪ್ಪನವರು ಸಮ್ಮೇಳನದ ಅಧ್ಯಕ್ಷತೆಯನ್ನಲಂಕರಿಸುವುದು ವಿಶೇಷ ಸಂತೋಷಕರವಾಗಿದೆ. ಅವರು ಕರ್ಣಾಟಕ ಭಾಷಾ ಸಾಹಿತ್ಯಗಳಲ್ಲಿ ಪ್ರಖ್ಯಾತ ವಿದ್ವಾಂಸರು; ಕರ್ಣಾಟಕ ಸಾಹಿತ್ಯ ಪರಿಷತ್ತನ್ನು ಸ್ಥಾಪಿಸಲು ತೀವ್ರಾಸಕ್ತಿಯಿಂದ ಶ್ರಮಿಸಿದವರು. ಅವರ ಅಧ್ಯಕ್ಷತೆಯಲ್ಲಿ ಸಮ್ಮೇಳನವು ಯಶಸ್ವಿಯಾಗಿ ಜರುಗಿ ಅತ್ಯಂತ ಪ್ರಯೋಜನಕರವಾಗಿ ಪರಿಣಮಿಸುವ ವಿಷಯವು ನನ್ನ ಮನಸ್ಸಿಗೆ ನಿಸ್ಸಂದೇಹವಾಗಿದೆ.

"ಶ್ರೀಮಾನ್ ಡಿ. ವಿ. ಗುಂಡಪ್ಪನವರ ಉಪಾಧ್ಯಕ್ಷತೆಯಲ್ಲಿ ಕನ್ನಡ ಭಾಷೆಯ ಮತ್ತು ಕನ್ನಡ ಸಾಹಿತ್ಯದ ಬೆಳವಣಿಗೆಗೆ ಸಾಧಕವಾದ ಕಾರ್ಯಕಲಾಪಗಳು ಹೆಚ್ಚು ಹೆಚ್ಚಾಗಿಯೂ ದಕ್ಷತೆಯಿಂದಲೂ ನಡೆಯುತ್ತಿವೆ. ಶ್ರೀ॥ ಗುಂಡಪ್ಪನವರೂ ಅವರ ಸಹೋದ್ಯೋಗಿಗಳೂ ಸ್ವಾರ್ಥತ್ಯಾಗದಿಂದಲೂ ಶ್ರದ್ಧೆಯಿಂದಲೂ ಪರಿಷತ್ತಿಗೆ

ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಅದಕ್ಕಾಗಿ ಅವರೆಲ್ಲರೂ ಕನ್ನಡಿಗರ ಮನಃಪೂರ್ವಕ
ವಾದ ಅಭಿನಂದನೆಗಳಿಗೆ ಪಾತ್ರರಾಗಿದ್ದಾರೆ.

"ಸಮ್ಮೇಳನವು ಹಿತಕರವಾಗಿಯೂ ಸ್ವಾರಸ್ಯವಾಗಿಯೂ ಇದ್ದು ಯಶಸ್ವಿ
ಯಾಗಿ ನೆರವೇರಲೆಂದು ನಾನು ಅತ್ಯಂತ ಸಂತೋಷದಿಂದ ಹಾರೈಸುವೆನು."

---

೩

## ರಾಜಸಭಾಭೂಷಣ ದಿವಾನ್ ಬಹದ್ದೂರ್
## ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟಿ, ಸಿ.ಐ.ಇ., ಎಲ್‌ಎಲ್.ಡಿ. ಅವರಿಂದ

"ಜಮಖಂಡಿಯ ಸಾಹಿತ್ಯ ಸಮ್ಮೇಳನದಲ್ಲಿ ಸೇರಿರುವ ಸಭಾಸದರಿಗೆ ನ
ನಮಸ್ಕಾರಗಳು. ನಮ್ಮ ನುರಿತ ವಿದ್ಯಾದಾಯಕರೂ, ನಮ್ಮ ಕನ್ನಡ ವಿದ್ವಾಂಸ
ಬಹಳ ಹಿರಿಯರೂ ಆದ ಶ್ರೀ॥ ಬಿ. ವೆಂಕಟನಾರಾಯಣಪ್ಪನವರು ಈ ಸಮ್ಮೇಳ
ಅಧ್ಯಕ್ಷರಾಗಿ ಚುನಾಯಿತರಾದದ್ದು ಅತ್ಯಂತ ತೃಪ್ತಿಕರವಾದ ವಿಷಯ. ನ
ಅದುದರಲ್ಲಿ ಹೆಚ್ಚು ಸಮಂಜಸತ್ವವಿದೆ......

"ಭಾರತದ ಭಾಷೆಗಳ ದೊಡ್ಡ ಕುಟುಂಬದಲ್ಲಿ ತನ್ನ ಯೋಗ್ಯಸ್ಥಾನ
ಗಳನ್ನು ಕನ್ನಡ ತಿರುಗಿ ಹೊಂದಬೇಕೆಂದು ಕರ್ನಾಟಕದ ಎಲ್ಲ ಭಾಗಗಳ ಜ
ಗುರಿಯಿಂದ ಮುಂದುವರಿಯುತ್ತಿರುವುದು ನನಗೆ ವಿಶೇಷ ಮನದಟ್ಟಾಗಿದೆ.....

"ನನ್ನ ವಿದ್ವನ್ಮಿತ್ರರು ಶ್ರೀ॥ ಚಿಕ್ಕೋಡಿಯವರು ಸ್ವಾಗತ ಮಂಡ
ಅಧ್ಯಕ್ಷರಾಗಿ ಕೆಲಸ ಮಾಡುತ್ತಿರುವುದು ಹರ್ಷದ ಸಂಗತಿ.

"ಈ ಸಮ್ಮೇಳನವು ಸಕಲ ವಿಧಗಳಲ್ಲಿಯೂ ಫಲಪ್ರದವಾಗಲೆಂದು ನಾ
ಹಾರೈಸುತ್ತೇನೆ."

---

೪

## ಮೈಸೂರು ಸಂಸ್ಥಾನದ ವಿದ್ಯಾಭ್ಯಾಸದ ಇಲಾಖೆಯ
## ಡೈರೆಕ್ಟರವರಾದ ಮಿ॥ ಇ. ಜಿ. ಮ್ಯಕಾಲ್‌ಪೈನ್, ಎಂ.ಎ. (ಎಡಿನ್.),
## ಡಿಪ್.ಎಜುಕೇಷನ್ (ಎಡಿನ್.), ವಿ.ಡಿ., ಜೆ.ಪಿ. ಅವರಿಂದ

"ಕನ್ನಡ ಸಾಹಿತ್ಯ ಸಮ್ಮೇಳನದ ೨೨ನೆಯ ಅಧಿವೇಶನವು ಜಮಖಂಡಿಯಲ್ಲಿ
ಸೇರುವುದಾಗಿದೆಯೆಂದು ತಿಳಿದು ಮೈಸೂರು ಸಂಸ್ಥಾನದಲ್ಲಿ ವಿದ್ಯಾಶಾಖೆಯ
ಡೈರೆಕ್ಟರಾದ ನನಗೆ ಅತ್ಯಂತ ಸಂತೋಷವಾಗಿದೆ. ನಿಮ್ಮ ಮಾನ್ಯ ಅಧ್ಯಕ್ಷರಾದ
ಶ್ರೀ॥ ಬಿ. ವೆಂಕಟನಾರಾಯಣಪ್ಪ, ಎಂ.ಎ. ಅವರು ಬೆಂಗಳೂರಿನ ಸೆಂಟ್ರಲ್
ಕಾಲೇಜಿನ ಅಧ್ಯಾಪಕವರ್ಗದಲ್ಲಿ ಅನೇಕ ವರ್ಷಗಳಕಾಲ ನನ್ನ ಸಹೋದ್ಯೋಗಿ
ಗಳಾಗಿದ್ದರು; ಮತ್ತು ಅವರು ಭೌತಶಾಸ್ತ್ರದ ಪಾಠ ಹೇಳುತ್ತಿದ್ದರೂ
ಯಾವಾಗಲೂ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಪ್ರಚಾರಕ್ಕೆ ಉತ್ಸಾಹದಿಂದ ಕೆಲಸ
ಮಾಡುವವರಾಗಿದ್ದರು. ಅವರು ತಮ್ಮ ಉದ್ಯೋಗದಿಂದ ನಿವೃತ್ತರಾದಮೇಲೆ
ಈ ಕೆಲಸಕ್ಕಾಗಿ ಮಾತ್ರವೇ ನಿಂತು ಶ್ರಮಿಸುತ್ತಿದ್ದಾರೆ; ಅದರಲ್ಲಿ

ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟುವಿನ ರಚನೆಗಾಗಿ ತಮ್ಮನ್ನೇ ಧಾರೆಯೆರೆದುಕೊಂಡಿದ್ದಾರೆ. ಸಮ್ಮೇಳನವು ಬಹು ಯಶಸ್ವಿಯಾಗುವುದೆಂದು ನಾನು ನಂಬಿದ್ದೇನೆ; ಮತ್ತು ಅದರ ಆಲೋಚನೆ ವಿಚಾರಗಳು ಕನ್ನಡ ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ಆಸಕ್ತಿಯನ್ನು ಹುಟ್ಟಿಸಲು ನಡೆಯುತ್ತಿರುವ ಕೆಲಸಕ್ಕೆ ಪರಿಣಾಮಕಾರಿಯಾದ ಸಹಾಯವನ್ನು ಕೊಡುವುವೆಂದೂ ನಂಬಿದ್ದೇನೆ. ಹೈಸ್ಕೂಲುಗಳಲ್ಲಿ ಭಾಷೇತರ ವಿಷಯಗಳನ್ನು ಕನ್ನಡದ ಮೂಲಕವೇ ಕಲಿಸಬೇಕೆಂದು ಮಾಡಿರುವ ಮೈಸೂರು ಸಂಸ್ಥಾನದ ಏರ್ಪಾಟು ಕನ್ನಡದ ಮುನ್ನಡೆಗೆ ಬಹಳ ಉತ್ತೇಜಕವಾಗಿದೆ; ಆ ಏರ್ಪಾಟನ್ನು ಕಾರ್ಯರೂಪಕ್ಕೆ ತರತಕ್ಕ ಜವಾಬುದಾರಿಯನ್ನು ಹೊತ್ತಿರತಕ್ಕ ನನಗೆ ಸಮ್ಮೇಳನವು ಎಲ್ಲ ರೀತಿಯಿಂದಲೂ ಯಶಸ್ವಿಯಾಗಲೆಂದು ಬಯಸಲು ಅತ್ಯಂತ ಹರ್ಷವಾಗಿದೆ."

---

೫

## ಧಾರವಾಡದ ಶ್ರೀಮಾನ್ ಆರ್. ಆರ್. ದಿವಾಕರ್ ಅವರಿಂದ

"....ಅನೇಕ ಅಡಚಣೆಗಳು ಉಂಟಾದರೂ ಅವುಗಳನ್ನೆಲ್ಲ ಎದುರಿಸಿ ಸಾಹಿತ್ಯ ಸಮ್ಮೇಳನವನ್ನು ಯಶಸ್ವಿಮಾಡಿದ ಬಗ್ಗೆ ಎಲ್ಲ ಕಾರ್ಯಕರ್ತರನ್ನೂ ಅಭಿನಂದಿಸಿ ಅವರ ಧೈರ್ಯವನ್ನು ನಾನು ಕೊಂಡಾಡದೆ ಇರಲಾರೆನು. ಕನ್ನಡ ಸಾಹಿತ್ಯ ವೃಕ್ಷವು ಯಾವದೇ ಅರಸರ ಅನುಗ್ರಹದಿಂದ ಅರಳುವಷ್ಟು ಇಲ್ಲವೇ ಶಾಪದಿಂದ ಸುಟ್ಟು ಹೋಗುವಷ್ಟು ಕೋಮಲವಲ್ಲ. ಅದು ಎಲ್ಲ ಚಳಿ ಗಾಳಿ ಮಳೆ ಬಿಸಿಲುಗಳನ್ನು ತಿಂದು ಜನಸಾಮಾನ್ಯರ ಪ್ರೇಮೋದಕದಿಂದ ಪುಷ್ಟವಾಗಿ ಬಲಿತುನಿಂತಿದೆ ಎಂಬುದನ್ನು ನೀವು ಸಿದ್ಧಮಾಡಿ ತೋರಿಸಿರುವಿರಿ. ಯಾರು ಬರಲಿ ಬಿಡಲಿ, ಯಾರು ಹಳಿಯಲಿ ಕೊಂಡಾಡಲಿ, ಕನ್ನಡ ಸಾಹಿತ್ಯ ರಥವು ಕಡುವೇಗದಿಂದ ಮುಂದೆ ಸಾಗುವುದು ನಿಶ್ಚಿತ ಎಂಬ ಆತ್ಮವಿಶ್ವಾಸದಿಂದ ಎಲ್ಲರೂ ದುಡಿಯೋಣ. ಅಂದರೆ ಯಶಸ್ಸು ಕಟ್ಟಿಟ್ಟಂತೆ."

---

೬

## ಬೊಂಬಾಯಿ ಸರ್ಕಾರದ ಮುಖ್ಯ ಮಂತ್ರಿಗಳಾದ ಶ್ರೀಮಾನ್ ಬಿ. ಜಿ. ಖೇರ್ ಅವರಿಂದ

"ತಮ್ಮ ಸಮ್ಮೇಳನದ ಆಹ್ವಾನವು ತಲಪಿದೆ. ಬೇರೆ ಕಾರ್ಯದ ನಿಮಿತ್ತ ನಾನು ಸಮ್ಮೇಳನಕ್ಕೆ ಬರಲು ಸಾಧ್ಯವಿಲ್ಲದ್ದಕ್ಕಾಗಿ ವಿಷಾದಿಸುತ್ತೇನೆ. ಆದರೆ ನನ್ನ ಶುಭ ಹಾರೈಕೆಗಳನ್ನು ಕಳಿಸುತ್ತೇನೆ; ಮತ್ತು ಸಮ್ಮೇಳನವು ಅತ್ಯಂತ ಯಶಸ್ವಿಯಾಗಲೆಂದು ಕೋರುತ್ತೇನೆ."

---

೭

## ಪುಣೆಯ 'ಆರ್ಯಭೂಷಣ' ಮತ್ತು 'ಜ್ಞಾನಪ್ರಕಾಶ' ಮುದ್ರಣಾಲಯದ ಶ್ರೀಮಾನ್ ಎ. ವಿ. ಪಟವರ್ಧನ್ ಅವರಿಂದ

ಕರ್ನಾಟಕ ಸಾಹಿತ್ಯ ಪರಿಷತ್ತಿನ ಸಮ್ಮೇಳನಕ್ಕೆ ಬರಲು ಬರೆದ ಆಮಂತ್ರಣ ಪತ್ರವನ್ನು ನೋಡಿದೆ. ಪರಿಷತ್ತಿನ ಈ ಅಧಿವೇಶನವು ಜಮಖಂಡಿಯಲ್ಲಿ ಜರುಗು ವುದರಿಂದ ಸಮ್ಮೇಳನಕ್ಕೆ ಬರುವುದು, ಒಂದು ದೃಷ್ಟಿಯಿಂದ, ನನ್ನ ಕರ್ತವ್ಯವೆಂದು ತಿಳಿಯುತ್ತೇನೆ. ಜಮಖಂಡಿ ಸಂಸ್ಥಾನದಲ್ಲಿಯ ಶಿಕ್ಷಣ ಕ್ರಮದಲ್ಲಿ ಕನ್ನಡ ಭಾಷೆಯ ಸಮಾವೇಶವಾಗಬೇಕೆನ್ನುವುದು ನನ್ನ ಮತವು. ಕೈ. ಶ್ರೀ. ಭಾವೂಸಾಹೇಬರ ಕಾಲದಲ್ಲಿ ಒಂದು ಶಿಕ್ಷಣ ಕಮಿಟಿಯನ್ನು ನಿರ್ಮಿಸಿದ ಕಾಲದಲ್ಲಿ ಆ ಕಮಿಟಿಯ ರಿಪೋರ್ಟಿನಲ್ಲಿ ಈ ಮಾತಿನ ಸಮಾವೇಶವನ್ನು ಮಾಡಲಾಗಿತ್ತು. ಅದೇ ಧೋರಣೆಯು ಸಂಸ್ಥಾನದಲ್ಲಿ ಕಾಯಮವಾಗಿ ನಿಲ್ಲಬಹುದೆಂದು ನಂಬಿದ್ದೇನೆ. ಜಮಖಂಡಿಯಲ್ಲಿ ಮರಾಟಿ ಹಾಗೂ ಕನ್ನಡ ಭಾಷೆಗಳ ಭಕ್ತರ ಸಹಕಾರ್ಯದಿಂದ ಈ ಸಮ್ಮೇಳನವು ಜರುಗುತ್ತಲಿದೆ ಎಂಬುದು ಸಮಾಧಾನದ ಮಾತು. ಭಾಷಾಭಿಮಾನಿಗಳು ಅನ್ಯ ದುರಾಗ್ರಹಕ್ಕೊಳಗಾಗದೆ, ಸಹಕಾರ್ಯದಿಂದ ಪ್ರಾಂತವನ್ನು ಮತ್ತು ರಾಷ್ಟ್ರವನ್ನು ಉದ್ಧರಿಸುವ ಕೆಲಸವನ್ನು ನಡೆಯಿಸಬೇಕು. ಹಾಗೂ ಈ ದೃಷ್ಟಿಯಿಂದ ಕರ್ನಾಟಕ ಸಾಹಿತ್ಯ ಪರಿಷತ್ತಿನ ಈ ಅಧಿವೇಶನವು ಮಾರ್ಗದರ್ಶಕವೂ ಯಶಸ್ವಿಯೂ ಆದೀತೆಂದು ನನ್ನಾಶೆ. ಸಮ್ಮೇಳನವು ಯಶಸ್ವಿಯಾಗಲೆಂದು ನಾನು ಹಾರೈ ಸುತ್ತೇನೆ."

---

೮

## ಬೆಳಗಾವಿಯ ಡಿಸ್ಟ್ರಿಕ್ಟ್ ಬೋರ್ಡಿನ ಪ್ರೆಸಿಡೆಂಟರಾದ ರಾವ್ ಬಹದ್ದೂರ್ ಶ್ರೀಮಾನ್ ಎಸ್. ಎನ್. ಅಂಗಡಿ ಅವರಿಂದ

"ಸಂಸ್ಥಾನದ ಜನರ ಪ್ರಯತ್ನ ನಿಜವಾಗಿಯೂ ಸ್ತುತ್ಯಾರ್ಹವಾದದ್ದು. ಸಂಸ್ಥಾನಗಳಲ್ಲಿ ಕನ್ನಡ ಭಾಷೆಯ ಸ್ಥಿತಿಯನ್ನು ಉತ್ತಮಗೊಳಿಸಬೇಕೆಂಬ ಈ ಉದ್ಯಮದಲ್ಲಿ ನನ್ನ ಸಹಾನುಭೂತಿಯಿದೆ."

---

## ಸಮ್ಮೇಳನದ ವಿಷಯದಲ್ಲಿ ಮಹಾಜನರ ಅಭಿಪ್ರಾಯಗಳು

# ಜಮಖಂಡಿಯ ಜಯಭೇರಿ

ಲೇಖಕರು: "ಈ. ಸಾ."

('ಜಯಕರ್ನಾಟಕ'ದ ಫೆಬ್ರುವರಿ ಸಂಚಿಕೆಯಿಂದ ಉದ್ಧೃತವಾದುದು)

"ಉರಿಯುತಿದೆ ನಮ್ಮ ಮನೆ! ಉರಿಯುತಿದೆ ನಮ್ಮ ಮನೆ! ಇರದೆ ಬನ್ನಿ, ಬನ್ನಿ, ಅಣ್ಣದಿರೆ, ಓ!" ಎಂಬ ಆರ್ತಧ್ವನಿಯು ಅಲ್ಪಕಾಲದಲ್ಲಿ ಎಲ್ಲೆಲ್ಲಿಯೂ ಹಬ್ಬಿತು. ನಾಟ್ಯಮಂಡಲಿಯ ಪ್ರಕಟನೆಯ ಮಾದರಿಯ ಬರೆಹಗಳು ದಿನವಹಿ ಪತ್ರಿಕೆಗಳಲ್ಲಿ ಪ್ರಕಟವಾಗ ತೊಡಗಿದವು. ಕನ್ನಡದ ಅಳಲಿನ ಕೂಗು ಕನ್ನಡಿಗರ ಬಗೆಯನ್ನು ಭೇದಿಸಿತು.

ನಾಡಿನ ಎಲ್ಲ ವಿಧದ ಕನ್ನಡಿಗರು ಹಿಂಡು ಹಿಂಡಾಗಿ, ತಂಡ ತಂಡವಾಗಿ ಜಮಖಂಡಿಯತ್ತ ಧಾವಿಸಿದರು. ಡಿಸೆಂಬರ್ ತಿಂಗಳ ಕೊನೆಯ ಮೂರು ದಿನಗಳಲ್ಲಿ ಇಪ್ಪತ್ತೆರಡನೆಯ ಸಾಹಿತ್ಯ ಸಮ್ಮೇಲನವು ನೆರೆಯಿತು.

"ಅದೊಂದು ಅಪೂರ್ವವಾದ ಸನ್ನಿವೇಶ. ಇಂತಹ ಭಾಗ್ಯವು ಹಿಂದಿನ ಯಾವ ಸಮ್ಮೇಲನಕ್ಕೂ ಬಂದಿರಲಿಲ್ಲ ಎಂದು ಬಲ್ಲವರು ಅಭಿಪ್ರಾಯಪಟ್ಟರು. ತಿಂಗಳು ತಿಂಗಳುಗಳಿಂದ ಸಿದ್ಧತೆ ನಡೆದಿರುವಾಗಲೂ ಅದೆಷ್ಟೋ ಲೋಪಗಳು ಒದಗಿದುದು ಉಂಟು. ಸುಮಾರು ಒಂದು ತಿಂಗಳಿಗೂ ಕಡಿಮೆಯ ಅವಧಿಯಲ್ಲಿ ಪರಿ ಪರಿಯ ಎಡರು ತೊಡರುಗಳನ್ನು ಇದಿರಿಸುತ್ತ ಕುಂದು ಕೊರತೆಗಳಿಗೆ ಇಂಬುಗೊಡದಂತೆ ಈ ಸಮ್ಮೇಲನವು ಕಿತ್ತುಕೊಂಡ ಗೆಲುವು ಬೆರಗುಗೊಳಿಸುವಂತಹುದು.

"ಕೊಡಗಿನಿಂದ ಕೊಪ್ಪಳದವರೆಗೆ ಎಲ್ಲ ಭಾಗಗಳಿಂದ ಆಗಮಿಸಿದ ಹಿರಿ ಸಾಹಿತಿಗಳ, ಮರಿ ಸಾಹಿತಿಗಳ, ಚಿಗುರು ಸಾಹಿತಿಗಳ, ಸಾಹಿತ್ಯ ಪ್ರೇಮಿಗಳ, ಸ್ತ್ರೀ ಪುರುಷ ಪ್ರತಿನಿಧಿಗಳ ಬಹು ಸಂಖ್ಯೆಯಷ್ಟೇ ಕಾರ್ಯಕಲಾಪಗಳ ವೈಪುಲ್ಯವೂ, ವೈವಿಧ್ಯವೂ ನೋಡುವಂತಹುದಾಗಿತ್ತು. ಸಮ್ಮೇಲನಕ್ಕೆ ಮುಂಚೆ ಕೆಲದಿನಗಳಿಂದ ಸಮ್ಮೇಲನವು ಮುಗಿದ ಕೆಲದಿನಗಳವರೆಗೆ ಹಗಲಿರುಳೂ ಬಿಟ್ಟೂ ಬಿಡದೆ ಕಾರ್ಯಕ್ರಮಗಳು ಸಾಗಿಯೇ ಇದ್ದುವು. ಎಲ್ಲೆಲ್ಲಿಯೂ ಉತ್ಸಾಹವೇ ಉತ್ಸಾಹ! ಒಂದು ಉಪನ್ಯಾಸವೆ, ಒಂದು ಕಾವ್ಯಗಾಯನವೆ, ಒಂದು ಕೀರ್ತನೆಯೆ, ಒಂದು ನಾಟ್ಯವೆ, ಒಂದು ನೃತ್ಯವೆ, ಒಂದು ಪ್ರದರ್ಶನವೆ, ಒಂದು ಶಕ್ತಿ ಸಾಧನೆಯೆ, ಒಂದು ಗೋಷ್ಠಿಯೆ, ಒಂದು ಗೊತ್ತುವಳಿಯೆ, ಒಂದು ನಗೆಯೆ, ಒಂದು ಅಣಕವೆ, ಯಾವುದೆಂದು ಹೇಳಬೇಕು? ಇಷ್ಟಾಗಿಯೂ ಎಷ್ಟೋ ಕಾರ್ಯಕ್ರಮಗಳು ಉಳಿದುಹೋಗಿ ಅನೇಕರಿಗೆ ಅಸಂತೋಷ ಸಂದರ್ಭಗಳು ಬಂದವು. ಈ ದಿನಗಳಲ್ಲಿ ಜಮಖಂಡಿಯ ವಾಯುಮಂಡಲವು ಕನ್ನಡದ ಕೆಚ್ಚಿನಿಂದ ಕಿಕ್ಕಿರಿದುಹೋಯಿತು. ಇದಕ್ಕೆ ಬರಿಯ ಸಾಹಿತ್ಯ ಸಮ್ಮೇಲನವೆಂದರೆ ನಸುವೆ ಹೇಳಿದಂತಾಗುವುದು. ಕರ್ಣಾಟಕ ಸಂಸ್ಕೃತಿಯ ಸಂದರ್ಶನ, ನವ ಕರ್ಣಾಟಕದ ಶಕ್ತಿ ಪ್ರದರ್ಶನ, ಕನ್ನಡತನದ ಮಹಾ ಸಮ್ಮೇಲನ ಎಂದರೆ ಸತ್ಯವನ್ನು ಸಮೀಪಿಸಿದಂತೆ ಆಗುವುದು.

"ಶ್ರೀ॥ ದೇಶಪಾಂಡೆ ಗಂಗಾಧರರಾಯರ ಮಂಗಲಾಚರಣೆ ರೋಮಾಂಚಕಾರಕವಾಯಿತು. ಓಜಸ್ವಿಯಾದ ಅವರ ಭಾಷಣದಲ್ಲಿ ಹೊರಸೂಸಿದ ತೇಜಸ್ವಿಯಾದ ಕೆಲವು ವಿಚಾರಗಳು ಸಾಹಿತಿಗಳಿಗೆ ಚಿರಕಾಲ ಮಾರ್ಗದರ್ಶಕವಾಗಿವೆ. ಜನಜೀವನವನ್ನು ಸಂಸ್ಕಾರಗೊಳಿಸುವುದೆ ಸಾಹಿತಿಯ ನೈಜಕಾರ್ಯವು. ಇಂದಿನ ಸಾಹಿತ್ಯವು ಇಂದಿನ ಜೀವನದ ಪೂರ್ಣ ಪ್ರತಿಬಿಂಬವಾಗಬೇಕು. ಕರ್ಣಾಟಕದಲ್ಲಿ ನೆಲಸಿದ ಮರಾಟರು ಕನ್ನಡಿಗರನ್ನು ಹೀಗಳೆದು ಬಾಳುವುದು ಸಾಧ್ಯವಿಲ್ಲ. ಕರ್ಣಾಟಕದ ಆರಾಧನೆಯಲ್ಲಿಯೇ ಇಲ್ಲಿಯ ಮರಾಟರಿಗೆ ಉನ್ನತಿ ಇದೆ. ಕರ್ಣಾಟಕದಲ್ಲಿ ಆಳುವ ಮರಾಟ ಅರಸರು ತಮಗೆ ಎಲ್ಲ ಭಾಷೆಗಳು ಸಮಾನವೆಂದಷ್ಟು ಹೇಳಿದರೆ ಕೆಲಸ ಮುಗಿಯಲಿಲ್ಲ. ಇವರ ರಾಜ್ಯದಲ್ಲಿಯ ಕನ್ನಡಿಗನಿಗೆ ಹಿರಿಯ ಮಗನ ಅಧಿಕಾರಗಳು ಸಲ್ಲಬೇಕು. ಕನ್ನಡಿಗರು ನಿಜವಾಗಿ ದೊಡ್ಡವರಾಗಬೇಕು; ಬೆಳೆಯಬೇಕು. ಕನ್ನಡಿಗರ ಹಿರಿಮೆ, ಕನ್ನಡ ಸಾಹಿತ್ಯದ ಘನತೆ ತಾನೇ ತಾನಾಗಿ ಅನ್ಯರನ್ನು ತನ್ನತ್ತ ಎಳೆದುತರಬೇಕು—ಮುಂತಾಗಿ ಗುಂಡು ಗುಡುಗಿನಿಂದ ಗರ್ಜಿಸುತ್ತಿರುವಾಗ ಕ್ಷಣಹೊತ್ತು ಸಾಹಿತ್ಯಪೀಠವು ರಾಜಕೀಯ ಪೀಠವಾದಂತೆ ಭಾಸವಾಯಿತು.

"ಸ್ವಾಗತಾಧ್ಯಕ್ಷರ ಭಾಷಣದಲ್ಲಿಯ ಒಂದು ಸೂಚನೆಯು ವಿಚಾರಾರ್ಹವಾಗಿದೆ: ಗ್ರೀಕ್, ಲ್ಯಾಟಿನ್ ಭಾಷೆಗಳಂತೆ, ಹಳಗನ್ನಡಕ್ಕೆ ನಮ್ಮ ವ್ಯಾಸಂಗಕ್ರಮದಲ್ಲಿ ಸ್ವತಂತ್ರಸ್ಥಾನವನ್ನು ಕಲ್ಪಿಸಿಕೊಡುವುದು.

"ಸಮ್ಮೇಲನದ ಅಧ್ಯಕ್ಷರ ಭಾಷಣದಲ್ಲಿ ಹೆಚ್ಚು ಮೊನೆಯಾಗಿ ಪ್ರಕಟವಾದ ಕಾರ್ಯ ಪರತೆಯು ಅಭಿನಂದನೀಯವಾಗಿದೆ.

"ಸಾಹಿತ್ಯ ಗೋಷ್ಠಿಯ ಸಭಾಪತಿಗಳಾದ ಕವಿಭೂಷಣ ಶ್ರೀ॥ ಬೆಟಗೇರಿಯವರು ಮನನೀಯವಾದ ಕೆಲವು ವಿಚಾರಗಳನ್ನು ಬೀರಿದರು. ಸಾಹಿತ್ಯವೆಂಬುದು ಸಮುದ್ರ ಮಥನ. ಚಲನವಲನವಿಲ್ಲದ, ಕ್ಷೋಭೆಯಿಲ್ಲದ ಸಾಹಿತ್ಯವು ಮುಂದಾರಿಯನ್ನು ಕಾಣಲಾರದು. ಸಂಪ್ರದಾಯ ಶರಣತೆ, ಮತೀಯ ದೃಷ್ಟಿಯ ಪ್ರಾಬಲ್ಯ–ಇವು ನಮ್ಮ ಸಾಹಿತ್ಯವನ್ನು ರಸಾತಳಕ್ಕೆ ಇಳಿಸಿದವು. ನಮ್ಮ ಸಾಹಿತ್ಯವು ನಮ್ಮ ನಾಡಿನ ಪತನಕ್ಕೆ ಒಂದು ನಿದರ್ಶನವಾಗಿದೆ. ಈಗ ನಮ್ಮ ಸಾಹಿತ್ಯದ ಪುನರುಜ್ಜೀವನವಾಗಬೇಕಾದರೆ ಹೊಸ ದೃಷ್ಟಿಯು ಹುಟ್ಟಬೇಕು. ಸಾಹಿತಿಗಳು ತತ್ತ್ವಸಂಶೋಧನೆಯ ಮಾರ್ಗವನ್ನು ಅನುಸರಿಸಬೇಕು ಎಂದು ಮುಂತಾಗಿ ಹೇಳಿದರು.

"ಸಮ್ಮೇಲನದ ಅಂಗವಾಗಿ ಧಾರವಾಡದ ಕರ್ಣಾಟಕ ಇತಿಹಾಸ ಸಂಶೋಧನ ಮಂಡಲದವರು ಏರ್ಪಡಿಸಿದ್ದ ಐತಿಹಾಸಿಕ ವಸ್ತುಪ್ರದರ್ಶನ ಮತ್ತು ಪತ್ರಿಕಾಪ್ರದರ್ಶನ ಇವು ಬಹು ಜನರ ಮನಸ್ಸುಗಳನ್ನು ಸೆಳೆದುಕೊಂಡು ಯಶೋಭಾಗಿಗಳಾದವು. ಕನ್ನಡದಲ್ಲಿ ಹುಟ್ಟಿದ ನೂರಾರು ಪತ್ರಿಕೆಗಳನ್ನು ನೋಡಿ ಜನರು ಬೆರಗಾದರು. ಐತಿಹಾಸಿಕ ವಸ್ತುಗಳನ್ನು ಕಂಡು ಎಷ್ಟೋ ಜನರಲ್ಲಿ ಕರ್ಣಾಟಕ ಇತಿಹಾಸದ ಬಗೆಗೆ ಜಿಜ್ಞಾಸೆ ಜಾಗೃತವಾದುವು. ವಿದ್ಯಾರ್ಥಿಗಳು ನಡಸುತ್ತಿರುವ ಕೈಬರೆಹದ ಪತ್ರಿಕೆಗಳು ಮುಖ್ಯವಾಗಿದ್ದವು. ಇವುಗಳಲ್ಲಿ ಬೆಳಗಾವಿ, ಮುಧೋಳ, ಕಲಬುರ್ಗಿ ಮುಂತಾದ ಪತ್ರಿಕೆಗಳು ಸಾಹಿತ್ಯ ಮತ್ತು ಕಲೆ ಈ ಎರಡೂ ವಿಚಾರಗಳಿಂದ ಮೇಲ್ತರಗತಿಯವಾಗಿ

"ಸುಮಾರು ಮೂವತ್ತು ಪ್ರತಿನಿಧಿಗಳಿಂದ ಕೂಡಿದ ಕರ್ಣಾಟಕ ಸಂಘ ಸಮ್ಮೇಲನವು ಈ ಅಧಿವೇಶನದ ಇನ್ನೊಂದು ಹೆಚ್ಚುಗಾರಿಕೆಯಾಗಿದೆ. ಕನ್ನಡದ ಹೆಸರನ್ನು ತಮ್ಮ ಹೆಗ್ಗುರಿಯಾಗಿಟ್ಟುಕೊಂಡು ದುಡಿಯುವ ಕೆಲಸಗಾರರಲ್ಲಿ ಸೌಹಾರ್ದ ಗಳನ್ನು ಹುಟ್ಟಿಸಲು ಇಂತಹ ಸಂದರ್ಭಗಳು ಅತ್ಯಗತ್ಯವಾಗಿವೆ. ಇಂದಿನ ಕನ್ನಡ ಸಂಘಗಳು ಮುಂದಿನ ಕರ್ಣಾಟಕದ ತಳಹದಿಗಳು. ಒಂದು ಮೂಲೆಯ ಒಬ್ಬ ಕನ್ನಡಿಗನ ನೋವಾದರೆ, ಅಖಿಲ ಕರ್ಣಾಟಕಕ್ಕೆ ನೋವಾದಂತೆ. ಒಬ್ಬ ಕನ್ನಡಿಗನ ಕೂಗು ಕರ್ಣಾಟಕದ ಕೂಗು ಎಂಬ ಜೀವಾಳವು ಕನ್ನಡಿಗರಲ್ಲಿ ಜಾಗೃತವಾಗಬೇಕು. ಯಲ್ಲಿ ಮೊದಲಡಿಯಿಟ್ಟು ಈ ಯೋಚನೆಯು ಯಶಸ್ವಿಯಾಗಿ ಕಾರ್ಯರೂಪಕ್ಕೆ ಕರ್ಣಾಟಕದ ಪ್ರಗತಿರಥವು ವೇಗದಿಂದ ಸಾಗುವುದೆಂದು ಹಾರಯಿಸಲಾಗಿದೆ.

"ಇಂದಿಗೆ ಒಂದು ವರ್ಷದ ಹಿಂದೆ ಹಂಪೆಯಲ್ಲಿ ನೆರವೇರಿದ ವಿಜಯನಗರ ಸಾಮ್ರಾಜ್ಯ ಷಟ್‌ಶತ ಸಾಂವತ್ಸರಿಕ ಸ್ಮಾರಕೋತ್ಸವದ ವರದಿಯು ಇದೇ ಸಮಯಕ್ಕೆ ಪ್ರಕಟವಾಗಿ ಸಮ್ಮೇಲನಕ್ಕೆ ಇನ್ನೊಂದು ಶೋಭೆಯನ್ನು ತಂದಿತು.

"ಸಮ್ಮೇಲನದ ಕೋಲಾಹಲದಲ್ಲಿಯೂ ಕೆಲವು ಹಳೆ ಹೊಸ ಜೀವಜ್ಯೋತಿಗಳು ಮಿಂಚಿ ಮೂಡಿದವು. ಇಂದಿನ ಕನ್ನಡದ ರಸಋಷಿಗಳಾದ ಶ್ರೀ॥ ಬಿ. ಎಂ. ಶ್ರೀಕಂಠಯ್ಯ ನವರು ತಮ್ಮ ವಿನಯ, ವಕ್ತೃತ್ವ, ವಿಶಾಲತೆಗಳಿಂದ ಎಲ್ಲರನ್ನೂ ಮುಗ್ಧಗೊಳಿಸಿದರು. ಶ್ರೀಮಾನ್ ಮಾಸ್ತಿಯವರು ಸರಸಮಧುರ ಸಲ್ಲಾಪಗಳಿಂದ ಎಲ್ಲೆಲ್ಲಿಯೂ ಕಣ್ಣನ್ನು ಬೀರುತ್ತ ಬೆಳೆಯುವವರ ಬಳಗವನ್ನು ಬೆರಗುಗೊಳಿಸಿದರು. ಮುದವೀಡು ಕೃಷ್ಣರಾಯರ ವೀರವಾಣಿಯು ಕನ್ನಡಿಗರ ಹೇಡಿತನವನ್ನು ಶ್ರೀ॥ ಕುಲಕರ್ಣಿ ಶ್ರೀನಿವಾಸರ ನೃತ್ಯಪ್ರೌಢಿಮೆಯು ಕಲಾಪ್ರಿಯರನ್ನು ರಂಜಿಸಿತು. ಇವರಿಂದ ಸ್ಫೂರ್ತಿಗೊಂಡ ಬಾಗಲಕೋಟೆಯ ಶ್ರೀ॥ ಶ್ರೀಪಾದ ದೇಶಪಾಂಡೆ ಮತ್ತು ನವಬಾಲಿಕೆಯಾದ ನಾಯಂಪಳ್ಳಿ ಕೃಷ್ಣಾ ಇವರು ಮೊದಲುಬಾರಿ ನೃತ್ಯರಂಗದಲ್ಲಿ ಪದಾರ್ಪಣಮಾಡಿದರು.

"ನವಕರ್ಣಾಟಕವು ನಿರ್ಮಾಣವಾಗಿದೆ ಎಂಬುದಕ್ಕೆ ಈ ಸಮ್ಮೇಲನವೊಂದು ಹಿರಿದಾದ ಪ್ರಮಾಣ. ಕರ್ಣಾಟಕದಲ್ಲಿ ನವಚೈತನ್ಯವು ಸ್ಫುರಿಸುತಲಿರದಿದ್ದರೆ ಜಮಖಂಡಿಯಂತಹಲ್ಲಿ ಇಂತಹ ಸಮ್ಮೇಲನವು ಈ ರೀತಿಯಲ್ಲಿ ಯಶಸ್ವಿಯಾಗುತ್ತಿರಲೇ ಇಲ್ಲ. ಕನ್ನಡಿಗನು ಎದ್ದೇಳಲೇಬೇಕು. ಆತನಿಗೆ ಇದಿರಾರು?

"ಬಹುಕಾಲ ಬರದ ಬವಣೆಯಿಂದ ಬಳಲುತ್ತಿರುವ ಭೂಪ್ರದೇಶದಲ್ಲಿ ಸಮೃದ್ಧಿ ಮಳೆಯಾದಂತೆ ಆಯಿತು ಈ ಸಮ್ಮೇಲನ. ಈ ನಾಡಿನಲ್ಲಿ ಕನ್ನಡದ ಬಡತನವು ಹಿಂಗಿತು. ಈ ಸುವೃಷ್ಟಿಯಿಂದ ಕನ್ನಡದ ಎಷ್ಟು ಬೀಜಗಳು ಮೊಳೆತವು; ಎಷ್ಟು ಸಸಿಗಳು ಚಿಗಿತವು; ಎಷ್ಟು ಸಸಿಗಳು ಕೊನರಿದವು; ಯಾರು ಹೇಳಬೇಕು?

"ಯಾವ ಜಮಖಂಡಿಯಲ್ಲಿ ಕನ್ನಡದ ಹೆಸರೆತ್ತುವುದು ಕಳವಾಗಿತ್ತೋ ಆ ಜಮಖಂಡಿಯಲ್ಲಿ ಕನ್ನಡದ ಜಯಭೇರಿಯು ಮೊಳಮೊಳಗಿತು. ಈ ಜಯಭೇರಿಯು ವಿರೋಧಿಗಳ ಸದ್ದನ್ನು ಅಡಗಿಸಿತು. ಉದಾಸೀನರನ್ನು ಉನ್ಮುಖಗೊಳಿಸಿತು. ಒಲಿದವರನ್ನು ನಲಿಸಿ ಒಲಿಯಿಸಿತು. ಅತ್ತಲಿನ ಕರ್ಣಾಟಕಸ್ಥರು, ಇತ್ತಲಿನ ಕರ್ಣಾಟಕಸ್ಥರು ಎಂಬ ಬಯಕೆಗಳು ಬತ್ತಿ ಕರ್ಣಾಟಕಸ್ಥರೆಲ್ಲರೂ ಒಂದು, ಎಲ್ಲರೂ ಕನ್ನಡಿಗರು ಎಂಬ ಭಾವನೆಯನ್ನು ಬೆಳೆಯಿಸಿತು. ವಿಮುಖರಾದ ಅರಸರು ಶುಭಸಂದೇಶವನ್ನು ಅರುಹಿ ಕನ್ನಡ ಮೂರ್ಧನ್ಯರಿಗೆ ತಮ್ಮ ಅರಮನೆಯಲ್ಲಿ ಸ್ವಾಗತ ಸನ್ಮಾನ ನೀಡುವಂತಹರಾದರು.

"ಇದೆಲ್ಲವೂ ಆಗತಕ್ಕದ್ದು, ಆದುದು. ಆಗಬೇಕಾದುದು ಮುಂದೆಯೇ ಇದೆ: ಅಪಾರವಾಗಿದೆ, ಅನಂತವಾಗಿದೆ. ಆ ಗುರಿಯತ್ತ ಕನ್ನಡಿಗನು ಸಾಗಲಿ; ಭರದಿಂದ ಸಾಗಲಿ. ಅದರಲ್ಲಿಯೇ ಜಮಖಂಡಿಯ ಜಯಭೇರಿಯ ಸಾರ್ಥಕ್ಯ.

"ಕೊನೆಯದಾಗಿ, ಈ ಸಮ್ಮೇಲನವನ್ನು ಯಶಸ್ವಿಗೊಳಿಸಲು ಸಹಾಯಕರಾಗಿ ಮನಮುಟ್ಟಿ ದುಡಿದ ಮಹನೀಯರೆಲ್ಲರಿಗೂ ಹೃತ್ಪೂರ್ವಕ ಅಭಿನಂದನೆಗಳು, ವಂದನೆಗಳು."

---

422—38.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

ಶ್ರೀಃ

# ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ

**The Quarterly Journal of the Kannada Literary Academy, Bangalore**

ಸಂಪುಟ ೨೩] ಈಶ್ವರ, ಪುಷ್ಯ—ಫಾಲ್ಗುನ [ಸಂಚಿಕೆ ೧



ವಾರ್ಷಿಕ ಚಂದಾ ರೂ. ೪] * [ಬಿಡಿ ಸಂಚಿಕೆ ರೂ. ೧-೮-೦

ಕರ್ನಾಟಕ ಸಾಹಿತ್ಯ ಪರಿಷತ್ತು,
ಹಾರ್ಡಿಂಜ್ ರಸ್ತೆ, ಬೆಂಗಳೂರು ನಗರ

Vol. XXIII, No. 1] [January-March, 1938

# ಪರಿಷತ್ಪತ್ರಿಕೆಯ ನಿಯಮಗಳು

ಕರ್ನಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯಿಂದ ನಿಯಮಿಸಲ್ಪಟ್ಟ ಸಂಪಾದಕ ಮಂಡಲಿಯ ತೀರ್ಮಾನಗಳಲ್ಲಿ ಪರಿಷತ್ಪತ್ರಿಕೆಯ ಸ್ವರೂಪವನ್ನು ಕುರಿತದ್ದು ಈ ರೀತಿ ಇರುತ್ತದೆ (೫–೩–೧೯೩೪):—

ಪರಿಷತ್ಪತ್ರಿಕೆಯ ಪ್ರತಿಯೊಂದು ಸಂಚಿಕೆಯೂ ಸಾಧಾರಣವಾಗಿ ೬೦ ಪುಟಕ್ಕೆ ಕಡಮೆಯಿಲ್ಲದೆ ೧೦೦ಕ್ಕೆ ಹೆಚ್ಚಿಲ್ಲದೆ ಇರತಕ್ಕದ್ದು.

ಪರಿಷತ್ಪತ್ರಿಕೆಯಲ್ಲಿ ಸಾಮಾನ್ಯವಾಗಿ ಈ ಕೆಳಗಿನ ಭಾಗಗಳಿರತಕ್ಕದ್ದು :—

(೧) ಸ್ವತಂತ್ರ ಲೇಖನಗಳು —(ಕನ್ನಡಕ್ಕೂ ತತ್ಸಂಬಂಧವಾದ ಇತರ ಭಾಷೆಗಳಿಗೂ ಅನ್ವಯಿಸತಕ್ಕವು) ಭಾಷಾಶಾಸ್ತ್ರ, ಕಾವ್ಯಮೀಮಾಂಸೆ, ಸಾಹಿತ್ಯ ಚರಿತ್ರೆ, ಐತಿಹಾಸಿಕ ವಿಚಾರಗಳು. (೨) ಪ್ರಮಾಣ ಗ್ರಂಥಗಳ ಅನುವಾದಗಳು—ಸಂಸ್ಕೃತದಿಂದ, ಇಂಗ್ಲಿಷಿನಿಂದ, ಇತರ ಭಾಷೆಗಳಿಂದ. (೩) ಪುರಾತನ ಪ್ರಬಂಧಗಳು — ಪ್ರೌಢ ಕಾವ್ಯಗಳು, ಜನಪದ ಸಾಹಿತ್ಯ (ಲಾವಣಿ, ಇತ್ಯಾದಿ), ಶಾಸನಗಳು, ಕೈಫಿಯತ್ತು, ಇತ್ಯಾದಿ. (೪) ಗ್ರಂಥ ವಿಮರ್ಶೆ — ಗ್ರಂಥ ಸ್ವೀಕಾರ. (೫) ಪರಿಷತ್ತಿನ, ಅದರ ಶಾಖೆಗಳ ಮತ್ತು ಅದರ ಅಂಗಸಂಸ್ಥೆಗಳ ಕಾರ್ಯಕಲಾಪಗಳು. (೬) ಸಮಕಾಲೀನ ಪತ್ರಿಕೆಗಳಲ್ಲಿ ಬಂದಿರುವ ಮುಖ್ಯ ವಿಷಯಗಳು : ಕರ್ನಾಟಕಕ್ಕೆ ಸಂಬಂಧಿಸಿದ ಲೇಖನಗಳ ಮುಖ್ಯಾಂಶಗಳು. (೭) ಸಂಪಾದಕೀಯ ಟೀಕೆಗಳು. (೮) ವಿನಿಮಯ ಪತ್ರಿಕೆಗಳ ಪಟ್ಟಿ. (೯) ಪರಿಷತ್ತಿನ ಕಟ್ಟಳೆ-ಪತ್ರಿಕೆಯ ಚಂದಾ ವಿವರ, ಇತ್ಯಾದಿ. (೧೦) ಕಾ॥ ನಿ॥ ಮಂಡಲಿಯ ಸದಸ್ಯರ ಪಟ್ಟಿ. (೧೧) ಸಂಪಾದಕ ಮಂಡಲಿಯ ಸದಸ್ಯರ ಪಟ್ಟಿ. (೧೨) ಪರಿಷತ್ತಿನ ಗ್ರಂಥಭಂಡಾರಕ್ಕೆ ಹೊಸದಾಗಿ ಸೇರಿದ ಗ್ರಂಥಗಳು.

ಪರಿಷತ್ಪತ್ರಿಕೆಯ ನಾಲ್ಕು ಸಂಚಿಕೆಗಳು ಈ ಕೆಳಗಿನ ತಿಂಗಳುಗಳಲ್ಲಿ ಪ್ರಕಟವಾಗತಕ್ಕದ್ದು:-

| | |
|---|---|
| ೧. ಜನವರಿ — ಪುಷ್ಯ. | ೩. ಜುಲೈ—ಆಷಾಢ. |
| ೨. ಏಪ್ರಿಲ್ — ಚೈತ್ರ. | ೪. ಅಕ್ಟೋಬರ್—ಆಶ್ವಯುಜ. |

ಪರಿಷತ್ಪತ್ರಿಕೆಯ ಸಂಪಾದಕೀಯ ಕಾರ್ಯದ ಜವಾಬ್ದಾರಿಯನ್ನು ಸಂಪಾದಕರಿಗೆ ವಹಿಸತಕ್ಕದ್ದು. ಸಂಪಾದಕ ಮಂಡಲಿಯ ವ್ಯವಸ್ಥಾಪಕರು ಪತ್ರಿಕೆಯ ಸಂಪಾದಕರಾಗಿರತಕ್ಕದ್ದು. ಆವಶ್ಯಕತೆ ಬಿದ್ದ ಸಂದರ್ಭಗಳಲ್ಲಿ ಅವರು ಸಂಪಾದಕ ಮಂಡಲಿಯ ಸಲಹೆಗಳನ್ನು ತೆಗೆದುಕೊಳ್ಳತಕ್ಕದ್ದು. ಧಾರಾವಾಹಿಯಾದ ಲೇಖನಗಳು ಒಂದು ಸಂಚಿಕೆಯಲ್ಲಿ ಸುಮಾರು ಹದಿನಾರು ಪುಟಗಳಷ್ಟು ಮಾತ್ರ ಇರತಕ್ಕದ್ದು.

[ಈ ತೀರ್ಮಾನಗಳನ್ನು ಕಾ॥ ನಿ॥ ಮಂಡಲಿ ತಾ॥ ೨೫–೩–೧೯೩೪ ಮತ್ತು ೧೯–೪–೧೯೩೪ ರಲ್ಲಿ ಅಂಗೀಕರಿಸಿತು.]

## ಸದಸ್ಯತ್ವದ ಮತ್ತು ಪತ್ರಿಕಾಗ್ರಾಹಕತ್ವದ ಕಾಲಾವಧಿ

(೧) ಪರಿಷತ್ತಿನ ಸದಸ್ಯತ್ವವು ಸಾಮಾನ್ಯವಾಗಿ ಸದಸ್ಯತ್ವಕ್ಕಾಗಿ ಬಂದ ಅಪೇಕ್ಷಾಪತ್ರವನ್ನು ಕಾ॥ ನಿ॥ ಮಂಡಲಿ ಅಂಗೀಕರಿಸಿದ ತಾರೀಖಿನಿಂದ ೧೨ ತಿಂಗಳು ಮುಗಿಯುವವರೆಗೆ ನಡೆಯುವುದು.

(೨) ಸದಸ್ಯರಾದವರು ತಮ್ಮ ಅಪೇಕ್ಷಾಪತ್ರದಲ್ಲಿ ಪರಿಷತ್ಪತ್ರಿಕೆಯ ಗ್ರಾಹಕರಾಗಬೇಕೆಂಬ ಅಪೇಕ್ಷೆಯನ್ನು ತಿಳಿಸಿದ್ದರೆ, ಅಂಥಾ ಗ್ರಾಹಕರ ಚಂದಾ ಹಣವನ್ನು ಸಾಮಾನ್ಯವಾಗಿ ಸದಸ್ಯತ್ವದ ಕಾಲಾವಧಿಗೆ ಸಮವ್ಯಾಪಿಯೆಂದು ಗಣಿಸಲಾಗುವುದು.

(೩) ಪರಿಷತ್ಪತ್ರಿಕೆಯ ಗ್ರಾಹಕರಾದ ಸದಸ್ಯರು ತಮಗೆ ಮೇಲಿನ ನಿಯಮದ ಪ್ರಕಾರ ಸಲ್ಲತಕ್ಕ ಪರಿಷತ್ಪತ್ರಿಕೆಯ ಸಂಚಿಕೆಗಳ ಜೊತೆಗೆ ಅದೇ ಸಂಪುಟದ ಹಿಂದಿನ ಸಂಚಿಕೆಗಳೂ ಬೇಕೆಂದು ಅಪೇಕ್ಷಿಸಿದ ಪಕ್ಷದಲ್ಲಿ, ಅಂಥ ಹಿಂದಿನ ಸಂಚಿಕೆಗಳು ಪರಿಷತ್ತಿನಲ್ಲಿ ಉಳಿದಿದ್ದು ದೊರೆಯುವುದಾದರೆ, ಅವನ್ನು ಚಂದಾ ಕಾಲಕ್ಕೆ ಸೇರಿದ್ದಂತೆ ಲೆಕ್ಕಮಾಡಿ ಕೊಡಬಹುದು. ಇಂಥಾ ಸಂದರ್ಭದಲ್ಲಿ ಚಂದಾ ಹಣದ ಕಾಲಾವಧಿಯ ಎಣಿಕೆ ಬೇರೆಯಾಗುವುದು.

---

**ವಿಶೇಷ ಸೂಚನೆ.**—ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಗಿರುವ ಲೇಖನಗಳಲ್ಲಿನ ವಿಷಯ ಸಂಗತಿಗಳಿಗೂ ಅಭಿಪ್ರಾಯಗಳಿಗೂ ಆಯಾ ಲೇಖಕರು ಜವಾಬುದಾರರೇ ಹೊರತು ಅವು ಅವಶ್ಯವಾಗಿ ಪರಿಷತ್ತಿನವೆಂದು ಯಾರೂ ತಿಳಿಯತಕ್ಕದ್ದಲ್ಲ.

THE QUARTERLY JOURNAL
OF THE
KANNADA LITERARY ACADEMY

Vol. XXIII] JANUARY–MARCH, 1938 No. 1

# CONTENTS IN BRIEF

**I. Historical Events in Jaimini Bhārata :** *By Mr. Hulloor Srinivasa Jois, Chitaldrug.*

The view put forward by Mr. Srinivasa Jois in this Article is that the author of the *Jaimini Bhārata* in narrating the story of the Aśwamédha or Horse Sacrifice performed by Dharmarāja and the conquests won by Arjuna, had in view the conquests of the famous historical personage Samudra Gupta and his Horse Sacrifice. The line of argument adopted is somewhat like this: "Names of some kings conquered by Arjuna, appearing in the *Jaimini Bhārata*, are not to be found in the *Mahābhārata*, while their doings indicate that they were none but the kings who were conquered by Samudra Gupta. The events of Samudra Gupta's conquests are depicted in a different garb, certain historical personages and events are merged in the main current of the story of the *Aśwamédha Parva* of the *Mahābhārata* and the whole story is told with a tinge of allegory as it were."—The author welcomes further investigation by scholars in respect of his conclusions.

**II. Defects in Literary Composition :** *By Mr. M. A. Narayana Sastri, Sahitya Vidwan, Bangalore.*

The author briefly explains how the improper use of words which do not conform to strict rules of Grammar, poetics or poetic conventions mars literary composition and how such defects take away from the elegance of language and enjoyment of poetry. All the defects pertaining to the use of words, which are stated to be 17 in number according to writers on Rhetoric, are enumerated with explanatory notes, together with examples from modern Kannada poetry to illustrate these defects.

**III. Rhetoric and Kannada Literature :** *By Pandit Kesava Sarma, Galagali.*

Rhetoric, or embellishment by 'figures of speech,' is an aid to enhance the beauty of literature. Rhetorical expression makes literature enchanting and brings it nearer to popular appeal; the fearful and the sorrowful, the cruel and the pitiful, the common and the strange—all these sentiments are equally

appealing when conveyed through rhetorical language. Ancient Kannada literature is the richer for being rhetorical; and the Kannada of to-day and to-morrow would be poorer if it throws away the ornament of rhetoric.

### IV. Recitation Competitions in the Parishat :

A brief report pertaining to the Recitation Competitions for boys and girls of Primary, Middle and High Schools, which were conducted in the Parishat Hall on the 16th, 17th and 18th of November last, is given. 144 boys and girls participated in the Competitions, and prizes in the shape of silver cups, medals and Kannada books were given to 22 successful candidates. Rajasabhabhushana Diwan Bahadur Dr. Sir K. P. Puttanna Chetty, Kt., C.I.E., LL.D., Retired Member of Council, presided on the occasion and Lady Puttanna Chetty gave away the prizes.

### V. Book Reviews and Acknowledgments :

Number of books reviewed : 14 ; number of books acknowledged: 3

### VI. Editorial Notes :

Ourselves—Aim of the Parishat : extract of speech made by Mr. B. M. Srikantia, M.A., B.L., at a meeting held in the Parishat Hall under the presidency of Sir Mirza M. Ismail, Dewan of Mysore, to congratulate him on the occasion of his 54th Birthday and of his election as Vice-President of the Parishat—Acknowledgment of Donations to the Parishat : Rs. 1,200 in the shape of Life Memberships to the Parishat collected by the Kannada Sahitya Sangha, Bangalore, and other small donations—Work before the Parishat : to spread enlightenment among the masses in their own tongue and to make the Parishat a real People's University—Appreciation of the Parishat's work : extracts from the speech made by Sir Mirza M. Ismail at a Party given in his honour—Emblem of the Parishat ; the Kannada Flag ; what they stand for—Fifth Spring Literary Festival held at Bangalore, for 4 days from 30th April to 3rd May ; at Anavatti (Shimoga District) for 3 days from 25th to 27th of May ; and at Gadag for 3 days from 29th to 31st of May—Publication of *Kannada Bāvuta*, an anthology of ancient and modern Kannada poetry from the 7th to the 20th century relating to Karnataka culture—Book made available at concession rates to members of the Parishat—Karnataka Children's Gathering organized by Srimati R. Kalyanamma on the 26th of April and opened by Princess Vijayalakshmi Ammanniyavaru, daughter of His Highness the Yuvaraja of Mysore—Congratulations to Prince Jayachamaraja Wadiyar of Mysore on his wedding—The late Mr. Hosakote Chidambaraiya, well-known Kannada author : condolences on his demise—Silver Jubilee of the Karnataka Sahitya Parishat on May 3rd, 1940—Unification of the Karnataka : Parishat's sympathy—Encouragement for Higher Studies in Kannada : Endowment of Rs. 5,000 made by Mr. B. M. Srikantia to the University of Mysore for the award of Scholarships to students specialising in Kannada in the B.A. Honours and M.A. courses—Memorial Day of the late Maharaja Sri Chamarajendra Wadiyar of Mysore: celebration by the Karnataka Sangha of Mysore.

908-38 The Bangalore Press





## ವಿ ಷ ಯ ಸೂ ಚಿ ಕೆ

# ವಿನಿಮಯ ಪತ್ರಿಕೆ ಮತ್ತು ಪ್ರಕಟನೆಗಳ ಪಟ್ಟಿ

**ತ್ರೈಮಾಸಿಕ ಪತ್ರಿಕೆಗಳು**:—೧. Journal of the Mythic Society. ೨. Journal of the Andhra Historical Research Society. ೩. Journal of the Bharata Itihasa Samshodhaka Mandala. ೪. Maharashtra Sahitya Parishat Patrika. ೫. The Karnatak Historical Review. ೬. Journal of the Annamalai University. ೭. Journal of the Bombay Branch of the Royal Asiatic Society. ೮. Indian Culture. ೯. Journal of the K. R. Cama Oriental Research Institute. ೧೦. Journal of Indian History. ೧೧. Journal of the International Mediterranean Association. ೧೨. Zeitschrift für Indologie und Iranistik. ೧೩. ಶ್ರೀಮನ್ ಮಹಾರಾಜರ ಸಂಸ್ಕೃತ ಮಹಾಪಾಠಶಾಲಾ ಪತ್ರಿಕಾ. ೧೪. ಪ್ರಾಚೀನ ಕರ್ನಾಟಕ. ೧೫. ಪ್ರಬುದ್ಧ ಕರ್ಣಾಟಕ. ೧೬. ವಂಗೀಯ ಸಾಹಿತ್ಯ ಪರಿಷತ್ಪತ್ರಿಕೆ. ೧೭. The Jaina Antiquary (ಜೈನ ಸಿದ್ಧಾಂತ ಭಾಸ್ಕರ). ೧೮. Hindustani. ೧೯. ಹಳ್ಳಿಯ ಆಳು. ೨೦. [illegible]

**ದ್ವೈಮಾಸಿಕ ಪತ್ರಿಕೆಗಳು**:—೧. Journal of the Bombay University. ೨. ಆಂಧ್ರ ಸಾಹಿತ್ಯ ಪರಿಷತ್ ಪತ್ರಿಕೆ. ೩. ಶಿವಾನುಭವ. ೪. Bulletin of the Museum of Fine Arts.

**ಮಾಸ ಪತ್ರಿಕೆಗಳು**:—೧. The Mysore Economic Journal. ೨. Jaina Gazette. ೩. The Indian P.E.N. ೪. ಅಧ್ಯಾತ್ಮ ಪ್ರಕಾಶ. ೫. ಆರೋಗ್ಯ ಚಂದ್ರಿಕೆ. ೬. ಜಯಕರ್ನಾಟಕ. ೭. ಮೈಸೂರು ಸಹಕಾರ ಪತ್ರಿಕೆ. ೮. ರಂಗಭೂಮಿ. ೯. ಸುಬೋಧ. ೧೦. ಸದ್ಬೋಧ ಚಂದ್ರಿಕೆ. ೧೧. ಮೈಸೂರು ವ್ಯವಸಾಯ [illegible] ಸಂಘದ ಪತ್ರಿಕೆ. ೧೨. ಕಾದಂಬರೀ ಸಂಗ್ರಹ. ೧೩. ದೇಶೀಯ ವಿದ್ಯಾಶಾಲಾ ಪತ್ರಿಕೆ. ೧೪. ಮೈಸೂರು ಮಕ್ಕಳು. ೧೫. ಸದ್ಧರ್ಮದೀಪಿಕೆ. ೧೬. ಮಕ್ಕಳ ಪುಸ್ತಕ. ೧೭. ವಿವೇಕಾಭ್ಯುದಯ. ೧೮. ತ್ರಿವೇಣಿ. ೧೯. ಕತೆಗಾರ. ೨೦. ಭಾರತಿ. ೨೧. [illegible] ಬಂಧು. ೨೨. ನಗುವ ನಂದ. ೨೩. ಭಾರತಿ (ತೆಲುಗು). ೨೪. [illegible] ೨೫. ವೀರಶೈವ ಚಂದ್ರಿಕೆ. ೨೬. ಸಂಸ್ಕೃತ ಸಾಹಿತ್ಯ ಪರಿಷತ್ಪತ್ರಿಕೆ. ೨೭. [illegible] ೨೮. ಹಂಸ. ೨೯. ವಿಮಾ ವಾಣಿಜ್ಯ. ೩೦. ವಿದ್ಯಾದಾಯಿನಿ. ೩೧. ವಿವಿಧ ವಿಜ್ಞಾನ ವಿಸ್ತಾರ. ೩೨. ವಿಶ್ವವಾಣಿ. ೩೩. ದಿವ್ಯ ಜ್ಯೋತಿ. ೩೪. ಶರಣ ಸಾಹಿತ್ಯ.

**ವಾರ ಪತ್ರಿಕೆಗಳು**:—೧. ರಾಜಹಂಸ. ೨. ಸ್ವದೇಶಾಭಿಮಾನಿ. ೩. ಕಂಠೀರವ. ೪. ರಾಷ್ಟ್ರಬಂಧು. ೫. ಕರ್ನಾಟಕ ವೈಭವ. ೬. ಶರಣ ಸಂದೇಶ. ೭. ಬಸವ[illegible] ೮. ಲೋಕಮತ. ೯. ಅರುಣೋದಯ. ೧೦. ಸಂಯುಕ್ತ ಕರ್ನಾಟಕ. ೧೧. ಕರ್ನಾಟಕ ಬಂಧು. ೧೨. ಪ್ರಜಾಮತ. ೧೩. ಜನ್ಮಭೂಮಿ. ೧೪. ವಿಶ್ವಕರ್ಣಾಟಕ. ೧೫. ಅರ್ಥಸಾಧಕ ಪತ್ರಿಕೆ. ೧೬. ವೃತ್ತಾಂತ ಪತ್ರಿಕೆ. ೧೭. ವಿಶ್ವಬಂಧು. ೧೮. ಉದಯ. ೧೯. ಕರ್ಣಾಟಕ ಟೈಮ್ಸ್. ೨೦. ತಾಯಿನಾಡು. ೨೧. ಪ್ರಭಾತ. ೨೨. ಮೈಸೂರು ಗೆಜೆಟ್. ೨೩. ನವಸಂದೇಶ.

**ದಿನ ಪತ್ರಿಕೆ**:—೧. ನವಜೀವನ.

**ಇತರ ಪ್ರಕಟನೆಗಳು**:—೧. ಇಂಡಿಯ ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೨. ಮೈಸೂರು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೩. ಹೈದರಾಬಾದು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೪. ಜಯಕರ್ನಾಟಕ ಗ್ರಂಥಮಾಲೆ. ೫. ಮನೋಹರ ಗ್ರಂಥಮಾಲೆ. ೬. ವಿದ್ಯಾರಣ್ಯ ಗ್ರಂಥಮಾಲೆ. ೭. ಪ್ರೇಮ ಗ್ರಂಥಮಾಲೆ. ೮. Indiana. ೯. The Kanara Brotherhood Annual.

# ಜೈಮಿನಿ ಭಾರತದಲ್ಲಿ ಚಾರಿತ್ರಿಕ ಕಾಲದ ವಿಷಯಗಳು

**ಶ್ರೀಮಾನ್ ಹುಲ್ಲೂರು ಶ್ರೀನಿವಾಸ ಜೋಯಿಸರು, ಚಿತ್ರದುರ್ಗ**

---

## ೧. ಜೈಮಿನಿ ಭಾರತದ ಮೂಲ

ಸರ್ಪದಷ್ಟನಾಗಿ ಮಡಿದ ಪರೀಕ್ಷಿದ್ರಾಜನ ತನಯನಾದ ಜನಮೇಜಯ ರಾಯನು ಸರ್ಪಕುಲವನ್ನೇ ನಾಶಮಾಡಬೇಕೆಂದು ಸರ್ಪಯಾಗವನ್ನು ಮಾಡಿದನಷ್ಟೆ. ಈ ಯಾಗದಲ್ಲಿ ಅನೇಕ ಸರ್ಪಗಳನ್ನು ಕೊಂದ ದೋಷದಿಂದ ಆತನಿಗೆ ತೊನ್ನು ರೋಗವು ಪ್ರಾಪ್ತವಾಯಿತು. ವೇದವ್ಯಾಸರಿಂದ ರಚಿತವಾದ ಮಹಾಭಾರತವನ್ನು ಶ್ರವಣಮಾಡಿದ್ದರಿಂದ ರೋಗವು ವಾಸಿಯಾಯಿತು. ಆದರೆ ಸ್ವಲ್ಪ ತೊನ್ನು ಮಾತ್ರ ತುಟಿಯಲ್ಲಿ ಉಳಿಯಿತು. ಇದನ್ನು ಪೂರ್ಣವಾಗಿ ಪರಿಹರಿಸಿಕೊಳ್ಳಲು ವೇದವ್ಯಾಸರ ಉಪದೇಶದಂತೆ ಅವರ ಶಿಷ್ಯನಾದ ಜೈಮಿನಿಯಿಂದ ರಚಿತವಾದ ಭಾರತ ಕಥೆಯನ್ನು ಪುನಃ ಕೇಳಿದ್ದರಿಂದ ರೋಗವು ಪೂರ್ಣವಾಗಿ ಗುಣವಾಯಿತು.

ಜೈಮಿನಿಯು ರಚಿಸಿದ ಭಾರತವನ್ನು ತನ್ನ ಗುರುಗಳಿಗೆ ತೋರಿಸಲಾಗಿ ಅವರು ಅದನ್ನು ಓದಿ ನೋಡಿ ಅಶ್ವಮೇಧ ಪರ್ವವು ಮಾತ್ರ ವಿಸ್ತಾರವಾಗಿದ್ದುದರಿಂದ ಅದನ್ನು ಉಳಿಸಿ ಇತರ ಪರ್ವಗಳು ಮಹಾಭಾರತಕ್ಕಿಂತಲೂ ಕಠಿಣವಾಗಿದ್ದುದರಿಂದ ಅವುಗಳನ್ನು ಸಮುದ್ರಕ್ಕೆ ಬಿಸಾಡಿಸಿದರು. ಹೀಗೆ ಜೈಮಿನಿಯ ಅಶ್ವಮೇಧ ಪರ್ವವು ಮಾತ್ರ ಪ್ರಚಾರದಲ್ಲಿ ಬಂದಿತು. ಇದಕ್ಕೆ 'ಜೈಮಿನಿ ಭಾರತ'ವೆಂದೇ ರೂಢಿಯಾಯಿತೆಂಬ ಕಥೆ ಪಾರಂಪರ್ಯದಿಂದ ಜನಜನಿತವಾಗಿರುತ್ತದೆ.

ಈ ಸಂಸ್ಕೃತ ಜೈಮಿನಿ ಭಾರತವನ್ನು ಲಕ್ಷ್ಮೀಶ ಕವಿಯು ಕನ್ನಡದಲ್ಲಿ ವಾರ್ಧಿಕ ಷಟ್ಪದಿಯಲ್ಲಿ ರಚಿಸಿರುವನು. ಇದು ಕಥಾಭಾಗದಲ್ಲಿ ಮೂಲವನ್ನೇ ಅನುಸರಿಸಿರುವುದಾದರೂ ಲಕ್ಷ್ಮೀಶನು ಅಲ್ಲಲ್ಲಿ ವರ್ಣನೆಗಳನ್ನು ತನ್ನ ಇಷ್ಟಾನುಸಾರವಾಗಿ ಮಾಡಿರುವನು. ಕನ್ನಡ 'ಜೈಮಿನಿ ಭಾರತ'ವು ೩೪ ಸಂಧಿಗಳಾಗಿ ವಿಭಾಗವಾಗಿದ್ದು ಅದರಲ್ಲಿ ಈ ಕೆಳಗೆ ಕಂಡ ವಿಷಯಗಳು ವರ್ಣಿತವಾಗಿವೆ:

| ಸಂಧಿ | ವರ್ಣಿತವಾಗಿರುವ ವಿಷಯಗಳು |
|---|---|
| ೧ | ಪೀಠಿಕೆ. |
| ೨ | ವೇದವ್ಯಾಸರ ಬೋಧನೆ. |
| ೩–೬ | ಯುವನಾಶ್ವನಿಂದ ಕುದುರೆಯನ್ನು ತರುವುದು |
| ೭ | ಮತ್ತು ಯಾಗೋಪಕ್ರಮಗಳು. |
| ೮–೯ | ಅನುಸಾಲ್ವನನ್ನು ಜಯಿಸುವುದು. |
| ೧೦–೧೪ | ನೀಲಧ್ವಜನನ್ನು ಜಯಿಸುವುದು. |
| | ಹಂಸಧ್ವಜನನ್ನು ಜಯಿಸುವುದು. |

| ಸಂಧಿ | ವರ್ಣಿತವಾಗಿರುವ ವಿಷಯಗಳು |
|---|---|
| ೧೫ | ಯಜ್ಞಾಶ್ವವು ಹೆಣ್ಣುಕುದುರೆಯಾಗಿ, ಹುಲಿಯಾಗಿ, ಅನಂತರ ನಿಜಸ್ವರೂಪವನ್ನು ಹೊಂದುವುದು. |
| ೧೬ | ಪ್ರಮೀಳೆಯ ವಿವಾಹ ಮತ್ತು ಭೀಷನೆಂಬ ದೈತ್ಯನ ಸಂಹಾರ. |
| ೧೭–೨೨–೨೩–೨೪ | ಬಬ್ರುವಾಹನನ ಕಾಳಗ. |
| ೧೮–೨೧ | ರಾಮಾಶ್ವಮೇಧ. |
| ೨೫–೨೬ | ಮಯೂರಧ್ವಜನ ಸಖ್ಯ. |
| ೨೭ | ವೀರವರ್ಮನನ್ನು ಜಯಿಸುವುದು. |
| ೨೮–೩೧ | ಚಂದ್ರಹಾಸನ ಸಖ್ಯ. |
| ೩೨ | ಚಂದ್ರಹಾಸನೊಡನೆ ಹೊರಟು ಬಕದಾಲ್ಭ್ಯ ಮುನಿಯನ್ನು ಕಂಡು ಸಿಂಧೂದೇಶದಮೇಲೆ ಹಾದು ಹಸ್ತಿನಾಪುರಕ್ಕೆ ಬರುವುದು. |
| ೩೩–೩೪ | ಯಜ್ಞಸಮಾಪ್ತಿ. |

ವ್ಯಾಸಕೃತ ಮಹಾಭಾರತವನ್ನು ಅನೇಕರು ಕನ್ನಡಕ್ಕೆ ಪರಿವರ್ತಿಸಿರುತ್ತಾರೆ. ಈ ಪೈಕಿ ಶ್ರೀ ಕೃಷ್ಣರಾಜ ವಾಣೀವಿಲಾಸವೆಂಬ ಮಹಾಭಾರತದ ಕನ್ನಡದ ಟೀಕೆ ಮೈಸೂರು ದೇಶದಲ್ಲಿ ಪ್ರಕಟವಾಗಿರುತ್ತದೆ. ಇದರಲ್ಲಿ ಸೂಚಿತವಾಗಿರುವ ಮಹಾಭಾರತದ ಅಶ್ವಮೇಧ ಯಾಗ ಕಾಲದಲ್ಲಿ ಸಂಚರಿಸಲು ಬಿಟ್ಟ ಯಜ್ಞಾಶ್ವವು ಸಂಚರಿಸಿದ ಮತ್ತು ಕುದುರೆಯನ್ನು ಹಿಂಬಾಲಿಸಿದ ಅರ್ಜುನನು ಜಯಿಸಿದ ರಾಜ್ಯಗಳ ಹೆಸರುಗಳನ್ನೂ ಆಯಾ ದೇಶಾಧಿಪತಿಗಳ ಹೆಸರುಗಳನ್ನೂ ಈ ಕೆಳಗಿನ ಪಟ್ಟಿಯಲ್ಲಿ ಕಾಣಿಸಿದೆ:

| ಅಧ್ಯಾಯ | ದೇಶ | ರಾಜರ ಹೆಸರು |
|---|---|---|
| ೬೦ | ತ್ರಿಗರ್ತದೇಶ | ಸೂರ್ಯವರ್ಮ, ಕೇತುವರ್ಮ, ಧೃತವರ್ಮ. |
| ೬೧–೬೨ | ಪ್ರಾಗ್ಜ್ಯೋತಿಷ ಪಟ್ಟಣ | ಭಗದತ್ತ, ವಜ್ರದತ್ತ. |
| ೬೩–೬೪ | ಸಿಂಧುದೇಶ | ಸೈಂಧವ ಮತ್ತು ದುಶ್ಶಳೆ, ಇವರ ಮಗ ಮತ್ತು ಮೊಮ್ಮಗ. |
| ೬೫–೬೬ | ಪಾಂಡ್ಯದೇಶ | ಮಣಿಪುರಾಧೀಶ್ವರನಾದ ಬಬ್ರುವಾಹನ |
| ೭೦ | ಮಗಧ | ಗಿರಿವ್ರಜದಲ್ಲಿದ್ದ ಜರಾಸಂಧನ ಮೊಮ್ಮಗ ಮೇಘನಂದಿ. |
| | ಪುಂಡ್ರವಂಗ ಕೇರಳಾದಿ ದೇಶ | ಮ್ಲೇಚ್ಛ ಸೈನ್ಯ, ಶಕ್ತಿಪುರದ ಶಿಶುಪಾಲನ ಮಗ ಶರಭ. |
| | ಕಾಶಿ, ಮಾದ್ರ, ಕೋಸಲ, ಕಿರಾತ | .. |
| | ವರ್ದಾನವ | ಚಿತ್ರಾಂಗದ. |
| | ನಿಷಧ | ಏಕಲವ್ಯನ ಪುತ್ರ. |
| | ದ್ವಾರಕಾಪಟ್ಟಣ | ಯಾದವರು, ಉಗ್ರಸೇನ, ವಸುದೇವ. |
| | ಪ್ರಾಚೀನದೇಶ, ಪಶ್ಚಿಮ ಸಮುದ್ರದ ತೀರ | .. |
| ೭೧–೭೨ | ಗಾಂಧಾರ | ಶಕುನಿಪುತ್ರ. |

ಈ ರೀತಿಯಲ್ಲಿ ಎರಡು ಅಶ್ವಮೇಧ ಯಾಗಗಳ ಕಥಾ ವಿಷಯಗಳನ್ನೂ ಹೋಲಿಸಿ ನೋಡಿದರೆ ಮಹಾಭಾರತದ ಅಶ್ವಮೇಧ ಪರ್ವದಲ್ಲಿ ಹೇಳಿರುವ ಅನೇಕ ಯುದ್ಧಗಳು ಜೈಮಿನಿಯಲ್ಲಿ ಹೇಳಿರುವುದಿಲ್ಲ. ಜೈಮಿನಿಯಲ್ಲಿ ವರ್ಣಿತವಾಗಿರುವ ಅನೇಕ ವಿಷಯಗಳು ಮಹಾಭಾರತದಲ್ಲಿ ಹೇಳಿರುವುದಿಲ್ಲ. ಬಭ್ರುವಾಹನನ ಕಾಳಗ ಮತ್ತು ಸಿಂಧೂದೇಶದ ವಿಜಯದ ವಿಷಯಗಳು ಮಾತ್ರ ಎರಡು ಅಶ್ವಮೇಧಗಳಲ್ಲಿಯೂ ವರ್ಣಿತವಾಗಿವೆ. ಅವುಗಳಲ್ಲಿಯೂ ಹಲವು ವ್ಯತ್ಯಾಸಗಳಿವೆ.

ಮಹಾಭಾರತವು ರಚಿತವಾದ ಎಷ್ಟೋ ಕಾಲದ ಅನಂತರ ಜೈಮಿನಿ ಭಾರತವು ರಚಿಸಲ್ಪಟ್ಟಿರುವುದು. ಮಹಾಭಾರತದಲ್ಲಿ ಉಕ್ತವಾಗದೆ ಇರುವ ಮಹಾಯೋಧರ ಆಖ್ಯಾನಗಳನ್ನು ಜೈಮಿನಿಯಲ್ಲಿ ಹೇಳಲು ಕಾರಣವೇನಿರಬಹುದು? ಈ ಯೋಧರು ಯಾರಿರಬಹುದು? ಜೈಮಿನಿಯಲ್ಲಿ ಉಕ್ತವಾಗಿರುವ ಅಶ್ವಮೇಧ ಯಾಗದ ವರ್ಣನೆಯು ಧರ್ಮರಾಯನು ಮಾಡಿದ ಅಶ್ವಮೇಧ ಯಾಗದ ವರ್ಣನೆಯಾಗಿರಬಹುದೇ? ಹಾಗಲ್ಲದಿದ್ದರೆ ಜೈಮಿನಿಯಲ್ಲಿ ವರ್ಣಿತವಾಗಿರುವ ಅಶ್ವಮೇಧ ಯಾಗವನ್ನು ಮಾಡಿದವರಾರು? ಎಂಬ ಅನೇಕ ಸಂದೇಹಗಳು ತಲೆದೋರುವುವು. ಈ ಪ್ರಶ್ನೆಗಳಿಗೆ ಸಾಧ್ಯವಾದಷ್ಟು ಮಟ್ಟಿಗೂ ಸಮಂಜಸವಾಗಿ ಉತ್ತರವನ್ನಿತ್ತು ಜೈಮಿನಿಯಲ್ಲಿ ಚಾರಿತ್ರಕ ಕಾಲದ ವಿಷಯಗಳು ಕಂಡುಬರುತ್ತವೆ ಎಂಬುದನ್ನು ತೋರಿಸುವುದೇ ಈ ಲೇಖನದ ಮುಖ್ಯೋದ್ದೇಶ.

## ೨. ಸಮುದ್ರಗುಪ್ತನ ಅಶ್ವಮೇಧ ಯಾಗ

ಧರ್ಮರಾಯನು ಮಾಡಿದ ಅಶ್ವಮೇಧ ಯಾಗದ ಅಧ್ವರಶಾಲೆಯು ಜಾಹ್ನವಿಯ ದಡದಲ್ಲಿ ಏರ್ಪಟ್ಟಿತ್ತು. ಇತಿಹಾಸ ಕಾಲದಲ್ಲಿ ಈ ಜಾಹ್ನವಿಯ ದಡದಲ್ಲಿರುವ ಪಾಟಲೀಪುತ್ರದ ಚಕ್ರವರ್ತಿಗಳು ಅಶ್ವಮೇಧ ಯಾಗವನ್ನು ಮಾಡಿ ಕೀರ್ತಿಹೊಂದಿರುವರು. ಅಂತಹ ಪಾಟಲೀಪುತ್ರದ ಸಮ್ರಾಟರಲ್ಲಿ ಪುಷ್ಯಮಿತ್ರ ಮತ್ತು ಈತನ ವಂಶೀಯರು, ಸಮುದ್ರಗುಪ್ತ ಮತ್ತು ಈತನ ವಂಶೀಯರು ಗಣ್ಯರಾಗಿರುವರು. ಆರ್ಯಾವರ್ತದಲ್ಲಿ ಅನೇಕ ಚಕ್ರವರ್ತಿಗಳು ಅಶ್ವಮೇಧ ಯಾಗವನ್ನು ಮಾಡಿ ಕೀರ್ತಿಯುತರಾಗಿರುವರು. ಆದರೂ ಯಾಗಪಶುವಿನೊಡನೆ ದಕ್ಷಿಣದೇಶಕ್ಕೆ ವಿಜಯಯಾತ್ರೆ ಬಂದವರು ಅತಿವಿರಳ. ಕಲಿಯುಗದಲ್ಲಿ ಆರ್ಯಾವರ್ತದಲ್ಲಿ ಅಶ್ವಮೇಧ ಯಾಗವನ್ನು ಮಾಡಿದವರಲ್ಲಿ ಸಮುದ್ರಗುಪ್ತನು ಮಾತ್ರ ದಕ್ಷಿಣದೇಶಕ್ಕೆ ಯಾಗಪಶುವಿನೊಡನೆ ವಿಜಯಯಾತ್ರೆ ಬಂದಿರುವನು. ಈತನ ಸಂಕ್ಷೇಪ ಚರಿತ್ರೆಯನ್ನೂ ವಿಜಯಯಾತ್ರೆಯ ವಿವರವನ್ನೂ ಪರಿಶೀಲಿಸುವುದು ಅವಶ್ಯಕ.

ಗುಪ್ತವಂಶದರಸುಗಳ ಮೂಲಪುರುಷನಾದ ಶ್ರೀಗುಪ್ತನು ಮಗಧದೇಶದ ಸಾಮಂತನಾಗಿ ಪ್ರಯಾಗದ ಬಳಿ ರಾಜ್ಯವಾಳುತ್ತಿದ್ದನು. ಇವನ ಅನಂತರ ಇವನ ಮಗನಾದ ಘಟೋತ್ಕಚನೂ, ಅನಂತರ ಇವನ ಮಗನಾದ ಚಂದ್ರಗುಪ್ತನೂ ರಾಜ್ಯವಾಳಿದರು. ಈ ಹಿರಿಯ ಚಂದ್ರಗುಪ್ತನ ಕಾಲದಲ್ಲಿ ಮಗಧದೇಶಕ್ಕೆ

ಅಧಿಪತಿಯಾಗಿ ಸುಂದರವರ್ಮನೆಂಬ ರಾಜನು ಪಾಟಲೀಪುತ್ರದಲ್ಲಿ ರಾಜ್ಯ ಮಾಡುತ್ತಿದ್ದನು. ಈತನಿಗೆ ಮಕ್ಕಳಿರಲಿಲ್ಲವಾದಕಾರಣ ಚಂದ್ರಗುಪ್ತನನ್ನು ಸ್ವೀಕೃ ಪುತ್ರನನ್ನಾಗಿಮಾಡಿಕೊಂಡನು. ಆದರೆ ಕೆಲವು ಕಾಲಾನಂತರ ಸುಂದರವರ್ಮ ಒಬ್ಬ ಪುತ್ರನು ಜನಿಸಿದನು. ಇವನ ಹೆಸರು ಕಲ್ಯಾಣವರ್ಮ. ಇದು ಚಂದ್ರಗುಪ್ತನಿಗೆ ಆಶಾಭಂಗವಾಯಿತು. ಆದರೂ, ಹೇಗಾದರೂ ಮಾಡಿ ಮ ದೇಶಾಧಿಪತ್ಯವನ್ನು ಹೊಂದಬೇಕೆಂದು ಹವಣಿಸುತ್ತಿದ್ದನು. ಕಾಲವ ಇವನಿಗೆ ಸಹಾಯವನ್ನು ಒದಗಿಸಿತು. ಸುಂದರವರ್ಮನಿಗಿಂತ ಪೂರ್ವ ಪಾಟಲೀಪುತ್ರದಲ್ಲಿ ಆಳುತ್ತಿದ್ದ ಲಿಚ್ಛವಿ ವಂಶದರಸರು ರಾಜ್ಯವನ್ನು ಕ ಕೊಂಡು ಅಯೋಧ್ಯೆಯ ಬಳಿ ಸಾಮಂತರಾಗಿ ಆಳುತ್ತಿದ್ದರು. ಚಂದ್ರಗುಪ್ತ ಶ್ರೇಷ್ಠಕುಲಕ್ಕೆ ಸೇರಿದ ಲಿಚ್ಛವಿ ರಾಜಕುಮಾರಿಯಾದ ಕುಮಾರದೇವಿ ಕನ್ಯಾಮಣಿಯನ್ನು ವಿವಾಹವಾದನು. ಈ ಸಂಬಂಧದಿಂದ ಚಂದ್ರಗುಪ್ತನಿಗೆ ವಾದ ಐಶ್ವರ್ಯವು ದೊರೆಯಿತು. ಈ ಸಹಾಯದಿಂದ ಬಲವಾದ ಸೈನ್ಯವನ್ನು ಸೈನ್ಯಸಮೇತನಾಗಿ ಪಾಟಲೀಪುತ್ರಕ್ಕೆ ಮುತ್ತಿಗೆಹಾಕಿ ಅದನ್ನು ವಶಪಡಿಸಿಕೊಂ ಸುಂದರವರ್ಮನು ಯುದ್ಧದಲ್ಲಿ ಮಡಿದನು. ಬಾಲಕನಾದ ಕಲ್ಯಾಣವರ್ಮ ಆಪ್ತರಿಂದ ರಕ್ಷಿಸಲ್ಪಟ್ಟವನಾಗಿ ಕಿಷ್ಕಿಂಧೆಗೆ ಬಂದು ಪಂಪಾಸರಸ್ಸಿನ ಬಳಿ ಮಾಡತೊಡಗಿದನು. ರಾಜಕುಮಾರನ ಹಿತಚಿಂತಕರು ಸಮಯ ಕಾಯುತ್ತಿ ಚಂದ್ರಗುಪ್ತನು ಬೇರೆ ಕಡೆ ಯುದ್ಧಮಾಡುತ್ತಿದ್ದಾಗ ಕಲ್ಯಾಣವರ್ಮ ಕರೆದುಕೊಂಡುಬಂದು, ಪಟ್ಟಕಟ್ಟಿ, ಚಂದ್ರಗುಪ್ತನನ್ನು ಹೀಯಾಳಿಸಿ ಭ್ರಷ್ಟನನ್ನಾಗಿ ಮಾಡಿದರು. ಅವಮಾನವನ್ನು ಹೊಂದಿದ ಚಂದ್ರಗುಪ್ತನು ಪಾಟಲೀಪುತ್ರವನ್ನು ವಶಪಡಿಸಿಕೊಳ್ಳುವ ಪ್ರಯತ್ನದಲ್ಲಿ ಸಫಲನಾಗದೆ ನಾದನು. ಈತನಿಗೆ ಕಚ ಮತ್ತು ಸಮುದ್ರಗುಪ್ತ ಎಂಬ ಇಬ್ಬರು ದ್ದರು. ಮರಣ ಕಾಲದಲ್ಲಿ ತನ್ನ ಕಿರಿಯ ಪುತ್ರನಾದ ಸಮುದ್ರಗುಪ್ತನ ಸಂಬೋಧಿಸಿ, "ಮಗಧದೇಶವನ್ನು ಪುನಃ ಗಳಿಸಲು ನೀನೇ ಯೋಗ್ಯ; ದಿಂದ ಆ ರಾಜ್ಯವನ್ನು ಸಾಧಿಸುವವನಾಗು" ಎಂದು ಹೇಳಿದನು.

ಗುಪ್ತವಂಶದ ರಾಜರು ಕ್ಷತ್ರಿಯರಲ್ಲಿ ಹೀನಕುಲಕ್ಕೆ ಸೇರಿದವರೆಂದು ಬರುತ್ತದೆ. 'ಕೌಮುದಿ ಮಹೋತ್ಸವ' ಎಂಬ ನಾಟಕದಲ್ಲಿ ಇವರು ರೆಂದು ತಿರಸ್ಕೃತರಾಗಿದ್ದಾರೆ. ಈ ಕಳಂಕವನ್ನು ಹೋಗಲಾಡಿಸಲು ಗುಪ್ತನು ಬಹಳ ಪ್ರಯತ್ನಮಾಡಿದನು. ಶ್ರೇಷ್ಠವಾದ ಲಿಚ್ಛವಿ ವಂಶ ವಾದನು. ಸಮುದ್ರಗುಪ್ತನಿಗೆ ತನ್ನ ತಾಯಿಯ ಕಡೆಯ ಆಸ್ತಿಯಾದ ಪ್ರಾಂತವೂ, ಅಯೋಧ್ಯಾನಗರಿಯೂ ದೊರೆತವು. ಇವಕ್ಕೂ ಹೆಚ್ಚಿನದಾಗಿ ಅವನಿಗೆ ವಿದ್ವಾಂಸರ ಸಂಗವು ದೊರೆಯಿತು. ತಾನೂ ಸಹ ವಿದ್ವಾಂಸನಾಗಿ ಕಲಾಭಿಮಾನಿಯಾಗಿಯೂ ಇದ್ದನು. ಈತನು ಪರಮ ವಿಷ್ಣುಭಕ್ತನು ಕವಿಗಳಿಗೂ ವಿದ್ವಾಂಸರಿಗೂ ಆಶ್ರಯವಿತ್ತನು. ಗೋ ಬ್ರಾಹ್ಮಣರನ್ನು

ವೇದಮತವನ್ನುದ್ಧರಿಸಲು ಕಂಕಣ ಕಟ್ಟಿದನು. ಈ ಕಾರಣಗಳಿಂದ ಹೀನ ಜಾತೀಯನೆಂಬ ಅಪಮಾನವು ತಪ್ಪಿಹೋಗಿ, ವಿಸ್ತಾರವಾದ ರಾಜ್ಯವನ್ನು ಕಟ್ಟಲು ಸಹಾಯವಾಯಿತು.

**ವಿಜಯಯಾತ್ರೆ.**—ಈ ರೀತಿಯಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡು ಪಾಟಲೀಪುತ್ರವನ್ನು ವಶಮಾಡಿಕೊಂಡನು. ಕೋತಕುಲದರಸರಿಗೆ ಆಶ್ರಯ ದಾತನಾಗಿದ್ದ ವಿಂಧ್ಯಕವಂಶದ ಪ್ರವರಸೇನನ ಕಡೆಯವರು ಅಹಿಚ್ಛತ್ರ, ಮಥುರಾ ಮತ್ತು ಪದ್ಮಾವತೀ ರಾಜರು ಸಮುದ್ರಗುಪ್ತನನ್ನು ಎದುರಿಸಿದರು. ಆದರೆ ಕೌಶಾಂಬಿ ಕದನದಲ್ಲಿ ಪರಾಜಿತರಾದರು. ದಕ್ಷಿಣ ಭರತಖಂಡದಲ್ಲಿ ವಿಂಧ್ಯಕ ಅಥವಾ ವಾಕಾಟಕ ವಂಶದರಸರ ಕಿರಿಯ ಮನೆತನದವರಾದ ಪಲ್ಲವರು ಪ್ರಬಲ ರಾಗಿದ್ದರು. ಇವರು ತಮ್ಮ ಸಾಮಂತರ ಮತ್ತು ಮಿತ್ರಮಂಡಲಿಯವರ ಸಹಾಯದಿಂದ ಪ್ರವರಸೇನನ ಕಡೆಯವರಿಗೆ ಸಹಾಯಮಾಡಬೇಕೆಂಬ ಪ್ರಯತ್ನ ದಲ್ಲಿದ್ದರು. ಮುಂದಾಲೋಚನೆಯುಳ್ಳ ಸಮುದ್ರಗುಪ್ತನು ಬಹಳ ವೇಗದಿಂದ ದಕ್ಷಿಣದೇಶಕ್ಕೆ ದಂಡಯಾತ್ರೆ ಹೊರಟನು. ಮಾರ್ಗದಲ್ಲಿ ಅಟವೀ ರಾಜ್ಯಾಧಿಪತಿ ಗಳಾದ ವ್ಯಾಘ್ರರಾಜರೆಂಬವರು ಬಹಳ ತೊಂದರೆಕೊಟ್ಟರು. ಆದರೂ ಅವರನ್ನು ಸೋಲಿಸಿ ಪಲ್ಲವರನ್ನು **ಕೊಲ್ಲೇರು** ಎಂಬ ಸ್ಥಳದಲ್ಲಿ ಸೋಲಿಸಿದನು. ಅವರೆಲ್ಲರೂ ಸಮುದ್ರಗುಪ್ತನ ಒಡೆತನವನ್ನು ಅಂಗೀಕರಿಸಿದರು. ಕ್ಷತ್ರಿಯ ಕ್ಷಮಾಗುಣ ಶೀಲನಾದ ಸಮುದ್ರಗುಪ್ತನು ತೃಪ್ತನಾಗಿ, ಜಯಶೀಲನಾಗಿ, ಉತ್ತರದೇಶಕ್ಕೆ ಹಿಂದಿರುಗಿದನು. ಪುನಃ **ವಾಕಾಟಕರು** ಯುದ್ಧಮಾಡಿದರು. ಆದರೆ **ಕುರಾಳ** ಎಂಬ ಕದನದಲ್ಲಿ ಶತ್ರುಗಳ ರಾಜಕುಮಾರರು ಮಡಿದರು. ಸೋತುಹೋದ ವಾಕಾಟಕ ರುದ್ರಸೇನನು ಸಮುದ್ರಗುಪ್ತನ ಆಧಿಪತ್ಯವನ್ನು ಅಂಗೀಕರಿಸಿದನು. ಈ ರೀತಿಯಲ್ಲಿ ವಿಜಯಶೀಲನಾದ ಸಮುದ್ರಗುಪ್ತನಿಗೆ ಮಗಧದೇಶದ ಪೂರ್ವ ದಿಕ್ಕಿನ ನೆರೆಹೊರೆಯ ರಾಜರಾದ **ಸಮತಟ** ಮೊದಲಾದವರೂ, ಪಶ್ಚಿಮ ದಿಕ್ಕಿನಲ್ಲಿ ರಾಜರುಗಳೂ, ಗಣಪ್ರಮುಖರೂ, ಸಮುದ್ರಗುಪ್ತನ ಸಮ್ರಾಜತ್ವವನ್ನು ಒಪ್ಪಿಕೊಂಡು ಕಾಣಿಕೆಗಳನ್ನು ಕಳುಹಿಸಿದರು. ಸಿಂಹಳದೇಶದ ಅಧಿಪತಿಯೂ ಚೀಣಾ ಚಕ್ರವರ್ತಿಯೂ ರಾಯಭಾರವನ್ನು ಕಳುಹಿಸಿದರು.

ಈ ರೀತಿಯಲ್ಲಿ ದಿಗ್ವಿಜಯವನ್ನು ಹೊಂದಿ ಸಮ್ರಾಜನೆನಿಸಿಕೊಂಡು, ವೇದ ಮತದ ಉಚ್ಛ್ರಾಯಸ್ಥಿತಿಯನ್ನು ಸೂಚಿಸುವ ಅಶ್ವಮೇಧ ಯಾಗವನ್ನು ಅತಿಸಂಭ್ರಮದಿಂದ ನೆರವೇರಿಸಿದನು. ಆಸ್ಥಾನ ಕವಿಯಾದ ಹರಿಷಸೇನನಿಂದ ರಚಿತವಾದ 'ಸಮುದ್ರಗುಪ್ತನ ಪ್ರಶಸ್ತಿ'ಯು ಅಲಹಾಬಾದಿನಲ್ಲಿರುವ ಅಶೋಕನ ಒಂದು ಸ್ತಂಭಲೇಖನದ ಒಂದು ಪಾರ್ಶ್ವದಲ್ಲಿ ಕೆತ್ತಲ್ಪಟ್ಟಿರುವುದು. ಸಮುದ್ರ ಗುಪ್ತನ ಕಾಲದಲ್ಲಿಯೇ ಬರೆಯಲ್ಪಟ್ಟ ಈ ಪ್ರಶಸ್ತಿಯಿಂದ ಆಗಿನ ಕಾಲದ ಸಂಗತಿ ಗಳನ್ನು ಸಂಗ್ರಹಿಸಲು ಸಾಧ್ಯವಾಗಿರುವುದು. ಈ ಪ್ರಶಸ್ತಿಯಿಂದ ಸಮುದ್ರ ಗುಪ್ತನ ವಿಜಯಯಾತ್ರೆಯನ್ನು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು:

I. ಆರ್ಯಾವರ್ತದಲ್ಲಿ ೯ ರಾಜರುಗಳ ಮೇಲೂ, ಅನಾಮಧೇಯರಾದ ಇತರ ರಾಜರುಗಳ ಮೇಲೂ ಜರುಗಿಸಿದ ದಂಡಯಾತ್ರೆ—ಈ ಶತ್ರುರಾಜ್ಯ ಅಹಿಚ್ಛತ್ರ, ಮಧುರಾ, ಪದ್ಮಾವತಿ, ವಿಂಧ್ಯಕ ಅಥವಾ ವಾಕಾಟಕ ಮೊದಲಾದವು ಮುಖ್ಯರಾಗಿರುತ್ತಾರೆ.

II. ದಕ್ಷಿಣದೇಶದಲ್ಲಿ: (೧) ಕೌಸಲಕ ಮಹೇಂದ್ರ; (೨) ಮಹಾಕಾಂತಾರ ವ್ಯಾಘ್ರರಾಜ; (೩) ಕೌರಾಳಕ ಮಂಟರಾಜ; (೪) ಪುಷ್ಪಪುರಕ, ಮಹೇಂದ್ರ ಗಿರಿಕ, ಕಾಟ್ಟೂರಕ, ಸ್ವಾಮಿದತ್ತ; (೫) ಏರಂಡಪಲ್ಲಕದಮನ; (೬) ಕಾಂಚೇಯಕ ವಿಷ್ಣುಗೋಪ; (೭) ಅವಮುಕ್ತಕ ನೀಲರಾಜ; (೮) ವೈಂಗೇಯಕ ಹಸ್ತಿವರ್ಮ (೯) ಪಾಲಕ್ಕಕ ಉಗ್ರಸೇನ; (೧೦) ದೈವರಾಷ್ಟ್ರಕ ಕುಬೇರ; (೧೧) ಕೌಸ್ಥಲಪುರ ಧನಂಜಯ—ಎಂಬೀ ೧೧ ರಾಜರುಗಳ ಮೇಲೆ ನಡಸಿದ ದಂಡಯಾತ್ರೆ.

III. ವನಾಧಿಪತಿಗಳೊಡನೆ ನಡಸಿದ ಕದನಗಳಲ್ಲಿ ಮೇಲ್ಕಂಡ II (೨)ನೇ ಮಹಾಕಾಂತಾರಕ ವ್ಯಾಘ್ರರಾಜನು ಮುಖ್ಯವಾದವನು.

IV. (೧) ಸಮತಟ (ಸುಂದರವನ); (೨) ದವಕ, ಕಾಮರೂಪ, ನೇಪಾಳ ಕರ್ತೃಪುರ, ಇವು ನೆರೆಹೊರೆಯ ರಾಜ್ಯಗಳು; (೩) ವಾಯವ್ಯದಲ್ಲಿ ಚಂದ್ರಭಾಗಾ ನದಿಯ ಪಶ್ಚಿಮಕ್ಕೆ ದೈವಪುತ್ರ, ತುಖಾರಕುಲದರಸು ಮೊದಲಾದವರು, ಕಚ್ಛ ಸಿಂಧುದೇಶ; (೪) ಶತದ್ರುದಡದಲ್ಲಿ ಗಣಪ್ರಮುಖರು, ಆರ್ಜುನಾಯನರು ಯೌಧೇಯರು, ಮಾಧಕರು, ಅಭೀರರು, ಸೌರಾಷ್ಟ್ರದರಸರು, ಪ್ರಾರ್ಜುನರು ಸಹಸಾನೀಕರು ಮೊದಲಾದ ನೆರೆಹೊರೆಯ ರಾಜರುಗಳು ಮತ್ತು ಪ್ರಜಾಧಿಪತಿ ಗಳೊಡನೆ ನಡಸಿದ ರಾಯಭಾರ.

ಈ ರಾಜರುಗಳಲ್ಲಿ ಜೈಮಿನಿ ಭಾರತದಲ್ಲಿ ಉಕ್ತವಾಗಿರುವ ರಾಜರುಗಳು ಮುಂದೆ ಕಂಡುಬರುವರು. ಅವರಲ್ಲಿ ಮುಖ್ಯರಾದ ಕೆಲವರ ವಿಷಯವನ್ನು ಪರಿಚ್ಛೇದಗಳಲ್ಲಿ ವಿವರಿಸಿದೆ.

## ೩. ನೀಲಧ್ವಜ

ಯಾಗ ಪ್ರಾರಂಭ ಕಾಲದಲ್ಲಿ ಧರ್ಮರಾಯನಿಂದ ಪೂಜಿಸಲ್ಪಟ್ಟ ಹಸ್ತಿನಾ ವತಿಯಿಂದ ಹೊರಟ ಕುದುರೆ ಮೊದಲು ನೀಲಧ್ವಜನ ರಾಜಧಾನಿಯಾದ ನರ್ಮದಾ ನದಿಯ ತೀರದಲ್ಲಿರುವ ಮಾಹಿಷ್ಮತೀ ನಗರದ ಬಳಿಗೆ ಬಂದಿತು ನೀಲಧ್ವಜನ ಮಗನಾದ ಪ್ರವೀರನೆಂಬ ರಾಜಕುಮಾರನು ತನ್ನ ಹೆಂಡತಿಯಾದ ಮದನಮಂಜರಿಯೊಡನೆ ಉದ್ಯಾನವನದಲ್ಲಿದ್ದಾಗ ಅಲ್ಲಿಗೆ ಬಂದ ಕುದುರೆಯನ್ನು ಕಂಡು ಕಟ್ಟಿಹಾಕಿದನು. ಅಗ್ನಿಯು ಈ ನೀಲಧ್ವಜನ ಮಗಳನ್ನು ಮದುವೆಯಾಗಿ ಮನೆಯ ಅಳಿಯನಾಗಿದ್ದನು. ಉಭಯ ಸೇನೆಗಳಿಗೂ ನಡೆದ ಯುದ್ಧದಲ್ಲಿ ನೀಲಧ್ವಜನ ಸೇನೆ ಕಂಗೆಡಲು, ನೀಲಧ್ವಜನು ನರನ ದೆಸೆಯ ಭಯವನ್ನು ಬಿಡಿಸಬೇಕೆಂದು ತನ್ನ ಅಳಿಯನಾದ ಅಗ್ನಿಗೆ ಹೇಳಿದನು. ಅಗ್ನಿಯು ಉಗ್ರಜ್ವಾಲೆ ದಿಂದ ಕಾದಲು, ಆ ಉರಿಯ ಬೇಗೆಗೆ ತಾಳಲಾರದೆ ಅರ್ಜುನನು ಪಾವಕನನ್ನು

ಪ್ರಾರ್ಥಿಸಿದನು. ಅರ್ಜುನನಿಂದ ನುತಿಸಲ್ಪಟ್ಟ ಅಗ್ನಿಯು ತನ್ನ ಮಾವನಾದ ನೀಲಧ್ವಜನನ್ನು ಸಮಾಧಾನಮಾಡಿ ಕುದುರೆಯನ್ನು ಅರ್ಜುನನಿಗೆ ಬಿಟ್ಟುಕೊಡುವಂತೆ ಒಪ್ಪಿಸಿದನು. ನೀಲಧ್ವಜನ ರಾಣಿಯಾದ 'ಜ್ವಾಲೆ'ಯು ಈ ಸಂಧಿಗೆ ಒಪ್ಪದೆ ಪುನಃ ಅರ್ಜುನನ ಸಂಗಡ ಯುದ್ಧಮಾಡಲು ತನ್ನ ಪತಿಯನ್ನು ಪ್ರೇರೇಪಿಸಿದಳು. ಅನಂತರ ನಡೆದ ಕದನದಲ್ಲಿ ನೀಲಧ್ವಜನ ಸುತ ಸಹೋದರರೂ, ಮಂತ್ರಿಬಾಂಧವರೂ ಮಡಿದರು. ಅನಂತರ ನೀಲಧ್ವಜನು ತನ್ನ ಹೆಂಡತಿಯನ್ನು ದೂಷಿಸಿ ಮನೆಯಿಂದ ಅಟ್ಟಿ ಅರ್ಜುನನಿಗೆ ಕುದುರೆಯನ್ನೂ ನವರತ್ನಗಳನ್ನೂ ಅರ್ಪಿಸಿ, ತಾನೂ ಕುದುರೆಯನ್ನು ಹಿಂಬಾಲಿಸಿದನು.

ಈ ಯುದ್ಧದಲ್ಲಿ ಉಕ್ತನಾಗಿರುವ ನೀಲಧ್ವಜ, ಇವನ ಮಗ ಪ್ರವೀರ ಮತ್ತು ಅಳಿಯನಾದ ಅಗ್ನಿ—ಇವರುಗಳ ವಿಷಯದಲ್ಲಿಯೂ ಮತ್ತು ನೀಲಧ್ವಜನ ರಾಜಧಾನಿಯಾದ, ನರ್ಮದಾ ತೀರದಲ್ಲಿದ್ದ ಮಾಹಿಷ್ಮತೀ ನಗರದ ವಿಷಯದಲ್ಲಿಯೂ ಇತಿಹಾಸ ಮತ್ತು ಇತರ ಗ್ರಂಥಗಳಲ್ಲಿ ಏನಾದರೂ ಸೂಚನೆಗಳು ದೊರಕಬಹುದೇ ಎಂಬುದನ್ನು ತೋರಿಸಲು ಇಲ್ಲಿ ಪ್ರಯತ್ನಮಾಡಿರುತ್ತದೆ.

ಕಾಳಿದಾಸನ 'ರಘುವಂಶ'ದಲ್ಲಿ ಪ್ರತೀಪನ ವಿಷಯವನ್ನು ಹೇಳಿದೆ. ರಾಜರುಗಳ ವಂಶ ಚರಿತ್ರೆಯನ್ನೂ, ಅವರ ವಿದ್ಯಾವಿನಯಾದಿ ಗುಣಗಳನ್ನೂ, ಅವರ ಸಾಹಸಕಾರ್ಯಗಳನ್ನೂ ತಿಳಿದವಳಾದ ಸುನಂದೆಯು ಪ್ರತೀಪನನ್ನು ರೇವಾ[1] ನದಿಯ ದಡದಲ್ಲಿರುವ ಮಾಹಿಷ್ಮತಿಯ ಅರಸನೆಂದೂ, ಯುದ್ಧಗಳಲ್ಲಿ ತನ್ನ ಸಹಾಯಕನಾಗಿರುವಂತೆ ಅಗ್ನಿದೇವನನ್ನು ಒಲಿಸಿಕೊಂಡಿದ್ದನೆಂದೂ ಹೇಳಿರುವಳು.

ಈ ಪ್ರತೀಪನು ಕಾರ್ತವೀರ್ಯಾರ್ಜುನನ ವಂಶಸ್ಥನೆಂದೂ ಉಕ್ತವಾಗಿರುವುದು. ಕಾರ್ತವೀರ್ಯಾರ್ಜುನನನ್ನು ಸಂಹರಿಸಿದ ಪರಶುರಾಮನನ್ನು ಶ್ರೀರಾಮನು ಜಯಿಸಿದನು. ಅಂದಮೇಲೆ ಕಾರ್ತವೀರ್ಯಾರ್ಜುನನು ಶ್ರೀರಾಮನಿಗಿಂತಲೂ ಸ್ವಲ್ಪ ಕಾಲ ಹಿಂದಿನವನಾಗಿರಬೇಕು; ಮತ್ತು ಶ್ರೀರಾಮನ ಮುತ್ತಜ್ಜನಾದ ರಘುಮಹಾರಾಜನ ಕಾಲದ ಈಚಿನವನಾಗಿರಬೇಕು. ಪ್ರತೀಪನು ಕಾರ್ತವೀರ್ಯನ ಸಂತತಿಯವನೆಂದು ಹೇಳಿರುವುದರಿಂದ ಪ್ರತೀಪನು ಶ್ರೀರಾಮನ ಪೂರ್ವಜನಾದ ಅಜಮಹಾರಾಜನ ಸಮಕಾಲೀನನಾಗಲಾರನು. ಆದರೆ ಪ್ರತೀಪನು ಯಾವ ಕಾಲದಲ್ಲಿದ್ದಿರಬಹುದು?

ಸಮುದ್ರಗುಪ್ತನು ಪಟ್ಟವೇರಿದ ಸ್ವಲ್ಪ ಕಾಲದಲ್ಲಿಯೇ ಆರ್ಯಾವರ್ತದಲ್ಲಿ ಜಯಿಸಿದ ೯ ಜನ ರಾಜರುಗಳಲ್ಲಿ ರುದ್ರದೇವನಿಗೆ ಅಧಿಷ್ಟಸ್ಥಾನವು ದೊರೆತಿರುವುದು.

ಈ ರುದ್ರದೇವನು ಯಾರಿರಬಹುದು? ಪೂನಾ ಪಟ್ಟಣದಲ್ಲಿ ಜರುಗಿದ ಪ್ರಥಮ ಪ್ರಾಚ್ಯ ಸಮ್ಮೇಳನದಲ್ಲಿ (First Oriental Conference, Poona, 1919) ಮ॥ ಕೆ. ಎನ್. ದೀಕ್ಷಿತರು ಈ ರುದ್ರದೇವನು ವಾಕಾಟಕ ಅರಸುಗಳ ೧ನೆಯ ರುದ್ರಸೇನನಾಗಿರಬಹುದೆಂದು ಸೂಚಿಸಿರುತ್ತಾರೆ. ಮ॥ ಎ. ವಿ. ವೆಂಕಟರಾಮಯ್ಯನವರು ಇದನ್ನು ಸಮರ್ಥಿಸಿರುತ್ತಾರೆ.[2]

1 ನರ್ಮದಾ ನದಿಗೆ 'ರೇವಾ', 'ಸೋಮೋದ್ಭವೆ' ಎಂಬ ಅನೇಕ ಹೆಸರುಗಳುಂಟು: 'ರಘುವಂಶ', ೬ನೆಯ ಸರ್ಗ, ೩೭ರಿಂದ ೪೪ನೆಯ ಶ್ಲೋಕಗಳು.

2 *Mythic Society Journal.*

ವಂಶವೃಕ್ಷವು ಈ ರೀತಿಯಲ್ಲಿರುವುದು :




ಪುರಾಣಗಳಲ್ಲಿ ಪ್ರವೀರನೆಂದು ಕರೆಯಲ್ಪಟ್ಟಿರುವ, ವಾಕಾಟಕರಲ್ಲಿ ಪ್ರ... ನಾದ ೧ನೆಯ ಪ್ರವರಸೇನನು ೬೦ ವರ್ಷ ರಾಜ್ಯಭಾರಮಾಡಿ, ಭಾರಶಿವ ವ... ಮಹಾರಾಜನಾದ ಭವನಾಗನೊಂದಿಗೆ ಮಿತ್ರನಾಗಿದ್ದು, ನಾಲ್ಕು ಅಶ್ವಮೇಧ... ಗಳನ್ನು ಮಾಡಿ, ರಾಜಾಧಿರಾಜನಾಗಿ ಸಮ್ರಾಟನೆಂಬ ಕೀರ್ತಿ ಪಡೆದಿದ್ದ... ಇವನ ಅನಂತರ ಇವನ ಮೊಮ್ಮಗನಾದ ೧ನೆಯ ರುದ್ರಸೇನನು ಪಟ್ಟಕ್ಕೆ ಬಂದ... ಈ ರುದ್ರಸೇನನ ಮೊಮ್ಮಗನಾದ ೨ನೆಯ ರುದ್ರಸೇನನಿಗೆ ಸಮುದ್ರಗುಪ್ತನ ಮ... ೨ನೆಯ ಚಂದ್ರಗುಪ್ತನ ಮಗಳಾದ ಪ್ರಭಾವತಿಯನ್ನು ಕೊಟ್ಟು ಲಗ್ನವಾಗಿತ್ತು... ಆದ್ದರಿಂದ ೧ನೆಯ ರುದ್ರಸೇನನೂ ಸಮುದ್ರಗುಪ್ತನೂ ಸಮಕಾಲೀನರೆಂಬುದ... ಸಂದೇಹವಿರುವುದಿಲ್ಲ. ಈ ವಾಕಾಟಕ ಅರಸರು ಆರ್ಯಾವರ್ತದಿಂದ ದಕ್ಷಿ... ದೇಶಕ್ಕೆ ಬಂದಮೇಲೆ ಅನೇಕ ಕಾಲ ನರ್ಮದಾ ನದಿಯ ದಡದಮೇಲೆ ರಾಜ್ಯವಾ... ತ್ತಿದ್ದರು.

ಅಜ ಮಹಾರಾಜನ ಕಾಲದಲ್ಲಿ ರೇವಾ ನದಿಯ ದಡದಲ್ಲಿ ಪ್ರಸಿದ್ಧವಾ... ಮಾಹಿಷ್ಮತೀ ನಗರದಲ್ಲಿ ಪ್ರವರಸೇನನೆಂಬ ರಾಜನು ಆಳುತ್ತಿದ್ದನೆಂದು ಮ... ಹೇಳಿದೆಯಷ್ಟೆ. ದಿಲೀಪ, ರಘು, ಅಜ, ದಶರಥ—ಈ ವೀರರನ್ನು ವರ್ಣನೆ ಮಾ... ವಾಗ 'ರಘುವಂಶ'ದಲ್ಲಿ ಉಕ್ತವಾಗಿರುವ ಕೆಲವು ವಚನಗಳಿಂದ ಕಾಳಿದಾಸ... ತನ್ನ ಆಶ್ರಯದಾತನಾದ ಚಂದ್ರಗುಪ್ತ ವಿಕ್ರಮಾದಿತ್ಯನ ಹಿರಿಯರನ್ನು ಹೊ... 'ರಘುವಂಶ'ವನ್ನು ಬರೆದಿರುವನೆಂದು ಕೆಲವರ ಅಭಿಪ್ರಾಯವಿರುವುದು... ಅಂದಮೇಲೆ 'ರಘುವಂಶ'ದಲ್ಲಿ ವರ್ಣಿತವಾಗಿರುವ ಪ್ರತೀಪನು ೨ನೆಯ... ಚಂದ್ರಗುಪ್ತನ ಹಿರಿಯರಾದ ಸಮುದ್ರಗುಪ್ತ ಅಥವಾ ೧ನೆಯ ಚಂದ್ರಗುಪ್ತನ ಸಮಕಾಲೀನನೆಂದು ನಿರ್ಧರಿಸಬಹುದಾಗಿರುತ್ತದೆ.

[3] *Mythic Society Journal.*
[4] *Ibid.*

ಮಹಾಭಾರತದ ಅಶ್ವಮೇಧಿಕ ಪರ್ವದಲ್ಲಿ ನೀಲಧ್ವಜ ಮತ್ತು ಪ್ರವರ ಸೇನಾದಿಗಳೊಡನೆ ನಡೆದ ಯುದ್ಧದ ವಿಷಯವು ಹೇಳಿಲ್ಲ. ಆದ್ದರಿಂದ ಈ ಪ್ರವರ ಸೇನನು ಮಹಾಭಾರತ ಕಾಲದಲ್ಲಿ ಇದ್ದವನಲ್ಲವೆಂದು ಖಂಡಿತವಾಗಿ ಹೇಳಬಹುದು.

ಮೇಲೆ ಹೇಳಿದ ವಿಷಯಗಳನ್ನೆಲ್ಲಾ ಪರಿಶೀಲಿಸಿದರೆ ಸಮುದ್ರಗುಪ್ತನು ಪ್ರಥಮದಲ್ಲಿ ಆರ್ಯಾವರ್ತದಲ್ಲಿ ಸೋಲಿಸಿದ ರಾಜರುಗಳಲ್ಲಿ ಮುಖ್ಯನಾದ ರುದ್ರಸೇನನೇ ಜೈಮಿನಿ ಭಾರತದ ನೀಲಧ್ವಜನಾಗಿರಬಹುದೆಂದೂ, ಈತನ ಮಗನಾದ ಪ್ರವೀರನು ಸಮುದ್ರಗುಪ್ತನ ಯಜ್ಞ ಕುದುರೆಯನ್ನು ಮಾಹಿಷ್ಮತೀ ನಗರದ ಉದ್ಯಾನವನದಲ್ಲಿದ್ದಾಗ ಕಟ್ಟಿದನೆಂದೂ ವ್ಯಕ್ತವಾಗುವುದು.

## ೪. ವ್ಯಾಘ್ರರಾಜ

ಅರ್ಜುನನು ಹಂಸಧ್ವಜಾದಿಗಳೊಡನೆ ಕುದುರೆಯೊಂದಿಗೆ ಬರುತ್ತಿದ್ದನು. ಈಶ್ವರನನ್ನು ಮೆಚ್ಚಿಸಲು ಪಾರ್ವತಿಯು ತಪಸ್ಸು ಮಾಡಿದ ವನವನ್ನು ಕುದುರೆ ಪ್ರವೇಶಿಸಿತು. ಅದು ಅಲ್ಲಿ ಹೆಣ್ಣು ಕುದುರೆಯಾಯಿತು. ಅನಂತರ ಕುದುರೆ ಮನೋಹರವಾದ ಸರೋವರದಲ್ಲಿ ನೀರು ಕುಡಿಯಲು ಹುಲಿಯಾಗಿ ಅರ್ಜುನನನ್ನು ಹೆದರಿಸಿತು. ಅರ್ಜುನನು ಕೃಷ್ಣನನ್ನು ಧ್ಯಾನಿಸಲು ಪುನಃ ಯಜ್ಞದ ಅಶ್ವರೂಪ ವನ್ನು ತಾಳಿತು.

ಸಮುದ್ರಗುಪ್ತನು ದಕ್ಷಿಣ ಕೋಸಲ ದೇಶವನ್ನು ಜಯಿಸಿ ಒರಿಸ್ಸಾ ಮತ್ತು ಮಧ್ಯಪ್ರಾಂತಗಳಲ್ಲಿರುವ ವನರಾಜ್ಯಾಧಿಪತಿಗಳನ್ನು[5] ಜಯಿಸಿದನು. ಈ ವನಾಧಿಪತಿ ಗಳಲ್ಲಿ ವ್ಯಾಘ್ರರಾಜರೆಂಬವರು ಇದ್ದರು. ಆದರೆ ಇತಿಹಾಸದಲ್ಲಿ ವ್ಯಾಘ್ರರಾಜ ರೆಂದು ಎಲ್ಲಿಯೂ ಹೇಳಿಲ್ಲ. ಸನ್ನಾಹ ಸಮೇತನಾದ ಸಮುದ್ರಗುಪ್ತನಿಗೆ ಆಯುಧೋಪಕರಣಗಳಿಲ್ಲದ ವನಾಧಿಪತಿಗಳು ತುಂಬಾ ತೊಂದರೆಯನ್ನು ಕೊಟ್ಟಿರ ಲಿಕ್ಕಿಲ್ಲ. ಆದರೆ ಈ ವನಾಂತರಗಳಲ್ಲಿ ಸೈನ್ಯಸಾಮಗ್ರಿಗಳನ್ನು ಸಾಗಿಸಲು ತುಂಬಾ ತೊಂದರೆಯಾಗಿರಬಹುದು.[6]

ಮೇಲಿನ ಎರಡು ಪ್ರಕರಣಗಳನ್ನು ಪರಿಶೀಲಿಸುವುದರಿಂದ ಸಮುದ್ರಗುಪ್ತನು ಅಟವೀರಾಜ್ಯಗಳನ್ನು ಗೆದ್ದಿರಬಹುದೆಂಬ ಅಂಶವನ್ನು ಈ ಜೈಮಿನಿ ಭಾರತಕಾರನು ಯಜ್ಞಾಶ್ವವು ಮೊದಲು ಹೆಣ್ಣು ಕುದುರೆಯಾಗಿ, ಅನಂತರ ವ್ಯಾಘ್ರವಾಗಿ ಅರ್ಜುನನನ್ನು ಹೆದರಿಸಿತೆಂದೂ, ಆಮೇಲೆ ತನ್ನ ಮುಂಚಿನ ರೂಪವನ್ನು ತಾಳಿತೆಂದೂ ವರ್ಣಿಸಿರಬಹುದು.

## ೫. ಮಯೂರಧ್ವಜ

ಬಭ್ರುವಾಹನನ ರಾಜ್ಯದಿಂದ ಕುದುರೆ ರತ್ನಪುರದ ರಾಜನಾದ ಮಯೂರ ಧ್ವಜನ ರಾಜ್ಯಕ್ಕೆ ಹೋಯಿತು. ಮಯೂರಧ್ವಜನು ಏಳು ಅಶ್ವಮೇಧ ಯಾಗಗಳನ್ನು ಮಾಡಿ, ಎಂಟನೆಯ ಯಾಗಕ್ಕೆ ದೀಕ್ಷಿತನಾಗಿ ನರ್ಮದಾ ತೀರಕ್ಕೆ

[5] ಅಶೋಕನ ಕಾಲದಲ್ಲಿ ಮಧ್ಯಪ್ರಾಂತದಲ್ಲಿ ಅಟವೀರಾಜ್ಯಗಳೆಂಬುವುಗಳಿದ್ದವು. *Asoka*, by Dr. Bhandarkar.

[6] *The Early History of India*, by V. A. Smith, Page 248 (1904 Edition).

ಬಂದು ಯಾಗಪಶುವನ್ನು ಭೂಮಂಡಲದ ಸಂಚಾರಕ್ಕೆ ರಾಜಕುಮಾರ ತಾಮ್ರಧ್ವಜನ ಕಾವಲಿನಲ್ಲಿ ಬಿಟ್ಟಿದ್ದನು. ಧರ್ಮರಾಯನ ಯಾಗಪಶುವನ್ನು ಮಯೂರಧ್ವಜನ ಕುದುರೆಯನ್ನು ಕಂಡು, ಎರಡೂ ಜಗಳವಾಡುತ್ತಿರುವುದನ್ನು ನೋಡಿ, ತಾಮ್ರಧ್ವಜನು ಧರ್ಮರಾಯನ ಕುದುರೆಯನ್ನು ಕಟ್ಟಿಹಾಕಿ, ಎದುರಿಸಿ ಅರ್ಜುನಾದಿಗಳನ್ನು ಮೂರ್ಛೆಗೊಳಿಸಿ, ಎರಡು ಯಾಗಪಶುಗಳನ್ನೂ ತೆಗೆದುಕೊಂಡು ತಂದೆಯ ಯಾಗಮಂಟಪಕ್ಕೆ ಹೋದನು. ಮಯೂರಧ್ವಜನು ಕೃಷ್ಣನ ದರ್ಶನಾ ಕಾಂಕ್ಷೆಯಿಂದ ಎರಡು ಅಶ್ವಗಳನ್ನೂ ಕೃಷ್ಣಾರ್ಜುನಾದಿಗಳಿಗೆ ಒಪ್ಪಿಸಲು ಉದ್ಯುಕ್ತ ನಾದನು.

ಕೃಷ್ಣನು ವೃದ್ಧಬ್ರಾಹ್ಮಣನಾಗಿ ಅರ್ಜುನನನ್ನು ತನ್ನ ಶಿಷ್ಯನನ್ನಾಗಿ ಮಾಡಿ ಕೊಂಡು ಮಯೂರಧ್ವಜನ ಸಭೆಗೆ ಬಂದು ರಾಜನನ್ನು ಹರಸಿ 'ಮಹೀಪಾಲ ಶಾರ್ದೂಲಾ, ನೀನು ಬೇಡಿದುದ ಕೊಡುವ ದಾನಿಯೆಂದು ನಿನ್ನ ಬಳಿಗೆ ಬಂದಿ ವೆನು' ಎಂದು ಹೇಳಿ ಮಯೂರಧ್ವಜನ ಅರ್ಧ ಶರೀರವನ್ನು ಯಾಚಿಸಿದನು. ಮಯೂರಧ್ವಜನು ತನ್ನ ಅರ್ಧ ದೇಹವನ್ನು ಕೊಡುವುದಾಗಿ ವಾಗ್ದಾನಮಾಡಿದನು. ಮಹಾರಾಜನ ಅರ್ಧಾಂಗಿಯು ತನ್ನ ದೇಹವನ್ನೂ, ಪುತ್ರನು ತನ್ನ ದೇಹವನ್ನು ರಾಜನ ಅರ್ಧ ದೇಹಕ್ಕೆ ಸಮಾನವೆಂದು ಬ್ರಾಹ್ಮಣನಿಗೆ ಅರ್ಪಿಸಲು ಕಾತುರರಾದರು. ಬ್ರಾಹ್ಮಣ ವೇಷಧಾರಿಯಾದ ಶ್ರೀಕೃಷ್ಣನು ಈ ರೀತಿಯಲ್ಲಿ ದಾನವನ್ನು ಕೊಡುತ್ತ ಅಳುಕುವುದಾದರೆ ತನಗೆ ದಾನವೇ ಬೇಡವೆಂದು ಹೇಳಿದನು. ಮಯೂರಧ್ವಜನು ತನ್ನ ಭಾಷೆಗೆ ಊಣೆಯು ಬಾರದಂತೆ ತನ್ನ ದೇಹವನ್ನು ಕೊಯ್ದು ಕೊಡುವುದಾಗಿ ಹೇಳಿ, ಗರಗಸವನ್ನು ತರಿಸಿ ತನ್ನ ಪತ್ನೀಪುತ್ರರಿಂದ ತನ್ನ ದೇಹವನ್ನು ಅರ್ಧವಾಗಿ ಸೀಳಿಸಿದನು. ಮಯೂರಧ್ವಜನ ಭಕ್ತಿಗೆ ಶ್ರೀಕೃಷ್ಣನು ಮೆಚ್ಚಿ, ತನ್ನ ನಿಜ ಮೂರ್ತಿಯನ್ನು ತೋರಿಸಲು ಭಗವದ್ಭಕ್ತನಾದ ಮಯೂರಧ್ವಜನು ಯಾಗಪಶು ಗಳೆರಡನ್ನೂ, ತನ್ನ ಸರ್ವಸ್ವವನ್ನೂ ಶ್ರೀಕೃಷ್ಣನಿಗೆ ಅರ್ಪಿಸಿದನು.

## ೬. ವಿಷ್ಣುಗೋಪ

ಸಮುದ್ರಗುಪ್ತನ ಪ್ರಶಸ್ತಿಯಲ್ಲಿ ಅವನು ಜಯಿಸಿದ ದಕ್ಷಿಣದೇಶದ ರಾಜರು ಗಳಲ್ಲಿ ಕಂಚಿಯ ಅರಸನಾದ ಪಲ್ಲವ ವಿಷ್ಣುಗೋಪನು ಪ್ರಮುಖನಾಗಿರುವನು. ಕಂಚಿಯ ಪಲ್ಲವ ಅರಸರುಗಳಲ್ಲಿ ವಿಷ್ಣುಗೋಪನೆಂಬ ಹೆಸರಿನ ಮೂರು ಜನ ರಾಜರುಗಳು ಬೇರೆಬೇರೆ ಕಾಲದಲ್ಲಿದ್ದರೆಂದು ಪಲ್ಲವರ ಇತಿಹಾಸದಿಂದ ತಿಳಿದು ಬರುತ್ತದೆ. ಸಮುದ್ರಗುಪ್ತನು ಜಯಿಸಿದ ವಿಷ್ಣುಗೋಪನು ಯಾರೆಂಬುದರಲ್ಲಿ ಚರಿತ್ರಕಾರರಲ್ಲಿಯೇ ಭಿನ್ನಾಭಿಪ್ರಾಯಗಳಿರುವುವು.

ಉರವಪಳ್ಳಿ, ಮಂಗದೂರು, ಪೈಕೀರ, ಚಂದಲೂರು, ವೇರುಪಾಳ್ಯಂ ಮತ್ತು ಓಂಗೋಡು ಶಾಸನಗಳಿಂದ ಪಲ್ಲವ ಅರಸರುಗಳಲ್ಲಿ ಪ್ರಥಮ ಗುಂಪಿನ ರಾಜರ ವಂಶವೃಕ್ಷವನ್ನು ಈ ಕೆಳಗೆ ಕಂಡಂತೆ ನಿರ್ಧರಿಸಬಹುದಾಗಿರುತ್ತದೆ:




ಎರಡು ಮತ್ತು ಮೂರನೆಯ ವಂಶವೃಕ್ಷಗಳು ಇಲ್ಲಿ ಆವಶ್ಯಕವಿರುವುದಿಲ್ಲ. ಮೇಲಿನ ವಂಶವೃಕ್ಷದಲ್ಲಿ ಕಾಣಬರುವ ಯುವರಾಜ ವಿಷ್ಣುಗೋಪನು ಸಮುದ್ರಗುಪ್ತನ ಅಲಹಾಬಾದಿನ ಪ್ರಶಸ್ತಿಯಲ್ಲಿರುವ ಕಂಚಿಯ ವಿಷ್ಣುಗೋಪವರ್ಮನಾಗಿರಬಹುದೆಂದು ಶ್ರೀಯುತ ಎಚ್. ಕೃಷ್ಣಶಾಸ್ತ್ರಿಗಳು ಅಭಿಪ್ರಾಯಪಟ್ಟಿರುತ್ತಾರೆ.[7]

ಈ ವಿಷ್ಣುಗೋಪನು ಸಮುದ್ರಗುಪ್ತನ ಸಮಕಾಲೀನನಾಗಿದ್ದನೆಂದು ಚರಿತ್ರೆಯ ಅಂಶಗಳಿಂದಲೂ ನಿರ್ಧರಿಸಬಹುದಾಗಿರುತ್ತದೆ. ಗುಪ್ತವಲ್ಲಭಿ ಶಕೆಯೂ, ಗುಪ್ತ ಶಕೆಯೂ ಬೇರೆ ಬೇರೆ ಎಂದೂ, ಗುಪ್ತ ಕಾಲವು ಕ್ರಿ. ಶ. ೨೦೦, ೨೦೧ರಿಂದ ಪ್ರಾರಂಭವಾಯಿತೆಂದೂ, ಸಮುದ್ರಗುಪ್ತನು ಕ್ರಿ. ಶ. ೨೪೨ರಿಂದ ೨೮೨ರ ವರೆಗೆ ರಾಜ್ಯಭಾರಮಾಡಿರಬಹುದೆಂದೂ ಡಾ॥ ಶಾಮಶಾಸ್ತ್ರಿಗಳು ಸಿದ್ಧಾಂತ ಮಾಡಿರುತ್ತಾರೆ.[8]

ಸಮುದ್ರಗುಪ್ತನು ಪಟ್ಟವೇರಿದ ಸುಮಾರು ೧೪ ವರ್ಷಗಳಲ್ಲಿ ದಕ್ಷಿಣದೇಶದ ದಂಡಯಾತ್ರೆಯನ್ನು ಮುಗಿಸಿರಬಹುದೆಂದೂ[9], ಆದ್ದರಿಂದ ಸಮುದ್ರಗುಪ್ತನ ದಂಡಯಾತ್ರೆಯು ಕ್ರಿ. ಶ. ೨೪೨ರಿಂದ ೨೫೬ರಲ್ಲಿ ನಡೆದಿರಬಹುದೆಂದೂ ನಿರ್ಧರಿಸಬಹುದಾಗಿರುತ್ತದೆ. ಪಲ್ಲವ ವಂಶಸ್ಥರಲ್ಲಿ ಅಶ್ವಮೇಧ ಯಾಗವನ್ನು ಮಾಡಿದ ಶಿವಸ್ಕಂದವರ್ಮನು ಕ್ರಿ. ಶ. ೧೯೭ರಿಂದ ಸುಮಾರು ೨೦೦ರ ವರೆಗೆ ಆಳಿರಬೇಕೆಂದು ಶ್ರೀಯುತ ಗೋವಿಂದ ಪೈಗಳವರು ನಿರ್ಧಾರಮಾಡಿರುತ್ತಾರೆ.[10] ೨ ಮತ್ತು ೩ನೆಯ ವಿಷ್ಣುಗೋಪರು ೧ನೆಯ ವಿಷ್ಣುಗೋಪನಿಂದ ಬಹಳ ಕಾಲಾನಂತರ ರಾಜ್ಯಭಾರ

7 "The name Vishṇugopa is there mentioned thrice and it is not unlikely that one of these three, perhaps the earliest of them, is identical with Vishṇugopa, the contemporary of Samudragupta, who was still ruling with his capital at Kanchi."—*Epigraphia Indica*, Vol. XV, p. 248.

8 *Mysore Archæological Report*, 1923, p. 22.

9 V. A. Smith's *Early History of India*.

10 'ಜಯಕರ್ನಾಟಕ', ಸಂಪುಟ ೧೧, ಸಂಚಿಕೆ ೧, ಪುಟ ೧೧೦.

ಮಾಡಿರುವುದರಿಂದ ಕ್ರಿ. ಶ. ೨೪೨ರಿಂದ ೨೫೬ರ ವರೆಗೆ ಇದ್ದ ವಿಷ್ಣುಗೋಪನು ೧ನೆಯ ವಿಷ್ಣುಗೋಪನೆಂದೇ ನಿರ್ಧಾರವಾಗಿ ಹೇಳಬಹುದಾಗಿರುತ್ತದೆ.

ವಿಷ್ಣುಗೋಪನಿಗೆ ಯಾವ ಶಾಸನಗಳಲ್ಲಿಯೂ ಮಹಾರಾಜನೆಂದು ಬಿರುದಿರುವುದಾಗಿರುವುದಿಲ್ಲ. ಸಿಂಹವರ್ಮನು ಧರ್ಮ ಮಹಾರಾಜನಾಗಿರುವ ಕಾಲದ ಉರುವಪಳ್ಳಿ, ಮಂಗದೂರು ಮತ್ತು ಪೈಕೀರ ತಾಮ್ರಪಟ್ಟಗಳಲ್ಲಿ ಈತನ ತಂದೆಯಾದ ವಿಷ್ಣುಗೋಪನನ್ನು ಯುವಮಹಾರಾಜ ವಿಷ್ಣುಗೋಪವರ್ಮನೆಂದೇ ಸಂಬೋಧಿಸಿರುವುದು.[11]

ಇದರಿಂದ ವಿಷ್ಣುಗೋಪನು ಪಟ್ಟಕ್ಕೆ ಬರಲಿಲ್ಲವೆಂದೂ, ಶಿವಸ್ಕಂದವರ್ಮನು ಧರ್ಮ ಮಹಾರಾಜಾಧಿರಾಜನಾಗಿರುವಾಗಲೇ ವಿಷ್ಣುಗೋಪನು ಯುವಮಹಾರಾಜನಾಗಿಯೇ ಮಡಿದಿರಬಹುದೆಂದೂ, ಶಿವಸ್ಕಂದವರ್ಮನನಂತರ ಸಿಂಹವರ್ಮನೇ ಪಟ್ಟಕ್ಕೆ ಬಂದಿರಬಹುದೆಂದೂ ಊಹಿಸಬೇಕಾಗಿರುತ್ತದೆ. ಈ ಊಹೆಯನ್ನು ನಂಬುವುದಾದರೆ ಸಮುದ್ರಗುಪ್ತನು ವಿಷ್ಣುಗೋಪನನ್ನು ಎದುರಿಸಿದಾಗ, ವಿಷ್ಣುಗೋಪನು ಯುವರಾಜನಾಗಿ ರಾಜ್ಯಸೂತ್ರವನ್ನು ವಹಿಸಿರಬೇಕು. ವೃದ್ಧನಾದ ಶಿವಸ್ಕಂದವರ್ಮನು ಧರ್ಮ ಮಹಾರಾಜಾಧಿರಾಜನಾಗಿ ನಾಮಮಾತ್ರದಿಂದ ರಾಜ್ಯಭಾರ ಮಾಡುತ್ತಿರಬೇಕು. ಅಂದಮೇಲೆ ೧೬೭ರಿಂದ ೨೫೬ರ ವರೆಗೆ ಈ ಶಿವಸ್ಕಂದವರ್ಮನು ರಾಜ್ಯಭಾರಮಾಡಿದಂತಾಗುತ್ತದೆ.[12] ಈತನು ೮೯ ವರ್ಷಗಳ ಕಾಲ ರಾಜ್ಯಭಾರಮಾಡಿದಂತಾಯಿತು. ಇಷ್ಟು ದೀರ್ಘಕಾಲ ರಾಜ್ಯಭಾರಮಾಡಿದವರು ಚರಿತ್ರೆಯ ಕಾಲದಲ್ಲಿ ಯಾರೂ ಇದ್ದಂತೆ ಕಂಡುಬರುವುದಿಲ್ಲ; ಆದರೂ ಇದು ಅಸಾಧ್ಯವೆಂದು ಹೇಳಲು ಆಗುವುದಿಲ್ಲ.

## ೭. ಶಿವಸ್ಕಂದವರ್ಮ

ಪಲ್ಲವರಲ್ಲಿ ಅಶ್ವಮೇಧ ಯಾಗವನ್ನು ಮಾಡಿದ ರಾಜನು ಶಿವಸ್ಕಂದವರ್ಮನೆಂಬ ಅರಸನೆಂದು ಪಲ್ಲವರ ಇತಿಹಾಸದಿಂದ ತಿಳಿಯಬರುವುದು. ಈ ಶಿವಸ್ಕಂದವರ್ಮನು ತನ್ನ ೮ನೆಯ ವರ್ಷದ ಹಿರೇಹಡಗಲಿಯ ತಾಮ್ರಪಟ್ಟದಲ್ಲಿ ತನ್ನನ್ನು 'ಅಶ್ವಮೇಧಯಾಜಿ' ಎಂದು ಹೇಳಿಕೊಂಡಿರುವನು.[13]

ಶಿವಸ್ಕಂದವರ್ಮನ ಹಿಂದಿನ ರಾಜರಿಗೆ 'ಮಹಾರಾಜಾ' ಎಂಬ ಬಿರುದಿದ್ದು ಶಿವಸ್ಕಂದವರ್ಮನೇ ಪ್ರಥಮತಃ 'ಧರ್ಮ ಮಹಾರಾಜಾಧಿರಾಜಾ' ಎಂಬ ಬಿರುದನ್ನು ತಳೆದನೆಂದು ತಿಳಿಯಬರುವುದು. ಈತನು ಮಾಡುತ್ತಿದ್ದ ಅಶ್ವಮೇಧ ಯಾಗದ ಕಾಲದಲ್ಲಿಯೇ ಕದಂಬರ ಮಯೂರಶರ್ಮನು ಕಂಚೀನಗರಕ್ಕೆ ಹೋಗಿ ವೇದಾಭ್ಯಾಸ ಮಾಡಬೇಕೆಂಬ ಆಶೆಯಿಂದ, ಎಲ್ಲಾ ಘಟಿಕಾಸ್ಥಾನಗಳನ್ನು ಭಿಕ್ಷುವೃತ್ತಿಯಿಂದ

11 *Epigraphia Indica*, XV, p. 248.

12 ಶಿವಸ್ಕಂದವರ್ಮನ ಹಿರೇಹಡಗಲಿಯ ತಾಮ್ರಪಟ್ಟವು ಕ್ರಿ. ಶ. ೨೪೪ರಿಂದ ೨೫೦ರೊಳಗೆ ಬರೆಯಲ್ಪಟ್ಟಿರಬಹುದೆಂದೂ, ಶಿವಸ್ಕಂದವರ್ಮನು ಕ್ರಿ. ಶ. ೩ನೆಯ ಶತಮಾನದ ೩ನೆಯ ಪಾದದಲ್ಲಿದ್ದನೆಂದೂ ಡಾ॥ ಎಂ. ಎಚ್. ಕೃಷ್ಣ, ಅವರು ಅಭಿಪ್ರಾಯಪಟ್ಟಿರುತ್ತಾರೆ.—*Mysore Archaeological Report*, 19..., pp. 57-58.

13 *Epigraphia Indica*, I, p. 2.

ಪ್ರವೇಶಿಸಿದನು ಎಂದು ತಾಳಗುಂದದ ಸ್ತಂಭಲೇಖನದಿಂದ ತಿಳಿಯಬರುವುದು. ಧರ್ಮ ಮಹಾರಾಜಾಧಿರಾಜನಾದ ಶಿವಸ್ಕಂದವರ್ಮನು ಅನೇಕ ಗೋಹಿರಣ್ಯ ಭೂಮ್ಯಾದಿಗಳನ್ನು ದಾನಮಾಡಿದವನೆಂದೂ ಈತನ ಆಳ್ವಿಕೆಯ ೩೩ನೆಯ ವರ್ಷದ ಓಂಗೋಡು ತಾಮ್ರಪಟ್ಟದಲ್ಲಿ[14] ಉಕ್ತವಾಗಿರುವುದು. ಇದೇ ಶಾಸನದಲ್ಲಿ ಈ ಚಕ್ರಾಧಿಪತಿಯು 'ಸತ್ಯಪ್ರತಿಜ್ಞ'ನೆಂದೂ, 'ದೇವದ್ವಿಜ ಶುಶ್ರೂಷ ಅಭಿರತ' ನೆಂದೂ, 'ಸರ್ವಶಾಸ್ತ್ರಾರ್ಥನಿರ್ಣಯ ತತ್ತ್ವಜ್ಞ'ನೆಂದೂ ಹೊಗಳಲ್ಪಟ್ಟಿರುವನು.

**ಸಾರಾಂಶ.**—ಜೈಮಿನಿ ಭಾರತದ ಮಯೂರಧ್ವಜ ತಾಮ್ರಧ್ವಜರ ವಿಷಯವನ್ನೂ, ಶಿವಸ್ಕಂದವರ್ಮ ಮತ್ತು ವಿಷ್ಣುಗೋಪರ ಇತಿಹಾಸವನ್ನೂ ಹೋಲಿಸಿ ನೋಡುವುದರಿಂದ, ಒಂದೇ ವಿಷಯವನ್ನು ಎರಡು ತೆರನಾಗಿ ಹೇಳಿದಂತೆ ಕಾಣಬರುವುದು:

| ಜೈಮಿನಿ ಭಾರತ | ಇತಿಹಾಸ |
|---|---|
| ೧. ಮಯೂರಧ್ವಜ | ಶಿವಸ್ಕಂದವರ್ಮ |
| ೨. ೮ ಅಶ್ವಮೇಧ ಯಾಗವನ್ನು ಮಾಡಿದವನು (ಉತ್ಪ್ರೇಕ್ಷೆ ಇರಬಹುದು) | 'ಅಶ್ವಮೇಧಯಾಜಿ' |
| ೩. ಬೇಡುವವರಿಗೆ ಕೊಡುವ ದಾನಿ, ಮಹಾದಾನಿ, ಸುತ್ಯಾಗಿ | ಗೋಹಿರಣ್ಯ ಭೂಮಿಗಳನ್ನು ದಾನಮಾಡಿದವನು |
| ೪. ಮಹೀಪಾಲ ಶಾರ್ದೂಲ | ಧರ್ಮ ಮಹಾರಾಜಾಧಿರಾಜ |
| ೫. ರಾಜಕುಮಾರ ತಾಮ್ರಧ್ವಜ | ಯುವಮಹಾರಾಜ ವಿಷ್ಣುಗೋಪ |
| ೬. ಅರ್ಜುನನನ್ನು ಎದುರಿಸಿದವನು | ಸಮುದ್ರಗುಪ್ತನನ್ನು ಎದುರಿಸಿದವನು |

ಶಿವಸ್ಕಂದವರ್ಮ, ವಿಜಯಸ್ಕಂದವರ್ಮ ಎಂಬಲ್ಲಿರುವ 'ಶಿವ' ಮತ್ತು 'ವಿಜಯ' ಎಂಬ ಶಬ್ದಗಳು ಮಂಗಳನಾಮಾತ್ಮಕವಾದ ವಿಶೇಷಣಗಳಾಗಿರುತ್ತವೆ. ಆದ್ದರಿಂದ 'ಸ್ಕಂದವರ್ಮ' ಎಂಬುದು ಈ ಸಮ್ರಾಟನ ಸರಿಯಾದ ಹೆಸರಾಗಿರುತ್ತದೆ. 'ಮಯೂರ'ವು ಶಿವನ ಮಗನಾದ 'ಸ್ಕಂದ'ನ ವಾಹನವಾದ್ದರಿಂದ ಸ್ಕಂದವರ್ಮನನ್ನು ಮಯೂರಧ್ವಜನೆಂದು ಜೈಮಿನಿ ಗ್ರಂಥಕಾರನು ಕರೆದಿರಬಹುದೇ? ಅದರಂತೆಯೇ 'ತಾಮ್ರಪಸ್ಥಾನ'ದಲ್ಲಿ[15] ವಾಸಿಸುತ್ತಿದ್ದುದರಿಂದ ವಿಷ್ಣುಗೋಪನನ್ನು ತಾಮ್ರಧ್ವಜನೆಂದು ಜೈಮಿನಿ ಗ್ರಂಥಕಾರನು ಕರೆದಿರಬಹುದೇ?

## ೮. ವೀರವರ್ಮ

ಸೌರಾಷ್ಟ್ರದ ರಾಜಧಾನಿಯಾದ ಸಾರಸ್ವತಾಖ್ಯಪುರವನ್ನು ಧರ್ಮರಾಯನ ಅಶ್ವಮೇಧ ಯಾಗದ ಕುದುರೆ ಪ್ರವೇಶಿಸಿತು. ಅಲ್ಲಿಯ ರಾಜನಾದ ವೀರವರ್ಮನೊಡನೆ ಅರ್ಜುನನು ಸಖ್ಯವನ್ನೇ ಮಾಡುವನು. ಗುಜರಾತದೇಶದ ದಕ್ಷಿಣಭಾಗಕ್ಕೆ ಸೌರಾಷ್ಟ್ರವೆಂದು ಹೆಸರು. ಈ ದೇಶವು ಸಮುದ್ರಗುಪ್ತನ ಮಗನಾದ ಚಂದ್ರಗುಪ್ತನ ಅಧೀನವಾಗಿತ್ತು ಎಂಬುದು ಚರಿತ್ರಾರ್ಹವಾದ

14 *Epigraphia Indica*, XV, p. 249.
15 *Ibid.*, XV, p. 250: ಓಂಗೋಡು ತಾಮ್ರಶಾಸನ.

ವಿಷಯವಾಗಿರುತ್ತದೆ. ಸಮುದ್ರಗುಪ್ತನ ದಂಡಯಾತ್ರೆಗೆ ಈ ದೇಶವು ಒಳಪಟ್ಟಿ ತೆಂದರೆ ಅತಿಶಯೋಕ್ತಿಯಾಗಲಾರದು. ವೀರವರ್ಮನಾರು, ಇವನ ಅಳಿಯು ವೈವಸ್ವತನಾರಿರಬಹುದು ಎಂಬುದನ್ನು ಚರಿತ್ರಕಾರರು ಶೋಧನೆಮಾಡುವುದು ಆವಶ್ಯಕವಾಗಿರುತ್ತದೆ. ವೀರವರ್ಮನ ಅಳಿಯನು ಯವನರಾಜನಾಗಿರಬಹುದೇ? 'ರಘುವಂಶ'ದಲ್ಲಿ ರಘುಮಹಾರಾಜನು ಯವನರನ್ನು ಸೋಲಿಸಿದ ವಿಷಯವು ಹೇಳಲ್ಪಟ್ಟಿದೆ. ರಘುಮಹಾರಾಜನ ಕಾಲದಲ್ಲಿ ಯವನರು ಭರತಖಂಡಕ್ಕೆ ಪ್ರವೇಶಿಸಿರಲಿಲ್ಲ. ಸಮುದ್ರಗುಪ್ತ ಅಥವಾ ಅವನ ಮಗ ಚಂದ್ರಗುಪ್ತ ವಿಕ್ರಮಾದಿತ್ಯ ಅಥವಾ ಮೊಮ್ಮಗ ಕುಮಾರಗುಪ್ತ ಯವನರನ್ನು ಸೋಲಿಸಿದ ವಿಷಯವೇ 'ರಘುವಂಶ'ದಲ್ಲಿ ಹೇಳಲ್ಪಟ್ಟಿರುವುದೆಂದು ಕೆಲವರು ಅಭಿಪ್ರಾಯ ಪಡುವರು. ಈ ಸಂದರ್ಭಗಳನ್ನೆಲ್ಲಾ ಆಲೋಚಿಸಿದರೆ, ಸಮುದ್ರಗುಪ್ತನ ಸೌರಾಷ್ಟ್ರದ ವಿಜಯವನ್ನು ಜೈಮಿನಿ ಗ್ರಂಥಕಾರನು ವೀರವರ್ಮನೊಡನೆ ನಡೆದ ಕಾಳಗವೆಂದು ವರ್ಣನೆಮಾಡಿರಬಹುದೆಂದು ಊಹಿಸಬಹುದು.

## ೬. ಚಂದ್ರಹಾಸ

ಯಾಗಪಶುವು ಕುಂತಳ ರಾಜ್ಯಕ್ಕೆ ಪ್ರವೇಶಿಸಿದಾಗ ಅಲ್ಲಿಯ ರಾಜನಾದ ಚಂದ್ರಹಾಸನು ಕುದುರೆಯನ್ನು ತಡೆದನು. ಅರ್ಜುನನು ನಾರದರಿಂದ ಪರಮ ಭಕ್ತಾಗ್ರಣಿಯಾದ ಚಂದ್ರಹಾಸನ ಕಥೆಯನ್ನು ಕೇಳಿದವನಾಗಿ ಅವನ ಸ್ನೇಹ ವನ್ನು ಬಯಸಿದನು. ಕದಂಬಕುಲಸ್ಥಾಪಕನಾದ ಮಯೂರಶರ್ಮನೇ ಚಂದ್ರ ಹಾಸನೆಂಬುದಾಗಿ ನಾನು ಬೇರೊಂದೆಡೆಯಲ್ಲಿ ನಿರ್ಣಯಮಾಡಿರುತ್ತೇನೆ. ಮಯೂರಶರ್ಮನೂ ಸಮುದ್ರಗುಪ್ತನೂ ಸಮಕಾಲೀನರೆಂಬುದನ್ನೂ, ಸಮುದ್ರ ಗುಪ್ತನು ಎಸಗಿದ ಅಶ್ವಮೇಧದ ಯಾಗಪಶುವು ಈ ಕುಂತಳರಾಜ್ಯವನ್ನು ಪ್ರವೇಶಿಸಿ ತೆಂಬುದನ್ನೂ ನಿರ್ಧರಿಸುವುದು ಆವಶ್ಯಕ.

ಮಯೂರಶರ್ಮನ ಕಾಲನಿರ್ಣಯದ ವಿಷಯದಲ್ಲಿ ಚರಿತ್ರಕಾರರಲ್ಲಿಯೂ ಭಿನ್ನಾಭಿಪ್ರಾಯಗಳಿವೆ. ಈ ಕೆಳಗಿನ ಪಟ್ಟಿಯಿಂದ ಈ ವಿಷಯವು ವ್ಯಕ್ತವಾಗುವುದು:

| | |
|---|---|
| ೧. ಮಿ॥ ರೈಸ್‌ರವರು | ಕ್ರಿ. ಶ. ನಾಲ್ಕನೆಯ ಶತಕದ ಆದಿ |
| ೨. ,, ಝೂವೊಡು ಬ್ರಾಯಿಲರ | ಕ್ರಿ. ಶ. ೩೪೫–೩೬೦ |
| ೩. ,, ಮೊರೇಸ್ ('ಕದಂಬಕುಲ') | ಕ್ರಿ. ಶ. ೩೪೫–೩೬೦ |
| ೪. ಡಾ॥ ಎಂ. ಎಚ್. ಕೃಷ್ಣ ಅವರು | ಕ್ರಿ. ಶ. ೨೫೮ [17] |
| ೫. ಡಾ॥ ಆರ್. ಶಾಮಶಾಸ್ತ್ರಿಗಳು | ಕ್ರಿ. ಶ. ೨೦೦ [17] |
| ೬. ಶ್ರೀ॥ ಗೋವಿಂದ ಪೈಗಳವರು | ಕ್ರಿ. ಶ. ೧೮೦ [17] |

ಬನವಾಸಿಯಲ್ಲಿ ಆಳುತ್ತಿದ್ದ ಚುಟು ಕುಲದರಸರ ತರುವಾಯ ಕದಂಬರು ಆ ರಾಜ್ಯವನ್ನು ಆಕ್ರಮಿಸಿದರು ಎಂದು ಎಲ್ಲಾ ಚರಿತ್ರಕಾರರೂ ಒಪ್ಪಿರುವರು. ಬನವಾಸಿಯಲ್ಲಿ ಆಳುತ್ತಿದ್ದ ಚುಟುಕುಲಾನಂದ ಹಾರೀತೀ ಪುತ್ರರು ಸಮ್ರಾಟ

16 'ಜಯಕರ್ನಾಟಕ', ಸಂಪುಟ ೧೨, ಸಂಚಿಕೆ ೩ ಮತ್ತು ೪.

17 ಮಯೂರಶರ್ಮನ ಎರಡನೆಯ ಪಟ್ಟಬಂಧ ಮಹೋತ್ಸವ ಕಾಲವನ್ನು ಈ ಸಂವತ್ಸರಗಳು ಸೂಚಿಸುವುವು.

ಶಾತವಾಹನ ವಂಶದ ಕಿರಿಯ ಮನೆತನದವರಾಗಿದ್ದರು. ಇವರಲ್ಲಿ ಕೊನೆಯವನಾದ ಚುಟುಕುಲಾನಂದ ಶಾತಕರ್ಣಿಯ ಬನವಾಸಿಯ ಶಾಸನದಲ್ಲಿ 'ವಸವಿಸತ್ಯ ಸಂವಚ್ಚರ' ಎಂದರೆ 'ವರ್ಷಾದ್ವಿಶತ' ಎಂಬ ಅರ್ಥವುಳ್ಳ, ಎಂದರೆ ೧೦೨ನೆಯ ಸಂವತ್ಸರ, ಎಂಬುದಾಗಿ ಹೇಳಲ್ಪಟ್ಟದೆ. ಚುಟುಕುಲಾನಂದ ಶಾತಕರ್ಣಿಯು ಆಂಧ್ರಭೃತ್ಯವಂಶದ ಕಿರಿಯ ಮನೆತನದವನಾದುದರಿಂದ ಶಾಲಿವಾಹನ ಶಕೆಯ ಆರಂಭದಿಂದ, ಎಂದರೆ ಕ್ರಿ. ಶ. ೭೮ನೆಯ ವರ್ಷದಿಂದ, ೧೦೨ನೆಯ ವರ್ಷವೆಂದು ಎಣಿಸಿರಬಹುದೆಂಬುದರಲ್ಲಿ ಸಂದೇಹವಿರುವುದಿಲ್ಲ. ಆದ್ದರಿಂದ ಈ ಬನವಾಸಿಯ ಶಾಸನವು (ಕ್ರಿ. ಶ.) ೭೮+೧೦೨=೧೮೦ನೆಯ ಸಂವತ್ಸರದ್ದು ಎಂದು ನಿರ್ಧಾರವಾಗಿ ಹೇಳಬಹುದಾಗಿರುತ್ತದೆ. ಈ ಶಾಸನದಲ್ಲಿ ಶಿವಸ್ಕಂದ ನಾಗಶ್ರೀಯು ಮಾಡಿರುವ ದಾನವನ್ನು ವಿವರಿಸಿದೆ. ಇದರಲ್ಲಿ ಉಕ್ತನಾಗಿರುವ ಶಿವಸ್ಕಂದನು ನಾಗಶ್ರೀಯ ಪತಿಯಾಗಿರಬಹುದು.[18]

ಮಳವಳ್ಳಿಯ ಸ್ತಂಭಲೇಖದಲ್ಲಿ ಎರಡು ದಾನಶಾಸನಗಳಿರುವುವು. ಇವುಗಳಲ್ಲಿ ಮೊದಲನೆಯದು ಚುಟುಕುಲಾನಂದ ಶಾತಕರ್ಣಿಯು ಮಾಡಿರುವ ದಾನವನ್ನೂ, ಎರಡನೆಯದು ಕದಂಬ ಧರ್ಮ ಮಹಾರಾಜಾಧಿರಾಜ ಶಿವಸ್ಕಂದವರ್ಮ ಮಾಡಿರುವ ದಾನವನ್ನೂ ವಿವರಿಸಿರುವುವು. ೨ನೆಯ ಶಾಸನದ ಲಿಪಿ, ಶೈಲಿ ಮತ್ತು ಇರುವ ಸ್ಥಳ–ಇವುಗಳಿಂದಲೂ, ಎರಡು ಶಾಸನಗಳ ದಾನಗೃಹೀತರುಗಳ ಬಾಂಧವ್ಯ ಸಂಬಂಧದಿಂದಲೂ, ೨ನೆಯ ಶಾಸನದ ಕಾಲಕ್ಕೂ ಮೊದಲನೆಯ ಶಾಸನದ ಕಾಲಕ್ಕೂ ಬಹಳ ಅಂತರವಿಲ್ಲವೆಂದು ವ್ಯಕ್ತವಾಗುವುದು. ಈ ಶಾಸನದಲ್ಲಿ ಶಿವಸ್ಕಂದವರ್ಮನಿಗೆ ವಿಶೇಷಣವಾಗಿ ಉಪಯೋಗಿಸಿರುವ 'ಕದಂಬಾನಾಂ ರಾಜಃ' ಎಂಬ ಶಬ್ದಗಳು ಮಯೂರಶರ್ಮನಿಗೆ ಅನ್ವಯಿಸುತ್ತವೆ. ಏತಕ್ಕೆಂದರೆ, ಆತನೇ ಕದಂಬ ಸಂತತಿಯ ಮೊದಲಿಗನಾಗಿರುವನಲ್ಲದೆ ಆಗ್ಗೆ ಇದ್ದ ಕದಂಬನು ಇವನೊಬ್ಬನಲ್ಲದೆ ಅನ್ಯರಿರಲಿಲ್ಲ. ಆದ್ದರಿಂದ ಶಾಸನದಲ್ಲಿ ಇವನ ಹೆಸರನ್ನು ಸೂಚಿಸುವುದು ಅನಾವಶ್ಯಕವಾದ್ದರಿಂದ ಹೇಳದೇ ಬಿಟ್ಟಿರಬಹುದು.[19] ಆದ್ದರಿಂದ ಶಿವಸ್ಕಂದ ಎಂಬ ಹೆಸರು ಮಯೂರಶರ್ಮನಿಗೆ ಇದ್ದ ಇನ್ನೊಂದು ಹೆಸರಾಗಿರಬಹುದು. ಷಣ್ಮುಖನಿಗೆ ಸ್ಕಂದ, ಸುಬ್ರಹ್ಮಣ್ಯ, ಕುಮಾರ, ಸೇನಾನಿ, ಷಡಾನನ ಮೊದಲಾದ ಅನೇಕ ಹೆಸರುಗಳಿರುವುವು. ಮಯೂರಶರ್ಮನು ತನ್ನ ದ್ವಿತೀಯ ಪಟ್ಟಾಭಿಷೇಕವಾದ ಬಳಿಕ ಯಾರ ವರಪ್ರಸಾದದಿಂದ ರಾಜ್ಯವನ್ನು ಪಡೆದನೋ ಆತನ ಹೆಸರುಗಳಲ್ಲಿ ಒಂದಾದ ಸ್ಕಂದ ಎಂಬ ಅಂಕಿತದಮೇಲೆ ಶಿವಸ್ಕಂದವರ್ಮ ಎಂಬ ಅಭಿಧಾನವನ್ನು ಹೊಂದಿರಬಹುದು.

ಚುಟುಕುಲಾನಂದ ಶಾತಕರ್ಣಿಯ ಮಗಳಿಗೆ ಶಿವಸ್ಕಂದ ನಾಗಶ್ರೀ ಎಂದೂ, ನಾಗ ಮುಲಾನೀಕ ಎಂದೂ ಹೆಸರುಗಳಿದ್ದಂತೆ ಬನವಾಸಿ ಮತ್ತು ಕಾನ್ಹೇರಿ ಶಾಸನಗಳಿಂದ ತಿಳಿಯಬರುತ್ತದೆ. ಮೇಲೆ ಹೇಳಿರುವ ವಿಷಯಗಳನ್ನೆಲ್ಲಾ

18 According to Rapson, Sivaskhanda-Nagasri denotes the name of the prince associated with the queen in the donation. (*Mysore Gazetteer*, New Edition, Vol. II, p. 491.)

19 *Ibid.*

ಪರಿಶೀಲಿಸುವುದರಿಂದ ಶಿವಸ್ಕಂದನೆಂಬ ಅಭಿಧಾನವುಳ್ಳ ಮಯೂರಶರ್ಮನು ನಾಗಶ್ರೀಯೂ ಸೇರಿ, ಬನವಾಸಿಯ ಶಾಸನದಲ್ಲಿ ಕಂಡಂತೆ, ದಾನಮಾಡಿರುವುದು ವ್ಯಕ್ತವಾಗುವುದು. ಬಹುಶಃ ಈ ದಾನವು ಇವರ ಪಾಣಿಗ್ರಹಣ ಕಾಲದಲ್ಲಿ ಅಥವಾ ದ್ವಿತೀಯ ಪಟ್ಟಬಂಧನ ಮಹೋತ್ಸವ ಕಾಲದಲ್ಲಿ ಮಾಡಿದ್ದಾಗಿರಬಹುದು. ಆದ್ದರಿಂದಲೇ ಈ ಶಾಸನದಲ್ಲಿ ಉಭಯರ ಹೆಸರುಗಳೂ ಉಕ್ತವಾಗಿರುವುವು.

ಮಯೂರಶರ್ಮನ ಅಭ್ಯುದಯವನ್ನು ಸೂಚಿಸುವ ಈ ಶಾಸನದ ಕಾಲ ದಿಂದಲೇ, ಎಂದರೆ ಶಾಲಿವಾಹನ ಶಕ ೧೦೨ ಅಥವಾ ಕ್ರಿ. ಶ. ೧೮೦ನೆಯ ಸಂವತ್ಸರ ದಿಂದಲೇ ಕದಂಬರು ತಮ್ಮ ಕಾಲವನ್ನು ಪ್ರಾರಂಭಿಸಿರಬಹುದು. ಚಂದ್ರಹಾಸನು ಚಂದನಾವತಿಯಿಂದ ದಿಗ್ವಿಜಯಕ್ಕೆ ಹೊರಟಾಗ ಅವನಿಗೆ ೧೬ ವರ್ಷ ವಯಸ್ಸಾಗಿ ತ್ತೆಂದೂ, ಅಶ್ವಮೇಧ ಯಾಗಪಶುವನ್ನು ತಡೆದಾಗ ೩೦೦ ವರ್ಷ ವಯಸ್ಸಾಗಿತ್ತೆಂದೂ ಜೈಮಿನಿಯಲ್ಲಿ ಉಕ್ತವಾಗಿರುವುದು. ಇದು ಅತಿಶಯೋಕ್ತಿಯಾದರೂ, ದಿಗ್ವಿಜಯ ಕಾಲದಲ್ಲಿ ೨೦ ವರ್ಷ ವಯಸ್ಸಾಗಿತ್ತೆಂದೂ, ಅಶ್ವಮೇಧ ಯಾಗದ ಕುದುರೆಯನ್ನು ತಡೆದಾಗ ೯೦ ವರ್ಷ ವಯಸ್ಸಾಗಿದ್ದಿರಬಹುದೆಂದೂ ಹೇಳಿದರೆ ಅತಿಶಯೋಕ್ತಿಯಾಗ ಲಾರದು. ನಾನು ಬೇರೆ ಕಡೆ ನಿರ್ಧರಿಸಿರುವಂತೆ ಮಯೂರಶರ್ಮನೇ ಚಂದ್ರಹಾಸ ನೆಂದು ನಂಬುವುದಾದರೆ, ಸಮುದ್ರಗುಪ್ತನ ದಕ್ಷಿಣದೇಶದ ದಂಡಯಾತ್ರೆಯ ಕಾಲ ದಲ್ಲಿ, ಎಂದರೆ ಕ್ರಿ.ಶ. ೨೪೦ರಿಂದ ೨೫೪ನೆಯ ಸಂವತ್ಸರದೊಳಗೆ, ಮಯೂರಶರ್ಮನು ವೃದ್ಧನಾಗಿ ರಾಜ್ಯಭಾರಮಾಡುತ್ತಿದ್ದನೆಂದೂ, ಇವನ ಮಕ್ಕಳು ಯುವರಾಜರಾಗಿ ರಾಜ್ಯಭಾರದ ಕಲಾಪಗಳನ್ನು ಮಾಡುತ್ತಿದ್ದಿರಬಹುದೆಂದೂ ನಿರ್ಧರಿಸಬಹುದು.

ಸಮುದ್ರಗುಪ್ತನ ಅಲಹಾಬಾದು ಶಾಸನದಲ್ಲಿ ಕುಂತಳ ದೇಶವನ್ನು ಗೆದ್ದ ವಿಷಯವು ಹೇಳಿಲ್ಲ. ಶೂರನಾಗಿದ್ದ ಕನಕವರ್ಮ ಅಥವಾ ಕಂಗನವರ್ಮನು (ಮಯೂರಶರ್ಮನ ಮಗ) ಸಮುದ್ರಗುಪ್ತನ ಒಡೆತನವನ್ನು ಒಪ್ಪಿಕೊಳ್ಳದಿದ್ದರಿಂದ ಸಮುದ್ರಗುಪ್ತನ ಸಾಮಂತರಲ್ಲಿ ಅಗ್ರಗಣ್ಯನಾದ ಪೃಥ್ವಿಷೇಣನು ಈ ಕನಕವರ್ಮನ ಮೇಲೆ ದಂಡೆತ್ತಿ ಸೋಲಿಸಿಬಿಟ್ಟನು. ಕನಕವರ್ಮನು (ಚಂದ್ರಹಾಸನ ಮಗನಾದ ಕಂಜ್ಞಾವರ್ಮ) ರಾಜ್ಯಾಧಿಕಾರವನ್ನು ಮಗನಿಗೆ ಕೊಟ್ಟು ತಾನು ನಿವೃತ್ತನಾಗಿ ಕಾಲ ಕಳೆದನು.[20] ಚಂದ್ರಹಾಸನ ಮಕ್ಕಳಾದ ಪದ್ಮಾಕ್ಷ ಮಕರಧ್ವಜರೇ ಕುದುರೆ ಯನ್ನು ಕಟ್ಟಿದವರಾಗಿರುತ್ತಾರೆ. ಇದರಿಂದ ವೃದ್ಧನಾದ ಮಯೂರಶರ್ಮನು ಸಮುದ್ರಗುಪ್ತನ ಸಮಕಾಲೀನನೆಂದರೆ ಅತಿಶಯೋಕ್ತಿಯಾಗಲಾರದು.

ಅರ್ಜುನನು ವೃದ್ಧನಾದ ಚಂದ್ರಹಾಸನಿಗೆ ವಂದಿಸುವೆನು ಎಂದು ಹೇಳಿ ತನಗೆ ಚಂದ್ರಹಾಸನಲ್ಲಿರುವ ಗೌರವವನ್ನು ಸೂಚಿಸಿರುವನು.

ಇವುಗಳನ್ನೆಲ್ಲಾ ಪರಿಶೀಲಿಸುವುದರಿಂದ ಸಮುದ್ರಗುಪ್ತನ ವಿಜಯಯಾತ್ರೆ ಯಲ್ಲಿ ಅವನನ್ನು ಎದುರಿಸಿದ ಮಯೂರಶರ್ಮನ ಮತ್ತು ಆತನ ಮಕ್ಕಳ ಕಥೆಯನ್ನು ಜೈಮಿನಿ ಭಾರತದಲ್ಲಿ ಚಂದ್ರಹಾಸೋಪಾಖ್ಯಾನವಾಗಿ ಬಣ್ಣಿಸಿರ ಬಹುದೆಂದು ಹೇಳಬಹುದಾಗಿದೆ.

20 ಭಾರತ ಇತಿಹಾಸ ಪ್ರವೇಶಿಕಾ : ಮ॥ ಕೆ. ಕೃಷ್ಣಯ್ಯಂಗಾರ್ಯರು:

## ೧೦. ಸಾರಾಂಶ

ವಾಕಾಟಕ ಅಥವಾ ವಿಂಧ್ಯವಂಶದರಸನಾದ ರುದ್ರದೇವನನ್ನು ನೀಲಧ್ವಜನೆಂದೂ, ವನರಾಜ್ಯಾಧಿಪತಿಗಳನ್ನು ವ್ಯಾಘ್ರರಾಜನೆಂದೂ, ಕಂಚಿಯ ಪಲ್ಲವ ಸಮ್ರಾಜನಾದ ಶಿವಸ್ಕಂದವರ್ಮ ಮತ್ತು ಯುವರಾಜ ವಿಷ್ಣುಗೋಪರನ್ನು ಮಯೂರಧ್ವಜ ಮತ್ತು ತಾಮ್ರಧ್ವಜರೆಂದೂ, ಸೌರಾಷ್ಟ್ರದರಸನನ್ನು ವೀರವರ್ಮನೆಂದೂ, ಕುಂತಳದರಸಾದ ಮಯೂರಶರ್ಮನನ್ನು ಚಂದ್ರಹಾಸನೆಂದೂ ಹೆಸರುಗಳನ್ನು ಮಾರ್ಪಡಿಸಿ, ಸಮುದ್ರಗುಪ್ತನ ದಂಡಯಾತ್ರೆಯ ಕೆಲವು ಅಂಶಗಳನ್ನೂ, ಮಹಾಭಾರತದ ಅಶ್ವಮೇಧದ ಕೆಲವು ಅಂಶಗಳನ್ನೂ ಸೇರಿಸಿ ಜೈಮಿನಿ ಭಾರತ ಎಂಬ ಹೆಸರಿನಿಂದ ಈ ಗ್ರಂಥವನ್ನು ರಚಿಸಿರುವಂತೆ ಭಾಸವಾಗುತ್ತದೆ.

ಭರತಖಂಡದ ಇತಿಹಾಸದಲ್ಲಿ ಗುಪ್ತರ ಕಾಲವು ಸುವರ್ಣಯುಗವೆಂದು ಪ್ರಸಿದ್ಧವಾಗಿದೆ. ಗುಪ್ತ ಕಾಲಕ್ಕೆ ಮುಂಚೆ ರಾಜ್ಯಾಡಳಿತದಲ್ಲಿ ಬೌದ್ಧರ ಪ್ರಭಾವವು ಹೆಚ್ಚಾಗಿತ್ತು. ಹಿರಿಯ ಚಂದ್ರಗುಪ್ತನು ಬೌದ್ಧರಿಂದ ತಿರಸ್ಕರಿಸಲ್ಪಟ್ಟವನಾದ್ದರಿಂದ ಬೌದ್ಧರಿಗೆ ಎದುರಾಳಿಗಳಾದ ವೈದಿಕರ ಸಹಾಯವನ್ನು ಅಪೇಕ್ಷಿಸಿದನು. ಇವನೂ ಇವನ ವಂಶೀಕರೂ ಪರಮಭಾಗವತರಾಗಿ (ವಿಷ್ಣುಭಕ್ತರಾಗಿ) ವೈದಿಕ ಧರ್ಮವನ್ನುದ್ಧಾರಮಾಡಲು ಟೊಂಕಕಟ್ಟಿದರು. ಇವರು ವೈದಿಕ ಮತವನ್ನು ಉಜ್ಜೀವನಗೊಳಿಸಿದ್ದಲ್ಲದೆ, ರಾಮಾಯಣ ಮಹಾಭಾರತಗಳನ್ನೂ ಪುರಾಣಗಳನ್ನೂ ವಿಸ್ತಾರವಾಗಿ ಈಗಿರುವಂತೆ ಸಂಸ್ಕೃತದಲ್ಲಿ ರಚಿಸಲು ಸಹಾಯಮಾಡಿದರು. ಗುಪ್ತ ಸಮ್ರಾಜರ ಆಶ್ರಯವನ್ನು ಪಡೆದ ವೈದಿಕರು ತಮ್ಮ ಆಶ್ರಯದಾತರನ್ನು ಮೆಚ್ಚಿಸುವ ನೆವದಿಂದ ಆ ಸಮ್ರಾಜರ ವಿಜಯಸನ್ನಿವೇಶಗಳನ್ನೇ ಪುರಾಣ ಗ್ರಂಥಗಳಲ್ಲಿ ಮಿಶ್ರಣಮಾಡಿರುವರೆಂದು ಊಹಿಸಬಹುದು.

ಈ ಲೇಖನದಲ್ಲಿ ಅನೇಕ ಲೋಪದೋಷಗಳಿರುವುವೆಂದು ಈ ಲೇಖಕನು ಮನಗಂಡವನಾಗಿರುತ್ತಾನೆ. ಪಂಡಿತರು ಆಸಕ್ತಿಯಿಂದ ಈ ಕಡೆ ದೃಷ್ಟಿಯಿಟ್ಟು ಶೋಧನೆ ಮಾಡಿದಲ್ಲಿ ಹೆಚ್ಚಿನ ಸತ್ಯಾಂಶಗಳು ಹೊರಬೀಳುವುದರಲ್ಲಿ ಸಂದೇಹವಿಲ್ಲ. ಪಂಡಿತರು ಈ ಕೋರಿಕೆಗೆ ಗಮನಕೊಡಬೇಕೆಂದು ಬಿನ್ನಹ.

2

# ಕಾವ್ಯದೋಷಗಳು*

ಸಾಹಿತ್ಯ ವಿದ್ವಾನ್ ಶ್ರೀಮಾನ್ ಎಂ. ಎ. ನಾರಾಯಣ ಶಾಸ್ತ್ರಿಗಳು, ಬೆಂಗಳೂರು

---

ಕಾವ್ಯದೋಷಗಳನ್ನು ತಿಳಿವುದಕ್ಕೆ ಮುಂಚೆ ಕಾವ್ಯಸ್ವರೂಪವನ್ನು ತಿಳಿ[illegible] ಬೇಕು. ಕಾವ್ಯಕ್ಕೆ ಲಕ್ಷಣವನ್ನು ಅನೇಕ ವಿದ್ವಾಂಸರು ಅನೇಕ ವಿಧ[illegible] ಹೇಳಿದ್ದಾರೆ. ಸರ್ವಸಾಧಾರಣ ಲಕ್ಷಣವೇನೆಂದರೆ—ರಸಯುತವಾಗಿಯೂ, ದೋಷ[illegible] ರಹಿತವಾಗಿಯೂ, ಗುಣಸಹಿತವಾಗಿಯೂ, ರಸಾವಿರ್ಭಾವಕ್ಕೆ ಪ್ರತಿಬಂಧಕ[illegible] ಅಲಂಕಾರ ಸಂಮಿಲಿತವಾಗಿಯೂ ಇರುವ ಶಬ್ದಾರ್ಥಗಳೇ ಅಥವಾ ವಾಕ್ಯ[illegible] ಕಾವ್ಯವೆನಿಸುತ್ತದೆ. ಒಂದೊಂದೆಡೆಯಲ್ಲಿ ಅಲಂಕಾರವಿಲ್ಲದಿದ್ದರೂ ಇರಬಹು[illegible] ಕಾವ್ಯಕ್ಕೆ ರಸವು ಪ್ರಾಣಿಗೆ ಪ್ರಾಣದಂತೆ ಮುಖ್ಯವಾದುದು. ರಸಾನುಭವ[illegible] ಭಂಗ ತರುವ ಶಬ್ದಾರ್ಥಗೋಚರವಾದ ಕಾರಣವೇ ಕಾವ್ಯದೋಷವು. [illegible] ಶಬ್ದಗತವಾದ ಅಲ್ಪದೋಷವು ಹೇಗೆ ರಸಕ್ಕೆ ಭಂಗವನ್ನು ತರುತ್ತದೆ ಎ[illegible] ಕೆಲವರಿಗೆ ಶಂಕೆ ಹುಟ್ಟಬಹುದು. ಹೇಗೆಂದರೆ: ರಸಪ್ರತೀತಿಗೆ ವಿಭಾವಾ[illegible] ಗಳೇ ಆಧಾರವಾದುದರಿಂದಲೂ, ವಿಭಾವಾದಿಗಳು ವಾಕ್ಯಾಧೀನವಾದುದರಿಂ[illegible] ವಾಕ್ಯವು ಆಕಾಂಕ್ಷಾಸಹಿತ ಪದಸಮೂಹವಾದುದರಿಂದಲೂ, ಶಬ್ದಗಳ ಎ[illegible] ಪದಗಳ ಪ್ರಯೋಗದಲ್ಲಿಯೂ ಅರ್ಥದಲ್ಲಿಯೂ ಅಶುದ್ಧಗಳು ಬಿದ್ದರೆ—[illegible] ಕಟ್ಟಡದ ಅಸ್ತಿಭಾರದಲ್ಲಿ ದೋಷವಿದ್ದರೆ ಕಟ್ಟಡವು ಹೇಗೆ ದೃಢವಾಗಿ [illegible] ನಿಲ್ಲಲಾರದೋ ಹಾಗೆ—ರಸಾವಿರ್ಭಾವಕ್ಕೆ ತೊಡಕುಂಟಾಗಿ, ಕಾವ್ಯವೇ ದೋ[illegible] ಯುಕ್ತವಾಗುತ್ತದೆ. ಆದುದರಿಂದಲೇ ಆಚಾರ್ಯ ದಂಡಿಯು ಈ [illegible] ಹೇಳಿದ್ದಾನೆ :

> ತದಲ್ಪಮಪಿ ನೋಪೇಕ್ಷ್ಯಂ ಕಾವ್ಯೇ ದುಷ್ಟಂ ಕಥಂಚನ
> ಸ್ಯಾದ್ವಪುಸ್ಸುಂದರಮಪಿ ಶ್ವಿತ್ರೇಣೈಕೇನ ದುರ್ಭಗಮ್

ಶರೀರವು ಎಷ್ಟೇ ಸುಂದರವಾಗಿ ಕಂಡುಬಂದರೂ ಯಾವ ಭಾಗದಲ್ಲಾ[illegible] ಸ್ವಲ್ಪ ತೊನ್ನು ಹತ್ತಿದ್ದರೂ ಆ ಶರೀರವು ಹೇಗೆ ನಿಂದ್ಯವಾಗುವುದೋ ಹಾಗೆ[illegible] ದೋಷವು ಎಷ್ಟೇ ಅಲ್ಪವಾಗಲಿ ಕಾವ್ಯವು ನಿಂದ್ಯವೆನಿಸುವುದು.—ಹಾಗಾ[illegible] ಕಾವ್ಯದಲ್ಲಿ ದೋಷಬರುವ ಸಂಭವವು ಹೆಚ್ಚಾಗಿರುವುದರಿಂದ ಯಾವ ದೋಷ[illegible] ಬಾರದಂತೆ ಕಾವ್ಯವನ್ನು ರಚಿಸುವುದು ಅಸಾಧ್ಯವಲ್ಲವೇ? ಈಗ ಇರುವ ಕಾ[illegible] ಗಳೆಲ್ಲಾ ದೋಷರಹಿತವೇ?

> ಏಕೋ ಹಿ ದೋಷೋ ಗುಣಸನ್ನಿಪಾತೇ
> ನಿಮಜ್ಜತೀಂದೋಃ ಕಿರಣೇಷ್ವಿವಾಂಕಃ

ಎಂಬಂತೆ, ಗುಣಬಾಹುಳ್ಯದಿಂದ ಅಲ್ಪದೋಷಗಳು ಕಾಣದೆ ಹೋಗುವುದಿಲ್ಲವೆ? ಗುಣಗಳನ್ನು ಮಾತ್ರ ಗ್ರಹಿಸಿ ದೋಷಗಳನ್ನು ತಿರಸ್ಕರಿಸಲಾಗುವುದಿಲ್ಲವೆ?

---

* ಬೆಂಗಳೂರಿನಲ್ಲಿರುವ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಆಶ್ರಯದಲ್ಲಿ ಒ[illegible] ಕೊಟ್ಟ ಉಪನ್ಯಾಸ.

ಎಂಬ ಪ್ರಶ್ನೆಗಳು ಬರುವುದು ಸಹಜವಾಗಿದೆ. ಇವಕ್ಕೆ ಶಾಸ್ತ್ರಕಾರರು ಈ ರೀತಿಯಾಗಿ ಸಮಾಧಾನವನ್ನು ಹೇಳುತ್ತಾರೆ: ದೋಷವು ಗುಣಬಾಹುಳ್ಯದಲ್ಲಿ ಮಗ್ನವಾಗಿ ಕಾಣದೆ ಹೋಗುತ್ತದೆಂಬುದು ಕಾವ್ಯಕ್ಕೆ ಅನ್ವಯಿಸುವುದಿಲ್ಲ. ಮನುಷ್ಯನಿಗೆ ಕಾಲಿನಲ್ಲಿ ಮುಳ್ಳು ಚುಚ್ಚಿಕೊಂಡರೆ ಅದನ್ನು ತೆಗೆದುಹಾಕುವವರೆಗೂ ಅದನ್ನು ಮರೆತು ಪಠನ ಪಾಠನ ಲೇಖನಾದಿ ಕಾರ್ಯಗಳಲ್ಲಿ ಮನದಣಿವಂತೆ ನಿರತನಾಗಿರಲು ಎಷ್ಟೇ ಪ್ರಯತ್ನಮಾಡಿದರೂ ಹೇಗೆ ಸಾಧ್ಯವಲ್ಲವೋ, ಹಾಗೆಯೇ ದೋಷಯುಕ್ತ ಕಾವ್ಯದಲ್ಲಿ ರಸವಿದ್ದರೂ ಅದರ ಪೂರ್ಣಪ್ರಕಾಶಕ್ಕೆ ದೋಷಗಳು ಅಡಚಣೆಗಳನ್ನು ಒಡ್ಡುತ್ತವೆ.

ಫಲಿತಾಂಶವೇನೆಂದರೆ, ಜನ್ಮಾಂತರ ಸಂಸ್ಕಾರಜನ್ಯ ಕವಿತಾಧೋರಣೆಯಿಲ್ಲದವರು ಕಾವ್ಯಕಲೆಯನ್ನು ಬಹುಕಾಲ ಅಭ್ಯಾಸಮಾಡತಕ್ಕುದು ಆವಶ್ಯಕ. ಮಳೆಗಾಲದಲ್ಲಿ ನಾಯಿಕೊಡೆಗಳು ಹೇರಳವಾಗಿ ಹುಟ್ಟುವಂತೆ ನೀರಸವಾದ, ದೋಷಭೂಯಿಷ್ಠವಾದ ಕಾವ್ಯಗಳು—ಕಾವ್ಯಗಳೇ ? ಅಲ್ಲ, ಪದ್ಯಪ್ರಬಂಧಗಳು—ಭಾಷೆಯಲ್ಲಿ ಹೆಚ್ಚಾಗಿ ಪ್ರಕಾಶವಾದರೆ ಪ್ರಯೋಜನವೇನು? ಕವಿಕುಲಗುರುವಾದ ಕಾಳಿದಾಸನು ಕಾವ್ಯಕಲಾಭ್ಯಾಸ ವಿಷಯದಲ್ಲಿಯೂ ಕಾವ್ಯವು ವಿದ್ವತ್ಸಮ್ಮತವಾಗಿರಬೇಕೆಂಬ ವಿಷಯದಲ್ಲಿಯೂ ಎಷ್ಟು ಚೆನ್ನಾಗಿ ಹೇಳಿದ್ದಾನೆ:

ಆಪರಿತೋಷಾದ್ವಿದುಷಾಂ ನ ಸಾಧುಮನ್ಯೇ ಪ್ರಯೋಗವಿಜ್ಞಾನಂ
ಬಲವದಪಿ ಶಿಕ್ಷಿತಾ ನಾಮಾತ್ಮನ್ಯ ಪ್ರತ್ಯಯಂ ಚೇತಃ

ಎಂದೂ,

ತಂಸಂತಃ ಶ್ರೋತುಮರ್ಹನ್ತಿ ಸದಸದ್ವ್ಯಕ್ತಿ ಹೇತವಃ
ಹೇಮ್ನಃ ಸಂಲಕ್ಷ್ಯತೇಹ್ಯಗ್ನೌ ವಿಶುದ್ಧಿಃ ಶ್ಯಾಮಿಕಾಪಿ ವಾ

ಎಂದೂ ಹೇಳಿರುವುದನ್ನು ನೋಡಿದರೆ ಎಷ್ಟು ಆಶ್ಚರ್ಯವಾಗುತ್ತದೆ? ಸಂಸ್ಕೃತ ವ್ಯಾಕರಣವು ತನ್ನ ಕಾಲಕ್ಕೆ ನೂರಾರು ವರ್ಷಗಳ ಹಿಂದಿನದಾಗಿದ್ದರೂ, ಕೆಲವು ಕಾವ್ಯಲಕ್ಷಣ ಗ್ರಂಥಗಳೂ ತನ್ನ ಕಾಲಕ್ಕೆ ಹಿಂದಣವಾಗಿದ್ದರೂ ಕಾಳಿದಾಸನು ಅವಕ್ಕೇ ಗೌರವವನ್ನು ಕೊಟ್ಟು ತದವಿರುದ್ಧವಾಗಿಯೇ ತನ್ನ ಕಾವ್ಯಗಳನ್ನು ರಚಿಸಿ ಕವಿವರನೆಂದೆನಿಸಿಕೊಂಡನಲ್ಲವೇ!

"ವಿದ್ವಾನ್ ವಿಪಶ್ಚಿದ್ದೋಷಜ್ಞಃ" ಎಂದು ಅಮರಸಿಂಹನು ಹೇಳಿದಂತೆ, ವಿದ್ವಾಂಸನಿಗೆ ದೋಷಜ್ಞಾನ ಆವಶ್ಯಕವೇ ಸರಿ. ಲೋಕದಲ್ಲಿ ಯಾವ ಯುಗದಲ್ಲೇ ಆಗಲಿ ಜ್ಞಾನಿಗಳು ಕಡಮೆ, ಅಜ್ಞಾನಿಗಳೇ ಹೆಚ್ಚು. ಅಜ್ಞಾನಿಗಳು ಜ್ಞಾನಕ್ಕಾಗಿ ಜ್ಞಾನಿಗಳನ್ನು ಅನುಸರಿಸಬೇಕು, ಅನುಕರಿಸಲೂ ಬೇಕು. ಇದು ಲೋಕನ್ಯಾಯ. ವಿದ್ವಾಂಸರು ಆಚರಣೆಯ ಮೂಲಕ ತಮ್ಮ ಶ್ರೇಷ್ಠತೆಯನ್ನು ಕಾಪಾಡಿಕೊಳ್ಳಲೇಬೇಕು. ವಿದ್ಯಾವಂತನೂ ಕೇವಲ ಪಾಮರನಂತೆ ನಡೆವುದಾದರೆ ಲೋಕಪ್ರತಿಷ್ಠೆ ಏನಾದೀತು? ಆದುದರಿಂದಲೇ ಶ್ರೀಕೃಷ್ಣನೂ

ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ
ಸಂಮತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ

ಎಂಬುದಾಗಿ ಶ್ರೇಷ್ಠನೇ ಲೋಕಕ್ಕೆ ಉದಾಹರಣೆಯೆಂದು ಉಪದೇಶ ಮಾಡಿದ್ದಾನೆ. ಈ ದಿವ್ಯೋಕ್ತಿಯು ಪಾರಮಾರ್ಥಿಕ ಧರ್ಮಕ್ಕೆ ಮಾತ್ರ ಸಂಬಂಧಪಟ್ಟುದಲ್ಲ; ಲೌಕಿಕ ಸಾಹಿತ್ಯ ಪ್ರಪಂಚಕ್ಕೂ ಅನ್ವಯಿಸತಕ್ಕದ್ದು. ಆದಕಾರಣ ವ್ಯಾಕರಣ ವಿರುದ್ಧ ಪ್ರಯೋಗ, ಛಂದೋದೋಷ, ಕವಿಸಮಯ, ಕವಿಸಂಪ್ರದಾಯಕ್ಕೆ ವಿರುದ್ಧವಾದ ಪ್ರಯೋಗ, ಅರ್ಥಗತ ದೋಷ—ಇವೇ ಮುಂತಾದ ಕಾರಣಗಳಿಂದ ಅಪಕೃಷ್ಟವಾದ ಪದ್ಯಗಳನ್ನಾಗಲಿ ಗದ್ಯಗಳನ್ನಾಗಲಿ ಯಾರಾದರೂ ಬರೆದರೆ ಆದರೆ, ಅಂಥವರು ಭಗವದ್ವಾಕ್ಯಕ್ಕೆ ವಿರುದ್ಧವಾಗಿ ನಡೆದುಕೊಂಡಂತಲ್ಲವೆ?

ಒಂದುವೇಳೆ ಕಾವ್ಯವನ್ನು ನಿರ್ದೋಷವಾಗಿ ಬರೆಯಲು ಮಾನವನಿಗೆ ಅಸಾಧ್ಯವೆಂಬ ಪಕ್ಷವನ್ನೇ ಇಟ್ಟುಕೊಳ್ಳೋಣ. ಹಾಗೂ ಧ್ಯೇಯವು ಉಚ್ಚವಾಗಿರ ಬೇಡವೇ? ಧ್ಯೇಯವು ಎಷ್ಟು ಉಚ್ಚವಾಗಿದ್ದರೆ ಕವಿಯ ಪ್ರಯತ್ನದ ಫಲವೂ ಅಷ್ಟೇ ಶ್ರೇಷ್ಠವೂ ಉನ್ನತವೂ ಆಗುವುದಿಲ್ಲವೇ? ಖಂಡಿತವಾಗಿಯೂ ಆಗ ಬೇಕು. ಈ ಉದ್ದೇಶದಿಂದಲೇ ಅಲ್ಲವೇ ವ್ಯಾಕರಣ, ಛಂದೋಲಕ್ಷಣ, ಕಾವ್ಯ ಲಕ್ಷಣ ಮುಂತಾದ ಲಕ್ಷಣಗ್ರಂಥಗಳನ್ನೊಳಗೊಂಡಿರುವಷ್ಟು ಪ್ರೌಢಿಮೆಯ ಪಡೆದಿರುವ ಗೀರ್ವಾಣ ಕರ್ನಾಟಕಾದಿ ಭಾಷೆಗಳಲ್ಲಿ ಕವಿವರರನೇಕರು ... ಮಾನವಾಗಿದ್ದ ಆ ಗ್ರಂಥಗಳ ನಿಯಮಗಳನ್ನೇ ಅನುಸರಿಸಿ ಕಾವ್ಯಗಳನ್ನು ಬರೆದವರಾದರು?

## ಕಾವ್ಯದೋಷ ವಿಭಾಗ

ಕಾವ್ಯವು ಶಬ್ದಾರ್ಥಮಯವಾದುದರಿಂದ ಕಾವ್ಯದ ನಿಕೃಷ್ಟತೆಗೆ ಕಾರಣವಾದ ದೋಷಗಳು ಶಬ್ದಗತವೆಂದೂ, ಅರ್ಥಗತವೆಂದೂ ಎರಡು ವಿಧಗಳು. ಶಬ್ದ ದೋಷಗಳಲ್ಲೂ ಪದಗತವೆಂದೂ, ವಾಕ್ಯಗತವೆಂದೂ ಎರಡು ಬಗೆಗಳು.

ಪದಗತ ದೋಷಗಳು ಹದಿನೇಳೆಂದು ದಿಕ್ಪ್ರದರ್ಶನಾರ್ಥವಾಗಿ ಆಲಂಕಾರಿಕರು ನಿಶ್ಚಯಿಸಿದ್ದಾರೆ:—(೧) ಅಪ್ರಯುಕ್ತ, (೨) ಅಪುಷ್ಟಾರ್ಥ, (೩) ಅಸಮರ್ಥ, (೪) ನಿರರ್ಥಕ, (೫) ನೇಯಾರ್ಥ, (೬) ಸಂದಿಗ್ಧ, (೭) ಚ್ಯುತಸಂಸ್ಕಾರ, (೮) ಅಪ್ರಯೋಜಕ, (೯) ಕ್ಲಿಷ್ಟ, (೧೦) ಗೂಢಾರ್ಥಕ, (೧೧) ಗ್ರಾಮ್ಯ, (೧೨) ಅನ್ಯಾರ್ಥಕ, (೧೩) ಅವಿಮೃಷ್ಟವಿಧೇಯಾಂಶ, (೧೪) ಅಪ್ರತೀತ, (೧೫) ವಿರುದ್ಧಮತಿಕೃತ್ ಅಥವಾ ವಿರುದ್ಧಾರ್ಥಪ್ರತಿಪಾದಕ ಪದ, (೧೬) ಅಶ್ಲೀಲ, (೧೭) ಪರುಷ.

ವಾಕ್ಯಗತ ದೋಷಗಳೂ ಅರ್ಥಗತ ದೋಷಗಳೂ ಬೇರೆ ಇವೆ. ಇವೆಲ್ಲ ಸೋದಾಹರಣ ವಿವರಣೆ ಇಲ್ಲಿ ಸಾಧ್ಯವಿಲ್ಲ. ಮೇಲೆ ಕಾಣಿಸಿರುವ ಹದಿನೇಳು ಪದಗತ ದೋಷಗಳ ಸ್ವರೂಪವನ್ನೂ ಉದ್ದೇಶವನ್ನೂ ಮಾತ್ರ ಯಥಾಮತಿ ಯಥಾಲಬ್ಧ—ಸೂಕ್ಷ್ಮರೀತಿಯಲ್ಲಿ ವಿವರಿಸಲಾಗುವುದು.

### ೧. ಅಪ್ರಯುಕ್ತ

"ಯದಪ್ರಯುಕ್ತಂ ಕವಿಭಿಃ ಅಪ್ರಯುಕ್ತಂ ತದುಚ್ಯತೇ."—ಪ್ರಸಿದ್ಧ ರಾದ ಅಥವಾ ಈಗಿನ ಕಾವ್ಯದೋಷಜ್ಞರಾದ ಮಹಾಕವಿಗಳಿಂದ ಕಾವ್ಯಗಳಲ್ಲಿ

ಅಪ್ರಯುಕ್ತವಾದ ಪದಗಳು ಪ್ರಯೋಗಿಸಲ್ಪಟ್ಟರೆ ಅಪ್ರಯುಕ್ತವೆಂಬ ದೋಷವು ಬರುವುದು. ಈ ಪದಗಳು ಕೋಶಗಳಲ್ಲಿರಬಹುದು; ಇದ್ದರೂ ಮಹಾಕವಿಗಳಿಂದ ಅನಾದೃತಗಳಾಗಿರುವುದರಿಂದ ಅವು ಈಗಲೂ ಅನಾದೃತಗಳೇ. ಕಾವ್ಯದಲ್ಲಿ ಈ ದೋಷವಿದ್ದರೆ ಅರ್ಥವು ಬೇಗನೆ ವಾಚಕರ ಮನಸ್ಸಿಗೆ ಹೊಳೆಯಲಾರದು. ಅರ್ಥಾವಗತಿಯು ಕ್ಲಿಷ್ಟವಾಗುವುದು. ಉದಾಹರಣೆಗಾಗಿ ೧೯೩೭ನೆಯ ವರುಷದ ಮೈಸೂರು ಎಸ್.ಎಸ್.ಎಲ್.ಸಿ. ಕನ್ನಡ ಪಠ್ಯಪುಸ್ತಕದಲ್ಲಿ "ಶಂಕರಾಚಾರ್ಯ" ಎಂಬ ಹೆಸರುಳ್ಳ ಕವಿತೆಯ ಭಾಗವನ್ನು ಪರಿಶೀಲಿಸಬಹುದು:

ಮೋಹವೆಂಬ ತೃಣದ ಕಣವ
ಜ್ಞಾನದಗ್ನಿಯುಲಿ ದಹಿಸಿ
ಯೋಗಿಯಾದ ಪರಮಗುರುವು
ಕುರಿಯ ಮರಿಯ ಮೋಹದಿಂದ
ನೋಡುತಿದ್ದುದನ್ನು ಕಂಡು
ನಯನದೊರತೆಯೊಡೆದು, ನೀರು
ಸುರಿದು ಹರಿದುಹೋಯಿತು!

ಇಲ್ಲಿ 'ತೃಣದ ಕಣವ' ಎಂಬ ಪದಪ್ರಯೋಗದಲ್ಲಿ ಅಪ್ರಯುಕ್ತವೆಂಬ ದೋಷವು ಸ್ಪಷ್ಟವಾಗಿದೆ. ಹೇಗೆಂದರೆ, 'ಕಣ' ಶಬ್ದಕ್ಕೆ ಲವ ಅಥವಾ ಲೇಶ ಎಂಬರ್ಥವಿದ್ದರೂ 'ಅಗ್ನಿಕಣ,' 'ಜಲಕಣ' (ನೀರಿನ ಕಣ) ಮುಂತಾದುವುಗಳಲ್ಲಿಯೇ 'ಕಣ' ಶಬ್ದವು ರೂಢವು. 'ತೃಣ' ಶಬ್ದದ ಜತೆಯಲ್ಲಿ ರೂಢವಲ್ಲ. ಅಲ್ಲದೆ ವೇದಾಂತ ಶಾಸ್ತ್ರಪ್ರಕಾರವಾಗಿ—ಅದರಲ್ಲಿಯೂ ಶ್ರೀ ಶಂಕರಾಚಾರ್ಯಾನುಮತ ವೇದಾಂತ ಶಾಸ್ತ್ರರೀತಿಯಾಗಿ—ಮೋಹ, ಅಜ್ಞಾನ, ಭ್ರಮೆ ಈ ಪದಗಳಿಂದ ಸೂಚಿತವಾದ ಅವಿದ್ಯೆಯೇ ಜಗತ್ತಿನ ಎಲ್ಲಾ ವ್ಯವಹಾರಕ್ಕೂ ಅಥವಾ ಸಂಸಾರಕ್ಕೂ ಕಾರಣವಾಗಿದೆ.

ಸಮಸ್ತವಾದ ಭೌತಿಕ ಸೃಷ್ಟಿಗೂ ಈ ಮೋಹವೇ—ಅನಾದ್ಯವಿದ್ಯೆಯೇ ಮೂಲವು. ಇದು ಬಹಳ ದೊಡ್ಡದು. ಹುಲ್ಲುಕಡ್ಡಿಯಂತೆ ಅಲ್ಪವಾದುದಲ್ಲ. ಪರಂತು ಅಪಾರವೂ ದುರ್ಜಯವೂ ಆದ ಮೋಹವು ಸೌದೆ, ಬೆರಣಿ, ಹುಲ್ಲು ಮೊದಲಾದ ಸಾಧಾರಣ ವಸ್ತುಗಳಂತೆ ಸುಲಭವಾಗಿ ಉರಿದುಹೋಗುವ ವಸ್ತುವಲ್ಲ. ಆದಕಾರಣ 'ತೃಣದ ಕಣವ' ಎಂಬ ಪದದ್ವಯಕ್ಕೆ ಪ್ರತಿಯಾಗಿ ವೈಪುಲ್ಯ ಮಹತ್ತ್ವಾದಿ ಸೂಚಕವಾದ ಪದವನ್ನು ಪ್ರಯೋಗಿಸಿರಬೇಕಾಗಿದ್ದಿತು ಎಂಬುದು ರಸಜ್ಞರಿಗೆ ಸುವೇದ್ಯವಾಗಿದೆ.

ಈ ದೋಷವನ್ನು ಗಮನಿಸದೆ ಶಬ್ದಪ್ರಯೋಗ ಮಾಡುತ್ತಾಹೋದರೆ ರಸಾಭಾಸವೊಂದೇ ಆಗುವುದಲ್ಲದೆ ಕರ್ನಾಟಕ ಭಾಷಾ ಪ್ರಭೇದಗಳ ಏಕೀಕರಣಕ್ಕೂ ಹಾನಿ ಬರುತ್ತದೆ. ಈ ನ್ಯಾಯವು ಭಾರತ ಭಾಷೆಗಳಿಗೆ ಮಾತ್ರವೇ ಅನ್ವಯಿಸುವುದಿಲ್ಲ. ಆಂಗ್ಲ ಭಾಷೆಯಲ್ಲಿಯೂ 'ಬಳಕೆ' (usage) ಎಂಬ ವ್ಯವಹಾರವುಂಟು. ಮೇಲೆ ವಿವರಿಸಿದ ಅಭಿಪ್ರಾಯಗಳನ್ನು ಮನಸ್ಸಿನಲ್ಲಿಟ್ಟುಕೊಂಡೇ ಪೂಜ್ಯನಾದ ಭಟ್ಟಾಕಳಂಕನು—

ಗ್ರಂಥಕರ್ತೄಣಾಮೇವ ಮಹಾಜನತ್ವಾತ್, ಪಾಮರಾಣಾಮಪಶಬ್ದ ... ಏವ ವ್ಯವಹಾರಃ ಅವ್ಯುತ್ಪನ್ನತ್ವಾತ್. ಅನ್ಯಥಾ ತೇ ಪಂಡಿತಾ ಏವಸ್ಯುಃ—ಇತಿ ... ಶಬ್ದಾದ್ಲಿಪಿ (ಅರ್ಥಾತ್ ಕಾರ್ಣಾಟಕಾಃ ಶಬ್ದಾಃ) ಅನುಶಾಸನಾರ್ಹಾ ಏವೇತಿ. ಎಂಬ ವಾಕ್ಯರತ್ನವನ್ನು ಕನ್ನಡಿಗರಿಗೆ ಕೊಟ್ಟಿರುವನು.

## ೨. ಅಪುಷ್ಟಾರ್ಥ

"ಪ್ರಕೃತಾನುಪಯುಕ್ತಾರ್ಥಮಪುಷ್ಟಾರ್ಥಂ ತದುಚ್ಯತೇ"—... ಪ್ರಕೃತಕ್ಕೆ ಅಥವಾ ವರ್ಣನೀಯವಾದ ಅಂಶಕ್ಕೆ ಅಪ್ರಯೋಜಕವಾದ ಅರ್ಥ... ಪದವನ್ನು ಪ್ರಯೋಗಿಸಿದರೆ 'ಅಪುಷ್ಟಾರ್ಥ'ವೆಂಬ ದೋಷವುಂಟಾಗುತ್ತ... ಉದಾಹರಣೆ:— ೧೯೩೮ನೆಯ ವರುಷದ ಮೈಸೂರು ಎಸ್. ಎಸ್. ಎಲ್... ಪರೀಕ್ಷೆಯ ಪಠ್ಯಪುಸ್ತಕದಲ್ಲಿರುವ 'ತಪಸ್ವಿನೀ' ಎಂಬ ಕವಿತೆಯಲ್ಲಿ ಈ ಮುಂ... ಸಾಲುಗಳು ದೊರೆಯುತ್ತವೆ:

> ಎಲೆ ಜೀವ! ಅಗಲಿಕೆಯ ವೇದನೆಯು ಅನುಭವಕೆ
> ಬರಲಿಲ್ಲ; ಸೈರಣೆಯೆ ಇನಿದಾಯ್ತು ನಿನಗೆ.
> ಅಭಿಮಾನ ಬಲದಿ ಸೈರಣೆಯು ಅನುಭವಮಾಯ್ತು;
> ಅನುಭವದ ವಿಶ್ರಾಂತಿಯೇ ಶಾಂತಿಯೊದವಿಸಿತು.

ಊರ್ಮಿಳೆಯು ತನ್ನ ಪತಿಯಾದ ಲಕ್ಷ್ಮಣನ ಅಗಲಿಕೆಯ ಕಾಲವನ್ನು ಬೇಸ... ವಿಲ್ಲದೆ ತಪಸ್ಸಿನಲ್ಲಿ ಕಳೆದು ಪುನಃ ಪತಿಯ ನೆನಪುಂಟಾಗಲು ಮೇಲಣ ಸಾ... ಗಳಿಂದ ಸೂಚಿತವಾದ ಅರ್ಥವನ್ನು ಹೇಳಿಕೊಳ್ಳುತ್ತಾಳೆ.

"ಅನುಭವದ ವಿಶ್ರಾಂತಿಯೇ ಶಾಂತಿಯೊದವಿಸಿತು" ಎಂಬ ಈ ಪದ್ಯ... ಯಲ್ಲಿ "ವಿಶ್ರಾಂತಿಯೇ" ಎಂಬ ಪದದ ಪ್ರಯೋಗದಿಂದ ಅಪುಷ್ಟಾರ್ಥವೆಂ... ದೋಷವು ಸಿದ್ಧವಾಯಿತು; ಸೈರಣೆಯ ಅನುಭವವು ಚಿತ್ತಕ್ಕೆ ಶಾಂತಿಯ... ತರುವುದೇ ವಿನಾ ಆ ಅನುಭವದ ವಿರಾಮವಾಗಲಿ ಅಥವಾ ಅಭಾವವಾಗಲಿ ಶಾಂ... ಯನ್ನು ತರುವುದಿಲ್ಲವೆಂಬುದು ಸೂಕ್ಷ್ಮಮತಿಗಳಿಗೆ ಸುಬೋಧ್ಯವಾಗಿರುತ್ತದೆ.

ಇಷ್ಟೇ ಅಲ್ಲದೆ, "ವಿಪರೀತಾರ್ಥಧೀರ್ಯಸ್ಮಾದ್ವಿರುದ್ಧಮತಿಕೃನ್ನತತ್" ಎಂಬ ಲಕ್ಷಣಾನುಸಾರವಾಗಿ ಈ 'ವಿಶ್ರಾಂತಿ' ಶಬ್ದಪ್ರಯೋಗದಿಂದ ಮತ್ತೊಂದು ಪದಗತ ಕಾವ್ಯದೋಷವೂ ಸಿದ್ಧವಾಗುತ್ತದೆ. ಅದಾವುದೆಂದರೆ 'ವಿರುದ್ಧಮತಿಕೃತ್' ಎಂಬುದೇ. ಸೈರಣೆಯ ಅಭ್ಯಾಸ—ಅನುಭವ—ಇದರಿಂದ ಶಾಂತಿ ಉಂಟಾಗುತ್ತದೆಂಬುದು ಲೋಕಾನುಭವ. ಇದಕ್ಕೆ ವಿಪರೀತ ಅಥವಾ ವಿರುದ್ಧ... ಭಾವವು ಈ ಪಂಕ್ತಿಯಿಂದ ವಾಚ್ಯವಾಗುತ್ತದೆ. ಪ್ರಯುಕ್ತವಾದ ಪದವು ಒಂದೇ ಆದರೂ ಪದಜನ್ಯದೋಷಗಳೆರಡಾದುವು.

## ೩. ಅಸಮರ್ಥ

"ಯೋಗಮಾತ್ರ ಪ್ರಸಿದ್ಧಂ ಯದಸಮರ್ಥಂ ತದುಚ್ಯತೇ".—ಎಂದ... ಅವಯವ ಶಕ್ತಿಯಿಂದ ಬರುವ ಅರ್ಥವು ರೂಢಿಯಲ್ಲಿ ಇಲ್ಲದಿರುವುದರಿಂದ ಯಾ...

ಎಂದರೆ ರೂಢಿಯಲ್ಲಿರುವ ಅರ್ಥಕ್ಕೆ ವಿರುದ್ಧವಾಗಿ ಅಥವಾ ಭಿನ್ನವಾಗಿ ಒಂದು ಪದವನ್ನು ಪ್ರಯೋಗಿಸಿದರೆ ಅಸಮರ್ಥವೆಂಬ ದೋಷವು ಸಂಕ್ರಮಿಸುತ್ತದೆ.

ಉದಾಹರಣೆ:—'ಜಲಧರ' ಶಬ್ದವನ್ನು ಸಮುದ್ರವೆಂಬ ಅರ್ಥದಲ್ಲಿ ಪ್ರಯೋಗಿಸಿದರೆ ಅಸಮರ್ಥವೆಂಬ ದೋಷವು ಬರುತ್ತದೆ. ಜಲವನ್ನು ಧರಿಸುವುದು ಜಲಧರವು ಎಂಬ ಯೌಗಿಕಾರ್ಥ ಪ್ರಕಾರ 'ಜಲಧರ' ಶಬ್ದದಿಂದ ಸಮುದ್ರವು ವಾಚ್ಯವಾದಂತೆ ತೋರಿಬಂದರೂ ರೂಢಿಯಲ್ಲಿ ಆ ಅರ್ಥವಿರದೆ ಮೇಘವೆಂಬ ಅರ್ಥವೇ ಪ್ರಸಿದ್ಧವಾಗಿದೆ. ಆದುದರಿಂದ ಸಮುದ್ರಾರ್ಥದಲ್ಲಿ 'ಜಲಧರ' ಶಬ್ದವು ಪ್ರಯೋಗಾರ್ಹವಾಗಲಾರದು. ಇದಕ್ಕೆ ಕನ್ನಡದಲ್ಲಿ ಉದಾಹರಣೆಯು ೧೯೩೬ನೆಯ ಇಸವಿಯ ಮೈಸೂರು ಎಸ್.ಎಸ್.ಎಲ್.ಸಿ. ಪಠ್ಯಪುಸ್ತಕದಲ್ಲಿ 'ಸೊಹ್ರಾಬ್ ಮತ್ತು ರುಸ್ತುಂ' ಎಂಬ ಕವಿತೆಯಲ್ಲಿ ದೊರೆಯುತ್ತದೆ:

ವೀರಬಾಲನನಂತು ನೋಡಿದನು ರುಸ್ತುಮನು;
ನೆಟ್ಟದಿಟ್ಟಯಲಂತು ನೆರೆ ನೋಡಿ ವೀರ್ಯವನು
ಹೊರಸೂಸಿ ಚೆಲ್ಲಿಸುವ ಕಲಿತನಕೆ ಬೆರಗಾದನು.

ದ್ರವಪದಾರ್ಥದಲ್ಲೇ ರೂಢಿಯಾಗಿ ಅನ್ವಯಿಸುವ 'ಚೆಲ್ಲು' ಎಂಬ ಕ್ರಿಯೆಯು 'ವೀರ್ಯ' ಶಬ್ದದೊಡನೆ ಅನ್ವಯವಾದರೆ (ಇಲ್ಲಿ ಹಾಗೆಯೇ ಅನ್ವಯವೂ ಇದೆ) ಅಶ್ಲೀಲ ಅಥವಾ ಗ್ರಾಮ್ಯಾರ್ಥವನ್ನೇ ಸ್ಪಷ್ಟಪಡಿಸುವುದು. ಏತಕ್ಕೆಂದರೆ, 'ವೀರ್ಯ' ಶಬ್ದಕ್ಕೆ ರೇತಸ್ಸೆಂಬರ್ಥವೂ ರೂಢಿಯಲ್ಲಿದೆ. ಅಲ್ಲದೆ ಹೊರಸೂಸಿ ಚೆಲ್ಲು ಎಂಬ ಕ್ರಿಯೆಯೂ ಇದೇ ಅರ್ಥವನ್ನೇ ದೃಢೀಕರಿಸುತ್ತದೆ. ಆದುದರಿಂದ ಇಲ್ಲಿ ಅಸಮರ್ಥವೆಂಬೊಂದೇ ದೋಷವಲ್ಲದೆ ವ್ರೀಡಾಕರವಾದ ಅಶ್ಲೀಲವೆಂಬ ದೋಷವೂ ವ್ಯಕ್ತವಾಗಿದೆ.

### ೪. ನಿರರ್ಥಕ

"ಪಾದಪೂರಣಮಾತ್ರಂ ಯತ್ತನ್ನಿರರ್ಥಕಮುಚ್ಯತೇ".—ಪದ್ಯದ ಪಾದವನ್ನು ಪೂರೈಸುವುದು ಮಾತ್ರವೇ ಪ್ರಯೋಜನವಾಗಿದ್ದು ಅರ್ಥಪುಷ್ಟಿಯನ್ನು ಕೊಡದೇ ಇರುವ ಶಬ್ದಪ್ರಯೋಗಕ್ಕೆ 'ನಿರರ್ಥಕ'ವೆಂದು ಹೆಸರು. ೧೯೩೬ನೆಯ ವರ್ಷದ ಮೈಸೂರು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಗೊತ್ತಾಗಿದ್ದ ಪಠ್ಯ ಪುಸ್ತಕದಲ್ಲಿ "ಕುಮಾರವ್ಯಾಸ" ಎಂಬ ಶಿರೋನಾಮವುಳ್ಳ ಕವಿತೆಯಲ್ಲಿ ಈ ಭಾಗ ದೊರೆಯುತ್ತದೆ:

ಕುಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು!
ಭಾರತ ಕಣ್ಣಲಿ ಕುಣಿಯುವುದು; ಮೈಯ್ಯಲಿ
ಮಿಂಚಿನ ಹೊಳೆ ತುಳುಕಾಡುವುದು!
ಆ ಕುರುಭೂಮಿಯ ತೋರುವುದು;
ಆ ರಣರಂಗದಲಿ,
ಆ ಸಂಗ್ರಾಮದಲಿ,
ಪಟುಭಟರಾರ್ಭಟ ಕೇಳುವುದು!

ಮೇಲೆ ಉದಾಹರಿಸಿರುವ ೬–೭ನೆಯ ಸಾಲುಗಳಲ್ಲಿ 'ಆ ರಣರಂಗದಲಿ' ಎಂಬೊಂದೇ

ಪದವು ಸಾಕಾಗಿದ್ದಿತು; ಪುನಃ ಅದೇ ಅರ್ಥವುಳ್ಳ 'ಆ ಸಂಗ್ರಾಮದಲಿ' ಎಂದು ಹೇಳಿರುವುದಕ್ಕೆ ಕೇವಲ ಪಾದಪೂರಣವೇ ಅಥವಾ ಪದ್ಯ ಪ್ರಬಂಧದ ಪೂರಣವೇ ಪ್ರಯೋಜನವಾಗಿದೆ. ಆದುದರಿಂದ 'ನಿರರ್ಥಕ'ವೆಂಬ ಕಾವ್ಯದೋಷವು ಸಿದ್ಧವಾಯಿತು.

## ೫. ನೇಯಾರ್ಥ

"ಸ್ವಸಂಕೇತ ಪ್ರಕ್ಲಪ್ತಾರ್ಥಂ ನೇಯಾರ್ಥಂ ಪರಿಕೀರ್ತ್ಯತೇ".—ಪ್ರಯುಕ್ತವಾದ ಶಬ್ದದ ಅರ್ಥವು ತನ್ನ ಉದ್ದೇಶಕ್ಕೆ ಅವಿರುದ್ಧವಾಗಿ ಕಂಡುಬಂದರೂ ವಾಚಕರ ಮನಸ್ಸಿನಲ್ಲಿ ಭಿನ್ನಾರ್ಥವನ್ನುಂಟುಮಾಡುವುದಾದರೆ "ನೇಯ" ಅಥವಾ "ನೇಯಾರ್ಥ" ಎಂಬ ದೋಷವು ಸಿದ್ಧವಾಗುವುದು. ಆ ಶಬ್ದಕ್ಕೆ ಅರ್ಥವು ಕವಿಸಂಕೇತದಿಂದ ಸಿದ್ಧಿಸುತ್ತದೆಯೇ ಹೊರತು ಲೋಕಸಂಕೇತ ಸಿದ್ಧವಲ್ಲ. ಆದುದರಿಂದ ಕವಿಯ ವಿವಕ್ಷಿತಾರ್ಥವು ಎಲ್ಲಾ ವಾಚಕರಿಗೂ ಬೇಗನೆ ಹೊಳೆಯು ವುದಿಲ್ಲವಾದುದರಿಂದಲೂ, ಅಲ್ಲದೆ ಭಾಷೆಯ ಉದ್ದೇಶವೇ ಅಥವಾ ಲೋಕ ವ್ಯವಹಾರದ ಉದ್ದೇಶವೇ ಪರಸ್ಪರ ಬೋಧೆಯಾದುದರಿಂದಲೂ ಕವಿತಾಭ್ಯಾಸಿಗಳು ಗದ್ಯಪದ್ಯ ಗ್ರಂಥಕಾರರೂ ಈ ದೋಷವನ್ನು ಎಷ್ಟು ಗಮನಿಸಿದರೂ ಸಾಲದು.

ಉದಾಹರಣೆ:—೧೯೩೬ನೆಯ ವರುಷದ ಮೈಸೂರು ಎಸ್.ಎಸ್.ಎಲ್.ಸಿ. ಪಠ್ಯಪುಸ್ತಕದಲ್ಲಿರುವ 'ಜೋಗ' ಎಂಬ ಕವಿತೆಯ ಈ ಮುಂದಣ ಸಾಲುಗಳನ್ನು ಗಮನಿಸಬಹುದು:

. . . . . . ನಡುನಡುವೆಯಲಿ  
ಹೆಮ್ಮರಗಳೆಡೆಯೊಳಿಹ ಕಿರುಗುಡಿಸಲೂರುಗಳು;  
ಬನದ ಮರೆಯಜ್ಞಾತವಾಸದಲಿ ತಪಗೈವ  
ಮಲೆನಾಡಿನೊಂದು ಮನೆ ಹಳ್ಳಿಗಳು; ಅಲ್ಲಲ್ಲಿ. . . .

ಈ ಸಾಲುಗಳಲ್ಲಿ ಕವಿಯ ವಿವಕ್ಷಿತಾರ್ಥವೇನೆಂದರೆ: ಜೋಗ ಜಲಪಾತವನ್ನು ನೋಡುವ ಕುತೂಹಲವುಳ್ಳ ಒಂದು ವಿನೋದಯಾತ್ರಿಕರ ಗುಂಪು ಮೋಟಾರಿನಲ್ಲಿ ಕುಳಿತು ಬೆಳಗ್ಗೆ ಶಿವಮೊಗ್ಗೆಯಿಂದ ಹೊರಟಾಗ ಅವರಿಗೆ ದಾರಿಯಲ್ಲಿ ಉದ್ದಕ್ಕೂ ಕಂಡುಬಂದ ಪ್ರಕೃತಿ ದೃಶ್ಯದ ವರ್ಣನೆಯ ಸಂದರ್ಭದಲ್ಲಿ ಈ ಸಾಲುಗಳು ಬಂದಿವೆ. ಅರ್ಥ: ನಡುನಡುವೆ ದೊಡ್ಡ ದೊಡ್ಡ ಮರಗಳ ತೋಪಿನ ನಡುವೆ ಸಣ್ಣ ಸಣ್ಣ ಗುಡಿಸಲುಗಳುಳ್ಳ ಊರುಗಳಿರುವುವು. ಇವಾದರೋ ಕಾಡಿನ ಮರೆಯಲ್ಲಿ ಯಾರಿಗೂ ಕಾಣದಂತಿರುತ್ತಾ ತಪಸ್ಸು ಮಾಡುತ್ತಿರುವಂತೆ ತೋರುವ, ಎಂದರೆ ನಾಗರಿಕ ಕೋಲಾಹಲ ಶೂನ್ಯವಾದ ಮಲೆನಾಡಿನ ಒಂದೇ ಮನೆಯುಳ್ಳ ಹಳ್ಳಿಗಳಾಗಿವೆ ಎಂಬುದು ವಿವಕ್ಷಿತವು. ಈ ಅಭಿಪ್ರಾಯವು ವಾಚಕರ ಮನಸ್ಸಿನಲ್ಲಿ ಥಟ್ಟನೆ ಹೊಳೆಯದೆ, ಮನನಶೀಲರಾಗಿ ತಪಸ್ಸು ಮಾಡುತ್ತಿರುವ ಮುನಿಗಳಿಂದೊಡಗೂಡಿದ ಆಶ್ರಮಗಳಾಗಿವೆ ಎಂಬ ಭಾವವು ಹೊಳೆವುದಕ್ಕೆ ಯಾವ ಅಡ್ಡಿಯೂ ಇಲ್ಲ. ಆದುದರಿಂದ ಕವಿಯ ವಿವಕ್ಷಿತಾರ್ಥವು ಸ್ವಸಂಕೇತ ಸಿದ್ಧವಾಯಿತು. ಈ ಕಾರಣ ದಿಂದ ಮೇಲೆ ಉದಾಹರಿಸಿರುವ ಸಾಲುಗಳಲ್ಲಿ 'ತಪಗೈವ' ಎಂಬ ಶಬ್ದಪ್ರಯೋಗ ದಿಂದ ನೇಯಾರ್ಥವೆಂಬ ದೋಷವು ಸ್ಪಷ್ಟವಾಗಿದೆ.

## ೬. ಸಂದಿಗ್ಧ

ನೇಯಾರ್ಥಕ್ಕೆ ಕೊಟ್ಟಿರುವ ಉದಾಹರಣೆಯೇ ಸಂದಿಗ್ಧವೆಂಬ ದೋಷಕ್ಕೂ ಉದಾಹರಣೆಯಾಗುವುದು. ವಾಚಕರ ಮನಸ್ಸಿನಲ್ಲಿ ವೈಕಲ್ಪಿಕವಾಗಿ ಉಭಯಾರ್ಥವೂ ಹೊಳೆವುದರಿಂದ ವಾಕ್ಯವು ಸಂಶಯಾತ್ಮಕವಾಯಿತು. ಆದುದರಿಂದ ಸಂದಿಗ್ಧವೆಂಬ ಕಾವ್ಯದೋಷವು ಪ್ರಾಪ್ತವಾಗುತ್ತದೆ. ಇದಕ್ಕೆ ಲಕ್ಷಣ— "ಸಂದಿಗ್ಧ ತನ್ಮತಂ ಯತ್ಸ್ಯಾತ್ ಸಂದಿಗ್ಧಾರ್ಥಪ್ರತೀತಿಕೃತ್" ಎಂದರೆ, ಸಂಶಯಕ್ಕೆ ಕಾರಣವಾದ ಅರ್ಥವು ಶಬ್ದಪ್ರಯೋಗದಿಂದ ಸಿದ್ಧವಾದರೆ ಸಂದಿಗ್ಧವೆಂಬ ಕಾವ್ಯದೋಷವು ಏರ್ಪಡುತ್ತದೆ.

## ೭. ಚ್ಯುತಸಂಸ್ಕಾರ

"ಶಬ್ದ ಶಾಸ್ತ್ರವಿರುದ್ಧಂ ಯಚ್ಚ್ಯುತಸಂಸ್ಕಾರಮುಚ್ಯತೇ".—ವ್ಯಾಕರಣಶಾಸ್ತ್ರಕ್ಕೆ ವಿರುದ್ಧವಾಗಿ ಶಬ್ದವನ್ನು ಪ್ರಯೋಗಿಸಿದರೆ 'ಚ್ಯುತಸಂಸ್ಕಾರ'ವೆಂಬ ಕಾವ್ಯದೋಷವು ಸಿದ್ಧವಾಗುತ್ತದೆ. ಉದಾಹರಣೆ: ೧೯೩೫ನೆಯ ವರ್ಷದ ಮೈಸೂರು ಎಸ್.ಎಸ್.ಎಲ್.ಸಿ. ಪಠ್ಯಗ್ರಂಥದ 'ಕುಮಾರವ್ಯಾಸ' ಎಂಬ ಕವಿತೆಯಲ್ಲಿ ಈ ಸಾಲುಗಳು ಬಂದಿರುತ್ತವೆ:

ತಾಗುವ ಗದೆಗಳ ಸಂಘಟ್ಟಣೆಯಲಿ,
ರಥಚಕ್ರಧ್ವನಿ ಚೀತ್ಕಾರದಲಿ,
ಸಾಯ್ವರ ಶಾಪದಲಿ,
ಬೀಳ್ವರ ತಾಪದಲಿ,....

ಇಲ್ಲಿ 'ಸಾಯ್ವರ' ಎಂಬ ಪದವು ವ್ಯಾಕರಣಶಾಸ್ತ್ರ ಪ್ರಕಾರ ಅಶುದ್ಧವಾದುದು. ಅಲ್ಲದೆ ಮಹಾಕವಿಪ್ರಯೋಗವಿರುದ್ಧವೂ ಆಗಿದೆ. ಹೇಗೆಂದರೆ 'ಸಾ' ಎಂಬುದು ಧಾತು. 'ವ' ಎಂಬುದು ಭವಿಷ್ಯತ್ಕಾಲಸೂಚಕ ವಿಕರಣಪ್ರತ್ಯಯ. 'ಸಾವರ' ಎಂದಾಗಬೇಕು. ಹೊಸಗನ್ನಡದಲ್ಲಿ ಇದೇ ಧಾತು 'ಸಾಯು' ಎಂದಾಗುತ್ತದೆ. ಆಗ 'ಸಾಯುವವರ' ಎಂದಾಗಬೇಕು. ಶಿಷ್ಟಸಮ್ಮತವಾದ, ವ್ಯಾಕರಣಸಿದ್ಧವಾದ 'ಸಾವರ,' 'ಸಾಯುವವರ' ಎಂಬ ಪ್ರಯೋಗಗಳಿಗೆ ಪ್ರತಿಯಾಗಿ 'ಸಾಯ್ವರ' ಎಂದು ಪ್ರಯೋಗವಾಗಿರುವುದರಿಂದ 'ಚ್ಯುತಸಂಸ್ಕಾರ'ವೆಂಬ ದೋಷವು ಈ ಕಾವ್ಯವನ್ನು ಬಿಡಲಾಗದು.

## ೮. ಅಪ್ರಯೋಜಕ

"ತದಪ್ರಯೋಜಕಂ ಯತ್ಸ್ಯಾದವಿಶೇಷ ವಿಧಾಯಕಮ್".—ಅರ್ಥವಿಶೇಷವನ್ನು ಸೂಚಿಸದೇ ಇರುವ ಶಬ್ದವನ್ನು ಪ್ರಯೋಗಿಸಿದರೆ 'ಅಪ್ರಯೋಜಕ'ವೆಂಬ ಕಾವ್ಯದೋಷವು ಉಂಟಾಗುತ್ತದೆ. ಉದಾಹರಣೆ: ೧೯೩೬ನೆಯ ಇಸವಿಯ ಮೈಸೂರು ಎಸ್.ಎಸ್.ಎಲ್.ಸಿ. ಪಠ್ಯಗ್ರಂಥದಲ್ಲಿರುವ 'ಜೋಗ'ವೆಂಬ ಹೆಸರಿನ ಕವಿತೆಯಲ್ಲಿ ಈ ಸಾಲುಗಳು ದೊರೆಯುತ್ತವೆ:

ಮಡಿವಾಳ, ಕಾಜಾಣ, ಮಿಾಂಚುಳ್ಳಿ, ಕಾಮಳ್ಳಿ,
ಗಿಳಿಯು, ಕೋಗಿಲೆ, ಬಿಳಿಯ ಕೊಕ್ಕರೆಯೆ ಮೊದಲಾದ....

ಇಲ್ಲಿ ಉಕ್ತವಾಗಿರುವ ಹಕ್ಕಿಗಳೊಳಗೆ ಕೊಕ್ಕರೆಗೆ 'ಬಿಳಿಯ' ಎಂಬ ವಿಶೇಷಣವನ್ನು ಹಾಕಿರುವುದಕ್ಕೆ ಸಾರ್ಥಕತೆ ಚಿಂತ್ಯವಾಗಿದೆ. ಸಾಧಾರಣವಾಗಿ ಕೊಕ್ಕರೆ ಗಳೆಲ್ಲಾ ಬಿಳಿಯವೇ ಆಗಿರುವುದರಿಂದ ಈ ವಿಶೇಷಣವು ವಿಶೇಷ ವಿಧಾಯಕವಲ್ಲ. ಆದುದರಿಂದ 'ಅಪ್ರಯೋಜಕ' ವೆಂಬ ಕಾವ್ಯದೋಷವು ತಾನಿದ್ದೇನೆಂದು ಉದ್ಘೋಷಿಸುತ್ತದೆ.

## ೯. ಕ್ಲಿಷ್ಟ

"ಕ್ಲಿಷ್ಟಂ ತದರ್ಥಾವಗತಿರ್ದೂರದೂರಾಯತೋ ಭವೇತ್".—ಅರ್ಥಬೋಧೆ ಯಾಗಲು ಬಹಳ ದೂರವಾದ ಆಲೋಚನೆ ಬೇಕಾದರೆ 'ಕ್ಲಿಷ್ಟ' ವೆಂಬ ದೋಷವು ಪ್ರಾಪ್ತವಾಗುವುದು. ೧೯೩೩ನೆಯ ಇಸವಿಯ ಮೈಸೂರು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಗೊತ್ತಾಗಿರುವ ಪಠ್ಯ ಪುಸ್ತಕದಲ್ಲಿ 'ಯದುಮಣಿಯ ಜನುಮದಿನ' ಎಂಬ ಕವಿತೆಯಲ್ಲಿ ಈ ಪದ್ಯವು ಬರುತ್ತದೆ. ಇದು ವಾರ್ಧಿಕ ಷಟ್ಪದಿಯಲ್ಲಿ ರಚಿತ ವಾಗಿದೆ:

ನುಂಗುತಲಿ ಮಲಗೆದ್ದು ಹಳೆ ದಿನದ ದುಗುಡಗಳ
ಸಂಗಡಲೆ ಚಿಗಿದೆದ್ದು ಗಂಡಭೇರುಂಡವದು
ಕಂಗಳಿಗೆ ಭರವಸೆಯ ಜೋತಿಯೆರಡೆನುವಂತೆ ಮಿಾಯುತಿರೆ ಆಗಸದಲಿ
ಕೆಂಗಿರಣದಲಿ ಮಿಂದು ಯದುಮಣಿಯ ಮನಮಿಂದು
ಸಿಂಗರಿಸಿ ಕೈಬಿಗಿದ ಜನವೃಂದವನು ಬಿಗಿದು
ಕಂಗಳಾಹೊಳಹಿನಲಿ! ಕಂಬನಿಯ ಮಿಡಿಯೆ! ನವಜೀವಕಾದಿಯಿದು! ಎನಲು

ಎಂದರೆ, ಶ್ರೀಮನ್ಮಹಾರಾಜರವರ ಸರ್ಕಾರದ ಪತಾಕೆಯಲ್ಲಿರುವ ಗಂಡಭೇರುಂಡವು ಹಿಂದಣ ದಿನದ ಕಷ್ಟಗಳನ್ನೆಲ್ಲಾ ನುಂಗಿ, ಮಲಗಿ, ಚಿಗಿದೆದ್ದು ಕಣ್ಣುಗಳಿಗೆ (ಯಾರ? ಜನರ ಎಂದಿರಬಹುದೆ?) ಪ್ರಕಾಶವನ್ನುಂಟುಮಾಡುವ ಎರಡು ದೀಪಗಳೋ ಎಂಬಂತೆ ಆಕಾಶದಲ್ಲಿ ಮಿಾಯುತ್ತಿರಲು (ಅಲ್ಲಾಡುತ್ತಿರಲು ಎಂದು ಭಾವವಿರಬಹುದು), ಈ ದಿನ—ಎಂದರೆ ಶ್ರೀಮನ್ಮಹಾರಾಜರ ವರ್ಧಂತಿಯ ದಿನವು ಆ ಮಹನೀಯರ ಮನಸ್ಸು ಕೆಂಪಾದ ಕಿರಣಗಳಲ್ಲಿ ಸ್ನಾನಮಾಡಿ, ಶೃಂಗಾರಮಾಡಿ ಕೊಂಡು, ನಮಸ್ಕರಿಸುತ್ತಿರುವ ಜನಸಮೂಹವನ್ನು ತನ್ನ ಕಣ್ಣುಗಳ ಕಾಂತಿ ಗಳಿಂದಲೇ ಆಲಿಂಗಿಸಿ, ಈ ದಿನದ ಮೊದಲು ಹೊಸ ಬಾಳ್ವೆಗೆ ಆರಂಭವನ್ನು ಸೂಚಿಸುತ್ತದೋ ಎಂಬಂತೆ ಸ್ವಾಮಿಭಕ್ತರಾದ ಪ್ರಜೆಗಳು ಕಂಬನಿ ಬಿಡುತ್ತಿರುವ —ಎಂದು ಮೇಲಣ ಪದ್ಯಕ್ಕೆ ಅರ್ಥವನ್ನು ಹೇಳಬೇಕಾಗಿ ತೋರುವುದು. ಈ ಅರ್ಥವನ್ನು ವಿವರಿಸುವ ಮಹಾಪ್ರಯತ್ನದಲ್ಲಿ ನನ್ನಂತಹ ವಿಶೇಷಾನಭಿಜ್ಞನಿಗೆ ಮುಂದಣ ಪ್ರಶ್ನೆಗಳು ಉದ್ಬುದ್ಧವಾಗುತ್ತವೆ:—(೧) ಮನಸ್ಸು ಸ್ನಾನಮಾಡುವುದು ಎಂದರೇನು? ಮನಸ್ಸಿಗೆ ಕಣ್ಣುಗಳುಂಟೆ? (೨) ಕೆಂಗಿರಣಗಳಲ್ಲಿ ಸ್ನಾನಮಾಡು ವುದು—ಇದರ ಉದ್ದೇಶವೇನು? ಬಿಳಿಯ ಕಿರಣಗಳು ಸತ್ತ್ವಗುಣಸೂಚಕವು, ಕೆಂಗಿರಣಗಳು ರಜೋಗುಣಸೂಚಕವು ಎಂದು ದೊಡ್ಡವರು ಹೇಳುವುದನ್ನು ಕೇಳಿದ್ದೇವೆ. ಪ್ರಜಾವಾತ್ಸಲ್ಯಪೂರಿತವಾದ ಶ್ರೀಮನ್ಮಹಾರಾಜರ ಚಿತ್ತವು

ಈ ಉಲ್ಲಾಸದ ಸಮಯದಲ್ಲಿ ರಜೋಗುಣ ಪ್ರಧಾನವಾಗಿದ್ದಿತು ಎಂದು ವರ್ಣಿಸುವುದರಲ್ಲಿ ಔಚಿತ್ಯವೇನು? (೩) ಗಂಡಭೇರುಂಡದ ಎರಡು ತಲೆಗಳು ಜನಗಳ ಕಣ್ಣುಗಳಿಗೆ ಭರವಸೆಯಿಂದ ಪ್ರಕಾಶವನ್ನುಂಟುಮಾಡುವ ಎರಡು ಜ್ಯೋತಿಗಳೋ ಎಂಬಂತಿರುವುವು—ಈ ಉತ್ಪ್ರೇಕ್ಷೆಯ ಸ್ವಾರಸ್ಯವೇನು?

ಇಷ್ಟು ಸಂದೇಹಗಳಿಗೆ ಎಡೆಗೊಟ್ಟಿರುವ ಪದ್ಯಕ್ಕೆ 'ಸ್ಥಿತಸ್ಯಗತಿಃ ಕಲ್ಪನೀಯಾ' ಎಂಬ ನ್ಯಾಯವನ್ನನುಸರಿಸಿ ಸಮಯೋಚಿತವಾದ ದೂರಾನ್ವಯಸಿದ್ಧವಾದ ಬಹುಪ್ರಯತ್ನಸಾಧ್ಯವಾದ ಅರ್ಥವನ್ನು ಮಾಡಬೇಕಾಗಿದೆ. ಈ ಕಾರಣಗಳಿಂದ ಈ ಪದ್ಯವು 'ಕ್ಲಿಷ್ಟ'ವೆಂಬ ದೋಷಕ್ಕೆ ಗುರಿಯಾಗಿದೆ ಎಂಬುದು ಕಾವ್ಯಕಲಾಭಿಜ್ಞರಾದ ನಿರ್ಮತ್ಸರರಾದ ವಿಮರ್ಶಕರಿಗೆ ಸುಗ್ರಾಹ್ಯವಾಗಿದೆ.

## ೧೦. ಗೂಢಾರ್ಥಕ

"ಪ್ರಯುಕ್ತಯಪ್ರಸಿದ್ಧಾರ್ಥೇ ಗೂಢಾರ್ಥಂಪರಿಕೀರ್ತ್ಯತೇ".—ಅಪ್ರಸಿದ್ಧವಾದ ಅರ್ಥದಲ್ಲಿ ಒಂದು ಪದವನ್ನು ಪ್ರಯೋಗಿಸಿದರೆ 'ಗೂಢಾರ್ಥ'ವೆಂಬ ದೋಷವು ಜನಿಸುವುದು. ೧೯೩೪ಲನೆಯ ಇಸವಿಯ ಮೈಸೂರು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಗೊತ್ತಾಗಿರುವ ಕನ್ನಡ ಪದ್ಯಸಂಗ್ರಹದ 'ತಪಸ್ವಿನೀ' ಎಂಬ ಪದ್ಯದಲ್ಲಿ ಈ ಸಾಲುಗಳು ದೊರೆಯುತ್ತವೆ:

> ಬಾರೆನ್ನ ಪ್ರೇಮ ಬಂಧುವೆ! ಸೊಬಗಿನಿರವೆ!
> ಬರಲಿಲ್ಲವೋ? ದುಷ್ಟಕಂದನಿನ್ನೂ ಬಳಿಗೆ?
> ಮರುಗದಿರು; ಮರುಗದಿರು; ಅರಸಿ ಕರಸುವೆನು.
> ಅಂಜಲೇನಾಗಿಹುದು? ಕೈಮೀರಿ ಪೋದುದೇ?
> ಆಗು ದುಗುಡವ ಕಂದ! ತೊಳಲುವುದು ತರವಲ್ಲ.

ಪತಿಯ ವಿರಹವು ಊರ್ಮಿಳೆಯ ನೆನಪಿಗೆ ಬಂದು ಚಿಂತಿಸುತ್ತಿದ್ದಾಗ ತನ್ನ ಮುದ್ದು ಕಂದನನ್ನಗಲಿ ಚಿಂತಿಸುತ್ತಿದ್ದ ಒಂದು ಚಿಗರಿಯು ತವಕದಿಂದ ಆಕೆಯ ಬಳಿಗೆ ಬಂದು ನಿಟ್ಟಿಸಿ ನೋಡುತ್ತಿರುವುದು; ಆಗ ಊರ್ಮಿಳೆಯು ಮೇಲೆ ಉದಾಹರಿಸಿದ ಸಮಾಧಾನೋಕ್ತಿಗಳನ್ನು ಹೇಳಿ ಸಹಾನುಭೂತಿಯನ್ನು ತೋರಿಸುತ್ತಾಳೆ ಎಂಬುದೇ ಕಥಾಸಂದರ್ಭ. ಇಲ್ಲಿ "ಆಗು ದುಗುಡವ ಕಂದ!" ಎಂದು ಪ್ರಯೋಗವಿದೆ. ಇದಕ್ಕೆ ಅರ್ಥವು—ಸ್ವಲ್ಪ ಕಾಲವಿದ್ದು ಮಾಯವಾಗುವ ದುಃಖವನ್ನು ಸೈರಿಸು ಎಂದು ಹೇಳಬೇಕಾಗಿದೆ. ಹೀಗೆ ಅರ್ಥ ಮಾಡಿದರೆ ಮಾಯವಾಗುವ ಅಥವಾ ಹೋಗಿಬಿಡುವ ಎಂಬರ್ಥದಲ್ಲಿ ಆಗು ಎಂಬ ಶಬ್ದವನ್ನು ಪ್ರಯೋಗಿಸಿದಹಾಗಾಯಿತು.

ಈ ಅರ್ಥವು 'ಆಗು' ಎಂಬ ಶಬ್ದಕ್ಕೆ ಪ್ರಸಿದ್ಧವಾಗಿಲ್ಲ. ಆದಕಾರಣ 'ಗೂಢಾರ್ಥ'ವೆಂಬ ಕಾವ್ಯದೋಷವು ಅಪರಿಹಾರ್ಯವಾಗಿದೆ. ಇಷ್ಟೇ ಅಲ್ಲದೆ 'ಆಗು ದುಗುಡವ' ಎಂಬುದನ್ನು ಸಮಾಸ ಪದದಂತೆ ಸ್ವೀಕರಿಸಬೇಕಾಗಿದೆ. ಹಾಗೆ ಸ್ವೀಕರಿಸಿದರೆ 'ಚ್ಯುತಸಂಸ್ಕಾರ'ವೆಂಬ ದೋಷವು ತಲೆದೋರುವುದು. ಆಗುವ ಲಾಭ, ಆಗುವ ನಷ್ಟ ಎಂಬುದಾಗಿ ಭಾಷೆಯಲ್ಲಿ ರೂಢಿಯಿದೆಯೇ ಹೊರತು ಆಗು ನಷ್ಟ, ಆಗು ದುಗುಡ—ಮೊದಲಾದ ಪ್ರಯೋಗಗಳು ರೂಢಿಯಲ್ಲಿಲ್ಲ. ಇವೆಲ್ಲಾ

ಅಪಶಬ್ದಗಳು. 'ಪ್ರಯೋಗ ಶರಣಾಃ ವೈಯಾಕರಣಾಃ' ಎಂಬ ವಿದ್ವಜ್ಜನ ಪ್ರಸಿದ್ಧವಾದ ಸೂಕ್ತಿಯನ್ನು ಮರೆಯಲಾಗದಷ್ಟೆ. ಭಾಷೆಯ ರೂಢಿಗೂ ಸಂಪ್ರದಾಯಕ್ಕೂ ವಿರುದ್ಧವಾಗಿ ಹೊಸತಾಗಿ ಒಂದು ವ್ಯಾಕರಣವನ್ನು ಮಾಡಲಾಗದು. ವೈಯಾಕರಣರೂ ಕೂಡ ಮಹಾಕವಿಪ್ರಯೋಗಗಳಿಗೆ ಅನುಸಾರವಾಗಿ ವ್ಯಾಕರಣ ಶಾಸ್ತ್ರವನ್ನು ರಚಿಸಿದ್ದಾರೆಯೇ ಹೊರತು ಸ್ವೇಚ್ಛೆಯಿಂದ ಮಾಡತೊಡಗಲಿಲ್ಲ.

## ೧೧. ಗ್ರಾಮ್ಯ

"ಪಾಮರ ವ್ಯವಹಾರೈಕ ಪ್ರಸಿದ್ಧಂ ಗ್ರಾಮ್ಯಮುಚ್ಯತೇ".—ಬರ್ತೀನಿ, ಹೋಗುತೀನಿ, ಅಂತಾರೆ, ಮೊದಲಾದ ಪ್ರಯೋಗಗಳು ಮಹಾಕವಿಪ್ರಯುಕ್ತ ವಲ್ಲ. ಇವು ಗ್ರಾಮ್ಯಗಳು. "ಅವನತಿಗೆ ಬಾಳನ್ನು ಕೂಲಿಸಿದೆವಮ್ಮ"—ಇಲ್ಲಿ 'ಕೂಲಿಸಿದೆವು' ಎಂಬುದು ಪಾಮರರ ವ್ಯವಹಾರದಲ್ಲಿ ಮಾತ್ರ ಕಂಡುಬರುತ್ತದೆ. ಕನ್ನಡ ಭಾಷೆಯ ಮಹಾಕಾವ್ಯಗಳಲ್ಲಿ ಇದರ ಪ್ರಯೋಗವು ದೊರೆವಂತೆ ತೋರು ವುದಿಲ್ಲ. ಅಲ್ಲದೆ ತೆಲುಗು ಭಾಷೆಯನ್ನು ಸ್ವಲ್ಪವಾದರೂ ತಿಳಿಯದಿರುವ ಅಚ್ಚಗನ್ನಡಿಗರಿಗೆ ಈ ಪದವು ಅರ್ಥವಾಗಲಾರದು. ಪ್ರಕೃತದಲ್ಲಿ 'ಕೂಲಿಸಿದೆವು' ಎಂಬ ಪದಕ್ಕೆ ಪ್ರತಿಯಾಗಿ 'ಬೀಳಿಸಿದೆವು' ಎಂಬ ಪದವಿದ್ದಿದ್ದರೆ ಗ್ರಾಮ್ಯವೆಂಬ ದೋಷವು ಬರುತ್ತಿರಲಿಲ್ಲವೆಂಬುದು ಸೂಕ್ಷ್ಮಮತಿಗಳಿಗೆ ಸುಗ್ರಾಹ್ಯವೇ ಎಂದು ತೋರುತ್ತದೆ.

## ೧೨. ಅನ್ಯಾರ್ಥಕ

"ಯದ್ರೂಢಿ ಪ್ರಚ್ಯುತಂ ನಾಮ ತದನ್ಯಾರ್ಥಮುದಾಹೃತಮ್".—ಎಂದರೆ ಯಾವುದಾದರೂ ಒಂದು ಶಬ್ದಕ್ಕೆ ಒಂದರ್ಥವು ಅಥವಾ ಅನೇಕಾರ್ಥಗಳು ಪ್ರಸಿದ್ಧ ವಾಗಿರುತ್ತವೆ. ಆ ಅರ್ಥಗಳಿಗೆ ಭಿನ್ನವಾದ ಅರ್ಥವು ಆ ಶಬ್ದಪ್ರಯೋಗದಿಂದ ಹೊಳೆವುದಾದರೆ 'ಅನ್ಯಾರ್ಥ' ಅಥವಾ, ಕೆಲ ಮಂದಿ ಆಲಂಕಾರಿಕರ ಮತದಲ್ಲಿ, 'ಅವಾಚಕ'ವೆಂಬ ಕಾವ್ಯದೋಷವು ಜನಿಸುತ್ತದೆ. ಇದಕ್ಕೆ ಉದಾಹರಣೆ: 'ಇಂಗ್ಲಿಷ್ ಗೀತಗಳು' ಎಂಬ ಹೆಸರಿನಿಂದ ಶೋಭಿತವಾದ ಪುಸ್ತಕದಲ್ಲಿ ೨೦ನೆಯ ಪುಟದಲ್ಲಿ "ಹೇಳದಿರು ಹೋರಾಡಿ ಫಲವಿಲ್ಲವೆಂದು" ಎಂಬ ಶಿರೋನಾಮದ ಕವಿತೆಯಲ್ಲಿ ದೊರೆಯುತ್ತದೆ:

ಬೆಳಗಾಗ ಮೂಡದೆಸೆ ಬಾಗಿಲೊಳೆ ಬರದು,
ಬೆಳಕು ತಾ ಬರುವಂದು, ಹೊಸ ಬೆಳಕು ಹರಿದು;
ಮುಂದೆ ಮೆಲ್ಲಗೆ ಮೆಲ್ಲಗೇರುವುದು ಹೊತ್ತು—
ಹಿಂದೆ ಪಡುವಲು ನೋಡು—ನೆಲದ ಸಂಪತ್ತು!

ರಣರಂಗದಲ್ಲಿ ಹೋರಾಡುತ್ತಿರುವ ಒಬ್ಬ ಭಟನು ಹಗೆಗಳು ಹೆಚ್ಚಾಗಿ ಬಲವುಳ್ಳವರಾದುದರಿಂದ ತಾನು ಎಷ್ಟು ಹೊತ್ತು ಕಾದಿದರೂ ತನ್ನ ತೋಳುಗಳಿಗೆ ಬರಿಯ ಶ್ರಮವೇ ಫಲವಲ್ಲದೆ ಜಯವೆಂಬ ಫಲವು ದೊರೆಯಲಾರದು ಎಂದು ನಿರ್ವಿಣ್ಣನಾಗಿ ತನ್ನ ಕರ್ತವ್ಯವನ್ನುಪೇಕ್ಷಿಸಲಾಗದು. ತಾನು ಮಾಡುವ ಪ್ರಯತ್ನವು ಎಷ್ಟೋ ಅಲ್ಪವೆಂದು ತನಗೆ ತೋರಿದರೂ ಒಂದು ವೇಳೆ ಜಯವಾದರೆ

ತಾನೂ ತನ್ನ ಕರ್ತವ್ಯ ಮಾತ್ರ ನಿರ್ವಹಣದಿಂದ ಆ ಜಯಕ್ಕೆ ಕಾರಣನಾಗುವನೆಂಬ ಭಾವವನ್ನು ದೃಷ್ಟಾಂತದ ಮೂಲಕ ವಿವರಿಸುವ ಸಂದರ್ಭದಲ್ಲಿ ಈ ಮೇಲಣ ಪದ್ಯವು ರಚಿತವಾಗಿದೆ.

ಪದ್ಯದ ಅರ್ಥ—ಸೂರ್ಯನು ಉದಯಿಸುವಾಗ ಅವನ ಪ್ರಕಾಶವು ಪೂರ್ವ ದಿಕ್ಕಿನಲ್ಲೇ ಅಲ್ಲದೆ ಅಥವಾ ಪೂರ್ವ ದಿಕ್ಕಿನ ಬಾಗಿಲುಗಳ ಮೂಲಕವೇ ಅಲ್ಲದೆ ಪಶ್ಚಿಮ ದಿಕ್ಕಿನಲ್ಲಿಯೂ ವ್ಯಾಪಿಸುತ್ತದೆ. ಹಾಗೆಯೇ ಒಬ್ಬ ಸೈನಿಕನು ದೊಡ್ಡ ಕಾಳಗದಲ್ಲಿ ಒಂದೇ ಕಡೆ ಕಾದುತ್ತಿದ್ದರೂ ಅವನ ಹೋರಾಟದ ಫಲವು ತಾನು ಯುದ್ಧಮಾಡದೆ ಇರುವ ಪ್ರದೇಶಗಳಲ್ಲಿಯೂ ವ್ಯಾಪಿಸುತ್ತದೆ. ಸಂಪೂರ್ಣ ಜಯಕ್ಕೆ ಅವನೂ ಕಾರಣವಾಗುವನು ಎಂದು ಭಾವವು.

ಪ್ರಕೃತ ಪದ್ಯದಲ್ಲಿ, 'ಬರದು' ಎಂಬುದು 'ಬಾರದು' ಎಂದಿರಬೇಕಾಗಿದ್ದಿತು. 'ಕರ್ಣಾಟಕ ಶಬ್ದಾನುಶಾಸನ'ದ ೪ನೆಯ ಪಾದದ ೫೬೧ನೆಯ ಸೂತ್ರ—ಪ್ರತಿಷೇಧೆ: ವೃತ್ತಿ—"ತರ್, ಬರ್, ಇತ್ಯೇತಯೋಃ ದೀರ್ಘಾದೇಶೋಭವತಿ ಪ್ರತಿಷೇಧ ವಿಷಯೇ"—ಎಂಬಂತೆ ತಾರಂ–ತಾರರ್, ಬಾರಂ–ಬಾರರ್ ಎಂದು ಭಾಷೆಯಲ್ಲಿಯೂ ಕಾವ್ಯಗಳಲ್ಲಿಯೂ ರೂಢಿಯಾಗಿರುವ ಪ್ರಯೋಗಗಳು. ಕವಿಯು ಇಲ್ಲಿ 'ಹರಿದು' ಎಂಬ ಶಬ್ದದೊಡನೆ ಅನುಪ್ರಾಸವನ್ನು ಪಡೆಯುವ ಉದ್ದೇಶದಿಂದಲೋ ಏನೋ 'ಬರದು' ಎಂಬ ಶಬ್ದವನ್ನು ಪ್ರಯೋಗಿಸಿರಬಹುದು.

ಕವಿಯ ಉದ್ದೇಶವೇನೇ ಇರಲಿ, 'ಚ್ಯುತಸಂಸ್ಕಾರ'ವೆಂಬ ದೋಷವೇರ್ಪಟ್ಟಿತು. ಹೋಗಬಾರದು, ಮಾಡಬಾರದು ಎಂದೇ ಎಲ್ಲರೂ ಮಾತಾಡುತ್ತಾರೆ. ಭಾಷೆಯಲ್ಲಿಯೂ ಹ್ರಸ್ವವನ್ನು ಯಾವಾಗಲೂ ಉಪಯೋಗಿಸುವುದಿಲ್ಲ. ಇದರಿಂದ 'ಗ್ರಾಮ್ಯ'ವೆಂಬ ದೋಷವೂ ಬಂದಂತಾಯಿತು. ಈಗ ಉದಾಹರಿಸಬೇಕಾದ ದೋಷ 'ಅನ್ಯಾರ್ಥ'ವೆಂಬುದು. ಇದೇ ಪದ್ಯದ ಕಡೆಯ ಸಾಲಿನಲ್ಲಿ 'ನೆಲದ ಸಂಪತ್ತು' ಎಂಬ ಸ್ಥಾನದಲ್ಲಿ 'ಸಂಪತ್ತು' ಎಂಬ ಶಬ್ದಕ್ಕೆ ತೇಜಃಪುಂಜ ಅಥವಾ ತೇಜಸ್ಸಮೃದ್ಧಿ ಎಂಬ ಬೇಕಾಗಿರುವ ಅಥವಾ ಕವಿ ವಿವಕ್ಷಿತವಾದ ಅರ್ಥವು ಬರಲಾರದು. 'ಸಂಪತ್ತು' ಎಂಬ ಶಬ್ದಕ್ಕೆ ವಾಚ್ಯಾರ್ಥವು ಐಶ್ವರ್ಯ, ಸಿರಿ ಎಂದಿರುವುದರಿಂದ 'ನೆಲದ ಸಂಪತ್ತು' ಎಂಬ ಶಬ್ದದ್ವಯದಿಂದ ಭೂಮಿಯ ಹೇರಳವಾದ ಬೆಳೆ ಎಂಬರ್ಥವು ಸಿದ್ಧವಾಗುತ್ತದೆ. ಪದ್ಯವನ್ನು ಪುನಃ ಪುನಃ ಓದಿ ಪೂರ್ವೋತ್ತರ ಸಂದರ್ಭಗಳನ್ನಾಲೋಚಿಸಿದ ಮೇಲೆ ಪ್ರಕರಣ ಸಿದ್ಧವಾದ ಕಾಂತಿ ಸಂಪತ್ತು ಎಂಬರ್ಥವನ್ನು ಮಾಡಿಕೊಳ್ಳಬೇಕಾಗಿದೆ. ಪ್ರಕರಣದಿಂದ ಕವಿಯ ವಿವಕ್ಷಿತವು ತಿಳಿಯಬರುವಾಗ ದೋಷವೇನು? ಎಂಬ ಪ್ರಶ್ನೆ ಬಂದರೆ ಆಗ ಈ ಶಬ್ದಕ್ಕೆ ಈ ಅರ್ಥ ಎಂಬ ನಿಯಮವೇ ಹೋಗಿ, ಶಬ್ದಪ್ರಯೋಗದಲ್ಲಿ ಅವ್ಯವಸ್ಥೆ ಜನಿಸುವುದಿಲ್ಲವೆ? ಎಂಬುದೇ ಉತ್ತರವೆಂದು ತೋರುತ್ತದೆ. ಇದಕ್ಕೆ ಉಪೋದ್ಬಲಕವಾಗಿ 'ಜೋಗ'ವೆಂಬ ಆಧುನಿಕ ಕವಿತೆಯಲ್ಲಿ ಈ ಉದಾಹರಣೆ ಇದೆ:

ಕಾರ್ತಿಕದ ನೆಲದ ಸಿರಿ
ಎರಡು ಕೆಲದೊಳು ಕಂಗೊಳಿಸಿ ಮನವ ಸೆರೆಗೈದು
ಮೋಹಿಸಿತು ಬೆಳೆಯು ವೆಳಬಿಸಿಲಿನಲಿ....

'ನೆಲದ ಸಿರಿ' ಎಂದರೆ ಹೇರಳವಾದ ಬೆಳೆ ಎಂಬರ್ಥವನ್ನು ಆಧುನಿಕ ಕವಿಯೇ ನಿರ್ಮಿಸಿದ್ದಾನೆ. ಈ ರೀತಿಯಾಗಿ 'ನೆಲದ ಸಂಪತ್ತು' ಎಂಬ ಶಬ್ದಕ್ಕೆ ರೂಢಿ ಪ್ರಚ್ಯುತವಾದ ಅರ್ಥವು ಪ್ರಕರಣಬಲದಿಂದ ಹೇಳಬೇಕಾಗಿರುವುದರಿಂದ 'ಅನ್ಯಾರ್ಥ' ಅಥವಾ 'ಅವಾಚಕ'ವೆಂಬ ದೋಷವೂ ಬಿಟ್ಟುದಲ್ಲ. ಈ ಪ್ರಸ್ತು ಕಾವ್ಯವನ್ನು ಹೀಗೆ ಶಬ್ದಪ್ರಯೋಗದಲ್ಲಿ ಅವ್ಯವಸ್ಥೆಯುಂಟಾಗದಿರಲಿ ಎಂಬ ಉದ್ದೇಶದಿಂದಲೂ, ಭಾಷೆಯ ಏಕೀಕರಣವು ಸಿದ್ಧಿಸಲಿ ಎಂಬುದ್ದೇಶದಿಂದಲೂ ಪೂರ್ವಿಕ ಮಹಾಕವಿಗಳು ಕವಿಸಮಯ, ಕಾವ್ಯದೋಷ, ವ್ಯಾಕರಣ, ಲಾಕ್ಷಣಿ ಕಾರ್ಥವನ್ನು ನಿರ್ಧರಿಸುವ ನಿಯಮಗಳು ಇತ್ಯಾದಿಗಳನ್ನು ಲೋಕೋಪಕಾರಾರ್ಥ ವಾಗಿ ಗೀರ್ವಾಣ ಕರ್ನಾಟಕಾದಿ ಭಾಷೆಗಳಲ್ಲಿ ಉಪಪಾದಿಸಿದ್ದಾರೆಂಬುದು ಸಹೃದಯರ ಮನಸ್ಸಿಗೆ ಬಾರದಿರಲಾರದು.

## ೧೩. ಅವಿಮೃಷ್ಟವಿಧೇಯಾಂಶ

"ಅವಿಮೃಷ್ಟವಿಧೇಯಾಂಶಂ ಗುಣೀಭೂತ ವಿಧೇಯಕಂ".—ಎಂದರೆ, ಒಂದು ವಾಕ್ಯದಲ್ಲಿ ಪ್ರಧಾನಭಾವವಾವುದು, ಅಪ್ರಧಾನವಾದ ಅಥವಾ ಗೌಣವಾದ ಭಾವವಾವುದು ಎಂಬುದು ಸ್ಪಷ್ಟವಾಗಿ ತಿಳಿಯದೆಹೋದರೆ ಅಥವಾ ಗೌಣವಾದ ಅರ್ಥವು ಪ್ರಧಾನವಾಕ್ಯದಲ್ಲಿಯೂ ಪ್ರಧಾನವಾದ ಭಾವವು ಅಧೀನವಾಕ್ಯದಲ್ಲಿಯೂ ಬರುವಂತೆ ಗ್ರಂಥಕಾರನು ಅಥವಾ ಕವಿಯು ವಾಕ್ಯರಚನೆ ಮಾಡಿದ್ದರೆ ಈ ದೋಷ ವುಂಟಾಗುವುದು. 'ಕ್ಲಿಷ್ಟ'ವೆಂಬ ದೋಷಕ್ಕೆ ಕೊಟ್ಟಿರುವ ಉದಾಹರಣೆಯೇ ಇದಕ್ಕೂ ಉದಾಹರಣೆಯಾಗುವುದು. "ಮಲಗೆದ್ದು, ಚಿಗಿದೆದ್ದು, ಮಾಯುತಿತೆ, ಮಿಂದು, ಸಿಂಗರಿಸಿ" ಎಂಬ ವಿಶೇಷಣ ರೂಪವಾದ, ಆದುದರಿಂದಲೇ ಅಪ್ರಧಾನ ವಾದ, ಭಾವಗಳನ್ನು ರಚಿಸಿ ಪ್ರಧಾನಭಾವವಾದ ಶ್ರೀಮನ್ಮಹಾರಾಜರ ಕೃಪಾ ಕಟಾಕ್ಷವು ಅಥವಾ ದಯಾರ್ದ್ರದೃಷ್ಟಿಯು ತಮ್ಮ ಮುಂದೆ ಅಂಜಲಿಬದ್ಧರಾಗಿ ನೆರೆದಿದ್ದ ಸ್ವಾಮಿಭಕ್ತರಾದ ಪ್ರಜೆಗಳ ಮೇಲೆ ಬಿದ್ದಿತು ಎಂದು ಪ್ರಧಾನ ಕ್ರಿಯೆ ಯನ್ನು ಪ್ರಯೋಗಿಸಿ ಹೇಳುವುದಕ್ಕೆ ಪ್ರತಿಯಾಗಿ 'ಬಿಗಿದು, ಕಂಬನಿಯ ಮಿಡಿಯೆ' ಎಂದು ಕೃದಂತಾವ್ಯಯಗಳನ್ನು ಪ್ರಯೋಗಿಸಿರುವುದರಿಂದ ವಿಧೇಯಾಂಶವು ಅಥವಾ ಪ್ರಧಾನವಾದ ಅರ್ಥವು ಅನುಕ್ತವಾಯಿತು. ಇದೂ ಕ್ಲಿಷ್ಟಕ್ಕೆ ಕಾರಣ ವಾಯಿತು. ಈ ಪ್ರಧಾನಭಾವವನ್ನು ವಾಚಕನು ಮುಂದಣ ಪದ್ಯಗಳಲ್ಲಿ ನಿರೀಕ್ಷಿಸ ಬೇಕಾಯಿತು. ನಿರೀಕ್ಷಿಸಿ ಹುಡುಕಿದರೂ ದೊರೆಯದೆ ಏನೋ ಒಂದು ವಿಧವಾದ ಅತೃಪ್ತಿಯೋ ಆಶಾಭಂಗವೋ ಸಹೃದಯನಾದ ವಾಚಕನಲ್ಲಿ ಜನಿಸುವುದೆಂದು ತೋರುತ್ತದೆ. ಆದುದರಿಂದ ಈ ಪದ್ಯದಲ್ಲಿ 'ಅವಿಮೃಷ್ಟವಿಧೇಯಾಂಶ'ವೆಂಬ ದೋಷವು ಸಿದ್ಧವಾಯಿತು. ಅಲ್ಲದೆ ಈ ಪದ್ಯದಲ್ಲಿ ಪ್ರಧಾನ ಕ್ರಿಯಾಪದವೇ ಇಲ್ಲದಿರುವುದೂ ಈ ದೋಷಕ್ಕೆ ಸಹಕಾರಿಯಾಗಿದೆ.

## ೧೪. ಅಪ್ರತೀತಿಕ

"ಶಾಸ್ತ್ರಮಾತ್ರಪ್ರಸಿದ್ಧಂ ಯದಪ್ರತೀತಿಕ ಮುಚ್ಯತೇ".—ಮಹಾಕವಿಗಳ ಗ್ರಂಥಗಳಲ್ಲಿ ಪ್ರಸಿದ್ಧವಲ್ಲದ, ಕೇವಲ ಲೋಕ ಪ್ರಸಿದ್ಧವಾದ ಅಥವಾ ಪಾಮರರ ವ್ಯವಹಾರದಲ್ಲಿ ಮಾತ್ರ ಕಂಡುಬರುವ ಶಬ್ದಗಳನ್ನು ಪ್ರಯೋಗಿಸಿದರೆ 'ಗ್ರಾಮ್ಯ'ವೆಂಬ ದೋಷವು ಹೇಗೆ ಜನಿಸುವುದೋ ಹಾಗೆ ಕಾವ್ಯ ಪ್ರಸಿದ್ಧವಲ್ಲದ, ಶಾಸ್ತ್ರ ಮಾತ್ರ ಪ್ರಸಿದ್ಧವಾದ ಪದಗಳನ್ನು ಪ್ರಯೋಗಿಸಿದರೆ 'ಅಪ್ರತೀತಿಕ'ವೆಂಬ ದೋಷವು ಬರುವುದು.

ಉದಾಹರಣೆ: 'ಮನು' ಎಂಬ ಶಬ್ದಕ್ಕೆ ಮಂತ್ರಶಾಸ್ತ್ರದಲ್ಲಿ ಮಂತ್ರವೆಂಬರ್ಥ ವಿದ್ದರೂ ಕಾವ್ಯಗಳಲ್ಲಿ 'ಮಂತ್ರ'ಪರವಾಗಿ 'ಮನು' ಶಬ್ದವನ್ನು ಪ್ರಯೋಗಿಸ ಲಾಗದು. 'ಮನು' ಶಬ್ದಕ್ಕೆ ಬದಲಾಗಿ 'ಮಂತ್ರ'ವೆಂಬ ಶಬ್ದವನ್ನೇ ಪ್ರಯೋಗಿಸಿದರೆ ಎಲ್ಲರಿಗೂ ಅರ್ಥವಾಗುವುದು. ಎಂದರೆ, ಯಾವುದಾದರೂ ಒಂದು ಶಾಸ್ತ್ರದ ಪಾರಿಭಾಷಿಕ ಶಬ್ದಗಳನ್ನು ಕಾವ್ಯದಲ್ಲಿ ಪ್ರಯೋಗಿಸಿದರೆ ಆ ಶಬ್ದಗಳು ಆ ಶಾಸ್ತ್ರವನ್ನು ಬಲ್ಲ ಕೆಲಮಂದಿಗೆ ಮಾತ್ರ ತಿಳಿಯುತ್ತವೆ. ಆ ಶಾಸ್ತ್ರದ ಗಂಧವೇ ಇಲ್ಲದ ಮತ್ತು ಭಾಷೆಯನ್ನು ಮಾತ್ರ ಚೆನ್ನಾಗಿ ಬಲ್ಲ ಜನರಿಗೆ ತಿಳಿಯಲಾರವು. ಕಾವ್ಯದ ಶೈಲಿಗೂ ಶಾಸ್ತ್ರಗ್ರಂಥದ ಶೈಲಿಗೂ ಇದು ಮುಖ್ಯವಾಗಿರಬೇಕಾದ ವ್ಯತ್ಯಾಸವೆಂಬುದು ಕಾವ್ಯಭಾಷಾಕೋವಿದರೆಲ್ಲರೂ ಒಪ್ಪಿಕೊಳ್ಳುವ ವಿಷಯವಲ್ಲವೇ? ಈ ರೀತಿಯ ದೋಷಗಳನ್ನು ನಿರೂಪಿಸಿದ ಮಹನೀಯರ ಉದ್ದೇಶವು ನಮ್ಮ ಭಾವಗಳು ಇತರರಿಗೆ ಸುಲಭ ವೇದ್ಯವಾಗಿರಬೇಕೆಂಬುದೇ.

## ೧೫–೧೬. ವಿರುದ್ಧಮತಿಕೃತ್, ಅಶ್ಲೀಲ

'ವಿರುದ್ಧಮತಿಕೃತ್,' 'ಅಶ್ಲೀಲ' ಎಂಬ ದೋಷಗಳು ಹಿಂದೆಯೇ ಇತರ ದೋಷಗಳ ಜತೆಯಲ್ಲಿಯೇ ವಿವರಿಸಲ್ಪಟ್ಟಿವೆ. ಆದ್ದರಿಂದ ಅವುಗಳ ವಿವರಣೆಯನ್ನು ಇಲ್ಲಿ ಬಿಟ್ಟಿದೆ.

## ೧೭. ಪರುಷ

"ಪರುಷಂ ನಾಮ ತದ್ಯತ್ಸಾಂದ್ವಿಹಿತಂ ಪರುಷಾಕ್ಷರೈಃ".—ಎಂದರೆ, ವರ್ಗೀಯ ಪ್ರಥಮ ದ್ವಿತೀಯಾಕ್ಷರಗಳು ಪರುಷಗಳು. ಈ ಅಕ್ಷರಗಳುಳ್ಳ ಪದಗಳು ಹೆಚ್ಚಾಗಿ ವಾಕ್ಯದಲ್ಲಿದ್ದರೆ ಉಚ್ಚಾರಣೆಯೂ ಕಷ್ಟವಾಗುವುದಲ್ಲದೆ ಶ್ರಾವ್ಯತೆಯೂ ಇಲ್ಲದೆ ಹೋಗುವುದು. ಉದಾಹರಣೆ: ಕೃತಾರ್ಥನ ಭಾವವು ಕಾರ್ತಾರ್ಥ್ಯ, ಅದನ್ನು ಅಪೇಕ್ಷಿಸುವವನು ಕಾರ್ತಾರ್ಥ್ಯಾರ್ಥಿ. ಇವನ ಭಾವವು ಕಾರ್ತಾರ್ಥ್ಯಾರ್ಥಿತ್ವ. ಈ ಪದವನ್ನು ಅಥವಾ ಇಂತಹ ಪದವನ್ನು ಒಂದು ಪದ್ಯ ದಲ್ಲೋ ಅಥವಾ ಗದ್ಯದ ವಾಕ್ಯದಲ್ಲೋ ಉಪಯೋಗಿಸಿದರೆ 'ಪರುಷ'ವೆಂಬ ದೋಷವು ತಲೆಹಾಕುವುದು. ಪದ್ಯವಾಗಲಿ ಗದ್ಯವಾಗಲಿ ಕಿವಿಗೆ ಇಂಪಾಗಿರ ಬೇಕಾದರೆ ಇಂಥ ಪದಗಳನ್ನು ಕಾವ್ಯದಲ್ಲಿ ಉಪಯೋಗಿಸಲಾಗದು ಎಂಬುದೇ ಈ ದೋಷನಿರ್ವಚನದ ಉದ್ದೇಶ.

# ಉಪಸಂಹಾರ

'ಗೀತಗಳು' ಎಂಬೊಂದು ಪದ್ಯಪ್ರಬಂಧಾವಳಿಯ ಮುನ್ನುಡಿಯಲ್ಲಿ ಈ ವಾಕ್ಯವು ಲಿಖಿತವಾಗಿದೆ:

"ನೂರು ವರ್ಷಗಳ ಹಿಂದೆ ರಚಿತವಾಗಿ ಹಿಂದೆ ಬಿದ್ದ ಕಾವ್ಯ ಭಾಷೆಯ ಆಧಾರದ ಮೇಲೆ ಏರ್ಪಟ್ಟ ವ್ಯಾಕರಣ ಸೂತ್ರಗಳನ್ನೂ ಛಂದಸ್ಸಿನ ಕಟ್ಟಡಕ್ಕೆ ಸಂಬಂಧಿಸಿದ ನಿಯಮಗಳನ್ನೂ ಕಣ್ಣುಚುಚ್ಚುವಂತೆ ಮುಂದೆ ಹಿಡಿಯದೆ, ಜೀವಂತವಾದ, ದಿನದಿನವೂ ಬೆಳೆಯುತ್ತಿರುವ ಖನಿಗೊಳ್ಳುತ್ತಿರುವ–ಖನಿಗೊಳ್ಳಬೇಕಾಗಿರುವ ಈಗಿನ ಭಾಷೆಯ ಗತಿಗೆ ತಡೆಯಾಗಿ ತಂದೊಡ್ಡದೆ, ಕವಿತೆಯಲ್ಲಿ ಕೇವಲ ಸಂಪ್ರದಾಯಬದ್ಧವಾದ ಶಬ್ದರೂಪಕ್ಕೂ, ಸಂಧಿನಿಯಮಗಳಿಗೂ, ಕಡೆಗೆ ನಿರ್ದುಷ್ಟತೆಗೂ ಮೀರಿದ ಗುಣವೊಂದಿದೆ ಎಂಬುದನ್ನು ಒಪ್ಪುವವರು ಯಾರೂ ಇಲ್ಲಿನ ದೋಷಗಳ ಕಡೆಗೆ ಹೆಚ್ಚು ಗಮನ ಹರಿಸಲಾರರೆಂದಿದ್ದೇನೆ."

ಈ ವಾಕ್ಯದಲ್ಲಿ ಅನೇಕ ಚರ್ಚಾರ್ಹವಾದ ವಿಷಯಗಳು ಇವೆಯೆಂಬುದು ಸ್ಪಷ್ಟವಾಗಿದೆ. ಈ ಮುಂದಣ ಪ್ರಶ್ನೆಗಳು ಸಾಹಿತ್ಯ ವಿದ್ವಾಂಸರ ನಿರ್ಣಯವನ್ನು ನಿರೀಕ್ಷಿಸುತ್ತವೆ:—

(೧) ಮಾತಾಡುವ ಭಾಷೆಗೂ ಗ್ರಾಂಥಿಕ ಭಾಷೆಗೂ ಈಗ ಭೇದವಿಲ್ಲವೆ? ಭೇದವಿರಬೇಡವೆ?

(೨) ಭೇದವೇ ಬೇಡವೆಂದಂಗೀಕರಿಸಿದರೆ ಪರಸ್ಪರ ಭಾವಬೋಧಕತೆಗೆ ಬೇಕಾದ ವಿಷಯ ನಿಷ್ಕೃಷ್ಟಜ್ಞಾನ, ಶಬ್ದಸೌಷ್ಠವ, ಶಬ್ದಪ್ರಯೋಗ ಚಾತುರ್ಯ, ಶಬ್ದಾರ್ಥನಿರ್ಣಯ ಮೊದಲಾದ ಅನೇಕ ವಿಷಯಗಳನ್ನು ಬೋಧಿಸುವ ವ್ಯಾಕರಣಶಾಸ್ತ್ರವನ್ನೂ, ಅರ್ಥಬೋಧೆ. ಕ್ಲಿಷ್ಟವಾಗದಿರುವುದಕ್ಕೂ ಶಬ್ದ ಪ್ರಯೋಗವು ರಮಣೀಯವಾಗಿರುವುದಕ್ಕೂ ಒಂದೇ ಭಾಷೆಯ ಪ್ರಭೇದಗಳ ಏಕೀಕರಣಕ್ಕೂ. ಪ್ರಾಚೀನ ಪಂಡಿತವರ್ಯರ ಅಪ್ರತಿಮ ಬುದ್ಧಿಶಕ್ತಿಯಿಂದಲೂ ಚಿರಕಾಲ ಕಾವ್ಯಕಲಾಭ್ಯಾಸದಿಂದಲೂ ಲೋಕೋಪಕಾರಾರ್ಥವಾಗಿ ನಿಷ್ಪಾದಿತವಾಗಿರುವ ಕಾವ್ಯಲಕ್ಷಣಗಳನ್ನು ಬೋಧಿಸುವ ಅನೇಕ ಗ್ರಂಥಗಳನ್ನು ಜನಮೇಜಯನು ಸರ್ಪಗಳನ್ನು ಆಹುತಿಗೊಟ್ಟಂತೆ ಈಗಿನವರೂ ಆಹುತಿಗೊಡಬೇಕಲ್ಲವೆ?

(೩) ಒಂದೊಂದು ಭಾಷೆಗೂ ಒಂದೊಂದು ವೈಶಿಷ್ಟ್ಯವಿದೆಯೆಂಬುದನ್ನು ಒಪ್ಪಿಕೊಂಡರೆ ಅದನ್ನು ಕಾಪಾಡುವುದು ಆ ಭಾಷಾಭಿಜ್ಞರ ಕರ್ತವ್ಯವಲ್ಲವೆ?

(೪) ಅವ್ಯುತ್ಪನ್ನರಾದ ಪಾಮರರ ವ್ಯವಹಾರವು ಅಪಶಬ್ದಭೂಯಿಷ್ಠವು ಎಂಬ ಭಟ್ಟಾಕಳಂಕನ ವಚನವೂ ಪಾಮರನ ಮಾತೇ ಆಗುವದಿಲ್ಲವೆ?

(೫) ಅರ್ಥಸೌಂದರ್ಯವು ಕಾವ್ಯಕ್ಕೆ ಹೇಗೆ ಆವಶ್ಯಕವೋ ಹಾಗೆಯೇ ಶಬ್ದ ಸೌಂದರ್ಯವೂ ಆವಶ್ಯಕವಲ್ಲವೆ?

(೬) ನಚೈಷಾಭಾಷಾ—ಶಾಸ್ತ್ರಾನುಪಯೋಗಿನೀ— ಅ ನು ಶಾ ಸ ನಾ ಹಾ ಏವೇತಿ ('ಶಬ್ದಾನುಶಾಸನ,' pp. 10 and 11, last and first paras; also p. 13: translations).

ಈ ವಾಕ್ಯದ ಭಾವವನ್ನು ಪರ್ಯಾಲೋಚಿಸಿದರೆ ಭಟ್ಟಾಕಳಂಕನ ಕಾಲದಲ್ಲೇ ನಮ್ಮ ಕನ್ನಡ ಭಾಷೆಯನ್ನು ಪಾಮರ ಭಾಷೆಯೆಂದು ತಿರಸ್ಕರಿಸುತ್ತಿದ್ದವರು ಬಹು ಜನವಿದ್ದರು. ಮೇಲೆ ಉದ್ಧರಿಸಿರುವ ವಾಕ್ಯವು ಅವರ ಆಕ್ಷೇಪಣೆಗೆ, ತಿರಸ್ಕಾರಕ್ಕೆ ಸಮಾಧಾನವಾಗಿದೆ ಎಂಬುದೊಂದೇ ಅಲ್ಲದೆ ಯಾವ ಭಾಷೆಗೇ ಆಗಲಿ ವ್ಯಾಕರಣ, ಛಂದಸ್ಸು, ಕಾವ್ಯಲಕ್ಷಣ ಮೊದಲಾದ ವಿಷಯಗಳನ್ನು ಅಧಿಕರಿಸಿದ ಗ್ರಂಥಗಳುಂಟಾದ ಮೇಲೆ ಆ ಭಾಷೆ ಏಳಿಗೆಯನ್ನು ಪಡೆದಂತಾಯಿತು ಎಂಬುದೂ ವಿಶದವಾಗಿದೆ. ಈ ಏಳಿಗೆಗೆ ಕಾರಣವಾದ ಕಾವ್ಯಲಕ್ಷಣ ಗ್ರಂಥಗಳೂ ವ್ಯಾಕರಣಶಾಸ್ತ್ರ ಗ್ರಂಥಗಳೂ ಹಿಂದಣ ಕಾಲದವು, ಪ್ರಕೃತಕ್ಕೆ ಅನುಪಯುಕ್ತವಾದವು ಎಂದು ತಿರಸ್ಕರಿಸಿದರೆ ನಿಜವಾಗಿಯೂ ಕರ್ನಾಟಕ ಸರಸ್ವತಿಯನ್ನು ಸೇವಿಸದಂತಾಯಿತೆ, ಪೂಜಿಸದಂತಾಯಿತೆ?

# ಸಾಲಂಕೃತ ಕನ್ನಡ ಭಾಷೆ

ಶ್ರೀಮಾನ್ ಪಂಡಿತ ಕೇಶವ ಶರ್ಮರವರು, ಗಲಗಲಿ

---

ಈಗ ಇಪ್ಪತ್ತು ವರುಷಗಳ ಹಿಂದೆ, ಉತ್ತರಕರ್ನಾಟಕದ ವೃತ್ತಪ… ಗಳನ್ನು ಓದಿದ ವಾಚಕರಿಗೆ, ಅವುಗಳಲ್ಲಿದ್ದ ಕನ್ನಡಭಾಷೆಯು ಅಷ್ಟು ಸ… ಸ್ಕೃತವೂ ಆಗಿರಲಿಲ್ಲ, ಅಷ್ಟು ಪರಿಶುದ್ಧವೂ ಆಗಿರಲಿಲ್ಲ. ನಮಗಿಂತ ಸ್ವಲ್ಪ … ದಲ್ಲಿ ಯಾವಾಗಲೂ ಮುಂದರಿದ ನಮ್ಮ ಮೈಸೂರಿನ ಬಂಧುಗಳು ಇತ್ತ… ಬರಹಗಾರರ ಭಾಷೆಯನ್ನು ಒರಟುಭಾಷೆಯೆಂದು ಎಡಗಣ್ಣಿನಿಂದಲೇ … ತ್ತಿದ್ದರು. ಮಂಗಳೂರಿನ ಇಲ್ಲವೆ ಮೈಸೂರಿನ ಸರಸಶೈಲಿಯು ನಮ್ಮ… ಬರುತ್ತಿರಲಿಲ್ಲ. ಕಾರಣವೇನೆಂದರೆ, ನಮ್ಮಲ್ಲಿಯ ಪದವೀಧರರೇ ಬಹು… ಕನ್ನಡಕ್ಕೆ ಅಪರಿಚಿತರಾಗಿದ್ದರು. ಆದರೆ ಇಂದು ಆ ಪರಿಸ್ಥಿತಿಯು … ವದಿಲ್ಲ. ಇಂದು ನಮ್ಮ ಉತ್ತರಕನ್ನಡಿಗರ ಭಾಷೆಯು ತಕ್ಕಮಟ್ಟಿಗೆ ಪರಿಶು… ಸರಸವೂ ಆಗುತ್ತಬಂದಿರುವದೆಂಬುದು ಈಗಿನ 'ಸಂಯುಕ್ತ ಕರ್ನಾ… 'ಕರ್ನಾಟಕವೈಭವ' ಮೊದಲಾದ ವೃತ್ತಪತ್ರಗಳನ್ನು ಓದುತ್ತಿರು… ವಿದಿತವಾದ ವಿಷಯವೇ ಆಗಿದೆ. ಆದರೂ ನಮ್ಮವರ ಭಾಷೆ ಇನ್ನೂ ಸಾ… ಸಾಲಂಕೃತವಾಗಿಲ್ಲ. ಸಾಲಂಕೃತವೇಕಾಗಬೇಕೆಂದು ಕೆಲವರು ಕೇಳಬ… ನಿರಲಂಕೃತ ಕನ್ಯಾದಾನಕ್ಕಿಂತ ಸಾಲಂಕೃತ ಕನ್ಯಾದಾನಕ್ಕೆ ಪುಣ್ಯವು ಹೆ… ಎಂದು ಧರ್ಮಪ್ರಧಾನರಾದ ನಮ್ಮ ಜನರಿಗೆ ಹೇಳಬೇಕಾಗಿಲ್ಲ. ಇನ್ನೂ ನೈ… ಪ್ರತಿಭಾಶಾಲಿಗಳಾದ ಕವಿಗಳು ಸಾಲಂಕಾರಕವಿತೆಗಿಂತ ನಿರಲಂಕಾರ… ಹೆಚ್ಚಿನ ಮಹತ್ತ್ವವನ್ನು ಕೊಟ್ಟಿರಬಹುದು. ಉದಾಹರಣೆಗಾಗಿ ಇ… ಜಗದ್ವಂದ್ಯಕವಿಗಳಾದ ರವೀಂದ್ರರನ್ನೇ ತೆಗೆದುಕೊಳ್ಳುವ. ಅವರು ತಮ್ಮ… ಕವಿತೆಯಲ್ಲಿ—

> ನನ್ನಯ ಕವಿತಾಕಾಮಿನಿ ತೊರೆದಳು
> ಸನ್ನುತ ವಿವಿಧಾಲಂಕೃತಿಗಳನು
> ಮಾನಿನಿಗಿಲ್ಲಭಿಮಾನವಲಂಕೃತಿ ವೇಷ ಕದಂಬಕದ
> ನನ್ನಯ ನಿನ್ನಯ ಮಧ್ಯದ ಬರುತವು
> ನಿನ್ನಯ ಗುಟ್ಟಿನ ಮುಂದಾಲಾಪದ
> ಪೊನ್ನತಿಕೆಯ ಮರೆಮಾಡುತಲಿರ್ಪವು ಧ್ಯಾನದ ಬಲದಿಂದ

ಎಂದು ಹೇಳಿರುವರು. "ನನ್ನ ಕವಿತಾರಮಣಿಗೆ ಅಲಂಕಾರದ ರಮ್ಯವೇಷಭೂ… ಗಳ ಅಭಿಮಾನವಿಲ್ಲ. ಯಾಕೆಂದರೆ ಅಲಂಕಾರಗಳ ಘಣತ್ಕಾರಗಳು ನ… ರಹಸ್ಯದ ಧ್ವನಿಯನ್ನು ಮುಳುಗಿಸಿಬಿಡುವುವು." ಇದು ಪರಮಾವಧಿ ಉನ್ನ… ಶಿಖರಕ್ಕೆ ಮುಟ್ಟಿದ, ಅಧ್ಯಾತ್ಮ ಗೀತಗಳನ್ನು ಬರೆದ ರವೀಂದ್ರರ ಮಾತು. … ಸರ್ವಸಾಮಾನ್ಯರೆಲ್ಲ ಅಲಂಕಾರಪ್ರಿಯರಾಗಿದ್ದಾರೆ.

ಇಂದು ನಿರ್ಜೀವವಾದ, ನಿಶ್ಚೇತನವಾದ, ಕೇವಲ ಬೊಂಬೆಯಂತಿರುವ, ಕೇವಲ ಮಣ್ಣಿನ ಕನ್ನಡಮೂರ್ತಿಗೆ ಕೇವಲ ವಜ್ರವೈಡೂರ್ಯಾದಿ ಅಲಂಕಾರಗಳನ್ನು ತೊಡಿಸಿದರೆ ಇಂದಿನ ನಮ್ಮ ಸಮತಾವಾದದ ನವಯುವಕರಿಗೆ ಹಿಗ್ಗುಂಟಾಗಲಿಕ್ಕಿಲ್ಲ. ಆದರೆ, ಇಂದಿನ ಕನ್ನಡಕ್ಕೆ ಮೆಲ್ಲಮೆಲ್ಲನೆ ಜೀವಕಳೆ ಬರಹತ್ತಿದೆ. ಆಕೆ ಚೇತರಿಸಿ ಕೊಂಡು ಜಾಗೃತಳಾಗಹತ್ತಿದ್ದಾಳೆ. ಇಂತಹ ಕಾಲದಲ್ಲಿ ಭಾರವಾದ ವಜ್ರ ವೈಡೂರ್ಯಾದಿಗಳು ಬೇಡ. ಒಂದು ಹಗುರಾದ ಮುತ್ತಿನ ಹಾರವನ್ನು ತೊಡಿಸುತ್ತ ಹೋದರೆ ಉಂಟಾಗುವ ಹಾನಿ ಏನು? ನಮ್ಮ ಹೊಸ ಕವಿಗಳು ಇಂತಹ ಹಾರ ಗಳನ್ನು ತೊಡಿಸಹತ್ತಿದ್ದಾರೆಂಬುದು ಆನಂದದ ಸಂಗತಿ. ನಮ್ಮ ಪ್ರಿಯಕವಿಗಳಾದ ಬೇಂದ್ರೆಯವರು ತರುಣ ತರುಣಿಯರ ವರ್ಣನೆಯಲ್ಲಿ, 'ಹೊಸಾ ಹರೆ ಈಸತಿತ್ತೋ ಹೊಳಿಯಾಗ' ಎಂಬ ಕವಿತೆಯಲ್ಲಿ, ಕುವಲಯಾನಂದಕಾರನ 'ನಿಗೀರ್ಯಾಧ್ಯವ ಸಾನತಃ' ಎಂಬ ಲಕ್ಷಣದಂತೆ, ಉಪಮೇಯಗಳನ್ನು ಬಚ್ಚಿಟ್ಟು ಕೇವಲ ಉಪಮಾನ ಗಳಿಂದ ಕಾರ್ಯವನ್ನು ನಿರ್ವಹಿಸುವ ಅತಿಶಯೋಕ್ತ್ಯಲಂಕಾರವನ್ನೇ ಹೇಳಿಲ್ಲವೆ?

ಇನ್ನು ಕೆಲವರು "ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ" ಎಂಬ ಕವಿಸಾರ್ವಭೌಮ ಕಾಲಿದಾಸನ ಸೂಕ್ತಿಯಂತೆ, ಸುಂದರಾಂಗಿಯರ ಅಂಗವಂ ಸೇರಿದಾಗ ಯಾವದು ತಾನೇ ಅಲಂಕಾರವಾಗಲಾರದು ಎಂದು ಹೇಳ ಬಹುದು ಮತ್ತು ಧ್ವನಿಕಾವ್ಯಕ್ಕಿಂತ ಅಲಂಕಾರಗಳು ಕನಿಷ್ಠವೆಂದೂ ಉಸಿರಬಹುದು. ಆದರೆ, ಸಾರ್ವತ್ರಿಕ ಶಿಕ್ಷಣಪ್ರಸಾರದ ಈ ಕಾಲದಲ್ಲಿ ಭಾಷೆಯ ಸಾಲಂಕರಣವು ಜನಮನವನ್ನಾಕರ್ಷಿಸುವದರಲ್ಲಿ ಒಂದು ಮಹತ್ತಾದ ಕಾರ್ಯವನ್ನು ಮಾಡ ಬಹುದೆಂದು ನಾವು ಹೇಳಬಹುದಾಗಿದೆ. ಸಂಸ್ಕೃತವನ್ನೇನೂ ಅರಿಯದವರ ಮುಂದೆ ಕೇವಲ ಶಬ್ದಾಲಂಕಾರದ ಅಶ್ವಧಾಟಿ ಶ್ಲೋಕಗಳನ್ನು ಅಂದು ನೋಡಿರಿ. ಅದು ಅವರ ಮನಸ್ಸನ್ನು ಆಕರ್ಷಿಸದೆ ಬಿಡುವದಿಲ್ಲ. ಶಬ್ದಾಲಂಕಾರಗಳು ಕೇವಲ ಪಾಮರರ ಮನಸ್ಸನ್ನು ಕೂಡ ಆಕರ್ಷಿಸುವವು. ಇದು ಅನುಭವಸಿದ್ಧವಾದ ಮಾತು. ಹಳ್ಳಿಗರ ಹಾಡುಗಳಲ್ಲಿ, ಹೆಣ್ಣುಮಕ್ಕಳ ಒಗಟಿನ ನುಡಿಗಳಲ್ಲಿ ಕೂಡ ಶಬ್ದಾಲಂಕಾರಗಳು ಅಡಕವಾಗಿವೆ. ಅಲಂಕಾರದ ಮಹಿಮೆ ಎಲ್ಲಿಯವರೆಗೆ ವ್ಯಾಪಿಸಿದೆ ಎನ್ನುವುದು ಕನ್ನಡ ಭಾಷೆಯ ವ್ಯಾಪಕವಾದ ಸೂಕ್ಷ್ಮವಾದ ಅಭ್ಯಾಸ ವನ್ನು ಮಾಡಿದರೆ ಹೊಳೆಯದಿರದು.

ಉಪಮೆ ಅಲಂಕಾರಗಳ ತಳಹದಿ. ಉಪಮೆ ನಟ ಇದ್ದಂತೆ. ಆಕೆಯ ವೇಷಾಂತರಗಳಿಂದ ಅನೇಕ ಅಲಂಕಾರಗಳು ಹುಟ್ಟುತ್ತವೆಂದು ಅಪ್ಪಯ್ಯ ದೀಕ್ಷಿತರು ಹೇಳಿದ್ದಾರೆ. ಅಲಂಕಾರಶಾಸ್ತ್ರದ ಆಳವಾದ ಅಭ್ಯಾಸವಿಲ್ಲದೆ ಭಾಷೆಗೆ ರಮ್ಯತೆ ಬರಲಾರದು. ನಮ್ಮ ಕನ್ನಡ ತರುಣಲೇಖಕರಲ್ಲಿ ಎಷ್ಟು ಜನರು ಅಲಂಕಾರಶಾಸ್ತ್ರವನ್ನು ಅಭ್ಯಾಸಮಾಡುವರು? 'ರಸಗಂಗಾಧರ', 'ಕಾವ್ಯಪ್ರಕಾಶ', 'ಧ್ವನ್ಯಾಲೋಕ', 'ಕುವಲಯಾನಂದ' ಮೊದಲಾದ ಸಂಸ್ಕೃತ ಗ್ರಂಥಗಳ ಅಭ್ಯಾಸವು ಕನ್ನಡ ವಾಙ್ಮಯವನ್ನು ಶ್ರೀಮಂತವಾಗಿ ಮಾಡಬೇಕೆಂಬ ಹವ್ಯಾಸವುಳ್ಳ ತರುಣರಿಗೆ ಅನಾವಶ್ಯಕವಾಗಿರುವದೊ? ಸುಮ್ಮಸುಮ್ಮನೆ ನಾನು ಕನ್ನಡ ಸೇವೆಮಾಡುವವನು

ಎಂದು ಆಡಂಬರವನ್ನು ತೋರಿಸುವದರಲ್ಲಿ ಅರ್ಥವೇನಿರುವದು? ಈಗಿನ ಸ್ಪರ್ಧೆಯ ಯುಗದಲ್ಲಿ ಕನ್ನಡವಾಣಿಯು ಸರ್ವಾಂಗಸುಂದರವಾಗಬೇಕಾದರೆ, ಧೂಳಿಯಲ್ಲಿ ಬಿದ್ದು ಹೊರಳಾಡುತ್ತಿರುವ ಆಕೆಯ ದೈನ್ಯಸ್ಥಿತಿ ದೂರವಾಗಿ ಆಕೆ ಸಿಂಹಾಸನದ ಮೇಲೆ ಕುಳಿತು ವಿರಾಜಮಾನಳಾಗಬೇಕಾದರೆ ಆಕೆಯ ದಿವ್ಯಶರೀರಕ್ಕೆ ನಾನಾ ದಿವ್ಯಾಭರಣಗಳನ್ನು ಹಾಕಲೇಬೇಕು.

ಸಾಲಂಕೃತಭಾಷೆಯು ಎಷ್ಟು ದಿವ್ಯವಾಗಿರುವದೆಂಬದನ್ನು ತೋರಿಸುವದಕ್ಕಾಗಿ ವಂಗೀಯ ಗದ್ಯಕಾವ್ಯದಲ್ಲಿಯ ಅವತರಣವನ್ನು ಇಲ್ಲಿ ಕೊಡುವೆವು. ಶಯನಮಂದಿರದಲ್ಲಿ ಪ್ರಿಯವಿಲಾಪವಿದು:

"ಈ ಶಯ್ಯಾಮಂದಿರದಲ್ಲಿ ಈಗ ಏನಿರುವದು? ಆ ರಾಮನಿಲ್ಲ. ಆ ಅಯೋಧ್ಯೆಯಿಲ್ಲ. ಈ ಶ್ಮಶಾನದಲ್ಲಿ ಒಂದು ದಿನ ಪ್ರಮದೋದ್ಯಾನವಿತ್ತು. ನೀಲಾಕಾಶದಲ್ಲಿ ಶರತ್ಕಾಲದ ಚಂದ್ರನಂತೆ, ಜಾಹ್ನವಿಯ ಜಲದಲ್ಲಿ ವಸಂತನ ವನಶೋಭೆಯಂತೆ, ರಮಣಿಯ ಅಧರದಲ್ಲಿ ಮಧುರಹಾಸ್ಯದಂತೆ, ರಮಣಿಯ ಕಂಠದಲ್ಲಿಯ ಪ್ರಣಯ ಕಥೆಯಂತೆ ಈ ಸಂಸಾರಮಧ್ಯದಲ್ಲಿ ಒಂದು ದಿನ ಈ ಮಂದಿರವು ಹಾಗಿತ್ತು. ಈ ಮಂದಿರದಲ್ಲಿ ಒಂದು ದಿನ ಎನಿತು ಸುಂದರವಾದ ತೆರೆಗಳು, ಎನಿತು ಆನಂದದ ಲಹರಿಗಳು, ಏಳುತ್ತಿದ್ದುವು! ಆ ಕಥೆಯನ್ನು ಇಂದು ಹೇಳಿ ಪ್ರಯೋಜನವೇನು?

"ಯಾವ ದಿನಗಳ ಕಥೆಯನ್ನಿಂದು ಹೇಳುವೆನೊ ಆ ದಿನ ಈ ಸಂಸಾರವು ಅಮರಾವತಿ ಎಂದು ಬೋಧವಾಗುತ್ತಿತ್ತು. ಆ ಸಂಸಾರದಲ್ಲಿ ಈ ಮಂದಿರವು ನಂದನಕಾನನದಂತಿತ್ತು. ಆ ನಂದನಕಾನನದಲ್ಲಿ ಒಂದು ಕಲ್ಪಲತೆಯು ಪ್ರಸ್ಫುಟಿತಪಾರಿಜಾತವನ್ನು ಆವರಿಸಿಕೊಂಡು, ಅಂತರ ಬಾಹಿರದಲ್ಲಿ ಆ ಲೋಕವನ್ನು ಬೀರುತ್ತ ವಿರಾಜಿತವಾಗಿತ್ತು. ಆ ಪಾರಿಜಾತದ ಸೌರಭದಿಂದ ನಾನು ಮುಗ್ಧನಾಗಿದ್ದೆನು. ಆ ನಂದನಕಾನನ, ಆ ಸುಖಕುಂಜ, ಇಂದು ಅರಣ್ಯವಾಗಿರುವದು. ಈ ಅರಣ್ಯದಲ್ಲಿ ನಾನು ಸಂನ್ಯಾಸಿಯಾಗಿರುವೆನು. ಯಾವ ತಪಸ್ಸನ್ನು ತಪಿಸಲಿ, ಯಾವ ಜಪವನ್ನು ಜಪಿಸಲಿ? ನನ್ನ ಹೃದಯವಿಂದು ಕುಸುಮ ಕುಸುಮಗಳಲ್ಲಿ ನಕ್ಷತ್ರ ನಕ್ಷತ್ರಗಳಲ್ಲಿ, ಗಗನ ಗಗನದಲ್ಲಿ, ಮಸಣ ಮಸಣದಲ್ಲಿ ಭಿಕ್ಷೆ ಬೇಡುತ್ತ ಭ್ರಮಿಸುತ್ತಿರುವುದು. ಅದನ್ನು ಇಂದು ಹೇಳಿ ಪ್ರಯೋಜನವೇನು? ನಾನು ತಿಳಿಯುವೆ, ನನ್ನ ಮನಸ್ಸು ಬಲ್ಲದು. ಮತ್ತು ಅಂತರ್ಯಾಮಿಯೊರ್ವನು ಅರಿಯಬಲ್ಲನು. ನನ್ನ ಮನಸ್ಸಂತೂ ಸಂನ್ಯಾಸವನ್ನು ಗ್ರಹಿಸಿಬಿಟ್ಟಿದೆ. ಈಗ ಯಾತರಲ್ಲೂ ಮನವಿಲ್ಲ. ಮೊದಲು ಎಲ್ಲದರಲ್ಲಿಯೂ ಇತ್ತು. ಮನದಲ್ಲಿದ್ದ ಉಚ್ಚಾಭಿಲಾಷೆಗಳೆಲ್ಲವೂ ಮನದಲ್ಲಿಯೇ ಲೀನವಾದವು. ಅಂತರದಲ್ಲಿನ ಸಾಧ್ಯಗಳೆಲ್ಲ ಅಲ್ಲಿಯೇ ಸಮಾಧಿ ಹೊಂದಿದುವು."

ರಮ್ಯಕಲ್ಪನೆಗಳು ಉಪಮಾತಿಶಯೋಕ್ತ್ಯಲಂಕಾರಗಳಲ್ಲಿ ಹೇಗೆ ಹೆಣೆಯಲ್ಪಟ್ಟಿವೆ ಎಂಬದನ್ನು ಇಲ್ಲಿ ನಾವು ಕಾಣಬಹುದು.

ಪುನಃ ಇದೇ ಉದ್ಭ್ರಾಂತ ಪ್ರೇಮಿಯು ಗಂಗೆಯ ತೀರದಲ್ಲಿ ಕುಳಿತು ಪ್ರಳಪಿಸುವನು:

"ತಾಯಿ, ಒಮ್ಮೆ ಸ್ವರ್ಗವನ್ನು ತೋರಿಸು. ಜನನೀ, ಸ್ವರ್ಗದ ಸುಖಕ್ಕಾಗಿ ನಾನು ಸ್ವರ್ಗವನ್ನು ತೋರಿಸೆಂದು ನಿನಗೆ ಬೇಡಿಕೊಳ್ಳುವದಿಲ್ಲ. ಯಾರ ಹೃದಯದಲ್ಲಿ ನರಕಾನಲವು ಜ್ವಲಿಸುತ್ತಿರುವದೋ ಅವರಿಗೆ ಸಗ್ಗದಲ್ಲಿಯಾದರೂ ಸೊಗವು ಎಲ್ಲಿಂದ ಸಿಗುವದು! ಸ್ವರ್ಗದ ಸುಖಭೋಗಕ್ಕಾಗಿ ಸ್ವರ್ಗವನ್ನಲ್ಲ, ನಷ್ಟಧನದ ಅನುಸಂಧಾನಕ್ಕಾಗಿ ಸ್ವರ್ಗಗಮನವನ್ನು ಬಯಸುವೆನು. ಒಮ್ಮೆ ಸ್ವರ್ಗವನ್ನು ನೋಡುವೆನು. ಒಮ್ಮೆ ಸ್ವರ್ಗದಲ್ಲಿ ಹುಡುಕುವೆನು. ಸಂಸಾರದಲ್ಲಿ ಹುಡುಕಿ ನೋಡಿದೆನು. ಎಲ್ಲಿಯೂ ಸಿಗಲಿಲ್ಲ. ಒಮ್ಮೆ ಸ್ವರ್ಗದಲ್ಲಿ ಶೋಧಿಸುವೆನು. ಆ ರಮ್ಯ ಕುಸುಮವು ನಂದನಕಾನನದಲ್ಲಿಯಾದರೂ ಅರಳುವದೇನೋ.

ಜ್ಯೋತ್ಸ್ನೆಯೇ, ನಿನ್ನ ಜಲದಲ್ಲಿ ಚಂದ್ರರಶ್ಮಿಗಳ ನೃತ್ಯದಂತೆ ಸುಕುಮಾರವಾದುದು, ನಿದಾಘಸಾಯಾಹ್ನಗಗನದಂತೆ ಕೋಮಲವಾದುದು, ಪ್ರಣಯಿನಿಯ ಪ್ರಥಮ ಸವ್ರೀಲ ಆಲಿಂಗನದಂತೆ ಸುಖಮಯವಾದುದು, ಪರದುಃಖಕಾತರಮಾನವಹೃದಯದಂತೆ ಪವಿತ್ರ ವಾದುದು. ಇದು ಯಾವ ಕುಸುಮವೋ, ಈ ಅಧಮನ ಗೃಹಕುಂಜದಲ್ಲಿ ಒಂದು ದಿನ ಸ್ಫುಟಿತವಾಗಿದ್ದಿತು. ನೋಡುವೆನು ಅಂತಹದು ದೇವೋದ್ಯಾನದಲ್ಲಿ ಸ್ಫುಟಿತವಾಗುವ ದೇನೋ! ಯಾವ ಸಾಗರಸೇಚಿತ ಅಮೂಲ್ಯರತ್ನವು ಈ ದರಿದ್ರನ ಕುಟೀರದಲ್ಲಿತ್ತು. ನೋಡುವೆನು ಅಂತಹ ರತ್ನವು ದೇವರಾಜ ಭವನದಲ್ಲಿರುವದೇನೋ! ಯಾವ ಸಂಗೀತವನ್ನು ಅತೃಪ್ತ ಹೃದಯದಿಂದ ಹಗಲಿರುಳು ಕೇಳುತ್ತಿದ್ದೆನೋ, ಆ ಸಂಗೀತವು ಅಮರಾವತಿ ಯಲ್ಲಿರುವದೇನೋ.''

ಮಾಲೋಪಮೆಗಳಿಂದ ರಸನಿರ್ಭರವಾದ ಈ ವಾಣಿಯನ್ನು ಕೇಳಲು ಕನ್ನಡಿಗರು ಕುತುಕಿಗಳಾಗಲಿಕ್ಕಿಲ್ಲವೋ ?

ಭಾಷೆಯಲ್ಲಿ ರಮ್ಯತೆಯನ್ನೂ ಪ್ರೌಢತೆಯನ್ನೂ ಅಲಂಕಾರಗಳ ಸೊಬಗನ್ನೂ ತರಲಿಚ್ಛಿಸುವವರು ಸಂಸ್ಕೃತದಲ್ಲಿರುವ ಬಾಣಭಟ್ಟನ ಕಾದಂಬರಿಯನ್ನು ಅವಶ್ಯ ವಾಗಿ ಆಳವಾಗಿ ಅಭ್ಯಾಸಮಾಡಬೇಕು. ಅವನ ಮಗನಾದ ಭೂಷಣಭಟ್ಟನು "ವಾಗೀಶ್ವರಂ ಪಿತರಮೇವ ತಮಾನತೋಸ್ಮಿ'' ಎಂದು ಯಥಾರ್ಥವಾಗಿ ಕೊಂಡಾಡಿ ರುವನು. 'ಅರವ ಅರಸು ಕನ್ನಡ ಬಿರಸು' ಎಂದು ಕೆಲವರು ಹೇಳುವರು. ಅಲ್ಲ. ಕನ್ನಡ ಗಂಡುಭಾಷೆ. ಗೋವರ್ಧನ ಕವಿಯು ಹೇಳುವಂತೆ "ಪ್ರಾಗಲ್ಭ್ಯ ಮಧಿಕಮಾಪ್ತುಂ ವಾಣೀ ಬಾಣೋಬಭೂವೇತಿ'' ಎಂಬಂತೆ, ಗಂಡುಭಾಷೆಯ ಕನ್ನಡಿಗರು ಸರಸತಿಯ ಗಂಡು ಅವತಾರವೆಂದೆನಿಸಿಕೊಂಡ ಬಾಣನ ಗ್ರಂಥಗಳನ್ನು ಅವಶ್ಯವಾಗಿ ಅಭ್ಯಸಿಸಬೇಕು.

ಕನ್ನಡದಲ್ಲಿ ಅಲಂಕಾರಾಭ್ಯಾಸಕ್ಕೆ ಸಹಕಾರಿಗ್ರಂಥಗಳಿಲ್ಲವೆಂತಲ್ಲ. ಪ್ರಾಚೀನ ಸಾಹಿತ್ಯವು ಎಷ್ಟೋ ಕಾರ್ಯಗಳನ್ನು ಮಾಡಿದೆ. ಪಂಪನಿಂದ ಲಕ್ಷ್ಮೀಶನ ವರೆಗೆ ವರಕವಿಗಳು ನಮಗೆಷ್ಟೋ ದಿವ್ಯಾಭರಣಗಳನ್ನು ಮಾಡಿಸಿಟ್ಟಿರುವರು. ಆಧುನಿಕರನೇಕರಿಗೆ ವಿರೋಧಾಭಾಸದಂತಹ ಅಲಂಕಾರಗಳು ರುಚಿಸುವದಿಲ್ಲ. ಸರೋವರದ ವರ್ಣನೆಯಲ್ಲಿ ಲಕ್ಷ್ಮೀಶನು ಈ ರೀತಿ ಹೇಳಿರುವನು:—

ಕಲಹಂಸಮಾಕೀರ್ಣಮಾಗಿರ್ದು ಕಾಳಗದ ಕಣನಲ್ಲ, ವಿಷಭರಿತಮಾಗಿರ್ದು ಸರ್ಪ ಸಂಕುಳಮಲ್ಲ, ಕುಮುದಯುತಮಾಗಿರ್ದು ಖಳರಂತರಂಗದಾಳಾಪಮಲ್ಲ.

ಇಂತಹ ವಿರೋಧಾಭಾಸಗಳು ಈಗಿನ ನವಕವಿತೆಗಳನ್ನು ಓದಿದವರಿಗೆ ರುಚಿ ಸಲಿಕ್ಕಿಲ್ಲ. ಆದರೆ ಭಾಷಾಭ್ಯಾಸದ ಆರಂಭದಲ್ಲಿ ನವಯುವಕರಿಗೆ ಇವು ರುಚಿ ಯಾಗಿ ತೋರಿ ಭಾಷಾಭ್ಯಾಸಕ್ಕೆ ಹೊಸ ಹುರುಪನ್ನು ಕೊಡುವದರಲ್ಲಿ ಸಂದೇಹವಿಲ್ಲ. ನಿರಲಂಕಾರಪ್ರಿಯರಾದ ರವೀಂದ್ರರ ವಾಣಿಯೇ ಎಷ್ಟೋ ರೂಪಕಗಳಿಂದ, ಉಪಮೆಗಳಿಂದ, ವ್ಯಾಜೋಕ್ತಿ ಅನ್ಯೋಕ್ತಿಗಳಿಂದ ತುಂಬಿದೆ. ಉಳಿದವರ ಪಾಡೇನು! ಕಾಳಿದಾಸನ ಉಪಮೆಯಂತೂ ಜಗವನ್ನೇ ಮೋಹಿಸಿಬಿಟ್ಟಿರುವದು:

ಅಂಕಮಂಕಪರಿವರ್ತನೋಚಿತೇ । ತಸ್ಯನಿನ್ಯತುರಶೂನ್ಯತಾಮುಭೇ ॥
ವಲ್ಲಕೀ ಚ ಹೃದಯಂಗಮಸ್ವನಾ । ವಲ್ಗುವಾಗಪಿ ಚವಾಮಲೋಚನಾ ॥

ಅಗ್ನಿವರ್ಣರಾಜನ ವಾಮಲೋಚನೆ ವಲ್ಲಕಿಯರ ಸಾದೃಶ್ಯವನ್ನು ಕಾಲಿದಾಸನ ರಂಜಕತೆಯಿಂದ ಬಣ್ಣಿಸುವರಾರು?

ಇದ್ದದ್ದನ್ನು ಇದ್ದಂತೆ ಬಣ್ಣಿಸಿ, ಕುತೂಹಲವನ್ನು ಹುಟ್ಟಿಸುವದು ಸ್ವಭಾವೋಕ್ತಿ. ಆಲಂಕಾರಿಕರು "ಸ್ವಭಾವೋಕ್ತಿಸ್ತು ಡಿಂಭಾದೇಃ ಸ್ವಕ್ರಿಯಾ ರೂಪ ವರ್ಣನಂ" ಎಂದು ಈ ಅಲಂಕಾರದ ಲಕ್ಷಣವನ್ನು ಹೇಳಿರುವರು. ಕಾಲಿದಾಸನ 'ಶಾಕುಂತಲ'ದ ಓಡುವ ಜಿಗರೆಯ ವರ್ಣನೆ, ಭವಭೂತಿಯ 'ಉತ್ತರರಾಮ ಚರಿತ'ದಲ್ಲಿ ಬಾಲಕರು ಬಣ್ಣಿಸುವ ಕುದುರೆಯ ವರ್ಣನೆ ("ಪಶ್ಚಾತ್ ಪುಚ್ಛಂವಹತಿ, ಖುರಾಸ್ತಸ್ಯ ಚತ್ವಾರಏವ") ಇತ್ಯಾದಿ, ಅಥವಾ ಬಾಣಭಟ್ಟನ 'ಹರ್ಷಚರಿತ'ದಲ್ಲಿರುವ ಈ ವರ್ಣನೆ—

> ಪಶ್ಚಾದಂಗಂ ಪ್ರಸಾರ್ಯ ತ್ರಿಕನತಿವಿತತಂ ದ್ರಾಘಯಿತ್ವಾಂಗಮುಚ್ಚೈಃ
> ಆಸಜ್ಜಾಭುಗ್ನಕಂಠೋ ಮುಖಮುರಸಿ ಸಟಾಂ ಧೂಲಿಧೂಮ್ರಾಂ ವಿಧಾಯ
> ಘಾಸಗ್ರಾಸಾಭಿಲಾಷಾದನವರತ ಚಲತ್‌ಪ್ರೋಥತುಂಡಸ್ತುರಂಗೋ
> ಮಂದಂ ಶಬ್ದಾಯಮಾನೋ ವಿಲಿಖತಿ ಶಯನಾದುತ್ಥಿತಃ ಕ್ಷ್ಮಾಂ ಖುರೇಣ

ಇಂತಹ ವರ್ಣನೆಗಳ ಸ್ವಭಾವೋಕ್ತ್ಯಲಂಕಾರದ ಮಾಧುರ್ಯವನ್ನು ಕನ್ನಡ ಗದ್ಯದಲ್ಲಿ ತರಲು ತರುಣರು ಯತ್ನಿಸಬೇಕು.

ಶ್ಲೇಷಾಲಂಕಾರದ ಕವಿತೆಗಳು ಈಗಿನ ಕನ್ನಡಿಗರಿಗೆ ರುಚಿಸುವದಿಲ್ಲ. ಶಾರೀರಿಕ ದೌರ್ಬಲ್ಯದಂತೆ ಮಾನಸಿಕ ದೌರ್ಬಲ್ಯವೇ ಇದಕ್ಕೆ ಕಾರಣವಾಗಿದೆ. ಸಕ್ರಿಯ ಶಾರೀರಕ ಶಿಕ್ಷಣದಂತೆ, ಸಕ್ರಿಯ ಮಾನಸಿಕ ಶಿಕ್ಷಣವೂ ವಾಙ್ಮಯೋದ್ಯಾನದಲ್ಲಿ ವಿಹರಿಸಲು ಬಯಸುವವರಿಗೆ ಅವಶ್ಯವಾಗಿರುವದು. ನೈಷಧಕಾರನ ಬಗ್ಗೆ ಒಂದು ಐತಿಹ್ಯವಿದೆ. ಜ್ಯೋತಿಷತೀತೈಲ (ಬ್ರಾಹ್ಮೀತೈಲ)ವನ್ನು ಕುಡಿದು ಅವನ ಬುದ್ಧಿ ತೀವ್ರವಾಗಿದ್ದಿತಂತೆ; ಬಳಿಕ ಮೊಸರು ಉದ್ದುಗಳನ್ನು ತಿಂದು ಬುದ್ಧಿ ಮಂದವಾಗಿ ನೈಷಧವನ್ನು ಬರೆದನಂತೆ—ಅಂದರೂ ಅದರಲ್ಲಿ ದಮಯಂತೀ ಸ್ವಯಂವರದಲ್ಲಿ ಇಂದ್ರನಲಾದಿಗಳಿಗೆ ಸಮನ್ವಯಿಸುವ ಐದು ಅರ್ಥದ ಶ್ಲೋಕ ಗಳನ್ನು ಬರೆದಿರುವನು. ಆ ಕವಿತಾ ಜಗಜಟ್ಟಿ ಗಾಮನ ಬಲವನ್ನು ನೋಡಿ ಸಂತಸ ಕುತೂಹಲಪಡಬೇಕೋ ನಮ್ಮ ಕಲ್ಪನಾಶಕ್ತಿಯ ದೌರ್ಬಲ್ಯಕ್ಕಾಗಿ ಅಳಬೇಕೋ! ಇಂಥವರು ಯಾವಾಗಲೂ ಆದರ್ಶಮೂರ್ತಿಗಳು.

ಶ್ಲಿಷ್ಟ ಸಂಗತ ಕವಿತೆಯಲ್ಲಿಯೂ ಚಮತ್ಕಾರವಿದೆ. ಇದು ಒಬ್ಬ ಯಾಚಕನ ಉದ್ಗಾರ, ನೋಡಿರಿ. ಅವನು ಹೇಳುತ್ತಾನೆ: "ನಾನು ಕಷ್ಟಪಟ್ಟು ರಾಮನಾದೆನು ಸೀತೆಯು ಮಾತ್ರ ನನಗೆ ದೊರೆಯಲಿಲ್ಲ."

> ಜನಸ್ಥಾನೇ ಭ್ರಾಂತಂ ಕನಕಮೃಗತೃಷ್ಣಾಂಧಿತಧಿಯಾ। ವಚೋ ವೈದೇಹೀತಿ ಪ್ರತಿ ಪದಮುದಶ್ರುಪ್ರಲಪಿತಂ॥ ಕೃತಾಲಂಕಾಭರ್ತುರ್ವದನ ಪರಿಪಾಟೀಷು ಘಟನಾ। ಮಯಾಪ್ತಂ ರಾಮತ್ವಂ ಕುಶಲವಸುತಾ ನತ್ವಧಿಗತಾ॥

ರಾಮನಂತೆ ಜನಸ್ಥಾನದಲ್ಲಿ (ಜನರ ಸ್ಥಾನದಲ್ಲಿ) ಭ್ರಮಿಸಿದೆನು. ಕನಕಮೃಗ ತೃಷ್ಣೆಗಾಗಿ (ಬಂಗಾರವನ್ನು ಹುಡುಕುವ ಆಶೆಯಿಂದ) ಅವನಂತೆ 'ವೈದೇಹಿ' ಎಂದು ಕೂಗಿಕೊಂಡೆನು. ('ವೈ'–ಪಾದಪೂರಣ; 'ದೇಹಿ' ಎಂದರೆ ಕೊಡು)

ರಾಮನು ಲಂಕಾಧೀಶನ ಮುಖಗಳಲ್ಲಿ ಪರಿಪಾಟಿಯನ್ನು ಮಾಡಿದನು. ನಾನು ಯಾವ ಯಜಮಾನರ ವದನ ಪರಿಪಾಟಿಯಲ್ಲಿ ಘಟನೆಯನ್ನು ಮಾಡಲಿಲ್ಲ. ರಾಮ ನಾದೆ. ಸೀತೆ ಸಿಗಲಿಲ್ಲ.

ಕನ್ನಡದಲ್ಲಿ ಶ್ಲೇಷ ಸಾಧಿಸಲಿಕ್ಕಿಲ್ಲ. ಅವಶ್ಯವಿದ್ದಲ್ಲಿ ಪಚನವಾಗುವಷ್ಟು ಸಂಸ್ಕೃತದ ಸಹಕಾರವು ಕನ್ನಡಕ್ಕೆ ಬೇಕೇಬೇಕು. ಕನ್ನಡ ಶರೀರದಲ್ಲಿ ಸಂಸ್ಕೃತ ಶೋಣಿತವು ಅಂದಿನಿಂದ ಇಂದಿನವರೆಗೆ ಹರಿಯುತ್ತಲೇ ಇರುವದು.

**ಶ್ಲೇಷವೊತ್ತಟ್ಟಿಗಿರಲಿ.**—ಭಾಸನ ಭವ್ಯವಾದ ಭ್ರಾಂತಿಮದಲಂಕಾರದ ವಾಣಿಯು ಯಾರ ಮನಸ್ಸನ್ನು ಆವರ್ಜಿಸದು? ಇದು ಬೆಳದಿಂಗಳ ವರ್ಣನೆ. ಬೆಳದಿಂಗಳನ್ನು ನೋಡಿ ಯಾರು ಯಾರು ಹೇಗೆ ಹೇಗೆ ಭ್ರಾಂತಿಪಟ್ಟರೆಂಬುದನ್ನು ಭಾಸನು ಬಣ್ಣಿಸಿರುವನು :—

ಕಪಾಲೇಮಾರ್ಜಾರಃ ಪಯ ಇತಿಕರಾನ್‌ಲೇಢಿಶಶಿನಃ । ತರುಚ್ಛಿದ್ರಪ್ರೋತಾನ್ ಬಿಸಮಿತಿ ಕರೀ ಸಂಕಲಯತಿ ॥ ರತಾಂತೇ ತಲ್ಪಸ್ಥಾನ್ ಹರತಿ ವನಿತಾಪ್ಯಂಶುಕಮಿತಿ । ಪ್ರಭಾಮತ್ತಶ್ಚಂದ್ರೋ ಜಗದಿದಮಹೋವಿಭ್ರಮಯತಿ ॥

ಬೆಳದಿಂಗಳನ್ನು ಬೆಕ್ಕು ಹಾಲೆಂದು ನೆಕ್ಕುವದು; ತರುಚ್ಛಿದ್ರದಲ್ಲಿ ಕಮಲದ ದಂಟೆಂದು ಆನೆ ತಿಳಿಯುವದು; ರತಾಂತದಲ್ಲಿ ತರುಣಿಯು ಅಂಶುಕವೆಂದು ತಿಳಿದು ಉಟ್ಟುಕೊಳ್ಳಲು ಹಾತೊರೆಯುವಳು. ಪ್ರಭಾಮತ್ತನಾದ ಚಂದ್ರನ ಚೆಲ್ಲಾಟ ಎಷ್ಟು!

ಭಯಂಕರತೆಯಲ್ಲಿ ಕೂಡ ಮೋಹಕತೆಯನ್ನು ಹುಟ್ಟಿಸುವದು ಆಲಂಕಾರಿಕ ವಾಣಿ. ದುಃಸಹವಾದ ದುಃಖವೇದನೆಯ ಆರ್ತನಾದವನ್ನೂ ಕೂಡ ಕುತೂಹಲ ದಿಂದ ಕೇಳಹಚ್ಚುವದು ಅಲಂಕಾರದ ಮೋಹದ ಮಾತುಗಳು. ಅಲಂಕಾರದ ಮೋಹದ ಮಾತುಗಳಿಂದ ಹೇಳಿರದಿದ್ದರೆ, ಕಾಲಿದಾಸನ ಅಜ–ರತಿ ಪ್ರಳಾಪವನ್ನು ಕೇಳಲಿಕ್ಕೆ ಯಾರು ಹೋಗುತ್ತಿದ್ದರು? ಜಗತ್ತಿನಲ್ಲಿ ಅವರವರ ದುಃಖವೇ ಅವರಿಗೆ ವಿಪುಲವಾಗಿರುವದು. ಪರದುಃಖಕಾತರವಾದ ಹೃದಯವನ್ನು ಮಾಡುವದು ಆಲಂಕಾರಿಕವಾಣಿ. "ಮೊರೆಯಲೊಲ್ಲವು ತುಂಬಿ, ಬೆರೆಯಲೊಲ್ಲವು ಹಂಸೆ"—ಇದನ್ನು ಮಾಡಿರುವದು ಲಕ್ಷ್ಮೀಶನ ಭಾಷೆ.

ಯುದ್ಧವನ್ನು ನೋಡಲಿಕ್ಕೆ ಹೋಗುವವರು ಕಡಮೆ. ಆದರೆ ಆ ರಮ್ಯ ವಾರ್ತೆಯನ್ನು ಕೇಳಲಿಕ್ಕೆ ಎಲ್ಲರೂ ಉತ್ಸುಕರೇ. ಅರ್ಜುನ ಬಭ್ರುವಾಹನರ ಕಾಳಗದ ವಿವರ, ಸುಧನ್ವಾರ್ಜುನರ ಸಮರವಾರ್ತೆ ಇವುಗಳು ಲಕ್ಷ್ಮೀಶನ ಅಲಂಕಾರದ ವಾಣಿಯಿಂದ ಎಷ್ಟು ಚಿತ್ತಾಕರ್ಷಕವಾಗಿವೆ, ನೋಡಿರಿ!

ಸುಮ್ಮಸುಮ್ಮನೆ 'ಥಂಡಿ ಬಹಳ ಬಿದ್ದಿದೆ; ಜನರು ನಡುಗಿದರು' ಎಂದು ಹೇಳಿದರೆ ಯಾರು ಕೇಳುವರು? 'ಬಿದ್ದಿದ್ದೀತು. ಶೀತ ಕಟಿಬಂಧದಲ್ಲಿದೆ. ಉತ್ತರ ಅಕ್ಷಾಂಶದಲ್ಲಿದೆ' ಎಂದೆನ್ನುವರು. ಆದರೆ,

"ಹೇಮಂತ ಶೈಶಿರದ ಮಾಗಿ ಮುಡಲಿಡೆ ತರಣಿ ಸೋಮನಂತಿರೆ ಬಿಸಿಲ್ ಬೆಳದಿಂಗಳೊಲಾಗೆ, ತಾಮರಸ ರಾಜಿ ನನೆದವು ಕುಗ್ಗಿದವು ಕೋಗಿಲೆಯ ಕಂಠಕಲರುತಿಗಳು."

ಎಂದರೆ, 'ಅಪ್ಪಾ ಲಕ್ಷ್ಮೀಶಾ ಬಾ! ಇನ್ನೊಮ್ಮೆ ಬಾ! ಅವತಾರವಾಹು! ಕನ್ನಡವು ನಿರಲಂಕಾರಿಕವೆಂದು ಹಿಯ್ಯಾಳಿಸುವವರ ಹೃತ್ತಾಪವನ್ನು ನಿನ್ನ ಮಧುರ ಶೀತಲವಾಣಿಯಿಂದ ಆರಿಸು' ಎನ್ನುವೆವು. ಸುಮ್ಮನೆ 'ಬರವು ಬಿದ್ದಿದೆ' ಎಂದರೆ ಯಾರೂ ಕೆರೆ ಕಾಲುವೆಗಳನ್ನು ಕಟ್ಟಿರುವುದಿಲ್ಲ. 'ಮಾರಿಪ್ರೇಕ್ಷಣ ಪೆಣಮಯವಾಗಿದೆ ನಮ್ಮ ಜಿಲ್ಹೆ. ಕುಡಿಯಲು ನೀರಿಲ್ಲ, ತಿನ್ನಲು ಅನ್ನವಿಲ್ಲ' ಎಂಬ ಕೀರ್ತನಕಾರ ವಿಷ್ಣುಭಟ್ಟರ ಬರಗಾಲದ ವರ್ಣನೆಯನ್ನು ನೀವು ಕೇಳ ಬಹುದು. ಸಾಮಾನ್ಯರೂ ಕೂಡ, ಆ ವೀರವಾಣಿಯಿಂದ ಆಶ್ಚರ್ಯಭರಿತರಾ ತ್ತಿದ್ದಾರೆಂಬುದನ್ನು ಯೋಚಿಸಿದ್ದೇ ಆದರೆ ಜನರ ಅಲಂಕಾರಪ್ರಿಯತೆಯು ವ್ಯಕ್ತಪಡುವದು. ಸಂಸಾರವು ಮಿಥ್ಯೆ ಎಂದರೆ ಯಾರೂ ಅದನ್ನು ಬಿಡುವದಿಲ್ಲ. ಸಂಸಾರಸುಖವು 'ಬಿಸಿಲ್ಗುದುರೆ', 'ಆಗಸದ ಕುಸುಮು', 'ಬಂಜೆಯ ಮಗ', ಎಂದು ಬಣ್ಣಿಸುತ್ತ ಹೋದರೆ ಒಬ್ಬನಾದರೂ ಶುಕಮುನಿಯು ಜನಿಸಬಹುದು. ಬರೀ ಸಾದಾ ಮಾತುಗಳು ಯಾರಿಗೂ ರುಚಿಸುವದಿಲ್ಲ. ವೈರಾಗ್ಯದ ಪ್ರ ತತ್ತ್ವಗಳು ಕೂಡ ಶಂಕರಾಚಾರ್ಯರ ಮೋಹಕವಾಣಿಯಿಂದ ಸುಗ್ರಾಹ್ಯವಾದವು. ಆದುದರಿಂದ ಉಪದೇಶಕರು, ಕೀರ್ತನಕಾರರು, ಲೇಖಕರು, ವೃತ್ತಪತ್ರಕಾರರು ಅಲಂಕಾರಿಕವಾಣಿಯ ಉಪಾಸನೆಯನ್ನು ಮೊದಲು ಮಾಡಬೇಕು. 'ತನಿಗಂಪಿನಿಂ ತಂಪಿನಿಂ ಹಿಮಕರಕಾಂತದ' ಎನ್ನುವ ಯಮಕಾಲಂಕಾರದ ವಾಣಿಯನ್ನು ತಿರಸ್ಕರಿಸುವ ಕಾಲವಿನ್ನೂ ಕನ್ನಡಿಗರಿಗೆ ಬಂದಿರುವದಿಲ್ಲ.

ಅಲಂಕಾರದ ಒಣ ಡೌಲು ಏಕೆಂದು ಕೆಲವರು ಆಕ್ಷೇಪಿಸಬಹುದು. "ಅಕ್ಷರಾಣಿ ಪ್ರಕಾಶ್ಯಂತೇ ಅಂಬರಾಡಂಬರೇಣ ಕಿಂ" ಎಂಬ ಉಕ್ತಿಗೆ "ಶಂಕರೋ ರಂಬರಹೀನತ್ವಾತ್ ಪಿಶಾಚಗಣ ಸೇವಿತಃ" ಎಂದು ಉತ್ತರಕೊಟ್ಟಂತೆ, ಕೇವಲ ಡಂಭವು ಪ್ರಯೋಜನಕಾರಿಯಾಗದಿದ್ದರೂ, ಶುಷ್ಕವಾದ ಅಲಂಕಾರಗಳು ಶೋಭಿಸದಿದ್ದರೂ, ರಸಭಾವಯುಕ್ತವಾದ ಮಾತಿನ ಅಲಂಕಾರಗಳು ಶೋಭಿಸದೆ ಇರಲಾರವು. ಸಾಗರವು ರತ್ನಾಕರವೆನಿಸಿಕೊಂಡಂತೆ, ಕನ್ನಡಮಾತು ಆ ಅಲಂಕಾರಗಳ ಕರವಾಗಲಿ, ಯಾರು ಎಷ್ಟು ಹೊತ್ತುಕೊಂಡುಹೋದರೂ ಸಮುದ್ರದಂತೆ ಅದಕ್ಕೆ ಚ್ಯುತಿ ಇಲ್ಲದಿರಲಿ. ಕನ್ನಡಿಗರ ಅರಸನನ್ನು ಆಶ್ರಯಿಸಿದ ಬಿಲ್ಹಣನ ದರ್ಶನ ಕನ್ನಡ ಭಾಷೆಗೆ ಬರಲಿ.

> ರತ್ನೇಷು ಲುಪ್ತೇಷು ಬಹುಷ್ವಮರ್ತ್ಯೈರದ್ಯಾಪಿ ರತ್ನಾಕರ ಏವ ಸಿಂಧುಃ
> ಗೃಹ್ಣಂತು ಸರ್ವೇ ಯದಿವಾ ಯಥೇಷ್ಟಂ ನಾಸ್ತಿ ಕ್ಷತಿಃ ಕ್ವಾಪಿ ಕವೀಶ್ವರಾಣಾಂ

ಸರಲಕವಿ ಸರ್ವಜ್ಞನೂ ಕನ್ನಡದಲ್ಲಿ ಪ್ರಾಸಾಲಂಕಾರ ಪ್ರಿಯನಾಗಿರುವನು.

# ಪರಿಷತ್ತಿನ ಕಂಠಪಾಠ ಸ್ಪರ್ಧೆ

## ಸಂಗ್ರಹ ವರದಿ

೧೯೩೭ನೆಯ ವರ್ಷದ ಮೇ ತಿಂಗಳಲ್ಲಿ ವಿಶೇಷ ಸಾಹಿತ್ಯೋತ್ಸವದ ಅಂಗವಾಗಿ ಬಾಲಕರಿಗೂ ಬಾಲಕಿಯರಿಗೂ ಒಟ್ಟು ನಾಲ್ಕು ಕಂಠಪಾಠ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತಷ್ಟೆ. ಆ ಪ್ರಯತ್ನಕ್ಕೆ ದೊರೆತ ಪ್ರೋತ್ಸಾಹದ ಫಲವಾಗಿ ಅದನ್ನು ಮತ್ತೆ ಪ್ರತ್ಯೇಕಸಮಾರಂಭವಾಗಿ ನಡಸಬೇಕೆಂಬ ಆಲೋಚನೆಮೂಡಿತು. ಕಾರ್ಯನಿರ್ವಾಹಕ ಮಂಡಲಿ ಈ ಆಲೋಚನೆಗೆ ತಾ॥ ೨೫-೭-೧೯೩೭ರಲ್ಲಿ ಒಪ್ಪಿಗೆಕೊಟ್ಟು, ಕಾರ್ಯಕ್ರಮದ ವಿವರವನ್ನು ಗೊತ್ತುಮಾಡಿ ಸ್ಪರ್ಧೆಗಳನ್ನು ನಡಸಿಕೊಡಲು ಒಂದು ಸಮಿತಿಯನ್ನು ನೇಮಕಮಾಡಿತು. ಈ ಸಮಿತಿ ಸ್ಪರ್ಧೆಗೆ ಸಂಬಂಧಪಟ್ಟ ನಿಯಮ, ಪದ್ಯಭಾಗ ಮುಂತಾದ ವಿವರಗಳನ್ನು ನಿಶ್ಚಯ ಮಾಡಿತು. ಈ ವಿವರವನ್ನೊಳಗೊಂಡ ಪ್ರಸಿದ್ಧಪತ್ರಿಕೆಯನ್ನು ಎಲ್ಲ ಕನ್ನಡ ವೃತ್ತಪತ್ರಿಕೆಗಳಿಗೂ, ಬೆಂಗಳೂರು ನಗರದಲ್ಲಿರುವ ಎಲ್ಲ ಹೈಸ್ಕೂಲು, ಮಿಡಲ್ ಸ್ಕೂಲು, ಪ್ರೈಮರಿ ಸ್ಕೂಲುಗಳಿಗೂ ಕಳುಹಿಸಿಕೊಡಲಾಯಿತು.

ಕಳೆದ ಸಲ ನಾಲ್ಕು ಸ್ಪರ್ಧೆಗಳನ್ನು ಮಾತ್ರ ಏರ್ಪಡಿಸಲಾಗಿತ್ತು. ಈ ಸಾರಿ ಬಾಲಕಿಯರಿಗೆ ಮೂರು, ಬಾಲಕರಿಗೆ ಮೂರು ಹೀಗೆ ಒಟ್ಟು ಆರು ಸ್ಪರ್ಧೆಗಳನ್ನು ಏರ್ಪಡಿಸಿತ್ತು.

ಸ್ಪರ್ಧೆಗಾಗಿ ಒಟ್ಟು ೧೬ ಪಾಠಶಾಲೆಗಳು ೧೬೪ ಮಂದಿ ಬಾಲಕ ಬಾಲಕಿಯರ ಹೆಸರುಗಳನ್ನು ಕಳುಹಿಸಿದ್ದುವು. ಈ ಪೈಕಿ ೧೪೪ ಮಂದಿ ಸ್ಪರ್ಧೆಗಳಲ್ಲಿ ಹಾಜರಿದ್ದರು. ಸಾಕಾದಷ್ಟು ಸ್ಪರ್ಧಿಗಳಿಲ್ಲದ್ದರಿಂದ ಹೈಸ್ಕೂಲು ಬಾಲಕಿಯರ ಸ್ಪರ್ಧೆ ನಡೆಯಲಿಲ್ಲ.

ಸ್ಪರ್ಧೆಗಳು ಕಳೆದ ನವೆಂಬರ್ ತಿಂಗಳು ೧೬, ೧೭, ೧೮ನೆಯ ತಾರೀಖುಗಳಲ್ಲಿ ಪ್ರತಿದಿನವೂ ಸಂಜೆ ೫॥ ಘಂಟೆಗೆ ಪರಿಷನ್ಮಂದಿರದಲ್ಲಿ ಪ್ರಾರಂಭವಾಗಿ ಯಶಸ್ವಿಯಾಗಿ ನಡೆದುವು.

ಪರಿಷತ್ತಿನ ಸದಸ್ಯರಾದ ಹಲವು ಮಂದಿ ಮಹಿಳೆಯರೂ ಮಹನೀಯರೂ ಸ್ಪರ್ಧೆಗಳಲ್ಲಿ ಪರೀಕ್ಷಕರಾಗಿದ್ದು ಸಹಾಯಮಾಡಿದರು.

ಪರೀಕ್ಷಕರು ಸರ್ವಾನುಮತದಿಂದ ಶಿಫಾರಸುಮಾಡಿದ ಪ್ರೈಮರಿ ಸ್ಕೂಲ್ ಬಾಲಕರು ೬ ಮಂದಿ, ಬಾಲಕಿಯರು ೮ ಮಂದಿ; ಮಿಡಲ್ ಸ್ಕೂಲ್ ಬಾಲಕರು ಇಬ್ಬರು, ಬಾಲಕಿಯರು ೫ ಮಂದಿ; ಹೈಸ್ಕೂಲ್ ಬಾಲಕ ಒಬ್ಬನು—ಇವರುಗಳಿಗೆ ಬಹುಮಾನಗಳನ್ನು ಕೊಡಲಾಯಿತು.

ಕಿರಿಯ ಬಾಲಕ ಬಾಲಕಿಯರಲ್ಲಿ ಕಂಡುಬಂದಷ್ಟು ಶ್ರದ್ಧೆ ಉತ್ಸಾಹಗಳು ಹಿರಿಯ ಬಾಲಕ ಬಾಲಕಿಯರಲ್ಲಿ ಕಂಡುಬರಲಿಲ್ಲ. ಸ್ಪರ್ಧೆಗೆ ಬಂದಿದ್ದ ೧೧ ಮಂದಿ ಹಿರಿಯ ಬಾಲಕರ ಕಂಠಪಾಠ ಪ್ರದರ್ಶನವು ಅವರಿಂದ ಅಪೇಕ್ಷಿಸಬಹುದಾದಷ್ಟು

ಉತ್ಕೃಷ್ಟವಾಗಿರಲಿಲ್ಲವೆಂದು ಪರೀಕ್ಷಕರೆಲ್ಲರೂ ಅಭಿಪ್ರಾಯಪಟ್ಟಿದ್ದಾರೆ. ಹಿರಿಯ ಬಾಲಕಿಯರಂತೂ ಇಬ್ಬರೇ ಮುಂದೆ ಬಂದದ್ದರಿಂದ ಆ ಸ್ಪರ್ಧೆ ನಡೆಯಲೇ ಇಲ್ಲ. ಇನ್ನು ಮುಂದೆಯಾದರೂ ಇಂಥ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳು ಉತ್ಸಾಹ ದಿಂದ ಭಾಗವಹಿಸುವಂತೆ ಅವರ ಪೋಷಕರೂ, ಶಾಲಾ ಉಪಾಧ್ಯಾಯರುಗಳೂ ಪ್ರೋತ್ಸಾಹಪಡಿಸಬೇಕೆಂದು ಬೇಡುತ್ತೇವೆ.

ಒಟ್ಟಿನಮೇಲೆ ಈ ವರ್ಷದ ಸ್ಪರ್ಧೆಗಳು ನಾವು ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ಆಕರ್ಷಕವಾಗಿ ನಡೆದಿವೆ ಎಂದು ಹೇಳಬಹುದು. ಜಯಶೀಲರಾದ ಬಾಲಕ ಬಾಲಕಿಯರಿಗೆ ಬಹುಮಾನವಾಗಿ ಕೊಡಲು ದ್ರವ್ಯರೂಪವಾಗಿಯೂ ಪುಸ್ತಕರೂಪ ವಾಗಿಯೂ ಈ ಮಹನೀಯರು ವಿಶೇಷ ಸಹಾಯಮಾಡಿರುತ್ತಾರೆ:

ಶ್ರೀ॥ ಗಳಾದ ಬಿ. ವೆಂಕಟನಾರಾಯಣಪ್ಪನವರು, ಎನ್. ವೆಂಕಟೇಶ ಐಯಂಗಾರ್ಯರು, ಮಾಸ್ತಿ ವೆಂಕಟೇಶ ಐಯಂಗಾರ್ಯರು, ಬಿ. ಎಂ. ಶ್ರೀಕಂಠಯ್ಯನವರು, ಡಾ॥ ಎ. ಪಿ. ಸಂಪತ್ಕುಮಾರನ್ ಅವರು, ಗೊರೂರು ರಾಮಸ್ವಾಮಿ ಐಯಂಗಾರ್ಯರು, ಜಿ. ಪಿ. ರಾಜರತ್ನಂ ಅವರು ಮತ್ತು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘ.

ಬೆಂಗಳೂರು ದೊಡ್ಡಪೇಟೆಯಲ್ಲಿರುವ 'ಮಾರುತಿ ಜ್ಯೂಯಲರಿ ಹಾಲ್'ನ ಮಾಲೀಕರಾದ ಶ್ರೀ॥ ಶಾಮಯ್ಯನವರು ಒಂದು ದೊಡ್ಡ ಬೆಳ್ಳಿಯ ಬಟ್ಟಲ ಬಹುಮಾನವನ್ನು ದಯಪಾಲಿಸಿ ಶ್ಲಾಘ್ಯವಾದ ಸಹಾಯವನ್ನು ಮಾಡಿದ್ದಾರೆ. ಅವರು ಕೊಟ್ಟಿರುವ ಈ ಬಹುಮಾನವನ್ನು ಬರುವ ವರ್ಷದಿಂದ ಪರಿಷತ್ತಿನ ಕಂಠಪಾಠ ಸ್ಪರ್ಧೆಯ ಪರ್ಯಾಯ ಪಾರಿತೋಷಿಕವಾಗಿ (ರೋಲಿಂಗ್ ಕಪ್) ಉಪಯೋಗ ಮಾಡಲಾಗುತ್ತದೆ.

ಕನ್ನಡ ನಾಡಿನಲ್ಲೆಲ್ಲ ಸನ್ಮಾನ್ಯರೂ ಉದಾರಿಗಳೂ ಆದ ರಾಜಸಭಾಭೂಷಣ ದಿವಾನ್ ಬಹದ್ದೂರ್ ಡಾ॥ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟಿ, ಸಿ.ಐ.ಇ., ಎಲ್ಎಲ್.ಡಿ. ಅವರು ದೇಹಶ್ರಮವನ್ನು ಲಕ್ಷಿಸದೆ ಈ ಸಮಾರಂಭದ ಅಧ್ಯಕ್ಷತೆ ವಹಿಸಿದ್ದು ನಮ್ಮೆಲ್ಲರ ಭಾಗ್ಯೋದಯ; ಹಾಗೆಯೇ ಲೇಡಿ ಪುಟ್ಟಣ್ಣಶೆಟ್ಟಿ ಅವರು ಬಹುಮಾನ ಗಳನ್ನು ತಮ್ಮ ಶುಭಹಸ್ತದಿಂದ ಹಂಚಿದುದು ವಿಶೇಷ ಆನಂದದ ಸಂಗತಿ. ಇವರಿಬ್ಬರಿಗೂ ನಮ್ಮ ಅಪಾರವಾದ ಕೃತಜ್ಞತೆಯನ್ನು ಸಮರ್ಪಿಸಬಯಸುತ್ತೇನೆ.

ವಿ. ಟಿ. ತಿರುನಾರಾಯಣ ಐಯಂಗಾರ್,
ವ್ಯವಸ್ಥಾಪಕ,
ಕಂಠಪಾಠ ಸ್ಪರ್ಧೆಯ ಸಮಿತಿ.

ಬೆಂಗಳೂರು,
೧–೧೨–೧೯೩೭.

# ಗ್ರಂಥ ವಿಮರ್ಶೆ ಮತ್ತು ಸ್ವೀಕಾರ

೧. **ಬೈಲಹಳ್ಳಿ ಸರ್ವೆ.**—ಲೇಖಕರು: ಶ್ರೀ॥ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು; ಪ್ರಕಾಶಕರು: ಭಾರತಿ ಸಾಹಿತ್ಯ ಮಂದಿರ, ಬೆಂಗಳೂರು; ಕ್ರೌನ್ ಅ. ಪ. ಪು. ೧೩೫; ಬೆಲೆ: ೧ ರೂ.

ಗ್ರಾಮಜೀವನದ ಸೊಗಸನ್ನು ವಾಸ್ತವವಾಗಿ, ಆದರೆ ತುಂಬ ನಗೆಗಾರಿಕೆಯಿಂದ, ಚಿತ್ರಿಸಿ ಕನ್ನಡಿಗರಿಗೆ ಹೊಸ ಸಾಹಿತ್ಯ ಕ್ಷೇತ್ರವನ್ನು ಒದಗಿಸಿಕೊಟ್ಟ ಶ್ರೀ॥ ಗೊರೂರರು ಕನ್ನಡ ಓದುಗರಿಗೆ ಚಿರಪರಿಚಿತರಾಗಿದ್ದಾರೆ. ಪ್ರಸ್ತುತ ಪುಸ್ತಕವು 'ಹಳ್ಳಿಯ ಚಿತ್ರಗಳು', 'ನಮ್ಮೂರಿನ ರಸಿಕರು' ಇವುಗಳಂತೆಯೇ ಓದುಗರನ್ನು ನಗೆಯ ತೆರೆಗಳಮೇಲೆ ಕುಣಿಸಿ ಹಳ್ಳಿಗರ ಜೀವನದ ಸುಸ್ಪಷ್ಟ ಚಿತ್ರದಿಂದ ರಂಜಿಸಿ ವಿಚಾರಮಾಡಲು ಹಚ್ಚುತ್ತದೆ.

ಬೈಲಹಳ್ಳಿ ಎಂಬ ಗ್ರಾಮವನ್ನು ಸರ್ವೆಮಾಡಲು ಬಂದ ಅಧಿಕಾರಿ ಹಾಗೂ ಆತನ ಜೊತೆಗಾರರು—ಇವರ ಅನುಭವಗಳು ಇಲ್ಲಿ ಚಿತ್ರಿಸಲ್ಪಟ್ಟವೆ. ಶಿಂಗ್ಲಾಚಾರಿಯ ಜೀನತನ, ಹಳ್ಳಿಯ ಪಟೇಲ, ಮೋಜಿನಿದಾರರ ವಿಚಿತ್ರ ವೇಷ ಭಾಷೆ ಇವುಗಳಿಂದ ಮೊದಲಾಗುವ ಹಾಸ್ಯದ ಹೊನಲು ನಾಣಿಯಂತಹ ನಗೆಗಾರನ ಪಾತ್ರದಿಂದ ಕೊನೆಯವರೆಗೆ ಅವ್ಯಾಹತವಾಗಿ ಸ್ಫುಟವಾಗಿ ಹರಿದು ಬರುತ್ತದೆ. ಗೊರೂರರ ನಾಣಿ ನಮ್ಮ ಸಾಹಿತ್ಯದಲ್ಲಿ ಚಿರಕಾಲ ಬಾಳಬಹುದಾದ ಪಾತ್ರ. ಅವ್ಯವಸ್ಥಿತವಾದ ಮೂವತ್ತು ಮನೆಗಳಿಂದ ಕೂಡಿದ, ಯಾರಿಗೂ 'ಬರಾವು' ಗೊತ್ತಿಲ್ಲದ ಬೈಲಹಳ್ಳಿಯ ತೀರ ಸಾಮಾನ್ಯ ಜೀವನದಲ್ಲಿಯೂ ರಸಗಂಗೆಯನ್ನು ಹರಿಯಿಸಿದ ನಾಣಿ, ಅವನನ್ನು ನಿರ್ಮಿಸಿದ ಲೇಖಕರು—ಇವರುಗಳು ಓದುಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಬೈಲಹಳ್ಳಿಯ ಸರ್ವೆ ನಡೆಯುತ್ತಿರುವ ಕಾಲದ ಉತ್ಸಾಹ, ಆಗ ಹಳ್ಳಿಗರಲ್ಲಿ ಉಂಟಾದ 'ನಾವೆಲ್ಲ ಒಂದೇ ಸಂಸಾರಕ್ಕೆ ಸೇರಿದವರು' ಎಂಬ ಭಾವನೆ, ಆಗ ಹೊರಬಿದ್ದ ಅವರ ಅನುಭವ, ವಿಚಾರಗಳ ವಿಶಾಲತೆ—ಇವೆಲ್ಲ ಹಳ್ಳಿಯ ಜನಜೀವನದ ಕನ್ನಡಿಯನ್ನು ಓದುಗರ ಎದುರಿಗೆ ಹಿಡಿಯುತ್ತಿವೆ. ಆಗಿನ ಅನುಭವಗಳನ್ನು ಲೇಖಕರು ದಿನಚರಿಯ ರೂಪದಲ್ಲಿ ಬರೆದಿದ್ದಾರೆ. ಆ ಅನುಭವಗಳು ಹಳ್ಳಿಗರ ಸಂಸ್ಕೃತಿಯ ಆಳವನ್ನು ತಿಳಿಯುವ ಸಾಧನಗಳೆಂದು ಲೇಖಕರು ಹೇಳುವ ಮಾತು ನಿಜವಾಗಿದೆ. ಮಾತು ಮಾತಿಗೆ ಹೊರಬೀಳುವ ನಾಣಿಯ ಪದಗಳು ಹಾಸ್ಯದ ಬುದ್ಬುದ ತರಂಗಗಳನ್ನು ಎಬ್ಬಿಸುತ್ತಿವೆ. ಆತನು ದಿವಸಕ್ಕೆ ನೂರಾರು ಪ್ರಾಸಗಳನ್ನು ಸರಿಯಾಗಿಯೋ ತಪ್ಪಾಗಿಯೋ, ಅರ್ಥದೊಂದಿಗೋ ಅರ್ಥವಿಲ್ಲದೆಯೋ ಹೇಳುತ್ತಿದ್ದನು. ಸುಬ್ಬೇಗೌಡನ ಕತೆಗಳು ಹಳ್ಳಿಗರ ವಿಚಿತ್ರ ನಂಬಿಕೆ, ಅವರ ಅನುಭವ, ವಿಚಾರಗಳ ಪಡಿನೆಳಲಾಗಿವೆ. ಸುಬ್ಬೇಗೌಡನು ತಮ್ಮ

ಅವ್ವನು ತನಗೆ ಹೇಳಿದ್ದ ಕತೆಗಳನ್ನೆಲ್ಲಾ ಬರೆದುಕೊಂಡಿದ್ದರೆ ಹತ್ತು ಮಹಾಭಾರತ ವಾಗಬಹುದಾಗಿತ್ತು ಎಂದು ಹೇಳುವವರಲ್ಲಿ ಸ್ವಾರಸ್ಯವಿದೆ.

ಈ ಪುಸ್ತಕದಲ್ಲಿಯ ಒರಟು ರಂಗಸ್ವಾಮಿ, ಕುರಿ ತಿಮ್ಮ, ವೇಷ್ಟಿ ಕೃಷ್ಣ, ಇಂಜಿನ್ ಯಾಲಕ್ಕಿ, ಫಾರಿನ್ ಕಂಟ್ರಿ, ಬ್ಲಾಕ್ ಬರ್ಡ್ ಮುಂತಾದ ವಿಚಿತ್ರ ಪಾತ್ರ ದರ್ಶನವು ತುಂಬ ಮಾರ್ಮಿಕವಾಗಿದೆ. "ತಂದಾನೋ ತಾನಾನಿ ತಾನು ತಾ ತಂದಾನೋ ತಂದಾನೋ" ಎಂಬ ತಾನವನ್ನು ಉತ್ಸಾಹದಿಂದ ಹೇಳುವ ಹಳ್ಳಿಗರ ಕೋಲಾಟ, "ತೇರಿಗ್ಹೋಗೋಣ ಬನ್ನಿರೋ ಸ್ವಾಮಿರಥಕ್ಹೋಗೋಣ ಬನ್ನಿರೋ" ಎಂದು ಸರಸವಾಗಿ ಪದಹೇಳುವ ರಥೋತ್ಸವದ ವರ್ಣನೆ, ಅವರ ಬೇಟೆಯ ಸಂಭ್ರಮ—ಇವೆಲ್ಲ ಅವರ ಶುಷ್ಕ ದಿನಚರಿಯಲ್ಲಿಯ ಸೊಗಸಿನ ಬುಗ್ಗೆಗಳಾಗಿವೆ. ಹಾಸ್ಯಲೋಲ ನಾಣಿಯ 'ಫಾಲಿನ್' ಹಾಗೂ 'ಲೆಫ್ಟ್ ರೈಟ್' ಇವು ಸರ್ವೆಗೆ ಹೆದರುತ್ತಿದ್ದ ಹಳ್ಳಿಗರನ್ನು ಮೋಜಿನಿಗೆ ಹುರಿದುಂಬಿಸಿದವು. ಗಂಭೀರ ಸ್ವಭಾವದ ಸ್ವಲ್ಪ ಜೋರಾದ ಆಸಾಮಿಯಾದ ಮೋಜಿನಿದಾರನು ಕೂಡ ಸ್ವಲ್ಪ ದಿನಗಳಲ್ಲಿ ನಾಣಿಯ ಪ್ರಭಾವದಿಂದ ಸರಳ ಹಾಗೂ ರಸಿಕ ಮನುಷ್ಯನಾಗಿ ಮಾರ್ಪಡುತ್ತಾನೆ. ಆತನು ಹೊರಟುಹೋದಮೇಲೆ ನಾಣಿಗೆ ಬರೆದಂತಿರುವ ಪತ್ರವು ಈ ಪುಸ್ತಕದ ತಿರುಳಿನಂತಿದೆ:

"...., ನನ್ನ ಇಪ್ಪತ್ತು ವರುಷದ ಅನುಭವದಲ್ಲಿ ನೂರಾರು ಗ್ರಾಮಗಳನ್ನು ನೋಡಿದ್ದೇನೆ; ಅಳೆದಿದ್ದೇನೆ. ಎಲ್ಲಾ ಕಡೆಯೂ ಒಂದೇ ಸಮ; ಒಂದೇ ಗೋಳು; ಒಂದೇ ದಾರಿದ್ರ್ಯ; ಒಂದೇ ಕೊಳಕು, ಅಜ್ಞಾನ. ಬೈಲಹಳ್ಳಿಯಲ್ಲಿಯೂ ಅದೇ ಅಜ್ಞಾನ, ಅದೇ ಗೋಳು. ಆದರೆ ನಿಮ್ಮ ಉತ್ಸಾಹದಿಂದ ಆ ಗೋಳು ಸ್ವಲ್ಪ ತಲೆ ತಗ್ಗಿಸಿತ್ತು. ಅಳುವುದಕ್ಕೆ ಸಾವಿರ ಕಾರಣಗಳಿದ್ದು ನಗುವುದಕ್ಕೆ ಒಂದು ಕಾರಣವಿದ್ದರೆ ಆ ಒಂದು ಕಾರಣವನ್ನು ನೀವು ಬಲಪಡಿಸಿ ನಗುತ್ತಿದ್ದಿರಿ. ನೋವು ಗೋಳುಗಳ ಹಿಂದೆ ಹೊಂಚುಹಾಕುತ್ತಿರುವ ನಗೆಯನ್ನು ಹಿಡಿಯುವುದೇ ಜೀವನದ ತಿರುಳು (ದಪ್ಪಕ್ಷರ ನಮ್ಮವು), ಅದೇ ನಮ್ಮ ಮುಂದಲ ಉತ್ಸಾಹಕ್ಕೆ ದಾರಿ. ಲೋಕವನ್ನು ಸೃಷ್ಟಿಸಿದ ಭಗವಂತನ ಗುರಿಯೂ ಅದೇ ಅಂತ ಕಾಣುತ್ತದೆ. ಅದನ್ನು, ನೀವು ನನಗೆ ತೋರಿಸಿದ ದಾರಿಯನ್ನು ನಾನೆಂದು ಮರೆಯಲಾರೆ."

'ಬೈಲಹಳ್ಳಿ ಸರ್ವೆ' ಯನ್ನು ಓದಿ ಮುಗಿಸುವ ವಾಚಕರು ಈ ಮೋಜಿನಿದಾರನ ಈ ಮಾತುಗಳನ್ನು ಅಕ್ಷರಶಃ ಸಮರ್ಥಿಸಬೇಕಾಗುತ್ತದೆ. ಮೋಜಿನಿದಾರನು ಕೊನೆಗೆ ಹೇಳುವ "ನಾನೇನೋ ಈ ಪ್ರಯಾಣ, ನಿಮ್ಮೂರ ಈ ಪದಗಳು, ಆ ಕತೆಗಳು, ಸುಬ್ಬೇಗೌಡ, ಸಣ್ಣಪ್ಪ ಯಾರನ್ನೂ ಮರೆಯುವಂತೆ ಇಲ್ಲ" ಎಂಬ ಮಾತುಗಳನ್ನು ಓದುಗರೂ ಹೇಳದೆ ಇರಲಾರರು. ಶ್ರೀ॥ ಗೊರೂರರ ಸಾಹಿತ್ಯ ಪ್ರಪಂಚದಲ್ಲಿ ನಮಗೆ ದೊರೆಯುವ ನಾಣಿಯಂತಹವರ ಸಹವಾಸ ವಾಸ್ತವ ಪ್ರಪಂಚದಲ್ಲಿ ಯಾವಾಗಲೂ ದೊರೆಯಬಹುದಾದರೆ! ಎಂಬ ಆಳವಾದ ಆಶೆಯನ್ನು ಈ ಗ್ರಂಥವು ಹುಟ್ಟಿಸುತ್ತಿದೆ.

ಪುಸ್ತಕದ ಹೆಸರಿನಲ್ಲಿಯೇ ಇರುವ 'ಸರ್ವೆ', ಹಾಗೂ ಪುಸ್ತಕದ ತುಂಬ ಬರುವ ಪರಭಾಷೆಯ ಶಬ್ದಗಳು ಅನಿವಾರ್ಯವೇನೋ ಎಂದೆನಿಸುತ್ತದೆ.

'ಬೈಲಹಳ್ಳಿ ಸರ್ವೆ'ಯು ಹಳ್ಳಿಗರ ಸಂಸ್ಕೃತಿಯ ಕೈಪಿಡಿಯಾಗಿದೆ. ಗೊರೂರರ ಗ್ರಂಥಗಳಲ್ಲಿ ಚಿತ್ರಿತವಾದ ಹಳ್ಳಿಗರ ಭಾವ, ಭಾಷೆ, ವಿಚಾರ, ನಂಬಿಕೆ, ಅನುಭವಗಳೂ, ಹಾಗೂ ಲೇಖಕರ ಸ್ವಭಾವ ನಿರೂಪಣ ಹಾಸ್ಯದ ಬುಗ್ಗೆ ಇವುಗಳೂ ಆಧುನಿಕ ಕನ್ನಡ ಸಾಹಿತ್ಯಕ್ಕೆ ಉತ್ತಮ ಕಾಣಿಕೆಗಳಾಗಿವೆ.

ಎಸ್. ಎಸ್. ಮಾಳವಾಡ

---

೨. **ಹುಚ್ಚಾಟಗಳು.**—ಲೇಖಕರು: ಶ್ರೀ॥ ದ. ರಾ. ಬೇಂದ್ರೆ, ಎಂ.ಎ.; ಪ್ರಕಾಶಕರು: ಸಾಹಿತ್ಯ ಭಾಂಡಾರ, ಹುಬ್ಬಳ್ಳಿ; ಕ್ರೌ೯ ಅ. ಪ. ಪು. ೬ + ೧೩೦; ಬೆಲೆ: ೧ ರೂಪಾಯಿ.

ಹುಚ್ಚು ಅನೇಕ ಬಗೆ. ಹುಚ್ಚಿಗೆ ಕಾರಣಗಳನೇಕ: ಮಾನಸಿಕ ದೌರ್ಬಲ್ಯ, ಚಿಂತೆ, ದುಃಖ, ನಾಶ ಇವು ಕೆಲವು ಸಾಮಾನ್ಯ ಕಾರಣಗಳು. ಮನಸ್ಸಿನ ವಿಕಾರ ವೈಪರೀತ್ಯಗಳಲ್ಲಿ ಒಂದು ಬಗೆಯ ಹುಚ್ಚು ವ್ಯಕ್ತವಾಗುವುದು.

ಶ್ರೀ॥ ದ. ರಾ. ಬೇಂದ್ರೆಯವರ ಈ ಪುಸ್ತಕದಲ್ಲಿ ಐದು ಸಣ್ಣ ಪ್ರಹಸನಗಳು ಅಡಗಿವೆ: (೧) 'ದೆವ್ವನ ಮನೆ', (೨) 'ಹಳೆಯ ಗೆಣೆಯರು', (೩) 'ಸಾಯೋ ಆಟ', (೪) 'ತಿರುಕರ ಪಿಡುಗು,' ಮತ್ತು (೫) 'ಗೋಲ್'. ಈ ಎಲ್ಲ ಪ್ರಹಸನಗಳಲ್ಲಿಯೂ ಸನ್ನಿವೇಶದಿಂದಾಗಲಿ ಪಾತ್ರದಿಂದಾಗಲಿ ವಕ್ರತೆ, ವೈಪರೀತ್ಯಗಳು ತೋರಿಬರುವುವು. ಈ ಎಲ್ಲ ಚಿತ್ರಗಳಿಗೂ ವಿಶಾಲ ಜೀವನದ ಪ್ರಸಂಗಗಳೇ ವಸ್ತು. ಬಹುಮುಖವಾದ ಜೀವನದಲ್ಲಿ ವಕ್ರತೆ ವಿಕಾರಗಳಿಗೆ ಮಿತಿಯಿಲ್ಲ. ಸಾಮಾನ್ಯವಾಗಿ ಎಲ್ಲರ ನಡತೆಯಲ್ಲಿಯೂ ಒಂದು ವೈಪರೀತ್ಯವನ್ನು ಕಾಣಬಹುದು. ಸರಿಯಾಗಿಯೇ ಕಾಣುವ ವ್ಯಕ್ತಿಗಳ ನಡತೆಯನ್ನು ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸಿದರೆ ಒಂದು ವ್ಯಂಗ್ಯತೆ ತೋರದಿರಲಾರದು. ಸಮಾಜವಿರುದ್ಧವಾದ ನಡವಳಿಕೆ ಮನುಷ್ಯನಲ್ಲಿ ಒಂದು ಬಗೆಯ ಮನೋವೈಪರೀತ್ಯವನ್ನು ಉಂಟುಮಾಡುವುದು. ಸಮಾಜ ನಿಯಮಕ್ಕೆ ಹೊಂದಿಕೊಳ್ಳುವುದರಲ್ಲಿ ತನ್ನ ಸ್ವಭಾವಕ್ಕೂ ತನ್ನ ಆವರಣ ಸನ್ನಿವೇಶಗಳಿಗೂ ಒದಗುವ ಹೋರಾಟವೇ ಒಂದು ರೀತಿಯಲ್ಲಿ ವಕ್ರತೆಯನ್ನು ತೋರ್ಪಡಿಸುವುದು.

ಈ ಪ್ರಹಸನಗಳಲ್ಲಿನ ಕಥೆಗಳನ್ನು ಹೀಗೆ ಸಂಗ್ರಹಿಸಬಹುದು:

**'ದೆವ್ವನ ಮನೆ'.**— ಸತ್ಯವಂತರಾಯನೆಂಬ ಯುವಕನು ಅತ್ತೆ-ಸೊಸೆ, ಗಂಡ-ಹೆಂಡತಿ, ತಾಯಿ-ಮಗ—ಈ ಹೋರಾಟಗಳ ಮಧ್ಯೆ ಸಿಕ್ಕಿದ್ದಾನೆ. ಅವನು ಸಂಸಾರ ತಾಡಿತನಾಗಿ ಮತಿಶೂನ್ಯನಾಗಿ ಈ ಕಷ್ಟದಿಂದ ಹೇಗೆ ಪಾರಾಗಬೇಕೆಂದು ಮುಂಗಾಣದೆ ಕಷ್ಟದ ಸಮ್ಮುಖದಲ್ಲಿ ಸಮಾಧಿಮಗ್ನನಾಗುವನು. ತನ್ನ ಕಷ್ಟಕ್ಕೆಲ್ಲ ದೆವ್ವಹಿಡಿದ ತನ್ನ ಮನೆಯೇ ಕಾರಣವೆಂದೂ ತನ್ನ ಹೆಂಡತಿಗೆ ದೆವ್ವಹಿಡಿದಿದೆಯೆಂದೂ ಭಾವಿಸಿ ಊರಲ್ಲಿ ತಾನು ಕಂಡ ಮಾಂತ್ರಿಕ, ಯಾಂತ್ರಿಕ, ತಾಂತ್ರಿಕ, ಹಕೀಮ್, ಆಯುರ್ವೇದದ ವೈದ್ಯ, ಇಂಗ್ಲಿಷ್ ಡಾಕ್ಟರ್—ಈ ಎಲ್ಲರನ್ನೂ ಒಂದೇ ಸಲ ಕರಸುವನು. ಅಲ್ಲಿನ ಬೇನೆಯ ಪರಿಹಾರಕ್ಕೆ ಬೇಕಾಗಿದ್ದುದು ಔಷಧಿಯಲ್ಲ; ಪರಿಸ್ಥಿತಿಯ ವ್ಯತ್ಯಾಸ. ಸತ್ಯವಂತರಾಯನ ಸ್ನೇಹಿತನಾದ ಗುರುರಾಜನು ಪರಿಸ್ಥಿತಿಯನ್ನರಿತು ಸತ್ಯವಂತರಾಯನಿಗೆ ಸುಖಶಾಂತಿಗಳನ್ನು ಕಲ್ಪಿಸುವನು. ಸತ್ಯವಂತರಾಯನು ಸನ್ನಿವೇಶಕ್ಕೆ ಕಟ್ಟುಬಿದ್ದು ಅದರೊಡನೆ ಹೋರಾಡುವ ಚಿತ್ರವು ಒಂದು ರೀತಿಯ ಮನೋವಿಕಾರವನ್ನು ವ್ಯಕ್ತಪಡಿಸುವುದು.

'ಹಳೆಯ ಗೆಳೆಯರು'.—ನಿವೃತ್ತ ನ್ಯಾಯಾಧಿಕಾರಿ ಪದ್ಮನಾಭರಾಯರು, ನಿವೃತ್ತ ಪೋಲೀಸ್ಅಧಿಕಾರಿ ವಿಶ್ವಾಸರಾಯರು ಪರಮನೀತಿವಂತರಂತೆ ನಟಿಸುತ್ತ, "ಮಾಯಾತೀತ" "ಹರಿದಾಸ" ಎಂದು ಹೇಳಿಕೊಳ್ಳುತ್ತ ಇರುವಾಗ ನಿವೃತ್ತ ನರ್ಸ್ ಸುಂದರಾಬಾಯಿ ಅವರಿದ್ದಲ್ಲಿಗೆ ಬರಲು ಪರಸ್ಪರ ಪೂರ್ವ ಪರಿಚಯಗಳು ಸ್ಪಷ್ಟವಾಗಿ ಆ ಮೂವರ ಬಾಳೂ ಅವರು ನಟಿಸುತ್ತಿದ್ದಷ್ಟು ಶುದ್ಧವಾದುದಲ್ಲವೆಂದು ತಿಳಿಯುವುದು.

'ಸಾಯೋ ಆಟ'.—ಕಳ್ಳತನಕ್ಕೆ ಹೊರಟ ಕಳ್ಳ ಕನ್ನಹಾಕುವಾಗ ಗೋಡೆಯ ಕೆಳಗೆ ಸಿಕ್ಕಿ ಪ್ರಾಣಬಿಡಲು ಕಳ್ಳನ ಹೆಂಡತಿ ರಾಜನಲ್ಲಿ ಮನೆಯ ಯಜಮಾನನ ಮೇಲೆ ವ್ಯವಹಾರ ಹೂಡುವಳು. ರಾಜನು ಅವಳ ಬೇಡಿಕೆಯಲ್ಲಿನ ನ್ಯಾಯವನ್ನರಿತು ಮನೆಯ ಯಜಮಾನನಿಗೆ ಮರಣವನ್ನು ವಿಧಿಸುವನು. ಅವನು ತನ್ನಮೇಲೆ ಬಂದ ತಪ್ಪನ್ನು ಮನೆಕಟ್ಟಿದವನ ಮೇಲೆ ವಾಲಿಸುವನು. ರಾಜನು ಇದೂ ನ್ಯಾಯವೆಂದು ಒಪ್ಪಿದನು. ಮನೆಕಟ್ಟಿದ ಕೂಲಿಯು ದಿವಾನನ ಕೈಗೆ ರೂಪಾಯಿ ತಟ್ಟಿ ತನ್ನಮೇಲಿನ ತಪ್ಪನ್ನು ಸೂಳೆಯ ಮೇಲೆ ಹೊರಿಸುವನು. ದೊರೆ ಅವಳ ತಪ್ಪಿಗಾಗಿ "ಏನು ಸಾಯುವಿಯೋ ಕಳ್ಳಿ (ಕಳ್ಳನ ಹೆಂಡತಿ) ಯನ್ನು ಮದುವೆಯಾಗುವಿಯೋ" ಎಂಬ ಶಿಕ್ಷೆಯನ್ನು ವಿಧಿಸುವನು. ಆ ವೇಳೆಗೆ ಒಬ್ಬ ಸಂನ್ಯಾಸಿಯನ್ನು ಹಿಡಿದುತರಲು ಅವನ ಕಡೆಯ ಶಿಷ್ಯರು "ಸಂನ್ಯಾಸಿ ಪಾದ ಶಾಪ: ರುದ್ರಭೂಮಿಯಲ್ಲಿ ಯಾರು ಮೊದಲು ಸಾಯುವರೋ ಅವರಿಗೆ ಸುತ್ತಲಿನ ರಾಜ್ಯದ ರಾಜ ಪದವಿ, ಅಮೇಲೆ ಸಾಯುವವರಿಗೆ ಮಂತ್ರಿಪದವಿ ದೊರೆಯುವುದೆಂದು" ಹೇಳಲು ರಾಜನೂ ಮಂತ್ರಿಯೂ ಸಾಯಲು ಸಿದ್ಧರಾಗುವರು. ಇಲ್ಲಿ ರಾಜನ ನ್ಯಾಯತೀರ್ಪನ್ನೂ ಇತರ ಪಾತ್ರಗಳ ನಡತೆಯನ್ನೂ ಸನ್ನಿವೇಶವನ್ನೂ ನೋಡಿದಲ್ಲಿ ಎಲ್ಲ ಚಿತ್ತವಿಕಾರದಿಂದ ವಾದುವೆಂದು ಭಾಸವಾಗದೆ ಇರದು.

'ತಿರುಕರ ಪಿಡುಗು'.—ಇದರಲ್ಲಿ ಮಿ॥ ನಾಯಕರು ತಮ್ಮ ಬಂಗಲೆಯಲ್ಲಿ ಬೆಳಗಿನ ಕಾರ್ಯಕ್ರಮ ಪಟ್ಟಿಯನ್ನು ಅನುಸರಿಸಿ ಕೆಲಸಗಳನ್ನು ನಡಸಲುದ್ಯುಕ್ತರಾಗಿದ್ದಾಗ ಅವರ ಮನೆಗೆ ಬುಡಬುಡಿಕೆ, ಜಂಗಮ, ಆಚಾರ್ಯ, ಬ್ರಾಹ್ಮಣ ವಿಧವೆ, ದಾಸರು, ಶಾಲೆ ಹುಡುಗ, ದೇಶಸೇವಕರು—ಹೀಗೆ ಬಹುಮಂದಿ ಒಬ್ಬರಾದಮೇಲೊಬ್ಬರು ಯಾಚಿಸಿ ಬರುವರು. ಆದರೆ ಮಿ॥ ನಾಯಕರು ಯಾರ ದೀನತೆಯಿಂದಲೂ ಮನಕರಗುವ ಆಳಾದ ಯವರಲ್ಲ. ಒಬ್ಬೊಬ್ಬರನ್ನೂ ಗದರಿಸಿ ಕಳುಹಿಸಿ ತಮ್ಮ ಪಟ್ಟಿಯ ಪ್ರಕಾರ ಕೆಲಸಗಳನ್ನು ಮಾಡಿ ಮುಗಿಸುವರು. ಕೊನೆಗೆ ತಿರುಕರ ಗುಂಪನ್ನು ಕೊನೆಗಾಣಿಸಲು "ಭಿಕ್ಷುಕೋತ್ಪಾಟನ ಸಂಘ" ವನ್ನು ಸ್ಥಾಪಿಸಿ ತಾವೂ "ಚಳವಳಿ" ಮಾಡಬೇಕೆಂದು ತೀರ್ಮಾನಿಸುವರು.

'ಗೋಲ್'.—ಹಲವು ಕಾಲೇಜ್ ವಿದ್ಯಾರ್ಥಿಗಳು ತಮ್ಮ ವ್ಯಾಸಂಗವನ್ನು ಮುಗಿಸಿ ತಮ್ಮ ತಮ್ಮ ವಾಸಸ್ಥಳಗಳನ್ನು ಸೇರುವ ಮೊದಲು ಎಲ್ಲರೂ ಗ್ರಾಮೋದ್ಧಾರ, ಭಾಷೋದ್ಧಾರಗಳಿಗಾಗಿ ದೀಕ್ಷೆಯನ್ನು ತೊಡುವ ಸಂಭ್ರಮದಲ್ಲಿದ್ದಾರೆ. ಭಾವನಾರಂಗದಲ್ಲಿ ವಿದ್ಯಾರ್ಥಿಗಳ ವಿವಿಧ ಮನೋಭಾವಗಳೂ ಅವರ ಆಶಯಗಳೂ ವ್ಯಕ್ತವಾಗುವುವು.

ಈ ಎಲ್ಲ ಚಿತ್ರಗಳಲ್ಲಿಯೂ "ನಗೆಗೊಂದು ಹೆಚ್ಚಳವಿದೆ" ಎಂದು ಗ್ರಂಥ ಕರ್ತರು ಮುನ್ನುಡಿಯಲ್ಲಿ ತಿಳಿಸಿದ್ದಾರೆ. ನಗೆ ಮನುಜಸಹಜವಾದೊಂದು ಕ್ರಿಯೆ. ನಗಲಾರದ ಮನುಷ್ಯರು ವಿರಳ. ನಗೆ ಹೊಳೆಯುವುದು ಬುದ್ಧಿಗೆ, ರಾಗಕ್ಕೆ ರಾಗ ನಗೆಯ ಹಗೆ. ನಗೆ ಧಾರಾಳವಾಗಿ ಉಕ್ಕಬೇಕಾದರೆ ಅದಕ್ಕೆ ಕಾರಣ ವಾದ ಸಂದರ್ಭವಾಗಲಿ ವ್ಯಕ್ತಿಯಾಗಲಿ ನಗುವವನಿಗೆ ಸಂಬಂಧವಿಲ್ಲದಿರಬೇಕು. ಪ್ರೀತಿಯೂ ಕನಿಕರವೂ ನಗೆಗೆ ಕಾರಣವಾಗಬಹುದು. ಆದರೆ ರಾಗ ಆವೇಶವು ಹೆಚ್ಚಾದರೆ ಪೂರ್ಣವಾದ ನಗೆ ಉಂಟಾಗಲಾರದು. ಉದಾಹರಣೆಗೆ 'ತಿರುಕರ ಪಿಡುಗಿ' ನಲ್ಲಿ ತಿರುಕರ ದೀನತೆಯೂ ಗೋಳೂ ನಮ್ಮ ಮನಸ್ಸಿಗೆ

ನಮ್ಮಲ್ಲಿ ಕರುಣೆಯನ್ನು ಪ್ರೇರಿಸಿದರೆ ನಾವು ನಗುವುದಕ್ಕೆ ಬದಲು ವ್ಯಸನಪಡ ಬೇಕಾದೀತು. ನಗೆ ಒಬ್ಬರಿಂದೊಬ್ಬರಿಗೆ ವ್ಯಾಪಿಸುವುದು. ಜನರ ಗುಂಪಿನಲ್ಲಿ ಬರುವಷ್ಟು ದೀರ್ಘವಾದ ನಗೆ ಒಬ್ಬರೇ ಇರುವಾಗ ಬರಲಾರದು. ಸಭಾಮಂದಿರವು ಎಷ್ಟು ಹೆಚ್ಚಾಗಿ ತುಂಬಿದ್ದರೆ ಅಷ್ಟು ಹೆಚ್ಚಾಗಿ ನಗೆ ಅಲ್ಲಿ ಹೊರಡುವುದೆಂದು ಹೇಳುವುದುಂಟು.

ವ್ಯಕ್ತಿಯು ತನ್ನ ನಡತೆಯಲ್ಲಿ ವಕ್ರತೆಯನ್ನೋ ವೈಪರೀತ್ಯವನ್ನೋ ತೋರ್ಪಡಿಸಿದರೆ ಸಮಾಜವು ಅದನ್ನು ಒಪ್ಪದು. ಈ ಅಸಮ್ಮತಿ ನಗೆಯಿಂದ ಸೂಚಿತ ವಾಗುವುದು. ಯಾವಾಗ ಜನದ ಕಣ್ಣು ತನ್ನಮೇಲೆ ಬಿದ್ದು ಅವರು ತನ್ನನ್ನು ಕಂಡು ನಗುವರೆಂಬುದನ್ನು ತಿಳಿಯುವನೋ ಆಗ ತನ್ನ ನ್ಯೂನತೆಯೂ ವಕ್ರತೆಯೂ ತನಗೇ ತಿಳಿದು ತನ್ನನ್ನು ತಿದ್ದಿಕೊಳ್ಳಲು ಮೊದಲುಮಾಡುವನು. ಹೀಗೆ ಮನುಷ್ಯನ ರೀತಿ ನೀತಿಗಳನ್ನು ತಿದ್ದುವುದರಲ್ಲಿ ಸಮಾಜವು ಒಂದು ಸಾಧನ. ಮನುಷ್ಯನ ನಡತೆಯನ್ನು ಕ್ರಮಪಡಿಸುವುದರಲ್ಲಿ, ಉತ್ತಮಪಡಿಸುವುದರಲ್ಲಿ ಸಾಹಿತ್ಯವೂ ಒಂದು ಪ್ರೇರಣೆ ಯಾಗಿದೆ. ಲಘು ಚಿತ್ರಗಳೂ, ವ್ಯಂಗ್ಯ ಚಿತ್ರಗಳೂ, ಸಾಮಾಜಿಕ ನಾಟಕಗಳೂ ಮನುಷ್ಯನ ಕೊಂಕುಗಳನ್ನೂ ನ್ಯೂನತೆಗಳನ್ನೂ ಎತ್ತಿಹಿಡಿದು ನಗೆಯ ಮೂಲಕವೇ ಅವನ ನಡತೆಯನ್ನು ಪರಿಷ್ಕರಿಸತಕ್ಕವುಗಳಾಗಿವೆ.

ಈ ಕಾವ್ಯದಲ್ಲಿನ ಕೆಲವು ಪ್ರಹಸನಗಳನ್ನಾದರೂ ರಂಗದಮೇಲೆ ಪ್ರದರ್ಶಿಸ ಬಹುದಾಗಿದೆ. ಆ ದೃಶ್ಯಗಳನ್ನು ನೋಡುವವರೂ ಕಾವ್ಯವನ್ನು ಓದುವವರೂ ಹೆಚ್ಚು ಆನಂದಪಡುವರೆಂಬುದಕ್ಕೆ ಸಂಶಯವಿಲ್ಲ.

ಡಿ. ವಿ. ಶೇಷಗಿರಿರಾವ್

---

**೩. ಸೇವಾಪ್ರದೀಪ.**—ಲೇಖಕರು: ಶ್ರೀ॥ ರಂ. ಶ್ರೀ. ಮುಗಳಿ, ಎಂ.ಎ., ಬಿ.ಟಿ. ಅವರು; ಪ್ರಕಾಶಕರು: ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ; ಕ್ರೌ ಅ. ಪ. ಪು. ೧೧೯; ಬೆಲೆ: ೧೨ ಆಣೆ.

ಇದು ಐದಂಕಗಳ ಗದ್ಯನಾಟಕ. ಕಥಾವಸ್ತುವಿಗೆ ಚಾರಿತ್ರಕ ವಿಷಯವು ಆಧಾರವಾಗಿ ತೋರಿದರೂ ಇದರಲ್ಲಿ ವಾಸ್ತವಿಕವಾದ ಚರಿತ್ರಾಂಶವು ಬಹು ಸ್ವಲ್ಪ ಮಾತ್ರವೇ. "ಮುದಗಲ್ಲ ಊರಿನ ಒಕ್ಕಲಿಗನ ಮಗಳಾದ ಪೆರ್ತಳ ಎಂಬ ಚೆಲುವೆ ಯನ್ನು ವಿಜಯನಗರದ ೧ನೆಯ ದೇವರಾಯನು ಮೋಹಿಸಿ" ಮದುವೆಯಾಗಲು ಮಾಡಿದ ಪ್ರಯತ್ನದ ಸಣ್ಣ ಅಡಿಗಲ್ಲಿನಮೇಲೆ ತಮ್ಮ ಕಲ್ಪನಾಮಂದಿರವನ್ನು ನಿರ್ಮಿಸಿದೆಯೆಂದು ಗ್ರಂಥಕರ್ತರು ಹೇಳಿರುವರು. ಚಾರಿತ್ರಕವೆಂದು ಹೇಳಿರುವ ಮೇಲಿನ ಸಂಗತಿಯೂ ಕೂಡ ಸತ್ಯವಾದುದೆಂದು ದೃಢವಾಗಿ ನಂಬಲಾಗದೆಂದು ಗ್ರಂಥಕರ್ತರೇ ಹೇಳಿರುತ್ತಾರೆ. ಸಂದೇಹಾಸ್ಪದವಾದ ಈ ಚರಿತ್ರೆಯ ಸೋಗನ್ನು ಕಳೆದರೆ ಇದು ಸಂಪೂರ್ಣ ಕಾಲ್ಪನಿಕ ನಾಟಕವಾಗುವುದು. ವಾಸ್ತವವಾದ ಒಂದು ಸಂಗತಿಯನ್ನು ಚಿತ್ರಿಸುವುದು ಗ್ರಂಥಕರ್ತರ ಉದ್ದೇಶವಲ್ಲ. ಚಾರಿತ್ರಕವಾಗಲಿ ಕಾಲ್ಪನಿಕವಾಗಲಿ ಕಥಾವಸ್ತುವಿನಲ್ಲಿ ಅಡಗಿರುವ ರಾಜನ ಕಾಮಾಂಧತೆಯನ್ನೂ

ಅದನ್ನು ನಿಗ್ರಹಿಸುವುದರಲ್ಲಿ ನಿರತಳಾಗಿರುವ ಸತಿಯ ನಿಷ್ಠೆಯನ್ನೂ ಚಿತ್ರಿಸುವುದು ಗ್ರಂಥಕರ್ತರ ಉದ್ದೇಶ.

ವಿಜಯನಗರದ ಅರಸಾದ ದೇವರಾಯನು ಮುದಗಲ್ಲಿನ ಅಕ್ಕಸಾಲಿಗ ಕಂಟಿಯಪ್ಪನ ಮಗಳಾದ ನಿಹಲೆಯ ರೂಪಕ್ಕೆ ಮೋಹಿತನಾಗಿ ಬೇಟೆಯ ನೆಪದಿಂದ ಅಲ್ಲಿಗೆ ಹೋಗಿ ಅವಳನ್ನು ಅಪಹರಿಸಿ ತರುವನು. ನಿಹಲೆ ಅಂತಃಪುರಕ್ಕೆ ಬಂದಮೇಲೆ ಸೇವಕಿಯ ಉಡುಪನ್ನು ಧರಿಸಿ ರಾಜನ ಪ್ರೇಮದಾಸಿ ಎಂದು ಹೇಳಿಕೊಳ್ಳುವಳು. ರಾಜನ ಪ್ರೋತ್ಸಾಹ, ಪ್ರೇರಣೆ ಭರ್ತ್ಸನೆಗಳು ಅವಳನ್ನು "ದೇವಿ"ಯಾಗಿ ಮಾಡಲಾರದಾದುವು. ನಿಹಲೆ ರಾಜನ ಹೃದಯವನ್ನು ಸೂರೆಗೊಂಡಮೇಲೆ ಮೊದಲಿನ ದೇವಿಗೆ ಅಲ್ಲಿ ಎಡೆಯಿಲ್ಲವಾಯಿತು. "ಶುದ್ಧ ಪ್ರೀತಿಯ ಗರ್ಭಗುಡಿಯಲ್ಲಿ ಒಬ್ಬಳೇ ದೇವಿ ಇರಬಲ್ಲಳು" ಎಂಬ ನೀತಿಯನ್ನು ರಾಜದೇವಿ ರಾಜನಿಗೆ ಹೇಳಿ ನಿಹಲೆ ಕ್ಷತ್ರಿಯ ವಂಶದವಳಲ್ಲವಾದುದರಿಂದ ವಂಶಕ್ಕೆ ಕಳಂಕ ತರಬಾರದೆಂದು ಹಿತನುಡಿಯುವಳು. ರಾಜನು "ಪ್ರೀತಿಗೂ ಜಾತಿಗೂ" ಸಂಬಂಧ ವಿಲ್ಲವೆಂದು ಹೇಳುವನು. ರಾಜದೇವಿ ಜುಗುಪ್ಸೆಯಿಂದ ಅರಮನೆಯನ್ನು ಬಿಟ್ಟು ಉದ್ಯಾನಕ್ಕೆ ಹೋಗಿ ಸಂನ್ಯಾಸವನ್ನು ತಳೆಯುವಳು. ರಾಜನು ತನ್ನ ದಾರಿಯಲ್ಲಿದ್ದ ಕಂಟಕ ಪರಿಹಾರವಾಯಿತೆಂದು ತಿಳಿದುಕೊಳ್ಳುವನು. ರಾಜದೇವಿ ಅಂತಃಪುರವನ್ನು ಬಿಡಬಾರ ದೆಂದೂ ಆಕೆಯ ಪತಿಭಕ್ತಿಯ ಬೆಳಕಿನಲ್ಲಿ ತನ್ನ ಸೇವಾವೃತ್ತಿಯನ್ನು ಬೆಳಗಿ ರಾಜನನ್ನು ತಿದ್ದುವುದೇ ತನ್ನ ಉದ್ದೇಶವೆಂದೂ ನಿಹಲೆ ರಾಣಿಗೆ ಹೇಳುವಳು. ರಾಜದೇವಿ ನಿಹಲೆಗೆ ಸಹಾಯವಾಗಿ ನಿಲ್ಲುವಳು. ಈ ಮಧ್ಯೆ ನಿಹಲೆಯಲ್ಲಿ ಪ್ರೇಮವನ್ನು ಬೆಳೆಸಿದ್ದ ಮುದಗಲ್ಲಿನ ಬಂಟರಾಯನೂ ಅವನ ಸ್ನೇಹಿತರೂ ರಾಯನನ್ನು ಶಿಕ್ಷಿಸಲು ಸನ್ನಾಹವನ್ನು ನಡಸುವರು. ಬಂಟರಾಯನ ಸ್ನೇಹಿತನಾದ ಚೆನ್ನಯ್ಯನು ರಾಜನ ಹರಣವನ್ನು ತೀರಿಸುವುದಕ್ಕಾಗಿ ವೇಷತಳೆದು ರಾಜನ ಶಯ್ಯಾಗೃಹದ ಬಳಿ ಹೊಂಚುಕಾಯುವನು. ರಾಜದೇವಿಯಿಂದ ರಾಯನ ಮರಣ ತಪ್ಪುವುದು. ರಾಜನ ಹಿಂಸೆ ಹೆಚ್ಚಾಗಲು ನಿಹಲೆ ದೇವಿಯಾಗಲು ಒಪ್ಪಿ ಅದಕ್ಕಾಗಿ ಒಂದು ದಿನವನ್ನು ನಿಶ್ಚಯಿಸುವಳು. ಹೀಗೆ ಮಾಡು ವುದರಲ್ಲಿ ಅವಳ ಉದ್ದೇಶವು ರಾಜದೇವಿಯ ಎದುರಿನಲ್ಲಿ ರಾಯನ ಅನೀತಿಯನ್ನು ಮನವರಿಕೆ ಗೊಳಿಸಿ ಆ ಮೂಲಕ ಅವನನ್ನು ಸನ್ಮಾರ್ಗಕ್ಕೆ ತರಬೇಕೆಂಬುದು. ರಾಜನನ್ನು ತಿದ್ದುವುದೂ ತಾನು ಅವನ ಕೈಯಿಂದ ತಪ್ಪಿಸಿಕೊಳ್ಳುವುದೂ ಸಾಧ್ಯವಿಲ್ಲದಾಗ ನಿಹಲೆ ಸಾಯುವುದಾಗಿ ಸಂಕಲ್ಪಿಸುವಳು. ಗೊತ್ತಾಗಿದ್ದ ದಿನ ನಿಹಲೆಯೂ ರಾಜನೂ ಭೋಗವನಕ್ಕೆ ಬರುವರು. ಅದೇ ಸಮಯಕ್ಕೆ ಬಂಟರಾಯನು ಆಯುಧಸನ್ನದ್ಧನಾಗಿ ಬರುವನು. ನಿಹಲೆ ರಾಜನ ಅಧೀನಳಾದುದರಿಂದ ರಾಜನ ಸೇವೆಮಾಡುವುದು ತನ್ನ ಕರ್ತವ್ಯವೆಂದು ಭಾವಿಸಿ ಕತ್ತಿಯನ್ನು ಹಿಡಿದು ಆವೇಶದಿಂದ ರಾಜನಿಗೆ ಬದಲು ಯುದ್ಧಕ್ಕೆ ನಿಲ್ಲುವಳು. ಅವಳ ಸಾಹಸ ವಿಪರೀತವಾಗುವುದು. ದೇವರಾಯನನ್ನು ಕೊಲ್ಲಬೇಕೆಂಬ ಆತುರವು ಬಂಟರಾಯನಿಗಿದ್ದರೂ ನಿಹಲೆಯ ಎದುರಿನಲ್ಲಿ ಅದು ಸಾಧ್ಯವಿಲ್ಲವಾಗಿದೆ. ರಾಜನು ಶಸ್ತ್ರವನ್ನು ಹಿಡಿದು ಕಾದ ಬೇಕೆಂದಿದ್ದರೂ ನಿಹಲೆಯ ಸೇವಾತತ್ಪರತೆಯಿಂದ ಅದು ಸಾಧ್ಯವಿಲ್ಲ. ರಾಜನಿಗೆ ಪ್ರೇಮದಾಸಿಯ ಸೇವಾಭಾವವು ಸ್ಪಷ್ಟವಾಗಿ ಅವಳನ್ನು ಮೃತ್ಯುಮುಖದಿಂದ ಬಿಡಿಸ ಬೇಕೆಂದು ಆಶಿಸುವನು. ನಿಹಲೆಯನ್ನು ಬಂಟರಾಯನಿಗೆ ಒಪ್ಪಿಸುವನು. ನಿಹಲೆ ಬಂಟರಾಯನವಳಾದ ಈ ಕೊನೆಯ ಸನ್ನಿವೇಶವನ್ನು ನಾಟಕ ಕರ್ತರು ಕುಶಲತೆಯಿಂದ ಹವಣಿಸಿದ್ದಾರೆ. ರಕ್ತಪಾತವಾಗದಂತೆಯೂ ರಾಜನೇ ತನ್ನ ತಪ್ಪನ್ನು ಸ್ವತಃ ತಿಳಿದು ಮರುಗುವಂತೆಯೂ ಮಾಡಿರುವುದು ಸಕಲರಿಗೂ ಕ್ಷೇಮಕರವಲ್ಲದೆ ರಾಜನ ಗೌರವವನ್ನು ಉಳಿಸತಕ್ಕುದಾಗಿದೆ.

ನಿಹಲೆ-ದೇವರಾಯರ ಕಥಾಸೂತ್ರದ ಜೊತೆಗೆ ರಾಧೆ-ಚೆನ್ನಯ್ಯರ ಕಥಾಸೂತ್ರವೂ ಹೆಣೆದುಕೊಂಡಿದೆ. ರಾಧೆ ನಿಹಲೆಯ ಆಪ್ತಸ್ನೇಹಿತಳು. ನಿಹಲೆ ರಾಜನ ದಾಸಿಯಾದ ಮೇಲೆ ರಾಧೆಯೂ ವೇಷಮರಸಿಕೊಂಡು ಅರಮನೆಯಲ್ಲಿ ಯವನಿಕೆಯಾಗಿ ನಿಲ್ಲುವಳು.

ದೇವರಾಯ ರಾಜದೇವಿಯನ್ನು ನಿರಾಕರಿಸಿ ನಿಹಲೆಯನ್ನು ಒಲಿದಂತೆ ವೈತಾಲಿಕ ಹೆಂಡತಿ ರನ್ನಮ್ಮನನ್ನು ನಿರಾಕರಿಸಿ ರಾಧೆಯನ್ನು ಒಲಿಯುವನು. ವೈತಾಲಿಕ ರಾಯನ ಪರಿವಾರದಲ್ಲಿ ಒಬ್ಬ. ರಾಜನೇ ಕೈಹಿಡಿದ ಪತ್ನಿಯನ್ನು ಬಿಟ್ಟು ಕಾಮಾಂಧನಾಗಿರುವಾಗ ತಾನೂ ರಾಜನ ಮೇಲ್ಪಂಕ್ತಿಯನ್ನು ಪದೇ ಪದೇ ಉದಾಹರಿಸಿ ಅವನನ್ನು ಅನುಸರಿಸಲು ತೊಡಗಿರುವನು. ರಾಧೆ ಅಂತಃಪುರದಲ್ಲಿ ನಡೆಯುವ ಸಮಾಚಾರಗಳನ್ನೆಲ್ಲ ತಿಳಿದು ನಿಹಲೆಯ ಬಿಡುಗಡೆಯಲ್ಲಿ ಮುದಗಲ್ಲಿನ ವೀರರಿಗೆ ನೆರವಾಗುವಳು. ಕೊನೆಗೆ ರಾಧೆ ಚೆನ್ನಯ್ಯನನ್ನೇ ಸೇರುವಳು. ವೈತಾಲಿಕ ರಾಧೆಯರ ಸಂಭಾಷಣೆಯು ನಾಟಕದ ಉದ್ದಕ್ಕೂ ಹಾಸ್ಯಪ್ರದ ವಾಗಿದೆ.

ನಿಹಲೆ, ದೇವರಾಯ ಮತ್ತು ರಾಜದೇವಿಯರ ಮನೋಭಾವಪ್ರದರ್ಶನದಲ್ಲಿ ಒಂದು ವಿಶೇಷವನ್ನು ಕಾಣಬೇಕೆಂದು ಗ್ರಂಥಕರ್ತರು ಸೂಚಿಸಿದ್ದಾರೆ. ಮನೋ ರಾಜ್ಯದ ಸೂಕ್ಷ್ಮಚಲನವಲನಗಳಿಗೆ ಸಿಕ್ಕಿ ತೊಳಲುವ ವೇದನೆ ಈ ಪಾತ್ರಗಳಲ್ಲಿ ಇಲ್ಲದಿದ್ದರೂ ಕಾಮುಕನಾಗಿದ್ದ ದೇವರಾಯನು ಸಾತ್ವಿಕನಾದುದೂ ಇದನ್ನು ಸಾಧಿಸುವುದರಲ್ಲಿ ತತ್ಪರಳಾಗಿದ್ದ ನಿಹಲೆಯ ಸೇವಾಪರಾಯಣತೆಯೂ ಎದ್ದು ಕಾಣತಕ್ಕವುಗಳಾಗಿವೆ. ಕಥಾಸಂವಿಧಾನವೂ ಪಾತ್ರರಚನೆಯೂ ಹೊಂದಿಕೊಂಡಿವೆ. ಸಂಭಾಷಣೆಗಳು ಅಲ್ಲಲ್ಲಿ ಸ್ವಲ್ಪ ನೀಳವಾಗಿದ್ದರೂ ಸಂದರ್ಭೋಚಿತವಾಗಿವೆ.

ಡಿ. ವಿ. ಶೇಷಗಿರಿರಾವ್

---

೪. **ಭಕ್ತ ಶಿಖಾಮಣಿ ದಾಮಾಜಿ ಪಂತ.**—ಲೇಖಕರು: ಶ್ರೀ॥ ಜಿ. ಎನ್. ಲಕ್ಷ್ಮಣ ಪೈ ಅವರು; ಪ್ರಕಾಶಕರು: ಅಲೈಡ್ ಪಬ್ಲಿಷಿಂಗ್ ಹೌಸ್, ಮಂಗಳೂರು; ಕ್ರೌ. ಅ. ಪ. ಪು. ೮೩; ಬೆಲೆ: ೧೨ ಆಣೆ.

ಮಂಗಳವೇಢೆಯ ಠಾಣೇದಾರ ದಾಮಾಜಿಪಂತನ ಭಕ್ತಿಯ ಮಹಿಮೆಯೇ ಈ ಸಣ್ಣ ನಾಟಕದ ವಸ್ತು.

ದಾಮಾಜಿಪಂತನು ತೀವ್ರ ಭಗವದ್ಭಕ್ತ, ಗುಣಶಾಲಿ, ದೀನಾನಾಥರಲ್ಲಿ ಹೆಚ್ಚಿನ ದಯೆಯುಳ್ಳವನು. ಜನರ ಮೆಚ್ಚಿಕೆಗೂ ಹೊಗಳಿಕೆಗೂ ಪಾತ್ರನಾಗಿದ್ದವನು. ಅವನ ಕೀರ್ತಿಯನ್ನು ಸಹಿಸದೆ ಅವನನ್ನು ಪದಚ್ಯುತನನ್ನಾಗಿಮಾಡಿ ಅವನ ಸ್ಥಾನವನ್ನಾಕ್ರಮಿಸ ಬೇಕೆಂದು ಅವನ ಕರಣೀಕನಾದ ಮುಜುಮ್ದಾರನು ಯತ್ನಿಸಿ ಅವನಿಗೆ ಅಪಕೀರ್ತಿ ತರಲು ವೇಶ್ಯಾಸಂಪರ್ಕವನ್ನು ಒದಗಿಸಬೇಕೆಂದೂ, ಸುಲ್ತಾನನ ಆಗ್ರಹಕ್ಕೆ ಅವನನ್ನು ಈಡುಮಾಡಿಸಬೇಕೆಂದೂ ಅವನು ಮದ್ಯನಿರೋಧವನ್ನು ಪ್ರೋತ್ಸಾಹಿಸುವಂತೆ ತಂತ್ರ ಗಳನ್ನು ಹೂಡಿದನು. ಆದರೆ ದಾಮಾಜಿಪಂತನು ಇವನ ಬಲೆಗೆ ಸಿಕ್ಕಲಿಲ್ಲ. ಅಷ್ಟೇ ಅಲ್ಲದೆ ತನ್ನನ್ನು ಕೆಡಿಸಬೇಕೆಂದು ಬಂದವರನ್ನು ತನ್ನ ಸಚ್ಚರಿತದಿಂದ ಸನ್ಮಾರ್ಗಕ್ಕೆ ತಂದನು. ಆದರೆ ಕಾಲಕ್ರಮದಲ್ಲಿ ಮಂಗಳವೇಢೆಯ ಸುತ್ತಲಿನ ಪ್ರದೇಶದಲ್ಲಿ ಕ್ಷಾಮ ತಲೆದೋರಲು ಜನರ ದೈನ್ಯವನ್ನು ಸಹಿಸಲಾರದೆ ಸುಲ್ತಾನನ ಅಪ್ಪಣೆಯನ್ನೂ ಪಡೆಯದೆ ನರಸೇವೆಯೇ ನಾರಾಯಣಸೇವೆಯೆಂದು ಭಾವಿಸಿ ಸರ್ಕಾರದ ಧಾನ್ಯಾಲಯದಲ್ಲಿದ್ದ ಆಹಾರಪದಾರ್ಥ ಗಳನ್ನು ಕ್ಷಾಮಪೀಡಿತರಿಗೆ ಹಂಚಿಕೊಟ್ಟನು. ದಾಮಾಜಿಪಂತನ ಪತನವನ್ನೇ ಬಯಸುತ್ತಿದ್ದ ಮುಜುಮ್ದಾರನು ಸುಲ್ತಾನನಲ್ಲಿ ಹೋಗಿ ಈ ವಿಷಯವಾಗಿ ಚಾಡಿಹೇಳಿದನು. ಸುಲ್ತಾನನು ದಾಮಾಜಿಪಂತನನ್ನು ಸೆರೆಹಿಡಿದು ತರಲು ಅಪ್ಪಣೆಮಾಡಿದನು. ಈ ಮಧ್ಯದಲ್ಲಿ ದಾಮಾಜಿಪಂತ ನನ್ನು ಕಷ್ಟದಿಂದ ಪಾರಾಗಿಸಲು ಪಂಡರಪುರದ ವಿಠೋಬ ಸ್ವಾಮಿಯು ಹೊಲೆಯನ ವೇಷ ಧರಿಸಿ ಸುಲ್ತಾನನಲ್ಲಿ ಬಂದು ದಾಮಾಜಿಪಂತನು ಉಪಯೋಗಿಸಿದ್ದ ಧಾನ್ಯದ ಬೆಲೆಯನ್ನು

ಸಲ್ಲಿಸಿದ್ದಲ್ಲದೆ ಮುಜುಮ್ದಾರನ ವಿಶ್ವಾಸಘಾತುಕತೆಯನ್ನು ಪ್ರಕಾಶಕ್ಕೆ ತಂದು ಮಾಡಿ ವಾದನು. ಸುಲ್ತಾನನು ಮುಜುಮ್ದಾರನಿಗೆ ಶಿಕ್ಷೆಯನ್ನು ವಿಧಿಸಿದನು. ಸುಲ್ತಾನನು ಹೊಲೆಯನ ವೇಷ ಧರಿಸಿ ಬಂದಿದ್ದವನ ಮಾತುಕತೆಯನ್ನೂ ಆತನ ಜಾಣ್ಮೆಯನ್ನೂ ನೋಡಿ ಆತನಲ್ಲಿ ಮೋಹಿತನಾದನು. ದಾಮಾಜಿಪಂತನು ಬಂದಮೇಲೆ ಸುಲ್ತಾನನು ತನ್ನ ಅಪರಾಧ ವನ್ನು ಕ್ಷಮಿಸಬೇಕೆಂದು ಕೇಳಿಕೊಂಡನು. ದಾಮಾಜಿಪಂತನು ಸುಲ್ತಾನನ ಉನ್ಮಾದವನ್ನು ನೋಡಿ ಹೊಲೆಯನ ವೇಷಧಾರಿ ಪಂಢರಪುರದ ಸ್ವಾಮಿಯಾದ ವಿಠೋಬನೇ ಇರಬೇಕೆಂದು ಊಹಿಸಿ ಸುಲ್ತಾನನನ್ನು ಅಲ್ಲಿಗೆ ಕರೆದುಹೊಂಡುಹೋಗಿ ದೇವರ ದರ್ಶನ ಮಾಡಿಸಿದನು.

ಕಾವ್ಯದ ಉದ್ದೇಶವು ಭಕ್ತನ ಮನೋಭಾವವನ್ನೂ ಭಕ್ತಿಯ ಮಹಿಮೆಯನ್ನೂ ಚಿತ್ರಿಸುವುದೆಂದು ಸ್ಪಷ್ಟವಾಗಿದೆ. ದಾಮಾಜಿಪಂತನ ನಿಶ್ಚಲವಾದ ಭಕ್ತಿಯೂ ಸದಾಚಾರವೂ ಆದರ್ಶನೀಯವಾದುವು. ದೈವಸಹಾಯವು ಆತನಿಗೆ ಒದಗಿದ್ದು ಯುಕ್ತವಾಗಿಯೇ ಇದ್ದರೂ ಈಗಿನ ವಿಜ್ಞಾನಯುಗದಲ್ಲಿ ಅಸಂಭಾವ್ಯವಾಗಿ ತೋರುವುದು. ನಾಟಕವು ಭಕ್ತಿಬೋಧಕವಾಗಿರುವುದರಿಂದಲೂ, ಹಾಸ್ಯದಿಂದ ಕೂಡಿರುವುದರಿಂದಲೂ ಜನಸಾಮಾನ್ಯಕ್ಕೆ ಹೆಚ್ಚು ರುಚಿಸುವುದಾಗಿದೆ.

ಡಿ. ವಿ. ಶೇಷಗಿರಿರಾವ್

---

**೫. ಪ್ರಪಂಚದ ಕೆಲಸಗಾರ.**—ಲೇಖಕರು: ಶ್ರೀ|| ದಿನಕರ ದೇಸಾಯಿ, ಎಂ.ಎ., ಎಲ್‌ಎಲ್.ಬಿ. ಅವರು; ಪ್ರಕಾಶಕರು: ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿ, ಮುಂಬಯಿ ಶಾಖೆ; ಕ್ರೌನ್ ಅ. ಪ. ಪು. ೭೧; ಬೆಲೆ: ೪ ಆಣೆ.

ಈ ಪುಸ್ತಕದಲ್ಲಿ ಶ್ರೀ|| ದಿನಕರ ದೇಸಾಯಿಯವರು ಜಿನೀವಾದಲ್ಲಿರುವ ಅಂತರರಾಷ್ಟ್ರೀಯ ಕೆಲಸಗಾರರ ಸಂಘದ (International Labour Office) ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಮೊದಲನೆಯ ನಾಲ್ಕು ಪೀಠಿಕಾ ಪ್ರಕರಣಗಳಲ್ಲಿ ಪ್ರಪಂಚದ ಬೇರೆ ಬೇರೆ ದೇಶಗಳಿಗಿರುವ ಆರ್ಥಿಕಸಂಬಂಧವನ್ನು ವಿವರಿಸಿ, ಯಂತ್ರಗಳ ಉಪಯೋಗವು ಪ್ರಾರಂಭವಾದಂದಿನಿಂದೀಚೆಗೆ ಕೆಲಸಗಾರರ ಸ್ಥಿತಿಯಲ್ಲಿ ಉಂಟಾಗಿರುವ ಪರಿವರ್ತನೆಗಳನ್ನು ವಿಮರ್ಶಿಸಿ, "ಪ್ರಪಂಚದಲ್ಲಿ ಸುಖಶಾಂತಿಗಳು ನೆಲೆಗೊಳ್ಳಬೇಕಾದರೆ, ಬಹುಸಂಖ್ಯಾತರಾದ ಕೆಲಸಗಾರರ ಸ್ಥಿತಿಯು ಉತ್ತಮವಾಗಿರಬೇಕು. ಅವರಿಗೆ ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆ, ವಾಸವಾಗಿರಲಿಕ್ಕೆ ಮನೆ, ಓದಲಿಕ್ಕೆ ಪುಸ್ತಕ, ವಿಚಾರಮಾಡಲಿಕ್ಕೆ ಬಿಡುವು ದೊರೆಯುವುದು ಅತ್ಯಗತ್ಯ ಮತ್ತು ಈ ಸೌಕರ್ಯಗಳನ್ನು ಪ್ರಪಂಚದಲ್ಲಿ ವಾಸವಾಗಿರುವ ಪ್ರತಿಯೊಬ್ಬ ಕೆಲಸಗಾರನಿಗೂ ಕಲ್ಪಿಸಿಕೊಡುವುದು ಮಾನವ ಜಾತಿಯ ಧರ್ಮ" ಎಂದು ಹೇಳಿದ್ದಾರೆ. ಉಳಿದ ಐದು ಪ್ರಕರಣಗಳಲ್ಲಿ ಅಂತರರಾಷ್ಟ್ರೀಯ ಕೆಲಸಗಾರರ ಸಂಘದ ರಚನೆಯನ್ನೂ ಕೆಲಸಗಳನ್ನೂ ವಿವರಿಸಿದ್ದಾರೆ. ಕೆಲಸದ ಕಾಲದ ನಿಯಾಮಕ, ಕೆಲಸಗಾರರ ದೇಹಪರೀಕ್ಷೆ, ಮಾಲೀಕರ ಮತ್ತು ಕೆಲಸಗಾರರ ಒಪ್ಪಂದ, ಗಂಡಾಂತರಗಳಿಂದ ಕೆಲಸಗಾರರ ರಕ್ಷಣೆ—ಇವೇ ಮೊದಲಾದ ವಿಷಯಗಳಲ್ಲಿ ಇಂಡಿಯಾ ದೇಶದ ಕೆಲಸಗಾರರಿಗೆ ಅಂತರರಾಷ್ಟ್ರೀಯ ಕೆಲಸಗಾರರ ಸಂಘದಿಂದಾಗಿರುವ ಉಪಯೋಗಗಳನ್ನು ವಿವರಿಸಿದ್ದಾರೆ. ಇದುವರೆಗೆ ಸಂಘವು ಮಾಡಿರುವ ಠರಾವುಗಳನ್ನು ತಿಳಿಸಿದ್ದಾರೆ. ಔದ್ಯೋಗಿಕ ರೋಗಗಳ (Occupational Diseases)

ತಿಳಿವಳಿಕೆಯನ್ನು ಹರಡುವುದಕ್ಕೋಸ್ಕರ ಸಂಘವು ಮಾಡಿರುವ ಕೆಲಸಗಳನ್ನು ಸಂಕ್ಷೇಪವಾಗಿ ಬರೆದಿದ್ದಾರೆ.

ಪುಸ್ತಕದ ಶೈಲಿ ಸರಳವಾಗಿಯೂ, ವಿಷಯವು ಸ್ವಾರಸ್ಯವಾಗಿಯೂ ಇದೆ. ಪುಸ್ತಕಕ್ಕೆ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರು ಉತ್ತೇಜನಕರವಾದ ಮುನ್ನುಡಿ ಬರೆದಿದ್ದಾರೆ. ಪುಸ್ತಕವನ್ನು ಮುದ್ರಿಸುವ ಭಾರವನ್ನು ಅಂತರರಾಷ್ಟ್ರೀಯ ಕೆಲಸಗಾರರ ಸಂಘದವರು ವಹಿಸಿರುವುದು ಶ್ಲಾಘನೀಯವಾದುದು.

ಇಂಗ್ಲಿಷ್ ಮಾತುಗಳನ್ನು ಕನ್ನಡದಲ್ಲಿ ಬರೆಯುವಾಗ ಇಂಗ್ಲಿಷಿನ ಉಚ್ಚಾರಣೆಗೆ ಗಮನಕೊಡಬೇಕು. ಉದಾಹರಣೆ: 'ಡಾಯರೆಕ್ಟರ' (Director), 'ಸ್ಟ್ರಾಯಿಕ್' (Strike), 'ಗವ್ಹರ್ನಿಂಗ್ ಬೊಡಿ' (Governing Body), 'ಮಾಯಿನ್ಸ್' (Mines), 'ಫೆಕ್ಟರಿ' (Factory), 'ಡ್ರಾಯವರ' (Driver).

ಸಿ. ನರಸಿಂಹಮೂರ್ತಿ

---

**೬. ಗ್ರಾಮೋದ್ಯೋಗ ಆಂದೋಲನ** (ತತ್ತ್ವ ವಿವೇಚನೆ).—ಲೇಖಕರು: ಶ್ರೀ॥ ಪಾಟೀಲ ಕಲ್ಲನಗೌಡರು, ಬಿ.ಎ.; ಪ್ರಕಾಶಕರು: ಲೋಕಸೇವಾ ಸಂಘ, ತಡಸ; ಕ್ರೌನ್ ೧೬.ಪ. ಪು. ೬೭; ಬೆಲೆ: ೨ ಆಣೆ.

ಭರತಖಂಡದ ಬಡತನದ ನಿವಾರಣೆಯು ರಾಜಕೀಯ ಮತ್ತು ಆರ್ಥಿಕ ಚಳವಳಿಗಳ ಮುಖ್ಯೋದ್ದೇಶ. ಈ ಉದ್ದೇಶಸಾಧನೆಯ ಮಾರ್ಗಗಳ ವಿಷಯ ದಲ್ಲಿ ಭಿನ್ನಾಭಿಪ್ರಾಯಗಳಿವೆ. ವ್ಯವಸಾಯದ ಪೂರ್ಣಾವಲಂಬನವೇ ನಮ್ಮ ಬಡತನಕ್ಕೆ ಕಾರಣವೆಂದೂ ಪಾಶ್ಚಾತ್ಯ ದೇಶಗಳಂತೆ ಈ ದೇಶವೂ ಯಾಂತ್ರಿಕ ಕೈಗಾರಿಕೆಯ ದೇಶವಾಗಬೇಕೆಂದೂ ಕೆಲವರು ಹೇಳುತ್ತಾರೆ. ಇನ್ನು ಕೆಲವರು ಹಳ್ಳಿಗಳಲ್ಲಿ ಸಣ್ಣಪುಟ್ಟ ಕೈಗಾರಿಕೆಗಳು ವೃದ್ಧಿಯಾಗಿ ವ್ಯವಸಾಯಕ್ಕೆ ಬೆಂಬಲ ವಾದರೆ ಆರ್ಥಿಕ ಸಮಸ್ಯೆ ಪರಿಹಾರವಾಗುವುದೆಂದು ಹೇಳುತ್ತಾರೆ. ಶ್ರೀಯುತ ಪಾಟೀಲ ಕಲ್ಲನಗೌಡರು ಎರಡನೆಯ ಪಂಗಡಕ್ಕೆ ಸೇರಿದವರು. ಇವರು ಮಹಾತ್ಮ ಗಾಂಧಿಯವರ ಮಾರ್ಗಾನುಯಾಯಿಗಳು. ಗ್ರಾಮೋದ್ಯೋಗಗಳ ಪುನರುಜ್ಜೀವನ ದಲ್ಲಿ ಇವರಿಗೆ ನಂಬಿಕೆಯಿದೆ. ಈ ಪುಸ್ತಕದಲ್ಲಿ ಇದರ ತತ್ತ್ವವಿವೇಚನೆ ಮಾಡಿದ್ದಾರೆ. 'ಭಾಂಡವಲಗಾರಿಕೆ'ಯ (Capitalism) ಸ್ವರೂಪವನ್ನೂ ಅದರಿಂದುಂಟಾಗಿರುವ ಅನರ್ಥಗಳನ್ನೂ ವಿವರಿಸಿದ್ದಾರೆ. ಗ್ರಾಮೋದ್ಯೋಗ ಗಳಿಂದುಂಟಾಗುವ ಪ್ರಯೋಜನಗಳನ್ನು ವಿಶದಪಡಿಸಿದ್ದಾರೆ. ತಮ್ಮ ಅಭಿಪ್ರಾಯ ಗಳನ್ನು ವಿಚಾರಪರತೆಯಿಂದ ಒಳ್ಳೆಯ ಶೈಲಿಯಲ್ಲಿ ಬರೆದಿದ್ದಾರೆ. ಗ್ರಾಮೋದ್ಯೋಗ ಗಳು ಯಾವ ರೀತಿಯಲ್ಲಿ ಬೆಳೆಯಬೇಕು, ಗ್ರಾಮಕೈಗಾರಿಕೆಗಳಿಗೂ ದೊಡ್ಡ ಕೈಗಾರಿಕೆಗಳಿಗೂ ಉಂಟಾಗುವ ಪೈಪೋಟಿಯನ್ನು ಹೇಗೆ ನಿವಾರಿಸಬೇಕು ಮೊದಲಾದ ವಿಷಯಗಳನ್ನು ಚರ್ಚಿಸಿ ಇವರು ಇನ್ನೊಂದು ಪುಸ್ತಕವನ್ನು ಬರೆದರೆ ಕನ್ನಡಿಗರಿಗೆ ಉಪಕಾರವಾದೀತು.

ಸಿ. ನರಸಿಂಹಮೂರ್ತಿ

**೭. ಶೂರ ಸುಭಾಸಚಂದ್ರ ಬೋಸ.**—ಲೇಖಕರು ಮತ್ತು ಪ್ರಕಾಶಕರು: ಶ್ರೀ॥ ಪಾಟೀಲ ಕಲ್ಲನಗೌಡರು, ಬಿ.ಎ.; ಕ್ರೌನ್ ಅ.ಪ. ಪು. xv + ೧೪೩; ಬೆಲೆ: ೦౹ ಆ

ಇದು ಸುಭಾಸಚಂದ್ರ ಬೋಸರ ಜೀವನಚರಿತ್ರೆ. ಇದರಲ್ಲಿ ಶ್ರೀಮತಿ ಕಮಲಾ ದೇವಿಯವರ ಮುನ್ನುಡಿಯಿದೆ. ಬೋಸರ ಹಲವು ಭಾವಚಿತ್ರಗಳೂ ಅವರ ತಾಯಿತಂದೆಗಳ ಮತ್ತು ಮಿತ್ರರ ಭಾವಚಿತ್ರಗಳೂ ಇವೆ. ಬೋಸರು ತಮ್ಮ ಹಸ್ತಾಕ್ಷರದೊಡನೆ ತಮ್ಮ ಜೀವನದ ತಿರುಳನ್ನು ಸೂಚಿಸಿ ಬರೆದುಕೊಟ್ಟಿ ವುದು ಪುಸ್ತಕಕ್ಕೆ ಹೆಚ್ಚಿನ ಕಾಂತಿಯನ್ನು ಕೊಟ್ಟಿದೆ. ಬೋಸರು ಒಬ್ಬ ಪ್ರಸಿದ್ಧ ವ್ಯಕ್ತಿ. ಅವರು ನವಯುಗದ ವೀರನಾಯಕರು. ಲಾರ್ಡ್ ಸ್ಟಲ್ಲಂತಹ ಪ್ರಸಿದ್ಧ ಆಂಗ್ಲೇಯ ರಾಜಕಾರ್ಯಪಟುಗಳು ಬೋಸರ ಬುದ್ಧಿಸಾಮರ್ಥ್ಯವನ್ನು ವ್ಯವಸ್ಥಾನೈಪುಣ್ಯವನ್ನೂ ಕೊಂಡಾಡಿ ತಲೆದೂಗಿದ್ದಾರೆ. ಅವರಿಗೆ ಯೂರೋಪಿನ ಮಹಾವ್ಯಕ್ತಿಗಳೊಡನೆ ಸ್ನೇಹವಿದೆ. ಐರ್ಲೆಂಡಿನ ಡಿ ವ್ಯಾಲೆರಾರಿಗೂ ಬೋಸರು ಬಹಳ ಸ್ನೇಹ. ಅಂತರರಾಷ್ಟ್ರೀಯ ಪ್ರಪಂಚದ ಜ್ಞಾನವು ಅವರಿಗೆ ಚೆನ್ನಾಗಿದೆ. ಅವರು ಭಾರತದ ಸ್ವಾತಂತ್ರ್ಯಪ್ರೇಮಿಗಳು. ಸ್ವಾತಂತ್ರ್ಯಸಾಧನೆ ಹೋರಾಟಕ್ಕಾಗಿ ತಮ್ಮನ್ನು ತಾವು ಅರ್ಪಿಸಿಕೊಂಡಿರುವರು. ೧೯೩೮ನೇ ಫೆಬ್ರುವರಿಯಲ್ಲಿ ಹರಿಪುರದಲ್ಲಿ ನಡೆದ ೫೧ನೆಯ ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ ಅಧಿವೇಶನಕ್ಕೆ ಅಧ್ಯಕ್ಷರಾಗಿ ಕಾರ್ಯಭಾರವನ್ನು ಬಹು ಯಶಸ್ವಿ ಯಾಗಿ ನಿರ್ವಹಿಸಿದರು.. ಇವರಿಂದ ಆಗಬೇಕಾಗಿರುವ ರಾಷ್ಟ್ರಹಿತದ ಕೆಲಸಗಳು ಬಹಳವಾಗಿವೆ. ಇಂಥ ಪ್ರತಿಭಾಸಂಪನ್ನರ ಜೀವನಚರಿತ್ರೆಯನ್ನು ಕನ್ನಡದಲ್ಲಿ ಬರೆಯಲು ಗ್ರಂಥಕರ್ತರು ಪಟ್ಟಿರುವ ಪ್ರಯತ್ನವು ಬಹಳ ಸ್ತುತ್ಯವಾದುದು. ಅವರು ಅನೇಕ ವಿಷಯಗಳನ್ನು ಹಲವು ಕಡೆಗಳಿಂದ ಸಂಗ್ರಹಿಸಿ ಉತ್ತಮರೀತಿ ಯಲ್ಲಿ ಪುಸ್ತಕವನ್ನು ಬರೆದಿದ್ದಾರೆ. ಪುಸ್ತಕದ ತುಂಬ ಬೋಸರ ವೀರವಾಣಿಗಳ ಭಾಷಾಂತರಗಳಿವೆ. ಆ ವಾಣಿಗಳು ಸ್ಫೂರ್ತಿದಾಯಕವಾಗಿ ಎಂಥವರನ್ನಾದರೂ ಹುರಿದುಂಬಿಸುವಂತಿರುವುವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಭಾಷಾಂತರ ಕಾರ್ಯದಲ್ಲಿ ಆಸಕ್ತರಾದವರಿಗೆ ಗ್ರಂಥಕರ್ತರ ಶೈಲಿಯು ಅಭ್ಯಾಸೋದಾಹರಣೆ ಗಳಂತಿದೆ. ಮುದ್ರಣವೂ ತಯಾರಿಯೂ ಸುಂದರವಾಗಿವೆ.

ಗ್ರಂಥಕರ್ತರು ಪ್ರಸ್ತಾವನೆಯಲ್ಲಿ ಹೇಳಿಕೊಂಡಿರುವಂತೆ ಇದೊಂದು ಬೋಸರ ಜೀವನದ ಅಪೂರ್ಣಾಂಶವು ಮಾತ್ರ. ಅವರ ವಿಷಯವು ಹೆಚ್ಚು ತಿಳಿದಂತೆಲ್ಲ ಅವರ ವಿಷಯಕ್ಕೆ ಪ್ರೇಮವು ಒಡಮೂಡಿತೆಂದೂ ಬರುಬರುತ್ತ ಆ ಪ್ರೇಮವು ಶ್ರದ್ಧೆಯಾಗಿ ನೆಲಸಿತೆಂದೂ ಗ್ರಂಥಕರ್ತರು ಬರೆದಿದ್ದಾರೆ. ಹಾಗೆಯೇ ಅವರ ವಿಷಯವನ್ನು ಎಷ್ಟು ತಿಳಿದುಕೊಂಡರೂ ಇನ್ನೂ ತಿಳಿಯಬೇಕೆನ್ನಿಸುತ್ತದೆ. ಅವರ ಗುಣ-ಸಾಹಸಗಳು ಅವರಿಗೆ ಆಜನ್ಮವಾಗಿ ಬಂದುವೇನೋ ನಿಜ. ಯಾವ ಸನ್ನಿವೇಶ ಯಾವುದೂ ಇದ್ದಕ್ಕಿದ್ದಹಾಗೆಯೇ ಪ್ರಕಾಶಕ್ಕೆ ಬರುವುದಿಲ್ಲ. ಯಾವ ಸನ್ನಿವೇಶ ಗಳಲ್ಲಿ ಯಾವ ಸಾಧನಗಳ ಒತ್ತರದಿಂದ ಅವರ ಪ್ರತಿಭೆಯು ಹೇಗೆ ಉಜ್ವಲ ಗೊಂಡು ರೂಪುವಡೆಯಿತೆಂಬುದನ್ನು ತಿಳಿಯಬೇಕೆಂಬ ತವಕವು ಸಹಜವಾಗಿ

ಹುಟ್ಟುವುದು. ಇಂಟರ್ ಕ್ಲಾಸಿನಲ್ಲಿ ಓದುತ್ತಿದ್ದಾಗ ಅವರ ಒಲವು ವೈರಾಗ್ಯ ಜೀವನದ ಕಡೆಗೆ ಬಲವಾಗಿ ಸೆಳೆಯಿತೆಂದು ಗ್ರಂಥಕರ್ತರು ಒಂದು ವಾಕ್ಯದಲ್ಲಿ ಹೇಳಿದ್ದಾರೆ. ಈ ಭಾಗವನ್ನು ವಿಸ್ತರಿಸಿದ್ದರೆ ಚೆನ್ನಾಗಿತ್ತು. ರಾಮಕೃಷ್ಣ ಪರಮಹಂಸರ ಮತ್ತು ಸ್ವಾಮಿ ವಿವೇಕಾನಂದರ ಉಪದೇಶಗಳಿಂದ ಇವರ ಧಾರ್ಮಿಕ ಬುದ್ಧಿಯು ಜಾಗರಿತವಾದಂತೆ ಓದಿದ ನೆನಪಿದೆ.

ಅವರು ಬಿ.ಎ. ತರಗತಿಯಲ್ಲಿ ಕಾಲೇಜಿನಿಂದ ತಳ್ಳಲ್ಪಟ್ಟರೆಂದು ಗ್ರಂಥಕರ್ತರು ಒಂದೆರಡು ವಾಕ್ಯಗಳಲ್ಲಿ ಆ ಪ್ರಸಂಗವನ್ನು ಪೂರೈಸಿದ್ದಾರೆ. ಬೋಸರ ಧರ್ಮ ಯುದ್ಧದಲ್ಲಿ ಅದು ಮೊದಲನೆಯ ದೃಶ್ಯವೆನ್ನಬಹುದು. ಅದೂ ವಿಸ್ತರಣಕ್ಕೆ ಯೋಗ್ಯವಾದ ಭಾಗ.

ಅವರು ಸಿವಿಲ್ ಸರ್ವಿಸ್‌ಗೆ ರಾಜೀನಾಮೆಯನ್ನು ಕೊಟ್ಟು ರಾಜಕೀಯಕ್ಕೆ ಇಳಿದುದು ಅವರ ಜೀವನದಲ್ಲಿ ಒಂದು ಮಹತ್ವದ ವಿಷಯ. ರಾಜವೈಭವ ಠೀವಿಗಳೊಡನೆ ಮೆರೆಯುವ ಅಧಿಕಾರದ ಔತಣದೊಂದಿಗೆ ತಾಯಿನಾಡಿನ ಬಂಧನದ ಬಳಲಿಕೆಯ ಆರ್ತಧ್ವನಿಯೂ ಬಂಧವಿಮೋಚನೆಯ ಕರೆಯೂ ಅವರನ್ನು ಸೆಳೆಯದೆ ಇರಲಿಲ್ಲ. ಈ ಎರಡು ಔತಣಗಳಲ್ಲಿ ಒಂದನ್ನು ಆರಿಸಿಕೊಳ್ಳಬೇಕಾಗಿದ್ದ ತೊಡಕಿನಲ್ಲಿ ಬೋಸರು ತಾಯಿನಾಡಿನ ಆರ್ತಧ್ವನಿಗೆ ಕಿವಿಗೊಟ್ಟು ಮಾತೆಯ ಸೇವೆಗಾಗಿ ತಮ್ಮ ಜೀವನವನ್ನು ಮೀಸಲುಮಾಡಲು ಮುಂದುವರಿದು ಬಂದರೆಂದು ಸಂಕ್ಷೇಪವಾಗಿ ಹೇಳಿ ಗ್ರಂಥಕರ್ತರು ಮುಗಿಸಿದ್ದಾರೆ. ಇದೊಂದು ಸತ್ವಪರೀಕ್ಷೆಯ ಕಾಲ. ಎರಡು ಔತಣಗಳೂ ಬೋಸರ ಮನಸ್ಸಿನ ಮೇಲೆ ಸಾಕಾದಷ್ಟು ಬಲವಾಗಿ ತಮ್ಮ ಅಧಿಕಾರವನ್ನು ನಡೆಯಿಸಿರಬೇಕು. ಮನಸ್ಸಿನಲ್ಲಿಯೇ ಕೆಲವು ಕಾಲ ಒಂದು ದೊಡ್ಡ ಹೋರಾಟವು ನಡೆದಿರಬೇಕು. ಈ ವಿವರಗಳನ್ನು ತಿಳಿಯಲು ಮನಸ್ಸು ಹಾತೊರೆಯುವುದು. ಇನ್ನೂ ಅನೇಕ ವಿಷಯಗಳನ್ನು ಹೆಚ್ಚಾಗಿ ತಿಳಿಯಬೇಕೆಂಬ ಆಸೆ ಅಪೂರ್ಣವಾಗಿ ನಿಲ್ಲುವುದು.

ಹೊಸಕೆರೆ ನಾರಾಯಣರಾವ್

---

೮. **ಮಹಾದೇವಿಯಕ್ಕ.**—ಲೇಖಕರು: ಪ್ರೊ॥ ಕೆ. ಜಿ. ಕುಂದಣಗಾರ, ಎಂ.ಎ. ಅವರು; ಪ್ರಕಾಶಕರು: ಬಸವನ ಬಳಗ, ಚಿತ್ರದುರ್ಗ ಮಠ, ಕೊಲ್ಹಾಪೂರ; ಕ್ರೌನ್ ೧.೧೬. ಪು. xxxiii + ೧೬೬ ; ಬೆಲೆ: ೧ ರೂ.

ಸಾಹಿತ್ಯ ಸೇವೆಗಾಗಿ ಕೊಲ್ಹಾಪೂರದಲ್ಲಿ ತಾ॥ ೯—೧೦—೧೯೩೪ರಲ್ಲಿ ಹುಟ್ಟಿದ 'ಬಸವನ ಬಳಗ'ವು ಪ್ರಕಟಿಸಿರುವ ಗ್ರಂಥಗಳಲ್ಲಿ ಇದೊಂದು. ಮಹಾದೇವಿಯಕ್ಕ ಪ್ರಸಿದ್ಧ ವೈರಾಗ್ಯಮೂರ್ತಿ; ಶಿವಭಕ್ತಿಪರಾಯಣೆ; ಆದುದರಿಂದ ಆ ಮಹಾ ವ್ಯಕ್ತಿಯ ಚರಿತ್ರೆ ಕನ್ನಡದಲ್ಲಿ ಇದುವರೆಗೆ ಇಲ್ಲದಿದ್ದುದು ಒಂದು ಕೊರತೆಯಾಗಿತ್ತು. ಆ ಕೊರತೆಯನ್ನು ನಿವಾರಿಸಲು 'ಬಸವನ ಬಳಗ'ದವರು ಉದ್ಯುಕ್ತರಾದುದು ಅಭಿನಂದನೀಯವಾಗಿದೆ. ಹರಕುಪರಕಾದ ಅಕ್ಕನ ಚರಿತ್ರೆಯನ್ನು ಒಂದೇ ಎರಕದಲ್ಲಿ ಹಾಕುವ ಮೊತ್ತಮೊದಲನೆಯ ಪ್ರಯತ್ನವು ಇದೆಂದು ಪ್ರಕಾಶಕರು

ಹೇಳಿಕೊಂಡಿದ್ದಾರೆ. ಗ್ರಂಥಕರ್ತರು ತಮ್ಮ ಮುನ್ನುಡಿಯಲ್ಲಿ ಚರಿತ್ರೆಗೆ ರೂಪ ಗೊಡುವುದರಲ್ಲಿ ತಾವು ಪಟ್ಟ ಕಷ್ಟಗಳನ್ನು ವಿವರಿಸಿದ್ದಾರೆ. ಮೊದಲು ಚರಿತ್ರೆಯ ಸಾಧನ ಸಾಮಗ್ರಿಗಳು ಪೂರ್ಣವಾಗಿಲ್ಲ. ಜೊತೆಗೆ ಕೆಲವು ವಿವಾದಾಸ್ಪದವಾದ ಸಂಗತಿಗಳ ವಿಷಯದಲ್ಲಿ ಜನಾಭಿಪ್ರಾಯವು ಒಂದು ಸಿದ್ಧಾಂತಕ್ಕೆ ಬಂದಿಲ್ಲ. ಈ ತೊಡಕುಗಳನ್ನು ಬಿಡಿಸಿಕೊಂಡು ಗ್ರಂಥಕರ್ತರು ಗಂಭೀರ ಶೈಲಿಯಿಂದ ಭಕ್ತಿ ರಸ ಉಕ್ಕುವಂತೆ ಚರಿತ್ರೆಯನ್ನು ಬರೆದಿರುವರು. ಕಲ್ಯಾಣದ ಶಿವಾನುಭವ ಮಂಟಪದಲ್ಲಿ ಅಕ್ಕನು ಬಸವಣ್ಣನವರೇ ಮುಂತಾದ ಮಹಾತ್ಮರನ್ನು ಸಂಧಿಸಿ ದಾಗಲೂ ಇನ್ನು ಕೆಲವು ಸಂದರ್ಭಗಳಲ್ಲಿಯೂ ನಡೆದುದೆಂದು ವಿವರಿಸಲ್ಪಟ್ಟಿರುವ ತತ್ವಾರ್ಥಗಳು ವಿಚಾರಪರರಿಗೆ ಹಬ್ಬದೂಟದಂತಿವೆ. ಗ್ರಂಥದಲ್ಲಿ ಅಲ್ಲಲ್ಲಿ ಅಕ್ಕನ ವಚನಗಳನ್ನು ಉಚಿತ ಸ್ಥಳಗಳಲ್ಲಿ ಗ್ರಂಥಕರ್ತರು ಉದಾಹರಿಸಿರುವರು. ಇದರಿಂದ ಚಿನ್ನಕ್ಕೆ ಮೆರುಗುಕೊಟ್ಟಂತೆ ಆಗಿದೆ. ಮುದ್ರಣವೂ ಜೋಡಣೆಯೂ ಸುಂದರವಾಗಿವೆ. ಮೊದಲನೆಯ ಪ್ರಯತ್ನವು ಇಷ್ಟು ಯಶಸ್ವಿಯಾಗಿ ನೆರವೇರು ವಂತೆ ಮಾಡಿರುವುದಕ್ಕೆ ಗ್ರಂಥಕರ್ತರನ್ನು ಅಭಿನಂದಿಸಬೇಕಾಗಿದೆ.

ಯಾವ ಜೀವನಚರಿತ್ರೆಯನ್ನು ವಿಮರ್ಶಿಸಬೇಕಾದರೂ ನಾಯಕನ ಜೀವನ ಕ್ರಮಕ್ಕೆ ರೂಪುಗೊಡುವುದರಲ್ಲಿ ಆಗಿನ ಕಾಲದ ವ್ಯಕ್ತಿಗಳೂ ಸಂಸ್ಥೆಗಳೂ ಹೇಗೆ ಎಷ್ಟರಮಟ್ಟಿಗೆ ಪರಿಣಾಮಕಾರಿಗಳಾಗಿದ್ದುವೆಂಬುದನ್ನೂ, ನಾಯಕನ ಮಹತ್ವದಿಂದ ಇತರ ವ್ಯಕ್ತಿಗಳಲ್ಲಿಯೂ ಸಂಸ್ಥೆಗಳಲ್ಲಿಯೂ ಪರಿವರ್ತನೆಗಳೇನಾದುವೆಂಬುದನ್ನೂ ಮುಖ್ಯವಾಗಿ ಗಮನಿಸಬೇಕು. ಈ ದೃಷ್ಟಿಯಿಂದ ಅಕ್ಕನ ಚರಿತ್ರೆಯ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳಬಹುದು :

ಅಕ್ಕನು ಬಾಲ್ಯದಲ್ಲಿಯೇ ಕನ್ನಡ ಸಂಸ್ಕೃತಗಳನ್ನು ಕಲಿತಳು. ಶಿವಾಗಮಗಳನ್ನು ಓದಿಕೊಂಡಳು. ಆದರೆ ಅವಳ ಗುರು ಯಾರೆಂಬುದು ಗೊತ್ತಿಲ್ಲ. ಅವಳ ಭಕ್ತಿ ವೈರಾಗ್ಯಗಳು ಅವಳಿಗೆ ಅವಳ ತಂದೆತಾಯಿಗಳಿಂದ ಬಂದುವೆಂಬುದು ಸ್ಪಷ್ಟವಿದೆ. ತಂದೆ ಈಶ್ವರಗುಡಿಯ ಅರ್ಚಕ. ಆ ಅರ್ಚಕತನಕ್ಕೆ ತಾಯಿ ಸಹಾಯಕಳು. ಗ್ರಾಮ ದಲ್ಲಿ ಈ ದಂಪತಿಗಳನ್ನು ಅರಿಯದವರಾರೂ ಇರಲಿಲ್ಲ. ಅವರನ್ನು ಎಲ್ಲಿ ತಪ್ಪದೆ ಈಶ್ವರನ ಗುಡಿಯಲ್ಲಿ ಕಾಣಬಹುದು. ಅವರದು ಡಂಭದ ಭಕ್ತಿಯಲ್ಲ. ನೈಜವಾದುದು. ಅವರಿಬ್ಬರ ಪ್ರೇಮವು ಏಕರೂಪವಾಗಿ ಪರಮೇಶ್ವರನ ಕಡೆಗೆ ಒಲಿದು ಭಕ್ತಿಯಾಗಿ ನಿಂತಿತ್ತು. ಇಂತಹ ನಿರ್ಮಲವಾದ ಅವರ ಭಕ್ತಿಗೆ 'ಹುಚ್ಚು' ಎಂದು ಜನರು ಹೇಳುತ್ತಿದ್ದರು. ಸತಿಪತಿಗಳು ಜನರ ಅಣಕವನ್ನು ಗಣನೆಗೆ ತಾರದೆ ಶಿವಭಕ್ತಿಯಲ್ಲಿಯೇ ನಿರತರಾಗಿರುತ್ತಿದ್ದರು. ಇಂಥ ತಂದೆತಾಯಿಗಳ ಮಗಳು ನಿರ್ದುಷ್ಟ ಶಿವಶರಣೆಯಾದುದು ಸ್ವಾಭಾವಿಕವೇ ಸರಿ. ಬಸವಣ್ಣನವರು, ಚನ್ನಬಸವಣ್ಣನವರು, ಅಲ್ಲಮಪ್ರಭುಗಳು ಮೊದಲಾದವರು ಅಕ್ಕನ ಸಮಕಾಲೀನರು. ಅವರಿಂದಲಾಗಲಿ, ಮತ್ತಾರಿಂದಲಾಗಲಿ ಆಗಲಿ ಅಕ್ಕನಮೇಲೆ ಯಾವ ಪರಿಣಾಮವಾದುದಕ್ಕೂ ಉಲ್ಲೇಖವಿಲ್ಲ. ಬಸವಣ್ಣನವರನ್ನು ನೋಡುವ ಹೊತ್ತಿಗೆ ಅಕ್ಕನು ಪರಿಪೂರ್ಣೆಯಾಗಿದ್ದಳು.

ಅಕ್ಕನ ಪ್ರಭಾವವು ಇತರರಮೇಲೆ ಕಾರ್ಯಕಾರಿಯಾದುದಕ್ಕೆ ಅನೇಕ ಉಲ್ಲೇಖ ಗಳಿವೆ. ಬಾಲ್ಯದಲ್ಲಿಯೇ ಅವಳ ಸಮಾಗಮದಿಂದ "ನೆರೆಹೊರೆಯ ಹೆಣ್ಣುಮಕ್ಕಳ ಅಪ್ಪೇಷ್ಟರಲ್ಲಿ ಸ್ವಚ್ಛತೆ ಶಿವಭಕ್ತಿಗಳು ಕಂಡುಬರಹತ್ತಿದುವು. ಅವರ ಉದ್ಯೋಗ ಪ್ರೀತಿಯು ಹೆಚ್ಚಿತು. ಸ್ತ್ರೀಯರ ಹಾಳು ಹರಟೆಯು ಕುಗ್ಗಿತು." ಈ ಲಕ್ಷಣವು ಕೊನೆಯವರೆಗೂ

ಅವ್ಯಾಹತವಾಗಿ ಕಾರ್ಯಕಾರಿಯಾಗಿತ್ತು. ಅಕ್ಕನಿಗೆ ಪಂಡಿತವರ್ಗದಲ್ಲಿಯೂ ಉಚ್ಚಸ್ಥಾನವಿತ್ತು. "ಪ್ರಭುದೇವ ಸಹಿತವಾಗಿ ಅನುಭವಮಂಟಪದೊಳಗಿನ ಶರಣರು ಅಕ್ಕನ ಪ್ರತಿಭೆಗೆ ಮೆಚ್ಚಿ ಬೆರಳುಕಚ್ಚಿಕೊಂಡು ಅವಳನ್ನು ಸ್ತುತಿಸಹತ್ತಿದರು."

ಅಕ್ಕನ ಜೀವನದಲ್ಲಿ ಗಮನಿಸಬೇಕಾದ ಸಂಗತಿಗಳ ವೈವಿಧ್ಯವಿಲ್ಲ. ಅದೊಂದು ಏಕರೀತಿಯಾದ ಧಾರ್ಮಿಕ ಜೀವನದ ಆದರ್ಶ ವ್ಯವಸ್ಥೆ. ಅದಕ್ಕೆ ಭಂಗವನ್ನು ತಂದೊಡ್ಡುವಂತೆ ಕಾಣಿಸಿಕೊಂಡು ಕೊನೆಗೆ ಹೆಚ್ಚಿನ ಹೊಳಪನ್ನು ಕೊಟ್ಟು ಬೆಳಗಿದುದು ಅವಳ ಮದುವೆಯ ಪ್ರಸಂಗ. ಕೌಶಿಕರಾಜನು ಅಕ್ಕನಲ್ಲಿ ಮೋಹಿತನಾಗಿ ವಿವಾಹವಾಗ ಲೆಳಸಿದನು. ಭವಿಯೊಡನೆ ವಿವಾಹವಾಗಲು ಅವಳಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಅವಳು "ಚೆನ್ನಮಲ್ಲಿಕಾರ್ಜುನನೆ ಗಂಡನೆನಗೆ, ಆನು ಚೆನ್ನಮಲ್ಲಿಕಾರ್ಜುನಂಗೆ ಮದುವಳಿಗೆ" ಎಂದು ತನ್ನನ್ನು ತಾನು ಶಿವನಿಗೆ ಕೊಟ್ಟುಕೊಂಡಿದ್ದಳು. ಆದರೆ "ಕೌಶಿಕರಾಜನು ಪಾಶವೀ ವಿಕಾರವಶನಾಗಿ ಅವಳ ತಂದೆತಾಯಿಗಳಿಗೆ ಮರಣದ ಅಂಜಿಕೆಯನ್ನು ಹಾಕಿದಾಗ ಅವಳ ಕರ್ತವ್ಯದೃಷ್ಟಿಯು ಜಾಗ್ರತವಾಗಿ ಅವರ ಸುರಕ್ಷಿತತೆಯ ದೆಸೆಯಿಂದ ಆತ್ಮಾರ್ಪಣೆ ಮಾಡಿದಳು." ವಿವಾಹಕ್ಕೊಪ್ಪಿದಳು. ಆದರೆ ಮೂರು 'ಶರ್ತು'ಗಳನ್ನು ಹಾಕಿದಳು. "ನನ್ನ ಮನಸಿಗೆ ಬಂದಂತೆ ನಾನು ಶಿವಪೂಜೆಮಾಡುತ್ತಿರುವೆನು. ನನ್ನ ಮನಸಿಗೆ ಬಂದಂತೆ ಶಿವಶರಣರ ಕಥೆ—ಪುರಾಣ ಶೈವ ತತ್ವಗಳನ್ನು ಕೇಳುತ್ತಿರುವೆನು. ನನ್ನ ಮನಸಿಗೆ ಬಂದಂತೆ ಗುರು ಲಿಂಗ ಜಂಗಮ ಪೂಜೆಯಲ್ಲಿರುವೆನು. ಅವುಗಳಿಗೆ ವಿಘ್ನ ತರುವುದು ತಪ್ಪೆಂದು ಭಾವಿಸುವೆನು. ಇಂತಹ ಮೂರು ತಪ್ಪುಗಳು ಅರಸನಿಂದಾದರೆ. ಅವನನ್ನು ತ್ಯಜಿಸಿ ನನ್ನ ಮನಸಿಗೆ ಬಂದಂತಿರುವೆನು" ಎಂದು ಗೊತ್ತುಮಾಡಿಕೊಂಡಳು. ಈ ಮೂರು 'ಶರ್ತು'ಗಳಲ್ಲದೆ ರಾಜ್ಯಸೂತ್ರಗಳೆಲ್ಲ ಅಕ್ಕನ ಕೈಯಲ್ಲಿ ಬರಬೇಕೆಂಬ ಇನ್ನೊಂದು 'ಶರ್ತಿ'ಗೂ ಮದುವೆಯ ಪೂರ್ವದಲ್ಲಿ ಅರಸನ ಒಪ್ಪಿಕೆಯು ದೊರೆತಿತ್ತು. ಅದರಂತೆ ಅವಳು ಕೈಗೆ ತೆಗೆದುಕೊಂಡಿದ್ದ ರಾಜ್ಯಭಾರದ ವಿಚಕ್ಷಣೆಯು ಎಲ್ಲರಿಗೂ ಮೇಲ್ಪಂಕ್ತಿಯಾಗಿತ್ತು. ಅರಸನು 'ಶರ್ತು'ಗಳಲ್ಲಿ ಕಂಡ ಮೂರು ತಪ್ಪುಗಳನ್ನು ಮಾಡಿದ ಬಳಿಕ ಅಕ್ಕನು ಅರಸನನ್ನು ತ್ಯಜಿಸಿ ಕಲ್ಯಾಣಕ್ಕೆ ತೆರಳಿ ಅಲ್ಲಿ ಬಸವಣ್ಣನವರು ಮೊದಲಾದವರನ್ನು ಸಂಧಿಸಿದಳು. ಅಲ್ಲಿ ಕೆಲವು ಕಾಲವಿದ್ದು "ಮುಂದೆ ವೀರಶೈವರಿಗೂ ಜೈನರಿಗೂ ಕಲಹ ಉಂಟಾಗಲು ಅಲ್ಲಮಪ್ರಭುವಿನೊಡನೆ ತನ್ನ ಇಷ್ಟದೇವತೆಯಾದ ಶ್ರೀಶೈಲ ಮಲ್ಲಿಕಾರ್ಜುನನ ಕಡೆಗೆ ಹೋದಳು." ಹೀಗೆ ಅವಳ ಗುರಿಗೆ ಅಡ್ಡವಾಗಿದ್ದ ಮದುವೆಯ ಆತಂಕವು ಕಳೆದುಹೋಯಿತು.

ಮಹಾದೇವಿಯಕ್ಕನ ಸ್ಥಳ ಉಡಿತಡಿ. ಅದು ಯಾವುದು? ಎಲ್ಲಿದೆ? ಎಂಬುದು ನಿರ್ಧರವಾಗಿಲ್ಲ. ಕಲ್ಯಾಣದ ಹತ್ತಿರವಿದೆ ಎಂದು ಕೆಲವರು ಇತ್ತೀಚೆಗೆ ಅಭಿಪ್ರಾಯಪಡಹತ್ತಿರುವುದಾಗಿಯೂ, ಈ ಬಗ್ಗೆ ಸಂಶೋಧಕರು ಸ್ಥಳೀಯ ಐತಿಹಾಸಿಕ ಆಧಾರಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ನಿರ್ಣಯಕ್ಕೆ ಬಂದರೆ ಅಕ್ಕನ ಚರಿತ್ರೆಯಮೇಲೆ ಹೆಚ್ಚು ಪ್ರಕಾಶ ಬೀಳಬಹುದೆಂದೂ ಗ್ರಂಥಕರ್ತರು ಮುನ್ನುಡಿಯಲ್ಲಿ ಬರೆದಿದ್ದಾರೆ.

ಹೊಸಕೆರೆ ನಾರಾಯಣರಾವ್

---

೯. ಕರ್ನಾಟಕ ದರ್ಶನ ('ಮಿಂಚಿನ ಬಳ್ಳಿ'ಯ ಮೊದಲನೆಯ ಕುಡಿ).— ಸಂಪಾದಕರು: ಶ್ರೀ॥ ಬುರ್ಲಿ ಬಿಂದುಮಾಧವರು; ಪ್ರಕಾಶಕರು: ಶ್ರೀ॥ ಬಾಳಾಚಾರ್ಯ ಗುರಾಚಾರ್ಯ ಅವಧಾನಿಗಳು, ಮಿಂಚಿನ ಬಳ್ಳಿಯ ಚಾವಡಿ, ದೇಸಾಯಿ ಓಣಿ, ಧಾರವಾಡ; ಕ್ರೌನ್ ೮.ಪ. ಪು. ೬ + ೧೮೮; ಬೆಲೆ: ೧ ರೂಪಾಯಿ.

ಬೊಂಬಾಯಿ ಕರ್ನಾಟಕದಲ್ಲಿ ಕನ್ನಡ ಗ್ರಂಥಪ್ರಕಟನೆಗೆ ಪ್ರೋತ್ಸಾಹವನ್ನು ಕಲ್ಪಿಸುವುದಕ್ಕಾಗಿ ಹಲವು ಸಂಸ್ಥೆಗಳನ್ನು ಏರ್ಪಡಿಸಿಕೊಂಡು ಮುಂದುವರಿಯುತ್ತಿರುವ ಮುಖ್ಯ ಪ್ರದೇಶವೆಂದರೆ ಧಾರವಾಡವೆನ್ನಬಹುದು. ಅಲ್ಲಿ 'ಮನೋಹರ ಗ್ರಂಥಮಾಲೆ,' 'ಸಾಹಿತ್ಯ ಪ್ರಕಟನ ಮಂದಿರ' ಮುಂತಾದ ಹಲವು ಏರ್ಪಾಡುಗಳಿಂದ ಪ್ರಸಿದ್ಧ ಕನ್ನಡ ಸಾಹಿತಿಗಳ ಲೇಖನಗಳು ಹೊರಬೀಳಲು ಅನುಕೂಲವುಂಟಾಗಿದೆ. ಇತ್ತೀಚೆಗೆ ಶ್ರೀಮರ್ಾ ಬುರ್ಲಿ ಬಿಂದುಮಾಧವರ ಸಂಪಾದಕತ್ವದಲ್ಲಿ 'ಮಿಂಚಿನ ಬಳ್ಳಿ' ಎಂಬ ಮತ್ತೊಂದು ಪುಸ್ತಕಮಾಲೆಯು ಹೊಸದಾಗಿ ಆರಂಭಿಸಿರುತ್ತದೆ. ಈ ಬಳ್ಳಿಯ ಮೊದಲನೆಯ ಕುಡಿಯೇ ಪ್ರಸಕ್ತ ಗ್ರಂಥ. ಈ ಬಳ್ಳಿಯ ಉದ್ದೇಶವನ್ನು ಕುರಿತು ಸಂಪಾದಕರು ಈ ರೀತಿ ಪ್ರಸ್ತಾವಿಸಿರುತ್ತಾರೆ:—

> ಹೊಸ ವಿಚಾರಗಳ ಬೆಳಕು ಬಿದ್ದರೆ ಕನ್ನಡಿಗರಲ್ಲಿ ವಿಶಾಲದೃಷ್ಟಿಯುಂಟಾದೀತು; ನಂಬುಗೆಯಿಂದ ವಿಚಾರಕ್ರಾಂತಿಯುಳ್ಳ, ಜೀವನವನ್ನು ಜೀವಂತಗೊಳಿಸುವ ನವವಿಚಾರದ ಮಿಂಚಿನ ಮಾಲೆಯನ್ನು ಕನ್ನಡಿಗರಿಗೆ ಅರ್ಪಿಸಬೇಕೆಂದು ಗೊತ್ತುಮಾಡಿದ್ದೇವೆ. ವಿಚಾರ ಜಾಗ್ರತಿಯೇ ನಮ್ಮ ಬಳ್ಳಿಯ ಉದ್ದೇಶ, ವೈಶಿಷ್ಟ್ಯ.... ಅಂತೂ ಕನ್ನಡಿಗರಿಗೆ ಒಂದು ಮಾತನ್ನು ಹಲವು ದಿಕ್ಕಿನಿಂದ ವಿಚಾರಮಾಡಿ ಅರಿತುಕೊಂಡು ತಮ್ಮದೊಂದು ಸ್ವತಂತ್ರ ದೃಷ್ಟಿಕೋನವನ್ನು ಮಾಡಿಕೊಳ್ಳುವ ಸಾಮರ್ಥ್ಯ ಉಂಟಾಗಬೇಕೆಂಬುದೇ ಇದರ ಮುಖ್ಯ ಉದ್ದೇಶವು.

ಮೇಲ್ಕಂಡ ಉದ್ದೇಶವನ್ನನುಸರಿಸಿಯೇ ಪ್ರಸಕ್ತ ಗ್ರಂಥವು ಪ್ರಕಟಿತವಾಗಿರುವುದು. ಕರ್ನಾಟಕದ ಉತ್ಕರ್ಷಕ್ಕೂ, ಕನ್ನಡ ಸಾಹಿತ್ಯದ ಬೆಳವಣಿಗೆಗೂ ಸಂಬಂಧಪಟ್ಟ ಹತ್ತು ಸ್ವತಂತ್ರ ಲೇಖನಗಳು ಇದರಲ್ಲಿ ಅಡಕವಾಗಿವೆ. ಇವುಗಳೆಲ್ಲವೂ ಆಂಗ್ಲ ಸಾಹಿತ್ಯದ ಪ್ರಸಿದ್ಧ ಲೇಖಕರ ಪ್ರಬಂಧ ಮಾಲೆಯ ಶೈಲಿಯಲ್ಲಿ ಬರೆಯಲ್ಪಟ್ಟಿರುವುವೆಂದು ಧಾರಾಳವಾಗಿ ಹೇಳಬಹುದು. ಇವುಗಳ ಲೇಖಕರಾದರೂ ನುರಿತ ಸಾಹಿತಿಗಳು; ಶ್ರೀ॥ ಗಳಾದ ಆಲೂರು ವೆಂಕಟರಾಯರು, ಮುದವೀಡು ಕೃಷ್ಣರಾಯರು, ಕರಮರಕರ ದತ್ತರಾಯರು, ಮಂಗಳವೇಡೆ ಶ್ರೀನಿವಾಸರಾಯರು, ಜೋಶಿ ಶಂಕರರಾಯರು, ಪ್ರೊಫೆಸರ್ ಬಿ. ಎಚ್. ಯಲಬುರ್ಗಿಯವರು, ಬೇಂದ್ರೆ ದತ್ತರಾಯರು, ಬೆಟಗೇರಿ ಕೃಷ್ಣಶರ್ಮರು, ಪ್ರೊಫೆಸರ್ ಆರ್. ವಿ. ಜಹಗೀರದಾರರು—ಈ ಮಹನೀಯರುಗಳು ಒಬ್ಬೊಬ್ಬರು ಒಂದೊಂದರಂತೆ ಕರ್ನಾಟಕ ಪ್ರಾಂತಕ್ಕೂ ಕನ್ನಡ ವಾಙ್ಮಯಕ್ಕೂ ಸಂಬಂಧಪಟ್ಟ ಮಹತ್ವದ ವಿಷಯಗಳನ್ನು ಕುರಿತು ಸ್ಫೂರ್ತಿದಾಯಕವೂ, ವಿಚಾರ ಪರಿಪ್ಲುತವೂ ಆದ ಪ್ರಬಂಧಗಳನ್ನು ಬರೆದುಕೊಟ್ಟಿರುತ್ತಾರೆ. ಸಂಪಾದಕರಾದ ಶ್ರೀ॥ ಬುರ್ಲಿ ಬಿಂದುಮಾಧವರು ಇವುಗಳೆಲ್ಲವನ್ನೂ ಒಂದು ಮಾಲೆಯಾಗಿ ಪೋಣಿಸಿ ಇದಕ್ಕೆ ಪದಕಪ್ರಾಯವಾದ ತಮ್ಮದೊಂದು ಪ್ರಬಂಧವನ್ನು ಸೇರಿಸಿ ಅಲಂಕಾರವಾಗಿರುವ ಒಂದು ಆಭರಣವನ್ನು ತಯಾರಿಸಿರುತ್ತಾರೆ. ಇದಕ್ಕಾಗಿ ಇವರು ಕನ್ನಡಿಗರ ಅಭಿನಂದನಕ್ಕೂ ಕೃತಜ್ಞತೆಗೂ ಪಾತ್ರರಾಗಿರುತ್ತಾರೆ. ಶ್ಲಾಘನೀಯವಾದ ಇವರ ಪ್ರಯತ್ನವು ಕನ್ನಡಿಗರ ಮನ್ನಣೆಯನ್ನು ಪಡೆದದ್ದೇ ಆದರೆ ಇವರು ಕರ್ನಾಟಕದ ಸಂಸ್ಕೃತಿ, ಶಿಕ್ಷಣ, ಚಿತ್ರಕಲೆ, ವೃತ್ತಪತ್ರಿಕಾ ಪ್ರಪಂಚ—ಇವೇ ಮೊದಲಾದ ವಿಷಯಗಳನ್ನೊಳಗೊಂಡ ಇನ್ನೊಂದು

ಪುಸ್ತಕವನ್ನು ಪ್ರಕಟಿಸಬೇಕೆಂಬ ಉದ್ದೇಶವನ್ನಿಟ್ಟುಕೊಂಡಿರುತ್ತಾರೆ. ಕನ್ನಡದ ಅಭಿಮಾನಿಗಳೆಲ್ಲರೂ ಇವರ ಪ್ರಯತ್ನಗಳಿಗೆ ತಕ್ಕ ಪ್ರೋತ್ಸಾಹಕೊಡುವವರಾಗ ಲೆಂದು ಪ್ರಾರ್ಥಿಸುತ್ತೇನೆ.

ಈ ಪುಸ್ತಕದಲ್ಲಿ ಅಡಗಿರುವ ಒಂದೊಂದು ಅಂಶವನ್ನೂ ಕುರಿತು ಪ್ರತ್ಯೇಕವಾದ ಒಂದೊಂದು ಗ್ರಂಥವನ್ನೇ ಬರೆಯಬಹುದು; ಅಂತಹ ದೊಡ್ಡ ವಿಷಯವನ್ನು ಒಂದು ಚಿಕ್ಕ ಬರೆಹದಲ್ಲಿ ಮೂಡಿಸುವಾಗ ಕೆಲವೊಂದು ಅಂಶವು ಬಿಟ್ಟಂತೆ ಭಾಸವಾಗ ಬಹುದು—ಎಂಬುದಾಗಿ ಸಂಪಾದಕರು ತಮ್ಮ ಮುನ್ನುಡಿಯಲ್ಲಿ ಹೇಳಿಕೊಂಡಿರು ವುದನ್ನು ಎಲ್ಲರೂ ಒಪ್ಪಲೇಬೇಕು. ಈ ಅಭಿಪ್ರಾಯವು 'ಕರ್ನಾಟಕವೂ, ಉದ್ಯೋಗ ಗಳೂ' ಎಂಬ ಪ್ರಬಂಧಕ್ಕೂ, 'ಭಾರತೀಯರಾದ ಕನ್ನಡಿಗರು' ಎಂಬ ಪ್ರಬಂಧಕ್ಕೂ ವಿಶೇಷವುಟ್ಟಿಗೆ ಅನ್ವಯಿಸುತ್ತದೆಂದು ಹೇಳಬಹುದು. ಇವುಗಳಲ್ಲಿ ಮೊದಲನೆಯ ದರಲ್ಲಿ ಮೈಸೂರು ಸಂಸ್ಥಾನದಲ್ಲಿ ಪ್ರಚಾರದಲ್ಲಿರುವ ಅನೇಕ ಕೈಗಾರಿಕೆಯ ಉದ್ಯಮಗಳ ವಿಚಾರವು ಬಿಟ್ಟುಹೋಗಿರುವುದು ನಮಗೆ ಸ್ಪಷ್ಟವಾಗಿ ಕಾಣಬರುತ್ತದೆ. ಇದರಂತೆಯೇ ಎರಡನೆಯದರಲ್ಲಿ ತಮ್ಮ ಕರ್ತೃತ್ವ ಶಕ್ತಿಯಿಂದಲೂ, ಬುದ್ಧಿಶಕ್ತಿ ಯಿಂದಲೂ ಭಾರತೀಯರ ಮನವನ್ನು ಸೆಳೆದುಕೊಂಡು ಮುಂದಾಳುಗಳಾದ ಪ್ರಸಿದ್ಧ ಕನ್ನಡಿಗರು ಐವರ ಚರಿತ್ರೆಗಳನ್ನು ಮಾತ್ರ ಸೇರಿಸಲಾಗಿದೆ. ಚೆನ್ನಾಗಿ ಹುಡುಕಿನೋಡಿದರೆ ಈ ಮಾಲೆಯಲ್ಲಿ ಸೇರಲು ಅರ್ಹರಾದ ಇನ್ನೂ ಕೆಲವು ಮಹನೀಯರು ದೊರೆಯುತ್ತಿದ್ದರೆಂಬುವುದೇ ನಮ್ಮ ಭಾವನೆ.

ಇದರಲ್ಲಿ ಅಡಕವಾಗಿರುವ ಸರ್ ಎಂ. ವಿಶ್ವೇಶ್ವರಯ್ಯನವರನ್ನು ಕುರಿತ ಚರಿತ್ರೆಯಲ್ಲಿ (ಪುಟ ೧೭೯) ಇವರು "ಟ್ರಾವಂಕೂರು, ಕೊಚ್ಚಿನ್, ಪುದುಕೋಟೆ ಸಂಸ್ಥಾನಗಳ ವತಿಯಿಂದ ಮೊದಲನೆಯ ದುಂಡು ಮೇಜಿನ ಪರಿಷತ್ತಿಗೆ ಹೋಗಿದ್ದರು; ಮೈಸೂರು, ಜಯಪುರ, ಜೋಧಪುರಗಳ ಪರವಾಗಿ ಎರಡನೆಯ ಸಲವೂ, ಮೈಸೂರು ಸಂಸ್ಥಾನದ ಪರವಾಗಿ ಮೂರನೆಯ ಸಲವೂ ದುಂಡು ಮೇಜಿನ ಪರಿಷತ್ತಿಗೆ ಮತ್ತು ಜಾಯಿಂಟ್ ಸೆಲೆಕ್ಟ್ ಕಮಿಟಿಯ ಸಂಸ್ಥೆಗೆ ಹೋಗಿದ್ದರು" ಎಂದು ಹೇಳಿರುವ ಅಂಶವು ಸರ್ ಮಿರ್ಜಾರವರಿಗೆ ಅನ್ವಯಿಸುವುದೇ ಹೊರತು ಸರ್ ವಿಶ್ವೇಶ್ವರಯ್ಯ ನವರಿಗೆ ಅನ್ವಯಿಸುವುದಿಲ್ಲ. ಈ ರೀತಿಯ ತಪ್ಪುಗಳನ್ನು ಎರಡನೆಯ ಮುದ್ರಣ ದಲ್ಲಿ ಸರಿಪಡಿಸುವರೆಂದು ನಂಬಿದ್ದೇವೆ.

ಡಿ. ಸಿ. ಸುಬ್ಬರಾಯಪ್ಪ

---

**೧೦. ಮಹಾಕಾರುಣಿಕ ಶ್ರೀ ಬಸವಣ್ಣನವರು.**—ಲೇಖಕರು: ಶ್ರೀಮಾನ್ "ವೀರೇಶ್ವರ" ಅವರು, ಬೆಂಗಳೂರು; ಪ್ರಕಾಶಕರು: ಶ್ರೀಮಾನ್ ಡಿ. ಎಸ್. ಚಂದ್ರಪ್ಪ ನವರು, ಬೆಂಗಳೂರು; ಬೀರುವವರು: ಶ್ರೀ ವೀರಶೈವ ಸಮಾಜ ಸೇವಾ ಸಂಘ, ೨೬, ಮಾಮೂಲ್ ಪೇಟೆ, ಬೆಂಗಳೂರು; ಪುಟ: ೧೦ + ೫೨; ಬೆಲೆ: ೧೪ ಆಣೆ.

ಶ್ರೀ ವೀರಶೈವ ಸಮಾಜ ಸೇವಾ ಸಂಘದ ವಿಜ್ಞಾಪನೆ, ಪ್ರಕಾಶಕರ ಬಿನ್ನಹ, ಲೇಖಕರ ಬಿನ್ನಹ, ಮುನ್ನುಡಿಕಾರರ ಲೇಖನ—ಈ ರೀತಿ ಈ ಸಣ್ಣ ಪುಸ್ತಕಕ್ಕೆ ನಾಲ್ಕು ಉಪೋದ್ಘಾತಗಳಿವೆ. ಇವುಗಳಿಂದ ಈ ಪುಸ್ತಕದ ಉದ್ದೇಶವು ಏನೆಂಬುವುದು

ವ್ಯಕ್ತವಾಗುತ್ತದೆ. ಜಗತ್ತಿನ ಸುಪ್ರಸಿದ್ಧ ಜೀವಜ್ಯೋತಿಗಳಲ್ಲಿ ಒಬ್ಬರಾದ ಶ್ರೀ ಬಸವಣ್ಣನವರ ಜೀವನ ತತ್ತ್ವದ ವಿಷಯದಲ್ಲಿ ಇತ್ತೀಚೆಗೆ ಕೆಲವು ಆಕ್ಷೇಪಗಳು ಹುಟ್ಟಿ ವೀರಶೈವ ಸಮಾಜದಲ್ಲಿ ಒಂದು ವಿಷಮವಾತಾವರಣವು ತಲೆಹಾಕುತ್ತಿರು ವುದರಿಂದ ಅದರ ನಿವಾರಣೆಗೆಂದು ಆಕ್ಷೇಪಗಳಿಗೆ ಚಾರಿತ್ರಿಕ ಪ್ರಮಾಣಗಳ ಆಧಾರದಮೇಲೆ ಸಮಂಜಸವಾದ ಉತ್ತರವನ್ನು ಬರೆದು ಅದನ್ನು ನಾಡಿನಲ್ಲಿ ಬೀರುವ ಉದ್ದೇಶದಿಂದ ಈ ಕೈಪಿಡಿಯನ್ನು ಪ್ರಕಟಿಸಲಾಗಿದೆ ಎಂದು ವೀರಶೈವ ಸಮಾಜ ಸೇವಾ ಸಂಘದ ಅಧ್ಯಕ್ಷರು ತಮ್ಮ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಈಗ ಹುಟ್ಟಿರುವ ಆಕ್ಷೇಪಗಳು ಯಾವುವೆಂದರೆ—ಬಸವಣ್ಣನವರು ವರ್ಣಾಶ್ರಮವನ್ನು ಖಂಡಿಸಿ ಮೇಲುಕೀಳೆಂಬ ವರ್ಣಭೇದವನ್ನು ನಾಶಮಾಡಿದರೆಂಬುವುದೊಂದು; ಧರ್ಮಸೂತ್ರಗಳನ್ನು ಜನಸಾಮಾನ್ಯರೆಲ್ಲರೂ ತಿಳಿಯುವಂತೆ ಕನ್ನಡದಲ್ಲಿ ಬೋಧೆ ಮಾಡಿದರೆಂಬುವುದು ಮತ್ತೊಂದು. ಈ ಆಕ್ಷೇಪಗಳು ಅಷ್ಟೇನೂ ದುರ್ಘಟವಾದುವು ಗಳಲ್ಲವೆಂಬುದನ್ನು ಸಮದರ್ಶಿಗಳಾದ ಯಾವ ವಿಮರ್ಶಕರೇ ಆಗಲಿ ಒಪ್ಪಲೇಬೇಕು. ಇಂತಹ ಆಕ್ಷೇಪಗಳಿಗೆ ಸಮಾಧಾನ ಹೇಳುವ ಪ್ರಯತ್ನಮಾಡುವ ಪ್ರಕೃತವೇ ಇರಲಿಲ್ಲ. ಏತಕ್ಕೆಂದರೆ ಈ ರೀತಿಯ ಆಕ್ಷೇಪಗಳನ್ನು ಮಾಡುವುದರ ಪರಿಣಾಮ ಸೂರ್ಯನ ಕಡೆಗೆ ಉಗುಳಲು ಪ್ರಯತ್ನಿಸಿದಂತೆ ನಿರರ್ಥಕಮಾತ್ರವೇ ಅಲ್ಲದೆ ಆಕ್ಷೇಪಕಾರರ ಮೇಲೆಯೇ ಪ್ರತಿಬಿಂಬಿತವಾಗಬಹುದು. ಆದರೂ ಈ ಕೈಪಿಡಿಯ ಲೇಖಕರು ಈ ಆಕ್ಷೇಪಗಳಿಗೆ ತಕ್ಕ ಸಮಾಧಾನವನ್ನು ಕೊಟ್ಟು ಆಕ್ಷೇಪಕಾರರ ಅಸಮಂಜಸವಾದ ತರ್ಕವನ್ನು ಖಂಡಿಸಿರುತ್ತಾರೆ. ಇದರಿಂದ ಪುಣ್ಯಪುರುಷರೆಂದು ಪ್ರಖ್ಯಾತರಾಗಿರುವ ಶ್ರೀ ಬಸವಣ್ಣನವರ ವಿಚಾರದಲ್ಲಿ ಹುಟ್ಟಿರಬಹುದಾದ ತಪ್ಪು ಭಾವನೆಗಳು ದೂರೀಕೃತವಾಗಿ ಎಂದಿನಂತೆ ಪೂಜ್ಯಭಾವನೆಗಳು ಸ್ಥಿರಗೊಂಡಾವೆಂದು ನಿರೀಕ್ಷಿಸಬಹುದು.

ಡಿ. ಸಿ. ಸುಬ್ಬರಾಯಪ್ಪ

---

**೧೧. ಹಾಡಿನ ಚಿಲುಮೆ.**—ಲೇಖಕರು: ಶ್ರೀಮಾನ್ 'ಹೊಯಿಸಳ' ಅವರು; ಪ್ರಕಾಶಕರು: ಸ್ಕೌಟ್ ಹೆಡ್‌ಕ್ವಾರ್ಟರ್ಸ್; ಬೆಂಗಳೂರು; ಕ್ರೌನ್ ಅ. ಪ. ಪು. ೬೦; ಬೆಲೆ:

ಈ ಗ್ರಂಥದಲ್ಲಿ ಹಾಡುಗಳು ಪದ್ಯಗಳು ಎಲ್ಲ ಸೇರಿ ೪೪ ಕೃತಿಗಳಿವೆ. ಹಲವು ಸ್ಕೌಟು ದಳಕ್ಕೆ ಸಂಬಂಧಿಸಿದವು; ಕೆಲವು ಭಾವಗೀತಗಳು. ಎಲ್ಲವಕ್ಕೂ ಮೂಲ ಪ್ರೇರಕ ಶಕ್ತಿಯಾಗಿರುವ—ನಮ್ಮ ನಾಡು, ನಮ್ಮ ನುಡಿ, ನಮ್ಮ ಜನ, ನಮ್ಮ ಸಂಸ್ಕೃತಿ ಎಂಬ ಉತ್ಕಟಾಭಿಮಾನ ಶ್ರೀ ಹೊಯಿಸಳರ 'ಹಾಡಿನ ಚಿಲುಮೆ'ಯನ್ನು ಉಕ್ಕಿಸಿದೆ.

ಹೊಯಿಸಳರ ಹಾಡುಗಳು ಸ್ಕೌಟುಗಳ ಕರ್ತವ್ಯವನ್ನು ಸರಸವಾಗಿ ಬಣ್ಣಿಸಿವೆ; ಅವರಲ್ಲಿ ನಾಡಿನ ಪ್ರೇಮ, ಶ್ರದ್ಧೆ, ಉತ್ಸಾಹ, ಒಕ್ಕಟ್ಟು, ಮೇಲಾಗಿ ರಸಿಕತೆ ಮತ್ತು ಆನಂದ ಇವನ್ನು ಹುಟ್ಟಿಸಲು ಸಹಕಾರಿಯಾಗಿವೆ. ಇವರ ಈ ಕೃತಿಗಳನ್ನು ಓದಿ ಸ್ಕೌಟುಗಳಲ್ಲದವರೂ 'ಸ್ಕೌಟ್' ಆಗಬಹುದಾಗಿದೆ; ಆನಂದಪಡ

ಬಹುದಾಗಿದೆ. 'ಶ್ರೀ' ಯವರು ಮುನ್ನುಡಿಯಲ್ಲಿ ಹೇಳಿರುವಂತೆ, ಇವು "ಮಕ್ಕಳನ್ನೂ, ಬೆಳೆದ ಹಿರಿಯ ಮಕ್ಕಳನ್ನೂ ಕರಗಿಸಿ, ಮರುಗಿಸಬಲ್ಲವು. ಕೊನರಿಸಿ, ತೇಜಸ್ಸುಗೂಡಿಸಬಲ್ಲವು. 'ಮರಿ' ಗಳನ್ನು ಸಿಡಿಲಮರಿಗಳಂತೆ ಗರ್ಜನೆ ಮಾಡಿಸುವ ಶಕ್ತಿ, ಕಾಂತಿ, ಆ ಹಾಡುಗಳಲ್ಲಿವೆ."

ಕೃತಿಗಳ ಛಂದಸ್ಸಿನ ಓಟ, ಬಂಧದಲ್ಲಿ ಬೇಕೆಂದು ತಂದಿರುವಂತೆ ಕಾಣುವ ಶೈಥಿಲ್ಯ, ಮಾತಿನ ಬಿರುಸು, ಸ್ವಾಚ್ಛಂದ್ಯ, ಲಾವಣಿಯ 'ಝೋಕು'—ಈ ವಿಶೇಷ ಲಕ್ಷಣಗಳನ್ನು ಪರಿಶೀಲಿಸಿದರೆ ಈ ಹಾಡುಗಳನ್ನು ಸ್ಕೌಟುಗಳ ತಾಳ ಮೇಳಕ್ಕಾಗಿ, ಕುಣಿತ 'ಕೂಗಾಟ'ಕ್ಕಾಗಿ ಉದ್ದೇಶಿಸಿ ಶ್ರೀ ಹೊಯಿಸಳರು ರಚಿಸಿರುವುದು ಸ್ಪಷ್ಟವಾಗುತ್ತದೆ. ಲೇಖಕರ ಈ ಉದ್ದೇಶವನ್ನು ಗಮನದಲ್ಲಿರಿಸಿಕೊಂಡು ಓದಿದರೆ, ಓದುಗರು ಅವುಗಳ ಗುಣಗ್ರಹಣಮಾಡಿ ಸಂತೋಷಪಡಲು ಅವಕಾಶವಾಗುತ್ತದೆ.

ಶ್ರೀ ಹೊಯಿಸಳರ ಹಾಡಿನ ಚಿಲುಮೆ ಅವಿಚ್ಛಿನ್ನವಾಗಿ ಉಕ್ಕಲಿ, ಮೇಲು ಮೇಲಕ್ಕೆ ಉಕ್ಕಲಿ ಎಂಬುದೇ ನಮ್ಮ ಮನಃಪೂರ್ವಕವಾದ ಹಾರೈಕೆ.

ಎಂ. ವಿ. ಸೀತಾರಾಮಯ್ಯ

---

**೧೨. ವಿದೇಶೀಯ ಲೋಕೋಪಕಾರಿಗಳು.**—ಲೇಖಕರು: ಶ್ರೀಮಾನ್ ಎಲ್. ಸ್ವಾಮಿರಾಯರು, ಬಿ.ಎ., ಹೆಡ್ ಮಾಸ್ಟರ್, ಗೌ॥ ಬಾಯ್ಸ್ ಮಿಡಲ್ ಸ್ಕೂಲ್, ಮಲ್ಲೇಶ್ವರಂ, ಬೆಂಗಳೂರು; ಕ್ರೌನ್ ಅ.ಪ. ಪು. ೬೭; ಬೆಲೆ: ೬ ಆಣೆ.

ಈ ಗ್ರಂಥದಲ್ಲಿ, ವಿಲಿಯಂ ಕ್ಯಾಕ್ಸ್‌ಟನ್, ಜಾನ್ ಹ್ಯಾನ್‌ಕಾಕ್, ಥಾಮಸ್ ಎಡಿಸನ್, ಆಂಡ್ರೂ ಕಾರ್ನೆಗಿ, ಬೆಂಜಮಿನ್ ಫ್ಲಾಂಕ್ಲಿನ್, ಬೂಕರ್ ಟಿ. ವಾಷಿಂಗ್‌ಟನ್, ಲೂಯಿ ಪ್ಯಾಶ್ಚರ್, ಮಿಸ್ ಫ್ಲಾರೆನ್ಸ್ ನೈಟಿಂಗೇಲ್—ಈ ಲೋಕೋಪಕಾರಿಗಳ ಸಂಕ್ಷೇಪ ಜೀವನಚರಿತ್ರೆಗಳನ್ನು ಬರೆದು ಲೇಖಕರು ಕನ್ನಡ ಮಕ್ಕಳಿಗೆ ಉಪಕಾರಮಾಡಿದ್ದಾರೆ. ಪ್ರತಿಯೊಬ್ಬರ ವಿಷಯವಾಗಿಯೂ ಒಂದೊಂದು ದೊಡ್ಡ ಜೀವನಚರಿತ್ರೆಯನ್ನೇ ಬರೆಯಬಹುದಾದರೂ, ಶ್ರೀ॥ ಸ್ವಾಮಿರಾಯರು ಬರೆದಿರುವಂಥ ಸಣ್ಣ ಸಣ್ಣ ಜೀವನಚರಿತ್ರೆಗಳಿಂದ ಶಾಲೆಯ ಮಕ್ಕಳಿಗೆ ಹೆಚ್ಚು ಪ್ರಯೋಜನವಾಗುವುದರಲ್ಲಿ ಸಂದೇಹವಿಲ್ಲ. ಗ್ರಂಥದ ಭಾಷೆ ಶೈಲಿ ಸರಳವಾಗಿವೆ.

ದೇವರ ದಯದಿಂದ ಪ್ರಪಂಚದಲ್ಲಿ ನೂರಾರು ಮಂದಿ ಆದರ್ಶವ್ಯಕ್ತಿಗಳು ಅವತರಿಸಿದ್ದಾರೆ. ಅವರಲ್ಲಿ ಸಾಧ್ಯವಾದಷ್ಟು ಮಂದಿ ಮಹನೀಯರನ್ನು ಆರಿಸಿಕೊಂಡು, ಲೇಖಕರು ಮಕ್ಕಳ ಉಪಯೋಗಕ್ಕಾಗಿ ಇದೇ ಮಾದರಿಯಲ್ಲಿ ಜೀವನಚರಿತ್ರೆಗಳನ್ನು ಬರೆದು ಉಪಕಾರಮಾಡಬೇಕೆಂದು ಕೋರುತ್ತೇವೆ. ಇದರಿಂದ ದೊಡ್ಡವರಿಗೂ ಉಪಯೋಗವಾದೀತು. ಜೀವನಚರಿತ್ರೆಗಳು ಇನ್ನೂ ಸ್ವಲ್ಪ ವಿಸ್ತಾರವಾದರೂ ಚಿಂತೆಯಿಲ್ಲ: ಚರಿತ್ರನಾಯಕನ ಜೀವನದಲ್ಲಿ ನಡೆದ ಸ್ವಾರಸ್ಯಕರವಾದ ಸಂಗತಿಗಳನ್ನು ಜಾಣ್ಮೆಯಿಂದ ಸೇರಿಸಿ ಜೀವನಚರಿತ್ರೆ ಅಂಕಿ, ಅಂಶ, ಕಾರ್ಯಗಳ ಪಟ್ಟಿಯಾಗದಂತೆ ಮಾಡಬೇಕು. ಪ್ರಕೃತ ಗ್ರಂಥದ ಆಂಡ್ರೂ ಕಾರ್ನೆಗಿಯ ವೃತ್ತಾಂತದ ಕೊನೆಯ ಭಾಗದಲ್ಲಿ ಕೊಟ್ಟಿರುವ ಎರಡು ಸಂಗತಿಗಳು (Anecdotes)

ಓದಿನ ಸ್ವಾರಸ್ಯವನ್ನು ಹೆಚ್ಚಿಸಿರುವುವಲ್ಲದೆ, ಆ ಮಹನೀಯನ ಸ್ವಭಾವವನ್ನು ತಿಳಿದುಕೊಳ್ಳಲು ಹೆಚ್ಚು ಸಹಾಯಕವಾಗಿವೆ.

ಬೆಂಜಮಿನ್ ಫ್ಲಾಂಕ್‌ಲಿನ್ ವೀಣೆ ಬಾರಿಸುತ್ತಿದ್ದನೆಂದು ಹೇಳಿದೆ (ಪು. ೩೯). ಇದು ನಿಜವಾಗಿದ್ದ ಪಕ್ಷದಲ್ಲಿ ನಾವು ಹೆಮ್ಮೆಪಡಬೇಕಾದ ಸಂಗತಿಯೇ ಸರಿ.

ಎಂ. ವಿ. ಸೀತಾರಾಮಯ್ಯ

---

**೧೩. ಸರ್ ಸಿ. ವಿ. ರಾಮನ್ ಅವರ ಜೀವನಚರಿತ್ರೆ.**—ಲೇಖಕರು: ಶ್ರೀಮಾನ್ ಎಸ್. ಎನ್. ಲೋಕನಾಥ್ ಅವರು; ಕ್ರೌನ್ ೧.ಪ. ಪು. ೫೦; ಬೆಲೆ: ೬ ಆಣೆ.

ಲೋಕವಿಖ್ಯಾತ ವೈಜ್ಞಾನಿಕರಾದ ಸರ್ ಸಿ. ವಿ. ರಾಮನ್ ಅವರ ಹೆಸರನ್ನು ಕೇಳದವರಿಲ್ಲ. ಆದರೂ ಅವರ ಜೀವನಚರಿತ್ರೆ, ಅವರ ಮಹತ್ವಪೂರ್ಣವಾದ ವೈಜ್ಞಾನಿಕ ಸಂಶೋಧನೆಗಳು ಮುಂತಾದುವು ಎಲ್ಲರಿಗೂ ತಿಳಿದ ವಿಷಯಗಳಲ್ಲ. ಇವನ್ನು ಸ್ವಲ್ಪಮಟ್ಟಿಗಾದರೂ ತಿಳಿದುಕೊಳ್ಳಬಯಸುವವರಿಗೆ ಈ ಸಣ್ಣ ಪುಸ್ತಕ ಕೆಲವು ಮಟ್ಟಿಗೆ ಸಹಾಯಕವಾಗಿದೆ.

ಸರ್ ರಾಮನ್ನರ ಜೀವನಚರಿತ್ರೆಯ ವಿಷಯವಾಗಿ ಸರಿಯಾದ ಗ್ರಂಥ ವಾವುದೂ ದೊರೆಯದಿದ್ದರೂ, ಅವರನ್ನು ಬಲ್ಲ ಅವರ ಮಿತ್ರರಿಂದಲೂ ಸಮಾಚಾರ ಪತ್ರಿಕೆಗಳಿಂದಲೂ ವಿಷಯಸಂಗ್ರಹಮಾಡಿ ಈ ಪುಸ್ತಕ ಬರೆದಿರುವುದು ಲೇಖಕರ ಶ್ರದ್ಧೆ ಉತ್ಸಾಹಗಳನ್ನು ವ್ಯಕ್ತಪಡಿಸುತ್ತದೆ.

ಸರ್ ರಾಮನ್ನರು ತಮ್ಮ ಯಾವ ಒಂದು 'ರಾಮನ್ ಪರಿಣಾಮ' (Raman Effect) ಎಂಬ ವೈಜ್ಞಾನಿಕ ಸಂಶೋಧನೆಯಿಂದ 'ನೊಬೆಲ್' ಪಾರಿತೋಷಿಕವನ್ನು ಪಡೆದರೋ ಆ ಸಂಶೋಧನೆ ಹಾಗೂ ಅವರ ಇತರ ಸಂಶೋಧನೆಗಳ ಪರಿಚಯ ಮಾಡಿಕೊಡಲು ಲೇಖಕರು ಪ್ರಯತ್ನಪಟ್ಟಿದ್ದಾರೆ. ಈ ಭಾಗಗಳು ಓದುಗರಿಗೆ ಹೆಚ್ಚಿನ ತಿಳಿವಳಿಕೆಯನ್ನಾಗಲಿ ತೃಪ್ತಿಯನ್ನಾಗಲಿ ಕೊಡುವಮಟ್ಟಿಗಿಲ್ಲನೆಂದು ನಮ್ಮ ಶಂಕೆ; ಮುಂದಿನ ಮುದ್ರಣದಲ್ಲಿ ಇವನ್ನು ಇನ್ನಷ್ಟು ವಿಸ್ತಾರವಾಗಿಯೂ ತಿಳಿಯಾಗಿಯೂ ತಿಳಿಸುವ ಪ್ರಯತ್ನಮಾಡಬೇಕೆಂದು ಕೋರುತ್ತೇವೆ.

ಎಂ. ವಿ. ಸೀತಾರಾಮಯ್ಯ

---

**೧೪. ನಾಡ ಹಬ್ಬ.**—ಲೇಖಕರು: ಶ್ರೀಮಾನ್ ಶ್ರೀರಾಮರವರು; ಪ್ರಕಾಶಕರು: ಕರ್ನಾಟಕದ ತರುಣ ಸಂಘ, ರಾಯಚೂರು; ಕ್ರೌನ್ ೧.ಪ. ಪು. ೧೮; ಬೆಲೆ: (?)

ಈಗ ಕೆಲವು ವರ್ಷಗಳಿಂದ ಉತ್ತರ ಕರ್ನಾಟಕ, ಮಂಗಳೂರು ಪ್ರಾಂತಗಳಲ್ಲಿ ನವರಾತ್ರಿ ಕಾಲದಲ್ಲಿ 'ನಾಡ ಹಬ್ಬ' ಆಚರಿಸುತ್ತಿರುವುದು ಕನ್ನಡಿಗರಿಗೆ ತಿಳಿದ ವಿಷಯ. ಈ ಚಿಕ್ಕ ಪುಸ್ತಕದಲ್ಲಿ ಲೇಖಕರು 'ನಾಡ ಹಬ್ಬ' ಎಂದರೆ ಏನೆಂಬುದನ್ನು ಮೂವರು ಹುಡುಗಿಯರ ಸರಸ ಸಂಭಾಷಣೆಯುಳ್ಳ ದೃಶ್ಯರೂಪದಲ್ಲಿ ವಿವರಿಸಿದ್ದಾರೆ. "ಶರದೃತುವಿನ ಪ್ರಾರಂಭದಲ್ಲಿ, ದೇವತೆಯ ನೆವದಿಂದ, ನಮ್ಮಲ್ಲಿರುವ ಭೇದಭಾವನೆ

ತಿಳಿಸಿ, ನಮ್ಮ ನಾಡಿನ, ನುಡಿಯ, ಸಮಾಜ ಸುಧಾರಣೆಗೂ ಅವುಗಳ ಏಳಿಗೆಗೂ, ಪೋಷಣೆಗೂ ಅನುವಾಗುವಂತೆ'' ಆಚರಿಸುವುದೇ 'ನಾಡ ಹಬ್ಬ'.

ಸಂಭಾಷಣೆಯಲ್ಲಿ ಒಂದು ವಿಷಯದ ವಿವರಣೆ ಬೆಳೆದಿದೆಯೇ ಹೊರತು, ಕಥೆಯಾಗಲಿ, ಕ್ರಿಯೆಯಾಗಲಿ, ಪಾತ್ರಸೃಷ್ಟಿಯಾಗಲಿ ಇಲ್ಲದಿರುವುದರಿಂದ ಈ ಕೃತಿ ದೃಶ್ಯವಾಗಲಾರದು. ಎಂ. ವಿ. ಸೀತಾರಾಮಯ್ಯ

---

## ೧೯೩೭ನೆಯ ಜುಲೈ ಮೊದಲಿನಿಂದ ಡಿಸೆಂಬರ್ ಕಡೆಯವರೆಗೆ

### (i) ಪರಿಷತ್ತಿಗೆ ವಿಮರ್ಶೆಗಾಗಿ ಬಂದಿರುವ ಗ್ರಂಥಗಳು

೧. ಪಾವನ-ಪಾವಕ.—ಶ್ರೀ॥ ರಂ. ಶ್ರೀ. ಮುಗಳಿಯವರು, ಎಂ.ಎ., ಬಿ.ಟಿ., ೨. ಬಾಲತ್ರಿಕೋಣಮಿತಿ.—ಶ್ರೀ॥ ಎಂ. ವಿ. ಜಂಬುನಾಥನ್, ಎಂ.ಎ., ಬಿ.ಎಸ್‌ಸಿ. ಅವರು, ೩. ವಾಕ್ಯರಚನಾಕ್ರಮ.—ಶ್ರೀ॥ ವೈ. ಸುಬ್ಬರಾಯರು, ೪. ಅಷ್ಟಾವಕ್ರ ಗೀತಾ.—ಶ್ರೀ॥ ವೈ. ಚಂದ್ರಶೇಖರ ಶಾಸ್ತ್ರಿಗಳು, ಎಂ.ಎ., ೫. ಸಮುದ್ರದಾಚೆಯಿಂದ.—ಶ್ರೀ॥ ವಿ. ಕೆ. ಗೋಕಾಕ್ ಅವರು, ಎಂ.ಎ., ೬. ಪುನರ್ಜನ್ಮ ಅಥವಾ ಆತ್ಮಶುದ್ಧಿ.—ಶ್ರೀ॥ ನಗರ ವೆಂಕಣ್ಣಾಚಾರ್ಯರು ಮತ್ತು ಶ್ರೀ॥ ನಾರಾಯಣಶರ್ಮರು, ೭. ಹಣಪ್ರಪಂಚ.—ಶ್ರೀ॥ ವಿ. ಸೀತಾರಾಮಯ್ಯನವರು, ಎಂ.ಎ., ೮. ಪ್ರಭುವರ್ಯರ ಯೂರೋಪ್ ಪ್ರವಾಸ.—ಶ್ರೀ॥ ಆರ್. ಎಸ್. ನಾರಾಯಣರಾಯರು, ೯. ಭಕ್ತಿಕುಸುಮಾಂಜಲಿ ಮತ್ತು ಪೂಮಾಲೆ.—ಪಂಡಿತ ಶ್ರೀ॥ ಪರಿಮಿ ಪದ್ಮನಾಭಯ್ಯನವರು, ೧೦. ಪ್ರಪಂಚದ ಕೆಲಸಗಾರ.—ಶ್ರೀ॥ ದಿನಕರ ದೇಸಾಯಿಯವರು, ಎಂ.ಎ., ಎಲ್‌ಎಲ್.ಬಿ., ೧೧-೧೨. ವಾಕ್ಯವೃತ್ತಿ ಮತ್ತು ಲಘುವೃತ್ತಿ, ಅಧ್ಯಾತ್ಮ ಸೂಕ್ತಿಮಂಜರಿ.—ಶ್ರೀ॥ ವೈ. ಸುಬ್ಬರಾಯರು, ೧೩. ಸರ್ ಸಿ. ವಿ. ರಾಮನ್ ಅವರ ಜೀವನಚರಿತ್ರೆ.—ಶ್ರೀ॥ ಎಸ್. ಎನ್. ಲೋಕನಾಥ್ ಅವರು, ೧೪. ಶ್ರೀ ಕುಮುದೇಂದು ರಾಮಾಯಣ.—ಸಂಪಾದಕರು: ಶ್ರೀ॥ ಕೆ. ಜಿ. ಕುಂದಣಗಾರರು, ಎಂ.ಎ., ೧೫. ಸಂಸ್ಕೃತ ನಾಟಕಗಳು.—ಶ್ರೀ॥ ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., ೧೬. ಲಕ್ಷಣ ಸಂಗ್ರಹ (ಸಂಸ್ಕೃತ).—ಸಂಗ್ರಾಹಕರು: ಶ್ರೀ॥ ಗೌರೀಶಂಕರ ಭಿಕ್ಷು, ೧೬. ಕನ್ನಡ ನುಡಿಯ ಹುಟ್ಟು.—ಶ್ರೀ॥ ಶಂ. ಭಾ. ಜೋಶಿ ಅವರು, ೧೭. ರಂಗವಲ್ಲಿ (ಬೇರೆ ಬೇರೆ ಲೇಖಕಿಯರಿಂದ).—ಪ್ರಕಾಶಕರು: ಧಾರವಾಡದ ಮನೋಹರ ಗ್ರಂಥಮಾಲೆ, ೧೮. ಬೈಲಹಳ್ಳಿ ಸರ್ವೆ.—ಶ್ರೀ॥ ಗೊರೂರು ರಾಮಸ್ವಾಮಯ್ಯಂಗಾರ್ಯರು, ೧೯. ಮಾಂದಳಿರು.—ಶ್ರೀ॥ ಪು. ತಿ. ನರಸಿಂಹಾಚಾರ್ಯರು, ಬಿ.ಎ., ೨೦. ಸರಸಮ್ಮನ ಸಮಾಧಿ.—ಶ್ರೀ॥ ಶಿವರಾಮ ಕಾರಂತರು, ೨೧. ಬುದ್ಧಿಯೋಗ.—ಶ್ರೀ॥ ಮುಗದಲ ರಾಮಚಂದ್ರ, ೨೨. ಶಿವಾನಂದಶಾಸ್ತ್ರಿ ಶೃಂಗಭಂಗಮು (ತೆಲುಗು).—ಶ್ರೀ॥ ಜಿ. ಗುರುಸಿದ್ಧ ಶರ್ಮರು, ೨೩. ಮಾಕಂದ (ಬೇರೆ ಬೇರೆ ಲೇಖಕರಿಂದ).—ಸಂಪಾದಕರು: ಶ್ರೀ॥ 'ಆನಂದಮಿತ್ರ' ಅವರು, ೨೪. ಶಿವಚರಿತ್ರ ಸಾಹಿತ್ಯ (ಹಿಂದಿ).—ಶ್ರೀ॥ ಗಣೇಶ ಹರೀ ಖಾರೆ ಅವರು, ೨೫. ಮಹಾವೀರನ ಮಾತುಕತೆ.—ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರು, ೨೬. ಎರಡು ಧ್ರುವ.—ಶ್ರೀ॥ ವ್ಹಿ. ಎಂ. ಇನಾಂದಾರರು, ೨೭. ಮಹಾದೇವಿಯಕ್ಕ.—ಶ್ರೀ॥ ಕೆ. ಜಿ. ಕುಂದಣಗಾರರು, ಎಂ.ಎ., ೨೮. ಕಿರಣ.—(ಮಾಸಪತ್ರಿಕೆ: ಸಂಪುಟ ೧, ಸಂಚಿಕೆ ೧.) ಸಂಪಾದಕರು: ಶ್ರೀ॥ ಕೆ. ಪ್ರಾಣೇಶಾಚಾರ್ಯರು, ೨೯. ಶ್ರೀ ಬಸವಣ್ಣನವರು.—ಶ್ರೀ॥ ವೀರೇಶ್ವರ ಅವರು.

### (ii) ಪರಿಷತ್ತಿಗೆ ಬಂದಿರುವ ಇತರ ಪುಸ್ತಕ ಪ್ರಕಟನೆಗಳು

೧-೧೨. ಮೈಸೂರು ಕೈಪಿಡಿ, ಬೀಜಗಣಿತ, ಮಾಧ್ಯಮಿಕ ಶಾಲೆಗಳ ಭೂಗೋಳ ಶಾಸ್ತ್ರ ಪಾಠಗಳು, ಮೈಸೂರಿನ ಪ್ರಜೆಗಳು ಮತ್ತು ಪೌರನೀತಿ, Report of Forest Administration in Mysore State, ರೂಥರೇಖಾಗಣಿತ, ತ್ರಿಕೋಣಮಿತಿಯ

ಸುಲಭ ಪಾಠಗಳು, ರಸಾಯನ ಶಾಸ್ತ್ರದ ಮೊದಲನೆಯ ಪುಸ್ತಕ, ಭೌತಶಾಸ್ತ್ರಪ್ರವೇಶಿಕೆ, ಜೀವಶಾಸ್ತ್ರ, ೧೯೩೪ನೆಯ ಇಸವಿಯ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಗೊತ್ತಾದ ಕನ್ನಡ ಪದ್ಯಸಂಗ್ರಹ, ಗಾನಾಮೃತ.—ಮೈಸೂರು ಸರ್ಕಾರದಿಂದ, ೧೩. ಮೊಗ್ಗಿನವಪಳೆ.—ಪ್ರಕಾಶಕರು: ಹೈದರಾಬಾದಿನ ತರುಣರ ತಂಡ, ೧೪. ಹೇಗಾದರೇನು.—ಪ್ರಕಾಶಕರು: ಹಲಸಂಗಿಯ ಅರವಿಂದ ಗ್ರಂಥಮಾಲೆಯಿಂದ, ೧೫. ನಟಿ.—ಪ್ರಕಾಶಕರು: ಧಾರವಾಡದ ಪ್ರೇಮ ಪ್ರಕಟನಾಲಯದಿಂದ, ೧೬. ಹಣಪ್ರಪಂಚ.—ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯದಿಂದ, ೧೭–೧೮. ಮಲ್ನಾಡು ಪ್ರಬಂಧ, ಐಗೂರ ಇತಿಹಾಸ.—ಲೇಖಕರು: ಶ್ರೀ ನಿಡಿಗೆರೆ ಲಕ್ಷ್ಮೀನರಸಿಂಹಶಾಸ್ತ್ರಿಗಳಿಂದ, ೧೯. ಜೈಮಿನಿ ಭಾರತದ ನೀತಿ.—ಲೇಖಕರು: ಶ್ರೀ॥ 'ವಾಸುದೇವ' ಅವರಿಂದ, ೨೦. ಸಂಸ್ಕೃತ ನಾಟಕ.—ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯದಿಂದ, ೨೧. ಬೆಳಗು.—ಪ್ರಕಾಶಕರು: ಅರವಿಂದ ಗ್ರಂಥಮಾಲೆಯಿಂದ, ೨೨. ಪ್ರಭುವರ್ಯರ ಯೂರೋಪ್ ಪ್ರವಾಸ.—ಲೇಖಕರು: ಶ್ರೀ॥ ಆರ್. ಎಲ್. ನಾರಾಯಣರಾಯರಿಂದ, ೨೩. ಹಿಂದಿ ಭಕ್ತಾಮರ.—ಲೇಖಕರು: ಶ್ರೀ॥ 'ಜಂತು' ಅವರಿಂದ, ೨೪. ಜವಹರಲಾಲ್ ನೆಹ್ರು (ಜೀವನಚರಿತ್ರೆ: ಭಾಗ ೧–೨).—ಪ್ರಕಾಶಕರು: ಶ್ರೀ॥ ಸಿ. ಅಶ್ವತ್ಥನಾರಾಯಣರಾಯರಿಂದ, ೨೫. ಕೃಷ್ಣಕಥಾರಹಸ್ಯಂ.—ಲೇಖಕರು: ಶ್ರೀ॥ ಜಗ್ಗು ಶಿಂಗರಾಚಾರ್ಯರಿಂದ, ೨೬. ಸನ್ಯಾಸಿ.—ಪ್ರಕಾಶಕರು: ಅರವಿಂದ ಗ್ರಂಥಮಾಲೆಯಿಂದ, ೨೭. ಶ್ರೀ ಬಸವಣ್ಣನವರು.—ಪ್ರಕಾಶಕರು: ಶ್ರೀ॥ ಬಿ. ಎಸ್. ಚಂದ್ರಪ್ಪನವರಿಂದ, ೨೮. ಮೈಸೂರು ದಸರಾ ಮಹೋತ್ಸವ.—ಲೇಖಕರು: ಶ್ರೀ ವೀರಭದ್ರಪ್ಪ ದುಂಡಪ್ಪ ಅರುಬೆರಳಿನ ಅವರಿಂದ, ೨೯. ವೀರಶೈವ.—ಲೇಖಕರು: ಶ್ರೀ ಚನ್ನಮಲ್ಲಿಕಾರ್ಜುನರವರಿಂದ, ೩೦. ಗಾಳಿಪಟ.—ಸಂಪಾದಕರು: ಶ್ರೀಮತಿ ಬಿ. ಕಲ್ಯಾಣಮ್ಮನವರಿಂದ, ೩೧. ಹಾವಾಡಿಗ.—ಲೇಖಕರು: ಶ್ರೀ॥ ಟಿ. ಎಂ. ಆರ್. ಸ್ವಾಮಿ ಅವರಿಂದ, ೩೨. ಕಾನೂರು ಸುಬ್ಬಮ್ಮ ಹೆಗ್ಗಡಿತಿ.—ಪ್ರಕಾಶಕರು: ಶಿವಮೊಗ್ಗದ ಕಾವ್ಯಾಲಯ ದಿಂದ, ೩೩. ಸುವ್ರತ ಅಥವಾ ಕರ್ಮವಿಲಾಸ.—ಲೇಖಕರು: ದಿವಂಗತ ಶ್ರೀ॥ ಎಚ್. ಟಿ. ರಾಮಾನುಜಯ್ಯಂಗಾರ್ಯರ ಬಂಧುಗಳಿಂದ, ೩೪–೩೯. ವಿನೋದ ವಾಕ್ಯಮಾಲಿಕೆ, ಶ್ರೀ ಭಗವದ್ಗೀತಾ, ನೀತಿಮಾಲಾ, ಶುಕ್ರನೀತಿ, ನೀತಿಪಾಠಗಳು, Sri Bhagavad Gita.—ಲೇಖಕರು: ಶ್ರೀ॥ ಎಸ್. ರಾಮಸ್ವಾಮಯ್ಯಂಗಾರ್ಯರಿಂದ, ೪೦. ಸಹಸ್ರಾವಧಾನ ಕವಿತ.—ಲೇಖಕರು: ಶ್ರೀ॥ ಜಂಧ್ಯಾಲಾ ಸುಬ್ರಹ್ಮಣ್ಯಶಾಸ್ತ್ರಿಗಳಿಂದ, ೪೧. Annual Report of the Archaeological Department of Cochin State for 1933-34.—From the Archæological Department, Cochin State. ೪೨. Annual Report of the Mysore Archaeological Department for 1935.—From the Director of Archæological Researches in Mysore. ೪೩. ಪಂಪರಾಮಾಯಣ ಸಂಗ್ರಹ.—ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯದಿಂದ, ೪೪. ಬುದ್ಧಿಯೋಗ ಅಥವಾ ಗೀತೆಯ ಗುಹ್ಯ.—ಲೇಖಕರು: ಶ್ರೀ॥ ಮುಗದಲ ರಾಮಚಂದ್ರ ಅವರಿಂದ.

# ಸಂಪಾದಕೀಯ ಟಿಪ್ಪಣಿಗಳು

**ಸ್ವವಿಷಯ**

ಪ್ರಸಕ್ತ ಸಂಚಿಕೆಯೊಂದಿಗೆ ಪರಿಷತ್ಪತ್ರಿಕೆಯ ೨೩ನೆಯ ಸಂಪುಟವು ಪ್ರಾರಂಭ ವಾಗುವುದು. ಈ ಸಂದರ್ಭದಲ್ಲಿ ಎಂದಿನಂತೆ ಪತ್ರಿಕೆಗೆ ಸಹಾಯಮಾಡುತ್ತಾ ಬಂದಿರುವ ಚಂದಾದಾರರು, ಗ್ರಾಹಕರು, ಲೇಖಕರು, ಗ್ರಂಥವಿಮರ್ಶಕರು ಮುಂತಾದ ಸಮಸ್ತ ಮಹನೀಯರುಗಳಿಗೂ ಸಂಪಾದಕ ಮಂಡಲಿಯ ಪರವಾಗಿ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುವುದು ನಮ್ಮ ಕರ್ತವ್ಯ. ಕನ್ನಡದ ಅಭಿಮಾನಿಗಳಾದ ಸಮಸ್ತರೂ ಇನ್ನು ಮುಂದೆಯೂ ಇದೇ ರೀತಿ ಪತ್ರಿಕೆಯ ಪುರೋವೃದ್ಧಿಯಲ್ಲಿ ಆಸಕ್ತಿಯನ್ನು ವಹಿಸಿ ಎಲ್ಲ ವಿಧಗಳಲ್ಲಿಯೂ ಸಹಾಯ ಮಾಡುತ್ತಾಬರಬೇಕೆಂದು ಪ್ರಾರ್ಥಿಸುತ್ತೇವೆ. ಪತ್ರಿಕೆಯನ್ನು ಈಗ ಇರುವುದಕ್ಕಿಂತ ಹೆಚ್ಚು ಪ್ರಯೋಜನಕಾರಿಯಾಗುವಂತೆ ಉತ್ತಮಗೊಳಿಸುವ ವಿಚಾರದಲ್ಲಿ ಹಲವು ಮಂದಿ ವಿದ್ವಾಂಸರಿಂದ ಸಲಹೆಗಳು ಬಂದಿವೆ. ಇವುಗಳನ್ನು ಸಂಪಾದಕ ಮಂಡಲಿಯವರು ಪರಿಶೀಲಿಸಿನೋಡಿ ಸಾಧ್ಯವಾಗುವಷ್ಟನ್ನು ಮುಂದಕ್ಕೆ ಅನುಸರಿಸುತ್ತಾ ಬರುವಂತೆ ತೀರ್ಮಾನಿಸಿರುತ್ತಾರೆ. ಈ ತೀರ್ಮಾನವನ್ನು ಆದಷ್ಟುಮಟ್ಟಿಗೆ ಸಫಲಗೊಳಿಸಬೇಕೆಂಬುದೇ ನಮ್ಮ ಮುಖ್ಯ ಆಶಯವಾಗಿರುವುದು. ಈ ಭಾಗದಲ್ಲಿ ಸಂಪಾದಕ ಮಂಡಲಿಯ ಸದಸ್ಯರಾದ ನಮ್ಮ ಸಹೋದ್ಯೋಗಿಗಳೂ, ಇತರ ಮಹನೀಯರೂ ಕೈಲಾದಷ್ಟು ಸಹಾಯಗಳನ್ನೊದಗಿಸಿ ನಮ್ಮೊಡನೆ ಸಹಕರಿಸುತ್ತಾ ಬರುವವರಾಗಬೇಕೆಂದು ಮತ್ತೊಮ್ಮೆ ಪ್ರಾರ್ಥಿಸುತ್ತೇವೆ.

**ಪರಿಷತ್ತಿನ ಧ್ಯೇಯ**

ಪರಿಷತ್ತಿನ ಉಪಾಧ್ಯಕ್ಷಪದವಿಗೆ ಹೊಸದಾಗಿ ಚುನಾಯಿತರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಗೌರವಾರ್ಥವಾಗಿ ಬೆಂಗಳೂರು, ಮೈಸೂರು ನಗರಗಳಲ್ಲಿ ಹಲವು ಸತ್ಕಾರಕೂಟಗಳು ನಡೆದುವು. ಈ ಪೈಕಿ ಬೆಂಗಳೂರು ಕನ್ನಡ ಸಾಹಿತ್ಯ ಸಮಾಜ, ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘ, ಮೈಸೂರು ಭಗಿನೀ ಸೇವಾ ಸಮಾಜ, ಮೈಸೂರು ಕರ್ನಾಟಕ ಸಂಘ—ಈ ಮೊದಲಾದ ಸಾರ್ವಜನಿಕ ಸಂಸ್ಥೆಗಳ ಆಶ್ರಯದಲ್ಲಿ ನಡೆದುವುಗಳು ಮುಖ್ಯವಾದುವು. ಇವುಗಳಲ್ಲಿ ನಡೆದ ಕಾರ್ಯಕಲಾಪಗಳ ವಿವರಗಳು ಆಯಾ ಕಾಲದ ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗಿರುವುದರಿಂದ ಅವುಗಳನ್ನು ಪುನಃ ಇಲ್ಲಿ ಕೊಡಬೇಕಾದ ಪ್ರಸಕ್ತಿಯಿಲ್ಲ. ಆದರೆ ಈ ಸಂದರ್ಭಗಳಲ್ಲಿ ಪರಿಷತ್ತಿನ ನಿಜವಾದ ಧ್ಯೇಯವನ್ನೂ, ಅದರ ಪಾಲನೆಗೆ ಮಹಾಜನಗಳಿಂದ ಒದಗಬೇಕಾದ ಸಹಾಯ ಸಂಪತ್ತಿಗಳನ್ನೂ ಕುರಿತು ಅಧಿಕಾರಯುತವಾಗಿ ಶ್ರೀಮಾನ್ ಶ್ರೀಕಂಠಯ್ಯನವರು ಆಡಿರುವ ಕೆಲವು ಮಾತುಗಳನ್ನು ನಮ್ಮ ವಾಚಕರ ಅವಗಾಹನೆಗೆ ತರುವುದರಿಂದ ಪರಿಣಾಮಕಾರಿಯಾದೀತೆಂದು ನಮಗೆ ತೋರುವುದರಿಂದ ಅವುಗಳನ್ನು ಇಲ್ಲಿ ಸೂಚಿಸುವ ಸ್ವಾತಂತ್ರ್ಯವನ್ನು ವಹಿಸಲಪೇಕ್ಷಿಸುತ್ತೇವೆ.

ಬೆಂಗಳೂರಿನ ಕನ್ನಡ ಸಾಹಿತ್ಯ ಸಮಾಜದ ಆಶ್ರಯದಲ್ಲಿ ೨೦–೨–೧೯೩೭ರಲ್ಲಿ ಮೈಸೂರು ಸಂಸ್ಥಾನದ ದಿವಾನ್ ಸಾಹೇಬರ ಅಧ್ಯಕ್ಷತೆಯಲ್ಲಿ ಅಭಿನಂದನ ಸಭೆ ನಡೆದಾಗ ಶ್ರೀಮಾನ್ ಶ್ರೀಕಂಠಯ್ಯನವರು ಸರ್ವರಿಗೂ ತಮ್ಮ ಕೃತಜ್ಞತೆಯನ್ನು ಸೂಚಿಸಿ ಭಾಷಣವನ್ನು ಪ್ರಾರಂಭಮಾಡಿ ಪರಿಷತ್ತಿನ ಧ್ಯೇಯವನ್ನೂ, ಕನ್ನಡದ ಏಳಿಗೆಗೆ ಆಗಬೇಕಾದ ಕಾರ್ಯಗಳನ್ನೂ ಕುರಿತು ಈ ರೀತಿ ಎಲ್ಲರಿಗೂ ಮನಮುಟ್ಟು ವಂತೆ ಹೇಳಿದರು :—

"ನನ್ನ ಹಿರಿಯರು ಅನೇಕರು ಈ ಕನ್ನಡದ ಪಂಜನ್ನು ಹೊತ್ತಿಸಿ ಕಾದು ಕೊಂಡು ಬಂದು, ಅದನ್ನು ಈಗ ನನ್ನ ಕೈಗೆ ಕೊಟ್ಟಿದ್ದಾರೆ. ಅದರಲ್ಲಿ ಅಷ್ಟ ಸೇರಿರಬಹುದಾದ ಕಲ್ಮಷವನ್ನು ಕಳೆದು ಪ್ರಜ್ವಲಮಾಡಿ ಅದನ್ನು ಯಾವ ಗಾಳಿ ಯಲ್ಲಿಯೂ ಕೆಡಿಸದಂತೆ ನೋಡಿಕೊಳ್ಳುವುದು, ಸಾಧ್ಯವಾದರೆ ಅದನ್ನು ಮತ್ತಷ್ಟು ಪ್ರಜ್ವಲಿಸುವಂತೆ ಮಾಡುವುದು ನನ್ನ ಪ್ರಯತ್ನ, ಹೆಬ್ಬಯಕೆ. ತಾಯಿಗೆ ಸೇವೆ ಸಲ್ಲಿಸುವುದಕ್ಕೆ ಈ ಒಬ್ಬನ ದುಡಿಮೆ ಸಾಕೆ? ಕನ್ನಡ ನುಡಿ, ಕನ್ನಡಜನ ಒಂದುಗೂಡಬೇಕಾದರೆ, ಮುಂದೆ ಬರಬೇಕಾದರೆ, ಎಲ್ಲರಿಗೂ ಮೇಲಾಗಿ ಬಾಳ ಬೇಕಾದರೆ, ಒಬ್ಬನ ಕೆಲಸವೇ ಇದು? ಈಗಾಗಲೇ ಕನ್ನಡಿಗರಲ್ಲಿ ಕನ್ನಡದ ಸಂಚಿ ತಕ್ಕಮಟ್ಟಿಗೆ ಬೇರೂರಿದೆ. ಕನ್ನಡದ ಜ್ಯೋತಿಯನ್ನು ಇನ್ನೆಷ್ಟು ದೂರ ಬೆಳಗಬಹು ದೆಂಬುದನ್ನು ಅವರಾಗಲೇ ಕಾಣುತ್ತಿದ್ದಾರೆ. ನಮ್ಮ ಹಿರಿಯರು ತೋರಿಸಿದ ದಾರಿ ಯಲ್ಲಿಯೇ ಹೋಗಿ ನಮ್ಮ ಯೋಚನೆ, ಶಕ್ತಿ, ಮನೋಭಾವ–ಇವುಗಳನ್ನು ಅದರೊಂದಿಗೆ ಸೇರಿಸಿಕೊಂಡು ಹೋಗುವುದಾದರೆ ಏನನ್ನು ತಾನೇ ಮಾಡಲಾಗದು! ನಮ್ಮಲ್ಲಿ ಶಕ್ತಿಯಿಲ್ಲವೆ? ಮೇಧಾವಿಗಳಿಲ್ಲವೆ? ನಮ್ಮ ನಾಡನ್ನು ಮೇಲಕ್ಕೆ ಎತ್ತುವುದ ರಲ್ಲಿ ನೆರವಾಗುವಂಥ ಪುಣ್ಯಾತ್ಮರಿಲ್ಲವೆ? ಪುಣ್ಯಭೂಮಿ ಅಲ್ಲವೇ ಇದು! ಶ್ರೀ ವಿದ್ಯಾರಣ್ಯರಂಥ ಮಹನೀಯರು ಹುಟ್ಟಿದ ನಾಡಲ್ಲವೆ? ಸರ್ವಧರ್ಮಸಮನ್ವಯ ಚಾರ್ಯರುಗಳಿಗೆ ಎಡೆಕೊಟ್ಟ ನಾಡಲ್ಲವೆ? ಇದಕ್ಕೆ ನಮ್ಮ ಶ್ರೀಮನ್ಮಹಾರಾಜ ಗಿಂತಲೂ ಬೇರೊಬ್ಬರ ನಿದರ್ಶನ ಬೇಕೆ? ಇಂಥಾ ಮಹಾನುಭಾವರು, ವೀರರು ಕವಿಗಳು, ಶಿಲ್ಪಿಗಳು, ಗಾನವಿಶಾರದರು, ನಯಶಾಲಿಗಳು ಎರಡು ಸಾವಿರ ವರ್ಷ ಗಳಿಂದ ಮೆರೆಯುತ್ತಾ ಬಂದು, ಎಷ್ಟೋ ಸಾಮ್ರಾಜ್ಯಗಳನ್ನು ಕಟ್ಟಿ ಬಾಳಿದವರು ಒರಟು ಕಲ್ಲುಗಳನ್ನು ಸಹ ತಮ್ಮ ಕಲೆಯಿಂದ ಮಾತನಾಡಿಸಿರುವವರಿಗೆ, ಅಂಥ ಕನ್ನಡಿಗರಿಗೆ, ಈಗ ನಾವು ಕೈಕೊಂಡಿರುವ ಕೆಲಸ ಅಷ್ಟು ಅಸಾಧ್ಯವಾದುದೇನು ಅಲ್ಲ–ಎಲ್ಲರೂ ಹೊಂದಿಕೊಳ್ಳುವುದೊಂದಾದರೆ.

"ಈ ದಿವಸದ ಸಮಾರಂಭದಲ್ಲಿ ಕನ್ನಡ ಸಾಹಿತ್ಯ ಸಮಾಜದ ಅಧಿಕಾರಿಗಳು ಹನ್ನೆರಡುನೂರು ರೂಪಾಯಿ ಬೆಲೆಯುಳ್ಳ ನಿಧಿಯನ್ನು ಕೆಲವು ಮಹನೀಯರ ಆಜೀವ ಸದಸ್ಯತ್ವದ ರೂಪದಲ್ಲಿ ಪರಿಷತ್ತಿನ ಶಾಶ್ವತನಿಧಿಗೆ ಕಾಣಿಕೆಯಾಗಿ ಒಪ್ಪಿಸಿದ್ದಾರೆ. ಅದಕ್ಕೆ ಪ್ರತಿಯಾಗಿ ನಾನು ಅವರಿಗೆ ನನ್ನನ್ನೇ ಕಾಣಿಕೆಯಾಗಿ ಒಪ್ಪಿಸುತ್ತೇನೆ. ಕನ್ನಡ ತಾಯಿಗಾಗಿ ಭಿಕ್ಷೆ ಬೇಡುವ ದಾಸಯ್ಯ ನಾನು; 'ಮುಂದಕ್ಕೆ ಹೋಗಿ ಬಾ' ಎನ್ನದೆ ನೀವು ಭಿಕ್ಷೆಯನ್ನು ಇಕ್ಕುತ್ತಿದ್ದೀರಿ. ಇದು ಅತ್ಯಾವಶ್ಯಕ, ಅತ್ಯಗತ್ಯ. ಏಕೆಂದರೆ ಕನ್ನಡನಾಡಿನ ಕೆಲಸಕ್ಕೆ, ಕನ್ನಡ ಜನರ ಕೆಲಸಕ್ಕೆ ಎಷ್ಟುಮಂದಿ, ಎಷ್ಟು ಜನ ಸೇರಿದರೂ ಸಾಲದು. ಕನ್ನಡನಾಡಿನಲ್ಲಿ ಹೆಂಗಸರು, ಮಕ್ಕಳು, ಪಟ್ಟಣಿಗರು ಹಳ್ಳಿಯವರು, ಸರ್ವರೂ, ಯಾರೊಬ್ಬರೆ ಆಗಲಿ, ಯಾವ ಒಂದು ಅಜ್ಞಾನಾಂಧ ಕಾರದಲ್ಲಿ ಮುಳುಗಿದ್ದಾರೆಯೋ, ಅವರನ್ನೆಲ್ಲಾ ಮೇಲಕ್ಕೆತ್ತಿ, ಸ್ಫೂರ್ತಿಗೊಳಿಸಿ, ಕಣ್ಣು ಬೆಳಗಿಸಿ, ಅವರಿಗೆ ಯಾವ ಒಂದು ಧೈರ್ಯ, ಯಾವ ಒಂದು ಕೆಚ್ಚು ಬೇಕೋ ಅದನ್ನು ಹೊಮ್ಮಿಸಿ, ಚಿಮ್ಮಿಸಿ ಈ ಹೊಸ ಪ್ರಕರಣದಲ್ಲಿ ಅವರು ತಲೆಯೆತ್ತಿ ಬಾಳು

ಹಾಗೆ ಮಾಡಬೇಕಾದರೆ ಕನ್ನಡ ನುಡಿಗೆ, ಕನ್ನಡ ಜನಕ್ಕೆ ಕನ್ನಡಿಗರಲ್ಲಿ ಅರ್ಥ್ಯರಾದವರು ಉದಾರಮನಸ್ಸಿನಿಂದ ಬೆಂಬಲವಾಗಿ ನಿಲ್ಲಬೇಕು. "ಕನ್ನಡ ನನಗೆ ಮುಂದು, ಉಳಿದುದು ಏನಿದ್ದರೂ ಅದರ ಹಿಂದು. ಕನ್ನಡದ ಕಾವಲುನಾಯಿ ನಾನು; ಅದಕ್ಕೆ ಕಾವು ತಟ್ಟುವುದಾದರೆ ನಾನು ಬಗುಳುವುದುಂಟು: ಕಚ್ಚುವನಾಯಲ್ಲ. ಕೆಲವರು ನನ್ನನ್ನು ಸಂಸ್ಕೃತದ್ವೇಷಿಯೆಂದೂ, ಕೆಲವರು ಹಿಂದೀದ್ವೇಷಿಯೆಂದೂ ಬಿರುದು ಕೊಟ್ಟಿರುತ್ತಾರೆ. ಇನ್ನು ಕೆಲವರು ನಾನು ಕನ್ನಡದ ದ್ವೇಷಿಯೆಂದೇ ಹೇಳಿಬಿಟ್ಟಿದ್ದಾರೆ. ಈ ಮಾತುಗಳಿಂದ ನನಗೆ ಅಸಮಾಧಾನವಿಲ್ಲ: ನಿಜವೇ ಎಂದು ಮನಸ್ಸನ್ನು ಶೋಧನೆ ಮಾಡಿಕೊಳ್ಳಲು ಅವಕಾಶಮಾಡಿಕೊಳ್ಳುತ್ತೇನೆ. ನಾನು ಯಾವುದರ ದ್ವೇಷಿಯೂ ಅಲ್ಲ. 'ದ್ವೇಷವನ್ನು ದೂರ ಇಟ್ಟು, ಪ್ರೇಮವನ್ನು ನನ್ನಲ್ಲಿ ತುಂಬು' ಎಂದೇ ನಾನು ಭಗವಂತನನ್ನು ನಿತ್ಯವೂ ಪ್ರಾರ್ಥಿಸುವುದು. ಪ್ರೇಮಮಯಿಯಾಗದವನು ಮನುಷ್ಯನಲ್ಲ. ನನ್ನ ಮೂಲಮಂತ್ರ ಇಷ್ಟೆ. ನಮ್ಮ ಮುಂದಾಳುಗಳಿಗೆ, ವಿದ್ಯಾವಂತರಿಗೆ ಕನ್ನಡದಲ್ಲಿ ಇನ್ನೂ ನಂಬಿಕೆ ಸಾಲದು; ಮನಸ್ಸು ಎತ್ತೆತ್ತಲೋ ಹರಿಯುತ್ತಿದೆ. ಕನ್ನಡವನ್ನು ನಂಬಿ, ಕನ್ನಡವನ್ನು ಕೈಹಿಡಿಯಿರಿ; ಕನ್ನಡಿಗರನ್ನು ಎಚ್ಚರಿಸಿ ಮುಂದಕ್ಕೆ ನಡಸಿ; ಕನ್ನಡ ನಾಡನ್ನು ಬೆಳಗಿಸಿ. ಇದು ನಮ್ಮ ಗುರಿ, ಇದು ನಮ್ಮ ಸಾಧನೆ."

ಈ ಸಂದರ್ಭದಲ್ಲಿ ಇನ್ನೊಂದು ಹರ್ಷದ ಸಂಗತಿಯನ್ನು ಅರಿಕೆಮಾಡಿಕೊಳ್ಳಲಿಚ್ಛಿಸುತ್ತೇವೆ: ಬೆಂಗಳೂರಿನ ಕನ್ನಡ ಸಾಹಿತ್ಯಸಮಾಜದವರು ಪರಿಷತ್ತಿಗೆ ಹಲವು

**ಪರಿಷತ್ತಿಗೆ ಕಾಣಿಕೆಗಳು**

ಮಂದಿ ಆಜೀವ ಸದಸ್ಯರನ್ನು ಒದಗಿಸಿಕೊಟ್ಟು ಸಹಾಯ ಮಾಡಿದಂತೆಯೇ ಮೈಸೂರು ಕನ್ನಡ ಉತ್ಸವ ಸಮಿತಿಯ ವ್ಯವಸ್ಥಾಪಕರು ೨೧–೪–೦ ರೂ. ಗಳನ್ನೂ, ಮೈಸೂರು ಮಹಾರಾಣಿ ಕಾಲೇಜಿನ ಇಂಗ್ಲಿಷ್ ಅಧ್ಯಾಪಕರಾಗಿರುವ ಶ್ರೀಮತಿ ಕನಕಲಕ್ಷಮ್ಮನವರು ತಾವು ಕೂಡಿಸಿದ್ದ ೨೫ ರೂ. ಗಳನ್ನೂ, ಮತ್ತು ಬೆಳಗಾಮಿನ ಕರ್ನಾಟಕ ಸಂಘದವರು ೩೧ ರೂ. ಗಳನ್ನೂ ಶ್ರೀಮಾನ್ ಶ್ರೀಕಂಠಯ್ಯನವರ ಹಸ್ತದ್ವಾರ ಪರಿಷತ್ತಿಗೆ ಕಾಣಿಕೆ ಸಲ್ಲಿಸಿ ವಂದನೆಗೆ ಪಾತ್ರರಾಗಿರುತ್ತಾರೆ. ಕನ್ನಡ ನಾಡಿನ ಇತರ ಸಾಹಿತ್ಯ ಸಂಸ್ಥೆಗಳೂ ಅಭಿಮಾನಿಗಳೂ ಇವರ ಮೇಲುಪಂಕ್ತಿಯನ್ನನುಸರಿಸಿ ಪರಿಷತ್ತಿಗೆ ಸ್ವಹಸ್ತ ಪರಹಸ್ತಗಳಿಂದ ಸಹಾಯ ಮಾಡುತ್ತಾ ಬರಬೇಕೆಂದು ನಮ್ಮ ವಿನಯಪೂರ್ವಕವಾದ ಸೂಚನೆ.

ಮೇಲ್ಕಂಡ ಸತ್ಕಾರ ಕೂಟವು ನಡೆದ ಒಂದು ವಾರದನಂತರ ೨೭–೨–೧೯೩೮

**ಪರಿಷತ್ತನ್ನು ಮಹಾಜನರ ವಿಶ್ವವಿದ್ಯಾನಿಲಯವಾಗಿ ಮಾಡಬೇಕೆಂಬುದೇ ಅದರ ಸಂಕಲ್ಪ**

ರಲ್ಲಿ ಮೈಸೂರು ಸಂಸ್ಥಾನದ ದಿವಾನ್‌ರವರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ಗೌರವಾರ್ಥವಾಗಿ ಶ್ರೀಮಾನ್ ಶ್ರೀಕಂಠಯ್ಯನವರು ಪರಿಷನ್ಮಂದಿರದಲ್ಲಿ ಏರ್ಪಡಿಸಿದ್ದ ಸಂತೋಷ ಕೂಟದಲ್ಲಿ ಮಾಡಿದ ಸ್ವಾಗತ ಭಾಷಣದಲ್ಲಿ ಪರಿಷತ್ತಿನ ಕೆಲಸ ಕಾರ್ಯಗಳನ್ನೂ, ಅದರ ಧ್ಯೇಯಗಳನ್ನೂ ಕುರಿತು ಹೇಳಿದ ಮಾತುಗಳಿವು:—

"ಮಹಿಳೆಯರೇ ಮತ್ತು ಮಹಾಶಯರೇ, ಹೃದಯವು ಭಾರದಿಂದ ತುಂಬಿದರೆ ಮಾತುಗಳು ಹೊರಸೂಸುತ್ತವೆ. ಈ ದಿನ ಸಾಯಂಕಾಲ ಇಲ್ಲಿಗೆ ದಯಮಾಡಿಸುವುದಕ್ಕೆ

ಅವಕಾಶವನ್ನು ಕಲ್ಪಿಸಿಕೊಂಡಿರುವುದರಲ್ಲಿ ಸರ್ ಮಿರ್ಜಾ ಇಸ್ಮಾಯಿಲ್‌ರವರು ಮಾತ್ರವೇ ಅಲ್ಲದೆ ತಾವುಗಳೆಲ್ಲರೂ ನಮ್ಮಲ್ಲಿ ಕರುಣವನ್ನು ತೋರಿಸಿದ್ದೀರಿ. ಅದರಲ್ಲಿಯೂ ಅನೇಕ ಕರ್ತವ್ಯಗಳ ಮಧ್ಯದಲ್ಲಿ, ಕಾರ್ಯಕ್ರಮಗಳ ಮಧ್ಯದಲ್ಲಿ ಮತ್ತು ಹಲವು ಆಹ್ವಾನಗಳಿದ್ದೂ ನಮ್ಮಲ್ಲಿ ಕೃಪೆತೋರಿ ಇಲ್ಲಿಗೆ ದಯಮಾಡಿಸಿದ್ದೀರಿ. ಬೆಂಗಳೂರು ನಗರ ನಿವಾಸಿಗಳಲ್ಲಿ ತೀರ ಸಂಸ್ಕೃತರಾಗಿರುವವರ ಗುಂಪಿಗೆ ಸೇರಿದವರಾದ ತಮ್ಮೆಲ್ಲರ ಮಾರ್ಗದರ್ಶಿತ್ವವೂ ಸಹಾನುಭೂತಿಯೂ ಮತ್ತು ಒತ್ತಾಸೆಯೂ ನಮಗೆ ಅವಶ್ಯವಾಗಿ ಬೇಕು. ಇಲ್ಲಿ ಕೆಲಸ ಮಾಡುತ್ತಿರುವ ನಾವೆಲ್ಲರೂ ಕೇವಲ ವ್ಯಾಸಂಗನಿರತರು; ಸವಿಗನಸುಗಳನ್ನು ಕಾಣುತ್ತಿರುವವರು; ಲೋಕಾನುಭವದಲ್ಲಿ ಬಹುಶಃ ನಾವು ಹಿಂದುಳಿದಿರಬಹುದು, ಬಹುಶಃ ನಾವು ಸರಸ್ವತಿಯ ಅನುಗ್ರಹಕ್ಕೆ ಪಾತ್ರರೇ ಹೊರತು ಲಕ್ಷ್ಮಿಯ ಅನುಗ್ರಹಕ್ಕೆ ಖಂಡಿತವಾಗಿಯೂ ಅಲ್ಲ. ನಾವು ಈ ಪರಿಷತ್ತನ್ನು ಮಹಾಜನರ ವಿಶ್ವವಿದ್ಯಾನಿಲಯವಾಗಿಯೂ, ಮಹಾಜನರ ವಿದ್ಯಾಭ್ಯಾಸ ಖಾತೆಯಾಗಿಯೂ ಪರಿಣಾಮಗೊಳಿಸಬೇಕೆಂದು ಸಂಕಲ್ಪ ಮಾಡಿದ್ದೇವೆ. ಇದು ಅಧಿಕಪ್ರಸಂಗವೆಂದು ಯಾರಿಗೂ ತೋರುವುದಿಲ್ಲವೆಂದು ನಾನು ನಂಬಿದ್ದೇನೆ. ಈ ಉದ್ದೇಶದಿಂದ ನಮ್ಮ ಕರ್ನಾಟಕ ಸಂಘಗಳನ್ನು ಉಪಯೋಗಿಸಿಕೊಂಡು ಅವುಗಳ ಮೂಲಕ ಕನ್ನಡ ಭಾಷೆಯಲ್ಲಿ ಜನರಿಗೆ ಪೌರ್ವಾತ್ಯ ಪಾಶ್ಚಿಮಾತ್ಯ ಸಂಸ್ಕೃತಿಗಳ ಸಾರತತ್ತ್ವಗಳನ್ನು ಹದವರಿತು ಅನುಗೂಡಿಸಿ ಅರಿವಿನ ಬೆಳಕನ್ನು ಹರಡುವ ಯೋಚನೆ ಮಾಡಿದ್ದೇವೆ. ಅವರಿಗೆ ತಿಳಿಯುವಂತೆ ನಾನಾ ಸಂಗತಿಗಳನ್ನೂ ತಿಳಿಸಿ, ಕಾರ್ಯಸೂಚಿಯನ್ನು ಕನ್ನಡ ಭಾಷೆಯಲ್ಲಿ ಮಾತನಾಡುವವರೆಲ್ಲರೂ ಸ್ವಾತಂತ್ರ್ಯದಿಂದಲೂ ಸುಮ್ಮಾನದಿಂದಲೂ ಒಂದೇ ಕುಟುಂಬದ ಜನರಂತೆ. ಒಟ್ಟುಗೂಡಲು ಸಾಧಕವಾಗುವಂತೆ ಕೆಲಸ ನಡೆಸುವ ಯೋಚನೆಮಾಡಿದ್ದೇವೆ. ಪರಿಷತ್ತು ಈ ವಿಧವಾದ ಕಾರ್ಯಕಲಾಪಗಳಿಗೆಲ್ಲ ಕೇಂದ್ರಸ್ಥಾನವಾಗಿದ್ದುಕೊಂಡು ಕನ್ನಡಿಗರ ಸೇವೆಮಾಡಬೇಕೆಂಬುದೂ, ಕರ್ನಾಟಕ ಸಂಘಗಳಿಗೆ ದಾರಿ ತೋರಿಸಬೇಕೆಂಬುದೂ ನಮಗಿರುವ ಹೆಬ್ಬಯಕೆ. ಈ ಮಹತ್ತರವಾದ ಕಾರ್ಯದಲ್ಲಿ ಕೆಲಸಗೀಳುಹಿಡಿದಿರುವವರೂ ಭ್ರಾಂತರೂ ಉದ್ಯುಕ್ತರಾಗಿದ್ದಾರೆಂಬ ಭಾವನೆಗೇ ಅವಕಾಶವಿಲ್ಲದಿರಲೆಂದು ಕೋರುತ್ತೇನೆ. ದೇಶದ ಮೇಧಾವಿಗಳಲ್ಲಿ ಶ್ರೇಷ್ಠರಾದವರೆಲ್ಲರೂ, ದೇಶದ ಉತ್ಸಾಹಶಾಲಿಗಳಲ್ಲಿ ಶ್ರೇಷ್ಠರಾದವರೆಲ್ಲರೂ ಈ ದೊಡ್ಡ ಕೆಲಸದಲ್ಲಿ ಭಾಗಿಗಳಾಗಬೇಕೆಂಬುದೂ, ನಾಡಿನ ಹಣದ ಭಾರಿಭಾರಿ ಮೊಬಲಗುಗಳು ಈ ದೊಡ್ಡ ಕೆಲಸಕ್ಕೆ ವಿನಿಯೋಗವಾಗಬೇಕೆಂಬುದೂ ನಮ್ಮ ಬಯಕೆ. ಕನ್ನಡ ತಾಯಿ ಮೈಸೂರು ಸಂಸ್ಥಾನದಲ್ಲಿಯೂ, ಮೈಸೂರು ಸಂಸ್ಥಾನದ ಹೊರಗೂ ಇರುವ ಕನ್ನಡ ಕಂದರನ್ನೆಲ್ಲ ಪ್ರೀತಿಯಿಂದ ಕರೆಯುತ್ತಿದ್ದಾಳೆ, ಬನ್ನಿ. ಅವಳ ಸೇವೆಗೆ ಸಿದ್ಧರಾಗಿ, ಅವಳ ಸೇವೆಯಿಂದ ಧನ್ಯರಾಗಿ. ಮುಂದಿನ ಸುಗ್ಗಿಯಲ್ಲಿ ಯಾವ ಬಗೆಯ ಫಲ ದೊರೆಯುವುದೋ ಈಗಲೇ ಹೇಳುವಂತಿಲ್ಲ. ಏಸುಕ್ರಿಸ್ತನು ಹೇಳಿದಂತೆ, 'ಪರಮಾರ್ಥದ ಭಾವಶುದ್ಧಿಯೊಂದು ಬೆಳೆಯಲಿ. ಉಳಿದುವೆಲ್ಲ ತಾವಾಗಿಯೇ ಒದಗುತ್ತವೆ.'

ಮೇಲ್ಕಂಡ ಭಾಷಣಕ್ಕೆ ಪ್ರತ್ಯುತ್ತರವಾಗಿ ಮೈಸೂರು ಸಂಸ್ಥಾನದ ದಿವಾನ್ ಸಾಹೇಬರವರು ಅಪ್ಪಣೆಕೊಡಿಸಿದ ಭಾಷಣವು ಪರಿಷತ್ತಿನಲ್ಲಿ ನಡೆಯುತ್ತಿರುವ

**ಪರಿಷತ್ತಿನ ಪ್ರಶಂಸೆ: ಮೈಸೂರು ಸಂಸ್ಥಾನದ ದಿವಾನರಿಂದ**

ಕಾರ್ಯಕಲಾಪಗಳ ವಿಷಯದಲ್ಲಿ ಮೆಚ್ಚಿಗೆಯನ್ನೂ, ಸಹಾನುಭೂತಿಯನ್ನೂ ಪ್ರದರ್ಶಿಸುವುದಾಗಿದೆ. ಈ ಭಾಷಣದ ಕೆಲವು ಭಾಗಗಳನ್ನು ನಮ್ಮ ವಾಚಕರ ಅವಗಾಹನೆಗಾಗಿ ಈ ಕೆಳಗೆ ಕೊಟ್ಟಿರುತ್ತೇವೆ:—

"ಕರ್ನಾಟಕ ಸಾಹಿತ್ಯ ಪರಿಷತ್ತು ಚೆನ್ನಾಗಿ ಕೆಲಸ ನಡೆಯಿಸುತ್ತಿರುವ ಶ್ರೇಷ್ಠ ಸಂಸ್ಥೆಯೆಂಬುದು ನಮ್ಮೆಲ್ಲರ ಅಭಿಪ್ರಾಯವೂ ಆಗಿದೆ. ಅದು ಒಟ್ಟು ಕನ್ನಡ ನಾಡಿನ ಪ್ರೀತಿಯನ್ನು ಗಳಿಸಿರುವ ಸಂಸ್ಥೆ. ಬೇರೆ ಬೇರೆ ಸರ್ಕಾರಗಳ ಆಡಳಿತಕ್ಕೆ ಒಳಪಟ್ಟಿರುವ

ಕನ್ನಡ ನಾಡಿನ ನಾನಾ ಪ್ರದೇಶಗಳ ಜನರಲ್ಲಿಯೂ ತಾವೆಲ್ಲ ಒಬ್ಬಳೇ ಕನ್ನಡ ತಾಯಿಯ ಮಕ್ಕಳೆಂಬ ಭಾವನೆಯನ್ನು ಬೆಳೆಯಿಸಿ, ಸಂಸ್ಕೃತಿಯ ದೃಷ್ಟಿಯಿಂದ ಅವರೆಲ್ಲರಲ್ಲಿಯೂ ಏಕೀಭಾವವನ್ನುಂಟುಮಾಡಿ ಸ್ನೇಹ ಮಮತೆಗಳನ್ನು ನೆಲೆಗೊಳಿಸಬೇಕೆಂಬ ಉದಾತ್ತವಾದ ಆಶಯದಿಂದ ಪರಿಷತ್ತು ಏರ್ಪಟ್ಟಿತು. ಅದರ ಮೂಲ ಸದಸ್ಯರುಗಳಲ್ಲಿ ಕೆಲವರು ನಮ್ಮೊಡನೆ ಈ ದಿನ ಇರುವುದೇ ನನಗೊಂದು ಸಂತೋಷ.

"ಪರಿಷತ್ತು ಸ್ಥಾಪಿತವಾಗಿ ಇಪ್ಪತ್ತಮೂರು ವರ್ಷಗಳು ಪೂರ್ತಿಯಾಗುವ ಕಾಲ ಸಮೀಪಿಸುತ್ತಿದೆ. ಇಷ್ಟು ದೀರ್ಘಕಾಲವೂ, ನಮ್ಮವರು ಹಲವು ಮಂದಿ ಪರಿಷತ್ತಿನ ಅಭಿವೃದ್ಧಿಗಾಗಿಯೂ, ಕನ್ನಡ ನಾಡಿನ, ಕನ್ನಡ ಭಾಷೆಯ ಮತ್ತು ಕನ್ನಡ ಸಂಸ್ಕೃತಿಯ ಏಳಿಗೆಗಾಗಿಯೂ, ಈ ಪರಿಷತ್ತಿನಲ್ಲಿ ಯಾವ ಪ್ರತಿಫಲವೂ ಇಲ್ಲದೆ ಅಭಿಮಾನದಿಂದ ದುಡಿದಿರುವುದು ಸಂತೋಷದ ಮತ್ತು ಹೆಮ್ಮೆಯ ಸಂಗತಿ. ತಮ್ಮ ತಾಯ್ನುಡಿಯ ಏಳಿಗೆಗಾಗಿ ದುಡಿಯುವ ದೀಕ್ಷೆಯನ್ನು ವಹಿಸಿ ಈ ರೀತಿ ಕೆಲಸಮಾಡಿ ಸೇವೆಯನ್ನು ಹಿಂದೆ ಸಲ್ಲಿಸಿರುವವರೂ ಈಗ ಸಲ್ಲಿಸುತ್ತಿರುವವರೂ ಕನ್ನಡಿಗರೆಲ್ಲರ ಕೃತಜ್ಞತೆಗೂ ಪಾತ್ರರು.

* * * *

"ನಮ್ಮೆಲ್ಲರಿಗೂ ಪ್ರಿಯರೂ, ಪ್ರಖ್ಯಾತರಾದ ಪ್ರಭುಗಳವರೂ ಆದ ಶ್ರೀಮನ್ ಮಹಾರಾಜರವರಿಂದಲೂ, ಮಹಾಸ್ವಾಮಿಯವರ ಪೂರ್ವಿಕರಿಂದಲೂ ಕನ್ನಡ ಭಾಷೆಯ ಏಳಿಗೆಗೆ ತುಂಬ ಸಹಾಯವಾಗಿದೆ. ಮಹಾಸ್ವಾಮಿಯವರ ಪೂರ್ವಿಕರಾದ ಚಿಕ್ಕದೇವರಾಜ ಒಡೆಯರವರೂ, ಚಾಮರಾಜ ಒಡೆಯರವರೂ ಸಹ ತಾವುಗಳೇ ಗ್ರಂಥಗಳನ್ನು ರಚಿಸಿ ದುದರ ಜೊತೆಗೆ ಸಾಹಿತಿಗಳಿಗೂ ಗ್ರಂಥಕರ್ತರಿಗೂ ವಿಶೇಷ ಪ್ರೋತ್ಸಾಹವನ್ನೂ ಕೊಟ್ಟರು. ಕೀರ್ತಿಶೇಷರಾದ ಮುಮ್ಮಡಿ ಕೃಷ್ಣರಾಜ ಒಡೆಯರವರೂ, ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರೂ ಕನ್ನಡ ಭಾಷೆಯ ಏಳಿಗೆಗಾಗಿ ವಿಶೇಷವಾಗಿ ಸಹಾಯಮಾಡಿ ಕನ್ನಡದಲ್ಲಿ ಅನೇಕ ಉತ್ತಮ ಗ್ರಂಥಗಳನ್ನು ಬರೆಯಿಸಿ ಪ್ರೋತ್ಸಾಹಿಸಿದರು. ಕನ್ನಡದಲ್ಲಿ ಅನೇಕ ನಾಟಕಗಳನ್ನು ಬರೆಯಿಸಿ ರಂಗಭೂಮಿಗೆ ಕಳೆಯೇರುವಂತೆ ಮಾಡಿದ ಕೀರ್ತಿ ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರದು.

"ನಮ್ಮೆಲ್ಲರ ಪ್ರೀತಿಭಕ್ತಿಗಳಿಗೂ ಪಾತ್ರರಾಗಿರುವ ನಮ್ಮ ಶ್ರೀಮನ್ಮಹಾರಾಜರವರು ಅತ್ಯಂತ ಆಸಕ್ತಿಯನ್ನು ವಹಿಸಿ ಮಹಾಸ್ವಾಮಿಯವರ ಮಾತೃಭಾಷೆಯಾದ ಕನ್ನಡ ಭಾಷೆಗೂ, ಕನ್ನಡ ಸಾಹಿತ್ಯಕ್ಕೂ ಪ್ರೋತ್ಸಾಹವನ್ನು ಕೊಟ್ಟು ಕೃಪೆಮಾಡುತ್ತಿದ್ದಾರೆ. ಇದನ್ನು ನಾನು ತಮಗೆ ತಿಳಿಸಬೇಕಾದ ಆವಶ್ಯಕತೆಯೇ ಇಲ್ಲ. ಮಹಾಸ್ವಾಮಿಯವರು ಈ ಪರಿಷತ್ತಿನ ಮಹಾಪೋಷಕರಾಗಿರುವುದೇ ಇದಕ್ಕೆ ನಿದರ್ಶನವಾಗಿದೆ. ಮೈಸೂರು ವಿಶ್ವವಿದ್ಯಾನಿಲಯವು ಕನ್ನಡದ ಪುರೋಭಿವೃದ್ಧಿಗಾಗಿ ನಾನಾ ಪ್ರಯತ್ನಗಳನ್ನು ನೆರವೇರಿಸುತ್ತಿರುವುದೂ, ಈಚೆಗೆ ಹೈಸ್ಕೂಲುಗಳಲ್ಲಿ ಕನ್ನಡ ಭಾಷೆಯಲ್ಲಿಯೇ ಚರಿತ್ರೆ, ಭೂಗೋಳ, ಗಣಿತಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರ ಮುಂತಾದವುಗಳನ್ನೆಲ್ಲ ಬೋಧಿಸಬೇಕೆಂದು ಏರ್ಪಾಡಾಗಿರುವುದೂ, ಕನ್ನಡಕ್ಕೆ ತಕ್ಕಷ್ಟು ಪ್ರೋತ್ಸಾಹ ದೊರೆಯುವಂತೆ ಮಾಡುವ ವಿಚಾರದಲ್ಲಿ ಶ್ರೀಮನ್ಮಹಾರಾಜರವರ ಸರ್ಕಾರದವರಿಗೆ ನಿಜವಾದ ಆಸಕ್ತಿ ಇರುವುದಕ್ಕೆ ನಿದರ್ಶನಗಳಾಗಿವೆ.

"ಪರಿಷತ್ತಿನ ಕಾರ್ಯಕಲಾಪಗಳು ವಿಶೇಷವಾಗಿ ವೃದ್ಧಿಹೊಂದಿ ಪರಿಷತ್ತು ಏಳಿಗೆ ಹೊಂದುತ್ತಿರುವುದಕ್ಕಾಗಿ ನಾನು ಹರ್ಷಿಸುವೆನು. ಈಚೆಗೆ ಕರ್ನಾಟಕದ ನಾನಾ ಸ್ಥಳಗಳಲ್ಲಿ ಸಾಹಿತ್ಯಸಮ್ಮೇಳನಗಳು ಜರುಗಿ ಪರಿಷತ್ತಿನ ಕಾರ್ಯಗಳಿಗೆ ಸಹಾಯವಾಯಿತೆಂದೂ, ಮುಂದಿನ ಸಮ್ಮೇಳನಕ್ಕೆ ಬಳ್ಳಾರಿಯಿಂದ ಆಹ್ವಾನ ಬಂದಿದೆಯೆಂದೂ ಕೇಳಿ ನನಗೆ ತುಂಬ ಹರ್ಷವುಂಟಾಗಿದೆ. ಮುಂದಿನ ಸಮ್ಮೇಳನವು ನಡೆಯಲು ಬಳ್ಳಾರಿಯನ್ನು ಆರಿಸಿರುವುದು

ಸರಿಯಾಗಿದೆ. ಪರಿಷತ್ತಿನ ಕಾರ್ಯಕಲಾಪಗಳೂ ಪ್ರಾಬಲ್ಯವೂ ಇನ್ನೂ ಹೆಚ್ಚುತ್ತ ಬಂದು ಕನ್ನಡಿಗರೆಲ್ಲರಿಗೂ ಅದರಿಂದ ಮತ್ತಷ್ಟು ಹೆಚ್ಚಿನ ಪ್ರಯೋಜನವು ದೊರೆಯುವಂತಾಗಲೆಂದು ಹಾರೈಸುತ್ತೇನೆ.

"ಮೈಸೂರು ಸಂಸ್ಥಾನವನ್ನು ಭರತಖಂಡದ ನಾನಾ ಪ್ರಾಂತಗಳಲ್ಲಿಯೂ ಇರುವ ಕನ್ನಡಿಗರೆಲ್ಲರ ಶ್ರೇಯಸ್ಸಿಗೆ ಸಾಧಕವಾದ ಕೇಂದ್ರವಾಗಿ ರೂಪಿಸುವ ಕಾರ್ಯಕಲಾಪಗಳಿಂದ ತಮ್ಮೆಲ್ಲರ ತಾಯ್ನುಡಿಗೆ ಮಾತ್ರವೇ ಅಲ್ಲದೆ, ಭರತಖಂಡದಲ್ಲಿ ಪ್ರತ್ಯೇಕವಾದೊಂದು ರಾಜಕೀಯ ಅಂಗವಾಗಿ ಮೈಸೂರು ಸಂಸ್ಥಾನಕ್ಕೂ ಅಮೋಘವಾದ ಸೇವೆಯನ್ನು ಸಲ್ಲಿಸುತ್ತಿದ್ದೀರಿ. ನಮ್ಮ ಸಂಸ್ಥಾನವು ಬಹುಮುಖವಾಗಿ ಏಳಿಗೆಹೊಂದಬೇಕೆಂಬ ಹಾರೈಕೆಗಳೂ, ಧ್ಯೇಯಗಳೂ ನನಗಿವೆ. ಅದು ತಮ್ಮೆಲ್ಲರಿಗೂ ತಿಳಿದೇ ಇದೆ. ವಿಜ್ಞಾನ, ಕೈಗಾರಿಕೆ, ಮತ ಧರ್ಮ, ಭಾಷೆ ಮತ್ತು ಸಂಸ್ಕೃತಿ—ಇವುಗಳ ಪುರೋಭಿವೃದ್ಧಿಗೆ ಸಾಧಕವಾಗುವಂತೆ ನಡೆಯಬೇಕಾದ ಮನುಷ್ಯಪ್ರಯತ್ನದ ಸಮಸ್ತ ಕ್ಷೇತ್ರಗಳಲ್ಲಿಯೂ ಸಹ, ಘನತೆಯುಳ್ಳ ದೊಡ್ಡ ದೊಡ್ಡ ಕೆಲಸಗಳಿಗೆಲ್ಲ ಮೈಸೂರು ಸಂಸ್ಥಾನದಿಂದಲೇ ಸ್ಫೂರ್ತಿ ದೊರೆಯುವಂತಾಗಬೇಕು; ಪ್ರಯೋಜನಕರವಾದ ಕಾರ್ಯಗಳಿಗೆಲ್ಲ ಮೈಸೂರು ಸಂಸ್ಥಾನದಿಂದಲೇ ಸ್ಫೂರ್ತಿ ದೊರೆಯುವಂತಾಗಬೇಕು; ಅಭ್ಯುದಯ ಸಾಧಕವಾದ ಅಂಶಗಳಿಗೆಲ್ಲ ಮೈಸೂರು ಸಂಸ್ಥಾನದಿಂದಲೇ ಸ್ಫೂರ್ತಿ ದೊರೆಯುವಂತಾಗಬೇಕು—ಎಂಬುದೇ ನನಗಿರುವ ಅಭಿಲಾಷೆ."

**ಪರಿಷತ್ತಿನ ಲಾಂಛನ: ಕನ್ನಡದ ಬಾವುಟ**

ಮೇಲ್ಕಂಡ ಭಾಷಣದಲ್ಲಿ ಹೇಳಿರುವಂತೆ ಪರಿಷತ್ತು ಏರ್ಪಟ್ಟಿರುವುದು ಕರ್ನಾಟಕದ ನಾನಾ ಪ್ರಾಂತಗಳ ಜನರಲ್ಲಿ ಸೋದರಭಾವವನ್ನು ಬೆಳೆಯಿಸಿ ಏಕೀಭಾವವನ್ನುಂಟುಮಾಡಿ ಸೌಹಾರ್ದವನ್ನು ನೆಲೆಗೊಳಿಸಬೇಕೆಂಬ ಉದಾತ್ತವಾದ ಆಶಯದಿಂದ. ಈ ಆಶಯವು ಸರ್ವದಾ ಪರಿಷತ್ತಿನ ಹಿತಚಿಂತಕರ ಮನಸ್ಸಿನಲ್ಲಿರಲು ಸಾಧಕವಾಗುವಂತೆ ಇಡೀ ಕರ್ನಾಟಕದ ಭೂಪಟವನ್ನೊಳಗೊಂಡ ಈ ಕೆಳಕಂಡ ಲಾಂಛನವನ್ನು ಪರಿಷತ್ತಿನ ಮುದ್ರೆಯಾಗಿ ಏರ್ಪಡಿಸಲಾಗಿದೆ. ಇದೇ ರೀತಿ




ಕನ್ನಡದ ಬಾವುಟಕ್ಕೂ ಸಹ ಕರ್ನಾಟಕದ ಭೂಪಟವನ್ನೇ ಲಾಂಛನವಾಗಿರುವಂತೆ ಮಾಡಿದೆ. ಹಾರಾಡುವ ಈ ಬಾವುಟ ಕನ್ನಡ ನಾಡಿನಲ್ಲೆಲ್ಲಾ ಹಾರಾಡುವಂತಾಗಿ ಕನ್ನಡಿಗರು ಯಾವ ಪ್ರಾಂತದವರೇ ಆಗಲಿ, ಅವರೆಲ್ಲರೂ ಒಬ್ಬಳೇ ಕನ್ನಡ ತಾಯಿಯ ಮಕ್ಕಳೆಂಬ ಭಾವನೆ ಬೆಳೆಯುವುದಕ್ಕೆ ಸಹಕಾರಿಯಾಗಲೆಂದು ಹಾರೈಸುತ್ತೇವೆ. ಈ ಸಂದರ್ಭದಲ್ಲಿ ಇದೇ ವಿಚಾರವಾಗಿ ಪರಿಷದುಪಾಧ್ಯಕ್ಷರು ಕನ್ನಡಿಗರೆಲ್ಲರಿಗೂ ಈ ಸಂಚಿಕೆಯೊಡನೆ ಸಮರ್ಪಿಸಿರುವ ಬಿನ್ನಹವನ್ನು ನಮ್ಮ ವಾಚಕರೆಲ್ಲರೂ ಸಹಾನುಭೂತಿಯಿಂದ ಓದಿನೋಡಿ ಕನ್ನಡಿಗರ ಸಾರ್ವಜನಿಕ ವಿದ್ಯಾಪೀಠವಾದ ನಮ್ಮ ಪರಿಷತ್ತಿಗೆ ಸ್ವಹಸ್ತ ಪರಹಸ್ತಗಳಿಂದ ಉದಾರವಾದ ಸಹಾಯವು ದೊರೆಯುವಂತೆ ನೆರವಾಗಿ ಕರುಣಿಸಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇವೆ.

ಪರಿಷತ್ತಿನ ೫ನೆಯ ೧೯೩೪ನೆಯ ವರ್ಷದ ವಸಂತ ಸಾಹಿತ್ಯೋತ್ಸವ

ಕಳೆದ ನಾಲ್ಕು ವರ್ಷಗಳಿಂದಲೂ ನಡೆದುಬಂದಿರುವಂತೆ ಈ ವರ್ಷವೂ ವಸಂತ ಸಾಹಿತ್ಯೋತ್ಸವವು ಏಪ್ರಿಲ್ ೩೦ನೆಯ ತಾರೀಖು ಮೊದಲುಗೊಂಡು ಮೇ ೩ನೆಯ ತಾರೀಖು ಪೂರ್ತಿ ಬೆಂಗಳೂರಿನಲ್ಲಿಯೂ, ಮೇ ೨೫ರಿಂದ ೨೭ ಪೂರ್ತಿ ಮೈಸೂರು ಸಂಸ್ಥಾನದ ಶಿವಮೊಗ್ಗ ಡಿಸ್ಟ್ರಿಕ್ಟಿನ ಆನವಟ್ಟಿ ಗ್ರಾಮದಲ್ಲಿಯೂ, ಮೇ ೨೯ರಿಂದ ೩೧ ಪೂರ್ತಿ ಉತ್ತರ ಕರ್ನಾಟಕಕ್ಕೆ ಸೇರಿದ ಗದಗಿನಲ್ಲಿಯೂ ಬಹು ಯಶಸ್ವಿಯಾಗಿ ವಿಜೃಂಭಣೆಯಿಂದ ನಡೆಯಿತೆಂದು ತಿಳಿಸಲು ತುಂಬಾ ಸಂತೋಷಿಸುತ್ತೇವೆ.

ಬೆಂಗಳೂರಿನ ಉತ್ಸವವನ್ನು ವಯೋವೃದ್ಧರೂ ಸನ್ಮಾನ್ಯರೂ ಆದ ರಾಜಕಾರ್ಯಪ್ರಸಕ್ತ, ರಾವ್ ಬಹದ್ದೂರ್ ಎಂ. ಶಾಮರಾವ್, ಎಂ.ಎ., ಎಂ.ಆರ್.ಎ.ಎಸ್., ಅವರು ಪ್ರಾರಂಭಮಾಡಿದರು. ಈ ಸಂದರ್ಭದಲ್ಲಿ ಅವರು ದಿವಂಗತ ಎಂ. ವೆಂಕಟಕೃಷ್ಣಯ್ಯನವರ ಮತ್ತು ದಿವಂಗತ ಕವಿತಿಲಕ ಮಹಾವಿದ್ವಾನ್ ಸೋಸಲೆ ಅಯ್ಯಾಶಾಸ್ತ್ರಿಗಳವರ ಭಾವಚಿತ್ರಗಳ ಅನಾವರಣಮಾಡಿದುದೂ, 'ಕನ್ನಡದ ಬಾವುಟ' ಎಂಬ ಪರಿಷತ್ ಪ್ರಕಟನೆಯನ್ನು* ಪ್ರಕಾಶಗೊಳಿಸಿದುದೂ ಉತ್ಸವಕ್ಕೆ ಹೆಚ್ಚಿನ ಮಹತ್ವವನ್ನುಂಟುಮಾಡಿದುವು; ಇದೇ ಸಂದರ್ಭದಲ್ಲಿಯೇ ಶ್ರೀ॥ ಶಾಮರಾಯರು ೧೯೩೨ನೆಯ ವರ್ಷದ ದಿವಂಗತ ಭಾಸ್ಕರರಾಯರ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಪಡೆದ ಶ್ರೀ॥ ಕೆ. ರಾಜಾರಾಯರಿಗೆ ಬೆಳ್ಳಿಯ ಬಟ್ಟಲ ಬಹುಮಾನವನ್ನೂ ಕೊಟ್ಟರು. ಉತ್ಸವದ ಅಂಗವಾಗಿ ನಾಲ್ಕು ದಿನಗಳೂ ಎಂದಿನಂತೆ ಉಪನ್ಯಾಸಗಳು, ಕಾವ್ಯ ಗಾಯನ, ಸಂಗೀತ ಮುಂತಾದ ಬಗೆ ಬಗೆಯ ಬೋಧಪ್ರದವಾದ ಮತ್ತು ಮನರಂಜನೆಯ ಕಾರ್ಯಗಳು ಏರ್ಪಾಟಾಗಿದ್ದು, ಸರ್ವವಿಧದಲ್ಲಿಯೂ ಮಹಾಜನರ ಮೆಚ್ಚಿಕೆಗೆ ಪಾತ್ರವಾದುವು; ಸಂಘಸಮ್ಮೇಳನ, ಸಾಹಿತಿಗಳ ಗೋಷ್ಠಿ, ಕನ್ನಡ ಗ್ರಂಥಪ್ರದರ್ಶನ—ಇವು ಯಶಸ್ವಿಯಾಗಿ ನಡೆದುವು. ಮಹಿಳೆಯರ ಮತ್ತು ಮಕ್ಕಳ ಕೂಟಗಳು ಈ ಸಲದ ಉತ್ಸವದ ವಿಶೇಷಕಾರ್ಯಗಳು.

ಬೆಂಗಳೂರಿನಲ್ಲಿ ನಡೆದಂತೆಯೇ ಆನವಟ್ಟಿಯಲ್ಲಿಯೂ, ಗದಗಿನಲ್ಲಿಯೂ ಉತ್ಸವವು ಯಶಸ್ವಿಯಾಗಿ ನಡೆಯಿತು. ಉತ್ಸವದ ವಿವರವಾದ ವರದಿಯನ್ನು ಉತ್ಸವದ ಅಧಿಕಾರಿಗಳು ಪ್ರತ್ಯೇಕವಾಗಿ ಮುದ್ರಿಸಿ ಪ್ರಕಟಪಡಿಸುವವರಾಗಿದ್ದಾರೆ. ಕೆಲವು ಭಾಷಣಗಳ ಸಾರಾಂಶವನ್ನು ಮುಂದಿನ ಸಂಚಿಕೆಯಲ್ಲಿ ಕೊಡಬೇಕೆಂದಿದ್ದೇವೆ.

* ಇದೊಂದು ಅಪೂರ್ವವಾದ ಕಾವ್ಯಸಂಕಲನ. ಇದರಲ್ಲಿ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ೭ನೆಯ ಶತಮಾನದಿಂದ ೨೦ನೆಯ ಶತಮಾನದ ಇಂದಿನವರೆಗಿನ ಕನ್ನಡ ಬೆಳೆಯನ್ನು (೧) ಶಾಸನಗಳು, (೨) ಪೂರ್ವ ಸಾಹಿತ್ಯ, (೩) ನಾಡ ಪದಗಳು, (೪) ಇಂದಿನ ಹೊಸ ಕವಿತೆ— ಈ ನಾಲ್ಕು ತೆನೆಗಳಲ್ಲಿ ತೋರಿಸಿದ್ದಾರೆ. ಕಾಲ ಕಾಲದ ಭಾಷೆಯ ಮಾರ್ಪಾಟುಗಳು, ಛಂದಸ್ಸಿನ ಬಗೆ ಬಗೆಯ ಕುಣಿತ, ಕನ್ನಡ ನಾಡಿನ ಸೊಬಗು, ಹೃದಯ, ಧರ್ಮಗಳು, ಮಹಾವ್ಯಕ್ತಿಗಳು, ಜೀವಗುರಿಗಳು, ಬೇರೆ ಬೇರೆ ಪ್ರಾಂತ ಪ್ರೇಮಗಳು— ಇವುಗಳನ್ನು ತೆಕ್ಕೆಮಾಡಿ ಗ್ರಂಥದಲ್ಲಿ ಸೇರಿಸಿರುತ್ತಾರೆ. ಇದರ ಕ್ರಯ ಪರಿಷತ್ತಿನ ಸದಸ್ಯರಿಗೆ ಕ್ಯಾಲಿಕೊ ಪ್ರತಿ ರೂ. ೧—೨—೦, ಸಾಮಾನ್ಯ ಪ್ರತಿ ರೂ. ೦—೧೨—೦; ಇತರರಿಗೆ ಕ್ರಮವಾಗಿ ರೂ. ೧—೮—೦ ಮತ್ತು ರೂ. ೧—೦—೦. ಈ ಗ್ರಂಥಕ್ಕೆ ಕನ್ನಡಿಗರು ಪ್ರೋತ್ಸಾಹಕೊಡುವವರಾಗಬೇಕೆಂದು ಪ್ರಾರ್ಥಿಸುತ್ತೇವೆ.

**ಅಖಿಲ ಕರ್ನಾಟಕ ಮಕ್ಕಳ ಕೂಟ**

ಮೇಲ್ಕಂಡ ವಸಂತ ಸಾಹಿತ್ಯೋತ್ಸವಗಳಿಗೆ ಒಂದೆರಡು ದಿವಸಗಳ ಹಿಂದೆ ಅಖಿಲ ಕರ್ನಾಟಕ ಮಕ್ಕಳ ಕೂಟವು ಪರಿಷನ್ಮಂದಿರದಲ್ಲಿ ತುಂಬಾ ಯಶಸ್ವಿಯಾಗಿ ಜರುಗಿತು. ಈ ರೀತಿಯ ಕೂಟವು ನಡೆದದ್ದು ಮೈಸೂರು ಸಂಸ್ಥಾನದಲ್ಲಿ ಇದೇ ಮೊದಲನೆಯ ಸಾರಿ. ಇದರ ಪ್ರಾರಂಭೋತ್ಸವವನ್ನು ನಮ್ಮ ಪರಿಷತ್ತಿನ ಅಧ್ಯಕ್ಷರಾದ ಶ್ರೀಮದ್ಯುವರಾಜರವರ ಕುಮಾರ್ತೆಯರಾದ ಶ್ರೀ॥ ವಿಜಯಲಕ್ಷ್ಮಮ್ಮಣ್ಣಿಯವರು ನೆರವೇರಿಸಿ ತನ್ಮೂಲಕ ಕನ್ನಡ ನಾಡಿನ ಮಕ್ಕಳ ಪುರೋಭಿವೃದ್ಧಿಯಲ್ಲಿ ಮೈಸೂರು ರಾಜಮನೆತನದವರಿಗೆ ಇರುವ ಆದರಾತಿಶಯವನ್ನು ಪ್ರದರ್ಶಿಸಿದರು. ಈ ಕೂಟವು ಯಶಸ್ವಿಯಾಗಿ ನಡೆಯುವಂತೆ ಏರ್ಪಾಡುಮಾಡಿದ ಶ್ರೀಮತಿ ಆರ್. ಕಲ್ಯಾಣಮ್ಮನವರನ್ನೂ, ಇವರಿಗೆ ನೆರವಾಗಿದ್ದ ಎಲ್ಲ ಮಹಿಳೆಯರನ್ನೂ, ಮಹನೀಯರನ್ನೂ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

**ಶ್ರೀ ಜಯಚಾಮರಾಜ ಒಡೆಯರವರಿಗೆ ಅಭಿನಂದನೆಗಳು**

ನಮ್ಮ ಪರಿಷತ್ತಿನ ಅಧ್ಯಕ್ಷರಾದ ಶ್ರೀಮದ್ಯುವರಾಜರವರ ಕುಮಾರರಾದ ಶ್ರೀ ಜಯಚಾಮರಾಜ ಒಡೆಯರವರ ವಿವಾಹ ಮಹೋತ್ಸವವು ಮೈಸೂರು ರಾಜಧಾನಿಯಲ್ಲಿ ೧೫–೫–೧೯೩೮ರಲ್ಲಿ ಅತ್ಯಂತ ರಾಜವೈಭವಗಳೊಡನೆ ನಡೆಯಿತು. ಈ ಸಂದರ್ಭದಲ್ಲಿ ಪರಿಷತ್ತು ತನ್ನ ಅಭಿನಂದನೆಗಳನ್ನು ಸಮರ್ಪಿಸಿದುದಲ್ಲದೆ ರಾಜದಂಪತಿಗಳಿಗೆ ದೀರ್ಘಾಯುಷ್ಯವೂ, ಆರೋಗ್ಯಭಾಗ್ಯವೂ, ಸತ್ಸಂತಾನವೃದ್ಧಿಯೂ ಲಭಿಸಲೆಂದು ಹಾರೈಸಿತು. ಮತ್ತು ಕನ್ನಡ ಬಾವುಟದ ರೇಶ್ಮೆ ಬೈಂಡಿನ ಒಂದು ಪ್ರತಿಯನ್ನು ಕಾಣಿಕೆಯಾಗಿ ಒಪ್ಪಿಸಿತು.

**ದಿವಂಗತ ಹೊಸಕೆರೆ ಚಿದಂಬರಯ್ಯನವರು**

ಕನ್ನಡದಲ್ಲಿ ಅನೇಕ ಗ್ರಂಥಗಳನ್ನು ರಚಿಸಿ ಪ್ರಖ್ಯಾತರಾಗಿದ್ದ ಶ್ರೀಮಾನ್ ಹೊಸಕೆರೆ ಚಿದಂಬರಯ್ಯನವರು ತಾ॥ ೧೭–೪–೧೯೩೮ರಲ್ಲಿ ತಿರುಮಕೂಡಲು ನರಸೀಪುರದಲ್ಲಿ ದೈವಾಧೀನರಾದುದು ಕನ್ನಡ ಪ್ರಪಂಚಕ್ಕೆ ದೊಡ್ಡ ನಷ್ಟವಾಗಿದೆ. ಇವರು ಹುಟ್ಟುಕವಿಗಳು. ಬಾಲ್ಯದಲ್ಲಿ ಸರಿಯಾದ ವಿದ್ಯಾಭ್ಯಾಸಕ್ಕೆ ಅನುಕೂಲಗಳಿಲ್ಲದಿದ್ದರೂ ಇವರು ಕೇವಲ ಸ್ವಪ್ರಯತ್ನದಿಂದಲೇ ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯವನ್ನೂ, ಇಂಗ್ಲಿಷ್ ಭಾಷೆಯ ಪರಿಚಯವನ್ನೂ ಸಂಪಾದಿಸಿಕೊಂಡರು. ಕೆಲವು ಕಾಲ ಮದ್ರಾಸು ಕ್ರಿಶ್ಚಿಯನ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿಯೂ, ಮೈಸೂರು ಸರ್ಕಾರದ ವಿದ್ಯಾಭ್ಯಾಸದ ಇಲಾಖೆಯಲ್ಲಿ ಉಪಾಧ್ಯಾಯರಾಗಿಯೂ ಇದ್ದರು. ಕೆಲವು ವರ್ಷಗಳನಂತರ ಉದ್ಯೋಗದಿಂದ ನಿವೃತ್ತರಾಗಿ ಶ್ರೀ ಕುರ್ತಕೋಟಿ ಮಹಾಭಾಗವತರ ಆಶ್ರಯದಲ್ಲಿ ದೇಶಸಂಚಾರ ಮಾಡಿ ತಮ್ಮ ಜ್ಞಾನಭಂಡಾರವನ್ನೂ ಸೇವಾದಕ್ಷತೆಯನ್ನೂ ಗಳಿಸಿಕೊಂಡರು. ಇವರು ಧಾರವಾಡದಲ್ಲಿದ್ದಾಗ ಅಲ್ಲಿನ ಮಹಾಜನರು ಇವರಿಗೆ 'ಕರ್ಣಾಟಕ ಕವಿರತ್ನ' ಎಂಬ ಬಿರುದು ಕೊಟ್ಟರು.

ಇವರು ಅನೇಕ ಬಗೆಗಳಲ್ಲಿ ಅಪಾರವಾದ ಸಾಹಿತ್ಯಸೇವೆ ಮಾಡಿದ್ದಾರೆ. 'ಪರಮಾರ್ಥ', 'ಭಕ್ತಬಂಧು' ಮಾಸಪತ್ರಿಕೆಗಳ ಸಂಪಾದಕರಾಗಿದ್ದರು. ವಾಲ್ಮೀಕಿಯ ಜಯ, ಭರತನ ಬಂಧುಪ್ರೇಮ, ಪರಮಾತ್ಮಸ್ತುತಿ, ಆರ್ಯಧರ್ಮ ಪ್ರದೀಪ, ಆತ್ಮಶಕ್ತಿಯ ತೇಜಸ್ಸು, ಭರತಖಂಡದ ಜೀವಜ್ಯೋತಿಗಳು, ನೀತಿಗಳ ನೆಲೆಗಟ್ಟು, ಕೀರ್ತನ ಕಂಠಾಭರಣ, ಗುಣನಿರೂಪಣೆ, ಶಂಕರಾಚಾರ್ಯರ ಆಖ್ಯಾಕ, ವಿದ್ಯಾರಣ್ಯಕಾವ್ಯ, ತಾರಾನಾಥ ತರ್ಕವಾಚಸ್ಪತಿ—ಇವು ಇವರ ಮುಖ್ಯ ಗ್ರಂಥಗಳು. ಇವರು ವ್ಯಾವಹಾರಿಕ, ಲೌಕಿಕ ಗ್ರಂಥಗಳನ್ನೇ ಅಲ್ಲದೆ, ಭಗವದ್ಗೀತೆ, ಪಂಚದಶಿ, ಉಪನಿಷತ್ತುಗಳು ಮೊದಲಾದ ಧಾರ್ಮಿಕ ಗ್ರಂಥಗಳ ವ್ಯಾಖ್ಯಾನಗಳನ್ನು ತಿಳಿಗನ್ನಡ ದಲ್ಲಿ ಬರೆದು ಕನ್ನಡಕ್ಕೂ ಕನ್ನಡ ಜನತೆಗೂ ವಿಶೇಷ ಉಪಕಾರವನ್ನೆಸಗಿದ್ದಾರೆ.

ಇಂಥ ಮಹನೀಯರು ಇಹಲೋಕವನ್ನು ತ್ಯಜಿಸಿದುದು ಕನ್ನಡಿಗರಿಗೆ ವಿಶೇಷ ನಷ್ಟವಾಗಿದೆ. ಇವರ ಆತ್ಮಕ್ಕೆ ಭಗವಂತನು ನಿತ್ಯಶಾಂತಿಯನ್ನೀಯಲೆಂದು ಪ್ರಾರ್ಥಿಸುತ್ತೇವೆ.

ಪರಿಷತ್ತು ಪ್ರಾರಂಭವಾಗಿ ಇಪ್ಪತ್ತಮೂರು ವರ್ಷಗಳು ತುಂಬುತ್ತ ಬಂದಿದೆ ಎಂಬಂಶವು ನಮ್ಮ ವಾಚಕರಿಗೆ ವೇದ್ಯವೇ ಆಗಿರುವುದಷ್ಟೆ. ಇನ್ನೆರಡು ವರ್ಷಗಳ

**ಪರಿಷತ್ತಿನ ರಜತ ಮಹೋತ್ಸವ: ೧೯೪೦ ರಲ್ಲಿ**

ಅನಂತರ ಪರಿಷತ್ತಿನ ರಜತ ಮಹೋತ್ಸವವನ್ನು ನೆರವೇರಿಸ ತಕ್ಕದ್ದು ಯುಕ್ತವೇ ಆಗಿರುವ ಪ್ರಯುಕ್ತ ೧೯೪೦ನೆಯ ಮೇ ೩ನೆಯ ತಾರೀಖಿನ ಸುಮಾರಿನಲ್ಲಿ ಈ ಉತ್ಸವವನ್ನು ವಿಜೃಂಭಣೆಯಿಂದ ನಡಸಲು ಅವಶ್ಯವಾದ ಸಿದ್ಧತೆಗಳನ್ನು ಈಗಿನಿಂದಲೂ ಕೈಕೊಳ್ಳಬೇಕೆಂದು ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿ ತೀರ್ಮಾನಿಸಿದೆ. ಅಲ್ಲದೆ ಇದೇ ತೀರ್ಮಾನವನ್ನು ಪುಷ್ಟೀಕರಿಸಿ ಈ ಉತ್ಸವವು ಯಶಸ್ವಿಯಾಗಿ ನೆರವೇರಲು ಅನುಕೂಲವಾಗುವಂತೆ ಅಖಿಲ ಕರ್ನಾಟಕದ ಭಾಷಾಭಿಮಾನಿಗಳೂ ಉದಾರವಾದ ಸಹಾಯ ಸಂಪತ್ತಿ ಗಳನ್ನು ಒದಗಿಸಬೇಕೆಂದು ಕಳೆದ ಡಿಸೆಂಬರ್ ತಿಂಗಳಿನಲ್ಲಿ ಜಮಖಂಡಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಒಂದು ನಿರ್ಣಯವು ಸರ್ವಾನುಮತದಿಂದ ಅಂಗೀಕೃತವಾಗಿರುತ್ತದೆ. ಈ ನಿರ್ಣಯವು ಕಾರ್ಯಕಾರಿಯಾಗುವಂತೆ ಕನ್ನಡಿಗ ರೆಲ್ಲರೂ ನಿರ್ವಂಚನೆಯಿಂದ ಸಹಾಯಮಾಡುವವರಾಗಲೆಂದು ಆಶಿಸುತ್ತೇವೆ.

**ಕರ್ನಾಟಕದ ಏಕೀಕರಣ: ಪರಿಷತ್ತಿನ ಸಹಾನುಭೂತಿ**

ಕರ್ನಾಟಕದ ಏಕೀಕರಣದ ಸಮಸ್ಯೆಯ ವಿಚಾರವಾಗಿ ಮೈಸೂರು ಸಂಸ್ಥಾನದ ಕನ್ನಡಿಗರ ಸಹಾನುಭೂತಿಯನ್ನು ಪ್ರದರ್ಶಿಸುವ ಉದ್ದೇಶದಿಂದ ತಾ॥ ೭–೩–೧೯೩೮ರಲ್ಲಿ ರಾಜಚರಿತವಿಶಾರದ ರಾವ್ ಸಾಹೆಬ್ ಶ್ರೀ॥ ಸಿ. ಹಯವದನರಾಯರ ಅಧ್ಯಕ್ಷತೆ ಯಲ್ಲಿ ಪರಿಷನ್ಮಂದಿರದಲ್ಲಿ ಒಂದು ಸಾರ್ವಜನಿಕ ಸಭೆ ಸೇರಿದ್ದಿತು. ಈ ಪ್ರಶ್ನೆಯಲ್ಲಿ ಅಭಿಮಾನವುಳ್ಳ ಹಲವು ಮಂದಿ ಮಹನೀಯರ ಮತ್ತು ಮಹಿಳೆಯರ ಭಾಷಣಗಳಾದನಂತರ ಈ ಕೆಳಗೆ ಕಂಡ ತೀರ್ಮಾನವು ಸರ್ವಾನುಮತದಿಂದ ಅಂಗೀಕೃತವಾಯಿತು :—

"ಬೊಂಬಾಯಿ, ಮದರಾಸು ಮತ್ತು ಕೊಡಗು ಪ್ರಾಂತಗಳಲ್ಲಿ ಎಲ್ಲ ಕನ್ನಡ ಜಿಲ್ಲೆಗಳನ್ನೂ ಒಟ್ಟುಗೂಡಿಸಿ 'ಕರ್ನಾಟಕ ಪ್ರಾಂತ' ಎಂಬ ಒಂದು ಗವರ್ನರವರ ಪ್ರಾಂತವನ್ನು ನಿರ್ಮಿಸಲು ಬ್ರಿಟಿಷ್ ಸರ್ಕಾರವನ್ನು ಒತ್ತಾಯಪಡಿಸುವ ಸಲುವಾಗಿ ಬೊಂಬಾಯಿ ಸರ್ಕಾರದ ಶಾಸನ ಸಭೆಯ ಪರ್ಯಾಲೋಚನೆಗಾಗಿ ಬರಲಿರುವ ಗೊತ್ತುವಳಿಗೆ ಕರ್ನಾಟಕ ಸಾಹಿತ್ಯ ಪರಿಷತ್ತಿನಲ್ಲಿ ಸೇರಿರುವ ಈ ಸಾರ್ವಜನಿಕ ಸಭೆ ತನ್ನ ಸಂಪೂರ್ಣ ಸಹಾನು ಭೂತಿಯನ್ನು ವ್ಯಕ್ತಪಡಿಸುತ್ತದೆ."

ಈ ತೀರ್ಮಾನಕ್ಕನುಸಾರವಾಗಿ ಬೊಂಬಾಯಿ ಸರ್ಕಾರದ ಮುಖ್ಯ ಮಂತ್ರಿ ಹೆಸರಿಗೆ ಟೆಲಿಗ್ರಾಂ ಕಳುಹಿಸಲಾಯಿತು. ಈ ಪ್ರಶ್ನೆಯು ಮದರಾಸು ಮತ್ತು ಬೊಂಬಾಯಿ ಸರ್ಕಾರದ ಶಾಸನ ಸಭೆಯಲ್ಲಿ ಸುಮುಖವಾದ ತೀರ್ಮಾನ ಬಂದಿತು.

ಅಖಿಲ ಕರ್ನಾಟಕ ಏಕೀಕರಣ ಪರಿಷತ್ತಿನ ಏಳನೆಯ ಅಧಿವೇಶನವು ಮೇ ೨೪, ೩೯ರಲ್ಲಿ ಧಾರವಾಡದಲ್ಲಿ ಶ್ರೀ॥ ಕೋ. ರಾ. ಕಾರಂತರ ಅಧ್ಯಕ್ಷತೆಯಲ್ಲಿ ಬಹು ಯಶಸ್ವಿಯಾಗಿ ನಡೆಯಿತು. "ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ ದೃಷ್ಟಿಯಿಂದ ಕನ್ನಡಿಗರ ಐಕಮತ್ಯವೇ ಗುರಿಯಾಗುಳ್ಳ ಸಾಹಿತ್ಯ ಪರಿಷತ್ತಿಗೆ ಏಕೀಕರಣ ಪರಿಷತ್ತಿನ ಕೆಲಸದಲ್ಲಿ ಸಹಾನುಭೂತಿ ಸಹಜವಾಗಿದೆ"ಯೆಂದು ಏಕೀಕರಣ ಪರಿಷತ್ತಿಗೆ ನಮ್ಮ ಪರಿಷತ್ತಿನ ಸಂದೇಶವನ್ನು ಉಪಾಧ್ಯಕ್ಷರು ಕಳುಹಿಸಿದ್ದರು.

ಏಕೀಕರಣ ಕಾರ್ಯವನ್ನು ಪರ್ಯಾಲೋಚನೆಗೆ ತೆಗೆದುಕೊಳ್ಳುವಂತೆ ಒತ್ತಾಯಪಡಿಸಲು ನಾನಾ ಪ್ರಯತ್ನಗಳು ನಡೆಯುತ್ತಿವೆ. ಇವೆಲ್ಲವೂ ಸಫಲ ವಾಗಲೆಂದು ಹಾರೈಸುತ್ತೇವೆ.

ಕನ್ನಡ ಪ್ರಾಂತಕ್ಕೆ ಸೇರಿದ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸಹ ವಿದ್ಯಾರ್ಥಿವೇತನಗಳೂ ಬಹುಮಾನಗಳೂ ಇದ್ದರೂ ಕೂಡ ಕನ್ನಡವನ್ನು ಮುಖ್ಯ

**ಕನ್ನಡದಲ್ಲಿ ಪ್ರೌಢ ವ್ಯಾಸಂಗಕ್ಕೆ ಪ್ರೋತ್ಸಾಹ: ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಶಾಶ್ವತ ನಿಧಿ**

ವಿಷಯವಾಗಿ ತೆಗೆದುಕೊಂಡು ವ್ಯಾಸಂಗಮಾಡುವ ವಿದ್ಯಾರ್ಥಿಗಳ ಉತ್ತೇಜನಕ್ಕೆಂದು ಒಂದು ವೇತನವಾದರೂ ಇಲ್ಲ ದಿರುವುದು ಒಂದು ದೊಡ್ಡ ಕೊರತೆಯಾಗಿರುವುದನ್ನು ವಿಷಯವನ್ನು ಕುರಿತು ಈ ಪತ್ರಿಕೆಯಲ್ಲಿ* ಹಿಂದೆಯೂ ಒಂದೆರಡುಸಾರಿ ಪ್ರಸ್ತಾವಿಸಿದ್ದುದು ಸರಿಯಷ್ಟೆ. ಈ ಕೊರತೆ ಯನ್ನು ಆದಷ್ಟುಮಟ್ಟಿಗೆ ನಿವಾರಿಸುವ ಉದ್ದೇಶದಿಂದ ಕನ್ನಡದ ಸೇವೆಯಲ್ಲಿಯೇ ಸರ್ವದಾ ನಿರತರಾಗಿರುವ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಐದು ಸಾವಿರ ರೂಪಾಯಿಗಳ ಒಂದು ನಿಧಿಯನ್ನು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿರುತ್ತಾರೆಂದು ನಮ್ಮ ವಾಚಕರಿಗೆ ತಿಳಿಸಲು ತುಂಬಾ ಸಂತೋಷವುಳ್ಳವರಾಗಿರುತ್ತೇವೆ. ಇದರಿಂದ ಹುಟ್ಟುವ ಬಡ್ಡಿಯನ್ನು ಪ್ರತಿ ವರ್ಷವೂ ಕನ್ನಡ ಬಿ.ಎ. ಆನರ್ಸ್, ಎಂ.ಎ.

* ಸಂಪುಟ ೧೯, ಸಂಚಿಕೆ ೨; ಸಂಪುಟ ೨೧, ಸಂಚಿಕೆ ೩.

ತರಗತಿಗಳಲ್ಲಿ ವ್ಯಾಸಂಗಮಾಡುವ ಮೂವರು ವಿದ್ಯಾರ್ಥಿಗಳಿಗೆ ವೇತನವನ್ನು ಕೊಡುವುದಕ್ಕಾಗಿ ಉಪಯೋಗಿಸತಕ್ಕದ್ದೆಂದು ಗೊತ್ತುಮಾಡಿ ಇದಕ್ಕೆ ಸಂಬಂಧಪಟ್ಟ ನಿಬಂಧನೆಗಳನ್ನು ವಿಶ್ವವಿದ್ಯಾನಿಲಯದವರು ೩೧–೩–೧೯೩೮ರ ಮೈಸೂರು ಗೆಜೆಟ್ಟಿನಲ್ಲಿ ಪ್ರಕಟಿಸಿರುತ್ತಾರೆ. ಶ್ರೀಮಾನ್ ಶ್ರೀಕಂಠಯ್ಯನವರು ಒದಗಿಸಿರುವ ಉದಾರವಾದ ಈ ಸಹಾಯವನ್ನು ಉಪಯೋಗಿಸಿಕೊಳ್ಳಲು ಹಲವುಮಂದಿ ವಿದ್ಯಾರ್ಥಿಗಳು ಮುಂದೆ ಬಂದು ಕನ್ನಡದಲ್ಲಿ ಪಾಂಡಿತ್ಯವನ್ನು ಸಂಪಾದಿಸಿ ಭಾಷಾ ಸೇವೆಗೆ ನೆರವಾಗುತ್ತಾ ಬರಲೆಂದೂ, ಕನ್ನಡದ ಅಭಿಮಾನಿಗಳಾದ ಇತರ ಮಹನೀಯರೂ ಸಹ 'ಶ್ರೀ'ಯವರ ಮೇಲ್ಪಂಕ್ತಿಯನ್ನನುಸರಿಸಿ ಕನ್ನಡದ ಪ್ರೌಢ ವ್ಯಾಸಂಗಕ್ಕೆ ಉದಾರಹಸ್ತದಿಂದ ಸಹಾಯಮಾಡುತ್ತಾ ಬರುವವರಾಗಲೆಂದೂ ಆಶಿಸುತ್ತೇವೆ.

**ಶ್ರೀ ಚಾಮರಾಜೇಂದ್ರ ಒಡೆಯರವರ ಜಯಂತಿ**

೧೯೩೭ನೆಯ ಜುಲೈ ತಿಂಗಳ ೨೫ನೆಯ ತಾರೀಖಿನಲ್ಲಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಸ್ಮಾರಕೋತ್ಸವವು ಮೈಸೂರು ರಾಜಧಾನಿಯಲ್ಲಿ, ನಂಜನಗೂಡು ಕರ್ನಾಟಕ ಸಂಘದ ಆಶ್ರಯದಲ್ಲಿ, ವಿಶೇಷ ವಿಜೃಂಭಣೆಯಿಂದ ನಡೆಯಿತೆಂಬ ವಿಚಾರವು ನಮ್ಮ ವಾಚಕರಿಗೆ ಜ್ಞಾಪಕವಿರಬಹುದು.* ಇದೇ ರೀತಿ ಇವರ ದತ್ತುಪುತ್ರರೂ, ನಮ್ಮ ಈಗಿನ ಮಹಾರಾಜರವರ ಪಿತೃವರೇಣ್ಯರೂ ಆಗಿದ್ದ ಶ್ರೀ ಚಾಮರಾಜೇಂದ್ರ ಒಡೆಯರವರ ಜಯಂತಿ ಮಹೋತ್ಸವವನ್ನು ಮೈಸೂರಿನ ಕರ್ನಾಟಕ ಸಂಘದವರು ಕಳೆದ ಮಾರ್ಚಿ ೨೮ನೆಯ ತಾರೀಖಿನ ದಿನ ವಿಶೇಷ ವಿಜೃಂಭಣೆಯೊಡನೆ ನೆರವೇರಿಸಿದರೆಂದು ತಿಳಿಸಲು ಹರ್ಷಪಡುತ್ತೇವೆ. ಇವರು ೧೮೮೧ರಲ್ಲಿ ಅದುವರೆಗೆ ಬ್ರಿಟಿಷ್ ಕಮಿಷನರುಗಳ ಆಡಳಿತಕ್ಕೆ ಒಳಪಟ್ಟಿದ್ದ ಮೈಸೂರು ಸಂಸ್ಥಾನದ ರಾಜ್ಯಭಾರವನ್ನು ವಹಿಸಿಕೊಂಡು ಹದಿಮೂರು ವರ್ಷಗಳ ಕಾಲ ಅತ್ಯುತ್ಕೃಷ್ಟವಾದ ರೀತಿಯಲ್ಲಿ ರಾಜ್ಯಭಾರಮಾಡಿ ಚಿರಸ್ಮರಣೀಯರಾಗಿರುತ್ತಾರೆ. ಮೈಸೂರಿನಲ್ಲಿ ಪ್ರಜಾಪ್ರತಿನಿಧಿಸಭೆಯನ್ನು ಸ್ಥಾಪಿಸುವುದರ ಮೂಲಕ ಈಗ್ಗೆ ಐವತ್ತು ವರ್ಷಗಳ ಹಿಂದೆಯೇ ಪ್ರಜಾಸತ್ತಾತ್ಮಕವಾದ ರಾಜ್ಯಭಾರಕ್ಕೆ ಅಡಿಗಲ್ಲು ಹಾಕಿದ ಕೀರ್ತಿ ಇವರಿಗೆ ಸಲ್ಲತಕ್ಕದ್ದಾಗಿದೆ. ಪೂರ್ಣಯಶಸ್ವಿಯಾದ ಇವರ ರಾಜ್ಯಭಾರದಿಂದ ಮೈಸೂರು ಸಂಸ್ಥಾನವು ಪ್ರಗತಿಮಾರ್ಗಕ್ಕೆ ಏರಿ ಇಡೀ ಹಿಂದೂಸ್ಥಾನದಲ್ಲಿ ಆದರ್ಶಪ್ರಾಯವಾದ ಸಂಸ್ಥಾನವೆಂಬ ಪ್ರಖ್ಯಾತಿಯನ್ನು ಪಡೆಯಿತು. ವಿದ್ಯಾಭ್ಯಾಸಕ್ಕೆ, ಅದರಲ್ಲಿಯೂ ಸ್ತ್ರೀವಿದ್ಯಾಭ್ಯಾಸಕ್ಕೆ, ಇವರಿಂದ ದೊರಕಿತ ಪ್ರೋತ್ಸಾಹವು ಅನ್ಯಾದೃಶವಾದುದು. ಅದರಂತೆಯೇ ಕನ್ನಡ ಭಾಷೆಗೂ, ನಾಟಕ ಕಲೆಗೂ ಇವರಿಂದ ಅಸಾಧಾರಣವಾದ ಸಹಾಯವು ದೊರೆಯಿತು. ಇಂತಹ ಮಹಾಪುರುಷರ ಜಯಂತ್ಯುತ್ಸವವನ್ನು ಏರ್ಪಡಿಸಿ ಯಶಸ್ವಿಯಾಗಿ ನೆರವೇರಿಸಿದುದಕ್ಕಾಗಿ ಮೈಸೂರು ಕರ್ನಾಟಕ ಸಂಘವನ್ನು ಅಭಿನಂದಿಸುವುದಲ್ಲದೆ ಇದೇ ರೀತಿ ಇನ್ನು ಮುಂದೆಯೂ ಸಂಘವು ಆಗಿಂದಾಗ ಕನ್ನಡದ ಅಭಿಮಾನಿಗಳಾದ ಮಹಾಪುರುಷರ ಜಯಂತ್ಯುತ್ಸವಗಳನ್ನು ನಡಸುತ್ತಾ ಬರಲೆಂದು ಹಾರೈಸುತ್ತೇವೆ.

* 'ಪರಿಷತ್ಪತ್ರಿಕೆ,' ಸಂಪುಟ ೨೨, ಸಂಚಿಕೆ ೧–೨.

# ಪ್ರಾಚ್ಯ ಲೇಖನ ಮಾಲೆ

**ಪ್ರಬುದ್ಧ ಕರ್ಣಾಟಕ—ಸಂಪುಟ ೧೯, ಸಂಚಿಕೆ ೨–೩**

೧. ಕನ್ನಡ ಸಾಹಿತ್ಯ—ಶ್ರೀ॥ ಕೆ. ವಿ. ಪುಟ್ಟಪ್ಪ, ಎಂ.ಎ.

೨–೩. ವಿಶ್ವಸಾಹಿತ್ಯ; ಸೌಂದರ್ಯ ಮತ್ತು ಸಾಹಿತ್ಯ (ರವೀಂದ್ರನಾಥ ಠಾಕೂರ ಲೇಖನಗಳು) — ಅನುವಾದಕರು: ಡಾ॥ ಎ. ಎನ್. ನರಸಿಂಹಯ್ಯ, ಎಂ.ಎ., ಎಲ್.ಟಿ., ಪಿಎಚ್.ಡಿ.

**ಜಯಕರ್ನಾಟಕ—ಜನವರಿ ೧೯೩೮**

ಬಾದಾಮಿಯ ಚಾಲುಕ್ಯರ ಕಾಲದ ಕಲಾಜೀವನ
—ಶ್ರೀ॥ ದೇಸಾಯಿ ಪಾಂಡುರಂಗರಾಯರು, ಎಂ.ಎ.

**ಜಯಕರ್ನಾಟಕ—ಫೆಬ್ರುವರಿ ೧೯೩೮**

೧. ನಾಗಜನಾಂಗ—ಶ್ರೀ॥ ದೇಸಾಯಿ ಪಾಂಡುರಂಗರಾಯರು, ಎಂ.ಎ.

["ನಾಗರು ದ್ರಾವಿಡ ಪೂರ್ವ ಜನಾಂಗವು. ಆರ್ಯರು 'ನಾಗ'ರನ್ನು ಅಮಾನುಷರನ್ನಾಗಿ ಕಂಡರು. ತಕ್ಷಕ, ವಾಸುಕಿ, ಶೇಷ, ಅನಂತರು ನಾಗಕುಲ ಸಾಮ್ರಾಟರು. ಆರ್ಯ—ನಾಗ ರಕ್ತಸಂಬಂಧವುಂಟಾಯಿತು. ನಾಗರ 'ನಾಗರಿಕತೆ', 'ನಾಗರಲಿಪಿ'ಗಳು ಅವರ ಸಭ್ಯತೆಗೆ ಸಾಕ್ಷಿ. ನಾಗವಂಶವು ಆರ್ಯಾವರ್ತದಲ್ಲೆಲ್ಲ ಹರಡಿದ್ದರೂ ದಕ್ಷಿಣಭಾಗವೇ ಅವರ ಹುಟ್ಟುನಾಡು. ಕನ್ನಡಿಗರಲ್ಲಿ ನಾಗರ ರಕ್ತವು ಹೆಚ್ಚಾಗಿ ಬೆರೆತಿದೆ; ಕರ್ನಾಟಕವೇ ಅವರ ಜನ್ಮಸ್ಥಾನವಾಗಿರಬಹುದೆ? ನಾಗರಖಂಡ, ನಾಗಮಂಡಲ, ನಾಗಮಂಗಲ, ನಾಗಲಾಂಬಿಕೆ, ನಾಗವರ್ಮ, ನಾಗದೇವ ಮುಂತಾದ ಹೆಸರುಗಳ ಐತಿಹ್ಯವನ್ನು ಪರಿಶೀಲಿಸಬೇಕಾದುದು ಯುಕ್ತವಾಗಿದೆ."]

೨. ಭೀಮಕವಿಯ ಬಸವಪುರಾಣ
—ಶ್ರೀ॥ ಎನ್. ಕೆ. ಕುಲಕರ್ಣಿ, ಬಿ.ಎ. (ಆನರ್ಸ್)

೩. ರನ್ನನ ಊರು ಮುಧೋಳ; ಬೆಳಗಲಿ ಅಲ್ಲ
—ಶ್ರೀ॥ ದೇಸಾಯಿ ಪಾಂಡುರಂಗರಾಯರು, ಎಂ.ಎ.

**ಜಯಕರ್ನಾಟಕ—ಮಾರ್ಚಿ ೧೯೩೮**

ರನ್ನನ ಮುದುವೊಳಲು—ಶ್ರೀ॥ ದೇಸಾಯಿ ಪಾಂಡುರಂಗರಾಯರು, ಎಂ.ಎ.

**ಶಿವಾನುಭವ—ಸಂಪುಟ ೧೨, ಸಂಚಿಕೆ ೪; ಜನವರಿ ೧೯೩೮**

೧. ಹರಿಹರನು ಹೊಗಳಿದ ದಾನವೀರ ಇಳೆಯಾಂಡ ಗುಡಿಮಾರ
—ಶ್ರೀ॥ ಚಂದ್ರಶೇಖರ ಶಾಸ್ತ್ರಿಗಳು ಅಡ್ನೂರ

೨. ಮಹಾದೇವಿಯಕ್ಕನ ಮದುವೆಯ ವಿವಾದ
—ಶ್ರೀ॥ ಚಂದ್ರಶೇಖರ ಶಾಸ್ತ್ರಿಗಳು ಅಡ್ನೂರ

**ಶಿವಾನುಭವ—ಸಂಪುಟ ೧೨, ಸಂಚಿಕೆ ೫; ಫೆಬ್ರುವರಿ ೧೯೩೮**

೧. ವೀರಶೈವ ಕವಿಗಳ ವೈಶಿಷ್ಟ್ಯ—ಶ್ರೀ॥ ಚಂದ್ರಶೇಖರ ಶಾಸ್ತ್ರಿಗಳು ಅಡ್ನೂರ

೨. ವಚನಕಾರರ ರಾಷ್ಟ್ರಭಾವನೆ—ಶ್ರೀ॥ ಸದಾಶಿವಪ್ಪ ತೆನಿಹಳ್ಳಿ

**ಶರಣ ಸಾಹಿತ್ಯ—ಸಂಪುಟ ೧, ಸಂಚಿಕೆ ೩**

೧. ಹರಿಹರನ ಕಣ್ಣಪ್ಪನ ಮಹಾತ್ಮೆ—ಶ್ರೀ॥ ಕೆ. ಜಿ. ಕುಂದಣಗಾರರು, ಎಂ.ಎ.

೨. ವೀರಶೈವ ಸಾಹಿತ್ಯ—ಶ್ರೀ॥ ಅ. ನ. ಕೃಷ್ಣರಾಯರು



422—38.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

॥ ಸಿರಿಗನ್ನಡಂ ಗೆಲ್ಗೆ ॥

# ಕರ್ಣಾಟಕ ಸಾಹಿತ್ಯ ಪರಿಷತ್ತು

## ಬೆಂಗಳೂರು



**ಮಹಾಪೋಷಕರು:**

ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರಾದ
ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ.
ಮಹಾಸ್ವಾಮಿಗಳವರು

---

**ಅಧ್ಯಕ್ಷರು:**

ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾದ
ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ.
ಮಹಾಸ್ವಾಮಿಯವರು

---

**ಪರಿಷತ್ತಿನ ಅಧ್ಯಕ್ಷರುಗಳು:**

೧. ರಾಜಮಂತ್ರಪ್ರವೀಣ ಶ್ರೀ॥ ಎಚ್. ವಿ. ನಂಜುಂಡಯ್ಯನವರು, ಎಂ.ಎ., ಎಂ.ಎಲ್., ಸಿ.ಐ.ಇ. (೧೯೧೫–೧೯೨೧)

೨. ರಾಜಸೇವಾಧುರೀಣ ಸರ್ ಎಂ. ಕಾಂತರಾಜ ಅರಸರವರು, ಬಿ.ಎ., ಸಿ.ಐ.ಇ. (೧೯೨೧–೧೯೨೪)

೩. ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ. ಮಹಾಸ್ವಾಮಿಯವರು (೧೯೨೪ರಿಂದ)

---

**ಉಪಾಧ್ಯಕ್ಷರುಗಳು:**

೧. ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಶ್ರೀ॥ ಎಂ. ಶಾಮರಾಯರು, ಎಂ.ಎ. (೧೯೧೫–೧೯೧೯)

೨. ರಾಜಸಭಾಭೂಷಣ ಶ್ರೀ॥ ಕರ್ಪೂರ ಶ್ರೀನಿವಾಸರಾಯರು, ಬಿ.ಎಸ್‌ಸಿ., ಎಲ್.ಸಿ.ಇ. (೧೯೧೯–೧೯೩೨)

೩. ಶ್ರೀ॥ ಡಿ. ವಿ. ಗುಂಡಪ್ಪನವರು (೧೯೩೩–೧೯೩೭)

೪. ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (೧೯೩೮)




# ಬಿನ್ನಹ

ಕನ್ನಡ ನುಡಿ, ಕನ್ನಡ ನಯ, ಕನ್ನಡ ಜನ ಒಂದಾಗಬೇಕಾಗಿದೆ; ಮುಂದಾಗಬೇಕಾ[illegible] ಕನ್ನಡ ನಾಡು ಕೂಡಬೇಕಾಗಿದೆ. ಕನ್ನಡ ತಾಯಿ ಕರೆಯುತ್ತಿದ್ದಾಳೆ. ಕನ್ನಡಿಗರಾ, ಓಡಿ[illegible] ಕೂಡಿ ಬನ್ನಿ, ನೆರವಾಗಿ.

ಆಳುವವರು, ಹಿರಿಯುವರು, ಕಿರಿಯುವರು, ಎಲ್ಲ ಕನ್ನಡ ನಾಡಿಗರೂ ಸೇರಿ ಒಂದು ಕೇ[illegible] ಸ್ಥಾನವನ್ನು ಕಟ್ಟಿದರು, ಕನ್ನಡ ತಾಯ ಗುಡಿಯಾಗಿ: ಅದು ಪರಿಷತ್ತು. ಕನ್ನಡ ಬಾವುಟ[illegible] ನನ್ನ ಹಿರಿಯರು ಎತ್ತಿಹಿಡಿದು, ಈಗ ನನ್ನ ಕೈಗೆ ಕೊಟ್ಟಿರುವರು. ಮೈಸೂರಿನಲ್ಲಿಯೂ, [illegible] ಕನ್ನಡ ನಾಡಿನಲ್ಲಿಯೂ ನನ್ನಲ್ಲಿ ಅಕ್ಕರೆ ಮತ್ತು ನಂಬಿಕೆಯುಳ್ಳವರು,—ಶಿಷ್ಯರು, ಮಿತ್ರ[illegible] ಸಹೋದ್ಯೋಗಿಗಳು, ಹಿತೈಷಿಗಳು—ನನಗೆ ಬೆಂಬಲವಾಗಬೇಕೆಂದು ಬೇಡುತ್ತೇನೆ. ಯಾವ ಕಾ[illegible] ದಿಂದಲಾದರೂ ನಾನು ಯಾರಿಗಾದರೂ ಬೇಡದವನಾಗಿದ್ದರೆ, ನಮ್ಮ ತಾಯ ಭಕ್ತಿಯಲ್ಲಿ [illegible] ಮರೆತು, ನನ್ನೊಡನೆ ಕೈಂಕರ್ಯಕ್ಕೆ ನಿಲ್ಲಬೇಕೆಂದು ಬೇಡಿಕೊಳ್ಳುತ್ತೇನೆ.

ಕನ್ನಡ ಕನ್ನಡ ಮಕ್ಕಳೆಲ್ಲರ, ಕನ್ನಡ ನಾಡೆಲ್ಲದರ ಏಳಿಗೆಗೆ, ಹಿರಿಯ ಬಾಳಿಕೆಗೆ, [illegible] ಗೆಲವಿಗೆ. ಬನ್ನಿ, ಕನ್ನಡದ ಕಾಣಿಕೆಯನ್ನು ತನ್ನಿ, ಜನ, ಮನ, ಧನ—ಕೂಡಿಕೊಳ್ಳಿ, ತಾಯ[illegible] ಕಾಪಾಡಿಕೊಳ್ಳಿ, ಮತ್ತೆ ದೊಡ್ಡವಳನ್ನಾಗಿ ಮಾಡಿ. ಭಾರತಮಾತೆಗೆ ಆಕೆ ಹಿರಿಯ ಮಗ[illegible] ಸೇವೆಗೊದಗುವಂತೆ ಮಾಡಿ.

ಸಿರಿಗನ್ನಡಂ ಗೆಲ್ಗೆ! ಕನ್ನಡ ತಾಯ್ ಬಾಳ್ಗೆ!

ಬಿ. ಎಂ. ಶ್ರೀಕಂಠಯ್ಯ
ಉಪಾಧ್ಯಕ್ಷ.

ಬೆಂಗಳೂರು,
೨೬–೧–೧೯೩೮.

**ಪರಿಷತ್ತಿನ ಗುರಿಗಳು.—**

ಕನ್ನಡವನ್ನು ಬೆಳಸಿ, ಕನ್ನಡ ನಾಡಿನಲ್ಲೆಲ್ಲಾ ಒಂದು ರೂಪಕ್ಕೆ ತಂದು, ಅದರ ಮೂಲಕ ಕನ್ನಡಿಗರನ್ನೆಲ್ಲಾ ಒಂದುಗೂಡಿಸುವುದು;

ಈ ಹೊಸ ಕಾಲದಲ್ಲಿ ಕನ್ನಡಿಗರಿಗೆ ಬೇಕಾದ ತಿಳಿವಳಿಕೆಯನ್ನೆಲ್ಲಾ ಕನ್ನಡದಲ್ಲಿ ಕೊಟ್ಟು, ಕನ್ನಡ ನಾಡಿನ ಮುನ್ನಡೆಗಾಗಿ ಕೆಲಸಮಾಡುವುದು;

ಹಳೆಯ ಸಾಹಿತ್ಯದ ಪ್ರಚಾರ, ಹೊಸ ಸಾಹಿತ್ಯದ ಪೋಷಣೆ, ವ್ಯಾಸಂಗಗೋಷ್ಠಿ, ಪರೀಕ್ಷೆ, ವಿಮರ್ಶೆ, ಪರಿಶೋಧನೆ;

ಸಮ್ಮೇಳನ, ವಸಂತೋತ್ಸವ, ಉಪನ್ಯಾಸ, ನಾಟಕ, ಗಮಕಕಲೆ, ಜನ ಸಂಸ್ಕೃತಿ, ವಿನೋದ, ಸ್ಪರ್ಧೆ, ಮಕ್ಕಳ ನಲಿವು;

ಕನ್ನಡ ಸಂಘಗಳ ಒಕ್ಕೂಟ ಮತ್ತು ಕೈವಾಡದಿಂದ ಊರೂರು ಹಳ್ಳಿಹಳ್ಳಿಗಳಲ್ಲಿ ಬೆಳಕು, ಹುರುಪು, ಹೊಸ ಬಾಳು, ಹಬ್ಬ;

ಒಂದು ಮಾತಿನಲ್ಲಿ
ಕನ್ನಡಿಗರ ಪುನರುಜ್ಜೀವನ.

ಒಟ್ಟಿನಲ್ಲಿ ಪರಿಷತ್ತು ಕನ್ನಡಿಗರ ಸಾರ್ವಜನಿಕ ವಿದ್ಯಾ[illegible] ದೊಡ್ಡ ಕೆಲಸ, ದೊಡ್ಡ ಪ್ರಯೋಜನ. [illegible] ಬೇಕು—ಈವೊತ್ತೇ ಸದಸ್ಯರಾಗಿ, ಅಭಿಮಾನಿಗ[illegible] ನಮ್ಮನ್ನು ಹರಸಿ:

**ಸದಸ್ಯ ವಿವರ**

ಉದ್ಧಾರಕರು .. .. [illegible]
ಪ್ರದಾತೃಗಳು .. .. [illegible]
ಆಶ್ರಯದಾತರು .. .. [illegible]
ಸಹಾಯಕರು .. .. [illegible]
ಆಜೀವ ಸದಸ್ಯರು .. .. [illegible]
ಸಾಮಾನ್ಯ ಸದಸ್ಯರು (ಪತ್ರಿಕೆ ಸೇರಿ) ವರ್ಷವೊಂದಕ್ಕೆ .. .. [illegible]
ಸಾಮಾನ್ಯ ಸದಸ್ಯರು (ಪತ್ರಿಕೆಯಿಲ್ಲದೆ) ವರ್ಷವೊಂದಕ್ಕೆ .. .. [illegible]
ಅಭಿಮಾನಿಗಳು (ಹೆಂಗಸರು ಮತ್ತು ವಿದ್ಯಾರ್ಥಿಗಳು ಮಾತ್ರ) ವರ್ಷವೊಂದಕ್ಕೆ .. .. [illegible]

[ಕಾ[illegible] ಮುಂಡಲಿ ಒಪ್ಪಿದರೆ ಮೊದಲಿನ [illegible] ಚಂದಾ ಮೊಬಲಗುಗಳನ್ನು ಅನುಕೂಲವಾದ ಕಂತು[illegible] ಸಲ್ಲಿಸಬಹುದು.]

# THE QUARTERLY JOURNAL
OF THE
# KANNADA LITERARY ACADEMY

Vol. XXIII] APRIL–JUNE, 1938 No. 2


## CONTENTS IN BRIEF

I. **Torave Ramayaṇa : A Critical Survey**—*By Mr. K. Raja Rao, B.A., Bangalore.*

This is a prize-essay received in connection with the Bhaskara Rao Memorial Competition held by the Parishat in the year 1937. According to the writer, *Torave Rāmāyaṇa* was composed (about A.D. 1560–1600) by Narahari who is more commonly known by the title of '*Kumāra Vālmiki*'. It is an abridgement in Kannada of the *Vālmiki Rāmāyaṇa* in Sanskrit, and is written in the popular *Bhāmini Shatpadi* metre. *Kumāra Vālmiki's* narrative is simple and attractive and does not labour under heavy descriptions. The delineation of characters and situations is marked with understanding, brevity and precision. On the whole, the work is worthy of greater attention by the Kannada people than it is receiving now.

II. **Literature as a Spiritual Guide to Life**—*By Mr. S. S. Malawad, M.A., Professor of Kannada, Karnatak College, Dharwar.*

"Literature is not mere recreation; it is re-creation. The magic power of the word is such that it can work wonders. Such a powerful influence as that exerted by literature should be used for the good of the people. Ancient Kannada literature did not forget this great task, and the uplift of the mental, moral and spiritual nature of man was its ringing note throughout. If modern Kannada literature is to be beneficial to the people, it has to assume a different rôle; it must feed our heart, it must feed our brain, and it must feed our stomach."

III. **Literature during the Time of Sri Chikkadevaraja Wodeyar**—*By Mr. C. R. Srinivasa Iyengar, Channarayapatna.*

"The late Sri Chikkadevaraja Wodeyar was himself a poet and a scholar, besides being a patron of learning and the learned. His one desire was to spread spiritual knowledge among the masses, and that, he realised, was possible only through the language of the people. And, as a result, Kannada literature received a great impetus from the Maharaja. Many writers of note flourished under his patronage; among them may be specially mentioned Honnamma, a maid-servant of the Court and one of the very few women writers of the Kannada Country. Her chief work known as *Hadibadeya Dharma* ('The Ideals of a Dutiful Wife') is a unique piece of composition—sweet, lucid and appealing."

IV. **Fifth Spring Literary Festival at Bangalore : Welcome Speech**—*By Prof. B. M. Srikantia, M.A., B.L., Vice-President, Karnataka Sahitya Parishat.*

In welcoming the guests and visitors to the Fifth Session of the Spring Literary Festival held under the auspices of the Parishat (from 30th April to 3rd May 1938), Mr. Srikantia narrated how the Parishat which was started 22 years ago has been striving to justify its existence as the All-Karnataka Institution working for the advancement of Kannada language and literature as well as for the promotion of the cultural and linguistic unity of the Kannada country. He expressed the gratitude of the Parishat to Their Highnesses the Maharaja and Yuvaraja of Mysore for the liberal patronage extended by them to the Parishat and thought it appropriate to approach the Heads of Religious Institutions for help in the cause of Kannada literature as it had rendered great service in the propagation of all the Dharmas of the country in

the past. After paying a warm tribute of appreciation to *Rajakaryapravina Rao Bahadur* M. Shama Rao, M.A. who was to inaugurate the Festival, he dwelt upon the useful activities of the Parishat, *viz.*, the holding of Annual Conferences, the Spring Literary Festival and the Kannada *Habba*, the publication of a Quarterly Journal and the editing of valuable books, and arranging for periodical lectures in Kannada on literary and scientific subjects. He also referred to some of the new activities of the year and added that the Parishat's chief ambitions for the present were, the starting and conducting of classes for giving a course of lessons in Kannada and holding of examinations for the benefit of the illiterate, publication of a series of Kannada books and a Kannada Weekly mainly devoted to the propaganda of Kannada language, literature and culture and to news of the "Kannada World", and owning a printing-press. All these, he emphasized, would be vain dreams without generous help from philanthropic people, and he hoped that help would be forthcoming to a substantial extent.

**V. Fifth Spring Literary Festival at Bangalore: Women's Gathering: Opening Speech**—*By Sri. H. V. Seethamma* (*Mrs. H. V. Ramaswamy*), *Bangalore.*

"It is not only appropriate but necessary that women should take greater interest and more active part than at present in the cause of the language also, so that the boys and girls, the future citizens of the land, may imbibe a love for their mother-tongue. Let us, therefore, assume a more prominent part than men in worshipping *Mother Kannada* who is enshrined in this Temple, the Parishat."

**VI. Spring Literary Festival at Gadag: Opening Speech**—*By Dr. C. C. Hulkoti, District and Sessions Judge, Gadag.*

"The world is progressing at great speed, and with it Knowledge is growing. It is our foremost duty to make this knowledge reach the masses through Kannada, and it is highly praiseworthy that the Parishat has taken up this task of mass-education."

**VII. Celebration of the Birthday of His Highness the Maharaja of Mysore,** 8th June 1938, under the Presidentship of Mr. D. C. Subbarayappa, B.A., B.L., Retired Under Secretary to Government and Editor of the Parishat Journal.

**VIII. Editorial Notes:**

Prominence shown to Kannada in the Jamkhandi State by making the State language; Donation of Rs. 101 to the Parishat by the Raja Saheb of Jamkhandi; expression of gratitude to him for both these acts—Fourth Annual Conference of the Mysore State Vidyāśāla Paṇḍita Maṇḍala held in Mysore City (on 17th June 1938) under the Presidentship of *Arthaśāstra Viśārada Mahāmahōpādhyāya* Dr. R. Sama Sastri, B.A., Ph.D., and opened by *Rajamantrapravīna* S. P. Rajagopalachari, B.A., B.L., First Member of the Council to the Government of Mysore—Celebration of the Centenary of the birth of Bankim Chandra Chatterjee in the Parishat Hall under the Presidentship of Prof. B. M. Srikantia (on 30th June 1938); appreciation of the services of the late Mr. B. Venkatachar in translating into Kannada a number of novels of Bankim Chandra; acceptance of his portrait presented by Mr. B. Garudachar, B.A., B.L., Advocate, Shimoga. Condolence meeting held in the Parishat in honour of the late *Karnātaka Kaviratna* Mr. Hosakere Chidambaraiya and the unveiling of his portrait (on 2nd July 1938)—Justification for changing *Karṇātaka* (spelt with a cerebral *Ṇa*) into *Karnātaka* (with a dental *Na*)—Expression of condolences on the demise of Mr. P. Kishen Rao, well-known Vakil of Raichur, an ardent worker in the cause of Kannada and President of the Nizam Karnatak Parishat and *Rājasabhābhūshana* Diwan Bahadur Dr. Sir K. P. Puttanna Chetty, Kt., C.I.E., LL.D., a Sahāyaka Member of the Parishat, who was helping the Parishat in various ways and whose benefactions in the public cause amount to a sum of over Rs. 3 lakhs.

*Appendices*:—Report of the 22nd Annual General Body Meeting of the Parishat at Jamkhandi—Bhaskara Rao Memorial Essay Competition Rules.



1250-38 The Bangalore Press





## ವಿಷಯ ಸೂಚಿಕೆ





ಚಿತ್ರ: ದಿವಂಗತ ಡಾಕ್ಟರ್ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟರವರು, ಕೆಟಿ., ಸಿ.ಐ.ಇ., ಎಲ್‌ಎಲ್.ಡಿ.

ಉಪಪತ್ರಿಕೆಗಳು: (೧) ೨೪ನೆಯ ಸಕಲ ಸದಸ್ಯ (೨೨ನೆಯ ವಾರ್ಷಿಕ) ಅಧಿವೇಶನದ ವರದಿ, (೨) 'ಕನ್ನಡದ ಬಾವುಟ': ಪ್ರಕಟನೆ, (೩) ದಿವಂಗತ ಶ್ರೀ॥ ಇ. ಎ. ಭಾಸ್ಕರರಾಯರ ಜ್ಞಾಪಕ ಸ್ಪರ್ಧೆ, ೧೯೩೮: ನಿಯಮಗಳು.

# ವಿನಿಮಯ ಪತ್ರಿಕೆ ಮತ್ತು ಪ್ರಕಟನೆಗಳ ಪಟ್ಟಿ

**ತ್ರೈಮಾಸಿಕ ಪತ್ರಿಕೆಗಳು:**—೧. Journal of the Mythic Society. ೨. Journal of the Andhra Historical Research Society. ೩. Journal of the Bharata Itihasa Samshodhaka Mandala. ೪. Maharashtra Sahitya Parishat Patrika. ೫. The Karnatak Historical Review. ೬. Journal of the Annamalai University. ೭. Journal of the Bombay Branch of the Royal Asiatic Society. ೮. Indian Culture. ೯. Journal of the K. R. Cama Oriental Research Institute. ೧೦. Journal of Indian History. ೧೧. Journal of the International Mediterranean Association. ೧೨. Zeitschrift für Indologie und Iranistik. ೧೩. ಶ್ರೀಮನ್ ಮಹಾರಾಜರ ಸಂಸ್ಕೃತ ಮಹಾಪಾಠಶಾಲಾ ಪತ್ರಿಕಾ. ೧೪. ಪ್ರಾಚೀನ ಕರ್ನಾಟಕ. ೧೫. ಪ್ರಬುದ್ಧ ಕರ್ಣಾಟಕ. ೧೬. ವಂಗೀಯ ಸಾಹಿತ್ಯ ಪರಿಷತ್ಪತ್ರಿಕೆ. ೧೭. The Jaina Antiquary (ಜೈನ ಸಿದ್ಧಾಂತ ಭಾಸ್ಕರ). ೧೮. Hindustani. ೧೯. ಹಳ್ಳಿಯ ಆಳು. ೨೦. ...

**ದ್ವೈಮಾಸಿಕ ಪತ್ರಿಕೆಗಳು:**—೧. Journal of the Bombay University. ೨. ಆಂಧ್ರ ಸಾಹಿತ್ಯ ಪರಿಷತ್ ಪತ್ರಿಕೆ. ೩. ಶಿವಾನುಭವ. ೪. Bulletin of the Museum of Fine Arts.

**ಮಾಸ ಪತ್ರಿಕೆಗಳು:**—೧. The Mysore Economic Journal. ೨. Jain Gazette. ೩. The Indian P.E.N. ೪. ಅಧ್ಯಾತ್ಮ ಪ್ರಕಾಶ. ೫. ಆರೋಗ್ಯ ಚಂದ್ರಿಕೆ. ೬. ಜಯಕರ್ನಾಟಕ. ೭. ಮೈಸೂರು ಸಹಕಾರ ಪತ್ರಿಕೆ. ೮. ರಂಗಭೂಮಿ. ೯. ಸುಬೋಧ. ೧೦. ಸದ್ಬೋಧ ಚಂದ್ರಿಕೆ. ೧೧. ಮೈಸೂರು ವ್ಯವಸಾಯ ... ಸಂಘದ ಪತ್ರಿಕೆ. ೧೨. ಕಾದಂಬರೀ ಸಂಗ್ರಹ. ೧೩. ದೇಶೀಯ ವಿದ್ಯಾಶಾಲಾ ಪತ್ರಿಕೆ. ೧೪. ಮೈಸೂರು ಮಕ್ಕಳು. ೧೫. ಸದ್ಧರ್ಮದೀಪಿಕೆ. ೧೬. ಮಕ್ಕಳ ... ೧೭. ವಿವೇಕಾಭ್ಯುದಯ. ೧೮. ತ್ರಿವೇಣಿ. ೧೯. ಕತೆಗಾರ. ೨೦. ಭಾರತಿ. ೨೧. ... ಬಂಧು. ೨೨. ನಗುವ ನಂದ. ೨೩. ಭಾರತಿ (ತೆಲುಗು). ೨೪. ಕಥಾ... ೨೫. ವೀರಶೈವ ಚಂದ್ರಿಕೆ. ೨೬. ಸಂಸ್ಕೃತ ಸಾಹಿತ್ಯ ಪರಿಷತ್ಪತ್ರಿಕೆ. ೨೭. ಸದ್ಧ... ೨೮. ಹಂಸ. ೨೯. ವಿಮಾ ವಾಣಿಜ್ಯ. ೩೦. ವಿದ್ಯಾದಾಯಿನಿ. ೩೧. ವಿವಿಧ ... ವಿಸ್ತಾರ. ೩೨. ವಿಶ್ವವಾಣಿ. ೩೩. ದಿವ್ಯ ಜ್ಯೋತಿ. ೩೪. ಶರಣ ಸಾಹಿತ್ಯ. ೩೫. ಜಯ...

**ವಾರ ಪತ್ರಿಕೆಗಳು:**—೧. ರಾಜಹಂಸ. ೨. ಸ್ವದೇಶಾಭಿಮಾನಿ. ೩. ಕಂಠೀ... ೪. ರಾಷ್ಟ್ರಬಂಧು. ೫. ಕರ್ನಾಟಕ ವೈಭವ. ೬. ಶರಣ ಸಂದೇಶ. ೭. ಬಸವ... ೮. ಲೋಕಮತ. ೯. ಅರುಣೋದಯ. ೧೦. ಸಂಯುಕ್ತ ಕರ್ನಾಟಕ. ೧೧. ಕರ್ನಾ... ಬಂಧು. ೧೨. ಪ್ರಜಾಮತ. ೧೩. ಜನ್ಮಭೂಮಿ. ೧೪. ವಿಶ್ವಕರ್ಣಾಟಕ. ೧೫. ಅರ್ಥಸಾ... ಪತ್ರಿಕೆ. ೧೬. ವೃತ್ತಾಂತ ಪತ್ರಿಕೆ. ೧೭. ವಿಶ್ವಬಂಧು. ೧೮. ಉದಯ. ೧೯. ಕರ್ನಾ... ಟೈಮ್ಸ್. ೨೦. ತಾಯಿನಾಡು. ೨೧. ಪ್ರಭಾತ. ೨೨. ಮೈಸೂರು ಗೆಜೆಟ್. ೨೩. ನವಸಂದೇ...

**ದಿನ ಪತ್ರಿಕೆ:**—೧. ನವಜೀವನ.

**ಇತರ ಪ್ರಕಟನೆಗಳು:**—೧. ಇಂಡಿಯ ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೨. ಮೈಸೂರು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೩. ಹೈದರಾಬಾದ್ ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೪. ಜಯಕರ್ನಾಟಕ ಗ್ರಂಥಮಾಲೆ. ೫. ಮನೋಹರ ಗ್ರಂಥಮಾಲೆ. ೬. ವಿದ್ಯಾರಣ್ಯ ಗ್ರಂಥಮಾಲೆ. ೭. ಪ್ರೇಮ ಗ್ರಂಥಮಾಲೆ. ೮. Indiana. ೯. The Karana Brotherhood Annual.



ದಿವಂಗತ ಡಾಕ್ಟರ್ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟರವರು,
ಸಿ.ಐ.ಇ., ಎಲ್ ಎಲ್.ಡಿ.

ಪಡಿಯಚ್ಚು ಕೊಟ್ಟವರು : "ವಿಮಾ-ವಾಣಿಜ್ಯ"ದ ಸಂಪಾದಕರಾದ
ಶ್ರೀಮಾನ್ ಜೆ. ವಿ. ದೊಡ್ಡವೀರಪ್ಪನವರು.

# ತೊರವೆ ರಾಮಾಯಣದ ವಿಮರ್ಶೆ*

ಶ್ರೀಮಾನ್ ಕೆ. ರಾಜಾರಾಯರು, ಬಿ.ಎ., ಬೆಂಗಳೂರು

---

## ಮೊದಲ ಮಾತು

ಕರ್ನಾಟಕ ರಾಜ್ಯಲಕ್ಷ್ಮಿಯ ಧ್ವಜಚಿಹ್ನವಾದ ಗಂಡಭೇರುಂಡ ಪಕ್ಷಿಗೆ ಒಂದೇ ದೇಹವಾದರೂ ಎರಡು ಮುಖಗಳು ಹೇಗೆ ಇವೆಯೋ ಹಾಗೆಯೇ ಕರ್ನಾಟಕ ಕಾವ್ಯದೇವಿಗೂ ಎರಡು ಮುಖಗಳು. ಕನ್ನಡ ವಾಣಿಗೆ ಕಾವ್ಯವೇ ದೇಹ. ಧರ್ಮ, ಸಾಹಿತ್ಯ— ಈ ಎರಡೂ ಆಕೆಯ ಎರಡು ಮುಖಗಳು. ಪ್ರಾಚೀನ ಕಾಲದಿಂದ ಈಚೀಚಿನವರೆಗೂ ಬೆಳೆದುಬಂದಿರುವ ನಮ್ಮ ಕನ್ನಡ ಕಾವ್ಯಗಳನ್ನು ನೋಡಿದರೆ ಈ ಅಂಶವು ವ್ಯಕ್ತವಾಗುವುದು. ಆದುದರಿಂದಲೇ ಕರ್ನಾಟಕದಲ್ಲಿ ಯಾವ ಕಾಲ ದಲ್ಲಿ ಯಾವ ಧರ್ಮ ತಲೆಯೆತ್ತಿ ನಿಂತಿದ್ದಿತೋ ಆ ಧರ್ಮ ಆ ಕಾಲದ ಸಾಹಿತ್ಯ ವನ್ನು ತನ್ನ ದಾರಿಯಲ್ಲಿ ನಡಸಿಕೊಂಡುಹೋಗಿದೆ. ಕನ್ನಡ ವಾಣಿ ಯೌವನ ಸಂಪತ್ತನ್ನು ತಳೆದ ಕೂಡಲೆ ಆಗ ಕನ್ನಡ ನಾಡಿನಲ್ಲಿ ಪ್ರಬಲವಾಗಿದ್ದ ಜೈನಮತವು ಅವಳೊಡನೆ ಸಖ್ಯ ಬೆಳಸಿ 'ಪಂಪ ರಾಮಾಯಣ', 'ಪಂಪ ಭಾರತ'ಗಳಂತಹ ಮಹಾಕಾವ್ಯೋಪಜೀವಿತಗಳಾದ ಕನ್ನಡ ಕಾವ್ಯರತ್ನಗಳನ್ನು ಕನ್ನಡ ಲೋಕಕ್ಕೆ ಕೊಟ್ಟಿತು. ಜೈನಮತದ ಪ್ರಾಬಲ್ಯವು ತಗ್ಗಿದೊಡನೆ ವೀರಶೈವಮತವು ಅವಳ ಮೂಲಕ ಉತ್ತಮವಾದ ವಚನ, ರಗಳೆ, ಸಾಂಗತ್ಯ, ತ್ರಿಪದಿ ರೂಪಗಳ ಕಾವ್ಯಗಳು ಬೆಳಕಿಗೆ ಬರುವಂತೆ ಮಾಡಿತು. ಈ ಕಾಲದಲ್ಲಿ ಮಹಾಕಾವ್ಯಗಳ ಮನ್ನಣೆ ಬಹು ಕಡಮೆಯಾಯಿತಾದರೂ ಅದರ ವಾಸನೆ ಸಂಪೂರ್ಣವಾಗಿ ಅಳಿಸಿಹೋಗಿರಲಿಲ್ಲ. ಹೀಗೆ ನೀರಿಲ್ಲದೆ ಒಣಗಿ ಬೀಳುಬಿದ್ದಿದ್ದ ಸಮಾಜದಮೇಲೆ ಮಧ್ವ, ರಾಮಾನುಜರಂಥ ಮಹಾವ್ಯಕ್ತಿಗಳ ಜ್ಞಾನಪ್ರಭಾವವು ಹರಿದು, ಅದರ ಆಶ್ರಯದಲ್ಲಿ ಹಿಂದೆ ಜನರ ಮನಸ್ಸನ್ನು ಆಕರ್ಷಿಸಿದ್ದ ಮಹಾಕಾವ್ಯಗಳ ಪ್ರಭಾವದ ಬೀಜ ಮೊಳೆತು, ಬೆಳೆದು, ದೊಡ್ಡವಾದ ಎರಡು ಮಹಾವೃಕ್ಷಗಳೇ 'ಗದುಗಿನ ಭಾರತ', 'ತೊರವೆ ರಾಮಾಯಣ'ಗಳು. ಕುಮಾರವ್ಯಾಸನ ಕಾವ್ಯವು ದೊಡ್ಡ ಅರಳಿಯ ಮರದಂತೆ ವಿಶಾಲವಾಗಿ, ಗುಂಭವಾಗಿ, ಗಹನವಾಗಿ, ಅತ್ಯುನ್ನತವಾಗಿ ಬೆಳೆದ ಕಾವ್ಯರತ್ನ ವಾದರೆ, ಕುಮಾರವಾಲ್ಮೀಕಿಯ ಕಾವ್ಯವು ಅರಳಿಯ ಪಕ್ಕದಲ್ಲಿಯ ಬೇವಿನ ಮರದಂತೆ, ಅರಳಿಯ ನಲ್ಲೆಯಂತೆ, ಸಣ್ಣದಾಗಿ ಸೊಂಪಾಗಿ ಸುಂದರವಾಗಿ ಬೆಳೆದು, ಗೆಳೆಯನ ಆಶ್ರಯದಲ್ಲಿ ಅವನ ಹಾದಿಯಲ್ಲಿ ನಡೆದು, ಅವನ ಆನಂದದಲ್ಲಿ ತಾನೂ ನಲಿದು, ಅವನ ಸಹವಾಸದಿಂದ ಸ್ನೇಹದಿಂದ ತಾನೂ ಪುಷ್ಟಿಗೊಂಡು ಶೋಭಿಸುತ್ತಿರುವ ಕಾವ್ಯರತ್ನ. ಈ ಇಬ್ಬರು ಕವಿಗಳೂ ಭರತಖಂಡದ ಮಹಾಕಾವ್ಯ

---

* ೧೯೩೭ನೆಯ ಇಸವಿಯಲ್ಲಿ ಪರಿಷತ್ತು ಏರ್ಪಡಿಸಿದ್ದ ದಿವಂಗತ ಶ್ರೀ॥ ಇ. ಎ. ಭಾಸ್ಕರರಾಯರ ಜ್ಞಾಪಕ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದ ಪ್ರಬಂಧ.

ಲಲನೆಯರನ್ನು ನೋಡಿದವರು, ಒಲಿಸಿದವರು, ನುಡಿಸಿದವರು. ಆ ಲಲನೆಯರ ಜೀವನವನ್ನು ಹಾಗೆಯೇ ತಾವು ಕಂಡಂತೆ, ಸವಿದಂತೆ ಚಿತ್ರಿಸಿ, ಕನ್ನಡ ಲೋಕಕ್ಕೆ ಅವರ ಪರಿಚಯ ಮಾಡಿಕೊಟ್ಟಿದ್ದಾರೆ. 'ಪಂಚಮವೇದ'ವೆಂದು ಹೆಸರುಗೊಂಡ 'ಮಹಾಭಾರತ'ವನ್ನು ಕನ್ನಡಿಸಿದ ಕವಿ ದೊಡ್ಡವನು, ಹೆಚ್ಚು ಪ್ರತಿಭಾವಂತ ಪಂಡಿತ. ಮಹಾಕಾವ್ಯಗಳನ್ನು ಕನ್ನಡಿಸಿದ ಬ್ರಾಹ್ಮಣ ಕವಿಗಳಲ್ಲಿ ಇವನನ್ನು ಬಿಟ್ಟರೆ, ಬೇರೊಬ್ಬನ ಹೆಸರನ್ನು ಹೇಳಬಹುದಾದ ಕವಿ "ಕುಮಾರವಾಲ್ಮೀಕಿ."

## ಕವಿ: ಕವಿಚರಿತ್ರೆ, ಇತರ ಕೃತಿಗಳು ಮತ್ತು ಕಾಲ

'ಕುಮಾರವಾಲ್ಮೀಕಿ' ಎಂಬುದು 'ತೊರವೆ ರಾಮಾಯಣ'ವನ್ನು ಬರೆದ ಕವಿಯ ಬಿರುದೇ ಹೊರತು ಅವನ ಹೆಸರಲ್ಲ. ಈ ಬಿರುದನ್ನೂ ಕೂಡ ಯಾರೂ ಕೊಟ್ಟಂತೆ ತೋರುವುದಿಲ್ಲ. ಮಹಾಕವಿ ವಾಲ್ಮೀಕಿಯ ರಾಮಾಯಣ ಮಹಾಕಾವ್ಯವನ್ನು ಕನ್ನಡಿಸಿ ಸಂಗ್ರಹವಾಗಿ ಬರೆದುದರಿಂದ 'ಕುಮಾರವಾಲ್ಮೀಕಿ' ಎಂದು ತನ್ನನ್ನು ತಾನೇ ಕರೆದುಕೊಂಡಂತೆ ಕಾಣುತ್ತದೆ. ಈ ಕವಿಯ ಹೆಸರು ನರಹರಿ ಎಂದು. ಇವನು ಜಾತಿಯಲ್ಲಿ ಬ್ರಾಹ್ಮಣ. ಇವನ ಕಾಲಕ್ಕೆ ವಿಜಯನಗರ ರಾಜ್ಯವು ನಾಶವಾಗಿ ಕೆಲವು ಕಾಲವಾಗಿದ್ದುದರಿಂದ, ಕನ್ನಡಕ್ಕೆ ರಾಜಾಶ್ರಯವು ತಪ್ಪಿಹೋಗಿದ್ದಿತು. ಹಿಂದೆ 'ಕುಮಾರವ್ಯಾಸ' ಕವಿಗೆ ದೊರೆತಷ್ಟು ಪ್ರೋತ್ಸಾಹವು ಇವನಿಗೆ ದೊರೆತಿರಲಿಲ್ಲವೆಂದು ಊಹಿಸಬಹುದಾಗಿದೆ. ಅಂತೂ ಕನ್ನಡ ಕವಿಗಳು ವಿಜಯನಗರದ ಪತನಾನಂತರ ಚೆದರಿಹೋದರು. ಈ ನರಹರಿ ಕವಿಯ ಸ್ಥಳ ವಿಜಯನಗರಕ್ಕೆ ಉತ್ತರದಲ್ಲಿ ಸ್ವಲ್ಪ ದೂರದಲ್ಲಿರುವ ಸೋಲಾಪುರ ಜಿಲ್ಲೆಯ 'ತೊರವೆ' ಎಂಬ ಗ್ರಾಮ. ಈತನು ಅಲ್ಲಿಯ ದೇವರಾದ ನರಸಿಂಹನ ಅಂಕಿತದಲ್ಲಿ ಈ ಕಾವ್ಯವನ್ನು ಬರೆದಿದ್ದಾನೆ. ಈತನು ಬರೆದ ಈ ಗ್ರಂಥಕ್ಕೆ ಕವಿಯ ಗ್ರಾಮದ ಹೆಸರಿನಿಂದ 'ತೊರವೆ ರಾಮಾಯಣ'ವೆಂಬ ಹೆಸರು ರೂಢಿಯಾಗಿದೆ. 'ಕುಮಾರವಾಲ್ಮೀಕಿ' ಎಂಬ ಬಿರುದಲ್ಲದೆ ಈತನಿಗೆ 'ಕವಿರಾಜಹಂಸ' ಎಂಬ ಬಿರುದೂ ಇದ್ದಂತೆ ತೋರಿಬರುತ್ತದೆ. ಈತನು 'ತೊರವೆ ರಾಮಾಯಣ'ವೊಂದು ಮಾತ್ರವಲ್ಲದೆ 'ಐರಾವತ', 'ಮೈರಾವಣ ಕಾಳಗ' ಎಂಬ ಗ್ರಂಥಗಳನ್ನೂ ಬರೆದಿವನೆಂದು ಕವಿಚರಿತ್ರಕಾರರು ಹೇಳುತ್ತಾರೆ. ಆದರೆ ಈ ಎರಡು ಬೇರೆ ಕಾವ್ಯಗಳ ಶೈಲಿಯನ್ನೂ ರೀತಿಯನ್ನೂ ನೋಡಿದರೆ ಅವಕ್ಕೂ 'ತೊರವೆ ರಾಮಾಯಣ'ದ ಶೈಲಿ ರೀತಿಗಳಿಗೂ ಬಹಳ ವ್ಯತ್ಯಾಸ ತೋರಿಬರುತ್ತದೆ. ಆದ್ದರಿಂದ ಈ ಮೂರು ಗ್ರಂಥಗಳ ಕರ್ತೃವೂ ಒಬ್ಬನೇ ಎಂದು ಹೇಳುವುದು ಕಷ್ಟವಾಗುತ್ತದೆ. ಈ ಕವಿ ಸುಮಾರು ಕ್ರಿ.ಶ. ೧೫೬೦ರಿಂದ ೧೬೦೦ ಅಥವಾ ೧೬೧೦ — ಈ ಕಾಲದಲ್ಲಿ ಜೀವಿಸಿದ್ದನೆಂದು ಊಹಿಸಬಹುದಾಗಿದೆ. ಸುಮಾರು ೧೫೯೦ರಲ್ಲಿ ಈ 'ತೊರವೆ ರಾಮಾಯಣ'ವನ್ನು ಕವಿ ಬರೆದಿರಬೇಕೆಂದು ಕವಿಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ. ಈ ಕವಿಯ ವಿಚಾರವಾಗಿ ಇದಕ್ಕಿಂತ ಹೆಚ್ಚಾಗಿ ಇನ್ನಾವ ವಿಷಯವೂ ನಮಗೆ ಖಚಿತವಾಗಿ ತಿಳಿದುಬಂದಿಲ್ಲ.

## ಕವಿಯ ಸಾಮರ್ಥ್ಯ

ಕಾವ್ಯದ ಆರಂಭದಲ್ಲಿ ತಮ್ಮ ಕವಿತಾಶಕ್ತಿಯ ವಿಷಯವಾಗಿಯೂ ಕಾವ್ಯದ ಉತ್ಕೃಷ್ಟತೆಯ ವಿಷಯವಾಗಿಯೂ ಕೆಲವು ಹೊಗಳಿಕೆಯ ಪದ್ಯಗಳನ್ನು ಬರೆಯುವುದೂ, ಕುಕವಿನಿಂದೆಯನ್ನು ಮಾಡಿ ಕೆಲವು ಪದ್ಯಗಳನ್ನು ಬರೆಯುವುದೂ ನಮ್ಮ ಕವಿಗಳಿಗೆ ಹಿಂದಿನಿಂದ ಬಂದ ವಾಡಿಕೆಯಾಗಿದೆ. ಅದರಂತೆ, 'ಕುಮಾರ ವಾಲ್ಮೀಕಿ'ಯೂ ತನ್ನ ಕವಿತಾಸಾಮರ್ಥ್ಯವನ್ನು ಕುರಿತು ಹೀಗೆ ಹೇಳಿ ಕೊಂಡಿದ್ದಾನೆ:

ಪರರ ಬಗೆ ಪರರುಕ್ತಿ ಪರರು। ತ್ಕರುಷ ಪರರುನ್ನತಿಯ ಕೃತಿಯಪ
ಹರಣೆ ಪರರುಪಮಾನ ಪರರೊಡ್ಡವದ ಪರುಠವದ
ಹರಹು ಹೊಗದಗ್ಗಳಿಕೆ ಪದ ಸಂ। ಚರಣೆಯಲಿ ಲಿಪಿ ತಿರುಗಿ ನೋಡದ
ಬಿರುದು ಬೇರೆ ಕುಮಾರವಾಲ್ಮೀಕಿಯ ವಚೋಲಹರಿ

ಪರಕವಿಗಳಿಂದ ತೆಗೆದುಕೊಳ್ಳುವುದು ಹೋಗಲಿ, ಒಂದುಸಲ ಬರೆದುದನ್ನು ಇದು ಸರಿಯೇ ಅಲ್ಲವೇ ಎಂದು ಬರೆದ ಲಿಪಿಯ ಕಡೆ ತಿರುಗಿ ಕೂಡ ನೋಡದಂತೆ ಬರೆದಿರುವೆನೆಂದು ಹೇಳುತ್ತಾನೆ. ಆ ಮಾತು ಹಾಗಿರಲಿ. ಈ ಮೇಲಿನ ಪದ್ಯವನ್ನು 'ಕುಮಾರವ್ಯಾಸನ' ಅದೇ ಸಂದರ್ಭದ ಅದೇ ಬಗೆಯ ಪದ್ಯಕ್ಕೆ ಹೋಲಿಸಿನೋಡಿ ದರೆ, ಆಗ ನಮ್ಮ ಕವಿ ಆ ಕವಿಯನ್ನು ಹೇಗೆ ಅನುಸರಿಸಿ ಬರೆದಿದ್ದಾನೆ ಎನ್ನುವುದು ತಿಳಿಯುತ್ತದೆ. 'ಕುಮಾರವ್ಯಾಸ'ನ ಆ ಪದ್ಯ ಹೀಗಿದೆ:

ಹಲಗೆ ಬಳಪವ ಪಿಡಿಯದೊಂದ। ಗ್ಗಳಿಕೆ ಪದವಿಟ್ಟಳಿಸದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ
ಬಳಸಿ ಬರೆಯಲು ಕಂಠಪತ್ರದ। ವುಲುಹುಗೆಡದಗ್ಗಳಿಕೆಯೆಂಬೀ
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ

## ಕುಮಾರವ್ಯಾಸನ ಹಾದಿ

ಈ ಎರಡು ಪದ್ಯಗಳಲ್ಲಿಯೂ ಒಂದೇ ಸೊಗಸು, ಒಂದೇ ಠೀವಿ, ಒಂದೇ ಭಾವ. 'ಕುಮಾರವಾಲ್ಮೀಕಿ' 'ಕುಮಾರವ್ಯಾಸ'ನ ಹಾದಿಯಲ್ಲಿ ಬರೆದಿರುವನೆಂಬುದಕ್ಕೆ ಇದೊಂದೇ ಉದಾಹರಣೆ ಸಾಕು. 'ಕುಮಾರವಾಲ್ಮೀಕಿ'ಯು 'ಗದುಗಿನ ಭಾರತ' ವನ್ನು ಚೆನ್ನಾಗಿ ಓದಿದ್ದಾನೆ. ಓದಿ ಓದಿ, ಅದರ ಅಮೃತವನ್ನು ಸವಿದಿದ್ದಾನೆ, ಅದರಿಂದ ಸ್ಫೂರ್ತಿಗೊಂಡಿದ್ದಾನೆ, ಸ್ಫೂರ್ತಿಗೊಂಡು ಅದನ್ನು ಅನುಕರಿಸಿ, ಅನು ಸರಿಸಿ, ತನ್ನ ಕಾವ್ಯವನ್ನು ಬರೆದಿದ್ದಾನೆ. ಆ ಕಾವ್ಯ ನಮ್ಮ ಕವಿಯ ಪ್ರತಿಭಾಗ್ನಿಗೆ ಆಜ್ಯವನ್ನು ಹಾಕಿ, ಹೃದಯವನ್ನು ಕುದಿಸಿ, ಮನವನ್ನು ಕೆರಳಿಸಿ, ಕಾವ್ಯಪಾಕ ವನ್ನು ಇಳಿಸಿದೆ. ಕವಿ ಈ ಉಪಕಾರವನ್ನು ಸ್ಮರಿಸದೆ ಹೋಗಿಲ್ಲ. ನಮ್ಮ ಕವಿ ತನ್ನ ಸ್ನೇಹವನ್ನು ಹೀಗೆ ತೋರಿಸಿದ್ದಾನೆ:

ಸರಸವರ್ಣಕ ಕವಿಗಳೊಳು ಭಾ। ಸುರ ಕುಮಾರವ್ಯಾಸನೊಬ್ಬನು
ಪರಿಕಿಸುವೊಡಾನೊಬ್ಬ ಮಗುಳೆರಡನೆಯ ವರ್ಣಕಕೆ
ವರ ಕುಮಾರವ್ಯಾಸನೊಬ್ಬನು। ಎರಡನೆಯಲಾನೊಬ್ಬ ಮಿಕ್ಕಿನ
ಜಿರಡು ಕವಿಗಳ ಲೆಕ್ಕಿಸುವನೆ ಕುಮಾರವಾಲ್ಮೀಕಿ

'ಕುಮಾರವಾಲ್ಮೀಕಿ' ಮೇಲಿನ "ಪರರ ಬಗೆ ಪರರುಕ್ತಿ...." ಪದ್ಯದಲ್ಲಿನ ಮಾತುಗಳನ್ನು ಸುಮ್ಮನೆ ಹೇಳಿಕೊಂಡಿಲ್ಲ. ಆ ಹೊಗಳಿಕೆಯನ್ನು ಬಹು ಮಟ್ಟಿಗೆ 'ನಿಜ' ಎನ್ನಿಸಿದ್ದಾನೆ. 'ಕುಮಾರವ್ಯಾಸ'ನ ಕಾವ್ಯವು ದಾರಿ ತೋರಿಸಿಕೊಟ್ಟದ್ದರೂ ಕುರುಡನಂತೆ ಅವನು ಕರೆದುಕೊಂಡುಹೋದ ಧಾರಿಯಲ್ಲಿ ಹೋಗಿಲ್ಲ. ತನ್ನದೇ ಒಂದು ರೀತಿಯಲ್ಲಿ ನಡೆದುಹೋಗಿದ್ದಾನೆ. ನಡೆದಿರುವುದರಿಂದ ಇವನ ಶೈಲಿ ಗುಣದಲ್ಲಿ ಕಡಮೆಯಾಗಿ ಕಂಡುಬಂದರೂ ಅದು ಅವನ ಸ್ವಂತದ್ದಾಗಿದೆ. ತನ್ನ ವ್ಯಕ್ತಿತ್ವದ ಮುದ್ರೆಯನ್ನು ಅವನು ಮೇಲೆ ಒತ್ತಿದ್ದಾನೆ.

## ಕಾವ್ಯದ ಉತ್ಕೃಷ್ಟತೆ

ಕವಿ ತನ್ನ ಕಾವ್ಯದ ಉತ್ಕೃಷ್ಟತೆಯನ್ನು ಕೆಲವು ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ. ಅವುಗಳಲ್ಲಿ ಈ ಎರಡನ್ನು ಮುಖ್ಯವಾಗಿ ಹೇಳಬಹುದು:

ಸುಕವಿಗಳ ಸುಮ್ಮಾನ ಸೂರಿ। ಪ್ರಕರದಮಲಜ್ಞಾನ ಮುನಿಕರ
ಮುಕುರ ಗುಣಿಗಳ ಗೂಢನಿಧಿ ರಸಿಕರ ಸುಧಾಜಲಧಿ
ಅಕುಟಲರ ಮನಮೆಚ್ಚು ಸಿರಿ ಹರಿ। ಭಕುತರುಂ ಮಹದಚ್ಚು ಶಿವಸೇ
ವಕರ ಮೆಚ್ಚು ಕುಮಾರವಾಲ್ಮೀಕಿಯ ಪ್ರಬಂಧ ಕೃತಿ

ಪ್ರಿಯರಿಗಪ್ರಿಯರಿಗೆ ವಿವೇಕಾ। ಶ್ರಯರಿಗತಿಮೂರ್ಖರಿಗೆ ವಿಜ್ಞಾ
ನಿಯರಿಗತಿಜಾಣರಿಗೆ ಜಡರಿಗಸೂಯಭಾವರಿಗೆ
ನಯವಿದರಿಗಜ್ಞರಿಗೆ ಹರುಷೋ। ದಯದ ಸಂಪು ಕುಮಾರವಾಲ್ಮೀ
ಕಿಯ ಪ್ರಬಂಧ ಪ್ರೌಢತರ ಕವಿತಾ ಚಮತ್ಕಾರ

ಸ್ವಲ್ಪ ಒಳಹೊಕ್ಕು ನೋಡಿದರೆ, 'ಗದುಗಿನ ಭಾರತ'ದ ಪ್ರತಿಧ್ವನಿ ಇಲ್ಲಿಯೂ ಕೇಳಿ ಬರುತ್ತದೆ. ಕವಿ ತಾನು ಏನನ್ನೇ ಹೇಳಿಕೊಂಡಿರಲಿ, ಯಾವ ರೀತಿಯಲ್ಲಿ ಹೊಗಳಿಕೊಂಡಿರಲಿ, ಕಾವ್ಯದಲ್ಲಿ ತೋರಿಬರುವ ಅಸದೃಶವಾದ ಪದಮೈತ್ರಿಯೂ ವಾಕ್ಪ್ರವಾಹವೂ, ಹೃದಯಂಗಮವಾದ ಕಥಾನಿರೂಪಣಕ್ರಮವೂ ವಾಚಕರ ಮನಸ್ಸನ್ನು ಸೂರೆಮಾಡುವುವೆಂಬ ಸಂಗತಿ ನಿಜವಾದುದು. ವಾಚಕರ ಮನಸ್ಸು ಅತ್ತಿತ್ತ ತಿರುಗದೆ ಒಂದೇ ಓಟದಿಂದ ಓಡುತ್ತಿರುವ ಕಥೆಯನ್ನು ಅನುಸರಿಸಿಕೊಂಡು ಹೋಗುತ್ತದೆ. ಕಥೆಯನ್ನು ಬೇಗ ಬೇಗನೆ ಓಡಿಸಿಕೊಂಡು ಹೋಗುವುದರ ಜೊತೆಗೆ ವಾಚಕರನ್ನೂ ತನ್ನೊಡನೆ ಹಾಗೆಯೇ ಎಳೆದುಕೊಂಡುಹೋಗುವ ದೊಡ್ಡ ಗುಣವನ್ನು ನಾವು ಈ ಕವಿಯಲ್ಲಿ ಕಾಣಬಹುದು.

## ಕವಿಯ ಪಾಂಡಿತ್ಯ: ಉಪಕಾರ, ಕುಂದು

'ಕುಮಾರವಾಲ್ಮೀಕಿ' ರನ್ನ ಪಂಪರಂತೆ ಅಥವಾ 'ಕುಮಾರವ್ಯಾಸ'ನಂತೆ ದೊಡ್ಡ ಪಂಡಿತನಲ್ಲ. ಆದುದರಿಂದಲೇ ಅವನ ಪದಸಾಮಗ್ರಿಯೂ ಸಂ... ವಾದುದು. ಒಂದು ದೃಷ್ಟಿಯಿಂದ ಇದು ಕಾವ್ಯಕ್ಕೆ ಉಪಕಾರಕವಾಗಿರುವುದೆಂದು ಹೇಳಬಹುದು. ಇವನ ಕಾವ್ಯದಲ್ಲಿ ಕ್ಲಿಷ್ಟವಾದ, ಅರ್ಥಮಾಡಿಕೊಳ್ಳಲು ನಿಘಂಟು ವನ್ನು ತೆಗೆಯಬೇಕಾಗಿರುವ ಪದಗಳು ಬಹು ಕಡಮೆಯಾಗಿವೆ. ಅವನು ಹೇಳಿ...

ಮಾತು ಬಹು ಸುಲಭವಾಗಿ ಅರ್ಥವಾಗುತ್ತದೆ. ತಕ್ಕಮಟ್ಟಿಗೆ ಭಾಷಾಪರಿಚಯ ವಿರುವವರೆಲ್ಲರೂ ಈ ಕಾವ್ಯವನ್ನು ಓದಿ, ಕವಿಯ ಭಾವವನ್ನು ಸ್ಪಷ್ಟವಾಗಿ ತಿಳಿದು ಕೊಳ್ಳಬಹುದು. ಈ ಪಾಂಡಿತ್ಯಾಭಾವ ಕಾರಣದಿಂದಲೇ ಕಾವ್ಯವು ಶ್ಲೇಷಾ ಲಂಕಾರದ ತೊಡಕಿನಿಂದ ದೂರವಾಗಿರುವುದು. ಕಾವ್ಯದ ಮೊದಲಿನಿಂದ ಕೊನೆಯ ವರೆಗೆ ನೋಡಿದರೂ ಶ್ಲೇಷಾಲಂಕಾರವಿರುವ ಹತ್ತು ಪದ್ಯಗಳು ಕೂಡ ಸಿಗುವುದಿಲ್ಲ. ಮತ್ತು ಇದರಿಂದ ಕಾವ್ಯಕ್ಕೆ ಸಂಸ್ಕೃತದ ಹೊರೆ ಬಹಳವಾಗಿ ಕಡಮೆಯಾಗಿದೆ. ಆದರೆ ಇನ್ನೊಂದು ದೃಷ್ಟಿಯಿಂದ ಇದು ಕಾವ್ಯಕ್ಕೆ ಕುಂದನ್ನುಂಟುಮಾಡಿರು ವುದೆಂದು ಹೇಳಿದರೂ ಹೇಳಬಹುದಾಗಿದೆ. ಅಪರೂಪವಾಗಿ, ಈ ಪದಸಾಮಗ್ರಿಯ ಅಭಾವದಿಂದ, ಪದ್ಯಗಳ ನಡಗೆಯಲ್ಲಿ ತಡೆ ಬರುತ್ತದೆ. ಹೊತ್ತಿನಲ್ಲಿ ಸರಿಯಾದ ಮತ್ತು ಅನುಕೂಲವಾದ ಪದ ಸ್ಮರಣೆಗೆ ಬಾರದುದರಿಂದಲೋ ಏನೋ ಒಂದೊಂದು ಕಡೆ ಸುಲಭವಾಗಿ ಸೇರದ ಪದಗಳನ್ನು ಸೇರಿಸಿ, ಗಂಟು ಗಂಟಾದ ಸಮಾಸಗಳನ್ನು ಕೂಡಿಸಿ ಕವಿತೆಯನ್ನು ಹೆಣೆದಂತೆ ತೋರುತ್ತದೆ. ಯುದ್ಧಕಾಂಡದಲ್ಲಿ ಮೇಲಿಂದ ಮೇಲೆ ಬರುವ ಯುದ್ಧವರ್ಣನೆಗಳಲ್ಲಿ, ಈ ಅಭಾವದ ಪ್ರಭಾವವು ಚೆನ್ನಾಗಿ ಕಂಡು ಬಂದಿದೆ. ಆ ಯುದ್ಧವರ್ಣನೆಗಳಲ್ಲಿ ವೈವಿಧ್ಯವಿಲ್ಲದೆ, ಒಂದೇ ಬಗೆಯ ಪದಗಳು ಕಿವಿಯಮೇಲೆ ಬಿದ್ದು ಬಿದ್ದು ಬೇಸರವುಂಟಾಗುವಂತೆ ಮಾಡುತ್ತವೆ. ಯುದ್ಧ ವರ್ಣನೆಗಳೆಲ್ಲವೂ — ವ್ಯಕ್ತಿಗಳ ಹೆಸರುಗಳನ್ನು ತೆಗೆದುಹಾಕಿದರೆ — ಒಂದೇ ರೀತಿ ಯಾಗಿದ್ದು ಬೇಸರಹುಟ್ಟಿಸುವಂತೆ ಇವೆ.

### ಕಾವ್ಯ: ಬ್ರಾಹ್ಮಣ ಕವಿಗಳ ಮೊದಲ ರಾಮಾಯಣ

ಬ್ರಾಹ್ಮಣ ಕವಿಗಳು ಕನ್ನಡಿಸಿರುವ ರಾಮಾಯಣಗಳಲ್ಲಿ ಇದೇ ಮೊದಲ ನೆಯದು. ಮಹಾಕವಿ ವಾಲ್ಮೀಕಿ ಬರೆದುದನ್ನು ಅವನು ಬರೆದಂತೆಯೇ — ಸಣ್ಣ ಬದಲಾವಣೆಗಳನ್ನು ಬಿಟ್ಟು — ಕನ್ನಡಿಸಿದವರಲ್ಲಿ 'ಕುಮಾರವಾಲ್ಮೀಕಿ'ಯೇ ಮೊದಲನೆಯವನು. ಇವನ ಕಾಲಕ್ಕೆ ಬಹಳ ಹಿಂದೆ ಬರೆಯಲ್ಪಟ್ಟಿದ್ದ 'ಪಂಪ ರಾಮಾಯಣ', 'ಕುಮುದೇಂದು ರಾಮಾಯಣ' ಮೊದಲಾದ ರಾಮಾಯಣ ಕಾವ್ಯಗಳಿಗೆ ವಾಲ್ಮೀಕಿಯ ಕಥೆಯೇ ಮೂಲವಾಗಿದ್ದರೂ ಆ ಕವಿಗಳು ಧರ್ಮಸಂಕಟ ದಿಂದ ಬದ್ಧರಾಗಿ ಬರೆದು, ತಮ್ಮ ರಾಮಾಯಣದ ಕಥೆಯೇ ಬೇರೆ, ವಾಲ್ಮೀಕಿ ರಾಮಾಯಣದ ಕಥೆಯೇ ಬೇರೆ ಎಂದು ಹೇಳುವ ಮಟ್ಟಿಗೆ ಬದಲಾವಣೆಗಳನ್ನು ಮಾಡಿರುವುದನ್ನು ನಾವು ಕಾಣಬಹುದು. ಮೂಲಕಥೆಯ ಪರಿಚಯವನ್ನು ಮಾಡಿ ಕೊಳ್ಳಬೇಕು ಮಹಾಕವಿ ವಾಲ್ಮೀಕಿಯ ಹೃದಯವನ್ನರಿಯಬೇಕು ಎಂದು ಆಸೆ ಪಡುವವರು, ಸಂಕ್ಷೇಪವಾದರೂ, ಕುಮಾರವಾಲ್ಮೀಕಿಯ ಕಾವ್ಯವನ್ನೇ ಓದಬೇಕಾ ಗುತ್ತದೆ. ಮಿಕ್ಕ ರಾಮಾಯಣಗಳಲ್ಲಿ ವಾಲ್ಮೀಕಿಯ ಹಿರಿಮೆ ತಿಳಿಯುವುದಿಲ್ಲ.

### ಛಂದಸ್ಸು: ಭಾಮಿನೀ ಷಟ್ಪದಿ

'ತೊರವೆ ರಾಮಾಯಣ'ವು ಭಾಮಿನೀ ಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. 'ಕುಮಾರವ್ಯಾಸ' ಭಾರತವನ್ನು ಓದಿದಮೇಲೆ ಆ ಧಾಟಿಯೇ ಸರಿಯೆಂದು ಕವಿಗೆ

ತೋರಿರಬಹುದು. ಅಲ್ಲದೆ ಕನ್ನಡದಲ್ಲಿ ಭಾಮಿನೀ ಷಟ್ಪದಿಯ ಓಟದ ಸೊ... ಇನ್ನಾವ ಷಟ್ಪದಿ ವೃತ್ತಗಳಲ್ಲಿಯೂ ಕಾಣಬರುವುದಿಲ್ಲ. ಹೇಗಾದರೂ, ಕಾವ್ಯ... ಈ ಷಟ್ಪದಿ ಒಪ್ಪಿದೆ. ಕವಿ ಉತ್ತಮ ಧಾಟಿಯನ್ನೇ ಆರಿಸಿಕೊಂಡಿದ್ದಾನೆ; ಮ... ಆ ಧಾಟಿಯಲ್ಲಿ ತಕ್ಕಮಟ್ಟಿಗೆ ಪ್ರತಿಭೆಯನ್ನೂ ಕವಿತಾಶಕ್ತಿಯನ್ನೂ ತೋ... ಕೊಂಡಿದ್ದಾನೆ.

## ಕಾವ್ಯ ಪ್ರಮಾಣ

ಈ ಕಾವ್ಯದಲ್ಲಿ ಒಟ್ಟು ೧೧೨ ಸಂಧಿಗಳೂ, ೫,೦೭೯ ಪದ್ಯಗಳೂ ಇವೆ. ಇ... ಜೊತೆಗೆ ಕವಿ ಇತರ ಕಾವ್ಯಗಳನ್ನೂ ಬರೆದಿರುವುದು ನಿಜವಾದರೆ, 'ಕುಮಾ... ವಾಲ್ಮೀಕಿ' ಅಸಾಧಾರಣ ಕವಿತಾಶಕ್ತಿಯನ್ನು ಪ್ರದರ್ಶಿಸಿರುವನೆಂದು ಧಾ... ವಾಗಿ ಹೇಳಬಹುದು. ಈ ಸಂದರ್ಭದಲ್ಲಿ ಒಂದು ವಿಶೇಷಸಂಗತಿಯ ಕಡೆಗೆ ... ಮನಸ್ಸನ್ನು ಸೆಳೆಯುವುದು ಅಪ್ರಕೃತವಾಗಲಾರದು: 'ತೊರವೆ ರಾಮಾಯ... ದಲ್ಲಿ ಒಟ್ಟು ೫,೦೭೯ ಪದ್ಯಗಳಿದ್ದರೂ ಅರ್ಧಕ್ಕಿಂತ ಹೆಚ್ಚಾಗಿ, ಸುಮಾ... ೩,೯೦೦ ಪದ್ಯಗಳಷ್ಟು, ಯುದ್ಧಕಾಂಡಕ್ಕೇ ವಿನಿಯೋಗಿಸಲ್ಪಟ್ಟಿವೆ. ಯಾರಿಗಾದ... ಈ ಸಂಗತಿ ಸ್ವಲ್ಪ ಆಶ್ಚರ್ಯವನ್ನುಂಟುಮಾಡದೆ ಇರದು. ಕವಿಯ ಜೀ... ಚರಿತ್ರೆಯ ವಿಷಯವಾಗಿ ನಮಗೆ ಹೆಚ್ಚು ಸಂಗತಿಗಳು ತಿಳಿದಿದ್ದರೆ ಆಗ ಬಹು... ಇದಕ್ಕೆ ಕಾರಣ ತಿಳಿಯುತ್ತಿತ್ತೆಂದು ತೋರುತ್ತದೆ. ಬಾಲ, ಅಯೋಧ್ಯಾ... ಅರಣ್ಯ, ಕಿಷ್ಕಿಂಧ ಮತ್ತು ಸುಂದರ ಕಾಂಡಗಳ ಕಥೆಗೂ ಯುದ್ಧಕಾಂಡದ ಕಥೆ... ವಸ್ತುವಿನಲ್ಲಿ ಬಹಳ ವ್ಯತ್ಯಾಸವಿದೆ. ಮೊದಲ ಐದು ಕಾಂಡಗಳಲ್ಲಿ ಬರುವ ಕ... ಬಹಳ ಸ್ವಾರಸ್ಯವಾಗಿದೆ. ಕವಿ ತನ್ನ ಚಾತುರ್ಯ ಚಮತ್ಕಾರಗಳನ್ನು ಪ್ರದ... ಸಲು ಅನುಕೂಲವಾದ ಸನ್ನಿವೇಶಗಳೂ, ತನ್ನ ಜಾಣ್ಮೆಗೆ ತಕ್ಕಂತೆ ಒಂದೊಂ... ಸನ್ನಿವೇಶಕ್ಕೂ ಮೆರುಗುಕೊಟ್ಟು ಹೊಸ ಭಾವಗಳನ್ನು ತುಂಬಿ ಓದುಗನ್ನ... ಬೆರಗುಗೊಳಿಸಿ ಮುಗ್ಧರನ್ನಾಗಿ ಮಾಡಬಹುದಾದ ಸಂದರ್ಭಗಳೂ ಅನೇಕವಾ... ಬರುತ್ತವೆ. ಇಲ್ಲಿ ಕವಿ ಮಾಂತ್ರಿಕನಂತೆ ಓದುಗರನ್ನು ಕುಣಿಸಬಹುದು, ... ಬಹುದು, ಮುಗ್ಧರನ್ನಾಗಿ ಮಾಡಬಹುದು. ಆದರೆ ಯುದ್ಧಕಾಂಡದಲ್ಲಿ ಕವಿ... ಅವಕಾಶವಿಲ್ಲ. ಅಲ್ಲಿಯ ಸನ್ನಿವೇಶಗಳಲ್ಲೆಲ್ಲಾ 'ಯುದ್ಧ'ವೆಂಬುದೊಂ... ಮುಂದೆ ಬಂದು ಕಾಣುತ್ತದೆ. ಅಲ್ಲಿ ಕವಿಗೆ ಸಿಗುವ ವಿಷಯ ಯುದ್ಧ ಒಂದೇ... ಯುದ್ಧ ಒಂದನ್ನು ಎಷ್ಟುತಾನೇ ವರ್ಣಿಸಬಹುದು? ಅದರಲ್ಲಿಯೂ 'ಕುಮಾ... ವಾಲ್ಮೀಕಿ' ಅದನ್ನು ಲಕ್ಷ್ಮೀಶನಂತೆ ಅಥವಾ ಕುಮಾರವ್ಯಾಸನಂತೆ ಚಿತ್ರವಿಚಿತ್ರ... ವಾಗಿ ವರ್ಣಿಸಲು ಶಕ್ತಿಯನ್ನು ಪಡೆದುಕೊಂಡುಬಂದಿರಲಿಲ್ಲ. ಹೀಗಿದ್ದರೂ ಕ... ಯುದ್ಧಕಾಂಡವನ್ನು ಇಷ್ಟು ವಿಸ್ತಾರವಾಗಿ ಬರೆದು ಮಿಕ್ಕ ಕಾಂಡಗಳನ್ನು ಬಹು... ಸಂಕ್ಷೇಪವಮಾಡಿ ಬರೆಯುವುದಕ್ಕೆ ಏನೋ ಕಾರಣವಿದ್ದಿರಬೇಕು. ಅಲ್ಲದೆ ವಾಲ್ಮೀ... ಮಹಾಕವಿ ಹೇಳದಿರುವ ಕೆಲವು ಹೊಸ ಸಂಗತಿಗಳನ್ನು ಸೇರಿಸಿರುವುದೂ ವಿಶೇ... ವಾಗಿ ಈ ಯುದ್ಧಕಾಂಡದಲ್ಲಿಯೇ. ಇವುಗಳನ್ನೆಲ್ಲಾ ವಿಚಾರಮಾಡಿ ನೋಡಿದ...

ಎರಡು ವಿಚಾರಗಳು ಮನಸ್ಸಿಗೆ ಬರುತ್ತವೆ: ಮೊದಲನೆಯದಾಗಿ, ಆಗತಾನೆ ತಾಳಿಕೋಟೆ ಯುದ್ಧ ಮುಗಿದು ಅದರ ಭೀಕರತೆ ಜನರ ಮನಸ್ಸಿನಿಂದ ಮರೆತು ಹೋಗದಿದ್ದ ಆ ಕಾಲದಲ್ಲಿ ಬರೆದ ಕವಿಗೆ ಯುದ್ಧವನ್ನು ಹೆಚ್ಚಾಗಿ ವರ್ಣಿಸಬೇಕು, ಆ ವಿಚಾರವಾಗಿ ಕಂಡು ಕೇಳಿದ್ದ ನೆನಪುಗಳನ್ನು ಅದರಲ್ಲಿ ತುಂಬಬೇಕು ಎಂಬ ಮನೋವೃತ್ತಿ ಇರುವುದು ಸಾಧ್ಯ. ಅದರಂತೆ ಈ ಕವಿ ವಿಜಯನಗರದ ಪ್ರಜೆಗಳು ಪಟ್ಟ ಪಾಡನ್ನೂ ಸಹಿಸಿದ ಸಂಕಟವನ್ನೂ ಲಂಕೆಯ ವಿಚಾರವಾಗಿ ಹೇಳಿರಬಹುದು. ಎರಡನೆಯದಾಗಿ, ಕವಿ ರಾಮಾಯಣ ಕಾವ್ಯವನ್ನು ಇಷ್ಟು ದಿನಗಳಲ್ಲಿ ಬರೆಯುವೆ ನೆಂದು ಪಂಥ ತೊಟ್ಟು ಪ್ರಾರಂಭಿಸಿರಬಹುದೆಂದೂ, ಮೊದಲ ಐದು ಕಾಂಡ ಗಳನ್ನು ಬರೆಯುವವರೆಗೂ ಕಾಲವಿಳಂಬವಾದೀತೆಂಬ ಭಯದಿಂದ ಸಂಕ್ಷೇಪಿಸಿ ಬೇಗ ಬೇಗನೆ ಬರೆದುಕೊಂಡುಹೋಗಿರಬಹುದೆಂದೂ, ಯುದ್ಧಕಾಂಡದ ಹತ್ತಿರಕ್ಕೆ ಬಂದಮೇಲೆ ಇನ್ನೂ ಕಾಲವಿರುವುದೆಂದು ಅರಿತು ಅದನ್ನು ವಿಸ್ತರಿಸಿ ಹೊಸ ವಿಷಯಗಳನ್ನು ಸೇರಿಸಿ ಬರೆದಿರಬಹುದೆಂದೂ ಊಹಿಸಲು ಅವಕಾಶವಿದೆ. ಆದರೆ ಇದು ಬರಿಯ ಊಹೆ.

## ಅಧ್ಯಾತ್ಮರಾಮಾಯಣವನ್ನು ಅನುಸರಿಸಿರಬಹುದು

ಮಹಾಕವಿ ವಾಲ್ಮೀಕಿಯ ರಾಮಾಯಣದಲ್ಲಿ ನಾವು ನೋಡುವ ರಾಮನು ವೈಕುಂಠದ ಪಟ್ಟಕಟ್ಟಿಸಿಕೊಂಡಿರುವ ಪರಮಾತ್ಮನಲ್ಲ. ಸಾಮಾನ್ಯಮಾನವರ ಆದರ್ಶಪುರುಷ. ರಾಮನನ್ನು ಆದಿದೇವನನ್ನಾಗಿ ವರ್ಣಿಸಿರುವ ಕೆಲವು ಶ್ಲೋಕ ಗಳು ಆ ರಾಮಾಯಣದಲ್ಲಿ ಬಂದಿವೆ. ಆ ಮಾತುಗಳೂ ಸಹ ಮನುಷ್ಯಪಾತ್ರಗಳ ಬಾಯಲ್ಲಿ ಬರುವುದಿಲ್ಲ. ದೇವತೆಗಳ ಬಾಯಲ್ಲಿ ಬರುತ್ತವೆ. ಅಲ್ಲದೆ, ಆ ಭಾಗಗಳೂ ಕೂಡ ಪ್ರಕ್ಷಿಪ್ತವಾದವುಗಳೆಂದೂ, ವಾಲ್ಮೀಕಿ ರಾಮನನ್ನು ಆದರ್ಶಪುರುಷನನ್ನಾಗಿ ಚಿತ್ರಿಸಬೇಕೆಂಬ ಅಭಿಪ್ರಾಯವನ್ನು ದೃಷ್ಟಿಯಲ್ಲಿರಿಸಿಕೊಂಡೇ ಕಾವ್ಯವನ್ನು ಬರೆದ ನೆಂದೂ ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಮುಂದೆ ಬಂದ ಜನರು ಆ ಆದರ್ಶಪುರುಷನನ್ನು ಪರಮಾತ್ಮನನ್ನಾಗಿ ಮಾಡಿದ್ದಲ್ಲದೆ, ರಾಮಾಯಣದ ಒಟ್ಟು ಕಥೆಗೇ ಆಧ್ಯಾತ್ಮಿಕವಾದ ಒಂದು ವಿಶೇಷಾರ್ಥವನ್ನು ವಿರಚಿಸಿದರು. ಕುಮಾರವಾಲ್ಮೀಕಿಯ ರಾಮನೂ ಈ ವಿಶೇಷರೀತಿಯ ರಾಮನನ್ನೇ ಹೋಲು ತ್ತಾನೆ. ರಾಮನು ಹುಟ್ಟಿದುದು, “ನಾರಾಯಣನು ರೂಹಿಸಿದನನುಪಮ ರಾಮ ನಾಮದಲಿ.” ಈಶ್ವರನು ಗಿರಿಜೆಗೆ ರಾಮನಾಮದ ಮಹತ್ವವನ್ನು ಹೇಳುವಾಗ “ಗಿರಿಜೆ ಕೇಳು ಸಹಸ್ರನಾಮದ ಸಿರಿ ಕಣಾ ರಘುರಾಮಚಂದ್ರನ ಪರಮ ಮಂಗಳ ನಾಮ ನಿರುಪಮ ನಿಗಮ ವಿಶ್ರಾಮ”—ಎಂದು ಹೇಳಿದ್ದಾನೆ. ವಿಭೀಷಣನು ರಾವಣನನ್ನು ಬಿಟ್ಟು ತನ್ನ ನಾಲ್ವರು ಮಂತ್ರಿಗಳೊಡನೆ ರಾಮನ ಬಳಿಗೆ ಬಂದುದು “ರಾಮನನು ಓಲಗಿಪ ಚಾತುರ್ವಿಧದ ಪುರುಷಾರ್ಥದಂದದಲಿ.” ರಾವಣನೂ ಕೂಡ, “ರಘುನಾಥ ಲಕ್ಷ್ಮೀವಲ್ಲಭನು ತಾನೆಂಬುದನು ತಾ ಬಲ್ಲೆ” ಎಂದು ಮಂಡೋದರಿಗೆ ಹೇಳುತ್ತಾನೆ. ವಾಲಿ ಸಾಯುವ ಕಾಲದಲ್ಲಿಯೂ ಮತ್ತು ರಾವಣನು

ಸಾಯುವ ಕಾಲದಲ್ಲಿಯೂ ಅವರಿಗೆ ರಾಮನು ವಿಶ್ವರೂಪವನ್ನು ತೋರಿಸುತ್ತಾನೆ. ಇದರಿಂದ ಅವರು ತೃಪ್ತಿಹೊಂದಿ, ಅವನನ್ನು 'ವಿಶ್ವರೂಪಾತ್ಮಕ'ನೆಂದು ಹೊಗಳಿ, ಪ್ರಾರ್ಥಿಸಿ ಪ್ರಾಣಬಿಡುತ್ತಾರೆ. ಅಲ್ಲದೆ ಸಮುದ್ರರಾಜನು ತಾನು ರಾಮಬಾಣದಿಂದ ಕ್ಷೋಭೆಗೊಂಡ ಸಮಯದಲ್ಲಿ ರಾಮನನ್ನು ಈ ರೀತಿ ಸ್ತುತಿಸಿದ್ದಾನೆ:

ಪ್ರಣವರೂಪ ಸುರೂಪ ನಿರ್ಗುಣ । ಗುಣ ನಿತಾಂತ ಕೃತಾಂತ ನಸಿತಾ
ಪ್ರಣಯ ಮಾಯಾ ಪ್ರಕೃತಿ ರಹಿತಧ್ವಾಂತ ಲಯಶೂನ್ಯ
ಅಣುಮಹತ್ಪರಿಪೂರ್ಣ ಚಂದ್ರಾ । ರುಣ ಹುತಾಶನ ತೇಜ ರಿಪು ರಾ
ವಣ ವಧಾ ಸಂಭೂತ ಕಾರಣ ಕಾಯಬೇಕೆಂದ

ವಿಶ್ವತೋಮುಖ ವಿಶ್ವಲೋಚನ । ವಿಶ್ವವಿಶ್ರುತ ವಿಶ್ವತೋ ಭುಜ
ವಿಶ್ವವಿಗ್ರಹ ವಿಶ್ವಪಾದ ಸವಿಶ್ವ ವಿಶ್ವಪತಿ
ವಿಶ್ವಚೇತನ ವಿಶ್ವಭಾವನ । ವಿಶ್ವಗತ ವಿಶ್ವೇಶ ಈಶ್ವರ
ವಿಶ್ವ ವಿಶ್ವಾತ್ಮಕ ಜಡಾತ್ಮಕ ಕಾಯಬೇಕೆಂದ

ಇವುಗಳ ಅರ್ಥವನ್ನೂ ಭಾವವನ್ನೂ ವಿಚಾರಮಾಡಿದರೆ ಕವಿ 'ಅಧ್ಯಾತ್ಮ ರಾಮಾಯಣ'ವನ್ನು ಓದಿ ಅದನ್ನು ಅನುಸರಿಸಿ ಬರೆದಿರುವನೆಂದು ಹೇಳುವುದಕ್ಕೆ ಕಾರಣಗಳು ಸಿಕ್ಕುತ್ತವೆ. ಇಲ್ಲಿ ರಾಮನ ಪಾತ್ರವನ್ನು ಮಾತ್ರ ಕುರಿತು ಹೇಳಿದ್ದರೂ, ಸೀತೆ ಹನುಮಂತ, ಲಕ್ಷ್ಮಣ ಇವರ ವಿಷಯವಾಗಿ ಕವಿ ಆಧ್ಯಾತ್ಮಿಕ ರೀತಿಯಲ್ಲಿ ಹೇಳಿರುವ ಉದಾಹರಣೆಗಳನ್ನೂ ಕೊಡಬಹುದೆಂಬುದನ್ನು ಮರೆಯಬಾರದು. ಕಥೆಯನ್ನು ಸಂಗ್ರಹಿಸಿ ಬರೆದಿರುವ ಕಾರಣದಿಂದಲೂ ಮತ್ತು ಅದರ ಪಾತ್ರಗಳನ್ನು ಆಧ್ಯಾತ್ಮಿಕ ದೃಷ್ಟಿಯಿಂದ ಚಿತ್ರಿಸಿರುವ ಕಾರಣದಿಂದಲೂ, ಕವಿ 'ಅಧ್ಯಾತ್ಮ ರಾಮಾಯಣ'ದ ಭಾವವನ್ನು ಅಳವಡಿಸಿಕೊಂಡಿರಬಹುದೆಂದು ಹೇಳಬಹುದಾಗಿದೆ. ಅಥವಾ ಈ ಕವಿಯ ಕಾಲಕ್ಕೆ ರಾಮನನ್ನು ದೇವರೆಂದು ಭಾವಿಸಿ ಪೂಜಿಸುತ್ತಿದ್ದುದರಿಂದ ಆ ಅರ್ಥವನ್ನಿಟ್ಟು ಕವಿ ಬರೆದಿರಬಹುದೆಂದೂ ಹೇಳಬಹುದು.

## ಕಥೆಯ ನಡಗೆ; ಅಚ್ಚುಕಟ್ಟು

'ತೊರವೆ ರಾಮಾಯಣ'ದ ಕಥೆಯ ನಡಗೆ ಗೌರವಸ್ಥ ಹಿರಿಮನೆತನದ ಕುಲವಧುವಿನ ನಡಗೆಯಂತೆ ಗಂಭೀರವಾಗಿದೆ. ಕವಿಯು ಗಮನ ಉಪಕಥೆಗಳೆಂಬ ಅಕ್ಕಪಕ್ಕದ ಸಂದಿಗೊಂದಿಗಳ ಕಡೆಗೆ ತಿರುಗದೆ ನೇರವಾಗಿ ನಡೆಯುತ್ತದೆ. ಸಮಗ್ರ ರಾಮಾಯಣವನ್ನು ಬರೆಯುವ ಅವಸರದಲ್ಲಿ ಕವಿಗೆ ಹೆಚ್ಚು ವಿವರಗಳನ್ನು ತುಂಬುವುದಕ್ಕೆ ಅವಕಾಶವಿಲ್ಲ. ಮೊದಲ ಐದು ಕಾಂಡಗಳಲ್ಲಿಯಂತೂ ಕಥೆ ಬಹು ಜಾಗ್ರತೆಯಾಗಿ ಮುಂದುವರಿಯುತ್ತದೆ. ನಿರ್ವಾಹವಿಲ್ಲದ ಕಡೆ ಹೇಳಬೇಕಾದ ಉಪಕಥೆಗಳನ್ನು ಸೂಕ್ಷ್ಮವಾಗಿ ತಿಳಿಸಿ, ಕವಿ ಮುಂದೆ ಹೊರಡುತ್ತಾನೆ. ಅಹಲ್ಯೆಯ ಕಥೆಯಿಂದ ರಾಮಾಯಣದ ಕಥೆಗಾಗಲಿ ರಾಮನ ಪಾತ್ರ ಪೋಷಣೆಗಾಗಲಿ ಹೆಚ್ಚು ಉಪಯೋಗವಿಲ್ಲವೆಂಬುದನ್ನು ಕವಿ ತಿಳಿದಿದ್ದಾನೆ. ಅದಕ್ಕಾಗಿಯೇ ಆ ಕಥೆಯನ್ನು "ಪೂರ್ವದಲಿ ಗೌತಮನೆಂಬ ಮುನಿಪನ.... ಸತಿಗೆ ಮನವಿಕ್ಕಿದನು ಸುರನಾಥ.... ಸಂಭೋಗದಲಿ ಸಿಲುಕಿದನಿಂದ್ರ.... ಮುನಿಶಾಪ[ದಲಿ].... ಕೆಟ್ಟುದು ಪುರುಷತನವಿಂದ್ರ

ಗಹಲ್ಯಾದೇವಿ ಶಿಲೆಯಾಗಿ ಧರಿಸಿದಳು ನಿಜತನುವ''—ಇಷ್ಟು ಸಂಕ್ಷೇಪವಾಗಿ ಸ್ಪಷ್ಟವಾಗಿ ಹೇಳಿದ್ದಾನೆ. ಈ ರೀತಿಯ ಉತ್ತಮ ಬರವಣಿಗೆ ಋಷ್ಯಶೃಂಗೋಪಾಖ್ಯಾನ ಜಯಂತೋಪಾಖ್ಯಾನ ಮೊದಲಾದ ಸಂದರ್ಭಗಳಲ್ಲಿಯೂ ಕಾಣುತ್ತದೆ. ಇತರ ಕವಿಗಳು ಒಂದೆರಡು ಸಂಧಿಗಳಲ್ಲಿ ಬರೆಯುವಷ್ಟನ್ನು ನಾಲ್ಕು ಪಂಕ್ತಿಗಳಲ್ಲಿ ಬರೆಯುವುದನ್ನು ನೋಡಿದರೆ, ಕವಿ ತನ್ನ ಗುರಿ ಏನು, ಉಪಕಥೆಗಳಿಗೆ ಕೊಡಬೇಕಾದ ಪ್ರಾಮುಖ್ಯತೆ ಎಷ್ಟು, ಇವನ್ನೆಲ್ಲಾ ಯೋಚಿಸಿ ಬರೆದಿರುವನೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಅಲ್ಲದೆ ಒಟ್ಟು ಕಥೆಯನ್ನು ಹೇಳುವುದರಲ್ಲಿಯೂ, ಸಂಕ್ಷೇಪಿಸಿ ಬರೆಯುವುದರಲ್ಲಿಯೂ ಕವಿ ತನ್ನ ಬುದ್ಧಿವಂತಿಕೆಯನ್ನು ತೋರಿಸಿಕೊಂಡಿದ್ದಾನೆ. ವಾಲ್ಮೀಕಿ ವಿವರಿಸಿ ಹೇಳುವ ಎಷ್ಟೋ ವಿಷಯಗಳನ್ನು ಬಹು ಕೌಶಲದಿಂದ ಕ್ರೋಢೀಕರಿಸಿ, ಬರಿಯ ಒಂದೆರಡು ಮಾತುಗಳಲ್ಲಿ ಕಾವ್ಯಕ್ಕೆ ಸರಿಹೋಗುವಂತೆಯೂ, ಆಯಾ ಸನ್ನಿವೇಶಗಳ ಮಹತ್ವವೂ ಪಾತ್ರಗಳ ವ್ಯಕ್ತಿಸ್ವರೂಪವೂ ಚೆನ್ನಾಗಿ ಸ್ಫುರಿಸುವಂತೆಯೂ, ಮೂಲಗ್ರಂಥದ ಆಶಯವು ಕೆಡದಂತೆಯೂ ಮೂಲ ರೇಖೆಗಳನ್ನು ಮಾತ್ರ ಎಳೆದಿರುವನು. ಇದರಿಂದ ಕಥೆಯ ನಡಗೆಗೆ ಸ್ವಲ್ಪವೂ ಅಡ್ಡಿ ಬಾರದೆ ಕಥಾ ಸಂವಿಧಾನದಲ್ಲಿ ಒಂದು ಅಚ್ಚುಕಟ್ಟು ಕಾಣಬರುತ್ತದೆ. ವಿಶೇಷ ವರ್ಣನೆಗಳೂ ಅಲಂಕಾರ ಭಾರವೂ ಇಲ್ಲದಿರುವುದರಿಂದ ಕಥಾನಿರೂಪಣೆಗೆ ಒಂದು ಮೆರುಗು ಬಂದಿದೆ. ಕಥೆ 'ಮುಂದೇನು' ಎಂಬ ಕುತೂಹಲವನ್ನು ಹುಟ್ಟಿಸಿ, ಅದಕ್ಕೆ ಉತ್ತರವಾಗಿ ಮುಂದೆಯೇ ಒಂದರಮೇಲೊಂದು ಕಥಾಚಿತ್ರಗಳನ್ನು ವರ್ಣಿಸುತ್ತದೆ. ಓದುತ್ತ ಓದುತ್ತ, ಕಣ್ಣಿಗೂ ಮನಸ್ಸಿಗೂ ಆನಂದವುಂಟಾಗಿ, ಕಥೆಯನ್ನು ಅನುಸರಿಸುತ್ತ ಅನುಸರಿಸುತ್ತ ನಮ್ಮನ್ನೇ ನಾವು ಮರೆಯುತ್ತೇವೆ.

## ವರ್ಣನೆ

'ತೊರವೆ ರಾಮಾಯಣ'ದಲ್ಲಿ ಬರುವ ವರ್ಣನಾಭಾಗಗಳು ಬಹು ಸ್ವಲ್ಪ. ಹಾಗೆ ಅಪರೂಪವಾಗಿ ಬರುವುವೂ ಕೂಡ ಬಹು ಸ್ವಾಭಾವಿಕವಾಗಿಯೂ ಭಾವಪೂರ್ಣವಾಗಿಯೂ ಇರುತ್ತವೆ. ಗಣಿಕೆಯರನ್ನು ಕುರಿತ ಈ ಮೂರು ಪದ್ಯಗಳಲ್ಲಿ, ಕವಿ ಗಣಿಕಾಜನಸಹಜವಾದ ಗುಣವಿಶೇಷಗಳನ್ನು ಹೇಗೆ ತುಂಬಿರುವನೆಂಬುದನ್ನು ಕಾಣಬಹುದು:

ಸತಿಸುತರ ಪಿತೃಮಾತೃಗಳ ಸಂ। ಗತರ ಸದ್ವಂಶಾಭಿಮಾನವ
ನತಿಗಮಿಸಿ ಮಕರಧ್ವಜನ ಮಾಯೆಯನು ನೆಲೆಗೊಳಿಸಿ
ಚತುರ ಪುರುಷ ಚತುಷ್ಟಯವ ಸಂ। ತತಿ ನಿಯಾಮಕ ವೃತ್ತಿಗೊಡರಿಸು
ವತಿ ಮನದ ಚಪಲೆಯರು ಮೋಹಿತರರಸ ಕೇಳೆಂದಾ

ಸರಸ ಸೂರುಳು ಗನ್ನಗರುವಿಕೆ। ಗರಗರಿಕೆ ಹುಸಿಸುಸುಳು ವೈಸಿಕ
ಮುರುಹು ಮುದ್ದು ವಿನೋದ ಠಕ್ಕುಪಚಾರ ಬಿರಿಮುಳಿಸು
ಹುರುಡು ಜಾಣುವೆ ಜಾಳವಣೆ ಚ। ಪ್ಪರಣೆ ವಂಚನೆ ನೇಹವಂಬೀ
ಪರಿಪರಿಯ ಮಾಯೆಗಳ ಮಹಿಳಾಜನ ವಿರಾಜಿಸಿತು

ಸೋಟದಲಿ ಮಾತಾಡಿ ಹುಬ್ಬಿನ । ಬೇಟದಲಿ ಬೀಳ್ಕೊಡಿ ಕಲೆಗಳ
ಕೂಟದಲಿ ಕೀಳ್ಪಡಿಸಿ ಸರ್ವಸ್ವವನು ನೆರೆಕವರಿ
ಗೋಟಿಗೊಳಿಸುವ ಅಬಲೆಯರ ಬ । ಲ್ಲಾಟವಿಕ ಬಹುವಿಧದ ಮಾಯೆಯು
ಬೇಟಕಾರ್ತಿಯರೊಪ್ಪಿದರು ನರನಾಥ ಕೇಳೆಂದ

ವರ್ಷಋತು ಬಂದುದು ಹೀಗೆಂದು ಕವಿ ವರ್ಣಿಸಿದ್ದಾನೆ:

ತೊಟ್ಟುದೋ ನಭಕವಚವನು ನೆಲ । ಕಟ್ಟಿ ಬಿಗಿದರೊ ಸುರರು ಸಿಂಪಿಡಿ
ದುಟ್ಟಳೋ ಜಲದಾಗಮಸ್ತ್ರೀ ನೀಲಮಯ ಪಟವ
ಮುಟ್ಟಮರಕತ ಶಿಲೆಯ ನೀಲದ । ಬೆಟ್ಟದಿರವೆಂಬಂತೆ ಜಂಪಳ
ವಿಟ್ಟು ಜರೆದುದು ಕಾರ್ಮುಗಿಲು ಕತ್ತರಿಸೆ ಕುಂಭಿನಿಯ

ಬೆಸುವ ಮೇಘದ ಕಾಳಿಕೆಯ ಖಂ । ಡಿಸುವ ಮಿಂಚಿನ ಸಂಚರದ ಸಂ
ಧಿಸುವ ಸಿಡಿಲಿನ ಭರದಿ ನೆಲಕೊಗುವಾಲಿಕಲ್ಲುಗಳ
ಬೆಸವಳೆಯು ಬಿರುವಳೆಯು ಬೆದರ್ವಳೆ । ಬಿಸಿಲುವಳೆ ಸಿರಿಸೋನೆ ಸೇಡಿದ
ಘುಸಣಿ ಮಳೆಯುಲಿ ಗಾಸಿಯಾದುದು ಜಗದ ಜನನಿಕರ

ನಭಕ್ಕೆ ಕವಚವನ್ನು ತೊಡಿಸಿದಂತೆ ಕಾರ್ಮುಗಿಲು ಪ್ರಸರಿಸಿದುದು, ಆ ಕಾರ್ಮೋಡ ಕಪ್ಪನ್ನು ಖಂಡಿಸುವ ಮಿಂಚಿನ ಸಂಚಾರ, ಸಿಡಿಲನ್ನೂ ಆಲಿಕಲ್ಲುಗಳನ್ನೂ ಬೀರುತ್ತಾ ಬರುತ್ತಿರುವ ಬಿರುವಳೆ, ಬೆದರ್ವಳೆ, ಬಿಸಿಲುವಳೆ, ಸಿರಿಸೋನೆ— ಇತ್ಯಾದಿ ವಿವಿಧ ಜಾತಿಯ ಮಳೆಗಳು— ಇವೆಲ್ಲಾ ಎಷ್ಟು ಚೆನ್ನಾಗಿ ವರ್ಣಿತವಾಗಿವೆ!

ಲಂಕೆ ಉರಿದುದನ್ನು ಕವಿ ಹೀಗೆ ವರ್ಣಿಸಿದ್ದಾನೆ:

ಭುಗಿಭುಗಿಲು ಭುಗಿಲೆಂದು ಧಗಧಗ । ಧಗಿಲು ಧಗಿಲೆಂದೊದರಿ ತುದಿನಾ
ಲಗೆಗಳನು ನೀಡಿದುದು ನಿಖಿಳಾಮರ ಪುರಂಗಳಿಗೆ
ಛಿಳಿಛಿಳಿ ಧ್ವನಿ ಛಟಛಟಾಕೃತಿ । ಘುಳುಘುಳು ಸ್ವನ ಘನಶಿಖಾ ಸಂ
ಮಿಳಿತ ಧೂಮಧ್ವಾನ ಧಗಧಗ ಧಗಿಲು ಭುಗಿಲೆಂದು

ಭಾವಕ್ಕನುಗುಣವಾದ ಪದವಿನ್ಯಾಸವನ್ನು ನಾವು ಇಲ್ಲಿ ಕಾಣಬಹುದು. ಲಂಕೆ ಹೀಗೆ ಉರಿಯುತ್ತಿದ್ದುದನ್ನು ನೋಡಿದರೆ,

ಪರವಧೂ ವ್ಯಸನಿಗಳ ಭಂಗವು । ನರಕಭಾಜನವೆಂದು ನೆರೆ ಧಿ
ಕ್ಕರಿಸಿ ದಶಕಂಧರನ ನಗರಾಂಗನೆ ವಿರಾಗದಲಿ
ಪರಮ ಪ್ರಾಯಶ್ಚಿತ್ತವಂಗೀ । ಕರಿಸಿ ಹೊಗಲುದ್ಯೋಗಿಸಿದ ನಿ
ರ್ಧರದ ನಿಡುಗಿಚ್ಚಿನವೊಲಿರ್ದುದು ದಹನ ರಿಪುಪುರದ

ಎಷ್ಟು ದೊಡ್ಡ ಭಾವ! ಎಂತಹ ನೀತಿ!

ಸ್ವಯಂವರ ಮಂಟಪದಲ್ಲಿ "ಸ್ಮರಕರಾಗ್ರ ಸ್ಫುರಿತ ಚಾಪ ಕಲಾಪ ಶರಪ್ರ ಮಾನಿದೇವತೆ"ಯಂತೆ ಶೃಂಗಾರಗೊಂಡುಬಂದ ಸೀತೆಯ ಸೌಂದರ್ಯವನ್ನು ಕವಿ ಈ ಒಂದು ಪದ್ಯದಲ್ಲಿ ಹೇಳಿದ್ದಾನೆ:

ಹೊಳೆ ಹೊಳೆವ ತನುಕಾಂತಿಯುಲಿ ಗಜ । ಗಲಿಸಿದುವು ಹೊಂದೊಡವುಗಳು ಥ
ಳಿಸಿದುವು ಮುತ್ತುಗಳು ದಂತಪ್ರಭೆಯ ಲಹರಿಯಲಿ
ಸುಲಲಿತಾಧರರಾಗದಿಂದು । ಜ್ವಲಿಸಿದುವು ಮಾಣಿಕ್ಯಚಯವಾ
ರಳವು ಹೊಗಳುವೊಡಬುಜಗಂಧಿಯ ವಿಪುಳ ವಿಭ್ರಮವ

ತನುಕಾಂತಿ-ಹೊಂದೊಡವು, ಮುತ್ತು-ದಂತಪ್ರಭೆ, ಅಧರರಾಗ-ಮಾಣಿಕ್ಯ— ಇವುಗಳಿಗಿರುವ ವರ್ಣಸ್ನೇಹವನ್ನು ಕವಿ ಎಷ್ಟು ಚೆನ್ನಾಗಿ ಉಪಯೋಗಿಸಿ ಕೊಂಡಿದ್ದಾನೆ!

## ವ್ಯಕ್ತಿ ಚಿತ್ರ

ಒಂದು ವ್ಯಕ್ತಿಯ ಚಿತ್ರವನ್ನು ಅಥವಾ ಒಂದು ಸನ್ನಿವೇಶದ ಚಿತ್ರವನ್ನು ಕೊಡುವುದರಲ್ಲಿ, 'ತೊರವೆ ರಾಮಾಯಣ'ದ ಪದ್ಯಗಳು ಮತ್ತಾವ ಉತ್ತಮ ಕಾವ್ಯಗಳಿಗೂ ಗುಣದಲ್ಲಿ ಕಡಮೆಯಾಗಿಲ್ಲ. ಋಷ್ಯಶೃಂಗನ ಜೀವನ ರೀತಿ ಯನ್ನೆಲ್ಲಾ ಕವಿ ಈ ಒಂದೇ ಒಂದು ಪದ್ಯದಲ್ಲಿ ಸಂಗ್ರಹಿಸಿ ಚಿತ್ರಿಸಿದ್ದಾನೆ:

ಆಟವೇ ಮೃಗಗಣದೊಡನೆ ಸವಿ। ಯೂಟವೇ ವನಕಂದಫಲ ತಂ
ಬೇಟವೇ ಕಂಜಾಕ್ಷ ಕಾಮಾರಿಗಳ ಭಜನೆಯಲಿ
ಕೂಟವೇ ಯೋಗಾಂಗನೆಯ ಸರಿ। ಸಾಟಿಯಲ್ಲಿಹ ಋಷ್ಯಶೃಂಗನ
ನಾಟವಿಕ ಕಾಮಿನಿಯರ್ಕೈದಿದರರಸ ಕೇಳೆಂದ

ಎಷ್ಟು ವಿಷಯಗಳನ್ನು ಎಷ್ಟು ಸುಲಭವಾಗಿ ಎಷ್ಟು ಅಡಕವಾಗಿ ಕವಿ ಬರೆದಿದ್ದಾನೆ! ರಾಮ ಸೀತೆಯರು ವನವಾಸದ ಮೊದಮೊದಲಲ್ಲಿ, 'ವನವಿಹಾರೋದ್ಯೋಗ ಕೇಳೀ ಜನಿತ ಮಾನಸರಾಗಿ', 'ಸೊಗಸಿನ ಸರಸಿಗಿಳಿದುದು' ಹೀಗೆ:

## ಸನ್ನಿವೇಶದ ಚಿತ್ರ

ಚರಣ ಜಾನು ಕಟಿಪ್ರಮಾಣಾಂ।ತರದಿಯಿಳಿದರು ನೀರೊಳುರೆ ಮ
ತ್ಸರಿಸಿದರು ಪ್ರಣಯಪ್ರತಾಪದಿನೊಬ್ಬರೊಬ್ಬರಲಿ
ಅರಸಿಯರಸನಮೇಲೆ ರಘುಕುಲ। ದರಸನರಸಿಯಮೇಲೆ ಹಿಮಸೀ
ಕರಕದಂಬಕ ಸೊಗಸೆ ಸೂಸಿದರಾ ಹಿಮೋದಕವ

ಮೊದಲು ಚರಣ, ಆಮೇಲೆ ಜಾನು, ಆಮೇಲೆ ಕಟ ಹೀಗೆ ಮೆಟ್ಟಲು ಮೆಟ್ಟಲಂತೆ ನೀರಿನಲ್ಲಿ ಇಳಿದದ್ದು, ಆಮೇಲೆ ಪ್ರಣಯಪ್ರತಾಪದಿಂದ ಒಬ್ಬರೊಬ್ಬರಮೇಲೆ ಮತ್ಸರಿಸಿದ್ದು, ಅನಂತರ ಒಬ್ಬೊಬ್ಬರೂ ಇನ್ನೊಬ್ಬರಮೇಲೆ ಹಿಮೋದಕವನ್ನು ಸೂಸಿದ್ದು— ಇವೆಲ್ಲವೂ ಎಷ್ಟು ಸ್ವಾಭಾವಿಕವಾಗಿವೆ! ಎದುರಿಗೆ ನಡೆದಂತೆಯೇ ಭಾಸವಾಗುತ್ತದೆ. ಚಿತ್ರ ಕಣ್ಣಿಗೆ ಕಟ್ಟಿ ನಿಲ್ಲುತ್ತದೆ. ಅಲ್ಲದೆ ಪ್ರಣಯಪ್ರತಾಪ, ಮತ್ಸರ, ಹಿಮೋದಕ— ಈ ಮಾತುಗಳು ಎಷ್ಟು ಭಾವಪೂರ್ಣವಾಗಿವೆ! ಚೆಲ್ವಿನ ಗಣಿಯಾದ ಮಂಡೋದರಿಯ ರೂಪವನ್ನು ಕವಿ ಬರಿಯ ಮಾತುಗಳಲ್ಲಿ ವರ್ಣಿಸು ವುದಕ್ಕೆ ಹೋಗದೆ ಒಂದು ರೂಪಕದಲ್ಲಿ ಹೇಳಿ ಮುಂದೆ ಹೋಗಿದ್ದಾನೆ:

ಹರನ ಹಣೆಗಣ್ಣಿನ ಮಹಾನಲ। ದುರಿಯ ಹೊಯ್ಲಲ್ಲಿ ಸಾಯಲಾರದೆ
ಪುರುಷತನವನು ಬಿಟ್ಟು ಮಂಡೋದರಿಯ ರೂಪಕವ
ಧರಿಸಿದನೊ ಕಂದರ್ಪನೆನೆ ಸಿಂ।ಗರದ ಸಾರೋದಯದ ಸೊಬಗಿನ
ಸುರನದಿಯ ಮೌಕ್ತಿಕದವೊಲು ಮೆರೆದಿದ್ದಳಾಕಾಂತೆ

ಕುಂಭಕರ್ಣನು ಮಲಗಿ ನಿದ್ರಿಸುತ್ತಿದ್ದಾಗ ಹನುಮಂತನಿಗೆ ಅವನು ಹೇಗೆ ಕಾಣಿಸಿದನೆಂಬುದನ್ನೂ ಸಹ ಕವಿ ಈ ರೀತಿಯಲ್ಲಿಯೇ ವರ್ಣಿಸಿದ್ದಾನೆ:

ಜಗದ ಕೊಲೆಗೆಲಸದಲಿ ಬಳಲಿಕೆ । ಬಿಗಿದ ನಿದ್ರೆಯು ಭೈರವನೊ ರತಿ
ಯೊಗಡಿಕೆಯ ವಿಶ್ರಮ ಸುಷುಪ್ತಿಯು ಲಯಕೃತಾಂತಕನೊ
ಉಗಿಸಿ ನೀರನು ಭಾರಿಸಿದು ವೈ। ದೆಗೆದ ಮುಗಿಲಿನ ಮೂಲಮೂರ್ತಿಯೊ
ವಿಗಡ ರಕ್ಕಸನೋ ಮಹಾದೇವೆನುತ ಬೆರಗಾದ

## ಭಾವಚಿತ್ರಗಳ ಸೊಗಸು

ರಾವಣನ ವಂಶದಲ್ಲಿ ವಿಭೀಷಣನು ಹುಟ್ಟಿದುದು:

ಖಳರೊಳಗೆ ಸಜ್ಜನನು ಹಾಲಾ। ಹಲದೊಳಗೆ ಸುಧೆ ಕಾಮರಂಗಳ
ಹಳುವದಲಿ ಹರಿಚಂದನವು ಶಿಖಿಯೊಳಗೆ ಸೀತಳವು
ಕಲುಗಳೊಳು ನಿಜ ಪರುಷ ಜನಿಸುವು। ದಿಳೆಗೆ ಚಿತ್ರವಲಾ....

ಎನ್ನುವಂತೆ.

ರಾಮನ ಮುದ್ರಿಕೆಯುಂಗುರವನ್ನು ಕಂಡಾಗ ಸೀತೆಯ ಸಂತೋಷ ಹೀಗಿತ್ತು:

ತರಣಿ ಬಿಂಬವ ತೋರಿಕೆಯು ತಾ। ವರೆಯವೊಲು ಹೆರೆಗಂಡು ಓಗ್ಗುವ
ಶರನಿಧಿಯವೊಲು ಸಾರ್ದ ಸಿರಿಯು ದರಿದ್ರನಂದದಲಿ
ಪರಮ ತತ್ತ್ವದ ನಿಲುಕಡೆಯ ಸಂ। ದರುಶನದ ಸುಜ್ಞಾನಿಯವೊಲು
ಬ್ಬರದ ಹರುಷದಲಬಲೆ ಹೋಂಪುಳಿಯೋದಳಡಿಗಡಿಗೆ

ಪುಂಖಾನುಪುಂಖವಾಗಿ ಬರುತ್ತಿದ್ದ ರಾಮಬಾಣಗಳು

ಖಚರಿಯರ ಹೂಮುಡಿಗೆ ಸುರಪನ। ಶಚಿಯ ಮುಖ ಸಾರಸಕೆ ರುದ್ರನ
ಕಚದ ಗಂಗಾಂಬುಧಿಗೆ ಸರಿಸಿಜಭವನ ಗದ್ದುಗೆಗೆ
ಪ್ರಚುರ ದಿಗ್ವನಿತಾಬ್ಜ ಕುಟ್ಮಲ। ಕುಚಗಳಿಗೆ ಮೊಗಚುವ ಶಿಳೀಮುಖ
ನಿಚಯವೆನಲಡರಿದುವು....

## ಸಂಕ್ಷಿಪ್ತ ವರ್ಣನೆಯ ಹಿರಿಮೆ

ಈ ಮೇಲಿನ ಪದ್ಯಗಳಲ್ಲಿ ಕವಿ ಉಪಮಾನದ ಮಾಲೆಯನ್ನೇ ಹೆಣೆದಿದ್ದಾನೆ. ಹಾಗೆ ಒಂದೊಂದು ಉಪಮಾನವೂ ಒಂದೊಂದು ಚಿತ್ರವನ್ನು ತರುತ್ತವೆ. ಮನೋಹರವಾದುದು ಮುಂದೆ ಬಂದು ನಿಲ್ಲುವ ಭಾವಚಿತ್ರಗಳ ಸೊಗಸು ಮನಸ್ಸಿನಲ್ಲಿ ಮೂಡಿ, ಚಿತ್ರದಮೇಲೆ ಚಿತ್ರಗಳು, ಭಾವದಮೇಲೆ ಭಾವಗಳು ಮನಸ್ಸಿನಲ್ಲಿ ಮೂಡಿ, ಕವಿಯ ಅನುಭವ ಓದುಗರ ಹೃದಯವನ್ನು ಮುಟ್ಟುತ್ತದೆ. ಇವಲ್ಲದೆ ಮೇಲಿನ ಪದ್ಯಗಳಲ್ಲಿ ಗಮನಿಸಬೇಕಾದ ಇನ್ನು ಕೆಲವು ಉತ್ತಮ ಗುಣಗಳೂ ಇರುವುವು. ಅವು ಆ ವರ್ಣನೆಗಳ ಸಂಕ್ಷಿಪ್ತತೆ, ಆ ಸಂಕ್ಷಿಪ್ತ ವರ್ಣನೆಗಳಲ್ಲಿಯೂ ತೋರಿ ಬರುವ ಅರ್ಥಬಾಹುಳ್ಯ ಮತ್ತು ಇತರ ಕವಿಗಳು ಹತ್ತಾರು ಪದ್ಯಗಳನ್ನು ಬರೆದು ವಿವರಿಸುವ ವಿಷಯಗಳನ್ನು ಒಂದು ಅಥವಾ ಎರಡು ಪದ್ಯಗಳಲ್ಲಿ ಚಿತ್ತಾಕರ್ಷಕ ಭಾವಪೂರ್ಣವಾಗಿ ಆ ಚಿತ್ರ ಕಣ್ಣಿಗೆ ಕಟ್ಟುವಂತೆ ಹೇಳಬಲ್ಲ ಕವಿಯ ಜಾಣ್ಮೆ. ರಾಜಾ ರವಿವರ್ಮರು ವಿವಿಧ ಬಣ್ಣ ಕುಂಚಗಳಿಂದ ದಟ್ಟಪುಷ್ಟವಾದ ಮೂರ್ತಿಗಳನ್ನು ಚಿತ್ರಿಸಿದರೆ, ಮೈಸೂರಿನ ಶ್ರೀ॥ ವೆಂಕಟಪ್ಪನವರು ಕೆಲವು ಸಣ್ಣ ರೇಖೆಗಳಿಂದ ಮನೋಮೋಹಕವಾದ ಹೆಚ್ಚು ಭಾವಯುಕ್ತವಾದ ಸುಂದರ ಮೂರ್ತಿಗಳನ್ನು

ಚಿತ್ರಿಸಬಲ್ಲರು. ಇತರರು ಹತ್ತಾರು ಪದ್ಯಗಳಲ್ಲಿ ನೇಯುವ ಚಿತ್ರವನ್ನು ಅಷ್ಟೇ ಭಾವಪೂರ್ಣವಾಗಿ ಒಂದು ಪದ್ಯದಲ್ಲಿ ನೇಯುವುದು ಒಂದು ಹಿರಿಮೆಯೇ ಸರಿ. 'ಕುಮಾರವಾಲ್ಮೀಕಿ'ಯಲ್ಲಿ ಈ ಬಗೆಯ ಹಿರಿಮೆಯನ್ನು ಕಾಣುವಹಾಗೆ ಇತರ ಅನೇಕ ಕವಿಗಳಲ್ಲಿ ನಾವು ಕಾಣಲಾರೆವು.

## ಶೈಲಿ

'ತೊರವೆ ರಾಮಾಯಣದ' ಶೈಲಿ ಬಹು ಸರಳವಾದುದು. ಹಿಂದೆ ಸೂಚಿಸಿರುವಂತೆ ಈ ಕಾವ್ಯದಲ್ಲಿ ಬರುವ ಪದ್ಯಗಳ ಅರ್ಥವನ್ನಾಗಲಿ ಭಾವವನ್ನಾಗಲಿ ಗ್ರಹಿಸುವುದಕ್ಕೆ ಕಷ್ಟಪಡಬೇಕಾಗಿಲ್ಲ. ನಿಘಂಟುವನ್ನು ಹುಡುಕುವ ಶ್ರಮಕ್ಕೆ ಕೈ ಹಾಕಬೇಕಾಗಿಲ್ಲ. ಒಂದುಸಲ ಓದಿದ ಮಾತ್ರದಲ್ಲಿ ಆ ಮಾತುಗಳ ಸಂಪೂರ್ಣ ಅಭಿಪ್ರಾಯವು ಮನಸ್ಸಿಗೆ ತಟ್ಟುತ್ತದೆ. ಶೈಲಿ ಇಷ್ಟು ಸುಲಭವಾಗಿರುವುದಕ್ಕೆ ಕಾರಣ ಕಾವ್ಯವು ಅಲಂಕಾರ ಕವಿಸಮಯಾದಿ ತೊಡಕುಗಳಿಂದ ದೂರವಾಗಿರುವುದು. ಇದೊಂದು ದೊಡ್ಡ ಗುಣವೇ ಸರಿ. ಇವನ ಹಿಂದಿನ ಕವಿಗಳು ಪಾಂಡಿತ್ಯದ ಹುಚ್ಚು ಹೊಳೆಗೆ ಸಿಕ್ಕಿದ ಹುಲ್ಲುಕಡ್ಡಿಯಂತೆ, ಅದರ ಪ್ರವಾಹಕ್ಕೆ ಸಿಲುಕಿ, ಪಾಡು ಪಟ್ಟಿದ್ದಾರೆ. ಔಚಿತ್ಯವಿರಲಿ ಇಲ್ಲದಿರಲಿ, ಉಪಮಾನೋಪಮೇಯಗಳು ಬರಬೇಕು, ಶ್ಲೇಷೆ ವಿರೋಧಾಭಾಸಗಳು ಬರಬೇಕು, ಅತಿಶಯೋಕ್ತಿ ಅರ್ಥಾಂತರನ್ಯಾಸಗಳು ಬರಬೇಕು ಎಂಬ ಮೋಹಕ್ಕೆ ಬಲಿಬಿದ್ದು ಕಾವ್ಯವನ್ನು ಗಂಟು ಗಂಟಾಗಿ ಹೆಣೆದಿದ್ದಾರೆ. ಆದರೆ ಕುಮಾರವಾಲ್ಮೀಕಿ ಈ ವಿಷಯದಲ್ಲಿ ಸಂಯಮಿ. ಅಲಂಕಾರಗಳ ಹೊರೆ ತನ್ನನ್ನೂ ತನ್ನ ಕಥೆಯನ್ನೂ ಕುಗ್ಗಿಸದಂತೆ ಬಿಗಿಹಿಡಿದಿದ್ದಾನೆ. ಪಾಂಡಿತ್ಯದ ಹುಚ್ಚಿನಿಂದ, ಕವಿಸಮಯಾದಿ ಚಮತ್ಕಾರದಿಂದ ದೊಂಬರ ಕುಣಿತದಂತೆ ತನ್ನ ಕಾವ್ಯವನ್ನು ಕುಣಿಸಿಲ್ಲ. ಎಂದರೆ ಕವಿಗೆ ಆ ಬಗೆಯ ಕವಿತೆಯನ್ನು ಬರೆಯುವುದಕ್ಕೆ ಬರುವುದಿಲ್ಲವೆಂಬ ಅರ್ಥಮಾಡಕೂಡದು. ಬಹು ಅಪರೂಪವಾಗಿ, ಒಟ್ಟು ಕಾವ್ಯದಲ್ಲಿ, ೫,೧೦೦ ಪದ್ಯಗಳಲ್ಲಿ, ಎರಡೋ ಅಥವಾ ಮೂರೋ ಪೂರ್ಣ ಶಬ್ದಾಲಂಕಾರದಿಂದ ಕೂಡಿರುವ ಪದ್ಯಗಳು ಸಿಗುತ್ತವೆ. ಅದಕ್ಕೆ ಒಂದು ಉದಾಹರಣೆ ಕೊಡಬಹುದು :

> ಪದ್ಮಗಂಧಿಯ ಪದ್ಮವದನೆಯ । ಪದ್ಮಸದ್ಮನಿವಾಸನೆಯ ಪದ
> ಪದ್ಮ ಕರಪದ್ಮಂಗಳೊಪ್ಪುವ ಪದ್ಮಲೋಚನೆಯ
> ಪದ್ಮಜಾಂಬಕಿ ಪದ್ಮಿನಿಯ ಹೃ।ತ್ಪದ್ಮದೊಳು ರಘುರಾಮಚಂದ್ರನ
> ಪದ್ಮಪಾದವ ನೆನೆವ ಸೀತೆಯು ಕಂಡನಾ ಹನುಮ

ಇಂಥ ಶಬ್ದಾಲಂಕಾರದ ಪದ್ಯಗಳು ಎಷ್ಟು ಅಪರೂಪವೋ ಅವುಗಳ ಸೊಗಸೂ ಅಷ್ಟು ಶ್ಲಾಘ್ಯ. ಸೀತೆಯ ನೆನಪು ಬಂದಾಗ, ಕವಿಗೆ ಪದ್ಮದ ನೆನಪು ಬರುವುದೂ ಸಹಜವೆ. ಏಕೆಂದರೆ, ಅವಳ ಮೈಗಂಪು, ಮುಖ, ಕಣ್ಣು, ಕೈ, ಕಾಲು ಯಾವುದನ್ನು ನೆನೆದರೂ ಪದ್ಮದ ನೆನಪಾಗುವಂತಿದೆ. ಪದ್ಮ-ಸೀತೆಯರ ಸಂಬಂಧವು ಅಷ್ಟು ನಿಕಟವಾದುದು. ಕವಿ ಜನರಿಗೆ ಸೀತೆಯ ನೆನಪನ್ನು ಮಾಡಿಕೊಡಬೇಕಾದರೆ

ಪದ್ಮರ ನೆನಪನ್ನೇ ಮಾಡಿಕೊಡಬೇಕು. ಮುಖ್ಯವಾಗಿ ಕವಿ ಪಂಡಿತರ ಕವಿಯಲ್ಲ, ಪಾಮರರ ಕವಿ. ಅವರಿಗಾಗಿಯೇ ಅವನು ಕಾವ್ಯ ಬರೆದಿರುವುದು.

ಕುಮಾರವಾಲ್ಮೀಕಿಯ ಶೈಲಿಯಲ್ಲಿರುವ ಮೃದುತ್ವ, ಲಾಲಿತ್ಯ ಮತ್ತು ಮಾಧುರ್ಯಗಳನ್ನು ಅರಿಯಬೇಕಾದರೆ, ಅವನು ಕೊಡುವ ಹೋಲಿಕೆಗಳ ಸಹಜತೆ ಸಾಧುತೆಗಳನ್ನು ಪರೀಕ್ಷಿಸಬೇಕಾದರೆ, ಆ ಹೋಲಿಕೆಗಳು ಒಂದು ವ್ಯಕ್ತಿಚಿತ್ರವನ್ನು ಆ ವ್ಯಕ್ತಿಯ ಮನೋಧರ್ಮವನ್ನೂ ಹೇಗೆ ಚಿತ್ರಿಸಬಲ್ಲವೆಂಬ ಜಾಣ್ಮೆಯನ್ನು ಅರಿಯ ಬೇಕಾದರೆ, ಒಂದು ಸಣ್ಣ ಮಾತಿನಲ್ಲಿ ಬಿಟ್ಟದಷ್ಟು ಭಾವವನ್ನು ಹೇಗೆ ತುಂಬಬಹುದೆ ನೆಂಬುದನ್ನು ತಿಳಿಯಬೇಕಾದರೆ, ಅವನು ಉಪಯೋಗಿಸುವ ವಿಶೇಷಣಗಳಲ್ಲಿ ಅಡಗಿಸಿರುವ ಭಾವ, ಮುಂದಣ ಕಥಾ ಸೂಚನೆ— ಇವುಗಳ ಚಮತ್ಕಾರವನ್ನು ನೋಡಬೇಕಾದರೆ, ಒಟ್ಟಿನಲ್ಲಿ ಕವಿಯ ಕವಿತಾಸಾಮರ್ಥ್ಯವನ್ನೂ ಪದಪ್ರಯೋಗ ಚಾತುರ್ಯವನ್ನೂ ಕಂಡುಕೊಳ್ಳಬೇಕಾದರೆ, ಕಾವ್ಯವನ್ನೇ ಸಮಗ್ರವಾಗಿ ಓದ ಬೇಕಾಗುವುದು. ಆದರೂ ಕೆಳಗಿನ ಕೆಲವು ಉದಾಹರಣೆಗಳಿಂದ ಕವಿಯ ಕವಿತಾ ಸಾಮರ್ಥ್ಯವನ್ನು ಅರಿಯಬಹುದಾಗಿದೆ.

ರಾಮನು ಸ್ವಯಂವರದಲ್ಲಿ ಬಿಲ್ಲನ್ನು ಮುರಿದುದು, ''ಎಳೆಯ ಕಬ್ಬಿನ ಕೋಲ,ವನಕರಿ ಕಳಭ ಕರದಲಿ ಮುರಿವವೊಲು''; ಪರಶುರಾಮನು ರಾಮನನ್ನು ಎದುರಿಸಿದ್ದು, ''ತರಣಿಯನು ತುಸವೆಂದು ತುಂಡದಲರೆವ ರಾಹುವ ತಾರೆ ತನಗೆ ತರುಬಿ ನಿಲುವವೊಲಾಯ್ತು....ಸಾಗರವ ಸರಸಿಯು ಸೆಣಸುವಂತಾಯ್ತು''; ರಾಮನನ್ನು ಕಾಡಿಗೆ ಕಳುಹಿಸಬೇಕೆಂಬ ದುಃಖದಿಂದ ಮೂರ್ಛೆಬಿದ್ದಿದ್ದ ದಶರಥ ನನ್ನು ರಾಮನ ''ಅಮೃತವಾಣಿ'' ಎಬ್ಬಿಸಿದುದು ''ಮಹಾ ದುಷ್ಟಾಂಗನಾ ರಸನಾಹಿ ದಂಷ್ಟ್ರನನು ಮಧುರ ವಚನದ ವಿಳಾಸೋದ್ದಾಮ ಗಾರುಡದ ಮಂತ್ರ ವೆಬ್ಬಿಸಿದ'' ಹಾಗೆ ಇತ್ತು. ''ಹೂವ ಸುರಭಿ ಸುಧಾಂಶು ಬಿಂಬವನಾವಿಮಲ ರುಚಿಕೀರ್ತಿ ಸದ್ಧರ್ಮಾವಳಿಯ ಬಿಟ್ಟಿರಲು'' ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಸೀತೆ ರಾಮನನ್ನು ಬಿಟ್ಟಿರುವುದೂ ಸಹ ಸಾಧ್ಯವಿಲ್ಲ. ಮಗನ ಬರವಿನ ಕಾತರದಿಂದ ಬಾಯಿಬಿಟ್ಟುಕೊಂಡು ಕುಳಿತಿದ್ದ ತಾಂಡವನ ತಾಯಿತಂದೆಗಳು ''ಮುತ್ತು ಸಡಿಲಿದ ಚಿಪ್ಪಿನವೊಲಳಲುತ್ತ ಬಾಯ್ಬಿಡುತಿಹ ಪುರಾಣ ಕಠಿಣ ತಾಪಸರು.'' ಶೂರ್ಪಣಖಿ ರಾವಣನ ಆಸ್ಥಾನಕ್ಕೆ ಬಂದುದು, ''ಮೃತ್ಯು ರೂಪಿನಲಿ.'' ರಾವಣನು ಸೀತೆಯನ್ನು ಅಪಹರಿಸುವಾಗ (ಗಾಳಿಗೆ ಅಲುಗುತ್ತಿದ್ದ ಮರವು) ''ಬೇಡ ಬೇಡೆಂಬಂತೆ ಮರನಲ್ಲಾಡುತಿರ್ದುದು.'' ಕಪಿಗಳು ಕಟ್ಟಿದ ರಾಮಸೇತು, ''ಅರಿ ದಶಾಸ್ಯನ ಕರೆದು ತೋರುವ ಮೃತ್ಯು ನೀಡಿದ ಕರದವೊಲು ಕಣ್ಗೆಸೆದುದು.'' ರಕ್ತದಿಂದ ಕೆಂಪಾದ ರಣಭೂಮಿ, ''ಶೋಣಿತವಸನ ವಿಭ್ರಮ ಯಾದಳೆನೆ ರಂಜಿಸಿತು.'' ರಣರಂಗಕ್ಕೆ ರಾವಣನ ರಥ ಬಂದುದು, ''ಶೃಂಗಾರ ಗಗನಾಂಗಣದ ನಾಟ್ಯಕೆ ನಿಂದ ಮಿಂಚಿನ ಭಣಿತೆಯವೊಲು.'' ಒಮ್ಮೆ ರಾವಣನು ಸೋತು ಬಂದುದು, ''ಹಲುಗಳಚಿದಹಿಯಂತೆ.'' ಲಕ್ಷ್ಮಣ ಇಂದ್ರಜಿತು

ಇವರ ಯುದ್ಧವು, "ಲಯಭೈರವರ ವಿಸ್ತರತರ ವಸಂತಕ್ರೀಡೆಯೋ, ಸಂಗರದ ಶಾಕಿನಿಡಾಕಿನಿಯರುತ್ಸಾಹದೋಕುಳಿಯೋ" ಎನ್ನುವಂತಿತ್ತು. ಯುದ್ಧರಂಗದಲ್ಲಿ ಉಭಯಸೇನೆಗಳು "ರಣಭೂತಾಳಿಗಳ ರಣನರ್ತನದ ಕರತಾಳವೋ" ಎಂಬಂತೆ ಸೇರಿದುವು. ಇಂದ್ರಜಿತು ಸತ್ತಾಗ ಅವನ ತಲೆ ಧರೆಗುರುಳಿದುದು, "ವೀರಲಂಕಾಪಾಲಕನ ಭುಜವಿಜಯ ಲಕ್ಷ್ಮಿಯ ತೋಳ ಕನ್ನಡಿ ಕಳಚಿ ಬೀಳ್ವಂದದಲಿ." ರಾತ್ರಿಯಾಗಲು ಕತ್ತಲೆ ಕವಿದುದು, "ಅಂಡಲೆಯೆ ಬಲು ನಿದ್ರೆ ನಳಿನ ಭವಾಂಡ ಭವನದ ತಿಮಿರರಕ್ಕಸಿ ಚಂಡಕರ ದೀಪವನು ತೊಲಗಿಸಿ ಮಣಿಯ ಮಂಚದಲಿ ಮಂಡಿಸಿದಳೆನೆ ತಗಡಕತ್ತಲೆ ಚಂಡಿಸಿತು." ಹಾಗೆ ರಾತ್ರಿಯಾದುದನ್ನು ನೋಡಿದರೆ, "ತನಿವೇಟದಲಿ ತಾಮಸಿ ದಿಗಂಬರೆಯಾಗಿ ನಿಜಪತಿಯ ನಲಿದಪ್ಪಿ" ದಂತೆ ಇತ್ತು. ಸೀತೆ ಅಗ್ನಿಪ್ರವೇಶ ಮಾಡಿ ಬಂದಾಗ, "ಪುಟವಿಟ್ಟ ಮಿಸುನಿಯ ರಸದ ಪ್ರತಿಮೆಯವೊಲು" ಪ್ರಕಾಶಿಸಿದಳು. ರಾಮರಾವಣರ ಯುದ್ಧಕ್ಕೆ ಯಾವ ಹೋಲಿಕೆಯನ್ನು ಕೊಡಬಹುದು? "ಗಗನ ಗಗನಕೆ ಜಲಧಿ ಜಲಧಿಗೆ ಮಗುಳೆಲೇ ಪ್ರತಿ ರಾಮ ರಾವಣರಿಗೆ ರಘು ಕ್ಷಿತಿನಾಥ ರಾವಣರಲ್ಲದಿಲ್ಲ."

ಇಂತಹ ಉದಾಹರಣೆಗಳು ನೂರಾರನ್ನು ಕೊಡಬಹುದು.— ಇವುಗಳಲ್ಲಿ ಒಂದೊಂದನ್ನೂ ವಿಚಾರಮಾಡುತ್ತಾ ಹೋದರೆ ಎಷ್ಟು ಬೇಕಾದರೂ ಬರೆಯಬಹುದು. ಆದರೆ ಕವಿಯ ಭಾವಾಭಿವ್ಯಂಜಕಶಕ್ತಿಯನ್ನೂ, ಕವಿತೆಯ ಸೊಗಸನ್ನೂ, ಶೈಲಿಯ ಮನೋಹರತೆಯನ್ನೂ ಅರಿಯಲು ಇಷ್ಟು ಸಾಕು.

## ಭಿನ್ನಭಾವಗಳ ಚಿತ್ರ ಚಾತುರ್ಯ

ಒಂದೇ ವಸ್ತುವನ್ನು ಸಂದರ್ಭಾನುಸಾರ ಬೇರೆ ಬೇರೆ ದೃಷ್ಟಿಕೋನಗಳಿಂದ ನೋಡಿ ವರ್ಣಿಸುವ ಚಾತುರ್ಯವನ್ನು ಈ ಕೆಲವು ಪದ್ಯಗಳಿಂದ ತಿಳಿಯಬಹುದಾಗಿದೆ:

ಮಾಯಾರೂಪದ ಶೂರ್ಪನಖಿ ರಾಮನ ಬಳಿಗೆ ಬಂದುದು ಹೀಗೆ:

ಅಂಗಜನ ಮೋಹನದ ಸುಭಟರ । ಮುಂಗುಡಿಯ ಮುಂಬರಿವ ಮದಮಾ
ತಂಗವೆನಲಿಭಗಮನೆ ಗರುವಾಯಿಯಲಿ ಗಮಿಸಿದಳು
ನೆರಿಯನೋಸರಿಸುತ್ತ ಮೇಲುದ । ನಿರುಕುತೆಡಗೈದುದಿಯಲಾ ಮುಂ
ಜೆರಗ ಸಂವರಿಸುತ್ತ ನಸು ನಾಚಿಕೆಯ ಭಾವದಲಿ
ತುರುಗೆವೆಯ ನಿಡುಗಂಗಳಿನ ಕಡೆ । ಸೆರಗ ಪಸರಿಸುತೊಯ್ಯನೊಯ್ಯನೆ
ಮರುಕವನು ತೋರಿಸುತ ಬಂದಳು ರಾಮನಿದ್ದೆಡೆಗೆ

ಅದೇ ಶೂರ್ಪನಖಿ ಕಿವಿ ಮೂಗುಗಳನ್ನು ಕೊಯಿಸಿಕೊಂಡು ರಾವಣನ ಆಸ್ಥಾನಕ್ಕೆ ಬಂದುದು ಹೀಗೆ:

. . . . ನೆರೆ । ಹರಿದ ಮೂಗಿನ ಹರಿದ ತುಟಿಗಳ
ಜುಣುಗು ಗಿವಿಗಳ ಜಱಿದ ಹುಣ್ಣಿನ ಕೊರೆದ ಕದಪುಗಳ

* * *

ವ್ರಣದ ದುರ್ಗಂಧದ ಮಹಾ ಭೀ । ಷಣದ ರಕ್ಕಸಿ ಬಂದಳಾ ರಾ
ವಣನ ರಚಿತ ಸಭಾಂತರಾಳಕೆ ಮೃತ್ಯುರೂಪಿನಲಿ

ಒಂದು ಕಡೆ ಮಾಯಾರೂಪದ ಸೌಂದರ್ಯ, ಇನ್ನೊಂದು ಕಡೆ ಸ್ವಾಭಾವಿಕ... ರೂಪು; ಒಂದು ಕಡೆ "ಅಂಗಜನ ಮೋಹನದ ಸುಭಟರ ಮುಂಗುಡಿಯ ಮುಂ... ಮದಮಾತಂಗ", ಇನ್ನೊಂದು ಕಡೆ 'ಮೃತ್ಯುರೂಪಿನಲಿ'; ಒಂದು ಕಡೆ '... ಗಮನೆ', ಇನ್ನೊಂದು ಕಡೆ "ಮಹಾಭೀಷಣದ ರಕ್ಕಸಿ"— ಈ ಭಿನ್ನಭಾವಗಳ... ಕವಿ ಬಹು ಚೆನ್ನಾಗಿ ಚಿತ್ರಿಸಿದ್ದಾನೆ. ಹಾಗೆಯೇ ರಾವಣನ ಆಸ್ಥಾನದ ಚಿತ್ರ... ನಾವು ನೋಡಬಹುದು. ಶೂರ್ಪನಖಿ ರಾವಣನ ಆಸ್ಥಾನಕ್ಕೆ ಬಂದಾಗ ... ಈ ಬಗೆಯ ವೈಭವದಿಂದ ವಿರಾಜಿಸುತ್ತಿತ್ತು:

ಪವನ ಶಿಖಿ ಯಮ ನಿರುತಿ ಹರಿ ವೈ।ಶ್ರವಣ ವರುಣಾದಿಗಳು ಬೆಸಸೇ
ನೆವಗೆ ತವಗೆನುತಿದ್ದರಿದ್ದೆಡೆಯಲಿ ದಶಾನನನ

ವೀರ ವಿದ್ಯುಜ್ಜಿಹ್ವ ದುರ್ಮುಖ । ಸಾರಣಾಸುರ ಶೋಣಿತಾಕ್ಷಕ
ಘೋರಬಲನತಿಕಾಯ ವಿದ್ಯುನ್ಮಾಲಿ ಶಾರ್ದೂಲ
ಘೋರತರ ದುರ್ಧರುಶನಾದಿ ಕು।ಮಾರಕರು ಸಚಿವರು ಸಮಸ್ತ ವಿ
ಶಾರದಾಹವಮಲ್ಲರಿರ್ದರು ಮುಂದೆ ರಾವಣನ

ಮಕರಾಕ್ಷ ರಾಕ್ಷಸನು ಸತ್ತ ಮೇಲೆ ಕೂಡಿಸಿದ ಅದೇ ಆಸ್ಥಾನ ಹೀಗಿತ್ತು:

ಮೊಳಗಿದಬ್ಬರವಿಳಿದ ಗಗನ। ಸ್ಥಳವೊ ಮೇಣ್ಮುಂಗಾರ ಮೇಘದ
ಸುಳಿವು ನಿಂದಂಬುಧಿಯೊ ವಿವಿಧೇಂದ್ರಿಯಗಳುಪಟಳದ
ಕಳಕಳಿಕೆ ಕಳಲಿದ ಮಹಾತ್ಮನ। ನಿಲವೊ ದಶಕಂಠನ ಸಭಾಮಂ
ಡಳವೊ ಹೇಳುವೆನೇನ ಮೌನದೊಳಿದ್ದುದಾಸ್ಥಾನ

ದಿಕ್ಪಾಲಕರುಗಳು ಜೀಯ, ಹಸಾದ ಎಂದುಕೊಂಡು ನನಗೆ ಕೆಲಸ ಹೇಳು ... ಕೆಲಸ ಹೇಳು ಎಂದು ರಾವಣನನ್ನು ಸೇವಿಸುತ್ತಿದ್ದ ಆಸ್ಥಾನವೆಲ್ಲಿ! ಸಪ್ಪಳವ... ಮಹಾತ್ಮನ ನಿಲವಿನ ಮೌನವನ್ನನುಕರಿಸುತ್ತಿರುವ ಆಸ್ಥಾನವೆಲ್ಲಿ! ... ವೈಭವವೆಲ್ಲಿ! ಇಂದಿನ ಅವನತಿಯೆಲ್ಲಿ! ಇದರಂತೆಯೇ ರಾವಣನ ಅಂತಃಪು... ಸ್ತ್ರೀಯರ ವರ್ಣನೆಯೂ ಬಹು ಚೆನ್ನಾಗಿದೆ. ಅಲ್ಲಿ ದಾನವರೂ ಇದ್ದರು, ... ಗಳೂ ಇದ್ದರು. ಅವರವರ ಸೌಂದರ್ಯವನ್ನು ಅವರವರಿಗೆ ತಕ್ಕಹಾಗೆ ... ವರ್ಣಿಸಿದ್ದಾನೆ.

ರಾಕ್ಷಸ ಸ್ತ್ರೀಯರು ಹೀಗಿದ್ದರು:

ಹೊಳೆಹೊಳೆವ ಕಿರುದಾಡೆಗಳ ತಳ। ತಳಿಪ ಕದಪಿನ ದೀರ್ಘನಯನದ
ಬಲುಮೊಲೆಯ ಬಾಸೆಗಳ ಬಂಬಲುಗುರುಳ ಹೊಸ ಹೊಗರ
ಕಲಿತ ಮದದುಬ್ಬುಗಳ ತೋಳಿನ । ಮಲೆತ ಹುಬ್ಬಿನ ಪುಳಿನ ಜಘನ
ಸ್ಥಳದ ದಾನವಸತಿಯರಿದ್ದರದೊಂದು ತಾಣದಲಿ

ನಸಿದ ದಾಡೆಯ ಹುರಿಯ ಹುಬ್ಬಿನ । ಕೆಸರುಗಂಗಳ ಕರ್ಕಶಾಂಗದ
ಮಿಸುಪ ದಂತಾವಳಿಯ ಜುಂಜುರುದಲೆಯ ಹೆಗ್ಗಿವಿಯ
ಬಿಸುರ ಹೊದ್ದಿದ ತೋರಮೊಲೆಗಳ । ವಿಷಮ ರಕ್ತಾಸಕ್ತಮಯ ರಾ
ಕ್ಷಸ ವಧೂನಿಕುರುಂಬವಿದ್ದುದದೊಂದು ತಾಣದಲಿ

ಅವರ ಪಕ್ಕದಲ್ಲಿಯೇ ಮಲಗಿದ್ದ ಅಮರಿಯರು ಹೀಗಿದ್ದರು:

ತೋರಕಬರಿಯ ಕುಡಿತೆಗಂಗಳ। ಸಾರ ಬಿಂಬಾಧರದ ಲಲಿತ
ಸ್ಮೇರವದನದ ನುಣ್ಗೊರಲ ಪೀವರಪಯೋಧರದ
ಚಾರುಭುಜ ಲತಿಕೆಗಳ ಘನ ಗಂ।ಭೀರನಾಭಿಯ ಗುರುನಿತಂಬದ
ಭೂರಿಭೂಷಣದಮರಿಯರು ಮೆರೆದಿರ್ದರೊಂದೆಶೆಯ

ಅಂಗಸೌಖ್ಯದ ನಗೆಮೊಗದ ಸ।ರ್ವಾಂಗದಮಳಾಭರಣಕಿರಣತ
ರಂಗವನುಪಮ ಹಾವಭಾವ ವಿಲಾಸವಿಭ್ರಮದ
ತುಂಗಕುಚದುತ್ತುಂಗ ಕಬರಿಯ । ಸಿಂಗರದ ಎಳೆನಡುವಿನಮಳ ನ
ರಾಂಗನೆಯರೆಸಿದಿರ್ದರಾ ಸ್ಮರಭಟನ ಬಲದಂತೆ

ಈ ಎರಡು ಬಗೆಯ ಸ್ತ್ರೀಯರೂ ಸುಂದರಿಯರೇ. ಒಂದು ರಾಕ್ಷಸೀಸೌಂದರ್ಯ, ಇನ್ನೊಂದು ದೈವೀಸೌಂದರ್ಯ; ಒಂದು ಭೀಷಣವಾದುದು, ಇನ್ನೊಂದು ಭೂಷಣವಾದುದು, ಶಾಂತವಾದುದು. ಕವಿ ಈ ಎರಡರ ಭಾವವನ್ನೂ ಗ್ರಹಿಸಿ ನಮ್ಮ ಮುಂದೆ ಇಟ್ಟಿದ್ದಾನೆ.

## ಕವಿತೆಯ ವಿಶೇಷ ಭಾಗಗಳು

ಇವಲ್ಲದೆ ಕವಿತೆಯ ಕೆಲವು ವಿಶೇಷ ಭಾಗಗಳ ಕಡೆ ನಾವು ನೋಡಬೇಕಾದುದು ಆವಶ್ಯಕ. ಲಕ್ಷ್ಮಣನು ಶೂರ್ಪನಖಿಯನ್ನು ನೋಡಿದಾಗ, "ಸುಂದರಿಯ ನೀಕ್ಷಿಸಿದನಿಂದ್ರಿಯಬಂಧಿಕಾರನು" ಎಂದು ಕವಿ ಹೇಳುತ್ತಾನೆ. ಎಷ್ಟು ಭಾವ ಪೂರ್ಣವಾದ ಮಾತುಗಳಿವು! ನೋಡುವುದು ಸುಂದರಿಯನ್ನು, ನೋಡುವವನು 'ಇಂದ್ರಿಯ ಬಂಧಿಕಾರ.' ಇಲ್ಲಿ ಪದಗಳನ್ನು ಎಷ್ಟು ಚಮತ್ಕಾರದಿಂದ ಜೋಡಿಸಿದ್ದಾನೆ! ಕೆಲವು ಸಂದರ್ಭಗಳನ್ನು ವರ್ಣಿಸುವಾಗಲಂತೂ ಕವಿ ಓದುವವರ ಹೃದಯವನ್ನೇ ಕಲಕಿಬಿಡುತ್ತಾನೆ. ತಾಂಡವನ ತಂದೆ ತಾಯಿಗಳು ಮಗನ ಬರವನ್ನು ನೋಡುತ್ತಾ—

ನೀರೊಳಗೆ ಜಾರಿದನೊ ಮೇಣ್ಕಾ।ಳೋರಗನೊಳಳಿವಾಯ್ತೊ ದುಷ್ಟಚ
ಮೂರ ಚಪ್ಪರಿಸಿದುದೊ ಕೆಡೆದನೊ ಹಳ್ಳಕೊಳ್ಳದಲಿ
ಕ್ರೂರಲುಬ್ಧಕ ಶಸ್ತ್ರಹತಿಯಲಿ । ತೀರಿದನೊ ಹಾ ಕಂದ ಹಾ ಎಂ
ಬೂರುಜ ವ್ರತಿಗಳನು ಕಂಡತಿಮರುಕವಾಯ್ತೆಂದ

ಆ 'ಪುರಾಣ ಶರೀರ ತಾಪಸರು' ಈ ರೀತಿ ಹಲುಬುವುದನ್ನು ಕೇಳಿ ಕಣ್ಣಲ್ಲಿ ನೀರು ಮಿಡಿಯದವರಾರು? ಹಾಗೆಯೇ ಇಂದ್ರಜಿತು ಸತ್ತಾಗ ರಾವಣನು—

ಚೆನ್ನ ಹಾ ಚತುರಾಸ್ಯ ವರಸಂ।ಪನ್ನ ಹಾ ವಿಬುಧೇಂದ್ರಜಿತು ಹಾ
ಎನ್ನರಸ ಹಾ ಕಂದ ಹಾಯಿನ್ನೇನು ಗತಿಯೆಂದ

ರತಿಕಲಾಸುಪ್ರೌಢಿಯಿಲ್ಲದ । ಸತಿಯ ಸೊಬಗಿದ್ದೇನು ಫಲ ಸಂ
ನುತ ಗುಣಾಧಿಕನಲ್ಲದವನಾ ಕಾರ್ಯವೇನು ಫಲ
ನುತ ರಸಾಲಂಕಾರವಿಲ್ಲದ । ಕೃತಿಯ ಸೊಬಗಿದ್ದೇನು ಫಲ ನಿಜ
ಸುತವಿಹೀನನ ಬದುಕು ಲೋಕದೊಳೇನು ಫಲವೆಂದ

೨

ಎಂದು ಹಲುಬಿ, ಕಡೆಗೆ, "ತಾನಭಾಗ್ಯನು ಕಂದ ನಿನ್ನಿಂದೇನು ಕೊರತೆ" ಎಂದು ಹೇಳುವಾಗ ನಮ್ಮ ಕಣ್ಣೀರನ್ನು ತಡೆದಿಡುವುದು ಸಾಧ್ಯವೆ? ಯುದ್ಧರಂಗದಲ್ಲಿ ನಡೆಯುವ ನೀಲ–ಶೋಣಿತಾಕ್ಷರ ಈ ವಾಗ್ವಾದವು ಯಾರನ್ನು ತಾನೇ ಮೆಚ್ಚಿಸದು!

ನೀಲ :— ದೋಷಿ ರಾವಣನೊಬ್ಬನೇ ನಿ।ರ್ದೋಷಿಗಳು ನೀವ್ ಕುಂಭಕರ್ಣ ವಿ
ಭೀಷಣನ ಸಂತಾನವಿರಲಜನಿರಲು ಪರಿಯಂತ
ದೋಷಕೃತ ದಶವದನ ಜೀವನ। ದೋಷಣಕೆ ತಾ ಮೃತ್ಯುವಿದಕೋ
ಭಾಷೆ ತನ್ನದು ಬದುಕಿಸುವೆ ನಡೆ ರಾಮನೆಡೆಗೆಂದ

ಶೋಣಿತಾಕ್ಷ :—ಅಳುಕಿ ಸಾವಿಗೆ ಸಹಭವನ ರಣ।ಕುಳುಹಿ ಹಗೆವನ ಹೊಕ್ಕರಿಯು ತಂ
ಬುಲಕೆ ಕೈಯಾಂತಧಮು ರಕ್ಕಸನೆಂದು ಬಗೆದೆಯಲ
ಛಲಪರಿಗ್ರಹರಾವು ಕೀರ್ತಿಯ। ಮೊಲೆಯ ಮೇಲಣ ಮೌಕ್ತಿಕದ ಬಿ
ಲುಳಿತ ನಿರ್ಮಲ ಹಾರರಾವ್ ನಿಮಗಂಜಲೇಕೆಂದ

ಈ ಮಾತುಗಳು ಭಾರತದಲ್ಲಿ ಕೃಷ್ಣನು ಸಂಧಿಗೆ ಹೋಗಿ ಕರ್ಣನನ್ನು ಪಾಂಡವರ ಕಡೆಗೆ ಬರುವಂತೆ ಹೇಳಿದ ಮಾತನ್ನೂ ಅದಕ್ಕೆ ಅವನು ಕೊಟ್ಟ ಉತ್ತರವನ್ನೂ ನೆನಪಿಗೆ ತರುವುವಲ್ಲದೆ, "ಛಲಪರಿಗ್ರಹರಾವು" ಎಂದು ಮುಂತಾಗಿ ಹೇಳುವ ಶೋಣಿತಾಕ್ಷನ ಮಾತುಗಳು "ನೆಲಕಿರಿವೆನೆಂದು ಬಗೆದಿರೆ ಛಲಕಿರಿವೆಂ" ಎಂದು ಹೇಳುವ ಛಲದಂಕಮಲ್ಲನೂ ಅಭಿಮಾನಧನನೂ ಆದ 'ಗದಾಯುದ್ಧ'ದ ದುರ್ಯೋಧನನನ್ನು ನೆನಪಿಗೆ ತಂದುಕೊಡುತ್ತವೆ. ಶೋಣಿತಾಕ್ಷನ ಮಾತಿಗೆ ನಾವು ತಲೆದೂಗಿ ಅವನ ದೊಡ್ಡ ಗುಣಕ್ಕೆ ಮೆಚ್ಚುತ್ತೇವೆ. ಇವೆಲ್ಲಕ್ಕಿಂತ ಹೆಚ್ಚಾಗಿ ಮಹಾವೀರ ರಾವಣನು ಕಡೆಯ ಯುದ್ಧಕ್ಕೆ ಹೊರಡುವ ಮೊದಲು—

ಕರಸಿದನು ಭಂಡಾರಿಗಳನಾ। ಹುರಿ ಹುತಾಶನ ಯಮ ನಿಶಾಚರ
ವರುಣ ವಾಯು ಕುಬೇರ ಶಂಕರರಿತ್ತ ಕಪ್ಪಗಳ
ಹಿರಿದು ಕಾಲದ ಹಳೆಯ ಟಂಕದ। ಪರಿಯ ನಾಣ್ಯವ ತರಿಸಿ ಎಲ್ಲವ
ಹೊರಿಸಿ ಸೂಸಿದನಖಿಳ ಯಾಚಕಜನದ ಸಂದಣಿಗೆ

ಹೊರಿಸಿ ಸುಭಟರ ಸತಿಸುತರ ಮಂ।ದಿರಗಳಿಗೆ ಕಳುಹಿದನು ನಗರದ
ಹರದ ಹಾರುವ ಬಿನುಗು ಬಿಚ್ಚಟಿ ಬಡವು ಬಗ್ಗುಗಳ
ಕರೆಕರೆದು ಕೈಹಾರದಲಿ ಮನ।ವೆರಸಿ ಸೂರೆಯ ಬಿಟ್ಟು ತೆಂಗೆಯ
ಬರಹಗಳ ನೆರೆ ತೊಡಸಿ ಸಂತಸಪಡಿಸಿದನು ಪುರವ

ಸೆರೆವನೆಯೊಳಿರ್ದಖಿಳ ದಾನವ। ಸುರನರೋರಗಜನವ ಮನ್ನಿಸಿ
ಹೊರವಡಿಸಿದನು ಪುರವನಾಪ್ತರ ಬಂಧುವರ್ಗಗಳ
ಕರೆದು ರಣದೊಳಗಳಿದೆನಾದರೆ। ವರ ವಿಭೀಷಣದೇವನನು ಪರಿ
ಚರಿಯದಿಂ ಪತಿಕರಿಸಿಕೊಂಡಿಹುದೆಂದು ನೇಮಿಸಿದ

ಯುದ್ಧಕ್ಕೆ ಹೊರಡುವ ಮುಂಚೆ ತನ್ನ ಐಶ್ವರ್ಯವೆಲ್ಲವನ್ನೂ ಬಡಬಗ್ಗರಿಗೆ ದಾನಮಾಡಿ, ಸೆರೆಯಲ್ಲಿಟ್ಟದ್ದವರನ್ನು ಬಂಧವಿಮುಕ್ತರನ್ನಾಗಿ ಮಾಡಿ, ಕಷ್ಟಕಾಲದಲ್ಲಿ ತನ್ನನ್ನು ಬಿಟ್ಟು ಶತ್ರುವನ್ನು ಸೇರಿ ತನ್ನ ಸೋಲಿಗೆ ಕಾರಣನಾಗಿದ್ದರೂ ಆ ವಿಭೀಷಣನನ್ನು ಪತಿಕರಿಸಿಕೊಂಡಿರಬೇಕೆಂದು ತನ್ನ ಪ್ರಜೆಗಳಿಗೆ ಹೇಳಿದ ವಿಷಯ

ಮಹಾನುಭಾವನಲ್ಲವೆ? ರಾವಣನ ಉದಾತ್ತತೆಯನ್ನು ತೋರಿಸುವುದಕ್ಕೆ ಈ ಒಂದು ಸನ್ನಿವೇಶವೇ ಸಾಕಾಗಿದೆ. ರಾವಣನ ವಧೆಯಾದಮೇಲೆ ರಾಮನಿಗೆ ಒಪ್ಪಿಸುವುದಕ್ಕೆಂದು ವಿಭೀಷಣನು ಕರೆತಂದ ಸೀತೆ, ರಾಮನಿಗೆ ವಂದಿಸಿದಾಗ ಇದ್ದ ಅವಳ ಸ್ಥಿತಿಯನ್ನು ಕವಿ ಈ ಒಂದು ಪದ್ಯದಲ್ಲಿ ಹೇಳಿದ್ದಾನೆ:

ಹೆಂಪಳಿದ ತನುಲತೆಯ ಹರುಷದ । ಸೊಂಪು ಸಡಿಲಿದ ಮುಖದ ನೋಟದ
ಗುಂಪುದೆಗೆದಕ್ಷಿಗಳ ಕೋಡಿಯೊಳೊಗುವ ಕಂಬನಿಯ
ಕಂಪಿಸುವ ಕರಣಂಗಳಂಜಿಕೆ । ಝೋಂಪಿಸುವ ಮಾನಸದ ಲಜ್ಜೆಯ
ಸಂಪಿನಂಬುಜವದನೆ ವ್ಯೆಯಿಕ್ಕಿದಳು ನಿಜಪತಿಗೆ

ಬಹುಕಾಲ ಬಯಸಿದ ಬಯಕೆ ಕೈಗೂಡಿದಾಗ ಮನುಷ್ಯನ ಸ್ಥಿತಿ ಹೇಗಿರುತ್ತದೆಂಬುದನ್ನು ಇಲ್ಲಿ ಚೆನ್ನಾಗಿ ಚಿತ್ರಿಸಿದೆ. ಅಂತಹ ಸಂದರ್ಭದಲ್ಲಿ ಆನಂದಬಾಷ್ಪ, ಕೈಕಾಲುಗಳ ನಡುಕ, ಅಂಜಿಕೆ, ಲಜ್ಜೆ ಇವೆಲ್ಲವೂ ಒಟ್ಟಿಗೆ ಆವರಿಸಿಬಿಡುತ್ತವೆ. ಆಧುನಿಕ ಮಾನಸಿಕ ಶಾಸ್ತ್ರವೂ ಇದನ್ನೇ ಹೇಳುತ್ತದೆ. ಇಷ್ಟು ಸ್ವಾಭಾವಿಕವಾಗಿ, ಚಿತ್ರ ಕಣ್ಣಿಗೆ ಕಟ್ಟಿದಂತೆ ಬರೆದಿರುವುದು ಕವಿಯ ದೊಡ್ಡ ಗುಣ. 'ಕುಮಾರವಾಲ್ಮೀಕಿ' ಸಾಮಾನ್ಯರ ಮಟ್ಟವನ್ನು ಮೀರಿ ಉದಾತ್ತಭಾವಗಳನ್ನೂ ಭಾವಚಿತ್ರಗಳನ್ನೂ ಹೊರಗೆಡಹಬಲ್ಲನೆಂಬುದು ಈ ಕೆಲವು ಉದಾಹರಣೆಗಳಿಂದ ಚೆನ್ನಾಗಿ ವ್ಯಕ್ತವಾಗುತ್ತದೆ. ಇಲ್ಲಿ ಮೇಲೆ ಹೇಳಿದುವೆಲ್ಲವೂ ಕವಿಯ ಸ್ವಂತ ಭಾವಗಳು, ಸ್ವಂತ ಬರವಣಿಗೆ, ಸ್ವಂತ ದೃಷ್ಟಿ. 'ಕುಮಾರವಾಲ್ಮೀಕಿ'ಯ ಪ್ರತಿಭೆಯನ್ನು ಕಾಣಬೇಕಾದರೆ, ಅವನ ವ್ಯಕ್ತಿತ್ವವನ್ನು ಅರಿಯಬೇಕಾದರೆ, ಈ ಭಾಗಗಳು ಮತ್ತು ಮುಂದೆ ಹೇಳುವ ಮಂಥರೆ, ಕೈಕೆ, ರಾವಣ ಮೊದಲಾದವರ ಪಾತ್ರಕ್ಕೆ ಕೊಟ್ಟಿರುವ ನೂತನ ಸ್ವಂತ ಭಾವದ ಮೆರುಗು — ಇಲ್ಲಿಗೇ ಬರಬೇಕು. 'ತೊರವೆ ರಾಮಾಯಣ'ದ ಮಹೋನ್ನತಿ ಈ ಭಾಗಗಳಲ್ಲಿದೆ. ಇವೇ ಈ ಕಾವ್ಯದ ಶಿಖರ ಭಾಗಗಳು. ಸುವರ್ಣ ಕಳಶವಿಡಬೇಕಾದರೆ ಈ ಶಿಖರಗಳೇ ತಕ್ಕ ಸ್ಥಾನ. ಕವಿಯ ಜೀವಾಳ, 'ಕಾವ್ಯದ ಹೃದಯ' ಇರುವುದು ಇಲ್ಲಿಯೇ.

## ವಸ್ತು ವ್ಯತ್ಯಾಸ

'ವಾಲ್ಮೀಕಿ ರಾಮಾಯಣ'ದ ಸ್ವರೂಪವನ್ನು ತಿಳಿಯಬೇಕಾದರೆ, ಆ ಮಹಾಕವಿಯ ಹೃದಯವನ್ನರಿಯಬೇಕಾದರೆ, 'ತೊರವೆ ರಾಮಾಯಣ'ವನ್ನೇ ಓದಬೇಕಾಗುವುದೆಂದು ಈ ಮೊದಲೇ ಹೇಳಿದೆಯಷ್ಟೆ. ಅದು ವಾಸ್ತವಾಂಶವೇ ಆದರೂ ಕವಿ ತನ್ನ ಹಿಂದಿದ್ದ ಜೈನ,- 'ಅಧ್ಯಾತ್ಮ ರಾಮಾಯಣ'ಗಳ ಪ್ರಭಾವದಿಂದಲೂ, ತಾನೇ ಸ್ವಂತವಾಗಿಯೂ ಕೆಲವು ಸಣ್ಣ ಸಣ್ಣ ಬದಲಾವಣೆಗಳನ್ನು ಮಾಡಿದ್ದಾನೆ. ವಾಲ್ಮೀಕಿ ಬರೆದಂತೆ ಕಥೆಯನ್ನು ವಿವರಿಸಿ ಅದರಲ್ಲಿ 'ಕುಮಾರವಾಲ್ಮೀಕಿ' ತಂದಿರುವ ಬದಲಾವಣೆಗಳೆಲ್ಲವನ್ನೂ ವಿವರಿಸಲು ಸ್ಥಳ ಸಾಲದುದರಿಂದ ಕೆಲವು ಬದಲಾವಣೆಗಳನ್ನು ಮಾತ್ರ ಇಲ್ಲಿ ಹೇಳಿದೆ. ಅಲ್ಲದೆ ಮೂಲರಾಮಾಯಣದ ಕಥೆ ಸರ್ವಲೋಕ ವಿದಿತವಾಗಿರುವುದರಿಂದ ಇಲ್ಲಿ ಸೂಚಿಸುವ ಬದಲಾವಣೆಗಳನ್ನು ಸುಲಭವಾಗಿ ಗ್ರಹಿಸಬಹುದಾಗಿದೆ. ರಾಮಾಯಣದ ಕಥೆಗೆ ಕಾರಣಳಾದ ಮಂಥರೆಯನ್ನು

"ಜ್ಞಾತಿ ದಾಸೀ ಯತೋ ಜಾತಾ" ಎಂದು ವಾಲ್ಮೀಕಿ ಕರೆದಿದ್ದಾನೆ. ಇಲ್ಲಿ ಅವಳು 'ಮಾಯೆ'ಯ ಅವತಾರ. ವಾಲಿ, ರಾವಣರು ಪ್ರಾಣಬಿಡುವ ಕಾಲದಲ್ಲಿ ರಾಮನನ್ನು ನಿಗಮತತ್ವಾತ್ಮಕನೆಂದೂ ಶ್ರೀಮನ್ಮಹಾವಿಷ್ಣುವೆಂದೂ ಹೊಗಳಿ, ಶಾಂತಿಯಿಂದ ಪ್ರಾಣಬಿಡುತ್ತಾರೆ. ರಾಮನನ್ನು ವಂಚಿಸಲು ಜಿಂಕೆಯ ವೇಷವನ್ನು ಹಾಕಿಕೊಂಡು ಬಂದ ಮಾರೀಚನು ರಾಮನಿಗೆ ಸಿಕ್ಕಿಯೂ ಸಿಕ್ಕದಂತೆ ಆಟ ಹುಟ್ಟಿಸುತ್ತಾ "ಸೌರಾಷ್ಟ್ರದವನೀತಳದೊಳಾ ಗೌಳಾವನಿಯ ಮಂಡಲದೊಳ್ ಕಳಿಂಗ ಗುಜ್ಜರ ನಿಷಧ ಕಾಂಭೋಜ ತುಳುವ ಲಾಳ ವಿದರ್ಭ ದ್ರವಿಡಾವನಿ ಗಳಲಿ ತೊಳಲಿಸಿ"ದಂತೆ ಈ ಕಾವ್ಯದಲ್ಲಿ ಹೇಳಿದೆ. ರಾವಣನು ಸೀತೆಯನ್ನು ಹರಿಸಲು ಮುನಿವೇಷದಿಂದ ಬಂದಾಗ ಸೀತೆ ಅವನಿಗೆ, "ದರ್ಭಾಸನವನ್ನಿತ್ತು ಪದಪೂಜೆ ನಮ್ಮಯ ಜನಕ ಬಂದವೊಲಾಯಿತೆಂದು" ಹೇಳಿದ್ದು; ಸೀತೆಯನ್ನು ಹುಡುಕಲು ಹೊರಟ ಕಪಿಗಳು ಭರತನನ್ನು ಕಂಡು ಅವನಿಗೆ ಸೀತಾಪಹರಣ ವೃತ್ತಾಂತವನ್ನು ತಿಳಿಸಿದ್ದು; ಭರತನು ರಾಮನ ಸಹಾಯಕ್ಕೆಂದು ಸೇನೆಯೊಡನೆ ಹೊರಡಲು ಸಿದ್ಧ ನಾದಾಗ ನಾರದನು ಬಂದು ರಾಮನು ಅಜೇಯನೆಂದು ಹೇಳಿ ಅವನನ್ನು ನಿಲ್ಲಿಸಿದ್ದು; ಹನುಮಂತನು ಲಂಕೆಗೆ ಹಾರುವಾಗ ದಾರಿ ತಪ್ಪಿ ಸಿಂಧೂತೀರಕ್ಕೆ ಹೋದದ್ದು; ಅನಂತರ ತೃಣಬಿಂದುವಿನಿಂದ ದಾರಿ ತಿಳಿದು ಲಂಕೆಯನ್ನು ಸೇರಿದ್ದು; ಸೀತೆ ಯನ್ನು ಹುಡುಕುವ ಸಂದರ್ಭದಲ್ಲಿ ಹನುಮಂತನು ಕುಂಭಕರ್ಣನ ಮೂಗಿನಲ್ಲಿ ಸಿಕ್ಕಿ ಒದ್ದಾಡಿದ್ದು; ಸಮುದ್ರರಾಜನಿಗೆ ಗುರಿಯಿಟ್ಟ ಬಾಣ, ಅವನ ಪ್ರಾರ್ಥನೆಯಂತೆ ೮೭ ಕೋಟಿ ನಿಶಾಚರರನ್ನು ಕೊಂದದ್ದು; ವಾನರರು ಭರತಖಂಡದ ಪರ್ವತಗಳ ಶಿಖರಗಳನ್ನೆಲ್ಲಾ ಕಿತ್ತುತಂದು ಸೇತುವೆ ಕಟ್ಟಿದ್ದು; ಆ ಸಮಯದಲ್ಲಿ ಹನುಮಂತನು ಕೈಲಾಸ ಪರ್ವತವನ್ನೇ ಎತ್ತಿಬಿಡಲು ಈಶ್ವರ ಸಮಾಧಾನಪಡಿಸಿದ್ದು; ಯುದ್ಧಕ್ಕೆ ಮುಂಚೆ ವಿಶ್ವಕರ್ಮನಿಂದ ರಾವಣನು ಕೋಟೆ ಬಲಿಸಿದ್ದು; ರಾವಣನು ಕೊನೆಗೆ ಹೋಮ ಮಾಡಿದ್ದು; ಸುಷೇಣನ ಮಾತಿನಂತೆ ಹನುಮಂತನು ಚಂದ್ರದ್ರೋಣ ಪರ್ವತವನ್ನು ತರುವಾಗ ಮಧ್ಯದಲ್ಲಿ ಮಾಯಾವಿಯಿಂದ ಕಾಲಹರಣವಾದ್ದು; ರಾವಣನು ಕಡೆಯ ಯುದ್ಧಕ್ಕೆ ಹೋಗುವ ಮೊದಲು ತನ್ನ ಭಂಡಾರವನ್ನೆಲ್ಲ ದಾನಮಾಡಿ ತಾನು ಸತ್ತರೆ ಜನರು ವಿಭೀಷಣನಿಗೆ ಅನುವರ್ತಿಗಳಾಗಿರುವಂತೆ ಹೇಳಿದ್ದು—ಇವೇ ಮೊದಲಾದ ಸಂಗತಿಗಳು 'ವಾಲ್ಮೀಕಿ ರಾಮಾಯಣ'ದಲ್ಲಿಲ್ಲ.

## ವಸ್ತು ವ್ಯತ್ಯಾಸದಿಂದಾಗಿರುವ ಪಾತ್ರ ಪೋಷಣೆ

ಇಂತಹ ಬದಲಾವಣೆಗಳಿಂದ ಕೆಲವು ಪಾತ್ರಗಳಿಗೆ ಇಲ್ಲಿ ಹೆಚ್ಚು ಕಳೆ ಬಂದಿದೆ. 'ವಾಲ್ಮೀಕಿ ರಾಮಾಯಣ'ದಲ್ಲಿ ಮಂಥರೆ ಪಾಪಿ, ದುಷ್ಟೆ. ಅವಳ ದುರ್ಬೋಧನೆಯೇ ರಾಮನ ವನವಾಸಕ್ಕೂ, ಕೈಕೆಯ ಅಪಯಶಸ್ಸಿಗೂ, ದಶರಥನ ಮರಣಕ್ಕೂ ಕಾರಣವಾಯಿತು. ಇಲ್ಲಿ ಹಾಗಿಲ್ಲ. ಇಲ್ಲಿ ಮಂಥರೆ 'ಮಾಯೆ'ಯ ಅವತಾರ. ಅಲ್ಲಿಯ ದುರ್ಬೋಧನೆ ಇಲ್ಲಿ ಅವಳ ಕರ್ತವ್ಯ. ಅವಳು ಹುಟ್ಟಿರುವುದೇ ರಾಮನನ್ನು ಕಾಡಿಗೆ ಕಳುಹಿಸುವುದಕ್ಕಾಗಿ. ಅದರಲ್ಲಿಯೇ ಅವಳ ಅವತಾರದ ಸಾರ್ಥಕತೆ

ಇಲ್ಲವಾದರೆ ಧಾರುಣಿ ಧರ್ಮವಿಹೀನರ ಭಾರದಿಂದ ಪಾರಾಗುವುದೆಂತು? ರಾಮನಿಗೆ ಯೌವರಾಜ್ಯಾಭಿಷೇಕವು ಅಣಿಯಾಗುತ್ತಲೆ, "ಆ ರಮಾಪತಿಯಾಜ್ಞೆಗಾವುದೊ ದಾರಿ ಎಂದಾ ಮಾಯೆ ವಿಜ್ಞಾನಸಾರ ಮುಖದಿಂದರಿದಳಾಗಮ ಕಾರ್ಯ ಕೌಶಲವ." ತನ್ನ ಜ್ಞಾನದೃಷ್ಟಿಯಿಂದ ಮುಂದಿನ ಕಾರ್ಯವನ್ನರಿತು ಕೈಕೆಯನ್ನು ತನ್ನ ಕಾರ್ಯಕ್ಕೆ ಅನುವಡಿಸುವಂತೆ ಮಾಡುತ್ತಾಳೆ. ಈ ದೃಷ್ಟಿಯಿಂದ ಮಂಥರೆ ಆದರ ಣೀಯಳಾಗಿದ್ದಾಳೆ. ಅಲ್ಲದೆ ಇದರಿಂದ ಕೈಕೆಯ ಪಾತ್ರಕ್ಕೂ ಮೆರುಗು ಬಂದಿದೆ. 'ವಾಲ್ಮೀಕಿ ರಾಮಾಯಣ'ದಲ್ಲಿ ಕೈಕೆ ಮಂಥರೆಯ ಮಾತಿಗೆ ಮನಸೋತಾಗ ನಮಗೆ ಅವಳ ವಿಷಯದಲ್ಲಿ ಅಸಹ್ಯವೂ ಜುಗುಪ್ಸೆಯೂ ಉಂಟಾಗುತ್ತವೆ. ಇಲ್ಲಿ ಯಾದರೋ ಹಾಗಿಲ್ಲ.

ಮುಸುಕಿದಳು ಮಾಯಾ ವಿಳಾಸದ । ವಸನದಲಿ ಮಾಯಾ ನಿತಂಬಿನಿ
ಮಿಸುಕದಂತಿರೆ ಕೇಳಿದೈ ಕಾಕುತ್ಸ್ಥ ನೃಪಸೂನು
ಪಿಸುಣರಿಂದಾರೈಶ್ವರಿಯ ಜಾ।ಳಿಸದು ಜಗದಲಸೂಯದಧಿಕ
ವ್ಯಸನದಲಿ ಮನವಿಕ್ಕಿದಳು ಮಾನಿನಿ ಮಹೀತಳಕೆ

ಮಾಯೆಗೆ ಮರುಳಾಗದವರು ಯಾರು? "ಅಸೂಯಾ ವ್ಯಸನದಲಿ ಮಾನಿನಿ ಮಹೀತಳಕೆ ಮನವಿಕ್ಕಿದಾಗ" ಅವಳನ್ನು ನಿಂದಿಸುವುದರ ಬದಲು ಮಾಯಾ ನಿತಂಬಿನಿಯ ಹಿಡಿಯಲ್ಲಿ ಸಿಕ್ಕಿ ಮಿಸುಕಲೂ ಅವಕಾಶವಿಲ್ಲದ ಅವಳ ಅಬಲತೆಗೆ ಸಹಾನುಭೂತಿಯನ್ನು ತೋರಿಸಬೇಕಾಗುತ್ತದೆ. ಹಾಗೆಯೇ ಕುಂಭಕರ್ಣ ರಾವಣರ ವಿಷಯದಲ್ಲಿಯೂ ಸಹ ನಮ್ಮ ಅಭಿಮಾನ ಸಹಾನುಭೂತಿಗಳು ಅವರ ಕಡೆಗೆ ಹರಿಯುವಂತೆ ಕವಿ ಅನುಗೊಳಿಸಿದ್ದಾನೆ. ಕುಂಭಕರ್ಣ 'ವಾಲ್ಮೀಕಿ ರಾಮಾಯಣ'ಕ್ಕಿಂತ ಇಲ್ಲಿ ಹೆಚ್ಚಾದ ಪರಾಕ್ರಮವನ್ನು ತೋರಿಸುತ್ತಾನೆ, ಮಹಾವೀರನಾಗಿ ಪ್ರಕಾಶಿಸಿದ್ದಾನೆ; ಅಲ್ಲದೆ ವಿಭೀಷಣನಂತೆಯೇ ಧರ್ಮಿಷ್ಠ. ಸೀತೆಯನ್ನು ಹಿಂದಕ್ಕೆ ಕಳುಹುವಂತೆ ರಾವಣನಿಗೆ ಬುದ್ಧಿ ಹೇಳುತ್ತಾನೆ. ರಾವಣ ಕೇಳಲಿಲ್ಲ. ಅಷ್ಟಕ್ಕೇ ವಿಭೀಷಣನಂತೆ ರಾವಣನನ್ನು ಕೈಬಿಡಲಿಲ್ಲ. ಕರ್ತವ್ಯದೃಷ್ಟಿಯಿಂದಲೂ ಅಣ್ಣನ ಮೇಲಿನ ಪ್ರೇಮದಿಂದಲೂ ಯುದ್ಧಕ್ಕೆ ಹೋಗುತ್ತಾನೆ. "ಧುರಕಿವನು ಕೈಗಟ್ಟ ನಿಂತರೆ ತರಹರಿಸುವವರಾರು ನಿರ್ಜರನರಭುಜಂಗಮುಭಟರೊಳಿದು ತಾ ಸುಪ್ರಸಿದ್ಧ ಕಣಾ"; ಆದರೂ, "ಪರಿಕಿಸುವೊಡೊಂದಿದೆ ಪರಸ್ತ್ರೀ ಹರಣದನುಬಂಧಿತೆಯನಂಗೀಕರಿಸಿ ದುದರಿಂದೇನಹನೊ ನಾನರಿಯೆನಿದ" ಎಂದು ಕವಿ ಅನುಮಾನಪಟ್ಟಹಾಗೆಯೇ ಆಯಿತು. ಅಣ್ಣನ ಪಾಪಕ್ಕೆ ಅವನು ಬಲಿಯಾಗಬೇಕಾಯಿತು. ಪಾಪ! ರಾವಣನೂ ಹಾಗೆಯೇ ಮಹಾವೀರ. ಇಂದ್ರಾದಿ ದಿಕ್ಪಾಲಕರೆಲ್ಲರನ್ನೂ ಗೆದ್ದವನು. ಸೀತೆಯನ್ನು ತಂದಾಗ ರಾಮ ತನ್ನನ್ನು ಸೋಲಿಸಬಲ್ಲನೆಂದು ಯೋಚಿಸಿರಲಿಲ್ಲ. ನಷ್ಟದಮೇಲೆ ನಷ್ಟ ಸಂಭವಿಸಿದಾಗ ಅವನ ಮನಸ್ಸು ಕದಡಿತು:

ಜನನಿ ಜನನಿಯ ಜನಕನನುಚಿತ।ವೆನಲು ಜರಿದೆನು ಜನಕಜಾಪತಿ
ಜನಪನೆಂದೇ ಕೂಡಿ ಮಾಡಿದೆನಪ್ರಬುದ್ಧಿಕೆಯ
ದಿನದಿನಕೆ ಕಡೆಗೇಡು ಕೈಯೊಡ।ನೊನದು ಕೊಡುತಿದೆ ಕಾಮುಕತ್ವದ
ನೆನಹು ನೆಗ್ಗದೆ ಮಾಣದೆಂದಸುರೇಂದ್ರನಳವಳಿದ

ಹೀಗೆ ಪಶ್ಚಾತ್ತಾಪಪಟ್ಟಿದ್ದಾನೆ. ಆದರೂ ಅಭಿಮಾನಧನ. ಕಷ್ಟಕ್ಕೆ ಹಿಂದೆಗೆಯು ವವನಲ್ಲ: ತಂದಮೇಲೆ ಹೇಡಿಯಂತೆ ಹಿಂದಕ್ಕೆ ಒಪ್ಪಿಸುವುದು ಅವನಿಂದ ಆಗದ ಕೆಲಸ. ಬದುಕಿದ್ದರೆ ರಾಮನನ್ನು ಗೆದ್ದ ಕೀರ್ತಿ ಬರಬೇಕು, ಸತ್ತರೆ ಛಲಕ್ಕಾ ಮಲ್ಲನೆಂಬ ಕೀರ್ತಿ ಬರಬೇಕು— ಎಂಬುದು ಅವನ ಪ್ರತಿಜ್ಞೆ. ಆದುದರಿಂದಲೇ ಹೀಗೆ ಹೇಳಿದ್ದಾನೆ:

ನೋಡುವೆನು ತಮ್ಮನಲಿ ತಮ್ಮನ । ಪಾಡು ತಪ್ಪಿದ ಬಳಿಕ ಪಂಥದ
ಪಾಡು ಪಾಡಿನಮೇಲೆ ಪೌರುಷದುರುಪರಿಗ್ರಹದ
ಮೋಡಿ ಮುರಿಯೆಡೆ ಮನದ ಖಾಡಾ।ಖಾಡಿಯಲಿ ಹೊಯ್ದಾಡಿ ಕೀರ್ತಿಯು
ಜೋಡಿಸುವುದೇ ಜಾಣತನದಭಿಯೋಗ ತನಗೆಂದ

ಇವೆಲ್ಲಕ್ಕಿಂತ ಹೆಚ್ಚಾಗಿ ತಾನು ಯುದ್ಧಕ್ಕೆ ಹೊರಡುವ ಮೊದಲು ಭಂಡಾರವನ್ನೆಲ್ಲ ತನ್ನ ಬಡಬಗ್ಗ ಪ್ರಜೆಗಳಲ್ಲಿ ಹಂಚಿ, ತಾನು ಸತ್ತರೆ ವಿಭೀಷಣನನ್ನು ಅನುವಾಗಿಸಿ ಕೊಂಡಿರುವುದೆಂದು ಹೇಳುವಾಗ, ನಮ್ಮ ಕಣ್ಣಲ್ಲಿ ನೀರು ಬರುವುದು. ಇಂತಹ ಮಹಾನುಭಾವನ ಸಾವನ್ನು ಕಂಡಾಗ ಇಂಥ ಮಹಾವ್ಯಕ್ತಿಗೂ ಈ ಗತಿಯೇ ಎಂದು ಮನಸ್ಸು ವ್ಯಥಿಸುವುದು ಮತ್ತು ಹೆದರುವುದು.—ರಾಮನ ಪಾತ್ರ ದಲ್ಲಾಗಿರುವ ಪರಮಾತ್ಮಭಾವದ ಬದಲಾವಣೆಯನ್ನು ಈ ಮೊದಲೇ ಸೂಚಿಸಿ ದ್ದಾಗಿದೆ. ಇಷ್ಟು ವಿನಾ ಮಿಕ್ಕಹಾಗೆ 'ವಾಲ್ಮೀಕಿ ರಾಮಾಯಣ'ದ ಪಾತ್ರಗಳೇ 'ಕುಮಾರವಾಲ್ಮೀಕಿ'ಯ ಪಾತ್ರಗಳು. ವಾಲ್ಮೀಕಿ ತನ್ನ ಪಾತ್ರಗಳನ್ನು ತಲೆತಲಾಂತರ ಗಳಿಂದ ಪರಿಚಯಮಾಡಿಕೊಟ್ಟರೆ, 'ಕುಮಾರವಾಲ್ಮೀಕಿ' ಕಥೆಗೆ ಅವರು ಎಷ್ಟು ಸಂಬಂಧಿಸಿರುವರೋ ಅಷ್ಟು ಮಾತ್ರ ಪರಿಚಯಮಾಡಿಕೊಟ್ಟಿದ್ದಾನೆ.

## ಕಾವ್ಯದ ಕುಂದು ಕೊರತೆಗಳು

ಹೀಗೆ ಸೂಕ್ಷ್ಮ ಪರಿಚಯವನ್ನು ಮಾಡಿಕೊಡುವುದರಿಂದ ಇಲ್ಲಿಯ ಪಾತ್ರಗಳು ಓದುಗರ ಮನಸ್ಸಿನಲ್ಲಿ ಬಲವಾಗಿ ನಾಟುವುದಿಲ್ಲ. ಆ ಪಾತ್ರಗಳು ಸ್ವಲ್ಪ ಮಂಕಾಗಿ ಕಾಣುತ್ತವೆ. ಅವು ನಮ್ಮ ಜೀವನದಮೇಲೆ ಹೆಚ್ಚು ಪರಿಣಾಮ ಮಾಡಲಾರವು. ಇದು ಈ ಕಾವ್ಯದಲ್ಲಿಯ ಒಂದು ದೊಡ್ಡ ಕೊರತೆ. ಮಹಾಕಾವ್ಯವು ಜನರ ಜೀವನಕ್ಕೆ ಒಂದು ಆದರ್ಶವನ್ನು ಕಲ್ಪಿಸಬೇಕು. ಆಗಲೇ ಅದು ಮಹಾಕಾವ್ಯವಾಗುವುದು. ವಾಲ್ಮೀಕಿ ಈ ಗುರಿಯನ್ನು ಸಾಧಿಸಿದ್ದಾನೆ. ಆದುದರಿಂದಲೇ ಭಾರತ ಜನಾಂಗವು ಈಗಲೂ ಆ ಕಾವ್ಯದ ಮೇಲ್ಪಂಕ್ತಿಯಲ್ಲಿ ನಡೆಯುತ್ತಿದೆ. 'ಕುಮಾರವಾಲ್ಮೀಕಿ'ಯ ಕಾವ್ಯ ಈ ಗುರಿಯನ್ನಿಟ್ಟುಕೊಂಡೇ ಹೊರಟಿದ್ದರೂ ಇದನ್ನು ಸಾಧಿಸಿ ಕೃತಕೃತ್ಯತೆ ಯನ್ನು ಪಡೆದಿಲ್ಲ. ಇನ್ನೊಂದು ದೊಡ್ಡ ಕುಂದನ್ನೂ ನಾವು ನೋಡಬಹುದು. ನಮ್ಮ ಕವಿ ವಾಲ್ಮೀಕಿಯ ಕಾವ್ಯವನ್ನು ಅನುಸರಿಸಿಯೇ ಬರೆದಿದ್ದರೂ ಅವನಲ್ಲಿ ಬರುವ ಅಮೋಘವಾದ ಅನೇಕ ಪ್ರಕೃತಿವರ್ಣನೆಗಳನ್ನು ಬಿಟ್ಟುಬಿಟ್ಟಿದ್ದಾನೆ. ಅರಣ್ಯ ಕಿಷ್ಕಿಂಧಾ ಕಾಂಡಗಳಲ್ಲಿ ಬರುವ ವಾಲ್ಮೀಕಿಯ ಒಂದೊಂದು ಪ್ರಕೃತಿ ವರ್ಣನೆಯೂ ಒಂದೊಂದು ರತ್ನ. 'ತೊರವೆ ರಾಮಾಯಣ', ಈ ಕಾವ್ಯರತ್ನದ ಹರಳುಗಳನ್ನು ಕಳೆದುಕೊಂಡ ಹೊನ್ನೊಡವೆಯಂತೆ ಮಂಕು ಮಂಕಾಗಿದೆ. ಇವನ್ನೆಲ್ಲ

ಕಥೆಯಲ್ಲಿ ಅಸಂಗತವೆಂದು ತೋರುವ ಕೆಲವು ವಿಷಯಗಳನ್ನು ಕೂಡ ಕವಿ ಸೇರಿಸಿದ್ದಾನೆ. ಮಾಯಾಮೃಗವು ದೇಶ ವಿದೇಶಗಳಲ್ಲಿ ಸಂಚರಿಸಿ ರಾಮನನ್ನು ಸುತ್ತಿಸಿದ್ದು, ಹನುಮಂತನು ಲಂಕೆಯ ಮಾರ್ಗದಲ್ಲಿ ಮಂಕನಂತೆ ದಾರಿತಪ್ಪಿದ್ದು, ಭರತಖಂಡದ ಎಲ್ಲ ಪರ್ವತಗಳನ್ನೂ ತಂದು ಸೇತುವೆ ಕಟ್ಟಿದ್ದು—ಇವೇ ಮೊದಲಾದುವು ಶುದ್ಧ ಅಸಂಗತ ಮತ್ತು ಅಸ್ವಾಭಾವಿಕ. ಕುಂಭಕರ್ಣನ ನಿದ್ರಾಭಂಗವು ವಿಶ್ವಪ್ರಯತ್ನವೇ ಆದರೂ ಕವಿ ಇಲ್ಲಿ ಬಹಳ ಉತ್ಪ್ರೇಕ್ಷೆಮಾಡಿದ್ದಾನೆ. ಇಲ್ಲಿ ಕುಂಭಕರ್ಣನನ್ನೆಬ್ಬಿಸಲು ರಾಮಾಯಣದಲ್ಲಿ ಮಾಡಿರುವ ಪ್ರಯತ್ನಗಳನ್ನು ಇಮ್ಮಡಿಯಾಗಿ ಮಾಡಿದರೂ ಸಾಧ್ಯವಾಗದೆ, ಕಡೆಗೆ ಬ್ರಹ್ಮನೇ ಬಂದು ನಿದ್ರಾಭಂಗ ಮಾಡಬೇಕಾಗುವುದು. ಅವನು ಎದ್ದಮೇಲೂ ಅವನಿಗಾಗಿ ಇಟ್ಟಿದ್ದ ಲಕ್ಷಾಂತರ ಪಶುಗಳಿಂದಲೂ ಅವನ ಹಸಿವು ಅಡಗದೆ, ಸುರಗುರು ಬಂದು ಮಂತ್ರದ ಗುಳಿಗೆಯನ್ನು ಕೊಟ್ಟು ಹಸಿವಡಗಿಸಬೇಕಾಗುತ್ತದೆ. ಮಹಾವೀರನಾದ ರಾವಣನನ್ನು ನೀಲನೆಂಬ ಕಪಿ ಲೀಲಾಜಾಲವಾಗಿ ಆಕಾಶಕ್ಕೆ ಎತ್ತಿಕೊಂಡುಹೋಗಿ, "ಅಳದಿರೆನ್ನಯ ಕಂದ ಜೋ ಮಕ್ಕಳ ಮಹಾಮಾಣಿಕವೆ ಜೋ ಮೂಗಳಿದವಳ ಕಡು ಮುಗ್ಧ ಶಿತಕರ ಶಿಸುವೆ ಜೋ" ಎಂದು ಮುಂತಾಗಿ ತೂಗಿದನೆಂದು ಹೇಳುವುದು ಹಾಸ್ಯಾಸ್ಪದವಾಗಿ ತೋರುತ್ತದೆ. ಇವೆಲ್ಲಾ ಕಾವ್ಯದಲ್ಲಿಯ ಕುಂದು ಕೊರತೆಗಳು.

ಮುಖ್ಯವಾಗಿ ಲೋಕದಲ್ಲಿ ವ್ಯಂಗ್ಯಾರ್ಥಪ್ರಧಾನವಾದ ಕಾವ್ಯಗಳು ಉತ್ತಮವೆಂದೂ, ವಾಚ್ಯಾರ್ಥಪ್ರಧಾನವಾದ ಕಾವ್ಯಗಳು ಮಧ್ಯಮವೆಂದೂ, ವಾಚ್ಯಾರ್ಥ ವ್ಯಂಗ್ಯಾರ್ಥಗಳೆರಡೂ ಸ್ಫುಟವಾಗಿ ತೋರದೆ ಕೇವಲ ಅಲಂಕಾರಪ್ರಧಾನವಾಗಿರತಕ್ಕ ಕಾವ್ಯಗಳು ಅಧಮವೆಂದೂ ಹೇಳುವುದುಂಟು. ಒಟ್ಟಿನಲ್ಲಿ ಇದು ವಾಚ್ಯಾರ್ಥಪ್ರಧಾನವಾದ ಕಾವ್ಯ. ಆದುದರಿಂದ ಇದನ್ನು 'ಪಂಪ ಭಾರತ', 'ಕುಮಾರವ್ಯಾಸ ಭಾರತ' ಗಳಂತಹ ವ್ಯಂಗ್ಯಾರ್ಥಪ್ರಧಾನವಾದ ಉತ್ತಮ ಕಾವ್ಯಗಳ ಗುಂಪಿಗೆ ಸೇರಿಸಲಾಗದಿದ್ದರೂ, ಮಧ್ಯಮ ತರಗತಿಗೆ ಸೇರಿದ ಕಾವ್ಯವೆಂದು ಧಾರಾಳವಾಗಿ ಹೇಳಬಹುದಾಗಿದೆ. ಮೇಲಿನ ಉತ್ತಮ ಕಾವ್ಯಗಳಲ್ಲಿ ನಾವು ಕಾಣಬಹುದಾದ ಆ ಕವಿಗಳ ಪ್ರತಿಭೆಯನ್ನು, ಕಾಂತಿಯನ್ನು, ಈ ಕಾವ್ಯದಲ್ಲಿ ನಾವು ಕಾಣಲಾರೆವು.

## ನೀತಿ

ರಾಮಾಯಣದ ಕಥೆಯನ್ನು ಹೇಳುವ ಕವಿ ಅದರ ಮುಖ್ಯ ನೀತಿಯನ್ನು ಮನದಟ್ಟುವಂತೆ ಹೇಳಬೇಕು. 'ತೊರವೆ ರಾಮಾಯಣ'ದಲ್ಲಿ ಇದು ಚೆನ್ನಾಗಿ ಪ್ರತಿಪಾದಿತವಾಗಿದೆ. ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಳಾಗಿರುವವಳು ಸ್ತ್ರೀ. ಪುರುಷನು ಕೆಡುವುದೂ ಬದುಕುವುದೂ ಅವಳಿಂದ. ಅವಳೇ ಜನಾಂಗದ ಸಂಸ್ಕೃತಿಯ ಪ್ರತಿನಿಧಿ. ಸೀತೆ ಅಂತಹ ಪ್ರತಿನಿಧಿಗಳ ಆದರ್ಶ. ಯಾವ ಕಾಲದಿಂದ ನಮ್ಮ ಹಿರಿಯರು, "ಸೀತೆಯಂತೆ ಬಾಳು" ಎಂದು ನಮ್ಮ ಕುಲವಧುಗಳನ್ನು ಹರಸಲು ಮೊದಲುಮಾಡಿದರೊ, ಅಂದಿನಿಂದ ಇಂದಿನವರೆಗೂ ಅವರು ನಮ್ಮ ಸಂಸ್ಕೃತಿಯನ್ನು ಕಾಪಾಡಿಕೊಂಡುಬಂದಿದ್ದಾರೆ. ಅಂತಹ ಕುಲಮಾತೆಯರನ್ನು

ಪಾಪದೃಷ್ಟಿಯಿಂದ ನೋಡುವುದು ದೋಷವೆನಿಸುವುದು. ಸೀತೆಯ ಪಾತಿವ್ರತ್ಯದ ಮುಂದೆ ಮಹಾವೀರ ರಾವಣನ ಅಮೋಘವಾದ ಆಸುರೀ ಸಂಪತ್ತು ನಿಶ್ಶೇಷ ವಾಗಿ ಭಸ್ಮವಾಗಿ ಹೋಯಿತು. ಈ ಪರಸ್ತ್ರೀಗ್ರಹಣದ ಅನರ್ಥವನ್ನು ಕುರಿತು ಕವಿ ಆಗಾಗ ಒತ್ತಿ ಹೇಳಿರುತ್ತಾನೆ. ಸಮಯ ಒದಗಿದಂತೆಲ್ಲಾ ಒಂದೊಂದು ಮಾತಿನಲ್ಲಿ ಆ ಭಾವವನ್ನು ವ್ಯಕ್ತಪಡಿಸಿ, ಆ ನೀತಿಯ ಕಾವು ಸೋಕುವಂತೆಯೂ, ಓದಿದಾಗ ಮಾತ್ರವಲ್ಲದೆ ಓದಿದಮೇಲೂ ಅದು ಮನಸ್ಸಿನಲ್ಲಿ ಚಿರಸ್ಥಾಯಿಯಾಗಿ ನಿಲ್ಲು ವಂತೆಯೂ ಮಾಡುತ್ತಾನೆ. ಅಹಲ್ಯೆಯ ಕಥೆಯನ್ನು ಹೇಳುವಾಗ, "ಪರವಧು ವ್ಯಸನದಲಿ ಕೆಡರಾರರಸ ರಾಘವ ಕೇಳು" ಎಂದು ಹೇಳಿದ್ದಾನೆ. "ಮದ ನಾಗ್ರೊಳ್ಳಿದನು", "ಪರವಧೂ ವ್ಯಸನಿಗಳ ಭಂಗವು ನರಕಭಾಜನವೆಂದು", "ಸ್ಮರನ ಗರುಡಿಯ ಶ್ರಮವು ಜೀವದ ಸರಸ" ಎಂದು ಮುಂತಾಗಿ ವಿಭೀಷಣನ ಬಾಯಿಂದಲೂ, ಕುಂಭಕರ್ಣನ ಬಾಯಿಂದಲೂ, ಇಂದ್ರಜಿತುವಿನ ಬಾಯಿಂದಲೂ, ಕಡೆಗೆ ಮಂಡೋದರಿಯ ಬಾಯಿಂದಲೂ ರಾವಣನಿಗೆ ಬುದ್ಧಿ ಹೇಳಿಸಿದ್ದಾನೆ. ಇಷ್ಟ ರಿಂದಲೂ ತೃಪ್ತನಾಗದೆ ಕವಿ ಕುಂಭಕರ್ಣನು ಅಜೇಯನೆಂದು ಹೇಳಿ, ಆದರೂ "ಪರಸ್ತ್ರೀಹರಣ ದನುಬಂಧಿತೆಯ ನಂಗೀಕರಿಸಿದುದರಿಂದ ಲೇನಹನೊ" ಎಂದು ಹೇಳಿರುವುದಂತೂ ಬಹಳ ಚೆನ್ನಾಗಿದೆ. ಇದಲ್ಲದೆ ಸನ್ನಿವೇಶ ಒದಗಿದ ಕಡೆ ಅನೇಕ ನೀತಿಯ ಬುದ್ಧಿಮಾತುಗಳನ್ನು ಹೇಳುತ್ತಿರುತ್ತಾನೆ. ಅಣ್ಣನನ್ನು ಬಿಟ್ಟುಬಂದು ದೇಕೆಂದು ರಾಮನು ವಿಭೀಷಣನನ್ನು ಪ್ರಶ್ನಿಸಲು ಅವನು, "ಅತಿಮೂರ್ಖ ದುಷ್ಕೃತ ಜೀವಿಗಳ ಬಳಿವಿಡಿದು ಬದುಕುವುದು ಉಚಿತವಲ್ಲ"ವೆಂದೂ, ಅದ ಬದಲು "ಜೀವಿಸುವುದುಂಟಾದರಡವಿಯ ಜೀವನವ ಕೊಂಡಿಹುದು" ಉತ್ತಮ ವೆಂದೂ, ಮತ್ತು,

> ಬಾಳಬೇಕೆಂದೆಂಬವಗೆ ಚಂಡಾಲ ಗೃಹ ವೀಥಿಯಲಿ ಭಿಕ್ಷದ
> ಕೂಳ ತಿರಿತಂದುಂಡು ಬದುಕುವುದಧಿಕ ಸೌಖ್ಯಕಣ
> ಕೇಳಿದೈ ರಾಜೇಂದ್ರ ಮೂರ್ಖರ । ಕೇಳಮೇಳದಲಿದ್ದು ಬದುಕುವ
> ಖೂಳ ವೃತ್ತಿಯ ಬದುಕು ಕಷ್ಟಕೆ ಕಷ್ಟತರ....

ಎಂದೂ ಹೇಳುವನು. ಮಾಯಾಸೀತೆಯ ಸಂಹಾರವಾದಮೇಲೆ ಹನುಮಂತನು 'ಸೇವೆ'ಯನ್ನು ಕುರಿತು ಹೇಳುವ ೪-೫ ಪದ್ಯಗಳಿಗೆ ಆ ಸಂದರ್ಭದಲ್ಲಿ ಅಷ್ಟು ಔಚಿತ್ಯವಿಲ್ಲದಿದ್ದರೂ ಆ ಮಾತುಗಳು ಬಹು ಚೆನ್ನಾಗಿವೆ. ಅದರಲ್ಲಿ ಒಂದು ಪದ್ಯ ಹೀಗಿದೆ:

> ಸೇವೆ ಸಾವಿನ ಸಂಗಡದ ಮನೆ । ಸೇವೆ ದುಷ್ಟಾಚಾರದಾಗರ
> ಸೇವೆ ಸತ್ಯವನೊತ್ತಿಯಾಳುವ ಸತ್ಯದಾಗರವು
> ಸೇವೆಯವಮಾನಕ್ಕೆ ಚಾವಡಿ । ಸೇವೆ ಪಾಪದ ಪುಂಜವಿದ್ದುದು
> ಸೇವೆಗಿಂತತಿಕಷ್ಟವಿನ್ನೊಂದಿಲ್ಲ ರಘುನಾಥ

ಇಂಥ ನೀತಿಬೋಧನೆಯ ವಾಕ್ಯಗಳೂ ಪದ್ಯಗಳೂ ಅನೇಕವಾಗಿ ಬರುತ್ತವೆ.

## ಕಾವ್ಯದ ಅನಾದರ

ಈ ರೀತಿಯಾಗಿ 'ತೊರವೆ ರಾಮಾಯಣ'ವು ಹಲವು ವಿಶೇಷಗುಣಗಳಿಂದ ಕೂಡಿದ್ದರೂ ಕನ್ನಡಿಗರು ಈ ಕಾವ್ಯವನ್ನು ಬಹು ಉಪೇಕ್ಷೆಮಾಡಿದ್ದಾರೆ. ಕನ್ನಡ ದಲ್ಲಿ ಇಂತಹ ಒಂದು ಕಾವ್ಯವಿದೆ ಎಂಬ ಸಂಗತಿ ಕೂಡ ಅನೇಕ ಕನ್ನಡಿಗರಿಗೆ ಗೊತ್ತಿಲ್ಲ. 'ಕುಮಾರವಾಲ್ಮೀಕಿ'ಯ ಮುಂದೆ ಬಂದ ಕವಿಗಳಲ್ಲಿ ಬಬ್ಬೂರ ರಂಗನ ಹೊರತು ಮತ್ತಾರೂ ಇವನನ್ನು ಸ್ಮರಿಸಿಲ್ಲ. 'ಜಯಕರ್ನಾಟಕ' ಪತ್ರಿಕೆಯ ೨ನೆಯ ಸಂಪುಟದಲ್ಲಿ ಬರುವ ಮೂರು ಪುಟದ ಒಂದು ಲೇಖನವಲ್ಲದೆ, ಇವನ ವಿಷಯು ವಾಗಿಯಾಗಲಿ ಈ ಕಾವ್ಯದ ವಿಷಯವಾಗಿಯಾಗಲಿ ಒಂದು ಲೇಖನವನ್ನೂ ಯಾರೂ ಬರೆದಿರುವಂತೆ ತೋರುವುದಿಲ್ಲ. ಈ ಕಾವ್ಯವು ಪಂಪ ರನ್ನರ ಕಾವ್ಯದಂತೆ ಅತ್ಯುತ್ತಮ ಕಾವ್ಯವಲ್ಲದಿದ್ದರೂ, ಇದನ್ನು ಉತ್ತಮ ಕವಿತೆಗಳ ಗುಂಪಿಗೆ ಧಾರಾಳವಾಗಿ ಸೇರಿಸ ಬಹುದು. ಮೈಸೂರು ವಿಶ್ವವಿದ್ಯಾನಿಲಯದವರು ಕನ್ನಡ ಕಾವ್ಯಗಳನ್ನು ಸಂಗ್ರಹಿಸಿ ಬರಸುತ್ತಿರುವಂತೆ ಈ ಕಾವ್ಯವನ್ನೂ ಸಂಗ್ರಹಿಸಿ ಬರಸಿದರೆ ಈ ಕಾವ್ಯದ ಉತ್ಕೃಷ್ಟತೆ ಎಲ್ಲರ ಗಮನಕ್ಕೆ ಬರುವುದು. ಅಂತೂ ಈಗಿನಷ್ಟು ಅಲಕ್ಷ್ಯ 'ತೊರವೆ ರಾಮಾಯಣ'ಕ್ಕೆ ಸಲ್ಲದೆಂದು ಖಂಡಿತವಾಗಿ ಹೇಳಬಹುದು.

## ಸಮಾಪ್ತಿ

ಮೇಲಾಗಿ ಪ್ರಪಂಚದ ದೃಷ್ಟಿಯಿಂದ 'ವಾಲ್ಮೀಕಿ ರಾಮಾಯಣವು' ಮಹಾ ಕಾವ್ಯ. ಒಂದು ದೃಷ್ಟಿಯಿಂದ ಭಕ್ತಿಯೆಂಬ ಆಚಾರ್ಯನಿಂದ ಪ್ರಕೃತಿ ಪುರುಷರಿಗಿರುವೆ ಅವಿನಾಭಾವಸಂಬಂಧವನ್ನು ಜಗತ್ತಿಗೆ ತೋರಿಸುವ ಆಧ್ಯಾತ್ಮಿಕ ಗ್ರಂಥ. ಇನ್ನೊಂದು ದೃಷ್ಟಿಯಿಂದ ದೈವಿಕತೆಗೆ ಸರಿಹೋಲುವ ಶಕ್ತಿಯನ್ನು ಮೆಟ್ಟ ಆಸುರೀ ಸಂಪತ್ತು ಎಷ್ಟೇ ತನ್ನ ಪ್ರತಾಪವನ್ನು ಬೀರಿ ಮೆರೆದರೂ, ದೈವೀಮೂರ್ತಿಯ ಮುಂದೆ ಅದರ ನಿರ್ವೀರ್ಯತೆಯನ್ನು ಪ್ರತಿಪಾದಿಸುವ ವೇದಾಂತ ಗ್ರಂಥ. ಮತ್ತೊಂದು ದೃಷ್ಟಿ ಯಿಂದ ಪ್ರಪಂಚಕ್ಕೇ ದಾರಿ ತೋರಿಸುವ ಒಬ್ಬ ಆದರ್ಶ ಮಹಿಳೆ, ಒಬ್ಬ ಆದರ್ಶ ಪುರುಷವ್ಯಕ್ತಿಗಳನ್ನು ಚಿತ್ರಿಸಿ ಜಗತ್ತಿನ ಶಾಂತಿಗೆ ಕಾರಣವಾಗಬಲ್ಲ, ಭರತ ಮಾತೆ ಹೆಮ್ಮೆಪಡುವ ಲೌಕಿಕ ಮಹಾಕಾವ್ಯ. ಈ 'ತೊರವೆ ರಾಮಾಯಣ'ವು ಅಂತಹ ಕಾವ್ಯದ ಹೃದಯದ ಪರಿಚಯವನ್ನು ಮಾಡಿಕೊಡುವುದಾಗಿದೆ. ಕನ್ನಡಿಗರು ಈ ಉಪಕಾರವನ್ನು ನೆನೆದು ಅದಕ್ಕೆ ಸಲ್ಲಬೇಕಾದ ತಮ್ಮ ಕಾಣಿಕೆ ಯನ್ನು ಸಲ್ಲಿಸುವ ಕಾಲ ಬೇಗ ಬರಲೆಂದು ಆಸೆಪಡುತ್ತೇವೆ.

# ಸಾಹಿತ್ಯವು "ಬಾಳ ಬಟ್ಟೆ ಪರವಾಗವು"*

ಪ್ರೊ॥ ಎಸ್. ಎಸ್. ಮಾಳವಾಡ, ಎಂ.ಎ. ಅವರು, ಧಾರವಾಡ

---

ಕನ್ನಡ ಸೋದರ ಸೋದರಿಯರೆ,

ಕನ್ನಡಿಗರು "ಚದುರರ್ನಿಜದಿಂ ಕುರಿತೋದದೆಯುಂ ಕಾವ್ಯಪರಿಣತಮ[ತಿ]ಗಳ್" ಎಂಬುದಾಗಿ ನೃಪತುಂಗದೇವನು ಹೇಳಿದ್ದಾನೆ. ಆ ಮಾತಿಗೆ ಉತ್ತ[ಮ] ನಿದರ್ಶನವೆಂಬಂತೆ ಇದ್ದ "ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ"ಯು, "ಪ[ತ್ರ]ಪತ್ರದ ಉಲುಹುಗೆಡದಗ್ಗಳಿಕೆ"ಯು ಸಹಜಕವಿ ನಾರಾಯಣಪ್ಪನ ಕಾವ್ಯ ನಿರ್ಮಾಣದ ರಂಗಸ್ಥಲವಾದ ಗದುಗಿಗೆ ಇಂದು ಕನ್ನಡ ಶಾರದೆಯ ಪೂಜಾ ಸಮಾ[ರಂ]ರಂಭಕ್ಕೆ ಪೂಜಾರಿಯಾಗಿ ಬರುವ ಸುಯೋಗ ನನಗೆ ದೊರೆತುದಕ್ಕೆ ವಿಶೇಷ ಆನಂ[ದ]ವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಕರ್ನಾಟಕ ಸಾಂಸ್ಕೃತಿಕ ಪ್ರೋತ್ಸಾ[ಹಕ್ಕೆ] ಸಾಹಿತ್ಯ ಸಮ್ಮೇಲನಗಳು ಉತ್ತಮ ಸಾಧನಗಳೆಂದು ನಾನು ದೃಢವಾಗಿ ನಂಬಿದ್ದೇನೆ. ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಲನವಲ್ಲದೆ ಇನ್ನೂ ಅನೇಕ ಸಮ್ಮೇಲನಗಳು ಅಲ್ಲಲ್ಲಿ ಆಗಾಗ ನಡೆಯುವುದು ಕನ್ನಡ ಸಾಹಿತ್ಯ ಪ್ರಚಾರದ ದೃಷ್ಟಿಯಿಂದ ಅವಶ್ಯ[ಕ]ವೆಂದು ನನ್ನ ಅಭಿಪ್ರಾಯ. ಅದಕ್ಕಾಗಿಯೇ ಧಾರವಾಡ ಜಿಲ್ಲಾ ಮೊದಲನೆಯ ಸಾಹಿತ್ಯ ಸಮ್ಮೇಲನವು ನಡೆಯುವುದಕ್ಕೆ ನಾನು ಸ್ವಲ್ಪ ಉತ್ಸಾಹ ತೋರಿಸಿದ್ದೆ. ತಮ್ಮ ಆಮಂತ್ರಣವನ್ನು ನಾನು ಒಪ್ಪಿದುದಕ್ಕೆ ಅದೂ ಕೆಲಮಟ್ಟಿಗೆ ಕಾರಣ ವಾಯಿತೆಂದು ಹೇಳಬಯಸುತ್ತೇನೆ. ಸಾಹಿತ್ಯ ನಿರ್ಮಾಣಕರ್ತರಿಗೆ ಉತ್ತೇಜನ ವನ್ನೂ ಬೆಂಬಲವನ್ನೂ ಕೊಡುವ, ಹಾಗೂ ನಿರ್ಮಾಣವಾದ ಸಾಹಿತ್ಯದ ಪರಿಚಯ ವನ್ನು ಜನಸಾಮಾನ್ಯರಿಗೆ ಮಾಡಿಕೊಡುವ ಉದ್ದೇಶದಿಂದ ಜಿಲ್ಲಾ ಸಾಹಿತ್ಯ ಸಮ್ಮೇಲನದ ಕಲ್ಪನೆಯನ್ನು ಮುಂದುವರಿಸಿದ ತಮ್ಮನ್ನು ಅಭಿನಂದಿಸುವುದು ನನ್ನ ಕರ್ತವ್ಯವೆಂದು ತಿಳಿಯುತ್ತೇನೆ.

ಸಾಹಿತ್ಯ ಸಮ್ಮೇಲನಗಳು ಹೆಚ್ಚಬೇಕೆಂದೇನೋ ನಾನು ಹೇಳಿದೆ. ಆದರೆ ಜಾಗ್ರತಿಕ ರಾಜಕೀಯ ಕ್ಷೇತ್ರದಲ್ಲಿ ನಡೆದಿರುವ ರಣಕೋಲಾಹಲ, ಭಾರತದ ಅಪೂರ್ವ ರಾಜಕೀಯ ಆಂದೋಲನ, ದೀನರಾದ ಭಾರತೀಯರ ಆರ್ಥಿಕ ದೈನ್ಯ— ಇವುಗಳೇ ಹೆಚ್ಚಾಗಿ ನಮ್ಮ ಮನಸ್ಸನ್ನು ಸೆಳೆದಿರುವಾಗ, ಸಾಹಿತ್ಯದಂತಹ ವಿಷಯ ಗಳಿಗೆ ಹೆಚ್ಚಾಗಿ ಗಮನಕೊಡುವುದು ಅವಶ್ಯವಿದೆಯೇ ಎಂದು ಯಾರಾದರೂ ಕೇಳಿದರೆ ಆ ಪ್ರಶ್ನೆಯು ಅಸಮಂಜಸವೆಂದು ಹೇಳಲಾಗದು. ಆದರೆ ಜಗತ್ತಿನ, ಭಾರತದ, ಕರ್ನಾಟಕದ ವಿಷಮಸ್ಥಿತಿಯಲ್ಲಿಯೂ ಕೂಡ ಸಾಹಿತ್ಯಕ್ಕೆ ಗಮನ ಕೊಡುವುದು ಅವಶ್ಯವಿದೆಯೆಂಬುದನ್ನು ಮಾತ್ರ ನಾನು ಹೇಳಲಿಚ್ಛಿಸುತ್ತೇನೆ.

---

* ಗದುಗಿನಲ್ಲಿ ತಾ॥ ೫-೧೦-೧೯೩೭ನೆಯ ದಿನ ನಡೆದ ಧಾರವಾಡ ಜಿಲ್ಲಾ ಎರಡನೆಯ ಸಾಹಿತ್ಯ ಸಮ್ಮೇಲನದ ಅಧ್ಯಕ್ಷಸ್ಥಾನದಿಂದ ಮಾಡಿದ ಭಾಷಣ.

ಹೀಗೆ ಹೇಳುವಾಗ ನಾನು, "ಹಿತೇನ ಯುಕ್ತಂ ಸಹಿತಂ, ತಸ್ಯ ಭಾವಃ ಸಾಹಿತ್ಯಂ" ಹಾಗೂ "ಸಹಾನಾಂ ಜನಾನಾಂ ಉಪಕಾರಕಂ ಸಾಹಿತ್ಯಂ" ಎಂಬ ಸಾಹಿತ್ಯದ ವ್ಯಾಖ್ಯೆಗಳನ್ನು ಅನುಮೋದಿಸುತ್ತೇನೆ. ಸಾಹಿತ್ಯವು ಮನುಷ್ಯನ ಹಿತವನ್ನೇ ಗುರಿಯಾಗಿಟ್ಟುಕೊಂಡಿರಬೇಕು; ಸಾಹಿತ್ಯವು ಜನತೆಯ ಉಪಕಾರಕ್ಕಾಗಿಯೇ ಇರಬೇಕು ಎಂಬ ಅಭಿಪ್ರಾಯಗಳನ್ನು ನಾವು ಒಪ್ಪುವುದಾದರೆ—ಒಪ್ಪಬೇಕು—ಭಾರತದ ಇಂದಿನ ವಿಷಮಪರಿಸ್ಥಿತಿಯಲ್ಲಿಯೂ ಕೂಡ ಸಾಹಿತ್ಯ ಸಮ್ಮೇಲನಗಳ ಆವಶ್ಯಕತೆ ಇದೆಯೆಂದು ಒಪ್ಪಬೇಕಾಗುತ್ತದೆ. ನಾಡುಗಳು ದೇಶದ ಘಟಕಗಳು. ನಾಡುಗಳ ನೆಮ್ಮದಿಯು ದೇಶದ ನೆಮ್ಮದಿಗೆ ಸಹಾಯಕಾರಿಯಾಗುವುದು. ಅಂತೆಯೆ ಕನ್ನಡ ನಾಡು ತನ್ನ ನೆಮ್ಮದಿಗಾಗಿ ಸಾಹಿತ್ಯದ ಸಂಬಂಧವಾಗಿ ವಿಚಾರ ಮಾಡುವುದು ಅವಶ್ಯವಷ್ಟೆ.

ಸಾಹಿತ್ಯವು ಮನರಂಜನೆಯ ಸಾಧನವೆಂಬ ಕಲ್ಪನೆ ಕೆಲವರಲ್ಲಿ ಬಳೆದು ಬಂದಿದೆ. ಆದರೆ ನಮ್ಮ ಕನ್ನಡ ಸಾಹಿತ್ಯದ ನಿಜವಾದ ತಿರುಳನ್ನು ನಾವು ಪರಿಕಿಸುವದಾದರೆ ಸಾಹಿತ್ಯಕ್ಕೆ ನಮ್ಮ ಜೀವನದಲ್ಲಿ ಹೆಚ್ಚಿನ ಸ್ಥಾನ ಕೊಡುವುದು ಅವಶ್ಯವೆಂದು ಕಂಡುಬರುವುದು. ಸಾಹಿತ್ಯದಲ್ಲಿ ನಾವು ಶಬ್ದಶಕ್ತಿಯ ಪರಾಕಾಷ್ಠತೆಯನ್ನು ಕಾಣುತ್ತೇವೆ. ವಾಕ್ಶಕ್ತಿಯನ್ನು ಮಹಾಕವಿ ದಂಡಿಯು—

ಇಹಶಿಷ್ಟಾನುಶಿಷ್ಟಾನಾಂ ಶಿಷ್ಟಾನಾಮಪಿ ಸರ್ವದಾ
ವಾಚಾಮೇವ ಪ್ರಸಾದೇನ ಲೋಕಯಾತ್ರಾ ಪ್ರವರ್ತತೇ
ಇದಮಂಧಂ ತಮಃ ಕೃತ್ಸ್ನಂ ಜಾಯೇತ ಭುವನತ್ರಯಂ
ಯದಿ ಶಬ್ದಾಹ್ವಯಂ ಜ್ಯೋತಿಃ ಅಸಂಸಾರಂ ನ ದೀಪ್ಯತೇ

ಮನುಷ್ಯನು ಶಿಷ್ಟನಿರಲಿ, ಇಲ್ಲದೆ ಇರಲಿ, ಆತನ ಜೀವನವ್ಯವಹಾರಗಳೆಲ್ಲವುಗಳಲ್ಲಿ ಶಬ್ದಶಕ್ತಿಯ ಪ್ರಭಾವವಿದ್ದೇ ಇದೆ. ವಾಕ್ಶಕ್ತಿಯು ಪ್ರಪಂಚದ ಅಂಧಕಾರವನ್ನು ಹೊಡೆದೋಡಿಸುವ ಜ್ಯೋತಿಯಾಗಿದೆ. ವಾಗ್ಜ್ಯೋತಿಯಿಲ್ಲದಿದ್ದರೆ, ಸಂಸಾರವು ಅಂಧಕಾರದಲ್ಲಿ ಮುಳುಗಿಹೋಗುವುದು. ಒಬ್ಬ ಕನ್ನಡ ಕವಿ, "ಸಕಲ ಜನಾಂತಸ್ಥಳ ತಮಮುಂ ತಮ್ಮುದಯದೊಳಲಿಸಿದರೆ ರವಿಗಳೆಮಗೆ ಕವಿಗಳೆ ವಂದ್ಯರ್" ಎಂಬುದಾಗಿ ವಾಗ್ಜ್ಯೋತಿಯನ್ನು ನೀಡುವ ಕವಿರೂಪದ ರವಿಗಳನ್ನು ಹೊಗಳುತ್ತಾನೆ. ಶಬ್ದಶಕ್ತಿಯನ್ನು "ಆವಾವಿಂದ್ರಿಯದ ವಿಷಯಮಂ ಶ್ರೋತ್ರದೊಳುದ್ಭಾವಿಪ" ಎಂಬುದಾಗಿ ಕೇಶಿರಾಜನು ಬಣ್ಣಿಸುತ್ತಾನೆ. ನೇಮಿಚಂದ್ರನು—

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರನಂ ನರನೊತ್ತಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್
ಮುಟ್ಟಿದರೊತ್ತಿ ಮೆಟ್ಟಿದರದೇನಳವಗ್ಗಳಮೋ ಕವೀಂದ್ರರಾ

ಮರನೀಗುಂ ಮಣಿಯಾಗುಮೊಂದು ಪಶುವೀಗುಂ ಕೇಳಿಮೆಂದೋಳಿಯೊಳ್
ಪುರುಡಂ ಪುಟ್ಟಿಸಿ ಕಾಷ್ಠಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್
ಮರುಳಂ ಪೋ ಪುರುಳಾಗಿಪರ್ ಕವಿಗಳೊಳ್ ಪೀಯೂಷಮಂ ಪಿಂಡಲು
ವರೆಯೊಳ್ ಕವಿಪ್ರವೇಕರೆ ವಲಂ ಬಲ್ಲರ್ ಪೆಜರ್ ಬಲ್ಲರೇ

ಎಂದು ಹೇಳುತ್ತಾನೆ. ಕಾಷ್ಠವನ್ನು ಕೊನರಿಸುವ, ಕಲ್ಲಲ್ಲಿ ನಾರೆತ್ತುವ ಕವಿಗಳ ಶಬ್ದದಲ್ಲಿದೆ. ಆಧುನಿಕ ಕವಿವರ್ಯ ಪುಟ್ಟಪ್ಪನವರು, "ಕವೀ ವಾಗ್ಯೈಂದ್ರಜಾಲಿಕರು" ಎಂದು ಹೇಳುತ್ತ ಕವಿಗಳ ವಾಕ್ಯಕ್ತಿಯನ್ನು ಬಣ್ಣಿಸುತ್ತಾರೆ:

ಸವಿನುಡಿಯ ಸಿರಿಗುಡಿಯ
ಕಟ್ಟುವವರು ನಾವು;
ಹೊಂಗನಸುಗಳ ಮುಡಿಯ
ಮುಟ್ಟುವವರು ನಾವು.

* * *

ಸೊನ್ನೆಯಲಿ ಸಗ್ಗವನು
ಕೆತ್ತುವವರು ನಾವು;
ಶೂನ್ಯದಲ್ಲಿ ಪೂರ್ಣತೆಯು
ಬಿತ್ತುವವರು ನಾವು.

* * *

ಖಡ್ಗಗಳಿಗೆಮ್ಮುಸಿರೆ
ಹರಿವಜ್ರಸಾಣೆ;
ನಮ್ಮ ಲೇಖನಿಗಿಂತ
ಬರಸಿಡಿಲ ಕಾಣೆ.

ದೇಶಗಳು ತಾಗುವುವು;
ಸೋತು ತಲೆಬಾಗುವುವು.
ವಿಪ್ಲವಗಳೇಳುವುವು,
ಮುಕುಟ ಬೀಳುವುವು!

* * *

ಸಂಕ್ಷಿಪ್ತ ಬ್ರಹ್ಮವೈ
ನಮ್ಮ ಕೈಬುಟ್ಟ!
ಕಲ್ಪಕಲ್ಪಗಳಲ್ಲಿ
ಸಾಯುವುವು ಹುಟ್ಟ!

ಸವಿನುಡಿಯ ಸಿರಿಗುಡಿಯ ಕಟ್ಟುವ, ಸೊನ್ನೆಯಲಿ ಸಗ್ಗವನು ಕೆತ್ತುವ ಸಾಮರ್ಥ್ಯ ಲೆಕ್ಕಣಿಕೆಯಲ್ಲಿದೆ. ಲೇಖನಿಯ ಕೂರಸಿಯಿಂದ ದೇಶಗಳು ತಾಗುವುವು; ಸೋತು ತಲೆಬಾಗುವುವು. ಹೆಚ್ಚೇನು; ಕವಿಯ ಕೈಬುಟ್ಟ ಸಂಕ್ಷಿಪ್ತ ಬ್ರಹ್ಮವಿದ್ದಂತೆ.

ವಾಕ್ಯಕ್ತಿಯ ಪರಿಪೂರ್ಣವಾದ ಫಲವು ಕಂಡುಬರುವುದು ಸಾಹಿತ್ಯದಲ್ಲಿಯೇ. ಪಾರ್ವತಿ ಪರಮೇಶ್ವರರಂತಿದ್ದ ವಾಗರ್ಥಗಳ ಸುಂದರ ಸಂಯೋಗವು ಕಂಡು ಬರುವುದು ಸಾಹಿತ್ಯಕ್ಷೇತ್ರದಲ್ಲಿಯೇ. ಶಾಸ್ತ್ರಗಳಲ್ಲಿ ಶಬ್ದಗಳು ಕೇವಲ ಸಂಕೇತ ವಾಗಿವೆ. ವೇದಗಳಲ್ಲಿ ಅರ್ಥಕ್ಕೆ ಪ್ರಾಧಾನ್ಯವಿಲ್ಲ.

ವಾಕ್ಯಕ್ತಿಯ ಪರಿಪೂರ್ಣತೆಯ ಫಲವಾದ ಸಾಹಿತ್ಯವು ಜನತೆಯ ಉಪಕಾರ ಕ್ಕಾಗಿ, ಹಿತಕ್ಕಾಗಿ, ಇರಬೇಕೆಂಬ ಮಾತನ್ನು ನಾವು ಪ್ರಾಚೀನ ಕನ್ನಡ ಸಾಹಿತ್ಯ ದಿಂದಲೇ ಅರಿಯಬಹುದಾಗಿದೆ. ಕನ್ನಡದಲ್ಲಿ ಕಂಡುಬರುವ ತ್ರಿವೇಣೀಸಂಗಮ

ಝುರಿಗಳನ್ನು ನಾವು ಪರೀಕ್ಷಿಸಿದಾಗ, ಕನ್ನಡ ಸಾಹಿತ್ಯವು, "ಬಾಳ ಬಟ್ಟೆ ಪರಮಾಗಮ"ವಾಗಿದೆಯೆಂದು ಕಂಡುಬರುತ್ತಿದೆ. ಕನ್ನಡ ಸಾಹಿತ್ಯವು ಜಗತ್ತಿಗೆ ಬೀರಿದ ಸಂದೇಶವೇ ಇದು ಎಂದು ಹೇಳಬಹುದು. ಕನ್ನಡದ ಆದಿಕವಿಗಳಾದ ಜೈನರ ಕಾವ್ಯದಲ್ಲೆಲ್ಲ ಇದೇ ಧ್ವನಿಯು ಮಿಡಿಯುತ್ತಿದೆ. ಕಾವ್ಯವು ಮನೋರಂಜನೆಯ ಸಾಧನೆಯೆಂಬ ಕಲ್ಪನೆಗೆ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿಯಂತೂ ಅವಕಾಶವಿಲ್ಲ. "ಮನಸಿಜ ಕೇಳಿ ಮುಖ್ಯ ಜನರಂಜನೆಗೇವುದು ಅನುಚಿತಮಲ್ತೇ" ಎಂದು ಒಬ್ಬ ಕವಿ ಕೇಳುತ್ತಾನೆ. ಭಾರತೀಕರ್ಣಪೂರನಾದ ನಾಗಚಂದ್ರನು ವರ್ಧಮಾನ ಭಟ್ಟಾರಕರ ಪಾದಗಳನ್ನು "ವಚಸ್ಸುಂದರೀ ಚಂದನ ಚರ್ಚೆ"ಗಳಿಂದ ಅರ್ಚಿಸುತ್ತಾನೆ. ಹಾಗೂ "ನಿಚ್ಚಂ ಪೊಸತೆಂಬೀ ವಾಕ್ಯೋಪಹಾರಗಳಿಂದರ್ಚಿಪೆಂ ಶ್ರೀ ಮಲ್ಲಭಟ್ಟಾರಕ ಪಾದಯುಗಮಂ" ಎಂದು ಹೇಳುತ್ತಾನೆ. ಕಾವ್ಯವು ನಮ್ಮ ಕವಿಗಳಿಗೆ ದೇವತಾಪೂಜೆಯ ಸಾಮಗ್ರಿಯಾಗಿತ್ತು. ನಾಗಚಂದ್ರನನ್ನೇ ಅನುಸರಿಸಿ ನೇಮಿಚಂದ್ರನಾದರೂ, "ಮಧುರ ಮದ್ವಾಕ್ಯ ಪುಷ್ಪೋಪಹಾರಂ" ಎಂದು ಹೇಳುತ್ತಾನೆ. ಕಾವ್ಯವು "ಭವಕಾಂತಾರದೊಳ್ ವಿಷಯಮಂ ವಿಚ್ಛೇದಿಸಲ್, ಚಿತ್ತಸಂಭವನಂ ಸಂಹರಿಸಲ್, ಕಾಷಾಯಭಟರಂ ಬೆನ್ನಟ್ಟಲ್" ಸಹಾಯಕಾರಿಯಾಗಬೇಕೆಂದು ಸರಸ್ವತೀ ಭಂಡಾರದ ಮುದ್ರೆಯನೊಡೆದ ರನ್ನನು ಹೇಳುತ್ತಾನೆ. ಜೈನ ಕವಿಗಳ ತೀರ್ಥಂಕರ ಚರಿತ್ರೆಗಳೆಲ್ಲ ಇದೇ ಮಾರ್ಗವನ್ನು ಅನುಸರಿಸಿವೆ. "ಜಾರ ಚೋರ ವೀರರ ಕಥೆಯಂತೆ ಈ ಬಾಯ್ಸವಿಯ ಮಾತುಗಳಂ ಬಱಿಕೆಯ್ವ" ಕಾವ್ಯವು ತನ್ನದಲ್ಲವೆಂದೂ, ಆದರೆ ಅದು ಬಾಳ ಬಟ್ಟೆ ಪರಮಾಗಮವೆಂದೂ ಕವಿಚಕ್ರವರ್ತಿ ಜನ್ನನು ಹೇಳಿಕೊಂಡಿರುವುದು ಯಥಾರ್ಥವಾಗಿದೆ. "ದೇವ ದೇವೋತ್ತಮನ ಪಾಡಿ ಕೈವಲ್ಯ ಲಕ್ಷ್ಮೀವರ"ನಾದ ಹರಿಹರನಿಂದ ಮೊದಲುಗೊಂಡು "ಹೃತ್ಕಮಲ ಕರ್ಣಿಕಾಮಧ್ಯದಲ್ಲಿರ್ಪ ಪಂಪಾ ಕ್ಷೇತ್ರದೊಡೆಯಂ ಸವಿನುಡಿಗಳಂ ಕೇಳಿಸಿದಂ" ಎಂದು ಹೇಳುವ ವಿರೂಪಾಕ್ಷ ಪಂಡಿತನೂ, ಹಾಗೂ

ನರನೊಮ್ಮೆ ನೆನೆಯೆ ಸಲೆ ಶಂ
ಕರನಂ ನೆರೆ ಮಾಳ್ಪ ಮಹಿಮೆಯಂ ತಳೆದ ಷಡ-
ಕ್ಷರ ಮಂತ್ರದಮಳ ಕಥನಮ
ನೊರೆವೆನ್ನಿಂದನ್ಯರೊಳರೆ ಧನ್ಯರ್ಜಗದೊಳ್

ಎಂದು ಅಭಿಮಾನಪಟ್ಟುಕೊಳ್ಳುವ ಷಡಕ್ಷರದೇವರವರೆಗಿನ ವೀರಶೈವ ಕವಿಗಳೂ ಕೂಡ ಕಾವ್ಯಗಳು ಆತ್ಮೋನ್ನತಿಯ ಸಾಧನಗಳಾಗಿರಬೇಕೆಂಬ ಉದ್ದೇಶದಿಂದಲೇ ಕಾವ್ಯನಿರ್ಮಾಣ ಮಾಡಿದ್ದಾರೆ. "ಧರೆಯೊಳ್ಪುಟ್ಟೆ ಪುಟ್ಟುತ್ತುರುಳ್ವ ನರರ ಮೇಲುರ್ಬಿ ಕಬ್ಬಗಳಂ ಬಿತ್ತರಿಸುತ್ತಂ ಕಬ್ಬಿಗರ್ಕೆಟ್ಟುಪೋದರ್"; ಆದರೆ

ರಸೆಯೊಳ್ರಸವತ್ಕವಿತೆಯ
ನುಸಿರಲ್ಪಡೆದಸಮನಯನನಂ ಪೊಗಳದೆ ಮಾ
ನಿಸರಂ ಸುರರಂ ಪೊಗಳ್ವುದು
ಕಸವರಮಂ ಕಳೆದು ಕಸಮನಾಂತವೊಲಕ್ಕುಂ

ಎಂದು ಹೇಳುವ ಸಂಪ್ರದಾಯವು ಹರಿಹರದೇವನಿಂದ ಷಡಕ್ಷರದೇವನವರೆಗೆ ಬಳೆದುಬಂದಿದೆ. ಬಸವ ಮಹಾನುಭಾವನ ಧಾರ್ಮಿಕ ಕ್ರಾಂತಿಯ ಫಲವಾದ ಕನ್ನಡ ಸಾಹಿತ್ಯ ರತ್ನಾಕರದ ಸೋಜ್ವಲರತ್ನದಂತಿರುವ ವಚನ ಸಾಹಿತ್ಯವಂತೂ ಆತ್ಮೋನ್ನತಿಯ ಸ್ಥಾನವಲ್ಲದೆ ಮತ್ತೇನು ?

“ ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ ನಿರ್ಮಳ ತತ್ತ್ವಮಂ ಬಯಸಿ ಪೇಳಲೊಡರ್ಚಿದೆಂ ” ಎಂದು ಹೇಳುವ ರುದ್ರಭಟ್ಟ ಕವಿಯ ಸಂಪ್ರದಾಯವು ಬ್ರಾಹ್ಮಣ ಕವಿಗಳಲ್ಲಿ ಬಳೆದುಬಂದಿದೆ. ಕಾವ್ಯ ವೆನ್ನುವುದು ಒಂದು ಸಮಾಧಿ. ಅದರಿಂದ ಪರಂಜ್ಯೋತಿ ಪರಮಾತ್ಮನನ್ನು ಹೃದಯದಲ್ಲಿ ನಿಲ್ಲಿಸಿಕೊಳ್ಳಬಹುದು ಎಂದು ಸಾರುವ ಕನ್ನಡ ಸಾಹಿತ್ಯವು ಎಂತಹ ಘನವಾದ ಸಂದೇಶವನ್ನು ಬೀರಿದೆಯೆಂಬುದನ್ನು ನಾವು ಲಕ್ಷಿಸಬೇಕು. ಭಾರತೀಯ ಜನಜೀವನವನ್ನು ಸುಸಂಸ್ಕೃತಗೊಳಿಸಿದ—ಈಗಲೂ ಹಾಗೆ ಮಾಡುತ್ತಿರುವ—ರಾಮಾಯಣ ಮಹಾಭಾರತಗಳಂತಹ ಕಾವ್ಯಗಳ ತಿರುಳನ್ನೇ ಬ್ರಾಹ್ಮಣ ಕವಿಗಳು ನಮಗೆ ಕೊಟ್ಟಿದ್ದಾರೆ.

ಕನ್ನಡ ಸಾಹಿತ್ಯದ ಈ ವೈಶಿಷ್ಟ್ಯವನ್ನು ಅವಲೋಕಿಸಿದಮೇಲೆ ನಮ್ಮ ಪ್ರಾಚೀನ ಸಾಹಿತ್ಯವು ಕೇವಲ ಪಾರಮಾರ್ಥಿಕವಾಗಿತ್ತು, ನಾವಿರುವ ಈ ಲೋಕ ವನ್ನು ಮರೆತಿತ್ತು ಎಂದು ಯಾರಾದರೂ ಕೇಳಬಹುದು. ಅಂತಹರಿಗೆ “ರಾಗಿ ರಸಿಕನಾಗಬೇಕು, ಭಾವಿಸಿ ವೀತರಾಗನಾಗಬೇಕು. ಭೋಗ ವಿಚಾರವು ಬೇಕು, ಆತ್ಮಯೋಗ ವಿಚಾರವು ಬೇಕು. ಶೃಂಗಾರ ಕೋವಿದನಾಗಬೇಕು; ಸಂಗ ಸಮ್ಮುಖನಾಗಬೇಕು ” ಎಂದು ಸಂದೇಶ ಬೀರಿದ ರತ್ನಾಕರವರ್ಣಿಯ ಕಾವ್ಯತತ್ತ್ವ ಸಮಾಧಾನವನ್ನೀಯಬಹುದೆಂದು ನಂಬುತ್ತೇನೆ. “ ಇಹವೆಂಬುದು ಕರ್ತಾರನ ಕಮ್ಮಟವಯ್ಯಾ. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ ” ಎಂದು ಸಾರಿದ ಬಸವ ಮಹಾನುಭಾವನ ಕನ್ನಡ ನಾಡು ಐಹಿಕ ಪಾರಮಾರ್ಥಿಕಗಳ ಸುಂದರ ಸಮನ್ವಯವನ್ನು ಸಾರಿದೆ. ಅಂತೆಯೇ ಪ್ರಾಚೀನ ಕನ್ನಡ ಸಾಹಿತ್ಯವು “ ಬಾಳಬಟ್ಟೆ ಪರಮಾಗಮ ” ವಾಗಿರುವದರ ಜೊತೆಗೆ ರಸಿಕಮನೋಹಾರಿಯೂ ಆಗಿದೆ. “ ಕವಿಮಾರ್ಗದೊಳಪೊಕ್ಕುಂ ನವರಸಮಂ ತೆರೆದು ನುಡಿದನೆನಿಸಿದ ಸತ್ಕವಿ ” ರನ್ನನ ‘ಗದಾಯುದ್ಧ’, “ ಕವಿರಸ ಸಂವ್ಯುತ್ಪನ್ನಂ ವಿವಿಧ ಕಳಾಭಿಜ್ಞನಾಗಮಜ್ಞಂ ” ಆಗಿರುವ ಜನ್ನನ ‘ ಅನಂತನಾಥ ಪುರಾಣ ’ಗಳು ರಸಪರಿಪಾಕದಿಂದ ಜನರ ಮನವನ್ನು ಆಕರ್ಷಿಸಿ, ಜನಮನವನ್ನು ಸಂಸ್ಕಾರಗೊಳಿಸುವ ಸಾಧನಗಳಾಗಿವೆ.

ಈ ಸಂದರ್ಭದಲ್ಲಿ ‘ಗದಾಯುದ್ಧ’ದಲ್ಲಿ ವಾಚಕರ ಹೃದಯವನ್ನು ಸೂರೆಗೊಳ್ಳುವ ರಮಣೀಯ ಸ್ಥಾನಗಳಲ್ಲಿ ಒಂದನ್ನು ಇಲ್ಲಿ ಉದಾಹರಿಸದೆ ಮುಂದುವರಿಯುವುದು ನನಗೆ ಸಾಧ್ಯವಿಲ್ಲವಾಗಿದೆ. ಕುರುಕ್ಷೇತ್ರದಲ್ಲಿ ದುರ್ಯೋಧನನು ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು, ಬಂಧುಗಳನ್ನು, ಮಕ್ಕಳನ್ನು, ಆಪ್ತರನ್ನು ಕಳೆದುಕೊಂಡು ಏಕಾಕಿಯಾಗಿ ರಣರಂಗದಲ್ಲಿರುವ ಸನ್ನಿವೇಶವನ್ನು ರನ್ನನು ಬಹು ಹೃದಯಸ್ಪರ್ಶಿಯಾಗಿ

ಚಿತ್ರಿಸಿದ್ದಾನೆ. ಪ್ರೀತಿಯ ಕರ್ಣದುಶ್ಶಾಸನರು ಅಳಿದುಹೋದುದನ್ನು ನೆನೆದು ದುರ್ಯೋಧನನು ಕೊರಗುತ್ತಿರುತ್ತಾನೆ:

ಎನಗಿರ್ವರೆರಡುಂ ತೋ
ಳೆನಗಿರ್ವರುಮೆರಡು ಕಣ್ಗಳೆನ್ನರೆ ಯುವರಾ
ಜನುಮಂಗರಾಜನುಂ ಪೋ
ಜಿನೆ ಸಂಜಯ ಮತ್ತಮೆನಗೆ ಮಾನಸವಾಚೀ

ಕೞಿದಂ ದಿನಕರತನಯಂ
ಕೞಿದಂ ಯುವರಾಜನಪ್ಪ ದುಶ್ಶಾಸನನುಂ
ತುೞಿಲಾಳ್ಗಳನಿರ್ವರುಮಂ
ಕೞಿಪಿ ಸುಯೋಧನನ ಬಾಳ್ವುದಂ ನಂಬಿದಿರೇ

ಎನಗೆ ಮನವಿಂದು ಶೂನ್ಯಂ
ಮನೆ ಶೂನ್ಯಂ ಬೀಡು ಶೂನ್ಯಮಾದುದು ಸಕಲಾ
ವನಿ ಶೂನ್ಯಮಾಯ್ತು ದುಶ್ಶಾ
ಸನನಿಲ್ಲದೆ ಕರ್ಣನಿಲ್ಲದಾನೆಂತಿರ್ಪೆಂ

ಬಾಂಧವರನಿೞಿಸಿ ಸರಸಿಜ
ಬಾಂಧವತನಯನುಮುಮನೆನ್ನ ತಮ್ಮನುಮಂ ನ
ಮ್ಮಂಧನರೇಂದ್ರನ ಮೊಗಮಂ
ಗಾಂಧಾರಿಯ ಮೊಗಮನಾವ ಮೊಗದೊಳೆ ನೋೞ್ಪೆಂ

ಮನ, ಮನೆ, ಬೀಡು, ಸಕಲಾವನಿ ಶೂನ್ಯವಾಗಿರುವ ಕಾಲಕ್ಕೆ ಅಂಧನರೇಂದ್ರನನ್ನೂ ಗಾಂಧಾರಿಯನ್ನೂ ಯಾವ ಮೊಗದಲ್ಲಿ ನೋಡಬೇಕೆಂದು ದುರ್ಯೋಧನನು ಕಳವಳಪಡುತ್ತಿರುವಾಗಲೇ ಅನಿರೀಕ್ಷಿತವಾಗಿ ಕವಿಯು ಅವರನ್ನು ರಣರಂಗಕ್ಕೇ ಬರಮಾಡುತ್ತಾನೆ:

ಸಕಲ ಚತುರಂಗಬಲ ವಿಕಳನಾಗಿ, ಸಪ್ತಾಂಗರಾಜ್ಯಸಮಾಲಿಂಗಿತನಾಗಿ ಸಂಗ್ರಾಮ ರಂಗದೊಳಿರ್ದನೆಂಬುದನಾಪ್ತಚರರಱಿಪೆ ಕೇಳ್ದು ಗಾಂಧಾರಿಯುಂ ಧೃತರಾಷ್ಟ್ರನುಂ ಶೋಕಾತುರೀಚಿತ್ತರಾಗಿ ತಮ್ಮ ಮಗನನಾರಯ್ಯಲುಂ ಮನಃ ಕ್ಷತಮನಾಱಿಸಲುಮೆಂದಱಸುತ್ತುಂ ಬಂದು

ಪಡೆ ಪನ್ನೊಂದಕ್ಷೋಹಿಣಿ
ಗೊಡೆಯನೆ ಮೂರ್ಧಾಭಿಷಿಕ್ತನೈ ಮೂಱುಂ ಬೆ
ಳ್ಗೊಡೆಯ ನಡುವಿರ್ಪ ನೀನಿ
ರ್ದೆಡೆಯುಮನೆಮಗಱಿಯದಂತುಟಾದುದೆ ಮಗನೇ

ಎಂದು ಅವರು ಆಕ್ರೋಶನ ಮಾಡುವಾಗ ವಾಚಕರ ಹೃದಯದಲ್ಲಿ ಅಲಗಿಕ್ಕಿ ತಿರುಗಿಸಿದಂತಾಗುತ್ತದೆ. ಕೌರವರ ನೀಚಕೃತಿಗಳೇ ಇಂತಹ ಪರಿಸ್ಥಿತಿಗೆ ಕಾರಣ ವೆಂಬುದು ಪ್ರತಿಕ್ಷಣಕ್ಕೂ ನಮ್ಮ ಮನಸ್ಸಿಗೆ ಸ್ಫುಟವಾಗುತ್ತದೆ. ತನ್ನನ್ನು ಹುಡುಕಿಕೊಂಡು ಬಂದ ತಂದೆ ತಾಯಿಗಳನ್ನು ಕಂಡ ದುರ್ಯೋಧನನ ಕಾತರ ಸ್ಥಿತಿಯನ್ನು ನೋಡಿರಿ:

ಎಂದು ಪಳಯಿಸುತ್ತುಂ ಬರ್ಪ ಗುರುಜನದ ಸರಮುಂ ಸಂಜಯನ
ಕರಕಮಲ ಮುಕುಳಿತಾಂಜಲಿಯಾಗಿ—ದೇವಾ, ನಿನ್ನಲ್ಲಿಗೆ ನಿಜ ಜನನೀಜನಕ
ರಱಿಸುತ್ತುಂ ಬಂದರ್ ಎಂಬುದುಂ ಉದ್ಧೃತ ಗೋತ್ರಾಭಿಮುಖಂ ವಜ್ರಾಹತ
ಮಾದಂತೆ ಸಿಗ್ಗಾಗಿ ತಲೆಯಂ ಬಾಗಿ

ಅರಿಭೂಪಾಲರನಿಕ್ಕಿ ಗೆಲ್ದ ಸಗೆಯಿಂ ತೂರ್ಯಸ್ವನಂ ಪೊಣ್ಮೆ ಸೋ
ದರರುಂ ಮಕ್ಕಳುಮಾಪ್ತರುಂ ಬೆರಸು ಬಂದಾನಂದದಿಂ ಕಾಣ್ಬೆನೆಂ
ದಿರಲಿಂತಾಯ್ತು ವಿಧಾತ್ರ! ಮದ್ಗುರುಗಳಂ ದುಃಖಾತ್ಮರಂ ಶೋಕತ
ತ್ಪರರಂ ಮೆಯ್ಯೊಳೆ ಬೀೞ್ವದಶ್ರುಮುಖರಂ ಕಾಣ್ಬಂತುಟಂ ಮಾಡಿದೋ

ದುರ್ಯೋಧನನು ಮಂಗಲವಾದ್ಯದ ಗಂಭೀರರವದೊಡನೆ “ಸೋದರರು
ಮಕ್ಕಳುಂ, ಆಪ್ತರುಂ ಬೆರಸು ಬಂದು ಆನಂದದಿಂ ತಂದೆ ತಾಯ್ಗಳಂ ಕಾಣ್ಬೆ”
ನೆಂದು ಬಗೆದಿದ್ದನು. ಆದರೆ ವಿಧಿಯು “ದುಃಖಾತ್ಮರಂ, ಶೋಕತತ್ಪರ
ಅಶ್ರುಮುಖರಂ” ಕಾಣುವಂತೆ ಮಾಡಿತು. ದುರ್ಯೋಧನನ ಕಳವಳವ
ಇನ್ನೂ ನೋಡಿರಿ:

ಕಂಡ ನಿಜಾನುಜರೆಲ್ಲಿದ
ರೆಂದೆನ್ನ ಜನನಿ ಬಂದು ಬೆಸಗೊಂಡೊಡದೇ
ನೆಂದು ಮಱುಮಾತುಗುಡುವೆಂ
ಕೊಂದರ್ಕೌಂತೇಯರೆಂದು ಬಿನ್ನೈಸುವೆನೋ

ಶೋಕಂ ಮಿಗೆ ಫಣಿರಾಜ ಪ
ತಾಕಂ ವಿಕಳಿತವಿವೇಕಶೂನ್ಯಂ ಬಾಷ್ಪೋ
ದ್ರೇಕಂ ಹಾ! ದುಶ್ಶಾಸನ!
ಹಾ! ಕರ್ಣಾ! ಎನುತಮಂತೆ ಮೂರ್ಛೆಗೆ ಸಂದಂ

ದುರ್ಯೋಧನನು ‘ಮೂರ್ಛೆಗೆ ಸಂದಂ’ ಎಂದು ರನ್ನನು ಹೇಳುವಾಗ ಓದುಗರ
ಅದೆಂತಹ ಕಳವಳವುಂಟಾಗುತ್ತದೆ! ಕೊನೆಗೆ ಕುರುಕುಲಚಕ್ರವರ್ತಿಯ ಹೃದಯ
ಸ್ಪರ್ಶಿಯಾದ ಅಂತ್ಯವನ್ನು ಕವಿಚಕ್ರವರ್ತಿಯು ರೋಮಾಂಚಕಾರಕ ರೀತಿಯ
ಬಣ್ಣಿಸಿದ್ದಾನೆ:

ಪಂಕಜಮುಂ ಸುಹೃದ್ವದನಪಂಕಜಮುಂ ಮುಗಿವನ್ನಮುಗ್ರತೇ
ಜಂ ಕಿಡುತರ್ಪಿನಂ ನಿಜಕರಂಗಳನಂದುಡುಗುತ್ತಮಿರ್ದು ಚ
ಕ್ರಾಂಕಮುಗಲ್ವಿನಂ ಕ್ರಮದಿನಂಬರಮುಂ ಬಿಸುಟುರ್ಬಿನಂಧಕಾ
ರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮಯ್ದಿದರ್

ದಿನಪತಿಯಾದ ಸೂರ್ಯ, ಜನಪತಿಯಾದ ಕೌರವ ಇವರು ಅಸ್ತಂಗತರಾದುದರ
ವರ್ಣನೆಯು ಅದೆಷ್ಟು ಹೃದಯಂಗಮವಾಗಿದೆ! “The Poet stirs, inspires,
energises, vivifies and delights” ಎಂಬ ಉಕ್ತಿಯು ಯಥಾರ್ಥವೆಂದು
ಹೇಳಬಹುದಲ್ಲವೇ?

ಮಹನೀಯರೇ, ನಾನು ಇದುವರೆಗೆ ವಿವೇಚಿಸಿದುದು ಪ್ರಾಚೀನ ಕನ್ನಡ
ಕಾವ್ಯಗಳ ರೀತಿಯನ್ನು. ಆದರೆ ಸಾಹಿತ್ಯವೆಂಬ ಶಬ್ದಕ್ಕೆ ವಿವಿಧ ಗ್ರಂಥಸಮೂಹ

ವೆಂಬ ಸ್ಥೂಲವಾದ ಅರ್ಥವಿದೆ. ಕಾವ್ಯವೆಂಬುದು ಸಾಹಿತ್ಯಶಬ್ದ ವಿಶಿಷ್ಟ ಅರ್ಥವಾಗಿದೆ. ಸಾಹಿತ್ಯೋದ್ಯಾನದ ಪರಿಪಕ್ವ ಫಲವೇ ಕಾವ್ಯ. ಆದರೆ ಕಾವ್ಯವೊಂದೇ ಸಾಹಿತ್ಯವಲ್ಲ. ಉದ್ಯಾನದಲ್ಲಿ ನಾವು ಪರಿಪಕ್ವ ಫಲವೊಂದರಿಂದಲೇ ತುಷ್ಟಿಯನ್ನು ಪಡೆಯುವದಿಲ್ಲ. ಅಂತೆಯೇ ಇಂದು ಕೇವಲ ಕಾವ್ಯಕೃಷ್ಟೇ ಮನ್ನಣೆಯಿಲ್ಲ. ನಾಡಿನ ಸ್ಥಿತಿಗತಿಗಳನ್ನು, ಜನತೆಯ ಆಶೆ ಆಕಾಂಕ್ಷೆಗಳನ್ನು ಅನುಸರಿಸಿ ಸಾಹಿತ್ಯವು ಬೆಳೆಯುತ್ತಿದೆ— ಬೆಳೆಯಬೇಕು. ಕನ್ನಡ ನಾಡಿನ ಉದಾರದೊರೆಗಳ ಆಶ್ರಯದಲ್ಲಿದ್ದ ಕವಿಗಳು ಮಹಾಕಾವ್ಯಗಳನ್ನೇ ಬರೆದರು. ಜೀವನದಲ್ಲಿ ಪುಷ್ಟಿತುಷ್ಟಿಗಳೇ ಆಗ ತುಂಬಿದ್ದರಿಂದ ಜನತೆಯು ಅವುಗಳನ್ನು ಅಂಗೀಕರಿಸಿ ಆದರಿಸಿತು.

"ಶಿವರೆಲ್ಲಂ ದೇವತಾಮಂದಿರಂ ನಿಮ್ನಸ್ಥಳೀಯ ರಾಜಿಯೆಲ್ಲಂ ದೀರ್ಘವಾಪಿಕಾ ಸಂಕುಲಂ ನೀರೇಜ ಕಾಸಾರ ವಸುಧೆಯೆಲ್ಲಂ ಲಸಚ್ಛಂದನೋದ್ಯಾನಂ"— ಆಗಿದ್ದ ಪ್ರಾಚೀನ ಕರ್ನಾಟಕದಲ್ಲಿ ಕಾವ್ಯಗಂಗೆಯು ಮೆರವಣಿಗೆಯ ವಿಜೃಂಭಣೆಯಿಂದ ಪದವನ್ನಿಡುತ್ತ ವಿಹಾರಗೈದಳು. ಜನರಾದರೂ ಆ ಮೆರವಣಿಗೆಯ ವಿಜೃಂಭಣೆಗೆ ಮನಸೋತು ಮೈಮರೆತರು. "ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱದ" "ಮೆಲ್ಲೆಲರಿಂ ಪೂತಕೊಳಂಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ" ಚೆಲ್ವಾದ ಕನ್ನಡ ಸೊಬಗನ್ನು, "ಇವು ಪಳ್ಳಿಗಳಿವು ಪಟ್ಟಣಮಿವು ಎಂದಱಿದು" ಪೇಳಲಾರದ ನಾಡಿನ ಸಮೃದ್ಧಿಯನ್ನು ಹೇಗೆ ವರ್ಣಿಸುವುದು?

ಆ ಸಮೃದ್ಧವಾದ ನಾಡಿನಲ್ಲಿ, ಆ ವಿಶ್ರಾಂತಜೀವನದಲ್ಲಿ, ಆ ಕೊಡುಗೈದೊರೆಗಳ ಆಶ್ರಯದಲ್ಲಿ ಹುಟ್ಟಿದ ಕನ್ನಡ ಸಾಹಿತ್ಯವು ಇಂದು ವ್ಯವಹಾರ್ಯವೆಂದು ಕಂಡುಬರಲಿಕ್ಕಿಲ್ಲ. ಆದರೆ ಅಂದು ಮಾತ್ರ ಅದು "ಬಾಳ ಬಟ್ಟೆ ಪರಮಾಗಮ"ವಾಗಿ ತನ್ನ ಸಾರ್ಥಕ್ಯವನ್ನು ಪಡೆದುಕೊಂಡಿತು.

ಆದರೆ ಮಹನೀಯರೇ, ಸಾಹಿತ್ಯವು ಜನಜೀವನದ ಪ್ರತಿಬಿಂಬವಾಗಬೇಕಾದರೆ ಅದು ಇಂದಿನ ಜೀವನದ ಆಶೆ ಆಕಾಂಕ್ಷೆಗಳನ್ನು ಪೂರೈಸುವ ಸಾಧನವಾಗಬೇಕಾಗಿದೆ. ಆಧುನಿಕ ಯುಗವು ವಿಚಾರಕ್ರಾಂತಿಯ ಯುಗವಾಗಿದೆ. ಕೇವಲ ರಸಿಕಮನೋಹಾರಿಯಾದ ಕಾವ್ಯವು ಇಂದು ನಮ್ಮನ್ನು ತಣಿಸಲಾರದು. ಸಾಹಿತ್ಯವು ನಮ್ಮ ಮೆದುಳಿಗೆ ವಿಚಾರವನ್ನು, ಮನಸ್ಸಿಗೆ ಶಾಂತಿಯನ್ನು, ಹೊಟ್ಟೆಗೆ ಹಿಟ್ಟನ್ನು ಕೊಡುವುದಕ್ಕೆ ಸಹಾಯಕಾರಿಯಾಗಬೇಕಾಗಿದೆ; ಜನಜೀವನವನ್ನು ಸುಸಂಸ್ಕಾರಗೊಳಿಸುವ ಸಾಧನವಾಗಬೇಕಾಗಿದೆ. ಆಧುನಿಕ ಕನ್ನಡ ಸಾಹಿತ್ಯವು ತನ್ನ ಸಾರ್ಥಕತೆಯನ್ನು ಪಡೆದುಕೊಳ್ಳಬೇಕಾದರೆ ಮೇಲಿನ ಮಾತುಗಳನ್ನು ಲಕ್ಷಿಸಲೇಬೇಕಾಗುವುದು.

ಸಾಹಿತ್ಯವು ಸಾಂಸ್ಕೃತಿಕ ಜೀವನದ ಪ್ರತೀಕವಾಗಿದೆಯೆಂದು ಹೇಳಬಹುದು. ಪ್ರಾಚೀನ ಕರ್ನಾಟಕದ ಹೆಗ್ಗುರುತುಗಳಂತೆ ಕನ್ನಡದ ಕವಿಗಳಿದ್ದಾರೆ. ಅವರಲ್ಲಿ

ಬಹು ಜನರು ಕುಲರಸಿಕರು, ಜೈನಮಂದಿರ ನಿರ್ಮಾಣಧನರು, ಕಾವ್ಯಕಲಾಪರಿಣತಿ ಖಡ್ಗಕಲಾಪರಿಣತಿಗಳನ್ನು ಸಮನ್ವಯಿಸಿಕೊಂಡವರು, ಒಡ್ಡಿದ ಕೈಯ್ಯಲ್ಲಿದ ಅವರ ಇತ್ತ ಕೆಯ್ಯ ಪೆಂಪಿನವರು; ಇವೆಲ್ಲಕ್ಕಿಂತ ಹೆಚ್ಚಾಗಿ ಕನ್ನಡದ ಪ್ರಾಚೀನ ಕವಿಗಳು ಅನ್ಯರ ಲೇಸನ್ನೇ ಬಯಸಿದವರು. ಅಂತೆಯೇ ಅಂದು ಸೋಜ್ವಲ ಸಾಹಿತ್ಯವು ಹೊರಟು ಜನತೆಯ ಸಂಸ್ಕೃತಿಯ ಮಟ್ಟವನ್ನು ಮೇಲಕ್ಕೇರಿಸಿತು. ಸಾಹಿತ್ಯದಿಂದ ಜನಜೀವನ, ಜನಜೀವನದಿಂದ ಸಾಹಿತ್ಯಗಳು ಸಂಸ್ಕಾರಪಡೆಯುವುವು ಎಂಬ ತತ್ತ್ವಕ್ಕೆ ಕನ್ನಡ ಸಾಹಿತ್ಯವು ಉತ್ತಮ ನಿದರ್ಶನವಾಗಿದೆ. ನಮ್ಮ ಕವಿಗಳು ಪುಣ್ಯ ಚರಿತರಾಗಿದ್ದರು. ಅಂತೆಯೇ ನಾಡಿನ ಜನತೆಯನ್ನು ಸುಶೀಲರನ್ನಾಗಿ ಮಾಡುವುದು ಅಂದು ಸಾಧ್ಯವಾಯಿತು. ಆಧುನಿಕ ಕರ್ನಾಟಕದ ಸಾಂಸ್ಕೃತಿಕ ಜೀವನಕ್ಕೆ ಸಾಹಿತಿ ಗಳು ತಮ್ಮ ಉದಾತ್ತ ಜೀವನದಿಂದ, ಆ ಉದಾತ್ತ ಜೀವನದ ಪ್ರತೀಕವಾದ ಸಾಹಿತ್ಯ ದಿಂದ ಬೆಂಬಲಕೊಡಬೇಕಾಗಿದೆ. ಕರ್ನಾಟಕದಲ್ಲಿ ಸಜೀವ, ಉದಾತ್ತ ಸಾಹಿತ್ಯವು ಹೊರಡಬೇಕಾಗಿದೆ. ಮತ, ಪಂಥ, ಪಂಗಡ, ಪ್ರದೇಶಗಳ ಕೀಳು ಭಾವನೆಗೆ ಅವಕಾಶಕೊಡದ, ಅನ್ಯರ ಲೇಸನ್ನು ಬಯಸುವ ಪುಣ್ಯಚರಿತರಾದ ಸಾಹಿತಿ ಗಳಿಂದ ಕನ್ನಡನಾಡು ಮುಗದೊಮ್ಮೆ ಬೆಳಗಬೇಕಾಗಿದೆ. ಅಂತಹ ಸುದಿನವು ಬರುವುದಕ್ಕೆ ಸಾಹಿತ್ಯಸಮ್ಮೇಲನಗಳು ಅವಕಾಶಮಾಡಿಕೊಡಬೇಕಾಗಿದೆ.

ಇದು ವಿಚಾರಕ್ರಾಂತಿಯ ಯುಗವಾದ್ದರಿಂದ ನಮ್ಮ ಸಾಹಿತ್ಯವು ಪ್ರಮೋದಕ ವಾದ ಪದ್ಯಸಾಹಿತ್ಯಕ್ಕಿಂತ ಪ್ರಚೋದಕವಾದ ಗದ್ಯಸಾಹಿತ್ಯವನ್ನೇ ಹೆಚ್ಚಾಗಿ ಲಕ್ಷಿಸಬೇಕಾಗಿದೆ. ವಿಲಕ್ಷಣಗತಿಯಿಂದ ಮುಂದುವರಿಯುತ್ತಿರುವ ಜಗತ್ತಿನ ಜ್ಞಾನಭಾಂಡಾರವು ಕನ್ನಡದಲ್ಲಿಯೂ ದೊರೆಯದ ಹೊರತು ಕನ್ನಡಕ್ಕೆ ಮನ್ನಣೆ ದೊರೆಯುವಂತಿಲ್ಲ. ಅಂತೆಯೆ ಇಂದು ಜ್ಞಾನಪ್ರದಾಯಕವಾದ ಸಾಹಿತ್ಯದ ನಿರ್ಮಾಣ ಕನ್ನಡಕ್ಕೆ ಅವಶ್ಯವಾಗಿದೆ. ಕನ್ನಡ ಸಾಹಿತ್ಯವು ಜಗತ್ತಿನ ವಿವಿಧ ಜ್ಞಾನ ವನ್ನು ಸಂಗ್ರಹಿಸಿಕೊಂಡು ಬಹು ವಿಧದಿಂದ ಬೆಳೆಯುತ್ತಿರುವ ಜನತೆಯ ಅಭಿರುಚಿ ಗಳನ್ನು ತಣಿಸಬೇಕಾಗಿದೆ. ಕಾವ್ಯವಷ್ಟೇ ಸಾಹಿತ್ಯವೆಂಬ ಕಲ್ಪನೆಯನ್ನು ನಾವು ಈಗ ಬಿಡಬೇಕಾಗಿದೆ.

ಮಹನೀಯರೇ, ಆಧುನಿಕ ಕನ್ನಡಸಾಹಿತ್ಯವು ನಿಜವಾಗಿಯೂ ಜನೋಪಕಾರಿ ಯಾಗಿದೆಯೇ ಎಂಬುದನ್ನು ತಾವು ಪರಿಕಿಸಿರುವಿರಾ? 'ಶ್ರೀನಿವಾಸ'ರ ಸಣ್ಣ ಕತೆಗಳು, ಬೇಂದ್ರೆಯವರ ಕವನಗಳು ಜನಪ್ರಿಯವಾಗದೆ ಇಲ್ಲ. ಆದರೆ ಕೆಲವು ಸಣ್ಣ ಕತೆ ಕವನಗಳಿಂದಲೇ ಕನ್ನಡಿಗರು ಸಮಾಧಾನ ಹೊಂದಬೇಕೇ? ಕೇವಲ ಕನ್ನಡದ ಅಭ್ಯಾಸದಿಂದ ಬಹುಶ್ರುತನಾಗಬಹುದೇ ಎಂಬ ನೇರವಾದ ಪ್ರಶ್ನೆಯನ್ನು ನಮ್ಮನ್ನ ಯಾರಾದರೂ ಕೇಳಿದರೆ ನಿರ್ವಿಕಾರ ಮನಸ್ಸಿನಿಂದ ಹೇಳುವದಾದರೆ ನಾನು 'ಇಲ್ಲ' ವೆಂದೇ ಉತ್ತರಕೊಡಬೇಕಾಗುವದಷ್ಟೇ? ಕನ್ನಡದ ವಿಷಯವಾಗಿ ನನಗೆ ಪ್ರೇಮ ವಿದೆ; ಅಭಿಮಾನವಿದೆ. ಆದರೆ ಅಭಿಮಾನ ಪ್ರೇಮಗಳಿಗೆ ಕಟ್ಟುಬಿದ್ದು ಆಧುನಿಕ ಕನ್ನಡ ಸಾಹಿತ್ಯಕ್ಕೆ ಇಲ್ಲದ ಯೋಗ್ಯತೆಯನ್ನು ಆರೋಪಿಸುವುದು ಸರಿಯಾ

ಬಹುದೇ? ಜ್ಞಾನದ ಹಸಿವುಳ್ಳ ಕುತೂಹಲಿಯನ್ನು ಕನ್ನಡ ಸಾಹಿತ್ಯವು ಎಷ್ಟರ ಮಟ್ಟಿಗೆ ತಣಿಸಬಲ್ಲದು ಎಂಬುದನ್ನು ನಾವು ವಿಚಾರಿಸಬೇಡವೇ? ವಿಜ್ಞಾನ, ಗಣಿತ, ಅರ್ಥಶಾಸ್ತ್ರ, ವಿಮರ್ಶಾಶಾಸ್ತ್ರ, ರಾಜ್ಯಘಟನೆ, ಸಮಾಜಶಾಸ್ತ್ರ, ಸಮಾಜಸತ್ತಾವಾದ, ಪರದೇಶದ ರಾಜಕಾರಣ, ತುಲನಾತ್ಮಕ ಧರ್ಮಗಳ ಅಭ್ಯಾಸ, ಜಾಗತಿಕ ವಿಚಾರಪ್ರವಾಹಗಳ ಸಂಕಲನ, ಜಾಗತಿಕ ಜೀವಜ್ಯೋತಿಗಳ ಆತ್ಮಚರಿತ್ರೆ—ಇತ್ಯಾದಿ ವಿಷಯಗಳನ್ನು ಅರಿತುಕೊಂಡು ಜ್ಞಾನಸಂಗ್ರಹಮಾಡಿಕೊಳ್ಳಲು ಇಚ್ಛಿಸುವವರಿಗೆ ಸಾಧನಗಳನ್ನು ಒದಗಿಸುವ ಕಾರ್ಯವನ್ನು ನಾವು ಮಾಡಬೇಕಾಗಿಲ್ಲವೇ? ಅಂತಹ ಪ್ರಯತ್ನಗಳಿಗೆ ನಮ್ಮ ಸಾಹಿತ್ಯಸಮ್ಮೇಲನಗಳು ಸಹಾಯಕಾರಿಯಾಗಬೇಡವೇ? ಎಂಬ ವಿಚಾರಗಳು ಯಾವಾಗಲೂ ನನ್ನ ಮನಸ್ಸಿನಲ್ಲಿ ಕುದಿಯುತ್ತಿವೆ. ಅವುಗಳನ್ನೇ ಇಂದು ತಮ್ಮೆದುರು ಇಡುತ್ತಿದ್ದೇನೆ.

ಮೇಲೆ ನಿರ್ದೇಶಿಸಿದ ವಿಷಯಗಳನ್ನು ಅವಲೋಕಿಸಿ ನಾನು ಸಾಹಿತ್ಯಕ್ಷೇತ್ರವನ್ನೇ ಬಿಟ್ಟೆನೆಂದು ಕೆಲವರಿಗೆ ಅನಿಸಬಹುದು. ಆದರೆ ಸಾಹಿತ್ಯಶಾಸ್ತ್ರದಲ್ಲಿ ಸಾಮಾನ್ಯ ಸಾಹಿತ್ಯ (Pure Literature), ಪ್ರಯೋಜನಕಾರಿಯಾದ ಸಾಹಿತ್ಯ (Applied Literature) ಎಂದು ಎರಡು ವಿಭಾಗಗಳು ಮಾಡಲ್ಪಟ್ಟಿರುತ್ತವೆ. ನಾನು ಮೇಲೆ ಹೇಳಿದ ವಿಷಯಗಳು ಪ್ರಯೋಜನಕಾರಿಯಾದ ಸಾಹಿತ್ಯ ಎಂಬ ವಿಭಾಗಕ್ಕೆ ಸೇರಿವೆ. ಆಧುನಿಕ ಜನತೆಗೆ ಬೇಕಾದುದೂ ಇದೇ. ಪಂಪ, ಹರಿಹರ, ರುದ್ರಭಟ್ಟರ ಕಾವ್ಯಗಳು ತಮ್ಮ ಕಾಲಕ್ಕೆ ತಮ್ಮ ದೃಷ್ಟಿಯಿಂದ ಸಾರ್ಥಕ್ಯವನ್ನು ಪಡೆದುಕೊಂಡವು. ಇಂದು ಅದೇ ಹಾದಿಯನ್ನು ತುಳಿಯುವ ಆವಶ್ಯಕತೆ ಉಳಿದಿಲ್ಲ. ಈಗ ನಮಗೆ ಇಂದಿನ ಜೀವನಕ್ಕೆ ಅನುಸರಿಸಿ ಪ್ರಯೋಜನಕಾರಿಯಾದ ಸಾಹಿತ್ಯ ಬೇಕಾಗಿದೆ. ಆದರೆ ಜನತೆಗೆ ಬೇಕಾದ ಸಾಹಿತ್ಯವನ್ನು ಕನ್ನಡವು ಇನ್ನೂ ಕೊಟ್ಟಿಲ್ಲವೆಂಬ ಮಾತನ್ನು ವಿಷಾದದಿಂದಲಾದರೂ ಒಪ್ಪಬೇಕಾಗಿದೆ. ಕನ್ನಡ ಪ್ರೇಮಿಗಳು ಕೋಪಿಸಬಾರದು. ನನ್ನ ಹೇಳಿಕೆಯನ್ನು ಪುಷ್ಟೀಕರಿಸುವ ಕೆಲವು ಅಂಕಿಗಳನ್ನು ತಾವು ಅವಲೋಕಿಸಬೇಕು.

ಬೆಂಗಳೂರಿನ ಸಾಹಿತ್ಯ ಪರಿಷತ್ತಿನ ಪರವಾಗಿ ಪ್ರತಿವರುಷ ಕನ್ನಡ ಗ್ರಂಥಪ್ರದರ್ಶನ ನಡೆಯುತ್ತಿರುವುದು ತಮಗೆ ಗೊತ್ತಿರಲಿಕ್ಕೆ ಸಾಕು. ೧೯೩೭ನೆಯ ವರುಷದ ಗ್ರಂಥಗಳ ವಿಭಜನೆಯನ್ನು ಪರಿಷತ್ತಿನವರು ಕೊಟ್ಟಿದ್ದಾರೆ. ಅದು ಹೀಗಿದೆ: (೧) ಪದ್ಯಕಾವ್ಯ ೪೬, (೨) ಸಣ್ಣಕತೆ ೪೨, (೩) ಮತಾಚಾರ ೩೫, (೪) ನಾಟಕ ೨೫, (೫) ಶಾಲಾ ಪುಸ್ತಕ ೨೪, (೬) ಜೀವನ ಚರಿತ್ರೆ ೧೪, (೭) ಚರಿತ್ರೆ ೧೫, (೮) ಸಾಹಿತ್ಯಪ್ರಬಂಧ ೧೩. ಅಂತು, ೧೯೩೭ನೆಯ ಇಸವಿಯಲ್ಲಿ ಕೂಡ ಕನ್ನಡದಲ್ಲಿ ನಿರ್ಮಾಣವಾದ ಸಾಹಿತ್ಯದಲ್ಲಿ ಪದ್ಯಕಾವ್ಯಗಳೇ ಹೆಚ್ಚು. 'ಕಾವ್ಯಪರಿಣತಮತಿ'ಗಳ ನಾಡಿನಲ್ಲಿ ಕಾವ್ಯಗಂಗೆಯು ಹೊನಲು ಹರಿಯುವುದು ಸ್ವಾಭಾವಿಕವೆಂದು ಯಾರಾದರೂ ಹೇಳಬಹುದಾದರೂ ಆಧುನಿಕ ಕನ್ನಡ ಸಾಹಿತ್ಯವು ಜನತೆಯ ಆಶೆ ಆಕಾಂಕ್ಷೆಗಳನ್ನು ಪೂರೈಸುವುದು ಅವಶ್ಯವಿರುವುದಷ್ಟೇ. ಕನ್ನಡಿಗರು

ರಂಜನೆಗೆಂದು ತಮ್ಮ ಕತೆ ಕವನಗಳನ್ನು ಓದಿ ವಿವಿಧ ಜ್ಞಾನ ಸಂಗ್ರಹಕ್ಕಾಗಿ ಸಾಹಿತ್ಯವನ್ನು ಆಶ್ರಯಿಸುವಂತೆ ಆಗಬಾರದಷ್ಟೇ. ಕನ್ನಡಿಗರಿಗಾಗಿ ಜ್ಞಾನವನ್ನು ಕನ್ನಡಿಸುವುದು ಅವಶ್ಯವಿರುವುದರಿಂದ ನಮ್ಮ ಸಾಹಿತ್ಯನಿರ್ಮಾಣವು ಆ ದಿಶೆಯಲ್ಲಿ ನಡೆಯಬೇಕಾಗಿದೆ. ಪ್ರಚೋದಕವಾದ ಗದ್ಯ ಸಾಹಿತ್ಯವು ಇಂದಿನ ಜನತೆಗೆ ಬೇಕಾಗಿದೆ. ಕನ್ನಡಭಾಷೆಗೆ ಮನ್ನಣೆಯು ದೊರೆಯಬೇಕಾದರೆ ಜನತೆಗೆ ವಾದುದನ್ನು ನೀಡುವಂತಾಗಬೇಕು.

ನಚ್ಚಿನ ಕನ್ನಡ ಸೋದರಸೋದರಿಯರೇ, ಕನ್ನಡವು ಸುಮಾರು ವರುಷಗಳ ಸಂಸ್ಕಾರವುಳ್ಳ ಭಾಷೆ. ಒಂದು ಸಾವಿರಕ್ಕೆ ಮೇಲ್ಪಟ್ಟ ಕಾವ್ಯಗಳಿಂದ ಅಲಂಕರಿಸಲ್ಪಟ್ಟ ಭಾಷೆ. ಈಗಲೂ ಕೂಡ ಒಂದು ಕೋಟಿ ಜನರ ಪ್ರತಿನಿತ್ಯ ವ್ಯವಹಾರದ ಭಾಷೆ. ಅದು ನಮ್ಮೆಲ್ಲರ ಮುದ್ದು ಇಂತಹ ಭಾಷೆಗೆ ಮನ್ನಣೆ ದೊರೆಯಬೇಕಾಗಿಲ್ಲವೇ? ಹಾಗಿದ್ದರೆ ಮನ್ನಣೆಯನ್ನು ಪಡೆಯುವ ಯೋಗ್ಯತೆಯನ್ನು ಕನ್ನಡಕ್ಕೆ ನಮ್ಮ ಕೊಡತಕ್ಕದ್ದು ಅವಶ್ಯವಾಗಿದೆ. ನಾನು ಹಿಂದೊಮ್ಮೆ ಸೂಚಿಸಿದಂತೆ, ಗಣಿತ, ಅರ್ಥಶಾಸ್ತ್ರ, ವಿಮರ್ಶಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಘಟನೆ, ಸತ್ತಾವಾದ, ಪರದೇಶದ ರಾಜಕಾರಣ, ತುಲನಾತ್ಮಕ ಧರ್ಮಗಳ ಜಾಗತಿಕ ವಿಚಾರಪ್ರವಾಹಗಳ ಸಂಕಲನ, ಜಾಗತಿಕ ಜೀವಜ್ಯೋತಿಗಳ ಚರಿತ್ರೆ — ಇತ್ಯಾದಿ ವಿಷಯಗಳನ್ನು ಕುರಿತು ಕನ್ನಡದಲ್ಲಿ ಗ್ರಂಥಗಳು ವಾಗಿ, ಅಭ್ಯಾಸಿಗಳ ಕುತೂಹಲವನ್ನು ತಣಿಸಿ, ಕನ್ನಡಕ್ಕೆ ಮನ್ನಣೆಯನ್ನು ಕನ್ನಡಿಗರ ಹೆಮ್ಮೆಯನ್ನು ಸಾರ್ಥಕಗೊಳಿಸಲೆಂಬ ನನ್ನ ಅಂತಃಕರಣದ ಮತ್ತೊಮ್ಮೆ ಸೂಚಿಸಿ ನನ್ನ ಭಾಷಣ ಮುಗಿಸುತ್ತೇನೆ. ಸಿರಿಗನ್ನಡಂ ಗೆಲ್ಗೆ.

# ಚಿಕ್ಕದೇವರಾಜ ಒಡೆಯರ ಕಾಲದ ಪ್ರಜಾಜೀವನ ಮತ್ತು ಸಾಹಿತ್ಯ*

ಶ್ರೀಮಾನ್ ಸಿ. ಆರ್. ಶ್ರೀನಿವಾಸಯ್ಯಂಗಾರ್ಯರು, ಚೆನ್ನರಾಯಪಟ್ಟಣ

---

ಕನ್ನಡ ಸಾಹಿತ್ಯವು ಬಹಳ ಹಿಂದಿನಿಂದಲೂ ರಾಜರುಗಳಿಂದ ಪರಿಪೋಷಿತವಾಗಿ ವಿಶೇಷ ಏಳ್ಗೆಯನ್ನು ಹೊಂದಿದೆ. ಹಿಂದೆ ಆಳಿದ ಕನ್ನಡ ಕುಲದ ಅರಸುಗಳು ಕನ್ನಡ ಸರಸ್ವತಿಗೆ ಅಭಿಮಾನದಿಂದಲೂ ಪ್ರೇಮದಿಂದಲೂ ತಮ್ಮ ಸಿಂಹಾಸನದಲ್ಲಿ ಅರೆಯೆಡೆಯನ್ನು ಪಾಲಿಸದೇ ಹೋಗಿದ್ದರೆ ನಮ್ಮಲ್ಲಿ ಈಗಿರುವಷ್ಟು ಹಿರಿದಾದ "ಸಾರಸ್ವತ ಸಂಪತ್ತು" ಇರುತ್ತಿರಲಿಲ್ಲ. ಕನ್ನಡ ರಾಜರುಗಳಲ್ಲಿ ಮುಪ್ಪಾಗ ಪಾಲು ಮಂದಿ ಕೇವಲ ಪಂಡಿತಪಕ್ಷಪಾತಿಗಳೂ, ವಿದ್ವದ್ರಸಿಕರೂ, ಸುಸಂಸ್ಕೃತರೂ, ಮೇಲಾಗಿ ಕಾವ್ಯಕಲಾಪ್ರಗಲ್ಭರೂ ಆಗಿದ್ದುದು ನಮ್ಮ ಪುಣ್ಯವಿಶೇಷ. ಇದರಿಂದ ನಮ್ಮ ಸಾಹಿತ್ಯಲತೆಯು ಬಹುಮುಖವಾಗಿ ಹಬ್ಬಿ, ಸೊಂಪಾಗಿ, ಸುಂದರವಾಗಿ ಬೆಳೆಯಲು ಎಡೆಯಾಯಿತೆಂದು ಹೇಳಬಹುದು.

ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸುಗಳು, ಮೈಸೂರಿನ ಪ್ರಭುಗಳು— ಇವರೆಲ್ಲರೂ ಕನ್ನಡದ ಅರಸುಮನೆತನಗಳಲ್ಲಿ ಬಹಳ ಹೆಸರಾದವರು. ಇವರ ಕಾಲ ಕನ್ನಡ ಸಾಹಿತ್ಯಲೋಕದ ಸುವರ್ಣಯುಗ. ಕನ್ನಡದ ಸಂಸ್ಕೃತಿಯನ್ನು ಸಂರಕ್ಷಿಸಿ, ಅದರ ಏಳ್ಗೆಯನ್ನು ಸಾಧಿಸಿದ ಧೀರರಿವರು. ಇವರಲ್ಲಿ ಕೆಲವರು ಸ್ವತಃ ಪಂಡಿತರು, ಕವಿಗಳು. ಎಲ್ಲರೂ ಕವಿಚಕ್ರವರ್ತಿಗಳ ಆಶ್ರಯದಾತರೆನಿಸಿಕೊಂಡಿದ್ದರು. ಇವರ ಕಾಲದಲ್ಲಿ ಕನ್ನಡ ನಾಡು ಸರ್ವತೋಮುಖವಾದ ಏಳ್ಗೆಯನ್ನು ಸಾಧಿಸಿತೆನ್ನಬಹುದು.

ಕನ್ನಡ ರಾಜ್ಯಗಳಲ್ಲಿ ಬಹಳ ಪ್ರಸಿದ್ಧವಾಗಿದ್ದುದು, ಎರಡು ಮೂರು ಶತಮಾನಗಳು ಭಾರತೀಯ ಧರ್ಮವನ್ನೂ ಸಂಸ್ಕೃತಿಯನ್ನೂ ಸ್ವಾತಂತ್ರ್ಯವನ್ನೂ ಅದ್ವಿತೀಯವಾಗಿ ಸಾಧಿಸಿದ್ದುದು ವಿಜಯನಗರದ ಸಾಮ್ರಾಜ್ಯವೆಂದು ಬೇರೆ ಹೇಳಬೇಕಾಗಿಲ್ಲ. ಕನ್ನಡ ರಾಜ್ಯಲಕ್ಷ್ಮಿ, ಸಾಹಿತ್ಯದೇವಿಯರು ವೈಭವದ ಶಿಖರದಲ್ಲಿ ಮಂಡಿಸಿ ಮೆರೆದ ಕಾಲವಿದು. ವಿಜಯನಗರವು ಕ್ರಿ.ಶ. ೧೫೬೫ರಲ್ಲಿ ಹಾಳಾದಮೇಲೆ ಮತ್ತೆ ಕನ್ನಡಕ್ಕೆ ಆಶ್ರಯ ದೊರೆತದ್ದು ಮೈಸೂರಿನ ಕನ್ನಡ ಅರಸರ ಆಶ್ರಯದಲ್ಲಿ. ಹಿಂದೆ ಆಳಿದ ಕನ್ನಡ ರಾಜರುಗಳಂತೆಯೇ ಮೈಸೂರಿನ ಅರಸರೂ ಸಹ ಪಂಡಿತಪಕ್ಷಪಾತಿಗಳಾಗಿದ್ದರು; ಅಲ್ಲದೆ, ರಸಿಕರೂ ಸಾಹಿತ್ಯ ಕಲಾಕೋವಿದರೂ ಆಗಿದ್ದರು. ಇವರು ಮೈಸೂರಿನಲ್ಲಿ ಕನ್ನಡ ಸಂಸ್ಕೃತಿಯ ವೃಕ್ಷಕ್ಕೆ ನೀರೆರೆದು ಪೋಷಿಸಿದರು.

---

* ಕಳೆದ ಡಿಸೆಂಬರಿನಲ್ಲಿ ಜಮಖಂಡಿಯಲ್ಲಿ ನಡೆದ ಕರ್ನಾಟಕ ಸಾಹಿತ್ಯ ಸಮ್ಮೇಳನ ಕಾಲದಲ್ಲಿ ಓದಿದ ಪ್ರಬಂಧ.

ಮೈಸೂರಿನ ಚರಿತ್ರೆಯಲ್ಲಿ ಉಜ್ವಲವಾದ ಪ್ರಕರಣವೆಂದರೆ ಚಿಕ್ಕದೇವರಾಜ ಒಡೆಯರ ಆಳ್ವಿಕೆಯ ಕಾಲ. ನಂದಿಹೋಗಿದ್ದ ಸಾರಸ್ವತ ಸೂರ್ಯನು ಪುನಃ ಪ್ರಕಾಶಗೊಂಡನು; ಕನ್ನಡ ಸಾಹಿತ್ಯ ಸಂಸ್ಕೃತಿಗಳು ಮತ್ತೆ ವಿಶೇಷ ಪ್ರೋತ್ಸಾಹ ವನ್ನು ಪಡೆದುವು. ಕರ್ನಾಟಕದ ಏಳ್ಗೆಯ ಪ್ರಯತ್ನಗಳು ನಡೆದು ಬಹಳಮಟ್ಟಿ ಕೈಗೂಡಿದುದೂ, ಜನಜೀವನವು ಬಹುಮುಖವಾಗಿ ಹಬ್ಬಿ ನಾನಾಕಾರ್ಯಗಳು ಸಿದ್ಧಿಸಿದುದೂ ಆ ಕಾಲದಲ್ಲಿ.

## ಪ್ರಜಾಜೀವನ

ಚಿಕ್ಕದೇವರಾಜ ಒಡೆಯರು ಕ್ರಿ.ಶ. ೧೬೭೨ರಲ್ಲಿ ಪಟ್ಟಕ್ಕೆ ಬಂದರು. ಇವರು ರಾಜ್ಯಕ್ಕೆ ಬಂದಾಗ ದೇಶಕ್ಕೆ ಕ್ಷೇಮವಿರಲಿಲ್ಲ. ಸುತ್ತ ನಾಲ್ಕು ಕಡೆಗಳಿಂದಲೂ ಶತ್ರುಗಳು ಮುತ್ತಲು ಹೊಂಚು ಹಾಕುತ್ತಿದ್ದರು. ಮರಾಠರೂ, ತುರುಕರೂ ಪ್ರಬಲ ಶತ್ರುಗಳಾಗಿದ್ದರು. ಇವರೆಲ್ಲರನ್ನೂ ಅಡಗಿಸಿ, ದೇಶದಲ್ಲಿ ಶಾಂತಿಯನ್ನು ನೆಲೆಗೊಳಿಸಬೇಕು; ಆಮೇಲೆ ಜನರಿಗೆ ಉಪಯುಕ್ತವಾದ ಅಭಿವೃದ್ಧಿಕಾರ್ಯಗಳನ್ನು ಕೈಗೊಳ್ಳಬೇಕು. ಜನತೆಗೆ ಸಂತತವಾದ ಶಾಂತಿ ದೊರಕಿದರಲ್ಲವೆ ಜೀವನವು ಸುಗಮವಾಗಿ ನಡೆದೀತು? ಇದಕ್ಕಾಗಿ ಇವರು ಮೊದಲು ಮೊದಲು ತಮ್ಮ ಭುಜ ದರ್ಪದ ಪರಮಪ್ರಯೋಜನವನ್ನು ಪಡೆಯಬೇಕಾಯಿತು.

ಇವರ ಕಾಲದ ಜೀವನವು ಮುಂದೆ ಮುಂದೆ ಶಾಂತವಾಗಿಯೂ, ಸಂತೃಪ್ತ ವಾಗಿಯೂ ಸಾಗಿತೆನ್ನುವುದನ್ನು ಅವರ ಕಾಲದ ಸಾಹಿತ್ಯದಿಂದಲೂ, ಪ್ರಜಾ ಸೌಕರ್ಯಗಳಿಂದಲೂ ತಿಳಿಯಬಹುದು. ಮರಾಠರೂ, ತುರುಕರೂ ಇವರ ಭುಜಬಲದ ಮುಂದೆ ತಮ್ಮ ಕೈಸಾಗದೆ ಹಿಂದೆ ಬಿದ್ದುಹೋದರು. ಇವರ ಹೆಸರೇ ಶತ್ರುಗಳಿಗೆ ಸಿಂಹಸ್ವಪ್ನವೇ ಸರಿ. ಮೊಗಲ್ ಸಾರ್ವಭೌಮನಾದ ಔರಂಗಜೇಬನು ಕೂಡ ಇವರೊಂದಿಗೆ ಸ್ನೇಹ ಬೆಳಸುವುದು ತನಗೆ ಕ್ಷೇಮವೆಂದರಿತು ಹಾಗೆ ಮಾಡಿ ದನು. ಎಂದಮೇಲೆ ಈ ದೊರೆಗಳ ಆಶ್ರಯದಲ್ಲಿ ಜೀವಿಸುತ್ತಿದ್ದ ಅವರ ಪ್ರಜೆಗಳಿಗೆ ಸರ್ವದಾ ಸುಖಶಾಂತಿಗಳು ನೆಲೆಗೊಂಡುವೆಂದು ಬೇರೆ ಹೇಳಬೇಕಾಗಿಲ್ಲ. ಮೊದಲು ದೇಶಕ್ಕೆ ಶತ್ರುಬಾಧೆಯಿಲ್ಲದೆ, ಜನರೆಲ್ಲರೂ ಸುಖವಾಗಿರುವಂತೆ ಮಾಡ ಬೇಕಾದ್ದು ರಾಜಧರ್ಮ. ತದನಂತರ ದೇಶದಲ್ಲಿ ಸಂತತವಾದ ಶಾಂತಿ ಸಮಾಧಾನ ಗಳು ನೆಲಸಿದುವೆಂದಮೇಲೆ ಪ್ರಜಾಭ್ಯುದಯಕ್ಕೆ ಬೇಕಾದ ಪ್ರಯತ್ನಗಳನ್ನು ಮಾಡುವುದು. ಚಿಕ್ಕದೇವರಾಜ ಒಡೆಯರ ಭುಜದರ್ಪದಿಂದ, ಅವರ ರಾಜನೀತಿ ಕೌಶಲ್ಯದಿಂದ ಜನರಿಗೆ ಶಾಂತಿಸೌಖ್ಯಗಳು ಸಿಕ್ಕುವಂತಹ ಸನ್ನಿವೇಶವು ಕಲ್ಪಿತ ವಾಯಿತು. "ಕ್ಷಾತ್ರಧರ್ಮ"ವನ್ನು ಅವರು "ಶ್ರೀಪತಿಯ ಸೇವೆ"ಯೆಂದೇ ಬಗೆದಿದ್ದರು. ಅವರ ಕಾಲದ ಜೀವನವು ಶ್ರೇಷ್ಠತರವಾಗಿತ್ತೆಂದೂ, ಸುಖಸಂತೋಷ ಗಳ ನೆಲೆಯಾಗಿತ್ತೆಂದೂ ಹೇಳಿದರೆ ಅದಕ್ಕೆ ಕಾರಣವು ಕೇವಲ ಐತಿಹಾಸಿಕ ವಾದದ್ದಲ್ಲ. ಅದಕ್ಕೆ ಸಾಂಸ್ಕೃತಿಕವೂ ಆದ ಕಾರಣವುಂಟು. ಆ ಕಾಲದ ಜನ ಜೀವನದ ಸಂಕಲ್ಪವಿಕಲ್ಪಗಳನ್ನು, ಉನ್ನತಿ ಸಂಭ್ರಮ ಸಡಗರಗಳನ್ನು

ಜನತೆಯ ಜ್ಞಾನದಾಹವನ್ನು ಆ ಕಾಲದ ಸಾಹಿತ್ಯ ಸಮುಚ್ಚಯದ ಕನ್ನಡಿಯಲ್ಲಿ ಕಾಣಬಹುದು.

ಆ ಕಾಲದ ಸಾಹಿತ್ಯವನ್ನು ಪರಿಶೀಲಿಸಿದರೆ, ಆಗಿನ ಜೀವನ ವಿಚಾರಗಳು ಚೆನ್ನಾಗಿ ವ್ಯಕ್ತವಾಗುತ್ತವೆ. ಜನತೆಯು ಸಂಸ್ಕೃತಿಯ ಹೆದ್ದಾರಿಯಲ್ಲಿ ನಡೆಯುತ್ತಿದ್ದಿತೆಂದು ಕಾಣುತ್ತದೆ. ಜನತೆಯ ಮನಸ್ಸಂಸ್ಕಾರಕ್ಕೆ, ಅವರ ಹೃದಯ ಪರಿಶುದ್ಧತೆಗೆ, ಅವರ ಐಹಿಕಾಮುಷ್ಮಿಕ ವಿಚಾರಗಳ ಪರಿಜ್ಞಾನಕ್ಕೆ ಬೇಕಾದ ಸಾಧನ ಸಾಮಗ್ರಿಗಳನ್ನು ಒದಗಿಸಲು ಅಂದಿನ ರಾಜರು ಪ್ರಯತ್ನಮಾಡಿದ್ದರು.

ಚಿಕ್ಕದೇವರಾಜ ಒಡೆಯರು ಕೇವಲ ಭುಜದರ್ಪದಿಂದ ದರ್ಪಿತರಾಗಿರಲಿಲ್ಲ. ಅವರಲ್ಲಿ ಪ್ರಜಾಕ್ಷೇಮಚಿಂತನೆಯು ಸಂತತ ಬುದ್ಧಿಯಿದ್ದಿತು. ಜನತೆಗೆ ಬೇಕಾದ ಜ್ಞಾನಭಂಡಾರವನ್ನೊದಗಿಸಲು ಅವರು ಸದಾ ದುಡಿದರೆಂದು ಕಾಣುತ್ತದೆ. ಅವರೇ ಸ್ವತಃ ಸುಸಂಸ್ಕೃತರೂ, ಕವಿಗಳೂ ಆಗಿದ್ದರು. ರಾಜನೀತಿಯಲ್ಲಿ ಅವರೇನೂ ಕಡಮೆಯಿರಲಿಲ್ಲ. ಜತೆಗೆ ಅವರು "ಸಾಹಿತ್ಯ ವಿದ್ಯಾನಿಕಷ ಪ್ರಸ್ತರನುಂ," "ರಸಿಕ ಜನ ರಸಾಯಿನೀಕೃತ ಸಂಗೀತ ವಿಸ್ತರನುಂ" ಎಂಬ ಬಿರುದುಗಳನ್ನು ಪಡೆದಿದ್ದರು. ಅವರಲ್ಲಿದ್ದ ಮಂತ್ರಿಗಳೂ ಕವಿಗಳಾಗಿದ್ದರು. ಆಸ್ಥಾನವೆಲ್ಲ ಪಂಡಿತರಿಂದ ತುಂಬಿದ್ದಿತು. ಒಮ್ಮೆ ಇವರ ಆಸ್ಥಾನಪ್ರವೇಶವು ಮನಸ್ಸಿನ ಜಾಡ್ಯವನ್ನು ನೀಗಿ, ಸಕಲ ವಿದ್ಯಾ ಕೌಶಲಗಳನ್ನೂ ತೋರಿಸುತ್ತಿದ್ದಿತೆಂದು ಕವಿಯೊಬ್ಬನು ಹೇಳಿದ್ದಾನೆ.

ಇವರ ಬಳಿ ತಿರುಮಲಾರ್ಯ, ಚಿಕ್ಕುಪಾಧ್ಯಾಯ, ಸಿಂಗರಾರ್ಯ ಮುಂತಾದ ಶ್ರೇಷ್ಠತರಗತಿಯ ಕವಿಗಳಿದ್ದರು. ಹೊನ್ನಮ್ಮನೆಂಬ ಊಳಿಗದ ಹೆಂಗಸು ಶ್ರೇಷ್ಠ ಕವಯಿತ್ರಿಯಾಗಿದ್ದಳು.

ಚಿಕ್ಕದೇವರಾಜ ಒಡೆಯರು ಪಂಡಿತರೂ, ಜ್ಞಾನಿಗಳೂ ಆದ ಮಂತ್ರಿಗಳ ಜತೆಯಲ್ಲಿ ಪ್ರಜಾಕ್ಷೇಮದ ಹಲವು ಏರ್ಪಾಟುಗಳನ್ನು ಕೈಗೊಂಡರು. ಜನತೆಯ ಐಹಿಕಜೀವನದ ಆವಶ್ಯಕತೆಗಳನ್ನು ಪೂರ್ಣಗೊಳಿಸಿ, ಅವರನ್ನು ಪಾರಮಾರ್ಥಿಕ ಜೀವನಕ್ಕೆ ಸಿದ್ಧಗೊಳಿಸಲು ಬೇಕಾದ ಜ್ಞಾನಬೋಧೆಗೆ ತಕ್ಕ ಗ್ರಂಥ ರಾಶಿಯ ನಿರ್ಮಾಣಕ್ಕೆ ಕೈಹಾಕಿದರೆಂದು ತೋರುತ್ತದೆ. ಅವರ ಐಹಿಕಜೀವನವು ಸಮರ್ಪಕವಾಗಿದ್ದಿತೆಂಬುದನ್ನು ಈ ಕೆಳಗಿನ ಅವರ ಮಾತಿನಿಂದಲೇ ತಿಳಿಯಬಹುದು:

> ಎಣ್ದೆಸೆಯ ಪಗೆಗಳಡಂಗಿದುದಱಿಂ ಪ್ರಜೆಗಳ್ಗೆ ರಾಜಿಕಭಯಮಿಲ್ಲದೆಯುಂ, ದೇವತಾ ಪ್ರಸಾದದಿಂ ಮೞೆಬೆಳೆಗಳುಂಟಾದುದಱಿಂ ದೈವಿಕಭಯಮಿಲ್ಲದೆಯುಮಿರ್ಪುದಱಿಂ ಪ್ರಜೆಗಳನಿಬರುಂ ಇಹದೊಳ್ ಸೊಗವಾಳ್ದರ್.

ಐಹಿಕಜೀವನವು ಇಷ್ಟು ಮುಂದುವರಿದಿರಲು, ಅವರಿಗೆ ಪಾರಮಾರ್ಥಿಕ ವಿಚಾರಗಳನ್ನು ಬೋಧಿಸುವುದು ಕೂಡ ಆವಶ್ಯಕವಾಯಿತು. ಆಮುಷ್ಮಿಕ ಜ್ಞಾನ ಸಾಧನೆಗೆ ಜನತೆಯು ಆಗ ಸಿದ್ಧವಾಗಿದ್ದಿತು. ಅವರಿಗೆ "ಮುಕ್ತಿಗತಿಯ" ಮೊಗದೋರಿಸಲು ಅವರು ಮನತಂದರು.

ಜ್ಞಾನಬೋಧೆ ಮಾಡುವ ವಿಚಾರದಲ್ಲಿ ಅವರು ಮುಖ್ಯವಾದ ಎರಡಂಶಗಳನ್ನು ಗಮನಿಸಿದರು. ಪ್ರಜೆಗಳೆಲ್ಲರ ಹಿತಸಾಧಕರಾಗಿ, ಜವಾಬ್ದಾರಿ ಸ್ಥಾನದಲ್ಲಿರುವ ರಾಜರ ಮತ್ತು ಮಂತ್ರಿಗಳ ಮೇಲಿದ್ದ ಗುರುತರವಾದ ಕರ್ತವ್ಯವನ್ನವರು ಮರೆಯಲಿಲ್ಲ. ಜ್ಞಾನಬೋಧೆಯಲ್ಲವರು ಜಾತಿಮತಗಳ ವಿವೇಚನೆಯನ್ನು ಮಾಡಲಿಲ್ಲ. ಜನರೆಲ್ಲರೂ ಯಾವ ಜಾತಿಯುವರಾಗಲಿ ಜ್ಞಾನಸಂಗ್ರಹ ಮಾಡಿ ಬದುಕನ್ನು ತಿದ್ದಿಕೊಳ್ಳಬೇಕಾದ್ದು ಅಗತ್ಯ. ಜ್ಞಾನಬೋಧೆಯು ದೇಶಭಾಷೆಯಾದ ಕನ್ನಡದಲ್ಲೇ ಆಗಬೇಕು. ಇವೆರಡು ಅಂಶಗಳೂ ಬಹುದಿವಸಗಳ ಹಿಂದೆಯೇ ನಮ್ಮ ನಾಡಿನಲ್ಲಿ ನಿರ್ಣಯವಾಗಿ ಹೋಗಿದ್ದುವೆಂದು ಖಂಡಿತ ಹೇಳಬಹುದು. "ಅಕ್ಕರಮನಱಿಯದೊಕ್ಕಲಿಗರ್ಗಂ ಪೆಣ್ಗಳ್ಗಂ ಸಕ್ಕದದಿಂ ತತ್ವಜ್ಞಾನಮಪ್ಪು ದರಿದೆಂದು **ಎಲ್ಲರುಮುಱಿವಂತೆ ಕನ್ನಡವಾತಿನೊಳ್ ನೆಲ್ನುಡಿಗಳಿಂದೆ ಅಖಿಲ ತತ್ವಾರ್ಥಂಗಳಂ ಸಂಗತಿಗೊಳಿಸ**"ಬೇಕೆಂದು ಅವರು ನಿರ್ಧರಿಸಿದರು.

ತಮ್ಮ ಆಳ್ವಿಕೆಯಲ್ಲಿ ಜನತೆಯ ಸಮುಸ್ತ ಹಿತಗಳನ್ನೂ ಸಾಧಿಸಲು ಅವರು ಪ್ರಯತ್ನಗಳನ್ನು ಮಾಡಿದರು. ತಮ್ಮ ಆಶ್ರಿತರಾದ ಸಮುಸ್ತ ಪ್ರಜೆಗಳ ಕಲ್ಯಾಣ ಸಾಧನೆಯೇ ಅವರ ಧ್ಯೇಯವಾಗಿದ್ದಿತು.

## ಅವರ ಕಾಲದ ಸಾಹಿತ್ಯ

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಪರಿಶೋಭಿತರಾಗಿರುವ ಕವಿಶ್ರೇಷ್ಠರ ಪೈಕಿ ಕೆಲವು ಕವಿಗಳು ಚಿಕ್ಕದೇವರಾಜ ಒಡೆಯರ ಕಾಲದಲ್ಲಿಯೂ ಇದ್ದರು. ಇವರ ಕಾಲದಲ್ಲಿ ಹುಟ್ಟಿದ ಕೃತಿಗಳ ಸಂಖ್ಯೆಯೇನೂ ಕಡಮೆಯಲ್ಲ. ಚಿಕ್ಕುಪಾಧ್ಯಾಯ, ತಿರುಮಲಾರ್ಯ, ಸಿಂಗರಾರ್ಯ, ಹೊನ್ನಮ್ಮ ಇವರುಗಳಲ್ಲದೆ ಇನ್ನೂ ಹಲವು ಮಂದಿ ಕವಿಗಳು ಈ ಕಾಲದಲ್ಲಿ ಕೃತಿ ರಚನೆ ಮಾಡಿದ್ದಾರೆ. ಆದರೆ ಅವೆಲ್ಲವನ್ನು ಕುರಿತು ಪ್ರಸ್ತಾವಿಸಲು ಇಲ್ಲಿ ಪ್ರಯತ್ನಮಾಡಿಲ್ಲ. ಜನತೆಯ ಅಭ್ಯುದಯಕ್ಕೆ ರಾಜ ನಾದವನು ಏನು ಮಾಡಬೇಕೆಂಬುದನ್ನು ಉದಾರಚರಿತರಾದ ಚಿಕ್ಕದೇವರಾಜ ಒಡೆಯರವರು ಮನಗಂಡಿದ್ದರಲ್ಲವೆ? ಅವರು ಸ್ವತಃ ರಚಿಸಿದವೆಂದು ಕಂಡು ಬಂದಿರುವ ಕೃತಿಗಳಲ್ಲಿ ಎರಡನ್ನು ಮಾತ್ರ ಇಲ್ಲಿ ತೆಗೆದುಕೊಂಡು ವಿವೇಚಿಸಲಾಗಿದೆ. ಜನತೆಯ ಐಹಿಕಜೀವನಕ್ಕೆ, ಆತ್ಮಸಂಸ್ಕಾರಕ್ಕೆ ಅವರು ಏನು ಮಾಡಿದರೆಂಬುದನ್ನು ಅವರ ಕೃತಿಗಳಲ್ಲಿ ಕಾಣಬಹುದು. ಸಂಸ್ಕೃತನಾದ ರಾಜನು ತನ್ನ ಪ್ರಜಾಕೋಟಿಯ ಜೀವನವಿಕಾಸದ ವಿಷಯದಲ್ಲಿ ಯಾವ ಭಾವನೆಯನ್ನಿಟ್ಟುಕೊಂಡಿರುವನೆಂಬುದನ್ನು ನಾವಿಲ್ಲಿ ಸ್ವಲ್ಪಮಟ್ಟಿಗಾದರೂ ಕಾಣುತ್ತೇವೆ.

ಇಲ್ಲಿ ನಾವು ಚಿಕ್ಕದೇವರಾಜ ಒಡೆಯರ 'ಚಿಕ್ಕದೇವರಾಜ ಬಿನ್ನಪ,' 'ಗೀತಗೋಪಾಲ' ಮತ್ತು ಹೊನ್ನಮ್ಮನ 'ಹದಿಬದೆಯ ಧರ್ಮ' ಎಂಬ ಮೂರು ಕೃತಿಗಳನ್ನು ವಿವೇಚಿಸಿದ್ದೇವೆ. ಆ ಕಾಲದ ಸಾಹಿತ್ಯದಲ್ಲಿ ಬಹಳ ಮಾನ್ಯ ಸ್ಥಾನವು 'ಹದಿಬದೆಯ ಧರ್ಮ'ದ್ದಾಗುತ್ತದೆ. ಏಕೆಂದರೆ, ಈಗ್ಗೆ ಎರಡು ಮೂರು

ಶತಮಾನಗಳ ಹಿಂದೆ ರಾಜರ ಆಸ್ಥಾನದ ಊಳಿಗದ ಹೆಂಗುಸೊಬ್ಬಳು ಒಂದು ಉತ್ಕೃಷ್ಟವಾದ ಕಾವ್ಯವನ್ನು ರಚಿಸಿದಳೆಂದರೆ ಅದೊಂದು ಹೆಮ್ಮೆಯ ಸಂಗತಿ.

## 'ಚಿಕ್ಕದೇವರಾಜ ಬಿನ್ನಪ'

ನಾವು ಹಿಂದೆ ತಿಳಿಸಿದ ಮೂರು ಗ್ರಂಥಗಳಲ್ಲಿ ಇದು ಮೊದಲನೆಯದು. ಚಿಕ್ಕದೇವರಾಜ ಒಡೆಯರ ಉದಾತ್ತಮನೋಧರ್ಮವನ್ನೂ ಜ್ಞಾನಸಂಪನ್ನತೆಯನ್ನೂ ನಾವಿಲ್ಲಿ ಕಾಣುತ್ತೇವೆ. ಗ್ರಂಥಾಂತ್ಯದಲ್ಲಿ "ನರಪತಿ ಶ್ರೀ ಚಿಕ್ಕದೇವರಾಜ ವಿರಚಿತಮಪ್ಪ ದಿವ್ಯಪ್ರಬಂಧಂಗಳೊಳ್" ಎಂದಿದೆ. ಇದನ್ನು ಕವಿಯು "ದಿವ್ಯ ಪ್ರಬಂಧಂಗಳ" ಗೋಷ್ಠಿಗೆ ಸೇರಿಸಿದ್ದಾನೆ. ಇದರಲ್ಲಿ ಗಹನವಾದ ವೇದಾಂತ ವಿಚಾರಗಳು ತುಂಬಿವೆ. ನಿರೂಪಣೆಯ ಕ್ರಮ, ಶೈಲಿ—ಇವು ಸರಳವಾಗಿ ಹೃದಯಂಗಮವಾಗಿವೆ. ಭಾಷೆ ಲಲಿತವಾಗಿ, ಸರಳವಾಗಿ ಇದೆ. ಕವಿ ತನ್ನ ಮನಸ್ಸಿನಲ್ಲಿ ಮೂಡಿದ "ಭಗವದ್ವಿಷಯಕವಾದ" ಭಾವನೆಗಳನ್ನು, ಸಂತತ ಪರಿಶ್ರಮದಿಂದ, ವಿದ್ವಾಂಸ ಸಂಪರ್ಕದಿಂದ ಬಹುಕಾಲ ಸಂಪಾದಿಸಿದ ಜ್ಞಾನರಾಶಿಯನ್ನು—ತಿಳಿಗನ್ನಡದಲ್ಲಿ ಜನಸಾಮಾನ್ಯಕ್ಕೆ ಎರೆಯಲು ಮಾಡಿರುವ ಪ್ರಯತ್ನವು ಬಹಳ ಶ್ಲಾಘ್ಯವಾಗಿದೆ. ಜನಸಾಮಾನ್ಯದ ಆತ್ಮದ ಅಂತಸ್ತನ್ನು ಸುಸಂಸ್ಕೃತರ ಆತ್ಮದ ಅಂತಸ್ತಿಗೆ ಏರಿಸಲು ಪ್ರಯತ್ನಮಾಡಿರುವುದು ವ್ಯಕ್ತವಾಗುತ್ತದೆ.

ಈ ಗ್ರಂಥದಲ್ಲಿ ೩೦ 'ಬಿನ್ನಪ'ಗಳಿವೆ. ಇದು ಒಂದು ದಿನಚರಿಯಂತಿದೆ. ಇದರಲ್ಲಿರುವ ಬಿನ್ನಪಗಳು ಒಮ್ಮೆ ಕುಳಿತು ಬರೆದಂತೆ ಇಲ್ಲ. ಆಗಾಗ ಭಾವನೆಗಳು ಮೂಡಿದಾಗ ಬರೆದಿಟ್ಟಂತೆ ತೋರುತ್ತದೆ.

ಇದರಲ್ಲಿ ಪ್ರತಿಪಾದಿಸಿರುವ ವಿಷಯಗಳು ವಿಶಿಷ್ಟಾದ್ವೈತ ಮತದ ತತ್ವವೆಂದು ಬೇರೆ ಹೇಳುವ ಅಗತ್ಯವಿಲ್ಲ. ಚಿಕ್ಕದೇವರಾಜ ಒಡೆಯರ ಸುತ್ತಮುತ್ತ ವಿಶಿಷ್ಟಾದ್ವೈತಿಗಳ ವಾತಾವರಣವೇ ಇದ್ದಿತು. ಮಂತ್ರಿಗಳು ಅದೇ ಸಂಪ್ರದಾಯದವರು. ಸ್ವಭಾವವಾಗಿ ಇವರ ಗ್ರಂಥಗಳಲ್ಲಿ ಆ ಮತದ-ಸಾರವು ಕಂಡುಬರುವುದು ಅನಿವಾರ್ಯವಾಗಿದೆ. ಆದಮಾತ್ರದಿಂದ ಅವರು ಪ್ರತಿಪಾದಿಸಿದ ಧರ್ಮಕ್ಕೆ ಯಾವ ಹೆಸರನ್ನೂ ಕೊಡಲು ನಮಗೆ ಮನಸ್ಸು ಬಾರದು. ಭಗವದ್ವಿಷಯಕವಾದ ಜ್ಞಾನ ಬೋಧೆಯೆಂದು ಮಾತ್ರ ಹೇಳುವುದಾದರೆ ಸಾಕೆಂದು ತೋರುತ್ತದೆ. ಉಪೋದ್ಘಾತವನ್ನು ಬರೆದವರು "ವಿಶಿಷ್ಟಾದ್ವೈತ ಮತ ತತ್ವವನ್ನು ತಿಳಿಯಲು ಈ ಗ್ರಂಥದ ಹಾಗೆ ಎಲ್ಲಾ ವಿಷಯಗಳನ್ನೂ ಸಂಗ್ರಹಿಸಿ ಸಂಗತಿಗೊಳಿಸಿದ ಗ್ರಂಥವು ಇತರ ಭಾಷೆಗಳಲ್ಲಿ ಸಿಕ್ಕುವುದಿಲ್ಲ" ಎಂದು ಹೇಳಿರುವರು. ಇದು ಕನ್ನಡಕ್ಕೆ ಒಂದು ಹೆಮ್ಮೆಯ ವಿಷಯ.

ತನ್ನ ಜ್ಞಾನಸಂಪತ್ತಿಯನ್ನು ಕನ್ನಡದಲ್ಲಿ ಎರಕ ಹೊಯ್ಯಲು ಕವಿ ಮಾಡಿರುವ ಪ್ರಯತ್ನ ಸಾಧುವಾಗಿದೆ. 'ಬಿನ್ನಪ'ಗಳಲ್ಲಿ ಹೃದಯಂಗಮವಾದ ಶೈಲಿಯಿದೆ. ಇಂಪಾದ, ಸೊಂಪಾದ ಮಾತುಗಳಿವೆ. ಇಲ್ಲಿ ಅವುಗಳಲ್ಲಿ ಕೆಲವನ್ನು ಮಾತ್ರ ಕೊಡುತ್ತೇವೆ.

ಕವಿ ಪ್ರತಿಯೊಂದು 'ಬಿನ್ನಪ'ದ ಮೊದಲಲ್ಲಿಯೂ, ಅದರದರ ಸಾರವನ್ನು ಕಂದಪದ್ಯವೊಂದರಲ್ಲಿ ವಿವರಿಸಿದ್ದಾನೆ. ಹದಿನೈದನೆಯ 'ಬಿನ್ನಪ'ದ ಕಂದಪದ್ಯದಲ್ಲಿ ಸಕಲವನ್ನೂ ಸೃಷ್ಟಿಸಿದವನು "ಭಗವಂತನೇ" ಎಂದು ಮನೋರಂಜಕವಾಗಿ ತಿಳಿಸಿದ್ದಾನೆ:

ಅರ್ಣವ ಭೂಧರ ತಟನೀ। ತೀರ್ಣ ಧರಾವಲಯಮನಿತುಮಂ ಸಮುದ್ಭವಿಸೆಂ।
ನಿರ್ಣೀತಮೆಂದು ಶೌರಿಗೆ। ಕರ್ಣಾಟಕ ಚಕ್ರವರ್ತಿ ಬಿನ್ನತಿಗೈದಂ॥

ಹದಿನೆಂಟನೆಯ 'ಬಿನ್ನಪ'ದಲ್ಲಿ ಎಂತಹ ಪಾಪಿಯಾದರೂ, ಪರಮಾತ್ಮನ ಸ್ಮರಣ ಮಾತ್ರದಿಂದ ಮುಕ್ತನಾಗುವನೆಂಬುದನ್ನು ತಿಳಿಸಿದ್ದಾನೆ:

ಈ ಪಾತಕಿಗಳ್ ತಮ್ಮ ಪಾತಕಂಗಳನಿತರ್ಕಂ ಬೇಱೆವೇಱೆ ಪ್ರಾಯಶ್ಚಿತ್ತಮನೆಸಗುವುದು ಜನ್ಮಕೋಟಿಯೊಳಂ ತೀಱದು. ದಯಾಳುವಾದ ನಿನ್ನ ಕಟಾಕ್ಷದಿಂ ಮನದೊಳ್ ವಿವೇಕಂ ಪುಟ್ಟಿ, ಪಿಂತಣ ಪಾಪಕ್ಕೆ ಪಶ್ಚಾತ್ತಾಪ ಮುಂಟಾಗಿ ಯಥಾಶಕ್ತಿ ಪ್ರಾಯಶ್ಚಿತ್ತಮನಾಚರಿಸಿ ನೀನಾಳ್ದನುಂ ತಾನಾಳು ಮೆಂಬೆಣಿಕೆಗೂಡಿ, ನಿನ್ನನೇ ನೆನೆಯುತಿರ್ಪುದೆಂಬ ಕೃಷ್ಣಾನುಸ್ಮರಣಮೊಂದ ಱಿಂದಮೆ ಸಕಲ ಪಾಪಂಗಳುಂ ಸವಾಸನಮಾಗಿ ಪೋಪುವೆಂಬ ಶಾಸ್ತ್ರಾರ್ಥ ತತ್ವಮುಂ ತಿಳಿಯೆ, ನೀನೆ ಪರಮ ಪಾವನನೆನಿಸುವೈ. ಅದಱಿಂ ನಿನ್ನ ಪಾಪಂಗಳಂ ಪಿರಿದೆನಿಸದೆ ನಿನ್ನ ಪಾವನತ್ವಮುಂ ಮಱೆದೆನ್ನಂ ಪೊರೆವುದು ಭಕ್ತ ದನನ್ಯಜನ ಸುಲಭಾ, ಶ್ರೀ ಯದುಶೈಲವಲ್ಲಭಾ.

ಇಪ್ಪತ್ತೊಂಬತ್ತನೆಯ 'ಬಿನ್ನಪ'ದಲ್ಲಿ ಪರಮಾತ್ಮನ ದಿವ್ಯಮಂಗಳ ವಿಗ್ರಹ ವನ್ನು ಕುರಿತು ಪ್ರಶಂಸಿಸಿದ್ದಾನೆ. ಯಾರು ದೇವರಿಗೆ ವಿಗ್ರಹವಿಲ್ಲವೆಂದು ವಾದಿಸು ವರೋ ಅಂತಹವರನ್ನು ಕುಮತಿಗಳೆಂದು ಕರೆದಿದ್ದಾನೆ:

ಪರಮಾತ್ಮಂ ತಾಂ ಕರ್ಮಪರವಶನಲ್ಲದೊಡೆ ಜೀವಾತ್ಮರಂ ತತ್ತದ್ವ್ಯಾ ಪಾರದೊಳ್ ಕರ್ಮಾನುಗುಣಮಾಗಿ ಪ್ರೇರಿಸುವುದರ್ಕಾಗಿ ದೇವಮನುಷ್ಯಾದಿ ಶರೀರದೊಳಿರ್ಪುದು ದೋಷಾವಹಮಲ್ತು.

ನಿನ್ನ ದಿವ್ಯಮಂಗಳ ವಿಗ್ರಹಂ ನಿನ್ನ ಮೈಮೆಗೆ ತಕ್ಕುದಾಗಿ ನಿನ್ನ ಮನ ಬಂದುದುಮಾದ ಸುಗಂಧಮುಂ ಕಾಂತಿಯುಂ ಯೌವನಮುಂ ಮುಂತಾದ ಸಕಲ ಗುಣಂಗಳಂ ಪಡೆದು ಜ್ಞಾನ ಬಲೈಶ್ವರ್ಯ ವೀರ್ಯಶಕ್ತಿ ತೇಜಸ್ಸುಗ ಲ್ಯಾದಿ ಸ್ವರೂಪ ಗುಣಂಗಳ್ಗೆ ಪ್ರಕಾಶಮಾಗಿ ಲಕ್ಷ್ಮೀನಿವಾಸಸ್ಥಾನಮಾಗಿ ನಿನ್ನ ನೆನೆದಂತಿರ್ಪುದಱಿಂ ನಿನಗತಿಶಯಾವಹಮೆಂದು ಪಿರಿಯರ್ ಪೇಳ್ವರ್.

ಅಂತಪ್ಪ ದಿವ್ಯಮಂಗಳ ವಿಗ್ರಹ ಸಾಕ್ಷಾತ್ಕಾರಸರ್ವಸ್ವದಾನದಿಂದೆನ್ನ ಮನೋರಥಮಂ ಸಲಿಪುದು ಸಲಿಪುದನನ್ಯಜನ ಸುಲಭಾ, ಶ್ರೀ ಯದುಶೈಲವಲ್ಲಭಾ.

ಇಲ್ಲಿ ತಿಳಿಸಿದ ವಿಚಾರಗಳನ್ನು ವೇದಾಂತದೃಷ್ಟಿಯಿಂದ ವಿಮರ್ಶಿಸುವ ಪ್ರಯತ್ನಕ್ಕೆ ನಾವು ಕೈಹಾಕಿಲ್ಲ. ಎಂತಹ ಗಹನವಿಷಯಗಳನ್ನು ಜನಸಾಮಾನ್ಯರಿಗೆ ಕವಿ ಸರಳರೀತಿಯಲ್ಲಿ ಬೋಧಿಸಲು ಪ್ರಯತ್ನಿಸಿ, ಕೃತಕಾರ್ಯನಾಗಿದ್ದಾನೆಂಬು ದನ್ನು ಮಾತ್ರ ತೋರಿಸಲು ಇಲ್ಲಿ ಉದ್ದೇಶಿಸಿದೆ.

## 'ಗೀತಗೋಪಾಲ'

'ಚಿಕ್ಕದೇವರಾಜ ಬಿನ್ನಪ'ದಂತೆಯೇ ಈ ಗ್ರಂಥದಲ್ಲಿಯೂ ವಿಶೇಷ ಗುಣಗಳು ಕೆಲವಿವೆ. ಪರಮಾತ್ಮನ ಅದ್ಭುತವಾದ ಮಹಿಮೆ, ಲೀಲೆಗಳನ್ನು ಇಲ್ಲಿ ನಿರೂಪಿಸಿದೆ. ಇವುಗಳಲ್ಲಿ ಕವಿ ತನ್ನ 'ಗಾನ ಶಕ್ತಿ'ಯನ್ನು ಬೆರಸಿದ್ದಾನೆ. ಇಲ್ಲಿನ ಗೀತಗಳ

ರಾಗಗಳುಂಟು. ಇವುಗಳಲ್ಲಿ ನಮ್ಮ 'ದಾಸರ ಹಾಡು'ಗಳ ಮನೋಧರ್ಮದ ಸಾಮ್ಯವಿದೆ. ದೊರೆಯು ಸ್ವತಃ ಸಂಗೀತಕಲೆಯಲ್ಲಿ ನಿಪುಣನಾದ್ದರಿಂದ ಗೀತಗಳಲ್ಲಿ ಗಾನ, ಉತ್ತಮ ಸಾಹಿತ್ಯ, ನಿಶ್ಚಲವಾದ ನಿರ್ಮಲವಾದ ಭಗವದ್ಭಕ್ತಿ—ಇವು ರೂಪುಗೊಂಡಿವೆಯೆನ್ನಬಹುದು.

ಜನತೆಗೆ ತತ್ವವಿಚಾರಗಳು ತಿಳಿಯಬೇಕು; ಸುಲಭವಾಗಿ ಗ್ರಹಿಸಿದ ತತ್ವಗಳನ್ನು ಅವರು ತಮ್ಮ ನಿತ್ಯಜೀವನದಲ್ಲಿ ಅನುಷ್ಠಾನಕ್ಕೆ ತರಬೇಕು. ಅಂದು ಅವರ ಜೀವನವು ಸುಖಸಂತೋಷಗಳಿಂದ ಪೂರ್ಣವಾಗಬಲ್ಲುದು. ತತ್ವಗಳು ಅವರಿಗೆ ಚೆನ್ನಾಗಿ ತಿಳಿದು, ಪರಿಣಾಮುವನ್ನುಂಟುಮಾಡಲು, ಅವುಗಳನ್ನು ಗೀತರೂಪದಲ್ಲಿ ಹರಡಲು ಯೋಗ್ಯವಾಗಿರುವಂತೆ ರಚಿಸಬೇಕು. ಇವೆಲ್ಲವೂ ದೊರೆಯ ಆಶಯಗಳಾಗಿದ್ದುವು.

"ಹರಿಸಂಕೀರ್ತನವೇ ಪರಗತಿಗನುಕೂಲ"ವೆಂದು ನಿಶ್ಚಯಿಸಿ, "ಪಾಲಂ ಬಯಸಿದ ರೋಗಿಗೆ ಪಾಲಿಂದೌಷಧಮನೀವ ವೈದ್ಯನ ತೆಱದಿಂದೀಲೋಗರೊಲ್ವ ಗೀತದ ಮೂಲದೊಳೇ ಮುಕ್ತಿಗತಿಯ ಮೊಗದೋಱಿಸಿದಂ." ಗೀತಗಳೊಂದಿಗೆ ಬೆರೆತಾಗ ತತ್ವಗಳು ಸಾಮಾನ್ಯಜನಕ್ಕೆ ಸುಲಭವಾಗಿ ಅರ್ಥವಾಗುತ್ತವೆ.

ಈ ಗ್ರಂಥದಲ್ಲಿ ಎರಡು ಭಾಗಗಳಿವೆ. ಪ್ರತಿ ಭಾಗದಲ್ಲಿಯೂ ಏಳೇಳು ಖಂಡಗಳಿವೆ. ಹಾಡುಗಳು ಲಲಿತವಾಗಿಯೂ ಸರಳವಾಗಿಯೂ ಇವೆ. ಒಂದೊಂದು ಖಂಡದಲ್ಲಿಯೂ ಏಳೇಳು ಪದಗಳಿರುವುದರಿಂದ "ಸಪ್ತಪದಿ" ಎಂಬ ಹೆಸರಿಟ್ಟಿದ್ದಾನೆ. ಇದಕ್ಕೆ ಜಯದೇವನ 'ಗೀತಗೋವಿಂದ'ವು ಆಧಾರವಾಗಿದೆಯೆಂದು ಹೇಳಬಹುದು. ಮೊದಲ ಭಾಗದಲ್ಲಿ ಗೋಪಿಯರ ಪ್ರಣಯ, ವಿರಹ ವೃತ್ತಾಂತಗಳು ನಿರೂಪಿತವಾಗಿವೆ. ಉತ್ತರಭಾಗದ ಏಳು ಸಪ್ತಪದಿಗಳಲ್ಲಿಯೂ "ಎಡೆವಿಡದೆ ದೊರೆಕೊಂಬ ಮೋಕ್ಷಮಂ ಸಾಧಿಪುದರ್ಕೆ ಉಪಾಯಮಾದ ಪ್ರಪತ್ತಿ ಸ್ವರೂಪಮಂ" ನಿರೂಪಿಸಿದ್ದಾನೆ.

ಕೀರ್ತನೆಗಳಿಗೆ ಪಲ್ಲವಿ, ಚರಣಗಳಿವೆ; ರಾಗಗಳಿವೆ. ಕೀರ್ತನೆಗಳ ಅರ್ಥವು ವ್ಯಕ್ತವಾಗುವಂತೆ ಆದಿಯಲ್ಲಿ ಒಂದೊಂದು ಕಂದಪದ್ಯವನ್ನು ಕೊಡಲಾಗಿದೆ. ಪದ್ಯಗಳು ಹಳಗನ್ನಡ ಶೈಲಿಯನ್ನೂ, ಕೀರ್ತನೆಗಳು ಹೊಸಗನ್ನಡ ಶೈಲಿಯನ್ನೂ ಅನುಸರಿಸಿವೆ.

ಇಲ್ಲಿ ಒಂದೆರಡು ಕಂದಪದ್ಯಗಳನ್ನೂ, ಪದಗಳನ್ನೂ ಮಾದರಿಗಾಗಿ ಕೊಟ್ಟಿದೆ. ಶ್ರೀಕೃಷ್ಣನ ಮಂಗಳಮೂರ್ತಿಯ ಸಿಂಗರದಿಂಗಿತವನ್ನು ಗೋಪಿಯೊಬ್ಬಳು ಕೆಳದಿಗೆ ಈ ರೀತಿ ಬಣ್ಣಿಸುತ್ತಾಳೆ:

ವೇಣುವ ನುಡಿಸಲ್ ಪೂಡಿದ । ತಾಣಕಮಂ ತನ್ನನೊಲಿಪಗೆಯ್ತಂಗೆತ್ತಾ
ಜಾಣೆ ಜಗದೀಶನಿರವಂ । ಕಾಣಿಸಿ ತಿಳಿಪುತ್ತೆ ತನ್ನ ಸೊಬಗಂ ಮೆರೆದಳ್

ಪದ ॥ ಸೊಗಸುಗೊಳನಾಂತು ಸೊಗಯಿಪ ತೋಳ್ಗಳ
ನೆಗಹಿಯುಮರಿಸುವ ನೆವದೊಳೆನ್ನ
ಬಗೆಗರಗಿಸುತ್ತ ಮೇಲ್ವಾಯ್ದು ಪಿಡಿದು ಬಿಗಿ
ಬಿಗಿದಮರ್ದಪ್ಪುವ ಬೆಡಗತೋರುವನಮ್ಮ

ಕೊಳಲುಲಿಯನ್ನು ಕೇಳಿದ ಗೋಪಿಯೊಬ್ಬಳು ತನ್ನ ಮನಸ್ಸಿನ ಸ್ಥಿತಿಯನ್ನು ಹೀಗೆ ಹೇಳಿಕೊಳ್ಳುತ್ತಾಳೆ:

ಪದ ॥ ಸೊಗಯಿಸುತಿದೆ ಕೊಳಲುಲಿಯಿಂತು ಸೊಗಯಿಸುತಿದೆ
ಬಗೆಗರಗಿಸಿ ಮಿಗೆ ಪರವಶಗೊಳಿಸುತ ॥ ಪಲ್ಲವಿ ॥

ಕರೆದು ಸಂತಸದೊಳೇಕಾಂತವಾಡುವಂತೊಮ್ಮೆ
ಮರುಳುಗೊಳಿಪ ಮೋಹಮಂತ್ರದಂತೊಮ್ಮೆ
ಎರೆಹೊರೆಯಿನಿತಿಲ್ಲದೆಚಿಕವಾತಿನಂತೊಮ್ಮೆ
ಸರಸದೊಳೆಸಗುವ ಸನ್ನೆವಾತಿನಂತೊಮ್ಮೆ

* * *

ಪಲತೆಱನಾಗುತಿದೆಯೆನ್ನ ಮನಸು ಪಲತೆಱನಾಗುತಿದೆ
ಚೆಲುವ ಗೋಪಾಲನ ಮೆಯ್ಸಿರಿಯ ಬಱಿವಿಡಿದು ॥ ಪಲ್ಲವಿ ॥

ಸುಱಿಗುರುಳಿನೊಳುಱೆ ಸುತ್ತುವರಿಯುತಿದೆ
ತೊಳಪ ನುಣ್ಬಣೆಯೊಳು ತೊಳಗುತಿದೆ
ಎಳೆವೆಱೆ ನಾಮದೊಳು ಇನಿಸು ಕೊಂಕುತಲಿದೆ
ತಳಿರುವ ನೋಟದೊಳು ತಣ್ಪುವಡೆಯುತಿದೆ

ನಲಿವ ಪುರ್ಬಿನೊಡನೆ ನಲಿನಲಿದಾಡುತಿದೆ
ಉಲಿವ ಪೊಂಗೊಳಲೊಡನುಲಿಯುತಿದೆ
ಅಲೆವ ಬೆರಲ್ಗಳೊಡನಲೆವಡೆಯುತಿದೆ
ಒಲೆವೊಳುಗೊರಲೊಡನೊಯ್ಯನೊಲೆಯುತಿದೆ

ಈಗ ಉದ್ಧರಿಸಿರುವ ಭಾಗಗಳು ಸರ್ವೋತ್ಕೃಷ್ಟವಾದುವೆಂದು ಹೇಳಿದುದಲ್ಲ. ಇವಕ್ಕಿಂತ ಮಿಗಿಲಾದ ಭಾಗಗಳು ಈ ಕೃತಿಯಲ್ಲಿ ಹಲವು ಇವೆ. ಓದುಗರು ಅವುಗಳನ್ನು ಶ್ರದ್ಧೆಯಿಂದ, ಆಸಕ್ತಿಯಿಂದ ಓದಿದರೆ ಮನಗಾಣುವರು.

ಎರಡನೆಯ ಭಾಗದ ಒಂದು "ಪದ"ವನ್ನಿಲ್ಲಿ ಕೊಟ್ಟಿದೆ. ಕೆಳಗಿನ ಪದ್ಯಗಳು ಭಗವಂತನ ಪಾದದ ಮಹಿಮೆಯನ್ನು ಬಣ್ಣಿಸುತ್ತವೆ. ಇವುಗಳಲ್ಲಿ ಕಂಡುಬರುವ ರೀತಿ ಕುಮಾರವ್ಯಾಸನ, ಪುರಂದರದಾಸರ ಗೀತೆಗಳಲ್ಲಿಯೂ ಕಾಣುತ್ತದೆ:

ಸಿರಿರಾಣಿಯೊಲವಿಂದ ಸೇರಿಯೊತ್ತುವ ಪಾದ
ಪುರುಳೆನಿಸಿ ವೇದದೊಳು ಪೊಳೆವ ಪಾದ
ಸರಸಿಜಧ್ವಜ ಶಂಖ ಚಕ್ರಲಾಂಛಿತ ಪಾದ
ಪರಮ ಯೋಗೀಶ್ವರರು ಭಾವಿಸುವ ಪಾದ

ಅವನಿಯಾಕಾಶಗಳನಳೆದು ಪೆರ್ಚಿದ ಪಾದ
ದಿವಿಜ ನದಿಯನು ಪಡೆದ ದಿವ್ಯಪಾದ
ಶಿವನ ಪಾವನಗೈದು ಶಿವನೆನಿಸಿದೀ ಪಾದ
ಕವಿದು ಕಲ್ಲಿಗೆ ಜೀವಕಳೆಯಿತ್ತ ಪಾದ

ಪರಿದು ಕುರುದ್ಯೂತದೊಳು ಬಣ್ಣವೇಱಿದ ಪಾದ
ಪರಿಪರಿಯ ಭಯವ ಪರಿಹರಿಪ ಪಾದ
ತಿರುಮಲಾರ್ಯರಿಗೆ ಕುಲದೇವರೆನಿಸಿದ ಪಾದ
ನರಪತಿಗೆ ತರತರದಿ ನಲವೀವ ಪಾದ

ಈ ಕೃತಿಯು ನಮ್ಮ ಜನರಿಗೆ ಬಹಳಮಟ್ಟಿಗೆ ಪರಿಚಯವಾಗಬೇಕಾಗಿದೆ. ಇಲ್ಲಿ ಕಂಡುಬರುವ ವಿಚಾರಗಳು ಉಪೇಕ್ಷಣೀಯವಾದುವುಗಳಲ್ಲ. ಕನ್ನಡ ನಾಡಿನವರೆಲ್ಲರೂ ತಮ್ಮ ದೃಷ್ಟಿಯನ್ನಿತ್ತ ಹೊರಳಿಸಬೇಕೆಂದು ನಮ್ಮ ನಮ್ರವಾದ ಸೂಚನೆ.

## ‘ ಹದಿಬದೆಯ ಧರ್ಮ ’

‘ ಕನ್ನಡ ಸಾಹಿತ್ಯ ಲೋಕ ’ದಲ್ಲಿ ಈಗತಾನೆ ನಮ್ಮ ಸೋದರಿಯರು ಕಾಲಿಡುತ್ತಿದ್ದಾರೆ. ಇದಕ್ಕಿಂತ ಹಿಂದೆ ಸ್ತ್ರೀಯರು ಕನ್ನಡಕ್ಕೆ ಏನು ಮಾಡಿದ್ದಾರೆ? ಅವರ ಸೇವೆಯು ಎಂತಹುದು? ಎಂಬೀ ವಿಚಾರಗಳು ನಮ್ಮ ಸೋದರೀವೃಂದಕ್ಕೆ ಪರಿಚಯವಾದರೆ ಮುಂದೆ ಅವರ ಕಾರ್ಯವು ಬಹಳ ಸುಗಮವಾದೀತು.-

‘ ಹದಿಬದೆಯ ಧರ್ಮ ’ವು ಕನ್ನಡ ಸಾಹಿತ್ಯದಲ್ಲಿ ಒಂದು ಸಣ್ಣ ಕೃತಿ. ಅದನ್ನು ರಚಿಸಿದವಳು ಸಂಚಿಯ ಹೊನ್ನಮ್ಮ. ಈಕೆ ಚಿಕ್ಕದೇವರಾಜ ಒಡೆಯರ ಆಸ್ಥಾನದಲ್ಲಿದ್ದ ಊಳಿಗದ ಹೆಂಗುಸು. ಈ ಗ್ರಂಥವು ಸಾಂಗತ್ಯದಲ್ಲಿದೆ. ಯಾವುದರಿಂದ ಭಾರತವರ್ಷದ ಕಲ್ಯಾಣವಾಗಿದೆಯೋ, ಯಾವುದರಿಂದ ಭಾರತದ ಕೀರ್ತಿ ಪ್ರತಿಷ್ಠೆಗಳು ಮುಂದೆಯೂ ಜಗತ್ತಿನಲ್ಲಿ ಪಾಲಿಸಲ್ಪಡಬೇಕೋ ಅಂತಹ ‘ ಕುಲವನಿತಾ ಧರ್ಮ ’ವು ಈ ಕಾವ್ಯದ ‘ ಇತಿವೃತ್ತ ’ ಅಥವಾ ‘ ವಸ್ತು ’. ಈ ಕಾವ್ಯವನ್ನು ಪೂರ್ಣವಾಗಿ ಓದಿದವರು, ಇವಳು ನಿಜವಾಗಿಯೂ ಊಳಿಗದ ಹೆಂಗುಸಾಗಿರಲಿಲ್ಲವೆಂದೂ, ಸಮಸ್ತ ಶಾಸ್ತ್ರ ಪರಿಜ್ಞಾನವನ್ನೂ ಪಡೆದಿದ್ದ ಉಚ್ಚ ಸಂಸ್ಕೃತಿಯ ಹೆಂಗುಸಾಗಿದ್ದಳೆಂದೂ ಮನಗಾಣುವರು.

ಇವಳ ಜ್ಞಾನಸಂಪನ್ನತೆ, ಜಾಣ್ಮೆ, ಧೀಶಕ್ತಿಗಳು ನರಪತಿ ಚಿಕ್ಕದೇವರಾಜ ಒಡೆಯರವರೆಗೂ ಮುಟ್ಟಿದ್ದಿತು. ಅವರು ರಾಣಿಯನ್ನು ಕರೆದು, “ ಇವಳ ಸಾಹಿತ್ಯದ ಸವಿಗೆಳಸುತ್ತಿನ್ನ ಕಿವಿಗಳು ಕದುಬುಗೊಂಡಿಹವು,” “ ಪವಣಿಗೆಯೊಪ್ಪೆ, ಪುರುಳು ಪೊಗರೇರೆಯುಂಗವಿಸೆ ಅಲಂಕಾರಗಳು ಕವಿದು ಪರಿಯೆ ರಸದೊಳ್ಗಂಪು ಘಮ್ಮನೆ ಕವಿತೆಯೊಂದನು ಪೇಳಿಸಿಂದು ” ಎಂದು ಆಣತಿಮಾಡಿದರು. ರಾಣಿಯು ಆಕೆಯನ್ನು “ ಕನ್ನಡಜಾಣೆ ನೀ ಬಾರೆಂದು ಕರವಿಡಿದು ತನ್ನೊತ್ತಿಗೆ ಬರಿಸಿ” “ಕಲಿತ ಬಿಜ್ಜೆಯ ಬಲ್ಲರಿಗೆ ಕೇಳಿಪುದೈಸೆ ಫಲವಿದನರಿತು ನೀನಿಂದು ಅಲಸದೆ ನಾಣ್ಚದಂಜದೆಯಳುಕದೆ ಪೇಳು ಪಲವಗೆ ಕಬ್ಬದೊಳ್ಪುಗಳ” ಎಂದು ಕೇಳಿದಳು. ಆಗ ಹೊನ್ನಮ್ಮನು ಕಾವ್ಯರಚನೆಗೆ ಮನಸ್ಸುಕೊಟ್ಟಳು.

ಕಾವ್ಯವಿಷಯವನ್ನಾರಿಸುವ ವಿಚಾರದಲ್ಲಿ ಆಕೆಗೆ ಇದ್ದ ವಿವೇಚನಾಶಕ್ತಿಯನ್ನು ಕಂಡು ನಮ್ಮ ಮನಸ್ಸಿಗೆ ಹಿಡಿಸಲಾಗದಷ್ಟು ಸಂತೋಷವಾಗುತ್ತದೆ. ತನ್ನ ಸೋದರೀವರ್ಗವು ಅಭಿವೃದ್ಧಿಯನ್ನು ಪಡೆದು ಇಹಪರದೇಳ್ಗೆಯನ್ನು ಸಾಧಿಸಲು ಬೇಕಾದ ‘ ಹದಿಬದೆಯ ಧರ್ಮ ’ವನ್ನೇ ಅವಳು ಆರಿಸಿಕೊಂಡಳು. “ ಪದಿನೆಂಟು ಬನ್ನಣೆಯಿಂದು ಬವಣಿಗೊಂಡು ಪದಗೆಟ್ಟು ಬಯಲ ಬಣ್ಣಿಸಿ” ಸಾಧಿಸುವುದಾದರೂ ಏನು?

ಅವಳು ತನ್ನ ಕಾವ್ಯದ ಮೇಲ್ಮೆಯನ್ನು ಸೊಗಸಾಗಿ ಹೇಳಿಕೊಂಡಿದ್ದಾಳೆ. ಅದರಲ್ಲಿ ನಮಗೆ ಯಾವ ಅತ್ಯುಕ್ತಿಯೂ ಕಾಣುವುದಿಲ್ಲ. ಕಾವ್ಯವನ್ನೋದಿದರೆ, ಅವೆಲ್ಲವೂ ನಿಜವೆಂದು ತೋರುತ್ತದೆ.

ಧರ್ಮದ ತನಿಗಂಪು ತಲೆದೋರೆ ಕಾವ್ಯದ । ಪೆರ್ಮೆ ಬೇರ್ವರಿಂದು ಬಿತ್ತರಿಸೆ
ನಿರ್ಮಲ ಸತಿಯರ ಧರ್ಮವ ಕೃತಿಯಾಗಿ । ನಿರ್ಮಿಸಿ ಕೇಳಿಪೆನಿಂದು

ಮುಂದೆ ಉದ್ಧರಿಸಿರುವ ಭಾಗಗಳಿಂದ ಕಾವ್ಯದ ಮೇಲ್ಮೆಯನ್ನರಿಯಬಹುದು. ಆರಿಸುವಾಗ ನಮಗೆ ಉಭಯಸಂಕಟ; ಯಾವ ಭಾಗವನ್ನು ಆರಿಸೋಣ, ಯಾವ ಭಾಗವನ್ನು ಬಿಡೋಣ ಎಂಬ ಸಂಕಟಕ್ಕೆ ಸಿಕ್ಕಿಕೊಳ್ಳುತ್ತೇವೆ. ಇಲ್ಲಿರುವ ಭಾಗಗಳೆಲ್ಲ ಸುಂದರವಾಗಿಯೇ ಇವೆ. 'ಸ್ಥಾಲೀಪುಲಾಕ ನ್ಯಾಯ'ದಿಂದ ಕಾವ್ಯ ಮಹತ್ವವನ್ನು ನಾವು ಅರಿತು ನಡೆಯಬೇಕಾಗಿದೆ. ಪತಿವ್ರತೆಯರ ಮಹಿಮೆಯನ್ನಿಲ್ಲಿ ಉದಾಹರಿಸಿದೆ:

ಮಳೆಗರೆವುದು ಬೆಳೆ ಪೆರ್ಚುವುದಿಳೆ ತಳ । ಕಿಳಿದುಪೋಗದೆ ತಡೆದಿಹುದು
ಪಳಿವಿಲ್ಲದ ಪತಿವ್ರತೆಯರ ನಡತೆಯ । ಬಳದೊಳೆಂಬರು ಬಲ್ಲವರು
ಪರಮಪತಿವ್ರತೆಯರ ಪಾದ । ದರುಶನ ದೊರೆಕೊಂಡುದೆ ಪುಣ್ಯದಿವಸ
ಪರಿದಿವರನು ಬಲವರೆ ಭೂಪ್ರದಕ್ಷಿಣ । ದಿರವನೇವಣ್ಣಿಪೆನು

ತಪಸ್ಸುಮಾಡಿ ಶರೀರಶೋಷಣೆ ಮಾಡುವುದಕ್ಕಿಂತಲೂ ಗಾರ್ಹಸ್ಥ್ಯ ಜೀವನವು ಶ್ರೇಷ್ಠತರವಾದದ್ದೆಂದು ಹೇಳುತ್ತಾಳೆ. "ಮನೆಯತೊರೆದು ಮನೆವಾಳ್ತೆಯ ನುಳಿದು ಬನದೊಳು ಗೈವ ಬರಿಯ ತಪಗಳು" ಕುಲವನಿತೆಯರ ಇರವಿಗೆ ಎಂದಿಗೂ ಸರಿಯಾಗುವುದಿಲ್ಲ.

ಸ್ತ್ರೀಯರಿಗೆ ಆಕೆ ಹೇಳಿರುವ ನೀತಿವಾಕ್ಯಗಳು ಬಹಳ ಹೃದಯಂಗಮವಾಗಿವೆ. ಸ್ತ್ರೀಯು ಪತಿಯನ್ನು ತನ್ನ "ಸರ್ವಸ್ವ"ವೆಂದರಿಯಬೇಕೆಂಬ ನೀತಿ ನಮ್ಮಲ್ಲಿ ರೂಢವಾಗಿ ರಕ್ತಗತವಾಗಿ ಬಂದಿದೆ. ಇದನ್ನೇ ಆಕೆ ಸೀತೆ, ದ್ರೌಪದೀ, ದಮಯಂತಿ, ಲೋಪಾಮುದ್ರೆ ಇವರುಗಳ ಉದಾಹರಣೆಯಿಂದ ಸ್ಪಷ್ಟಪಡಿಸಿದ್ದಾಳೆ. ಪತಿಯನ್ನು ಪರದೇವತೆಯೆಂದು "ಭಕ್ತಿಗೈಯ" ಬೇಕು. "ಬಲುದೊರೆ" ಯೆಂದುಪಚರಿಸಬೇಕು. ಗುರುವಿನಲ್ಲಿರುವಂತೆ "ವಿನಯಗೂಡಿ" ನಡೆಯಬೇಕು. ಅಡವಿಯಲ್ಲಿ ತನ್ನನ್ನು ಬಿಟ್ಟುಹೋದ ಪತಿಯನ್ನು ನಿಷ್ಠುರಮಾಡದೆ, ಅವನೊಡನೆ "ನಲ್ಮೆಯನೆಸಗಿ" ದಮಯಂತಿ "ಇಳೆಯ ಪೆಂಡಿರೊಳೆಣೆಯಿಲ್ಲದ ಕೀರ್ತಿ" ಯನ್ನು ಸಂಪಾದಿಸಿದಳು. ಜಾನಕಿ ದ್ರೌಪದಿಯರು ಪತಿಪರಾಯಣೆಯರಾಗಿ ಪತಿವ್ರತೆಯರಲ್ಲಿ "ಬೈತಲೆವಣಿ"ಗಳೆನಿಸಿದರು. ಅರುಂಧತೀ, ಅನಸೂಯಾ, ಲೋಪಾಮುದ್ರೆಯರು "ಸಾಧ್ವೀರತ್ನ"ರಾದರು. ಸಂಸಾರದಲ್ಲಿ ಸ್ವರ್ಗವನ್ನು ಕಾಣಬೇಕಾದರೆ, ಆಕೆ ಹೇಳಿದಂತೆ ನಡೆಯಬೇಕೆಂಬುದು ನಿರ್ವಿವಾದವಾದ ಸಂಗತಿ.

ಸತಿಪತಿಯರ ಸೌಹೃದದಿಂದೆ ಸಂಸಾರ । ವತಿಶಯವಡೆದು ತೋರುವುದು
ಇತರೇತರ ವೈರದಿಂದಿರ್ವರಿಗೆ ದು । ರ್ಗತಿಯಂತೆ ಕಂಗೊಳಿಪುದು

"ದಂಪತಿಗಳ ಪಗೆತನದಿಂದ ಇರ್ವರ ಪೆಂಪಿನ ಬೇರು ಪರಿವುದು" ಸತ್ಯವಾದದ್ದು. "ಸೊಂಪುಗೆಡುವುದು ಸೊಬಗು," "ಸಂಸಾರದ ಜಂಪು ಸಡಲಿ ಜಾರುವುದು."

ಮುಂದೆ ನಿರೂಪಿಸಿರುವ ಭಾಗಗಳು ಕಾವ್ಯದೃಷ್ಟಿಯಿಂದ ಬಹಳ ಮುಖ್ಯವಾದುವು. ವಿಷಯಗಳನ್ನು ಮನೋಜ್ಞವಾಗಿ ಬಣ್ಣಿಸಿರುವುದಲ್ಲದೆ, ಅಲ್ಲಿ ಕಾಣುವ ಉಪಮಾನಗಳು ಕಾವ್ಯಸಹಜವಾಗಿವೆ:

ನಸುನಾಣ್ಚುವೆಳವೆಂಡಿರ ನಲವೇರಿಸಿ । ಬಸಗೈಯದೆ ಬಲ್ಮೆದೋರೆ
ಪೊಸ ಪೂಸರಗೈದು ಮುಡಿಯದೆ ನಲುಗಿಸಿ । ರಸದೆಗೆವೆಸಕವೆನಿಪುದು

ಬೆದರುವ ಮುದ್ದುವೆಣ್ಣಿಗೆ ಮುದ್ದುಗಳೆವಂತೆ । ಪದುಳಗೈಯದೆ ಬಲ್ಮೆದೋರೆ
ಸೊದೆಯುಂಡು ಸೊಕ್ಕುರ್ವ ಜೊನ್ನವಕ್ಕಿಗೆ ಬಿಸು । ಗದಿರನೂಡುವ ಗೈಮೆಯಂತೆ

ಅರಿಯದ ಪೆಣ್ಣನಾದರಿಸಿಯಂಜಿಕೆಗಳ । ಪರಿವುಗೈಯದೆ ಬಲ್ಮೆದೋರೆ
ತರಿಸಂದ ಮಳೆಗೆ ಬಾಯ್ದೆರೆವ ಚಾದಗೆಯೊಳು । ಬರಸಿಡಿಲೆರಗಿತೆಂಬಂತೆ

ಮುಗುದೆ ನಾಚಿಗೊಳೆ ಮುದ್ದಿಸಿ ತಿಳುಪದೆ । ಪಗೆಸಾಧಿಸಿ ಬಲ್ಮೆದೋರೆ
ಉಗುರೊಳು ಬಾಚಿಪ ಬೀಣೆಗೊನಕೆಗೊಂಬ । ಬಗೆಯೆನಿಪುದು ಭಾವಿಪೊಡೆ

ಎಂತಹವರಿಗೆ ಎಳವೆಂಡಿರು ಮನವೀಯುವರೆಂಬುದನ್ನು ಆಕೆ ತಿಳಿಸಿದ್ದಾಳೆ. "ಕನಲಿ ಕಲ್ಲೆರ್ದೆಯವಳೆಂದಲ್ಲಗಳೆಯದೆ, ಮನಮುರಿಯದೆ, ಮುಚ್ಚರಿಸದೆ, ಕನುನಯ ವಚನದಿಂದನುಗೊಳಿಸಿದರೆ" ಅವಳು ಒಲಿಯುತ್ತಾಳೆ. "ಎನ್ನವಳೆಂಬ" ಎರಕದಿಂದ "ಪೊನ್ನರನ್ನದ ಪೊಸದುಗುಲ"ಗಳನ್ನೀಯಬೇಕು. "ತನ್ನ ಶಕ್ತಿ"ಯ ವಂಚಿಸದೆ ನಡೆದುಕೊಂಡರೆ ಆಕೆ ಒಲಿಯುತ್ತಾಳೆ.

ಮನೆಯಲ್ಲಿ ಪದಾರ್ಥವನ್ನು ಜೋಪಾನವಾಗಿಡುವ ವಿಚಾರವನ್ನವಳು ಮರೆತಿಲ್ಲ. ಕುಲವನಿತೆಯರು ತಮ್ಮ ಮನೆಯ ಸಾಮಗ್ರಿಗಳನ್ನು ಎಷ್ಟು ಎಚ್ಚರಿಕೆಯಿಂದ ರೂಢಿಸುವರೋ ಅಷ್ಟೂ ಅವರು ಸುಖಹೊಂದುವರು. ಅವರ ಬದುಕು ಸ್ವರ್ಗಸದೃಶವಾಗುವುದು. ಪತಿಯಲ್ಲಿ ಅನನ್ಯ ಪ್ರೇಮದಿಂದ ವರ್ತಿಸಿದರೆ ಸಾಲದು; ಮನೆಯ ಧಾನ್ಯಾದಿಗಳನ್ನು "ಹಸಗೆಡದಂತೆ, ಹಕ್ಕಿಗಳು ಕುಟುಕದಂತೆ ಪಸುಗಳು ಬಾಯಿಡದಂತೆ, ಕಸವುಗದಂತೆ" ರೂಢಿಸಬೇಕು. ಆಗ ಅವರು, "ಜಸವಡೆ"ಯುತ್ತಾರೆ.

"ಏರು ಜವ್ವನದ ನೀರೆಯರು ತೊಂಡುವೆಣ್ಗಳ ನೇಹದೊಡಕಿಗೆ ಸಿಲುಕ"ದಿರಬೇಕು. "ಪುಂಡುವೆಣ್ಗಳೊಳು ಪೊರ್ದುಗೆವಡೆಯದೆ ನಲ್ವೆಂಡಿರೊಡನೆ ಬೆರಸುವುದು." ಆಗ ಅವರು ಸಂಸಾರದಲ್ಲಿ ಸ್ವರ್ಗಸುಖವನ್ನು ಸೂರೆಗೊಳ್ಳುವರು.

ಈವರೆಗೆ ಉದ್ಧರಿಸಿದ ವಾಕ್ಯಗಳು ಮೇಲ್ಕಂಡ ಕಾವ್ಯದ ಮೇಲ್ಮೆಯನ್ನು ತಿಳಿಸುತ್ತವೆ. ನಮ್ಮ ನಾಡಿನ ಸ್ತ್ರೀಯರು ಕನ್ನಡದಲ್ಲಿ ಇಂತಹುದೊಂದು 'ಕೃತಿ' ಯುದಿಯಲ್ಲಾ ಎಂದು ಹೆಮ್ಮೆಪಡಬೇಕು. ಇದರ ಪಠನದಿಂದ, ಮನನದಿಂದ, ನಿತ್ಯಾನುಷ್ಠಾನದಿಂದ ನಮ್ಮವರ ಬದುಕು ಹಸನಾಗುವುದು; ಅಮರವಾಗುವುದು.

ಇದರಿಂದ ನಮ್ಮವರು ಗಳಿಸಬಹುದಾದ ಪರಮ ಪ್ರಯೋಜನಗಳನ್ನು ಆಕೆ ಮನೋಜ್ಞವಾಗಿ ಹೇಳಿದ್ದಾಳೆ:

ಮೈಲಿಗೆಯೆಂಜಲು ಎಂಬುದನರಿಯದೇ ಇರುವ ಮುಗುದೆಯರು ಈ ಕೃತಿಯನ್ನು ಕೇಳಿದರೆ ನಿಗಮದೊಳೊಗೆದ ನೇಮಂಗಳ ತಿಳಿದು ಜಗಕ್ಕೆ ಪಾವನೆಯ

ರಾಗುತ್ತಾರೆ. ಅತ್ತೆನಾದಿನಿಯರೊಳು ಅಳುಕದೆ ಕಾದುವ ಉನ್ಮತ್ತೆಯರು ಕೇಳಿದ ಉತ್ತಮ 'ಗುಣವತಿ'ಯರಾಗುತ್ತಾರೆ. ಮಚ್ಚರಿಸುವ ಸ್ತ್ರೀಯರಿದನ್ನು ಕೇಳಿದ ವೈರದ ಬೇರನ್ನು ಪರಿದು ಒಂದಾಗುತ್ತಾರೆ.

ಇದು "ಪಾತಿವ್ರತ್ಯ ಧರ್ಮತತ್ವದ ಸಾರ," "ಇದೆ ಸಂಜೀವನ ಮಂತ್ರ," "ಇದು ಪರಮಾರ್ಥ ಹಿತೋಪದೇಶದ ತಿರುಳು," "ಇದನು ಸತಿಯರೋದು ವುದು," ಓದಿ "ಧರ್ಮದ ಹದನರಿತು ಆಚರಿಸುವುದು," "ಹದಿಬದೆಯರೆನ್ನಿ ಬಾಳುವುದು."

ಹೊನ್ನಮ್ಮನ ಈ ಕನಸನ್ನು ಸಫಲಮಾಡುವ ಸಂಕಲ್ಪವನ್ನು ನಮ್ಮ ಸೋದರೀವರ್ಗವು ಕೈಕೊಳ್ಳುವುದಾದರೆ ನಮ್ಮ ಪುಣ್ಯಕ್ಕೆ ಮಿತಿಯಿಲ್ಲ. ತನ್ನ ಕೃತಿಯನ್ನು ಎರಡು ಶತಮಾನಗಳನಂತರ ಜನಿಸಿದ ಕನ್ನಡ ಕುಲವನಿತೆಯು ಆಸಕ್ತಿಯಿಂದ ಓದಿ ಆಚರಿಸಿದ್ದನ್ನು ಕೇಳಿ ಹೊನ್ನಮ್ಮನು 'ಅನಂತಶಾಂತಿ'ಯನ್ನು ಅನುಭವಿಸುವಳೆಂಬುದರಲ್ಲಿ ಸಂದೇಹವು ಎಳ್ಳಷ್ಟೂ ಇಲ್ಲ.

ಈಗ ನೋಡಿದ ಮೂರು ಕೃತಿಗಳು ಆ ಕಾಲದಲ್ಲಿ ಹುಟ್ಟಿದ ಕನ್ನ ಸಾಹಿತ್ಯದ ತಿರುಳನ್ನು ತೋರಿಸುತ್ತಿವೆಯೆಂದು ನಾವು ಬೇರೆ ಹೇಳಬೇಕಾಗಿಲ್ಲ.

ಚಿಕ್ಕದೇವರಾಜ ಒಡೆಯರ ಕಾಲದಲ್ಲಿ, 'ಕರ್ನಾಟಕ'ದಲ್ಲಿ ಒಂದು ಸಾರಸ್ವತ ನವೋದಯವುಂಟಾಗಿತ್ತೆಂದು ಹೇಳಬಹುದು. ಆಗ ಮೈಸೂರು—ಕನ್ನಡನಾಡಿನ ಮಾತ್ರವಲ್ಲ—"ಭೂರಮಣೀಲಸದಂಘ್ರಿನೂಪುರ"ವಾಗಿದ್ದಿತು; "ಬೀರರ ಮಂದಿರ"ವಾಗಿತ್ತು; "ಒಳ್ಪಿನ ಪೇಟಿ"ಯಾಗಿತ್ತು. ಕನ್ನಡ ನಾಡು ಎಲ್ಲಿ ಹೋ ಯಲ್ಲಿಯೂ ಮುಂದುವರಿದು "ಮುಕ್ತಿಕಾಂತೆ ಕೈಗೂಡುವ ಬೀಡಾಗಿದ್ದಿತು." ಅಗ ಹುಟ್ಟಿದ ಸಾಹಿತ್ಯವು ಬಹು ಮಧುರವೂ, ಸೊಂಪೂ ಆಗಿದ್ದಿತು. ಆಗಿನ ಭಾಷೆ ಸರಳವಾಗಿ, ಲಲಿತವಾಗಿ, ಮನೋಜ್ಞವಾಗಿದ್ದಿತು. ಆಗಿನ ಕೃತಿಗಳು ನುಣ್ಣಗೆ ಗಳೊಪ್ಪಂಬೆತ್ತು ಚೆಲುವಾಗಿದ್ದುವು!

ಇಂತಹ ಸಾಹಿತ್ಯಸೃಷ್ಟಿಗೆ ಎಡೆಗೊಟ್ಟು ತಕ್ಕ ವಾತಾವರಣವನ್ನು ಕಲ್ಪಿಸಿದ "ಕರ್ನಾಟಕ ಚಕ್ರವರ್ತಿ" ಚಿಕ್ಕದೇವರಾಜ ಒಡೆಯರ ಆಳ್ವಿಕೆಯು ಎಂತಹ ಮಹತ್ವದಿಂದ ಕೂಡಿದ್ದಿತೆಂಬುದು ಒಡನೆಯೇ ನಮಗೆ ವೇದ್ಯವಾಗುತ್ತದೆ. ನಮ್ಮ ಸಾಹಿತ್ಯಾರಾಮದಲ್ಲಿ ಅಂದಿನ ಕವಿಗಳು ಮೃದು ಮಧುರವಾಗಿ ಹಾಡಿದ್ದಾರೆ. ನಮ್ಮ ಕಾವ್ಯ ಪ್ರದರ್ಶನಾಲಯದಲ್ಲಿ ಆ ಕಾವ್ಯಗಳಿಗೆ ಉತ್ತಮ ತರದ ಶ್ರೇಣಿಯಲ್ಲಿ ಸ್ಥಾನವು ಸಿಕ್ಕಬೇಕು.

ನಮ್ಮ ಜನತೆಯು ಆ ಕಾಲದ ಸಾಹಿತ್ಯವನ್ನು ಹೆಚ್ಚು ಪರಿಚಯ ಮಾಡಿ ಕೊಂಡಲ್ಲಿ, ಅದರಿಂದ ನಮಗೆ ಬಹಳ ಮೇಲುಂಟಾಗುವುದು: ನಮ್ಮ ಜನತೆಯು ಜ್ಞಾನಪರಿಸ್ತರಣವು ಬಹುಮುಖವಾಗಿ ವಿಸ್ತಾರವಾಗುವುದು.

# ಐದನೆಯ ವಸಂತ ಸಾಹಿತ್ಯೋತ್ಸವ

## ಬೆಂಗಳೂರು, ಏಪ್ರಿಲ್-ಮೇ ೧೯೩೮

### ಉಪಾಧ್ಯಕ್ಷರಾದ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ಸ್ವಾಗತ ಭಾಷಣ

ಕರ್ನಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಪರವಾಗಿ, ಈ ವಸಂತ ಸಾಹಿತ್ಯೋತ್ಸವಕ್ಕೆ, ತಮ್ಮೆಲ್ಲರಿಗೂ ಸ್ವಾಗತ ಬಯಸುವುದು ನನ್ನ ಸಂತೋಷದ ಕರ್ತವ್ಯವಾಗಿದೆ. ಈ ಸಂದರ್ಭದಲ್ಲಿ ಒಂದು ಮಾತನ್ನು ನಾನು ಆರಂಭದಲ್ಲಿಯೇ ಆಡಿದರೆ, ತಾವು ಅದನ್ನು ಸಮಾಧಾನಚಿತ್ತದಿಂದ ಲಾಲಿಸುವಿರೆಂದು ನಂಬುತ್ತೇನೆ. ಈಚೆಗೆ ನಾಡಿನಲ್ಲಿ ಕಾರಣಾಂತರಗಳಿಂದ ಜನರ ಮನಸ್ಸಿನಲ್ಲಿ ನೆಮ್ಮದಿ, ಶಾಂತಿ— ಇವು ನಾವು ಬಯಸುವಷ್ಟು ಮಟ್ಟಿಗೆ ಇಲ್ಲವಾಗಿದೆ. ಆದರೂ ಕೂಡ ಈ ಪರಿಷತ್ತು, ನಮ್ಮ ಕನ್ನಡ ತಾಯ ಗುಡಿ, ನಾವು ಈ ಉತ್ಸವವನ್ನು ನಡಸತಕ್ಕದ್ದು ಯಾರೊಬ್ಬರ ಸ್ವಂತ ಸಂತೋಷಕ್ಕಲ್ಲ, ದೇವರ ಗುಡಿಯಲ್ಲಿ ಕಾಲ ಕಾಲಕ್ಕೆ ಪದ್ಧತಿಯ ಪ್ರಕಾರ ಪೂಜೆ ಪುರಸ್ಕಾರಗಳು ನಡೆಯುವ ಏರ್ಪಾಟು ಇರುವಂತೆ, ಈ ಕನ್ನಡ ತಾಯ ಗುಡಿಯಲ್ಲಿ ಪದ್ಧತಿಯಂತೆ ನಡೆಯಬೇಕಾದ ಪೂಜೆ ಉತ್ಸವಗಳನ್ನು ನಡಸುವುದು ನಮ್ಮ ಕರ್ತವ್ಯವಾಗಿದೆ— ಎಂಬುದನ್ನು ಗಮನಕ್ಕೆ ತಂದುಕೊಂಡು ಈ ಸಮಾರಂಭವನ್ನು ನೆರವೇರಿಸಲು ನಾವೆಲ್ಲ ಇಂದು ಇಲ್ಲಿ ಕೂಡಿದ್ದೇವೆ. ತಾವೂ ಸಹ ವಿಶೇಷ ಸಂಖ್ಯೆಯಲ್ಲಿ ಸೇರಿ, ನಮ್ಮ ಕರ್ತವ್ಯವನ್ನು ನಡಸಿಕೊಡಲು ಇದೇ ಅಭಿಮಾನದಿಂದ ಕೂಡಿದವರಾಗಿ ಬಂದಿದ್ದೀರಿ ಎಂದು ನಾನು ತಿಳಿದಿದ್ದೇನೆ.

### ಪರಿಷತ್ತಿನ ದೊಡ್ಡ ಗುರಿ

ಈಗ ೨೨ ವರ್ಷಗಳ ಹಿಂದೆ ನಮ್ಮ ಕನ್ನಡ ನಾಡಿನ ಹಿರಿಯರೆಲ್ಲ ಸೇರಿ ಈ ಪರಿಷತ್ತನ್ನು ಸ್ಥಾಪಿಸಿದರು. ಇದು ನಮ್ಮ ಶ್ರೀಮನ್ಮಹಾರಾಜರವರ ಕೃಪಾಶ್ರಯದಲ್ಲಿ, ಕನ್ನಡ ಭಾಷೆ, ಕನ್ನಡ ಸಾಹಿತ್ಯ, ಕನ್ನಡ ಸಂಸ್ಕೃತಿ— ಇವುಗಳ ಅಭ್ಯುದಯಕ್ಕೆ ಕನ್ನಡ ನಾಡಿಗೆಲ್ಲ ಕೇಂದ್ರಸ್ಥಾನವಾಗಿರಬೇಕೆಂಬ ಉದ್ದೇಶದಿಂದ, ಕನ್ನಡದ ಹಿರಿಯ ಮುಂದಾಳುಗಳು ಇಷ್ಟಪಟ್ಟ ಮೇರೆಗೆ ಈ ಬೆಂಗಳೂರಿನಲ್ಲಿ ಸ್ಥಾಪನೆಯಾಯಿತು. ಹೀಗೆ, ಕನ್ನಡ ಜನ ಉದ್ಧಾರವಾಗಬೇಕು, ಕನ್ನಡ ಜನ ಒಂದು ಹಿರಿಯ ಜನಾಂಗವಾಗಬೇಕು— ಎಂಬ ಒಂದು ದೊಡ್ಡ ಗುರಿಯಿಂದ ಕಟ್ಟಿದ, ಕನ್ನಡಮ್ಮನ ಪವಿತ್ರ ದೇವಾಲಯವಾದ ಈ ಪರಿಷತ್ತು ಆಗನಿಂದ ಇದುವರೆಗೆ ದಿನೇ ದಿನೇ ಅಭಿವೃದ್ಧಿಗೆ ಬರುತ್ತಿದೆ. ಅಖಿಲ ಕರ್ನಾಟಕದ ಮಹಾಜನರ ಅಭಿಮಾನ ಇದರಮೇಲೆ ಹೆಚ್ಚು ಹೆಚ್ಚಾಗಿ ಬೆಳೆಯುತ್ತಾ ಬಂದಿದೆ. ಈ ಪರಿಷತ್ತು ಸಾಧ್ಯವಾದಮಟ್ಟಿಗೆ, ಎಲ್ಲಾ ಕರ್ನಾಟಕದ ಮಹಾಜನರ ಸೇವೆಯನ್ನು ತನ್ನ ಗಮನದಲ್ಲಿರಿಸಿಕೊಂಡು ಕೆಲಸ ಮಾಡುತ್ತಾ ಬಂದಿದೆ. ಯಾವ ಉದ್ದೇಶದಿಂದ ಹಿರಿಯರು ಇದನ್ನು ಸ್ಥಾಪನೆ ಮಾಡಿದರೋ ಆ ಉದ್ದೇಶವನ್ನು ಸಾಧಿಸಲು ಎಷ್ಟುಮಟ್ಟಿಗೆ ಪರಿಷತ್ತು ಕೆಲಸ ಮಾಡುತ್ತಿರುವುದೆಂಬುದನ್ನು ತಾವೆಲ್ಲ ತಿಳಿದವರಾಗಿದ್ದೀರಿ. ಧನ ಜನ ಸಹಾಯ

1

ಒದಗಿದಷ್ಟು ಮಟ್ಟಿಗೆ, ಸ್ವಲ್ಪವೂ ವಂಚನೆಯಿಲ್ಲದೆ, ಪರಿಷತ್ತು ತನ್ನ ಕೈಂಕರ್ಯ ವನ್ನು ನಿರ್ಮಲಚಿತ್ತದಿಂದ ಮಾಡುತ್ತ ಬಂದಿರುವುದೆಂದು ನಾನು ವಿನಯದಿಂದ ತಮ್ಮಲ್ಲಿ ವಿಜ್ಞಾಪಿಸುತ್ತೇನೆ.

## ಮಹಾಪ್ರಭುಗಳ ಆಶ್ರಯ

ನಮ್ಮನ್ನಾಳುವ ಮಹಾಪ್ರಭುಗಳಾದ ಶ್ರೀಮನ್ಮಹಾರಾಜರವರು ಈ ಸಂಸ್ಥೆಗೆ ಮಹಾಪೋಷಕರಾಗಿ, ಇದರಲ್ಲಿ ಹೆಚ್ಚು ಮಮತೆಯನ್ನಿಟ್ಟುಕೊಂಡಿದ್ದಾರೆ. ಇಂಥ ಉತ್ಸವಗಳಲ್ಲಿ ಅವರಿಗಿರುವ ವಿಶೇಷ ಆದರದಿಂದ ಪ್ರತಿ ಸಮಾರಂಭಕ್ಕೂ ಪ್ರತ್ಯಕ್ಷ ರೂಪವಾದ ಸಹಾಯವನ್ನು ಕರುಣಿಸುತ್ತ ಬಂದಿದ್ದಾರೆ. ಈ ಸಲವೂ ಮಹಾಸ್ವಾಮಿ ಯವರು ಉದಾರಚಿತ್ತದಿಂದ ಒಂದುನೂರು ರೂಪಾಯಿಗಳನ್ನು ಕಳುಹಿಸಿ ಕೊಟ್ಟಿದ್ದಾರೆ. ಮುಂದೆಯೂ ಅವರ ಸಹಾಯ ಇದೇ ರೀತಿ ನಡೆಯುವುದೆಂದು ನಮಗೆಲ್ಲ ಗೊತ್ತಿದೆ. ಶ್ರೀಮದ್ಯುವರಾಜರವರು ನಮ್ಮ ಸಂಸ್ಥೆಯ ಅಧ್ಯಕ್ಷರೂ, ಸಕಲ ಕರ್ನಾಟಕದ ಮಹಾಜನರು ಅವರೇ ಪರಿಷತ್ತಿನ ಪೋಷಕರಾಗಿಯೂ ಅಧ್ಯಕ್ಷರಾಗಿಯೂ ಇದ್ದುಕೊಂಡು, ಈ ಪರಿಷತ್ತನ್ನು ಪೋಷಿಸಿಕೊಂಡು ಬರಬೇಕೆಂದು ಪ್ರಾರ್ಥಿಸಿದ ಮೇರೆಗೆ, ಅವರು ನಮ್ಮ ಪ್ರಾರ್ಥನೆಯನ್ನು ಲಾಲಿಸಿ, ಇದಕ್ಕೆ ಅಧ್ಯಕ್ಷ ರಾಗಿದ್ದಾರೆ. ಈ ಬಾರಿಯ ವಸಂತ ಸಾಹಿತ್ಯೋತ್ಸವಕ್ಕೆ ಅವರೇ ದಯಮಾಡಿ ಉತ್ಸವದ ಪ್ರಾರಂಭ ಮಾಡಿಕೊಡಬೇಕೆಂದು ನಾವು ಪ್ರಾರ್ಥಿಸಿದ ಮೇರೆಗೆ, ಅವರು ನಮ್ಮ ಪ್ರಾರ್ಥನೆಯನ್ನು ಲಾಲಿಸಿ ಈ ದಿವಸ ಇಲ್ಲಿಗೆ ಬರುವವರಾಗಿದ್ದರು. ಆದರೆ ಈಚೆಗೆ ಒಂದು ಕಾರ್ಯಗೌರವದಿಂದ ಅನನುಕೂಲವಾಗಿರುವುದೆಂದು ತಿಳಿಸಿ, ಪರಿಷತ್ತಿನ ಈ ಉತ್ಸವದ ಕಾರ್ಯಗಳು ಅತ್ಯಂತ ಯಶಸ್ವಿಯಾಗಿ ನಡೆಯುವಂತೆ ಹಾರೈಸಿ ಸಂದೇಶವನ್ನೂ, ಒಂದುನೂರು ರೂಪಾಯಿಗಳನ್ನೂ ಕಳುಹಿಸಿಕೊಟ್ಟಿದ್ದಾರೆ.

## ಶ್ರೀ|| ಶಾಮರಾಯರವರ ಉಪಕಾರ

ಈ ದಿವಸ ಈ ಅಗ್ರಸ್ಥಾನವನ್ನು ಅಲಂಕರಿಸಿ ನಮ್ಮ ಉತ್ಸವವನ್ನು ಪ್ರಾರಂಭ ಮಾಡಿಕೊಡುವುದಕ್ಕೆ ಒಪ್ಪಿ ದಯಮಾಡಿಸಿರುವ, ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಎಂ. ಶಾಮರಾಯರವರು ನಮ್ಮೆಲ್ಲರ ಕೃತಜ್ಞತೆಗೆ ಪಾತ್ರರಾದ ಮಹನೀಯರು. ಶ್ರೀಮಾನ್ ಎಂ. ಶಾಮರಾಯರವರು ಕನ್ನಡದಲ್ಲಿ ಶ್ರೇಷ್ಠ ಚಾರ್ಯರ ಹಾಗೆ. ಶ್ರೀ|| ಗಳಾದ ಎಂ. ಶಾಮರಾಯರು, ಎಚ್. ವಿ. ನಂಜುಂಡಯ್ಯನವರು ಮತ್ತು ಚ. ವಾಸುದೇವಯ್ಯನವರು— ಇವರುಗಳಿಂದ ಕನ್ನಡಕ್ಕೆ ಕನ್ನಡದ ಬೆಳವಣಿಗೆಗೆ ಆಗಿರುವ ಸಹಾಯ ಅಮೋಘವಾದುದು. ನಾನು ಹುಡುಗ ನಾಗಿದ್ದ ಕಾಲದಲ್ಲಿ ಕನ್ನಡವನ್ನು ಕೇಳುವವರೇ ಇಲ್ಲವೆಂದು ಹೇಳಿದರೆ ತಪ್ಪಾಗ ಲಾರದು. ಅಂಥ ಕಾಲದಲ್ಲಿ ಕನ್ನಡಕ್ಕೆ ಧೈರ್ಯ ಕೊಟ್ಟು ಅದನ್ನು ಕಾಪಾಡಿ ಪ್ರೋತ್ಸಾಹಕೊಟ್ಟು ಅದನ್ನು ಜೀವಂತವಾಗಿರಿಸಿದವರು ಇವರು. ಅವರು ವಿದ್ಯಾ ದವರು, ಮೇಲೆತ್ತಿದವರು, ಶ್ರೀಮಾನ್ ಶಾಮರಾಯರು. ಮೈಸೂರು ದೇಶದಲ್ಲಿ ಕನ್ನಡದ ಇಲಾಖೆಯ ಮುಖ್ಯಾಧಿಕಾರಿಗಳಾದಮೇಲಂತೂ

ಏಳಿಗೆ ಇವರಿಗೇ ಸೇರಿದ ಕೆಲಸವಾಯಿತು. ಆಗಿನ ಕಾಲದಲ್ಲಿ ಪ್ರಕಟವಾದ ಪುಸ್ತಕಗಳ ಮುನ್ನುಡಿಗಳನ್ನು ನೋಡಿದರೆ, ಆಗಿನ ಎಷ್ಟು ಪುಸ್ತಕಗಳು ಅವರ ಪ್ರೋತ್ಸಾಹದಿಂದ ಪ್ರಕಟವಾಗಿವೆಯೆಂಬ ಸಂಗತಿ ತಿಳಿಯುತ್ತದೆ. ಆಗ ಕನ್ನಡಕ್ಕೆ ಒಂದು ಸ್ಫೂರ್ತಿ ಕೊಟ್ಟು ಕನ್ನಡಕ್ಕೆ ನಾಯಕರಾಗಿ ಹೇಗೆ ನಿಂತಿದ್ದರೋ, ಹಾಗೆಯೇ ಇಂದಿಗೂ ಕೂಡ ಅವರು ನಮಗೆಲ್ಲ ನಾಯಕರಾಗಿ ನಿಂತಿದ್ದಾರೆ. ಇಂಥ ವೃದ್ಧಾಪ್ಯದ ವಯಸ್ಸಿನಲ್ಲಿಯೂ ಕೂಡ ಅವರು ಕನ್ನಡ ದೇಶದ ಮಮತೆವಾತ್ಸಲ್ಯಗಳಿಂದ ಮಾಡುತ್ತಿರುವ ತಮ್ಮ ಸೇವೆಯನ್ನು ನಿಲ್ಲಿಸಿಲ್ಲ. ಈಗಲೂ ಪುಸ್ತಕಗಳನ್ನು ಬರೆಯುತ್ತಿದ್ದಾರೆ. ಈಚೀಚೆಗೆ ಮೈಸೂರು ದೇಶದ ಚರಿತ್ರೆಯನ್ನು ವಿಸ್ತಾರವಾಗಿ, ಒಂದು ಹೊಸ ದೃಷ್ಟಿಯಿಂದ ವಿಚಾರಮಾಡಿ ಬರೆದಿದ್ದಾರೆ. ಇಂಥವರು ಈ ದಿನ ನಮ್ಮ ಪ್ರಾರ್ಥನೆಯನ್ನು ಲಾಲಿಸಿ ಇಲ್ಲಿಗೆ ದಯಮಾಡಿಸಿದ್ದು ಒಂದು ಪ್ರಸಾದ. ಅವರು ಈ ದಿನದ ಕಾರ್ಯಕಲಾಪಗಳನ್ನು ನಡಸಿಕೊಟ್ಟು ಅನುಗ್ರಹಿಸಬೇಕೆಂದು ವಿನಯದಿಂದ ಪ್ರಾರ್ಥಿಸುತ್ತೇನೆ.

## ಅರಮನೆ ಗುರುಮನೆಗಳ ಬೆಂಬಲ

ಕನ್ನಡ ಸಾಹಿತ್ಯಪರಿಷತ್ತಿನ ಬಲಾಬಲಗಳನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಲು ಅವಕಾಶ ಬೇಡುತ್ತೇನೆ. ಮಹಾಜನರು, ಸಾರ್ವಜನಿಕರು ಇನ್ನೂ ಸಾಕಾದಷ್ಟು ಎಚ್ಚತ್ತುಕೊಂಡು ಕನ್ನಡವನ್ನು ಕಾಪಾಡಿಕೊಳ್ಳುವ ಕಾಲ ಬರಲಿಲ್ಲ. ಈಗ, ಪರಿಷತ್ತಿಗೆ ಬೆಂಬಲವಾಗಿರುವುವು ಎರಡು: ಅರಮನೆ ಮತ್ತು ಗುರುಮನೆ. ಪರಿಷತ್ತು ಇವನ್ನು ನಂಬಿಕೊಂಡಿದೆ. ಅರಮನೆಯಿಂದ ಎಷ್ಟು ಸಹಾಯವಾಗುತ್ತಾ ಇದೆ, ಅವರು ಎಷ್ಟರಮಟ್ಟಿಗೆ ಪರಿಷತ್ತನ್ನು ಪೋಷಣೆಮಾಡಿಕೊಂಡು ಬಂದಿದ್ದಾರೆ ಎಂಬುದು ತಮ್ಮೆಲ್ಲರಿಗೂ ತಿಳಿದೇ ಇದೆ. ಶ್ರೀ ಜಯಚಾಮರಾಜೇಂದ್ರ ಒಡೆಯರವರೂ ಕೂಡ ಈಗಾಗಲೇ ಕನ್ನಡದಲ್ಲಿ ತಮಗಿರುವ ಅತಿಶಯವಾದ ಪ್ರೇಮವನ್ನೂ ಅಭಿಮಾನ ವಿಶ್ವಾಸಗಳನ್ನೂ ತೋರಿಸುತ್ತಿದ್ದಾರೆ. ಮೊನ್ನೆ ಇಲ್ಲಿ ನಡೆದ ಅಖಿಲ ಕರ್ನಾಟಕ ಮಕ್ಕಳ ಕೂಟಕ್ಕೆ ಅವರ ಸೋದರಿಯವರಾದ ರಾಜಕುಮಾರಿ ವಿಜಯಲಕ್ಷಮ್ಮಣ್ಣಿಯವರು ದಯಮಾಡಿಸಿ ತಮ್ಮ ಅಭಿಮಾನವನ್ನು ತೋರಿಸಿದರು. ಇಷ್ಟರಲ್ಲಿಯೇ ನಡೆಯಲಿರುವ ಶ್ರೀ ಜಯಚಾಮರಾಜೇಂದ್ರ ಒಡೆಯರವರ ವಿವಾಹ ಸಂದರ್ಭದಲ್ಲಿ, ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯವರು ಹೊಸ ರಾಜದಂಪತಿಗಳಿಗೆ ಭಗವಂತನು ಆಯುರಾರೋಗ್ಯ ಐಶ್ವರ್ಯಾದಿ ಸಕಲ ಸಂಪದಗಳನ್ನು ಕರುಣಿಸುವಂತೆ ಪ್ರಾರ್ಥಿಸುವ ಒಂದು ನಿರ್ಣಯವನ್ನು ಕಳುಹಿಸಿಕೊಡುವವರಾಗಿದ್ದಾರೆ. ಅದಕ್ಕೆ ಈ ಉತ್ಸವ ಸಮಯದಲ್ಲಿ ತಮ್ಮ ಒಪ್ಪಿಗೆಯನ್ನು ಸೂಚಿಸಬೇಕೆಂದು ಬೇಡುತ್ತೇನೆ (ಚಪ್ಪಾಳೆ).

ಇನ್ನು ಗುರುಮನೆಯ ವಿಚಾರ: ಗುರುಮನೆಯ ಪ್ರೋತ್ಸಾಹವನ್ನು ಕುರಿತು ಕೆಲವು ಮಠಗಳ ಸ್ವಾಮಿಗಳವರನ್ನು ಕಂಡು ಪ್ರಾರ್ಥನೆಮಾಡಿಕೊಂಡಿದ್ದೇನೆ. ಕನ್ನಡ ನಿಮಗೆ ಸೇರಿದ್ದು, ಅದರ ಸೇವೆಗೆ ನಿಮ್ಮ ಸಹಾಯ ಸಹಕಾರಗಳು

ಅತ್ಯಾವಶ್ಯಕ, ನಿಮ್ಮ ಸಹಾಯವಿಲ್ಲದೆ ಅದು ಬೇಗನೆ ಅಭಿವೃದ್ಧಿ ಹೊಂದಲಾರದು– ಎಂದು ಬಿನ್ನಹಮಾಡಿಕೊಂಡದ್ದಾಗಿದೆ. ಹಿಂದಿನ ಅನೇಕ ಸಾಹಿತ್ಯ ಗ್ರಂಥಗಳಲ್ಲಿ ಮತದ ವಿಷಯವೇ ಬಹಳವಾಗಿದೆ. ಮತಪ್ರಚಾರಕ್ಕೆ ಕನ್ನಡ ಬಹು ಸಹಾಯ ಮಾಡಿದೆ. ಕನ್ನಡ ಮುಂದೆ ಬಂದರೆ ಕನ್ನಡ ಸಂಸ್ಕೃತಿ, ಕನ್ನಡಿಗರ ಧರ್ಮ– ಎಲ್ಲವೂ ಮುಂದೆ ಬರುತ್ತದೆ, ಪ್ರಚಾರವಾಗುತ್ತದೆ. ಈ ಅರಿಕೆಯನ್ನು ಅವರು ಮನಸ್ಸಿಗೆ ತಂದುಕೊಂಡಿದ್ದಾರೆ. ಇನ್ನುಮುಂದೆ ಗುರುಮನೆಗಳಿಂದಲೂ, ಕನ್ನಡ ನಾಡಿನ ಎಲ್ಲಾ ಪ್ರಭುಗಳಿಂದಲೂ, ಬೆಂಬಲವನ್ನು ಪರಿಷತ್ತು ಪಡೆಯುವುದೆಂದು ನಾನು ನಂಬಿದ್ದೇನೆ.

## ಹಿಂದಿನ ಹಿರಿಯರ ಸೇವೆ

ಈ ಪರಿಷತ್ತಿನಲ್ಲಿ ನನಗೆ ಹಿರಿಯರಾದ ಅನೇಕ ಮಹನೀಯರು ಕೆಲಸ ಮಾಡಿ, ಈ ಸಂಸ್ಥೆಯನ್ನು ಒಂದು ಗಣ್ಯವಾದ ಸ್ಥಿತಿಗೆ ತಂದು, ಈಗ ಅದರ ಸೂತ್ರಗಳನ್ನು ನನ್ನ ಕೈಗೆ ಕೊಟ್ಟಿದ್ದಾರೆ. ಇದನ್ನು ನಾನು ನಿಮ್ಮೆಲ್ಲರ ಆಶೀರ್ವಾದ ಬಲದಿಂದ ನಡಸಿಕೊಂಡುಹೋಗಬೇಕಾಗಿದೆ. ಈ ಸಂಸ್ಥೆಯ ಸೂತ್ರಗಳನ್ನು ಹಿಂದಿನವರು ವಹಿಸಿಕೊಂಡು ದಕ್ಷತೆಯಿಂದ ಕೆಲಸ ಮಾಡಿದ ಸಾಧನೆಯ ಫಲದಿಂದಲೂ, ಸಮ್ಮೇಳನಗಳನ್ನು ನಡಸುವುದು, ಈ ವಸಂತ ಸಾಹಿತ್ಯೋತ್ಸವ ದಂತಹ ಸಮಾರಂಭಗಳನ್ನು ಹೂಡುವುದು ಮುಂತಾದ ಕಾರ್ಯಗಳಿಂದಲೂ ಕನ್ನಡಿಗ ರಲ್ಲಿ ಒಂದು ಧೈರ್ಯ, ಐಕಮತ್ಯ ಉಂಟಾಗಿರುವುದೆಂಬುದು ತಮ್ಮೆಲ್ಲರಿಗೂ ತಿಳಿದ ವಿಷಯವಾಗಿದೆ. ಪರಿಷತ್ತಿನ ಪುರೋಭಿವೃದ್ಧಿಯನ್ನು ಮನಸ್ಸಿಗೆ ತಂದುಕೊಂಡು ಇದಕ್ಕೆ ಬೇಕಾದ ಬಲವನ್ನು ಕೊಡುವ ಮತ್ತು ಕೊಡಿಸಿಕೊಡುವ ಕೆಲಸ ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯವಾಗಿದೆ. ಈ ಕಡೆಗೆ ತಾವು ತಮ್ಮ ಗಮನವನ್ನು ಕೊಡಬೇಕೆಂದು ಬೇಡುತ್ತೇನೆ.

ಕನ್ನಡ ಜನ, ಕನ್ನಡ ನಾಡು, ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳು ಒಂದು ಎಂಬ ದೊಡ್ಡ ಗುರಿಯನ್ನಿಟ್ಟುಕೊಂಡು ಈ ದಿವ್ಯಮಂದಿರದಲ್ಲಿ ಅನೇಕರು ನಾನಾ ದೃಷ್ಟಿಗಳಿಂದ ಕೆಲಸ ಮಾಡಿದ್ದಾರೆ. ಅವರ ಎಲ್ಲ ಕಾರ್ಯಗಳೂ ಅವರು ಕನ್ನಡ ತಾಯ ಪಾದದಲ್ಲಿ ಹಾಕಿದ ಹೂವುಗಳು. ದೊಡ್ಡ ದೊಡ್ಡ ಸಾಹಿತ್ಯ ಕಾರ್ಯಗಳು, ಮತಸಮನ್ವಯ ವಿಚಾರಗಳು— ಎಲ್ಲವೂ ಒಂದು ನಾಗರಿಕ ಜನಾಂಗದಲ್ಲಿ ಶಕ್ತಿಯನ್ನೂ ಅಭಿಮಾನವನ್ನೂ ಹುಟ್ಟಿಸತಕ್ಕ ಸಂಗತಿಗಳು. ನಮ್ಮ ಹಿರಿಯರೂ ಮಿತ್ರರೂ ಇಂಥ ಅನೇಕ ಕಾರ್ಯಗಳನ್ನು ನಡಸಿಕೊಂಡುಹೋಗಿದ್ದಾರೆ. ಕನ್ನಡ ತಾಯ ಮಕ್ಕಳು ತಾವೆಲ್ಲ ಒಂದು ಜನ ಎಂದೂ, ನಮ್ಮ ಹಿಂದಿನ ಸಾಹಿತ್ಯ ಚರಿತ್ರೆಗಳನ್ನು ತಿಳಿದರೆ ನಾವು ಯಾವ ಜನಕ್ಕೂ ಕಡಮೆಯಾದವರೆಂದು ಕುಗ್ಗ ಬೇಕಾಗಿಲ್ಲ ಎಂದೂ ತೋರಿದ್ದಾರೆ, ಸಾರಿದ್ದಾರೆ. ಕನ್ನಡಿಗರೆಲ್ಲ ಐಕ್ಯತೆಯ ಭಾವದಿಂದ ಬೇರೆ ಬೇರೆ ಊರುಗಳಲ್ಲಿ ಕೂಡಿ ಸಮ್ಮೇಳನಗಳನ್ನು ನಡಸಿ, ಕನ್ನಡಿಗರಲ್ಲಿ ಹೊಸ ಚೈತನ್ಯವನ್ನು ಹುಟ್ಟಿಸಿದ್ದಾರೆ. ಈ ಒಕ್ಕೂಟದಲ್ಲಿ ಒಬ್ಬರಲ್ಲೊಬ್ಬರು ಕೈ ಕೂಡಿಸಿ

ಒಬ್ಬರಲ್ಲೊಬ್ಬರು ನಂಬಿಕೆಯಿಟ್ಟು ಕನ್ನಡಿಗರೆಲ್ಲರೂ ನೆರವಾಗುವುದಾದರೆ, ಈಗ ಹುಟ್ಟಿರುವ ಚೈತನ್ಯ ಹೆಚ್ಚು ಹುರುಪಿನಿಂದ ಕೆಲಸಮಾಡಿ ಇನ್ನೂ ಹೆಚ್ಚಾಗಿ ಕನ್ನಡಿಗರ ಮೇಲ್ಮೆಗೆ ಸಾಧಕವಾಗುತ್ತದೆ.

## ಪರಿಷತ್ತಿನ ಮೂರು ಸಮಾರಂಭಗಳು; ಪ್ರಚಾರ ಕಾರ್ಯ

ನಾವು ವರ್ಷಕ್ಕೆ ಹೀಗೆ ಒಂದುಸಲ ಕೂಡಿದರೆ ಸಾಲದು ಎಂದು ಭಾವಿಸಿ, ನವರಾತ್ರಿಯ ಕಾಲದಲ್ಲಿ ಕನ್ನಡದ ಹಬ್ಬವೆಂದು ಮೂರು ದಿವಸಗಳ ಹಬ್ಬವನ್ನು ಆಚರಿಸಬೇಕೆಂದು ಪರಿಷತ್ತು ಸೂಚನೆ ಮಾಡಿತು. ಈ 'ಕನ್ನಡದ ಹಬ್ಬ', 'ನಾಡ ಹಬ್ಬ' ನಾಡಿನ ಊರೂರುಗಳಲ್ಲಿ ನಡೆಯುತ್ತಿರುವುದು ದೊಡ್ಡ ಸಂತೋಷ. ಈ ಸಾಹಿತ್ಯೋತ್ಸವವೂ ಅದೇ ಉದ್ದೇಶದಿಂದಲೇ ಪ್ರೇರಿತವಾದುದು. ಈ ವಸಂತ ಸಾಹಿತ್ಯೋತ್ಸವದಲ್ಲಿ ಕನ್ನಡ ನಾಡಿನ ನಾನಾ ಭಾಗಗಳ ಸಾಹಿತಿಗಳನ್ನು ಬರಮಾಡಿಕೊಂಡು, ಕನ್ನಡದ ಪುರೋಭಿವೃದ್ಧಿಯ ಬಗ್ಗೆ ವಿಚಾರ ವಿನಿಮಯ ಮಾಡಿಕೊಳ್ಳುವುದು ಪದ್ಧತಿಯಾಗಿ ನಡೆದುಕೊಂಡುಬಂದಿದೆ. ಶ್ರೀ॥ ಡಿ. ವಿ. ಗುಂಡಪ್ಪನವರು ಇದನ್ನು ಪ್ರಾರಂಭ ಮಾಡಿದವರು; ಅವರು ನಾಲ್ಕು ವರ್ಷ ಇದನ್ನು ನಡಸಿಕೊಟ್ಟಿದ್ದಾರೆ. ಈಗ ಅದು ಪದ್ಧತಿಯಾಗಿಬಿಟ್ಟಿದೆ. ಹೇಗೋ ಹಣ ಕೂಡುತ್ತದೆ, ಕೆಲಸ ನಡೆದುಹೋಗುತ್ತದೆ. ಹೀಗೆ ವರ್ಷಕ್ಕೆ ಮೂರು ಬಾರಿ ನಾಡಿನ ಹಿರಿಯರೆಲ್ಲ ಸೇರಿ, ಒಂದು ಗುರಿಯನ್ನಿಟ್ಟುಕೊಂಡು, ಆ ಗುರಿಯನ್ನು ಸಾಧಿಸಲು ಎಲ್ಲರೂ ಬೆಂಬಲವಾಗುವುದಕ್ಕೆ ಅನುಕೂಲವಾಗುವಂತೆ ಈ ಸಮಾರಂಭಗಳು ನಡೆಯುತ್ತಾ ಇವೆ. ಪ್ರತಿ ವರ್ಷವೂ ಈ ಊರಲ್ಲಿ ಮಾತ್ರ ನಡಸುತ್ತಿದ್ದ ಈ ವಸಂತ ಸಾಹಿತ್ಯೋತ್ಸವವನ್ನು ಈ ಸಾರಿ ಮೈಸೂರಿನ ಒಂದು ಹಳ್ಳಿಯನ್ನು ಮುಟ್ಟಿಸಬೇಕೆಂದೂ, ಉತ್ತರ ಕರ್ನಾಟಕದ ಮುಖ್ಯ ನಗರವೊಂದರಲ್ಲಿ ನಡಸಬೇಕೆಂದೂ ಸಂಕಲ್ಪಮಾಡಿದ್ದೇವೆ. ಪರಿಷತ್ತಿನ ಪ್ರಾರ್ಥನೆಯನ್ನು ಈ ವರ್ಷ ಆನವಟ್ಟಿ ಮತ್ತು ಗದಗು — ಈ ಸ್ಥಳಗಳ ಕನ್ನಡಿಗರು ಮನ್ನಣೆಮಾಡಿ ಈ ಉತ್ಸವವನ್ನು ತಮ್ಮ ಊರುಗಳಲ್ಲಿಯೂ ನಡಸುವ ಏರ್ಪಾಟು ಮಾಡಿರುತ್ತಾರೆ. ಈ ಊರುಗಳ ಕನ್ನಡಿಗರಿಗೆ ಅವರ ಈ ಪ್ರಯತ್ನಕ್ಕಾಗಿ ಪರಿಷತ್ತಿನ ಪರವಾಗಿಯೂ ಮತ್ತು ಸಮಸ್ತ ಕನ್ನಡಿಗರ ಪರವಾಗಿಯೂ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ.

ಸಮ್ಮೇಳನಗಳನ್ನು ನೆರೆಯಿಸುವುದು, ನಾಡ ಹಬ್ಬ ವಸಂತ ಸಾಹಿತ್ಯೋತ್ಸವಗಳನ್ನು ನಡಸುವುದು — ಇಷ್ಟು ಮಾತ್ರವೇ ಪರಿಷತ್ತು ಮಾಡುತ್ತಿರುವ ಕೆಲಸವಲ್ಲ. ತನ್ನ ಶಕ್ತಿ ಇರುವ ಮಟ್ಟಿಗೆ ಪರಸ್ಥಳಗಳಿಗೆ ಹೋಗಿ ಕನ್ನಡ ಪ್ರಚಾರ ಮಾಡುತ್ತಾ ಇದೆ. ಪರಿಷತ್ತಿನ ಪ್ರಮುಖರು ಆಗಾಗ ಅಲ್ಲಲ್ಲಿ ಹೋಗಿ ಉಪನ್ಯಾಸಗಳನ್ನು ಕೊಟ್ಟು, ಹೊಸ ಸಂಘಗಳನ್ನು ನೆಟ್ಟುಹಾಕಿ, ಅಂಗಸಂಸ್ಥೆಗಳಾಗಿ ಏರ್ಪಡಿಸುತ್ತಿದ್ದಾರೆ. ಪರಿಷತ್ತಿನಲ್ಲಿ ಉಪನ್ಯಾಸಗಳಿಂದಲೂ ಪರಿಷತ್ಪತ್ರಿಕೆಯ ಮತ್ತು ಇತರ ಸಮಯೋಚಿತ ಪತ್ರಗಳ ಪ್ರಕಟನೆಯಿಂದಲೂ ಕನ್ನಡಿಗರಲ್ಲಿ, ಕನ್ನಡದ ವಿಷಯದಲ್ಲಿ,

ತಿಳಿವಳಿಕೆ ಹೆಚ್ಚಾಗುವಂತೆ ಪರಿಷತ್ತು ನೋಡಿಕೊಳ್ಳುತ್ತಿದೆ. ಗಮಕಕಲಾಭ್ಯಾಸದ ತರಗತಿ ಎಂದಿನಂತೆ ನಡೆಯುತ್ತಿದೆ. ಈಚೆಗೆ ಒಂದು ವ್ಯಾಸಂಗಗೋಷ್ಠಿಯನ್ನು ನಡಸುತ್ತಿದೆ. ವಿರಾಮಕಾಲದಲ್ಲಿ ಕನ್ನಡ ಸಾಹಿತ್ಯದಲ್ಲಿರುವ ಉತ್ತಮ ಗ್ರಂಥಗಳ ಪರಿಚಯ ಮಾಡಿಕೊಳ್ಳಲು ಇಷ್ಟಪಡುವವರು ಆ ಗೋಷ್ಠಿಗೆ ದಯಮಾಡಿ ಬಹುದಾಗಿದೆ. ೧೫ ದಿವಸಕ್ಕೊಂದುಬಾರಿ ಈ ಗೋಷ್ಠಿಯನ್ನು ನೆರೆಯಿಸಿ ಶಾಸ್ತ್ರ ಭಾಷಣ, ಚರ್ಚೆ ಮುಂತಾದುವನ್ನು ನಡಸಬೇಕೆಂದು ಗೊತ್ತುಮಾಡಿಕೊಂಡಿದೆ. ಈ ವ್ಯಾಸಂಗಗೋಷ್ಠಿಯಲ್ಲಿ ಕನ್ನಡ ಮಾತ್ರವೇ ಅಲ್ಲದೆ, ತೆಲುಗು, ತಮಿಳು ಭಾಷೆಗಳನ್ನು ಕೂಡ ಕಲಿಸುವ ಯೋಚನೆಮಾಡಿದೆ. ಕನ್ನಡ ದೇಶದಲ್ಲಿ ನೆಲಸಿರುವ ತೆಲುಗು ತಮಿಳು ಭಾಷೆಗಳನ್ನಾಡುವ ಜನರು ಕನ್ನಡಿಗರಾಗಬೇಕು; ಕನ್ನಡಕ್ಕೆ ಹೊಂದಿಕೊಳ್ಳಬೇಕು; ಅದರ ಹೊಟ್ಟೆಯಲ್ಲಿ ಮುಳ್ಳಾಗಿ ನಿಲ್ಲಬಾರದು. ತಮಿಳು ತೆಲುಗು ಭಾಷೆಗಳು ಕನ್ನಡಕ್ಕೆ ಅಕ್ಕತಂಗಿಯರು. ಆ ಭಾಷೆಗಳನ್ನು ಮುಖಾಂತರ ಕಲಿಯುವುದರಿಂದ ಕನ್ನಡ ಇನ್ನೂ ಪುಷ್ಟಿಗೊಂಡೀತು. ಕನ್ನಡ ದೇಶದಲ್ಲಿ ನೆಲಸಿರುವ ಇತರ ಸೋದರಿ ಭಾಷೆಗಳವರು ಕನ್ನಡಕ್ಕೆ ಬಲವನ್ನು ಹೆಚ್ಚಿಸಿಯಾರು. ಕಾರಣಾಂತರ ಗಳಿಂದ ತೆಲುಗು, ತಮಿಳು, ಮಲೆಯಾಳ, ಮರಾಠಿ, ಹಿಂದುಸ್ತಾನಿ-ಉರ್ದುಗಳು ಕನ್ನಡ ನಾಡಿನ ಒಳಹೊಕ್ಕಿವೆ. ಈ ಭಾಷೆಗಳ ಪಂಡಿತರನ್ನೂ ಪರಿಷತ್ತಿಗೆ ಗೌರವ ಸದಸ್ಯರನ್ನಾಗಿ ಮಾಡಿಕೊಂಡು ಕೆಲಸ ನಡಸಬೇಕೆಂಬ ಉದ್ದೇಶವಿದೆ. ಅದರಂತೆ ಆಯಾ ವಿದ್ವಾಂಸರಲ್ಲಿ ಪ್ರಾರ್ಥನೆ ಮಾಡಿಕೊಂಡಿದ್ದೇವೆ. ಅವರಲ್ಲಿ ಕೆಲವರು ಚಂದಾ ಕೊಟ್ಟು ಸದಸ್ಯರಾಗಿರಲು ಕೂಡ ಒಪ್ಪಿದ್ದಾರೆ. ಕೆಲವರು ಸದಸ್ಯರಾಗಿಯೂ ಇದ್ದಾರೆ. ಈ ವ್ಯಾಸಂಗ ಗೋಷ್ಠಿಗೆ ಮಹಾಜನರು ಯಾರಾದರೂ ಬರಬಹು ದಾಗಿದೆ. ಹೆಂಗಸರು ಹೆಚ್ಚು ಸಂಖ್ಯೆಯಲ್ಲಿ ದಯಮಾಡಿ ಬಂದು ಈ ಗೋಷ್ಠಿಯ ಉದ್ದೇಶ ಸಫಲವಾಗುವಂತೆ ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಏಕೆಂದರೆ ಹೆಂಗಸರು ಸಾಹಿತಿಗಳಾಗಬೇಕಾದುದು ಈ ಕಾಲಕ್ಕೆ ಅತ್ಯಾವಶ್ಯಕ.

### ಪರಿಷತ್ತಿನ ಹೊಸ ಪ್ರಕಟನೆ: ಕನ್ನಡದ ಬಾವುಟ

ಈ ಸಂದರ್ಭದಲ್ಲಿ ಪರಿಷತ್ತು ಹೊಸದಾಗಿ ಪ್ರಕಟಿಸಿರುವ "ಕನ್ನಡದ ಬಾವುಟ" ಎಂಬ ಪುಸ್ತಕವನ್ನು ಅಧ್ಯಕ್ಷರಿಗೆ ಒಪ್ಪಿಸಿ, ಅವರು ತಮ್ಮ ದಿವ್ಯಸಂದೇಶವನ್ನು ಕೊಡುವಾಗ ಅದನ್ನು ಪ್ರಕಟನೆ ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಇದರಲ್ಲಿ ಶಾಸನಗಳಿಂದ ಆರಿಸಿದ ಪದ್ಯಗಳೂ, ಹಳಗನ್ನಡ, ನಡುಗನ್ನಡ, ಹೊಸಗನ್ನಡದ ಕಾವ್ಯಗಳಿಂದ ಆರಿಸಿದ ಭಾಗಗಳೂ ಮತ್ತು ಈಚಿನ ಹೊಸ ಕವಿಗಳ ಕವನ ಗಳೂ ಸೇರಿವೆ. ಕನ್ನಡ ನಾಡಿನ ವೈಭವವೇನು, ಕನ್ನಡದಲ್ಲಿ ಯಾವ ಅಭಿಮಾನ ಉಕ್ಕುತ್ತಾ ಇದೆ, ಕನ್ನಡ ನಾಡು ನುಡಿಗಳ ವಿಷಯದಲ್ಲಿ ಕನ್ನಡಿಗರಿಗೆ ಹಿಂದಿ ನಿಂದಲೂ ಇದ್ದ ಹೆಮ್ಮೆ, ಈಗಿನ ನವೀನ ದೃಷ್ಟಿ—ಈ ಎಲ್ಲ ವಿಷಯಗಳೂ ಅದರಲ್ಲಿ ತಿಳಿಯುವಂತೆ ಪ್ರಯತ್ನಮಾಡಿದೆ; ನಮ್ಮ ನಾಡಿನ ನಾಡಿ, ಹೃದಯ, ಕಣ್ಣು ಎಲ್ಲಿದೆ, ಕನ್ನಡದ ಜೀವಾಳವೇನು — ಎಂಬುದನ್ನು ತೋರಿಸಲು ಅಲ್ಲಿ ಪ್ರಯತ್ನ

ಮಾಡಿದೆ. ಈಗಿನ ಹೊಸ ಕವಿಗಳ ಭಾವವೇನು, ಯಾವ ಹೊಸ ಸಾಹಿತ್ಯ ಸಾಮ್ರಾಜ್ಯವನ್ನು ಕಟ್ಟಲು ಅವರು ಧೈರ್ಯತಾಳುತ್ತಿದ್ದಾರೆ ಎಂಬುದು ಅವರ ಹೊಸ ಕವನಗಳಲ್ಲಿ ಎದ್ದು ಕಾಣುತ್ತದೆ. ಹಿಂದಿನಿಂದ ಇಂದಿನವರೆಗೂ ಕನ್ನಡಿಗರು ತಮ್ಮ ನಾಡಿನ ಮತ್ತು ನುಡಿಯ ಬಗೆಗೆ ತಾಳಿದ್ದ ಅಭಿಮಾನ, ಕನ್ನಡ ಕಲಿಗಳ, ಕವಿಗಳ, ಸತಿಯರ, ದೊರೆಗಳ, ಮಹಾಪುರುಷರುಗಳ ವ್ಯಕ್ತಿತ್ವ ಮತ್ತು ಹಿರಿಮೆ, ಭಾಷೆಯ, ಛಂದಸ್ಸಿನ, ಕ್ರಮವಾದ ಬೆಳವಣಿಗೆ—ಇವನ್ನು ಸ್ಪಷ್ಟವಾಗಿ ತೋರಿಸುವಂತೆ ಶಾಸನಗಳಿಂದಲೂ, ಹಿಂದಿನ ಕಾವ್ಯಗಳಿಂದಲೂ, ನಾಡ ಹಾಡುಗಳಿಂದಲೂ, ಇಂದಿನ ಕವಿತೆಗಳಿಂದಲೂ ಆಯ್ದು ನಾಲ್ಕು ತೆನೆಗಳ ಕಟ್ಟನ್ನು ಈ ಪುಸ್ತಕದಲ್ಲಿ ಕೂಡಿಸಿದೆ. ಮನುಷ್ಯನು ತನ್ನ ಸರ್ವಸ್ವವನ್ನೂ ಯಾವುದಕ್ಕೆ ಒಪ್ಪಿಸಲು ಸಿದ್ಧನಾಗಿರುವನೋ ಅದರ ಕುರುಹು 'ಬಾವುಟ'. ಕನ್ನಡಿಗರ ಕನ್ನಡ ಮಮತೆ ವಾತ್ಸಲ್ಯಗಳೂ, ಕನ್ನಡ ನಾಡಿನ ಏಕೀಕರಣದ ಸಾಧನೆಯೂ ಚಿಮ್ಮಬೇಕೆಂಬ ಭಾವನೆಯಿಂದ ಈ ಪುಸ್ತಕವನ್ನು ಪ್ರಕಟಿಸಿದೆ. ಇದರ ರೇಶ್ಮೆ ರಟ್ಟಿನ ಪ್ರತಿಗಳನ್ನು ಶ್ರೀಮನ್ಮಹಾರಾಜರವರಿಗೂ ಶ್ರೀಮದ್ಯುವರಾಜರವರಿಗೂ ಕಳುಹಿಸಿದ್ದಾಗಿದೆ; ಮತ್ತು ಅವರು ಅವನ್ನು ಆದರದಿಂದ ಸ್ವೀಕರಿಸಿದ್ದಾರೆಂಬ ಸಂಗತಿ ತಿಳಿದುಬಂದಿದೆ. ಈ ಪುಸ್ತಕದಲ್ಲಿ ಕುಂದು ಕೊರತೆಗಳು ಏನಾದರೂ ಇದ್ದರೆ, ಮಹಾಜನರು ಅವನ್ನು ನಮ್ಮ ಗಮನಕ್ಕೆ ತರಬೇಕೆಂದು ಪ್ರಾರ್ಥಿಸುತ್ತೇನೆ. ಅಂಥ ಕೊರತೆಗಳನ್ನು ಮುಂದಿನ ಮುದ್ರಣದಲ್ಲಿ ಸರಿಪಡಿಸಿಕೊಳ್ಳಲಾಗುವುದು.

### ಈ ಸಲದ ಉತ್ಸವ: ಪರಿಷತ್ತಿನಲ್ಲಿ ಸ್ತ್ರೀಯರ ಸ್ಥಾನ

ಸ್ತ್ರೀಯರಲ್ಲಿ ಒಂದು ಬಿನ್ನಹ ಮಾಡಬೇಕಾಗಿದೆ. ನಮ್ಮ ಕಾರ್ಯಕ್ರಮದಲ್ಲಿ ಈ ವರ್ಷ ಪ್ರತಿ ದಿನವೂ ಅವರಿಗಾಗಿ ಸ್ವಲ್ಪ ಕಾಲವನ್ನು ಮೀಸಲಿಡಲಾಗಿದೆ. ಬೆಳಗಿನ ಕಾರ್ಯಕ್ರಮ ಉಪಾಧ್ಯಾಯರಿಗಾಗಿಯೂ, ಮಧ್ಯಾಹ್ನ ಕನ್ನಡ ಸಂಘಗಳ ಮತ್ತು ಸಾಹಿತಿಗಳ ಗೋಷ್ಠಿಗಾಗಿಯೂ ಏರ್ಪಡಿಸಿದೆ. ಪ್ರತಿ ದಿನವೂ ೪ರಿಂದ ೬ರವರೆಗೆ ಹೆಂಗಸರು ದಯಮಾಡಿಸಿ, ಪರಿಷತ್ತನ್ನು ತಮ್ಮದನ್ನಾಗಿ ಮಾಡಿಕೊಳ್ಳಬೇಕು, ಕನ್ನಡಕ್ಕೆ ಅವರ ಬೆಂಬಲ ದೊರೆತು ಕನ್ನಡದ ಮುನ್ನಡೆಗೆ ಅವರ ಸಹಕಾರ ದೊರೆಯಬೇಕು ಎಂಬ ಉದ್ದೇಶದಿಂದ ಮಕ್ಕಳನ್ನೂ ಅವರನ್ನೂ ಸೇರಿಸಿ, ಮಹಿಳೆಯರ ಗೋಷ್ಠಿ ಮತ್ತು ಮಕ್ಕಳಕೂಟವನ್ನು ಏರ್ಪಡಿಸಿದೆ. ಈ ಭಾಗದ ಕಾರ್ಯಕ್ರಮದಲ್ಲಿ ಸ್ತ್ರೀಯರು ಹೆಚ್ಚು ಆಸಕ್ತಿ ವಹಿಸಿ, ಇದನ್ನು ಯಶಸ್ವಿಯಾಗಿ ನೆರವೇರಿಸಿಕೊಡಬೇಕೆಂದು ಬೇಡುತ್ತೇನೆ. ಸಂಜೆ ೬-೩೦ರಿಂದ ೮-೩೦ರ ವರೆಗೆ ದೀಪಚಿತ್ರಗಳ ಸಹಿತ ಉಪನ್ಯಾಸ ನಡೆಯುತ್ತದೆ. ಅನಂತರ ಭೋಜನಕ್ಕೆ ಸ್ವಲ್ಪ ವಿರಾಮ ಕೊಟ್ಟು, ೯-೩೦ ಅಥವಾ ೧೦ ಘಂಟೆಯ ಮೇಲೆ ಕಲಾಗೋಷ್ಠಿ, ಲಾವಣಿ, ಸಂಗೀತ, ದೃಶ್ಯಾವಳಿಗಳು ನಡೆಯುವುವಾಗಿವೆ. ಈ ಬಗೆಯ ಕಾರ್ಯಕ್ರಮವೇನೋ ಬಹು ಇಕ್ಕಟ್ಟಾಗಿರುವುದೆಂದು ನಮಗೆ ಗೊತ್ತಿದೆ. ಆದರೂ ಈ ನಾಲ್ಕು ದಿನ—ಮದುವೆಯ ಮನೆಯ ಹಾಗೆ—ಸ್ವಲ್ಪ ಹೆಚ್ಚು ಶ್ರಮವಹಿಸಿ ಕಾರ್ಯಗಳನ್ನು ನಡಸಿಕೊಡಬೇಕೆಂದು ಪರಿಷತ್ತು ಪ್ರಾರ್ಥಿಸುತ್ತದೆ.

## ಪರಿಷತ್ತಿಗೆ ಎಲ್ಲರೂ ಬೇಕು

ಮುಖ್ಯವಾಗಿ, ಪರಿಷತ್ತು ಎಲ್ಲ ಕನ್ನಡಿಗರ, ಕನ್ನಡಿಗರ ಪ್ರಭುಗಳ, ಬೆಂಬಲಗಳನ್ನೂ ಸಂಪಾದಿಸಿಕೊಳ್ಳಬೇಕಾಗಿದೆ. ಕನ್ನಡಿಗರು ಎಚ್ಚೆತ್ತುಕೊಳ್ಳಬೇಕಾಗಿದೆ. ನಮ್ಮಲ್ಲಿ ಇನ್ನೂ ಅನೇಕರು ತಮ್ಮ ಮನಸ್ಸಿನ ಆವೇಶದಲ್ಲಿ ಸಣ್ಣ ಪುಟ್ಟ ವಿಷಯಗಳನ್ನು ದೊಡ್ಡದು ಮಾಡಿಕೊಂಡು ಅಕಾರಣವಾಗಿ ತೊಂದರೆ ತರುತ್ತಾರೆ. ಕನ್ನಡ ಮಹಾಜನರು ಇಂಥ ಸಣ್ಣ ವಿಷಯದಲ್ಲಿ ಅವರವರಿಗಿರುವ ಅಭಿಪ್ರಾಯ ಭೇದಗಳನ್ನು ಹಾಗೆಯೇ ಮರೆತು, ಒಕ್ಕಟ್ಟಿನಲ್ಲಿ ಕನ್ನಡ ತಾಯ ರಥವನ್ನು ಬಿಜಯಮಾಡಿಸಿ ಕೊಂಡುಹೋಗಬೇಕೆಂದು ಪ್ರಾರ್ಥಿಸುತ್ತೇನೆ.

ಪರಿಷತ್ತಿನ ಮುಂದೆ ಇರುವ ಕೆಲಸಗಳು ಬಹಳವಾಗಿವೆ. ಅವುಗಳನ್ನು ನೆರವೇರಿಸಲು ಅದಕ್ಕೆ ಈಗ ಶಕ್ತಿಯಿಲ್ಲ. ಪರಿಷತ್ತಿನ ಶಕ್ತಿ ಬೆಳೆಯುವುದಕ್ಕೆ [illegible] ಸಹಾಯಮಾಡಬೇಕು. ನಮಗೆ ಸದಸ್ಯರಿದ್ದಾರೆ, ಅಭಿಮಾನಿಗಳಿದ್ದಾರೆ. ಆದರೆ ಅವರ ಸಂಖ್ಯೆ ಬಹಳ ಕಡಮೆ. ನಮಗೆ ಸದಸ್ಯರೂ ಅಭಿಮಾನಿಗಳೂ ಇನ್ನೂ ಹೆಚ್ಚುಹೆಚ್ಚಾಗಿ ಬೇಕು. ಸಹೃದಯರಾದ ಕನ್ನಡ ಪ್ರೇಮಿಗಳು ಪರಿಷತ್ತನ್ನು ತಮ್ಮದಾಗಿ ಮಾಡಿಕೊಂಡು ಸಹಾಯಮಾಡಬೇಕು. ಪಂಡಿತರೂ, ವಿದ್ಯಾವಂತರೂ, ವಿದ್ಯಾರ್ಥಿಗಳೂ, ಮಹಿಳೆಯರೂ ಹೆಚ್ಚು ಸಂಖ್ಯೆಯಲ್ಲಿ ಸದಸ್ಯರಾಗಿ ಸೇರಿ ಪರಿಷತ್ತಿನ ಶಕ್ತಿಯನ್ನು ಹೆಚ್ಚಿಸಬೇಕು.

## ಕನ್ನಡ ಸಾಹಿತ್ಯ ಪರೀಕ್ಷೆಗಳು

ಕನ್ನಡದಲ್ಲಿ ತಮಗಿರುವ ಭಾಷಾಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕೆಂದಿರುವವರಿಗೂ ಅನಕ್ಷರಸ್ಥರಿಗೂ ಕನ್ನಡದಲ್ಲಿ ಪಾಠಹೇಳಲು ಅನುಕೂಲವಾಗುವಂತೆಯೂ, ಅವರು ಮೊದಲು ವೃತ್ತಪತ್ರಿಕೆಗಳನ್ನು ಓದುವ ಮಟ್ಟಿಗಾದರೂ ಕಲಿತು, ಪತ್ರಿಕೆಗಳನ್ನು ಓದುವವರ ಸಂಖ್ಯೆ ಹೆಚ್ಚಾಗುವಂತೆಯೂ ಸಾಹಿತ್ಯ ಪರೀಕ್ಷೆಗಳನ್ನು ನಡೆಸಬೇಕೆಂದು ಪರಿಷತ್ತು ಯೋಚಿಸಿ, ೧೯೩೭ನೆಯ ಮೇ ತಿಂಗಳಲ್ಲಿ ನಡೆದ ವಾರ್ಷಿಕಾಧಿವೇಶನ ಒಂದು ತೀರ್ಮಾನಮಾಡಿತು. ಅದು ಈಗ ಒಂದು ರೂಪಕ್ಕೆ ಬರುತ್ತಿದೆ. ಶಾಲೆ ವಯಸ್ಸಾದ ಕಾರಣದಿಂದಲೋ ಅಥವಾ ಇನ್ನಾವ ಕಾರಣದಿಂದಲೋ ಶಾಲೆಗೆ ಹೋಗಿ ವಿದ್ಯೆ ಕಲಿಯಲು ಅನುಕೂಲವಿಲ್ಲದೆ ಕನ್ನಡದಲ್ಲಿ ಆಸಕ್ತಿ ವಹಿಸಿ ಕನ್ನಡ ಕಲಿಯಬೇಕೆಂದಿರುವವರಿಗೆ ಇಂಥ ತರಗತಿಗಳನ್ನೇರ್ಪಡಿಸಿ, ೩–೪ ದರ್ಜೆಯ ತರಗತಿಗಳನ್ನಿಟ್ಟುಕೊಂಡು, ನಮ್ಮ ಕರ್ನಾಟಕ ಸಂಘಗಳಲ್ಲಿ ವಿದ್ಯಾರ್ಥಿಗಳನ್ನು ಶಿಕ್ಷಣಮಾಡಿ, ಪರೀಕ್ಷೆಗಳನ್ನು ನಡಸಬೇಕೆಂದು ಯೋಚನೆಮಾಡಿದೆ. ಈ ಕೆಲಸವನ್ನು ಈ ವರ್ಷವೇ ಪ್ರಾರಂಭ ಮಾಡಬೇಕೆಂದಿದ್ದೇವೆ.

ಪರಿಷತ್ತಿನ ಈ ಕಾರ್ಯಕಲಾಪಗಳನ್ನು ಯೋಚಿಸಿ ನೋಡಿದವರಿಗೆ ಪರಿಷತ್ತು ಯಾವ ಒಂದು ಸಂಕೋಚದೃಷ್ಟಿಯನ್ನೂ ಇಟ್ಟುಕೊಂಡು ಕೆಲಸ ಮಾಡುತ್ತಿಲ್ಲವೆಂಬುದು ಗೊತ್ತಾಗುತ್ತದೆ. ಇಂಥ ಕಾರ್ಯಗಳು ಒಬ್ಬರಿಬ್ಬರಿಂದ ಸಾಧ್ಯವಾಗತಕ್ಕವಲ್ಲ. ಪರಿಷತ್ತು ಎಲ್ಲರ ಶಕ್ತಿಯನ್ನೂ ಸಂಪಾದಿಸಿ, ಕನ್ನಡದ ಸಂಸ್ಕೃ

ಭಾಷೆ, ಸಾಹಿತ್ಯ— ಎಲ್ಲವೂ ಬೆಳೆಯುವಂತೆ, ಹೊಸ ಚೈತನ್ಯ ಕನ್ನಡಿಗರಲ್ಲಿ ಉಂಟಾಗುವಂತೆ ಕೆಲಸಮಾಡಬೇಕಾಗಿದೆ.

## ಗ್ರಂಥ ಪ್ರಕಟನೆ

ಇನ್ನು ಗ್ರಂಥ ಪ್ರಕಟನೆಯ ವಿಚಾರ. ಪರಿಷತ್ತು ಅನೇಕ ಪುಸ್ತಕಗಳನ್ನು ಪ್ರಕಟಿಸಬೇಕೆಂಬ ಉದ್ದೇಶವನ್ನಿಟ್ಟುಕೊಂಡಿದೆ. ಹಿಂದೆ ಪರಿಷತ್ತು ಗ್ರಂಥ ಪ್ರಕಟನೆಯ ವಿಷಯದಲ್ಲಿ ಮಾಡಿರುವ ಕೆಲಸ ತಮಗೆ ತಿಳಿದಿದೆ. ಪರಿಷತ್ತು ಕೈಕೊಂಡು ನಡಸಬೇಕೆಂದಿರುವ ಮುಖ್ಯ ಕಾರ್ಯಗಳಲ್ಲಿ ಗ್ರಂಥ ಪ್ರಕಟನೆಯೂ ಒಂದಾಗಿದೆ. ಆದರೆ ಆ ಕೆಲಸಕ್ಕೆ ತಕ್ಕ ದ್ರವ್ಯ ಸಹಾಯವಿಲ್ಲ. ಆದರೂ ಆ ಕೆಲಸವನ್ನು ಸಾಧ್ಯವಿರುವ ಮಟ್ಟಿಗೆ ಮುಂದುವರಿಸಬೇಕೆಂಬ ಉದ್ದೇಶದಿಂದ ಈ ವಸಂತ ಸಾಹಿತ್ಯೋತ್ಸವದ ವೇಳೆಗೆ 'ಕನ್ನಡದ ಬಾವುಟ' ಎಂಬ ಪುಸ್ತಕವನ್ನು ಪ್ರಕಟಿಸಲು ಸಿದ್ಧಮಾಡಿದ್ದೇವೆ. ಕನ್ನಡಿಗರು ಈ ಹೊಸ ಪುಸ್ತಕವನ್ನು ಕೊಂಡು ಓದಿ ಆನಂದಿಸಿ, ಪರಿಷತ್ತನ್ನು ಪ್ರೋತ್ಸಾಹಿಸುವರೆಂದು ನಂಬಿದ್ದೇನೆ. ಇನ್ನೂ ಅನೇಕ ಗ್ರಂಥಗಳನ್ನು ಪ್ರಕಟಿಸಬೇಕೆಂಬ ಉದ್ದೇಶವಿದೆ. ಇದನ್ನು ಹಿಂದಿನ ವರ್ಷದ ಪರಿಷತ್ತಿನ ವರದಿಗಳಲ್ಲಿ ಸೂಚಿಸಿದೆ. ಪರಿಷತ್ತು ಪ್ರತಿ ವರ್ಷವೂ ನಡಸುವ ಸಮ್ಮೇಳನಗಳ ಅಧ್ಯಕ್ಷರ ಭಾಷಣಗಳ ಸಮುಚ್ಚಯ, ಕನ್ನಡ ನಾಡಿನ ಚರಿತ್ರೆ, ಕನ್ನಡ ಕವಿಗಳ ಕೃತಿಗಳಲ್ಲಿ ಆಯ್ದು ಮಾಡಿದ ಒಂದು ಕವನ ಸಂಗ್ರಹ—ಇವೇ ಮೊದಲಾದುವನ್ನು ಪ್ರಕಟಿಸುವುದು ಆವಶ್ಯಕವೆಂದು ತೋರಿಬರುತ್ತಿದೆ. ಸಮ್ಮೇಳನಗಳ ಅಧ್ಯಕ್ಷರ ಭಾಷಣಗಳು ಕನ್ನಡಿಗರಿಗೆ ಬಹು ಸ್ವಾರಸ್ಯವಾದ ಪುಸ್ತಕವಾಗುತ್ತವೆ. ಆ ಮಹನೀಯರ ಮನಸ್ಸಿನಲ್ಲಿ ಯಾವ ಆಸೆ ಆಕಾಂಕ್ಷೆಗಳು ಮೂಡಿದ್ದುವು, ಅವು ಎಷ್ಟುಮಟ್ಟಿಗೆ ಕಾರ್ಯಕಾರಿಯಾಗಿವೆ, ಇನ್ನೂ ಏನೇನು ಆಗಬೇಕಾಗಿದೆ—ಎಂಬುದನ್ನೂ, ಕನ್ನಡ ಭಾಷೆಯ ಇಂದಿನ ಬೆಳವಣಿಗೆಯ ಚರಿತ್ರೆಯನ್ನೂ, ಅವುಗಳಲ್ಲಿ ಕಾಣಬಹುದಾಗಿದೆ. ಕನ್ನಡ ನಾಡಿನ ಸಮಗ್ರ ಚರಿತ್ರೆಯನ್ನು ಬರಸುವ ಕಾಲ ಈಗ ಬಂದಿದೆ. ಕನ್ನಡಿಗರು ಯಾವ ರೀತಿ ಮುಂದಕ್ಕೆ ಬಂದರು, ಅವರಲ್ಲಿ ಎಂಥ ಮಹಾನುಭಾವರಿದ್ದರು, ಅವರ ಹಿರಿಯಾಸೆ ಬಯಕೆಗಳು ಏನು? ಅವನ್ನು ಸಾಧಿಸಲು ಅವರು ಮಾಡಿರುವ ಕೆಲಸಗಳು ಯಾವುವು?—ಇವೇ ಮೊದಲಾದ ಎಲ್ಲ ವಿಷಯಗಳನ್ನೊಳಕೊಂಡ ಒಂದು ಸಮಗ್ರ ಕನ್ನಡ ಜನದ ಚರಿತ್ರೆ ಏಕೀಕರಣಕ್ಕೆ ಬೇಕಾದ ಸ್ಫೂರ್ತಿಯನ್ನು ಕೊಡುತ್ತದೆ. ಕನ್ನಡದ ಹರವು ದಿನ ದಿನಕ್ಕೆ ಹೆಚ್ಚುತ್ತಿದೆ. ಈಚೆಗೆ ನ್ಯಾಯ ವಿಧಾಯಕ ಸಭೆಯಲ್ಲಿ ಕೂಡ ಕನ್ನಡದಲ್ಲಿ ಭಾಷಣಗಳನ್ನು ಮಾಡುತ್ತಿದ್ದಾರೆ; ಮತ್ತು ಆ ಭಾಷಣಗಳು ಕನ್ನಡದಲ್ಲಿಯೇ ಅಚ್ಚಾಗುತ್ತಿವೆ. ಶ್ರೀಮದ್ಯುವರಾಜರವರು ಹಿಂದೆ ಪರಿಷತ್ತಿಗೆ ೨,೫೦೦ ರೂ. ಗಳನ್ನು ದಾನವಾಗಿ ಕೊಟ್ಟು, ಅದನ್ನು ವಿಜ್ಞಾನ ವಿಷಯದ ಎರಡು ಪುಸ್ತಕಗಳ ಪ್ರಕಟನೆಗೆ ಉಪಯೋಗಿಸಬೇಕೆಂದು ಅಪ್ಪಣೆ ಕೊಡಿಸಿದ್ದರು. ಆ ನಿಧಿಯಿಂದ ಶ್ರೀ॥ ನಂ. ವೆಂಕಟೇಶಯ್ಯಂಗಾರ್ಯರ "ಜ್ಯೋತಿರ್ವಿನೋದಿನಿ" ಮೊದಲನೆಯ ಪ್ರಕಟನೆಯಾಗಿ ಹೊರಬಿದ್ದಿತು. ಈಚೆಗೆ ನಾನು ಶ್ರೀಮದ್ಯುವರಾಜರನ್ನು ಸಂದರ್ಶಿಸಿ, ಅವರ ನಿಧಿಯಲ್ಲಿ ಉಳಿದಿರುವ

ಹಣವನ್ನು ಈ ಕನ್ನಡ ನಾಡಿನ ಮತ್ತು ಜನದ ಚರಿತ್ರೆಯ ಪ್ರಕಟನೆಗೆ ಉಪಯೋಗಿಸಲು ಅಪ್ಪಣೆ ಕೊಡಬೇಕೆಂದು ಪ್ರಾರ್ಥಿಸಿದೆ. ಅವರು ಅದಕ್ಕೆ ಒಪ್ಪಿ, ಅಪ್ಪಣೆ ಕೊಟ್ಟಿದ್ದಾರೆ. ನಾನು ಹೇಳಿದ ಇನ್ನೊಂದು ಪ್ರಕಟನೆ 'ಕನ್ನಡ ಕಾವ್ಯ ಸಾರ'. ಕನ್ನಡ ಕಾವ್ಯಗಳಲ್ಲಿ ಶಾಶ್ವತವಾಗಿ ಬಾಳಬಹುದಾದ, ಜೊಳ್ಳು ಕಳೆದು ಗಟ್ಟಿಯಾಗಿ ನಿಲ್ಲಬಹುದಾದ, ಲೋಕದ ಕಾವ್ಯಪ್ರೇಮಿಗಳೆಲ್ಲರೂ ಮೆಚ್ಚಬಹುದಾದ ಭಾಗ ಯಾವುದು ; ಎಂದೆಂದಿಗೂ ಕನ್ನಡಿಗರ ಅಭಿಮಾನವನ್ನು ಕೆರಳಿಸಿ, ನಾಡ ನುಡಿಯ ಪ್ರಯೋಜನಕ್ಕಾಗಿ ಉಳಿಯುವ ಭಾಗ ಎಷ್ಟು ; ನಿಜವಾದ ಸ್ವಾರಸ್ಯ ಎಲ್ಲಿ ಇದೆ– ಇವುಗಳನ್ನು ತೋರಿಸುವ ಒಂದು ಕವನ ಸಂಗ್ರಹವನ್ನು ಮಾಡಿ, ಕನ್ನಡಿಗರ ಮುಂದಿಡಬೇಕೆಂಬ ಉದ್ದೇಶವನ್ನಿಟ್ಟುಕೊಂಡಿದ್ದೇನೆ.

## ಪರಿಷತ್ತಿಗೊಂದು ಅಚ್ಚುಕೂಟ

ಇದಕ್ಕೆಲ್ಲ ಮುಖ್ಯವಾಗಿ ಧನ ಸಹಾಯ ಬೇಕು. ಇದನ್ನು ಸಾಧ್ಯವೆನಿಸ ಬೇಕಾದರೆ ಪರಿಷತ್ತಿಗೆ ಮುಖ್ಯವಾಗಿ, ಮೊದಲನೆಯದಾಗಿ, ಒಂದು ಅಚ್ಚುಕೂಟ ಇರಬೇಕು. ಕನ್ನಡಕ್ಕಾಗಿಯೇ, ಕನ್ನಡದ ಚಳವಳಿಗಾಗಿಯೇ ಮೀಸಲಾದ ಒಂದು ವಾರಪತ್ರಿಕೆ ಬೇಕು. ಕನ್ನಡದಲ್ಲಿ ವೃತ್ತಪತ್ರಿಕೆಗಳು ಹಲವಿವೆ. ಆ ವೃತ್ತಪತ್ರಿಕೆಗಳವರು ಕನ್ನಡಕ್ಕೆ ವಿಶೇಷ ಸೇವೆ ಸಲ್ಲಿಸುತ್ತಿದ್ದಾರೆ. ಇದಕ್ಕಾಗಿ ನಾನು ಅವರೆಲ್ಲರನ್ನೂ ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ. ಆದರೆ ಕನ್ನಡದ ಹಿರಿಮೆಯನ್ನು ಎತ್ತಿ ಹೇಳಿ, ಕನ್ನಡ ಪ್ರಚಾರಕ್ಕಾಗಿಯೇ ಮೀಸಲಾದ ಒಂದು ಪತ್ರಿಕೆ ಇರುವುದರ ಆವಶ್ಯಕತೆ ಈಗ ತೋರಿಬರುತ್ತಾ ಇದೆ. ಕನ್ನಡದ ಸುದ್ದಿಗಳನ್ನು ಹರಡಲು, ಕನ್ನಡದ ಹೊಸ ಹೊಸ ಭಾವಗಳನ್ನು ಕನ್ನಡಿಗರಿಗೆ ಅರಿಕೆಮಾಡಿಕೊಡಲು ಒಂದು ಪತ್ರಿಕೆಯನ್ನು ಹೊರಡಿಸಬೇಕೆಂದು ನಮಗೆ ಇಚ್ಛೆ ಇದೆ. ಪರಿಷತ್ತಿಗೆ ಒಂದು ಅಚ್ಚುಕೂಟವಿಲ್ಲದೆ ಪ್ರತಿ ವರ್ಷವೂ ಸಾವಿರಾರು ರೂಪಾಯಿಗಳನ್ನು ಮುದ್ರಣದ ವೆಚ್ಚಕ್ಕಾಗಿ ಇತರರಿಗೆ ಸುರಿಯುತ್ತಿರುವುದಾಗಿದೆ. ನಮ್ಮಲ್ಲಿ ಧನವಂತರಿಗೇನೂ ಕಡಮೆಯಿಲ್ಲ. ಹತ್ತು ಮಂದಿ ವರ್ತಕ ಮಹಾಶಯರು ಒಬ್ಬೊಬ್ಬರು ಒಂದೊಂದು ಸಾವಿರ ರೂಪಾಯಿನಂತೆ ಹಾಕಿ ಒಂದು ಅಚ್ಚುಕೂಟವನ್ನು ಒದಗಿಸಿಕೊಟ್ಟರೆ, ಪರಿಷತ್ತು ಕನ್ನಡದ ಸಾಹಿತಿಗಳನ್ನು ಸೇರಿಸಿಕೊಂಡು ಬೇಕಾದ ಕೆಲಸಗಳನ್ನು ಮಾಡಲು ಅವಕಾಶವಾಗುತ್ತದೆ. ಕನ್ನಡದಲ್ಲಿ ಅಭಿಮಾನಿಗಳಾಗಿರುವ ತಾವುಗಳು ಈ ವಿಷಯಕ್ಕೆ ತಮ್ಮ ತೀವ್ರಗಮನವನ್ನು ಕೊಡುವಿರೆಂದು ನಂಬುತ್ತೇನೆ. ತಮ್ಮಂತಹ ಅಭಿಮಾನಿಗಳೂ ಧನವಂತರೂ ಸೇರಿರುವ ಈ ಸಮಯದಲ್ಲಿ ನಾವು ಏನು ಮಾಡಬೇಕೆಂದಿದ್ದೇವೆ ಎಂಬುದನ್ನು, ನಾಲ್ಕು ಮಾತುಗಳಲ್ಲಿ, ಸ್ವಲ್ಪ ಕಾಲವನ್ನು ತೆಗೆದುಕೊಂಡರೂ ವ್ಯರ್ಥವಾಗಲಾರದೆಂದು ಯೋಚಿಸಿ, ತಮ್ಮಲ್ಲಿ ಅರಿಕೆ ಮಾಡಿಕೊಂಡಿದ್ದೇನೆ.

## ಅಧ್ಯಕ್ಷರಲ್ಲಿ ಪ್ರಾರ್ಥನೆ

ಇನ್ನು ಈ ದಿವಸದ ಕಾರ್ಯಗಳನ್ನು ನಡಸಿಕೊಡಬೇಕೆಂದು ನಾನು ಶ್ರೀ॥ ಶಾಮರಾಯರವರನ್ನು ಬೇಡುತ್ತೇನೆ. ಶ್ರೀ॥ ಶಾಮರಾಯರವರು ಪರಿಷತ್ತಿನ

ಮೂಲಸ್ಥಾಪಕರಲ್ಲೊಬ್ಬರಾಗಿ, ಅಂದಿನಿಂದ ಇದುವರೆಗೂ ತಮ್ಮ ಮೇಲ್ವಿಚಾರಣೆಯಿಂದ ಪರಿಷತ್ತನ್ನು ಬೆಳಸಿಕೊಂಡು ಬಂದಿದ್ದಾರೆ. ನಮ್ಮಲ್ಲಿ ಅವರಿಗೆ ಏನು ನ್ಯೂನತೆ ಕಂಡುಬಂದರೂ ಅವರು ಅದನ್ನು ನಮಗೆ ತಿಳಿಸಿ, ನಮ್ಮನ್ನು ತಿದ್ದಿ, ಸರಿಯಾದ ಮಾರ್ಗದಲ್ಲಿ ನಾವು ನಡೆಯುವಂತೆ ಬುದ್ಧಿವಾದವನ್ನು ಹೇಳಬೇಕೆಂದು ನಾನು ಅವರನ್ನು ಪ್ರಾರ್ಥಿಸುತ್ತೇನೆ. ಈ 'ಕನ್ನಡದ ಬಾವುಟ' ಪುಸ್ತಕವನ್ನು ಪ್ರಕಟಿಸಬೇಕೆಂದು ಪ್ರಾರ್ಥಿಸುತ್ತೇನೆ. ಈ ಪರಿಷತ್ತಿನ ಗೋಡೆಗಳಮೇಲೆ ಹಾಕಿರುವ ಪಟಗಳನ್ನು ನೋಡಿದ್ದೀರಿ. ಕನ್ನಡಿಗರಲ್ಲಿ ಮಹಾವ್ಯಕ್ತಿಗಳಾಗಿರುವ ಹಿರಿಯರ ಚಿತ್ರಪಟಗಳಮೇಲೆ ನಮ್ಮ ದೃಷ್ಟಿಬಿದ್ದು, ಅವರ ನೆನಪುಂಟಾಗಿ, ಆ ನೆನಪಿನಿಂದ, ಅವರ ಆದರ್ಶದಿಂದ ಅನೇಕ ಒಳ್ಳೆಯ ಕೆಲಸಗಳು ನಡೆಯುತ್ತವೆ. ಅಂಥ ಮಹನೀಯರ ಚಿತ್ರಗಳು ಪರಿಷತ್ತಿಗೆ ಬೇಕು. ಇಂಥ ಕೆಲವು ಚಿತ್ರಗಳಿಗಾಗಿ ಹಲವು ಸಲ ಯಾಚನೆಗೆ ಹೋಗಿದ್ದೇವೆ. ಇಲ್ಲಿ ಕಾಣುವ ಕವಿತಿಲಕ ಶ್ರೀ॥ ಅಯ್ಯಶಾಸ್ತ್ರಿಗಳ ಪಟ ಅಂಥ ಯಾಚನೆಯಿಂದ ದೊರೆತದ್ದು. ಶ್ರೀ॥ ಅಯ್ಯಶಾಸ್ತ್ರಿಗಳ ಪಟವನ್ನು ತಯಾರಿಸಿಕೊಡಬೇಕೆಂದು ಶ್ರೀ॥ ಎಸ್. ಜಿ. ಶಾಸ್ತ್ರಿಗಳನ್ನು ಪ್ರಾರ್ಥಿಸಿದೆವು. ಅವರು ಅದನ್ನು ಮಾಡಿಸಿಕೊಟ್ಟರು. ಕೇಳಿದುದನ್ನು ಕೊಡುವವರ ಬಳಿ ನಮ್ಮ ಕೆಲಸವೇನು? ಮೇಲಿಂದಮೇಲೆ ಕೇಳುವುದು ತಾನೆ. ಹಾಗೆಯೇ ಮತ್ತೊಂದು ಪ್ರಾರ್ಥನೆ ಅವರಲ್ಲಿ ಹೋಯಿತು. ಮೈಸೂರಿನ ವೃದ್ಧಪಿತಾಮಹರಾದ ಶ್ರೀ॥ ವೆಂಕಟಕೃಷ್ಣಯ್ಯನವರ ಪಟ ಪರಿಷತ್ತಿನಲ್ಲಿರಲಿಲ್ಲ. ವೃದ್ಧಪಿತಾಮಹರೂ, ದಯಾಸಾಗರರೂ, ಕನ್ನಡ ನಾಡಿಗೆ ತಮ್ಮ ರಕ್ತವನ್ನು ಬಸಿದು ಹೊಸ ಚೈತನ್ಯವನ್ನು ತುಂಬಿದವರಲ್ಲಿ ಒಬ್ಬರೂ ಆದ ಅವರ ಪಟವೊಂದನ್ನು ಕೊಡಬೇಕೆಂದು ಶ್ರೀ॥ ಶಾಸ್ತ್ರಿಗಳವರನ್ನು ಪ್ರಾರ್ಥಿಸಿದೆವು. ಅದರ ಫಲವಾಗಿ ಈ ಇನ್ನೊಂದು ಚಿತ್ರವೂ ಬಂದಿದೆ. ನಮ್ಮ ಮಾನ್ಯ ಅಧ್ಯಕ್ಷರು ಈ ಎರಡು ಚಿತ್ರಗಳ ಅನಾವರಣ ಮಾಡಬೇಕೆಂದು ಬೇಡುತ್ತೇನೆ. ಶ್ರೀಮತಿ ಎ. ಶೇಷಮ್ಮನವರು ಅವರ ಮಕ್ಕಳು ದಿವಂಗತ ಶ್ರೀ॥ ಇ. ಎ. ಭಾಸ್ಕರರಾಯರ ಸ್ಮಾರಕಕ್ಕಾಗಿ ಪ್ರತಿ ವರ್ಷವೂ ಒಂದು ಸ್ಪರ್ಧೆಯನ್ನು ಏರ್ಪಡಿಸಲು ಅನುಕೂಲಿಸುವಂತೆ ಒಂದು ಸಾವಿರ ರೂಪಾಯಿ ಚಿಲ್ಲರೆ ಹಣವನ್ನು ಪರಿಷತ್ತಿಗೆ ದಾನಮಾಡಿರುತ್ತಾರೆ. ಶ್ರೀ॥ ಭಾಸ್ಕರರಾಯರವರು ಸೆಂಟ್ರಲ್ ಕಾಲೇಜಿನಲ್ಲಿ ವಿದ್ಯಾರ್ಥಿಗಳಾಗಿದ್ದಾಗಿನಿಂದಲೂ ಕನ್ನಡದಲ್ಲಿ ಅಸಾಧಾರಣವಾದ ಪ್ರೇಮವನ್ನು ತೋರಿಸುತ್ತಿದ್ದರಲ್ಲದೆ, ಸ್ವತಃ ತಾವೇ ಕೆಲವು ಸಣ್ಣ ಕತೆಗಳನ್ನೂ ಕವನಗಳನ್ನೂ ಬರೆದಿದ್ದರು. ಅವರು ಜೀವಿಸಿದ್ದಿದ್ದರೆ, ಕನ್ನಡಕ್ಕೆ ಒಂದು ದೊಡ್ಡ ಬೆಳಕಾಗುತ್ತಿದ್ದರು. ಆದರೆ ಅದು ದೈವಚಿತ್ತಕ್ಕೆ ಬರಲಿಲ್ಲ. ಆ ಸಾವಿರ ಚಿಲ್ಲರೆ ರೂಪಾಯಿಯಮೇಲೆ ಬರುವ ಬಡ್ಡಿಯಿಂದ ಪ್ರತಿ ವರ್ಷವೂ ಒಂದು ಸಾಹಿತ್ಯ ಸ್ಪರ್ಧೆಯನ್ನೇರ್ಪಡಿಸಿ, ಅದರಲ್ಲಿ ಮೊದಲಸ್ಥಾನವನ್ನು ಪಡೆದವರಿಗೆ ಒಂದು ಬಹುಮಾನ ಕೊಡಬೇಕೆಂದು ಏರ್ಪಾಟು ಮಾಡಿದೆ. ಸ್ಪರ್ಧೆಗೆ ಈ ವರ್ಷ 'ಕನಕದಾಸರ ಕೃತಿಗಳ ವಿಮರ್ಶೆ' ಅಥವಾ 'ತೊರವೆ ರಾಮಾಯಣದ ವಿಮರ್ಶೆ'— ಈ ವಿಷಯಗಳಮೇಲೆ ಲೇಖನಗಳನ್ನು ಬರಮಾಡಿಕೊಂಡಿದ್ದೆವು. ೧೪ ಲೇಖನಗಳು ಬಂದಿದ್ದುವು. ಅವುಗಳಲ್ಲಿ

ಶ್ರೀ॥ ಕೆ. ರಾಜಾರಾಯರ ಲೇಖನಕ್ಕೆ ಬಹುಮಾನ ಕೊಡತಕ್ಕದ್ದೆಂದು ಪರೀಕ್ಷಾ ಸಮಿತಿಯಲ್ಲಿ ತೀರ್ಮಾನವಾಯಿತು. ಶ್ರೀ॥ ಎಂ. ಶಾಮರಾಯರವರು ಅವರಿಗೆ ತಮ್ಮ ಅಮೃತ ಹಸ್ತದಿಂದ ಬಹುಮಾನದ ಬೆಳ್ಳಿಯ ಬಟ್ಟಲನ್ನು ದಯಪಾಲಿಸ ಬೇಕೆಂದು ಪ್ರಾರ್ಥಿಸುತ್ತೇನೆ.

ಹಿಂದಿನ ವರ್ಷಗಳಲ್ಲಿ ಏರ್ಪಡಿಸಿದಂತೆ ಈ ವರ್ಷವೂ ಕೂಡ ೧೯೩೭–೩೮ನೆಯ ಇಸವಿಗಳಲ್ಲಿ ಪ್ರಕಟವಾದ ಕನ್ನಡ ಪುಸ್ತಕಗಳನ್ನು ಕೂಡಿಸಿ, ಒಂದು ಗ್ರಂಥಪ್ರದರ್ಶನ ವನ್ನು ಏರ್ಪಡಿಸಿದೆ. ಹಿಂದಿನ ವರ್ಷದಂತೆ ಪರಿಷನ್ಮಂದಿರದ ಎದುರಿಗಿರುವ ಶ್ರೀ ಚಾಮ ರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆಯ ಕಟ್ಟಡದ ಮಹಡಿಯಮೇಲೆ ಆ ಪುಸ್ತಕ ಗಳನ್ನು ಪ್ರದರ್ಶನಮಾಡಿದೆ. ಈ ಗ್ರಂಥಪ್ರದರ್ಶನವನ್ನು ಶ್ರೀ॥ ಗುಂಡಪ್ಪನವರು ಮೊದಲುಮಾಡಿದರು; ಈಗ ನಾಲ್ಕು ವರ್ಷಗಳ ಕೆಳಗೆ, ಹಿಂದಿನ ೩೦ ವರ್ಷಗಳಲ್ಲಿ ಪ್ರಕಟವಾದ ಎಲ್ಲ ಕನ್ನಡ ಗ್ರಂಥಗಳ ಬಂಡವಾಳ ಏನಿದೆ ಎಂಬುದನ್ನು ಪ್ರದರ್ಶಿಸಿ ದರು. ಅಂದಿನಿಂದ ಪ್ರತಿ ವರ್ಷವೂ ಅದನ್ನು ನಡಸಿಕೊಂಡುಬಂದಿರುವುದಾಗಿದೆ. ಈ ವರ್ಷದ ಪ್ರದರ್ಶನವನ್ನೂ ತಾವು ನೋಡಬೇಕು. ಒಟ್ಟಿನಮೇಲೆ, ೪–೫ ವರ್ಷ ಗಳಿಂದ ನೋಡಿದ್ದರಲ್ಲಿ, ಪುಸ್ತಕಗಳು ಹೆಚ್ಚು ಹೆಚ್ಚಾಗಿ ಪ್ರಕಟವಾಗುತ್ತಿದ್ದರೂ ಈಗಿನ ಕಾಲದ ನಡವಳಿಕೆಗೆ ಸಾಧಕವಾಗುವ ಪುಸ್ತಕಗಳ ಸಂಖ್ಯೆ ಕಡಮೆಯಾಗಿಯೇ ಇದೆ. ಸುಮಾರು ಒಂದು ವರ್ಷದಲ್ಲಿ ೨೫೦–೩೦೦ ಪುಸ್ತಕಗಳು ಪ್ರಕಟವಾಗುತ್ತವೆ ಎಂದು ಹೇಳಬಹುದು. ಮುದ್ರಣವಾದ ಪುಸ್ತಕಗಳ ಸಂಖ್ಯೆ ೨೫೦ ಇದ್ದರೂ ಅವುಗಳಲ್ಲಿ ಗಟ್ಟಿಯಾಗಿ ನಿಲ್ಲುವ ಪುಸ್ತಕಗಳು ಬಹು ಸ್ವಲ್ಪ ಎಂದು ಹೇಳಬಹುದು. ಈ ವರ್ಷ ಪ್ರಕಟವಾದ ಗ್ರಂಥಗಳಲ್ಲಿ ಸುಮಾರು ೧೭೫–೧೮೦ ಪುಸ್ತಕಗಳನ್ನು ಈ ಪ್ರದರ್ಶನ ದಲ್ಲಿ ಸಂಗ್ರಹಿಸಿ, ಇಟ್ಟಿದ್ದೇವೆ. ಇನ್ನೂ ಅನೇಕ ಪುಸ್ತಕಗಳು ಪ್ರದರ್ಶನಕ್ಕೆ ಬರಲಿಲ್ಲ.

ಕೊನೆಯದಾಗಿ, ಕನ್ನಡದಲ್ಲಿ ನಂಬಿಕೆಯುಳ್ಳ ನಾನು ಕನ್ನಡದಲ್ಲಿ ನಂಬಿಕೆ ಯುಳ್ಳ ತಮ್ಮೆಲ್ಲರಿಗೂ ಮತ್ತೊಮ್ಮೆ ಸ್ವಾಗತವನ್ನು ಬಯಸಿ, ಪರಿಷತ್ತನ್ನು ಬಲಪಡಿಸಿರೆಂದು ಬೇಡುತ್ತೇನೆ.

# ಐದನೆಯ ವಸಂತ ಸಾಹಿತ್ಯೋತ್ಸವ, ಬೆಂಗಳೂರು

## ತಾ॥ ೩೦-೪-೧೯೩೪ರಲ್ಲಿ ನಡೆದ ಮಹಿಳೆಯರ ಗೋಷ್ಠಿಯಲ್ಲಿ ಶ್ರೀಮತಿ ಎಚ್. ವಿ. ಸೀತಮ್ಮನವರು ಮಾಡಿದ ಆರಂಭ ಭಾಷಣ

---

ಮಾನ್ಯ ಸೋದರಿಯರೆ,

ಕರ್ನಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರೂ, ಗುರುಶಿಷ್ಯರೆನಿಸಿದ ಎಲ್ಲ ಕನ್ನಡಿಗರ ಗೌರವಕ್ಕೂ ಪಾತ್ರರಾಗಿ ಇಂದಿನ ಕನ್ನಡ ನಾಡಿನ ಆಚಾರ್ಯ ಪುರುಷರೂ, ಆಂಗ್ಲ ಭಾಷಾದಿಗಳಲ್ಲಿ ಅದ್ವಿತೀಯ ಪಾಂಡಿತ್ಯವಿದ್ದಾಗ್ಗೂ ಭಕ್ತಿಯಿಂದ ಕನ್ನಡಕ್ಕೆ ಸೇವೆ ಸಲ್ಲಿಸುತ್ತಿರುವವರಲ್ಲಿ ಅಗ್ರಗಣ್ಯರೂ, ಹಿರಿಯರೂ ಆದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಇಂದಿನ ಮಹೋತ್ಸವದಲ್ಲಿ ಏನೂ ತಿಳಿಯದ ನನ್ನನ್ನು ಅಗ್ರಾಸನದಲ್ಲಿ ಕುಳ್ಳಿರಿಸಿರುತ್ತಾರೆ. ಇದರ ಮರ್ಮವಾಗಲಿ ಇದರಿಂದ ಯಾರಿಗಾದರೂ ಆಗಬಹುದಾದ ಉಪಯೋಗವಾಗಲಿ ಏನೆಂಬುದು ನನಗೇನೋ ತಿಳಿಯದಾಗಿದೆ. ಇಂತಹ ದೊಡ್ಡ ಸಭೆಗಳಲ್ಲಿ ಮಾತನಾಡುವ ಅಭ್ಯಾಸ ನನಗಿಲ್ಲವೆಂದು ವಿಜ್ಞಾಪಿಸಿ, ನನಗಿಂತಲೂ ಶ್ರೇಷ್ಠರೂ ಹಿರಿಯರೂ ಆದ ಮತ್ತಾರಿಗಾದರೂ ಈ ಪದವಿಯನ್ನು ಕೊಡಬಾರದೆ?— ಎಂದು ಕೇಳಿಕೊಂಡಾಗ, ಶ್ರೀಯುತರು ಅದು ಹೇಗೋ ನನ್ನನ್ನು ಸೋಲಿಸಿಬಿಟ್ಟರು. ಪೂಜ್ಯರಾದ ನಮ್ಮ ಮಾವನವರು (ರಾಜಮಂತ್ರಪ್ರವೀಣ ಎಚ್. ವಿ. ನಂಜುಂಡಯ್ಯನವರು) ಈ ಪರಿಷತ್ತಿನ ಸ್ಥಾಪಕರಲ್ಲಿ ಮುಖ್ಯರಾದವರೆಂದೂ, ಪರಿಷತ್ತಿಗೆ ಆ ಮಹನೀಯರು ಸಲ್ಲಿಸಿರುವ ಸೇವೆಯು ಸಾಮಾನ್ಯವಾದುದಲ್ಲವೆಂದೂ, ಆ ದೃಷ್ಟಿಯಿಂದ ಅವರ ಕುಟುಂಬ ವರ್ಗಕ್ಕೆ ಸೇರಿದ ನಾನು ಮತ್ತಾವ ಯೋಗ್ಯತೆಯೂ ಇಲ್ಲದಿದ್ದಾಗ್ಗೂ ಇಂದಿನ ಕೆಲಸಗಳಲ್ಲಿ ಭಾಗವಹಿಸಲು ಅರ್ಹಳೆಂದೂ ಹೇಳಿದರು. ಅವರ ಆಜ್ಞೆಯನ್ನು ಉಲ್ಲಂಘಿಸಲಾರದೆ ಇಲ್ಲಿಗೆ ಬಂದು ಧೈರ್ಯಮಾಡಿ ತಮ್ಮ ಮುಂದೆ ನಿಂತಿರುತ್ತೇನೆ. ಇಂದು ಗಹನವಿಚಾರಗಳನ್ನು ವಿಮರ್ಶಿಸಬಲ್ಲೆನೆಂದಾಗಲಿ, ಕನ್ನಡಕ್ಕೆ— ಅಲ್ಲದೆ ಕನ್ನಡಿಗರಿಗೆ— ಸಂಬಂಧಪಟ್ಟ ಯಾವ ತೊಡಕನ್ನಾದರೂ ಬಗೆಹರಿಸಬಲ್ಲೆನೆಂದಾಗಲಿ ತಾವು ಭಾವಿಸಬಾರದು. ಆದರೆ ಇಂತಹ ಸಂದರ್ಭಗಳಲ್ಲಿ ಅಗ್ರಸ್ಥಾನ ವಹಿಸುವವರು ತಮಗೆ ತೋರಿದ ಕೆಲವು ಮಾತನ್ನಾಡುವುದು ಪದ್ಧತಿ; ಈ ಕಾರಣದಿಂದ ನನಗೆ ತೋರಿದ ಕೆಲವು ಮಾತುಗಳನ್ನು— ತಪ್ಪೋ, ನೆಪ್ಪೋ,— ತಮ್ಮ ಮುಂದೆ ಧೈರ್ಯಮಾಡಿ ಆಡಿಬಿಡುತ್ತೇನೆ. ಸೂಕ್ತವಾಗಿದ್ದರೆ ತಾವು ಅವುಗಳನ್ನು ಪರಿಗ್ರಹಿಸಬಹುದು, ಅಲ್ಲವಾದರೆ ನಿರಾಕರಿಸಬಹುದು.

ಪರಿಷತ್ತು ಜನ್ಮವೆತ್ತಿ ಹೆಚ್ಚು ಕಡಮೆ ೨೩ ವರುಷಗಳಾದವು. ಇಷ್ಟು ವರುಷಗಳೂ ಅದು ದಿನೇ ದಿನೇ ಅಭಿವೃದ್ಧಿ ಹೊಂದಿ ಈಗ ಈ ಪ್ರೌಢಸ್ಥಿತಿಗೆ ಬಂದಿದೆ. ಇದರ ಫಲವಾಗಿ ನನ್ನಂತಹ ಸಾಮಾನ್ಯ ಸ್ತ್ರೀಯರೂ ಸಹ ಅದರ ಕಾರ್ಯಕಲಾಪಗಳಲ್ಲಿ,

ಅದರ ಸೇವೆಯಲ್ಲಿ, ಭಾಗವಹಿಸಲು ಸಾಧ್ಯವಾಗಿದೆ. ಪರಿಷತ್ತು ಸ್ಥಾಪಿತವಾದಾಗ ಪರಿಸ್ಥಿತಿಯು ಹೇಗಿದ್ದಿರಬಹುದು ಎಂಬುದನ್ನು ಕ್ಷಣಮಾತ್ರ ಯೋಚಿಸಿದರೆ ಅದು ಅಂದಿನಿಂದ ಇಂದಿನವರೆಗೆ ಪಟ್ಟ ಕಷ್ಟಗಳು, ಮಾಡಿದ ಪ್ರಯತ್ನಗಳು, ಪಡೆದ ಜಯಾಪಜಯಗಳು ಅರ್ಥವಾಗಿ, ಪರಿಷತ್ತು ಕನ್ನಡಿಗರಿಗೆ ಎಂತಹ ಬೆಲೆ ಬಾಳುವ ಒಡವೆ, ಎಷ್ಟು ಘನವಾದ ಸಂಸ್ಥೆ ಎಂಬುದು ಮನಸ್ಸಿಗೆ ಬಂದು, ಕನ್ನಡಿಗರೆನಿಸಿದ ನಾವು ಅದಕ್ಕೆ ಇನ್ನೂ ಮಾಡಬೇಕಾದ ಸೇವೆ ಎಷ್ಟಿದೆ ಎಂಬುದು ತೋರಬಹುದು.

ಕೆಲವು ಕಾರಣಗಳ ಫಲವಾಗಿ, ಬಹು ಕಾಲದಿಂದ, ಒಟ್ಟು ಭರತಭೂಮಿಯನ್ನು ಪಾಶ್ಚಾತ್ಯ ವಾತಾವರಣವು ಆವರಿಸಿ, ಭಾರತೀಯರಲ್ಲಿ ಅನೇಕರ ವೇಷಭೂಷಣಗಳೂ ಮಾರ್ಪಟ್ಟು, "ಮುಖ ನೋಡಿ ಮತವನ್ನು ತಿಳಿಯಬಹುದು" ಎಂಬ ಕಾಲವು ಮಾಯವಾಗಿ, ಎಲ್ಲಿ ನೋಡಿದರೂ ಆಂಗ್ಲಭಾಷಾಪ್ರಯೋಗವೇ ಕಂಡು ಕೇಳುತ್ತಿತ್ತು; ಆಂಗ್ಲಭಾಷೆಯು ಬೇಡವೆನಿಸಿದಾಗ ಅಥವಾ ಮಾತೃಭಾಷೆಯ ಬಂಡವಾಳವು ಸಾಲದೆ ಬಂದಾಗ, ಸ್ವಲ್ಪ ಮಾತೃಭಾಷೆಯನ್ನೂ ಸ್ವಲ್ಪ ಇಂಗ್ಲಿಷನ್ನೂ ಬೆರಸಿ, "ವಿವಿಧ ವಿನೋದಾವಳಿ"ಯ ಅಭಿನಯದಂತೆ, ಹೇಗೋ ಮಾತನಾಡಿಬಿಟ್ಟರೆ ಸಾಕು ಎಂಬ ಪರಿಸ್ಥಿತಿಯೊದಗಿತು. ಕೆಲವರಂತೂ, ಇಂಗ್ಲಿಷು ಬಿಟ್ಟು ಬೇರೆ ಮಾತನಾಡುವುದೇ ಅನಾಗರಿಕತೆ ಎಂದು ಭಾವಿಸಿದ್ದರು. ಆಧುನಿಕ ದೃಷ್ಟಿಯಲ್ಲಿ ಘನವಿದ್ವಾಂಸರೆನ್ನಿಸಿಕೊಂಡವರೂ, ಕಾಲಕ್ರಮದಲ್ಲಿ ಅವರಂತೆಯೇ ಆಗಬೇಕೆಂದು ಆಶೆಪಟ್ಟು ಅವರನ್ನು ಅನುಕರಣ ಮಾಡುವುದೇ ಹಾಗಾಗಲು ಸಾಧನೋಪಾಯವೆಂದು ಊಹಿಸಿದ ವಿದ್ಯಾರ್ಥಿಗಳೂ ತಮ್ಮ ಮನೆಗಳಲ್ಲಿ ಕೂಡ ಇಂಗ್ಲಿಷ್ ಅಧಿದೇವತೆಯ ಆರಾಧನೆಯಲ್ಲಿಯೇ ನಿರತರಾದರು. ದೊಡ್ಡದೊಡ್ಡ ಹುದ್ದೇದಾರರಂತೂ ಕನ್ನಡವನ್ನಾಡುವುದು ಅಪಮಾನಕರವೆಂದು ಭಾವಿಸಿದ್ದರು. ಅಂದು ಪರಿಸ್ಥಿತಿಯನ್ನು ಹಾಗೆಯೇ ಬಿಟ್ಟಿದ್ದರೆ ಇಂದು ನಮ್ಮ ಭಾಷೆಗೂ, ನಮ್ಮ ನಾಡಿಗೂ ಇನ್ನೆಂತಹ ಅವಸ್ಥೆ ಬರುತ್ತಿತ್ತೋ ಹೇಳಲಾಗದು. ಆದರೆ ನಮ್ಮ ಹಿರಿಯರು ಹಾಗೆ ಬಿಡಲಿಲ್ಲ. ನಮ್ಮ ಭಾಷಾಮಾತೆಯಮೇಲೆ ಬೀಳಲು ಬರುತ್ತಿದ್ದ ದಂಡುಗಳನ್ನು ತಡೆಗಟ್ಟಿ, ನಮ್ಮವರನ್ನೆಲ್ಲ ಒಟ್ಟುಗೂಡಿಸಿ, ತರಬೇತುಮಾಡಿ, "ನಮ್ಮಲ್ಲೂ ಬಲವಿದೆ, ನಮಗೂ ಆತ್ಮಗೌರವವಿದೆ, ನಮ್ಮಲ್ಲೂ ಮುಂದಾಳುಗಳೂ ಕರ್ಮಯೋಗಿಗಳೂ ಇದ್ದಾರೆ, ನಾವೆಲ್ಲರೂ ಅವರನ್ನು ಹಿಂಬಾಲಿಸಲು ಉತ್ಸಾಹಿ ಅಭಿಮಾನಿಗಳೂ ಸಿದ್ಧರೂ ಆಗಿದ್ದೇವೆ" ಎಂಬುದನ್ನು ನಮಗವರು ತೋರಿಸಿಕೊಟ್ಟು, ಕರ್ನಾಟಕ ಐಕಮತ್ಯಬಲದಿಂದ ಹೊರಗಿನ ಸೈನ್ಯಗಳೆಲ್ಲವನ್ನೂ ಸೋಲಿಸಿದರು. ಅದರ ಫಲವಾಗಿ ಈಗ ನಾವು ನಮ್ಮ ಭಾಷಾಮಾತೆಯನ್ನು ಎಂದೆಂದಿಗೂ ವಶಪಡಿಸಿಕೊಳ್ಳುವುದಕ್ಕೆ ಶಕ್ತರಾಗಿದ್ದೇವೆ.

ಸಾಲದೇ, ಕನ್ನಡ ತಾಯಿಗೆ ನಮ್ಮ ಹಿರಿಯರು ಮಾಡಿರುವ ಸೇವೆ?

ಅಖಿಲ ಕರ್ನಾಟಕ ಭಾಷಾ ಪರಿಷ್ಕರಣ, ಗ್ರಾಂಥಿಕ ಪ್ರಯೋಗಗಳ ಏಕೀಕರಣ, ಕನ್ನಡ ಲಿಪಿ ಸಂಸ್ಕರಣ, ಗ್ರಂಥಾಭಿವೃದ್ಧಿ ಮೊದಲಾದುವನ್ನು ನಮ್ಮ

ಹಿರಿಯರು ಪರಿಷತ್ತಿನ ಉದ್ದೇಶಗಳಲ್ಲಿ ಸೂಚಿಸಿರುತ್ತಾರೆ. ಇಂತಹ ಉದಾತ್ತ ಧ್ಯೇಯಗಳನ್ನುಳ್ಳ ಅವರ ದೂರದೃಷ್ಟಿಗಾಗಿಯೂ, ಅವರು ಮಾಡಿದ ಹಲವು ಬಗೆಯ ಪ್ರಯತ್ನಗಳಿಗಾಗಿಯೂ ನಮ್ಮ ಕೃತಜ್ಞತೆಯನ್ನು ತೋರಿಸುವ ಬಗೆ ಯಾವುದು? ಭಾಷಾಮಾತೆಗೆ ಹೆಂಗಸರಾದ ನಾವು ಮಾಡಬಹುದಾದ ಸೇವೆಯೇನು?

"ರಾಜ್ಯಲಕ್ಷ್ಮಿ ಹೆಚ್ಚೋ, ಸಾಹಿತ್ಯ ಸಿರಿ ಹೆಚ್ಚೋ" ಎಂಬ ಸಮಸ್ಯೆಯನ್ನು ಬಗೆಹರಿಸುವ ಸಂದರ್ಭದಲ್ಲಿ ಆಂಗ್ಲ ಪ್ರಬಂಧಕಾರರಲ್ಲಿ ಪ್ರಸಿದ್ಧನಾದ ಕಾರ್ಲೈಲ್ ಎಂಬ ಮಹಾಪುರುಷನು, "ಇಂಗ್ಲೆಂಡಿಗೆ ಇಂಡಿಯಾ ದೇಶವೇ ಕಾಮಧೇನು. ಆದರೂ ಇಂಡಿಯಾ ದೇಶವು ಕಳೆದುಹೋದರೆ ಇಂಗ್ಲೆಂಡು ಬಡತನದಲ್ಲಾದರೂ ಬದುಕಿರಬಹುದು. ಮಹಾಕವಿಯಾದ ಷೇಕ್ಸ್‌ಪಿಯರ್ ರಚಿಸಿದ ಕಾವ್ಯಗಳು ಕಳೆದುಹೋದರೆ ಇಂಗ್ಲೆಂಡಿಗೆ ಸರ್ವನಾಶವಾದಂತೆಯೇ ಸರಿ" ಎಂದು ಹೇಳಿದ ನಂತೆ! ಎಂದಮೇಲೆ, ಯಾವ ನಾಡಿಗೇ ಆಗಲಿ, ಸರ್ವೋತ್ಕೃಷ್ಟವೆನಿಸಿದ ತನ್ನ ಭಾಷೆ, ತನ್ನ ಸಾಹಿತ್ಯ, ತನ್ನ ಸಂಸ್ಕೃತಿಗಳು ಎಷ್ಟು ಅಮೂಲ್ಯವಾದುವೆಂಬುದನ್ನು ಒಡೆದು ಹೇಳಬೇಕಾಗಿಲ್ಲ. ಅವು ಅಮೂಲ್ಯವಾದುವೆಂದು ನಾವು ನಂಬುವುದಾದರೆ, ಅವುಗಳನ್ನು ಸ್ಥಾಯಿಗೊಳಿಸಿ ಅಭಿವೃದ್ಧಿಪಡಿಸುವುದು ನಮ್ಮ ಕರ್ತವ್ಯವಲ್ಲವೆ?

ಈ ಪರಿಷತ್ತಿನ ಕೆಲಸಗಳಲ್ಲಿ ಭಕ್ತಿಶ್ರದ್ಧೆಗಳಿಂದ ಅನೇಕ ಮಂದಿ ಗಂಡಸರು—ಹಿರಿಯರೂ ತರುಣರೂ ಜತೆಗೂಡಿ—ಕನ್ನಡ ಮಾತೆಗಾಗಿ ಹಗಲಿರುಳೂ ದುಡಿಯುತ್ತಿದ್ದಾರೆ. ಮೊನ್ನೆ ಮೊನ್ನೆಯ ವರೆಗೂ ಭಾಷೆಯೆಂದರೆ ಇಂಗ್ಲಿಷೇ, ಉಳಿದವುಗಳೆಲ್ಲ ಕೆಲಸಕ್ಕೆಬಾರದ ಒರಟು ಮಾತುಗಳು—ಎಂದು ನಂಬಿದ್ದವರು ಸಹ ಈಗೀಗ ಕನ್ನಡ ಮಾತೆಯ ವೈಶಿಷ್ಟ್ಯವನ್ನರಿಯುತ್ತಿದ್ದಾರೆ. ಇದಕ್ಕೆ ಹಲವು ಕಾರಣಗಳುಂಟು. ಒಂದುವೇಳೆ, ಇದು ಮಹಾತ್ಮ ಗಾಂಧಿಯವರ ಉಪದೇಶದ ಫಲವಾಗಿ ಇಡೀ ದೇಶದಲ್ಲಿಯೇ- ಪ್ರವಾಹದಂತೆ ನುಗ್ಗಿ, ಹರಿದು, ಭೋರ್ಗರೆಯುತ್ತಿರುವ ಸ್ವದೇಶಾಭಿಮಾನ, ಆತ್ಮಗೌರವ, ಆತ್ಮನಿವೇದನಾಸಿದ್ಧತೆ ಮೊದಲಾದ ಸಲ್ಲಕ್ಷಣಗಳನ್ನು ಜನಸಾಮಾನ್ಯದಲ್ಲೆಲ್ಲಾ ತೋರಿಸುತ್ತಿರುವ ನವಚೇತನದ ಫಲವಿದ್ದರೂ ಇರಬಹುದು. ಕಾರಣವು ಏನೇ ಆಗಿರಲಿ, "ದೇಶ ಸೇವೆಯೇ ಈಶ ಸೇವೆ" ಎಂಬುದನ್ನು ಅರಿತು, ಇತ್ತೀಚೆಗೆ ಲಕ್ಷಾಂತರ ಗಂಡಸರೂ ಹೆಂಗಸರೂ ನಾನಾವಿಧಗಳಲ್ಲಿ ದೇಶ ಮಾತೆಯ ಸೇವೆಯಲ್ಲಿ ನಿರತರಾಗಿರುತ್ತಾರೆ. ಹೀಗೆ ಗಂಡಸರೊಡನೆ ದೇಶಸೇವೆಯಲ್ಲಿ ಭಾಗವಹಿಸುತ್ತಿರುವ ಹೆಂಗಸರು ಇಂದಿಗಿಂತಲೂ ಹೆಚ್ಚಾಗಿ ಭಾಷಾಸೇವೆಯಲ್ಲಿಯೂ ಭಾಗವಹಿಸಬೇಕಾದುದು ಸೂಕ್ತವಲ್ಲವೆ? ಸ್ತ್ರೀಯರು ಈ ವಿಷಯದಲ್ಲಿ ಆಸಕ್ತರಾಗದಿದ್ದರೆ, ನಾಳೆ ಹಿರಿಯರೆನ್ನಿಸಿಕೊಳ್ಳುವ ಇಂದಿನ ಬಾಲಕ ಬಾಲಕಿಯರಿಗೆ ಆಸಕ್ತಿ ಬರುವುದು ಹೇಗೆ?

ಇದೆಲ್ಲವನ್ನೂ ಯೋಚಿಸಿಯೇ ಇರಬೇಕು, ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯವರು ಇಂತಹ ಹಬ್ಬಗಳನ್ನೇರ್ಪಡಿಸುತ್ತಿರುವುದು. ಇವುಗಳಲ್ಲಿ ಭಾಗವಹಿಸಲು ನಮಗೆ ಅವಕಾಶ ಕಲ್ಪಿಸಿಕೊಟ್ಟಿರುವುದಕ್ಕಾಗಿ ನಾವು ಅವರಿಗೆ ಚಿರಋಣಿಗಳು. ಅವರು ಮಾಡಿರುವ ಮಹತ್ತರವಾದ ಸಹಾಯಕ್ಕೆ ಪ್ರತಿಯಾಗಿ ನಮ್ಮಿಂದಾ

ಗುವ ಸೇವೆ ಸಹಾಯಗಳನ್ನು ಮಾಡಲು ಸಿದ್ಧರಾಗಿದ್ದೇವೆಂಬುದನ್ನು ನಾವು ಅವರಿಗೆ ತಿಳಿಸಬಹುದಲ್ಲವೇ ? ಆ ಸೇವೆ ಸಹಾಯಗಳು ಯಾವ ಯಾವ ರೂಪಗಳಲ್ಲಿರ ಬೇಕು—ಮೊದಲಾದ ವಿವರಗಳನ್ನು ವಿಶದಪಡಿಸಲು ಇದು ಸಮಯವೂ ಅಲ್ಲ, ಆ ಕೆಲಸಮಾಡಲು ನಾನು ಸಮರ್ಥಳೂ ಅಲ್ಲ. ಈ ಸಮಯದಲ್ಲಿ ಇಷ್ಟು ಮಾತ್ರ ಹೇಳಿದರೆ ಸಾಕೆಂದು ಭಾವಿಸುತ್ತೇನೆ. "ನಮ್ಮ ನಾಡು ಕನ್ನಡ ನಾಡು, ನಮ್ಮ ಜನರಲ್ಲಿ ಬಹು ಭಾಗದವರು ಕನ್ನಡಿಗರು, ಕನ್ನಡಿಗರಲ್ಲದವರಿಗೂ ಕೂಡ ಮನೆ ಬಿಟ್ಟು ಹೊರಗೆ ಹೋದರೆ, ತಂತಮ್ಮ ಕಾರ್ಯಕ್ಷೇತ್ರಗಳಲ್ಲಿಯೂ, ವಾಣಿಜ್ಯಾದಿ ಪಲ ಬಗೆಯ ವ್ಯವಹಾರಗಳಲ್ಲಿಯೂ ಕನ್ನಡವಿಲ್ಲದಿದ್ದರೆ ದಾರಿ ಇಲ್ಲ; ನಮಗೆ ಜನ್ಮವಿತ್ತು ದೇವ, ಋಷಿ, ಪಿತೃ ಋಣಗಳನ್ನು ತೀರಿಸಲು ನಮಗೆ ಸಾಧ್ಯಪಡಿಸಿಕೊಟ್ಟ ಹೆತ್ತತಾಯಿ ಯಂತೆ, ಅಲ್ಲದೆ ನಮ್ಮ ನಮ್ಮ ಕರ್ಮಪರಿಪಾಕಕ್ಕೆ ಅನುಗುಣವಾಗಿ, ಲೋಕಸೇವೆ ಯನ್ನರ್ಪಿಸಿ ಜನ್ಮಸಾಫಲ್ಯ ಪಡೆಯಲು ಕಾರ್ಯರಂಗವನ್ನು ಒದಗಿಸಿಕೊಟ್ಟಿರುವ ದೇಶಮಾತೆಯಂತೆ, ನಮಗೆ ವಿದ್ಯಾಬುದ್ಧಿಗಳನ್ನು ಕೊಟ್ಟು ಲೋಕವ್ಯವಹಾರಕ್ಕೂ ಆತ್ಮಸಂರಕ್ಷಣೆಗೂ ಸಾಧನವಾದ ಸ್ವಭಾಷೆಯು ನಮ್ಮ ತಾಯಿ ಹೌದು" ಎಂಬು ದನ್ನು ನಾವು ಬಲ್ಲೆವು. 'ಸಿದ್ಧಲಕ್ಷ್ಮಿ', 'ಮೋಕ್ಷಲಕ್ಷ್ಮಿ', 'ಜಯಲಕ್ಷ್ಮಿ' ಎಂಬಂತೆಯೇ 'ವಿದ್ಯಾಲಕ್ಷ್ಮಿ' ಎಂಬ ಮಾತು ಅನೂಚಾನವಾಗಿ ರೂಢಿಯಲ್ಲಿರುವ ಈ ನಮ್ಮ ದೇಶದಲ್ಲಿ, ಅಲ್ಲದೆ ಎಲ್ಲ ವಿದ್ಯೆಗೂ ಸರಸ್ವತಿಯೇ ಅಧಿದೇವತೆ ಎಂಬು ದನ್ನು ಅನಾದಿಯಾಗಿ ನಂಬಿರುವ ನಮ್ಮಾ ದೇಶದಲ್ಲಿ, 'ಕರ್ನಾಟಕ ಸಾಹಿತ್ಯ ಪರಿಷತ್ತು' ಎಂಬ ಈ ರೂಪವನ್ನು ತಾಳಿರುವ ವಿದ್ಯಾದೇವಿಯ ಸೇವೆಯಲ್ಲಿ ಸ್ತ್ರೀ ಯರಾದ ನಾವು ಪುರುಷರಿಗಿಂತಲೂ ಹೆಚ್ಚು ಪಾತ್ರವನ್ನು ವಹಿಸಬೇಕೆಂದೂ, ಹಾಗೆ ವಹಿಸಲು ನಮಗೇ ಹೆಚ್ಚು ಸ್ವಾತಂತ್ರ್ಯವಿರುವುದೆಂದೂ ಹೇಳಿದರೆ ವಾದ ವಿವಾದಗಳೇ ಇರಲಾರವು. ಹೀಗಿರುವುದರಿಂದ, ಅಖಿಲ ಕರ್ನಾಟಕಕ್ಕೇ ದೇವಮಂದಿರದಂತಿರುವ ಈ ಪರಿಷತ್ತಿಗೆ ನಮ್ಮಿಂದಾಗುವ ಸೇವೆಯನ್ನೂ ನಮ್ಮಿಂದಾಗುವ ಸಹಾಯವನ್ನೂ ಸಲ್ಲಿಸಲು ನಾವು ಸರ್ವಸಿದ್ಧರಾಗಿರುವೆವೆಂಬ ಭರವಸೆಯನ್ನಿತ್ತು "ಅಳಿಲ ಭಕ್ತಿ ಮಳಲ ಸೇವೆ" ಎಂಬಂತೆ ನಮ್ಮಿಂದ ಸಾಧ್ಯವಾದ ಸೇವೆಯನ್ನೊದಗಿಸಿಕೊಟ್ಟರೆ ನಾವೂ ಕೃತಕೃತ್ಯರಾಗುತ್ತೇವೆ; ಪರಿಷತ್ತಿನ ಸ್ಥಾಪನಾಚಾರ್ಯರಿಗೂ ನಮ್ಮ ಗುರು ದಕ್ಷಿಣೆಯನ್ನು ಅರ್ಪಿಸಿದಂತಾಗುತ್ತದೆ; ಕನ್ನಡ ಮಾತೆಯೂ ಪ್ರಸನ್ನಳಾಗುತ್ತಾಳೆ. ಭಾರತಮಾತೆಯ ದಿವ್ಯಮೂರ್ತಿಯನ್ನು ಅಲಂಕರಿಸುತ್ತಿರುವ ಜ್ಞಾನಮಾಲೆಯಲ್ಲಿ ಕರ್ನಾಟಕ ವಿವಿಧ ಪ್ರಾಂತಗಳು ದಿವ್ಯಮಣಿವೃಂದವಾಗಿ, ಮೈಸೂರೇ ನಾಯಕಮಣಿ ಯಾಗಿ ಕಂಗೊಳಿಸುತ್ತಾ ಭಾರತಮಾತೆಗೆ ಎಂದೆಂದಿಗೂ ಆಹ್ಲಾದವನ್ನೀಯುವುದರಲ್ಲಿ ಸಂದೇಹವಿಲ್ಲ.

ಸೋದರಿಯರೇ,—ಇಷ್ಟೇ ನನ್ನ ಮಾತು. ಇಂದಿನ ಕಾರ್ಯಭಾಗವು ಯಶಸ್ವಿ ಯಾಗಿ ನಡೆದು, ಹಾಗೆಯೇ ಕರ್ನಾಟಕ ಸಾಹಿತ್ಯ ಪರಿಷತ್ತಿನ ಸಕಲ ಕಾರ್ಯ ಕ್ರಮಗಳೂ ಇತೋಽಪ್ಯತಿಶಯವಾಗಿ ಫಲಪ್ರದವಾಗಲೆಂದು ಸರ್ವಶಕ್ತನೂ ದಯಾ ಮಯನೂ ಆದ ಪರಮೇಶ್ವರನನ್ನು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

# ಐದನೆಯ ವಸಂತ ಸಾಹಿತ್ಯೋತ್ಸವ, ಗದುಗು

## ತಾ॥ ೨೯-೫-೧೯೩೮ರಲ್ಲಿ ಗದುಗಿನ ಡಿಸ್ಟ್ರಿಕ್ಟ್ ಜಡ್ಜ್‌ರವರಾದ ಶ್ರೀ॥ ಸಿ. ಸಿ. ಹುಲಕೋಟಿ ಅವರು ಮಾಡಿದ ಆರಂಭ ಭಾಷಣ

---

ಅಕ್ಕತಂಗಿಯರೇ, ಅಣ್ಣತಮ್ಮಂದಿರೇ,

ಇಲ್ಲಿ ಜರುಗುವ ವಸಂತ ಸಾಹಿತ್ಯೋತ್ಸವವನ್ನು ಪ್ರಾರಂಭ ಮಾಡಲು ನನಗೆ ವಿಶೇಷ ಸಂತೋಷವೂ, ಅಭಿಮಾನವೂ ಅನಿಸುತ್ತದೆ. ಇದಕ್ಕಾಗಿ ನನ್ನನ್ನು ಕೇಳಿದುದಕ್ಕೆ ನಾನು ಚಾಲಕರಿಗೆ ಋಣಿಯಾಗಿದ್ದೇನೆ. ಈ ವಸಂತ ಸಾಹಿತ್ಯೋತ್ಸವವು ಉತ್ತರ ಕರ್ನಾಟಕದಲ್ಲಿ ನಡೆಯುವದು ಇದೇ ಮೊದಲನೆಯ ಸಲ. ಈ ಅಪೂರ್ವ ಸನ್ಮಾನವು ಗದುಗಿಗೆ ದೊರೆತದ್ದು ನಮಗೆ ಹೆಮ್ಮೆಯ ಮಾತೇ ಸರಿ.

ಈ ವಸಂತೋತ್ಸವವು ಬೆಂಗಳೂರಿನಲ್ಲಿ ಕೆಲವು ವರ್ಷಗಳಿಂದ ಯಶಸ್ವಿಯಾಗಿ ನಡೆಯುತ್ತ ಬಂದಿರುತ್ತದೆ. ಈಗ ಕನ್ನಡ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಈ ಉತ್ಸವ ವನ್ನು ನಡಸುವದರಿಂದ, ಇದರ ಉಪಯುಕ್ತತೆಯು ಇನ್ನೂ ಹೆಚ್ಚುತ್ತಲಿದೆ. ಇಂಥ ಉತ್ಸವಗಳು ಮನವನ್ನು ರಂಜಿಸಿ, ಬುದ್ಧಿಗೆ ಚಾಲನ ಕೊಟ್ಟು ಜನತೆಯಲ್ಲಿ ಜ್ಞಾನ ಪ್ರಸಾರ ಮಾಡುವುದಕ್ಕೆ ಉತ್ತಮವಾದ ಸಾಧನಗಳಾಗಿವೆ.

ಪೂರ್ವದಲ್ಲಿ, ಕನ್ನಡ ಭಾಷೆಯು ಕನ್ನಡ ರಾಜರ ಆಶ್ರಯದಿಂದ ಒಳ್ಳೇ ಘನತೆಗೆ ಏರಿದ್ದಿತು. ಹಿಂದೂಸ್ಥಾನದಲ್ಲಿ ಬಹು ದೂರದವರೆಗೆ ಕನ್ನಡ ಭಾಷೆಯು ಹಬ್ಬಿ ದ್ದಿತು. ಕನ್ನಡಿಗರ ಕಡೆಯ ಸಾಮ್ರಾಜ್ಯವಾದ ವಿಜಯನಗರರಾಜ್ಯದ ಏಳಿಗೆಯ ದಿನಸಗಳಲ್ಲಿ ಅನೇಕ ಕನ್ನಡ ಕವಿಗಳು ರಾಜಾಶ್ರಯವನ್ನು ಹೊಂದಿ, ಭಾಷಾಸೇವೆ ಯನ್ನು ಮಾಡಿದ್ದು ತಮಗೆ ಗೊತ್ತಿದೆ. ಮಹಾಕವಿಯೆಂದೆನಿಸಿಕೊಂಡ ಕುಮಾರ ವ್ಯಾಸನು ತನ್ನ ಕನ್ನಡ ಭಾರತವನ್ನು ರಚಿಸಿದ್ದು ಇದೇ ಕಾಲದಲ್ಲಿ. ಈತನು ತನ್ನ ಗ್ರಂಥವನ್ನು ಬರೆದದ್ದು ಗದುಗಿನಲ್ಲಿ, ಶ್ರೀ ವೀರನಾರಾಯಣ ದೇವರ ಗುಡಿಯಲ್ಲಿ— ಎಂದು ಹೇಳಲಿಕ್ಕೆ ನನಗೆ ಬಹಳ ಅಭಿಮಾನವೆನ್ನಿಸುತ್ತಿದೆ. ಕೆಳದಿಯ ಅರಸರು ಸಹ ಕನ್ನಡ ಭಾಷೆಗೆ ಉತ್ತೇಜನವನ್ನು ಕೊಟ್ಟರು. ಕೆಳದಿಯ ವೀರಭದ್ರನಾಯಕನ ಕಾಲದಲ್ಲಿ ನಮ್ಮ 'ಗದುಗಿನ ಜಗದ್ಗುರು' ತೋಂಟದಾರ್ಯ ಮಠದ ಮರಿತೋಂಟ ದಾರ್ಯರೆಂಬ ಸ್ವಾಮಿಗಳು 'ಕರ್ನಾಟಕ ಶಬ್ದಮಂಜರಿ', 'ಸಿದ್ಧೇಶ್ವರ ಪುರಾಣ' ಮುಂತಾದ ಕನ್ನಡ ಗ್ರಂಥಗಳನ್ನು ಬರೆದರು. ಅನಂತರ ಕನ್ನಡ ಭಾಷೆಯ ಕೇಂದ್ರ ಸ್ಥಾನವಾದ ಈ ನಮ್ಮ ನಾಡಿನಲ್ಲಿಯೂ ಸಹ ಕನ್ನಡವು ಕಳೆಗುಂದಿದೆಯೆಂದು ಹೇಳಲಿಕ್ಕೆ ನನಗೆ ವಿಷಾದವೆನಿಸುತ್ತಿದೆ.

ಇತ್ತಲಾಗಿ ಮೈಸೂರ ಯೂನಿವರ್ಸಿಟಿ ಆಗಿ ಅದರಲ್ಲಿ ಕನ್ನಡ ಭಾಷಾಭ್ಯಾಸಕ್ಕೆ ಪ್ರಾಮುಖ್ಯವು ದೊರೆತದ್ದರಿಂದ ಕನ್ನಡ ಭಾಷೆಯ ಪುನರುಜ್ಜೀವನವಾಗಿ ಅದಕ್ಕೆ

ಗುವ ಸೇವೆ ಸಹಾಯುಗಳನ್ನು ಮಾಡಲು ಸಿದ್ಧರಾಗಿದ್ದೇವೆಂಬುದನ್ನು ನಾವು ಅವರಿಗೆ ತಿಳಿಸಬಹುದಲ್ಲವೇ ? ಆ ಸೇವೆ ಸಹಾಯುಗಳು ಯಾವ ಯಾವ ರೂಪಗಳಲ್ಲಿರ ಬೇಕು—ಮೊದಲಾದ ವಿವರಗಳನ್ನು ವಿಶದಪಡಿಸಲು ಇದು ಸಮಯವೂ ಅಲ್ಲ, ಆ ಕೆಲಸಮಾಡಲು ನಾನು ಸಮರ್ಥಳೂ ಅಲ್ಲ. ಈ ಸಮಯದಲ್ಲಿ ಇಷ್ಟು ಮಾತ್ರ ಹೇಳಿದರೆ ಸಾಕೆಂದು ಭಾವಿಸುತ್ತೇನೆ. "ನಮ್ಮ ನಾಡು ಕನ್ನಡ ನಾಡು, ನಮ್ಮ ಜನರಲ್ಲಿ ಬಹು ಭಾಗದವರು ಕನ್ನಡಿಗರು, ಕನ್ನಡಿಗರಲ್ಲದವರಿಗೂ ಕೂಡ ಮನೆ ಬಿಟ್ಟು ಹೊರಗೆ ಹೋದರೆ, ತಂತಮ್ಮ ಕಾರ್ಯಕ್ಷೇತ್ರಗಳಲ್ಲಿಯೂ, ವಾಣಿಜ್ಯಾದಿ ಹಲ ಬಗೆಯ ವ್ಯವಹಾರಗಳಲ್ಲಿಯೂ ಕನ್ನಡವಿಲ್ಲದಿದ್ದರೆ ದಾರಿ ಇಲ್ಲ; ನಮಗೆ ಜನ್ಮವಿತ್ತು ದೇವ, ಋಷಿ, ಪಿತೃ ಋಣಗಳನ್ನು ತೀರಿಸಲು ನಮಗೆ ಸಾಧ್ಯಪಡಿಸಿಕೊಟ್ಟ ಹೆತ್ತತಾಯಿ ಯಂತೆ, ಅಲ್ಲದೆ ನಮ್ಮ ನಮ್ಮ ಕರ್ಮಪರಿಪಾಕಕ್ಕೆ ಅನುಗುಣವಾಗಿ, ಲೋಕಸೇವೆ ಯನ್ನರ್ಪಿಸಿ ಜನ್ಮಸಾಫಲ್ಯ ಪಡೆಯಲು ಕಾರ್ಯರಂಗವನ್ನು ಒದಗಿಸಿಕೊಟ್ಟಿರುವ ದೇಶಮಾತೆಯಂತೆ, ನಮಗೆ ವಿದ್ಯಾಬುದ್ಧಿಗಳನ್ನು ಕೊಟ್ಟು ಲೋಕವ್ಯವಹಾರಕ್ಕೂ ಆತ್ಮಸಂರಕ್ಷಣೆಗೂ ಸಾಧನವಾದ ಸ್ವಭಾಷೆಯು ನಮ್ಮ ತಾಯಿ ಹೌದು" ಎಂಬು ದನ್ನು ನಾವು ಬಲ್ಲೆವು. 'ಸಿದ್ಧಲಕ್ಷ್ಮಿ', 'ಮೋಕ್ಷಲಕ್ಷ್ಮಿ', 'ಜಯಲಕ್ಷ್ಮಿ' ಎಂಬಂತೆಯೇ 'ವಿದ್ಯಾಲಕ್ಷ್ಮಿ' ಎಂಬ ಮಾತು ಅನೂಚಾನವಾಗಿ ರೂಢಿಯಲ್ಲಿರುವ ಈ ನಮ್ಮ ದೇಶದಲ್ಲಿ, ಅಲ್ಲದೆ ಎಲ್ಲ ವಿದ್ಯೆಗೂ ಸರಸ್ವತಿಯೇ ಅಧಿದೇವತೆ ಎಂಬು ದನ್ನು ಅನಾದಿಯಾಗಿ ನಂಬಿರುವ ನಮ್ಮಾ ದೇಶದಲ್ಲಿ, 'ಕರ್ನಾಟಕ ಸಾಹಿತ್ಯ ಪರಿಷತ್ತು' ಎಂಬ ಈ ರೂಪವನ್ನು ತಾಳಿರುವ ವಿದ್ಯಾದೇವಿಯ ಸೇವೆಯಲ್ಲಿ ಸ್ತ್ರೀ ಯರಾದ ನಾವು ಪುರುಷರಿಗಿಂತಲೂ ಹೆಚ್ಚು ಪಾತ್ರವನ್ನು ವಹಿಸಬೇಕೆಂದೂ, ಹಾಗೆ ವಹಿಸಲು ನಮಗೇ ಹೆಚ್ಚು ಸ್ವಾತಂತ್ರ್ಯವಿರುವುದೆಂದೂ ಹೇಳಿದರೆ ವಾದ ವಿವಾದಗಳೇ ಇರಲಾರವು. ಹೀಗಿರುವುದರಿಂದ, ಅಖಿಲ ಕರ್ನಾಟಕಕ್ಕೇ ದೇವಮಂದಿರದಂತಿರುವ ಈ ಪರಿಷತ್ತಿಗೆ ನಮ್ಮಿಂದಾಗುವ ಸೇವೆಯನ್ನೂ ನಮ್ಮಿಂದಾಗುವ ಸಹಾಯವನ್ನೂ ಸಲ್ಲಿಸಲು ನಾವು ಸರ್ವಸಿದ್ಧರಾಗಿರುವೆವೆಂಬ ಭರವಸೆಯನ್ನಿತ್ತು "ಅಖಿಲ ಭಕ್ತಿ ಮಳಲ ಸೇವೆ" ಎಂಬಂತೆ ನಮ್ಮಿಂದ ಸಾಧ್ಯವಾದ ಸೇವೆಯನ್ನೊದಗಿಸಿಕೊಟ್ಟರೆ ನಾವೂ ಕೃತಕೃತ್ಯರಾಗುತ್ತೇವೆ; ಪರಿಷತ್ತಿನ ಸ್ಥಾಪನಾಚಾರ್ಯರಿಗೂ ನಮ್ಮ ಗುರು ದಕ್ಷಿಣೆಯನ್ನು ಅರ್ಪಿಸಿದಂತಾಗುತ್ತದೆ; ಕನ್ನಡ ಮಾತೆಯೂ ಪ್ರಸನ್ನಳಾಗುತ್ತಾಳೆ. ಭಾರತಮಾತೆಯ ದಿವ್ಯಮೂರ್ತಿಯನ್ನು ಅಲಂಕರಿಸುತ್ತಿರುವ ಜ್ಞಾನಮಾಲೆಯಲ್ಲಿ ಕರ್ನಾಟಕ ವಿವಿಧ ಪ್ರಾಂತಗಳು ದಿವ್ಯಮಣಿವೃಂದವಾಗಿ, ಮೈಸೂರೇ ನಾಯಕಮಣಿ ಯಾಗಿ ಕಂಗೊಳಿಸುತ್ತಾ ಭಾರತಮಾತೆಗೆ ಎಂದೆಂದಿಗೂ ಆಹ್ಲಾದವನ್ನೀಯುವುದರಲ್ಲಿ ಸಂದೇಹವಿಲ್ಲ.

ಸೋದರಿಯರೇ,—ಇಷ್ಟೇ ನನ್ನ ಮಾತು. ಇಂದಿನ ಕಾರ್ಯಭಾಗವು ಯಶಸ್ವಿ ಯಾಗಿ ನಡೆದು, ಹಾಗೆಯೇ ಕರ್ನಾಟಕ ಸಾಹಿತ್ಯ ಪರಿಷತ್ತಿನ ಸಕಲ ಕಾರ್ಯ ಕ್ರಮಗಳೂ ಇತೋಽಪ್ಯತಿಶಯವಾಗಿ ಫಲಪ್ರದವಾಗಲೆಂದು ಸರ್ವಶಕ್ತನೂ ದಯಾ ಮಯನೂ ಆದ ಪರಮೇಶ್ವರನನ್ನು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

# ಐದನೆಯ ವಸಂತ ಸಾಹಿತ್ಯೋತ್ಸವ, ಗದುಗು

## ತಾ|| ೨೯-೫-೧೯೩೪ಲರಲ್ಲಿ ಗದುಗಿನ ಡಿಸ್ಟ್ರಿಕ್ಟ್ ಜಡ್ಜರವರಾದ ಶ್ರೀ|| ಸಿ. ಸಿ. ಹುಲಕೋಟಿ ಅವರು ಮಾಡಿದ ಆರಂಭ ಭಾಷಣ

---

ಅಕ್ಕತಂಗಿಯರೇ, ಅಣ್ಣತಮ್ಮಂದಿರೇ,

ಇಲ್ಲಿ ಜರುಗುವ ವಸಂತ ಸಾಹಿತ್ಯೋತ್ಸವವನ್ನು ಪ್ರಾರಂಭ ಮಾಡಲು ನನಗೆ ವಿಶೇಷ ಸಂತೋಷವೂ, ಅಭಿಮಾನವೂ ಅನಿಸುತ್ತದೆ. ಇದಕ್ಕಾಗಿ ನನ್ನನ್ನು ಕೇಳಿದುದಕ್ಕೆ ನಾನು ಚಾಲಕರಿಗೆ ಋಣಿಯಾಗಿದ್ದೇನೆ. ಈ ವಸಂತ ಸಾಹಿತ್ಯೋತ್ಸವವು ಉತ್ತರ ಕರ್ನಾಟಕದಲ್ಲಿ ನಡೆಯುವದು ಇದೇ ಮೊದಲನೆಯ ಸಲ. ಈ ಅಪೂರ್ವ ಸನ್ಮಾನವು ಗದುಗಿಗೆ ದೊರೆತದ್ದು ನಮಗೆ ಹೆಮ್ಮೆಯ ಮಾತೇ ಸರಿ.

ಈ ವಸಂತೋತ್ಸವವು ಬೆಂಗಳೂರಿನಲ್ಲಿ ಕೆಲವು ವರ್ಷಗಳಿಂದ ಯಶಸ್ವಿಯಾಗಿ ನಡೆಯುತ್ತ ಬಂದಿರುತ್ತದೆ. ಈಗ ಕನ್ನಡ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಈ ಉತ್ಸವ ವನ್ನು ನಡಸುವದರಿಂದ, ಇದರ ಉಪಯುಕ್ತತೆಯು ಇನ್ನೂ ಹೆಚ್ಚುತ್ತಲಿದೆ. ಇಂಥ ಉತ್ಸವಗಳು ಮನವನ್ನು ರಂಜಿಸಿ, ಬುದ್ಧಿಗೆ ಚಾಲನ ಕೊಟ್ಟು ಜನತೆಯಲ್ಲಿ ಜ್ಞಾನ ಪ್ರಸಾರ ಮಾಡುವುದಕ್ಕೆ ಉತ್ತಮವಾದ ಸಾಧನಗಳಾಗಿವೆ.

ಪೂರ್ವದಲ್ಲಿ, ಕನ್ನಡ ಭಾಷೆಯು ಕನ್ನಡ ರಾಜರ ಆಶ್ರಯದಿಂದ ಒಳ್ಳೇ ಘನತೆಗೆ ಏರಿದ್ದಿತು. ಹಿಂದೂಸ್ಥಾನದಲ್ಲಿ ಬಹು ದೂರದವರೆಗೆ ಕನ್ನಡ ಭಾಷೆಯು ಹಬ್ಬಿ ದ್ದಿತು. ಕನ್ನಡಿಗರ ಕಡೆಯ ಸಾಮ್ರಾಜ್ಯವಾದ ವಿಜಯನಗರರಾಜ್ಯದ ಏಳಿಗೆಯ ದಿವಸಗಳಲ್ಲಿ ಅನೇಕ ಕನ್ನಡ ಕವಿಗಳು ರಾಜಾಶ್ರಯವನ್ನು ಹೊಂದಿ, ಭಾಷಾಸೇವೆ ಯನ್ನು ಮಾಡಿದ್ದು ತಮಗೆ ಗೊತ್ತಿದೆ. ಮಹಾಕವಿಯೆಂದೆನಿಸಿಕೊಂಡ ಕುಮಾರ ವ್ಯಾಸನು ತನ್ನ ಕನ್ನಡ ಭಾರತವನ್ನು ರಚಿಸಿದ್ದು ಇದೇ ಕಾಲದಲ್ಲಿ. ಈತನು ತನ್ನ ಗ್ರಂಥವನ್ನು ಬರೆದದ್ದು ಗದುಗಿನಲ್ಲಿ, ಶ್ರೀ ವೀರನಾರಾಯಣ ದೇವರ ಗುಡಿಯಲ್ಲಿ— ಎಂದು ಹೇಳಲಿಕ್ಕೆ ನನಗೆ ಬಹಳ ಅಭಿಮಾನವೆನ್ನಿಸುತ್ತಿದೆ. ಕೆಳದಿಯ ಅರಸರು ಸಹ ಕನ್ನಡ ಭಾಷೆಗೆ ಉತ್ತೇಜನವನ್ನು ಕೊಟ್ಟರು. ಕೆಳದಿಯ ವೀರಭದ್ರನಾಯಕನ ಕಾಲದಲ್ಲಿ ನಮ್ಮ 'ಗದುಗಿನ ಜಗದ್ಗುರು' ತೋಂಟದಾರ್ಯ ಮಠದ ಮರಿತೋಂಟ ದಾರ್ಯರೆಂಬ ಸ್ವಾಮಿಗಳು 'ಕರ್ನಾಟಕ ಶಬ್ದಮಂಜರಿ', 'ಸಿದ್ಧೇಶ್ವರ ಪುರಾಣ' ಮುಂತಾದ ಕನ್ನಡ ಗ್ರಂಥಗಳನ್ನು ಬರೆದರು. ಅನಂತರ ಕನ್ನಡ ಭಾಷೆಯ ಕೇಂದ್ರ ಸ್ಥಾನವಾದ ಈ ನಮ್ಮ ನಾಡಿನಲ್ಲಿಯೂ ಸಹ ಕನ್ನಡವು ಕಳೆಗುಂದಿದೆಯೆಂದು ಹೇಳಲಿಕ್ಕೆ ನನಗೆ ವಿಷಾದವೆನಿಸುತ್ತಿದೆ.

ಇತ್ತಲಾಗಿ ಮೈಸೂರ ಯೂನಿವರ್ಸಿಟಿ ಆಗಿ ಅವರಲ್ಲಿ ಕನ್ನಡ ಭಾಷಾಭ್ಯಾಸಕ್ಕೆ ಪ್ರಾಮುಖ್ಯವು ದೊರೆತದ್ದರಿಂದ ಕನ್ನಡ ಭಾಷೆಯು ಪುನರುಜ್ಜೀವನವಾಗಿ ಅದಕ್ಕೆ

ವಿಶೇಷ ಚೇತನವುಂಟಾಗಿದೆ. ಅನೇಕ ಪುರಾತನ ಗ್ರಂಥಗಳು ಅಚ್ಚಾಗಿವೆ. ಹೊಸ ಹೊಸ ಪುಸ್ತಕಗಳು ಬರೆಯಲ್ಪಡುತ್ತಲಿವೆ. ಅಲ್ಲಿಯ ಕನ್ನಡ ಪಂಡಿತರು ನಮ್ಮ ನಾಡಿನಲ್ಲಿ ಸಂಚರಿಸಿ ನಮಗೆ ಹೊಸ ಹುರುಪನ್ನು ತಂದುಕೊಟ್ಟಿರುವರು.

ಜಗತ್ತು ಈಗ ವಿಚಿತ್ರಗತಿಯಿಂದ ಮುಂದುವರಿಯುತ್ತಿದೆ. ಜ್ಞಾನವು ಅಪಾರ ವಾಗಿ ಬೆಳೆಯುತ್ತಿದೆ. ಇಂಥ ಕಾಲದಲ್ಲಿ ಜಗತ್ತಿನ ಜ್ಞಾನಭಂಡಾರವನ್ನು ಕನ್ನಡ ದಲ್ಲಿ ರಚಿಸಿ ಜನಸಾಮಾನ್ಯರಲ್ಲಿ ಹರಡುವದು ನಮ್ಮೆಲ್ಲರ ಆದ್ಯಕರ್ತವ್ಯವು. ಈ ವಿಷಯದಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತಿನ ಚಾಲಕರು ಮಾಡುತ್ತಲಿರುವ ಭಾಷಾ ಸೇವೆಯನ್ನು ಎಷ್ಟು ಹೊಗಳಿದರೂ ಸಾಲದು. ಗಂಭೀರವಿಚಾರಗಳನ್ನು ಕನ್ನಡದಲ್ಲಿ ವ್ಯಕ್ತಪಡಿಸುವುದು ಸಾಧ್ಯವಲ್ಲವೆಂಬ ಮಾತು ಕೆಲವು ದಿವಸಗಳ ಹಿಂದೆ ಕೇಳಬರುತಿತ್ತು. ಆದರೆ ಈಗ ಆ ಮಾತಿನಲ್ಲಿ ತಥ್ಯವಿಲ್ಲೆಂದು ಅನಿಸಹತ್ತಿದೆ.

ಮೈಸೂರಿನ ಪಂಡಿತರ ಉತ್ತೇಜನದಿಂದಲೇ ಈ ದಿವಸ ನಾವು ಕನ್ನಡ ಮಾತೆಯ ಸೇವೆ ಮಾಡಲು ನಿಂತಿದ್ದೇವೆ. ತಾವೆಲ್ಲರೂ ಹುರುಪಿನಿಂದ ಅನುವಾಗಿ ಈ ಉತ್ಸವವನ್ನು ಸಾಂಗಗೊಳಿಸಬೇಕೆಂದು ಬೇಡಿಕೊಂಡು, ಕನ್ನಡ ಸಾಹಿತ್ಯಕ್ಕೆ ಜಯ ಜಯವಾಗಲೆಂದು ಕೋರಿ, ತಮ್ಮೆಲ್ಲರ ಅಪ್ಪಣೆಯಿಂದ ಈ ಉತ್ಸವವು ಪ್ರಾರಂಭವಾಯಿತೆಂದು ನಾನು ಹೇಳುತ್ತೇನೆ.

# ಮೈಸೂರು ಶ್ರೀಮನ್ಮಹಾರಾಜರವರ ವರ್ಷವರ್ಧಂತ್ಯುತ್ಸವ

ಆಳುವ ಮಹಾಸ್ವಾಮಿಯವರೂ ಪರಿಷತ್ತಿನ ಮಹಾಪೋಷಕರೂ ಆದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಸ್ವಾಮಿಯವರ ೫೫ನೆಯ ವರ್ಷವರ್ಧಂತ್ಯುತ್ಸವದ ಪ್ರಯುಕ್ತ ಬೆಂಗಳೂರಲ್ಲಿರುವ ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರದಲ್ಲಿ ತಾ॥ ೮–೬–೧೯೩೮ನೆಯ ಬುಧವಾರ ಬೆಳಗ್ಗೆ ೮॥ ಘಂಟೆಗೆ ಶ್ರೇಯಃಪ್ರಾರ್ಥನಾ ಸಭೆ ಸೇರಿದ್ದಿತು. ಮೈಸೂರು ಸರ್ಕಾರದ ನಿವೃತ್ತ ಅಂಡರ್ ಸೆಕ್ರೆಟರಿಯವರೂ, ಪರಿಷತ್ಪತ್ರಿಕೆಯ ಸಂಪಾದಕರೂ ಆದ ಶ್ರೀಮಾನ್ ಡಿ. ಸಿ. ಸುಬ್ಬರಾಯಪ್ಪ, ಬಿ.ಎ., ಬಿ.ಎಲ್. ಅವರು ಅಗ್ರಾಸನವನ್ನು ವಹಿಸಿದ್ದರು.

ಪರಿಷನ್ಮಂದಿರವು ಮೈಸೂರು ಧ್ವಜದಿಂದಲೂ ತಳಿರು ತೋರಣಗಳಿಂದಲೂ ಅಲಂಕೃತವಾಗಿತ್ತು. ಅನೇಕ ಮಂದಿ ಪರಿಷತ್ಸದಸ್ಯರೂ ಗಣ್ಯಮಹನೀಯರೂ ಮಹಿಳೆಯರೂ ಸಭೆಗೆ ದಯಮಾಡಿಸಿದ್ದರು. ಪರಿಷತ್ತಿನ ಗಮಕ ತರಗತಿಯ ವಿದ್ಯಾರ್ಥಿನಿಯಾದ ಕುಮಾರಿ ಎಸ್. ಎನ್. ಸರೋಜಮ್ಮನ ದೇವತಾಪ್ರಾರ್ಥನೆಯೊಡನೆ ಉತ್ಸವ ಮೊದಲಾಯಿತು. ಅನಂತರ ಶ್ರೀ॥ ಡಿ. ಸಿ. ಸುಬ್ಬರಾಯಪ್ಪನವರು, ಪರಿಷದುಪಾಧ್ಯಕ್ಷರವರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಕಾರ್ಯಗೌರವದಿಂದ ಬೊಂಬಾಯಿಗೆ ದಯಮಾಡಿಸಬೇಕಾಗಿ ಬಂದ ಪ್ರಯುಕ್ತ ಸಭಾಕಾರ್ಯಕ್ಕೆ ತಮ್ಮನ್ನು ಆರಿಸಿಕೊಂಡು ಗೌರವಿಸಿದುದಕ್ಕಾಗಿ ಉತ್ಸವದ ಚಾಲಕರಿಗೆ ವಂದನೆಗಳನ್ನು ಸಮರ್ಪಿಸಿ ಅನಂತರ ಶ್ರೀಮನ್ಮಹಾರಾಜರವರು ಕಳೆದ ೩೬ ವರ್ಷಗಳಿಂದ ಹೇಗೆ ಪ್ರಜೆಗಳ ಕ್ಷೇಮವನ್ನೇ ತಮ್ಮ ಗುರಿಯಾಗಿಟ್ಟುಕೊಂಡು ರಾಜ್ಯಭಾರ ಮಾಡುತ್ತಿರುವರೆಂಬುದನ್ನು ವಿವರಿಸಿ ಸಮಯೋಚಿತವಾಗಿ ಭಾಷಣಮಾಡಿದರು.

ಅವರ ಭಾಷಣದ ಸಾರಾಂಶವನ್ನು ಈ ಕೆಳಗೆ ಕೊಟ್ಟಿದೆ:

"ಆಳುವ ಮಹಾಸ್ವಾಮಿಯವರಾದ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರು ಮೈಸೂರು ಸಂಸ್ಥಾನದ ಸಿಂಹಾಸನವನ್ನೇರಿ ಇಂದಿಗೆ ೩೬ ವರ್ಷಗಳಾದುವು. ಇಷ್ಟು ದೀರ್ಘಕಾಲದ ಅವಧಿಯಲ್ಲಿ ಅವರು ಅನವರತವೂ 'ಸತ್ಯಮೇವೋದ್ಧರಾಮ್ಯಹಂ' ಎಂಬ ಪಾರಂಪರ್ಯವಾಗಿ ಬಂದ ಉಚ್ಚಧ್ಯೇಯವನ್ನೇ ತಮ್ಮ ಸಮಸ್ತ ಕರ್ತವ್ಯಗಳಲ್ಲಿಯೂ ಅನುಸರಿಸುತ್ತಾ ಮೈಸೂರನ್ನು ಪ್ರಪಂಚದ ಆದರ್ಶಸಂಸ್ಥಾನಗಳಲ್ಲೊಂದಾಗುವಂತೆ ಪ್ರಜಾಪರಿಪಾಲನೆಮಾಡುತ್ತಿರುವರೆನ್ನುವುದು ಸರ್ವರಿಗೂ ವೇದ್ಯವಾಗಿರುವ ಅಂಶವೇ ಆಗಿದೆ. ಇವರ ಪ್ರಜಾವಾತ್ಸಲ್ಯವು ಎಷ್ಟು ಅನ್ಯಾದೃಶವಾದುದೆಂಬುದಕ್ಕೆ ಇವರು ತಮ್ಮ ಆಳ್ವಿಕೆಯ ರಜತಮಹೋತ್ಸವದ ಸಂದರ್ಭದಲ್ಲಿ ತಮ್ಮ ಸ್ವಹಸ್ತಾಕ್ಷರದಿಂದ ದಯಪಾಲಿಸಿದ ಶುಭಸಂದೇಶವೇ ನಿದರ್ಶನ. ಇದರಲ್ಲಿ ಅವರು ಅಪ್ಪಣೆಕೊಡಿಸಿರುವುದೇನೆಂದರೆ: 'ನಮ್ಮ ಪ್ರೀತಿಗೆ ಪಾತ್ರರಾದ ಪ್ರಜೆಗಳಲ್ಲಿ ಪ್ರತಿಯೊಬ್ಬರೂ ಸುಖವಾಗಿರಲೆಂದು ಹೃದಯದಲ್ಲಿ

5a

ಹಾರೈಸುತ್ತಾ ಈ ಶುಭಾಭಿಕಾಂಕ್ಷೆಯನ್ನು ಪ್ರೇಮಪುರಸ್ಸರವಾಗಿ ಪ್ರಕಟಗೊಳಿಸುವೆವು. ನಮ್ಮ ಪ್ರಜೆಗಳ ಸುಖ ಸಂಪತ್ತುಗಳನ್ನು ಅಭಿವೃದ್ಧಿಗೊಳಿಸಲು ಯಾವಜ್ಜೀವವೂ ಸಂತತ ವಾದ ಪ್ರಯತ್ನವನ್ನು ಮಾಡುವೆವು.' ಇದಕ್ಕಿಂತ ಹೆಚ್ಚಿನ ಪ್ರಜಾವಾತ್ಸಲ್ಯವನ್ನು ಯಾವ ಪ್ರಭುಗಳಲ್ಲಿ ತಾನೇ ನಿರೀಕ್ಷಿಸಲಾದೀತು!

"ಚರಿತ್ರಪ್ರಸಿದ್ಧವಾದ ಮೈಸೂರು ಸಂಸ್ಥಾನವು ಈ ರೀತಿಯ ಪ್ರಗತಿಮಾರ್ಗಕ್ಕೆ ಬಂದು 'ರಾಮರಾಜ್ಯ'ವೆಂಬ ಪ್ರಶಸ್ತಿಯನ್ನು ಪಡೆದಿರುವುದರಿಂದಲೇ ಇಂಡಿಯಾ ಸಾರ್ವಭೌಮ ಸರ್ಕಾರದವರು ತಿರುವಾಂಕೂರು, ಗ್ವಾಲಿಯರ್, ಜಿಂಧ್—ಇವೇ ಮೊದಲಾದ ನಾನಾ ಆಶ್ರಿತಸಂಸ್ಥಾನಗಳ ರಾಜರುಗಳನ್ನು ಇಲ್ಲಿಗೆ ಕಳುಹಿಸಿಕೊಟ್ಟು ಇಲ್ಲಿಯ ರಾಜ್ಯಭಾರ ನಿರ್ವಹಣ ಕ್ರಮವನ್ನು ಕಲಿತುಕೊಂಡು ಹೋಗಬೇಕೆಂಬ ಏರ್ಪಾಡು ಮಾಡಿರುವುದು.

"ಈ ರೀತಿ ಮೈಸೂರು ಸಂಸ್ಥಾನದ ಕೀರ್ತಿಯು ಇಡೀ ಭರತಖಂಡದಲ್ಲಿ ಈಗಾಗಲೇ ಚಿರಸ್ಥಾಯಿಯಾಗಿದ್ದರೂ ಕೂಡ ಅದನ್ನು ಇನ್ನೂ ವಿಸ್ತರಿಸಬೇಕೆಂಬ ಉದ್ದೇಶದೊಡನೆ ನಮ್ಮ ಮಹಾಸ್ವಾಮಿಯವರು ಈಗ್ಗೆ ಎರಡು ವರ್ಷಗಳ ಹಿಂದೆ ಯೂರೋಪ್ ಪ್ರವಾಸ ವನ್ನು ಕೈಗೊಂಡಿದ್ದರೆಂಬ ವಿಷಯವು ತಮ್ಮೆಲ್ಲರಿಗೂ ವೇದ್ಯವೇ ಆಗಿದೆ. ಈ ಸಂದರ್ಭದಲ್ಲಿ ಅವರು ಆಧುನಿಕ ಪ್ರಪಂಚದ ಪ್ರಗತಿಮನೋಭಾವವು ಪಾಶ್ಚಾತ್ಯ ಪ್ರಪಂಚದಲ್ಲಿ ಯಾವರೀತಿ ಮುಂದುವರಿಯುತ್ತಿರುವುದೆಂಬ ವಿಚಾರವಾದ ವಿವರಗಳನ್ನು ಸ್ವತಃ ಪರಿಚಯಮಾಡಿಕೊಂಡು ಬಂದು, ತಮ್ಮ ಅನುಭವಗಳನ್ನು ಪ್ರಜೆಗಳಿಗೆ ಹೆಚ್ಚು ಸೌಕರ್ಯಗಳನ್ನು ಒದಗಿಸಿಕೊಡುವ ಕಾರ್ಯಭಾರಕ್ಕೆ ನೆರವಾಗುವಂತೆ ಉಪಯೋಗಿಸಿಕೊಂಡರೆಂಬುದರಲ್ಲಿ ಯಾವ ಅನುಮಾನವೂ ಇರಲಾರದು. ಇವರ ಈ ಪ್ರವಾಸಕಾಲದಲ್ಲಿ ಯೂರೋಪ್ ಖಂಡದ ನಾನಾ ಸಂಗಡಸಲ ಜನರಿಂದ ಅಭೂತಪೂರ್ವವಾದ ಸ್ವಾಗತ ಸನ್ಮಾನಗಳನ್ನು ಪಡೆದದ್ದು ಮಾತ್ರವೇ ಅಲ್ಲದೆ ಮೈಸೂರು ಸಂಸ್ಥಾನದ ಕೀರ್ತಿಯನ್ನು ಆ ಪ್ರಾಂತಗಳಲ್ಲೆಲ್ಲಾ ಶಾಶ್ವತಗೊಳಿಸಿದರು. ಅಲ್ಲದೆ ಇವರು ಯೂರೋಪಿನಲ್ಲಿದ್ದ ಕಾಲದಲ್ಲಿ ತಮ್ಮ ಜೀವನದ ದಿನಚರಿಯನ್ನು ಮಾರ್ಪಡಿಸದೆ ಸತ್ಸಂಪ್ರದಾಯವನ್ನು ರಕ್ಷಿಸಿಕೊಂಡು ಎಲ್ಲ ಜನರ ಪ್ರೀತಿ ಗೌರವಗಳಿಗೆ ಪಾತ್ರರಾಗಿ ಕೊಂಡರು.

"ಇಷ್ಟೇ ಅಲ್ಲದೆ ಇವರು ಇತ್ತೀಚೆಗೆ ಭರತಖಂಡದ ಬೇರೆ ಬೇರೆ ಭಾಗಗಳಲ್ಲಿ ಪ್ರಜಾ ಸತ್ತಾತ್ಮಕವಾದ ಸರ್ಕಾರವು ಸ್ಥಾಪಿತವಾಗಿರುವುದನ್ನು ಮನಗಂಡು ನಮ್ಮ ಸಂಸ್ಥಾನದಲ್ಲಿಯೂ ಯೋಗ್ಯರೀತಿಯ ರಾಜ್ಯಾಂಗ ಸುಧಾರಣೆಗಳನ್ನು ರೂಢಿಗೆ ತರುವ ಪ್ರಯತ್ನಕ್ಕೆ ತಮ್ಮ ಪೂರ್ಣ ಸಹಾನುಭೂತಿಯನ್ನು ವ್ಯಕ್ತಪಡಿಸಿರುವುದಲ್ಲದೆ ಸತ್ಯ, ಧರ್ಮ—ಇವುಗಳೇ ಪ್ರಧಾನವಾಗಿರು ವಂತೆ ಇಲ್ಲಿಯ ಸರ್ಕಾರದ ಈಗಿನ ರಾಜ್ಯಾಂಗ ವ್ಯವಸ್ಥೆಯಲ್ಲಿ ಕೆಲವು ಮಾರ್ಪಾಡುಗಳನ್ನು ಸೂಚಿಸಲು ಒಂದು ಸಮಿತಿಯನ್ನು ನಿಯಮಿಸಿರುತ್ತಾರೆ.

"ನಮ್ಮ ಮಹಾಸ್ವಾಮಿಯವರು ರಾಜಕೀಯಭಾಗವೊಂದಕ್ಕೇ ಅಲ್ಲದೆ ಕಲಾ ಸಾಹಿತ್ಯಗಳಿಗೂ ಅಭಿಮಾನಿಗಳಾಗಿರುತ್ತಾರೆನ್ನುವುದು ನಿರ್ವಿವಾದವಾದ ವಿಷಯವಾಗಿದೆ. ಇವರು ನಮ್ಮ ಪರಿಷತ್ತಿನ 'ಮಹಾಪೋಷಕ'ರಾಗಿದ್ದುಕೊಂಡು ಇಲ್ಲಿನ ಕಾರ್ಯಗಳಿಗೆ ನಾನಾ ವಿಧವಾಗಿ ಸಾರ್ವದಾ ಸಹಾಯಮಾಡುತ್ತಿರುವುದೇ ಇದಕ್ಕೆ ನಿದರ್ಶನ. ಈ ಭಾಗದಲ್ಲಿ ಮಹಾಸ್ವಾಮಿಯವರು ಮಾತ್ರವೇ ಅಲ್ಲದೆ ಅವರ ಭ್ರಾತೃವರ್ಯರಾದ ಶ್ರೀಮದ್ಯುವರಾಜ ರವರೂ, ರಾಜಕುಮಾರರೂ, ರಾಜಕುಮಾರಿಯರೂ ಪರಿಷತ್ತಿನಲ್ಲಿ ಪೂರ್ಣ ಅಭಿಮಾನವನ್ನು ಪ್ರದರ್ಶಿಸುತ್ತಿರುವುದು ಸ್ತೋತ್ರಾರ್ಹವಾಗಿರುವುದು. ಪ್ರಜಾವತ್ಸಲರಾದ ಇಂತಹ ಪ್ರಭು ವರ್ಯರವರ ಜಜನೆಯ ವರ್ಧಂತ್ಯುತ್ಸವದ ಈ ಶುಭಸಮಯದಲ್ಲಿ ನಾವುಗಳೆಲ್ಲರೂ ಭಕ್ತಿ ಪೂರ್ವಕವಾಗಿ ಅವರ ಶ್ರೇಯಸ್ಸನ್ನು ಕೋರಿ, ಅವರು ಇದೇರೀತಿ ಯಶಸ್ವಿಯಾಗಿ ಚಿರಕಾಲ ರಾಜ್ಯಭಾರಮಾಡುತ್ತಾ ಬರುವಂತೆ ಆಯುರಾರೋಗ್ಯಾದಿಗಳನ್ನು ದಯಪಾಲಿಸಬೇಕೆಂದು ಭಗವಂತನಲ್ಲಿ ಪ್ರಾರ್ಥಿಸತಕ್ಕದ್ದು ನಮ್ಮ ಕರ್ತವ್ಯವೆಂದು ಭಾವಿಸುವುದಲ್ಲದೆ ರಾಜಭಕ್ತಿ

ಪುರಸ್ಸರವಾದ ನಮ್ಮ ಶ್ರೇಯಃಪ್ರಾರ್ಥನೆಯನ್ನು ಮಹಾಸ್ವಾಮಿಯವರಿಗೆ ಸಮರ್ಪಿಸಲು ತಮ್ಮೆಲ್ಲರ ಅನುಜ್ಞೆಯನ್ನು ಬೇಡುತ್ತೇನೆ.''

ಆ ಬಳಿಕ, ಮಹಾಸ್ವಾಮಿಯವರ ಶ್ರೇಯಃಪ್ರಾರ್ಥನಾ ನಿರ್ಣಯವನ್ನೂ ಅದರ ಟೆಲಿಗ್ರಾಂ ಸಾರಾಂಶವನ್ನೂ ಸಭೆಯ ಅಂಗೀಕಾರಕ್ಕೆ ಇಟ್ಟರು. ಸಭೆ ಇವುಗಳನ್ನು ಕರತಾಡನಗಳೊಡನೆ ಅಂಗೀಕರಿಸಿತು. ಶ್ರೇಯಃಪ್ರಾರ್ಥನಾ ನಿರ್ಣಯವನ್ನು ಕೆಳಗೆ ಕೊಟ್ಟಿದೆ:

"ಕರ್ನಾಟಕ ಸಿಂಹಾಸನಾಧೀಶ್ವರರೂ, ಕರ್ನಾಟಕ ಸಾಹಿತ್ಯ ಪರಿಷತ್ತಿನ ಮಹಾಪೋಷಕರೂ ಆಗಿ ನಮ್ಮನ್ನಾಳುತ್ತಿರುವ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಸ್ವಾಮಿಯವರ ವರ್ಷವರ್ಧಂತ್ಯುತ್ಸವದ ಪ್ರಯುಕ್ತ ಪರಿಷನ್ಮಂದಿರದಲ್ಲಿ ಸೇರಿರುವ ಈ ಮಹಾಸಭೆ ಮಹಾಪ್ರಭುಗಳವರಿಗೆ ಜಗದೀಶ್ವರನು ಆಯುರಾರೋಗ್ಯ, ವಿಜಯ, ಐಶ್ವರ್ಯಾದಿ ಸಮಸ್ತ ಸನ್ಮಂಗಳಗಳನ್ನೂ ಕರುಣಿಸಲೆಂದು ಪ್ರಾರ್ಥಿಸುತ್ತದೆ; ಮತ್ತು ತನ್ನ ರಾಜಭಕ್ತಿ ವಿಶ್ವಾಸಗಳನ್ನು ಮಹಾಸ್ವಾಮಿಯವರಲ್ಲಿ ಸಮರ್ಪಿಸಲು ಅಪ್ಪಣೆ ಬೇಡುತ್ತದೆ.''

ಮೇಲ್ಕಂಡ ನಿರ್ಣಯವು ಅಂಗೀಕಾರವಾದ ಕೂಡಲೆ ಅದರ ಟೆಲಿಗ್ರಾಂ ಸಾರಾಂಶವನ್ನು ಶ್ರೀಮನ್ಮಹಾರಾಜರವರ ಹುಜೂರ್ ಸೆಕ್ರೆಟರಿಯವರಿಗೆ ಕಳುಹಿಸಿ ಕೊಡಲಾಯಿತು.

ಅನಂತರ ಪ್ರಸಿದ್ಧ ಗಮಕಿಗಳಾದ ಶ್ರೀ॥ ಕೆ. ಕೃಷ್ಣರಾಯರು 'ಕುಮಾರವ್ಯಾಸ ಭಾರತ'ದಿಂದ 'ವಿದುರನ ಮನೆಗೆ ಕೃಷ್ಣನ ಆಗಮನ' ಎಂಬ ಭಾಗವನ್ನು ಸುಶ್ರಾವ್ಯವಾಗಿ ಓದಿದರು. ಶ್ರೀ॥ ಪಿ. ಶ್ರೀನಿವಾಸರಾವ್, ಎಂ.ಎಸ್‌ಸಿ. ಅವರು ಪರಿಷತ್ತಿನ ಪರವಾಗಿ ಅಧ್ಯಕ್ಷರಿಗೂ ಗಮಕಿಗಳಿಗೂ ಪರಿಷತ್ತಿನ ವಂದನೆಗಳನ್ನು ಸಲ್ಲಿಸಿದರು. ಎಲ್ಲರಿಗೂ ಹೂ ಹಂಚಿದಮೇಲೆ ಸಭೆ ಕೊನೆಗೊಂಡಿತು.

---

# ಗ್ರಂಥ ಸ್ವೀಕಾರ

## ೧೯೩೮ನೆಯ ಜನವರಿಯಿಂದ ಮಾರ್ಚಿ ಕೊನೆಯವರೆಗೆ

### (i) ಪರಿಷತ್ತಿಗೆ ವಿಮರ್ಶೆಗಾಗಿ ಬಂದ ಪುಸ್ತಕಗಳು

೧. ದಸರೆಯ ಕಾಣಿಕೆ.— ಶ್ರೀ॥ ಜಿ. ಎನ್. ಲಕ್ಷ್ಮಣ ಪೈ ಅವರಿಂದ, ೨. ಪುರಂದರ ದಾಸರ ಜಾಣ್ನುಡಿಗಳು.— ಶ್ರೀ॥ ಉಡುಪಿ ಭೀಮರಾವ್ ಅವರಿಂದ, ೩. ಶ್ರೀ ಗೋಮ್ಮಟೇಶ್ವರ.— ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರಿಂದ, ೪. ಶೂರ ಸುಭಾಸಚಂದ್ರ ಬೋಸ್.— ಶ್ರೀ॥ ಪಾಟೀಲ ಕಲ್ಲನಗೌಡ, ಬಿ.ಎ. ಅವರಿಂದ, ೫. ಕೀಚಕವಧ ನಾಟಕ.— ಶ್ರೀ॥ ವೆಂಕಟರಾವ್‌ನಾಯಕ ಅವರಿಂದ, ೬. ಕರ್ನಾಟಕ ದರ್ಶನ.— (ಮಿಂಚಿನಬಳ್ಳಿ ಗ್ರಂಥ ಮಾಲೆಯ ಮೊದಲನೆಯ ಕುಸುಮ) ಸಂಪಾದಕರು: ಶ್ರೀ॥ ಬುರ್ಲಿ ಬಿಂದುಮಾಧವ ಅವರಿಂದ, ೭. ಗುಬ್ಬಿ ಮರಿ.— ಶ್ರೀ॥ ಸಿ. ಆರ್. ರಾಮಣ್ಣನವರಿಂದ, ೮. ವೀರಪಥಿಕ.— ಪ್ರಕಾಶಕರು: ಹಲಸಂಗಿಯ "ಅರವಿಂದ ಗ್ರಂಥಮಾಲೆ" ಯಿಂದ, ೯. ಚಿರಸ್ಮರಣೀಯರಾದ ಚಿರಲಿಂಗ ಸ್ವಾಮಿಗಳು, ಕಲ್ಬುರ್ಗಿ ಮಠ.— ಶ್ರೀ॥ ಮ. ಮ. ಮಿರ್ಜಿ ಅವರಿಂದ, ೧೦. ಶ್ರೀ ಕೃಷ್ಣ ಚರಿತ್ರೆ.—ಪ್ರಕಾಶಕರು: ಬೆಂಗಳೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಕಂಪೆನಿಯಿಂದ, ೧೧. ಕಾಡುಮಲ್ಲಿಗೆ.— ಶ್ರೀ॥ ಸಿ. ಕೆ. ನಾಗರಾಜಾರಾಯರಿಂದ, ೧೨. The Mutetion of I. U. E. & O. in Kannada.— ಶ್ರೀ॥ ತೀ. ನಂ. ಶ್ರೀಕಂಠಯ್ಯ, ಎಂ.ಎ. ಅವರಿಂದ.

### (ii) ಪರಿಷತ್ತಿಗೆ ಬಂದಿರುವ ಇತರ ಪುಸ್ತಕ ಪ್ರಕಟನೆಗಳು

೧. ಪ್ರತೀಕಾರ.— ವಿದ್ವಾನ್ ಶ್ರೀ॥ ಬಿ. ಭುಜಂಗರಾವ್, ಬಿ.ಎ. ಅವರಿಂದ, ೨. ಪರಾಗ.— ಪ್ರಕಾಶಕರು: ಧಾರವಾಡದ ಪ್ರೇಮ ಪ್ರಕಟನಾಲಯದಿಂದ, ೩. Report of the Administration in Mysore for the year 1936-37.— ಮೈಸೂರು ಸರಕಾರದವರಿಂದ, ೪. The University of Mysore: Calendar for the year 1937-38—Vols. I & II.—ಮೈಸೂರು ವಿಶ್ವವಿದ್ಯಾನಿಲಯದವರಿಂದ, ೫-೯. i. Hidden Words (By Baha-u-Llah); ii. Seven Valleys (By Baha-u-Llah); iii. Renaissance (By Mirza Ahmed Sohrab); iv. The Song of the Caravan (By Mirza Ahmed Sohrab); v. Abdul Baha in Egypt (By Mirza Ahmed Sohrab); "New History Society," New York ಅವರಿಂದ: ಶ್ರೀ॥ ಮಾ. ನಾ. ಚೌಡಪ್ಪನವರ ಮೂಲಕ, ೧೦-೧೫. ಚಿತ್ರ ರಾಮಾಯಣ.— ಬಾಲಕಾಂಡ, ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರಕಾಂಡ, ಯುದ್ಧಕಾಂಡ, ೧೬-೧೯. ರಾಮಾಯಣ ಸಾರ.— ಬಾಲಕಾಂಡ, ಅರಣ್ಯಕಾಂಡ, ಸುಂದರಕಾಂಡ, ಯುದ್ಧಕಾಂಡ, ೨೦. ಚಿತ್ರಪಟಗಳನ್ನು ಬರೆಯುವ ಕ್ರಮ, ೨೧. ನೀರು ಬಣ್ಣಗಳಿಂದ ಭಾವಚಿತ್ರಗಳನ್ನು ಬರೆಯುವ ಕ್ರಮ, ೨೨. ತಸ್ವೀರು ತೆಗೆಯುವ ಕ್ರಮ, ೨೩. ಮೈಸೂರು ಅಟ್ಲಾಸ್, ೨೪-೨೭. ಚಿತ್ರಭಾಗವತ (೪ ಸಂಪುಟಗಳು), ೨೮. ಭೂಪಟಗಳನ್ನು ಬರೆಯುವ ಕ್ರಮ.— ಶ್ರೀ॥ ಎಸ್. ಕೆ. ಲಿಂಗಣ್ಣಯ್ಯ, ಬಿ.ಎ. ಅವರಿಂದ.

# ಸಂಪಾದಕೀಯ ಟಿಪ್ಪಣಿಗಳು

ಕಳೆದ ಡಿಸೆಂಬರ್ ತಿಂಗಳಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವು ಜಮುಖಂಡಿಯಲ್ಲಿ ನಡೆದಾಗ ಮಹಾರಾಷ್ಟ್ರ ಭಾಷೆಯ ಪ್ರಾಬಲ್ಯವುಳ್ಳ ಆ ಪ್ರಾಂತದಲ್ಲಿ ಕನ್ನಡಕ್ಕೆ ತಕ್ಕಷ್ಟು ಮನ್ನಣೆ ದೊರೆತೀತೋ ಇಲ್ಲವೋ ಎಂಬ ಅನುಮಾನವಿದ್ದಿತು. ಈ ಕಾರಣದಿಂದಲೇ ಆ ಸಂಸ್ಥಾನದ ರಾಜಾಸಾಹೇಬರವರಿಂದ ಈ ವಿಚಾರದಲ್ಲಿ ಸಹಾನುಭೂತಿಯುಳ್ಳ ಸಂದೇಶವು ಸಮ್ಮೇಳನಕ್ಕೆ ಬಂದಿದ್ದರೂ ಕೂಡ ಈ ಕೆಳಗೆ ಕಂಡ ಎರಡು ನಿರ್ಣಯಗಳನ್ನು ಸಮ್ಮೇಳನದಲ್ಲಿ ಅಂಗೀಕರಿಸಲಾಯಿತು*:—

ಜಮುಖಂಡಿ ಸಂಸ್ಥಾನದಲ್ಲಿ ಕನ್ನಡಕ್ಕೆ ಮನ್ನಣೆ

೧. "ಜಮುಖಂಡಿಯ ಸಂಸ್ಥಾನದ ನಿವಾಸಿಗಳೆಲ್ಲರೂ ತಮ್ಮ ತಮ್ಮ ಮಕ್ಕಳನ್ನು ಕನ್ನಡ ಶಾಲೆಗಳಿಗೇ ಕಳುಹಿಸಬೇಕೆಂದೂ, ವ್ಯಾಪಾರಸ್ಥರು ತಮ್ಮ ಲೆಕ್ಕಪತ್ರಗಳನ್ನೂ ಪತ್ರವ್ಯವಹಾರವನ್ನೂ ಕನ್ನಡದಲ್ಲಿಯೇ ನಡಸಬೇಕೆಂದೂ ಈ ಸಮ್ಮೇಳನವು ಬಿನ್ನವಿಸುತ್ತದೆ."

೨. "ಜಮುಖಂಡಿ ಅಸೆಂಬ್ಲಿಯಲ್ಲಿ ಕನ್ನಡ ದಫ್ತರು ಆಗುವುದನ್ನು ಕುರಿತು ಚರ್ಚೆಯ ಬಗ್ಗೆ ಜಮುಖಂಡಿ ಸರ್ಕಾರದವರು ಹಾಕಿರುವ ನಿರ್ಬಂಧವನ್ನು ತೆಗೆದು ಹಾಕಬೇಕೆಂದು ಈ ಸಮ್ಮೇಳನವು ವಿನಯಪೂರ್ವಕವಾಗಿ ಬೇಡಿಕೊಳ್ಳುತ್ತದೆ."

ಮೇಲ್ಕಂಡ ನಿರ್ಣಯಗಳ ಫಲವಾಗಿ ಅಥವಾ ಬೇರೆ ಕಾರಣಗಳಿಂದ ಜಮುಖಂಡಿ ಸಂಸ್ಥಾನದ ರಾಜಾಸಾಹೇಬರವರು ೨೪–೬–೧೯೩೪ರಲ್ಲಿ ನಡೆದ ದರಬಾರಿನಲ್ಲಿ, ಕನ್ನಡ ಭಾಷೆಯನ್ನು ಸಂಸ್ಥಾನದ ಆಡಳಿತ ಭಾಷೆಯನ್ನಾಗಿ ಮಾಡುವ ವಿಚಾರದಲ್ಲಿ ಈ ಕೆಳಗೆ ಕಂಡಂತೆ ಅಪ್ಪಣೆಮಾಡಿರುತ್ತಾರೆ:—

"ಸಂಸ್ಥಾನದ ಬಹುಜನ ಸಮಾಜ ಭಾಷೆಯು ಕನ್ನಡವಾಗಿರುವುದರಿಂದ ಸರ್ಕಾರದ ದಫ್ತರಗಳಲ್ಲಿಯೂ ಶಕ್ಯವಿದ್ದಷ್ಟು ಕನ್ನಡವಿರಬೇಕು ಎಂಬ ತತ್ವವು ನಮಗೆ ಮಾನ್ಯವಿದೆ. ಆದರೆ ಈ ವಿಷಯವು ಒಂದೇ ಸಾರಿ ಆಗುವುದು ಅಶಕ್ಯವಾಗಿರುವುದರಿಂದ ಆ ದಿಶೆಯಲ್ಲಿ ಕ್ರಮಕ್ರಮವಾಗಿ ಪ್ರಯತ್ನಿಸಲು ನಾವು ನಿಶ್ಚಯಿಸಿದ್ದೇವೆ."

ಈ ರೀತಿಯ ಭರವಸೆಯನ್ನು ಕೊಟ್ಟದ್ದು ಮಾತ್ರವೇ ಅಲ್ಲದೆ ಶ್ರೀಮಂತ ರಾಜಾಸಾಹೇಬರವರು ಕನ್ನಡದಮೇಲೆ ತಮಗಿರುವ ಅಭಿಮಾನದ ಸೂಚನೆಯಾಗಿ ಕರ್ನಾಟಕ ಸಾಹಿತ್ಯ ಪರಿಷತ್ತಿಗೆ ೧೦೧ ರೂಪಾಯಿಗಳ ಸಹಾಯದ್ರವ್ಯವನ್ನು ದಯಪಾಲಿಸಿರುತ್ತಾರೆ.

ಕನ್ನಡ ನಾಡಾದರೂ ಮಹಾರಾಷ್ಟ್ರ ಭಾಷೆಯ ಪ್ರಾಬಲ್ಯವುಳ್ಳ ಜಮುಖಂಡಿ ಸಂಸ್ಥಾನದಲ್ಲಿ ಕನ್ನಡಕ್ಕೆ ಇಷ್ಟರಮಟ್ಟಿನ ಮನ್ನಣೆ ದೊರೆತದ್ದು ಅಲ್ಲಿನ ಪ್ರಜೆಗಳ ಮತ್ತು ಎಲ್ಲ ಪ್ರಾಂತದ ಕನ್ನಡಿಗರ ಭಾಗ್ಯೋದಯವೆಂತಲೇ ಭಾವಿಸಬೇಕು.

* 'ಪರಿಷತ್ಪತ್ರಿಕೆ', ಸಂಪುಟ ೨೨, ಸಂಚಿಕೆ ೪, ಪುಟ ೨೭೦.

ಈ ರೀತಿಯ ಹೃದಯವೈಶಾಲ್ಯವನ್ನು ಪ್ರದರ್ಶಿಸಿ ಪರಿಣಾಮಕಾರಿಯಾದ ಈ ಸುಧಾರಣೆಯನ್ನು ತಮ್ಮ ಪ್ರಜೆಗಳಿಗೆ ದಯಪಾಲಿಸಿದುದಕ್ಕಾಗಿ, ಜಮಖಂಡಿಯ ರಾಜಾಸಾಹೇಬರವರಾದ ಶ್ರೀಮಂತ ಶಂಕರರಾವ್ ಅಪ್ಪಾಸಾಹೇಬ್ ಪಟ್ಟವರ್ಧನ ರವರಿಗೆ ಕನ್ನಡಿಗರ ಮತ್ತು ಪರಿಷತ್ತಿನ ಪರವಾಗಿ ಭಕ್ತಿಪೂರ್ವಕವಾದ ವಂದನೆ ಗಳನ್ನು ಸಮರ್ಪಿಸುತ್ತೇವೆ. ಕರ್ನಾಟಕದ ಇತರ ಸಂಸ್ಥಾನಗಳ ಪ್ರಭುಗಳೂ ಸಹ ಇವರ ಮೇಲ್ಪಂಕ್ತಿಯನ್ನನುಸರಿಸಿ ಕನ್ನಡಕ್ಕೆ ಹೆಚ್ಚು ಮನ್ನಣೆಯನ್ನು ದಯಪಾಲಿ ಸುತ್ತಾ ಬರುವವರಾಗಲೆಂಬುದೇ ನಮ್ಮ ನೈಜವಾದ ಹಾರೈಕೆ. ನಮ್ಮಿ ಹಾರೈಕೆ ಕ್ಷಿಪ್ರದಲ್ಲಿಯೇ ಸಫಲಗೊಳ್ಳುವಂತಾಗಿ ಕನ್ನಡದ ಬಾವುಟವು ಇಡೀ ಕರ್ನಾಟಕದಲ್ಲಿ ಹೆಮ್ಮೆಯಿಂದ ಮೆರೆಯುವಂತೆ ದೇವರು ಅನುಗ್ರಹಿಸಲೆಂದು ಅನವರತವೂ ಪ್ರಾರ್ಥಿಸುತ್ತಿರುತ್ತೇವೆ. ಇದರಂತೆಯೇ ಈಚೆಗೆ ಮುಧೋಳ್, ಸಾಂಗ್ಲಿ, ಮಿರಜ್ ಸಂಸ್ಥಾನಗಳಲ್ಲಿಯೂ ಸಹ ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡಿರುವರೆಂದು ಕೇಳಿ ಸಂತೋಷಿಸುತ್ತೇವೆ.

**ಮೈಸೂರು ದೇಶದ ವಿದ್ಯಾಶಾಲಾ ಪಂಡಿತ ಮಂಡಲಿಯ ನಾಲ್ಕನೆಯ ವಾರ್ಷಿಕ ಸಮ್ಮೇಳನ**

ಮೈಸೂರು ಸಂಸ್ಥಾನದ ವಿದ್ಯಾಶಾಲಾ ಪಂಡಿತ ಮಂಡಲಿಯ ನಾಲ್ಕನೆಯ ವಾರ್ಷಿಕ ಸಮ್ಮೇಳನವು ಇದೇ ವರ್ಷದ ಜೂನ್ ತಿಂಗಳ ೧೭ನೆಯ ತಾರೀಖಿನಿಂದ ಮೂರು ದಿನಗಳು ಮೈಸೂರು ನಗರದಲ್ಲಿ ಶ್ರೀಮನ್ಮಹಾ ರಾಜರವರ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ತುಂಬಾ ಯಶಸ್ವಿಯಾಗಿ ನಡೆಯಿತು. ಮೈಸೂರು ಪ್ರಾಕ್ತ ಸಂಶೋಧನ ಶಾಖೆಯ ಮುಖ್ಯಾಧಿಕಾರಿಗಳಾಗಿದ್ದ ಅರ್ಥ ಶಾಸ್ತ್ರವಿಶಾರದ ಮಹಾಮಹೋಪಾಧ್ಯಾಯ ಡಾಕ್ಟರ್ ಆರ್. ಶಾಮಶಾಸ್ತ್ರೀ, ಬಿ.ಎ., ಪಿಎಚ್.ಡಿ. ಯವರು ಅಧ್ಯಕ್ಷತೆಯನ್ನು ವಹಿಸಿದ್ದರು. ಸಮ್ಮೇಳನದ ಪ್ರಾರಂಭೋತ್ಸವವನ್ನು ಮೈಸೂರು ಸರಕಾರದ ಪ್ರಥಮ ಸಚಿವರಾದ ಶ್ರೀಮಾನ್ ರಾಜಮಂತ್ರಪ್ರವೀಣ ಎಸ್. ಪಿ. ರಾಜಗೋಪಾಲಾಚಾರಿ, ಬಿ.ಎ., ಬಿ.ಎಲ್. ಅವರು ನೆರವೇರಿಸಿದರು. ಸಂಸ್ಥಾನದ ನಾನಾ ಭಾಗಗಳಲ್ಲಿ ವಿದ್ಯಾಶಾಖೆಯ ಮತ್ತು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಕೆಲಸಮಾಡುತ್ತಿರುವ ಅನೇಕ ಪಂಡಿತರು ಸಮ್ಮೇಳನಕ್ಕೆ ದಯಮಾಡಿಬಂದು ಅದರ ಕಾರ್ಯಕಲಾಪಗಳಲ್ಲಿ ಭಾಗವಹಿಸಿದ್ದರು.

ಸಮ್ಮೇಳನದ ವರದಿಯಲ್ಲಿ ಕಂಡಂತೆ ಈ ಮಂಡಲಿಯ ಮುಖ್ಯೋದ್ದೇಶ ಭಾಷಾಸೇವೆ ಮತ್ತು ಸಾಹಿತ್ಯ ಸೇವೆಗಳ ಮೂಲಕ ದೇಶಸೇವೆ ಮಾಡುವುದೇ ಆಗಿದೆ. ಈ ಉದ್ದೇಶಾನುಸಾರ ವರ್ಷಕ್ಕೆ ಎರಡು ಸಾರಿಯಂತೆ ಉಪನ್ಯಾಸಮಾಲೆಗಳನ್ನು ಏರ್ಪಡಿಸಲಾಗಿತ್ತು. ಸಮ್ಮೇಳನದ ಕಾಲದಲ್ಲಿಯೂ ಸಹ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯಗಳಿಗೂ ಇತರ ವಿಷಯಗಳಿಗೂ ಸಂಬಂಧಪಟ್ಟ ಅನೇಕ ಉಪನ್ಯಾಸಗಳು ನಡೆದುವು.

ಇದೇ ಮಂಡಲಿಯ ಹಿಂದಿನ ವರ್ಷದ ಸಮ್ಮೇಳನವು ಬೆಂಗಳೂರಲ್ಲಿ ನಡೆದಾಗ ಅಧ್ಯಕ್ಷತೆ ವಹಿಸಿದ್ದ ಶ್ರೀಮಾನ್ ರೈಟ್ ಆನರಬಲ್ ವಿ. ಎಸ್. ಶ್ರೀನಿವಾಸಶಾಸ್ತ್ರಿಗಳ

ತಮ್ಮ ಆರಂಭ ಭಾಷಣದಲ್ಲಿ ಪಂಡಿತರನ್ನು ಕುರಿತು—ಅವರಲ್ಲಿ ಕಂಡುಬರುವ 'ನಾವು ನಿಮ್ಮನ್ನು ಮುಟ್ಟುವುದಿಲ್ಲ; ನೀವು ನಮ್ಮನ್ನು ಮುಟ್ಟಬೇಡಿ' ಎಂಬ ಒಂದು ವಿಧವಾದ 'ಮಡಿ' ಭಾವನೆಯನ್ನು ಬಿಟ್ಟುಬಿಡಬೇಕೆಂತಲೂ, ತಮ್ಮದು ಧಾರ್ಮಿಕಜೀವನ, ಇತರರದು ಕೇವಲ ಲೌಕಿಕ ಎಂಬುದಾಗಿ ಅವರಿಟ್ಟುಕೊಂಡಿರುವ ಭಾವನೆಯನ್ನು ಬದಲಾಯಿಸಬೇಕೆಂತಲೂ, ಈಗಿನ ಕಾಲದಲ್ಲಿ ವಿಜ್ಞಾನವಿಶೋಧಿತವಲ್ಲದ ದರ್ಶನ ವಿದ್ಯೆಗೆ ಬೆಲೆ ಕಡಮೆಯಾದ ಕಾರಣ, ಅರ್ಥವಿಲ್ಲದ ಆಚಾರಗಳನ್ನು ವಿಮರ್ಶಾತ್ಮಕ ದೃಷ್ಟಿಯಿಂದ ತುಲನಮಾಡಿ ಅವುಗಳಿಗೆ ನಿಜವಾದ ಬೆಲೆ ಕೊಡಬೇಕೆಂತಲೂ, ಆಚಾರಕ್ಕಿಂತ ಶೀಲ ದೊಡ್ಡದು, ಆದರ್ಶ ಬೋಧನೆಗಿಂತ ಆದರ್ಶದ ಅನುಷ್ಠಾನ ದೊಡ್ಡದೆಂತಲೂ ಉಪದೇಶ ಮಾಡಿದ್ದು ನಮ್ಮ ವಾಚಕರ ನೆನಪಿನಲ್ಲಿರಬಹುದು.*

ಇದೇ ರೀತಿ ಈ ಸಾರಿಯ ಸಮ್ಮೇಳನದ ಅಧ್ಯಕ್ಷರಾದ ಶ್ರೀಮಾನ್ ಎಸ್. ಪಿ. ರಾಜಗೋಪಾಲಾಚಾರಿಯವರೂ ಸಹ ಪಂಡಿತರನ್ನು ಕುರಿತು ಅಪ್ರಿಯವಾದರೂ ಪರಿಣಾಮಕಾರಿಯಾದ ಉಪದೇಶವನ್ನು ಮಾಡಿದರು. ಅವರು ಅಪ್ಪಣೆ ಕೊಡಿಸಿದ ಮಾತುಗಳಿವು:

"ಪಂಡಿತರು ಪ್ರಾಚೀನ ಪಾಂಡಿತ್ಯವನ್ನು ಗ್ರಹಿಸುವುದರಲ್ಲಿ ಸಂಪ್ರದಾಯವಾಗಿ ಬಂದ ಮಾರ್ಗವನ್ನು ಅನುಸರಿಸುತ್ತಾರೆ. ಇದೇನೋ ಸರಿ. ಆದರೆ, ಅವರು ಪ್ರಾಚೀನ ಪಾಂಡಿತ್ಯವನ್ನು ಆಧುನಿಕ ಆವಶ್ಯಕತೆಗಳಿಗೆ ಎಷ್ಟರಮಟ್ಟಿಗೆ ಸರಿಪಡಿಸಬಹುದೆಂಬುದನ್ನು ನೋಡಬೇಕು. ಹಳೆಯದೆಲ್ಲಾ ಒಳ್ಳೆಯದು ಅಥವಾ ಒಳ್ಳೆಯದಾಗಿರಲೇಬೇಕು ಎಂದು ಹೇಳುವುದು ಸರಿಯಲ್ಲ. ಈಗಿನ ಕಾಲದ್ದೆಲ್ಲವೂ ಕೆಟ್ಟದ್ದು ಎಂದು ಹೇಳುವುದೂ ಸರಿಯಲ್ಲ. ಎರಡರಲ್ಲೂ ಇರುವ ಒಳ್ಳೆಯ ಅಂಶಗಳನ್ನು ಮಿಳಿತ ಮಾಡುವುದು ಅತ್ಯಾವಶ್ಯಕ. ಹೀಗಾದ ರೀತಿಯ ಪಂಡಿತನು ತನ್ನ ಇಲಾಖೆಗೂ ಮತ್ತು ಜನಗಳಿಗೂ ತನ್ನ ಪ್ರಯೋಜನವನ್ನು ಹೆಚ್ಚು ಮಾಡಿಕೊಂಡಂತಾಗುವುದು. ಇದು ಸಾಧ್ಯವಾಗುವುದು ಹೇಗೆ? ಪಂಡಿತನು ತನ್ನ ಭಾಷಾ ಸಾಹಿತ್ಯಗಳನ್ನೇ ಅಲ್ಲದೆ, ಕೆಲವು ಆಧುನಿಕ ಭಾಷೆಗಳು ಮತ್ತು ಸಾಹಿತ್ಯಗಳನ್ನು ತಿಳಿದುಕೊಂಡು ವ್ಯಾಸಂಗದಲ್ಲೂ ಮತ್ತು ಸಂಶೋಧನಾಕಾರ್ಯದಲ್ಲೂ ಆಧುನಿಕ ಮನೋಭಾವವನ್ನು ವ್ಯಕ್ತಪಡಿಸಬೇಕು. ಹೀಗೆ ಮಾಡಿದರೇ ಅದು ಸಾಧ್ಯ. ಈ ರೀತಿಯಲ್ಲಿ ಪಾಂಡಿತ್ಯವನ್ನು ಪಡೆಯಲು ನಮ್ಮ ಶಿಕ್ಷಣವ್ಯವಸ್ಥೆಯಲ್ಲಿ ಅವಕಾಶವಿದೆ.

* * * *

"ಕಾಲ ಬದಲಾವಣೆಯಾಗುತ್ತಿದೆ. ದಿನ ದಿನಕ್ಕೂ ಸ್ಥಿತಿಗತಿಗಳು ಬದಲಾಯಿಸುತ್ತಿವೆ. ನಮ್ಮಲ್ಲಿ ನಮ್ಮ ಪುರಾತನ ಸಂಸ್ಕೃತಿಗೆ ಗೌರವವಿಟ್ಟುಕೊಂಡಿರುವವರು ನೂತನ ಸ್ಥಿತಿಗತಿಗಳಿಗೆ ಹೊಂದಿಕೊಳ್ಳಬೇಕು. ಇಲ್ಲದಿದ್ದರೆ, ಆಧುನಿಕ ಅಭಿಪ್ರಾಯಗಳನ್ನಿಟ್ಟುಕೊಂಡಿರುವವರಿಗೂ ಇತರರಿಗೂ ಇರುವ ದೂರ ಜಾಸ್ತಿಯಾಗುವುದು. ಮಂಡಲಿಯು, ಈ ಅಂಶವನ್ನು ಜ್ಞಾಪಕದಲ್ಲಿಟ್ಟುಕೊಂಡು, ತನ್ನ ಕಾರ್ಯಕ್ರಮವನ್ನು ಮುಂದುವರಿಸಬೇಕು. ಹೀಗೆ ಮಾಡಿದರೆ ಒಂದು ದೊಡ್ಡ ಸೇವೆ ಮಾಡಿದಂತಾಗುವುದು."

ಮೇಲ್ಕಂಡ ಉಪದೇಶವು ಕಾರ್ಯಕಾರಿಯಾಗುವಂತೆ ನಮ್ಮ ಪಂಡಿತರುಗಳೆಲ್ಲರೂ ಆದಷ್ಟು ಪ್ರಯತ್ನಗಳನ್ನು ನಡೆಯಿಸಿ ದೇಶದ ಮತ್ತು ಭಾಷೆಯ ಏಳಿಗೆಗೆ ಹೆಚ್ಚಾಗಿ ಸಹಾಯಕರಾದಾರೆಂದು ನಿರೀಕ್ಷಿಸುತ್ತೇವೆ.

* 'ಪರಿಷತ್ಪತ್ರಿಕೆ', ಸಂಪುಟ ೨೧, ಸಂಚಿಕೆ ೪, ಪುಟ ೩೨೫.

**ಶ್ರೀ॥ ಬಂಕಿಮಚಂದ್ರ ಚಟರ್ಜಿಯವರ ಜನ್ಮ ಶತಮಾನೋತ್ಸವ: ಶ್ರೀ॥ ಬಿ. ವೆಂಕಟಾಚಾರ್ಯರ ಕನ್ನಡ ಸೇವೆಯ ಪ್ರಶಂಸೆ**

ಇದೇ ಜೂನ್ ತಿಂಗಳ ೩೦ನೆಯ ತಾರೀಖಿನ ದಿನ ಬಂಗಾಳ ದೇಶದ ಸುಪ್ರಸಿದ್ಧ ಕಾದಂಬರಿಕಾರರಾದ ಶ್ರೀ॥ ಬಂಕಿಮಚಂದ್ರ ಚಟರ್ಜಿಯವರ ಜನ್ಮ ಶತಮಾನೋತ್ಸವವು ಪರಿಷನ್ಮಂದಿರದಲ್ಲಿ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ವಿಶೇಷ ವಿಜೃಂಭಣೆಯಿಂದ ನಡೆಯಿತು. ಇದೇ ಸಂದರ್ಭದಲ್ಲಿ ಬಂಕಿಮಚಂದ್ರರ ಕಾದಂಬರಿಗಳನ್ನು ಕನ್ನಡಕ್ಕೆ ಪರಿವರ್ತಿಸಿ ಪ್ರಖ್ಯಾತಿಯನ್ನು ಪಡೆದಿರುವ ದಿವಂಗತ ಶ್ರೀ॥ ಬಿ. ವೆಂಕಟಾಚಾರ್ಯರ ಕನ್ನಡ ಸೇವೆಯನ್ನೂ ಪ್ರಶಂಸಿಸಲಾಯಿತು. ಸಭಾಂಗಣದಲ್ಲಿ ಈ ಉಭಯಸಾಹಿತಿಗಳ ಭಾವಚಿತ್ರಗಳೂ ಪುಷ್ಪಮಾಲೆಗಳಿಂದಲಂಕೃತವಾಗಿ ಕಂಗೊಳಿಸುತ್ತಿದ್ದುವು.

ಶ್ರೀ॥ ಬಂಕಿಮಚಂದ್ರರಿಂದ ರಚಿತವಾಗಿ ಅಖಿಲ ಭಾರತದಲ್ಲಿ ರಾಷ್ಟ್ರಗೀತೆಯಾಗಿ ಉಪಯೋಗಿಸಲ್ಪಡುತ್ತಿರುವ 'ವಂದೇ ಮಾತರಂ' ಗೀತೆಯನ್ನು ಗಮಕ ವಿದ್ವಾನ್ ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್ಯರು ಮೊದಲು ಸುಶ್ರಾವ್ಯವಾಗಿ ಹಾಡಿದರು. ಅನಂತರ 'ಬಂಕಿಮಚಂದ್ರರ ವ್ಯಕ್ತಿತ್ವ' ಎಂಬ ವಿಷಯವಾಗಿ ಶ್ರೀ॥ ವಿದ್ಯಾಭೂಷಣ ಡಿ. ಕೆ. ಭಾರದ್ವಾಜರವರೂ, 'ಭಾರತೀಯ ಸಾಹಿತ್ಯದಲ್ಲಿ ಬಂಕಿಮಚಂದ್ರರ ಸ್ಥಾನ' ಎಂಬ ವಿಷಯವಾಗಿ ಶ್ರೀ॥ ಮಾಸ್ತಿ ವೆಂಕಟೇಶಯ್ಯಂಗಾರ್ಯರೂ, 'ಬಂಕಿಮಚಂದ್ರರ ಕಾದಂಬರಿಗಳು: ಬಿ. ವೆಂಕಟಾಚಾರ್ಯರ ಭಾಷಾಂತರಗಳು ಕೆಲವು' ಎಂಬ ವಿಷಯವಾಗಿ ಶ್ರೀ॥ ಎಲ್. ಗುಂಡಪ್ಪನವರೂ, 'ಬಿ. ವೆಂಕಟಾಚಾರ್ಯರ ಜೀವನ ಮತ್ತು ಕನ್ನಡಸೇವೆ' ಎಂಬ ವಿಷಯವಾಗಿ ಅವರ ಬಂಧುವರ್ಗಕ್ಕೆ ಸೇರಿದ ಶ್ರೀಮತಿ ಎಸ್. ಶಲ್ಲಮ್ಮನವರೂ, 'ಬಂಕಿಮಚಂದ್ರರ ಆಧುನಿಕತೆ' ಎಂಬ ವಿಷಯವಾಗಿ ಶ್ರೀ॥ ಎ. ಆರ್. ಕೃಷ್ಣಶಾಸ್ತ್ರಿಗಳೂ ವಿಶೇಷ ಸ್ವಾರಸ್ಯವಾದ ಉಪನ್ಯಾಸಗಳನ್ನು ಕೊಟ್ಟರು.

ಎಲ್ಲ ಉಪನ್ಯಾಸಕರೂ ಬಂಕಿಮಚಂದ್ರರಿಂದ ವಂಗೀಯ ಸಾಹಿತ್ಯಕ್ಕೂ ವೆಂಕಟಾಚಾರ್ಯರಿಂದ ಕನ್ನಡ ಸಾಹಿತ್ಯಕ್ಕೂ ಆಗಿರುವ ಅಪಾರವಾದ ಸೇವೆಯನ್ನು ಪ್ರಶಂಸಿಸಿದುದಲ್ಲದೆ, ಈ ಉಭಯತ್ರರ ಕೃತಿಗಳಿಂದ ಸ್ವಾರಸ್ಯವಾದ ಭಾಗಗಳನ್ನು ಓದಿ ಹೇಳಿ ಸಭಿಕರ ಮನಸ್ಸನ್ನು ಒಲಿಸಿದರು. ಅಧ್ಯಕ್ಷರು ತಮ್ಮ ಉಪಸಂಹಾರ ಭಾಷಣದಲ್ಲಿ ಈ ಉಭಯಸಾಹಿತಿಗಳ ವಿಚಾರವಾಗಿ ಉಪನ್ಯಾಸಕರುಗಳು ಅಷ್ಟಣೆ ಕೊಡಿಸಿದ ವಿವರಗಳನ್ನು ಪುಷ್ಟೀಕರಿಸಿದುದಲ್ಲದೆ, ದಿವಂಗತ ಶ್ರೀ॥ ವೆಂಕಟಾಚಾರ್ಯರ ಅಂದವಾದ ಭಾವಚಿತ್ರವನ್ನು ಪರಿಷತ್ತಿಗೆ ಒದಗಿಸಿಕೊಟ್ಟು ಉಪಕಾರ ಮಾಡಿದುದಕ್ಕಾಗಿ ಶಿವಮೊಗ್ಗೆಯ ಪ್ರಸಿದ್ಧ ಅಡ್ವೊಕೇಟರಾದ ಶ್ರೀ॥ ಬಿ. ಗರುಡಾಚಾರ್ಯರಿಗೆ ಪರಿಷತ್ತಿನ ವಂದನೆಗಳನ್ನು ಸಲ್ಲಿಸಿ, ದೇಶಭಾಷೆಗಳ ಪುನರುಜ್ಜೀವನಕ್ಕೆ ಇಂಗ್ಲಿಷ್ ಭಾಷೆಯಿಂದ ಆಗಿರುವ ಮತ್ತು ಇನ್ನೂ ಆಗಬೇಕಾಗಿರುವ ಸಹಾಯವನ್ನು ಒತ್ತಿ ಹೇಳಿದರು.

ದಿವಂಗತ ಶ್ರೀ॥ ಹೊಸಕೆರೆ ಚಿದಂಬರಯ್ಯನವರ ಭಾವಚಿತ್ರದ ಅನಾವರಣ

ಕನ್ನಡದಲ್ಲಿ ಅನೇಕ ವ್ಯಾವಹಾರಿಕ, ಲೌಕಿಕ ಮತ್ತು ಧಾರ್ಮಿಕ ಗ್ರಂಥಗಳನ್ನು ರಚಿಸಿ ಪ್ರಖ್ಯಾತರಾಗಿದ್ದ ಶ್ರೀ॥ ಹೊಸಕೆರೆ ಚಿದಂಬರಯ್ಯನವರು ೧೭-೪-೧೯೩೮ರಲ್ಲಿ ದೈವಾಧೀನರಾದ ಸಂಗತಿಯನ್ನು ಈ ಪತ್ರಿಕೆಯ ಕಳೆದ ಸಂಚಿಕೆಯಲ್ಲಿ* ಸೂಚಿಸಿದ್ದುದು ಸರಿಯಷ್ಟೆ. ಇವರು ದೈವಾಧೀನರಾದ ಒಂದೆರಡು ವಾರಗಳೊಳಗಾಗಿ ನಡೆದ ವಸಂತ ಸಾಹಿತ್ಯೋತ್ಸವಕ್ಕೆ ಸಂಬಂಧಪಟ್ಟ ಲೇಖಕ ಗೋಷ್ಠಿಯಲ್ಲಿ ಇವರ ನಿಧನದಿಂದ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಉಂಟಾದ ನಷ್ಟಕ್ಕಾಗಿ ಸಂತಾಪವನ್ನು ಸೂಚಿಸಲಾಯಿತು. ಈಚಿಗೆ ಇವರ ತಮ್ಮಂದಿರಾದ ಮೈಸೂರು ಸರ್ಕಾರದ ನಿವೃತ್ತ ಅಸಿಸ್ಟೆಂಟ್ ಕಮಿಷನರ್ ಶ್ರೀ॥ ಹೊಸಕೆರೆ ನಾರಾಯಣರಾಯರು ಇವರ ಭಾವಚಿತ್ರವೊಂದನ್ನು ಪರಿಷತ್ತಿಗೆ ದಾನಕೊಟ್ಟ ಪ್ರಯುಕ್ತ ೨-೭-೧೯೩೮ರಲ್ಲಿ ಇದರ ಅನಾವರಣ ಮಹೋತ್ಸವವು ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಅತ್ಯಂತ ವಿಜೃಂಭಣೆಯಿಂದ ನೆರವೇರಿಸಲ್ಪಟ್ಟಿತು.

ಮೊದಲು ಶ್ರೀ॥ ಹೊಸಕೆರೆ ನಾರಾಯಣರಾಯರೂ, 'ಸುಬೋಧ' ಮಾಸ ಪತ್ರಿಕೆಯ ಸಂಪಾದಕರಾದ ಶ್ರೀ॥ ಎಂ. ರಾಮರಾಯರೂ ದಿವಂಗತರ ಜೀವನ ಚರಿತೆಯನ್ನೂ ಅದರಿಂದ ಕಲಿಯಬಹುದಾದ ಆದರ್ಶಗಳನ್ನೂ ಆಮೂಲಾಗ್ರವಾಗಿ ತಿಳಿಯ ಹೇಳಿದರು. ಅನಂತರ ದಿವಂಗತರ ಶಿಷ್ಯವರ್ಗಕ್ಕೆ ಸೇರಿದ ಶ್ರೀಮತಿ ಸಾವಿತ್ರಮ್ಮನವರೂ, ಗಮಕ ವಿದ್ವಾನ್ ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್ಯರೂ ದಿವಂಗತರಿಂದ ರಚಿತವಾದ ಕೆಲವು ಶ್ಲೋಕಗಳನ್ನು ಹೃದಯಂಗಮವಾಗಿ ಹಾಡಿ ತೋರಿಸಿದರು. ಅಧ್ಯಕ್ಷರೂ ಸಹ ದಿವಂಗತರ ಸರಳಜೀವನ, ಆಶಾರಾಹಿತ್ಯ, ಸಾಹಿತ್ಯ ಸೇವೆ ಮುಂತಾದ ವಿಷಯಗಳನ್ನು ಪ್ರಶಂಸೆಮಾಡಿ ಹೇಳಿ, ಅವರ ಭಾವಚಿತ್ರದ ಅನಾವರಣೋತ್ಸವವನ್ನು ನೆರವೇರಿಸಿದರು. ಅನಂತರ ಈ ಕೆಳಗೆ ಕಂಡ ಸಂತಾಪ ಸೂಚಕ ನಿರ್ಣಯವು ಸಭೆಯವರಿಂದ ಅಂಗೀಕೃತವಾಯಿತು:

"ಕನ್ನಡದಲ್ಲಿ ಅನೇಕ ಗ್ರಂಥಗಳನ್ನು ರಚಿಸಿ 'ಕರ್ನಾಟಕ ಕವಿರತ್ನ' ಎಂಬ ಬಿರುದಿನಿಂದ ಪ್ರಖ್ಯಾತರಾಗಿದ್ದ ಶ್ರೀ॥ ಹೊಸಕೆರೆ ಚಿದಂಬರಯ್ಯನವರು ತಾ॥ ೧೭-೪-೧೯೩೮ರಲ್ಲಿ ನಿಧನರಾದುದರಿಂದ ಕನ್ನಡ ಸಾಹಿತ್ಯಪ್ರಪಂಚಕ್ಕೆ ವಿಶೇಷ ನಷ್ಟವುಂಟಾಗಿದೆ. ಇದಕ್ಕಾಗಿ ಕರ್ನಾಟಕ ಸಾಹಿತ್ಯ ಪರಿಷನ್ಮಂದಿರದಲ್ಲಿ ಸೇರಿರುವ ಈ ಸಾರ್ವಜನಿಕ ಸಭೆ ತನ್ನ ಸಂತಾಪವನ್ನು ವ್ಯಕ್ತಪಡಿಸುತ್ತದೆ; ಮತ್ತು ಅವರ ಮರಣದಿಂದ ಅವರ ಬಂಧುವರ್ಗಕ್ಕೆ ಉಂಟಾಗಿರುವ ವಿಯೋಗ ದುಃಖಕ್ಕಾಗಿ ತನ್ನ ಅನುತಾಪವನ್ನು ಸೂಚಿಸುತ್ತದೆ."

* ಸಂಪುಟ ೨೩, ಸಂಚಿಕೆ ೧, ಪುಟ ೭೦-೭೧.

**ಪರಿಷತ್ಪತ್ರಿಕೆಯಲ್ಲಿ 'ಕರ್ನಾಟಕ' ಎಂಬ ರೂಪದ ಪ್ರಯೋಗ**

ಕಳೆದ ಡಿಸೆಂಬರ್ ತಿಂಗಳಿನಲ್ಲಿ ಜಮುಖಂಡಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷಪದವಿಯನ್ನಲಂಕರಿಸಿದ್ದ ಶ್ರೀ॥ ಬಿ. ವೆಂಕಟನಾರಾಯಣಪ್ಪನವರು ತಮ್ಮ ಅಧ್ಯಕ್ಷ ಭಾಷಣದಲ್ಲಿ—

"ಮಹಾರಾಷ್ಟ್ರರಂತೆ ಕನ್ನಡಿಗರಲ್ಲಿ ಒಕ್ಕಟ್ಟಿಲ್ಲ: ನಮ್ಮ ಮಾತೆಯ ಹೆಸರನ್ನು 'ಕರ್ಣಾಟಕ' ಎಂದು ಕೆಲವರೂ, 'ಕರ್ನಾಟಕ' ಎಂದು ಮತ್ತೆ ಕೆಲವರೂ ಹಠಹಿಡಿದು ಬರೆಯಲು ಸಾಧಿಸುತ್ತ ಬಂದು ಒಂದು ಶಬ್ದಕ್ಕೆ ಏಕರೂಪತೆ ಕೊಡಲು ಕೂಡ ಒಪ್ಪದ ನಾವು ಒಕ್ಕಟ್ಟಾಗುವುದು ಹೇಗೆ?"

ಎಂಬೀ ರೀತಿಯಾಗಿ ಅಪ್ಪಣೆಕೊಡಿಸಿರುವುದು ನಮ್ಮ ವಾಚಕರ ನೆನಪಿನಲ್ಲಿರ ಬಹುದು.* ಈ ರೀತಿಯ ಭಿನ್ನರೂಪಗಳನ್ನು ಏಕರೂಪಕ್ಕೆ ತರುವ ಪ್ರಯತ್ನವನ್ನು ಸಫಲಗೊಳಿಸಬೇಕೆಂಬ ಉದ್ದೇಶವು ಕೆಲವು ಕಾಲದಿಂದ ಪರಿಷತ್ತಿನ ಚಾಲಕರಲ್ಲಿ ಮೂಡಿದ್ದ ಪ್ರಯುಕ್ತ, ಪರಿಷತ್ತಿನ ಕಚೇರಿಯ ಇತ್ತೀಚಿನ ಪ್ರಕಟನೆಗಳಲ್ಲಿ 'ಕರ್ನಾಟಕ' ಎಂಬ ರೂಪವನ್ನೇ ಬಳಕೆಗೆ ತರಲಾಯಿತು. ಇದೇ ರೀತಿ ಪರಿಷತ್ಪತ್ರಿಕೆ ಯಲ್ಲಿಯೂ ಮಾರ್ಪಾಟುಮಾಡುವುದು ಆಕ್ಷೇಪಣೀಯವಾಗಲಾರದೆಂಬ ಭಾವನೆ ಯಿಂದ ಹೊಸ ವರ್ಷದ ಮೊದಲ ಸಂಚಿಕೆಯಲ್ಲಿ ಹಾಗೆ ಮಾಡಲಾಯಿತು.

ಆದರೆ ಈ ಮಾರ್ಪಾಟು ಸಂಪಾದಕ ಮಂಡಲಿಯ ಸದಸ್ಯರಾದ ಶ್ರೀ॥ ಬಿ. ವೆಂಕಟನಾರಾಯಣಪ್ಪನವರಿಗೆ ಸರಿತೋರದೆ ಹೋದ ಪ್ರಯುಕ್ತ ಅವರು ಈ ವಿಚಾರವಾಗಿ ಸಂಪಾದಕಮಂಡಲಿಯ ಅಭಿಪ್ರಾಯವನ್ನು ಪಡೆಯತಕ್ಕದ್ದು ಆವಶ್ಯಕವೆಂದು ಸೂಚಿಸಿ ನಮಗೆ ಒಂದು ಪತ್ರವನ್ನು ಬರೆದು ಕಳುಹಿಸಿದರು. ಅದ ರಂತೆ ಈ ವಿಷಯದಲ್ಲಿ ಸದರೀ ಮಂಡಲಿಯ ಸದಸ್ಯರುಗಳು ತಮ್ಮ ಅಭಿಪ್ರಾಯ ಗಳನ್ನು ಸೂಚಿಸಬೇಕೆಂದು ಪ್ರಾರ್ಥಿಸಿಕೊಳ್ಳಲಾಯಿತು. ಆದರೆ ಅವರ ಅಭಿಪ್ರಾಯ ಗಳು ಬಂದು ಅವುಗಳಮೇಲೆ ಯಾವುದೊಂದು ತೀರ್ಮಾನವಾಗುವ ವರೆಗೆ ನಿರೀಕ್ಷಿಸದೆ ಶ್ರೀ॥ ವೆಂಕಟನಾರಾಯಣಪ್ಪನವರು ಮೈಸೂರು, ಬೆಂಗಳೂರು ನಗರಗಳಲ್ಲಿ ಪಂಡಿತರ ಸಭೆಗಳನ್ನು ಸೇರಿಸಿ, ಮೇಲ್ಕಂಡ ರೂಪಗಳಲ್ಲಿ ಯಾವುದು ಸಾಧು, ಯಾವುದು ಅಸಾಧು ಎಂಬ ವಿಷಯವನ್ನು ಚರ್ಚೆಗೆ ತಂದರು. ಈ ರೀತಿ ಇವರು ಅನುಸರಿಸಿದ ಮಾರ್ಗದ ಯುಕ್ತಾಯುಕ್ತತೆಯನ್ನು ಕುರಿತು ವಿಮರ್ಶೆಮಾಡಲು ನಮಗೆ ಇಷ್ಟವಿಲ್ಲ.

ಇಷ್ಟುಮಾತ್ರ ಹೇಳಬಯಸುತ್ತೇವೆ: ಸಂಪಾದಕ ಮಂಡಲಿಯ ಸದಸ್ಯರ ಪೈಕಿ ಅಧಿಕಸಂಖ್ಯೆಯವರು 'ಕರ್ನಾಟಕ' ಎಂಬ ರೂಪದ ಪ್ರಯೋಗವನ್ನೇ ಅನುಮೋದಿಸಿರುವುದರಿಂದ ನಾವು ಕಳೆದ ಸಂಚಿಕೆಯಲ್ಲಿ ಮಾಡಿದ ಬದಲಾವಣೆ ಯನ್ನೇ ಮುಂದೆಯೂ ಅನುಸರಿಸುವ ವಿಷಯದಲ್ಲಿ ಯಾವ ಅಭ್ಯಂತರವೂ ಇರಲಾರದು. ಆದರೂ ಮೇಲೆ ಸೂಚಿಸಿದ ಎರಡು ಭಿನ್ನರೂಪಗಳಿಗೆ ಪ್ರತಿಯಾಗಿ ಉಭಯಪಕ್ಷಗಳವರಿಗೂ ನಿರಾಕ್ಷೇಪಣೀಯವಾದ 'ಕನ್ನಡ' ಎಂಬ ರೂಪವನ್ನು

* 'ಪರಿಷತ್ಪತ್ರಿಕೆ', ಸಂಪುಟ ೨೨, ಸಂಚಿಕೆ ೪, ಪುಟ ೨೪೨.

ಇನ್ನುಮುಂದೆ ಬಳಕೆಗೆ ತರುವುದು ಸರ್ವಸಮ್ಮತವಾಗಿದ್ದೀತೆಂದು ಭಾವಿಸುತ್ತೇವೆ. ಈ ವಿಚಾರದಲ್ಲಿ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಮತ್ತು ಸಕಲ ಸದಸ್ಯ ಸಭೆಯ ಅಭಿಪ್ರಾಯವನ್ನು ಪಡೆದು ಮುಂದಿನ ಕಾರ್ಯಕ್ರಮವನ್ನು ನಡಸಬಹುದು.

ಕನ್ನಡದ ಅಭಿಮಾನಿಗಳಾಗಿದ್ದ ಇಬ್ಬರು ಪ್ರಸಿದ್ಧಪುರುಷರ ಮರಣ

ಕಳೆದ ಒಂದೆರಡು ವರ್ಷಗಳಿಂದೀಚೆಗೆ ನಾಲ್ಕಾರು ಮಂದಿ ಪ್ರಸಿದ್ಧ ಕನ್ನಡ ಸಾಹಿತಿಗಳನ್ನೂ, ಅಭಿಮಾನಿಗಳನ್ನೂ ಕಳೆದುಕೊಳ್ಳುವ ದೌರ್ಭಾಗ್ಯವು ಕನ್ನಡಿಗರಿಗೆ ಪ್ರಾಪ್ತವಾದುದು ಅತ್ಯಂತ ಶೋಚನೀಯವಾದ ಸಂಗತಿಯೆಂತಲೇ ಹೇಳಬೇಕು. ೧೯೩೬ನೆಯ ಡಿಸೆಂಬರ್ ತಿಂಗಳ ೬ನೆಯ ತಾರೀಖಿನಲ್ಲಿ ಕನ್ನಡಕ್ಕೆ ಕಲಶಪ್ರಾಯರಾಗಿದ್ದ ಶ್ರೀಮಾನ್ ಆರ್. ನರಸಿಂಹಾಚಾರ್ಯರೂ, ೧೯೩೭ನೆಯ ಜೂನ್ ತಿಂಗಳ ೨೭ನೆಯ ತಾರೀಖಿನಲ್ಲಿ ಪ್ರಾಚೀನ ಕನ್ನಡ ಕಾವ್ಯಗಳ ಉದ್ಧರಣ ಕಾರ್ಯದಲ್ಲಿ ತಮ್ಮ ಜೀವನವನ್ನೇ ಧಾರೆ ಎರೆಯುತ್ತಿದ್ದ ಶ್ರೀಮಾನ್ ಎಂ. ಎ. ರಾಮಾನುಜಯ್ಯಂಗಾರ್ಯರೂ, ೧೯೩೭ನೆಯ ಅಕ್ಟೋಬರ್ ತಿಂಗಳ ೨೫ನೆಯ ತಾರೀಖಿನಲ್ಲಿ ಹಿರಿಯ ಕನ್ನಡ ಸಾಹಿತಿಗಳಲ್ಲಿ ಗಣ್ಯಸ್ಥಾನವನ್ನು ಪಡೆದಿದ್ದ ಶ್ರೀಮಾನ್ ಪಂಜೆ ಮಂಗೇಶರಾಯರೂ, ೧೯೩೮ನೆಯ ಏಪ್ರಿಲ್ ತಿಂಗಳ ೧೭ನೆಯ ತಾರೀಖಿನಲ್ಲಿ ಲೌಕಿಕ ಮತ್ತು ಪಾರಮಾರ್ಥಿಕ ವಿಷಯಗಳಿಗೆ ಸಂಬಂಧಪಟ್ಟ ಅನೇಕ ಗ್ರಂಥಗಳನ್ನು ರಚಿಸಿ ಸರಳಸ್ವಭಾವಕ್ಕೂ ಉನ್ನತ ಜೀವನಕ್ಕೂ ಆದರ್ಶ ಪುರುಷರೆಂದು ಪ್ರಖ್ಯಾತರಾಗಿದ್ದ 'ಕರ್ನಾಟಕ ಕವಿರತ್ನ' ಶ್ರೀಮಾನ್ ಹೊಸಕೆರೆ ಚಿದಂಬರಯ್ಯನವರೂ ಮೃತ್ಯುವಶರಾದುದರಿಂದ, ಕನ್ನಡ ಪ್ರಪಂಚಕ್ಕೆ ಅಪಾರವಾದ ನಷ್ಟವುಂಟಾಗಿದ್ದಿತು. ಈ ರೀತಿಯ ಅವಿಚ್ಛಿನ್ನವಾದ ನಷ್ಟಗಳಿಂದುಂಟಾಗಿದ್ದ ಪರಿತಾಪವು ಇನ್ನೂ ಆರುವುದಕ್ಕೆ ಮುಂಚೆಯೇ ಮತ್ತಿಬ್ಬರು ಕನ್ನಡದ ಅಭಿಮಾನಿಗಳಾಗಿದ್ದ ಮಹನೀಯರುಗಳು ಕಣ್ಮರೆಯಾಗಿ ನಮ್ಮನ್ನು ದುಃಖಸಾಗರದಲ್ಲಿ ಮುಳುಗಿಸಿಬಿಟ್ಟಿದ್ದಾರೆ.

(೧) ರಾಯಚೂರಿನ ಶ್ರೀಮಾನ್ ಪಿ. ಕಿಷನ್ ರಾಯರು

ಈ ಪೈಕಿ ಮೊದಲನೆಯವರಾದ ಶ್ರೀಮಾನ್ ಪಿ. ಕಿಷನ್‌ರಾಯರು ರಾಯಚೂರಿನ ಪ್ರಸಿದ್ಧ ವಕೀಲರೂ, ನಿಜಾಂ ಕರ್ನಾಟಕ ಪರಿಷತ್ತಿನ ಅಧ್ಯಕ್ಷರೂ ಆಗಿದ್ದು ಕನ್ನಡದ ಏಳಿಗೆಯ ವಿಷಯದಲ್ಲಿ ತೀವ್ರಾಸಕ್ತಿಯುಳ್ಳವರಾಗಿದ್ದರು. ಇವರು ೧೯೩೬ನೆಯ ನವಂಬರ್ ತಿಂಗಳಲ್ಲಿ ನಡೆದ ನಿಜಾಂ ಕರ್ನಾಟಕ ಪರಿಷತ್ತಿನ ಮೊದಲನೆಯ ಅಧಿವೇಶನದಲ್ಲಿ ಅಧ್ಯಕ್ಷತೆಯನ್ನು ವಹಿಸಿದ್ದು ಉಜ್ವಲವೂ, ಸ್ಫೂರ್ತಿದಾಯಕವೂ ಆದ ಭಾಷಣವನ್ನು ಅಪ್ಪಣೆಕೊಡಿಸಿದ್ದರೆಂಬುದು ನಮ್ಮ ವಾಚಕರ ನೆನಪಿನಲ್ಲಿರಬಹುದು.* ಆ ಭಾಷಣದ ಕೊನೆಯ ವಾಕ್ಯಗಳನ್ನು (ಈ ಕೆಳಗೆ ಕೊಟ್ಟಿರುವುದನ್ನು) ನೋಡಿದರೆ ಕನ್ನಡವು ಮುಂದಕ್ಕೆ

* 'ಪರಿಷತ್ಪತ್ರಿಕೆ', ಸಂಪುಟ ೨೧, ಸಂಚಿಕೆ ೪, ಪುಟಗಳು ೩೧೪–೩೨೧.

ಬರಬೇಕೆಂಬ ವಿಚಾರವಾಗಿ ಅವರಿಗೆ ಎಷ್ಟು ನಿಕಟವಾದ ಅಭಿಮಾನವಿತ್ತೆಂಬುವುದು ಸರ್ವರಿಗೂ ವಿದಿತವಾಗುವುದರಲ್ಲಿ ಸಂಶಯವಿರಲಾರದು :

"ಇದೆಲ್ಲ ಕೆಲಸವಾಗಲು ಹಳ್ಳಿ ಹಳ್ಳಿಗೂ ಹೊಸ ಬೆಳಕು ಬರಬೇಕು. ತರುಣರ ಗುಂಪುಗಳಾಗಬೇಕು. ದಕ್ಷತೆಯಿಂದ ಕೆಲಸಮಾಡಬಲ್ಲ ಕಾರ್ಯಕರ್ತರು ಮುಂದೆ ಬರಬೇಕು. ಕನ್ನಡದ ಹೆಗ್ಗುರಿ ಹೆಮ್ಮೆ ನಗಳು ಕಣ್ಣಿಗೆ ಕಟ್ಟಬೇಕು. ಮೈಮನಗಳನ್ನು ಕನ್ನಡದೇವಿಯ ಊಳಿಗದಲ್ಲಿ ಸವೆಯಿಸಲು ಸಿದ್ಧರಾದ ಸ್ವಯಂಸೇವಕರು ಬೇಕು. ಎಲ್ಲಕ್ಕೂ ಮಿಗಿಲಾಗಿ ಜನರ ಉದಾರ ಸಹಾಯ ಬೇಕು. ಮಳೆಗರೆಯದೆ ಬೆಳೆ ಬರುವುದಿಲ್ಲ. ಬರದ ತಾಯ್ಮನೆಯಾದ ನಮ್ಮ ನಾಡಿಗೆ ಇದು ಗೊತ್ತಿದ್ದ ಮಾತು. ತನುಮನಗಳಿಂದ ದುಡಿವ ದೈವ ಕೆಲವರದಾದರೆ, ಧನವರ್ಷಿಸಿ ತಣಿವ ಭಾಗ್ಯ ಕೆಲವರದು. ನಮ್ಮಲ್ಲಿ ಎರಡೂ ತೆರದ ಯೋಗ್ಯತೆಯ ಜನರಿದ್ದಾರೆ. ಅವರಿಗೆ ನನ್ನ ಪ್ರಾರ್ಥನೆ ಏನೆಂದರೆ: ನಿಮ್ಮ ಶಕ್ತಿಸರ್ವಸ್ವವೂ ಕನ್ನಡದೇವಿಯಡಿದಾವರೆಗೆ ಮೀಸಲಾಗಲಿ, ಮುಡುಪಾಗಲಿ."

ಇಂತಹ ಮಹನೀಯರ ಮರಣದಿಂದ ಕನ್ನಡ ನಾಡಿಗೆ ಉಂಟಾದ ನಷ್ಟವನ್ನು ಕುರಿತು ಪ್ರಸ್ತಾವಿಸಿ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ ೨೩–೭–೧೯೩೮ರಲ್ಲಿ ಸೇರಿದ್ದ ಸಭೆಯಲ್ಲಿ ತನ್ನ ಸಂತಾಪವನ್ನು ವ್ಯಕ್ತಪಡಿಸಿ, ಅವರ ಮರಣದಿಂದ ಉಂಟಾಗಿರುವ ವಿಯೋಗ ದುಃಖಕ್ಕಾಗಿ ಅವರ ಬಂಧುವರ್ಗಕ್ಕೆ ತನ್ನ ಅನುತಾಪವನ್ನು ತಿಳಿಯಪಡಿಸಬೇಕೆಂಬ ನಿರ್ಣಯವನ್ನು ಸರ್ವಾನುಮತದಿಂದ ಅಂಗೀಕರಿಸಿತು.

**(೨) ಬೆಂಗಳೂರಿನ ಶ್ರೀಮಾನ್ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟರವರು**

ಮೇಲ್ಕಂಡ ಮಹನೀಯರು ಮೃತಿಹೊಂದಿದ ಅತ್ಯಲ್ಪಕಾಲದಲ್ಲಿಯೇ ಶ್ರೀಮಾನ್ ರಾಜಸಭಾಭೂಷಣ ದಿವಾನ್ ಬಹದ್ದೂರ್ ಡಾಕ್ಟರ್ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟರವರು ದೇಶಸೇವೆ, ಭಾಷಾಸೇವೆ, ದಾನಶೀಲತೆ ಮುಂತಾದುವುಗಳಲ್ಲಿ ಇಡೀ ಕರ್ನಾಟಕಕ್ಕೇ ಆದರ್ಶಪ್ರಾಯರಾಗಿದ್ದು ಮೈಸೂರು ಸಂಸ್ಥಾನದ ಪ್ರಜೆಗಳ ಮೇಲ್ಮೆಗಾಗಿ ರಾಜಕೀಯ ಮತ್ತು ಸಾರ್ವಜನಿಕ ಕ್ಷೇತ್ರಗಳಲ್ಲಿ ದೀರ್ಘಕಾಲ ಅವಿಶ್ರಾಂತರಾಗಿ ದುಡಿದು ಶ್ರೀಮನ್ಮಹಾರಾಜರವರಿಂದಲೂ, ವಿಶ್ವವಿದ್ಯಾನಿಲಯದಿಂದಲೂ, ಸಾರ್ವಭೌಮ ಸರ್ಕಾರದವರಿಂದಲೂ ಘನತರವಾದ ಪ್ರಶಸ್ತಿಗಳನ್ನು ಪಡೆದವರಾಗಿ, ಕನ್ನಡ ನಾಡಿನ ವೃದ್ಧಪಿತಾಮಹರೆನಿಸಿ, ಪೂರ್ಣಯಶೋವಂತರಾಗಿ ಬಾಳಿ, ೨೩–೭–೧೯೩೮ರಲ್ಲಿ ತಮ್ಮ ೮೨ನೆಯ ವಯಸ್ಸಿನಲ್ಲಿ ಇಹಲೋಕವ್ಯಾಪಾರವನ್ನು ತ್ಯಜಿಸಿದುದರಿಂದ ಕನ್ನಡಿಗರಿಗೆ ಉಂಟಾಗಿರುವ ನಷ್ಟವು ಅಷ್ಟಿಷ್ಟೆಂದು ಹೇಳತೀರದು.

ಇವರು ನಮ್ಮ ಪರಿಷತ್ತಿನ ಸಹಾಯಕವರ್ಗದ ಸದಸ್ಯರಾಗಿದ್ದುದಲ್ಲದೆ, ಪರಿಷತ್ತು ಸ್ಥಾಪಿತವಾದಾಗಿನಿಂದ ಅದರ ಏಳಿಗೆಯಲ್ಲಿ ಉತ್ಸುಕತೆಯನ್ನು ಪ್ರದರ್ಶಿಸುತ್ತಾ ಬಂದಿರುತ್ತಾರೆ. ೧೯೨೧ನೆಯ ಇಸವಿ ಮೇ ತಿಂಗಳಲ್ಲಿ ನಡೆದ ಪರಿಷತ್ತಿನ ಏಳನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದು ವಿಚಾರಪೂರ್ಣವಾದ ಭಾಷಣವನ್ನು ಮಾಡಿ ಕನ್ನಡದಮೇಲೆ ತಮಗಿರುವ ನಿಕಟವಾದ ಅಭಿಮಾನವನ್ನು

ವ್ಯಕ್ತಪಡಿಸಿದರು. ಅಲ್ಲದೆ, ಈಚೆಗೆ ೧೯೩೬ನೆಯ ಇಸವಿಯ ಏಪ್ರಿಲ್ ತಿಂಗಳಲ್ಲಿ ನಡೆದ ಪರಿಷತ್ತಿನ ಮೂರನೆಯ ವಿಶೇಷ ಸಾಹಿತ್ಯೋತ್ಸವವನ್ನು ಪ್ರಾರಂಭಗೊಳಿಸಿ, ಪರಿಷತ್ತಿನ ಕಾರ್ಯಕಲಾಪಗಳ ವಿಷಯದಲ್ಲಿ ತಮಗಿರುವ ಸಹಾನುಭೂತಿಯನ್ನೂ, ಆದರಾತಿಶಯವನ್ನೂ ಪ್ರಕಟಪಡಿಸಿದರು. ಇಷ್ಟೇ ಅಲ್ಲದೆ ಪರಿಷತ್ತಿನಲ್ಲಿ ಆಗಿಂದಾಗ ನಡೆಯುತ್ತಿದ್ದ ಉತ್ಸವ ಸಮಾರಂಭಗಳಿಗೆಲ್ಲ ಉದಾರವಾಗಿ ದ್ರವ್ಯಸಹಾಯಮಾಡಿ ಪರಿಷತ್ತಿನಮೇಲೆ ತಮಗಿರುವ ಪ್ರೇಮವನ್ನು ವ್ಯಕ್ತಪಡಿಸುತ್ತಾ ಬಂದಿದ್ದಾರೆ. ಇವೆಲ್ಲಕ್ಕಿಂತ ಮಿಗಿಲಾಗಿ ಕನ್ನಡ ಭಾಷೆಯ ಮೂಲಕ ಹಳ್ಳಿಗಾಡಿನ ಜನರಲ್ಲಿ ಜ್ಞಾನ ಪ್ರಸಾರಣೆ ಮಾಡಿಸಬೇಕೆಂಬ ಸದುದ್ದೇಶದಿಂದ, ಮೈಸೂರು ವಿಶ್ವವಿದ್ಯಾನಿಲಯಕ್ಕೆ ೨೦ ಸಾವಿರ ರೂಪಾಯಿಗಳ ಶಾಶ್ವತನಿಧಿಯನ್ನು ಒಪ್ಪಿಸಿ ಕನ್ನಡದ ಏಳಿಗೆಗೆ ನವೀನ ಮಾರ್ಗವೊಂದನ್ನು ತೋರಿಸಿಕೊಟ್ಟರುತ್ತಾರೆ.

ಈ ಮಹನೀಯರು ಮಾಡಿರುವ ಇತರ ಉದಾರ ದಾನಧರ್ಮಗಳನ್ನೂ, ರಾಜಕೀಯ ಮತ್ತು ಸಾರ್ವಜನಿಕ ಸೇವೆಗಳನ್ನೂ ಕುರಿತು ವಿವರವಾಗಿ ಪ್ರಸ್ತಾವಿಸಬೇಕಾದರೆ ಒಂದು ಚರಿತ್ರೆಯ ಸಂಪುಟವನ್ನೇ ಬರೆಯಬೇಕಾಗಬಹುದು: ಅಂತಹ ಮಹಾಪ್ರಯತ್ನಕ್ಕೆ ನಾವು ಈಗ ಕೈಹಚ್ಚುವ ಅವಶ್ಯವಿರುವುದಿಲ್ಲ; ಏಕೆಂದರೆ ಇವೆಲ್ಲವೂ ಜನಜನಿತವಾಗಿ ಸರ್ವರಿಗೂ ತಿಳಿದ ವಿಷಯಗಳೇ ಆಗಿರುತ್ತವೆ. ಇಷ್ಟು ಮಾತ್ರ ನಾವು ಇಲ್ಲಿ ಹೇಳಬಹುದು: ಪ್ರಜಾಕ್ಷೇಮಕ್ಕೂ, ಸಮಾಜಸಂಸ್ಕರಣೆಗೂ ಸಂಬಂಧಪಟ್ಟ ಸಮಸ್ತ ಮುಖ್ಯ ಸಂಸ್ಥೆಗಳಲ್ಲಿಯೂ ಇವರು ಮುಖ್ಯಚಾಲಕರಾಗಿದ್ದುಕೊಂಡು ಮಾರ್ಗದರ್ಶಕರಾಗಿರುವುದೆಂದರೆ ಸಾಮಾನ್ಯವಾದ ಕಾರ್ಯವೆಂದು ಭಾವಿಸಲಾಗುವುದಿಲ್ಲ. ಅಲ್ಲದೆ ಲೋಕಸೇವೆಗಾಗಿ ಸುಮಾರು ಮೂರು–ನಾಲ್ಕುಲಕ್ಷ ರೂಪಾಯಿಗಳಷ್ಟು ದ್ರವ್ಯವನ್ನು ಪತ್ನೀ ಪುತ್ರ ಪೌತ್ರಾದಿ ಬಂಧುವರ್ಗದವರಿದ್ದರೂ ನಿರ್ಮಮಕಾರ ಬುದ್ಧಿಯಿಂದ ದತ್ತಿಯಾಗಿ ಕೊಡುವುದೆಂದರೆ ಇವರ ಧರ್ಮಗುಣವು ಎಷ್ಟು ಉದಾತ್ತವಾದುದೆಂದು ಹೇಳಬೇಕು! ಪಾರ್ಥಿವಶರೀರವನ್ನು ಇವರು ತ್ಯಜಿಸಿದ್ದರೂ ಕೂಡ ಇವರಿಗೆ ಉತ್ತಮಲೋಕಪ್ರಾಪ್ತಿಯಾಗಿರುವುದರಲ್ಲಿ ಸಂಶಯವಿರಲಾರದು; ಅಲ್ಲದೆ ಇವರ ಕೀರ್ತಿಯು ಆಚಂದ್ರಾರ್ಕವಾಗಿ ನೆಲಸಿರುವುದರಲ್ಲಿಯೂ ಸಹ ಯಾವ ಸಂಶಯವೂ ಇರಲಾರದು.

ಇಂತಹ ಮಹನೀಯರ ಮರಣದ ದುಃಖವಾರ್ತೆಯು ೨೩–೬–೧೯೩೮ ರ ಸಾಯಂಕಾಲ ೬ ಘಂಟೆಗೆ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಅಧಿವೇಶನ ಪ್ರಾರಂಭವಾಗುವ ಸಮಯದಲ್ಲಿ ತಿಳಿಯಲಾಗಿ ಆ ಕೂಡಲೆ ಸದರೀ ಮಂಡಲಿ ತನ್ನ ಸಂತಾಪವನ್ನು ಸೂಚಿಸಿ ಆ ಅಧಿವೇಶನವನ್ನು ಮುಂದುವರಿಸಿತು. ಕ್ಷಿಪ್ರದಲ್ಲಿಯೇ ಪರಿಷತ್ತಿನ ಪರವಾಗಿ ಸಂತಾಪಸೂಚಕ ಸಭೆಯನ್ನು ನಡಸುವ ಏರ್ಪಾಡು ಮಾಡಲಾಗುತ್ತದೆ. ಅಷ್ಟರೊಳಗಾಗಿ ನಾವು ತಮ್ಮ ಪತಿವರ್ಯರಂತೆಯೇ ಪರಿಷತ್ತಿನ ವಿಷಯವಾಗಿ ಕೇವಲ ಪ್ರೇಮಾದರಗಳನ್ನು ಪ್ರದರ್ಶಿಸುತ್ತಿರುವ ಶ್ರೀಮತಿ ಲೇಡಿ ಪುಟ್ಟಣ್ಣಶೆಟ್ಟರವರಿಗೂ, ಇತರ ಬಂಧುವರ್ಗದವರಿಗೂ ಪರಿಷತ್ತಿನ ಸಹಜವಾದ ಅನುತಾಪವನ್ನು ಈ ಮೂಲಕ ತಿಳಿಸಲಪೇಕ್ಷಿಸುತ್ತೇವೆ.

# ಪ್ರಾಚ್ಯ ಲೇಖನ ಮಾಲೆ

---

**The Indian Historical Quarterly, Vol. 14, No. 1, March 1938**

1. "Symbolism of the Dome"—Dr. Ananda K. Coomaraswamy.
2. "On the Immediate Source of the *Kathāsaritsāgara*"—Mr. S. Rangachar, M.A.

   [The author of this article subscribes to the opinion of some scholars that the *Kathāsaritsāgara* of Sómadéva (1070 A.D.) and the *Brihatkathāmanjari* of Kṣéméndra, two of the three versions of the *Brihatkathā* of Guṇādhya in the Paiṣāċi language, are to be traced to different sources as against the generally accepted opinion that the immediate source of both the *Kathāsaritsāgara* and the *Brihatkathāmanjari* was the same.]
3. "Some Folk Goddesses of Ancient and Mediæval India"—Mr. Jitendra Nath Banerjea, M.A.

**Journal of the Annamalai University, Vol. 7, No. 2, March 1938**

1. "Some Facts and Fables about Karikālan the Great"—Mr. S. S. Bharati, M.A., B.L.
2. "The Passive Voice in Tamil"—Mr. A. Chidambaranatha Chettiyar, M.A.

3-4. "Vijayīndra Tīrtha"; "Post-Jaya Tīrtha Writers"—Mr. B. N. Krishnamurti Sarma, B.A.

5. "'Siddhitraya' of Yāmunachārya"—Edited with English Translation and Notes by Mr. R. Ramanujachari and Mr. K. Srinivasachari.

**The Quarterly Journal of the Mythic Society, Vol. 28, No. 3**

1. "A Proto-Indian Sign from Vala"—Rev. H. Heras, S.J., M.A.
2. "The Language of Tiruvaḷḷuvar's *Kuṛaḷ*"—Mr. L. V. Ramaswamy Iyer, M.A., B.L.

**The Journal of Oriental Research, Vol. 11, Parts 3 & 4, July-December 1937**

1. "The Extent and Influence of the Indus Civilization"—Mr. P. Joseph, B.A.
2. "The Languages of *Kalittogai*"—Mr. L. V. Ramaswamy Iyer, M.A. B.L.
3. "The Number of Rasas" (continued from the previous issue and concluded)—Dr. V. Raghavan, M.A., Ph.D.
4. "A Note on the Scientific Status of Linguistics"—Mr. C. R. Sankaran, M.A.
5. "History of Pūrvamīmāmsa Literature" (Supplement: pp. 1-16)—Dr. T. R. Chintamani, M.A., Ph.D.

**The Journal of Oriental Research, Vol. 12, Part 1, January-March 1938**

1. "The Founder of Vijayanagara before the Foundation of the City"—Dr. N. Venkataramanayya, M.A., Ph.D.
2. "Poetry and Rasa"—Dr. A. Sankaran, M.A., Ph.D.
3. "The Yadavas of Devagiri" (Chronology)—Dr. P. Srinivasachar M.A., Ph.D. (Lond.).
4. "Greater Gita"—Dr. V. Raghavan, M.A., Ph.D.

**Journal of Indian History, Vol. 16, Part 3, December 1937**

1. "The Longest Mohenjo Daro Epigraph"—Rev. H. Heras, S.J., M.A.

   [The author deciphers a Mohenjo Daro inscription, containing 25 signs on a small prismatic object, and it is said to be the longest of all the inscriptions hitherto discovered.]

2. "The Early Rāshtrakūtas of the Deccan and the Present Mysore State"—Sahityacharya Pandit Bisheshwar Nath Reu.

   [The author adduces some inscriptional evidences to show that the larger part of the present Mysore State remained, for about 225 years (from 753 A.D. to 982 A.D.), under the direct or indirect influence of the early Rāshtrakūtas of the Deccan.]

**Journal of Indian History, Vol. 17, Part 1, April 1938**

1. "Women during the Rāmāyaṇa Period"—Miss P. C. Dharma, M.A.

**The Jaina Antiquary, Vol. 4, No. 1, June 1938**

1. "Vādi Vidyānanda: A Renowned Jaina Guru of Karnātaka"—Dr. B. A. Saletore, M.A., Ph.D.

   [Some facts regarding name, lineage, qualifications, achievements and date of Vādi Vidyānanda, who is said to be the most conspicuous of the Jaina Gurus in the Vijayanagara age, as ascertained from a stone inscription found in the Padmāvathi basadi at Humacca, Nagara Taluk, Mysore State, are related. Vādi Vidyānanda is assigned to the period 1502–1530 A.D.]

**Journal of the University of Bombay, Vol. 6, No. 4, January 1938**

1. "Dress in Mohenjo Daro"—Mr. P. Joseph.

**Indian Culture, Vol. 4, No. 3, January 1938**

1. "India between the Cultures"—Mr. O. Stein.

**Journal of the K. R. Cama Oriental Institute, No. 32, 1938**

1. "(I) The Glory of Zarathushtra's Holy Faith as Preached by Himself and His Successors; (II, III) God in the Avesta: The Philosophic Aspect; (IV) Man in the Avesta: Its Treatment of Spiritual Ontology; (V) The Soul's Brilliant and Happy Future and the Subjugation of Evil"—Government Research Fellowship Lectures Delivered by Mr. Sohrab J. Bulsara in 1935.

**Journal of the Andhra Historical Research Society, Vol. 11, Parts 1 & 2, July–October 1937**

1. "Authorship and the Date of the *Mṛcchakaṭika*"—Mr. A. D. Pusalker, M.A., Ph.D.

   [The author of this article agrees with the conclusion of Dr. V. G. Paranjape that Simuka or Śūdraka, the founder of the Andhrabhṛtya dynasty, is the author of the *Mṛcchakaṭika*, and places the work in 3rd–2nd Century B.C.]

**The Indian P.E.N., Vol. 4, No. 2, February 1938**

1. "The Five Major Tamil Epics. (Part II): *Maṇimēkhalai*"—Dewan Bahadur K. S. Ramaswami Sastri.

**Annals of the Bhandarkar Oriental Research Institute, Vol. 19, Part 1, October 1937**

1. " Influence of the *Mahābhārata* on Hindu Social Life"— Sankaracharya.
2. " The Indian Conception of Values "—Prof. M. Hiriyanna, M.A.
3. " Some Minor Purāṇas "—Dr. Rajendra Chandra Hazra.
4. " Note on Rāvaṇā's Lanka located in Central India "—Mr. J. C. Ghosh.

**Bulletin of the School of Oriental Studies, Vol. 9, Part 2**

" Śātavāhana and Śātakarṇi "—Mr. L. D. Barnett.
[A study of the two expressions along with their cognate forms shows that they are not borrowings from Munda and Śāta is a proper name, *Karṇi* signifying a ' son '.]

**Journal of the Benares Hindu University, Vol. 2, No. 1**

1. " The Story of Two Mohenjo Daro Signs "—Rev. H. Heras, S.J., M.A.
[Two signs found in the Mohenjo Daro inscriptions have been compared with the signs of the Proto-Chinese and the Hittite scripts, and their transformations discussed. The course of development of these signs settles, according to the writer, the priority of the Mohenjo Daro Script over the Proto-Chinese and the Hittite scripts.]
2. " The Origin of the Mohenjo Darians "—Rev. H. Heras, S.J., M.A.
[The writer inclines to the view that the people of Mohenjo Daro were Dravidians.]
3. " The Dévīchandragupta "—Dr. V. Raghavan.
[The contents of the Drama *Dévīchandragupta* which depicts the life of Chandragupta II have been analysed in the light of historical evidences which suggest that Chandragupta killed his elder brother Rāmagupta and married his wife. The author of the Drama is conjectured to have been Viṣākhadéva identified with Viṣākhadatta, the author of *Mudrārākshasa*.]
4. " Social India as depicted by Kālidāsa "—Mr. Bhagawat Saran Upadhyaya.

**Journal of the Bihar and Orissa Research Society, Vol. 23, Part 4, December 1937**

1. " A Proto-Indian Icon "—Rev. H. Heras, S.J., M.A.
[A block of black stone roughly carved into human shape with four inscriptions incised into the lower part of the image has been described. The characters used in the inscriptions are of the Mohenjo Daro type which have been read as containing references to a king bearing royal title of *Mohenjo Daro*. The end of the 5th millennium B.C. has been suggested as the probable date of this statue.]

**Journal of the Bihar and Orissa Research Society, Vol. 24, Parts 1 & 2, March–June, 1938**

1. "Pre-Dravidian, Proto-Dravidian and Dravidian "—Rao Saheb C. S. Srinivasachari, M.A.

**The Poona Orientalist, Vol. 3, No. 1, April 1938**

" Uṣṇīṣa and Chatra "—Dr. Ananda K. Coomaraswamy.

**Triveni, Vol. 10, No. 10, April 1938**

1. " Trends in Modern Telugu Poetry "—Mr. G. Sivasankar Sastri.
2. " Art and Education "—Mr. Alex Elmore.

**Triveni, Vol. 10, No. 11, May 1938**

" Tullalas of Kerala "—Mr. C. K. Vydianathan.

**Triveni, Vol. 10, No. 12, June 1938**

" Towards a National Theatre "—Mr. Alex Elmore.

**ಜಯಕರ್ನಾಟಕ—ಸಂಪುಟ ೧೬, ಸಂಚಿಕೆ ೪; ಏಪ್ರಿಲ್ ೧೯೩೮**

೧. 'ಗದಾಯುದ್ಧ' ದ ರನ್ನನ ಕಾಲನಿರ್ಣಯದ ಶಾಸ್ತ್ರೀಯ ರೀತಿ
—ಶ್ರೀ|| ನಾ. ಶ್ರೀ. ರಾಜಪುರೋಹಿತರು

['ಗದಾಯುದ್ಧ' ದಲ್ಲಿಯ "ಶಕ ಸಮಗತಿಖಚತು ಯುಗ ಶಶಿನಿಕರಾಂಕಂ" ಎಂಬ ಪದ್ಯಭಾಗಕ್ಕೆ ಕೆಲವು ಪಂಡಿತರು ಭ್ರಮದಿಂದ ಅರ್ಥಹೇಳಿ ರನ್ನನ ಕಾಲನಿರ್ಣಯ ಮಾಡಿರುವುದನ್ನು ಅಶಾಸ್ತ್ರೀಯವೆಂದು ಹೇಳಿ ಶಾಸ್ತ್ರೀಯರೀತಿ ಹೇಗಿರಬೇಕೆಂಬುದನ್ನು ಲೇಖಕರು ವಿವರಿಸಿದ್ದಾರೆ.]

೨. ಇಂದಿನ ಉಭಯ-ಭಾಷಾ-ಚಕ್ರವರ್ತಿಗಳು
—ಶ್ರೀ|| ಜೋಶಿ ಶಂಕರರಾಯರು

**ಜಯಕರ್ನಾಟಕ—ಸಂಪುಟ ೧೬, ಸಂಚಿಕೆ ೫; ಮೇ ೧೯೩೮**

ಮಹಾದೇವಿಯಕ್ಕನ ಜೀವನ ಕಾವ್ಯ
—ಶ್ರೀಮನ್ನಿರಂಜನ ಮಹಾದೇವಸ್ವಾಮಿಗಳವರು

**ಜಯಕರ್ನಾಟಕ—ಸಂಪುಟ ೧೬, ಸಂಚಿಕೆ ೬; ಜೂನ್ ೧೯೩೮**

ಬಸವಣ್ಣನವರ ಬೆಳವಳಿಗೆ—ಶ್ರೀ|| ಅ. ನ. ಕೃಷ್ಣರಾಯರು

**ಶಿವಾನುಭವ—ಸಂಪುಟ ೧೨, ಸಂಚಿಕೆ ೬; ಮಾರ್ಚಿ ೧೯೩೮**

೧. ಮಹಾದೇವಿಯಕ್ಕಗಳ ಮದುವೆ (ಲೇಖಾಂಕ ೩)
—ಶ್ರೀ|| ಸ. ಹಾ. ಶಿವಮೂರ್ತಿಗಳು
೨. ವೀರಶೈವ ಕವಿಗಳ ವೈಶಿಷ್ಟ್ಯ—ಶ್ರೀ|| ಚಂದ್ರಶೇಖರ ದೇವರು ಅಡ್ನೂರು
೩. ವಚನಕಾರರ ರಾಷ್ಟ್ರಭಾವನೆ—ಶ್ರೀ|| ಸದಾಶಿವಪ್ಪ ತೆನಿಹಳ್ಳಿ
೪. ಚಂದಿಮರಸನ ವಚನಗಳು (ಪು. ೧೮–೩೨)

**ಶಿವಾನುಭವ—ಸಂಪುಟ ೧೨, ಸಂಚಿಕೆ ೭; ಏಪ್ರಿಲ್ ೧೯೩೮**

೧. ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಚರಿತ್ರೆ
—ರಾವ್‌ಸಾಹೆಬ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ.
೨. ಬಸವೇಶ್ವರನ ಘನತೆ—ಶ್ರೀ|| ಎಸ್. ವಿ. ಹಂಜಿ, ಬಿ.ಎ.
೩. ಶಿವಶರಣೆ ಲಿಂಗಮ್ಮ—ರಾವ್‌ಸಾಹೆಬ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ
೪. ಚಂದಿಮರಸನ ವಚನಗಳು ಮತ್ತು ಅರುವಿನ ಮಾರಿತಂದೆಗಳ ವಚನಗಳು (ಪು. ೩೩–೪೮)

**ಸುಬೋಧ—ಸಂಪುಟ ೧೩, ಸಂಚಿಕೆ ೩; ಮಾರ್ಚಿ ೧೯೩೮**

ಕರ್ನಾಟಕದ ದೇವಾಲಯಗಳು—ಶ್ರೀ॥ ಸಿ. ಬಿ. ಸೀತಾರಾಂ

**ಸುಬೋಧ—ಸಂಪುಟ ೧೩, ಸಂಚಿಕೆ ೬; ಜೂನ್ ೧೯೩೮**

೧. ಜೈನ ಗೋತ್ರ—ಶ್ರೀ॥ ಕೆ. ಭುಜಬಲಿ ಶಾಸ್ತ್ರಿಗಳು

['ಜೈನಗೋತ್ರ' ದ ಪ್ರಾಚೀನತೆಯನ್ನು ಕುರಿತು ಪ್ರಸ್ತಾವಿಸಿದ್ದಾರೆ.]

೨. 'ರಸ'ವೆಂದರೇನು?—ಶ್ರೀ॥ ಎಂ. ಎಸ್. ಜೋಶಿ

**ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ—ಸಂಪುಟ ೨೬, ಸಂಚಿಕೆ ೫**

೧. అమరసింహుడు—నామలింగానుశాసనము

—శ్రీ॥ ఈయుణ్ణి వేంకటవీరరాఘవాచార్యులుగారు, ఎం.ఎ.

೨. శ్రీ జయదేవ కవి—శ్రీ॥ వింజమూరి వరహానరసింహాచార్యులు గారు, ఎం.ఎ.

———

729—38.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# ಕರ್ನಾಟಕ ಸಾಹಿತ್ಯ ಪರಿಷತ್ತು

## ೨೪ ನೆಯ ಸಕಲ ಸದಸ್ಯ ಅಧಿವೇಶನ

(ವಾರ್ಷಿಕ)

ಜಮಖಂಡಿ, ೩೦ನೆಯ ಡಿಸೆಂಬರ್ ೧೯೩೭

---

ಕರ್ನಾಟಕ ಸಾಹಿತ್ಯ ಪರಿಷತ್ತಿನ ಇಪ್ಪತ್ತೆರಡನೆಯ ವಾರ್ಷಿಕಾಧಿವೇಶನವು ಜಮಖಂಡಿ ಪಟ್ಟಣದಲ್ಲಿ ಸಮ್ಮೇಳನಾಧ್ಯಕ್ಷರ ಬಿಡಾರದಲ್ಲಿ ೧೯೩೭ನೆಯ ಡಿಸೆಂಬರ್ ೩೦ನೆಯ ತಾರೀಖು ಗುರುವಾರ ಬೆಳಗ್ಗೆ ೮॥ ಘಂಟೆಗೆ ಪ್ರಾರಂಭವಾಯಿತು. ಪರಿಷದುಪಾಧ್ಯಕ್ಷರಾಗಿದ್ದ ಶ್ರೀ॥ ಡಿ. ವಿ. ಗುಂಡಪ್ಪನವರು ಸಭಾಪತಿಗಳಾಗಿದ್ದರು.

ಅಧಿವೇಶನಕ್ಕೆ ಬಂದಿದ್ದ ಸದಸ್ಯರ ಸಂಖ್ಯೆ ೩೧; ಅಂಗಸಂಸ್ಥಾಪ್ರತಿನಿಧಿಗಳು ೪. ಹೆಸರುಗಳು :—

(೧) ಶ್ರೀಮತಿ ಕಲ್ಯಾಣಮ್ಮನವರು, ಆರ್.

ಶ್ರೀ॥ ಗಳಾದ—

(೨) ಕೃಷ್ಣರಾಯರು, ಅ. ನ.
(೩) ಕುಂದಣಗಾರರು, ಕೆ. ಜಿ.—ಎಂ. ಎ.
(೪) ಗುಂಡಪ್ಪನವರು, ಡಿ. ವಿ.
(೫) ಗೋವಿಂದರಾಮಾಚಾರ್ಯರು,
ಎಂ. ಎ., ಎಲ್‌ಎಲ್. ಬಿ.
(೬) ಜಂಗಿನ ಮುರಿಗೆಯ್ಯನವರು.
(೭) ತಾಂದೋಣಿರಾಯರು, ಎ.
—ಎಲ್. ಸಿ. ಇ., ಎಂ. ಐ. ಇ.
(೮) ನರಸಿಂಹಮೂರ್ತಿಯವರು, ಎಂ.
—ಬಿ. ಎ.
(೯) ನಾರಾಯಣರಾಯರು, ಎಂ. ಎನ್.
—ಬಿ. ಎ., ಎಲ್‌ಎಲ್. ಬಿ.
(೧೦) ನಾಯಕರು, ವಿ. ಬಿ.
—ಎಂ. ಎ., ಎಲ್‌ಎಲ್. ಬಿ.
(೧೧) ಪಂಡಿತರು, ವಿ. ಎಸ್.
—ಬಿ. ಎ., ಎಲ್‌ಎಲ್. ಬಿ.
(೧೨) ಪೋತದಾರರು, ಎಸ್. ಆರ್.
(೧೩) ಶ್ರೀ ಬಸವಲಿಂಗ ಸ್ವಾಮಿಗಳು.

ಶ್ರೀ॥ ಗಳಾದ—

(೧೪) ಚಿಟಗೇರಿಯವರು, ಬಿ.ಎಸ್.
(೧೫) ಬೇಂದ್ರೆಯವರು, ದ. ರಾ.—ಎಂ. ಎ.
(೧೬) ಮುಗಳಿ, ರಂ. ಶ್ರೀ.
—ಎಂ. ಎ., ಬಿ. ಟಿ.
(೧೭) ರಂಗಣ್ಣನವರು, ಎಸ್. ವಿ.
—ಎಂ. ಎ.
(೧೮) ರಂಗಪ್ಪ ಭೀಮಪ್ಪ ಪೋತ್ದಾರರು.
(೧೯) ರಾಮಚಂದ್ರರಾಯರು ಸಾಲಿ.
(೨೦) ವೆಂಕಟನಾರಾಯಣಪ್ಪನವರು, ಬಿ.
—ಎಂ. ಎ.
(೨೧) ವೆಂಕಟರಾಮಯ್ಯನವರು, ಸಿ. ಕೆ.
—ಎಂ. ಎ., ಎಲ್‌ಎಲ್. ಬಿ.
(೨೨) ವೆಂಕಟೇಶ ಐಯಂಗಾರ್ಯರು ಮಾಸ್ತಿ.
—ಎಂ. ಎ.
(೨೩) ಶಾಮರಾಯರು, ಟಿ. ಎಸ್.
(೨೪) ಶಾಮರಾಯರು, ಪ್ಯಾಟಿ.
(೨೫) ಶಿವಮೂರ್ತಿಶಾಸ್ತ್ರಿಗಳು, ಬಿ.,
ಕೀರ್ತನಕೇಸರಿ.

ಶ್ರೀ|| ಗಳಾದ—

(೨೬) ಶ್ರೀಕಂಠಯ್ಯನವರು, ಬಿ. ಎಂ.
—ಎಂ. ಎ., ಬಿ. ಎಲ್.

(೨೭) ಶ್ರೀಕಂಠಯ್ಯನವರು, ತೀ. ನಂ.
—ಎಂ. ಎ.

(೨೮) ಶ್ರೀನಿವಾಸರಾಯರು, ಪಿ.
—ಎಂ. ಎಸ್‌ಸಿ.

ಶ್ರೀ|| ಗಳಾದ—

(೨೯) ಶ್ರೀನಿವಾಸ ಪಾಂಡುರಂಗ ಕೋಟೀ

೩೦) ಸುಬ್ಬರಾಯಪ್ಪನವರು, ಡಿ. ಸಿ.
—ಬಿ. ಎ., ಬಿ. ಎಲ್.

(೩೧) ಹನುಮಂತರಾಯರು, ಎಚ್.

## ಅಂಗಸಂಸ್ಥಾ ಪ್ರತಿನಿಧಿಗಳು

ಶ್ರೀ|| ಗಳಾದ

(೧) ಕೂಡಲಿ ಚಿದಂಬರಂ,
ಬಿ. ಎ., ಎಲ್‌ಎಲ್. ಬಿ.
—ಕ|| ಸಂಘ, ಶಿವಮೊಗ್ಗ.

(೨) ಸಿ. ಆರ್. ಶ್ರೀನಿವಾಸಯ್ಯಂಗಾರ್ಯರು,
—ಕ|| ಸಂಘ, ಚೆನ್ನರಾಯಪಟ್ಟಣ.

ಶ್ರೀ|| ಗಳಾದ—

(೩) ಡಬ್ಲ್ಯು. ಕೆ. ಕುಲಕರ್ಣಿ,
—ಕ|| ಸಂಘ, ವಿಲಿಂಗ್‌ಡನ್
ಕಾಲೇಜು, ಸಾಂಗ್ಲಿ.

(೪) ಜಿ. ಎಸ್. ಕೇಶವಾಚಾರ್ಯರು,
ಬಿ.ಎ., ಬಿ. ಟಿ.
—ಕೊಡಗು ಕ|| ಸಂಘ, ಮಡಿಕೇರಿ.

ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ|| ಎಸ್. ವಿ. ರಂಗಣ್ಣ, ಎಂ. ಎ., ಅವರು ತಾ|| ೮-೧೨-೧೯೩೭ ರಲ್ಲಿ ಎಲ್ಲ ಸದಸ್ಯರಿಗೂ ಕಳುಹಿಸಿದ್ದ ವಾರ್ಷಿಕಾಧಿವೇಶನದ ಆಹ್ವಾನ (ನೋಟೀಸ್) ಪತ್ರಿಕೆಯನ್ನು ಓದಿದರು.

ಅನಂತರ ಸಭಾಪತಿಗಳು ಅಧಿವೇಶನಕ್ಕೆ ಬಂದಿದ್ದ ಎಲ್ಲ ಸದಸ್ಯರಿಗೂ ಕಾರ್ಯ ನಿರ್ವಾಹಕ ಮಂಡಲಿಯ ಪರವಾಗಿಯೂ ತಮ್ಮ ಪರವಾಗಿಯೂ ಸ್ವಾಗತ ಬಯಸಿ, ನಡೆಯಬೇಕಾದ ಕಾರ್ಯಗಳಲ್ಲಿ ಎಲ್ಲರೂ ಸಹಕರಿಸಿ ಅವುಗಳನ್ನು ಬೇಗನೆ ಆಗಮಾಡಿಸಿ ಕೊಡಬೇಕೆಂದು ಪ್ರಾರ್ಥಿಸಿದರು.

ಶ್ರೀಮಾನ್ ಕೌಜಲಗಿ ಶ್ರೀನಿವಾಸರಾಯರವರು ಅನಾರೋಗ್ಯದ ಕಾರಣದಿಂದ ಈ ಅಧಿವೇಶನಕ್ಕೆ ಬರಲು ಸಾಧ್ಯವಿಲ್ಲವೆಂದು ತಿಳಿಸಿದ್ದ ಸಂಗತಿಯನ್ನು ಸಭಾಪತಿಗಳವರು ಸಭೆಗೆ ಅರಿಕೆ ಮಾಡಿ, ಶ್ರೀ|| ಶ್ರೀನಿವಾಸರಾಯರು ಬೇಗನೆ ಆರೋಗ್ಯವನ್ನು ಪಡೆಯಲೆಂಬ ಹಾರೈಕೆಯನ್ನು ಸಭೆಯು ಪರವಾಗಿ ವ್ಯಕ್ತಗೊಳಿಸಿದ ಬಳಿಕ ಅಧಿವೇಶನದ ಕಾರ್ಯ ಆರಂಭವಾಯಿತು.

## ವಿಷಯ ೧.—೧೯೩೬ನೆಯ ಇಸವಿಯ ವರದಿ ಮತ್ತು ಆಯವ್ಯಯ ಲೆಕ್ಕಗಳು

ಗೌ|| ಕಾರ್ಯದರ್ಶಿಗಳು ಸಭೆಗೆ ಒಪ್ಪಿಸಿದ ಪರಿಷತ್ತಿನ ೧೯೩೭ ನೆಯ ಇಸವಿಯ ವಾರ್ಷಿಕ ವರದಿಯನ್ನು ಕುರಿತು ಸದಸ್ಯರು ಯಾರಾದರೂ ಸಲಹೆಸೂಚನೆಗಳನ್ನು ಕೊಡತಕ್ಕದಿದ್ದರೆ ಕೊಡಬಹುದೆಂದು ಸಭಾಪತಿಗಳು ಕೋರಿದರು.

ಶ್ರೀ|| ಅ. ನ. ಕೃಷ್ಣರಾಯರು, ಪರಿಷತ್ತಿನ ಪತ್ರವ್ಯವಹಾರ, ಸಿಬ್ಬಂದಿ, ಪರಿಷತ್‌ಪತ್ರಿಕೆಯ ರೀತಿ ಮತ್ತು ಮುದ್ರಣದ ವೆಚ್ಚ ಇವುಗಳ ವಿಷಯವಾಗಿ

ಟೀಕೆ ಮಾಡಿ ಒಟ್ಟಿನಲ್ಲಿ ಪರಿಷತ್ತಿನ ಖರ್ಚುಗಳನ್ನು ಇಳಿಸುವ ಪ್ರಯತ್ನ ಮಾಡಬೇಕೆಂದು ಸೂಚಿಸಿದರು. ಶ್ರೀ॥ ಎಂ. ನರಸಿಂಹಮೂರ್ತಿ, ಬಿ. ಎ., ಅವರು ಶ್ರೀ॥ ಕೃಷ್ಣರಾಯರ ಅಭಿಪ್ರಾಯಗಳನ್ನು ಸಮರ್ಥಿಸಿ ಮಾತನಾಡಿದರು. ಕೀರ್ತನಕೇಸರಿ ಶ್ರೀ॥ ಬಿ. ಶಿವಮೂರ್ತಿಶಾಸ್ತ್ರಿಗಳೂ ಶ್ರೀ॥ ಗೋವಿಂದರಾಮಾಚಾರ್ಯ, ಎಂ. ಎ., ಎಲ್‌ಎಲ್. ಬಿ. ಅವರೂ ಪರಿಷತ್‌ಪತ್ರಿಕೆಯ ವಿಚಾರವಾಗಿ ತಮ್ಮತಮ್ಮ ಸಲಹೆಗಳನ್ನು ಕೊಟ್ಟರು.

ಮೇಲಿನ ಮಹನೀಯರು ಮಾಡಿದ ಟೀಕೆಗಳಿಗೂ ಸೂಚನೆಗಳಿಗೂ ಗೌ॥ ಕಾರ್ಯದರ್ಶಿಗಳಾದ ಶ್ರೀ॥ ಎಸ್. ವಿ. ರಂಗಣ್ಣನವರೂ, ಗೌ॥ ಕೋಶಾಧ್ಯಕ್ಷರಾದ ಶ್ರೀ॥ ವಿ. ಸೀತಾರಾಮಯ್ಯನವರೂ ಮತ್ತು ಪರಿಷತ್‌ಪತ್ರಿಕೆಯ ಸಂಪಾದಕರಾದ ಶ್ರೀ॥ ಡಿ. ಸಿ. ಸುಬ್ಬರಾಯಪ್ಪನವರೂ ತಕ್ಕ ಸಮಾಧಾನಗಳನ್ನು ಕೊಟ್ಟರು.

ಶ್ರೀ॥ ಬೆಳ್ಳಾವೆ ವೆಂಕಟನಾರಾಯಣಪ್ಪನವರೂ ಶ್ರೀ॥ ಮಾಸ್ತಿ ವೆಂಕಟೇಶ ಐಯಂಗಾರ್ಯರವರೂ ಪರಿಷತ್ತಿನ ಕೆಲಸ ಕಾರ್ಯಗಳು ನಡೆಯುತ್ತಿರುವ ಬಗ್ಗೆ ತಮ್ಮ ತೃಪ್ತಿ ಸಂತೋಷಗಳನ್ನು ವ್ಯಕ್ತಪಡಿಸಿ ಮಾತನಾಡಿದರು. ಶ್ರೀ॥ ಡಿ. ವಿ. ಗುಂಡಪ್ಪನವರು ತಮ್ಮ ಉಪಾಧ್ಯಕ್ಷಪದವಿಯನ್ನು ಬಿಟ್ಟುಬಿಡುವುದಾಗಿ ಸೂಚಿಸಿ ಕೆಲವು ಮಿತ್ರರಿಗೆ ಕಾಗದಗಳನ್ನು ಬರೆದಿದ್ದ ಸಂಗತಿಯನ್ನು ಶ್ರೀ॥ ವೆಂಕಟೇಶ ಐಯಂಗಾರ್ಯರು ಸಭೆಗೆ ಬಹಿರಂಗಪಡಿಸಿ, ಈ ಸಂದರ್ಭದಲ್ಲಿ ಸದಸ್ಯರು ಕೆಲವರು ಮಾಡಿದ ಟೀಕೆಗಳನ್ನು ಶ್ರೀ॥ ಗುಂಡಪ್ಪನವರು ಅನ್ಯಥಾ ತಿಳಿಯಬಾರದಾಗಿ ಸಭೆಯ ಪರವಾಗಿ ಅವರನ್ನು ಪ್ರಾರ್ಥಿಸಿದರು.

ಉಪಾಧ್ಯಕ್ಷರಾದ ಶ್ರೀ॥ ಡಿ. ವಿ. ಗುಂಡಪ್ಪನವರು ಉತ್ತರಗಳನ್ನು ಕೊಟ್ಟು, ಪರಿಷತ್ತಿನ ಕೆಲವು ಕಾರ್ಯಭಾಗಗಳ ಸಾಧ್ಯಾಸಾಧ್ಯತೆಗಳನ್ನು ವಿವರಿಸಿ ಭಾಷಣ ಮಾಡಿದರು. ಅನಂತರ ಈ ಕೆಳಗಿನ ತೀರ್ಮಾನ ಶ್ರೀ॥ ಎಂ. ನರಸಿಂಹಮೂರ್ತಿಗಳು ಸೂಚಿಸಿ ಶ್ರೀ॥ ಅ. ನ. ಕೃಷ್ಣರಾಯರು ಅನುಮೋದಿಸಿದಮೇರೆಗೆ ಸರ್ವಾನುಮತದಿಂದ ಅಂಗೀಕೃತವಾಯಿತು :

"ಕರ್ನಾಟಕ ಸಾಹಿತ್ಯ ಪರಿಷತ್ತಿನ ೧೯೩೦ನೆಯ ಇಸವಿಯ ವರದಿಯನ್ನು ಈ ವಾರ್ಷಿಕಾಧಿವೇಶನವು ಅಂಗೀಕರಿಸುತ್ತದೆ."

ಅನಂತರ ಶ್ರೀ॥ ಡಿ. ವಿ. ಗುಂಡಪ್ಪನವರು ೧೯೩೦ನೆಯ ವರ್ಷದಲ್ಲಿ ತಮ್ಮ ಸಹೋದ್ಯೋಗಿಗಳಾಗಿ ತಮ್ಮೊಡನೆ ಸಹಕರಿಸಿ ಕೆಲಸಮಾಡಿದ ಎಲ್ಲರಿಗೂ ತಮ್ಮ ವಂದನೆಗಳನ್ನು ಸಮರ್ಪಿಸಿ, ಈಗ ತಮಗೆ ಇತರ ಕೆಲಸಗಳ ಜವಾಬ್ದಾರಿ ಬಹಳ ವಾಗಿರುವುದರಿಂದ ತಮ್ಮನ್ನು ಉಪಾಧ್ಯಕ್ಷಸ್ಥಾನದಿಂದ ಬಿಡುಗಡೆ ಮಾಡಿಕೊಡಬೇಕೆಂದು ಪರಿಷತ್ಸದಸ್ಯರನ್ನು ಪ್ರಾರ್ಥಿಸಿದರು.

## ವಿಷಯ ೨.—೧೯೩೪ಲನೆಯ ಇಸವಿಯ ಆಯುವ್ಯಯದ ಅಂದಾಜು ಪಟ್ಟಿ

ಗೌರವ ಕೋಶಾಧ್ಯಕ್ಷರಾದ ಶ್ರೀ|| ವಿ. ಸೀತಾರಾಮಯ್ಯನವರು ಈ ಕೆಳಗಿನ ಸೂಚನೆಯನ್ನು ಸಭೆಗೆ ಒಪ್ಪಿಸಿದರು :

"ಕರ್ನಾಟಕ ಸಾಹಿತ್ಯ ಪರಿಷತ್ತಿನ ೧೯೩೪ಲನೆಯ ಇಸವಿಯ ಆಯುವ್ಯಯದ ಅಂದಾಜುಪಟ್ಟಿಯನ್ನು ಈ ವಾರ್ಷಿಕಾಧಿವೇಶನವು ಅಂಗೀಕರಿಸುತ್ತದೆ."

ಗೌ|| ಕಾರ್ಯದರ್ಶಿಗಳಾದ ಶ್ರೀ|| ಎಸ್. ವಿ. ರಂಗಣ್ಣನವರು ಇದನ್ನು ಅನುಮೋದಿಸಿದರು.

ಇದು ಸರ್ವಾನುಮತದಿಂದ ಅಂಗೀಕೃತವಾಯಿತು.

## ವಿಷಯ ೩.—೧೯೩೩ಲನೆಯ ಇಸವಿಯ ಬಗ್ಗೆ ಆಯುವ್ಯಯಶೋಧಕರ ನೇಮಕ

೧೯೩೪ಲನೆಯ ಇಸವಿಗೂ ಶ್ರೀ|| ಎಂ. ಎ. ನರಸಿಂಹಾಚಾರ್ಯರವರೇ ಪರಿಷತ್ತಿನ ಲೆಕ್ಕಗಳ ಪರಿಶೋಧಕರಾಗಿರಬೇಕೆಂದು ಸಭೆ ಸೂಚಿಸಿತು. ಅನಂತರ ಈ ಕೆಳಗಿನ ಸೂಚನೆ ಸರ್ವಾನುಮತದಿಂದ ಅಂಗೀಕೃತವಾಯಿತು :

"೧೯೩೩ನೆಯ ಇಸವಿಯ ಆಯವ್ಯಯ ಲೆಕ್ಕಗಳನ್ನು ಶೋಧನೆಮಾಡಿ ಕೊಟ್ಟು ಸಹಾಯಮಾಡಿರುವುದಕ್ಕಾಗಿ ಶ್ರೀ|| ಎಂ. ಎ. ನರಸಿಂಹಾಚಾರ್ಯರವರನ್ನು ಈ ವಾರ್ಷಿಕಾಧಿವೇಶನವು ವಂದಿಸುತ್ತದೆ ; ಮತ್ತು ೧೯೩೪ಲನೆಯ ಇಸವಿಗೂ ಅವರೇ ಆಯವ್ಯಯ ಶೋಧಕರಾಗಿದ್ದುಕೊಂಡು ಉಪಕಾರಮಾಡಬೇಕೆಂದು ಈ ವಾರ್ಷಿಕಾಧಿವೇಶನವು ಪ್ರಾರ್ಥಿಸುತ್ತದೆ."

## ವಿಷಯ ೪.— ಪರಿಷತ್ತಿನ ಅಧಿಕಾರಿಗಳ ಚುನಾವಣೆ: ಉಪಾಧ್ಯಕ್ಷರು

ಶ್ರೀ|| ಎಂ. ನರಸಿಂಹಮೂರ್ತಿಗಳು ಪರಿಷತ್ತಿನ ೧೦-ಗ ನಿಬಂಧನೆಯನ್ನು ಉಪಾಧ್ಯಕ್ಷರ ಗಮನಕ್ಕೆ ತಂದರು. ಉಪಾಧ್ಯಕ್ಷರು ಆ ನಿಯಮವನ್ನು ತಾ|| ೨-೫-೧೯೩೦ರ ವಾರ್ಷಿಕಾಧಿವೇಶನವು ತೊಡೆದುಹಾಕಿದೆಯೆಂದು ತಿಳಿಸಿದರು.

ಅನಂತರ ಶ್ರೀ|| ಡಿ. ವಿ. ಗುಂಡಪ್ಪನವರು ಪರಿಷತ್ತಿನ ಉಪಾಧ್ಯಕ್ಷಸ್ಥಾನದಲ್ಲಿ ಇನ್ನು ಮುಂದೆ ಇರಲು ತಮಗೆ ಶಕ್ತಿ ಇಲ್ಲವೆಂದೂ, ಮೊದಲು ಚುನಾವಣೆಯಾದ ಕಾಲದಲ್ಲಾಗಲಿ ಪುನಃ ಬೊಂಬಾಯಿಯಲ್ಲಿ ಚುನಾವಣೆ ನಡೆದ ಕಾಲದಲ್ಲಾಗಲಿ ತಾವು ಹಾಜರಿರಲಿಲ್ಲವೆಂದೂ, ಆದರೂ ಕೆಲವರು ಹಿರಿಯರ ಮಾತಿನ ಮೇರೆಗೆ ಉಪಾಧ್ಯಕ್ಷಸ್ಥಾನವನ್ನು ಒಪ್ಪಿಕೊಂಡಿದ್ದರೆಂದೂ, ಈಚೆಗೆ ತಮ್ಮ ಗೃಹಕೃತ್ಯದ ತೊಂದರೆಗಳೂ ಇತರ ಕೆಲಸಗಳ, ಜವಾಬ್ದಾರಿಯೂ ಬಹಳವಾಗಿರುವುದರಿಂದಲೂ ಮತ್ತು ಇದುವರೆಗೆ ಪರಿಷತ್ತಿಗಾಗಿ ಮಾಡಿರುವುದಕ್ಕಿಂತ ಹೆಚ್ಚಿನ ಕೆಲಸಮಾಡಲು ತಮ್ಮಿಂದ ಸಾಧ್ಯವಿರುವಂತೆ ತೋರದೆ ಇರುವುದರಿಂದಲೂ, ತಮ್ಮನ್ನು ಉಪಾಧ್ಯಕ್ಷಸ್ಥಾನದಿಂದ ಬಿಡುಗಡೆಮಾಡಿಕೊಡುವಂತೆ ತಮ್ಮ ಮಿತ್ರರಿಗೆ ಕಾಗದ ಬರೆದರೆಂದೂ, ದಯವಿಟ್ಟು ಸಭೆ ಹಾಗೆ ನಡಸಿಕೊಡಬೇಕೆಂದೂ ಪ್ರಾರ್ಥಿಸಿದರು.

ಉಪಾಧ್ಯಕ್ಷರ ಚುನಾವಣೆಯನ್ನು ಕುರಿತು ಶ್ರೀ|| ಮಾಸ್ತಿ ವೆಂಕಟೇಶ ಐಯಂಗಾರ್ಯರು, ಸಭೆ ತಮ್ಮತಮ್ಮಲ್ಲಿ ಅನಿರ್ಬಂಧರೀತಿಯಲ್ಲಿ ವಿಚಾರಮಾಡಿ, ಒಮ್ಮತದಿಂದ ಒಂದೇ ಹೆಸರನ್ನು ಉಪಾಧ್ಯಕ್ಷಸ್ಥಾನಕ್ಕೆ ಸೂಚಿಸಬೇಕೆಂದೂ, ಗೌರವಸ್ಥಾನವಾದ ಉಪಾಧ್ಯಕ್ಷಸ್ಥಾನಕ್ಕೆ ಎರಡು ಮೂರು ಹೆಸರುಗಳನ್ನು ಸೂಚಿಸಿ ಒಂದನ್ನು ಆರಿಸುವ ಪದ್ಧತಿ ಅಷ್ಟು ಚೆನ್ನಾಗಿರದೆಂದೂ, ಈ ರೀತಿಯ ನಡವಳಿಕೆ ಯನ್ನು ಬೊಂಬಾಯಿಯ ಅಧಿವೇಶನದಲ್ಲಿ ಅನುಸರಿಸಲಾಯಿತೆಂದೂ ಸೂಚಿಸಿದರು. ಆ ಪದ್ಧತಿಯನ್ನು ಸಭೆ ಒಪ್ಪಿತು.

ಅದರಂತೆ ಉಪಾಧ್ಯಕ್ಷರನ್ನು ಚುನಾಯಿಸುವ ವಿಚಾರದಲ್ಲಿ ಒಂದು ಪೂರ್ವಭಾವಿ ಯಾದ ಅನಿರ್ಬಂಧ ತೀರ್ಮಾನಕ್ಕೆ ಬರಲು ಸಭೆ ಐದು ನಿಮಿಷಗಳ ಕಾಲ ವ್ಯವಧಾನ ವನ್ನು ಕೇಳಿತು. ಇದಕ್ಕೆ ಸಭಾಧ್ಯಕ್ಷರು ಒಪ್ಪಿ, ಆ ಕಾಲದಲ್ಲಿ ಸಭೆಯನ್ನು ಒಂದು "ಸಮಿತಿ" ಯಾಗಿ ಗಣನೆ ಮಾಡುವುದಾಗಿ ಹೇಳಿದರು. ಐದು ನಿಮಿಷ ಕಳೆದಮೇಲೆ ಪುನಃ ಸಭೆ ಕೂಡಿತು. ಆಗ ಶ್ರೀ|| ಬಿ. ಶಿವಮೂರ್ತಿಶಾಸ್ತ್ರಿಗಳವರು ಶ್ರೀ|| ಬಿ. ಎಂ. ಶ್ರೀಕಂಠಯ್ಯನವರ ಹೆಸರನ್ನು ಸೂಚಿಸಿದರು; ಶ್ರೀ|| ಪ್ಯಾಟಿ ಶಾಮರಾಯರು ಸೂಚನೆಯನ್ನು ಅನುಮೋದಿಸಿದರು; ಶ್ರೀ|| ಆರ್. ಎಸ್. ಮುಗಳಿಯವರು ಅದನ್ನು ಸಮರ್ಥಿಸಿದರು. ಅದರಂತೆ ಶ್ರೀ|| ಬಿ. ಎಂ. ಶ್ರೀಕಂಠಯ್ಯ ನವರು ಉಪಾಧ್ಯಕ್ಷರಾಗಿ ಸರ್ವಾನುಮತದಿಂದ ಚುನಾಯಿತರಾದರು.

ಶ್ರೀ|| ಡಿ. ವಿ. ಗುಂಡಪ್ಪನವರು, ತಾವು ಹಿಂದಿನ ನಾಲ್ಕು ವರ್ಷಗಳಲ್ಲಿ ನಡಸಿದ ಯಾವುದಾದರೊಂದು ಕಾರ್ಯದಿಂದಲಾಗಲಿ ಆಡಿದ ಮಾತಿನಿಂದಲಾಗಲಿ ತಮ್ಮ ಯಾವ ಲೋಪದೋಷದಿಂದಲಾಗಲಿ ಉಪಾಧ್ಯಕ್ಷಸ್ಥಾನವನ್ನು ಅನರ್ಹವಾಗಿ ಮಾಡಿದ್ದರೆ ಅದನ್ನು ತಿದ್ದಿ ಸರಿಪಡಿಸಬಲ್ಲವರು ಶ್ರೀಮಾ‌ನ್ ಶ್ರೀಕಂಠಯ್ಯ ನವರೆಂದೂ, ತಮ್ಮಿಂದ ಆ ಸ್ಥಾನದ ಗೌರವ ಕಡಮೆಯಾಗಿದ್ದರೆ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು ದಯಾದೃಷ್ಟಿಯಿಂದ ನೋಡಬೇಕೆಂದೂ, ಉಪಾಧ್ಯಕ್ಷಸ್ಥಾನದ ಗೌರವವನ್ನು ಅಭಿವೃದ್ಧಿಪಡಿಸುವುದಕ್ಕೂ ಪರಿಷತ್ತಿನ ಆದಾಯವನ್ನು ಹೆಚ್ಚುಮಾಡಿ ಪರಿಷತ್ತನ್ನು ಬೆಳಸಿ ಅದನ್ನು ಸಾರೋದ್ಧಾರವಾಗಿ ನಡಸಿಕೊಂಡು ಬರುವುದಕ್ಕೂ ಶ್ರೀ|| ಶ್ರೀಕಂಠಯ್ಯನವರಿಗಿಂತ ಹೆಚ್ಚು ಅರ್ಹರಾದವರು ಯಾರೂ ಇಲ್ಲವೆಂದೂ, ಮತ್ತು ಅವರ ಉಪಾಧ್ಯಕ್ಷತೆಯಲ್ಲಿ ಪರಿಷತ್ತು ಅತಿಶಯವಾಗಿ ಬೆಳೆದು ಹೊಸ ಉದ್ಯಮಗಳನ್ನು ಕೈಕೊಂಡು ಅವನ್ನು ಯಶಸ್ವಿಯಾಗಿ ನೆರವೇರಿಸಿ ಅಭಿವೃದ್ಧಿ ಹೊಂದಲಿ ಎಂದು ತಾವು ಪ್ರಾರ್ಥಿಸುವುದಾಗಿಯೂ ತಿಳಿಸಿದರು.

ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು, ಕನ್ನಡನಾಡಿನಲ್ಲಿ ಒಂದು ಗೌರವ ಸ್ಥಾನವನ್ನು ಅಪೇಕ್ಷಿಸಬೇಕಾದರೆ ಪರಿಷತ್ತಿನ ಉಪಾಧ್ಯಕ್ಷಪದವಿಗಿಂತ ಬೇರೆ ಯಾವುದೂ ಇಲ್ಲವೆಂದು ಹೇಳಿ, ಅಂಥ ಗೌರವವನ್ನು ತಮಗೆ ಮಾಡಿರುವುದಕ್ಕೆ ಸಭೆಗೆ ಕೃತಜ್ಞತೆಯನ್ನು ತಿಳಿಸಿದರು. ಮತ್ತು, ಶ್ರೀ|| ಗುಂಡಪ್ಪನವರು ಪರಿಷತ್ತನ್ನು ಬಹುಮೇಲಕ್ಕೆ ಎತ್ತಿದ್ದಾರೆಂದೂ, ಅವರ ಕಾರ್ಯಗಳಿಂದ ಆ ಪದವಿಯನ್ನು

ಸ್ವೀಕರಿಸುವುದು ತಮಗೆ ಈಗ ಬಹು ಕಷ್ಟವಾಗಿ ತೋರುತ್ತಿರುವುದೆಂದೂ, ಆ ಸ್ಥಾನಕ್ಕೆ ತಕ್ಕ ದಕ್ಷತೆ ಪ್ರಭಾವ ಇವು ತಮ್ಮಲ್ಲಿಲ್ಲವೆಂದೂ, ಈ ಸ್ಥಾನವನ್ನು ತಾವು ಕೈಕೊಂಡದ್ದರಿಂದ ತಾವು ಬಿಡುವಾದಾಗ ಮಾಡುತ್ತಿದ್ದ ಕನ್ನಡಪ ಸೇವೆಗೆ ಎಲ್ಲಿ ತೊಂದರೆ ಬರುವುದೋ ಎಂಬ ಅಂಜಿಕೆಯುಂಟಾಗಿದೆಯೆಂದೂ, ಮಹಾಜನರು ವ್ಯಕ್ತಿಯ ವಿಷಯವಾಗಿ ದೋಷಾರೋಪಣೆ ಮಾಡದೆ ಆ ವ್ಯಕ್ತಿ ಪರಿಷತ್ತಿನ ಉಪಾಧ್ಯಕ್ಷರು ಎಂದು ಮಾತ್ರ ಇಟ್ಟುಕೊಂಡು ಅವರೊಡನೆ ಸಹಕರಿಸಿ ಕೆಲಸ ಮಾಡಬೇಕೆಂದೂ ಪ್ರಾರ್ಥಿಸಿದರು. ಅಲ್ಲದೆ, ತಾವು ಈ ಸ್ಥಾನವನ್ನು ಸ್ವೀಕರಿಸುವುದಕ್ಕೆ ಮುಂಚೆ ವಿಶ್ವವಿದ್ಯಾನಿಲಯದ ಅಧಿಕಾರಿಗಳ ಅನುಮತಿ ಪಡೆಯಬೇಕಾಗಿರುವುದೆಂದೂ ತಿಳಿಸಿದರು.

ಅನಂತರ ಶ್ರೀ॥ ಮಾಸ್ತಿ ವೆಂಕಟೇಶ ಐಯಂಗಾರ್ಯರವರು ನಿವೃತ್ತಉಪಾಧ್ಯಕ್ಷರಾದ ಶ್ರೀ॥ ಡಿ. ವಿ. ಗುಂಡಪ್ಪನವರಲ್ಲಿ ಪರಿಷತ್ತಿನ ವಂದನೆಗಳನ್ನು ತಿಳಿಸುವ ಈ ಕೆಳಗಿನ ಸೂಚನೆಯನ್ನು ಸಭೆಯ ಮುಂದಿರಿಸಿದರು :

"ಈಗ ನಾಲ್ಕು ವರ್ಷಗಳಿಂದ ಕರ್ನಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದು ಅವಿಶ್ರಾಂತವಾಗಿ ದುಡಿದು, ಅದರ ಕಾರ್ಯಕಲಾಪವನ್ನು ಬಹುಮುಖವಾಗಿ ಹಬ್ಬಿಸಿ ಬೆಳಸಿ ಪರಿಷತ್ತಿನ ಉದ್ದೇಶಗಳು ಸಿದ್ಧಿಸುವಂತೆಯೂ ಅದರ ಕೀರ್ತಿ ಹರಡುವಂತೆಯೂ ಸರ್ವರೀತಿಯಿಂದಲೂ ಕೆಲಸಮಾಡಿ ಈಗ ಆ ಸ್ಥಾನವನ್ನು ಬಿಟ್ಟುಕೊಟ್ಟಿರುವ ಶ್ರೀಮಾನ್ ದೇವನಹಳ್ಳಿ ವೆಂಕಟರಾಮಯ್ಯನವರ ಗುಂಡಪ್ಪನವರಿಗೆ ಪರಿಷತ್ತಿನ ಈ ವಾರ್ಷಿಕಾಧಿವೇಶನವು ತನ್ನ ಹೃತ್ಪೂರ್ವಕವಾದ ವಂದನೆಯನ್ನು ಸಲ್ಲಿಸುತ್ತದೆ ; ಅಲ್ಲದೆ ಈ ಮಹನೀಯರು ಈವರೆಗಿನಂತೆಯೇ ಮುಂದೆಯೂ ಪರಿಷತ್ತಿನ ಕಾರ್ಯದಲ್ಲಿ ಆತ್ಮೀಯ ಭಾವದಿಂದ ಸಹಕರಿಸುವರೆಂದು ದೃಢವಾಗಿ ನಂಬಿದೆ."

ಈ ನಿರ್ಣಯವನ್ನು ಸಭೆ ಕರತಾಡನಗಳೊಡನೆ ಅಂಗೀಕರಿಸಿತು.

## ವಿಷಯ ೫.—ಕಾ॥ ನಿ॥ ಮಂಡಲಿಯ ಸದಸ್ಯರ ಚುನಾವಣೆ.

**(೧) ಮೈಸೂರು ಪ್ರಾಂತ.**—ಈ ಕೆಳಗಿನ ೧೬ ಹೆಸರುಗಳು ಮೈಸೂರು ಪ್ರಾಂತದ ಸದಸ್ಯರಿಂದ ಅಭ್ಯರ್ಥಿಪಟ್ಟಿಗೆ ಸೂಚಿತವಾದುವು :—

ಶ್ರೀ॥ ಗಳಾದ (೧) ಅ. ನ. ಕೃಷ್ಣರಾಯರು, (೨) ಪಿ. ಶ್ರೀನಿವಾಸರಾಯರು, (೩) ಎಂ. ನರಸಿಂಹಮೂರ್ತಿಗಳು, (೪) ಸಿ. ಕೆ. ವೆಂಕಟರಾಮಯ್ಯನವರು, (೫) ಬಿ. ಶಿವಮೂರ್ತಿಶಾಸ್ತ್ರಿಗಳು, (೬) ಎಂ. ಆರ್. ಶ್ರೀನಿವಾಸಮೂರ್ತಿಗಳು, (೭) ಟಿ. ಎಸ್. ವೆಂಕಣ್ಣಯ್ಯನವರು, (೮) ಎ. ಆರ್. ಕೃಷ್ಣಶಾಸ್ತ್ರಿಗಳು, (೯) ಎಸ್. ಜಿ. ಶಾಸ್ತ್ರಿಗಳು, (೧೦) ಡಿ. ಸಿ. ಸುಬ್ಬರಾಯಪ್ಪನವರು, (೧೧) ಟಿ. ಎಸ್. ಶ್ರೀಕಂಠಯ್ಯನವರು, (೧೨) ಆರ್. ಕಲ್ಯಾಣಮ್ಮನವರು, (೧೩) ಎ. ತಾಂದೋಣಿರಾಯರು, (೧೪) ಎಸ್. ವೆಂಕಟೇಶ ಐಯಂಗಾರ್ಯರು, (೧೫) ಟಿ. ಟಿ. ಶರ್ಮರವರು, (೧೬) ವಿ. ವೆಂಕಟಪ್ಪನವರು,

ಇವುಗಳ ಜೊತೆಗೆ ಸೂಚಿತವಾದ ಶ್ರೀ|| ಮಾಸ್ತಿ ವೆಂಕಟೇಶ ಐಯಂಗಾರ್ಯರ ಹೆಸರನ್ನು ಅವರು ವಾಪಸು ತೆಗೆದುಕೊಂಡರು.

ಸಭೆಯ ಅನುಮತಿಪಡೆದು ಸಭಾಪತಿಗಳು ಶ್ರೀ|| ಬೆಳ್ಳಾವೆ ವೆಂಕಟನಾರಾಯಣಪ್ಪನವರನ್ನೂ, ಶ್ರೀ|| ಮಾಸ್ತಿ ವೆಂಕಟೇಶ ಐಯಂಗಾರ್ಯರವರನ್ನೂ ಗಣಕ (Tellers) ರಾಗಿರಬೇಕೆಂದು ಪ್ರಾರ್ಥಿಸಿದರು.

ಬಳಿಕ ಚುನಾವಣೆಯ ಕಾರ್ಯ ಮೊದಲಾಯಿತು.

ಗಣಕರು ಅಭಿಮತಪತ್ರಗಳನ್ನು ಎಣಿಸಿನೋಡಿ ಚುನಾವಣೆಯ ಫಲಿತಾಂಶವನ್ನು ಸಭಾಪತಿಗಳಿಗೆ ಬರೆದು ತಿಳಿಸಿದರು. ಅದನ್ನು ಸಭಾಪತಿಗಳು ಸಭೆಗೆ ಓದಿದರು. ಚುನಾಯಿತರು :—

ಶ್ರೀ|| ಗಳಾದ (೧) ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., (೨) ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ.,ಎಲ್ಎಲ್. ಬಿ., (೩) ಟಿ. ಎಸ್. ಶ್ರೀಕಂಠಯ್ಯನವರು, ಎಂ. ಎ., (೪) ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. (೫) ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ. ಎ., (೬) ಡಿ. ಸಿ. ಸುಬ್ಬರಾಯಪ್ಪನವರು, ಬಿ. ಎ., ಬಿ. ಎಲ್., (೭) ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿಗಳು, (೮) ಶ್ರೀಮತಿ ಆರ್. ಕಲ್ಯಾಣಮ್ಮನವರು, (೯) ಅ. ನ. ಕೃಷ್ಣರಾಯರು, (೧೦) ಪಿ. ಶ್ರೀನಿವಾಸರಾಯರು, ಎಂ. ಎಸ್ ಸಿ., (೧೧) ಎಂ. ನರಸಿಂಹಮೂರ್ತಿಗಳು, ಬಿ. ಎ.

೧೨ನೆಯ ಸ್ಥಾನಕ್ಕೆ ಶ್ರೀ|| ಎಸ್. ಜಿ. ಶಾಸ್ತ್ರಿಗಳವರಿಗೂ ಶ್ರೀ|| ಟಿ. ಟಿ. ಶರ್ಮರವರಿಗೂ ಸಮಸಮವಾಗಿ ಅಭಿಮತಗಳು ಬಂದಿದ್ದುದರಿಂದ, ಸಭಾಪತಿಗಳು ೪೨-ಗ ನಿಯಮದಪ್ರಕಾರ ತಮ್ಮ ನಿರ್ಧಾರಕಮತವನ್ನು ಸೂಚಿಸುವ ಮೊದಲು ಚೀಟಿ (Lots) ಎತ್ತಿಸಿ ಅದರ ಫಲಿತಾಂಶದಂತೆ ಶ್ರೀ|| ಟಿ. ಟಿ. ಶರ್ಮರವರ ಹೆಸರಿಗೆ ತಮ್ಮ ಕ್ಯಾಸ್ಟಿಂಗ್ ವೋಟನ್ನು ಕೊಟ್ಟು ಅವರು ಚುನಾಯಿತರಾಗಿದ್ದಾರೆಂದು ತಿಳಿಸಿದರು.

**(೨) ಬೊಂಬಾಯಿ ಪ್ರಾಂತ.**—ಬೊಂಬಾಯಿ ಪ್ರಾಂತದ ಸದಸ್ಯರಿಂದ ಈ ಕೆಳಗಿನ ೧೫ ಹೆಸರುಗಳು ಅಭ್ಯರ್ಥಿಪಟ್ಟಿಗೆ ಸೂಚಿತವಾದುವು :—

ಶ್ರೀ|| ಗಳಾದ (೧) ವಿ. ಬಿ. ಆಲೂರ' ಅವರು, (೨) ಡಿ. ಆರ'. ಬೇಂದ್ರೆಯವರು, (೩) ಎಸ'. ಆರ'. ಪೋತ್ದಾರರು, (೪) ಸಾಲಿ ರಾಮಚಂದ್ರರಾಯರು, (೫) ವಿ. ಬಿ. ನಾಯಕರು, (೬) ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು, (೭) ಶ್ರೀ ಬಸವಲಿಂಗಸ್ವಾಮಿಗಳು, (೮) ಮುರಿಗೆಯ್ಯ ಸೋಮಯ್ಯ ಜಂಗಿನ ಅವರು, (೯) ಕೋಟಿ ಶ್ರೀನಿವಾಸರಾಯರು, (೧೦) ಪೋತ್ದಾರ' ರಂಗಪ್ಪನವರು, (೧೧) ಎಸ'. ಎಸ'. ಮಾಳವಾಡರವರು, (೧೨) ಆರ್. ವಿ. ಜಹಗೀರುದಾರರು, (೧೩) ಗೋವಿಂದ ರಾಮಾಚಾರ್ಯರು, (೧೪) ದೇಶಪಾಂಡೆ ಮನೋಹರರಾಯರು, (೧೫) ಎಂ. ಪಿ. ವಾಲಿ ಅವರು.

ಸಭಾಪತಿಗಳು ಸಭೆಯ ಅನುಮತಿ ಪಡೆದು ಶ್ರೀ|| ಬಿ. ಎಂ. ಶ್ರೀಕಂಠಯ್ಯ ನವರನ್ನೂ ಮತ್ತು ಶ್ರೀ|| ಪಿ. ಶ್ರೀನಿವಾಸರಾಯರವರನ್ನೂ ಗಣಕ (Tellers) ರಾಗಿರಬೇಕೆಂದು ಪ್ರಾರ್ಥಿಸಿದರು.

ಅದರಂತೆ ಅವರು ಅಭಿಮತ ಪತ್ರಗಳನ್ನು ಎಣಿಸಿ ಈ ಕೆಳಗಿನಂತೆ ಫಲಿತಾಂಶ ವನ್ನು ತಿಳಿಸಿದರು. ಚುನಾಯಿತರು :—

ಶ್ರೀ|| ಗಳಾದ (೧) ದ. ರಾ. ಬೇಂದ್ರೆಯವರು, ಎಂ.ಎ., (೨) ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳು, (೩) ಸಾಲಿ ರಾಮಚಂದ್ರರಾಯರು, (೪) ಎಸ್. ಎಸ್. ಮಾಳವಾಡರು, ಎಂ.ಎ., (೫) ವಿ.ಬಿ. ನಾಯಕರು,ಎಂ. ., ಎಲ್‌ಎಲ್.ಬಿ., (೬) ಆಲೂರ ವೆಂಕಟರಾಯರು, ಬಿ.ಎ.,ಎಲ್‌ಎಲ್.ಬಿ., (೭) ರಂಗಪ್ಪ ಪೋತ್ದಾರರು, ಬಿ.ಎ., (೮) ಆರ್. ವಿ. ಜಹಗೀರುದಾರರು,ಎಂ.ಎ.

೯ನೆಯ ಸ್ಥಾನಕ್ಕೆ ಶ್ರೀ ಗೋವಿಂದರಾಮಾಚಾರ್ಯರಿಗೂ ಶ್ರೀ ಬಸವಲಿಂಗ ಸ್ವಾಮಿಗಳಿಗೂ ಸಮನಾದ ಅಭಿಮತಗಳು ಬಂದಿದ್ದುವು. ಶ್ರೀ ಗೋವಿಂದ ರಾಮಾ ಚಾರ್ಯರು ತಮ್ಮ ಹೆಸರನ್ನು ವಾಪಸು ತೆಗೆದುಕೊಂಡುದರಿಂದ ಶ್ರೀ|| ಬಸವಲಿಂಗ ಸ್ವಾಮಿಗಳವರು ಆ ಸ್ಥಾನಕ್ಕೆ ಚುನಾಯಿತರಾಗಿ ನಿಂತರು.

**(೩) ಮದರಾಸು ಪ್ರಾಂತ.**—೧೦-ಖ ನಿಯಮದ ಪ್ರಕಾರ ಸಭೆಯಲ್ಲಿ ಆ ಪ್ರಾಂತದ ಸದಸ್ಯರು ತಕ್ಕಷ್ಟು ಮಂದಿ ಹಾಜರಿಲ್ಲದೆ ಇದ್ದುದರಿಂದ ಹಿಂದೆ ಆ ಪ್ರಾಂತದ ಪ್ರತಿನಿಧಿಗಳಾಗಿದ್ದವರನ್ನು ಈ ವರ್ಷವೂ ಕಾ|| ನಿ|| ಮಂಡಲಿಯ ಸದಸ್ಯರಾಗಿರುವಂತೆ ಪ್ರಾರ್ಥಿಸತಕ್ಕದ್ದೆಂದು ಗೊತ್ತುಮಾಡಲಾಯಿತು, ಮತ್ತು ಅದರಲ್ಲಿ ಖಾಲಿಯಾಗಿರುವ ದಿವಂಗತ ಶ್ರೀ|| ಪಂಜೆ ಮಂಗೇಶರಾಯರವರ ಸ್ಥಾನ ವನ್ನು ಮುಂದಿನ ಕಾ|| ನಿ|| ಮಂಡಲಿ ಭರ್ತಿಮಾಡತಕ್ಕದ್ದೆಂದೂ ತೀರ್ಮಾನಿಸ ಲಾಯಿತು. ಹೀಗೆ ಪುನರ್ನಿಯೋಜಿತರಾದವರು :—

ಶ್ರೀ|| ಗಳಾದ (೧) ವಿದ್ವಾನ್ ಕಡೆಂಗೋಡ್ಲು ಶಂಕರಭಟ್ಟರು, (೨) ಬೆನಗಲ್ ರಾಮರಾಯರು, ಎಂ. ಎ., ಎಲ್‌ಎಲ್. ಬಿ.

**(೪) ಹೈದರಾಬಾದು, (೫) ಉತ್ತರ ಕರ್ನಾಟಕ ಮತ್ತು (೬) ಕೊಡಗು ಪ್ರಾಂತಗಳು.**—ಈ ಮೂರು ಪ್ರಾಂತಗಳಿಗೂ ೧೦-ಖ ನಿಬಂಧನೆಯನ್ನನುಸರಿಸಿ ಹಿಂದೆ ಆಯಾ ಪ್ರಾಂತದ ಪ್ರತಿನಿಧಿಗಳಾಗಿದ್ದವರೇ ಈ ವರ್ಷವೂ ಕಾ|| ನಿ|| ಮಂಡಲಿಯ ಸದಸ್ಯರಾಗಿರಬಹುದೆಂದು ಸಭೆ ತೀರ್ಮಾನಿಸಿತು. ಹೀಗೆ ಪುನರ್ ನಿಯೋಜಿತರಾದವರು :—

**ಹೈದರಾಬಾದು ಪ್ರಾಂತ.**—ಶ್ರೀ|| ಗಳಾದ (೧) ಡಿ. ಕೆ. ಭೀಮಸೇನ ರಾಯರು, ಎಂ. ಎ., (೨) ರೆವರೆಂಡ್ ನಾನಪ್ಪ ದೇಸಾಯಿಯವರು.

**ಉತ್ತರ ಕರ್ನಾಟಕ ಪ್ರಾಂತ.**—ಶ್ರೀ|| ಗಳಾದ (೧) ಕೆ. ಜಿ. ಕುಂದಣಗಾರರು, ಎಂ. ಎ. (೨) ಆರ್. ಎಸ್. ಮುಗಳಿಯವರು, ಎಂ. ಎ., ಬಿ. ಟಿ.

**ಕೊಡಗು ಪ್ರಾಂತ.**—ಶ್ರೀ|| ಬಿ. ಎಸ್. ಕುಶಾಲಪ್ಪನವರು, ಬಿ.ಎ.,ಬಿ.ಇಡಿ.

ಹೀಗೆ ನಿಯೋಜಿತರಾದ ಎಲ್ಲ ಕಾ|| ನಿ|| ಮಂಡಲಿಯ ಸದಸ್ಯರ ಹೆಸರುಗಳನ್ನು ಸಭೆ ಕೈಚಪ್ಪಾಳೆಗಳೊಡನೆ ಅಂಗೀಕರಿಸಿತು.

**ವಿಷಯ ೬.—ಕಾ|| ನಿ|| ಮಂಡಲಿಯ ಸೂಚನೆ.**

"ಪರಿಷತ್ತಿನ ಈಗಿನ ನಿಬಂಧನೆ ನಿಯಮಗಳಲ್ಲಿ ಕೆಲವು ಸಂದಿಗ್ಧ ಸಂದರ್ಭಗಳೂ ನ್ಯೂನತೆಗಳೂ ಇರುವುದರಿಂದ, ಪರಿಷತ್ತಿನ ನಿಬಂಧನಾವಳಿಯನ್ನೆಲ್ಲ ಒಟ್ಟಿಗೆ ಪರೀಕ್ಷೆ ಮಾಡಿ ತಕ್ಕ ತಿದ್ದುಪಾಟುಗಳನ್ನು ಸೂಚಿಸುವ ಬಗ್ಗೆ ಈ ವಾರ್ಷಿಕಾಧಿವೇಶನವು ಐದು ಮಂದಿಗೆ ಮೀರದ ಒಂದು ಸಮಿತಿಯನ್ನು ನಿಯಮಿಸುತ್ತದೆ. ಈ ಸಮಿತಿಯು ಎಲ್ಲ ಪರಿಷತ್ಸದಸ್ಯರಿಂದಲೂ ಸಲಹೆಗಳನ್ನು ಕೋರಿ, ಬಂದಂಥವುಗಳನ್ನು ಆಲೋಚಿಸಿ ತನ್ನ ಶಿಫಾರಸುಗಳನ್ನು ವರದಿಯ ರೂಪದಲ್ಲಿ ಆದಷ್ಟು ಬೇಗನೆ ಪರಿಷತ್ತಿನ ಕಾರ್ಯಾಲಯಕ್ಕೆ ಕಳುಹಿಸತಕ್ಕದ್ದು. ಕಾ|| ನಿ|| ಮಂಡಲಿಯು ಅವುಗಳನ್ನು ವಿಮರ್ಶೆಮಾಡಿ ತನ್ನ ಶಿಫಾರಸುಗಳೊಡನೆ ಮುಂದಿನ ಸಕಲ ಸದಸ್ಯರ ಅಧಿವೇಶನದ ಮುಂದೆ ಇರಿಸತಕ್ಕದ್ದು."

ಈ ಸೂಚನೆ ಸರ್ವಾನುಮತದಿಂದ ಅಂಗೀಕೃತವಾಯಿತು. ಮತ್ತು ಆ ಸಮಿತಿಗೆ ಈ ಕೆಳಗಿನ ಹೆಸರುಗಳು ಸೂಚಿತವಾಗಿ ಅಂಗೀಕೃತವಾದುವು:

(೧) ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು, ಎಂ. ಎ., ಬಿ. ಎಲ್. (ಸಭಾಪತಿಗಳು)

(೨) ಶ್ರೀ|| ಎಸ್. ವಿ. ರಂಗಣ್ಣನವರು, ಎಂ. ಎ., (ಕಾರ್ಯದರ್ಶಿಗಳು)

(೩) ಶ್ರೀ|| ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ.,ಎಲ್ಎಲ್.ಬಿ.

(೪) ಶ್ರೀ|| ವಿ. ಬಿ. ನಾಯಕರು, ಎಂ. ಎ., ಎಲ್ಎಲ್. ಬಿ.

(೫) ಶ್ರೀ|| ಅ. ನ. ಕೃಷ್ಣರಾಯರು.

**ವಿಷಯ ೭.—ಸದಸ್ಯರ ಸೂಚನೆಗಳು.**

(೧) "ಈಗಿರುವ ೧೧-ಕ ನಿಬಂಧನೆಯನ್ನು ಈ ಕೆಳಗೆ ಕಾಣಿಸಿರುವ ರೀತಿಯಲ್ಲಿ ತಿದ್ದುಪಡಿ ಮಾಡತಕ್ಕದ್ದು :

(ಅ) "ಕಾರ್ಯನಿರ್ವಾಹಕ ಮಂಡಲಿಯ ಅಧಿಕಾರಿಗಳನ್ನೂ ಮತ್ತು ಇತರ ಸದಸ್ಯರನ್ನೂ ಒಂದು ವರ್ಷಕ್ಕೆ ಒಂದಾವರ್ತಿ ವಾರ್ಷಿಕ ಸಭೆಯಲ್ಲಿ ಚುನಾಯಿಸತಕ್ಕದ್ದು. ಹೀಗೆ ಚುನಾಯಿಸಲ್ಪಟ್ಟ ಅಧಿಕಾರಿಗಳಲ್ಲಿ ಯಾರೂ ಅವಿಚ್ಛಿನ್ನವಾಗಿ ಎರಡು ವರ್ಷಗಳಿಗಿಂತ ಹೆಚ್ಚು ಅವಧಿ ಆಯಾ ಅಧಿಕಾರಗಳಲ್ಲಿ ಇಲ್ಲದವರಾಗಿರತಕ್ಕದ್ದು.—ಈ ನಿಬಂಧನೆಯ ಉಳಿದ ಭಾಗವು ಈಗಿರುವಂತೆಯೇ ಇರತಕ್ಕದ್ದು.

(ಅ) ಈ ತಿದ್ದುಪಡಿಯು ಈ ವರ್ಷ (೧೯೩೭) ನಡೆಯುವ ಚುನಾವಣೆಗಳಲ್ಲಿಯೇ ಆಚರಣೆಗೆ ಬರತಕ್ಕದ್ದು.

(ಇ) ಇದಕ್ಕೆ ಸಂಬಂಧಪಟ್ಟ ೨೭-ಖ (iii) ನಿಬಂಧನೆಯನ್ನೂ ತಕ್ಕಂತೆ ತಿದ್ದುಪಡಿಮಾಡತಕ್ಕದ್ದು."

ಶ್ರೀ|| ಅ. ನ. ಕೃಷ್ಣರಾಯರು ಈ ಸೂಚನೆಯನ್ನು ಸಭೆಯ ಮುಂದಿಟ್ಟು ಪರಿಷದಧಿಕಾರಿಗಳ ಸ್ಥಾನವು ಒಬ್ಬರನ್ನೇ ಆಶ್ರಯಿಸಿಕೊಂಡಿರದೆ ವರ್ಷ ವರ್ಷಕ್ಕೂ ಅಧಿಕಾರಿಗಳು ಬದಲಾಗುತ್ತ ಹೋಗಬೇಕೆಂಬುದೇ ಈ ಸೂಚನೆಯ ಉದ್ದೇಶವೆಂದು ತಿಳಿಸಿದರು.

ಶ್ರೀ|| ಎಂ. ನರಸಿಂಹಮೂರ್ತಿಗಳು ಇದನ್ನು ಅನುಮೋದಿಸಿದರು.

ಶ್ರೀ|| ಸಾಲಿ ರಾಮಚಂದ್ರರಾಯರು, ಈ ನಿಯಮವಾಗುವುದರಿಂದ ಸದಸ್ಯರು ತಮ್ಮ ಚುನಾವಣೆಯ ಹಕ್ಕನ್ನು ಕಳೆದುಕೊಳ್ಳುವರೆಂದೂ ಆದ್ದರಿಂದ ಈ ಸೂಚನೆಯನ್ನು ಅಂಗೀಕರಿಸಬಾರದೆಂದೂ ಹೇಳಿದರು. ಸದಸ್ಯರಿಗೆ ದಕ್ಷರೆಂದು ತೋರುವ ಅಧಿಕಾರಿಗಳನ್ನು ಪುನಃ ಅಧಿಕಾರಿಗಳನ್ನಾಗಿ ಚುನಾಯಿಸುವ ಹಕ್ಕು ಈ ನಿಯಮದಿಂದ ಇಲ್ಲದಂತಾಗುವುದೆಂದು ಶ್ರೀ|| ವಿ. ಬಿ. ನಾಯಕರೂ, ಅಧಿಕಾರಿಗಳಿಗೆ ಅನುಭವ ಬರುವ ಹೊತ್ತಿಗೆ ಅವರನ್ನು ಕಳುಹಿಸಿಬಿಡಬೇಕಾಗುವುದೆಂದು ಶ್ರೀ|| ಚಂದ್ರಶೇಖರ ಶಾಸ್ತ್ರಿಗಳವರೂ ಸೂಚನೆಯನ್ನು ವಿರೋಧಿಸಿದರು. ಶ್ರೀ|| ಮುಗಳಿಯವರೂ ಈ ಸೂಚನೆಯನ್ನು ವಿರೋಧಿಸಿದರು.

ಸಭಾಪತಿಗಳಾದ ಶ್ರೀ|| ಡಿ. ವಿ. ಗುಂಡಪ್ಪನವರು ಶ್ರೀ|| ಎಸ್. ಎಚ್. ಪಾಟೀಲ ಅವರನ್ನು ಸಭಾಪತಿಗಳಾಗಿ ಕೆಲಸ ನಡಸುವಂತೆ ಪ್ರಾರ್ಥಿಸಿ, ತಾವು ಸಭೆಯ ಚರ್ಚೆಗಳಲ್ಲಿ ಭಾಗವಹಿಸಿ, ಈ ಸೂಚನೆಯ ಗುಣಾವಗುಣಗಳನ್ನು ತಿಳಿಸಿದರು.

ಶ್ರೀ|| ಅ. ನ. ಕೃಷ್ಣರಾಯರು ಚರ್ಚೆಗೆ ಉತ್ತರವನ್ನು ಕೊಡುತ್ತಾ, ಸದಸ್ಯರ ಹಕ್ಕಾವುದನ್ನೂ ಕಡಮೆ ಮಾಡುವ ಇಷ್ಟವು ತಮಗಿಲ್ಲವೆಂದೂ, ಅದನ್ನು ಹೆಚ್ಚಿಸುವ ಉದ್ದೇಶದಿಂದಲೇ ಆ ನಿರ್ಣಯವನ್ನು ತಾವು ತಂದರೆಂದೂ ಹೇಳಿ, ತಮ್ಮ ಸೂಚನೆಯಲ್ಲಿ ಒಂದು ವರ್ಷಕ್ಕೊಂದಾವರ್ತಿ ಅಧಿಕಾರಿಗಳ ಚುನಾವಣೆಯಾಗಬೇಕೆಂದಿರುವ ಮೊದಲ ಭಾಗವನ್ನು ಮಾತ್ರ ಇಟ್ಟುಕೊಳ್ಳಬಹುದೆಂದೂ ಉಳಿದ ಭಾಗವನ್ನು ಬಿಡಬಹುದೆಂದೂ ಸೂಚಿಸಿದರು.

ಅದರಂತೆ ಶ್ರೀ|| ವಿ. ಬಿ. ನಾಯಕರು ಈ ಕೆಳಗಿನ ತಿದ್ದುಪಡಿಯಾದ ಸೂಚನೆಯನ್ನು ಸಭೆಯ ಮುಂದಿರಿಸಿದರು:

"ಈಗಿರುವ ೧೧-ಕ ನಿಬಂಧನೆಯನ್ನು ಈ ಕೆಳಗೆ ಕಾಣಿಸಿರುವ ರೀತಿಯಲ್ಲಿ ತಿದ್ದುಪಡಿ ಮಾಡತಕ್ಕದ್ದು."

(ಅ) ಕಾರ್ಯನಿರ್ವಾಹಕ ಮಂಡಲಿಯ ಅಧಿಕಾರಿಗಳನ್ನೂ ಮತ್ತು ಇತರ ಸದಸ್ಯರನ್ನೂ (ಇನ್ನು ಮುಂದಕ್ಕೆ) ಒಂದು ವರ್ಷಕ್ಕೆ ಒಂದಾವರ್ತಿ ವಾರ್ಷಿಕಸಭೆಯಲ್ಲಿ ಚುನಾಯಿಸತಕ್ಕದ್ದು."

ಇದನ್ನು ಶ್ರೀ|| ರಂಗಪ್ಪ ಪೋತ್ದಾರರವರು ಅನುಮೋದಿಸಿದರು. ಅನಂತರ ಈ ಸೂಚನೆಯನ್ನು ಸಭೆಯ ಅಭಿಮತಕ್ಕೊಡ್ಡಲು ೧೬ ಮತಗಳು ಅದಕ್ಕನುಕೂಲವಾಗಿಯೂ ೧೦ ಪ್ರತಿಕೂಲವಾಗಿಯೂ ಬಂದುವು. ನಿರ್ಣಯವು ಅಂಗೀಕೃತವಾಯಿತು.

ಬಳಿಕ ಶ್ರೀ|| ಡಿ. ವಿ. ಗುಂಡಪ್ಪನವರು ತಮ್ಮ ಸಭಾಪತಿ ಸ್ಥಾನವನ್ನು ಮತ್ತೆ ಕೈಕೊಂಡರು.

(೨) "ಖಜನೆಯ ನಿಬಂಧನೆಯಲ್ಲಿ 'ಪರಿಷತ್ತಿಗೆ' ಎಂಬ ಮಾತಿಗೆ ಪ್ರತಿಯಾಗಿ 'ಪರಿಷತ್ತಿನ ಶಾಶ್ವತ ನಿಧಿಗೆ' ಎಂದು ಇರತಕ್ಕದ್ದು."

ಸೂಚಕರಿಲ್ಲದೆ ಈ ನಿರ್ಣಯವು ಬಿದ್ದುಹೋಯಿತು.

ಕೊನೆಯಲ್ಲಿ ಸಭಾಪತಿಗಳಾಗಿದ್ದ ಶ್ರೀ|| ಡಿ. ವಿ. ಗುಂಡಪ್ಪನವರು ಈ ಅಧಿವೇಶನದ ಕಾರ್ಯಕಲಾಪಗಳಲ್ಲಿ ಸಹಕರಿಸಿದ ಎಲ್ಲರಿಗೂ ವಂದನೆಗಳನ್ನರ್ಪಿಸಿದಮೇಲೆ ಅಧಿವೇಶನ ಮುಕ್ತಾಯವಾಯಿತು.

ಡಿ. ವಿ. ಗುಂಡಪ್ಪ
ಸಭಾಪತಿಗಳು

ತಾ|| ೧೫—೪—೧೯೩೮
ಬೆಂಗಳೂರು

ಎಸ್. ವಿ. ರಂಗಣ್ಣ
ಗೌ|| ಕಾರ್ಯದರ್ಶಿ

---

ಕರ್ನಾಟಕ ಸಾಹಿತ್ಯ ಪರಿಷತ್ತು
ಬೆಂಗಳೂರು

---

# ಕನ್ನಡದ ಬಾವುಟ

ಕನ್ನಡ ನಾಡು, ನುಡಿ, ಜನ, ನಯ, ಮಮತೆಗಳನ್ನು ಹೊಮ್ಮಿಸುವ ಕವಿತೆಗಳ ಬೆಳಸು.

೭ನೆಯ ಶತಮಾನದಿಂದ ೨೦ನೆಯ ಶತಮಾನದ ಇಂದಿನ ವರೆಗಿನ ಕನ್ನಡ ಬೆಳೆ—ಶಾಸನಗಳು, ಪೂರ್ವಸಾಹಿತ್ಯ, ನಾಡಪದಗಳು, ಇಂದಿನ ಹೊಸ ಕವಿತೆ—ಈ ನಾಲ್ಕೂ ತೆನೆಕಟ್ಟುಗಳಲ್ಲಿ ಇಲ್ಲಿ ಕಾಣುತ್ತದೆ.

ಕಾಲಕಾಲದ ಭಾಷೆಯ ಮಾರ್ಪಾಟುಗಳು, ಛಂದಸ್ಸಿನ ಬಗೆಬಗೆಯ ಕುಣಿತ, ಕನ್ನಡ ನಾಡಿನ ಸೊಬಗು, ಹೃದಯ, ಧರ್ಮಗಳು, ಮಹಾವ್ಯಕ್ತಿಗಳು, ಜೀವಗುರಿಗಳು, ಪ್ರಾಂತಪ್ರೇಮಗಳು—ಎಂದರೆ ಹಿಂದಿನ ದೊಡ್ಡ ಸಂಸ್ಕಾರ, ಇಂದಿನ ಗುರಿ, ಮಿಡಿತ, ಇವನ್ನು ಕನ್ನಡದ ಬಾವುಟದಲ್ಲಿ ಕಾಣಬಹುದು.

೧೦ ಚಿತ್ರಗಳಿಂದ ಸೊಗಸುಗೊಂಡಿದೆ; ಹಿಂದಿನ ೩೦ ಕಾವ್ಯಗಳಿಂದ ಎತ್ತಿದ, ಇಂದಿನ ೮೮ ಕವಿತೆಗಳನ್ನುಳ್ಳ, ಸುಮಾರು ೧೬೦ ಪುಟ ಗಾತ್ರದ ಕವಿತೆಗಳ ಗೊಂಚಲು.

ನುಣುಪಾದ ಕಾಗದದ ಮೇಲೆ ಚೆಲುವಾದ ಅಚ್ಚು.

ಸಾದಾ ಪ್ರತಿ :: ರೂ. ೧—೦—೦
(ಸದಸ್ಯರಿಗೆ ೧೨ ಆಣೆ.)
ಕ್ಯಾಲಿಕೊ :: ರೂ. ೧—೮—೦
(ಸದಸ್ಯರಿಗೆ ರೂ. ೧-೨-೦)

ಅಂಚೆಯ ವೆಚ್ಚ ಪ್ರತ್ಯೇಕ.

ಬೆಂಗಳೂರು ಕರ್ನಾಟಕ ಸಾಹಿತ್ಯ ಪರಿಷತ್ತಿನಲ್ಲಿ ಮಾರಾಟಕ್ಕಿದೆ.

ದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು ಸಿಟಿ.

# ಕರ್ನಾಟಕ ಸಾಹಿತ್ಯ ಪರಿಷತ್ತು

ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ, ಚಾಮರಾಜಪೇಟೆ, ಬೆಂಗಳೂರು

---

# ದಿವಂಗತ ಶ್ರೀ. ಇ. ಎ. ಭಾಸ್ಕರರಾಯ ಜ್ಞಾಪಕ ಸ್ಪರ್ಧೆ

---

ದಿವಂಗತ ಶ್ರೀ|| ಇ. ಎ. ಭಾಸ್ಕರರಾಯರ ಹೆಸರಿನಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತು ಕನ್ನಡ ಸಾಹಿತ್ಯ ಪ್ರೋತ್ಸಾಹದ ಒಂದು ಏರ್ಪಾಟನ್ನು ನಡಸಬೇಕೆಂಬ ಉದ್ದೇಶದಿಂದ ಶ್ರೀ|| ಭಾಸ್ಕರರಾಯರ ತಾಯಿ ಶ್ರೀಮತಿ ಎ. ಶೇಷಮ್ಮನವರು ಒಂದು ಜ್ಞಾಪಕ ನಿಧಿಯನ್ನು ಪರಿಷತ್ತಿಗೆ ಕೊಟ್ಟಿರುವುದು ಸರಿಯಷ್ಟೆ. ಈ ಜ್ಞಾಪಕ ನಿಧಿಯ ಸಂಬಂಧದಲ್ಲಿ ಈ ವರ್ಷ (೧೯೩೮ ರಲ್ಲಿ) ಕನ್ನಡ ಸಾಹಿತ್ಯ ವಿಚಾರ ಪ್ರಬಂಧದ ಸ್ಪರ್ಧೆಯನ್ನು ಏರ್ಪಡಿಸತಕ್ಕದ್ದೆಂದು ನಿಶ್ಚಯವಾಗಿದೆ.

## ನಿಯಮಗಳು

೧. ಕನ್ನಡ ಸಣ್ಣ ಕಥೆಯ ಸ್ವರೂಪ ಎಂಬ ವಿಷಯವಾಗಿ ಒಂದು ಪ್ರಬಂಧವನ್ನು ಅಥವಾ ಕನ್ನಡ ಸಾಹಿತ್ಯ ವಿಚಾರಕ್ಕೆ ಸಂಬಂಧಪಟ್ಟ ಮೂರು ಸ್ವತಂತ್ರ ಪ್ರಬಂಧಗಳನ್ನು ಕಳುಹಿಸಬೇಕು.

೨. ಪ್ರಬಂಧವು ಅಥವಾ ಪ್ರಬಂಧಗಳು ಫೂಲ್ಸ್‌ಕ್ಯಾಪ್ ಆಕಾರದ ೨೦ ಪುಟಗಳ ಪರಿಮಿತಿಯಲ್ಲಿ ಇರಬೇಕು; (ಸ್ವತಂತ್ರ ಪ್ರಬಂಧಗಳು ಮೂರೂ ಸೇರಿ ಒಟ್ಟು ೨೦ ಪುಟಗಳನ್ನು ಮೀರಿರ ತಕ್ಕದ್ದಲ್ಲ); ಮತ್ತು ಅದನ್ನು ಕಾಗದದ ಒಂದೇ ಪಕ್ಕದಲ್ಲಿ, ಶಾಯಿಯಲ್ಲಿ, ಸ್ಪಷ್ಟಾಕ್ಷರ ಗಳಲ್ಲಿ ಬರೆದಿರಬೇಕು.

೩. ೧೯೩೮ನೆಯ ಇಸವಿ ಸೆಪ್ಟೆಂಬರ್ ತಿಂಗಳು ೩೦ನೆಯ ತಾರೀಖಿನೊಳಗಾಗಿ ಪರಿಷತ್ತಿನ ಕಚೇರಿಗೆ ಪ್ರಬಂಧವು ತಲಪಬೇಕು.

೪. ಅತ್ಯುತ್ತಮವೆಂದು ಪರೀಕ್ಷಾ ಸಮಿತಿ ತೀರ್ಮಾನಿಸಿದ ಪ್ರಬಂಧಕ್ಕೆ ೨೦ ರೂಪಾಯಿಗಳ ಬೆಲೆಯುಳ್ಳ ಬಹುಮಾನವನ್ನು ಕೊಡಲಾಗುವುದು.

೫. ಬಹುಮಾನ ಪಡೆದ ಪ್ರಬಂಧವನ್ನು ಪ್ರಕಟಿಸಲು ಪರಿಷತ್ತಿಗೆ ಹಕ್ಕು ಇರುತ್ತದೆ.

೬. ಬಹುಮಾನಕ್ಕೆ ಅರ್ಹವಾದ ಪ್ರಬಂಧ ಬಾರದಿದ್ದಲ್ಲಿ ಬಹುಮಾನವನ್ನು ಕೊಡದೆ ಇರುವ ಹಕ್ಕೂ ಪರಿಷತ್ತಿಗಿದೆ.

೭. ಸಾಕಷ್ಟು ಸಂಖ್ಯೆಯಲ್ಲಿ ಪ್ರಬಂಧಗಳು ಬಾರದಿದ್ದರೆ ಸ್ಪರ್ಧೆಯನ್ನು ನಿಲ್ಲಿಸಿದರೂ ನಿಲ್ಲಿಸಬಹುದು.

[ವಿಶೇಷ ಸೂಚನೆ : ಈ ಸ್ಪರ್ಧೆಗೆ ಯಾರುಬೇಕಾದರೂ ಲೇಖನವನ್ನು ಕಳುಹಿಸಬಹುದು. ಹಾಗೆ ಬಂದ ಲೇಖನಗಳನ್ನು ಹಿಂದಕ್ಕೆ ಕಳುಹಿಸಲಾಗುವುದಿಲ್ಲ. ಆದ್ದರಿಂದ ಸ್ಪರ್ಧಿಗಳು ತಮ್ಮ ಲೇಖನದ ಒಂದು ಪ್ರತಿಯನ್ನು ತಮ್ಮಲ್ಲಿ ಉಳಿಸಿಕೊಳ್ಳಬೇಕೆಂದು ಪ್ರಾರ್ಥನೆ.]

ಕನ್ನಡದ ಅಭಿಮಾನಿಗಳು ಪ್ರಬಂಧಗಳನ್ನು ಬರೆದು ಕಳುಹಿಸಿ ಈ ಸ್ಪರ್ಧೆಯ ಉದ್ದೇಶವನ್ನು ಈಡೇರಿಸಿಕೊಡಬೇಕೆಂದು ಪ್ರಾರ್ಥನೆ.

ಪ್ರಬಂಧಗಳನ್ನೂ ಸ್ಪರ್ಧೆಯ ವಿಚಾರದ ಕಾಗದಗಳನ್ನೂ ಈ ಕೆಳಗಿನ ವಿಳಾಸಕ್ಕೆ ಕಳುಹಿಸತಕ್ಕದ್ದು:

ಎಸ್. ವಿ. ರಂಗಣ್ಣ, ಎಂ.ಎ.,
ಗೌರವ ಕಾರ್ಯದರ್ಶಿ,
ಕರ್ನಾಟಕ ಸಾಹಿತ್ಯ ಪರಿಷತ್ತು,
ಹಾರ್ಡಿಂಜ್ ರಸ್ತೆ, ಚಾಮರಾಜಪೇಟೆ,
ಬೆಂಗಳೂರು ಸಿಟಿ.

೧ನೆಯ ಜುಲೈ ೧೯೩೮.

---

ಸುಬೋಧ ಮುದ್ರಣಾಲಯ, ಬೆಂಗಳೂರು.

THE QUARTERLY JOURNAL
OF THE
KANNADA LITERARY ACADEMY

Vol. XXIII] JULY–SEPTEMBER, 1938 [No. 3

## CONTENTS IN BRIEF

I. Is **"Karnāṭaka" Incorrect?**—*By Mr. T. N. Sreekantaiya, M.A., Lecturer in Kannada, Maharaja's College, Mysore.*

"'*Karnātaka*' is the Sanskritized form of 'Karnādu' (Karnādu > Karnāta + ka). The question why Karnāta becomes 'Karṇāta' is usually explained in the light of Paṇinian Phonetics, according to which the dental Na (न) when it comes under the influence of the cerebral Ra (र) changes itself into a cerebral (ण). But the hypothesis that Ra is always a cerebral in Sanskrit is questionable; it was and is dental. For example, all the Prātiśākhyas of the Vedas prescribe a dental origin for Ra. And it is undoubtedly dental in the Dravidian tongues. It may therefore be contended that '*Karnāṭaka*' is as correct as '*Karṇāṭaka*'."

II. **Karnāṭa(ka)–Karṇāṭa(ka)**—*By Mr. G. P. Rajaratnam, M.A., Lecturer in Kannada, Intermediate College, Mysore.*

"(1) The traditional theory is that 'Kannada' is the *tadbhava* of 'Karṇāta(ka) which is a pure Sanskrit word derived thus: *Karṇayōrṭati Iti Karṇātah* (the language of that country the fame of which has passed from ear to ear).—This derivation has been objected to on the ground that it holds good in regard to any country, and, therefore, to any language. And 'Kaṇṇada' would be the natural *tadbhava* of 'Karṇāṭaka', and not 'Kannada'. (2) Whatever may be the derivation of the word, the form must be 'Karṇāṭaka' in Sanskrit, as, according to Pāṇini, there is no room for a dental Na along with a cerebral Ra in a word.—This hypothesis is untenable as there are many Sanskrit words which do not conform to the Pāṇinian Grammar (*e.g.*, durnaya, durnīti, durnāśa, etc.). (3) 'Karnāṭaka' is a genuine Kannada word which can be derived thus: kar + nāṭ(ḍ)ū + akam (kar = black or big, great; nāṭ(ḍ)u = country; akam = territory or province).—That 'karnāḍu' means a black country or great country is at once acceptable, but it would be hard to take 'akam' to mean a territory or a province".

The author then refers to the various forms of the word that occur in about 100 inscriptions of the Kannada country from the 8th century onwards, and draws attention to the fact that 'karnāṭ(ka)' occurs therein almost as many times as 'karṇāṭa(ka)'. He therefore opines that '*karnāḍu*' must have become '*karnāṭa*' (*cf.* punnāḍu > punnāṭa) and later on Sanskritized (according to Paṇinian Grammar) as '*karṇāta*' with the suffix *ka*. And he concludes by saying that, as the Paṇinian rule has been found to be untenable, the form '*Karnāṭaka*' should be accepted.

III. **Tradition and Modernism in Kannada literature.**—*By Mr. D. R. Bendre, M.A., Dharwar.*

"What is wanted in literature is a balanced and controlled activity of the forces of Tradition and Modernism in harmonious conjunction. There should be no room for conflict between Tradition and Modernism in literature, though the history of Kannada literature is not wanting in instances of such conflicts. But the best in Kannada literature and culture has from the past developed a sense of harmonious existence and through it a purpose to achieve perfection. We want now such a Kannada literature of heroic eminence as is capable of opening the gates of a new life with its outstretched hands of Tradition and Modernism."

IV. **Poetry-reading Classes: *Gamaka Goshthi.***

The Valedictory Ceremony of the Fourth Annual Session of this activity of the Parishat took place on 5th August 1938 under the Presidentship of

Mr. N. Balakrishnaiya, B.A., LL.B., Honorary President of the Bangalore City Municipality. A detailed Report is given.

V. **Activities of the Parishat :** (i) RESOLUTIONS OF THE MANAGING COMMITTEE (January–March, 1938) : IMPORTANT TOPICS.

Vice-President's welcome to the members of the re-constituted Committee—Expression of loyalty and devotion to His Highness the Yuvaraja of Mysore, President and Patron of the Parishat—Starting of the 'Parishat Silver Jubilee Fund'—Kannada in Bellary : Resolution against the proposed inclusion of Bellary under the jurisdiction of the Andhra University and in the Andhra Province—Appointment of Mr. Y. Mahabaleswarappa of Bellary on the Committee *vice* the late Mr. P. Mangesa Rao—Acknowledgment of the presentation of a portrait of the late Mr. M. Venkatakrishnaiya by Mr. S. G. Sastry and that of the late Mr. B. Venkatachar by Mr. B. Garudachar.

(ii) LITERARY AND CULTURAL ACTIVITIES :

*Lectures* :—(1) "Flag of Kannada"—Prof. B. M. Srikantia ; (2) "The Story of Viśvantara"—Mr. G. P. Rajaratnam ; (3) "The Science and Educational Congresses at Calcutta"—Mr. C. Krishnaswami Rao ; (4) Public Meeting to express sympathy with the Karnataka Unification Movement ; *Lectures* :—(5) "The Kannada Movement and its Future"—Mr. Mudavidu Krishna Rao ; (6) "Life of Chatrapati Śivāji"—Mr. M. Narasinga Rao ; (7) "Volcanoes"—Mr. B. M. Sivaramaiya ; (8) "Women and Literary Service"—Sri. R. Kalyanamma ; (9) Recitation of *Tirupāṇi*"—Sri. Lalitamma ; (10-11) Staging of Kannada plays in aid of the Spring Literary Festival by the Karnatak Hindi Amateurs, and by Mr. C. Sadasivaiah and party ; *Lectures* : (12–13) "The late *Kavitilaka Āsthāna Vidvān* Sosale Ayya Sastri and his Works" ; "Bhaṭṭākalaṅka and the Usage of Kannada Words"—*Āsthāna Vidvān* K. Varadacharya ; (14) "Experiences at Malaya"—Mr. M. Subba Rao ; (15) Celebration of the Birthday of His Highness the Maharaja of Mysore.

VI. **Members :** Enrolled during the quarter : 80 ; Institution affiliated : 1.

VII. **Reports from Affiliated Associations :**

Brief reports of twelve Karnataka Sanghas are published.

VIII. **Book-Reviews :** Number of Books reviewed : 8.

One of these is a Biography in Tamil of Dr. Caldwell. The reviewer gives a summary of a lecture delivered by Mr. B. M. Srikantia appreciating the valuable services rendered by Dr. Caldwell by the publication of his monumental work *The Comparative Grammar of the Dravidian Languages* and the establishment of the theory of "The Dravidian Family of Languages" independent of Sanskrit.

IX. **Editorial Notes :**

Whether 'Karnāṭaka' is justified or not : Reference to articles published in this issue and appeal for further contributions on the subject—How far should Provincial literature be dependent on Sanskrit ? : Views of Dr. Rabindranath Tagore—Dissemination of knowledge through Provincial languages : Views of Sir Mirza M. Ismail—Age of Dravidian Civilization and Culture is at least 14,000 years : Opinion of Swami Nityananda—Congress of the P.E.N. Club to be held in the Mysore State in 1940—Expression of condolence on the demise of (1) *Vaiṇikapravīṇa* Mr. Subbanna of Mysore, (2) Mr. H. Venkoba Rao, of the *Sirahaṭṭi* Dramatic Troupe, (3) Mr. T. Appu Rao, B.A., B.L., Advocate of Bangalore and (4) Mr. C. Krishna Rao, B.A., Retired Deputy Inspector-General of Education in Mysore—Felicitation to new Publishing Company, *Viśāla Karnāṭaka Prakaṭanālaya*. started at Dharwar—Proposal to start a Printing Press in the Parishat approved by the Executive Committee—Welcome to the (i) 'United Karnataka', an English weekly, published from Dharwar ; (ii) 'Bombay Kannadiga', a Kannada weekly published from Bombay ; and (iii) *Kannada Nudi*, a Kannada literary weekly to be published under the auspices of the Parishat from 4th October 1938—Welcome to the proposed publication of three volumes in Kannada prose on 'Pampa and his Works' by Pundit Muliya Thimmappaiya of Mangalore—Congratulations to Mr. V. K. Gokak on his taking a 1st Class in the B.A. Degree examination of the Oxford University in the English language—Decision to hold the Twenty-third Kannada Literary Conference at Bellary in December next.





## ವಿಷಯ ಸೂಚಿಕೆ





---

# ವಿನಿಮಯ ಪತ್ರಿಕೆ ಮತ್ತು ಪ್ರಕಟನೆಗಳ ಪಟ್ಟಿ

**ತ್ರೈಮಾಸಿಕ ಪತ್ರಿಕೆಗಳು:**— ೧. Journal of the Mythic Society. ೨. Journal of the Andhra Historical Research Society. ೩. Journal of the Bharata Itihasa Samshodhaka Mandala. ೪. Maharashtra Sahitya Parishat Patrika. ೫. The Karnatak Historical Review. ೬. Journal of the Annamalai University. ೭. Journal of the Bombay Branch of the Royal Asiatic Society. ೮. Indian Culture. ೯. Journal of the K. R. Cama Oriental Research Institute. ೧೦. Journal of Indian History. ೧೧. Journal of the International Mediterranean Association. ೧೨. Zeitschrift für Indologie und Iranistik. ೧೩. ಶ್ರೀಮನ್ ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ ಪತ್ರಿಕಾ. ೧೪. ಪ್ರಾಚೀನ ಕರ್ನಾಟಕ. ೧೫. ಪ್ರಬುದ್ಧ ಕರ್ಣಾಟಕ. ೧೬. ವಂಗೀಯ ಸಾಹಿತ್ಯ ಪರಿಷತ್ಪತ್ರಿಕೆ. ೧೭. The Jaina Antiquary (ಜೈನ ಸಿದ್ಧಾಂತ ಭಾಸ್ಕರ). ೧೮. Hindustani. ೧೯. ಹಳ್ಳಿಯ ಆಳು. ೨೦. ಗರಿಕೆ. ೨೧. Annals of the Bhandarkar Oriental Research Institute.

**ದ್ವೈಮಾಸಿಕ ಪತ್ರಿಕೆಗಳು:**— ೧. Journal of the Bombay University. ೨. ಆಂಧ್ರ ಸಾಹಿತ್ಯ ಪರಿಷತ್ ಪತ್ರಿಕೆ. ೩. ಶಿವಾನುಭವ. ೪. Bulletin of the Museum of Fine Arts.

**ಮಾಸ ಪತ್ರಿಕೆಗಳು:**— ೧. The Mysore Economic Journal. ೨. Jaina Gazette. ೩. The Indian P.E.N. ೪. ಅಧ್ಯಾತ್ಮ ಪ್ರಕಾಶ. ೫. ಆರೋಗ್ಯ ಚಂದ್ರಿಕೆ. ೬. ಜಯಕರ್ನಾಟಕ. ೭. ಮೈಸೂರು ಸಹಕಾರ ಪತ್ರಿಕೆ. ೮. ದಿವ್ಯಜ್ಯೋತಿ. ೯. ಸುಬೋಧ. ೧೦. ಸದ್ಬೋಧ ಚಂದ್ರಿಕೆ. ೧೧. ಮೈಸೂರು ವ್ಯವಸಾಯ ಬೋಧಕ ಸಂಘದ ಪತ್ರಿಕೆ. ೧೨. ಕಾದಂಬರೀ ಸಂಗ್ರಹ. ೧೩. ದೇಶೀಯ ವಿದ್ಯಾಶಾಲಾ ಪತ್ರಿಕೆ. ೧೪. ಮೈಸೂರು ಮಕ್ಕಳು. ೧೫. ಸದ್ಧರ್ಮದೀಪಿಕೆ. ೧೬. ಮಕ್ಕಳ ಪುಸ್ತಕ. ೧೭. ವಿವೇಕಾಭ್ಯುದಯ. ೧೮. ತ್ರಿವೇಣಿ. ೧೯. ಕತೆಗಾರ. ೨೦. ಭಾರತಿ. ೨೧. ಬಡವರ ಬಂಧು. ೨೨. ನಗುವ ನಂದ. ೨೩. ಭಾರತಿ (ತೆಲುಗು). ೨೪. ಕಥಾಕುಂಜ. ೨೫. ವೀರಶೈವ ಚಂದ್ರಿಕೆ. ೨೬. ಸಂಸ್ಕೃತ ಸಾಹಿತ್ಯ ಪರಿಷತ್ಪತ್ರಿಕೆ. ೨೭. ಸರಸ್ವತಿ. ೨೮. ಹಂಸ. ೨೯. ವಿಮಾ ವಾಣಿಜ್ಯ. ೩೦. ವಿದ್ಯಾದಾಯಿನಿ. ೩೧. ವಿವಿಧ ವಿಜ್ಞಾನ ವಿಸ್ತಾರ. ೩೨. ಶರಣ ಸಾಹಿತ್ಯ. ೩೩. ಜಯಂತಿ. ೩೪. ಚಿತ್ರಾ.

**ವಾರ ಪತ್ರಿಕೆಗಳು:**— ೧. ರಾಜಹಂಸ. ೨. ಸ್ವದೇಶಾಭಿಮಾನಿ. ೩. ಕಂಠೀರವ. ೪. ರಾಷ್ಟ್ರಬಂಧು. ೫. ಕರ್ನಾಟಕ ವೈಭವ. ೬. ಶರಣ ಸಂದೇಶ. ೭. ಬಸವರಾಜ. ೮. ಲೋಕಮತ. ೯. ಅರುಣೋದಯ. ೧೦. ಸಂಯುಕ್ತ ಕರ್ನಾಟಕ. ೧೧. ಕರ್ನಾಟಕ ಬಂಧು. ೧೨. ಪ್ರಜಾಮತ. ೧೩. ಜನ್ಮಭೂಮಿ. ೧೪. ವಿಶ್ವಕರ್ಣಾಟಕ. ೧೫. ಅರ್ಥಸಾಧಕ ಪತ್ರಿಕೆ. ೧೬. ವೃತ್ತಾಂತ ಪತ್ರಿಕೆ. ೧೭. ವಿಶ್ವಬಂಧು. ೧೮. ಉದಯ. ೧೯. ಕರ್ನಾಟಕ ಟೈಮ್ಸ್. ೨೦. ತಾಯಿನಾಡು. ೨೧. ಪ್ರಭಾತ. ೨೨. ನವಸಂದೇಶ. ೨೩. United Karnataka.

**ಇತರ ಪ್ರಕಟನೆಗಳು:**— ೧. ಇಂಡಿಯ ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೨. ಮೈಸೂರು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೩. ಹೈದರಾಬಾದು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೪. ಜಯಕರ್ನಾಟಕ ಗ್ರಂಥಮಾಲೆ. ೫. ಮನೋಹರ ಗ್ರಂಥಮಾಲೆ. ೬. ವಿದ್ಯಾರಣ್ಯ ಗ್ರಂಥಮಾಲೆ. ೭. ಪ್ರೇಮ ಗ್ರಂಥಮಾಲೆ. ೮. Indiana. ೯. The Kanara Brotherhood Annual. ೧೦. ಮಿಂಚಿನ ಬಳ್ಳಿ.

# 'ಕರ್ನಾಟಕ' ಎಂಬ ರೂಪವು ಅಸಾಧುವೇ?

ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರು, ಎಂ.ಎ., ಮೈಸೂರು

---

'ಕಣಾ(ನಾ)ರ್ಟಕ' ಶಬ್ದದ ಅನುನಾಸಿಕವು ಮೂರ್ಧನ್ಯವೆ? ದಂತ್ಯವೆ? ಎಂಬ ವಿಷಯದಲ್ಲಿ ಈಗ ವಿಶೇಷವಾಗಿ ಚರ್ಚೆ ನಡೆಯುತ್ತಿದೆಯಷ್ಟೆ. ಇದು ಮುಖ್ಯವಾಗಿ ಶಿಕ್ಷಾಶಾಸ್ತ್ರಕ್ಕೆ (Phonetics) ಸಂಬಂಧಪಟ್ಟ ಪ್ರಶ್ನೆ. ಆ ಶಾಸ್ತ್ರದ ದೃಷ್ಟಿಯಿಂದ ಈ ಚರ್ಚೆಗೆ ಅನ್ವಯಿಸುವ ಕೆಲವು ಅಂಶಗಳನ್ನು ವಿದ್ವಾಂಸರ ಗಮನಕ್ಕೆ ತರಬೇಕೆಂಬುದೇ ಈ ಲೇಖನದ ಉದ್ದೇಶ.

ಮೊದಲು, 'ಕಣಾ(ನಾ)ರ್ಟ', 'ಕಣಾ(ನಾ)ರ್ಟಕ' ಶಬ್ದಗಳ ವ್ಯುತ್ಪತ್ತಿಯನ್ನು ಕುರಿತು ಒಂದು ಮಾತು. ಇವು ಮೂಲತಃ ಸಂಸ್ಕೃತಶಬ್ದಗಳಲ್ಲ. 'ಪುನ್ನಾಡು' ಎಂಬುದು ಸಂಸ್ಕೃತಕ್ಕೆ ಬರುವಾಗ 'ಪುನ್ನಾಟ' ಎಂದು ಆದಂತೆ, 'ಕರ್ನಾಡು' ಎಂಬ ದೇಶ್ಯಶಬ್ದವು ಸಂಸ್ಕೃತಜ್ಞರ ಉಚ್ಚಾರಣೆಯಲ್ಲಿ 'ಕಣಾ(ನಾ)ರ್ಟ' ಎಂಬ ರೂಪವನ್ನು ತಾಳಿರಬೇಕು. ಅನ್ಯಭಾಷೆಯ ಅಥವಾ ಜನಾಂಗದ ಹೆಸರುಗಳನ್ನು ಹೀಗೆ ಮಾರ್ಪಡಿಸಿ ಸ್ವೀಕರಿಸುವುದು ಯಾವ ಭಾಷೆಗೂ ಹೊಸದಲ್ಲ. ಸಂಸ್ಕೃತಭಾಷೆಯ ಚರಿತ್ರೆಯಲ್ಲಿ ಈ ಕಾರ್ಯವು ಉದ್ದಕ್ಕೂ ನಡೆದಿದೆ: ದ್ರಮಿಡ, ಯವನ, ತುರುಷ್ಕ, ಆಂಗ್ಲ ಮೊದಲಾದ ಶಬ್ದಗಳು ಈ ಮಾತಿಗೆ ನಿದರ್ಶನ.

ಕಣಾ(ನಾ)ರ್ಟ + ಕ = ಕಣಾ(ನಾ)ರ್ಟಕ. ('ಕರ್ನಾಟಕ' ಶಬ್ದಕ್ಕೆ ಬೇರೆ ರೀತಿಯ ವ್ಯುತ್ಪತ್ತಿಯನ್ನು ಹೇಳುವುದೂ ಉಂಟು; ಆದರೆ ಆ ಪ್ರಸ್ತಾವಕ್ಕೆ ಇಲ್ಲಿ ಕೈಹಾಕುವುದಿಲ್ಲ.) 'ಕಣಾ(ನಾ)ರ್ಟ' ಎಂಬುದರ ಉಚ್ಚಾರಣೆಗೆ ಅನ್ವಯಿಸುವ ಮಾತುಗಳೇ 'ಕಣಾ(ನಾ)ರ್ಟಕ'ಕ್ಕೂ ಅನ್ವಯಿಸುವುದರಿಂದ, ನಿರೂಪಣೆಯ ಸೌಕರ್ಯಕ್ಕಾಗಿ ಈ ಮುಂದೆ 'ಕಣಾ(ನಾ)ರ್ಟ' ಎಂಬ ಶಬ್ದದ ಮಾತನ್ನೇ ಮುಖ್ಯವಾಗಿ ಹೇಳಿದೆ.

'ಕರ್ನಾಡು' ಎಂಬುದರಲ್ಲಿ ಅನುನಾಸಿಕವು ದಂತ್ಯವಷ್ಟೆ. 'ಕರ್ಣಾಟ' ಎಂಬ ಸಂಸ್ಕೃತರೂಪದಲ್ಲಿ ಇದು ಏಕೆ ಮೂರ್ಧನ್ಯವಾಯಿತು? ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. "ರಷಾಭ್ಯಾಂ ನೋ ಣಃ ಸಮಾನಪದೇ" (ಒಂದೇ ಪದದಲ್ಲಿ ರೇಫದ ಅಥವಾ ಷಕಾರದ ಮುಂದಿನ ನಕಾರವು ಣಕಾರವಾಗುತ್ತದೆ) ಎಂಬ ಪಾಣಿನೀಯ ಸೂತ್ರದಂತೆ (viii. ೪. ೧), 'ಕರ್ನಾಟ' ಎಂದು ನಿಲ್ಲದೆ 'ಕರ್ಣಾಟ' ಎಂದೇ ಆಗಬೇಕೆನ್ನುವುದು ಸಾಂಪ್ರದಾಯಿಕವಾದ ಉತ್ತರ. ಭಾಷೆಯಲ್ಲಿ ಹೀಗೆ ವರ್ಣವಿಕಾರಗಳು ಶಿಕ್ಷಾಶಾಸ್ತ್ರವಿಹಿತವಾದ ಕಾರಣಗಳಿಲ್ಲದೆ ನಡೆಯುವುದಿಲ್ಲ. ಪಾಣಿನೀಯ ಶಿಕ್ಷೆಯಂತೆ ಋ ೠ ಟವರ್ಗ ರೇಫ ಷಕಾರಗಳು ಮೂರ್ಧನ್ಯಗಳು. ("ಸ್ಯುರ್ಮೂರ್ಧನ್ಯಾ ಋಟುರಷಾಃ.") ರೇಫವು ಮೂರ್ಧನ್ಯವಾದ ಪಕ್ಷದಲ್ಲಿ, ಅದರ ಮುಂದೆ ದಂತ್ಯ ನಕಾರಕ್ಕಿಂತಲೂ ಮೂರ್ಧನ್ಯ ಣಕಾರವನ್ನು

ಉಚ್ಚರಿಸುವುದು ಸುಕರ. 'ಕರ್ಣಾಟ' ಎಂಬ ಮೂರ್ಧನ್ಯವಿಶಿಷ್ಟವಾದ ರೂಪವು ಪಾಣಿನಿ ಸಮ್ಮತವಾಗುವುದಕ್ಕೆ ಇದೇ ನಿಜವಾದ ಆಧಾರ.

ಹೀಗೆ, ಶಿಕ್ಷಾಶಾಸ್ತ್ರದ ದೃಷ್ಟಿಯಿಂದ ನೋಡಿದರೆ, 'ಕರ್ಣಾ(ರ್ನಾ)ಟ' ಶಬ್ದದಲ್ಲಿ ಮೂರ್ಧನ್ಯಣಕಾರವು ಉಪಾದೇಯವಾಗಬೇಕಾದರೆ ರೇಫವೂ ಮೂರ್ಧನ್ಯವಾಗಿರಬೇಕು. ಆದರೆ ನಮ್ಮ ರೇಫವು[1] ಮೂರ್ಧನ್ಯವೇ ಎಂಬ ವಿಷಯದಲ್ಲಿ ಪ್ರಬಲವಾದ ಸಂದೇಹವುಂಟು:

(೧) ನಮ್ಮ ಇಂದಿನ ಉಚ್ಚಾರಣೆಯಲ್ಲಂತೂ ರೇಫವು ಎಷ್ಟುಮಾತ್ರಕ್ಕೂ ಮೂರ್ಧನ್ಯವಲ್ಲ. ಮೂರ್ಧನ್ಯವರ್ಣದ ಉಚ್ಚಾರಣೆಯಲ್ಲಿ ನಾಲಗೆಯ ತುದಿ ಅಂಗಳಿನ ಬಳಿಗೆ ಎದ್ದು ಅಲ್ಲಿ ಮೇಲಕ್ಕೆ ಸುರುಳಿಯಾಗಿ ಬಾಗುತ್ತದೆ. ಟ್, ಣ್, ಷ್, ಳ್ ಮೊದಲಾದ ಮೂರ್ಧನ್ಯಗಳನ್ನು ಉಚ್ಚರಿಸಿ ನೋಡಿದರೆ, ಈ ಮಾತು ಸ್ಪಷ್ಟವಾಗುತ್ತದೆ. ರೇಫದ ಉಚ್ಚಾರಣೆಯಲ್ಲಾದರೆ, ನಾಲಗೆಯ ತುದಿ ಹಲ್ಲು ಸಾಲಿನಮೇಲೆ ಒಸಡಿಗೆ ತಾಗಿಕೊಂಡಿರುತ್ತದೆ. ತ್, ನ್, ಲ್, ಸ್ ಮೊದಲಾದ ದಂತ್ಯವರ್ಣಗಳ ಜೊತೆಗೆ ರೇಫವನ್ನೂ ಉಚ್ಚರಿಸಿ ನೋಡಿದರೆ, ಇವೆಲ್ಲ ವರ್ಣಗಳ ಉತ್ಪತ್ತಿಸ್ಥಾನವೂ ಹೆಚ್ಚು ಕಡಮೆ ಒಂದೇ ಎಂಬುದು ಗೊತ್ತಾಗುತ್ತದೆ. ಆದಕಾರಣ ರೇಫವನ್ನು ದಂತ್ಯವೆಂದೋ ದಂತಮೂಲೀಯವೆಂದೋ ನಿರ್ದೇಶಿಸಬೇಕೇ ಹೊರತು ಮೂರ್ಧನ್ಯವೆಂದು ಎಂದಿಗೂ ಹೇಳಲಾಗುವುದಿಲ್ಲ. (ಇಲ್ಲಿ ದಂತ್ಯಕ್ಕೂ ದಂತಮೂಲೀಯಕ್ಕೂ ಇರುವ ಸೂಕ್ಷ್ಮ ವ್ಯತ್ಯಾಸವನ್ನು ಗಮನಿಸಿಲ್ಲ.) ಅದು ಮೂರ್ಧನ್ಯವಲ್ಲವೆಂದು ಅರಿತುಕೊಳ್ಳುವುದಕ್ಕೆ ಇನ್ನೊಂದು ಸುಲಭವಾದ ಪ್ರಯೋಗವನ್ನು ಮಾಡಬಹುದು. 'ಆರ್ಷ', 'ದಾರ್ಢ್ಯ'— ಈ ಶಬ್ದಗಳನ್ನು ಸಾವಕಾಶವಾಗಿ ಉಚ್ಚರಿಸಿ ನೋಡಿದರೆ, ರೇಫವನ್ನು ಒಸಡಿನ ಬಳಿ ಉಚ್ಚರಿಸಿದ ಬಳಿಕ ಷ್, ಢ್ ಎಂಬ ಮೂರ್ಧನ್ಯಗಳನ್ನು ಉಚ್ಚರಿಸುವುದಕ್ಕಾಗಿ ನಾಲಗೆ ಎಷ್ಟು ಮೇಲಕ್ಕೆ ಹಾದು ಹೋಗಿ ಸುರುಟಿಕೊಳ್ಳಬೇಕಾಗುವುದೆಂಬುದು ಗೊತ್ತಾಗುತ್ತದೆ.

ನಮ್ಮಲ್ಲಿ ರೇಫವು ಹೀಗೆ ದಂತ್ಯವಾಗಿರುವುದರಿಂದಲೇ, ಎಷ್ಟೋ ಮಂದಿ 'ಕರ್ಣ', 'ವರ್ಣ' ಮೊದಲಾದ ಸಂಸ್ಕೃತಶಬ್ದಗಳನ್ನು 'ಕರ್ನ', 'ವರ್ನ' ಎಂದು ಬರೆದು ಹಾಗೆಯೇ ಉಚ್ಚರಿಸುತ್ತಾರೆ.

(೨) ಕನ್ನಡದ ಸೋದರಭಾಷೆಯಾದ ತಮಿಳಿನಲ್ಲಿ ರೇಫವು ದಂತ್ಯವೇ ಆಗಿದೆ.[2] ತೆಲುಗು ಮಲಯಾಳಗಳಲ್ಲೂ ಹೀಗೆಯೇ ಎಂದು ತೋರುತ್ತದೆ.

---

1 ರೇಫದಲ್ಲಿ ಹಲವು ಬಗೆಗಳುಂಟು; ಉತ್ಪತ್ತಿಸ್ಥಾನವೂ ಪ್ರಯತ್ನವೂ ಬೇರೆ ಬೇರೆಯಾದಂತೆ ಆಯಾ ಬಗೆಗಳೂ ಬೇರೆ ಬೇರೆಯಾಗುತ್ತವೆ. (ಕನ್ನಡದಲ್ಲೇ ಹಿಂದೆ 'ಱ' ಎಂಬ ವರ್ಣವಿರಲಿಲ್ಲವೆ?) ಡ್ಯಾನಿಯಲ್ ಜೋನ್ಸ್ ಎಂಬ ಪ್ರಖ್ಯಾತ ಶಿಕ್ಷಾಶಾಸ್ತ್ರಜ್ಞನು ಕನಿಷ್ಠಪಕ್ಷ ಆರು ಬಗೆಯ ರೇಫಗಳನ್ನು ವಿಂಗಡಿಸುತ್ತಾನೆ. Daniel Jones: *An Outline of English Phonetics*, IV Edn. § 746. ಮೂರ್ಧನ್ಯರೇಫವೂ ಉಂಟು. ಅದರ ಉಚ್ಚಾರಣೆ ಹಿಂದೀ ಭಾಷೆಯ 'ಖಡೀ ಬೋಲೀ', 'ಘೋಡಾ', ಮೊದಲಾದ ಶಬ್ದಗಳಲ್ಲಿ ಸಿಕ್ಕುತ್ತದೆ. ಈ 'ಢ'ಕ್ಕೂ ನಮ್ಮ 'ರ'ಕ್ಕೂ ಯಾವ ಸಂಬಂಧವೂ ಇಲ್ಲವೆನ್ನುವುದು ಸ್ಪಷ್ಟ.

2 J. R. Firth: *A Short Outline of Tamil Pronunciation* (Appendix to A. H. Arden's *Progressive Grammar of Common Tamil*, 1934 Edn.); viನೆಯ ಪುಟದಲ್ಲಿರುವ ಪಟ್ಟಿಯನ್ನು ನೋಡಿ.

(೩) ಕನ್ನಡ, ತಮಿಳು ಮೊದಲಾದ ದ್ರಾವಿಡ ಭಾಷೆಗಳ ಮಾತಿರಲಿ. ಸಂಸ್ಕೃತ ಭಾಷೆಯಲ್ಲೇ ರೇಫದ ಉಚ್ಚಾರಣೆಯ ವಿಷಯದಲ್ಲಿ ಗಮನಾರ್ಹವಾದ ಅಂಶ ಗಳುಂಟು. ಇಂದಿನ ಉಚ್ಚಾರಣೆಯಲ್ಲಂತೂ ಅದು ಮೂರ್ಧನ್ಯವಲ್ಲ; ದಂತ್ಯ ಅಥವಾ ದಂತಮೂಲೀಯವಾಗಿದೆ.[3] ಬಹಳ ಹಿಂದೆ ಕೂಡ ಅದಕ್ಕೆ ದಂತ್ಯೋಚ್ಚಾರಣೆಯಿದ್ದಿತೆಂಬುದಕ್ಕೆ ಪ್ರಮಾಣ ಬೇಕಾದಷ್ಟಿದೆ. ವೇದಗಳ ಉಚ್ಚಾರಣೆಯನ್ನು ವಿಧಿಸುವ ಹಲವು ಪ್ರಾತಿಶಾಖ್ಯಗಳುಂಟಷ್ಟೆ. ಇವೆಲ್ಲ ರೇಫದ ಉತ್ಪತ್ತಿಸ್ಥಾನವು ದಂತ ಅಥವಾ ದಂತಮೂಲವೆಂದೇ ಗೊತ್ತುಮಾಡುತ್ತವೆ; ಯಾವ ಪ್ರಾತಿಶಾಖ್ಯ ದಲ್ಲೂ ಅದನ್ನು ಮೂರ್ಧನ್ಯವೆಂದು ಕರೆದಿಲ್ಲ :

"As regards *r*, all the Prātiśākhyas state that its place of origin is either the teeth, the roots of the teeth, or the teeth-ridge. ....We see, then, that, according to all the Prātiśākhyas, *r* was either dental or alveolar; but according to the Pāṇ. Śik., it was cerebral."[4]

ಹೀಗೆ, ಸಂಸ್ಕೃತಭಾಷೆಯ ಉಚ್ಚಾರಣೆಯಲ್ಲೇ ರೇಫವು ಎಷ್ಟೋ ಹಿಂದಿನ ಕಾಲದಲ್ಲೇ ದಂತ್ಯವೋ ದಂತಮೂಲೀಯವೋ ಆಗಿತ್ತು. ಅದು ಮೂರ್ಧನ್ಯ ವೆಂದು ಭಾವಿಸಿದ್ದವರು (ಅಥವಾ ಅದನ್ನು ಮೂರ್ಧನ್ಯವಾಗಿ ಉಚ್ಚರಿಸುತ್ತಿದ್ದವರು) ಪಾಣಿನೀಯರು ಮಾತ್ರ. ನಮಗಂತೂ ಈಗ ಅದರ ದಂತ್ಯೋಚ್ಚಾರಣೆ ಮಾತ್ರ ಸಾಧ್ಯ. ಹೀಗಿರುವಲ್ಲಿ, ದಂತ್ಯರೇಫದ ಮುಂದೆ ದಂತ್ಯ ನಕಾರವು ಬಂದರೆ ಆ ನಕಾರವನ್ನು ಮೂರ್ಧನ್ಯವಾಗಿ ಮಾರ್ಪಡಿಸಬೇಕಾದ ನಿಮಿತ್ತವೇ ತಪ್ಪಿ ಹೋಯಿತು. ಆದ್ದರಿಂದ ಸಂಸ್ಕೃತಭಾಷೆಯ ಉಚ್ಚಾರಣೆಯಲ್ಲೇ 'ಕರ್ನಾಟ', 'ಕರ್ನಾಟಕ' ಎಂಬ ರೂಪಗಳು ಶಿಕ್ಷಾಶಾಸ್ತ್ರದ ದೃಷ್ಟಿಯಿಂದ ಅಶಾಸ್ತ್ರೀಯ, ಅಸಾಧು ಎಂದು ಹೇಳಲಾಗುವುದಿಲ್ಲ. ಅವು ಅಪಾಣಿನೀಯವೆಂಬುದೇನೋ ನಿಜ. ಆದರೆ, ಪಾಣಿನಿಗೆ ಒಪ್ಪಿತವಲ್ಲದ ಪ್ರಯೋಗಗಳನ್ನೂ ಸಂಸ್ಕೃತ ಮಹಾಕವಿಗಳೇ ರೂಢಿಗೆ ತಂದಿಲ್ಲವೆ? ಉದಾಹರಣೆಗೆ, 'ವಿಶ್ರಾಮ' ಎಂಬ ಅಪಾಣಿನೀಯ ರೂಪ ವನ್ನು ಕಾಳಿದಾಸ (ಶಾಕುಂ. ii. ೬) ಭವಭೂತಿ (ಉತ್ತರರಾಮ. i. ೩೯) ಗಳಿಬ್ಬರೂ ಉಪಯೋಗಿಸಿದ್ದಾರಷ್ಟೆ.

ಇದಿಷ್ಟೂ ಶಿಕ್ಷಾಶಾಸ್ತ್ರದ ಮಾತಾಯಿತು. ದಂತ್ಯಸಹಿತವಾದ ರೂಪವನ್ನು ಹಿಂದಿನ ಕಾಲದಲ್ಲೇ ಕೆಲಕೆಲವು ವೇಳೆ ಪ್ರಯೋಗಿಸುತ್ತಿದ್ದರೆಂಬುದಕ್ಕೆ

[3] "The र as usually pronounced in Sanskrit to-day is more the trilled variety, where the tongue touches the teeth-ridge and delivers a rapid series of taps thereon..." I. J. S. Taraporewala : *Elements of the Science of Language*, p. 244.

[4] Siddheshwar Varma : *Critical Studies in the Phonetic Observations of Indian Grammarians*, pp. 6–7. ಪ್ರಾತಿಶಾಖ್ಯಗಳ ಕಾಲ, ಪಾಣಿನೀಯ ಶಿಕ್ಷೆಯ ಕಾಲ ಮತ್ತು ಕರ್ತೃತ್ವದ ವಿಚಾರ— ಈ ಮೊದಲಾದ ವಿವರಗಳಿಗೆಲ್ಲ ಈ ಗ್ರಂಥವನ್ನು ನೋಡಬಹುದು.

ರೇಫಕ್ಕೆ ದೇಶದ ಕೆಲವು ಭಾಗಗಳಲ್ಲಿ ದಂತ್ಯೋಚ್ಚಾರಣೆಯೂ, ಕೆಲವು ಭಾಗಗಳಲ್ಲಿ ಮೂರ್ಧನ್ಯೋಚ್ಚಾರಣೆಯೂ ಇದ್ದಿರಬೇಕೆಂದು ಡಾ॥ ಸಿದ್ಧೇಶ್ವರ ವರ್ಮರು ಅಭಿಪ್ರಾಯಪಡುತ್ತಾರೆ. (*Ibid* p. 8.)

ಒಂದು ಪ್ರಾಚೀನ ಸಂಸ್ಕೃತಶಾಸನದಲ್ಲಿ (ಕಾಲ: ಶಾಲಿವಾಹನ ಶಕ ೬೯೦)[5] ಆಧಾರವುಂಟು:

ಕಾಞ್ಚೀಶ ಕೇರಲ ನರಾಧಿಪ ಚೋಲ ಪಾಣ್ಡ್ಯ
ಶ್ರೀಹರ್ಷ ವಜ್ರಟ ವಿಭೇದ ವಿಧಾದನಕ್ಷಂ
ಕಾರ್ನ್ನಾಟಕಂ ವಲಮನನ್ತಮಜೇಯಮನ್ಯೈ
ರ್ಭೃತ್ಯೈಃ ಕಿಯದ್ಭಿರಪಿ ಯತ್ಸಹಸಾ ಜಿಗಾಯ

ಹೀಗೆ ಕ್ರಿ. ಶ. ೮ನೆಯ ಶತಮಾನದಲ್ಲೇ 'ಕಾರ್ನ್ನಾಟಕಂ' ಎಂಬ ರೂಪವು ಕಾಣಿಸಿಕೊಂಡಿರುವುದು ಗಮನಾರ್ಹವಾಗಿದೆ. ಇಲ್ಲಿ 'ರ್ಣ್ಣಾ' ಎಂಬುದಕ್ಕೆ ಬದಲಾಗಿ 'ರ್ನ್ನಾ' ಎಂಬುದು ಪ್ರಮಾದದಿಂದ ಬಿದ್ದಿರಬೇಕೆಂದು ಯಾರಾದರೂ ಆಕ್ಷೇಪಿಸ ಬಹುದು (ಈ ಶಾಸನವನ್ನು ಸಂಪಾದಿಸಿರುವ ಸ್ಟೆನ್ ಕೋನೋ ಪಂಡಿತನೇ ಹೀಗೆ ಭಾವಿಸಿದ್ದಾನೆ). ಆದರೆ ಶಾಸನವನ್ನು ಬರೆಯಹೇಳಿದವನಿಗೂ ಕೊರೆದವನಿಗೂ ರೇಫದ ಮುಂದೆ ನಕಾರದ ಉಚ್ಚಾರವೇ ಸುಕರವಾಗಿರಬೇಕೆಂಬುದು ಇದರಿಂದ ಗೊತ್ತಾಗುವುದಿಲ್ಲವೆ?

ಒಂದು ಶಬ್ದರೂಪವು ಸಾಧುವೇ ಅಸಾಧುವೇ ಎಂದು ನಿರ್ಣಯಿಸುವುದರಲ್ಲಿ ಶಿಕ್ಷಾಶಾಸ್ತ್ರ, ಭಾಷಾಗತಿ, ಶಿಷ್ಟಸಮ್ಮತಿ — ಇವೆಲ್ಲವನ್ನೂ ಗಮನಕ್ಕೆ ತಂದುಕೊಳ್ಳ ಬೇಕು. 'ಕರ್ಣಾಟಕ' ಎಂಬ ಮೂರ್ಧನ್ಯಸಹಿತ ರೂಪವು ಪಾಣಿನಿಸಮ್ಮತ ವಾದದ್ದು, ಕನ್ನಡನಾಡಿನ ಒಂದು ಭಾಗದಲ್ಲಿ (ಮುಖ್ಯವಾಗಿ, ಮೈಸೂರಿನಲ್ಲಿ) ಬಹುಮಟ್ಟಿಗೆ ಬಳಕೆಯಲ್ಲಿರತಕ್ಕದ್ದು. ಆದಕಾರಣ ಅದರ ಉಚ್ಚಾರಣೆ ಕಠಿನ ವಾದರೂ, ಶಿಕ್ಷಾಶಾಸ್ತ್ರದ ಬೆಂಬಲವು ಅದಕ್ಕಿಲ್ಲದೆ ಹೋದರೂ ಅದು ಸರ್ವಥಾ ತ್ಯಾಜ್ಯವೆಂದು ಹೇಳಲಾಗುವುದಿಲ್ಲ. 'ಕರ್ನಾಟಕ' ಎಂಬ ರೂಪವಾದರೋ ಹೆಚ್ಚು ಯುಕ್ತಿಯುಕ್ತವಾದದ್ದು, ಉಚ್ಚಾರಣೆಗೆ ಸುಲಭವಾದದ್ದು, ಕನ್ನಡನಾಡಿನ ಉತ್ತರ ಭಾಗದಲ್ಲೆಲ್ಲಾ ರೂಢಿಯಾಗಿರತಕ್ಕದ್ದು. ಇದನ್ನು ಅಸಾಧುವೆಂದು ಹೊರದೂಡು ವುದು ಹಾಗಿರಲಿ; ಮೂರ್ಧನ್ಯಸಹಿತ ರೂಪಕ್ಕಿಂತ ಹೆಚ್ಚು ಉಪಾದೇಯವೆಂದು ಹೇಳಲು ಮನಸ್ಸಿಲ್ಲದಿದ್ದರೆ ಅದರಷ್ಟೇ ಸಾಧುವೆಂದಾದರೂ ಒಪ್ಪಲೇಬೇಕು. ಸದ್ಯಕ್ಕೆ ಎರಡು ರೂಪಗಳನ್ನೂ ಅಂಗೀಕರಿಸೋಣ. ಸಂಸ್ಕೃತದಲ್ಲೇ ಕೋಷ- ಕೋಶ, ಪೃಥ್ವೀ—ಪೃಥಿವೀ ಮೊದಲಾದ ಜೋಡಿಗಳಿಲ್ಲವೆ? ಕರ್ಣಾಟಕ-ಕರ್ನಾಟಕ ಗಳಲ್ಲಿ ಕೊನೆಗೆ ಯಾವುದು ನಿಲ್ಲಬೇಕೆಂಬುದನ್ನು ಕಾಲಪುರುಷನು ನಿರ್ಣಯಿಸಲಿ.

---

[5] The Talegaon Plates of Krishnaraja (*Epigraphia Indica*, Vol. XIII, p. 239). ಇದೇ ಪದ್ಯವು ಶಾ. ಶ. ೬೭೫ ರ ಇನ್ನೊಂದು ಶಾಸನದಲ್ಲಿ ಒಂದೆರಡು ವ್ಯತ್ಯಾಸಗಳೊಡನೆ ದೊರೆ ಯುತ್ತದೆ. Samangad Grant of Dantidurga Khadgavaloka (*Indian Antiquary*, Vol. XI, p. 112). ಇಲ್ಲಿ 'ಕರ್ಣ್ಣಾಟಕಂ' ಎಂಬ ಪಾಠವಿದೆ.

# ಕರ್ನಾಟ(ಕ) — ಕರ್ಣಾಟ(ಕ)

ಶ್ರೀಮಾನ್ ಜಿ. ಪಿ. ರಾಜರತ್ನಂ ಅವರು, ಎಂ.ಎ., ಮೈಸೂರು

## ಪ್ರವೇಶ

ಮೇಲಿನ ಎರಡೂ ರೂಪಗಳ ಸಾಧುತ್ವಾಸಾಧುತ್ವದ ಚರ್ಚೆಯ ವಿಷಯವಾಗಿ ಇದುವರೆಗೆ ಹೊರಟಿರುವ ವಾದಗಳನ್ನು ಮೂರು ಬಗೆಯಾಗಿ ವಿಂಗಡಿಸಬಹುದು:

(೧) 'ಕರ್ಣಾಟ(ಕ)' ಶುದ್ಧ ಸಂಸ್ಕೃತಪದ; ಅದಕ್ಕೆ ಸಂಸ್ಕೃತದಲ್ಲಿ ವ್ಯುತ್ಪತ್ತಿ ಕೊಡಬಹುದು; 'ಕನ್ನಡ' ಅದರ ತದ್ಭವ. ಆದ್ದರಿಂದ 'ಕರ್ಣಾಟ(ಕ)'ವೇ ಸಾಧು.

(೨) ಶಬ್ದದ ಹುಟ್ಟು ಏನೇ ಇರಲಿ, ರೂಪವಂತೂ ಸಂಸ್ಕೃತ. ಆದ್ದರಿಂದ 'ಕರ್ಣಾಟ(ಕ)'ವೇ ಸಾಧು.

(೩) 'ಕರ್ನಾಟ(ಕ)' ಅಚ್ಚಕನ್ನಡ ಶಬ್ದ; ಅದಕ್ಕೆ ಕನ್ನಡದಲ್ಲಿಯೇ ವ್ಯುತ್ಪತ್ತಿಯುಂಟು; ಸಂಸ್ಕೃತಜ್ಞರು ಅವರ ಭಾಷಾಮರ್ಯಾದೆಗೆ ಅನುಸಾರವಾಗಿ ಇದನ್ನು 'ಕರ್ಣಾಟ(ಕ)'ವೆಂದು ಸಂಸ್ಕೃತ ಮಾಡಿದ್ದಾರೆ.

ಈ ಪ್ರತಿಯೊಂದು ವಾದದಲ್ಲಿಯ ಹುರುಳನ್ನೂ ವಿಮರ್ಶೆಮಾಡಿ ನೋಡೋಣ:

(೧) 'ಕರ್ಣಾಟ(ಕ)' ಶುದ್ಧ ಸಂಸ್ಕೃತವೆಂದು ವಾದಿಸುವವರು ಸಾಮಾನ್ಯವಾಗಿ ಕೊಡುವ ವ್ಯುತ್ಪತ್ತಿ ಇದು:—'ಕರ್ಣೇಷು ಅಟತಿ ಇತಿಕರ್ಣಾಟಃ' (ಯಾವ ದೇಶದ ರಾಜನ ಕೀರ್ತಿ ಎಲ್ಲರ ಕಿವಿಯಲ್ಲಿಯೂ ಮೊಳಗುತ್ತಿರುವುದೋ ಆ ದೇಶ); ಇದರಮೇಲೆ 'ಕ' ಪ್ರತ್ಯಯ ಸೇರಿ 'ಕರ್ಣಾಟಕ'ವಾಗಿದೆ. ಈ ವ್ಯುತ್ಪತ್ತಿ ಕಾರಣದ ಜತೆಗೆ ಕೊಡುವ ಮತ್ತೊಂದು ಬಲವಾದ ಕಾರಣವೆಂದರೆ, ಸಂಸ್ಕೃತಗ್ರಂಥಗಳಲ್ಲಿಯೂ ಕನ್ನಡ ಗ್ರಂಥಗಳಲ್ಲಿಯೂ 'ಕರ್ಣಾಟ(ಕ)'ವೆಂದೇ ಪ್ರಯೋಗವಿರುವುದು. ಅಪ್ಪಿತಪ್ಪಿ 'ನ'ಕಾರವಿದ್ದರೆ ಅದು ಅಸಂಸ್ಕೃತರ ಪ್ರಯೋಗ ಅಥವಾ ಬರೆದವರ ಕೈತಪ್ಪು: ಹೀಗೆ 'ಕರ್ಣಾಟ(ಕ)' ಶುದ್ಧ ಸಂಸ್ಕೃತಪದವೆಂದೇ ಸಿದ್ಧವಾಗುತ್ತದೆ. ಅಲ್ಲದೆ, 'ಕನ್ನಡ' 'ಕರ್ಣಾಟಕ'ದ ತದ್ಭವವೆಂದು ಕೇಶಿರಾಜನೇ ಹೇಳಿದ್ದಾನೆ.

ಇದಕ್ಕೆ ಪ್ರತಿ ವಾದ: ಮೇಲಿನ ವ್ಯುತ್ಪತ್ತಿಯಿಂದ ಶಬ್ದ ಸಿದ್ಧವಾಗುವುದಾದರೆ ಅದನ್ನು ಯಾವ ದೇಶಕ್ಕಾಗಲಿ ಭಾಷೆಗಾಗಲಿ ಅನ್ವಯಿಸಬಹುದು. ಕನ್ನಡಕ್ಕೇ ವಿಶಿಷ್ಟವಾಗಿ ಏಕೆ ಅನ್ವಯಿಸಬೇಕೋ ತಿಳಿಯದು. 'ಕನ್ನಡ' 'ಕರ್ಣಾಟಕ'ದ ತದ್ಭವವೆಂಬುದಕ್ಕೆ ಕೇಶಿರಾಜನ ಪ್ರಮಾಣದ ವಿಚಾರ. ಅಚ್ಚದ್ರಾವಿಡ ಶಬ್ದಗಳಾದ ತಂದೆ, ನೀರ್, ಮೀನ್ ಮೊದಲಾದುವು ಸಂಸ್ಕೃತದ ತಾತ, ನೀರ, ಮೀನ ಮೊದಲಾದುವುಗಳ ತದ್ಭವವೆಂದು ಹೇಳಿರುವ ಕೇಶಿರಾಜನ ಪ್ರತಿಯೊಂದು ಅಕ್ಷರವೂ

ಪ್ರಮಾಣವೆಂದು ನಂಬುವುದು ಹೇಗೆ? ಅವನು ತದ್ಭವ ಪ್ರಕರಣದಲ್ಲಿ ಕೊಟ್ಟಿರುವ ಸೂತ್ರಗಳನ್ನೂ ಪ್ರಯೋಗಗಳನ್ನೂ ಪರಿಶೀಲಿಸಿದರೆ ಸಂಸ್ಕೃತದ 'ಣ'ಕಾರ ಕನ್ನಡದಲ್ಲಿ 'ಣ'ಕಾರವಾಗಿಯೇ ಉಳಿಯುತ್ತದೆ. ಅಲ್ಲದೆ, ಸಂಸ್ಕೃತದ 'ನ' ಕನ್ನಡದಲ್ಲಿ 'ಣ'ಕಾರವಾಗಿ ಮಾರುವ ನೂರಾರು ಉದಾಹರಣೆಗಳು ಸಿಕ್ಕುತ್ತವೆ. ಸಂಸ್ಕೃತದ 'ಣ' ಕನ್ನಡದಲ್ಲಿ 'ನ'ಕಾರವಾಗಿರುವ ಎರಡು ಮೂರು ಅಪರೂಪ ಉದಾಹರಣೆಗಳೂ ಇವೆ; ಆದರೆ, ಅವು ಬಹುಮಟ್ಟಿಗೆ ಗ್ರಂಥಸ್ಥ ತದ್ಭವಗಳು, ಇಲ್ಲವೆ ಸಂದಿಗ್ಧ ತದ್ಭವಗಳು. ಇದನ್ನೆಲ್ಲ ನೋಡಿದರೆ 'ಕರ್ಣಾಟ(ಕ)'ದಿಂದ 'ಕನ್ನಡ' ಬಂದಿದ್ದರೆ, ಆಗ 'ಕಣ್ಣಡ(ಕ)' ಎಂಬುದು ಹೆಚ್ಚು ಸಮಂಜಸರೂಪವಾಗುತ್ತಿತ್ತೆಂದು ತೋರುತ್ತದೆ.

(೨) ಹುಟ್ಟು ಏನೇ ಇರಲಿ, ರೂಪ ಸಂಸ್ಕೃತ, ಎನ್ನುವವರ ವಾದ:– 'ಕರ್ಣಾಟ' (ಕ)ಕ್ಕೆ ಮೂಲ 'ಕನ್ನಡ'ವೇ ಆಗಿರಲಿ 'ಕರ್ನಾಟ(ಕ)'ವೇ ಆಗಿರಲಿ, ಅದರ ರೂಪ ಸಂಸ್ಕೃತ. ಹೀಗೆ ರೂಪ ಸಂಸ್ಕೃತವಾದೊಡನೆಯೇ ಸಂಸ್ಕೃತದ ವ್ಯಾಕರಣ ಮರ್ಯಾದೆಯಂತೆ ನಕಾರಕ್ಕೆ ಅವಕಾಶವೇ ಇಲ್ಲ. ಪಾಣಿನಿಯ ಸೂತ್ರಗಳ ಪ್ರಕಾರ, ಇಲ್ಲಿಯಂತೆ ರಕಾರಸಂಪರ್ಕವಿರುವ ನಕಾರ ಣಕಾರವಾಗಿ ಮಾರ್ಪಡಬೇಕೇ ಹೊರತು ನಕಾರವಾಗಿಯೇ ಉಳಿಯಲಾರದು. ಆದ್ದರಿಂದ 'ಕರ್ಣಾಟ(ಕ)'ವೇ ಸಾಧು.

ಇದಕ್ಕೆ ಪ್ರತಿವಾದ: ಸಂಸ್ಕೃತದಲ್ಲಿ ಮೊದಲಿನಿಂದಲೂ ಸಾಧುವೆಂದು ಪರಿಗಣಿತವಾಗಿರುವ ದುರ್ನಯ, ದುರ್ನೀತಿ, ದುರ್ನಾಶ, ದುರ್ನಾಮ, ನಿರ್ನಿಮಿತ್ತ, ನಿರ್ನಿದ್ರಾ, ನಿರ್ನಾಮ ಮೊದಲಾದ ನೂರಾರು ಶಬ್ದಗಳಿಗೆ ಣಕಾರವಾದಿಗಳು ಏನು ಹೇಳುತ್ತಾರೆ? (ಅದಕ್ಕೇ ಬೇರೆ ಸೂತ್ರ ತೋರಿಸುತ್ತಾರೆ. ಇರಲಿ.) ರೇಫೆ ಮೂರ್ಧನ್ಯವೇ ಅಲ್ಲವೆಂದು ಹೇಳುವ ಪಂಡಿತರೂ ಹಲವರಿದ್ದಾರಲ್ಲವೆ? ಇದನ್ನೆಲ್ಲ ನೋಡಿದರೆ, ಸಂಸ್ಕೃತದಲ್ಲಿ ಕೂಡ ರಕಾರಸಂಪರ್ಕದಿಂದ ನಕಾರ ಣಕಾರವಾಗಬೇಕೆಂಬ ನಿಯಮ ಕೇವಲ ಅಪವಾದರಹಿತವಾಗಲಿ ಸರ್ವದಾ ಅನುಲ್ಲಂಘನೀಯವಾಗಲಿ ಅಲ್ಲವೆಂದು ಹೇಳಬೇಕಾಗುತ್ತದೆ. ಆದ್ದರಿಂದ, ಸಂಸ್ಕೃತದರೂಪ 'ಕರ್ಣಾಟ(ಕ)'ವೇ ಆಗಬೇಕೆಂದೂ 'ಕರ್ನಾಟ(ಕ)' ಸುತರಾಂ ತಪ್ಪೆಂದೂ ಹಟಹಿಡಿಯುವುದರಲ್ಲಿ ನ್ಯಾಯವಿರುವಂತೆ ತೋರುವುದಿಲ್ಲ.

(೩) 'ಕರ್ನಾಟ'(ಕ) ಅಚ್ಚ ಕನ್ನಡ ಎಂಬವರ ವಾದ: ಸಾಮಾನ್ಯವಾಗಿ ಬರಹದಲ್ಲಿ, ದಕ್ಷಿಣ ಕರ್ನಾಟಕದಲ್ಲಿ ಣಕಾರವೂ ಉತ್ತರ ಕರ್ನಾಟಕದಲ್ಲಿ ನಕಾರವೂ ಬಳಕೆಯಲ್ಲಿದೆ. ಎಲ್ಲಿಯೇ ಆಗಲಿ, ಕಣ್ಣಿಗೆ ಕಾಣುವ ರೂಪ ಏನೇ ಇರಲಿ, ಕಿವಿಗೆ ಕೇಳುವ ನಾದ ನಕಾರವೇ ಎನ್ನಬಹುದು.* ಪುರಾತನ ಶಾಸನಗಳಲ್ಲಿಯೂ ತಾಳ

* 'ಕನಾ೯ಟಕ', 'ಕಣಾ೯ಟಕ'ಗಳನ್ನು ಧ್ವನಿಯಿಂದ ಬೇರ್ಪಡಿಸಿ ತೋರಿಸಲಾರದೆ, ಮೊದಲನೆಯುದನ್ನು 'ದಂತ್ಯ ನಕಾರ ಸಹಿತ ಕನಾ೯ಟಕ' ಅಥವಾ 'ತವರ್ಗ ಪಂಚಮಾಕ್ಷರ ಘಟಿತ ಕನಾ೯ಟಕ' ಎಂದೂ, ಎರಡನೆಯುದನ್ನು 'ಮೂರ್ಧನ್ಯ ನ(ಣ)ಕಾರ ಸಹಿತ ಕನಾ(ಣಾ)೯ಟಕ' ಅಥವಾ 'ಟವರ್ಗ ಪಂಚಮಾಕ್ಷರ ಘಟಿತ ಕನಾ(ಣಾ)೯ಟಕ'ವೆಂದೂ ಕರೆಯುವ ಹಲವರ ಪ್ರಯತ್ನವು ಗಮನಿಸತಕ್ಕುದು.

ಪತ್ರಗಳಲ್ಲಿಯೂ ಅಚ್ಚಿನ ಪ್ರತಿಗಳಲ್ಲಿಯೂ ನಕಾರ ಅಪರೂಪವೇನೂ ಅಲ್ಲ. ಇನಿಷ್ಟನ್ನೂ ಗಮನದಲ್ಲಿಟ್ಟುಕೊಂಡು ಈ ಪ್ರಶ್ನೆಯ ಪರಿಶೀಲನೆಗೆ ತೊಡಗಬೇಕಾಗಿದೆ.

ಕರ್+ನಾಟು(ಡು) ಎಂಬೆರಡು ಶಬ್ದಗಳು ಸೇರಿ 'ಕರ್ನಾಟು' ಎಂದೂ, ಕರ್+ನಾಟು+ಅಕ ಎಂಬ ಮೂರು ಶಬ್ದಗಳು ಸೇರಿ 'ಕರ್ನಾಟಕ' ಎಂದೂ ಆಗಿದೆ. ತಮಿಳಿನಲ್ಲಿ ಕರುನಾಟ(ಡ)ಕಮ್, ಕರುನಾಟ(ಡ)ರ್, ಕರ್ನಾಟ(ಡ)ಕಮ್ ಮೊದಲಾದ ರೂಪಗಳು ಪುರಾತನಗ್ರಂಥಗಳಲ್ಲಿ ಕೂಡ ಸಿಕ್ಕುತ್ತವೆ. ದ್ರಾವಿಡ ಭಾಷೆಗಳಲ್ಲಿ, ಇಬ್ಬಗೆಯ ಉಚ್ಚಾರಕ್ಕೆ ಅವಕಾಶವಿದ್ದ ಟ–ಡ ಕಾರದ ಪರುಷೋಚ್ಚಾರ ಬಲದಿಂದ ಸಂಸ್ಕೃತದಲ್ಲಿ ಟಕಾರವೇ ಉಳಿದುಬಂದಿದೆ.

ಸಂಸ್ಕೃತದ 'ಕರ್ಣಾಟ(ಕ)'ವೇ ತಮಿಳಿನಲ್ಲಿ 'ಕರುನಾಟ(ಕ)'ವಾಗಿದೆ ಎನ್ನುವುದಕ್ಕಾಗುವುದಿಲ್ಲ. ಏಕೆಂದರೆ, ಸಂಸ್ಕೃತದ ಣಕಾರ ತಮಿಳಿನಲ್ಲಿ ಣಕಾರವಾಗಿಯೇ ನಿಲ್ಲುತ್ತದೆ. ಅಲ್ಲದೆ, ಹಲವು ಕನ್ನಡ ಲಾವಣಿಗಳಲ್ಲಿ ಕರುನಾಡು, ಕರುನಾಟ ಎಂಬ ಪದಗಳು ಪ್ರಯೋಗದಲ್ಲಿವೆ. ಕರ್, ಕರು ಎಂಬುವು ಒಂದೇ ಪ್ರಕೃತಿಯ ಎರಡು ರೂಪಗಳೆಂಬುದು ಎಲ್ಲರಿಗೂ ತಿಳಿದೇ ಇದೆ.

ಇನ್ನು ಅರ್ಥದ ವಿಚಾರ: ಎರಡನೆಯ ಪದವಾದ 'ನಾಡು' ಎಂಬುದಕ್ಕೆ ದೇಶ ಎಂಬ ಅರ್ಥ ಎಲ್ಲರಿಗೂ ತಿಳಿದದ್ದೇ ಆಗಿದೆ. ಮೊದಲನೆಯ ಪದವಾದ 'ಕರ್' ಎಂಬುದಕ್ಕೆ ಸಾಮಾನ್ಯವಾಗಿ ಮೂರು ಬಗೆಯಾಗಿ ಅರ್ಥಮಾಡುತ್ತಾರೆ: (i) ಕಪ್ಪು; (ii) ದೊಡ್ಡದು, ಮೇಲಾದ್ದು; (iii) ಎತ್ತರವಾದ್ದು. ನೃಪತುಂಗನು ಯಾವುದನ್ನು 'ಕನ್ನಡ ನಾಡಿನ ತಿರುಳು' ಎಂದು ಹೇಳಿದ್ದಾನೆಯೋ ಆ ನೆಲ ಕಪ್ಪುನೆಲ. ಆದ್ದರಿಂದ ನಮ್ಮ ನಾಡನ್ನು 'ಕಪ್ಪುನಾಡು' ಎನ್ನುವುದು ನ್ಯಾಯವಾಗಿಯೇ ಇದೆ. "ನಮ್ಮ ನಾಡನ್ನು ನಾವೇ ಕರಿಯ ನಾಡೆಂದು ಕರೆದುಕೊಳ್ಳುತ್ತೇವೆಯೆ?" ಕರೆದುಕೊಂಡರೆ ತಪ್ಪೇನು? ಒಟ್ಟು ನಾಡನ್ನು 'ಮೇಲ್ ನಾಡು,' 'ಕೀಳ್ ನಾಡು' ಎಂದು ಮೊದಲಾಗಿ ವಿಂಗಡಿಸ ಹೊರಟವರು ಕಪ್ಪುಬಯಲೇ ಹೆಚ್ಚಾಗಿದ್ದ ನಾಡನ್ನು 'ಕರ್ನಾಡು' ಎಂದು ಕರೆದಿರಬಹುದು. ಈಗಲೂ ಕನ್ನಡ ನಾಡಿನ ಹೊನ್ನೆಂದರೆ ಅದರ ಹುಲುಸಾದ ಕರಿಯ ಮಣ್ಣು.

'ಕರ್' ಎನ್ನುವುದಕ್ಕೆ ಕಪ್ಪಾದ್ದು, ದೊಡ್ಡದು ಅಥವಾ ಎತ್ತರವಾದ್ದು ಎಂದು ಯಾವ ಅರ್ಥವನ್ನೇ ಮಾಡಲಿ, 'ಕರ್ನಾಡು' ಅಥವಾ 'ಕರುನಾಡು' ಎನ್ನುವುದೇನೊ ಸಿದ್ಧವಾಯಿತು. ಇನ್ನು 'ಅಕ'ದ ವಿಚಾರ: 'ಕರ್ನಾಟಕ' ಎಂದರೆ ಕರ್ನಾಡಿನ ಪ್ರದೇಶ. 'ನಾಡು' ಎಂದರೂ ದೇಶ, 'ಅಕ' ಎಂದರೂ ದೇಶ—ಇದು ಏನು 'ತಲೆಶಿರೋಭಾರ'ವೆಂದು ಯಾರಾದರೂ ಕೇಳಬಹುದು. ಅಲ್ಲದೆ, 'ಅಕ' ಎನ್ನುವುದಕ್ಕೆ ಸ್ಥಳ, ಪ್ರದೇಶ ಎಂಬ ಅರ್ಥ ಎಲ್ಲಿದೆ ಎಂದು ಕೇಳಬಹುದು. 'ಮಲೆನಾಡಿನ ಪ್ರದೇಶ' ಎಂದು ನಾವೆಲ್ಲರೂ ಹೇಳುತ್ತೇವೆ. ಅದರಲ್ಲಿ 'ತಲೆಶಿರೋಭಾರ'ವನ್ನೇನೂ ನಾವು ಕಾಣುವುದಿಲ್ಲ. ತಮಿಳಿನಲ್ಲಿ 'ವೈಯಮ್' ಎಂದರೂ ಭೂಮಿ, 'ವೈಯಕಮ್'

ಎಂದರೂ ಭೂಮಿ (ಭೂಪ್ರದೇಶ). ಹೀಗೆ ನಾಟ(ಡ)ಕ = ಭೂಪ್ರದೇಶ ಎನ್ನುವುದರಲ್ಲಿ ತಪ್ಪೇನೂ ಕಾಣುವುದಿಲ್ಲ.

'ಅಕ(ಗ)' ಎನ್ನುವುದಕ್ಕೆ ದೇಶ, ಸ್ಥಳ ಎನ್ನುವ ವಿಚಾರ: ತಮಿಳಿನಲ್ಲಿ 'ಅಕಮ್' ಎಂದರೆ ಎಡೆ, ಹೊಲ, ಬಯಲು ಎಂದು ಅರ್ಥವಾಗುತ್ತದೆ. ತಮಿಳು ನಾಡಿಗೆ 'ತಮಿಳಕಮ್' ಎಂದು ಪುರಾತನ ತಮಿಳು ಗ್ರಂಥಗಳಲ್ಲಿ ಪ್ರಯೋಗವುಂಟು. ಈ 'ತಮಿಳಕ'ವೇ ಗ್ರೀಕಿನಲ್ಲಿ 'ದಮುರಿಕೇ' ಎಂಬ ರೂಪದಲ್ಲಿ ಸಿಕ್ಕುತ್ತದೆ. ಕನ್ನಡದಲ್ಲಿಯೂ 'ಅಕ(ಗ)' ಎನ್ನುವುದಕ್ಕೆ 'ಸ್ಥಳ' ಎಂಬ ಅರ್ಥವುಂಟು. 'ಪಂಪಭಾರತ'ದಲ್ಲಿ (ಆಶ್ವಾಸ ೫, ಪದ್ಯ ೪೬) "ಆವಡವಿಗಳೊಳ್ ಪಣ್‌ಪಲ । ಮಾವಗಮೊಳವಲ್ಲಿಗಱಸಿ ಪರಿಪರಿದು ಕರಂ ॥ ತಾವಡಿಗೊಳ್ವೀ ಭೀಮನ । ಬೇವಸಮಿದು ನಿನ್ನ ಮನಮನೊಣರಿಸಿತಿಲ್ಲಾ" ಎಂದು ದ್ರೌಪದಿ ಧರ್ಮರಾಯನನ್ನು ಕೇಳುತ್ತಾಳೆ. ಇಲ್ಲಿ 'ಆವಗಂ ಒಳವು' ಎನ್ನುವದನ್ನು 'ಯಾವಾಗಲೂ ಉಂಟು' ಎಂದು ಅರ್ಥಮಾಡಿದರೆ ಸ್ವಾರಸ್ಯವಿಲ್ಲ. ಅಲ್ಲದೆ, 'ಅಲ್ಲಿಗೆ ಅಱಸಿ' ಎನ್ನುವುದಕ್ಕೆ ಅನ್ವಯವೇ ಇಲ್ಲದಂತಾಗುತ್ತದೆ. ಅರ್ಥ ಸಮಂಜಸವಾಗಿ ಅನ್ವಯ ಹೊಂದಬೇಕಾದರೆ 'ಆವಗಂ' ಎನ್ನುವುದನ್ನು 'ಯಾವ ಸ್ಥಳದಲ್ಲಿ' ಎಂದು ಅರ್ಥಮಾಡಬೇಕು. ಆಗ "ಯಾವ ಅಡವಿಯಲ್ಲಿ ಯಾವೆಡೆ ಹಣ್ಣು ಹಲವುಂಟೊ ಅಲ್ಲಿಗೆ ಹುಡುಕಿಕೊಂಡು ಅಲೆದಲೆದು ...." ಎಂದು ಅರ್ಥವಾಗುತ್ತದೆ. 'ಆವೆಡೆಯೊಳ್' ಎಂಬ ಅರ್ಥದಲ್ಲಿ ಸಪ್ತಮಿ ವಿಭಕ್ತಿ ಪ್ರತ್ಯಯ ಬಿಟ್ಟು 'ಆವೆಡೆ' ಎಂದು ಪ್ರಯೋಗವಿರುವಂತೆ, 'ಆವಗದೊಳ್' ಎಂಬ ಅರ್ಥದಲ್ಲಿ ಇಲ್ಲಿ 'ಆವಗಂ' ಎಂದು ಪ್ರಯೋಗವಾಗಿದೆ.

ಹೀಗೆ 'ಕರ್‌ನಾಟಕ' ಎಂದರೆ 'ಕರ್‌ನಾಡಿನ ಪ್ರದೇಶ' ಎಂದು ಅರ್ಥ ಮಾಡುವುದಕ್ಕೆ ಅಭ್ಯಂತರವೇನೂ ಇಲ್ಲ.

ಇದಕ್ಕೆ ಪ್ರತಿ ವಾದ: 'ಕರ್ನಾಟ(ಕ)'ದ ವ್ಯುತ್ಪತ್ತಿಗೆ 'ಕರ್‌ನಾಡು' ಎಂಬುದನ್ನು ಆಶ್ರಯಿಸುವುದು ಯುಕ್ತವೆ. ಆದರೂ 'ನಾಟು+ಅಕ' ಎಂದರೆ 'ನಾಡಿನ ಪ್ರದೇಶ' ಎಂಬ ವಿವರಣೆಯನ್ನು ಒಪ್ಪಲು ಆಧಾರ ಸಾಲದು. 'ಮೇಲ್ ನಾಟು', 'ಕೀಳ್ ನಾಟು' ಎಂಬುದು 'ಮೇಲ್ ನಾಟಕ', 'ಕೀಳ್ ನಾಟಕ' ಎಂದಾಗಲಿ, 'ತಮಿಳಕ' ಎಂಬುದು 'ತಮಿಳ್ ನಾಟಕ' ಎಂದಾಗಲಿ, ಅಥವಾ 'ಕರ್ ನಾಟಕ' ಎಂಬಂತೆ 'ನಾಟು + ಅಕ' ಎರಡೂ ಕೂಡಿದ ಬೇರೆ ಯಾವುದಾದರೂ ರೂಪ ಎಲ್ಲಿಯಾದರೂ ಪ್ರಯೋಗವುಂಟೇನು? ಮೇಲೆ ಉದ್ಧರಿಸಿರುವ ಪಂಪನ ಕಂದದಲ್ಲಿ 'ಆವಗಂ' ಎಂಬುದಕ್ಕೆ 'ಯಾವಾಗಲೂ' ಎಂದು ಅರ್ಥಮಾಡಿದರೆ ಕೊರೆಯೇನು? "ಯಾವ ಅಡವಿಗಳಲ್ಲಿ ಹಣ್ಣು ಹಂಪಲು ಯಾವಾಗಲೂ ಉಂಟೋ ಅಲ್ಲಿಗೆ(=ಆ ಅಡವಿಗಳಿಗೆ) ಹುಡುಕಿಕೊಂಡು ಅಲೆದಲೆದು" ಎಂಬುದರಲ್ಲಿ ಏನು ಊನ? ಅಂಗೈ, ಅಂಗಾಲ್, ಅಗವಡು ಎಂಬಿವುಗಳಲ್ಲಿ 'ಅಗಂ' ಶಬ್ದಕ್ಕೆ 'ಒಳಗು' ಎಂದು ಅರ್ಥವಾಗುತ್ತದೆ. ಅದರಂತೆಯೇ 'ಕರುನಾಡಗನ್', 'ಕರ್ನಾಟಗದವರು' ಎಂಬಿವಕ್ಕೆ 'ಕರುನಾಡ ಒಳಗಿನವನು', 'ಕರ್ನಾಟದ ಒಳಗಿನವರು' ಎಂದು ಅರ್ಥವಾಗುವುದೆಂದು ಒಪ್ಪಬಹುದು.

ಹೀಗೆ, 'ಕರ್ನಾಟ'ಕ್ಕೆ 'ಕರ್ ನಾಡು' ಎಂಬ ವ್ಯುತ್ಪತ್ತಿಯನ್ನು ಒಪ್ಪಿಕೊಂಡರೂ 'ಕರ್ನಾಟಕ'ಕ್ಕೆ 'ಕರ್‌ನಾಟು ಅಕಂ' ಎಂಬುದನ್ನು ಒಪ್ಪಲು ಆಧಾರ ಸಾಲದು.

## ಮೈಸೂರು ದೇಶದ ಶಾಸನಗಳಲ್ಲಿ "ಕರ್ನಾಟ(ಕ)"

ಮೈಸೂರು ದೇಶದ ಎಂಟೂ ಡಿಸ್ಟ್ರಿಕ್ಟುಗಳಲ್ಲಿ ದೊರಕಿರುವ ಶಾಸನಗಳನ್ನೆಲ್ಲ ಮೈಸೂರು ಪ್ರಾಚ್ಯ ಸಂಶೋಧನಾಲಯದವರು ತಮ್ಮ *Epigraphia Carnatica*, Vols. II–XIIರಲ್ಲಿ ಪ್ರಕಟಿಸಿದ್ದಾರೆ. ಅವಕ್ಕೆ Vol. XIIIರಲ್ಲಿ index ಕೊಟ್ಟಿದ್ದಾರೆ. ಈ index ಅನ್ನು ಆಶ್ರಯಿಸಿ ನೋಡಿದರೆ, E. C., II–XIIರಲ್ಲಿ ಕೇವಲ 'ಕರ್ನಾಟ(ಕ)' ರೂಪ ಸಿಕ್ಕುವ ೪೩ ಶಾಸನಗಳೂ, ಕೇವಲ 'ಕರ್ಣಾಟ(ಕ)' ರೂಪ ಸಿಕ್ಕುವ ೪೪ ಶಾಸನಗಳೂ, 'ಕರ್ನಾಟ(ಕ)' 'ಕರ್ಣಾಟ(ಕ)' ಎರಡೂ ರೂಪಗಳನ್ನೊಳಗೊಂಡ ೪ ಶಾಸನಗಳೂ ಕಂಡುಬರುವುವು. (ಅನುಬಂಧ ೧. a) ಈ ೯೧ ಶಾಸನಗಳಲ್ಲಿ ಒಟ್ಟು ೫೫ 'ಕರ್ನಾಟ(ಕ)' ಪ್ರಯೋಗಗಳೂ, ೬೧ 'ಕರ್ಣಾಟ(ಕ)' ಪ್ರಯೋಗಗಳೂ ಗೋಚರವಾಗುವುವು. (ಅನುಬಂಧ ೨) ಎಂದರೆ, ಮೈಸೂರು ದೇಶದ ಶಾಸನಪ್ರಯೋಗಗಳಲ್ಲಿ ಸುಮಾರು ಅರ್ಧಕ್ಕರ್ಧ 'ಕರ್ನಾಟ(ಕ)' ರೂಪ ಕಂಡಂತಾಯಿತು.

ಮೇಲೆ ಹೇಳಿದ ೯೧ ಶಾಸನಗಳಲ್ಲಿ ೪೭ ಶಾಸನಗಳು 'ಕರ್ನಾಟ(ಕ)'ವನ್ನು ಬಳಸಿವೆಯೆಂದು ಹೇಳಿತಷ್ಟೆ. ಆ ೪೭ರಲ್ಲಿ ೩೪ ಕನ್ನಡ ಅಕ್ಷರದಲ್ಲೂ ಉಳಿದ ೧೩ ನಾಗರಿ ಅಕ್ಷರದಲ್ಲೂ ಬರೆದುವಾಗಿವೆ. ಅದೇ ೪೭ರಲ್ಲಿ ೨೭ ಸಂಸ್ಕೃತಭಾಷೆಯಲ್ಲೂ ೧೦ ಪ್ರೌಢ ಕನ್ನಡದಲ್ಲೂ ರಚನೆಯಾಗಿವೆ. (ಉಳಿದ ೧೦ರಲ್ಲಿ ೯ ಸಾಮಾನ್ಯ ಕನ್ನಡ ಶಾಸನಗಳು, ಒಂದು ಸಾಮಾನ್ಯ ತೆಲುಗು ಶಾಸನ.) ಎಂದರೆ, ಮೈಸೂರಿನ ೩೭ ಪ್ರೌಢ ಶಾಸನಗಳಲ್ಲಿ 'ಕರ್ನಾಟ(ಕ)' ರೂಪ ಕಂಡಂತಾಯಿತು. (ಅನುಬಂಧ ೧. b.)

ಮೇಲೆ ಹೇಳಿದ ೯೧ ಶಾಸನಗಳಲ್ಲಿ ಬರುವ 'ಕರ್ನಾಟ(ಕ)', 'ಕರ್ಣಾಟ(ಕ)' ರೂಪಗಳನ್ನು ಆಯಾ ಡಿಸ್ಟ್ರಿಕ್ಟಿನಂತೆ ಗಣಿಸಿದರೆ, ಶಿವಮೊಗ್ಗ ಹೊರತಾಗಿ ಉಳಿದ ಡಿಸ್ಟ್ರಿಕ್ಟುಗಳಲ್ಲಿ ಣಕಾರವೇನೂ ನಕಾರಕ್ಕಿಂತ ಅಂತಹ ಹೆಚ್ಚಿನ ಮೇಲ್ಮೆಯನ್ನು ತೋರಿಸಿಕೊಳ್ಳುವುದಿಲ್ಲ. ಅದರಲ್ಲೂ ಮೈಸೂರು ಡಿಸ್ಟ್ರಿಕ್ಟಿನಲ್ಲಿ ಸಿಕ್ಕುವ ೩೬ ಪ್ರಯೋಗಗಳಲ್ಲಿ 'ಕರ್ನಾಟ(ಕ)' ೨೫, 'ಕರ್ಣಾಟ(ಕ)' ೧೧! ಇನ್ನೂ ಎರಡು ಹೆಜ್ಜೆ ಮುಂದೆ ಹೋಗಿ ನೋಡಿದರೆ, ಶ್ರವಣಬೆಳುಗೊಳ, ನಂಜನಗೂಡು, ಶ್ರೀರಂಗಪಟ್ಟಣ, ಎಡತೊರೆ, ಚಾಮರಾಜನಗರ, ಕಡೂರುಗಳಲ್ಲಿ— ಶಾಸನಗಳು ಹೆಚ್ಚಾಗಿ ಸಿಕ್ಕಿರುವ ಕಡೆ—'ಕರ್ನಾಟ(ಕ)'ದ ಪ್ರಾಬಲ್ಯವೇ ಕಂಡುಬರುತ್ತದೆ! (ಅನುಬಂಧ ೩.)

## ರೇಫೆಯೊಡಗೂಡಿದ ನಕಾರ

ಮೈಸೂರಿನ ೪೭ ಶಾಸನಗಳಲ್ಲಿ 'ಕರ್ನಾಟ(ಕ)' ರೂಪ ಕಾಣಬರುವುದೆಂದು ಮೇಲೆ ಹೇಳಿತು. ಈ ರೇಫೆಯೊಡಗೂಡಿದ ನಕಾರ ಪ್ರಯೋಗವು ಕೇವಲ 'ಕರ್ನಾಟ(ಕ)' ಒಂದರಲ್ಲೇ ನಿಂತಿಲ್ಲ. ಸಂಸ್ಕೃತದಲ್ಲಿ ರೇಫೆಯೊಡಗೂಡಿದ

ಣಕಾರಗಳೆಂದು ವ್ಯವಹರಿಸುತ್ತಿರುವ ಅನೇಕ ಪದಗಳು ಹಲವಾರು ಪ್ರೌಢ ಸಂಸ್ಕೃತ ಶಾಸನಗಳಲ್ಲಿ ರೇಫೆಯೊಡಗೂಡಿದ ನಕಾರವಾಗಿಯೇ ಕಂಡುಬರುತ್ತವೆ. ಈ ತೆರದ ಪ್ರಯೋಗವು ಕೇವಲ ಮೈಸೂರಿನಲ್ಲಿ ಮಾತ್ರವಲ್ಲ; ತಿನ್ನವೆಲ್ಲಿ, ಗುಂಟೂರು, ವಿಶಾಖಪಟ್ಟಣ, ಕೃಷ್ಣಾ, ಹೈದರಾಬಾದು, ಹಂಪೆ, ಅನಂತಪುರ ಮುಂತಾದ ಕಡೆಗಳಲ್ಲೂ ಸಿಕ್ಕುತ್ತದೆ. (ಅನುಬಂಧ ೪.)

ಪೂನಾ, ಬೊಂಬಾಯಿ, ಶ್ರೀಶೈಲ, ಬಳ್ಳಾರಿ, ತಿನ್ನವೆಲ್ಲಿಗಳಿಂದ ಆಯ್ದ ಏಳು ಶಾಸನಗಳಲ್ಲಿ, ನಂದಿನಾಗರಿ ಅಕ್ಷರದಲ್ಲಿ ಬರೆದ ಪ್ರೌಢ ಸಂಸ್ಕೃತಶಾಸನಗಳಲ್ಲಿ 'ಕರ್ನಾಟ(ಕ)' ರೂಪ ಕಂಡುಬರುತ್ತದೆ. ಆ ಏಳು ಶಾಸನಗಳಲ್ಲಿ ಎರಡು ಎಂಟನೆಯ ಶತಮಾನದವು. (ಅನುಬಂಧ ೫.)

## ರೇಫೆಯೊಡಗೂಡಿದ 'ನ–ಣ' ಕಾರಗಳು

*Epigraphia Carnatica*, *Epigraphia Indica*, *South Indian Inscriptions*— ಇವುಗಳಲ್ಲಿನ ಶಾಸನಗಳನ್ನು ಅವಲೋಕಿಸಿದರೆ, ಅನೇಕ ಶಾಸನಗಳಲ್ಲಿ—ಮೈಸೂರಿನಲ್ಲೂ ಮೈಸೂರ ಹೊರಗೂ—ರೇಫೆಯೊಡಗೂಡಿದ 'ನ–ಣ'ಕಾರಗಳೆರಡೂ ಅನೇಕ ಕಡೆ ಒಂದೇ ಶಾಸನದಲ್ಲಿ ಕಂಡುಬರುತ್ತವೆ. 'ಕರ್ನಾಟ(ಕ)' 'ಕರ್ಣಾಟ(ಕ)'ಗಳೆರಡೂ ಕಂಡುಬಂದ ನಾಲ್ಕು ಶಾಸನಗಳನ್ನು ಮೇಲೆ ಹೇಳಿತು. 'ಕರ್ನಾಟ(ಕ)' ಸಿಕ್ಕುವ ಕೆಲವು ಶಾಸನಗಳಲ್ಲಿ 'ಕರ್ಣ', 'ಅರ್ಣವ'ಗಳಂತಹ ರೂಪಗಳೂ, 'ಕರ್ಣಾಟ(ಕ)' ದೊರಕುವ ಕೆಲವು ಶಾಸನಗಳಲ್ಲಿ 'ಕರ್ನ', 'ಅರ್ನವ' ಗಳಂತಹ ರೂಪಗಳೂ ಸಿಕ್ಕುವುದು ಮಾತ್ರವಲ್ಲದೆ, "ಕರ್ಣೋಽಪಿನಾಕರ್ನ್ಯತೇ" ಎಂಬಂತಹ ಪ್ರಯೋಗಗಳೂ ಹೇರಳವಾಗಿವೆ. (ಅನುಬಂಧ ೬.)

ಈ ಪ್ರಯೋಗಗಳನ್ನೂ ಇವು ಕಂಡುಬರುವ ಶಾಸನಗಳ ಪ್ರೌಢಿಮೆಯನ್ನೂ ಈ ಶಾಸನಗಳನ್ನು ರಚಿಸಿದವನ, ಬರೆದವನ, ಕಂಡರಿಸಿದವನ ಅರ್ಹತೆಯನ್ನೂ (ಹಲವು ಶಾಸನಗಳ ಅಂತ್ಯಭಾಗದಿಂದ) ಗಮನಿಸಿದರೆ, ಬಹುಕಾಲದಿಂದ ನಮ್ಮಲ್ಲಿ ರೇಫೆಯೊಡಗೂಡಿದ 'ನ–ಣ'ಕಾರಗಳೆರಡೂ ವಿಕಲ್ಪವಾಗಿ ಪ್ರಯೋಗದಲ್ಲಿದ್ದುವೆಂದು ಸ್ಪಷ್ಟವಾಗುವುದು; 'ಕರ್ಣಾಟಕವೇ ಸಾಧು', 'ಕರ್ನಾಟಕವೂ ಸಾಧು' ಎಂಬ ಎರಡು ಪಂಥಗಳಲ್ಲಿ ಮೊದಲನೆಯದೂ ಎರಡನೆಯದರೊಡನೆ ಕೂಡಿ ಒಕ್ಕೊರಲಿನಿಂದ 'ಕರ್ನಾಟಕವೂ ಸಾಧು' ಎಂದು ಒಪ್ಪಬೇಕಾಗುವುದು.

## 'ಕನಾ(ಣಾ)ರ್ಟ'—'ಕನಾ(ಣಾ)ರ್ಟಕ'

'ಕನಾ(ಣಾ)ರ್ಟ', 'ಕನಾ(ಣಾ)ರ್ಟಕ'ಗಳು ಮೈಸೂರಿನ ೯೧ ಶಾಸನಗಳಲ್ಲಿ ಕಂಡುಬರುವುವೆಂದು ಮೇಲೆ ಹೇಳಿತಷ್ಟೆ.

(೧) ಆ ೯೧ರಲ್ಲಿ ೬೮ ಪ್ರೌಢ ಶಾಸನಗಳು 'ಕನಾ(ಣಾ)ರ್ಟ' ರೂಪವನ್ನೂ ಬಳಸಿವೆ. (ಉಳಿದ ೧೦ ಪ್ರೌಢ ಶಾಸನಗಳು 'ಕನಾ(ಣಾ)ರ್ಟಕ' ರೂಪವನ್ನೂ ಬಳಸಿವೆ. ೧೧ ಶಾಸನಗಳು ೧೩ ಸಾಮಾನ್ಯ ಶಾಸನಗಳಲ್ಲಿ ೨ ಶಾಸನಗಳು 'ಕರ್ನಾಟ'ವನ್ನೂ 'ಕನಾ(ಣಾ)ರ್ಟಕ'ವನ್ನೂ ಬಳಸಿವೆ.)

(೨) ಆ ೯೧ ಶಾಸನಗಳಲ್ಲಿ ಬರುವ 'ಕನಾ(ಣಾ)ರ್ಟ' ರೂಪಗಳ ಸಂಖ್ಯೆ
೪೯. 'ಕನಾ(ಣಾ)ರ್ಟಕ'ಗಳ ಸಂಖ್ಯೆ ೨೭. (ಅನುಬಂಧ ೭.)

(೩) ಮೇಲಿನ ಪ್ರಯೋಗಗಳನ್ನೆಲ್ಲ ಡಿಸ್ಟ್ರಿಕ್ಟು ಪ್ರಕಾರ ಗಣಿಸಿದರೆ, ಶಾಸನಗಳ ಸಂಖ್ಯೆ ಹೆಚ್ಚಾಗಿರುವ ಡಿಸ್ಟ್ರಿಕ್ಟುಗಳಲ್ಲೆಲ್ಲ 'ಕನಾ(ಣಾ)ರ್ಟಕ'ಕ್ಕಿಂತ 'ಕನಾ(ಣಾ)ರ್ಟ'ವೇ ಹೆಚ್ಚು ಕಾಣುತ್ತದೆ. (ಅನುಬಂಧ ೩.)

(೪) ಅದೇ ಪ್ರಯೋಗಗಳನ್ನು ಶತಮಾನಗಳ ಕ್ರಮದಲ್ಲಿ ಗಣಿಸಿದರೂ ಕೂಡ, ಶಾಸನಗಳ ಸಂಖ್ಯೆ ಹೆಚ್ಚಾಗಿರುವ ಶತಮಾನಗಳಲ್ಲೆಲ್ಲ 'ಕನಾ(ಣಾ)ರ್ಟಕ'ಕ್ಕಿಂತ 'ಕನಾ(ಣಾ)ರ್ಟ' ಹೆಚ್ಚು ಕಾಣುತ್ತದೆ. (ಅನುಬಂಧ ೭.)

(೫) 'ಕನಾ(ಣಾ)ರ್ಟಕ' ರೂಪ ದೊರೆಯುವ ಮೇಲೆ ಹೇಳಿದ ೧೦ ಪ್ರೌಢ ಶಾಸನಗಳನ್ನು ಪರಿಶೀಲಿಸಿದರೆ, ಪದ್ಯದಲ್ಲಿ ಒಂದು ಮಾತ್ರೆಯ ಅಳತೆಗಾಗಿಯೋ ಗದ್ಯದಲ್ಲಿ ನುಡಿಯ ಗಾಂಭೀರ್ಯದ ತೂಕಕ್ಕಾಗಿಯೋ ಒಂದು ಹೆಚ್ಚು 'ಕ' ಕಾರ ನನ್ನು ಬಳಸಿಕೊಂಡು 'ಕನಾ(ಣಾ)ರ್ಟ'ವನ್ನು 'ಕನಾ(ಣಾ)ರ್ಟಕ'ವಾಗಿಸಿ ಕೊಂಡಂತೆ ಕಾಣುತ್ತದೆ.

ಇದನ್ನೆಲ್ಲ ನೋಡಿದರೆ, 'ಕನಾ(ಣಾ)ರ್ಟ'ಕ್ಕೆ 'ಕ' ಪ್ರತ್ಯಯ ಹತ್ತಿ 'ಕನಾ(ಣಾ)ರ್ಟಕ' ಬೆಳೆಯಿತೆಂದು ಅನುಮಾನಿಸಲು ಎಡೆಯಿದೆ.

## ಕರ್ನಾಟ — ಕರ್ ನಾಟ — ಕರ್‌ನಾಡು

'ಕರ್ ನಾಡು' ಎಂಬುದರಿಂದ 'ಕರ್ನಾಟ'ರೂಪ ಬಂದಿತೆಂಬುದು ಈ ವರೆಗೆ ದೊರೆತಿರುವ ಆಧಾರಗಳ ಮೇಲೆ ಒಪ್ಪತಕ್ಕ ಮಾತು.

ನಮ್ಮ ಕನ್ನಡ ನಾಡಿನ ಹಲವು ಭಾಗಗಳಿಗೆ ಹಿಂದಿನ ಕಾಲದಿಂದ ಇದ್ದ ಬಯಲ್ ನಾಡು, ಮಲೆ ನಾಡು, ಬಾಗೆ ನಾಡು, ಎಳೆನಗರ ನಾಡು, ಎರುಮೈ ನಾಡು, ಹೊಸ ನಾಡು, ಕೊವಲಾಲ ನಾಡು, ಕುಡುಮಲೆ ನಾಡು, ಮಹಾರಾಜರ ನಾಡು, ಮೈಸು ನಾಡು, ಮಂಡಲಿ ನಾಡು, ನಾಲ್ಕು ನಾಡು, ಪದಿ ನಾಡು, ಪದಿನಾಲ್ಕು ನಾಡು, ಎಪ್ಪತ್ತು ನಾಡು, ಪುನ್ನಾಡು, ತೊಂಡ ನಾಡು, ತೊರೆ ನಾಡು, ತೆರಕಣಾಂಬಿ ನಾಡು, ವೈನಾಡು, ಎಡತೊರೆ ನಾಡು, ಯೆಲಹಂಕ ನಾಡು — ಮುಂತಾದ 'ನಾಡು' ಸಹಿತವಾದ ಹೆಸರುಗಳು ಶಾಸನಗಳ ತುಂಬ ಸಿಕ್ಕುತ್ತವೆ. ಇವುಗಳಂತೆಯೇ 'ಕರುನಾಡು', 'ಕರ್ ನಾಡು' ಎಂಬ ಹೆಸರಿನ ಕನ್ನಡ ಭೂಭಾಗವು ಇದ್ದಿರಬಹುದು. ನೃಪತುಂಗನು ಕನ್ನಡದ ತಿರುಳನ್ನು ಗುರುತಿಸಿದ ನೆಲವು ಕಪ್ಪುನೆಲ. ಅಲ್ಲಿಗೆ 'ಕರ್ ನಾಡು' ಎಂಬ ಹೆಸರು ಮೊದಲಾಗಿ, ಅನಂತರ ಅಲ್ಲಿಯ ಭಾಷೆಯನ್ನೇ (ನೃಪತುಂಗನ 'ಕನ್ನಡಂಗಳ್'ನ್ನು) ಆಡುತ್ತಿದ್ದ ಜನಕ್ಕೆಲ್ಲ ಅದೇ ಹೆಸರು ಹರಡಿರಬಹುದು. ಅಥವಾ, ನಮ್ಮ ನಾಡಿಗೆ ದಕ್ಷಿಣದಲ್ಲಿರುವ ನೆರೆಯವರಾದ ತಮಿಳರೇ ನಮ್ಮ ನಾಡನ್ನು 'ಕರುನಾಡು' ಎಂದು ಕರೆದಿರಬಹುದು. ಇಂದಿಗೂ ಇಲ್ಲಿ ಹಲವರು ತಮಿಳು ನಾಡವರನ್ನು 'ಕೀಳ್ನಾಟ್ಟಾನ್' ಎಂದು ಸಾಮಾನ್ಯವಾಗಿ ವ್ಯವಹರಿಸುವರು. ಅದರಂತೆಯೇ, ಅವರೂ ನಮ್ಮನ್ನು 'ಮೇಲ್ನಾಟ್ಟಾನ್'

ಎಂಬಂತೆಯೇ ಅದೇ ಅರ್ಥದಲ್ಲಿ 'ಕರುನಾಡನ್' ಎಂದಿರಬಹುದು. 'ಕರು' ಶಬ್ದದ ಅರ್ಥ ಏನೇ ಇದ್ದಿರಲಿ, '**ಕರುನಾಡು**' ಎಂಬ 'ನಾಡು'ಸಹಿತವಾದ ಶಬ್ದ ಇತ್ತೆಂಬುದರಲ್ಲಿ ಸಂದೇಹಪಡುವಂತಿಲ್ಲ.

"ಹೀಗೆ ಇದ್ದಿರಬಹುದಾದ '**ಕರ್ ನಾಡು**' '**ಕರ್ ನಾಟ**' ಹೇಗಾಯಿತು? 'ನಾಡು' ಎಂಬುದು 'ನಾಟ್ಟು', 'ನಾಟು' ಎಂದಾಗಬೇಕಲ್ಲದೆ 'ನಾಟ' ಹೇಗಾಯಿತು?" ಇದಕ್ಕೆ ಉತ್ತರ ಹೇಳುವ ಮೊದಲು, ಮೇಲೆ ಹೇಳಿದ ನಾಡುಗಳಲ್ಲಿ ಒಂದಾದ '**ಪುನ್ನಾಡು**' ಎಂಬುದು '**ಪುನ್ನಾಟ**' ಎಂಬ ರೂಪ ಪಡೆದ ಬಗೆ ನೋಡೋಣ.

## ಪುನ್ನಾಡು – ಪುನ್ನಾಟ

ಹಿಂದೆ, ಮೈಸೂರಿನ ದಕ್ಷಿಣದಲ್ಲಿ 'ಪುನ್ನಾಡು' ಎಂಬ ರಾಜ್ಯವಿತ್ತು. ಅಲ್ಲಿ ಕಾವೇರೀ ಕಪಿನಿಗಳು ಹರಿಯುತ್ತಿದ್ದುದರಿಂದ ಅದು ಹೊನಲುಗಳ ನಾಡು, ಪೊನಲ್ ನಾಡು, ಪುನಲ್ ನಾಡು ಎನ್ನಿಸಿಕೊಂಡಿದ್ದು 'ಪುನ್ + ನಾಡು' ಎಂದಾಯಿತು. ಈ 'ಪುನ್ ನಾಡು' ಎಂಬ ಶಬ್ದವು ಆವಾವ ರೂಪಗಳಲ್ಲಿ ದೊರೆಯುವುದೆಂಬುದನ್ನು ಶಾಸನಗಳ ಹಾಗೂ ಇತರ ಆಧಾರಗಳಿಂದ ನೋಡೋಣ. (ಅನುಬಂಧ ೮.)

(೧) ಪುನ್ನಾಡು ........ ........ ........ ಪೂನಾಡು
(೨) ಪುನ್ನಾಡ, ಪುಣ್ಣಾಡ, ಪುನ್ನಡ ........ ಪೂನಾಡ
(೩) ಪುನ್ನಾಟ, ಪುಣಾಟ, (ಪುನ್ನಟ?) ಪೌನ್ನತ

ಈ ರೂಪಗಳಲ್ಲಿ '**ಪುನ್ನಟ(?)**' ಎಂಬುದು ಕ್ರಿ. ಶ. ಎರಡನೆಯ ಶತಮಾನದಲ್ಲೂ, '**ಪುಣಾಟ**' ಕ್ರಿ. ಶ. ಮೂರನೆಯ ಶತಮಾನದಲ್ಲೂ ಸಿಕ್ಕುತ್ತವೆ. ಇವೆರಡೂ ರೂಪಗಳಿಗೆ 'ಪುನ್ನಾಟ'ವೆಂಬುದು ಮೂಲವೆಂಬುದು ಸ್ಪಷ್ಟ. ಈ 'ಪುನ್ನಾಟ'ವು ಆರನೆಯ ಶತಮಾನದ ಗುಮ್ಮರೆಡ್ಡಿಪುರ ಶಾಸನದಲ್ಲೂ, ಹತ್ತನೆಯ ಶತಮಾನದ 'ಬೃಹತ್ಕಥಾ ಕೋಶ'ವೆಂಬ ಜೈನ ಗ್ರಂಥದಲ್ಲೂ ಸಿಕ್ಕುತ್ತದೆ. ಎರಡನೆಯಕಡೆ ಅದು ಬರುವ ಸಂದರ್ಭ ನೋಡಿದರೆ, ಕ್ರಿ. ಪೂ.ದಲ್ಲಿ ಚಂದ್ರಗುಪ್ತನ ಕಾಲದಲ್ಲಿ ದಕ್ಷಿಣಾ ಪಥಕ್ಕೆ ಬಂದ ಜೈನರು, ಕನ್ನಡ ಬಾರದೆ ಪ್ರಾಕೃತವನ್ನಾಡುತ್ತಿದ್ದವರು, ಪುನಲ್ ನಾಡಿಗೆ ಸಹಜವಾಗಿದ್ದ '**ಪುನ್ ನಾಡು**' ಎಂಬ ಹೆಸರನ್ನು ತಾವು 'ಪುನ್ ನಾಟ' ಎಂದು ಉಚ್ಚರಿಸತೊಡಗಿರಬಹುದು.

'ಪುನ್ ನಾಡು', 'ಪುನ್ ನಾಟ'ಗಳ ಅರ್ಥವನ್ನು ಅರಿಯದೆ ಅಥವಾ ಮರೆತು ಅದನ್ನು ಮಾಂಬಳ್ಳಿ ಶಾಸನದಲ್ಲಿ 'ಪುಂ ರಾಷ್ಟ್ರ' (ಅನುಬಂಧ ೮) ಎಂದು ಸಂಸ್ಕೃತ ಮಾಡಿಕೊಂಡಿರುವುದು ಗಮನಿಸಬೇಕಾದ ವಿಚಾರ. (ಇದರಂತೆಯೇ 'ಕರ್ ನಾಟ' ಎಂಬುದರ ಅರ್ಥವರಿಯದೆ ಅಥವಾ ಮರೆತು ಅದನ್ನು 'ಕರ್ಣ ಅಟ' ಎಂದು ಸಂಸ್ಕೃತಜ್ಞರು ಮಾಡಿಕೊಂಡಿರಬಹುದು.)

[ಇದರಂತೆಯೇ, 'ಪುನ್ನಾಡು' ಎಂಬುದರ ಪಕ್ಕದಲ್ಲಿಯೇ ಇದ್ದ '**ಪದಿ ನಾಡು**' ಎಂಬುದಕ್ಕೂ (ಗುಮ್ಮರೆಡ್ಡಿಪುರ ಶಾಸನದ) '**ಪಾಣ್ಣಾಡ**'ಕ್ಕೂ (ತುಮಕೂರು ೩೬ರ) '**ಪಾಂನೊಡ**'ಕ್ಕೂ (ಬೆಂಗಳೂರು ೯೬ರ) '**ಪಾನಾಟ**'ಕ್ಕೂ ಸಂಬಂಧವಿರುವಂತಿದೆ.]

## ನಾಡು — ನಾಟ

ಚಂದ್ರಗುಪ್ತನ ಕಾಲದಿಂದ ಕನ್ನಡ ನಾಡಿಗೆ ಜೈನರ ಬಾಂಧವ್ಯ ಬಂದಂತೆ ಅಶೋಕನ ಕಾಲದಿಂದ ಕನ್ನಡ ನಾಡಿಗೆ ಬೌದ್ಧರ ಬಾಂಧವ್ಯ ಬಂತು. ಜೈನರು ಪ್ರಾಕೃತವಾಡುತ್ತಿದ್ದಂತೆಯೇ ಬೌದ್ಧರು ಕೂಡ ಪ್ರಾಕೃತವಾಡುತ್ತಿದ್ದರು. (ಬೌದ್ಧರ ಭಾಷೆ ಪಾಲಿಯೆಂದು ಈಗ ಸಾಮಾನ್ಯವಾಗಿ ತಿಳಿದಿದ್ದರೂ ಆ ಕಾಲದಲ್ಲಿ ಬೌದ್ಧರಲ್ಲಿ ಹಲವಾರು ಪ್ರಾಕೃತಗಳು ಬಳಕೆಯಲ್ಲಿದ್ದುವು.) ನಮ್ಮ 'ಪುನ್ ನಾಡು' ಜೈನರಲ್ಲಿ ಹೇಗೆ 'ಪುನ್‌ನಾಟ'ವಾಗಿರುವುದೆಂದು ಮೇಲೆ ಹೇಳಿತು.

'ದೀಘನಿಕಾಯ'ವೆಂಬ ಬೌದ್ಧ ಗ್ರಂಥದಲ್ಲಿ (III, ಪುಟ ೧೯೯–೨೦೦)

ಯೇನ ಉತ್ತರಕುರೂ ರಮ್ಮಾ ಮಹಾನೇರು ಸುದಸ್ಸನೋ
ಮನುಸ್ಸಾ ತತ್ಥ ಜಾಯನ್ತಿ ಅಮಮಾ ಅಪರಿಗ್ಗಹಾ....
ತಸ್ಸ ಚ ನಗರಾ ಅಹು ಅನ್ತಲಿಕ್ಖೇ ಸುಮಾಪಿತಾ
ಆಟಾನಾಟಾ ಕುಸಿನಾಟಾ ಪರಕುಸಿನಾಟಾ
ನಾಟಸುರಿಯಾ ಪರಕುಸಿತನಾಟಾ

ಎಂಬ ಗಾಹೆಗಳು ಸಿಕ್ಕುತ್ತವೆ. ಇಲ್ಲಿ, ಉತ್ತರಕುರುವಿನ ಅಂತರಿಕ್ಷದಲ್ಲಿ ಕಟ್ಟಿದ ಐದು ನಗರಗಳ ಹೆಸರು ಬಂದಿದೆ: **ಆಟಾನಾಟ, ಕುಸಿನಾಟ, ಪರಕುಸಿನಾಟ, ಸುರಿಯನಾಟ** ಮತ್ತು **ಪರಕುಸಿತನಾಟ**.

ಇವುಗಳನ್ನು ನೋಡಿದರೆ, **ಕರ್‌ನಾಡು, ಪುನ್‌ನಾಡು,** ಪದಿ ನಾಡುಗಳು **ಕರ್‌ನಾಟ, ಪುನ್‌ನಾಟ, ಪಾನಾಟ**ಗಳಾಗಿರಲು ಪ್ರಾಕೃತದ ಪ್ರಭಾವ ಕಾರಣವಾಯಿತೆಂದು ಎಣಿಸಬೇಕಾಗುವುದು. (ಕನ್ನಡದಲ್ಲಿ ತತ್ಸಮ ತದ್ಭವಗಳೆಂದು ವ್ಯವಹರಿಸುವ ಅನೇಕ ಶಬ್ದಗಳನ್ನು 'ಸಂಸ್ಕೃತಸಮ' 'ಸಂಸ್ಕೃತಭವ'ವೆನ್ನುವುದಕ್ಕಿಂತ 'ಪ್ರಾಕೃತಸಮ' 'ಪ್ರಾಕೃತಭವ'ಗಳೆಂದರೆ ಹೆಚ್ಚು ಒಪ್ಪುವುದು.)

## ಕರ್ ನಾಡು — ಕರ್ ನಾಟ — ಕನ್ ನಾಟ

'ಕನ್ನಡ'ಕ್ಕೆ ಪ್ರಯೋಗವಾಗಿರುವ ಬೇರೆ ಬೇರೆ ಹೆಸರುಗಳ ರೂಪಗಳನ್ನು ಹೊಂದಿಸಲು ಯತ್ನಿಸಿದರೆ, ಮೇಲಿನ ಎಣಿಕೆ ದೃಢವಾಗುತ್ತದೆ. ಪ್ರಯೋಗಗಳನ್ನು ಅನುಬಂಧ ೯ರಲ್ಲಿ ಕೊಟ್ಟಿದೆ. ಅಲ್ಲಿರುವ ರೂಪಗಳನ್ನೂ, ಇದ್ದಿರಬಹುದಾದ ಇತರ ರೂಪಗಳನ್ನೂ ಕೆಳಗೆ ಕೊಟ್ಟಿದೆ. ಇದ್ದಿರಬಹುದಾದವನ್ನು ಆವರಣದಲ್ಲಿ ತೋರಿಸಿದೆ.

| | | | | |
|---|---|---|---|---|
| (೧) ಕರುನಾಡು.... | (a) [ಕರ್‌ನಾಡು] | ....[ಕನ್‌ನಾಡು] | .... ಕನ್‌ನಡು | |
| .......... | (b) ಕರ್‌ನಾಟು | .... .... | .... | |
| (೨) .......... | [ಕರ್‌ನಾಡ] | .... ಕನ್‌ನಾಡ | .... ಕನ್ ನಡ | |
| (೩) .......... | (a) ಕರ್‌ನಾಟ | .... ಕನ್‌ನಾಟ | ....[ಕನ್‌ನಟ] | |
| | (b) ಕರ್‌ನಾಟಕ | .... ಕನ್‌ನಾಟಕ | .... | |
| (೪) .......... | (a) ಕರ್ಣಾಟ | .... ಕಣ್ಣಾತ್ರ, ಕಣ್ಣಾಟ.. | | |
| | (b) ಕರ್ಣಾಟಕ | .... ಕಣ್ಣತ್ತಗ | .... | |

ಪುನ್ { ನಾಡು / ನಾಟ } — ಕರ್ { ನಾಡು / ನಾಟ } — ಕನ್ { ನಾಡು / ನಾಟ }

ಪುನ್‌ನಾಡು, ಕರ್‌ನಾಡುಗಳು ತಾಳಿರುವ ರೂಪಾಂತರಗಳನ್ನು ಹೋಲಿಸಿ ನೋಡೋಣ. (ಆವರಣದಲ್ಲಿರುವ ರೂಪಗಳು ದೊರೆತಿಲ್ಲ.)

ಪುನ್ ನಾಡು .... ಪುನ್ ನಾಡ .... ಪುನ್ ನಡ .... ಪುನ್ ನಾಟ
ಕರ್ ನಾಡು .... (ಕರ್ ನಾಡ) .... (ಕರ್ ನಡ) .... ಕರ್ ನಾಟ
(ಕನ್ ನಾಡು) .... ಕನ್ ನಾಡ .... ಕನ್ ನಡ .... ಕನ್ ನಾಟ

## 'ಕರ್ನಾಟ(ಕ)'—'ಕರ್ಣಾಟ(ಕ)'

ಇದುವರೆಗೆ ಕಂಡಿರುವ ಆಧಾರಗಳ ಮೇಲೆ, 'ಕರ್‌ನಾಡು'ವಿನಿಂದ 'ಕರ್ ನಾಟ' ಹೀಗೆ ಹುಟ್ಟಿರಬೇಕೆನ್ನಿಸುವುದು. ಈ 'ಕರ್ನಾಟ'ವೆಂಬ ನಾಮಪದಕ್ಕೆ ಸ್ವಾರ್ಥದಲ್ಲಿ 'ಕ' ಪ್ರತ್ಯಯ ಬಂದು— ಪ್ರಾಕೃತದ 'ಘೋಸ–ಘೋಸಕ', 'ಕಣ್ಣಮುಣ್ಡ–ಕಣ್ಣಮುಣ್ಡಕ' ರೂಪಗಳಂತೆ— 'ಕರ್ನಾಟಕ'ವಾಗುವುದು ಸಹಜ. 'ಕರ್ನಾಟ', 'ಕರ್ನಾಟಕ' ರೂಪಗಳು ಅಪಾಣಿನೀಯವೆಂದು ಅವನ್ನು 'ಕರ್ಣಾಟ' 'ಕರ್ಣಾಟಕ'ವೆಂದು ತಿದ್ದುವುದು ಆ ವ್ಯಾಕರಣ ಸಮ್ಮತವೇ. ಈ ರೀತಿ 'ಕರ್ನಾಟ' ವನ್ನು 'ಕರ್ಣಾಟ' ಮಾಡಿಕೊಂಡು, ಮೂಲಪದದ ಅರ್ಥವನ್ನು ಮರೆತು ಅಥವಾ ಅರಿಯದೆ, 'ಪುನ್ ನಾಟ' ಎಂಬುದನ್ನು 'ಪುಂರಾಷ್ಟ್ರ'ವೆಂದು ಕರೆದಿರುವಂತೆ, "ಕರ್ಣೇಷು ಅಟತಿ ಇತಿ ಕರ್ಣಾಟಃ" ಎಂದು ವಿವರಿಸಲು ಯತ್ನಿಸಿದ್ದೂ ಸ್ವಾಭಾವಿಕವೇ.

ಪ್ರಮಾಣಗಳು ಈ ರೀತಿಯಿರುವಾಗ, ರೇಫೆಯೊಡಗೂಡಿದ 'ನ–ಣ'ಕಾರಗಳೆರಡೂ ನಮ್ಮಲ್ಲಿ ಬಹುಕಾಲದಿಂದ ವಿಕಲ್ಪವಾಗಿ ಪ್ರಯೋಗವಾಗುತ್ತಿರುವುದಕ್ಕೆ ಹೇರಳವಾಗಿ ಉದಾಹರಣೆಗಳಿರುವಾಗ, ಅಂದಿನ ವ್ಯಾಕರಣದಿಂದ ಈಚಿನ ಪ್ರಯೋಗಗಳನ್ನು ತಿದ್ದಲು ಯತ್ನಿಸುವುದಕ್ಕಿಂತ "ವೈಯಾಕರಣರು ಪ್ರಯೋಗಶರಣರು" ಎಂಬುದನ್ನು ಸಾರ್ಥಕಪಡಿಸುವುದೇ ಸಾಧು.

---

## ಅನುಬಂಧಗಳು

ಸಂಕೇತಗಳು: E. C.: *Epigraphia Carnatica*. E. I.: *Epigraphia Indica*. S. I. I.: *South Indian Inscriptions*. M. A. R.: *Mysore Archæological Reports*.

## ಅನುಬಂಧ ೧ (a)

**E. C. II—XII ರಲ್ಲಿ 'ಕರ್ನಾಟ(ಕ)', 'ಕರ್ಣಾಟ(ಕ)' ಸಿಕ್ಕುವ ಶಾಸನಗಳು**

A. ಕೇವಲ 'ಕರ್ನಾಟ(ಕ)' ವಿರುವ ಶಾಸನಗಳು:

ಶ್ರವಣಬೆಳುಗೊಳ ೨೪೯, ೨೫೫, ೩೫೪; ಮಂಡ್ಯ ೭೮; ನಂಜನಗೂಡು ೧, ೧೯೪, ತಿರುಮಕೂಡಲು ೨೬೭; ಮಳವಳ್ಳಿ ೬೧; ಶ್ರೀರಂಗಪಟ್ಟಣ ೧೧, ೧೪, ೧೩೩, ೧೫೧;

ನರಸೀಪುರ ೬೩; ಎಡತೊರೆ ೧೮, ೪೩, ೫೪, ೫೮; ಕೃಷ್ಣರಾಜಪೇಟೆ ೨೯; ಚಾಮರಾಜನಗರ ೮೬, ೯೨; ಹಾಸನ ೭೨, ೭೬; ಬೇಲೂರು ೧೧೪; ಅರಸೀಕೆರೆ ೧೩೦, ೧೭೨; ಚೆನ್ನರಾಯಪಟ್ಟಣ ೨೩೭; ಕಡೂರು ೮೮, ೧೬೨; ಕೊಪ್ಪ ೩೩; ಶೃಂಗೇರಿ ೧೧; ಶಿವಮೊಗ್ಗ ೨; ಬೆಂಗಳೂರು ೯೬; ಕೋಲಾರ ೭೪, ೧೪೭; ಶಿಡ್ಲಘಟ್ಟ ೯೪; ಚಿಕ್ಕಬಳ್ಳಾಪುರ ೩೨; ಹೊಳಲ್ಕೆರೆ ೮೧; ಮೊಳಕಾಲ್ಮುರು ೨೦; ತುಮಕೂರು ೧೪; ಮದ್ದಗಿರಿ ೭೪; ಪಾವುಗಡ ೫೪; ತಿಪಟೂರು ೧೩೯; ಕುಣಿಗಲು ೩೭. [ಒಟ್ಟು ೪೩ ಶಾಸನಗಳು.]

B. ಕೇವಲ 'ಕರ್ಣಾಟ(ಕ)'ವಿರುವ ಶಾಸನಗಳು:

ಶ್ರವಣಬೆಳುಗೊಳ ೨೨೧; ಶ್ರೀರಂಗಪಟ್ಟಣ ೧೦೦; ತಿರುಮಕೂಡಲು ನರಸೀಪುರ ೧೦೧; ಎಡತೊರೆ ೧೭; ನಾಗಮಂಗಲ ೫೮; ಹುಣಸೂರು ೧೩೭; ಹಾಸನ ೭; ಬೇಲೂರು ೭೪, ೧೨೪; ಅರಸೀಕೆರೆ ೧೨೭, ೧೩೮; ಚೆನ್ನರಾಯಪಟ್ಟಣ ೧೭೨, ೧೭೯, ೧೮೦, ೨೪೪; ಕೊಪ್ಪ ೩೪; ತರೀಕೆರೆ ೪೫; ಶಿವಮೊಗ್ಗ ೭೯, ೮೦, ೮೩; ಶಿಕಾರಿಪುರ ೯೫, ೧೧೯, ೧೩೬, ೧೩೮, ೧೯೭; ಸೊರಬ ೨೬೧, ೩೨೯; ಸಾಗರ ೧೫೬; ನಗರ ೪೬, ೬೪, ೬೯; ತೀರ್ಥಹಳ್ಳಿ ೨೦೬; ಚೆನ್ನಪಟ್ಟಣ ೧೮೬; ಶಿಡ್ಲಘಟ್ಟ ೨; ಮುಳಬಾಗಿಲು ೧, ೬೦; ದಾವಣಗೆರೆ ೧೩; ತುಮಕೂರು ೧; ಪಾವುಗಡ ೬೯; ತಿಪಟೂರು ೩೮; ಚಿಕ್ಕನಾಯಕನಹಳ್ಳಿ ೨೧, ೩೯; ಶಿರಾ ೨೫, ೨೮.

[ಒಟ್ಟು ೪೪ ಶಾಸನಗಳು.]

C. 'ಕರ್ನಾಟ(ಕ)' 'ಕರ್ಣಾಟ(ಕ)'ಗಳೆರಡೂ ಇರುವ ಶಾಸನಗಳು:

ಮಳವಳ್ಳಿ ೧೨೧; ಶ್ರೀರಂಗಪಟ್ಟಣ ೬೪; ತಿರುಮಕೂಡಲು ನರಸೀಪುರ ೬೧, ೯೭.

[ಒಟ್ಟು ೪ ಶಾಸನಗಳು.]

## ಅನುಬಂಧ ೧ (b)

### E. C. II-XII ರಲ್ಲಿರುವ 'ಕರ್ನಾಟ(ಕ)' ಪ್ರಯೋಗಗಳು

(೧) ೧೦೨೨: ಗಂಗಪೆರ್ಮ್ಮಾನಡಿಗಳು ಕರ್ನ್ನಾಟನಾಳುತ್ತಮಿರೆ.... (ಮಂಡ್ಯ ೭೮)

(೨)? ೧೧೫೦: ಕರ್ನಾಟವಾಚಮವಲಂಬ್ಯ.. (ಕೃಷ್ಣರಾಜಪೇಟೆ ೨೯)

(೩)? ೧೧೬೦: ಕರ್ನ್ನಾಟಕುಳಕಮಳ ಮಾರ್ತ್ತಂಡನಾಮಾದಿ ಪ್ರಶಸ್ತಿ ಸಹಿತನುಂ.... (ಹಾಸನ ೭೨)

(೪) ೧೧೬೩: ಕರ್ನ್ನಾಟಕುಳಕಮಳಮಾರ್ತ್ತಂಡ (ಅರಸೀಕೆರೆ ೧೭೨)

(೫) ೧೧೬೮: ಕರ್ನ್ನಾಟಕುಳಕಮಳಷಂಡಮಂಡನ ಪ್ರಚಣ್ಡ ಮಾರ್ತ್ತಣ್ಡ.... (ಹಾಸನ ೭೬)

(೬) ೧೧೭೩: ಕರ್ನ್ನಾಟೀ ಕಟೀ ಚಂಚತ್ಕಾಂಚನಕಟಸೂತ್ರ.... (ಬೇಲೂರು ೧೧೪)

(೭)? ೧೨೦೦: ಕರ್ನ್ನಾಟ ಲಾಟ ದ್ರಾವಿಳ ನಾನಾ ದೇಶ ಭಾಷಾ ವಿಶೇಷ ಲಿಪಿನಿಪುಣ ವಿದ್ಯಾಧರರುಂ.... (ಅರಸೀಕೆರೆ ೧೩೦)

(೮)? ೧೨೨೩: ಕರ್ನ್ನಾಟ.... (ಕಡೂರು ೮೮)

(೯)? ೧೨೩೪: ವರಹಾಟಾದಿ ಕರ್ನಾಟ ದ್ರಾವಿಡಾನ್ ಗೌಳವಾನಪಿ.... (ತುಮಕೂರು ೧೪)

(೧೦) ೧೨೫೩: ಅಯಮೇವೋತ್ತಮ ಶ್ಲೋಕಾರ್ಥಃ ಕರ್ನ್ನಾಟ ಭಾಷಯಾ ಪ್ರಕಟೀಕ್ರಿಯತೇ ॥ (ಚೆನ್ನರಾಯಪಟ್ಟಣ ೩೭೭)

(೧೧) ೧೨೭೬: ಸಿದ್ಧೇನಾಪಿಚ ಹೊಯ್ಸಳೇತಿ ಕಥಿತಃ ಕರ್ನ್ನಾಟವಾಟಾ ನೃಪಃ ॥ (ತಿರುಮಕೂಡಲು ನರಸೀಪುರ ೯೭)

(೧೨) ೧೨೭೮: ಕರ್ನ್ನಾಟ.... (ಮೊಳಕಾಲ್ಮುರು ೨೦)

(೧೩)? ೧೩೭೦: ಪಿಲಚುಕೋನಿ ಆಂಧ್ರ ಕರ್ನ್ನಾಟಕ..(ಮದ್ದಗಿರಿ ೭೪)

(೧೪)? ೧೪೦೨: ದ್ರಾವಿಡ ದ್ರವಿಡ ಕರ್ನಾಟವರಾಟನ್ಪಿರಾಟ ಪಾನಾಟ.. (ಬೆಂಗಳೂರು ೯೬)

(೧೫) ೧೪೦೮: ಪಶ್ಚಿಮ ಸಮುದ್ರಾಂತ್ಯವಾಗಿ ಕರ್ನಾಟಕ ರಾಜ್ಯವನ್ನು.. (ಕೊಪ್ಪ ೩೩)

(೧೬) ೧೪೦೯: ಶ್ರೀಮತ್ಕರ್ನ್ನಾಟದೇಶೇ ಜಯತಿ ಪುರವರಂ ಗಂಗವತ್ಯಾಖ್ಯಮೇತತ್.... (ಶ್ರವಣಬೆಳಗುಳ ೩೫೫)

(೧೭)? ೧೪೩೪: ಕರ್ನ್ನಾಟ ರಾಜ್ಯಲಕ್ಷ್ಮೀ ಕಲ್ಯಾಣೋಲ್ಲಾಸಕಾರಣೇ.. (ಶಿಡ್ಲಘಟ್ಟ ೯೪)

(೧೮) ೧೪೪೮: ಯೇನ ಕರ್ನಾಟದೇಶ ಶ್ರೀ ಸ್ಥಿರತಾಟಂಕ ವತ್ಯಭೂತ್ (ಶ್ರೀರಂಗಪಟ್ಟಣ ೧೧)

(೧೯)? ೧೪೫೦: ಸಮುಗ್ರ ಕರ್ನ್ನಾಟದೇಶ ಭೂವರ್ಗ್ಗ ಭರ್ತ್ತಾರಂ.... (ಕಡೂರು ೧೬೨)

(೨೦) ೧೪೫೮: ಯೇನ ಕರ್ನ್ನಾಟದೇಶ ಶ್ರೀಃ ಸ್ಪೀತತಾಟಂಕನತ್ಯಭೂತ್ (ಶ್ರೀರಂಗಪಟ್ಟಣ ೧೩೩)

(೨೧) ೧೪೭೪: ಕರ್ನಾಟ ಲಕ್ಷ್ಮೀಸವಿಲಾಸಮಾಸಯಸ್ಮಿನ್ ಮಹೀಪೇ ಮಹನೀಯ ಕೀರ್ತೌ.... (ಮಳವಳ್ಳಿ ೧೭೧)

(೨೨) ೧೪೮೭: ದುರ್ಘಟವೀ ಕರ್ನಾಟಕ ದುರ್ಗಂಗಳಿಗಧಿಕವೆನಿಪ.... (ಪಾವುಗಡ ೫೪)

(೨೩) ೧೫೫೮: ಕರ್ನಾಟಕದ ದೊರೆಗಳು.... (ಕೋಲಾರ ೧೪೭)

(೨೪) ೧೬೩೯: ಪಾತುಂ ಕರ್ನಾಟ ಭೂಭಾಗಂ ಪ್ರಾಪ್ತಾಃ ಪ್ರಥಿತ ತೇಜಸಃ (ನಂಜನಗೂಡು ೧೯೪)

(೨೫) ೧೬೪೧: ಕರ್ನಾಟ ಧರಣೀ ವಜ್ರಕವಾಟಾಯಿತ ವಿಕ್ರಮಃ.... (ಶಿವಮೊಗ್ಗ ೨)

(೨೬, ೨೭) ೧೬೫೨: ಕರ್ನಾಟ ರಾಜ್ಯಂ.... ಕರ್ನಾಟಕ ರಾಜ್ಯವ.... (ಶೃಂಗೇರಿ ೧೧)

(೨೮) ೧೬೬೦ : ಕರ್ನ್ನಾಟಗದವರು.... (ಹೊಳಲ್ಕೆರೆ ೮೧)

(೨೯) ೧೬೬೨ : ತಸ್ಯಾಂ ಕೃತಾವತಾರಾಃ ಕತಿಚನ ಕರ್ನಾಟದೇಶ ಮಾಜಗ್ಮುಃ ॥.... (ಕುಣಿಗಿಲು ३೭)

(೩೦) ೧೬೬೩ : ಜಯತಿ ಜಗತಿ ಶಶ್ವದ್ದಕ್ಷಿಣಸ್ಯಾಂ ಸುಮೇರೋಃ ಸಕಲಜನ ವಿಲಾಸಾವಾಸ ಕರ್ನಾಟ ದೇಶಃ ॥ (ಎಡತೊರೆ ३೪)

(೩೧) ೧೬೬೩ : ಕುಲಪತಿಃ ಕರ್ನಾಟ ಭೂಮೀಭುಜಾಂ...... (ಎಡತೊರೆ ३೪)

(೩೨) ೧೬೬೭ : ಅಸ್ತಿ ಶ್ರೀಮಾಂ ಜನಪದಃ ಕರ್ನಾಟ ಇತಿ ವಿಶ್ರುತಃ.. (ಎಡತೊರೆ ४३)

(೩೩) ೧೬೬೭ : ಅಧ್ಯಾಸ್ತೇ ತತ್ರ ಕರ್ನಾಟ ಸಿಂಹಾಸನಮಧೀಶ್ವರಃ.. (ಎಡತೊರೆ ४३)

(೩೪) ೧೬೭೫ : ತತ್ರ ಕರ್ನಾಟಸಾಂಮ್ರಾಜ್ಯ ಸಿಂಹಾಸನ ಮುದಾರಧೀಃ (ಚಾಮರಾಜನಗರ ೯೨)

(೩೫) ೧೬೭೫ : ತಸ್ಯಾಂ ಕೃತಾವತಾರಾಃ ಕತಿಚನ ಕರ್ನಾಟದೇಶ ಮಾಜಗ್ಮುಃ.... (ಚಾಮರಾಜನಗರ ೯೨)

(೩೬) ೧೬೭೯ : ತಸ್ಯಾಂ ಕೃತಾವತಾರಾಃ ಕತಿಚನ ಕರ್ನಾಟದೇಶ ಮಾಜಗ್ಮುಃ.... (ಶ್ರೀರಂಗಪಟ್ಟಣ ೧೫೧)

(೩೭) ೧೬೮೦ : ದೇಶೇ ಕರ್ನಾಟಕೇ ಪೂರ್ವೇ ಪರ್ವತೋ ನಂದಿನಾಮಕಃ (ಚಿಕ್ಕಬಳ್ಳಾಪುರ ३೨)

(೩೮) ೧೬೮೫ : ಯಃ ಪಾಂಡ್ಯಾಂಗನಾಶಕ ಕೇರಳಪತಿಂ ನಿರ್ಜಿತ್ಯ ಕರ್ನಾಟಕೇ ಧಾಟಿಪ್ರದಾದ್ವಿಪ್ರಾಗಣೇಭ್ಯಃ.. (ಮಳವಳ್ಳಿ ೬೧)

(೩೯) ೧೬೮೬ : ತಸ್ಯಾಂ ಕೃತಾವತಾರಾಃ ಕತಿಚನ ಕರ್ನಾಟದೇಶ ಮಾಜಗ್ಮುಃ.... (ಶ್ರೀರಂಗಪಟ್ಟಣ ೧४)

(४०) ೧೭೦೨ : ಕರ್ನಾಟಕ.... (ಕೋಲಾರ ೭४)

(४೧) ೧೭೨೨ : ಕರ್ನ್ನಾಟಕ ಚಕ್ರವರ್ತಿ..ಕರ್ನ್ನಾಟಾಂಧ್ರ ಸುಸಂಸ್ಕೃತ ಕವಿತಾ.... (ಶ್ರೀರಂಗಪಟ್ಟಣ ೬४)

(४೨) ೧೭೨೩ : ಕರ್ನಾಟಕ ರಾಜ್ಯಾಭಿಷವಣಪರಿತೃಪ್ತ....ಮಹಿಶೂರ ಧರಾಧಿನಾಥರಪ್ಪ.... (ಶ್ರವಣಬೆಳಗುಳ ೨४೯)

(४३) ೧೭೨೫ : ಸ್ವಕೀಯ ಕರ್ನಾಟಕ ರಾಜ್ಯಮಧ್ಯೇ (ತಿರುಮಕೂಡಲು ನರಸೀಪುರ ೬೧)

(४४) ೧೭४೧ : ಕರ್ನಾಟದೇಶಮಾಜಗ್ಮುಃ ಕಾವೇರ್ಯಾಲಂಕೃತಂ ನೃಪಾಃ.... (ಎಡತೊರೆ ३८)

2

(೪೫) ೧೭೪೮: **ಕರ್ನಾಟ** ದೇಶಮಾಜಗ್ಮುಃ ಕಾವೇರ್ಯ್ಯಾಲಂಕೃತಂ ನೃಪಾಃ
(ತಿರುಮಕೂಡಲು ನರಸೀಪುರ ೬೩)

(೪೬) ೧೭೫೮: **ಕರ್ನಾಟಕ** ಜನ.... (ನಂಜನಗೂಡು ೨೬೭)

(೪೭) ೧೭೬೧: ಶ್ರೀಮಾನಿಮ್ಮಡಿ ಚಾಮರಾಜನೃಪತಿಃ **ಕರ‍್ನಾಟ** ಭೂಮೀಪತಿಃ ॥.... (ಎಡತೊರೆ ೧೮)

(೪೮) ೧೮೨೮: **ಕರ್ನಾಟಕ** ಜನಪದ ಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರ ಮಹಾಸಂಸ್ಥಾನ ಮಧ್ಯ ದೇದೀಪ್ಯಮಾನ.... (ಚಾಮರಾಜನಗರ ೮೬)

(೪೯–೫೧) ೧೮೩೦: **ಕರ್ನಾಟಕ** ಜನಪದ ಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರ ಮಹಾಸಂಸ್ಥಾನ ಮಧ್ಯ ದೇದೀಪ್ಯಮಾನ.. ಮಹೀಶೂರ ಶ್ರೀ ಕೃಷ್ಣರಾಜ ಒಡಯರವರು....
(ಶ್ರವಣಬೆಳಗುಳ ೩೫೪, ಪಂಕ್ತಿ ೨೪, ೨೫೪, ೨೯೩)

(೫೨) ೧೮೪೫: **ಕರ್ನಾಟಕ** ಜನಪದ ಸಂಪದಧಿಷ್ಠಾನಭೂತ....
(ನಂಜನಗೂಡು ೧)

(೫೩) ......ಪರಿಜ್ಞಾನಾರ್ಥಂ **ಕರ್ನಾಟ** ಭಾಷಯಾ ವಿಲಿಖ್ಯತೇ..
(ತಿಪಟೂರು ೧೪೯)

## ಅನುಬಂಧ ೨

### ೯೧ ಶಾಸನಗಳಲ್ಲಿ ಬರುವ ರೂಪಗಳ ವಿವರ

| | | | |
|---|---|---|---|
| ಕರ್ನಾಟ —೨೦ | ಕರ್ನಾಟಕ —೧೫ | ಕರ್ಣಾಟ —೨೩ | ಕರ್ಣಾಟಕ —೫ |
| ಕರ್ನ್ನಾಟ—೧೫ | ಕರ್ನ್ನಾಟಕ— ೩ | ಕರ್ಣ್ನಾಟ—೧೬ | ಕರ್ಣ್ನಾಟಕ —೩ |
| ಕರ‍್ನಾಟ — ೧ | | ಕರ್ಣ್ಣಾಟ—೧೩ | ಕಂರ್ಣ್ನಾಟಕ—೧ |
| ಕರ್ನಾಟ —೩೬ | ಕರ್ನಾಟಕ—೧೮ | ಕರ್ಣಾಟ —೫೨ | ಕರ್ಣಾಟಕ— ೯ |

ಕರ್ನಾಟ(ಕ)—೫೪ ಕರ್ಣಾಟ(ಕ)—೬೧

## ಅನುಬಂಧ ೩

### ಡಿಸ್ಟ್ರಿಕ್ಟುಗಳೂ 'ಕರ್ನಾಟ(ಕ)', 'ಕರ್ಣಾಟ(ಕ)'ಗಳೂ

| E.C. ಸಂಪುಟ | ಡಿಸ್ಟ್ರಿಕ್ಟು | ಸ್ಥಳ | ಶಾಸನ ಸಂಖ್ಯೆ | ಕರ್ನಾಟ | ಕರ್ಣಾಟ | ಕರ್ನಾಟಕ | ಕರ್ಣಾಟಕ |
|---|---|---|---|---|---|---|---|
| ೨ | ಹಾಸನ | ಶ್ರವಣಬೆಳುಗೊಳ | ೪ | ೧ | .. | ೪ | ೧ |
| ೫ | | ಹಾಸನ | ೩ | ೨ | ೨ | .. | .. |
| | | ಬೇಲೂರು | ೩ | ೧ | ೩ | .. | .. |
| | | ಅರಸೀಕೆರೆ | ೪ | ೨ | ೩ | .. | .. |
| | | ಚೆನ್ನರಾಯಪಟ್ಟಣ | ೫ | ೧ | ೫ | .. | .. |
| | ಹಾಸನ | | ೧೯ | ೭ | ೧೩ | ೪ | ೧ |

| E.C. ಪುಸ್ತಕ | ಡಿಸ್ಟ್ರಿಕ್ಟ | ಸ್ಥಳ | ಶಾಸನ ಸಂಖ್ಯೆ | ಕರ್ನಾಟ | ಕರ್ಣಾಟ | ಕರ್ನಾಟಕ | ಕರ್ಣಾಟಕ |
|---|---|---|---|---|---|---|---|
| ೩ | ಮೈಸೂರು (೧) | ಮಂಡ್ಯ | ೧ | ೧ | .. | .. | .. |
| | | ನಂಜನಗೂಡು | ೩ | ೧ | .. | ೨ | .. |
| | | ಮಳವಳ್ಳಿ | ೨ | ೧ | ೧ | ೧ | .. |
| | | ಶ್ರೀರಂಗಪಟ್ಟಣ | ೬ | ೫ | ೩ | ೧ | ೧ |
| | | ತಿರುಮಕೂಡಲು ನರಸೀಪುರ | ೪ | ೨ | ೩ | ೧ | .. |
| ೪ | ಮೈಸೂರು (೨) | ಎಡತೊರೆ | ೫ | ೬ | ೧ | .. | .. |
| | | ನಾಗಮಂಗಲ | ೧ | .. | ೧ | .. | .. |
| | | ಹುಣಸೂರು | ೧ | .. | ೧ | .. | .. |
| | | ಕೃಷ್ಣರಾಜಪೇಟೆ | ೧ | ೧ | .. | .. | .. |
| | | ಚಾಮರಾಜನಗರ | ೨ | ೨ | .. | ೧ | .. |
| | ಮೈಸೂರು | | ೨೬ | ೧೯ | ೧೦ | ೬ | ೧ |
| ೭ | ಶಿವಮೊಗ್ಗ (೧) | ಶಿವಮೊಗ್ಗ | ೪ | ೨ | ೩ | .. | .. |
| | | ಶಿಕಾರಿಪುರ | ೫ | .. | ೭ | .. | .. |
| ೮ | ಶಿವಮೊಗ್ಗ (೨) | ಸೊರಬ | ೨ | .. | ೫ | .. | .. |
| | | ಸಾಗರ | ೧ | .. | .. | .. | ೧ |
| | | ನಗರ | ೩ | . | ೪ | .. | .. |
| | | ತೀರ್ಥಹಳ್ಳಿ | ೧ | .. | ೧ | .. | .. |
| | ಶಿವಮೊಗ್ಗ | | ೧೬ | ೨ | ೨೦ | .. | ೧ |
| ೬ | ಕಡೂರು | ಕಡೂರು | ೨ | ೨ | .. | .. | .. |
| | | ಕೊಪ್ಪ | ೨ | .. | .. | ೧ | ೧ |
| | | ಶೃಂಗೇರಿ | ೧ | ೧ | .. | ೧ | .. |
| | | ತರೀಕೆರೆ | ೧ | .. | ೧ | .. | .. |
| | ಕಡೂರು | | ೭ | ೩ | ೧ | ೨ | ೧ |
| ೯ | ಬೆಂಗಳೂರು | ಬೆಂಗಳೂರು | ೧ | ೧ | .. | .. | .. |
| | | ಚೆನ್ನಪಟ್ಟಣ | ೧ | .. | ೨ | .. | .. |
| | ಬೆಂಗಳೂರು | | ೨ | ೧ | ೨ | .. | .. |
| ೧೦ | ಕೋಲಾರ | ಕೋಲಾರ | ೨ | .. | .. | ೨ | .. |
| | | ಶಿಡ್ಲಘಟ್ಟ | ೨ | ೧ | .. | .. | ೧ |
| | | ಮುಳಬಾಗಲು | ೨ | .. | ೧ | .. | ೧ |
| | | ಚಿಕ್ಕಬಳ್ಳಾಪುರ | ೧ | .. | .. | ೧ | .. |
| | ಕೋಲಾರ | | ೭ | ೧ | ೧ | ೩ | ೨ |

| E.C. ಸಂಪುಟ | ಡಿಸ್ಟ್ರಿಕ್ಟ | ಸ್ಥಳ | ಶಾಸನ ಸಂಖ್ಯೆ | ಕರ್ನಾಟ | ಕರ್ಣಾಟ | ಕರ್ನ್ನಾಟ | ಕರ್ಣ್ಣಾಟ |
|---|---|---|---|---|---|---|---|
| ೧೧ | ಚಿತ್ರದುರ್ಗ | ದಾವಣಗೆರೆ | ೧ | .. | .. | .. | ೧ |
| | | ಹೊಳಲ್ಕೆರೆ | ೧ | .. | .. | ೧ | .. |
| | | ಮೊಳಕಾಲ್ಮುರು | ೧ | ೧ | .. | .. | .. |
| | ಚಿತ್ರದುರ್ಗ | | ೩ | ೧ | .. | ೧ | ೧ |
| ೧೨ | ತುಮಕೂರು | ತುಮಕೂರು | ೨ | ೧ | .. | .. | ೧ |
| | | ಮದ್ದಗಿರಿ | ೧ | .. | .. | ೧ | .. |
| | | ಪಾವುಗಡ | ೨ | .. | ೧ | ೧ | .. |
| | | ತಿಪಟೂರು | ೨ | ೧ | .. | .. | ೧ |
| | | ಕುಣಿಗಿಲು | ೧ | ೧ | .. | .. | .. |
| | | ಚಿಕ್ಕನಾಯಕನಹಳ್ಳಿ | ೨ | .. | ೨ | .. | .. |
| | | ಶಿರಾ | ೨ | .. | ೨ | .. | .. |
| | ತುಮಕೂರು | | ೧೨ | ೩ | ೫ | ೨ | ೨ |

## ಅನುಬಂಧ ೪

### ರೇಫೆಯ ಹಿಂದೆ 'ನ'ಕಾರವಿರುವ ಪ್ರೌಢ ಶಾಸನಗಳು

(ಮಾದರಿಗೆ ಹಲವು ಪದ್ಯಭಾಗಗಳನ್ನು ಮಾತ್ರ ಪೂರ್ಣವಾಗಿ ಕೊಟ್ಟಿದೆ)

(೧) ಮತ್ತಿನ ಮಾತವಂತಿರಲಿ ಜೀರ್ನ್ನಜಿನಾಶ್ರಯಕೋಟಿಯಂ ಕ್ರಮಂ
ಬೆತ್ತಿರೆ ಮುನ್ನಿನಂತಿರನಿತುರ್ಗ್ಗಳೊಳಂ ನೆಱೆ ಮಾಡಿಸುತ್ತಮು
ತ್ಯುತ್ತಮ ಪಾತ್ರದಾನದೊದವಂ ಮೆಱೆವುತ್ತಿರೆ ಗಂಗವಾಡಿ ತೊಂ
ಬತ್ತಱುಸಾಸಿರಂ ಕೊಪಣಮಾದುದು ಗಂಗಣದಂಡನಾಥನಿಂ
(ಶ್ರವಣಬೆಳುಗೊಳ ೭೭)

(೨) ಪರಮಪದಾರ್ತ್ಥನಿರ್ನ್ನಯಮನಾಂತವಿದಗ್ಧತೆ ದುರ್ನ್ನಯಂಗಳೊ
ಳ್ಪರಿಚಯಮೆಂದುಮಿಲ್ಲದತಿ ಮುಗ್ಧತೆ ತನ್ನನಿಯಂಗೆ ಚಿತ್ತದೊ
ಳ್ಪರಿದನುರಾಗಮಂ ಪಡೆವ ರೂಪು ವಿನೇಯ ಜನಾಂತರಂಗದೊ
ಳ್ನಿರು(ಪ)ಮ ಭಕ್ತಿಯಂ ಪಡೆವ ಪೆಂಪಿವು ಲಕ್ಷ್ಮಲೆಗೆಂದು ಮನ್ನಿತಂ
(ಶ್ರ. ಬೆ. ೭೮)

(೩) ಕೋ ಧಾತ್ರಾಲಿಖಿತಂ ಲಲಾಟಫಲಕೇ ವರ್ನ್ನಂ ಪ್ರಮಾರ್ಷ್ಟುಂ ಕ್ಷಮೋ
ವಾರ್ತ್ತಾಂ ಧೂರ್ತವಚೋಮಯೀಮಿತಿ ವಯಂ ನಾರ್ತ್ತಾನ್ನ ಮನ್ಯಾಮಹೇ
(ಶ್ರ. ಬೆ. [illegible])

(೪) ದಾನಂಚಾಸ್ಯ ಸುಪಾತ್ರಯೇವ ಕರುಣಾ ದೀನೇಷು ದೃಷ್ಟಿರ್ಜ್ಜಿನೇ
ಭಕ್ತಿರ್ದ್ಧರ್ಮಪಥೇ ಜಿನೇಂದ್ರಯಶಸಾಮಾಕರ್ನ್ನನೇಷುಶ್ರುತೀ
(ಶ್ರ. ಬೆ. [illegible])

(೫) ಕರ್ನ್ನೈರ್ವ್ವಿಸ್ಮೃತಕುಂಡಲೈರತಿಲಕಾಸಂಗೈರ್ಲ್ಲಲಾಟಸ್ಥಲೈ
ರಾಕೀರ್ನ್ನೈರಲಕೈಃ ಪಯೋಧರತಟೈರಸ್ಪೃಷ್ಟಮುಕ್ತಾಗಣೈಃ
(ಶ್ರ. ಬೆ. ೨೫೩)

(೬) "ಸಂಪೂರ್ನ್ನಾರ್ಕ್ಷಯವೃತ್ತನಿರ್ಮ್ಮಳತನುಃ" (ಶ್ರ. ಬೆ. ೧೪೦)

(೭) "ಯುಕ್ತ್ಯಾಗಮಾರ್ನ್ನವವಿಲೋಲನಮಂದರಾದ್ರಿಃ"(ಶ್ರ.ಬೆ.೨೫೩)

(೮) "ಶೇಷಾಕೀರ್ನ್ನಂ ವಿದೀರ್ನ್ನಾಮೃತಕಲಶ...."(ಶ್ರ.ಬೆ. ೨೫೪)

(೯) "ಪರಿಷದುದೀರ್ನ್ನಸ್ತೋತ್ರಘೋಷೈಃ" (ಶ್ರ. ಬೆ. ೨೫೮)

(೧೦) "ಪರಿನಿರ್ನ್ನೀತಾರ್ತ್ಥಸಂದೋಹನಂ" (ಶ್ರ. ಬೆ. ೩೩೫)

(೧೧) "ತಪ್ತಹಾಟಕ ವರ್ನ್ನಾಭಜ್ವಲತ್ ಪಾವಕಲೋಚನಂ"
(ಬೇಲೂರು ೨೫)

(೧೨) ಯಸ್ಯಾಸಿಪ್ರವಿದಾರಿತಾರಿಕರಟಪ್ರಸ್ಫೀತ ಕುಂಭಸ್ಥಲ
ಸ್ಥಾಲೀಸ್ಥೂಲವಿಮುಕ್ತಮುಕ್ತನಿಕರಾಸ್ತೂರ್ನ್ನಂ ವಿಕೀರ್ನ್ನಾರಣೇ
ವಾಹಾ(ಳೀ)ಖರವಿಂಖಲೇಖನದಲದ್ರಕ್ತಪ್ರಸಿಕ್ತಕ್ಷಿತೌ
ಪ್ರತ್ಯುಪ್ತಾ ಇವ ಕೀರ್ತ್ತಿಬೀಜಮಣಯೋ ಭಾಂತಿ ಸ್ಮ
ವಾಮಾಂಕುರಾಃ
(S. I. I., Vol. IV, No. 683, ಗುಂಟೂರು ಡಿಸ್ಟ್ರಿಕ್ಟ್)

(೧೩) ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ನ್ನವಂ
ದಕ್ಷಿಣೋನ್ನತ ದಂಷ್ಟ್ರಾಗ್ರ ವಿಶ್ರಾನ್ತ ಭುವನಂ ವಪುಃ
(S. I. I., Vol. V, No. 848, ತಿನ್ನವೆಲ್ಲಿ ಡಿಸ್ಟ್ರಿಕ್ಟ್)

(೧೪) ಶ್ರೀಶಾಕಾಬ್ದೇ ಧರಿತ್ರೀ ಗಿರಿರವಿಗಣಿತೇ ಕಾರ್ತಿಕೇ(ಜೀ)ವವಾರೇ
ಶುಕ್ಲೇ ವಿಷ್ಣೋಸ್ತಿಥೌ ಸಾ ನರಹರಿ ವಪುಷಸ್ಸಿಂಹ್ಯ ಶೈಲೇಶ್ವರಸ್ಯ
ಸದ್ಭಕ್ತ್ಯಾ ದೀಪದಂಡದ್ವಯಮ(ಕೃ)ಕೃತ ಕೃತಂ ವೀಜನಂ
(ಸ್ವ)ನ್ನ(ರ್) ದಂಡಂ
ಸೌವರ್ನ್ನಂ ಪಾದಯುಗ್ಮಂ ಕಮಲಯುಗಮಪಿ ಪ್ರಾದದಾತ್
ಕೈತಕಾನಿ
(S. I. I., Vol. VI, No. 933, ವಿಶಾಖಪಟ್ಟಣ ಡಿಸ್ಟ್ರಿಕ್ಟ್)

(೧೫) ಧರೆಯೆಂಬಂಬುಜಮಿರ್ಪ್ಪುದು
ಸರದಿ ಸರೋವರದ ನಡುವೆ ಕರ್ನ್ನಿಕೆವೊಲು ಮಂ
ದರಮಿರ್ಪ್ಪುದಲ್ಲಿ ಮಂದರ
ಗಿರಿಯಿಂದಂ ತೆಂಕಲೆಸೆವ ಭರತಕ್ಷೇತ್ರಂ
(S. I. I., Vol. VII, No. 724. ಹೈದರಾಬಾದ್ ಸಂಸ್ಥಾನ)

(೧೬) ಬ್ರ(ಂ)ಹ್ಮಾಂಡಸ್ವರ್ನ್ನಮೇರು ಪ್ರಮುಖನಿಜಮಹಾದಾನ
ತೋಯೈರಮೇ
(ಯೈಃ)......ವಿತೀರ್ನ ವಿನತಜನಹೇಮಕೂಟಾಯ....
(S. I. I., Vol. IV, No. 259, ಹಂಪೆ)

(೧೭) "ಸುವರ್ನ್ನಕರ್ನ್ನತಾಳಮಂ"(S.I.I., Vol. IV, No.267, ಹಂಪೆ)
(೧೮) "ದುರ್ಜ್ಜಯಕುಲಕುಮುದ ಕ್ಷೀರಾರ್ನ್ನವನಿಶಾಕರ"
(S. I. I., Vol. IV, No. 677, ಗುಂಟೂರು)
(೧೯) "ಸುವರ್ನ್ನಗಿರೀಂದ್ರ ಸಮಾನ ಧೈರ್ಯ್ಯುಂಡು"
(S. I. I., Vol. IV, No. 952, ಕೃಷ್ಣ ಡಿಸ್ಟ್ರಿಕ್ಟ್)
(೨೦) "....ಕ್ಷೋಭಿತಾರ್ನ್ನವಂ....ರಾಮಾರಾಮವಿಕೀರ್ನ್ನದಿಂ..
(ಎಂ)ದುರ್ವಿನೀತಳಮುಭಿವರ್ನ್ನಿಸೆ....ಬಯಿತ್ತಿಟ್ಟ ಸುವರ್ನ್ನ
ಮೆಂದೊಡಿತರ(ರ್)...."
(S. I. I., Vol. V, No. 851, ತಿನ್ನವೆಲ್ಲಿ ಡಿಸ್ಟ್ರಿಕ್ಟ್)
(೨೧) "....ಪೌರ್ನಮಾಸ್ಯಾಂ ಮಹಾತಿಥೌ....ತಾಂಮ್ರಪರ್ನೀ
ಮಹಾನದ್ಯಾಃ
....ಕನ್ಯಾಯನ್ನ ಸ್ವರ್ನಭೂದಾನೈಃ...."(E. I., III, No. 34)
(೨೨) "ದಸವರ್ನ್ನಮುರಾರಿ ಮಿತ್ರಮಂಡಳಿಕ ಕುಲಾರ್ನ್ನವ ಚಂದ್ರಂ"
(S. I. I., Vol. VIII, No. 374, ಅನಂತಪುರ ಡಿಸ್ಟ್ರಿಕ್ಟ್)
(೨೩) "ಪೌರ್ನಿಮಾಯಾಂ" (ನಂಜನಗೂಡು ೧೯೮)
(೨೪) "ಅಥ ಸೀಮಾನಿರ್ನಯಸ್ತು ಲಿಖ್ಯತೇ ದೇಶಭಾಷಯಾ"
(ಎಡತೊರೆ ೪೩)
(೨೫) "....ಕರ್ನತಾಳೈಃ....ಸರ್ಪ್ಪೀ ಸಮುಭಿವರ್ನ್ನಿತಾಃ...."
(ಎಡತೊರೆ ೫೪)
(ಅರಸೀಕೆರೆ ೧೩೦)
(೨೬) "ಸಂಪೂರ್ನ್ನರಂ"
(೨೭) "ಪಂಚಾಶತ್ಪದ ವಿಸ್ತೀರ್ನಂ ತಥಾ ಶತಪದಾಯತಂ"
(ಕುಣಿಗಿಲು ೩೭)
(ಮೊಳಕಾಲ್ಮುರು ೨೦)
(೨೮) "ಅಂಬುಜ ಪೂರ್ನ"
(ಶಿವಮೊಗ್ಗ ೨)
(೨೯) "ಕೃಷ್ಣರಾಯ ಸ್ವರ್ನ ಕೋಶಾಧೀಶ"
(ಪಾವುಗಡ ೫೪)
(೩೦) "ವಾರಿನಿಧಿವರ್ದ್ಧನ ಪೂರ್ನಶಶಾಂಕ"
(೩೧) "ಅಸ್ತಿ ಶ್ರೀಮಾನ್ ಜನಪದಃ ಕರ್ನಾಟ ಇತಿ ವಿಶ್ರುತಃ....
ಅಧ್ಯಾಸ್ತೇ ತತ್ರ ಕರ್ನಾಟಸಿಂಹಾಸನಮಧೀಶ್ವರಃ....ದತ್ವಾ
ಕರ್ನಾಭರಣಂ....ಶ್ರೀಮತೋ ಲಂಬಕರ್ನಸ್ಯ....
ಯಸ್ತೋಷಯನ್ ಗುರುರಿವವಿಬುಧಾನ್ ವೇದಾರ್ಥಗರ್ಭನಾ
ಗ್ಗುಂಫೈಃ ಶ್ರೀದೇವರಾಜನೃಪತೇಸ್ಸಭಾಂ ಸುಧರ್ಮಾವಿವಾಧ್ಯಾಸ್ತೇ
ಕೌಶಿಕಾಂಬುಧಿಪೂರ್ನೇಂದೋರಲಘುಶಿಂಗರಾರ್ಯ್ಯಸ್ಯ ತನಯಸ್ತು
ತಿರುಮಲಾರ್ಯ್ಯೋ ವ್ಯಾತಾನೀತ್ತಾಂಮ್ರಶಾಸನ ಶ್ಲೋಕಾನ್"
(M. A. R., 1934, No. 39)

## ಅನುಬಂಧ ೫

## 'ಕರ್ನಾಟ(ಕ)' ಪ್ರಯೋಗವಿರುವ ಮೈಸೂರು ದೇಶದ ಹೊರಗಿನ ಶಾಸನಗಳು

(೧) ಕಾರ್ನ್ನಾಟಕಂ ವಲಮನನ್ತಮಜೇಯಮನ್ಯೈಃ.... "
(E. I., Vol. XIII, No. 25, ಶಕ ೬೯೦, ಪೂನಾ ಡಿಸ್ಟ್ರಿಕ್ಟಿನ ಸಿರೂರ್ ತಾಲುಕ)

(೨) "ಕಾರ್ನ್ನಾಟಕಂ ಬಲಮನನ್ತಮಜೇಯ(ಮ)ನ್ಯೈಃ"
(E. I., Vol. VI, No. 18, ಶಕ ೬೯೨, ಬೊಂಬಾಯಿ ಅಧಿಪತ್ಯದ ಕುರುಂದವಾಡ್ ಸಂಸ್ಥಾನದ ಅಲಾಸ್ ಗ್ರಾಮ)

(೩) "ಕರ್ನಾಟಲಕ್ಷ್ಮ್ಯ(ಃ)ಸವಿಲಾಸವಮಾಸ ಯಸ್ಮಿನ್ ಮಹೀಪೇ ಮಹನೀಯ ಕೀರ್ತ್ತೌ" (E. I., Vol. XV, No. 2, ಶಕ೧೩೮೮, ಶ್ರೀಶೈಲದ ಮಲ್ಲಿಕಾರ್ಜುನ ದೇವಾಲಯ)

(೪) ಮೇಲೆ (೩)ರಲ್ಲಿ ಹೇಳಿರುವುದೇ. (E. I., Vol. XVII, No. 14, ಶಕ ೧೩೪೯, ಬಳ್ಳಾರಿ ತಾಲ್ಲೂಕಿನ ಸೋಮಲಾಪುರ)

(೫) "ಸಾರ್ಥಾನಾಂ ಭುಜತೇಜಸಾ ಸ್ವವಶಯಂ ಕರ್ನಾಟ ಸಿ(ಂ)ಹಾಸನಂ" (E. I., Vol. XIII, No. 22, ಶಕ ೧೫೦೮)

(೬) ಮೇಲೆ (೫)ರಲ್ಲಿ ಹೇಳಿರುವುದೇ. (E. I., Vol. IV, No. 39, ಶಕ ೧೫೩೩)

(೭) ಮೇಲೆ (೫)ರಲ್ಲಿ ಹೇಳಿರುವುದೇ. (E. I., Vol. III, No. 34, ಶಕ ೧೫೫೬, ತಿನ್ನವೆಲ್ಲಿ ಡಿಸ್ಟ್ರಿಕ್ಟಿನ ಅಂಬಾಸಮುದ್ರಂ ತಾಲುಕಿನ ಕುನಿಯೂರು)

## ಅನುಬಂಧ ೬

## ಒಂದೇ ಶಾಸನದಲ್ಲಿ ರೇಫೆಯೊಡಗೂಡಿದ ನ–ಣಕಾರಗಳೆರಡೂ ಕಂಡುಬರುವ ಪ್ರಯೋಗಗಳು

(ಪ್ರಯೋಗಗಳ ಪಕ್ಕದಲ್ಲಿರುವುದು ಪಂಕ್ತಿಯ ಸಂಖ್ಯೆ)

(೧) ಶ್ರವಣಬೆಳುಗೊಳ ೬೯: ಜೀಯಾಜ್ಜಿನಾಗಮಸುಧಾರ್ಣ್ಣವ ಪೂರ್ಣ್ಣ ಚಂದ್ರಃ (೧೨), ಶುದ್ಧಾಧ್ಯಾತ್ಮಕ ತತ್ವ ನಿರ್ನಯ ವಚೋ ವಿನ್ಯಾಸದಿಂ (೧೫).

(೨) ಶ್ರವಣಬೆಳುಗೊಳ ೩೪೯: ಸೈನ್ಯಾರ್ಣ್ಣವಂಘೂರ್ಣ್ಣನ್ತಂ (೨೮), ಬಲಿ ಕರ್ನ್ನ ನೃಪತಿ ಶಿಬಿ ಖಚರಪತಿಃ (೫೧).

(೩) ಮಳವಳ್ಳಿ ೬೧: ಹರ್ಮ್ಯೈರ್ಯಶ್ಚಪೂರ್ಣಾಂಪುರೀಂ (೩), ಕರ್ನಾಟಕೇ (೮), ಪೂರ್ಣೇ (೧೬).

(೪) ಮಳವಳ್ಳಿ ೧೨೧: ಕರ್ನಾಟಲಕ್ಷ್ಮ್ಯೇ (೧೨), ಪೂರ್ಣಧಾಮಾ (೧೬), ಕರ್ಣಾಟೇಶ್ವರ (೬೯).

(೫) ಶ್ರೀರಂಗಪಟ್ಟಣ ೧೧: ಕರ್ನಾಟದೇಶ (೧೨), ಮಣಿಕರ್ಣಿಕಾ(೬೮).

(೬) ಶ್ರೀರಂಗಪಟ್ಟಣ ೧೪: ಕರ್ನಾಟದೇಶ (೫), ಮಣಿಕರ್ಣಿಕಾಪ್ಯ (೩೫).

(೭) ಶ್ರೀರಂಗಪಟ್ಟಣ ೬೪: ಕರ್ಣಾಟ (೨೧), ಕರ್ಣಾಟಕ (೧೭೩), ಕರ್ನ್ನಾಟಕ (೬೯೨), ಕರ್ನ್ನಾಟಾಂಧ್ರ (೭೨೭).

(೮) ಶ್ರೀರಂಗಪಟ್ಟಣ ೧೫೧: ಗುಣಪೂರ್ಣಸ್ಯ (೨), ಕರ್ನಾಟದೇಶ (೫), ಚತುರ್ಣಾಂ (೨೬).

(೯) ತಿರುಮಕೂಡಲು ನರಸೀಪುರ ೬೧: ಕರ್ಣಾಟ (೧೫), ಕರ್ನಾಟಕ (೧೧೫).

(೧೦) ತಿರುಮಕೂಡಲು ನರಸೀಪುರ ೬೩: ಕರ್ನಾಟ (೨೬), ಶಾಲಿವಾಹನ ನಿರ್ಣೀತೆ (೭೮), ಸೀಮಾವಿರ್ನಯಂ (೨೩೯).

(೧೧) ತಿರುಮಕೂಡಲು ನರಸೀಪುರ ೯೭: ಕರ್ನ್ನಾಟ(೭), ಕರ್ಣೋಪಿನಾ ಕರ್ನ್ಯತೇ (೮), ಕರ್ಣ್ಣಸ್ಸ ಕಿಂ ವರ್ಣ್ಯತೇ (೧೧), ಕರ್ಣ್ಣಾಟ ಭಾಷಯಾ (೧೭), ಜೀರ್ಣ್ಣೋದ್ಧಾರಕ್ಕೆ (೨೨), ಸುವರ್ಣ್ಣ ದಾನಶೂರ (೨೫).

(೧೨) ತಿರುಮಕೂಡಲು ನರಸೀಪುರ ೧೦೧: ಕರ್ಣಾಟ (೧೦), ಕರ್ಣ್ಣೋಪಿ ನಾಕರ್ನ್ಯತೇ (೧೧), ಕರ್ಣ್ಣಸ್ಸಕಿಂವರ್ಣ್ಯತೇ (೧೬), ಜೀರ್ಣ್ಣೋದ್ಧಾರ (೩೨).

(೧೩) ಎಡತೊರೆ ೧೭: ಕರ್ಣಾಟ (೧೧), ಶಾಲಿವಾಹನ ನಿರ್ಣೀತೇ (೩೬).

(೧೪) ಎಡತೊರೆ ೫೪: ಕರ್ನಾಟ (೪), ಕರ್ನಾಟ ಭೂಮೀಭುಜಾಂ (೧೩), ಸಂಪೂರ್ಣಾನ್ .... ಮಣಿಕರ್ನಿಕಯಾ.... ವಿಸ್ತೀರ್ಣಂ....

(೧೫) ಚಾಮರಾಜನಗರ ೮೬: ಕರ್ನಾಟಕ.... ಸ್ವರ್ಣಕಲಶ....

(೧೬) ಹುಣಸೂರು ೩೧: ಜಿಹ್ವಾಕೀರ್ಣ್ಣಗೀರ್ಣ್ಣಾನನ (೧೩), ಜೀರ್ಣ್ಣೋದ್ಧಾರ (೩೧).

(೧೭) ಹುಣಸೂರು ೧೩೭: ಜಿಹ್ವಾಕೀರ್ಣ್ಣಗೀರ್ಣ್ಣಾನನ (೧೩), ಜೀರ್ನ್ನೋದ್ಧಾರ (೩೧), ಕರ್ಣಾಟ (೩೬).

(೧೮) ಹಾಸನ ೭೨: ಪರಿಪೂರ್ಣ್ಣ (೩೮), ಸಂಪೂರ್ಣ್ಣ (೩೯), ಕರ್ನ್ನಾಟ (೪೦), ಸಂಪೂರ್ಣ್ಣ (೫೩), ಜೀರ್ಣ್ಣೋದ್ಧಾರ (೬೦).

(೧೯) ಹಾಸನ ೭೬: ಜಿಹ್ವಾಕೀರ್ಣ್ಣಗೀರ್ನ್ನಾನನ (೧೧), ಸಂಪೂರ್ಣ್ಣ (೩೧), ಪರಿಪೂರ್ಣ್ಣ.... ಸಂಪೂರ್ಣ್ಣ (೩೨), ಕರ್ನ್ನಾಟ (೩೩), ಕರ್ಣ್ಣರಸಾಯನ (೪೮), ಜೀರ್ಣ್ಣೋದ್ಧಾರ (೬೬).

(೨೦) ಬೇಲೂರು ೧೧೪: ಘೂರ್ಣಿತ (೧೯), ಸ್ವರ್ಣ್ಣ (೨೧), ಕರ್ನ್ನಾಟ (೩೧), ಕರ್ಣ (೪೫).

(೨೧) ಅರಸೀಕೆರೆ ೧೩೦ : ಸಂಪೂರ್ನ್ನ (೬), ಕರ್ನ್ನಾಟ (೯), ಜೀರ್ಣೋದ್ಧಾರ (೨೫).

(೨೨) ಅರಸೀಕೆರೆ ೧೭೨: ಸುವರ್ಣ್ನ ಕರ್ಣ್ನಕುಂಡಳ (೩೮), ಕರ್ನ್ನಾಟಕುಳ (೪೨), ಸಂಪೂರ್ಣ್ನ (೪೩), ಕರ್ಣ್ನ (೪೩).

(೨೩) ಚೆನ್ನರಾಯಪಟ್ಟಣ ೧೯೭: ಜಳಪೂರ್ಣ್ನ (೪೪), ಜೀರ್ನ್ನೋದ್ಧಾರ (೬೩).

(೨೪) ಚೆನ್ನರಾಯಪಟ್ಟಣ ೨೩೭: ಬಲಾರ್ಣ್ನವ (೯), ಕರ್ನ್ನಾಟ (೧೫).

(೨೫) ಕಡೂರು ೧೬೨: ಕರ್ನ್ನಾಟ (೧೧), ಕರ್ಣ್ನೇಸಕನದೀ (೨೧).

(೨೬) ಶಿಡ್ಲಘಟ್ಟ ೯೪: ಆಕರ್ಣ್ನ (೩೨), ಕರ್ನ್ನಾಟ (೪೬).

(೨೭) ತುಮಕೂರು ೧೪: ಪೂರ್ಣ.... ಕರ್ನಾಟ.... ವರ್ಣಾಯ....

(೨೮) ತಿಪಟೂರು ೧೩೯: ಪೂರ್ಣಂ (೧೫), ಕರ್ನಾಟ (೨೨).

(೨೯) ಕುಣಿಗಿಲು ೩೭: ಕರ್ನಾಟ (೧೯), ಆಕರ್ನ್ನ (೫೬), ಮಣಿಕರ್ಣಿಕಾ (೮೦), ಲಂಬಕರ್ಣಾನ್ವಯೋ (೧೬೫), ನಿರ್ಣಯಾದಿ (೨೦೨).

(೩೦) ಮೈಸೂರು, M.A.R., 1935, No. 53: ಕರ್ಣಾಟಕ (೩), ಕರ್ಣಾಟಕ (೧೭), ಕರ್ಣಾಟಕ (೫೬), ಶ್ರೀಮತ್ಕರ್ನಾಟರಾಜ್ಯದಳ (೨೨).

(೩೧) ಶ್ರೀಶೈಲದ ಮಲ್ಲಿಕಾರ್ಜುನ ದೇವಾಲಯ, E.I., Vol. XV, No. 2: ಕರ್ನಾಟಲಕ್ಷ್ಮೀಃ (೧೬), ನಿರ್ಣೀತ (೪೩).

(೩೨) ಪೂನಾ ಡಿಸ್ಟ್ರಿಕ್ಟು, E.I., Vol. XIII, No. 25: ಕಾರ್ನ್ನಾಟಕಂ (ಪದ್ಯ ೭), ವರ್ಣ್ನೋ [ಜ್ಜ್ವ]ಲಾ (೧೯).

(೩೩) ಬೊಂಬಾಯಿನ ಕುರುಂದವಾಡ ಸಂಸ್ಥಾನ, E.I., Vol. VI, No. 18: ಕರ್ನಾಟಕಂ (೧೧), ಕೃಷ್ಣವೇರ್ಣ್ಣಾಮುಸೀ ಸಂಗಮೇ (೨೬).

(೩೪) ಅನಂತಪುರ ಡಿಸ್ಟ್ರಿಕ್ಟು, S. I. I., Vol. VIII, No. 368: ಕುಳಾರ್ನ್ನವ (೮), ಜೀರ್ಣ್ನೋದ್ಧಾರಿಣೆ (೧೩).

(೩೫) ಮೂಡುಬಿದರೆ, ದಕ್ಷಿಣ ಕನ್ನಡ, S.I.I., Vol. VII, No. 207:
ಬಲಿಯಿಂ ಕರ್ನ್ನನೆ ಚಾಗಿಯೂ ಬಲಿಯಿನುದ್ಯತ್ಕರ್ನ್ನನಿಂ
ಭೋಜನಾ। ಬಲಿಯಿಂ ಕರ್ನ್ನನಿನಂತೆ ಭೋಜವಿಭುವಿಂ
ಮಾಂಧಾತನೀ ಲೋಕದೊಳ್॥ ಬಲಿಯಿಂ ಕರ್ನ್ನನಿನಂತೆ
ಭೋಜವಿಭುವಿಂ ಮಾಂಧಾತನಿಂ ಭೋಗದ। ಗ್ಗಲನಾದಂ ಕಲಿ
ಸಾಳ್ವಮಲ್ಲನವನಂತಾರ್ನೋಂತರೀ ಧಾತ್ರಿಯೊಳ್॥
(೧೭-೧೯), ಸುವರ್ಣ್ನ (೨೦), ಜೀರ್ಣ್ನ (೩೯), ಸೋಮಕುಲಾರ್ಣ್ನವಪೂರ್ಣ್ನಚಂದ್ರನುಂ (೪೩), ಸುವರ್ಣ್ನ (೪೪).

(೩೬) ತಿನ್ನವೆಲ್ಲಿ ಡಿಸ್ಟ್ರಿಕ್ಟು, S. I. I., Vol. V, No. 848: ಕ್ಷೋಭಿತಾರ್ನ್ನವಂ(೨), ಶ್ರೀಪಟ್ಟಣಾಕೀರ್ನ್ನದಿಂ(೫), ಪ್ರಾಕೀರ್ನ್ನದಿಂ(೭), ಸುವರ್ಣ್ಣ (೩೪).

## ಅನುಬಂಧ ೭

### ಶತಮಾನಗಳೂ 'ಕನಾ(ಣಾ)ರ್ಟ', 'ಕನಾ(ಣಾ)ರ್ಟಕ'ಗಳೂ

| ಶತಮಾನ | ಶಾಸನ ಸಂಖ್ಯೆ | ಕರ್ನಾಟ | ಕರ್ಣಾಟ | ಕರ್ನಾಟಕ | ಕರ್ಣಾಟಕ |
|---|---|---|---|---|---|
| ಹತ್ತು | ೧ | .. | ೧ | .. | .. |
| ಹನ್ನೊಂದು | ೩ | ೧ | ೨ | .. | .. |
| ಹನ್ನೆರಡು | ೧೯ | ೬ | ೧೪ | .. | ೨ |
| ಹದಿಮೂರು | ೧೩ | ೫ | ೧೧ | .. | ೧ |
| ಹದಿನಾಲ್ಕು | ೩ | .. | .. | ೧ | ೨ |
| ಹದಿನೈದು | ೧೪ | ೭ | ೯ | ೨ | .. |
| ಹದಿನಾರು | ೧೧ | .. | ೯ | ೧ | ೩ |
| ಹದಿನೇಳು | ೧೩ | ೧೩ | ೧ | ೪ | .. |
| ಹದಿನೆಂಟು | ೧೦ | ೪ | ೫ | ೫ | ೧ |
| ಹತ್ತೊಂಬತ್ತು | ೩ | .. | .. | ೫ | .. |
| ? ? ? | ೧ | ೧ | ೧ | .. | .. |
| ಒಟ್ಟು .. | ೯೧ | ೩೭ | ೫೨ | ೧೮ | ೯ |

ಕನಾ(ಣಾ)ರ್ಟ—೮೯, ಕನಾ(ಣಾ)ರ್ಟಕ—೨೭

## ಅನುಬಂಧ ೮

(೧) ಕ್ರಿ. ಶ. ೨ನೆಯ ಶತಮಾನ: ಟಾಲೆಮಿ:—'ಪೌನ್ನತ' (ಪುನ್ನಟ?)

(೨) ಕ್ರಿ. ಶ. ೨೫೮: M. A. R., 1929, p. 50:—'ಪುಣಾಟ'.

(೩) ಕ್ರಿ. ಶ. ೫ನೆಯ ಶತಮಾನ: E. C., Vol. I, No. 1:—'ಪೂನಾಡು'.

(೪) ಕ್ರಿ. ಶ. ೫೫೦: M. A. R., 1917, p. 41, ಮಾಂಬಳ್ಳಿ ಶಾಸನ:—"ಸ ರಾಜಾ ಪುಂರಾಷ್ಟ್ರಸ್ಯ....ಕದಲೀ ಕ್ರಮುಕನಾಳಿಕೇರೇಕ್ಷು ಪನಸ ಚಮ್ಪಕ ತಾಂಬೂಲ ವಕುಲಾಶೋಕ ಪುನ್ನಗ ನಾಗಾದ್ಯನೇಕ ವನಷಂಡ ಗಹನಘನಚ್ಛಾಯಾ ಪರೀತೋಭಯ ತಟರೇಖಾಭಿಃ ಕಾವೇರೀ ಕಪಿನೀ ಶ್ರೀನದಿಭಿರಲಂಕೃತಸ್ಯ.... ಅಧಿಪತಿಃ".

(೫) ಕ್ರಿ. ಶ. ೫೫೦: M. A. R., 1912, p. 31, ಗುಮ್ಮರೆಡ್ಡಿಪುರ ಶಾಸನ:—"ಪುನ್ನಾಟರಾಜ.... ಸಮಸ್ತ ಪಾಣ್ನಾಡ ಪುನ್ನಾಡಾಧಿಪತಿನಾ".

(೬) ಸುಮಾರು ಕ್ರಿ. ಶ. ೭೦೦: E. C., Vol. XII, ತುಮಕೂರು ೨೩:—"ಸಮಸ್ತಪಾಂನೊಡ ಪುನ್ನಾಡಾಧಿಪತಿ".

(೭) ಕ್ರಿ. ಶ. ೮೧೦: E. C., Vol. III, ನಂಜನಗೂಡು ೨೬:—
"ಪುನ್ನಾಡಱುಸಾಸಿರಕ್ಕೆ."

(೮) ಕ್ರಿ. ಶ. ೮೭೦: E. C., Vol. III, ನಂಜನಗೂಡು ೭೫:—
"ಪೂನಾಡಮನಾಳುತಿಟ್ಟು."

(೯) ಕ್ರಿ. ಶ. ೮ನೆಯ ಶತಮಾನದಿಂದೀಚೆಗೆ: I. A., Vol. XVIII, p. 362, ಕೊಮಾರಲಿಂಗಂ ಶಾಸನ:—
"ಪುನ್ನಾಟರಾಜಸ್ಯ. . . . ಪುನ್ನಾಡುವಿಷಯೆ."

(೧೦) ಸುಮಾರು ಕ್ರಿ. ಶ. ೯೦೦: E. C., Vol. IX, ದೇವನಹಳ್ಳಿ ೪೧:—
"ಪುನ್ನಾಡರಸರಾ."

(೧೧) ಸುಮಾರು ಕ್ರಿ. ಶ. ೯೦೦: E. C., Vol. IX, ದೇವನಹಳ್ಳಿ ೪೩:—
"ಪುನ್ನಾಡನಾಳೆ."

(೧೨) ಕ್ರಿ. ಶ. ೯೩೧: ಹರಿಷೇಣನ ಬೃಹತ್ಕಥಾಕೋಶ:—"ಸಙ್ಘೋಪಿ ಸಮಸ್ತೋ ಗುರುವಾಕ್ಯತಃ ದಕ್ಷಿಣಾಪಥದೇಶಸ್ಥ ಪುನ್ನಾಟ ವಿಷಯಂ ಯಯೌ."*

(೧೩) ಕ್ರಿ.ಶ. ೧೦೭೯: E. C., Vol. IV, ಹೆಗ್ಗಡದೇವನಕೋಟೆ ೫೬:—
"ಪುನ್ನಾಡಧಿಗರೆಯು. . .ಪುನ್ನಡಧಿಗಾರಿಯು. . . .ಪುನ್ನಡಧಿಗಾರಿಯು. . . ."

(೧೪) ಕ್ರಿ. ಶ. ೧೩೨೮: E. C., Vol. IX, ದೊಡ್ಡಬಳ್ಳಾಪುರ ೩೮:—
"ಪುಣ್ಣಾಡ ಯಪತ್ತ ನಾಡವರ."

## ಅನುಬಂಧ ೯

(೧) ಕನ್ನಡ (೨) ಕರ್ನಾಟ (೩) ಕರ್ನಾಟಕ (೪) ಕರ್ಣಾಟ (೫) ಕರ್ಣಾಟಕ ಎಂಬ ಐದು ರೂಪಗಳು ಅಚ್ಚಾದ ಗ್ರಂಥಗಳಲ್ಲೂ ಓಲೆಗಳಲ್ಲೂ ಶಾಸನಗಳಲ್ಲೂ ಹೇರಳವಾಗಿವೆ.

(೬) 'ಕನ್ನಡು' ಎಂಬುದು ಉತ್ತರ ಕರ್ನಾಟಕದ ವ್ಯವಹಾರದಲ್ಲಿ ಇಂದಿಗೂ ಕೇಳಿ ಬರುತ್ತಿದೆ. ಇವುಗಳಲ್ಲದ ಇತರ ರೂಪಗಳನ್ನು ಕೆಳಗೆ ಕಾಣಿಸಿದೆ:

(೭) 'ಕರುನಾಡರ್'—ತಮಿಳು; ಕ್ರಿ. ಶ. ಎರಡನೆಯ ಶತಮಾನ(?); ಶಿಲಪ್ಪದಿಕಾರಂ ಗ್ರಂಥ.

(೮) 'ಕರುನಾಡಗನ್'—ತಮಿಳು; ಕ್ರಿ. ಶ. ೭೭೦; ವೇಳ್ವಿಕುಡಿ ಶಾಸನ.

(೯) 'ಕನ್ನಾಡಗರುಂ'—ತಮಿಳು; ಸುಮಾರು ಕ್ರಿ. ಶ. ೯೦೦, E. C., Vol. X, ಮುಳಬಾಗಲು ೨೨೭.

* Mr. Lewis Rice ಅವರ '*Mysore*' ಗ್ರಂಥದಿಂದ.

(೧೦) *"ಮರುವೇಯಂಗ ಕುಂಗ ವೇರಾಡ ಗುಜ್ಜಯ ಗೋಡ ಲಾಡ ಕನ್ನಾಡ"— ಅಪಭ್ರಂಶ ಪ್ರಾಕೃತ; ಹತ್ತನೆಯ ಶತಮಾನ; ಭವಿಸ್ಸಯತ್ತಕಹಾ, Gaekwad's *Oriental Series*, No. XX, ಕಡವಕ ೧, ಬಂತಿ ೧೨.

(೧೧) "ಗಂಗಪೆರ್ಮ್ಮನಡಿಗಳು ಕರ್ನ್ನಾಟಮನಾಳುತ್ತಮಿರೆ"—ಕನ್ನಡ; ಕ್ರಿ. ಶ. ೧೦೨೨; E. C., Vol. III, ಮಂಡ್ಯ ೭೮.

(೧೨) 'ಕನ್ನಾಟ'—ತಮಿಳು; ಸುಮಾರು ಕ್ರಿ.ಶ. ೧೦೭೧; E. C., Vol. X, ಕೋಲಾರ ೧೦೬ d.

(೧೩) 'ಕನ್ನಾಟಕ'—ತಮಿಳು; ಕ್ರಿ. ಶ. ೧೦೭೧; E. C., Vol. X, ಕೋಲಾರ ೧೦೮.

(೧೪) "ಕಣ್ಣತ್ತರ ಚಾಮುಗವುಂಡನ ಮುಗ. . ಕಣ್ಣತ್ತರ ಬಾಬಗವುಂಡನ ಮುಗ. . . . "—ಕನ್ನಡ; ಕ್ರಿ. ಶ. ೧೧೭೫; E. C., Vol. III, ಮೈಸೂರು ೮.

(೧೫) "ಕಣ್ಣತ್ತಗ ಬಾಬಗವುಂಡನ ಮುಗ"—ಕನ್ನಡ; ಕ್ರಿ. ಶ. ೧೧೯೬; E. C., Vol. III, ಮೈಸೂರು ೯.

(೧೬) 'ಕಾಣ್ಣಾಟ'— ಪಾಲಿ; ಸುಮಾರು ಕ್ರಿ. ಶ. ೧೩ನೆಯ ಶತಮಾನ; ಚೂಳವಂಸ.

---

* ಶ್ರೀ. ಗೋವಿಂದ ಪೈಗಳ ಒಂದು ಲೇಖನದಿಂದ.

# ಕನ್ನಡ ಸಾಹಿತ್ಯದಲ್ಲಿ ಸಂಪ್ರದಾಯ ಮತ್ತು ಹೊಸ ರೀತಿ*

ಶ್ರೀಮಾನ್ ದ. ರಾ. ಬೇಂದ್ರೆಯವರು, ಎಂ.ಎ., ಧಾರವಾಡ

---

ನಾಡಿನ ಹಿರಿಯರೆ, ನನ್ನ ಗೆಳೆಯರೆ, ತಾಯಂದಿರೆ,

ಇಂದು ನಾನು 'ಕನ್ನಡ ಸಾಹಿತ್ಯದಲ್ಲಿ ಸಂಪ್ರದಾಯ ಮತ್ತು ಹೊಸ ರೀತಿ'– ಈ ವಿಷಯವನ್ನು ಕುರಿತು ಈ ವಸಂತ ಸಾಹಿತ್ಯೋತ್ಸವ ಪ್ರಸಂಗದಲ್ಲಿ ಉಪನ್ಯಾಸ ಮಾಡಬೇಕಾಗಿ ಪರಿಷತ್ತಿನ ಹಿರಿಯರು ಅಪ್ಪಣೆ ಕೊಟ್ಟದ್ದಾರೆ. ಈ ವಿಷಯವನ್ನು ಕೂಲಂಕಷವಾಗಿ, ವಿವರವಾಗಿ ಚರ್ಚಿಸುವದಾದರೆ ಒಂದು ಇಡೀ ವಾರ ಉಪನ್ಯಾಸ ಮಾಡಬೇಕಾಗಬಹುದು. ವಿಷಯವು ಅಷ್ಟು ಮಹತ್ತ್ವದ್ದಾಗಿದೆ. ಈಗ ನಾನು ಇದರ ಒಟ್ಟು ರೂಪರೇಖೆಯನ್ನೂ, ಅದರ ಕೆಲವು ಪ್ರಮುಖಾಂಗಗಳ ರೀತಿಯನ್ನೂ ತಿಳಿಸಿಕೊಡುವೆನು ಅಷ್ಟೆ. ಇದೇ ವಿಷಯವನ್ನು ಕುರಿತು ನನ್ನ ಅನೇಕ ವಿಚಾರಗಳನ್ನು 'ಸಾಹಿತ್ಯ ಮತ್ತು ವಿಮರ್ಶೆ' ಎಂಬ ನನ್ನ ಪುಸ್ತಕದಲ್ಲಿ ಕಾಣಬಹುದು. ಅಲ್ಲಿಯ ಕೆಲ ವಿಚಾರ ಸೂತ್ರಗಳ ಭಾಷ್ಯ ವಿವರಣೆಗಳನ್ನೆ ಇಂದಿನ ಮಾತಿನಲ್ಲಿ ನಾನು ಮಾಡುವೆನು.

'ಸಂಪ್ರದಾಯ ಮತ್ತು ಹೊಸ ರೀತಿ'ಯ ಮಾತು ಕೇವಲ ಸಾಹಿತ್ಯಕ್ಕಷ್ಟೆ ಅನ್ವಯಿಸುವದಿಲ್ಲ. ಇದನ್ನು ಮೊಟ್ಟಮೊದಲು ನಾವು ನೆನಪಿನಲ್ಲಿಡಬೇಕು. ಆ ವಿಚಾರವು ಜೀವನವ್ಯಾಪಿಯಾಗಿದೆ. ಅಂತೆಯೇ ಸಾಹಿತ್ಯದಲ್ಲಿಯೂ ತನ್ನ ಪ್ರಭುತ್ವವನ್ನು ಅದು ತೋರಿಸಿದೆ. 'ಸಂಪ್ರದಾಯ ಮತ್ತು ಹೊಸ ರೀತಿ'ಯ ಪ್ರಶ್ನೆಯು ಒಂದೇ ದೇಶದ್ದಲ್ಲ. ಋತುಮಾನದಂತೆ ಅದು ಎಲ್ಲ ಖಂಡಗಳಲ್ಲಿಯೂ ಸಂಚಾರಮಾಡುವದು. 'ಸಂಪ್ರದಾಯ ಮತ್ತು ಹೊಸ ರೀತಿಯ' ಪ್ರಭಾವವು ನಮ್ಮ ನೀತಿ ನಡವಳಿ, ಬಟ್ಟೆ ಬರೆ, ಊಟ ಉಪಚಾರಗಳಲ್ಲಿ ಕಂಡುಬರುವದಲ್ಲದೆ ಗಂಡ ಹೆಂಡಿರು, ರಾಜ ಪ್ರಜೆಗಳು, ಗುರು ಶಿಷ್ಯರು, ಇಷ್ಟೇ ಏಕೆ, ಗಂಡಸರು ಹೆಂಗಸರು, ಜನ ಜನಾಂಗಗಳು, ಮನಸ್ಸಿನಿಂದ ದುಡಿಯುವವರು ಮೈಯಿಂದ ದುಡಿಯುವವರು—ಇಂಥ ವಿಪುಲ ಸಮಾಜಗಳಲ್ಲಿಯೂ ಕಂಡುಬರುವದು. ಹೀಗಿರುವಾಗ ಸಾಹಿತ್ಯವಷ್ಟೆ ಅಸ್ಪೃಶ್ಯವಾಗಿ ಉಳಿಯುವದು ಸಾಧ್ಯವಲ್ಲ. ಜೀವನಕ್ಕೆ ಸಂಬಂಧವೇ ಇಲ್ಲದ ಕಾಲ್ಪನಿಕ ಸಾಹಿತ್ಯವು ಎಂದೋ ಹಾಕಿದ ಗೆರೆಗಳ ಕಟ್ಟುನಿಟ್ಟಿನಲ್ಲಿ ಉಳಿಯಬಹುದು. ಜೀವನದೊಡನೆ ದಾಂಪತ್ಯ ಬೆಳಸಿದ ಸಾಹಿತ್ಯವು ಉಚ್ಚ ನೀಚಾವಸ್ಥೆಗಳೊಳಗಿಂದ ಹಾಯ್ದಾಡುವಾಗ ಹೊಸ ರೀತಿಯ ವೈಲಕ್ಷಣ್ಯವನ್ನು ಮುಚ್ಚಿಕೊಂಡಿರುವದು ಅಸ್ವಾಭಾವಿಕವಾಗಿದೆ. ಆದರೆ ಈ ವಿಚಾರವನ್ನು ಬೆಳಸುವ

* ಪರಿಷತ್ತು ಈ ವರ್ಷ ನಡಸಿದ ಐದನೆಯ ವಸಂತ ಸಾಹಿತ್ಯೋತ್ಸವದಲ್ಲಿ ಮಾಡಿದ ಉಪನ್ಯಾಸ.

ಮೊದಲು 'ಸಂಪ್ರದಾಯ ಮತ್ತು ಹೊಸರೀತಿ'ಯ ಅರ್ಥವೇನು? ವಿವಾದಾಸ್ಪದವಾದ ವಿಶೇಷವಾವದು? ವಿವೇಕಿಗಳ ಹಾದಿಯೆತ್ತ? ಎಂಬುದನ್ನಷ್ಟು ಸ್ಪಷ್ಟಮಾಡುತ್ತೇನೆ.

'ಸಂಪ್ರದಾಯ'ವೆಂದರೆ ರೂಢಿ, ಬಹುಕಾಲದಿಂದ ನಡೆದುಬಂದ ರೀತಿ; ತಂದೆಯಿಂದ ಮಗನಿಗೆ, ಗುರುವಿನಿಂದ ಶಿಷ್ಯನಿಗೆ, ಹಿರಿಯರಿಂದ ಕಿರಿಯರಿಗೆ, ಇದ್ದವರಿಂದ ಇಲ್ಲದವರಿಗೆ, ಭೂತಕಾಲದಿಂದ ವರ್ತಮಾನಕ್ಕೆ, ಯಾವ ಜ್ಞಾನ, ಶಕ್ತಿ, ರೀತಿ, ನಡತೆ, ಪದ್ಧತಿ ಅನೂನವಾಗಿ ಎಂಬಂತೆ ಪರಂಪರೆಯಿಂದ ಬರುವದೋ ಅದು ಸಂಪ್ರದಾಯ. ಆದಕಾರಣ, ಯಾವ ಸಂಪ್ರದಾಯವೂ ಪ್ರಾಚೀನವಿದ್ದಷ್ಟು ಬೆಲೆಯುಳ್ಳದ್ದು ಎಂದು ತಿಳಿಯಲಾಗುವದು. ಆದ್ದರಿಂದ ಎಲ್ಲ ಸಂಪ್ರದಾಯದವರೂ ತಮ್ಮದು ಪ್ರಾಚೀನವೇಕೆ, ಅನಾದಿ, ಅಪೌರುಷೇಯ ಎಂದು ಸಿದ್ಧಪಡಿಸುವ ಹವ್ಯಾಸಮಾಡುವದಿರಲಿ, ಪ್ರಳಯಕಾಲದವರೆಗೂ ತಮ್ಮ ಸಂಪ್ರದಾಯ ಉಳಿಯತಕ್ಕದ್ದು ಎಂಬ ಶ್ರದ್ಧೆಯ ಭರದಲ್ಲಿ ಅದಕ್ಕೆ ಏನೂ ಧಕ್ಕೆ, ಏನೂ ಬದಲಾವಣೆ ಆಗುವ ಹೆದರಿಕೆ ಅಥವಾ ಸಂಶಯ ಬಂದೊಡನೆ ಪ್ರಳಯವನ್ನೆ ಸಮೀಪ ತರಲು ಸಂಕಟಪಡುವರು. ಪ್ರಳಯವಾಗಿಹೋದರೂ ತಮ್ಮ ಸಂಪ್ರದಾಯವು ಬ್ರಹ್ಮೋದರದಲ್ಲಿ ಉಳಿದು ಮತ್ತೆ ಸೃಷ್ಟಿಯೊಡನೆ ಮೊಳೆಯುವದು ಎನ್ನುವ ಅತಿ ಶ್ರದ್ಧಾವಂತರೂ ಇರುತ್ತಾರೆ. ಸೃಷ್ಟಿಯಲ್ಲಿಯೂ ತಮ್ಮ ಸಂಪ್ರದಾಯ ಉಳಿದಿಲ್ಲವೆಂದು ಕಂಡುಬಂದರೂ ದೇವರ ದೃಷ್ಟಿಯಲ್ಲಾದರೂ ಅದು ಹೂಳಿಕೊಂಡಿರಬೇಕು ಎನ್ನುವ ಭರವಸೆಯಿಂದ ಅವರು ಉದಾಸೀನರಾಗಿ ಜೀವನ ಕಳೆಯುವರು. ಈ ವಿವೇಕ ಅವಿವೇಕಗಳಲ್ಲಿ ಸಂಪ್ರದಾಯದ ಎಲ್ಲ ಶಕ್ತಿ ಅಶಕ್ತಿಗಳೂ ಅಡಕವಾಗಿವೆ.

ಇನ್ನು 'ಹೊಸ ರೀತಿ' ಎಂತಹದು? ಸಂಪ್ರದಾಯದಲ್ಲಿ ಬುದ್ಧಿಪೂರ್ವಕವಾಗಿ ಮಾಡಿದ ಯಾವ ಹೆಚ್ಚುಕಡಮೆಯೂ, ಅದರಿಂದ ತೀರ ಭಿನ್ನವಾದ ರೀತಿಯೂ 'ಹೊಸ ರೀತಿ' ಎನ್ನಿಸಿಕೊಳ್ಳುವದು. ಅಷ್ಟೇ ಏಕೆ, ಒಂದು ಸಂಪ್ರದಾಯಕ್ಕೆ ಇನ್ನೊಂದು ಸಂಪ್ರದಾಯವು ಹೊಸ ರೀತಿಯಾಗಿ ತೋರುವದು. ಅದಕ್ಕೂ ಚಮತ್ಕಾರವೆಂದರೆ, ಪರಸ್ಪರ ಹೋರಾಡುವ ಹಳೆಯ ಸಂಪ್ರದಾಯಗಳು ಒಟ್ಟುಕೂಡಿಕೊಂಡು ಪ್ರಬಲವಾಗಲಿರುವ ಮತ್ತೊಂದು ರೀತಿಗೆ 'ಹೊಸದು,' 'ಅಸಾಂಪ್ರದಾಯಿಕ' ಎಂಬ ದೂಷಣೆಯನ್ನು ಕೊಡುವವು.

ಇನ್ನು ಸ್ವತಃಏವ 'ಸಂಪ್ರದಾಯ'ದಲ್ಲಾಗಲಿ, 'ಹೊಸ ರೀತಿ'ಯಲ್ಲಾಗಲಿ ಯಾವ ದೊಡ್ಡಸ್ತಿಕೆಯೂ ಇಲ್ಲ. ಇದ್ದದ್ದನ್ನು ಇದ್ದಂತೆ ಕಾಯ್ದುಕೊಂಡು, ನಡಸಿಕೊಂಡು ಹೋಗುವದೇ ಸಂಪ್ರದಾಯವಾದರೆ ಅದೊಂದು ಸಮಾಜದ ಜಡಬುದ್ಧಿ, ತಾಮಸಜಾತಿ ಎನ್ನಬಹುದು. ಎಂಥದಾದರೂ ಮಾರ್ಪಾಡೇ ಹೊಸ ರೀತಿಯಾಗಬಹುದಾದರೆ ಅದೂ ಸಾಮೂಹಿಕ ಚಾಂಚಲ್ಯ ಅಥವಾ ವೈಯಕ್ತಿಕ ರಾಜಸವೃತ್ತಿ ಎನ್ನಬಹುದು. ಆದರೆ, 'ಸಂಪ್ರದಾಯ'ವೆಂದರೆ ಇದ್ದ ಒಳ್ಳೆಯ ಗುಣಗಳನ್ನು ಕಾಯ್ದುಕೊಳ್ಳುವದೆಂದಾದರೆ, 'ಹೊಸ ರೀತಿ' ಎಂದರೆ ಇದುವರೆಗೆ ತಮ್ಮಲ್ಲಿ ಬೆಳೆಯುದಿದ್ದ ಗುಣಗಳನ್ನು ಬೆಳೆಯಿಸಿಕೊಳ್ಳುವದು ಎಂದಾಗಬಹುದು. ಜುಟ್ಟು,

ಜನಿವಾರದ ಸಂಪ್ರದಾಯವಂತಿಕೆಯಂತೆಯೆ, ನೆಕ್ ಟೈ, ಸ್ಟಾಕಿಂಗ್ಸ್ ಇವುಗಳ ಕಟ್ಟು ಬಣ್ಣಗಳ ಹೊಸ ರೀತಿಯಲ್ಲಿ ಯಾವ ಮರ್ಮವೂ ಇಲ್ಲ, ಧರ್ಮವೂ ಇಲ್ಲ. ಅದು ಒಂದು ಶಿಸ್ತು ಮಾತ್ರ.

ಸಲಕ್ಷಣವಾದ ದೇಹವಿದ್ದರೆ ಸಾಕು, ಗುಣಗಳು ತಾವೇ ಮನೆಮಾಡಿರುವವು ಎಂಬುದು ಸಾಂಪ್ರದಾಯಿಕ ಶ್ರದ್ಧೆ. "ಆಕೃತಿ ವಿಶೇಷಾಃ ನ ಗುಣ ವಿರೋಧಿನೋ ಭವಂತಿ" ಎಂದು ಶಕುಂತಲೆಯ ಸಖಿ ಹೇಳಿದಂತೆ, ಒಂದು ಅಂಗವು ಊನ ವಿದ್ದರೇನು ನ್ಯೂನವಿದ್ದರೇನು, ಆಕರ್ಷಕ ಗುಣವಿದ್ದರೆ ಆ ದೇಹವು ಸಾರ್ಥಕ ಎಂಬುದು ಹೊಸ ರೀತಿಯವರ ಹೇಳಿಕೆ. "ಗಂಡರ್ ಗುಣಮನೆ ಮೆರೆವುದು ಶಸ್ತ್ರವ್ರಣಮಂ" ಎಂದು ದ್ರೌಪದಿ 'ಇರಿವ ಬೆಡಂಗ'ನಿಗೆ ಹೇಳಿದಂತೆ, ಒಳ್ಳೆಯ ಅರ್ಥದಲ್ಲಿ ನೋಡುವದಾದರೆ 'ಸಂಪ್ರದಾಯ' ಎಂದರೆ ದೇಹಶುದ್ಧಿ, ಆನುವಂಶಿಕ ಗುಣಸಂಪತ್ತಿ, ದೈವದ ಆನುಕೂಲ್ಯ; ಹಾಗೆಯೇ 'ಹೊಸ ರೀತಿ' ಎಂದರೆ ಗುಣವೃದ್ಧಿ, ಪೌರುಷದ ಪ್ರಾಚುರ್ಯ, ಸಾಹಸದ ಸಮೃದ್ಧಿ. ಸಂಪ್ರದಾಯ, ಹೊಸ ರೀತಿಗಳು ಸಮತೂಕದಿಂದ ಕೂಡಿಕೊಂಡಲ್ಲಿ ರಾಜಸ ತಾಮಸಗಳ ವೈಷಮ್ಯವಡಗಿ, ಹೊಸದೊಂದು ಸತ್ತ್ವವೆ ತಲೆಯೆತ್ತಿದಂತೆ. ಸಾಹಿತ್ಯಕ್ಕೆ ಬೇಕಾದುದು ಇದು. ಬರಿಯ ಸಂಪ್ರದಾಯದ ಇತಿಹಾಸ ಪುರಾಣ ಬೇಡ; ಬರಿಯ ಹೊಸ ರೀತಿಯ ಕಾಲ್ಪನಿಕ ಕತೆ, ಕಾದಂಬರಿ ಬೇಡ. ಸಾಹಿತ್ಯವು ಸರಸಕಾಂತೆಯರಂತೆ ಜೀವನ ಗಾಂಭೀರ್ಯಕ್ಕೂ ಜೀವನಮಾಧುರ್ಯಕ್ಕೂ ಮಾರುವೋಗಿದೆ. ಕಾಲ್ಪನಿಕ ಭವಿಷ್ಯವು, ಸ್ಮೃತಿರಮ್ಯಭೂತಕಾಲವು ಸಾಹಿತ್ಯದ ಪ್ರಮುಖಾನ್ನವಲ್ಲ. ಅದು ಅದರ ವ್ಯಂಜನ ಸಾಮುಗ್ರಿ. ಹಳೆಯ ಸಂಪ್ರದಾಯವನ್ನೆ ಒತ್ತಿ ಹೇಳಲು ವೇದಜಡಶ್ರುತಿಯು ಶ್ರುತಿಹಿಡಿಯಬಹುದು. ಹೊಸ ಹೊಸ ರೀತಿಯನ್ನೆ ಎತ್ತಿ ಹಿಡಿಯಲು ರಾಜಸಸ್ಮೃತಿಯು ವಿವಿಧ ಸ್ವರಗಳನ್ನು ತೆಗೆಯಬಹುದು. ಆದರೆ ನಿಜವಾದ ಜೀವನದ ಮನಂಬುಗುವ ಹಾಡುಗಾರಿಕೆಯಲ್ಲಿ ಸಜೀವ ಸಾಹಿತ್ಯವೇ ಸಮರ್ಥವಾಗಿರುವದು. ಶುದ್ಧ ಸಂಪ್ರದಾಯ, ಶುದ್ಧ ಹೊಸ ರೀತಿ ಇವೆರಡೂ ಕಲ್ಪನೆ ಮಾತ್ರ, ಕೇವಲ ವೃತ್ತಿಗಳು. ಜೀವನವು ವೃತ್ತಿಗಳ ತೂಕವನ್ನು ಹಿಡಿದು ಹೊಸ ಸಾಮರಸ್ಯಕ್ಕಾಗಿ ಹಾದಿ ತೆರೆಯುತ್ತಿರುವ ಧೀರ ಪಾಂಥನಂತಿರುವದು. ಸಾಹಿತ್ಯವು ಇಂಥ ಪ್ರವಾಸ ಸಾಹಸಗಳ ವೃತ್ತಾಂತವು. ಅಂತೆಯೆ ಸಾಹಿತ್ಯದ ಸಾರದಲ್ಲಿ ಸಂಪ್ರದಾಯ ಹೊಸ ರೀತಿಗಳ ಬಡಿದಾಟಕ್ಕೆ ಸ್ಥಾನವಿರಬಾರದು. ಆದರೆ ವ್ಯವಹಾರದಲ್ಲಿ ಹಳೆಯ ಹೊಸ ಸ್ವಾರ್ಥಗಳು 'ಸಂಪ್ರದಾಯ', 'ಹೊಸ ರೀತಿ' ಎಂದು ಹೆಸರಿಟ್ಟುಕೊಂಡು ದಿನವೂ ರಣಕಂದನವನ್ನು ನಡಸಿರುತ್ತವೆ. ಒಮ್ಮೊಮ್ಮೆ ಬೀದಿಯ ದೊಂಬಿಗಾರರೂ ವಿದ್ಯಾನಿಲಯಗಳನ್ನು ಹೊಕ್ಕು ಅಲ್ಲಿಯೂ ಮರ್ಕಟ ಚೇಷ್ಟೆ ನಡಸುವಂತೆ ವ್ಯಾವಹಾರಿಕವಾದ ಈ 'ಸಂಪ್ರದಾಯ–ಹೊಸ ರೀತಿಗಳ' ವಾದವು ಪಾರಮಾರ್ಥಿಕವಾದ ಸಾಹಿತ್ಯದಲ್ಲಿಯೂ ಸೇರುವದು.

ಹಿಂದಿನವರು ಇಂದಿನವರಿಗೆ 'ಹೊಸ ರೀತಿ'ಯವರು ಎಂದು ಹಳಿಯುವದು

ಬಹಳ ಹಳೆಯ ಮಾತಾಗಿದೆ. "ಪುರಾಣಮಿತ್ಯೇವ ನಸಾಧು ಸರ್ವಂ ನಚಾಪಿ ಕಾವ್ಯಂ ನವಮಿತ್ಯವದ್ಯಂ" ಎಂದು ಕಾಲಿದಾಸನು ತನ್ನ ಕಾಲಕ್ಕೆ ಹೇಳಿದರೆ, "ವಿನೂತನ ಕವಿತೆಯೆಂದು ಕುಂದಿಟ್ಟು ಜರೆದೊಡೆ ಪೇಳ್ವವನೊಳಾವದೂಣೆಯಂ" ಎಂದು ಲಕ್ಷ್ಮೀಶನು ಕೇಳಬೇಕಾಗಿ ಬಂದಿತು. ತನ್ನ ಕಾಲಕ್ಕೆ ಆದ್ಯರ ಹೆಸರಿನಲ್ಲಿ ಆದ್ಯತನರನ್ನು ಕಾಡುವ ಜನರು ಎಂದಿಗೂ ಇದ್ದಾರೆ. ಜೈನ ಸಂಪ್ರದಾಯದ ಚಂಪೂ ಕಾವ್ಯಕ್ಕೆ ಹರಿಹರನ ಕಾವ್ಯವು ರಗಳೆಯಾಗಿ ತೋರಿತು. ವೀರಶೈವ ಪುರಾಣಿಕರಿಗೂ ವಚನಕಾರರಿಗೂ ವೈಷ್ಣವರ ರಾಮಾಯಣ ಭಾರತಗಳು ಹೊಲ್ಲ ಕತೆಗಳಾದವು, ಮತವೈಷಮ್ಯದಿಂದ. ಪಂಡಿತರಿಗೇ ಗಮ್ಯವಾಗುವ ಕಾವ್ಯ ಬರೆದ ಮಧುರನು ತನ್ನ ಕಾವ್ಯವು 'ಬೀರನ ಕತೆ'ಯಾಗಬಾರದೆಂದು ಗುರಿಯಿಟ್ಟುಕೊಂಡು ಲಕ್ಷಣಬದ್ಧ ಸಂಪ್ರದಾಯವಂತನಾದನು; ಆದರೆ ಅದೇ ಜೈನಮತದ ರತ್ನಾಕರನು ಎಲ್ಲರಿಗೂ ರಮ್ಯವಾಗುವ ಕಾವ್ಯ ಬರೆಯತೊಡಗಿ, ಸಕಲಲಕ್ಷಣಸಂಪನ್ನವಾದ ಕಾವ್ಯಕಟ್ಟುವ ಸಂಭ್ರಮದಲ್ಲಿ 'ಪುಸ್ತಕದ ಬದನೆಕಾಯಿ'ಯಾಗಬಾರದು ಎಂದು ಹೊಸ ರೀತಿಯವನಾದನು. 'ಮಾರ್ಗ' 'ದೇಸಿ'ಯೆಂದು, 'ವಸ್ತುಕ' 'ವರ್ಣಕ' ವೆಂದು, 'ವಕ್ರೋಕ್ತಿ' 'ಸ್ವಭಾವೋಕ್ತಿ' ಎಂದು ಸಂಪ್ರದಾಯ ಹೊಸ ರೀತಿಗಳ ಹುಯಿಲು ಕನ್ನಡದ ಹಿಂದಿನ ಸಾಹಿತ್ಯೇತಿಹಾಸದಲ್ಲಿ ಏಳದೆ ಬಿಟ್ಟಿಲ್ಲ. ಆದರೆ ಸಾಹಿತ್ಯ ಪ್ರಿಯರಾದ ನಮಗೆ ಸಂಪ್ರದಾಯ ಹೊಸ ರೀತಿಗಳ ನಿರಪೇಕ್ಷತೆಯಿಂದ ನೋಡು ವಾಗ್ಗೆ ಹಿಂದಿನ ಉತ್ತಮಕೃತಿಯೆಲ್ಲವೂ ಚೊಕ್ಕ ಸಾಹಿತ್ಯವಾಗಿಯೇ ತೋರುವದು. ಅದೆಲ್ಲವೂ ನಮಗೆ ಬೇಕು. ಎಂದಿನಿಂದಲೂ ಕನ್ನಡದ ಉತ್ತಮ ವಿಚಾರವು ಸಮ್ಯಕ್ತ್ವವನ್ನು ಗುರಿಯಿಟ್ಟುಕೊಂಡಿದೆ, ಪರಿಪೂರ್ಣತೆಗೆ ಭಕ್ತನಾಗಿದೆ, ಪೂರ್ಣ ಪ್ರಜ್ಞೆಗೆ ದಾಸನಾಗಿದೆ, ಸಮನ್ವಯವು ಸಾಧು ಎಂದುಕೊಂಡಿದೆ; ಮಾರ್ಗ ದೇಸಿಗಳ ಒಡಂಬಡಿಕೆಯನ್ನೂ, ವಸ್ತುಕ ವರ್ಣಕಗಳ ಅವಳಿಜವಳಿತನವನ್ನೂ, ವಕ್ರೋಕ್ತಿ ಸ್ವಭಾವೋಕ್ತಿಗಳ ಪರಸ್ಪರ ಪೋಷಕತೆ ಪರಿಪೂರ್ಣತೆಯನ್ನೂ ಕಂಡುಕೊಂಡಿದೆ.

ಇಂದೂ ಕೂಡ ಹೊಸ ಸಾಹಿತ್ಯದ ಧುರೀಣರು ಅಥವಾ ಸಾಹಿತ್ಯದ ಹೊಸ ಧುರೀಣರು ಸಮನ್ವಯವಾದಿಗಳಾಗಿದ್ದಾರೆ. ಬಿಗುವಿನ ಬರೆವಣಿಗೆಗೆ ಶ್ರೀ. ಗೋವಿಂದ ಪೈಗಳ ಸಾಹಿತ್ಯಕ್ಕೆ ಸರಿಸಾಟಿಯಾಗುವ ಶೈಲಿಯು ಸಂಪ್ರದಾಯವಂತರಲ್ಲಿಯೂ ಅಪರೂಪ; ಹಳೆಯ ಕಾವ್ಯದ 'ಸಂಸ್ಕೃತಿಸ್ಟ‌ರ್ಮ್ಸ್' ಬಿಡೋಣ; ಹೊಸ ಕಾವ್ಯದ 'ಆ್ಯಂಗ್ಲಿಸಿಸ್ಟ‌ರ್ಮ್ಸ್' ಬಿಡೋಣ. 'ಶ್ರೀ'ಯವರ ಕವನದೊಳಗಿನ ಮೆಚ್ಚುಗನ್ನಡದ ಅಚ್ಚುಸಂಪತ್ತಿಯು ಯಾವ ಸಾಂಪ್ರದಾಯಿಕ ಕಾವ್ಯಕ್ಕೆ ಕಡಮೆಯಿದೆ? ಕನ್ನಡತನ ದಲ್ಲಿ ಅದು 'ಸಂಸ್ಕೃತ-ಕನ್ನಡ'ಕ್ಕಿಂತಲೂ ಮೇಲು. ಸಾಂಪ್ರದಾಯಿಕ ಸಾಹಿತ್ಯದ ಗುಣಘೋಷಣೆಯಲ್ಲಿ ಶ್ರೀ. ಡಿ. ವಿ. ಗುಂಡಪ್ಪನವರು ಅಥವಾ ಶ್ರೀ. 'ಶ್ರೀನಿವಾಸರು' ಮಾಡಿದ ವಿಮರ್ಶೆಯಂಥ ಉತ್ತಮ ವಿಮರ್ಶೆಯು ಸಂಪ್ರದಾಯಪ್ರಿಯರೆನ್ನುವವರ ಲೇಖನಿಯಿಂದ ಇನ್ನೂ ಬರಬೇಕಾಗಿದೆ. ಸಾಂಪ್ರದಾಯಿಕ ರೀತಿಯ ಕಾವ್ಯವನ್ನು ಬರೆಯಬಲ್ಲ ಶ್ರೀ. ಮುಳಿಯ ತಿಮ್ಮಪ್ಪಯ್ಯನವರು ಹೊಸ ರೀತಿಯನ್ನು ಮೆಚ್ಚುವಲ್ಲಿ

ಕನ್ನಡ ಸಮನ್ವಯದ ಬುದ್ಧಿಯನ್ನೆ ಪ್ರಕಟಿಸುತ್ತಿರುವರು. ಅಂತೂ 'ಸಂಪ್ರದಾಯ', 'ಹೊಸ ರೀತಿ' ಎನ್ನುವ ಮಾತು ನಿಜವಾದ ಸಾಹಿತ್ಯಕ್ಕೆ ಹೊರತು; ಅದು ವ್ಯಾವಹಾರಿಕ ಭಿನ್ನಾಭಿಪ್ರಾಯಗಳ ಭೂತವು ಮಾತ್ರ. ಗದ್ಯಪ್ರಬಂಧ, ನಾಟಕಗಳಲ್ಲಿ ಸಹಜವಾಗಿ ಹೊಸ ರೀತಿಗೆ ಇಂಬುಗೊಟ್ಟ ಸಂಪ್ರದಾಯವು ಹೊಸ ಕವನವನ್ನು ಸುಲಭವಾಗಿ ಬರಮಾಡಿಕೊಳ್ಳುತ್ತಿಲ್ಲ. ಅದರ ಕಾರಣವೇನೆಂದರೆ— ಸಾಂಪ್ರದಾಯಿಕ ಕಾವ್ಯದ ಪ್ರತಿಷ್ಠಿತ ವೈಭವವು ನಮ್ಮಲ್ಲಿ ಬಹಳ ಎತ್ತರದ್ದಾಗಿದೆ. ಅದರ ಇದಿರು ಚಿಕ್ಕಪ್ರಾಯದ ಹೊಸ ಕವನವು ಗೋಮಟೇಶ್ವರನಿದಿರು ನಿಂತಿರುವ ಪ್ರೇಕ್ಷಕನಂತೆ ಕುಳ್ಳನಾಗಿ ತೋರುವದು. ಆದರೆ ಗೋಮಟೇಶ್ವರನಿಗೆ ತಲೆಬಾಗಿ ಅದೇ ಪಡಿಯಚ್ಚಿನ ಅಂಥಿಂಥ ಗೊಂಬೆಗಳನ್ನು ಕೆತ್ತುವದೇಕೆ? ಅದರ ಸೌಂದರ್ಯಾನುಭವವನ್ನು ಶಬ್ದದಲ್ಲಿ ಎರಕಹೊಯ್ದು ಕವನ ಪ್ರತಿಮೆಯನ್ನು ರಚಿಸುವ ಶಿಲ್ಪದಲ್ಲಿ ತೊಡಗಿದ ಹೊಸ ರೀತಿಯ ಕವನವು ಸಾಲದೆ? ಅದೇನು ಸಾಂಪ್ರದಾಯಿಕ ಕವನಕ್ಕೆ ಕಡಮೆಯದಾಗಿಲ್ಲ.

ಇಷ್ಟಾಗಿ 'ಸಂಪ್ರದಾಯ', 'ಹೊಸ ರೀತಿ' ಎನ್ನುವವು ಒಂದು ರೀತಿಯ ಮನೋಧರ್ಮಗಳನ್ನು ಸೂಚಿಸುವ ಮಾತುಗಳು. ಪಂಪನಿದಿರು ರನ್ನನು ಹೊಸ ರೀತಿಯವನು; ಕುಮಾರವ್ಯಾಸನ ಬದಿಗೆ ಲಕ್ಷ್ಮೀಶನು ಸಾಂಪ್ರದಾಯಿಕನು. 'ಗಿರಿಜಾ ಕಲ್ಯಾಣ'ದ ಸೋದರಕಾವ್ಯಗಳಾದ ಶಿವಗಣದ ರಗಳೆಗಳೂ, 'ಹರಿಶ್ಚಂದ್ರಕಾವ್ಯ'ದ ಬೆನ್ನಲೆಹುಟ್ಟಿದ ರಾಘವಾಂಕನ ಇತರ ಪುರಾಣಕಾವ್ಯಗಳೂ ಸಂಪ್ರದಾಯ, ಹೊಸ ರೀತಿಗಳು ಒಂದೇ ವ್ಯಕ್ತಿಯಲ್ಲಿ ಜೀವನದ ಕ್ರಾಂತಿಯಿಂದ ಬರುವುದನ್ನು ತೋರಿಸುವವು. ರಾಜ್ಯಕ್ರಾಂತಿ, ಧರ್ಮಕ್ರಾಂತಿ, ಜೀವನಕ್ರಾಂತಿಗಳು ಆದಾದಲ್ಲಿ ಹೊಸ ರೀತಿಯು ಮೈದೋರಲೇಬೇಕು. ಹಳೆಯ ಸಂಪ್ರದಾಯವು ಹೊಸ ಸಂಪ್ರದಾಯದೊಡನೆ ಮೈಗೂಡಿಸಿಕೊಳ್ಳಲೇಬೇಕು. ಮುದ್ದಣನ 'ರಾಮಾಶ್ವಮೇಧ'ದ ಮಾತು ಹಳಗನ್ನಡವಾದರೂ ಭಾವ ಹೊಸಗನ್ನಡವು; ಅಚ್ಚ ಹೊಸಗನ್ನಡವು. 'ಭರತೇಶ ವೈಭವದ' ಹೊಸ ರೀತಿಯು ಇಂದಿನವರಿಗೂ ನಿಪ್ಪೊಸತು ಎನಿಸುವಂತಿದೆ. ವಚನಗಳ ಭಾವಸಂಪತ್ತಿಯು ಸನತ್ಕುಮಾರನ ಸೌಂದರ್ಯವನ್ನು ಪಡೆದು ವರ್ತಮಾನ ಕಾಲದ ಎಷ್ಟೋ ಭಾವಗಳನ್ನು ಹಳೆಯ ಸಂಪ್ರದಾಯಗಳ ಹಿಂದುಳಿದ ಕಸವೆನ್ನುವಂತೆ ಮಾಡುತ್ತಿದೆ. ರುದ್ರಭಟ್ಟನ ಸಂಸ್ಕೃತ-ಕನ್ನಡದಿದಿರು ಆಂಡಯ್ಯನ ಅಚ್ಚಗನ್ನಡವು ಪೊಸದೇಸಿಯಿಂದ ಮೆರೆಯುವದು. ಬ್ರಹ್ಮಶಿವನ ಸಾಂಪ್ರದಾಯಿಕ ಭಾವದೊಡನೆ ಹೋಲಿಸಿದರೆ, ಆಂಡಯ್ಯನ ಜೈನಭಾವವು ಹೊಸ ರೀತಿಯದು ಎಂದು ಹೇಳಬಹುದು. 'ಆದಿಪುರಾಣ'ದ ಪ್ರಶಾಂತ ತನ್ಮಯತೆಯ ಬದಿಗೆ ಬ್ರಹ್ಮಶಿವನ 'ವಿಡಂಬಕ ಕಾವ್ಯ'ದ ವಿಕಟತೆಯೇ ಹೊಸ ರೀತಿ ಎನ್ನಬಹುದು. ಅಂತೂ, ಸಂಪ್ರದಾಯ ಹೊಸ ರೀತಿಗಳ ಸಂಕರ ಸಂಸೃಷ್ಟಿಗಳಿಂದ ಆದ ಅನೇಕ ಮಿಶ್ರಣಗಳನ್ನು ಸಾಹಿತ್ಯ ರಾಶಿಯಲ್ಲಿ ನಾವು ಕಾಣಬಹುದು.

ಅಂತೆಯೇ ಕೇವಲ ಸಂಪ್ರದಾಯ, ಕೇವಲ ಹೊಸ ರೀತಿ ಎನ್ನುವದು ಒಳ್ಳೆಯ

೩

ಸಾಹಿತ್ಯಕ್ಕೆ ಅನ್ವಯಿಸುವ ಮಾತಲ್ಲ. ಆದರೆ ಸಾಹಿತ್ಯವು ಮತಪ್ರಚಾರಸಾಧನೆ ಯಾದ ಮಟ್ಟಿಗೆ ಮಾತ್ರ ಭೇದದ ಭೂತವು ಅವುಗಳಲ್ಲಿಯೂ ಸೇರುವದು. ಆದರೂ ಜೀವನದಲ್ಲಿಯೇ ನೆಲೆಗೊಂಡ ಭೇದವನ್ನು ಸಾಹಿತ್ಯದಿಂದ ಹೊರದೂಡುವದು ಸಾಧ್ಯವಲ್ಲದ ಮಾತು. ಭಾರತೀಯ ರಾಜಕೀಯ ಜಾಗೃತಿ, ಪೌರ್ವಾತ್ಯ ಪಾಶ್ಚಿಮಾತ್ಯ ಜ್ಞಾನವಿಜ್ಞಾನಗಳ ಸಂಪರ್ಕ ಸಂಘರ್ಷಣ, ಜಾಗತಿಕ ಸಾಹಿತ್ಯದ ಪ್ರಸಾರ, ಮಾನವ ಧರ್ಮಾಭ್ಯುದಯ ಮತ್ತೊಮ್ಮೆ ದೇಶ ಹಾಳುಮಾಡಿ ಇನ್ನೊಮ್ಮೆ ಮನೆ ಮಠಗಳನ್ನು ಕಟ್ಟಿಕೊಂಡು ನೋಡಬೇಕೆಂಬ ಕೆಲ ಜನರ ಹೊಸ ಚಾಪಲ್ಯ. ಇವೆಲ್ಲವುಗಳ ಅಪೂರ್ವಗ್ರಹಯೋಗವು ಕೂಡಿಬಂದಾಗ ಕನ್ನಡಿಗರೂ ಕನ್ನಡವೂ ಕ್ರಾಂತಿಯನ್ನೂ ಉತ್ಕ್ರಾಂತಿಯನ್ನೂ ಹೊಂದದಿರುವದು ಅಸಂಭವನೀಯವು. ರಾಜಕೀಯ ತಂತ್ರಗಳ ಪ್ರಯೋಗಶಾಲೆಯೂ, ಮತಗಳ ರಸಾಯನಶಾಲೆಯೂ, ಸಾಹಿತ್ಯದ ಕ್ರೀಡಾಂಗಣವೂ ಆಗಿರುವ ಕನ್ನಡವು ನವಚೈತನ್ಯದಿಂದ ತುಂಬಿ ತುಳಕದಿರುವದೇ ಆಶ್ಚರ್ಯಕರವು. ಮುಂದಿಯ ಮೋರೆಯನ್ನೊಮ್ಮೆ ನೋಡಿ, ಕನ್ನಡಿಯ ನೆರಳನ್ನೊಮ್ಮೆ ನೋಡಿ ಕ್ಷಣಕ್ಕೊಮ್ಮೆ ಕುರುಳು ತೀಡಿ, ಉಸುರಿಗೊಮ್ಮೆ ಬಣ್ಣ ಬದಲಿಸುವ ಸಂಶಯಿತ ಸೌಂದರ್ಯದ ಹೊಸ ರೀತಿಯು ನಮ್ಮ ಜೀವನದಲ್ಲಿಯೂ ಬೇಡ, ಸಾಹಿತ್ಯದಲ್ಲಿಯೂ ಬೇಡ. ತಾಳೆಯೋಲೆಗಳಿಂದಲೆ ನಮ್ಮ ಸಾಹಿತ್ಯದೇವಿಯ ಸೌಭಾಗ್ಯ ಉಳಿಯುವದಿದೆ ಎಂದು ಗೆದ್ದಲಿನ ಬಾಯಿಗೆ ತುತ್ತಾಗಬಹುದಾದ ಸಂಪ್ರದಾಯವೂ ನಮ್ಮ ಜೀವನಕ್ಕೂ ಸಾಹಿತ್ಯಕ್ಕೂ ಒಗ್ಗದು.

ನಮಗೆ ಸಂಪ್ರದಾಯ, ಹೊಸ ರೀತಿಗಳೆರಡನ್ನೂ ಎರಡು ತೋಳುಗಳನ್ನಾಗಿಸಿ, ಹೊಸ ಜೀವನದ ಕವಾಟವನ್ನು ತೆರೆಯುವ ವೀರಕರ್ಮದ ಧೀರ ಉದ್ಗಾರದಂತಿರುವ ಸಾಹಿತ್ಯವು ಬೇಕಾಗಿದೆ. ಸಂಪ್ರದಾಯ ಹೊಸ ರೀತಿಗಳ ಚಿಟುಕುಮುರಿದಾಟವು ಬೇಕಾಗಿಲ್ಲ. ಧೀರಜೀವನದ ವೀರವ್ಯಕ್ತಿಗಳು ಸಾಹಿತ್ಯದಲ್ಲಿ ಆಡಿದ್ದೆ ಹೊಸ ರೀತಿ, ಮಾಡಿದ್ದೆ ಸಂಪ್ರದಾಯ ಎಂದು ನಾನು ತಿಳಿದಿದ್ದೇನೆ. ಪಂಪ, ಹರಿಹರ, ಕುಮಾರವ್ಯಾಸ, ಬಸವ, ಪುರಂದರದಾಸ, ರತ್ನಾಕರರು ನಮಗೆ ಈ ಹಾದಿಯನ್ನು ಹೇಳಿಕೊಟ್ಟದ್ದಾರೆ. ಶ್ರೀಕೃಷ್ಣನು 'ಭಗವದ್ಗೀತೆಯಲ್ಲಿ' ಈ ಹಾದಿ ತುಳಿದಿದ್ದಾನೆ. ಕಾಲಿದಾಸನು ತನ್ನ ಕಾವ್ಯ ನಾಟಕಗಳಲ್ಲಿ ಇದೇ ರೀತಿಯನ್ನು ಸಾರಿದ್ದಾನೆ. ಅಂಥವರು ಆಡಿದ ಒಂದೇ ಮಾತಿನಲ್ಲಿರುವ ಓಜಸ್ಸು ಜೊಳ್ಳುವಾದಿಗಳ ಇಡೀ ಕೃತಿಯಲ್ಲಿ ಸಿಗಲಾರದು. ಕೃಷ್ಣನು ಅರ್ಜುನನ ಹೇಡಿತನವನ್ನು ಹೊಡೆದುಹಾಕಲು 'ಅನಾರ್ಯಜುಷ್ಟಂ' ಎಂದಾಡಿದ ಒಂದು ಮಾತಿನಲ್ಲಿಯ ಸತ್ತ್ವವೆ ಕಾಲಿದಾಸನ ಶಕುಂತಲೆಯು ದುಷ್ಯಂತನನ್ನು ಧಿಕ್ಕರಿಸುವ 'ಅನಾರ್ಯ' ಎಂಬದರಲ್ಲಿದೆ. ಜ್ಞಾನಿಗಳ ನಿಗ್ರಹಿತ ಧಿಕ್ಕಾರದ ಶಬ್ದಸಂಗ್ರಹದಲ್ಲಿ ಈ ಶಬ್ದವು ವಜ್ರದಂತೆ ಹೊಳೆಯುವದು. ಇವರಷ್ಟು ಔಚಿತ್ಯದಿಂದ ಇನ್ನಾರೂ ಈ ಮಾತನ್ನು ಬಳಸಿಲ್ಲ. ಕನ್ನಡರ ಇತಿಹಾಸದ ಸತ್ತ್ವಸಾರವೆಲ್ಲ ಅವರ ಜೀವಾಳದಲ್ಲಿ ಜಾಗೃತವಾಗಿ ಬರಬಹುದಾದರೆ, ಸಂಪ್ರದಾಯ ಹೊಸ ರೀತಿಗಳ ಹುದಲಲ್ಲಿ ಅವರು ಸಿಕ್ಕುಬೀಳದೆ

ವಿಶ್ವವ್ಯಾಪಿಯಾದ ಜೀವನದ ಲಾಸ್ಯತಾಂಡವಗಳಿಗೆ ಅವರು ಹೆಜ್ಜೆಯಿಕ್ಕಬೇಕು. ಇದು ಕನ್ನಡದ ಕನ್ನಡತನವು. ಹಿಂಜರಿಯುವದು 'ಕನ್ನಡವಲ್ಲ'. ಅದು 'ಅನಾರ್ಯ' ಎನ್ನುವಂತೆ ನಮಗೆ ವಜ್ರಪ್ರಾಯವೆನಿಸಿದರೆ, ಕನ್ನಡದ ದಿವ್ಯ ವಸಂತೋತ್ಸವವು ಇಂದೇ ಬಂದಿದೆ ಎಂದು ನಾನು ತಿಳಿಯುತ್ತೇನೆ. ನಮ್ಮ ಜೀವನವು ಕನ್ನಡವಾದರೆ ಸಾಹಿತ್ಯವು ತಾನೇ ಅದರ ಕನ್ನಡಿಯಾಗುವದು.

---

# ಗಮಕಗೋಷ್ಠಿ

## ೧೯೩೮

---

## ಪ್ರಶಸ್ತಿ ಪ್ರದಾನೋತ್ಸವ

ಪರಿಷತ್ತು ಈ ವರ್ಷ, ಕಳೆದ ಬೇಸಗೆಯ ರಜಾಕಾಲದಲ್ಲಿ, ಏರ್ಪಡಿಸಿದ್ದ ಗಮಕಕಲಾ ಅಭ್ಯಾಸಗೋಷ್ಠಿಯ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ವಿದ್ಯಾರ್ಥಿಗಳಿಗೆ ಪ್ರಶಸ್ತಿಪತ್ರಿಕೆಗಳನ್ನು ಕೊಡುವುದಕ್ಕಾಗಿ ಇದೇ ೧೯೩೮ನೆಯ ಆಗಸ್ಟ್ ೫ನೆಯ ತಾರೀಖು ಶುಕ್ರವಾರ ಸಂಜೆ ೬ ಘಂಟೆಗೆ, ಪರಿಷನ್ಮಂದಿರದಲ್ಲಿ, ಕನ್ನಡದ ಅಭಿಮಾನಿಗಳ ಸಾರ್ವಜನಿಕ ಸಭೆ ಸೇರಿತ್ತು. ಬೆಂಗಳೂರು ಪೌರಸಭೆಯ ಅಧ್ಯಕ್ಷರಾದ ಶ್ರೀ॥ ಎನ್. ಬಾಲಕೃಷ್ಣಯ್ಯ, ಬಿ.ಎ., ಬಿ.ಎಲ್. ಅವರು ಸಭಾಧ್ಯಕ್ಷತೆ ವಹಿಸಿದ್ದರು. ಸಭಾಮಂಟಪ ಪರಿಷತ್ಸದಸ್ಯರಿಂದಲೂ ಇತರ ಮಹಾಜನರಿಂದಲೂ ಮಹಿಳೆಯರಿಂದಲೂ ವಿದ್ಯಾರ್ಥಿಗಳಿಂದಲೂ ತುಂಬಿತ್ತು.

ಗಮಕವಿದ್ಯಾರ್ಥಿನಿಯಾದ ಕುಮಾರಿ ಎಸ್. ಎನ್. ಸರೋಜಮ್ಮನವರು ಗೋಷ್ಠಿಯ ಪ್ರಾರ್ಥನೆ ಹಾಡಿದ ಬಳಿಕ ಪರಿಷತ್ತಿನ ಗೌರವ ಕಾರ್ಯದರ್ಶಿಯವರು ಈ ವರ್ಷದ ವರದಿಯನ್ನು ಓದಿದರು. (ಈ ವರದಿಯನ್ನು ಮುಂದೆ ಬೇರೆಯಾಗಿ ಕೊಟ್ಟಿದೆ.)

ತರುವಾಯ, ತೇರ್ಗಡೆ ಹೊಂದಿದ ಗಮಕ ವಿದ್ಯಾರ್ಥಿ ವಿದ್ಯಾರ್ಥಿನಿಯರು ಕಾವ್ಯವಾಚನಮಾಡಿ, ತಾವು ಕಲಿತ ವಿದ್ಯೆಯನ್ನು ಪ್ರದರ್ಶಿಸಿ ಸಭಿಕರನ್ನು ಆನಂದಗೊಳಿಸಿದರು. ಆಮೇಲೆ, ಗಮಕಶಿಕ್ಷಕರಾಗಿದ್ದ ಶ್ರೀ॥ ಕೃಷ್ಣಗಿರಿ ಕೃಷ್ಣರಾಯರು ಗದುಗಿನ ಭಾರತದಿಂದ ಒಂದು ಭಾಗವನ್ನು ಇಂಪಾಗಿ ಓದಿ ಎಲ್ಲರನ್ನೂ ಸಂತೋಷಪಡಿಸಿದರು.

ಬಳಿಕ ಉಪಾಧ್ಯಕ್ಷರಾದ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಸಭಾಧ್ಯಕ್ಷರಿಗೆ ಹಾರತುರಾಯಿಗಳನ್ನು ಅರ್ಪಿಸಿ, ಶ್ರೀ॥ ಕೃಷ್ಣರಾಯರಿಗೆ ಪರಿಷತ್ತಿನ ಕೃತಜ್ಞತಾ ಸೂಚಕವಾಗಿ ಫಲಪುಷ್ಪಗಳನ್ನು ಸಮರ್ಪಿಸಿದರು.

ಅನಂತರ ಸಭಾಧ್ಯಕ್ಷರಾದ ಶ್ರೀ॥ ಬಾಲಕೃಷ್ಣಯ್ಯನವರು ತೇರ್ಗಡೆ ಹೊಂದಿದ ವಿದ್ಯಾರ್ಥಿಗಳಿಗೆ ಸ್ವಹಸ್ತದಿಂದ ಪ್ರಶಸ್ತಿಪತ್ರಿಕೆಗಳನ್ನು ಕೊಟ್ಟು, ಗಮಕ ಕಲೆ

ಬಹಳ ಪುರಾತನವಾದುದೆಂದೂ, ಈಗ ಅದು ಮೂಲೆಗೆ ಬೀಳುತ್ತಿದೆಯೆಂದೂ ಹೇಳಿ, ಅದರಿಂದ ದೊಡ್ಡ ಸಾಹಿತ್ಯಸೇವೆ ಹಾಗೂ ಸಮಾಜಸೇವೆ ಆಗತಕ್ಕದ್ದಾಗಿರುವುದರಿಂದ ಅದರ ಪುನರುಜ್ಜೀವನಕ್ಕಾಗಿ ಮಹಾಜನರೂ ಸಾರ್ವಜನಿಕ ಸಂಸ್ಥೆಗಳೂ ಹೆಚ್ಚುಹೆಚ್ಚಾಗಿ ಪ್ರೋತ್ಸಾಹಕೊಡಬೇಕೆಂದು ಕೋರಿ, ಈ ಭಾಗದಲ್ಲಿ ಪರಿಷತ್ತು ಮಾಡುತ್ತಿರುವ ಕೆಲಸವನ್ನು ಕೊಂಡಾಡಿ ಭಾಷಣಮಾಡಿದರು. (ಈ ಭಾಷಣವನ್ನು ಮುಂದೆ ಬೇರೆಯಾಗಿ ಕೊಟ್ಟಿದೆ.)

ಕಡೆಯಲ್ಲಿ, ಉಪಾಧ್ಯಕ್ಷರಾದ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು—

"ನಾಡಿನ ಚೈತನ್ಯ ಚಿಗಿತುಕೊಳ್ಳುತ್ತಿದೆ, ಕನ್ನಡ ಭಾಷೆ ಸಾಹಿತ್ಯಗಳೂ ಬೆಳೆಯುತ್ತಿವೆ. ಇದರೊಡನೆ ಗಮಕಕಲೆಯೂ ತಲೆಯೆತ್ತುತ್ತಿದೆ. ಗಮಕಕಲೆಯಿಂದ ಎಂಥ ಅಮೂಲ್ಯವಾದ ಆನಂದ ದೊರೆಯುತ್ತದೆ ಎನ್ನುವುದು ಶ್ರೀ॥ ಕೃಷ್ಣರಾಯರ ಮತ್ತು ಅವರ ಶಿಷ್ಯರ ಇಂಪಾದ ಕಾವ್ಯವಾಚನದಿಂದ ಎಲ್ಲರಿಗೂ ಅನುಭವವಾಗಿದೆ. ಮುಖ್ಯವಾಗಿ ಹೆಣ್ಣುಮಕ್ಕಳು ಹೆಚ್ಚುಹೆಚ್ಚಾಗಿ ಬಂದು ಈ ಕಲೆಯನ್ನು ಕಲಿಯಬೇಕು: ಇದರಿಂದ ಮನೆಮನೆಯಲ್ಲಿಯೂ ಆನಂದ ಚಿಮ್ಮುತ್ತದೆ; ಹೆಂಗಸರಲ್ಲಿ ಕನ್ನಡ ಸಾಹಿತ್ಯದ ಪ್ರಚಾರವಾಗುತ್ತದೆ."

ಎಂಬುದಾಗಿ ಹೇಳಿ, ಪರಿಷತ್ತಿನ ಕೋರಿಕೆಯನ್ನು ಮನ್ನಿಸಿ ರಜಾ ತೆಗೆದುಕೊಂಡು ಮೈಸೂರಿನಿಂದ ಬಂದು ಇಲ್ಲಿ ನಿಂತು ಗಮಕಗೋಷ್ಠಿಯನ್ನು ನಡಸಿಕೊಟ್ಟ ಶ್ರೀ॥ ಕೃಷ್ಣರಾಯರಿಗೂ, ತಮ್ಮ ಹಲವು ಕೆಲಸಗಳ ನಡುವೆ ಬಿಡುವುಮಾಡಿಕೊಂಡು ದಯಮಾಡಿಸಿ ಸಭಾಧ್ಯಕ್ಷತೆ ವಹಿಸಿ ಉತ್ಸವಕಾರ್ಯಗಳನ್ನು ನಡಸಿಕೊಟ್ಟ ಶ್ರೀ॥ ಬಾಲಕೃಷ್ಣಯ್ಯನವರಿಗೂ ಪರಿಷತ್ತಿನ ಕೃತಜ್ಞತೆಯ ವಂದನೆಗಳನ್ನು ಸಮರ್ಪಿಸಿದರು.

ಮೈಸೂರು ಶ್ರೀಮನ್ಮಹಾರಾಜರವರ ಶ್ರೇಯಃಪ್ರಾರ್ಥನೆಯೊಡನೆ ಸಭೆ ಮುಗಿಯಿತು.

## ಶ್ರೀಮಾನ್ ಎನ್. ಬಾಲಕೃಷ್ಣಯ್ಯ, ಬಿ.ಎ., ಬಿ.ಎಲ್. ಅವರ ಅಧ್ಯಕ್ಷ ಭಾಷಣ

ಮಹಿಳೆಯರೆ ಮತ್ತು ಮಹಾಶಯರೆ,

ಕರ್ನಾಟಕ ಸಾಹಿತ್ಯ ಪರಿಷತ್ತಿನವರು ಪುರಾತನ ಕಲೆಯಾದ 'ಗಮಕ'ವನ್ನು ನಮ್ಮ ನಾಡಿನಲ್ಲಿ ಉದ್ಧರಿಸುವುದಕ್ಕಾಗಿ ಕಾವ್ಯಪಠನದ ಅಭ್ಯಾಸಗೋಷ್ಠಿಯನ್ನು ಕಳೆದ ಮೂರು ವರ್ಷಗಳಿಂದಲೂ ಏರ್ಪಡಿಸಿ, ಕನ್ನಡ ಭಾಷಾಭಿಮಾನಿಗಳೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಈ ವರ್ಷವೂ ಅದರಂತೆಯೇ ಶಿಕ್ಷಣಕೊಡಲು ಏರ್ಪಡಿಸಿ, ಪರೀಕ್ಷೆಗಳನ್ನು ನಡಸಿ, ಉತ್ತೀರ್ಣರಾದವರಿಗೆ ಪ್ರಶಸ್ತಿಪತ್ರಗಳನ್ನು ಕೊಡುವ ಮಹೋತ್ಸವಕ್ಕೆ ನನ್ನನ್ನು ಬರಮಾಡಿಕೊಂಡು ವಿಶೇಷವಾಗಿ ಗೌರವಿಸಿದ್ದಾರೆ. ಇದಕ್ಕಾಗಿ ಪರಿಷತ್ತಿನವರಿಗೆ ನಾನು ಬಹಳ ಋಣಿಯಾಗಿದ್ದೇನೆ.

ತಾವು ಈಗತಾನೆ ಈ ತರುಣ ಗಮಕಿಗಳ ಕಾವ್ಯವಾಚನವನ್ನು ಕೇಳಿ ಸಂತೋಷಪಟ್ಟಿದ್ದೀರಿ. ಕಾವ್ಯವನ್ನು ಓದುವವರು ಸಕ್ರಮವಾಗಿ ಓದಿದರೆ ಅದು ಕೇಳುವವರಿಗೆ ಎಷ್ಟು ಸುಲಭವಾಗಿ ಅರ್ಥವಾಗಿ ಆನಂದವು ಲಭಿಸುವುದೆಂಬುದನ್ನೂ, ಗಮಕಕಲೆ ಸಾಹಿತ್ಯಪ್ರಚಾರಕ್ಕೆ ಎಷ್ಟು ಸಹಾಯಮಾಡಬಲ್ಲದೆಂಬುದನ್ನೂ ಈಗತಾನೆ ಮನಗಂಡಿರುವಿರಿ. ಸಾಹಿತ್ಯವು ಜನಸಾಮಾನ್ಯದಲ್ಲಿ ಪ್ರಚಾರಕ್ಕೆ ಬರಲು ಗಮಕಿಗಳೇ ಮುಖ್ಯಸಾಧನಭೂತರು. ಕವಿಗೂ ಜನತೆಗೂ ಮಧ್ಯೆ ತಂತುಸ್ವರೂಪರಾಗಿರುವವರು ಗಮಕಿಗಳು. ಗಮಕಿಗಳನ್ನು ಭಾಷ್ಯಕಾರರ ಗುಂಪಿಗೆ ಸೇರಿಸಿದರೂ ತಪ್ಪಲ್ಲ. ಹಾಗೆ ನೋಡುವುದಕ್ಕೆ ಹೋದರೆ ಭಾಷ್ಯಕಾರರ ಕೆಲಸಕ್ಕಿಂತಲೂ ಗಮಕಿಗಳ ಶಕ್ತಿಯೇ ಹೆಚ್ಚೆನ್ನಬಹುದು. ಭಾಷ್ಯಕಾರರು ಕಾವ್ಯವನ್ನು ವಿಮರ್ಶಿಸಿ, ಕವಿಹೃದಯವನ್ನು ಬಿಚ್ಚಿ ತೋರಿಸುತ್ತಾರೆ. ಗಮಕಿಗಳಾದರೋ ಹೊಸಪದಗಳ ಪ್ರಯೋಗದ ಸಹಾಯವನ್ನು ಪಡೆಯದೆ ಕೇವಲ ಪಠನಮಾತ್ರದಿಂದ ಕವಿಹೃದಯವನ್ನು ಬಿಚ್ಚಿ ತೋರಬೇಕಾಗಿದೆ. ಇವರಿಗೆ ಇರುವುದು ಅಲ್ಪಾವಕಾಶ. ಓದುವುದಕ್ಕೆ—ರಾಗವಾಗಿಯೇ ಹೌದು—ಎಷ್ಟು ಕಾಲ ಹಿಡಿಯುತ್ತದೆಯೋ ಅಷ್ಟೇ ಅಲ್ಪಕಾಲದಲ್ಲಿ, ಕಿಂಚಿತ್ತಾದರೂ ಇತರ ಪದಗಳ ಸಹಾಯವಿಲ್ಲದೆಯೇ, ಕವಿಯ ಆಶಯವನ್ನು ಕೇಳುವವರಿಗೆ ತಿಳಿಯಪಡಿಸಿ ಅವರು ಆನಂದದಲ್ಲಿ ಮೈಮರೆಯುವಂತೆ ಮಾಡುತ್ತಾರೆ. ಆದುದರಿಂದಲೇ ಗಮಕಿಗಳು ಭಾಷ್ಯಕಾರರಿಗಿಂತಲೂ ಹೆಚ್ಚು ಪ್ರಶಂಸಾರ್ಹರೆಂದು ನಾನು ಹೇಳಬಯಸುವುದು.

ಸಾಹಿತ್ಯಪ್ರಪಂಚದಲ್ಲಿ ಗಮಕಿಗಳಿಗೆ ಇಂತಹ ಪ್ರಮುಖಸ್ಥಾನವಿರುವ ಕಾರಣದಿಂದಲೇ ನಮ್ಮ ಪೂರ್ವಿಕರು ಗಮಕಿಗಳನ್ನು ಪಂಡಿತರ ಗುಂಪಿಗೆ ಸೇರಿಸಿರುವುದು. ಕವಿಗಳಿಗೆ ಎಂತಹ ಸ್ಥಾನಮಾನಗಳಿದ್ದುವೋ ಗಮಕಿಗಳಿಗೂ ಅಂತಹ ಸ್ಥಾನಮಾನಗಳೇ ಇದ್ದುವು. ಗಮಕಿಗಳು ಕವಿಗಳಂತೆಯೇ ರಾಜಸಭೆಗಳಲ್ಲಿ ಸನ್ಮಾನಿತರಾಗಿದ್ದರು. ಎಂದಮೇಲೆ ಗಮಕಕಲೆ ನೆನ್ನೆಮೊನ್ನೆಯದಲ್ಲವೆಂಬುದು ಸ್ಪಷ್ಟವಾಗುತ್ತದೆ. ಕವಿತೆ ಎಷ್ಟು ಪುರಾತನವಾದುದೋ ಗಮಕಕಲೆಯೂ ಅಷ್ಟೇ ಹಳೆಯದು. ೬೪ ಕಲೆಗಳಲ್ಲಿ ಗಮಕಕಲೆಯೂ ಒಂದೆಂದು ಪರಿಗಣಿತವಾಗಿದೆ. ನಮ್ಮ ಆದಿಕಾವ್ಯವೆನಿಸಿದ 'ವಾಲ್ಮೀಕಿ ರಾಮಾಯಣ'ದಲ್ಲಿ ಗಮಕಕಲೆಯ ಪ್ರಾಶಸ್ತ್ಯ ಹೇಳಲ್ಪಟ್ಟಿದೆ. ಲವಕುಶರ ಗಾಯನಪ್ರವೀಣತೆಯು ಉಲ್ಲೇಖಿತವಾಗಿದೆ. ಹಿಂದಿನ ರಾಜರ ಆಸ್ಥಾನಗಳಲ್ಲಿ ಗಮಕಿಗಳು ಇದ್ದುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ.

ಈ ಗಮಕಕಲೆ ಹಿಂದಿನಿಂದಲೂ ನಮ್ಮಲ್ಲಿ ಸಂತತವಾಗಿ ಬೆಳೆದುಬಂದಿದೆ. ಹಾಗೇನಾದರೂ ಅದು ಕಣ್ಮರೆಯಾಗಿದ್ದರೆ ಈ ಕಾಲದಲ್ಲಿ ಮಾತ್ರ; ಅದೂ ಈ ಒಂದು ತಲೆಮೊರೆಯಿಂದ ಈಚೆಗೆ; ಈಗಿನ ವಿದ್ಯಾಭ್ಯಾಸಕ್ರಮವು ಏರ್ಪಟ್ಟಮೇಲೆ.

ಈಗ್ಗೆ ಸುಮಾರು ಮೂವತ್ತು ನಲವತ್ತು ವರ್ಷಗಳ ಹಿಂದೆ ಯಾವ ಹಳ್ಳಿಗೆ ಹೋದರೂ ಒಬ್ಬ ಗಮಕಿಯನ್ನು ಕಾಣಬಹುದಾಗಿದ್ದಿತು. 'ಜೈಮಿನಿ'ಯನ್ನು ಓದದ ಹಳ್ಳಿಯಿರಲಿಲ್ಲ. ಓದುಬರಹ ಬಲ್ಲವನೊಬ್ಬನು ಹಳ್ಳಿಯಲ್ಲಿ ಇದ್ದನೆಂದರಾಯ್ತು.

ಅವನ ಬಳಿ ಖಂಡಿತವಾಗಿ 'ಜೈಮಿನಿ'ಯನ್ನು ನೋಡಬಹುದಾಗಿದ್ದಿತು. ಸಾಮಾನ್ಯವಾಗಿ 'ಜೈಮಿನಿ'ಯನ್ನು ಧಾಟಿಯಿಂದ ಓದುವುದಕ್ಕೆ ಬಂದಲ್ಲದೆ ಆಗಿನ ವಿದ್ಯಾಭ್ಯಾಸವು ಪೂರೈಸುವಂತಿರಲಿಲ್ಲ. ಆಗಿನವರಿಗೆ ಅದೇ ಪಂಡಿತ ಪರೀಕ್ಷೆಯಾಗಿದ್ದಿತೆಂದರೂ ಅತಿಶಯೋಕ್ತಿಯಲ್ಲ. ಆ ಕಾಲದಲ್ಲಿ ಮಠಗಳೇ ವಿದ್ಯಾಪೀಠಗಳು. ಅಲ್ಲಿನ ವಿದ್ಯಾಭ್ಯಾಸ ಕ್ರಮವೆಲ್ಲವೂ ಬಾಯಿಪಾಠವಾಗಿದ್ದುದೇ ಹೆಚ್ಚು. ಓದಿ ಬರೆಯುವುದಕ್ಕೆ ಮೊದಲೇ ಎಷ್ಟೋ ಪದ್ಯಗಳು ಬಾಯಿಗೆ ಬರುತ್ತಿದ್ದವು. 'ಅಮರ'ವನ್ನು ಬಾಯಿಪಾಠ ಮಾಡಿಸುತ್ತಿದ್ದುದು ಎಲ್ಲರಿಗೂ ಗೊತ್ತಿರುವ ಸಂಗತಿ. ಓದುವುದಕ್ಕೆ ಬಂದೊಡನೆಯೇ ಕೈಗೆ 'ಗೋವಿನ ಕಥೆ' ಬರುತ್ತಿದ್ದಿತು. ಇದು ಮುಗಿದನಂತರ 'ಹರಿಭಕ್ತಿಸಾರ'; ಆಮೇಲೆ 'ಯಕ್ಷಗಾನ ನಳಚರಿತ್ರೆ', 'ಹರಿಶ್ಚಂದ್ರಕಾವ್ಯ,' ಇತ್ಯಾದಿ; ಕೊನೆಗೆ 'ಜೈಮಿನಿಭಾರತ'. ಹೀಗೆ, ಈಗ್ಗೆ ಒಂದು ತಲೆಯ ಹಿಂದೆಯೂ ಸಹ ಗಮಕಕಲೆಗೆ ನಮ್ಮಲ್ಲಿ ಗಣ್ಯವಾದ ಸ್ಥಾನವಿದ್ದಿತು. ಪಾಶ್ಚಿಮಾತ್ಯಶಿಕ್ಷಣದ ಪ್ರಭಾವದಿಂದ ಗಮಕಕಲೆ ಕ್ರಮಕ್ರಮವಾಗಿ ಮೂಲೆಗೆ ಬಿದ್ದಿತು. ನಮ್ಮ ನಾಡಿನ ಮಾತೃಭಾಷೆಯಾದ ಕನ್ನಡಕ್ಕೇ ಎಲ್ಲಿ ಸಂಚಕಾರ ಬರುತ್ತದೆಯೋ ಎಂಬ ಶಂಕೆ ಉಂಟಾಗಿದ್ದಾಗ ಇನ್ನು ಗಮಕಕಲೆಯ ಮಾತೇನು? ಆದುದರಿಂದಲೇ ಕರ್ನಾಟಕ ಸಾಹಿತ್ಯ ಪರಿಷತ್ತು ಈ ಕಲೆಯ ಪುನರುಜ್ಜೀವನಕ್ಕಾಗಿ ಅಪಾರ ಪ್ರಯತ್ನಗಳನ್ನು ಮಾಡುತ್ತಿರುವುದು.

ನಾನು ಇದೇ ಸಂದರ್ಭದಲ್ಲಿ ಶೋಚನೀಯವಾದ ಒಂದು ಸಂಗತಿಯನ್ನು ಕುರಿತು ಹೇಳಬೇಕಾಗಿದೆ; ಅದು ನಮ್ಮ ಸಹೋದರಿಯರನ್ನು ಕುರಿತು. ಈಗ ನಮ್ಮ ಸ್ತ್ರೀಯರು ಹಿಂದಿನವರಂತೆ ಹಾಡುಗಳಲ್ಲಿ ಸಾಕಾದಷ್ಟು ಆಸಕ್ತಿ ತೋರುತ್ತಿಲ್ಲ. ಈಗಿನ ಕಾಲದಲ್ಲಿ ಹಬ್ಬ ಹುಣ್ಣಿಮೆಗಳಲ್ಲಿಯೂ, ಮದುವೆ ಮುಂಜಿಗಳಲ್ಲಿಯೂ ಹಿಂದಿನಂತೆ ಹಾಡುಗಳನ್ನು ಕೇಳುವ ಸುಯೋಗವಿಲ್ಲ. ಮದುವೆಕಾಲದಲ್ಲಿ ನಾವು ಕೇಳಿಕೇಳಿ, ನಕ್ಕುನಕ್ಕು, ಹೊಟ್ಟೆ ಹುಣ್ಣುಹುಣ್ಣು ಮಾಡಿಕೊಳ್ಳುತಿದ್ದ 'ಬೀಗರ ಹಾಡು'ಗಳು ಮರೆಯಾಗಿವೆ. ಹಿಂದೆ ನಾವು ಮಧ್ಯಾಹ್ನಕಾಲಗಳಲ್ಲಿ ಹತ್ತಿಪ್ಪತ್ತು ಮನೆಗಳಲ್ಲಿಯಾದರೂ 'ಸಾವಿತ್ರಿ ಹಾಡು', 'ಐರಾವತ ಉದ್ದಾಳಿಕನ ಹಾಡು' ಮುಂತಾದುವುಗಳನ್ನು ಕೇಳಬಹುದಾಗಿದ್ದಿತು. ಸಂಧ್ಯಾಕಾಲಗಳಲ್ಲಿ ಮನೆಮನೆಗಳಲ್ಲಿಯೂ ಹೆಣ್ಣುಮಕ್ಕಳು ಹಾಡುಹೇಳುತ್ತಿದ್ದುದನ್ನು ಕೇಳಬಹುದಾಗಿದ್ದಿತು. ಈಗ ಅವುಗಳೆಲ್ಲವೂ ಹಿಂದಿನ ಕಾಲದ ಮಾತಾಗಿದೆ.

ಸ್ತ್ರೀವರ್ಗದಲ್ಲಿ ಹಾಡುಗಬ್ಬಗಳು ಮರೆಯಾಗಲು ಸಾಧಾರಣವಾಗಿ ಹಾರ್ಮೋನಿಯಂ ಬಳಕೆಗೆ ಬಂದುದೇ ಕಾರಣವೆನ್ನಬಹುದು. ಇದರ ಸಹಾಯದಿಂದ ಸಂಗೀತವನ್ನು ಅಭ್ಯಾಸಮಾಡುತ್ತೇವೆಂದು 'ಸಾ— ಪಾ— ಸಾ' ಹೇಳಿ, ಇತ್ತ ಸಂಗೀತದಲ್ಲಿಯೂ ಪ್ರವೀಣತೆ ಹೊಂದದೆ ಅತ್ತ ಹಾಡುಗಳನ್ನು ಪಾಠಮಾಡುವುದನ್ನೂ ಬಿಟ್ಟರು. ಈ ಹಾರ್ಮೋನಿಯಂ ಜೊತೆಗೆ ಸುಲಭಬೆಲೆಯ ಗ್ರಾಮೊಫೋನ್ ಯಂತ್ರಗಳು ಬಂದುದಂತೂ ಹೆಂಗಸರ ಹಾಡುವ ಸಂಪ್ರದಾಯಕ್ಕೆ ಬಹಳ

ಕುಂದನ್ನುಂಟುಮಾಡಿತು. ಪ್ರಾಯಶಃ ನನ್ನ ಈ ಊಹೆ ತಪ್ಪಾಗಿರಬಹುದು. ಆದರೆ ಫಲಿತಾಂಶದಲ್ಲಿ ಬಹ್ವಂಶವಾಗಿ ಇದು ನಿಜ.

ಅಂತೂ ಗಮಕಕಲೆಯೂ ಹಾಡುಗಳನ್ನು ಹೇಳುವ ಕಲೆಯೂ ಹಿಂದಕ್ಕೆ ಬಿದ್ದಿವೆ. ಇದು ನಿಜವಾಗಿಯೂ ಕನ್ನಡಿಗರು ವಿಷಾದಿಸಬೇಕಾದ ವಿಷಯ. ಈಗ ಮತ್ತೆ ಈ ಕಲೆಗಳನ್ನು ಪುನರುಜ್ಜೀವನಗೊಳಿಸಲು ಪರಿಷತ್ತಿನವರೇನೋ ಶ್ರಮ ತೆಗೆದುಕೊಳ್ಳುತ್ತಿದ್ದಾರೆ, ನಿಜ; ಆದರೆ ಇಷ್ಟೇ ಸಾಲದು.

ಇದರ ಜೊತೆಗೆ ನಮ್ಮ ವಿದ್ಯಾಭ್ಯಾಸದ ಇಲಾಖೆಯವರು ನೆರವಿಗೆ ಬರಬೇಕು. ಟ್ರೈನಿಂಗ್ ಸ್ಕೂಲುಗಳಲ್ಲಿ ಗಮಕಕಲೆಯನ್ನು ಪ್ರಧಾನ ವಿಷಯವನ್ನಾಗಲ್ಲ ದಿದ್ದರೂ ಐಚ್ಛಿಕ ವಿಷಯವನ್ನಾಗಿ ಏರ್ಪಡಿಸಿ, ಅದನ್ನು ಕಲಿಯಲು ಪ್ರೇರೇಪಣೆ ಮಾಡಬೇಕು. ಉಪಾಧ್ಯಾಯರು ಕಾವ್ಯಗಳನ್ನು ಅರ್ಥವಾಗುವಂತೆ ಸುಶ್ರಾವ್ಯವಾಗಿ ಓದಿದಲ್ಲಿ ಕೇಳುವ ಹುಡುಗರಿಗೆ ಸುಲಭವಾಗಿ ತಿಳಿಯುವುದು. ಅವರು ಕಾವ್ಯಪಾಠ ಕ್ರಮದಲ್ಲಿ ಹುಡುಗರ ಮನಸ್ಸಿಗೆ ಅರ್ಥಮಾಡಿಕೊಡಲು ಈಗಿನಂತೆ ಕಷ್ಟಪಡ ಬೇಕಾದುದು ತಪ್ಪುವುದು. ಹುಡುಗರಲ್ಲಿಯೂ ಕಾವ್ಯವಾಚನಾಭಿರುಚಿ ಹೆಚ್ಚು ವುದು. ಗ್ರಾಮಾಂತರಗಳಲ್ಲಿ ಉಪಾಧ್ಯಾಯರು ಉದ್ಗ್ರಂಥಗಳನ್ನು ರಾತ್ರಿಯವೇಳೆ ಓದುತ್ತಾಬಂದಲ್ಲಿ ಸಾಹಿತ್ಯ ಪ್ರಚಾರವಾಗಲು ಬಹು ಮಟ್ಟಿಗೆ ಸಹಾಯಕಾರಿ ಯಾಗುವುದು. ಕನ್ನಡ ಭಾಷಾಭಿಮಾನಿಗಳ ಸಂಖ್ಯೆಯೂ ಹೆಚ್ಚುವುದು.

ಈ ಭಾಗದಲ್ಲಿ ನಮ್ಮ ಸ್ಥಳೀಯ ಸಂಸ್ಥೆಗಳವರು ಮಾಡಬೇಕಾದ ಕಾರ್ಯ ಗಳು ಒಂದೆರಡು ಇವೆ. ಪೌರಸಭೆಗಳು, ಜಿಲ್ಲಾ ಬೋರ್ಡು ಮತ್ತು ತಾಲ್ಲೂಕು ಬೋರ್ಡುಗಳು ಗಮಕಕಲೆ ಮತ್ತು ಜನಪದಸಾಹಿತ್ಯಗಳ ಪುನರುಜ್ಜೀವನಕ್ಕೆ ಪ್ರೋತ್ಸಾಹ ಕೊಡಬೇಕಾಗಿದೆ. ಈ ಸಂದರ್ಭದಲ್ಲಿ ಗಮಕಗೋಷ್ಠಿಯ ಗೌರವ ಕಾರ್ಯದರ್ಶಿಯವರು ಈಗತಾನೇ ಓದಿದ ವರದಿಯಲ್ಲಿ ಸೂಚಿಸಿರುವ ಒಂದು ಅಂಶ ವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ. ಈ ಗೋಷ್ಠಿಯ ಕಾರ್ಯಗಳು ಸಾಂಗವಾಗಿ ನೆರವೇರಬೇಕಾದರೆ ಕನಿಷ್ಠ ಪಕ್ಷ ೬ ಸಾವಿರ ರೂಪಾಯಿಯ ಮೂಲನಿಧಿ ಇರಬೇಕೆಂದು ಅವರು ಸೂಚಿಸುತ್ತಾರೆ. ಈ ನಗರದ ಸ್ಥಳೀಯ ಸಂಸ್ಥೆಗಳೂ ಉದಾರಿಗಳಾದ ಮಹನೀಯರೂ ಈ ಭಾಗದಲ್ಲಿ ಪ್ರೋತ್ಸಾಹ ಕೊಡಲು ಮುಂದೆ ಬಂದದ್ದೇ ಆದರೆ ಇಷ್ಟು ಹಣವನ್ನು ಶೇಖರಿಸುವುದು ಏನೂ ಕಷ್ಟದ ಕೆಲಸವಾಗಲಾರದೆಂದು ನನ್ನ ಅಭಿಪ್ರಾಯ.

ಈ ಸಂದರ್ಭದಲ್ಲಿ ಬೆಂಗಳೂರು ಪೌರಸಭೆಯವರು ಪ್ರಾಥಮಿಕ ವಿದ್ಯಾಭ್ಯಾಸ ದಲ್ಲಿ ಉದ್ಯುಕ್ತರಾದ ಉಪಾಧ್ಯಾಯರಿಗೆ ಸಕ್ರಮವಾದ ಕಾವ್ಯಪಠನದಲ್ಲಿ ಶಿಕ್ಷಣ ಕೊಡಿಸಬೇಕೆಂಬ ಉದ್ದೇಶದಿಂದ ೫೦ ರೂಪಾಯಿಗಳ ವೆಚ್ಚವನ್ನು ನಿರ್ಧರಿಸಿ, ಸುಮಾರು ೪ ತಿಂಗಳಕಾಲ ೧೨ರಿಂದ ೧೫ ಮಂದಿ ಉಪಾಧ್ಯಾಯರನ್ನು ತರಪೇತು ಮಾಡಲು ಮ॥ ರಾ॥ ರಾಘವೇಂದ್ರರಾಯರನ್ನು ನೇಮಿಸಿ, ತಾ॥ ೪–೬–೧೯೩೮ರಲ್ಲಿ ಠರಾವು ಮಾಡಿದರು. ಸರ್ಕಾರದವರು ತಾ॥ ೩–೮–೧೯೩೮ರಲ್ಲಿ ಇದನ್ನು ಮಂಜೂರು

ಮಾಡಿರುತ್ತಾರೆ. ಈ ಅಂಶ ನಿಮ್ಮೆಲ್ಲರಿಗೂ ಸಂತೋಷವನ್ನುಂಟುಮಾಡ ಬಹುದೆಂದು ತಿಳಿಯುತ್ತೇನೆ.

ಕೊನೆಯಲ್ಲಿ, ಈ ಸಲ ಗಮಕಕಲಾಪರೀಕ್ಷೆಗಳಲ್ಲಿ ಉತ್ತೀರ್ಣರಾದವರು ತಾವೀಗ ಕಲಿತಿರುವ ವಿದ್ಯೆಯನ್ನು ಹೆಚ್ಚಿಸಿಕೊಳ್ಳುವುದೇ ಅಲ್ಲದೆ ಇತರರನ್ನು ಗಮಕ ಕಲಾಭಿಮಾನಿಗಳನ್ನಾಗಿ ಮಾಡಬೇಕೆಂದು ಕೋರುತ್ತೇನೆ. ಅವರು ಗ್ರಾಮಾಂತರ ನಿವಾಸಿಗಳಿಗೆ ನಮ್ಮ ಗ್ರಂಥಗಳ ಪರಿಚಯ ಮಾಡಿಸಿಕೊಡಬೇಕು. ಇವರು ರಸಕ್ಕೆ ತಕ್ಕ ಹಾಗೆ, ಭಾವಕ್ಕೆ ಅನುಗುಣವಾಗಿ, ಕಾಲಕ್ಕೆ ತಕ್ಕಂತೆ ಧ್ವನಿ ರಾಗಗಳನ್ನು ಬದಲಾಯಿಸಿಕೊಂಡು, ಕವಿಯ ಆಶಯ ಹಿಡಿದು, ತಮ್ಮ ರಸಾನುಭವ ಕೇಳುವವ ರಿಗೂ ಉಂಟಾಗುವಂತೆ ಕಾವ್ಯಪಠನಮಾಡಿ ಹೊಗಳಿಸಿಕೊಳ್ಳಬೇಕು. ಇಲ್ಲದಿದ್ದರೆ 'ದಶರಾಮ ಶರಾಃ ಪೇತುಃ' ಎಂಬುದನ್ನು 'ದಶರಾ ಮಶರಾಃ ಪೇತುಃ' ಎಂದು ಪಠಿಸಿದ್ದೇ ಆದರೆ ಅರ್ಥವಿಲ್ಲದ ಪದಗಳಾಗಬಹುದು. ಅಥವಾ 'ಚಂದನಮಂ ಕೊಯ್ದೊಯ್ದು ಬಸದಿಯೊಳ್ ತುಂಬಿಟ್ಟರ್' ಎಂಬುದರಲ್ಲಿ 'ಚಂ' ಎಂಬುದನ್ನು ಹಿಂದಿನ ಪಾದಕ್ಕೇ ಸೇರಿಸಿಕೊಂಡು ಓದಿ ನಿಲ್ಲಿಸಿ, 'ದನಮಂ ಕೊಯ್ದೊಯ್ದು ಬಸದಿಯೊಳ್ ತುಂಬಿಟ್ಟರ್' ಎಂದು ಓದಿಹೇಳಿದರೆ, ಅಹಿಂಸಾ ಧರ್ಮವೇ ಪರಮಧರ್ಮವನ್ನಾಗುಳ್ಳ ಜೈನರ ಬಸದಿಯನ್ನು ಅಲ್ಲಗಳೆದಂತೆ ವಿಪರೀತಾರ್ಥ ವಾಗಬಹುದು. ಈ ವಿಷಯವು ಇವರೆಲ್ಲರಿಗೂ ಈಗಾಗಲೇ ಚೆನ್ನಾಗಿ ತಿಳಿದಿರ ಬೇಕೆಂದು ನಂಬುತ್ತೇನೆ.

ಇನ್ನು ನಮ್ಮ ಸಹೋದರಿಯರಿಗೆ ಒಂದು ಪ್ರಾರ್ಥನೆ: ಅವರು ಹಾಡುಗಬ್ಬ ಗಳನ್ನು ಹಾಡುವುದನ್ನು ಬಿಡಬಾರದು. ಹೆಣ್ಣುಮಕ್ಕಳಿಗೆ ಹಾಡುಗಳನ್ನು ಹೇಳಿಕೊಡ ಬೇಕು. ಇದರಿಂದ ಮಕ್ಕಳ ಜ್ಞಾಪಕಶಕ್ತಿ ವೃದ್ಧಿಯಾಗುವುದು. ಅದರಲ್ಲಿಯೂ ಸೊಗಸಾದ ಶಾರೀರವಿರುವ ಹೆಣ್ಣುಮಕ್ಕಳು ಹಾಡುಗಳನ್ನು ಹಾಡುತ್ತಿದ್ದರೆ ಕೆಲಸ ದಿಂದ ಬೇಜಾರಾದ ಮನಸ್ಸಿಗೆ ಅತ್ಯಂತ ಆನಂದವಾಗುವುದು.

ಅಂತು, ಈ ಕಲೆ ದಿನ ದಿನಕ್ಕೆ ಮಹಾಜನರಿಂದ ಹೆಚ್ಚು ಹೆಚ್ಚಾಗಿ ಪ್ರೋತ್ಸಾಹಿತವಾಗಿ ಬೆಳೆದುಬರಲೆಂದು ನಾನು ಹಾರೈಸುತ್ತೇನೆ.

## ಗಮಕಗೋಷ್ಠಿಯ ವರದಿ

ಮಾನ್ಯರಾದ ಅಧ್ಯಕ್ಷರೇ, ಮಹಿಳೆಯರೇ ಮತ್ತು ಮಹಾಶಯರೇ,

ಕಲಾಭಿಮಾನಿಗಳಾದ ತಮ್ಮೆಲ್ಲರಿಗೂ ಪರಿಷತ್ತಿನ ಪರವಾಗಿ ಸ್ವಾಗತವನ್ನು ಬಯಸಿ, ಈ ವರದಿಯನ್ನು ಒಪ್ಪಿಸಲು ಹರ್ಷಿಸುತ್ತೇನೆ.

ಕಳೆದ ಮೂರು ವರ್ಷಗಳಂತೆ ಈ ವರ್ಷವೂ ಬೇಸಗೆಯ ರಜಾಕಾಲದಲ್ಲಿ ಗಮಕ ಗೋಷ್ಠಿಯನ್ನು ಏರ್ಪಡಿಸತಕ್ಕದ್ದೆಂದು ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ (ತಾ॥ ೨೧-೧-೧೯೩೮ರಲ್ಲಿ) ನಿಶ್ಚಯಿಸಿತು. ಅದೇ ಮೇರೆಗೆ, ಗೋಷ್ಠಿಯ ಉದ್ದೇಶ ನಿಯಮಗಳನ್ನೊಳಗೊಂಡ ಪ್ರಸಿದ್ಧಪತ್ರಿಕೆಯನ್ನು ಅಚ್ಚುಮಾಡಿಸಿ (ತಾ॥ ೨೫-೩-೧೯೩೮ರಲ್ಲಿ) ಪ್ರಕಟಮಾಡಲಾಯಿತು.

ಪರಿಷತ್ತಿನ ಪ್ರಾರ್ಥನೆಯನ್ನು ಲಾಲಿಸಿ, ಮೈಸೂರು ಮಹಾರಾಜರವರ ಕಾಲೇಜಿನಲ್ಲಿ ಲೈಬ್ರೇರಿಯನ್ನರಾಗಿರುವ, ಸುಪ್ರಸಿದ್ಧ ಗಮಕಿಗಳಾದ ಶ್ರೀಮಾನ್ ಕೆ. ಕೃಷ್ಣರಾಯರು ಗೋಷ್ಠಿಯ ಶಿಕ್ಷಕರಾಗಿರಲು ದಯವಿಟ್ಟು ಒಪ್ಪಿಕೊಂಡರು.

ಪರಿಷತ್ತಿನ ಕೋರಿಕೆಗೆ ಉತ್ತರವಾಗಿ, ೧೪ ಮಂದಿ ಗಂಡಸರು, ೭ ಮಂದಿ ಹೆಣ್ಣು ಮಕ್ಕಳು ಈ ರೀತಿ ಒಟ್ಟು ೨೧ ಮಂದಿ ಅಪೇಕ್ಷಾಪತ್ರಗಳನ್ನು ಕಳುಹಿಸಿದ್ದರು. ಒಬ್ಬರು ವಿದ್ಯಾರ್ಥಿ ಗೋಷ್ಠಿಗೆ ಹಾಜರಾಗಲಿಲ್ಲ. ಗಮಕಶಿಕ್ಷಕರು ಉಳಿದ ೨೦ ಮಂದಿಯನ್ನೂ ಪ್ರತ್ಯೇಕವಾಗಿ ಪರೀಕ್ಷೆಮಾಡಿ ಗೋಷ್ಠಿಗೆ ಸೇರಲು ಅರ್ಹರೆಂದು ಶಿಫಾರಸುಮಾಡಿದ ಮೇರೆಗೆ ಅವರೆಲ್ಲರನ್ನೂ ಗೋಷ್ಠಿಗೆ ಸೇರಿಸಿಕೊಳ್ಳಲಾಯಿತು.

ಹಿಂದಿನ ವರ್ಷಗಳಲ್ಲಿ ಗೊತ್ತುಮಾಡಿದ್ದ ಕಾವ್ಯಭಾಗಗಳನ್ನೇ ಈ ವರ್ಷವೂ ಅಭ್ಯಾಸಕ್ಕಾಗಿ ಇಟ್ಟುಕೊಂಡು, ಹಿಂದಿನ ವರ್ಷಗಳ ಕ್ರಮದಲ್ಲಿಯೇ ತರಗತಿಗಳನ್ನು ನಡಸತಕ್ಕದ್ದೆಂದು ನಿಶ್ಚಯವಾಯಿತು.

ಗಮಕಗೋಷ್ಠಿ ತಾ॥ ೧೪–೪–೧೯೩೮ನೆಯ ಗುರುವಾರ ಬೆಳಗ್ಗೆ ೮ ಘಂಟೆಗೆ ಗದುಗಿನ ಶ್ರೀ ವೀರನಾರಾಯಣ ಸ್ವಾಮಿಯ ಪಟದ ಪೂಜೆಯೊಡನೆ ಮೊದಲಾಯಿತು. ಉಪಾಧ್ಯಕ್ಷರಾದ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಶ್ರೀ॥ ಕೃಷ್ಣರಾಯರಿಗೂ ವಿದ್ಯಾರ್ಥಿಗಳಿಗೂ ಸ್ವಾಗತ ಬಯಸಿ, ಹಿಂದಿನ ವರ್ಷಗಳಲ್ಲಿ ಶಿಕ್ಷಕರಾಗಿದ್ದ ಶ್ರೀ॥ ಎಸ್. ಜಿ. ಬಿಂದೂರಾಯರ ಉಪಕಾರವನ್ನು ಸ್ಮರಿಸಿ, ವಿದ್ಯಾರ್ಥಿಗಳಿಗೆ ಕೆಲವು ಬುದ್ಧಿವಾದಗಳನ್ನು ಹೇಳಿ, ತರಗತಿಯನ್ನು ತೆರೆದರು; ತಾ॥ ೧೪–೬–೧೯೩೮ನೆಯ ಶನಿವಾರ ಪೂರ್ತ, ೨ ತಿಂಗಳಕಾಲ, ಸಂತತವಾಗಿ ಪಾಠ ನಡೆಯಿತು.

ತರಗತಿಗಳು ಸಾಮಾನ್ಯವಾಗಿ ಪ್ರತಿದಿನವೂ ಬೆಳಗ್ಗೆ ೮ ಘಂಟೆಯಿಂದ ೧೧ ಘಂಟೆಯ ವರೆಗೆ ನಡೆಯುತ್ತಿದ್ದುವು. ವಿದ್ಯಾರ್ಥಿನಿಯರೆಲ್ಲರೂ ಅಪೇಕ್ಷೆಪಟ್ಟ ಮೇರೆಗೆ ಅವರಿಗೇ ಪ್ರತ್ಯೇಕವಾಗಿ ಬೆಳಗ್ಗೆ ೮ರಿಂದ ೯-೩೦ರವರೆಗೂ, ವಿದ್ಯಾರ್ಥಿಗಳಿಗೆ ೯-೩೦ರಿಂದ ೧೧ರ ವರೆಗೂ—ಹೀಗೆ ಎರಡು ತರಗತಿಗಳು ಸೇರುತ್ತಿದ್ದುವು. ವಿದ್ಯಾರ್ಥಿ ವಿದ್ಯಾರ್ಥಿನಿಯರೆಲ್ಲರೂ ಸೇರಿ ಸರಾಸರಿ ೧೦ ಮಂದಿ ಪ್ರತಿ ದಿನವೂ ಹಾಜರಿರುತ್ತಿದ್ದರು.

ಈ ವರ್ಷ ಈ ಕೆಳಗೆ ಕಂಡ ಕಾವ್ಯಭಾಗಗಳ ಅಭ್ಯಾಸವಾಗಿದೆ:—

೧. ಕುಮಾರವ್ಯಾಸ ಭಾರತ

| | |
|---|---|
| ಪೀಠಿಕಾ ಸಂಧಿ: ಪದ್ಯಗಳು | ೧, ೧೭, ೧೯ = ೩ |
| ಉದ್ಯೋಗಪರ್ವ, ಸಂಧಿ ೧೧: ಪದ್ಯಗಳು | ೧ ರಿಂದ ೨೧ = ೨೧ |
| ಕೊನೆಯ ಸಂಧಿ: ('ರಾಮ ಮಂಗಳನಾಮ'....) | ೧ |
| ಒಟ್ಟು .. | ೨೫ |

೨. ಜೈಮಿನಿ ಭಾರತ

| | |
|---|---|
| ಪೀಠಿಕಾ ಸಂಧಿ: (ಮಂಗಳಾಚರಣ) ಪದ್ಯ | ೧ |
| ೧೯ನೆಯ ಸಂಧಿ: ಪದ್ಯಗಳು ೧೦ ರಿಂದ ೨೮, ೩೧, ೩೨; ೩೮ ರಿಂದ ೪೧ ಒಟ್ಟು | ೩೫ |
| ಒಟ್ಟು .. | ೩೬ |

೩. ಗದಾಯುದ್ಧ

| | |
|---|---|
| ಪಂಚಮಾಶ್ವಾಸ: ಪದ್ಯಗಳು ೧೦, ೧೧, ೧೩, ೧೬, ೧೭, ೩೧, ೩೫ | ೭ |

(ಎಲ್ಲ ಒಟ್ಟು ೬೮ ಪದ್ಯಗಳು. ವಿದ್ಯಾರ್ಥಿನಿಯರಿಗೆ 'ಗದಾಯುದ್ಧ'ದ ಪದ್ಯಗಳ ಅಭ್ಯಾಸ ಮಾಡಿಸಲಿಲ್ಲ. ಒಟ್ಟನಮೇಲೆ ಈ ವರ್ಷದ ಅಭ್ಯಾಸಭಾಗ ಕಳೆದ ವರ್ಷಕ್ಕಿಂತ ಸ್ವಲ್ಪ ಹೆಚ್ಚಾಗಿದೆ.)

ಗಮಕಾಭ್ಯಾಸವು ಎಂದಿನಂತೆಯೇ ಬಹುತೃಪ್ತಿಕರವಾಗಿ ನಡೆದಿದೆ. ವಿದ್ಯಾರ್ಥಿಗಳೆಲ್ಲರೂ ಗಮಕಶಿಕ್ಷಣವನ್ನು ಮೆಚ್ಚಿ, ಅದರಿಂದ ತಮಗೆ ಬಹು ಪ್ರಯೋಜನವಾಗಿದೆಯೆಂದು ತಿಳಿಸಿದ್ದಾರೆ. ಇದು ಶ್ರೀಮಾನ್ ಕೆ. ಕೃಷ್ಣರಾಯರು ಪರಿಷತ್ತಿನಮೇಲೆ ಅಭಿಮಾನವಿಟ್ಟು ವಹಿಸಿದ ಶ್ರಮದ ಫಲ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ವಿದ್ಯಾರ್ಥಿಗಳು ಕಲಿತುದನ್ನು ಪರೀಕ್ಷಿಸುವುದಕ್ಕಾಗಿ ಈ ಕೆಳಗಿನ ಮಹನೀಯರುಗಳನ್ನುಳ್ಳ ಪರೀಕ್ಷಕಸಮಿತಿಯೊಂದನ್ನು ಕಾರ್ಯನಿರ್ವಾಹಕ ಮಂಡಲಿ (ತಾ॥ ೨೨–೫–೧೯೩೮ರಲ್ಲಿ) ನಿಯಮಿಸಿತು:—

(೧) ಶ್ರೀ॥ ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ. (ಅಧ್ಯಕ್ಷರು)
(೨) ,, ಕೆ. ಜಿ. ಸಂಪತ್ಕುಮಾರಾಚಾರ್ಯರು, ಬಿ.ಎ., ಬಿ.ಟಿ.
(೩) ಕೀರ್ತನಕೇಸರಿ ಶ್ರೀ॥ ಬಿ. ಶಿವಮೂರ್ತಿ ಶಾಸ್ತ್ರಿಗಳು.
(೪) ಶ್ರೀಮತಿ ಎಚ್. ರತ್ನಮ್ಮನವರು, ಎಂ.ಎಸ್‌ಸಿ.
(೫) ಶ್ರೀ॥ ಎಚ್. ಯೋಗಾನರಸಿಂಹಂ ಅವರು, ಎಂ.ಎ.

(ಶ್ರೀ॥ ಎಚ್. ಯೋಗಾನರಸಿಂಹಂ ಅವರು ಪರೀಕ್ಷೆಯ ದಿನ ತಮಗೆ ಬರಲು ಅನನುಕೂಲವಾಗಿದೆಯೆಂದು ತಿಳಿಸಿ ಬರೆದದ್ದರಿಂದ ಅವರ ಸ್ಥಾನದಲ್ಲಿ, ಉಪಾಧ್ಯಕ್ಷರು ಪ್ರಾರ್ಥಿಸಿಕೊಂಡ ಮೇರೆಗೆ, ಶ್ರೀ॥ ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳು ಪರೀಕ್ಷಕರಾಗಿದ್ದರು.)

ತಾ॥ ೧೯–೬–೧೯೩೮ ಭಾನುವಾರ ಬೆಳಗ್ಗೆ ೮॥ ಘಂಟೆಯಿಂದ ೯॥ ಘಂಟೆಯವರೆಗೆ ವಿದ್ಯಾರ್ಥಿನಿಯರಿಗೂ, ೯॥ ಘಂಟೆಯಿಂದ ೧೦॥ ಘಂಟೆಯವರೆಗೆ ವಿದ್ಯಾರ್ಥಿಗಳಿಗೂ ಬೇರೆ ಬೇರೆಯಾಗಿ ಪರೀಕ್ಷೆ ನಡೆಯಿತು.

ಪರೀಕ್ಷೆಯಲ್ಲಿ, ಎಂದಿನಂತೆ (೧) ಪದೋಚ್ಚಾರಣೆ (ಸಾಹಿತ್ಯ), (೨) ರಾಗಪ್ರಯೋಗ (ಸಂಗೀತ), ಮತ್ತು (೩) ಒಟ್ಟಿನ ಪರಿಣಾಮ––ಈ ಅಂಶಗಳನ್ನು ಗಮನದಲ್ಲಿರಿಸಿಕೊಳ್ಳಲಾಗಿತ್ತು. ಪರೀಕ್ಷೆಗೆ ಕುಳಿತಿದ್ದವರು ೧೫ ಮಂದಿ: ೬ ಮಂದಿ ಹೆಣ್ಣುಮಕ್ಕಳು, ೯ ಮಂದಿ ಗಂಡಸರು. ಅವರ ಪೈಕಿ ೪ ಮಂದಿ ಹೆಣ್ಣುಮಕ್ಕಳು, ೫ ಮಂದಿ ಗಂಡಸರು, ಈ ರೀತಿ ೯ ಮಂದಿ ಈ ಮುಂದಿನ ಕ್ರಮದಲ್ಲಿ, ತೇರ್ಗಡೆ ಹೊಂದಿರುತ್ತಾರೆ:—

(೧) ಶ್ರೀಮತಿ ಜಿ. ರಮಾದೇವಿ ಜೋಶಿ
(೨) ಶ್ರೀ॥ ಕೆ. ಕೃಷ್ಣಪ್ಪ
(೩) ,, ಕೆ. ಆರ್. ಸೀತಾರಾಮ ಶಾಸ್ತ್ರಿ
(೪) ,, ಎಸ್. ಡಿ. ಬ್ರಹ್ಮಸೂರಿ ಶಾಸ್ತ್ರಿ
(೫) ಶ್ರೀಮತಿ ಎಸ್. ಎನ್. ಸರೋಜಮ್ಮ
(೬) ,, ಎಂ. ಎಸ್. ಇಂದಿರಮ್ಮ
(೭) ಶ್ರೀ॥ ಎಸ್. ವಿರೂಪಾಕ್ಷ ಶಾಸ್ತ್ರಿ
(೮) ,, ಕೆ. ನಾಗೇಶ
(೯) ಶ್ರೀಮತಿ ಡಿ. ಪುಟ್ಟಮ್ಮ

ಪರೀಕ್ಷೆ ನಡೆದ ದಿನದ ಸಾಯಂಕಾಲವೇ, ಗಮಕ ವಿದ್ಯಾರ್ಥಿ ವಿದ್ಯಾರ್ಥಿನಿಯರು ತಮ್ಮ ಶಿಕ್ಷಕರಾದ ಶ್ರೀಮಾನ್ ಕೆ. ಕೃಷ್ಣರಾಯರಲ್ಲಿ ತಮ್ಮ ಭಕ್ತಿಗೌರವಗಳನ್ನು ತೋರಿಸಲು ಒಂದು ಸತ್ಕಾರ ಕೂಟವನ್ನೇರ್ಪಡಿಸಿದ್ದರು. ಆ ಸಂದರ್ಭದಲ್ಲಿ ಎಲ್ಲರ 'ಕೂಟ ಛಾಯಾಚಿತ್ರ'ವೊಂದನ್ನು ತೆಗೆಯಲಾಯಿತು.

ಕಳೆದ ವರ್ಷಕ್ಕಿಂತ ಈ ವರ್ಷ ಹೆಚ್ಚು ಮಂದಿ ವಿದ್ಯಾರ್ಥಿನಿಯರು ಗಮಕಗೋಷ್ಠಿಗೆ ಸೇರಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವುದು ಪರಿಷತ್ತಿಗೆ ಸಂತೋಷದ ವಿಷಯ. ಆದರೆ ಇಷ್ಟರಿಂದಲೇ ನಾವು ತೃಪ್ತಿಪಟ್ಟುಕೊಳ್ಳುವಹಾಗಿಲ್ಲ. ಗಮಕಕಲೆಯ ಮೂಲಕ ಕನ್ನಡನಾಡಿನ ಮನೆಮನೆಯಲ್ಲಿಯೂ ಕನ್ನಡಕಾವ್ಯಗಳ ಪ್ರಚಾರವಾಗಬೇಕಾದರೆ ಶ್ರೀಗಮಕಿಗಳು

ಕಲಿಯಬೇಕು. ಮನೆಯ ಹೆಣ್ಣುಮಕ್ಕಳು ಕನ್ನಡ ಕಾವ್ಯಗಳನ್ನು ಇಂಪಾಗಿ ಓದುವುದನ್ನು ಕಲಿಯುವುದರಿಂದ ಮನೆಗೇ ಒಂದು ಬೆಳಕು. ಅಷ್ಟೇ ಅಲ್ಲ. ಹೆಣ್ಣುಮಕ್ಕಳು ಗಮಕ ಶಿಕ್ಷಣವನ್ನು ಕಲಿತರೆ ಎರಡು ಕುಟುಂಬಗಳಿಗೆ ಹರ್ಷವುಂಟಾಗುತ್ತದೆ. ಇಂದಿನವರಿಗೆ ಹರ್ಷವುಂಟಾಗುವುದರ ಜೊತೆಗೆ ಮುಂದಿನವರಿಗೆ ಕಲಾ ಭಾಗ್ಯವು ಲಭಿಸಲನುಕೂಲಿಸುತ್ತದೆ. ಆದಕಾರಣ, ಗಮಕ ಕಲೆಯನ್ನು ಅಭ್ಯಾಸಮಾಡಿ ಜನರನ್ನು ಸಂತೋಷಪಡಿಸುವುದು ಹೆಂಗಸರು ಮಾಡಬಹುದಾದ ಮಾಡಬೇಕಾದ ದೊಡ್ಡ ಸಾಹಿತ್ಯಸೇವೆ. ಆದ್ದರಿಂದ, ಮುಂದಿನ ವರ್ಷದಿಂದಲಾದರೂ ಇನ್ನೂ ಹೆಚ್ಚು ಸಂಖ್ಯೆಯಲ್ಲಿ ಪರಿಷತ್ಸದಸ್ಯರೂ ಇತರರೂ ತಮ್ಮ ಮನೆಯ ಹೆಣ್ಣುಮಕ್ಕಳನ್ನು ಪರಿಷತ್ತಿನ ಗಮಕ ತರಗತಿಗೆ ಸೇರಿಸುವ ಉಪಕಾರ ಮಾಡಬೇಕೆಂದು ಪರಿಷತ್ತಿನ ಪರವಾಗಿ ಪ್ರಾರ್ಥಿಸುತ್ತೇನೆ. ನಮ್ಮ ಪ್ರಾರ್ಥನೆ ಸಫಲವಾಗುವುದಾರೆ, ಈ ಸಲದಂತೆಯೇ ವಿದ್ಯಾರ್ಥಿನಿಯರಿಗೆ ಪ್ರತ್ಯೇಕವಾದ ತರಗತಿಯನ್ನು ಏರ್ಪಡಿಸುವುದಲ್ಲದೆ, ಅವಶ್ಯವಾದ ಹೆಚ್ಚಿನ ಅನುಕೂಲಗಳನ್ನು ಕಲ್ಪಿಸಿಕೊಡುವ ಏರ್ಪಾಡು ಮಾಡಬಹುದು.

ತರುಣ ವಿದ್ಯಾರ್ಥಿಗಳು ಈಗಿಗಿಂತ ಹೆಚ್ಚಾಗಿ ಮುಂದೆ ಬಂದು ಗಮಕಕಲೆಯನ್ನು ಅಭ್ಯಾಸ ಮಾಡಬೇಕೆಂಬುದು ನಮ್ಮ ಆಸೆ. ಪರಿಷತ್ತಿನ ಗಮಕಗೋಷ್ಠಿ ಸಾಧಾರಣವಾಗಿ ಬೇಸಗೆಯ ರಜಾಕಾಲದಲ್ಲಿಯೇ ನಡೆಯುವುದರಿಂದ ವಿಶ್ವವಿದ್ಯಾನಿಲಯದ ಕಾಲೇಜುಗಳು, ಟ್ರೈನಿಂಗು ಕಾಲೇಜುಗಳು ಮತ್ತು ಹೈ ಸ್ಕೂಲುಗಳು—ಈ ವಿದ್ಯಾಸಂಸ್ಥೆಗಳ ವಿದ್ಯಾರ್ಥಿಗಳು ಗೋಷ್ಠಿಯ ಸಂಪೂರ್ಣ ಪ್ರಯೋಜನವನ್ನು ಪಡೆಯಬಹುದು. ಉಲ್ಲಾಸವೂ ಹೆಚ್ಚಿ ಉಪಯೋಗವೂ ಆಗುವ ಎರಡು ಪ್ರಯೋಜನಗಳೂ ಗಮಕಕಲೆಯ ಅಭ್ಯಾಸದಿಂದ ಲಭಿಸುತ್ತವೆ. ಆದಕಾರಣ, ಕನ್ನಡ ವಿದ್ಯಾರ್ಥಿಗಳು ನಮ್ಮ ಪ್ರಾರ್ಥನೆಯನ್ನು ಲಾಲಿಸಿ ಮುಂದೆ ಬರಬೇಕೆಂದು ಬೇಡುತ್ತೇನೆ.

ಒಟ್ಟಿನಮೇಲೆ, ಗಮಕಗೋಷ್ಠಿ ವಿಸ್ತಾರವಾಗಬೇಕು, ಪ್ರತಿ ವರ್ಷವೂ ಹೆಚ್ಚು ಹೆಚ್ಚು ಮಂದಿ ವಿದ್ಯಾರ್ಥಿಗಳು ಗಮಕಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಗಮಕಿಗಳಾಗಲು ಸಿದ್ಧವಾಗಬೇಕು, ಸಾಧ್ಯವಾದರೆ ವರ್ಷಕ್ಕೆ ಎರಡು ಗೋಷ್ಠಿಗಳು ನಡೆದು ಇನ್ನೂ ಹೆಚ್ಚು ಮಂದಿ ತಯಾರಾಗಬೇಕು, ಅದರ ಪ್ರಯೋಜನ ಹೆಚ್ಚಿ ಅದು ಜನಪ್ರಿಯವಾಗಬೇಕು ಎಂದು ಪರಿಷತ್ತಿಗೆ ದೊಡ್ಡ ಆಸೆಯಿದೆ. ಈ ಬಗ್ಗೆ ಒಂದು ನಿರ್ದಿಷ್ಟವಾದ ಕಾರ್ಯಕ್ರಮವನ್ನು ಗೊತ್ತುಮಾಡಲು ಕನ್ನಡದ ವಿದ್ವಾಂಸರನ್ನೂ ಸುಪ್ರಸಿದ್ಧ ಗಮಕಿಗಳನ್ನೂ ಒಳಗೊಂಡ ಒಂದು ವಿಶೇಷಸಮಿತಿಯನ್ನು ಕಾರ್ಯನಿರ್ವಾಹಕ ಮಂಡಲಿ (ತಾ॥ ೨೬-೬-೧೯೩೪ರಲ್ಲಿ) ನಿಯಮಿಸಿದೆ. ಈ ಸಮಿತಿಯು ಸಲಹೆಗಳ ಮೇರೆಗೆ ಗೋಷ್ಠಿಯನ್ನು ಪುನರ್ಯೋಜನೆ ಮಾಡಬೇಕೆಂಬ ಉದ್ದೇಶವಿದೆ.

ಮೇಲೆ ಸೂಚಿಸಿದಂತೆ ಗಮಕಗೋಷ್ಠಿಗೆ ಬರುವವರ ಸಂಖ್ಯೆ ಬೆಳೆಯಬಹುದು. ಆದರೆ ಪರಿಷತ್ತಿನ ಈಗಿನ ಉಪಪತ್ತಿಯಲ್ಲಿ ಅದನ್ನು ತೃಪ್ತಿಕರವಾಗಿ ಎಡೆಬಿಡದೆ ನಡಸಿಕೊಂಡುಹೋಗುವುದು ಮಾತ್ರ ಶ್ರಮದ ಕೆಲಸ. ಗಮಕಗೋಷ್ಠಿಯ ನಿಧಿ ಇರುವುದು ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಉದಾರ ದಾನವಾದ ೧,೦೦೦ ರೂಪಾಯಿಗಳು ಮಾತ್ರ; ಆದರಿಂದ ಬರುವ ವಾರ್ಷಿಕ ಬಡ್ಡಿ ಸುಮಾರು ರೂ. ೪೦; ಪರಿಷತ್ತು ಈಗ ಖರ್ಚು ಮಾಡುತ್ತಿರುವುದು ಸುಮಾರು ೧೨೦ ರೂಪಾಯಿಗಳು. ಈಗಿರುವಂತೆಯೇ, ಗೋಷ್ಠಿಯ ಮೂಲನಿಧಿಗೆ ಯಾರಾದರೂ ಉದಾರಿಗಳು ಇನ್ನೂ ೨,೦೦೦ ರೂಪಾಯಿಗಳ ದಾನಮಾಡಬೇಕಾಗಿದೆ. ಗೋಷ್ಠಿ ವಿಸ್ತಾರವಾಗಬೇಕಾದರೆ ಕನಿಷ್ಠಪಕ್ಷ ಇನ್ನು ೩,೦೦೦ (ಎಂದರೆ ಒಟ್ಟು ೬,೦೦೦) ರೂಪಾಯಿಗಳ ಮೂಲನಿಧಿಯಿರಬೇಕು. ಬೆಂಗಳೂರು ನಗರದ ಮಹನೀಯರು ಮನಸ್ಸುಮಾಡಿ ಔದಾರ್ಯ ತೋರಿದರೆ ಇಷ್ಟು ಹಣ ಕೂಡುವುದೇನೂ ಕಷ್ಟವಲ್ಲ. ಗಮಕಕಲೆಯ ಪ್ರಚಾರದಿಂದ ಹಳ್ಳಿಗೆ, ನಗರಕ್ಕೆ, ನಾಡಿಗೆ ಆಗುವ ಪ್ರಯೋಜನವನ್ನು ಮನಗಂಡು, ಡಿಸ್ಟ್ರಿಕ್ಟು ಬೋರ್ಡುಗಳೂ ಪೌರಸಭೆಗಳೂ ನಮ್ಮ

ಕೋರಿಕೆಯನ್ನು ಮನಸ್ಸಿಗೆ ತಂದುಕೊಂಡು ಸಹಾಯಮಾಡಿದರೆ, ಈ ಸಿದ್ಧಿ ಕೊಡುವುದು ಅಸಾಧ್ಯವಲ್ಲ. ಬೆಂಗಳೂರಿನ ಪೌರಸಭೆಯವರೂ ಡಿಸ್ಟ್ರಿಕ್ಟ್ ಬೋರ್ಡಿನವರೂ ಈ ವರ್ಷ ವಸಂತ ಸಾಹಿತ್ಯೋತ್ಸವಾದಿಗಳಿಗಾಗಿ ಉದಾರವಾಗಿ ದ್ರವ್ಯಸಹಾಯ ಮಾಡಿರುತ್ತಾರೆ; ಇದಕ್ಕಾಗಿ ಪರಿಷತ್ತು ಈ ಸಂಸ್ಥೆಗಳ ಅಧಿಕಾರಿಗಳಿಗೆ ಕೃತಜ್ಞತೆಯುಳ್ಳದ್ದಾಗಿದೆ. ಅವುಗಳು ಮುಂದೆ ಸಹ ಇನ್ನೂ ಹೆಚ್ಚು ಹೆಚ್ಚಾಗಿ ಸಹಾಯಮಾಡುವುವೆಂಬ ಭರವಸೆಯನ್ನೂ ಆಸೆಯನ್ನೂ ಇಟ್ಟುಕೊಂಡು, ಮುಂದಾಗಿಯೇ ಒಮ್ಮೆ ವಂದನೆಗಳನ್ನರ್ಪಿಸಿ, ಉಪಕಾರವನ್ನು ನಿರೀಕ್ಷಿಸುತ್ತಿದೆ. ಈ ಪ್ರಮುಖಸಂಸ್ಥೆಗಳು ನಮ್ಮ ಈ ಪ್ರಾರ್ಥನೆಯನ್ನು ಮನ್ನಿಸಿ, ಇತರ ಸಂಸ್ಥೆಗಳಿಗೆ ಮೇಲುಪಂಕ್ತಿ ಹಾಕಿಕೊಟ್ಟು, ಕನ್ನಡ ನಾಡಿನ ಪ್ರಾಚೀನ ಕಲೆಯೊಂದರ ಉದ್ಧಾರಕಾರ್ಯಕ್ಕೆ ಉಪಕಾರಮಾಡಬೇಕೆಂದು ವಿನಯದಿಂದ ಬೇಡುತ್ತೇನೆ.

ಈ ವರ್ಷ ತೇರ್ಗಡೆಹೊಂದಿರುವ ಗಮಕ ವಿದ್ಯಾರ್ಥಿಗಳೂ ವಿದ್ಯಾರ್ಥಿನಿಯರೂ ತಾವು ಕಲಿತ ವಿದ್ಯೆ ಇಂದಿಗೇ ಮುಗಿದಿದೆಯೆಂದಾಗಲಿ, ಪರಿಪೂರ್ಣವಾಗಿದೆಯೆಂದಾಗಲಿ ತಿಳಿದುಕೊಳ್ಳದೆ, ಸಂತತ ಅಭ್ಯಾಸದಿಂದ ಭಾವಗಳಿಗೆ ರಾಗಗಳ ಹೊಂದಿಕೆಯನ್ನು ತಂದು, ಸಾಹಿತ್ಯಕ್ಕೆ ರಾಗವು ಹಿನ್ನೆಲೆಯಾಗಿರುವಂತೆ ನೋಡಿಕೊಂಡು, ಗಮಕಕಲೆಯಲ್ಲಿ ಸಿದ್ಧಿಹೊಂದಿ ತಾವು ಕಲಿತ ವಿದ್ಯೆಯನ್ನು ಪ್ರಚಾರಮಾಡಿ, ಕನ್ನಡಸೇವೆ ಮಾಡಬೇಕೆಂದು ಪರಿಷತ್ತು ಆಶಿಸುತ್ತದೆ. ಇದು ಶ್ರಮಸಾಧ್ಯವಾದ ವಿಚಾರ. "ಕೈ ಕೆಸರಾದರೆ ಬಾಯಿ ಮೊಸರು" ಎಂಬುದನ್ನು ನೆನಪಿನಲ್ಲಿಟ್ಟು ದುಡಿದರೆ ಫಲವಾದೀತು. ಪರಿಷತ್ತಿನ ಆಸೆಯನ್ನು ಅವರು ನಡಸಿಕೊಡಬೇಕೆಂದು ಅವರನ್ನು ಪ್ರಾರ್ಥಿಸುತ್ತೇನೆ.

ಇನ್ನು, ಈ ವರ್ಷದ ಗಮಕಗೋಷ್ಠಿ ಇಷ್ಟು ಯಶಸ್ವಿಯಾಗಿ ನಡೆಯಲು ಮುಖ್ಯವಾಗಿ ಕಾರಣರಾದ ಶ್ರೀಮಾನ್ ಕೆ. ಕೃಷ್ಣರಾಯರಿಗೂ ಇತರರಿಗೂ ಪರಿಷತ್ತಿನ ಮನಃಪೂರ್ವಕವಾದ ವಂದನೆಗಳನ್ನು ಈ ವರದಿಯಲ್ಲಿ ಸಮರ್ಪಿಸುವುದು ನನ್ನ ಸಂತೋಷದ ಕರ್ತವ್ಯವಾಗಿದೆ. ಶ್ರೀಮಾನ್ ಕೆ. ಕೃಷ್ಣರಾಯರು ಪರಿಷತ್ತು ಕೇಳಿದ ಕೂಡಲೆ ಈ ಸಲದ ಗಮಕಶಿಕ್ಷಕರಾಗಿರಲು ಒಪ್ಪಿಕೊಂಡು, ಎರಡು ತಿಂಗಳ ಕಾಲ ರಜಾ ಪಡೆದು, ಇಲ್ಲಿ ಬಂದು ನೆಲಸಿ, ಶ್ರಮವಹಿಸಿ, ಗಮಕ ಗೋಷ್ಠಿಯನ್ನು ಬಹಳ ಯಶಸ್ವಿಯಾಗಿ ನಡಸಿಕೊಟ್ಟು ಪರಿಷತ್ತಿಗೆ ದೊಡ್ಡ ಉಪಕಾರಮಾಡಿದ್ದಾರೆ. ಅವರಿಗೆ ಪರಿಷತ್ತು ಎಷ್ಟು ಕೃತಜ್ಞತೆಯುಳ್ಳದ್ದಾಗಿದ್ದರೂ ಸಾಲದು. ಅವರು ಇದೇ ರೀತಿಯ ವಿಶ್ವಾಸವನ್ನು ಇನ್ನು ಮುಂದೆಯೂ ತೋರುತ್ತಬರಬೇಕೆಂದು ಪರಿಷತ್ತಿನ ಪರವಾಗಿ ಅವರನ್ನು ಪ್ರಾರ್ಥಿಸುತ್ತೇನೆ.

ಈ ವರ್ಷದ ಗಮಕ ಪರೀಕ್ಷೆಯನ್ನು ನಡಸಿಕೊಟ್ಟು ಸಹಾಯಮಾಡಿರುವ ಮಹನೀಯರೆಲ್ಲರಿಗೂ ಪರಿಷತ್ತು ಅತ್ಯಂತ ಕೃತಜ್ಞತೆಯುಳ್ಳದ್ದಾಗಿದೆ.

ಮತ್ತು, ಇಂದಿನ ಉತ್ಸವದ ಅಧ್ಯಕ್ಷರಾಗಲು ದಯಮಾಡಿ ಒಪ್ಪಿರುವ, ಬೆಂಗಳೂರು ಪೌರಸಭೆಯ ಅಧ್ಯಕ್ಷರೂ ಪ್ರಸಿದ್ಧ ಅಡ್ವೊಕೇಟರೂ ಆದ ಶ್ರೀ॥ ಎನ್. ಬಾಲಕೃಷ್ಣಯ್ಯ, ಬಿ.ಎ., ಬಿ.ಎಲ್. ಅವರಿಗೆ ಪರಿಷತ್ತು ವಿಶೇಷ ಕೃತಜ್ಞತೆಯುಳ್ಳದ್ದಾಗಿದೆ. ಅವರು ಈಚೆಗೆ ಪರಿಷತ್ತಿನ ಆಜೀವಸದಸ್ಯರಾಗಿ ಸೇರಿದ್ದಾರೆ; ಕಳೆದ ವಸಂತ ಸಾಹಿತ್ಯೋತ್ಸವಕ್ಕೆ ಪೌರಸಭೆಯಿಂದ ೧೦೦ ರೂಪಾಯಿಗಳ ಸಹಾಯದ್ರವ್ಯ ಬರುವಂತೆ ಕರುಣಿಸಿದ್ದಾರೆ; ಹೀಗೆ ಅವರು ಬಗೆಬಗೆಯಲ್ಲಿ ಕನ್ನಡದಮೇಲೂ ಪರಿಷತ್ತಿನ ವಿಷಯದಲ್ಲಿಯೂ ಆದರ ತೋರುತ್ತಿರುವುದು ಸಂತೋಷದ ವಿಷಯ. ಅವರು ಪರಿಷತ್ತಿನಮೇಲೆ ಏಕರೀತಿಯಾದ ಮಮತೆಯಿಟ್ಟು, ಇನ್ನುಮುಂದೆಯೂ ಪರಿಷತ್ತಿಗೆ ಇದೇ ಮೇರೆ ಸಹಾಯಮಾಡುತ್ತ, ಬೆಂಗಳೂರು ನಗರದ ಪೌರಸಭೆಯಿಂದಲೂ ಉದಾರವಾಗಿ ಸಹಾಯವನ್ನು ದೊರೆಯಿಸುತ್ತ ಉಪಕಾರ ಮಾಡಬೇಕೆಂಬುದೇ ನಮ್ಮ ವಿನಯಪೂರ್ವಕವಾದ ಬೇಡಿಕೆ. ಅವರು ಯಾವ ರೀತಿ ಸಹಾಯಮಾಡಬಹುದೆಂಬುದನ್ನು ಅವರೇ ನಿದರ್ಶನಗೊಳಿಸಿದ್ದಾರೆ; ಅವರು ದಯಮಾಡಿ ಅದನ್ನು ಮುಂದುವರಿಸಬೇಕೆಂದು ನಾನು ಅವರನ್ನು ಬೇಡಿಕೊಳ್ಳುತ್ತೇನೆ; ಮತ್ತು ಗಮಕ ಕಲಾಭ್ಯಾಸಮಾಡಿ, ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವ ವಿದ್ಯಾರ್ಥಿ ವಿದ್ಯಾರ್ಥಿನಿಯರುಗಳಿಗೆ

ಪರಿಷತ್ತಿನ ಪ್ರಶಸ್ತಿಪತ್ರಿಕೆಗಳನ್ನು ಕರುಣಿಸಿ, ಅವರನ್ನು ಆಶೀರ್ವದಿಸಿ, ಪರಿಷತ್ತಿನ ಉದ್ದೇಶವನ್ನು ನೆರವೇರಿಸಿಕೊಡಬೇಕೆಂದು ಪ್ರಾರ್ಥಿಸುತ್ತೇನೆ.

ತಾ॥ ೫–೮–೧೯೩೮, ಬೆಂಗಳೂರು.

ಸಿ. ಕೆ. ವೆಂಕಟರಾಮಯ್ಯ,
ಗೌರವ ಕಾರ್ಯದರ್ಶಿ.

---

# ಪರಿಷತ್ತಿನ ಕಾರ್ಯಕಲಾಪಗಳು

## ೧. ಕಾರ್ಯನಿರ್ವಾಹಕ ಮಂಡಲಿಯ ಮುಖ್ಯ ನಿರ್ಣಯಗಳು

### ೨೧—೧—೧೯೩೮, ಬೆಂಗಳೂರು

**ಪುನರ್ನಿಯೋಜಿತವಾದ ಕಾರ್ಯನಿರ್ವಾಹಕ ಮಂಡಲಿಯಲ್ಲಿ ಉಪಾಧ್ಯಕ್ಷರ ಅರಿಕೆ.—**

ಕಾರ್ಯಾರಂಭವಾಗುವ ಮೊದಲು ಉಪಾಧ್ಯಕ್ಷರು ಪುನರ್ನಿಯೋಜಿತವಾದ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರಿಗೆ ಸ್ವಾಗತವನ್ನು ಬಯಸಿ, ಈ ರೀತಿ ಮಾತನಾಡಿದರು:

"ತಮ್ಮೆಲ್ಲರನ್ನೂ ಈ ಹೊಸ ಕಾರ್ಯನಿರ್ವಾಹಕ ಮಂಡಲಿಯ ಮೊದಲನೆಯ ಅಧಿವೇಶನಕ್ಕೆ ಬರಮಾಡಿಕೊಳ್ಳಲು ನನಗೆ ಬಹಳ ಸಂತೋಷವಾಗಿದೆ. ನಾನು ತಮ್ಮೆಲ್ಲರಿಗೂ ಹೃತ್ಪೂರ್ವಕವಾಗಿ ಸ್ವಾಗತವನ್ನು ಬಯಸುತ್ತೇನೆ. ಹಿಂದಿನ ವರ್ಷಗಳಲ್ಲಿ ಹಲವು ಮಂದಿ ದೊಡ್ಡ ಮನುಷ್ಯರು ಪರಿಷತ್ತಿನ ಕೆಲಸಗಳಲ್ಲಿ ಸಹಾಯಕರಾಗಿದ್ದವರು ಈ ಹೊಸ ಮಂಡಲಿಯಲ್ಲಿ ಇಲ್ಲದಿರುವುದಕ್ಕೆ ವಿಷಾದವಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ, ಈಗ ನಾಲ್ಕು ವರ್ಷಗಳಿಂದ ಉಪಾಧ್ಯಕ್ಷರಾಗಿದ್ದು ಪರಿಷತ್ತಿಗೆ ಅನೇಕ ಉಪಕಾರಗಳನ್ನು ಮಾಡಿ ತಮ್ಮ ಕಾರ್ಯದಕ್ಷತೆಯಿಂದ ಪರಿಷತ್ತನ್ನು ಬೆಳಸಿರತಕ್ಕ ಶ್ರೀ॥ ಡಿ. ವಿ. ಗುಂಡಪ್ಪನವರೂ ಕೂಡ ನಮ್ಮ ಮಧ್ಯದಲ್ಲಿಲ್ಲದವರಾಗಿದ್ದಾರೆ. ಅವರ ವಿಷಯದಲ್ಲಿ ನಮ್ಮ ಕೃತಜ್ಞತೆಯನ್ನು ಸೂಚಿಸತಕ್ಕ ಒಂದು ನಿರ್ಣಯ ಈ ದಿನದ ಕಾರ್ಯಕ್ರಮದಲ್ಲಿ ಬರುತ್ತದೆ. ತಾವೆಲ್ಲರೂ ಸರ್ವಾನುಮತದಿಂದ ಅದನ್ನು ಅಂಗೀಕರಿಸುವಿರೆಂದು ನಾನು ನಂಬಿದ್ದೇನೆ.

"ಇನ್ನು ನನ್ನ ವಿಷಯ: ನಾನು ಇದುವರೆಗೆ ಯಾವ ಸ್ಥಾನದಲ್ಲಿ ಕುಳಿತಿರುತ್ತಿದ್ದೆನೋ ಅದೇ ನನಗೆ ಹೆಚ್ಚು ಪ್ರಿಯವಾಗಿತ್ತು. ಆದರೆ ಪರಿಷತ್ತಿನ ಸದಸ್ಯರು ವಿಶ್ವಾಸದಿಂದ ನನ್ನನ್ನು ಗೌರವಿಸಿ ಈ ಸ್ಥಾನದಲ್ಲಿ ಕೂಡಿಸಿದ್ದಾರೆ. ಈಗ ನನ್ನ ಇಷ್ಟದ ಪ್ರಕಾರ ಇರಬಹುದಾದ ಸ್ವಾತಂತ್ರ್ಯ ಹೋಗಿದೆ. ಇನ್ನು ಮೇಲೆ ತಮ್ಮೆಲ್ಲರ ಸಹಕಾರದಿಂದ ಮತ್ತು ಪ್ರೋತ್ಸಾಹದಿಂದ ಯಾವ ರೀತಿ ಪರಿಷತ್ತಿಗೆ ಅನುಕೂಲವಾಗಬಹುದೋ ಮತ್ತು ಪರಿಷತ್ತು ಮುಂದುವರಿಯಬಹುದೋ ಅದಕ್ಕೆ ಅನುಸಾರವಾಗಿ ನಡೆದುಕೊಳ್ಳಲು ಸಿದ್ಧನಾಗಿದ್ದೇನೆ. ನಾವೆಲ್ಲ ಒಂದು ಮನೆಯವರಹಾಗಿದ್ದುಕೊಂಡು, ನಮ್ಮ ನಮ್ಮ ಇಷ್ಟ ಸೂಚನೆಗಳನ್ನೂ ಕಷ್ಟಸುಖಗಳನ್ನೂ ಆಪ್ತರೀತಿಯಲ್ಲಿ ಹೇಳಿಕೊಂಡು, ಪರಿಷತ್ತಿನ ಕಾರ್ಯಕ್ಕೆ ತೊಂದರೆ ಬಾರದಂತೆ, ಕನ್ನಡದ ಬಾವುಟವನ್ನು ಎತ್ತಿಹಿಡಿದು, ಒಕ್ಕಟ್ಟಾಗಿ ಕೆಲಸ ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ನನಗೆ ತಾವೆಲ್ಲರೂ ಮಿತ್ರರು. ನನ್ನ ಈ ಕೆಲಸದಲ್ಲಿ ತಮ್ಮ ಬೆಂಬಲ ಸಂಪೂರ್ಣವಾಗಿ ನನಗಿದೆಯೆಂದು ನಾನು ನಂಬುತ್ತೇನೆ.

"ಇನ್ನೊಂದು ವಿಷಯವನ್ನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ; ಮತ್ತು ತಾವು ಅದನ್ನು ನಡಸಿಕೊಡಬೇಕೆಂದು ಬೇಡುತ್ತೇನೆ. ಪರಿಷತ್ತಿನ ಸಹಾಯಕ್ಕಾಗಿ ಅನೇಕ ಸಂದರ್ಭಗಳಲ್ಲಿ ಸತ್ಕಾರಕೂಟಗಳು ನಡೆಯಬೇಕಾಗುತ್ತವೆ. ಇಂತಹ ಸತ್ಕಾರಕೂಟಗಳನ್ನು ನಡಸಿಕೊಂಡುಹೋಗತಕ್ಕ ಭಾರವನ್ನು ಸಾಧ್ಯವಾದ ಮಟ್ಟಿಗೆ ನನಗೆ ಬಿಟ್ಟುಕೊಡಬೇಕೆಂದು

ನಾನು ತಮ್ಮನ್ನು ಕೇಳಿಕೊಳ್ಳುತ್ತೇನೆ. ತಾವು ಯಾವಾಗಲೂ ನನ್ನ ಹಿಂದೆ ಇರುವಿರೆಂಬ ಭರವಸೆ ನನಗಿದೆ; ನಿರ್ವಾಹವಿಲ್ಲದಾಗ ನಾನು ತಮ್ಮಲ್ಲಿ ಭಿಕ್ಷೆ ಬೇಡದೆ ಬಿಡುವುದಿಲ್ಲ.

"ನಾಳೆಯ ಸಂಜೆ ನಮ್ಮ ನಿವೃತ್ತ ಉಪಾಧ್ಯಕ್ಷರಾದ ಶ್ರೀ|| ಡಿ. ವಿ. ಗುಂಡಪ್ಪನವರು, ಹಳೆಯ ಮತ್ತು ಹೊಸ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರು—ಇವರುಗಳನ್ನು ಸತ್ಕರಿಸಲು ಒಂದು ಸಂತೋಷಕೂಟವನ್ನು ಏರ್ಪಡಿಸಿದೆ. ತಾವೆಲ್ಲರೂ ದಯಮಾಡಿ ಗೋಷ್ಠಿಗೆ ಬಂದು ಕಳೆ ಕಟ್ಟಿಸಬೇಕೆಂದು ಪ್ರಾರ್ಥಿಸುತ್ತೇನೆ."

**ಪರಿಷತ್ತಿನ ಅಧ್ಯಕ್ಷರವರಾದ ಶ್ರೀಮದ್ಯುವರಾಜರವರ ಸನ್ನಿಧಿಯಲ್ಲಿ ಕಾರ್ಯನಿರ್ವಾಹಕ ಮಂಡಲಿಯ ರಾಜಭಕ್ತಿ ವಂದನಾ ಸಮರ್ಪಣೆ.—**

(೧) ಕಾರ್ಯಾರಂಭಕ್ಕೆ ಮೊದಲು ಪದ್ಧತಿಯ ಮೇರೆಗೆ ಈ ಕೆಳಗಿನ ನಿರ್ಣಯವು ಉಪಾಧ್ಯಕ್ಷರಿಂದ ಸೂಚಿತವಾಗಿ ಸಭೆಯಿಂದ ಹರ್ಷಧ್ವನಿಗಳೊಡನೆ ಅಂಗೀಕೃತವಾಯಿತು:

"ಹೊಸದಾಗಿ ನಿಯೋಜಿತವಾಗಿರುವ ಈ ೧೯೩೮ನೆಯ ಇಸವಿಯ ಕಾರ್ಯನಿರ್ವಾಹಕ ಮಂಡಲಿ, ತನ್ನ ಈ ಮೊದಲನೆಯ ಅಧಿವೇಶನದಲ್ಲಿ, ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಪರಿಪಾಲಕರೂ ಆಗಿರುವ ಘನತೆವೆತ್ತ ಶ್ರೀಮದ್ಯುವರಾಜರವರು ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ. ಮಹಾಸ್ವಾಮಿಯವರ ಸನ್ನಿಧಾನದಲ್ಲಿ ತನ್ನ ರಾಜಭಕ್ತಿ ಪುರಸ್ಸರವಾದ ವಂದನೆಗಳನ್ನು ಸಮರ್ಪಿಸುತ್ತದೆ."

**(೧೩) ಸಂಪಾದಕ ಮಂಡಲಿ ಮತ್ತು ಪ್ರಾಂತೀಯ ಸಹಕಾರಿಗಳ ನೇಮಕ.—**

(ಸದಸ್ಯರುಗಳ ಹೆಸರುಗಳನ್ನು ಈ ಪತ್ರಿಕೆಯ ರಕ್ಷಾಪತ್ರದಮೇಲೆ ಮುದ್ರಿಸಿದೆ.)

**(೧೪) ಇತರ ಉಪಸಮಿತಿಗಳು ಮತ್ತು ಕಾರ್ಯಸಹಾಯಕರ ನೇಮಕ.—**

೧೯೩೮ನೆಯ ವರ್ಷಕ್ಕಾಗಿ ಈ ಕೆಳಗಿನಂತೆ ಸಮಿತಿಗಳನ್ನೂ ಕಾರ್ಯಸಹಾಯಕರನ್ನೂ ನಿಯಮಿಸಲಾಗಿದೆ:

**(i) ಪುಸ್ತಕಭಂಡಾರ ಮತ್ತು ವಾಚನಾಲಯ:—**

(೧) ಶ್ರೀ|| ಕೆ. ವೆಂಕಟರಾಮಪ್ಪನವರು, ಎಂ.ಎ., (೨) ಶ್ರೀ|| ಕೆ. ಎಸ್. ಕೃಷ್ಣಮೂರ್ತಿಗಳು.

**(ii) ಆಸ್ತಿ:—**

ಶ್ರೀ|| ಎ. ತಾಂಡೋಣಿರಾಯರು, ಎಲ್.ಸಿ.ಇ., ಎಂ.ಐ.ಇ.

**(iii) ಉಪನ್ಯಾಸಾದಿ ಸಾರ್ವಜನಿಕ ಕಾರ್ಯಗಳು:—**

(೧) ಶ್ರೀ|| ಡಿ. ಸಿ. ಸುಬ್ಬರಾಯಪ್ಪನವರು, ಬಿ.ಎ., ಬಿ.ಎಲ್., (೨) ಶ್ರೀ|| ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ.

**(iv) ಪ್ರಕಟನೆ, ಪ್ರಚಾರ ಕಾರ್ಯ:—**

(೧) ಶ್ರೀ|| ಕೆ. ವಿ. ರಾಘವಾಚಾರ್ಯರು, ಎಂ.ಎ., ಬಿ.ಟಿ., (೨) ಶ್ರೀ|| ಎಲ್. ಗುಂಡಪ್ಪನವರು, ಎಂ.ಎ.

**(v) ಸದಸ್ಯ ಸಂಪಾದನೆ:—**

ಶ್ರೀ|| ಗಳಾದ (೧) ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., (೨) ಅ. ನ. ಕೃಷ್ಣರಾಯರು, (೩) ಎಂ. ಎ. ನರಸಿಂಹಾಚಾರ್ಯರು, (೪) ಎಸ್. ಗೋಪಾಲಸ್ವಾಮಿಯವರು, ಎಂ.ಎ., (೫) ಎಂ. ನರಸಿಂಹಮೂರ್ತಿಗಳು, ಬಿ.ಎ., (೬) ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ., (೭) ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿಗಳು, (೮) ಜಿ. ಪಿ. ರಾಜರತ್ನಂ ಅವರು, ಎಂ.ಎ., (೯) ಕೆ. ಎಸ್. ಕಾರಂತರು, ಪುತ್ತೂರು, (೧೦) ಆರ್. ವಿ. ಜಹಗೀರುದಾರರು, ಎಂ.ಎ. (ಲಂಡನ್),

ಧಾರವಾಡ, (೧೧) ವಿ. ಜಿ. ತೋರಗಲ್ ಅವರು, ಬೆಳಗಾಂವಿ, (೧೨) ಎಸ್. ವಿ. ಅಡ್ಡಣಗಿ ಅವರು, ಬೆಳಗಾಂವಿ, (೧೩) ಗೋವಿಂದರಾಮಾಚಾರ್ಯರು, ಎಂ.ಎ., ಎಲ್‌ಎಲ್.ಬಿ., ಬಿಜಾಪುರ, (೧೪) ಬಿ. ಎನ್. ಕೃಷ್ಣಮೂರ್ತಿಗಳು, ಬಿ.ಎ., ಎಲ್.ಟಿ., ಕೊಡಗು, (೧೫) ಎಂ. ಜಿ. ವೆಂಕಟೇಶಯ್ಯನವರು, ಎಂ.ಎ., ಬಿ.ಟಿ., ಬಳ್ಳಾರಿ, (೧೬) ಕೃಷ್ಣಶರ್ಮ ರವರು, ಹೈದರಾಬಾದು, (೧೭) ಜಿ. ರಾಮಾಚಾರ್ಯರು, ಹೈದರಾಬಾದು.

(vi) ಅಭಿಮಾನಿಗಳ ಸಂಪಾದನೆ :—

ಶ್ರೀ॥ ಗಳಾದ (೧) ಡಾ॥ ಎಂ. ಎ. ಸಂಪತ್ಕುಮಾರನ್ ಅವರು, ಎಂ.ಎ., ಪಿಎಚ್.ಡಿ., (೨) ವಿ. ಟಿ. ತಿರುನಾರಾಯಣಯ್ಯಂಗಾರ್ಯರು, ಎಂ.ಎ., (೩) ಎಚ್. ಎಲ್. ಹರಿಯಪ್ಪ ನವರು, ಎಂ.ಎ., (೪) ಪಿ. ಶ್ರೀನಿವಾಸರಾಯರು, ಎಂ.ಎಸ್‌ಸಿ., ಶ್ರೀಮತಿಗಳಾದ— (೫) ಆರ್. ಕಲ್ಯಾಣಮ್ಮನವರು, (೬) ಎಸ್. ನಂಜಮ್ಮನವರು, ಬಿ.ಎ., ಎಲ್.ಟಿ., (೭) ಸುಶೀಲ ಲಿಂಗಯ್ಯನವರು, ಬಿ.ಎಸ್‌ಸಿ., (೮) ಶ್ರೀ ಅವರು, ಎಂ.ಎಸ್‌ಸಿ., (೯) ಎಚ್. ರತ್ನಮ್ಮನವರು, ಬಿ.ಎಸ್‌ಸಿ.

ಮೇಲೆ ಹೆಸರಿಸಿರುವ ಮಹನೀಯರುಗಳನ್ನೂ ಮಹಿಳೆಯರನ್ನೂ ಆಯಾ ಸಮಿತಿ ಗಳಲ್ಲಿಯೂ ಕಾರ್ಯಭಾಗಗಳಲ್ಲಿಯೂ ಕಾರ್ಯಸಹಾಯಕರಾಗಿರುವಂತೆ ಬೇಡತಕ್ಕದ್ದು.

(೧೭) ಪರಿಷತ್ತಿನ ರಜತಮಹೋತ್ಸವ ನಿಧಿ.—

೧೯೪೦ನೆಯ ಇಸವಿಯಲ್ಲಿ ನಡೆಯಲಿರುವ ಪರಿಷತ್ತಿನ ರಜತಮಹೋತ್ಸವ ನಿಧಿಯನ್ನು ಪ್ರಾರಂಭಮಾಡಬಹುದೆಂದು ಕಾರ್ಯನಿರ್ವಾಹಕ ಮಂಡಲಿ ತೀರ್ಮಾನಿಸುತ್ತದೆ; ಮತ್ತು ಮಹೋತ್ಸವದ ವಿಚಾರದಲ್ಲಿ ತಕ್ಕ ಪ್ರಚಾರಕಾರ್ಯ ಮುಂತಾದುವನ್ನು ಪರಿಷತ್ತಿನ ಅಧಿಕಾರಿ ಗಳು ಕೈಕೊಳ್ಳಬಹುದೆಂದೂ ತೀರ್ಮಾನಿಸುತ್ತದೆ.

(೨೨) ಪರಿಷತ್ತಿನ ಸರಸ್ವತೀ ಭಂಡಾರಕ್ಕೆ ಗ್ರಂಥಗಳ ದಾನ.—

ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ಮೂಲಕ ಈ ಕೆಳಗೆ ವಿವರಿಸಿರುವ ಪ್ರಾಚೀನ ಕನ್ನಡ ಗ್ರಂಥಗಳ ಕೈಬರಹದ ಮತ್ತು ಓಲೆಯ ಗರಿಯ ಪ್ರತಿಗಳನ್ನು ಪರಿಷತ್ತಿನ ಸರಸ್ವತೀ ಭಂಡಾರಕ್ಕೆ ಸ್ವೀಕರಿಸಲಾಗಿದೆ :

(೧) ಜೈಮಿನಿ ಭಾರತ (ಕಾಗದದ ಪ್ರತಿ)
(೨) ಬಸವೇಶ್ವರನ ವಚನಗಳು (ತಾಳೆಯೋಲೆಯ ಪ್ರತಿ)
} ಗುಲ್ಬರ್ಗದ ಶ್ರೀ॥ ಕಪಟರಾಳ ಕೃಷ್ಣರಾಯರಿಂದ

(೩) ಕನ್ನಡ ಭಾಗವತ (ಕಾಗದದ ಪ್ರತಿ)--ಶ್ರೀ॥ ಗಳಾದ ಲಕ್ಷ್ಮಣ ಜೋಶಿ ಮತ್ತು ರಾಂಪುರ ರಾಮಾಶಾಸ್ತ್ರಿಗಳಿಂದ—ಹೊಸಪೇಟೆಯ ಬಾಲಕರ ಸಂಘದ ಪರವಾಗಿ.

(೪) ಉತ್ತರ ರಾಮಾಯಣ, (೫) ಗದುಗಿನ ಭಾರತ, (೬) ಛಂದೋಂಬುಧಿ, (೭) ಜೈಮಿನಿ ಭಾರತ, (೮) ಪಂಪರಾಮಾಯಣ (ತಾಳೆಯೋಲೆಯ ಪ್ರತಿಗಳು)— ಹಾವೇರಿಯ ಶ್ರೀ॥ ಬೆಂಗೇರಿ ಅವರಿಂದ.

(೯) ಪ್ರಭುಲಿಂಗಲೀಲೆ (ಕಾಗದದ ಪ್ರತಿ)—ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರಿಂದ.

ಮೇಲೆ ಕಂಡ ಮಹನೀಯರುಗಳಿಗೆ ಅವರು ಕೊಟ್ಟಿರುವ ದಾನಗಳಿಗಾಗಿ ಕಾರ್ಯ ನಿರ್ವಾಹಕ ಮಂಡಲಿ ತನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಮರ್ಪಿಸುತ್ತದೆ.

## ೨೬—೨—೧೯೩೮, ಬೆಂಗಳೂರು

ಶ್ರೀಮತಿ ಆರ್. ಕಲ್ಯಾಣಮ್ಮನವರಿಗೆ ಅಭಿನಂದನ.—

ಕಾರ್ಯಾರಂಭಕ್ಕೆ ಮೊದಲು ಉಪಾಧ್ಯಕ್ಷರು ಮಾತನಾಡುತ್ತ, ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಯ ಸದಸ್ಯರಲ್ಲಿ ಒಬ್ಬರಾದ ಶ್ರೀಮತಿ ಆರ್. ಕಲ್ಯಾಣಮ್ಮನವರು ಬೆಂಗಳೂರಿನ ಪೌರಸಭೆಗೆ ಉಪಾಧ್ಯಕ್ಷರಾಗಿ ಚುನಾಯಿತರಾಗಿರುವುದಕ್ಕಾಗಿ ಅವರಿಗೆ

ಮಂಡಲಿಯ ಅಭಿನಂದನಗಳನ್ನು ತಿಳಿಸಿದರು. ಶ್ರೀಮತಿ ಕಲ್ಯಾಣಮ್ಮನವರು ಮಂಡಲಿಯ ಸದಸ್ಯರ ವಿಶ್ವಾಸಕ್ಕಾಗಿ ಅವರಿಗೆ ತಮ್ಮ ವಂದನೆಗಳನ್ನು ಸಮರ್ಪಿಸಿದರು.

(೮) ದಿವಂಗತ ಶ್ರೀ॥ ತಮ್ಮಣ್ಣಪ್ಪ ಸತ್ಯಪ್ಪ ಚಿಕ್ಕೋಡಿಯವರ ಭಾವಚಿತ್ರ.—

ಈ ಸಂಬಂಧದಲ್ಲಿ, ಬನಹಟ್ಟಿಯ ಶ್ರೀ॥ ಸಿ. ಸಿ. ಅಬಕಾರರು ದಿವಂಗತ ಶ್ರೀ॥ ಚಿಕ್ಕೋಡಿ ತಮ್ಮಣ್ಣಪ್ಪನವರ ಭಾವಚಿತ್ರವನ್ನು ಪರಿಷತ್ತಿಗೆ ಸ್ವೀಕರಿಸಲು ಸಾಧ್ಯವೇ ಎಂದು ಕೇಳಿ ಬರೆದಿದ್ದ ಕಾಗದವನ್ನೂ, ಚಿತ್ರವನ್ನು ಸ್ವೀಕರಿಸಬಹುದೆಂದು ಅನುಮೋದನೆಯನ್ನು ಸೂಚಿಸಿ ಬರೆದಿದ್ದ ನವಲಗುಂದದ ಶ್ರೀ॥ ಬಸವಲಿಂಗಸ್ವಾಮಿಗಳ ಕಾಗದವನ್ನೂ ಓದಿಸಿ ಕೇಳಲಾಯಿತು.

ತೀರ್ಮಾನ: ದಿವಂಗತ ಶ್ರೀ॥ ಚಿಕ್ಕೋಡಿ ತಮ್ಮಣ್ಣಪ್ಪನವರ ಭಾವಚಿತ್ರವನ್ನು ಸಂತೋಷದಿಂದ, ಕೃತಜ್ಞತೆಯಿಂದ, ಸ್ವೀಕರಿಸಲಾಗಿದೆ. ಪರಿಷತ್ತಿನಲ್ಲಿ ಇರುವ ಕೆಲವು ಮಹನೀಯರ ಚಿತ್ರಪಟಗಳ ಅಳತೆಯನ್ನು ತಿಳಿಸಿ ಅದಕ್ಕೆ ಸರಿಯಾಗಿ ಪಟವನ್ನು ತಯಾರು ಮಾಡಿಸಿ ಕಳುಹಿಸಿಕೊಡುವಂತೆ ಶ್ರೀ॥ ಅಬಕಾರರವರನ್ನು ಕೋರತಕ್ಕದ್ದು.

(೯) ಬಳ್ಳಾರಿ—ಕನ್ನಡ.—

ಮುಂದೆ ಹೇಳುವ ಮೂರು ವಿಚಾರಗಳನ್ನು ಕುರಿತು ಗೊತ್ತುವಳಿಗಳನ್ನು ಅಂಗೀಕರಿಸಿ, ಆ ಸಂಬಂಧದಲ್ಲಿ ತಕ್ಕ ಕಾರ್ಯಕ್ರಮವನ್ನು ಕೈಕೊಳ್ಳಬೇಕೆಂದು ಕೋರಿ ಬರೆದಿರುವ ಧಾರವಾಡದ "ಕನ್ನಡಿಗರ ಸಂಘ"ದ ಕಾರ್ಯದರ್ಶಿಯವರ ಬಿನ್ನಹ.

ಗೊತ್ತುವಳಿಗಳ ವಿಷಯಗಳು: (೧) ಬಳ್ಳಾರಿಯನ್ನು ಆಂಧ್ರಪ್ರಾಂತಕ್ಕೂ, (೨) ಬಳ್ಳಾರಿ ಜಿಲ್ಲೆಯನ್ನು ಆಂಧ್ರ ವಿಶ್ವವಿದ್ಯಾನಿಲಯಕ್ಕೂ ಸೇರಿಸಿಕೊಳ್ಳಬೇಕೆಂದು (ಆಂಧ್ರ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಮೂಲಕ) ಆಂಧ್ರರು ಮಾಡುತ್ತಿರುವ ಪ್ರಯತ್ನವನ್ನೂ, ಮತ್ತು (೩) ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ 'ಯು. ಟ. ಸಿ.' ದಳಗಳನ್ನು ನಿಲ್ಲಿಸಿ ಬಿಡುವ ಯೋಜನೆಯಾಗಿರುವುದನ್ನೂ ವಿರೋಧಿಸುವುದು.

ಮೊದಲಿನ ಎರಡು ವಿಚಾರಗಳಿಗೆ ಸಂಬಂಧಪಟ್ಟ ಗೊತ್ತುವಳಿಗಳನ್ನು ತಕ್ಕ ಅಧಿಕಾರ ಸ್ಥಾನಗಳಿಗೆ, ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಅನುಮೋದನೆಯೊಡನೆ ಕಳುಹಿಸಿ ಕೊಡತಕ್ಕದ್ದು. ಆ ಗೊತ್ತುವಳಿಗಳನ್ನು ಈ ಕೆಳಗೆ ಕೊಟ್ಟಿದೆ:

(೧) "ಬಳ್ಳಾರಿಯನ್ನು ಆಂಧ್ರ ವಿಶ್ವವಿದ್ಯಾನಿಲಯಕ್ಕೆ ಸೇರಿಸಬೇಕೆಂದು ನಡಸಿರುವ ಆಂಧ್ರರ ಪ್ರಯತ್ನವನ್ನು ಕರ್ನಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ ತೀವ್ರವಾಗಿ ನಿಷೇಧಿಸುತ್ತದೆ. ಬಳ್ಳಾರಿಯು ಪೂರ್ಣ ಕನ್ನಡವಾಗಿದ್ದು, ಕರ್ನಾಟಕ ಪ್ರಾಂತವು ಬೇರೆಯಾಗುವವರೆಗೆ ಈಗ ಇರುವಂತೆಯೇ ಮದರಾಸು ವಿಶ್ವವಿದ್ಯಾನಿಲಯದಲ್ಲಿ ಇರಬೇಕೆಂದೂ, ಮದರಾಸು ವಿಶ್ವವಿದ್ಯಾನಿಲಯದವರು ತಮ್ಮ ಆಡಳಿತದೊಳಗಿರುವ ಬಳ್ಳಾರಿಯನ್ನು ಆಂಧ್ರ ವಿಶ್ವವಿದ್ಯಾನಿಲಯಕ್ಕೆ ಬಿಟ್ಟು ಕೊಡಬಾರದೆಂದೂ ಈ ಮಂಡಲಿ ಆಗ್ರಹಪೂರ್ವಕವಾಗಿ ಬಿನ್ನವಿಸಿಕೊಳ್ಳುತ್ತದೆ."

(೨) "ಆಂಧ್ರ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು ಕನ್ನಡವಾದ ಬಳ್ಳಾರಿಯನ್ನು ಆಂಧ್ರಕ್ಕೆ ಸೇರಿಸಲು ನಡಸಿರುವ ಪ್ರಯತ್ನವನ್ನು ಕರ್ನಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ ತೀವ್ರವಾಗಿ ವಿರೋಧಿಸುತ್ತದೆ."

## ೧೯—೩—೧೯೩೮, ಬೆಂಗಳೂರು

(೪) ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರಾಗಿದ್ದ ದಿವಂಗತ ಶ್ರೀ॥ ಪಂಜೆ ಮಂಗೇಶರಾಯರ ಸ್ಥಾನದಲ್ಲಿ ಶ್ರೀ॥ ವೈ. ಮಹಾಬಲೇಶ್ವರಪ್ಪನವರು.—

"ಬಳ್ಳಾರಿಯ ಶ್ರೀ॥ ವೈ. ಮಹಾಬಲೇಶ್ವರಪ್ಪನವರು ದಯವಿಟ್ಟು ಶ್ರೀ॥ ಪಂಜೆ ಮಂಗೇಶರಾಯರ ಸ್ಥಾನದಲ್ಲಿ ಸದಸ್ಯರಾಗಿರಬೇಕೆಂದು ಕಾರ್ಯನಿರ್ವಾಹಕ ಮಂಡಲಿ ಅವರನ್ನು ಪ್ರಾರ್ಥಿಸುತ್ತದೆ."

(೫) ದಿವಂಗತ ಶ್ರೀ॥ ಎಂ. ವೆಂಕಟಕೃಷ್ಣಯ್ಯನವರ ಮತ್ತು ಶ್ರೀ॥ ಬಿ. ವೆಂಕಟಾಚಾರ್ಯರ ಭಾವಚಿತ್ರಗಳು.—

(೧) ದಿವಂಗತ ಶ್ರೀ॥ ಎಂ. ವೆಂಕಟಕೃಷ್ಣಯ್ಯನವರ ಭಾವಚಿತ್ರವನ್ನು ಪರಿಷತ್ತಿಗೆ ದಾನ ಮಾಡಿರುವುದಕ್ಕಾಗಿ ಕಾರ್ಯನಿರ್ವಾಹಕ ಮಂಡಲಿ ಶ್ರೀ॥ ಎಸ್. ಜಿ. ಶಾಸ್ತ್ರಿಗಳು, ಬಿ.ಎ., ಎಂ.ಎಸ್‌ಸಿ., ಎಫ್.ಸಿ.ಎಸ್. ಅವರಿಗೆ ತನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತದೆ.

(೨) ಪರಿಷತ್ತಿನಲ್ಲಿ ಈಗ ಇರುವ ದಿವಂಗತ ಶ್ರೀ॥ ಬಿ. ವೆಂಕಟಾಚಾರ್ಯರ ಭಾವಚಿತ್ರಕ್ಕಿಂತ ಇನ್ನೂ ಉತ್ತಮವಾದ ದೊಡ್ಡ ಅಳತೆಯ ಭಾವಚಿತ್ರವನ್ನು ಕೊಡುವುದಾಗಿ ಶಿವಮೊಗ್ಗೆಯ ಶ್ರೀ॥ ಬಿ. ಗರುಡಾಚಾರ್ಯರು ವಾಗ್ದಾನ ಕೊಟ್ಟಿರುವುದಕ್ಕಾಗಿ ಕಾರ್ಯನಿರ್ವಾಹಕ ಮಂಡಲಿ ಅವರಿಗೆ ಕೃತಜ್ಞತೆಯುಳ್ಳದ್ದಾಗಿದೆ. ಅದನ್ನು ಸಂತೋಷ ಕೃತಜ್ಞತೆಗಳೊಡನೆ ಸ್ವೀಕರಿಸಬಹುದು.

(೧೩) ಶ್ರೀ॥ ಎ. ಎನ್. ರಾಮರಾಯರ ತಾಳೆಯೋಲೆಯ ಗ್ರಂಥಗಳ ದಾನ.—

ಶ್ರೀ॥ ಎ. ಎನ್. ರಾಮರಾವ್, ಬಿ.ಎ., ಬಿ.ಎಲ್. ಅವರು ಪರಿಷತ್ತಿನ ಸರಸ್ವತೀ ಭಂಡಾರಕ್ಕೆ ಕೊಟ್ಟಿರುವ ಈ ಮುಂದೆ ಕಾಣಿಸಿರುವ ತಾಳೆಯೋಲೆಯ ಗ್ರಂಥಗಳ ದಾನ: ೧. ತೊರವೆ ರಾಮಾಯಣ, ೨. ವಾಲ್ಮೀಕಿ ರಾಮಾಯಣ—ಎರಡು ಪ್ರತಿಗಳು, ೩. ಅಧ್ಯಾತ್ಮ ರಾಮಾಯಣ (ಸಂಸ್ಕೃತ).

"ಮೇಲೆ ಕಂಡ ಗ್ರಂಥಗಳ ದಾನಕ್ಕಾಗಿ ಕಾರ್ಯನಿರ್ವಾಹಕ ಮಂಡಲಿ ಶ್ರೀ॥ ಎ. ಎನ್. ರಾಮರಾಯರಿಗೆ ತನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಮರ್ಪಿಸುತ್ತದೆ."

---

## ೨. ಪರಿಷತ್ತಿನಲ್ಲಿ ನಡೆದ ಉಪನ್ಯಾಸಾದಿ ಸಾರ್ವಜನಿಕ ಕಾರ್ಯಗಳು

(೧) ಜನವರಿ ೨೬ನೆಯ ಬುಧವಾರ, ಪ್ರೊ॥ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು, "ಕನ್ನಡದ ಬಾವುಟ" ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಡಿದರು.

(೨) ಫೆಬ್ರುವರಿ ೧೬ನೆಯ ಶುಕ್ರವಾರ, ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರು, "ವಿಶ್ವಂತರನ ಕಥೆ" ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಡಿದರು.

(೩) ಫೆಬ್ರುವರಿ ೨೮ನೆಯ ಗುರುವಾರ, ಬೆಂಗಳೂರು ಡಿಸ್ಟ್ರಿಕ್ಟ್ ನಾರ್ಮಲ್ ಸ್ಕೂಲಿನ ಹೆಡ್ಮಾಸ್ಟರಾದ ಶ್ರೀ॥ ಸಿ. ಕೃಷ್ಣಸ್ವಾಮಿಯವರು "ಕಲ್ಕತ್ತೆಯಲ್ಲಿ ನಡೆದ ವಿಜ್ಞಾನ ಸಮ್ಮೇಳನ ಮತ್ತು ವಿದ್ಯಾಭ್ಯಾಸ ಸಮ್ಮೇಳನ" ಎಂಬ ವಿಷಯವಾಗಿ ಕನ್ನಡದಲ್ಲಿ ಉಪನ್ಯಾಸ ಮಾಡಿದರು.

(೪) ಮಾರ್ಚಿ ೭ನೆಯ ಸೋಮವಾರ, ಬೊಂಬಾಯಿ ಶಾಸನ ಸಭೆಯ ಪರ್ಯಾಲೋಚನೆಯಲ್ಲಿದ್ದ ಕರ್ನಾಟಕ ಏಕೀಕರಣದ ಗೊತ್ತುವಳಿಗೆ ಸಹಾನುಭೂತಿ ತೋರಿಸುವುದಕ್ಕಾಗಿ ರಾಜಚರಿತವಿಶಾರದ ರಾವ್ ಸಾಹೇಬ್ ಶ್ರೀ॥ ಸಿ. ಹಯವದನರಾವ್, ಬಿ.ಎ., ಬಿ.ಎಲ್. ಅವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕಸಭೆ ಸೇರಿತ್ತು. ಶ್ರೀಮಾನ್ ಪಿ.ಆರ್. ರಾಮಯ್ಯ, ಬಿ.ಎಸ್‌ಸಿ. ಅವರೂ, ಶ್ರೀ॥ ಗುರುನಾಥ ಜೋಶಿಯವರೂ, ಧಾರವಾಡದ ಶ್ರೀ॥ ಮುದವೀಡು ಕೃಷ್ಣರಾಯರೂ, ಶ್ರೀ॥ ಬೆನಗಲ್ ರಾಮರಾವ್, ಎಂ.ಎ., ಎಲ್‌ಎಲ್.ಬಿ.

4

ಅವರೂ, ಶ್ರೀಮತಿ ಆರ್. ಕಲ್ಯಾಣಮ್ಮನವರೂ ಏಕೀಕರಣದ ಆವಶ್ಯಕತೆಯ ವಿಚಾರವಾಗಿ ಭಾಷಣ ಮಾಡಿದರು.

(೫) ಮಾರ್ಚಿ ೧೪ನೆಯ ಸೋಮವಾರ, ಧಾರವಾಡದ ಶ್ರೀ॥ ಮುದವೀಡು ಕೃಷ್ಣರಾಯರು "ಕನ್ನಡದ ಆಗುಹೋಗುಗಳು" ಎಂಬ ವಿಷಯವಾಗಿ ಕನ್ನಡದಲ್ಲಿ ಉಪನ್ಯಾಸ ಮಾಡಿದರು. ಪ್ರೊ॥ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ಸಭಾಧ್ಯಕ್ಷತೆಯನ್ನು ವಹಿಸಿದ್ದರು.

(೬) ಮಾರ್ಚಿ ೧೬ನೆಯ ಬುಧವಾರ, ಮಧ್ಯಪ್ರಾಂತಗಳ ರಿಟೈರ್ಡ್ ಡೆಪ್ಯುಟಿ ಕನ್‌ಸರ್‌ವೇಟರ್ ಆಫ್ ಫಾರೆಸ್ಟ್ಸ್ ಶ್ರೀ॥ ಎಂ. ನರಸಿಂಗರಾವ್, ಎಂ.ಬಿ.ಇ. ಅವರು 'ಶ್ರೀ ಛತ್ರಪತಿ ಶಿವಾಜಿ ಮಹಾರಾಜರವರ ಜೀವನಚರಿತ್ರೆ' ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಡಿದರು. ಶ್ರೀ॥ ಬೆಳ್ಳಾವೆ ವೆಂಕಟನಾರಾಯಣಪ್ಪ ಎಂ.ಎ. ಅವರು ಸಭಾಧ್ಯಕ್ಷರಾಗಿದ್ದರು.

(೭) ಏಪ್ರಿಲ್ ೨ನೆಯ ಶನಿವಾರ, ನಂಜನಗೂಡಿನಲ್ಲಿ ಪ್ಲೀಡರಾಗಿರುವ ಶ್ರೀ॥ ಬಿ. ಎಂ. ಶಿವರಾಮಯ್ಯನವರು "ಜ್ವಾಲಾಮುಖಿಗಳು" ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ದೀಪಚಿತ್ರಗಳೊಡನೆ ಉಪನ್ಯಾಸ ಮಾಡಿದರು.

(೮) ಏಪ್ರಿಲ್ ೧೧ನೆಯ ಸೋಮವಾರ, ಶ್ರೀಮತಿ ಆರ್. ಕಲ್ಯಾಣಮ್ಮನವರು "ಸ್ತ್ರೀಯರೂ ಸಾಹಿತ್ಯ ಸೇವೆಯೂ" ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಡಿದರು.

(೯) ಏಪ್ರಿಲ್ ೧೪ನೆಯ ಗುರುವಾರ, ಶ್ರೀಮತಿ ಲಲಿತಮ್ಮನವರು ಶ್ರೀ॥ ಮಾಸ್ತಿ ವೆಂಕಟೇಶ ಐಯಂಗಾರ್, ಎಂ.ಎ. ಅವರ "ತಿರುಪಾಣಿ" ಎಂಬ ನಾಟಕವನ್ನು ಪಕ್ಕವಾದ್ಯಗಳೊಡನೆ ವಾಚನಮಾಡಿದರು.

(೧೦) ಏಪ್ರಿಲ್ ೩೦ನೆಯ ಶನಿವಾರದಿಂದ ಮೇ ೩ನೆಯ ಮಂಗಳವಾರ ಪೂರ್ತಿ "ಐದನೆಯ ವಸಂತ ಸಾಹಿತ್ಯೋತ್ಸವ".

(೧೧) ಮೇ ೯ನೆಯ ಸೋಮವಾರ, ಬೆಂಗಳೂರು ಹಿಂದೀ ಅಮೆಚೂರ್ಸ್ ಕರ್ನಾಟಕ ಸಂಘದವರು ಪರಿಷತ್ತಿನ ವಸಂತ ಸಾಹಿತ್ಯೋತ್ಸವದ ಸಹಾಯಾರ್ಥವಾಗಿ ಶ್ರೀ॥ ಕೆ. ಗೋಪಾಲ ಕೃಷ್ಣರಾಯರ "ಕನ್ಯಾರ್ಥಿ", ಶ್ರೀ॥ ದ. ರಾ. ಬೇಂದ್ರೆಯವರ "ತಿರುಕರ ಪಿಡುಗು" ಮತ್ತು ಶ್ರೀ॥ ರಂ. ಶ್ರೀ. ಮುಗಳಿಯವರ "ಅತಿಥಿದೇವರು" ಎಂಬ ನಾಟಕಗಳನ್ನು ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀ॥ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರ ಅಧ್ಯಕ್ಷತೆಯಲ್ಲಿ ಅಭಿನಯಿಸಿದರು.

(೧೨) ಮೇ ೧೩ನೆಯ ಶುಕ್ರವಾರ, ಶ್ರೀ॥ ಚಿ. ಸದಾಶಿವಯ್ಯನವರು ಮತ್ತು ಗೆಳೆಯರು ಪರಿಷತ್ತಿನ ವಸಂತ ಸಾಹಿತ್ಯೋತ್ಸವದ ಸಹಾಯಾರ್ಥವಾಗಿ "ಮಾಂಗಲ್ಯ" ಎಂಬ ನಾಟಕವನ್ನು ಅಭಿನಯಿಸಿದರು.

(೧೩) ಮೇ ೨೩ನೆಯ ಸೋಮವಾರ, ಮೈಸೂರು ಮಹಾರಾಜರವರ ಕಾಲೇಜಿನ ರಿಟೈರ್ಡ್ ಕನ್ನಡ ಪಂಡಿತರಾದ ಆಸ್ಥಾನ ವಿದ್ವಾನ್ ಶ್ರೀ॥ ಕಾನಕಾನಹಳ್ಳಿ ವರದಾಚಾರ್ಯರು "ದಿವಂಗತ ಕವಿತಿಲಕ ಆಸ್ಥಾನ ಮಹಾವಿದ್ವಾನ್ ಸೋಸಲೆ ಅಯ್ಯಶಾಸ್ತ್ರಿಗಳು ಮತ್ತು ಅವರ ಕೃತಿಗಳು" ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು. ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಅಧ್ಯಕ್ಷತೆ ವಹಿಸಿದ್ದರು. ಕವಿತಿಲಕರ ಭಾವಚಿತ್ರವನ್ನು ಪ್ರದರ್ಶಿಸಲಾಗಿತ್ತು. ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಉಪನ್ಯಾಸಕರನ್ನು ಸಭೆಗೆ ಪರಿಚಯಮಾಡಿಕೊಟ್ಟು, ಉಪನ್ಯಾಸ ಮುಗಿದಮೇಲೆ ಅವರಿಗೆ ಪಾರಿತುರಾಯಿ ಗಳನ್ನೂ, ಶ್ರೀ॥ ಎಸ್. ಜಿ. ಶಾಸ್ತ್ರಿಗಳು ಉಪನ್ಯಾಸಕರಿಗಾಗಿ ಕೊಟ್ಟ ಶಾಲು, ಧೋತ್ರ

ಸೂ ಹಣ್ಣುಗಳ ಸಂಭಾವನೆಯನ್ನೂ ಸಮರ್ಪಿಸಿದರು. ಈ ಉಪನ್ಯಾಸವನ್ನು ದಿವಂಗತರ ಮಕ್ಕಳಾದ ಶ್ರೀ॥ ಎಸ್. ಜಿ. ಶಾಸ್ತ್ರಿಗಳು ಇಡಿಸಿದ್ದರು.

(೧೪) ಮೇ ೨೪ನೆಯ ಮಂಗಳವಾರ, ಮೈಸೂರು ಮಹಾರಾಜರವರ ಕಾಲೇಜಿನ ರಿಟೈರ್ಡ್ ಕನ್ನಡ ಪಂಡಿತರಾದ ಆಸ್ಥಾನ ವಿದ್ವಾನ್ ಶ್ರೀ॥ ಕಾನಕಾನಹಳ್ಳಿ ವರದಾಚಾರ್ಯರು "ಭಟ್ಟಾಕಳಂಕನೂ ಕನ್ನಡ ಶಬ್ದ ಪ್ರಯೋಗಗಳೂ" ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಡಿದರು.

(೧೫) ಜೂನ್ ೬ನೆಯ ಸೋಮವಾರ, ಮಲಯಾ ದೇಶದಿಂದ ಬಂದಿದ್ದ ಶ್ರೀ॥ ಎಂ. ಸುಬ್ಬರಾವ್, ಎಂ.ಎ., ಬಿ.ಕಾಮ್. ಅವರು "ಮಲಯಾ ದೇಶದ ಅನುಭವಗಳು" ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಡಿದರು.

(೧೬) ಶ್ರೀಮನ್ಮಹಾರಾಜರವರ ವರ್ಷ ವರ್ಧಂತ್ಯುತ್ಸವ (ಸಂಗ್ರಹ ವರದಿಯೊಂದನ್ನು ಕಳೆದ ಸಂಚಿಕೆಯಲ್ಲಿ ಕೊಟ್ಟಿದೆ).

## ೧೯೩೪ನೆಯ ಜನವರಿ ತಿಂಗಳಿಂದ ಮಾರ್ಚಿ ಕೊನೆಯವರೆಗೆ ಪರಿಷತ್ತಿಗೆ ಸೇರಿದ ಸದಸ್ಯರ ಪಟ್ಟಿ

ಅಂಗಸಂಸ್ಥೆ : ಸಾಮಾನ್ಯ.—(೧) ಕರ್ನಾಟಕ ಸಂಘ, ಸಾಗರ.

ಸಹಾಯಕರು.—(೧) ಶ್ರೀ॥ ಅಬ್ದುಲ್ ಘನಿ ಅವರು, ಬಿ.ಎ., ಬಿ.ಎಲ್., (೨) ಧರ್ಮಪ್ರಕಾಶ ಶ್ರೀ॥ ಎಸ್. ಸಜ್ಜನರಾಯರು.

ಆಜೀವ ಸದಸ್ಯರು.—ಶ್ರೀ॥ ಗಳಾದ (೧) ಚ. ಚ. ಅಬಕಾರರು, (೨) ಜಿ. ಜಿ. ಹುಲಕುಂದ ಅವರು, ಬಿ.ಎ., ಎಲ್‌ಎಲ್.ಬಿ., (೩) ವಿ. ಡಿ. ಅರಬಳ್ಳಿ ಅವರು, (೪) ಟಿ. ಪಿ. ಕೃಷ್ಣಾಚಾರ್ಯರು, ಎಂ.ಎಸ್‌ಸಿ., (೫) ಶ್ರೀಮತಿ ಎಸ್. ನಂಜಮ್ಮನವರು, ಬಿ.ಎ., ಎಲ್.ಟಿ., (೬) ಎ. ಎನ್. ರಾಘವಾಚಾರ್ಯರು, ಎಂ.ಎ., (೭) ಎಂ. ರಾಮಪ್ಪ ರಟ್ಟಿಹಳ್ಳಿ ಅವರು, (೮) ಕೆ. ಎನ್. ದತ್ತಾತ್ರಿ ಅವರು, (೯) ಸಿ. ರಾಮಸ್ವಾಮಿ ಶೆಟ್ಟರು, (೧೦) ಕೆ. ಎಚ್. ಹಾಲಪ್ಪನವರು, ಬಿ.ಎ., (೧೧) ಬಿ. ಆರ್. ಕಾವೇಟಿ ರಂಗಪ್ಪನವರು, (೧೨) ಟಿ. ಎಲ್. ಗಂಗೋಜಿರಾಯರು, (೧೩) ಎನ್. ವಿ. ಗುಂಡೂರಾಯರು, (೧೪) ಎಚ್. ನಿರಂಜನರಾಜ ಅರಸರು, ಬಿ.ಎ., (೧೫) ಎಸ್. ನಾಗಪ್ಪನವರು, ಬಿ.ಎ., (೧೬) ಟಿ. ವೆಂಕಟ ಸುಬ್ಬಯ್ಯನವರು, (೧೭) ಶಾಂಪೂರ್ ಪಾಪಣ್ಣನವರು, (೧೮) ಮಿರ್ಲೆ ಎನ್. ಲಕ್ಷ್ಮೀನಾರಣಪ್ಪನವರು, ಬಿ.ಎ., ಎಲ್‌ಎಲ್.ಬಿ., (೧೯) ಕೆ. ಟಿ. ಸತ್ಯನಾರಾಯಣಶೆಟ್ಟರು, (೨೦) ಪಿ. ಸುಬ್ಬರಾಮ ಶೆಟ್ಟರು, (೨೧) ರಾಜಚರಿತವಿಶಾರದ ರಾವ್ ಸಾಹೇಬ್ ಸಿ. ಹಯವದನ ರಾಯರು, ಬಿ.ಎ., ಬಿ.ಎಲ್., (೨೨) ಶ್ರೀಮತಿ ಬಿ. ಎಸ್. ವೇಂಗಡಮ್ಮನವರು (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ), (೨೩) ಬಿ. ವೆಂಕಟಸ್ವಾಮಯ್ಯನವರು, ಬಿ.ಎ., (೨೪) ಜಿ. ಕೃಷ್ಣಾಚಾರ್ಯ ಜೋಶಿ ಅವರು, ಬಿ.ಎ., ಎಲ್‌ಎಲ್.ಬಿ. (೨೫) ಸಿ. ಕೃಷ್ಣಶರ್ಮರವರು, (೨೬) ಬಿ. ಕೆ. ರಾಮಕೃಷ್ಣಯ್ಯನವರು, ಎಂ.ಎ., ಎಲ್‌ಎಲ್.ಬಿ., (೨೭) ಬಿ. ಎನ್. ದೇವರಯ್ಯನವರು, ಎಂ.ಎ., ಎಲ್‌ಎಲ್.ಬಿ., (೨೮) ರಾಜಕಾರ್ಯನಿಪುಣ ಶ್ರೀ॥ ಎಸ್. ಶಾಮಣ್ಣನವರು, ಬಿ.ಎ., (೨೯) ಟಿ. ರಂಗಸ್ವಾಮಿಯವರು, ಬಿ.ಎ., (೩೦) ಕೆ. ಎಸ್. ತಿರುಪತಿ ಅವರು (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ), (೩೧) ಎ. ವಿ. ಕೃಷ್ಣಮೂರ್ತಿಗಳು, ಬಿ.ಎ., ಬಿ.ಕಾಮ್. (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ), (೩೨) ವರವಣಿ ರಾಮರಾಯರು, ಬಿ.ಎ. (ಸಾಮಾನ್ಯ ಸದಸ್ಯತ್ವದಿಂದ ಬದಲಾವಣೆ), (೩೩) ಡಿ. ಆರ್. ರಾಮಯ್ಯನವರು, ಬಿ.ಎ., (೩೪) ಓ. ಎನ್. ಲಿಂಗಯ್ಯನವರು, ಬಿ.ಎ. (ಆನರ್ಸ್), (೩೫) ಸಿ. ಆರ್. ಅನಂತರಾಯರು, ಬಿ.ಎ., (೩೬) ಎನ್. ಎಸ್. ತಿಮ್ಮಯ್ಯನವರು, ಎಂ.ಎ., (೩೭) ಪಿ. ಸೂರ್ಯನಾರಾಯಣ ಶೆಟ್ಟರು, ಬಿ.ಎ., ಎಲ್‌ಎಲ್.ಬಿ, (೩೮) ಡಿ. ಎಲ್. ನರಸಿಂಹಾಚಾರ್ಯರು, ಎಂ.ಎ., (೩೯) ಎನ್. ಬಾಲಕೃಷ್ಣಯ್ಯನವರು, ಬಿ.ಎ., ಎಲ್‌ಎಲ್.ಬಿ., (೪೦) ಎಸ್. ವಿ. ಶ್ರೀನಿವಾಸ ಶೆಟ್ಟರು, (೪೧) ಕೆ. ಎಸ್. ಕಾಮಾಕ್ಷಯ್ಯ ಶೆಟ್ಟರು.

**ಸಾಮಾನ್ಯ ಸದಸ್ಯರು (ಪತ್ರಿಕೆ ಸಹಿತ).**—ಶ್ರೀ॥ ಗಳಾದ (೧) ಎಸ್. ಜಿ. ಕುಲಕರ್ಣಿ ಅವರು, (೨) ವಿ. ಬಿ. ಅಲ್ಬಾಳ್ ಅವರು, ಬಿ.ಎ., ಎಲ್‌ಎಲ್.ಬಿ., (೩) ಸಿ. ಎಸ್. ಶಾಮರಾಯರು, ಬಿ.ಎ., ಎಂ.ಇ., ಎ.ಎಂ.ಐ.ಇ., (೪) ಲೋಕಸೇವಾನಿರತ ರಾವ್ ಬಹದ್ದೂರ್ ಬಿ. ಕೆ. ಗರುಡಾಚಾರ್ಯರು, (೫) ಎ. ಸುಂದರರಾಜಾರಾಯರು, ಬಿ.ಎ., ಬಿ.ಎಲ್., (೬) ಪಿ. ಎಂ. ಸೋಮಸುಂದರನ್ ಅವರು, ಎಂ.ಎ., ಎಲ್.ಟಿ., (೭) ವೈ. ಮಹಾಬಲೇಶ್ವರಪ್ಪನವರು.

**ಸಾಮಾನ್ಯ ಸದಸ್ಯರು (ಪತ್ರಿಕೆ ವಿನಾ).**—ಶ್ರೀ॥ ಗಳಾದ (೧) ಶ್ರೀಮತಿ ಜಿ. ತೋಟದಮ್ಮನವರು, (೨) ಎಸ್. ಶ್ರೀಕಂಠಯ್ಯನವರು, ಬಿ.ಎ., ಬಿ.ಎಲ್., ಎಂ.ಆರ್.ಎ.ಎಸ್., (೩) ಶ್ರೀಮತಿ ಎಚ್. ರತ್ನಮ್ಮನವರು, ಎಂ.ಎಸ್‌ಸಿ., (೪) ಎನ್. ಶಾಮಯ್ಯಂಗಾರ್ಯರು, ಬಿ.ಎ., ಬಿ.ಎಲ್., (೫) ಇ. ಆರ್. ತಿರುಮಲಾಚಾರ್ಯರು, ಬಿ.ಎ., (೬) ಶ್ರೀಮತಿ ವೈ. ಆರ್. ರಂಗಮ್ಮನವರು, ಬಿ.ಎ., ಬಿ.ಟಿ., (೭) ಸಿ. ಪದ್ಮಾವತಮ್ಮನವರು, (೮) ಎಲ್. ರಾಜಾರಾಯರು, (೯) ಶ್ರೀಮತಿ ಬಿ. ಎ. ವಾಟ್ಸ್ ಅವರು, ಬಿ.ಎ. (ಆನರ್ಸ್), (೧೦) ಕೆ. ಅಶ್ವತ್ಥನಾರಾಯಣರಾಯರು, ಬಿ.ಇ., (೧೧) ಎಸ್. ರುದ್ರಪತಿ ಅವರು, ಎಂ.ಎ., (೧೨) ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳು, (೧೩) ಟಿ. ಎಂ. ಅಮೀರ್ ಅವರು, ಬಿ.ಎ., (೧೪) ಎಂ. ವಿ. ಸೀತಾರಾಮಯ್ಯನವರು, ಎಂ.ಎ., (೧೫) ಕೂಡಲಿ ಚಿದಂಬರಂ ಅವರು, ಬಿ.ಎ., ಎಲ್‌ಎಲ್.ಬಿ., (೧೬) ಗುರುರಾವ್ ದೇಶಪಾಂಡೆಯವರು, ಬಿ.ಎ., ಬಿ.ಟಿ., (೧೭) ಎಂ. ಮುನಿಸ್ವಾಮಯ್ಯನವರು, ಬಿ.ಎ., ಬಿ.ಎಲ್., (೧೮) ಎಸ್. ಕೆ. ವೆಂಕಟರಮಣಯ್ಯರ್ ಅವರು, ಬಿ.ಎ., ಬಿ.ಎಲ್., (೧೯) ಮೀರ್ ಸಫ್ದರ್ ಹುಸೇನ್ ಅವರು, ಬಿ.ಎ., (೨೦) ಎ. ಎನ್. ಮೂರ್ತಿರಾಯರು, ಎಂ.ಎ., (೨೧) ಪಿ. ಎಸ್. ಲಕ್ಷ್ಮೀನರಸು ಅವರು, ಬಿ.ಎ., ಬಿ.ಎಲ್., (೨೨) ಶ್ರೀಮತಿ ಶ್ರೀಯವರು, ಎಂ.ಎಸ್‌ಸಿ., (೨೩) ಎಸ್. ಎನ್. ಅಜ್ಜಂಪೂರ್ ಅವರು, (೨೪) ಶ್ರೀಮತಿ ಎಂ. ಸಿ. ವೇದವಲ್ಲಿ ಅವರು, (೨೫) ಮಿಸೆಸ್ ಎಚ್. ವ್ಯಾಸರಾಯರು, (೨೬) ಪಿ. ವಿ. ಶ್ರೀನಿವಾಸಾಚಾರ್ಯರವರು, (೨೭) ಕೆ. ರಾಜಾರಾಯರು, ಬಿ.ಎ., (೨೮) ಎಸ್. ವೆಂಕಟಸುಬ್ಬಯ್ಯನವರು, ಬಿ.ಎಸ್‌ಸಿ., (೨೯) ಜಿ. ನರಸಿಂಹ ಜೋಯಿಸರು, (೩೦) ಶ್ರೀಮತಿ ಸುಶೀಲಾ ಲಿಂಗಯ್ಯನವರು, ಎಂ.ಎಸ್‌ಸಿ.

---

# ಅಂಗ ಸಂಸ್ಥೆಗಳ ವರದಿ

---

## ಕರ್ನಾಟಕ ಸಂಘ, ಮಹಾರಾಜರವರ ಕಾಲೇಜು, ಮೈಸೂರು

**೩೦-೮-೧೯೩೭:** ಉಪನ್ಯಾಸ—“ಕರ್ನಾಟಕದ ಚರಿತ್ರೆ”.—ಶ್ರೀಮಾನ್ ನಾ. ಸು. ರಾಜಪುರೋಹಿತರಿಂದ; ಅಧ್ಯಕ್ಷರು: ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ.

**೧೨-೯-೧೯೩೭:** ಕಾವ್ಯವಾಚನ—“ಚಿತ್ರಾಂಗದ”ದ ಕೆಲವು ಭಾಗಗಳು.—ವಾಚನಕಾರರು: ಶ್ರೀ॥ ಕೆ. ವಿ. ಪುಟ್ಟಪ್ಪನವರು, ಎಂ.ಎ.

**೧೮-೯-೧೯೩೭:** ಚರ್ಚಾ ಸಭೆ—ವಿಷಯ: “ಈಗ ನಮಗೆ ದೇವರು ಬೇಕಿಲ್ಲ”.—ಅಧ್ಯಕ್ಷರು: ಶ್ರೀ॥ ಬಿ. ನಾಗೇಶರಾಯರು, ಎಂ.ಎ.

**೨೨-೯-೧೯೩೭:** ಆಶುಭಾಷಣ ಗೋಷ್ಠಿ—ಅಧ್ಯಕ್ಷರು: ಶ್ರೀ॥ ಸಿ. ಆರ್. ನರಸಿಂಹಶಾಸ್ತ್ರಿಗಳು, ಎಂ.ಎ.

೨೬-೯-೧೯೩೭: ಅಂತರ ಕರ್ನಾಟಕ ಸಂಘ ಚರ್ಚೆ: ವಿಷಯ:—"ನಾಗರಿಕತೆಯಿಂದಲೇ ನಾವು ನಾಶವಾಗುತ್ತಿರುವುದು".—ಸೂಚಕರು: (೧) ಶ್ರೀ॥ ಎಸ್. ವಿ. ಪರಮೇಶ್ವರ ಭಟ್ಟರು, ಬಿ.ಎ. (ಆನರ್ಸ್) (ಮೈಸೂರು ಮಹಾರಾಜ ಕಾಲೇಜು), (೨) ಶ್ರೀ॥ ಬ. ನ. ಸುಂದರರಾಯರು (ಬೆಂಗಳೂರು ಇಂಟರ್ ಕಾಲೇಜು), (೩) ಶ್ರೀ॥ ಎಸ್. ಎಂ. ಸಂಜುಂಡಯ್ಯನವರು (ಮಹಾರಾಜ ಕಾಲೇಜು); ಖಂಡನಕಾರರು: (೧) ಶ್ರೀ॥ ಸಿ. ಕೆ. ಆನಂದರಾಯರು (ಬೆಂಗಳೂರು ಸೆಂಟ್ರಲ್ ಕಾಲೇಜು), (೨) ಶ್ರೀಮತಿ ಸಿ. ಸುಭದ್ರಾಬಾಯಿಯವರು (ಮಹಾರಾಣಿ ಕಾಲೇಜು), (೩) ಶ್ರೀ॥ ಸುದರ್ಶನಾಚಾರ್ಯರು (ಮೈಸೂರು ಇಂಟರ್ ಕಾಲೇಜು); ಅಧ್ಯಕ್ಷರು: ರಾವ್ ಸಾಹೇಬ್ ಎಂ. ರಾಮಸ್ವಾಮಿಯವರು.

೩೦-೯-೧೯೩೭: ಉಪನ್ಯಾಸ—"ಜೈನಧರ್ಮ"—ವಿದ್ವಾನ್ ವೇ॥ ಬ್ರಹ್ಮಸೂರಿಶಾಸ್ತ್ರಿಗಳಿಂದ. ಅಧ್ಯಕ್ಷರು: ಶ್ರೀಮಾನ್ ಎಂ. ಎ. ವೆಂಕಟರಾಯರು, ಎಂ.ಎ.

೨೨-೧೦-೧೯೩೭: ಚರ್ಚಾ ಸಭೆ—ವಿಷಯ: "ಒಂದು ವರ್ಷವಾದರೂ ಗ್ರಾಮಸೇವೆ ಸಲ್ಲಿಸುವ ಮೊದಲು ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾನಿಲಯದ ಪ್ರಶಸ್ತಿ ಕೊಡಕೂಡದು". ಸೂಚಕರು: (೧) ಶ್ರೀ॥ ಟಿ. ಮರಿಯಪ್ಪನವರು, ಬಿ.ಎ., ಎಲ್‌ಎಲ್.ಬಿ., (೨) ಶ್ರೀ॥ ಕೆ. ಕೆಂಚಪ್ಪನವರು, ಎಂ.ಎ., ಎಲ್‌ಎಲ್.ಬಿ.; ಖಂಡನಕಾರರು: (೧) ಶ್ರೀ॥ ವೀರಣ್ಣಗೌಡರು, (೨) ಶ್ರೀ॥ ಎಸ್. ರಂಗರಾಮಯ್ಯನವರು, ಬಿ.ಎ., ಎಲ್‌ಎಲ್.ಬಿ., (೩) ಶ್ರೀ॥ ಸಿ. ಎನ್. ನರಸಿಂಗರಾಯರು, ಬಿ.ಎ., ಬಿ.ಎಲ್., (೪) ಶ್ರೀ॥ ಎ. ಭೀಮಪ್ಪನಾಯಕರು, ಬಿ.ಎ.; ಅಧ್ಯಕ್ಷರು: ಶ್ರೀ॥ ಭೂಪಾಳಂ ಚಂದ್ರಶೇಖರ ಶೆಟ್ಟರು, ಬಿ.ಎ.

೨೮-೧೦-೧೯೩೭: ಶ್ರೀ॥ ಪಂಜೆ ಮಂಗೇಶರಾಯರ ನಿಧನಕ್ಕಾಗಿ ಸಂತಾಪಸೂಚಕ ಸಭೆ—ಭಾಷಣಕಾರರು: ಶ್ರೀ॥ ಡಿ. ಎಲ್. ನರಸಿಂಹಾಚಾರ್ಯರು, ಎಂ.ಎ., ಅಧ್ಯಕ್ಷರು: ಶ್ರೀ॥ ಟಿ. ಎನ್. ಶ್ರೀಕಂಠಯ್ಯನವರು, ಎಂ.ಎ.

೩೦-೧೦-೧೯೩೭: ಘಟಿಕೋತ್ಸವ ಸಮಾರಂಭದ ಚರ್ಚಾಸಭೆ—ವಿಷಯ: "ಪದವೀಧರರಿಂದ ದೇಶಕ್ಕೆ ಪ್ರಯೋಜನವಾಗುತ್ತಿಲ್ಲ"—ಸೂಚಕರು: (೧) ಶ್ರೀ॥ ಜಿ. ವೆಂಕಟಸುಬ್ಬಯ್ಯನವರು, ಎಂ.ಎ., (೨) ಶ್ರೀಮತಿ ಸೀತಮ್ಮನವರು, ಬಿ.ಎಸ್‌ಸಿ., (೩) ಶ್ರೀ॥ ಲಕ್ಷ್ಮೀನಾರಾಯಣರವರು, ಬಿ.ಎಸ್‌ಸಿ.; ಖಂಡನಕಾರರು: (೧) ಶ್ರೀ॥ ಬಿ. ಕೆ. ಶ್ರೀನಿವಾಸಮೂರ್ತಿಗಳು, ಬಿ.ಎ., (೨) ಶ್ರೀಮತಿ ಪಿ. ಎನ್. ಲಕ್ಷ್ಮೀ ಅವರು, ಬಿ.ಎಸ್‌ಸಿ., (೩) ಶ್ರೀ॥ ಶಂಕರನಾರಾಯಣರಾಯರು, ಎಂ.ಎ.; ಅಧ್ಯಕ್ಷರು: ಡಾಕ್ಟರ್ ಎಂ. ಎಚ್. ಕೃಷ್ಣ ಅವರು, ಎಂ.ಎ., ಡಿ.ಲಿಟ್.

೧೪-೧೨-೧೯೩೭: ಮೈಸೂರು ನಗರದ ಎಲ್ಲ ಕರ್ನಾಟಕ ಸಂಘಗಳ ಆಶ್ರಯದಲ್ಲಿ ಆಚರಿಸಿದ "ಕನ್ನಡ ಹಬ್ಬ"ದಲ್ಲಿ ಕಾಲೇಜಿನ ಕರ್ನಾಟಕ ಸಂಘವೂ ಭಾಗ ವಹಿಸಿತು.

೧೭-೧-೧೯೩೮

ಕೆ. ವಿ. ಕುಮಾರಸ್ವಾಮಿ,
ಕೆ. ಪುಟ್ಟಸ್ವಾಮಿ,
ಗೌರವ ಕಾರ್ಯದರ್ಶಿಗಳು.

## ಕರ್ನಾಟಕ ಸಂಘ, ಶಿವಮೊಗ್ಗ

೧೭-೧-೧೯೩೮: ಉಪನ್ಯಾಸ—"ನಿಜಗುಣ ಶಿವಯೋಗಿಗಳು".—ಶ್ರೀ॥ ಟಿ. ಗುರುನಂಜಯ್ಯ, ಬಿ.ಎ., ಬಿ.ಎಲ್. ಅವರಿಂದ.

೧೨-೨-೧೯೩೮: ಉಪನ್ಯಾಸ—"ತಮಿಳು ಸಾಹಿತ್ಯ".—ಶ್ರೀ॥ ಪಿ. ಎಂ. ಸೋಮಸುಂದರನ್, ಎಂ.ಎ., ಎಲ್.ಟಿ. ಅವರಿಂದ.

೨೦-೨-೧೯೩೮: ಉಪನ್ಯಾಸ—"ಸತ್ತು ಬದುಕಿದ ಅಶ್ವತ್ಥಾಮ".—ಶ್ರೀ॥ ಎಸ್. ವಿ. ರಂಗಣ್ಣ, ಎಂ.ಎ. ಅವರಿಂದ.

೧೯–೩–೧೯೩೮: ಸಂಘದ ಏಳನೆಯ ವಾರ್ಷಿಕೋತ್ಸವ.—ಅಧ್ಯಕ್ಷರು: ಶ್ರೀ|| ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ.

ಶ್ರೀಮತಿ ಗಿರಿಜ ಅಮೃತಾಚಾರಿ ಅವರಿಂದ ದೇವತಾಪ್ರಾರ್ಥನೆ; ಆಸ್ಥಾನ ಮಹಾವಿದ್ವಾನ್ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳಿಂದ ಸಭಾಧ್ಯಕ್ಷರ ಪರಿಚಯ; ಶ್ರೀಮತಿ ಮನೋರಮ ಕೌಸಲ್ಯ ಅವರ ಸಂಗೀತ; ಸ್ಪರ್ಧೆಗಳಲ್ಲಿ ಬಹುಮಾನ ಪಡೆದವರಿಂದ ಕಾವ್ಯವಾಚನ; ಕಾರ್ಯದರ್ಶಿಗಳಿಂದ ಸಂಘದ ವರದಿ; ಬಹುಮಾನ ವಿನಿಯೋಗ; ಅನಂತರ "ಕನ್ನಡದ ಹಿರಿಮೆ" ಎಂಬ ವಿಷಯ ವಾಗಿ ಅಧ್ಯಕ್ಷಭಾಷಣದೊಂದಿಗೆ ಸಭೆಯು ಮುಕ್ತಾಯ. ರಾತ್ರಿ ೯ ಗಂಟೆಗೆ ಹೊಸನಗರದಿಂದ ದಯಮಾಡಿಸಿದ್ದ ಅಚ್ಚೆ ನಾರಾಯಣರಾಯರು ಮತ್ತು ಅವರ ಸ್ನೇಹಿತರಿಂದ ಯಕ್ಷಗಾನ ಸಂಗೀತ.

೨೦–೩–೧೯೩೮: ಪ್ರಾತಃಕಾಲ—ಎರಡನೆಯ ಜಿಲ್ಲಾ ಕರ್ನಾಟಕ ಸಂಘ ಸಮ್ಮೇಳನ.—ಪ್ರಾರಂಭ ಭಾಷಣ: ಅಧ್ಯಕ್ಷರು: ಶ್ರೀ|| ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ.

ಹನ್ನೊಂದು ಸಂಘಗಳ ಪ್ರತಿನಿಧಿಗಳೂ, ಶಿವಮೊಗ್ಗ ಕರ್ನಾಟಕ ಸಂಘದ ಸದಸ್ಯರೂ ಭಾಗ ವಹಿಸಿದ್ದರು. ಕಾರ್ಯವಿವರ:—ಪ್ರಾರಂಭ ಭಾಷಣ: ಜಿಲ್ಲಾಧಿಕಾರಿಗಳಾದ ಶ್ರೀ|| ಎಂ. ಶೇಷಾದ್ರಿ, ಎಂ.ಎ. ಅವರಿಂದ; ಕಾರ್ಯದರ್ಶಿಗಳ ವರದಿ; ಸಂಘದ ಪ್ರತಿನಿಧಿಗಳ ಭಾಷಣಗಳು; ನಿರ್ಣಯ ಗಳ ಚರ್ಚೆ, ಅಂಗೀಕಾರ; ಅಧ್ಯಕ್ಷ ಭಾಷಣ.

ಜಿಲ್ಲಾ ಕರ್ನಾಟಕ ಸಂಘಗಳ ಒಂದು ಕೇಂದ್ರಸಂಸ್ಥೆಯನ್ನು ಸ್ಥಾಪಿಸಬೇಕೆಂಬ ನಿರ್ಣಯವೂ, ಅದರ ರಚನೆಗೆ ಒಂದು ಸಮಿತಿಯನ್ನು ನೇಮಕಮಾಡುವ ನಿರ್ಣಯವೂ ಅಂಗೀಕರಿಸಲ್ಪಟ್ಟುವು.

ಸಂಜೆ: ಉಪನ್ಯಾಸ—"ಕುಮಾರವ್ಯಾಸನ ದ್ರೌಪದಿ".—ಶ್ರೀ|| ಸಿ. ಕೆ. ವೆಂಕಟ ರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರಿಂದ.

೨೨–೩–೩೮: ಉಪನ್ಯಾಸ—"ಸೂರ್ಯ, ಚಂದ್ರ ಮತ್ತು ನಕ್ಷತ್ರಗಳು" (ಇಂಗ್ಲಿಷ್‌ನಲ್ಲಿ)—(ಬೊಂಬಾಯಿ ವಿಲ್ಸನ್ ಕಾಲೇಜಿನಲ್ಲಿ ಭೌತಶಾಸ್ತ್ರದ ಅಧ್ಯಾಪಕರು) ಪ್ರೊಫೆಸರ್ ಎಚ್. ಜಾನ್ ಟೇಲರ್, ಎಂ.ಎಸ್‌ಸಿ., ಪಿಎಚ್.ಡಿ. ಅವರಿಂದ.

ಸಂಘದ ಪುಸ್ತಕ ಭಂಡಾರಕ್ಕೆ ಈಚೆಗೆ ೫೦ ಪುಸ್ತಕಗಳನ್ನು ಸೇರಿಸಲಾಗಿದೆ. ಪುಸ್ತಕ ಭಂಡಾರದ ಗ್ರಂಥಗಳ ಸಂಖ್ಯೆ, ಈಗ ೮೭೯. ಸಂಘದ ಸದಸ್ಯರು ಕುಂಸಿ ಕರ್ನಾಟಕ ಸಂಘದ ಆಶ್ರಯದಲ್ಲಿ ಉಪನ್ಯಾಸ, ಕಾವ್ಯವಾಚನಗಳನ್ನು ನಡಸಿರುತ್ತಾರೆ. ವಾರ್ಷಿಕೋತ್ಸವ ಸಮಯದಲ್ಲಿ ರೂ. ೪೪–೧೨–೦ ಬೆಲೆ ಬಾಳುವ ೧೧೩ ಪುಸ್ತಕಗಳನ್ನು ೨೭ ಬಹುಮಾನಗಳಾಗಿ ಹಂಚಲಾಗಿದೆ. ಶಿವಮೊಗ್ಗ ಪೌರಸಭೆಯವರ ಔದಾರ್ಯದಿಂದ ನಗರಭವನದಲ್ಲಿ ಸಂಘದ ಕಚೇರಿಗೆ ಒಂದು ಕೊಠಡಿ ದೊರಕಿದೆ.

ಎಸ್. ವಿ. ಕೃಷ್ಣಮೂರ್ತಿರಾವ್,
೨೦–೪–೧೯೩೮　　ಗೌರವ ಕಾರ್ಯದರ್ಶಿ.

---

## ಕರ್ನಾಟಕ ಸಂಘ, ತಿಪಟೂರು

೧೬–೨–೧೯೩೮: ಉಪನ್ಯಾಸ—"ಕುಮಾರವ್ಯಾಸನ ಕನ್ನಡ".—ಶ್ರೀ|| ಎಸ್. ವಿ. ರಂಗಣ್ಣ, ಎಂ.ಎ. ಅವರಿಂದ; ಅಧ್ಯಕ್ಷರು: ಶ್ರೀ|| ಡಿ. ಎಸ್. ಮಲ್ಲಪ್ಪನವರು.

೨೪–೨–೧೯೩೮: ದೇವರನಾಮಗಳ ಹಾಡಿಕೆ.—ಸಂಗೀತ ವಿದ್ವಾನ್ ಶ್ರೀ|| ಪರಬು ರಾಮನ್ ಅವರಿಂದ.

೧೪–೩–೧೯೩೮: ಉಪನ್ಯಾಸ—"ವಿಜ್ಞಾನಶಾಸ್ತ್ರ ನಾಸ್ತಿಕತೆಯನ್ನು ಬೋಧಿಸುತ್ತ ದೆಯೆ?".—ಎಸ್. ಆರ್. ಸಂಪತ್ತೈಂಗಾರ್, ಬಿ.ಎ., ಎಲ್‌ಎಲ್.ಬಿ. ಅವರಿಂದ; ಅಧ್ಯಕ್ಷರು: ಶ್ರೀ|| ಸಿ. ಸುಬ್ಬರಾಯರು, ಎಂ.ಎ. (ಆನರ್ಸ್).

ಎನ್. ವೆಂಕಟಾಚಾರ್ಯ,
ವಿ. ಶ್ರೀರಂಗಾಚಾರ್,
ಗೌರವ ಕಾರ್ಯದರ್ಶಿಗಳು.

---

## ಕರ್ನಾಟಕ ಸಂಘ, ಮಧುಗಿರಿ

೧೭—೧—೧೯೩೮: ಉಪನ್ಯಾಸ—"ಕವಿರತ್ನ ಕಾಳಿದಾಸ".—ಶ್ರೀ॥ ದೇವುಡು ನರಸಿಂಹ ಶಾಸ್ತ್ರಿ, ಎಂ.ಎ. ಅವರಿಂದ; ಅಧ್ಯಕ್ಷರು: ಶ್ರೀ॥ ಎಸ್. ಶಾಮುಶಾಸ್ತ್ರಿಗಳು.

೧೮—೧—೧೯೩೮: ಉಪನ್ಯಾಸ—"ಕರ್ನಾಟಕ ಸಂಸ್ಕೃತಿ".—ಶ್ರೀ॥ ದೇವುಡು ನರಸಿಂಹ ಶಾಸ್ತ್ರಿ, ಎಂ.ಎ. ಅವರಿಂದ; ಅಧ್ಯಕ್ಷರು: ಶ್ರೀ॥ ಎಂ. ರಾಜಾರಾಯರು, ಎಂ.ಎ.

೩೧—೧—೧೯೩೮: ಪುರಂದರದಾಸರ ಪುಣ್ಯದಿನಾಚರಣೆ: ಹರಿಕಥೆ—ಶ್ರೀ॥ ಎಸ್. ಕೃಷ್ಣ ಮೂರ್ತಿಯವರಿಂದ.

೯—೨—೧೯೩೮: ಉಪನ್ಯಾಸ—"ವಿಶ್ವಮೈತ್ರಿ".—ಶ್ರೀ॥ ಎಸ್. ಆರ್. ನರಸಿಂಹಯ್ಯ, ಬಿ.ಎ. ಅವರಿಂದ.

೧೩—೨—೧೯೩೮: ಸತ್ಕಾರ ಕೂಟ: ಶ್ರೀ॥ ಎಸ್. ವಿ. ರಂಗಣ್ಣ, ಎಂ.ಎ. ಅವರ ಗೌರವಾರ್ಥವಾಗಿ.

೧೪—೨—೧೯೩೮: ಉಪನ್ಯಾಸ—"ಸತ್ತು ಬದುಕಿದ ಅಶ್ವತ್ಥಾಮ".—ಶ್ರೀ॥ ಎಸ್. ವಿ. ರಂಗಣ್ಣ, ಎಂ.ಎ. ಅವರಿಂದ; ಅಧ್ಯಕ್ಷರು: ಶ್ರೀ॥ ಎಂ. ರಾಜಾರಾಯರು, ಎಂ.ಎ.

೨೭—೨—೧೯೩೮: ಉಪನ್ಯಾಸ—"ಜಪಾನರೂ ಅವರ ದೇಶವೂ".—(ದೀಪಚಿತ್ರ ಸಹಿತ) ಶ್ರೀ॥ ಬಿ. ಎಂ. ಶಿವರಾಮಯ್ಯನವರಿಂದ.

೬—೩—೧೯೩೮ರಿಂದ ೧೩—೩—೧೯೩೮ರ ವರೆಗೆ: ಗೀತಾ ಸಪ್ತಾಹ.—ಶ್ರೀ॥ ಸ್ವಾಮಿ ಶಂಕರಾನಂದ ಭಾರತೀ ಸ್ವಾಮಿಗಳವರಿಂದ. ಸ್ವಾಗತ ಭಾಷಣ.—ಶ್ರೀ॥ ಎಸ್. ಕೃಷ್ಣಮಾಚಾರ್ಯರು (ಕರ್ನಾಟಕ ಸಂಘದ ಅಧ್ಯಕ್ಷರು); "ಗೀತಾ: ನಮ್ಮ ದೃಷ್ಟಿಯಿಂದ".—ಶ್ರೀ॥ ದೇವುಡು ನರಸಿಂಹಶಾಸ್ತ್ರಿಗಳು, ಎಂ.ಎ.

೭—೩—೧೯೩೮: "ಗೀತೆಯೂ ಆತ್ಮವಾದವೂ".—ಶ್ರೀ॥ ಸುಬ್ಬನರಸಿಂಹ ಶಾಸ್ತ್ರಿಗಳಿಂದ.

೮—೩—೧೯೩೮: "ಕರ್ಮಯೋಗ".—ಆಸ್ಥಾನ ವಿದ್ವಾನ್ ಪೌರಾಣಿಕರತ್ನ ಹೊಳವನಹಳ್ಳಿ ಶೇಷಾಚಾರ್ಯರಿಂದ.

೯—೩—೧೯೩೮: "ಪಾತಂಜಲಿಯೋಗ ಮತ್ತು ಗೀತಾ".—ಶ್ರೀ॥ ಟಿ. ಸುಬ್ರಹ್ಮಣ್ಯಂ, ಬಿ.ಎ., ಎಲ್‌ಎಲ್.ಬಿ. ಅವರಿಂದ.

೧೦—೩—೧೯೩೮: "ಗೀತೆ".—ಶ್ರೀ॥ ಸ್ವಾಮಿ ರಂಗನಾಥಾನಂದಜೀಯವರಿಂದ. "ಗೀತೆಯ ವೈಶಿಷ್ಟ್ಯ".—ಶ್ರೀ॥ ಬಿ. ರಾಮಸ್ವಾಮಯ್ಯ, ಬಿ.ಎಸ್‌ಸಿ. ಅವರಿಂದ.

೧೧—೩—೧೯೩೮: "ದೈವಾಸುರ ಸಂಪತ್".—ಶ್ರೀ॥ ಸ್ವಾಮಿ ಶಂಕರಾನಂದ ಭಾರತಿಯವರಿಂದ.

೧೨—೩—೧೯೩೮: "ಗೀತೆಯ ಗುರುಶಿಷ್ಯರು".—ಶ್ರೀ॥ ವಿ. ರಾಮಸ್ವಾಮಿ, ಬಿ.ಎ. ಅವರಿಂದ. "ಗೀತೆಯ ದೇವನು ಯಾರು? ಅವನನ್ನು ಪೂಜಿಸುವುದೇಕೆ?".—ಶ್ರೀ॥ ಚಿದಂಬರಂ ಅವರಿಂದ.

೧೩—೩—೧೯೩೮: "ಗೀತೆಯ ಸಂದೇಶ".—ಶ್ರೀ॥ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರಿಂದ; "ಮುಕ್ತಾಯ ಭಾಷಣ".—ಶ್ರೀ॥ ಎಸ್. ಶಾಮುಶಾಸ್ತ್ರಿಗಳಿಂದ.

೧೯—೩—೧೯೩೮: ಸಂಗೀತ.—ಅಣ್ಣಾಮಲೆ ವಿಶ್ವವಿದ್ಯಾನಿಲಯದ ಸಂಗೀತಭೂಷಣ ಶ್ರೀ॥ ಎಂ. ಎಸ್. ಶಲ್ಪಪಿಳ್ಳೆ ಅಯ್ಯಂಗಾರ್ಯರಿಂದ; ಪಿಟೀಲು: ಶ್ರೀ॥ ಎಂ. ಎಸ್. ತಾತಾಚಾರ್ಯರು.

೩—೪—೧೯೩೮ರಿಂದ ೯—೪—೧೯೩೮ರ ವರೆಗೆ: ರಾಮಾಯಣ ಸಪ್ತಾಹ.—ಸಂಸ್ಕೃತ ಕವಿ, ವಾಲ್ಮೀಕಿ ರಾಮಾಯಣ ಪ್ರವಚನಪ್ರವೀಣ ವೇ॥ ಬಿ. ಮೈಲಾರಿ ಜೋಯಿಸರಿಂದ.

೨೦—೪—೧೯೩೮

ಕೆ. ನಾರಾಯಣಾಚಾರ್ಯ,
ಗೌರವ ಕಾರ್ಯದರ್ಶಿ.

## ಕರ್ನಾಟಕ ಸಂಘ, ಹಿಂದೂ ವಿಶ್ವವಿದ್ಯಾನಿಲಯ, ಕಾಶಿ

೧೯೩೭-೩೮ರಲ್ಲಿ ೬ ಸಾರ್ವಜನಿಕ ಸಭೆಗಳು, ೪ ಕಾರ್ಯನಿರ್ವಾಹಕ ಮಂಡಲಿಯ ಸಭೆಗಳು, ೩ ಗಾಯನ ಕಛೇರಿಗಳು, ೧ ಕ್ರಿಕೆಟ್ ಪಂದ್ಯ, ೧ ಪ್ರಬಂಧ ಸ್ಪರ್ಧೆ—ನಡೆದುವು.

### ಸಾರ್ವಜನಿಕ ಸಭೆಗಳು:

೧— ೮—೧೯೩೭: ಅಧ್ಯಕ್ಷರ, ಉಪಾಧ್ಯಕ್ಷರ, ಕಾರ್ಯದರ್ಶಿಗಳ ಮತ್ತು ಕಾರ್ಯನಿರ್ವಾಹಕಮಂಡಲಿಯ ಚುನಾವಣೆ; ಸಂತೋಷಗೋಷ್ಠಿ.

೨೫— ೮—೧೯೩೭: ಸದಸ್ಯರಿಗೆ ಅಧ್ಯಕ್ಷರ ಔತಣ; ಕಾವ್ಯವಾಚನ.—ಶ್ರೀ॥ಗಳಾದ ಆತ್ಮಾರಾಮ ಪೆಣೆ ಮತ್ತು ಶ್ರೀನಿವಾಸನ್ ಅವರುಗಳಿಂದ.

೧೮— ೯—೧೯೩೭: ಉಪನ್ಯಾಸ—"ಚೀನಾ-ಜಪಾನು".—ಡಾ॥ ಬಿ. ದಾಸಣ್ಣಾಚಾರ್ಯರಿಂದ.

೯—೧೧—೧೯೩೭: ಶ್ರೀ॥ ಪಂಜೆ ಮಂಗೇಶರಾಯರ ನಿಧನದ ಬಗ್ಗೆ ಸಂತಾಪಸೂಚಕ ಸಭೆ.

೫— ೩—೧೯೩೮: ಉಪನ್ಯಾಸ—"ಜಪಾನು".—ಡಾ॥ ಎನ್. ಎನ್. ಗೋಡಬೋಲೆ ಅವರಿಂದ.

೭— ೩—೧೯೩೮: ಭಾಷಣ (ಇಂಗ್ಲಿಷಿನಲ್ಲಿ) "New Alchemy".—ಡಾ॥ ಬಿ. ದಾಸಣ್ಣಾಚಾರ್ಯರಿಂದ.

### ಗಾಯನ ಕಛೇರಿಗಳು:

೧೩—೧೧—೧೯೩೭: ಶ್ರೀ॥ ಉಡುಪಿ ಲಕ್ಷ್ಮೀಬಾಯಿಯವರಿಂದ.

೨೮— ೨—೧೯೩೮ ಮತ್ತು ೨—೩—೧೯೩೮: ಗೋಟುವಾದ್ಯ.—ಗೋಟುವಾದ್ಯಂ ಶ್ರೀ॥ ಎಸ್. ನಾರಾಯಣ ಅಯ್ಯಂಗಾರ್ಯರಿಂದ.

### ಪ್ರಬಂಧ ಸ್ಪರ್ಧೆ:

೩೧—೧೨—೧೯೩೮: ಕೃಷ್ಣವೇಣಿ ಪ್ರಬಂಧ ಸ್ಪರ್ಧೆ.— ವಿಷಯ: "Congress Scheme of Education with special reference to Karnatak". ಬಹುಮಾನ: ಶ್ರೀ॥ ಪಿ. ಎಸ್. ರಾಜಾರಾಯರಿಗೆ.

೬— ೨—೧೯೩೮: ಹದಿನಾಲ್ಕನೆಯ ವಾರ್ಷಿಕೋತ್ಸವ.—ಅಧ್ಯಕ್ಷರು: ಶ್ರೀ॥ ಎಂ. ಎಸ್. ನಾಯಕರವರು, ಎಂ.ಎ.; ಅಧ್ಯಕ್ಷರ ಭಾಷಣ: "ಕಲೆ—ಜೀವನ".

ಜೆ. ಭೀಮಸೇನಾಚಾರ್ಯ,
೨೯—೪—೧೯೩೮     ಗೌರವ ಕಾರ್ಯದರ್ಶಿ.

---

## ಕರ್ನಾಟಕ ಸಂಘ, ಚಿತ್ರದುರ್ಗ

೧೮— ೮—೧೯೩೭: ಆಧುನಿಕ ಕವಿತಾ ವಾಚನ.—ಶ್ರೀ॥ "ಹೊಯಿಸಳ" ಅವರಿಂದ.

೪— ೯—೧೯೩೭: ಉಪನ್ಯಾಸ—"ಪುರಂದರದಾಸರು".—ಶ್ರೀ॥ ಆರ್. ರಾಮಚಂದ್ರರಾವ್, ಎಂ.ಎ., ಬಿ.ಟಿ. ಅವರಿಂದ; ಅಧ್ಯಕ್ಷರು: ಶ್ರೀ॥ ಲಕ್ಷ್ಮಣರಾವ್ ಕಲಂದಾನಿಯವರು.

೧೮— ೯—೧೯೩೭: ಉಪನ್ಯಾಸ—"ವೀರಶೈವ ಸಾಹಿತ್ಯ".—ಶ್ರೀ ಮಹದೇವಸ್ವಾಮಿಗಳಿಂದ.

೨೧— ೯—೧೯೩೭: "ಲಾವಣಿ ಹಾಡಿಕೆ".—ಶ್ರೀ॥ ಡಿ. ಎಸ್. ರಾಮಸ್ವಾಮಯ್ಯನವರು ಮತ್ತು ಶ್ರೀ॥ ಸಿ. ಬಸಪ್ಪನವರು ಅವರುಗಳಿಂದ.

೫—೧೦—೧೯೩೭ರಿಂದ ೧೧—೧೦—೧೯೩೭ರ ವರೆಗೆ: "ಕಾವ್ಯವಾಚನ ಸಪ್ತಾಹ ಮಹೋತ್ಸವ".

ವಿವರ: (೧) ನರಹರಿದೇವನ "ಪ್ರಹ್ಲಾದ ಚರಿತ್ರೆ", (೨) ಚಾಮರಸನ "ಪ್ರಭುಲಿಂಗ ಲೀಲೆ" (ಮಾಯಾದೇವಿಯ ಬಾಲ್ಯ ಮತ್ತು ತಿರಸ್ಕಾರ), (೩) ಲಕ್ಷ್ಮೀಶನ "ಜೈಮಿನಿ

ಭಾರತ" (ಲವಕುಶರ ಕಾಳಗ), (೪) ಜಗನ್ನಾಥದಾಸರ "ಹರಿಕಥಾಮೃತಸಾರ" (ಕರುಣಾಸಂಧಿ ಮತ್ತು ಸರ್ವಪ್ರತೀಕ ಸಂಧಿ), (೫) ರಾಘವಾಂಕನ "ಹರಿಶ್ಚಂದ್ರಕಾವ್ಯ", (೬) ಕುಮಾರವಾಲ್ಮೀಕಿಯ "ತೊರವೆಯ ರಾಮಾಯಣ" (ಸೀತಾಸ್ವಯಂವರ), (೭) ಗದುಗಿನ ಭಾರತ (ಕರ್ಣಾರ್ಜುನರ ಸಂಗ್ರಾಮ)—ಶ್ರೀ॥ ಎಸ್. ಜಿ.ಬಿಂದೂರಾಯರಿಂದ.

೨೬-೧೦-೧೯೩೭: ಉಪನ್ಯಾಸ: "ಸಸ್ಯವರ್ಗದಲ್ಲಿ ಮಾನವ ರೀತಿಗಳು"—ಶ್ರೀ॥ ಪಿ. ಎಂ. ಸೋಮಸುಂದರನ್, ಎಂ.ಎ., ಎಲ್.ಟಿ. ಅವರಿಂದ.

೬-೧೧-೧೯೩೭: "ನಾಡ ಹಬ್ಬ"—ಅಧ್ಯಕ್ಷರು: ಶ್ರೀ॥ ಎ. ವಿಶ್ವನಾಥನ್, ಬಿ.ಎ., ಬಿ.ಎಲ್. ಅವರು. ವಿವರ:—(೧) "ನಾಡದೇವಿಯ ಸ್ತುತಿ"—ಶ್ರೀ॥ ಸಿ. ರಂಗಯ್ಯನವರು, (೨) "ಕನ್ನಡ ನಾಡಿನ ಪ್ರಾಚೀನತೆ"—ಶ್ರೀ॥ ಎಚ್. ಶ್ರೀನಿವಾಸ ಜೋಯಿಸರು, (೩) "ಕರ್ನಾಟಕದ ಮಹಾವಿಭೂತಿಗಳು"—ಶ್ರೀ॥ ಬಿ. ವೆಂಕಟಶಾಮಣ್ಣನವರು, ಬಿ.ಎ., ಬಿ.ಎಲ್., (೪) "ಆಧುನಿಕ ಕನ್ನಡ ಕವಿತಾ ವಾಚನ"—ಶ್ರೀ॥ ಹೊಯಿಸಳರು, (೫) "ವಿಜಯನಗರದ ಸಾಮ್ರಾಜ್ಯದಲ್ಲಿ ಕನ್ನಡ ಸಾಹಿತ್ಯದ ಬೆಳವಣಿಗೆ"—ಶ್ರೀ॥ ಆರ್. ರಾಮಚಂದ್ರರಾಯರು, ಎಂ.ಎ., ಬಿ.ಟಿ., (೬) "ಕರ್ನಾಟಕದ ವೈಭವ"—ಶ್ರೀ॥ ಟಿ. ಎಸ್. ರಾಮಸ್ವಾಮಯ್ಯನವರು.

ಉಂತಕಲ್ ಶ್ರೀನಿವಾಸರಾವ್,
೬-೧೨-೧೯೩೭ ಬಿ. ಕೆ. ರಾಮಚಂದ್ರರಾವ್,
ಗೌರವ ಕಾರ್ಯದರ್ಶಿಗಳು.

---

## ಕರ್ನಾಟಕ ಸಂಘ, ಹೈಸ್ಕೂಲು, ಮಧುಗಿರಿ

(೧) ಉಪನ್ಯಾಸ: "ನನ್ನ ಮಾತು".—ಶ್ರೀಮಾನ್ ದೇವುಡು ನರಸಿಂಹಶಾಸ್ತ್ರಿ, ಎಂ.ಎ. ಅವರಿಂದ; (೨) ಉಪನ್ಯಾಸ: "ವಿದ್ಯಾರ್ಥಿ ದೆಸೆಯಲ್ಲಿ ವಿನಯಶೀಲಗಳ ಸ್ಥಾನ".—ಶ್ರೀ ಶಂಕರಾನಂದ ಸ್ವಾಮಿಗಳವರಿಂದ; (೩) ಉಪನ್ಯಾಸ: "ವಿದ್ಯಾರ್ಥಿಗಳಲ್ಲಿ ದೇಹದಾರ್ಢ್ಯದ ಆವಶ್ಯಕತೆ".—ಶ್ರೀ ರಂಗನಾಥಾನಂದ ಸ್ವಾಮಿಜಿಯವರಿಂದ; (೪) "ಭಾರತ ಪಠನ".—ಶ್ರೀಮಾನ್ ಚಳ್ಳಕೆರೆ ಸೀತಾರಾಮಶಾಸ್ತ್ರಿಗಳಿಂದ; (೫) ಉಪನ್ಯಾಸ: "ಹೈಸ್ಕೂಲಿನಲ್ಲಿ ಹಿಂದೀ ಭಾಷೆಯ ಸ್ಥಾನ".—ಶ್ರೀಮಾನ್ ಸುಬ್ಬನರಸಿಂಹಶಾಸ್ತ್ರಿಗಳವರಿಂದ; (೬) ಉಪನ್ಯಾಸ: "ಕಾವ್ಯದಲ್ಲಿ ಧ್ವನಿ".—ಶ್ರೀಮಾನ್ ಎಸ್. ವಿ. ರಂಗಣ್ಣ, ಎಂ.ಎ. ಅವರಿಂದ; (೭) ಉಪನ್ಯಾಸ: (ಸಚಿತ್ರ) "ಜಪಾನ್ ದೇಶ".—ಶ್ರೀಮಾನ್ ಬಿ. ಎಂ. ಶಿವರಾಮಯ್ಯನವರಿಂದ; (೮) "ಕಾವ್ಯಪಠನ".—ಶ್ರೀಮಾನ್ ಶ್ರೀನಿವಾಸ ಕೆ.ಎಸ್. ನರಸಿಂಹಸ್ವಾಮಿಯವರಿಂದ; (೯) "ಕವಿತಾಪಠನ".—ಶ್ರೀಮಾನ್ ಶ್ರೀನಿವಾಸಮೂರ್ತಿಯವರಿಂದ; (೧೦) ಉಪನ್ಯಾಸ: "ಭಕ್ತಿ".—ಪಂಡಿತ ವೇದಮೂರ್ತಿ ರಾಮೇಶ್ವರಶಾಸ್ತ್ರಿಗಳವರಿಂದ; (೧೧) ಹರಿಕಥೆ: "ಧ್ರುವಚರಿತ್ರೆ".—ಶ್ರೀಮಾನ್ ಬೇಲೂರು ಕೇಶವದಾಸರವರಿಂದ; (೧೨) ಉಪನ್ಯಾಸ: "League of Nations".—ಶ್ರೀಮಾನ್ ಭಾಸ್ಕರನ್ ಅವರಿಂದ; (೧೩) ಉಪನ್ಯಾಸ: "ಹಿಂದೀ ಕವಿ ರಹೀಂ".—ಶ್ರೀಮಾನ್ ಕೆ. ಎಸ್. ಆಚಾರ್ಯರಿಂದ. (೧೪) ಉಪನ್ಯಾಸ: "Education".—ಶ್ರೀಮಾನ್ ಎಸ್. ಆರ್. ನರಸಿಂಹಯ್ಯನವರಿಂದ; (೧೫) ಕೊರಟಗೆರೆ ಮತ್ತು ಬೇಡತ್ತೂರು ಗ್ರಾಮಗಳಲ್ಲಿ ಸಂಚಾರೋಪನ್ಯಾಸಗಳು.

ಎಂ. ಆರ್. ವೆಂಕಟಾಚಾರ್,
೨೨-೪-೧೯೩೮ ಗೌರವ ಕಾರ್ಯದರ್ಶಿ.

## ಕರ್ನಾಟಕ ಸಂಘ, ಚೆನ್ನರಾಯಪಟ್ಟಣ

೧೦—೧—೧೯೩೮ : ಶಿವಮೊಗ್ಗದ 'ಕೃಷ್ಣಾ ಟೂರಿಂಗ್ ಟಾಕೀಸ್' ಇವರಿಂದ ಸಹಾಯಾರ್ಥ ಸಿನಿಮಾ ಪ್ರದರ್ಶನ.

೨೩—೧—೧೯೩೮ : ಭಾರತ ವಾಚನ.—ಶ್ರೀ॥ ಎಂ. ಎಚ್. ಪುಟ್ಟೇಗೌಡರಿಂದ; ಉಪನ್ಯಾಸ— "ಹಿರಿಯರ ವಿದ್ಯಾಭ್ಯಾಸ".— ಶ್ರೀ॥ ಸಿ. ವಿ. ರಾಮಸ್ವಾಮಿ, ಬಿ.ಎ., ಬಿ.ಟಿ. ಅವರಿಂದ.

೨೭—೧—೧೯೩೮ : ಕನ್ನಡ ಪ್ರಚಾರ—ಈ ತಾಲ್ಲೂಕಿನ "ಚೋಳೇನಹಳ್ಳಿ" ಗ್ರಾಮದಲ್ಲಿ ಆರೋಗ್ಯ, ನೈರ್ಮಲ್ಯ ಈ ವಿಷಯವಾಗಿ ಉಪನ್ಯಾಸಗಳನ್ನೂ, ಕನ್ನಡ ಕಾವ್ಯ ವಾಚನವನ್ನೂ ನಡಸಲಾಯಿತು.

೧—೨—೧೯೩೮ : ಹರಿಕಥೆ—"ಗೋರಕುಂಬಾರ".—ಶ್ರೀ॥ ಕೃಷ್ಣದಾಸರಿಂದ.

೧೧—೨—೧೯೩೮ : ,, —"ರುಕ್ಮಿಣೀ ಕಲ್ಯಾಣ".—ಕೀರ್ತನರತ್ನಂ ವೇ॥ ಸೀತಾರಾಮ ಶಾಸ್ತ್ರಿಗಳಿಂದ.

೧೫—೨—೧೯೩೮ : ಊರ ಜಾತ್ರೆಯ ಮೈದಾನದಲ್ಲಿ "ಕನ್ನಡದ ಪ್ರಚಾರಕಾರ್ಯ". ಕಾರ್ಯ ವಿವರ:—ಉಪನ್ಯಾಸ, ಕಾವ್ಯವಾಚನ, ಕಥೆಗಳನ್ನು ಹೇಳುವುದು; ಪತ್ರಿಕೆಗಳಲ್ಲಿನ ವಿಶೇಷಾಂಶಗಳನ್ನು ತಿಳಿಸುವುದು.

೨೭—೨—೧೯೩೮ : ವಿಜ್ಞಾನೋಪನ್ಯಾಸ—"ವಜ್ರ".—ಶ್ರೀ॥ ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ. ಅವರಿಂದ.

೧—೩—೧೯೩೮ : ನಾಟಕಾಭಿನಯ—"ನಾರದಲೀಲೆ."

೬—೩—೧೯೩೮ : ಚರ್ಚಾಗೋಷ್ಠಿ—ವಿಷಯ : "ಸಂಗೀತಜಾಲಾಬದ್ಧವಾಗಿರುವವರೆಗೂ ನಾಟಕಕ್ಕೆ ಮೋಕ್ಷವಿಲ್ಲ."

೨೦—೩—೧೯೩೮ : ಕಂಠಪಾಠ ಸ್ಪರ್ಧೆ—ಶಾಲಾ ಬಾಲಕ ಬಾಲಕಿಯರಿಗೆ.

೧೦—೪—೧೯೩೮ : ಚತುರ್ಥ ವಾರ್ಷಿಕೋತ್ಸವ—ಅಧ್ಯಕ್ಷರು : ಪ್ರೊ॥ ಸಿ. ಆರ್. ನರಸಿಂಹ ಶಾಸ್ತ್ರಿಗಳು, ಎಂ.ಎ.; ಉಪನ್ಯಾಸ : "ಒಬ್ಬಿಬ್ಬರು ಸೈಂಧವರು".—ಶ್ರೀಮಾನ್ ಎಸ್. ವಿ. ರಂಗಣ್ಣ, ಎಂ.ಎ. ಅವರಿಂದ; ಉಪನ್ಯಾಸ : "ಕೈಕೆಯ ಪಾತ್ರ".—ಶ್ರೀ॥ ತೀ. ನಂ. ಶ್ರೀಕಂಠಯ್ಯ, ಎಂ.ಎ. ಅವರಿಂದ. ನಾಟಕಾಭಿನಯ : "ಗದಾಯುದ್ಧ" ಮತ್ತು "ಪ್ರತಿಜ್ಞಾಪಾಲನ."

ಗ್ರಂಥ ಪ್ರಕಟನೆ: ಸಂಘದವರು ಈ ಬಾರಿ ಒಂದು ಸಣ್ಣ ಕಥಾಗುಚ್ಛವನ್ನು ಪ್ರಕಟಿಸಲಿದ್ದಾರೆ.* ಈ ಗ್ರಂಥದಲ್ಲಿ ಸಂಘದವರು ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಮನ್ನಣೆಯನ್ನು ಪಡೆದ ನಾಲ್ಕು ಕತೆಗಳಿವೆ.

ಸಿ. ಆರ್. ಶ್ರೀನಿವಾಸೈಯಂಗಾರ್,
೧೮—೪—೧೯೩೮ ಸಿ. ಟಿ. ರಾಮಕೃಷ್ಣ ಶೆಟ್ಟಿ,
ಗೌರವ ಕಾರ್ಯದರ್ಶಿಗಳು.

---

## ಕರ್ನಾಟಕ ಸಂಘ, ವಿಲಿಂಗ್‌ಡನ್ ಕಾಲೇಜು, ಸಾಂಗಲಿ

೧೬—೮—೧೯೩೭ : ವರ್ಷ ಪ್ರಾರಂಭ ಭಾಷಣ—"ಕನ್ನಡ ಸಾಹಿತ್ಯವು ಇಂಗ್ಲಿಷಿನಿಂದ ಏನು ಕಲಿಯತಕ್ಕದ್ದು".—ಶ್ರೀಮಾನ್ ಕೆ. ಆರ್. ಮಹಿಷಿ, ಬಿ.ಎ. (ಆನರ್ಸ್) ಅವರಿಂದ.

೬—೧೨—೧೯೩೭ : ಎರಡನೆಯ ಟರ್ಮಿನ ಪ್ರಾರಂಭ ಭಾಷಣ—"ಕನ್ನಡ ಸಾಹಿತ್ಯದ ಹಿಗ್ಗು ಕುಗ್ಗುಗಳ ಕಾರಣ ಮೀಮಾಂಸೆ".—ಶ್ರೀಮಾನ್ ಕೃಷ್ಣಶರ್ಮ ಬೆಟಗೇರಿ ಅವರಿಂದ.

೧೧—೨—೧೯೩೮ : ವಾರ್ಷಿಕ ಸಮ್ಮೇಳನದ ಭಾಷಣ—"ಇಂದಿನ ಇಂಗ್ಲಿಷ್ ಹಾಗೂ ಕನ್ನಡ ನಾಟಕಗಳ ತುಲನಾತ್ಮಕ ಚರ್ಚೆ".—ಪ್ರೊ॥ ಆರ್. ವಿ. ಜಾಗೀರದಾರ ಅವರಿಂದ.

---

* ಈಚೆಗೆ ಈ ಗ್ರಂಥ ಪ್ರಕಟವಾಗಿದೆ. ಬೆಲೆ : ೦—೩—೩ ಆಣೆ.—ಸಂ.

ಅಭ್ಯಾಸ ಮಂಡಳದ ಸದಸ್ಯರು ಈ ವರ್ಷದಲ್ಲಿ ನಾಲ್ಕು ಬೇರೆ ಬೇರೆ ವಿಷಯಗಳನ್ನು ಕುರಿತು ಕನ್ನಡದಲ್ಲಿ ಚರ್ಚೆಗಳನ್ನು ನಡಸಿದರು. 'ಎಳದೋಟ' ಪತ್ರಿಕೆಯ ಎರಡನೆಯ ಸಂಚಿಕೆಯು ಶ್ರೀಮಾನ್ ಕೃಷ್ಣಶರ್ಮ ಬೆಟಗೇರಿಯವರ ಹಸ್ತದಿಂದ ಪ್ರಕಾಶಿತವಾಯಿತು. ಜಮಖಂಡಿಯ ಸಾಹಿತ್ಯ ಸಮ್ಮೇಲನದ ಕಾಲಕ್ಕೆ ಏರ್ಪಟ್ಟ ವೃತ್ತಪತ್ರಿಕೆಗಳ ಪ್ರದರ್ಶನಕ್ಕೆ ಅದನ್ನು ಕಳುಹಿಸಲಾಗಿತ್ತು.

೨೫–೪–೧೯೩೮ ಜಿ. ಜಿ. ಕುಲಕರ್ಣಿ,
ಗೌರವ ಕಾರ್ಯದರ್ಶಿ.

---

## ಕೊಡಗು ಕರ್ನಾಟಕ ಸಂಘ, ಮಡಿಕೇರಿ

೩–೧೦–೧೯೩೭: ಉಪನ್ಯಾಸ—"ಕಾವ್ಯಸ್ವರೂಪ".—ಶ್ರೀಮಾನ್ ಆತ್ಮಾರಾಮಶಾಸ್ತ್ರಿ ಓಡ್ಲಮನೆ ಅವರಿಂದ.

೨೭–೧೦–೧೯೩೭: "ಕೈ॥ ವಾ॥ ಪಂಜೆ ಮಂಗೇಶರಾಯರ ಗುಣಕಥನ".—ಶ್ರೀಮಾನ್ ಮುದವೀಡು ಕೃಷ್ಣರಾಯರಿಂದ; "ಕವಿತಾ ವಾಚನ".—ದ. ರಾ. ಬೇಂದ್ರೆ, ಎಂ.ಎ. ಅವರಿಂದ; ಅಧ್ಯಕ್ಷರು: ಶ್ರೀ॥ ಸಿ. ಎಂ. ರಾಮರಾಯರು, ಬಿ.ಎ., ಎಲ್.ಟಿ.

೯–೧೨–೧೯೩೭: "ಹರಿಶ್ಚಂದ್ರ ಕಾವ್ಯ ವಾಚನ".—ಶ್ರೀಮಾನ್ ಎಂ. ಎಸ್. ಅನಂತಪದ್ಮನಾಭರಾಯರಿಂದ; ಅಧ್ಯಕ್ಷರು: ಶ್ರೀಮಾನ್ ಕೆ. ಮಲ್ಲಪ್ಪನವರು, ಬಿ.ಎ., ಬಿ.ಎಲ್.

೨೫–೧೨–೧೯೩೭: ಹರಿಕಥೆ—"ಮಾರುತಿ ಭಕ್ತಿ".—ಶ್ರೀಮಾನ್ ಗಮಕಿ ರಾಮಕೃಷ್ಣ ಶಾಸ್ತ್ರಿಗಳಿಂದ.

೨೬–೧೨–೧೯೩೭: ಭಾರತ ವಾಚನ—"ಕರ್ಣನ ಧರ್ಮಸಂಕಟ".—ಶ್ರೀಮಾನ್ ಗಮಕಿ ರಾಮಕೃಷ್ಣಶಾಸ್ತ್ರಿಗಳಿಂದ.

೮–೧–೧೯೩೮: ಉಪನ್ಯಾಸ—"ಲಕ್ಷ್ಮೀಶ ಕವಿ ಮತ್ತು ಜೈಮಿನಿ ಭಾರತ".—ಶ್ರೀ॥ ಜಿ. ಜಿ. ಅಯ್ಯಪ್ಪ, ಬಿ.ಎ., ಬಿ.ಎಲ್. ಅವರಿಂದ.

೧೧–೧–೧೯೩೮: ಉಪನ್ಯಾಸ—"ಆರ್ಯಸಮಾಜ ಮತ್ತು ಶಿಕ್ಷಣ".—ಶ್ರೀಮಾನ್ ಲಕ್ಷ್ಮಣದೇವ ವಿದ್ಯಾರ್ಥಿಯವರಿಂದ.

೨೯–೧–೧೯೩೮; ೩೦–೧–೧೯೩೮: "ಕನ್ನಡ ಹಬ್ಬ".—ಅಧ್ಯಕ್ಷರು: ಶ್ರೀಮಾನ್ ಐ. ಸಿ. ಸುಬ್ಬಯ್ಯ, ಎಂ.ಎ., ಬಿ.ಎಲ್. ಅವರು. ಕಾರ್ಯ ವಿವರ: ಪಿಟೀಲು ವಾದನ—ಮೈಸೂರಿನ ಶ್ರೀಮಾನ್ ರಾಮಕೃಷ್ಣಯ್ಯನವರಿಂದ. ಕವಿತಾ ವಾಚನ, ಸಣ್ಣ ಕತೆಗಳು—ವಿದ್ಯಾರ್ಥಿಗಳು ಮತ್ತು ಹಿರಿಯರು.

೩೦–೧–೧೯೩೮: ಉಪನ್ಯಾಸ—"ಹರಿಕಥೆ (ವಿಮರ್ಶಾತ್ಮಕ)".—ಶ್ರೀ॥ ಯು. ಯಂ. ಕೃಷ್ಣರಾಯರಿಂದ; ಅಧ್ಯಕ್ಷರು: ಶ್ರೀಮಾನ್ ಓ. ಆತ್ಮಾರಾಮಶಾಸ್ತ್ರಿಗಳು.

೩–೩–೧೯೩೮: ನಾಟಕಾಭಿನಯ—"ಶೃಂಗಿಯ ಶಾಪ".—ಸಂಘದ ವಿದ್ಯಾರ್ಥಿವರ್ಗದವರಿಂದ.

ಮಡಿಕೇರಿ ಹೈಸ್ಕೂಲಿನಲ್ಲಿ ನಮ್ಮ ಸಂಘದ ಶಾಖೆಯೊಂದನ್ನು ತೆರೆಯಲಾಗಿದೆ. ಪುಸ್ತಕ ಭಂಡಾರಕ್ಕೆ ಸುಮಾರು ನಲವತ್ತು ಗ್ರಂಥಗಳನ್ನು ಹೊಸದಾಗಿ ತರಿಸಲಾಗಿದೆ.

೩೧–೩–೧೯೩೮ ಎಂ. ಎಸ್. ಅನಂತಪದ್ಮನಾಭರಾವ್,
ಗೌರವ ಕಾರ್ಯದರ್ಶಿ.

---

## ಕರ್ನಾಟಕ ಸಂಘ, ರುದ್ರಪಟ್ಟಣ

೨೦—೧೦—೧೯೩೭: ಉಪನ್ಯಾಸ—"ಸ್ವರಾಜ್ಯವೆಂದರೇನು?".—ಶ್ರೀ॥ ಚೆಲುವಯ್ಯನವರಿಂದ; ಅಧ್ಯಕ್ಷರು: ಶ್ರೀ॥ ಕೆ. ಆರ್. ವೆಂಕಟಾಚಾರ್ಯರು.

೧೮—೧೧—೧೯೩೭: ಭಾರತ ವಾಚನ—"ದ್ರೌಪದೀ ವಸ್ತ್ರಾಪಹರಣ".—ಶ್ರೀ॥ ಆರ್. ವಿ. ಶ್ರೀನಿವಾಸಯ್ಯನವರಿಂದ.

೪—೧೨—೧೯೩೭: ಸಂಗೀತ (ಪಿಟೀಲು)—ಶ್ರೀ॥ ಆರ್. ಕೆ. ವೆಂಕಟರಮಣಶಾಸ್ತ್ರಿಗಳಿಂದ.

೧೦— ೧—೧೯೩೮: ಉಪನ್ಯಾಸ—"ಮಲೇರಿಯಾ".—ಡಾ॥ ವೆಂಕಟಾಚಾರ್ಯರಿಂದ.

೧೪— ೧—೧೯೩೮: ಉಪನ್ಯಾಸ—"ವಿಮೆ".—ಶ್ರೀ॥ ಆರ್. ಎಸ್. ಕೃಷ್ಣಯ್ಯಂಗಾರ್ಯರಿಂದ.

೧೫— ೨—೧೯೩೮: ಹರಿಕಥೆ.

೧೦— ೩—೧೯೩೮: ಸಂಗೀತ—ಶ್ರೀ॥ ಎ. ಆರ್. ಕೇಶವಮೂರ್ತಿಗಳಿಂದ.

೧೧— ೩—೧೯೩೮: ಕರ್ನಾಟಕ ಏಕೀಕರಣ ದಿನ.

ಕೆ. ಆರ್. ವೆಂಕಟಾಚಾರ್ಯ,
ರು. ರಾ. ವೆಂಕಟರಾಮಯ್ಯ,
ಗೌರವ ಕಾರ್ಯದರ್ಶಿಗಳು.

---

## ಮಹಾರಾಣಿಯವರ ಕಾಲೇಜಿನ ಕರ್ನಾಟಕ ಸಂಘ, ಮೈಸೂರು

೫—೮—೧೯೩೭: ಕರ್ನಾಟಕ ಸಂಘದ ಪ್ರಾರಂಭೋತ್ಸವ.

೧೯—೮—೧೯೩೭: ಚರ್ಚಾ ಸಭೆ—"ಸ್ತ್ರೀಯರಿಗೆ ಸೈನಿಕ ಶಿಕ್ಷಣವು ಅಗತ್ಯ."

೧—೯—೧೯೩೭: ಉಪನ್ಯಾಸ—"ಭವಭೂತಿಯ ಉತ್ತರರಾಮ ಚರಿತೆ".—ಶ್ರೀಮಾನ್ ಟಿ. ಎನ್. ಶ್ರೀಕಂಠಯ್ಯ, ಎಂ.ಎ. ಅವರಿಂದ.

೧೭—೯—೧೯೩೭: "ಆಧುನಿಕ ಕನ್ನಡ ಕವಿತೆಗಳ ವಾಚನ".—ಶ್ರೀಮಾನ್ ಎ. ಎನ್. ಮೂರ್ತಿರಾವ್, ಎಂ.ಎ. ಅವರಿಂದ.

ದಸರಾ ರಜ ಬರುವುದಕ್ಕೆ ಮೊದಲು, ನಮ್ಮ ಕಾಲೇಜಿನ "ಕನ್ನಡ ಪತ್ರಿಕೆ" ಖಾಸಗಿ ರೀತಿಯಲ್ಲಿ ಪ್ರಕಟವಾಯಿತು.

೧೨—೨—೧೯೩೮: ಪ್ರಬಂಧ ಸ್ಪರ್ಧೆ—ವಿಷಯ: "ಚರಿತ್ರೆ ಅಥವಾ ನನ್ನ ಮೆಚ್ಚಿನ ಆದರ್ಶ ಮಹಿಳೆ."

೧೮—೨—೧೯೩೮: ಸಂಘದ ವಾರ್ಷಿಕೋತ್ಸವ—ಅಧ್ಯಕ್ಷರು: ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.

ಈ ಸುಸಮಯದಲ್ಲಿ ಕನ್ನಡ ಪ್ರೇಮಿಗಳಾದ ನಮ್ಮ ವಿದ್ಯಾರ್ಥಿನಿಯರು ಕನ್ನಡ ಸೇವೆಗೆಂದು ಮಾನ್ಯ ಶ್ರೀಕಂಠಯ್ಯನವರಿಗೆ ಕಿರಿಯ "ಕಾಣಿಕೆ"ಯೊಂದನ್ನು ನಮ್ರತೆಯಿಂದ ಅರ್ಪಿಸಿದರು.

ಡಿ. ಚಂಪಾಬಾಯಿ,
ಅಧ್ಯಕ್ಷಿಣಿ.

೨೨—೪—೧೯೩೮

---



ಡಾಕ್ಟರ್ ರೆವರೆಂಡ್ ರಾಬರ್ಟ್ ಕಾಲ್ಡ್‌ವೆಲ್ ಅವರು

ಪಡಿಯಚ್ಚು ಒದಗಿಸಿಕೊಟ್ಟವರು :

ಶ್ರೀ॥ ಆರ್. ಪಿ. ಸೇತು ಪಿಳ್ಳೈ ಅವರು, ಬಿ.ಎ., ಬಿ.ಎಲ್.

# ಗ್ರಂಥ ವಿಮರ್ಶೆ

**೧. ಕಾಲ್ಡ್ವೆಲ್ ಐಯರ್ ಚರಿತಮ್** (ತಮಿಳು): ಬರೆದವರು – ಶ್ರೀ॥ ಆರ್. ಪಿ. ಸೇತು ಪಿಳ್ಳೈ ಅವರು, ಬಿ.ಎ., ಬಿ.ಎಲ್., ತಮಿಳು ಅಧ್ಯಾಪಕರು, ಅಣ್ಣಾಮಲೈ ವಿಶ್ವವಿದ್ಯಾನಿಲಯ; ಅಚ್ಚಿಟ್ಟವರು–ಹಿಲಾಲ್ ಪ್ರೆಸ್, ತಿರುನೆಲ್‌ವೇಲಿ; ೧೯೩೬; ಸಚಿತ್ರ; ಕ್ರೌನ್ ಅಷ್ಟಪತ್ರ ೬+೧೨೬+೪; ಬೆಲೆ ೧ ರೂಪಾಯಿ.

ಪ್ರಪಂಚದ ಎಲ್ಲ ಭಾಷೆಗಳೂ ಸಂಸ್ಕೃತದಿಂದಲೇ ಹುಟ್ಟಿದುವೆಂಬ ನಂಬಿಕೆ ಭಾರತೀಯರಲ್ಲೂ, ಇಂಡಿಯಾ ದೇಶದ ಎಲ್ಲ ಭಾಷೆಗಳೂ ಆರ್ಯಕುಲಕ್ಕೆ ಸೇರಿದುವೆಂಬ ನಂಬಿಕೆ ಯೂರೋಪಿಯನ್ನರಲ್ಲೂ ಬೇರೂರಿದ್ದಾಗ, ದಕ್ಷಿಣ ಇಂಡಿಯದ ಕನ್ನಡ, ತಮಿಳು, ತೆಲುಗು, ಮಲೆಯಾಳ ಮೊದಲಾದ ಭಾಷೆಗಳು ಆರ್ಯ ಭಾಷಾವರ್ಗದಿಂದ ಭಿನ್ನವಾದ ಸ್ವತಂತ್ರ ದ್ರಾವಿಡಭಾಷಾವರ್ಗಕ್ಕೆ ಸೇರಿದುವೆಂದು ಪ್ರತಿಪಾದಿಸಿ ವಿದ್ವತ್ ಪ್ರಪಂಚದಲ್ಲಿ ಕ್ರಾಂತಿಯೆಬ್ಬಿಸಿದ, ಮತ್ತು ತಮ್ಮ ತವರುನಾಡನ್ನು ಬಿಟ್ಟು ದಕ್ಷಿಣ ಇಂಡಿಯಕ್ಕೆ ಬಂದು ನೆಲಸಿ ತಮಿಳಿಗೂ ತಮಿಳರಿಗೂ ಅರೆನೂರು ವರ್ಷಗಳಿಗೆ ಮೇಲ್ಪಟ್ಟು ದುಡಿದು ಕೊನೆಗೆ ಇಲ್ಲಿಯೆ ಕಣ್ಣುಮುಚ್ಚಿದ ಡಾಕ್ಟರ್ ರೆವರೆಂಡ್ ರಾಬರ್ಟ್ ಕಾಲ್ಡ್ವೆಲ್ ಅವರ ಜೀವನಚರಿತ್ರೆ ಇಲ್ಲಿಯವರೆಗೂ ತಮಿಳಿನಲ್ಲಾಗಲಿ ಉಳಿದ ದ್ರಾವಿಡ ಭಾಷೆಗಳಲ್ಲಾಗಲಿ ಬರದೆ ಇದ್ದದ್ದು ಆಶ್ಚರ್ಯವೇ ಸರಿ. ಇಂಥ ಪರಿಸ್ಥಿತಿಯಲ್ಲಿ ಈ ಜೀವನಚರಿತ್ರೆ ಹೊರಬಿದ್ದದ್ದು ಅದರ ಬೆಲೆಯನ್ನು ಇಮ್ಮಡಿಸಿದೆ.

ಕಾಲ್ಡ್ವೆಲ್ಲರ ಗ್ರಂಥಗಳ ಮತ್ತು ಲೇಖನಗಳ ಆಧಾರದ ಮೇಲೆಯೂ, ಅವರ ವಿಷಯವಾಗಿ ಇಂಗ್ಲಿಷಿನಲ್ಲಿ ಬರೆದಿರುವ ಗ್ರಂಥಗಳ ಮತ್ತು ಲೇಖನಗಳ ಆಧಾರದ ಮೇಲೆಯೂ ಅವರ ಜೀವನಚರಿತ್ರೆಯನ್ನು ವಿಸ್ತಾರವಾಗಿ ಬರೆದು ಒಂದು ಗ್ರಂಥವನ್ನೇ ಹೊರಕ್ಕೆ ತಂದ ಶ್ರೀ॥ ಸೇತು ಪಿಳ್ಳೈಯವರಿಗೆ ತಮಿಳರು ಋಣಿಯಾಗಿದ್ದಾರೆ.

ಗ್ರಂಥ ತಿಳಿಯಾದ ತಮಿಳಿನಲ್ಲಿ ಸರಳಶೈಲಿಯಲ್ಲಿ ಬರೆದು ಎಲ್ಲರಿಗೂ ಸುಲಭವಾಗಿ ಅರ್ಥವಾಗುತ್ತದೆ. ಎಡೆಯರಿತು, ಅಳವರಿತು ಅಲ್ಲಲ್ಲಿ ಹದನಾಗಿ ಬಳಸಿರುವ 'ಕುರಳ್' ಮೊದಲಾದ ಪ್ರಾಚೀನ ತಮಿಳು ಗ್ರಂಥಗಳಿಂದ ಎತ್ತಿದ ಅಡಿಗಳು ಬರವಣಿಗೆಯ ಅಂದವನ್ನು ಹೆಚ್ಚಿಸಿವೆ. ಗ್ರಂಥ ಜೀವನಚರಿತ್ರೆಯಾದ್ದರಿಂದ ಅಲ್ಲಲ್ಲಿ ಹೇರಳವಾಗಿ ಬಂದಿರುವ ಅಲಂಕಾರ ಭಾಷೆಗೆ ಅಷ್ಟಾಗಿ ಆವಶ್ಯಕತೆ ಇರಲಿಲ್ಲವೆನ್ನಬಹುದು. ಇನ್ನುಮುಂದೆ ಕಾಲ್ಡ್ವೆಲ್ಲರ ಕೀರ್ತಿ ಅವರು ಕ್ರೈಸ್ತಲೋಕಕ್ಕೆ ಸಲ್ಲಿಸಿದ ಸೇವೆಗಿಂತಲೂ ದ್ರಾವಿಡಭಾಷೆಗಳಿಗೆ ಸಲ್ಲಿಸಿದ ಅಪಾರ ಸೇವೆಯಮೇಲೆ ನಿಲ್ಲುತ್ತಾದ್ದರಿಂದ ಅವರ ದ್ರಾವಿಡಭಾಷೆಗಳ ವ್ಯಾಕರಣವನ್ನು ಕುರಿತು ಹೆಚ್ಚಾಗಿ

ಪ್ರಸ್ತಾವಿಸಿದ್ದರೆ ಚೆನ್ನಾಗಿತ್ತೆಂದು ತೋರುತ್ತದೆ. ಗ್ರಂಥದ ಗಾತ್ರ ದೊಡ್ಡದಾಗುತ್ತೆಂಬ ಹೆದರಿಕೆಯಿದ್ದಿದ್ದರೆ, ಸಾಮಾನ್ಯ ಓದುಗರಿಗೆ ಅಷ್ಟಾಗಿ ಬೇಕಿಲ್ಲದ ತಿರುನೆಲ್ವೇಲಿಯಲ್ಲಿ ಕ್ರೈಸ್ತಮತ ಹರಡಿದ್ದು, ಬೈಬಲನ್ನು ತಮಿಳುನುಡಿಗೆ ಭಾಷಾಂತರಿಸಿದ್ದು ಮೊದಲಾದ ಹಲವು ವಿಷಯಗಳನ್ನು ವಿಸ್ತಾರವಾಗಿ ಪ್ರಸ್ತಾವಿಸದೆ ಅಡಕವಾಗಿ ಹೇಳಿ, ಆವಶ್ಯಕವಾಗಿ ಇನ್ನೂ ವಿಸ್ತಾರವಾಗಿ ಹೇಳಬೇಕಾಗಿದ್ದ ಅವರ ಭಾಷಾಸೇವೆಯ ಪರಿಶೀಲನೆಗೆ ಎಡೆಮಾಡಿಕೊಳ್ಳಬಹುದಾಗಿತ್ತು. ಒಟ್ಟಿನಲ್ಲಿ ಗ್ರಂಥ ಬಹು ಉಪಯುಕ್ತವಾಗಿದ್ದು ಎಲ್ಲರ ಆದರ ಪ್ರೋತ್ಸಾಹಗಳಿಗೆ ಪಾತ್ರವಾಗತಕ್ಕದ್ದಾಗಿದೆ.

ಗ್ರಂಥ ತಮಿಳಿನದಾದ್ದರಿಂದ ಶೈಲಿ ಮೊದಲಾದುವನ್ನು ಕುರಿತು ಹೆಚ್ಚಾಗಿ ವಿಮರ್ಶಿಸುವುದರಿಂದ ಕನ್ನಡಿಗರಿಗೆ ಅಷ್ಟಾಗಿ ಪ್ರಯೋಜನವೇನೂ ಇರಲಾರದು. ಗ್ರಂಥದಿಂದ ಮುಖ್ಯವಾಗಿ ತಿಳಿಯಬೇಕಾದ್ದು ಕಾಲ್ಡ್‌ವೆಲ್ಲರ ಜೀವನಕಥೆ ಮತ್ತು ದ್ರಾವಿಡಭಾಷಾವರ್ಗದ ನಿರ್ಣಯ.

ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು 'ಡಾಕ್ಟರ್ ಕಾಲ್ಡ್‌ವೆಲ್ ಮತ್ತು ದ್ರಾವಿಡಭಾಷಾವರ್ಗ' ಎಂಬ ವಿಷಯದಮೇಲೆ, ೧೯೩೮ನೆಯ ಆಗಸ್ಟು ೮ರಲ್ಲಿ ಪರಿಷನ್ಮಂದಿರದಲ್ಲಿ ಮಾಡಿದ ಭಾಷಣದ ಸಾರಾಂಶವನ್ನು ಕೆಳಗೆ ಕೊಟ್ಟಿದೆ.

ಕೆ. ವಿ. ರಾಘವಾಚಾರ್

## ಡಾಕ್ಟರ್ ಕಾಲ್ಡ್‌ವೆಲ್ ಅವರು

"ನಮ್ಮ ದೇಶಭಾಷೆಗಳ ಈಗಿನ ಚರಿತ್ರೆಯಲ್ಲಿ ಕ್ರೈಸ್ತಪಾದ್ರಿಗಳಿಗೆ ಪ್ರಥಮ ಸ್ಥಾನವನ್ನು ಕೊಡಬೇಕಾಗಿದೆ. ನಮ್ಮ ಸೀಮೆಯಲ್ಲಿ ಮೊತ್ತಮೊದಲು ಹಳೆಯ ತಾಳೆಯೋಲೆಗಳನ್ನು ಶೋಧಿಸಿ, ಸಾಹಿತ್ಯ ಗ್ರಂಥಗಳನ್ನು ಹೊರತೆಗೆದು, ಅಚ್ಚುಕೂಟವನ್ನು ಒದಗಿಸಿಕೊಟ್ಟು, ಪುಸ್ತಕಗಳನ್ನು ಪ್ರಕಟಿಸಿದವರು ಸಾಮಾನ್ಯವಾಗಿ ಕ್ರೈಸ್ತ ಮಿಷನರಿಗಳು. ಕನ್ನಡದಲ್ಲಿ ಡಾ॥ ಕಿಟಲ್, ತೆಲುಗಿನಲ್ಲಿ ಡಾ॥ ಬ್ರೌನ್, ತಮಿಳಿನಲ್ಲಿ ಡಾ॥ ಪೋಪ್, ಮಲೆಯಾಳದಲ್ಲಿ ಡಾ॥ ಗುಂಡರ್ಟ್–ಈ ನಾಲ್ವರೂ ಆಯಾ ಭಾಷೆಗಳನ್ನು ಪಂಡಿತರ ಸಹಾಯದಿಂದ ಚೆನ್ನಾಗಿ ಕಲಿತು ಹಳೆಯ ಗ್ರಂಥಗಳನ್ನು ಬೆಳಕಿಗೆ ತಂದದ್ದಲ್ಲದೆ, ವ್ಯಾಕರಣ ನಿಘಂಟುಗಳನ್ನು ರಚಿಸಿ ಭಾಷಾಶಾಸ್ತ್ರ ವ್ಯಾಸಂಗಕ್ಕೆ ಸಾಮಗ್ರಿ ಕೂಡಹಾಕಿದರು. ಆ ಬಳಿಕ ಡಾ॥ ಕಾಲ್ಡ್‌ವೆಲ್ ಅವರು ಈ ನಾಲ್ವರ ಕೆಲಸವನ್ನೂ ಕ್ರೋಡೀಕರಿಸಿ, ಬಹುಕಾಲ ಶ್ರಮಪಟ್ಟು ಆಳವಾಗಿ ಪರಿಶೋಧಿಸಿ ಆರ್ಯಭಾಷಾ ವರ್ಗದಿಂದ ಭಿನ್ನವಾದ ದ್ರಾವಿಡಭಾಷಾವರ್ಗವೊಂದುಂಟು ಎಂಬ ತಮ್ಮ ಅಭಿಪ್ರಾಯವನ್ನು ಜನಗಳ ಮುಂದಿಟ್ಟರು.

"ಕಾಲ್ಡ್‌ವೆಲ್ಲರ ತಾಯಿತಂದೆಗಳು ಸ್ಕಾಟ್ಲೆಂಡಿನವರು. ಅವರು ಹುಟ್ಟಿದ್ದು ಐರ್ಲೆಂಡಿನಲ್ಲಿ, ೧೮೧೮ರಲ್ಲಿ. ಸ್ಕಾಟ್ಲೆಂಡಿನಲ್ಲಿ ವಿದ್ಯಾಭ್ಯಾಸಮಾಡಿದರು. ಚರ್ಚಿಗೆ ಸೇರಿ ಪಾದ್ರಿಯಾಗಬೇಕೆಂಬ ಉದ್ದೇಶದಿಂದ ಗ್ರೀಕ್ ಭಾಷೆಯನ್ನು ಚೆನ್ನಾಗಿ ಕಲಿತರು. ಅವರ ಸೂಕ್ಷ್ಮಬುದ್ಧಿಯನ್ನು ಕಂಡು ಮೆಚ್ಚಿ ಉಪಾಧ್ಯಾಯರು ಅವರಿಗೆ ಪ್ರತ್ಯೇಕವಾಗಿ ಹೆಚ್ಚು ಪಾಠಗಳನ್ನು ಹೇಳುತ್ತಿದ್ದರು. ಭಾಷಾಶಾಸ್ತ್ರದ ಮೂಲಸೂತ್ರಗಳನ್ನು ಅರಿತು ಅವರು ಗ್ರೀಕ್, ಲ್ಯಾಟಿನ್ ಚೆನ್ನಾಗಿ ಕಲಿತು ಪಾದ್ರಿ ಉದ್ಯೋಗಕ್ಕೆ ಅತ್ಯಾವಶ್ಯಕವಾದ ಇತರ ಯೋಗ್ಯತೆಯನ್ನೂ ಪಡೆದು ೨೦ನೆಯ ವಯಸ್ಸಿನಲ್ಲಿ ಲಂಡನ್ನಿಗೆ ಬಂದು ಒಂದು ಮಿಷನರಿ ಸಂಘಕ್ಕೆ ಸೇರಿಕೊಂಡರು. ಗ್ರೀಕ್ ಕಲಿಯುತ್ತಿದ್ದಾಗ ತಮಿಳು ನಾಡಿನಲ್ಲಿ ಹಿಂದೆ ಗ್ರೀಕರು ಸಂಚರಿಸಿದ್ದ ಸಂಗತಿಯನ್ನು ಓದಿದ್ದರಿಂದ

ದಕ್ಷಿಣ ಇಂಡಿಯಕ್ಕೆ ಹೋಗಲು ಸಂತೋಷದಿಂದ ಒಪ್ಪಿದರು. ೧೮೩೮ರಲ್ಲಿ ಮದರಾಸಿಗೆ ಬಂದು ಮೂರು ವರ್ಷ ಅಲ್ಲಿ ಚೆನ್ನಾಗಿ ತಮಿಳು ಅಭ್ಯಾಸಮಾಡಿದರು. ಬಳಿಕ ತಿರುನೆಲ್‌ವೇಲಿಗೆ ಹೋಗಿ ಇಡೈಯಂಕುಡಿ ಎಂಬಲ್ಲಿ ನಿಂತರು. ತಮಿಳರ ನಡುವೆ ನೆಲಸಿ ಕೆಲಸಮಾಡ ಬೇಕೆಂಬೂ, ತಿರುನೆಲ್‌ವೇಲಿಗೆ ಹೋಗಬೇಕೆಂದೂ ಮೊದಲಿನಿಂದಲೂ ಅವರಿಗೆ ಒಂದು ಹೆಬ್ಬಯಕೆ ಇತ್ತು. ತಿರುನೆಲ್‌ವೇಲಿ ಗ್ರೀಕ್ ಪುಸ್ತಕಗಳಲ್ಲಿ ವರ್ಣಿತವಾಗಿದೆ. ಕಾಲ್ಡ್‌ವೆಲ್ ಅವರು ಕೊರ್ಕೈ (ಗ್ರೀಕ್, ಕೊಲ್ಕೈ), ಕಾಯಲ್ ಮುಂತಾದ ಸ್ಥಳಗಳನ್ನೆಲ್ಲಾ ಶೋಧಿಸಿ ನೋಡಿದರು. ನೆಲಸಿದ ಹಳ್ಳಿಯಲ್ಲಿ ಜನರೊಡನೆ ಒಂದಾಗಿ ಬೆರೆತು, ಅವರಿಗೆ ತಿಳಿವುಕೊಟ್ಟು ಸಂಪಾದನೆಗೆ ದಾರಿಮಾಡಿಕೊಟ್ಟು, ಎಲ್ಲರ ಗೌರವಕ್ಕೂ ಪಾತ್ರರಾದರು. ಅವರ ಹೆಂಡತಿ ತಮಿಳು ನಾಡಿನಲ್ಲೇ ಹುಟ್ಟಿದವಳು. ತಮಿಳು ಮಾತು ಚೆನ್ನಾಗಿ ಬರುತ್ತಿತ್ತು. ಅವಳ ತಂದೆ ತಮಿಳಿನ ಅಚ್ಚುಕೂಟವನ್ನು ಇಟ್ಟುಕೊಂಡು ತಮಿಳು ಪುಸ್ತಕಗಳನ್ನು ಪ್ರಕಟಿಸು ತ್ತಿದ್ದನು. ಈಕೆ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ತುಂಬ ಉತ್ತೇಜನಕೊಟ್ಟಳು. ಮನೆ ಮನೆಗೂ ಹೋಗಿ ಜನರ ಆಕ್ಷೇಪಣೆಗಳಿಗೆಲ್ಲ ಸರಿಯಾಗಿ ಉತ್ತರ ಹೇಳಿ ಸಮಾಧಾನಪಡಿಸಿ ಹೆಣ್ಣುಮಕ್ಕಳನ್ನು ಪಾಠಶಾಲೆಗೆ ಕಳಿಸುವಂತೆ ಮಾಡಿದಳು. ಗಂಡಹೆಂಡರಿಬ್ಬರೂ ಶಾಂತ ವಾದ ಸರಳ ಜೀವನ ನಡಸುತ್ತ ಜನರ ಪ್ರೀತಿಗೆ, ಗೌರವಕ್ಕೆ ಪಾತ್ರರಾಗಿದ್ದರು. ಕ್ರೈಸ್ತರ ಸಾಮಾನ್ಯ ಪ್ರಾರ್ಥನೆಗಳ ತಮಿಳು ಭಾಷಾಂತರವನ್ನು ಪರಿಷ್ಕರಿಸುವ ಸಮಿತಿಯಲ್ಲಿ ಕಾಲ್ಡ್‌ವೆಲ್ ಕೆಲಸಮಾಡಿದರು. ಅದಕ್ಕಾಗಿ ಸ್ವಲ್ಪಕಾಲ ಅವರು ಮದರಾಸಿನಲ್ಲಿದ್ದರು. ಆಮೇಲೆ ತಮಿಳು ಬೈಬಲ್ಲಿನ ಪರಿಷ್ಕರಣದಲ್ಲೂ ಪ್ರಧಾನ ಭಾಗವಹಿಸಿ ಸಹಾಯಮಾಡಿದರು. ಮೂರುಸಲ ಇಂಗ್ಲೆಂಡಿಗೆ ಹೋಗಿದ್ದರು. ೧೮೫೬ರಲ್ಲಿ ಇಂಗ್ಲೆಂಡಿಗೆ ಹೋಗಿದ್ದಾಗ ದ್ರಾವಿಡಭಾಷೆಗಳ ವಿಷಯದಲ್ಲಿ ತಾವು ಬರೆದ ಗ್ರಂಥವನ್ನು ಪ್ರಕಟಮಾಡಿದರು. ಈ ಪುಸ್ತಕ ವಿದ್ವತ್ ಪ್ರಪಂಚದಲ್ಲಿ ಬಹು ಕೋಲಾಹಲ ಹುಟ್ಟಿಸಿತು. ಪ್ರತ್ಯೇಕವಾದ ದ್ರಾವಿಡಭಾಷಾವರ್ಗವೊಂದುಂಟೆಂಬ ಮತ ಎಲ್ಲರಿಗೂ ಬಹು ಕುತೂಹಲ ಹುಟ್ಟಿಸಿತು. ಕಾಲ್ಡ್‌ವೆಲ್ಲರ ಖ್ಯಾತಿ ಪ್ರಪಂಚದಲ್ಲೆಲ್ಲಾ ಹರಡಿತು. ಗ್ಲಾಸ್ಗೊ ವಿಶ್ವವಿದ್ಯಾನಿಲಯದವರು ಡಾಕ್ಟರ್ ಪದವಿಯನ್ನು ಕೊಟ್ಟರು. ೧೮೭೫ರಲ್ಲಿ ಇದರ ಎರಡನೆಯ ಆವೃತ್ತಿಯೂ ಕಾಲ್ಡ್‌ವೆಲ್‌ರವರು ಸತ್ತಮೇಲೆ ೧೯೧೩ರಲ್ಲಿ ಮೂರನೆಯ ಆವೃತ್ತಿಯೂ ಪ್ರಕಟವಾಯಿತು. ಇಂಡಿಯಾ ದೇಶದ ವಿಷಯದಲ್ಲಿ ಇವರಿಗೆ ಅಪಾರ ಮಮತೆ. ತಮ್ಮ ಕಡೆಗಾಲವನ್ನು ಇಂಡಿಯದಲ್ಲೆ ಕಳೆಯಬೇಕೆಂದು ಆಸೆಪಟ್ಟು ಇಂಗ್ಲೆಂಡಿನಲ್ಲಿರಲು ಇಷ್ಟಪಡಲಿಲ್ಲ. 'ನನ್ನ ಮನಸ್ಸು ಇಂಡಿಯನ್ ಆಗಿಬಿಟ್ಟಿದೆ. ಇಂಡಿಯ ನನ್ನ ಮೆಚ್ಚಿನ ನಾಡು, ನಾನು ಬಾಳಿ ಬದುಕಿದ ನಾಡು. ಅಲ್ಲೇ ನಾನು ಮಡಿಯಬೇಕು' ಎಂದು ಹೇಳಿ ಬಂದರು. ೧೮೭೯ರಲ್ಲಿ ಮದರಾಸು ವಿಶ್ವವಿದ್ಯಾನಿಲಯದಲ್ಲಿ ತೇರ್ಗಡೆಹೊಂದಿದ ವಿದ್ಯಾರ್ಥಿಗಳಿಗೆ ಹಿತೋಪದೇಶಮಾಡಲು ಕಾಲ್ಡ್‌ವೆಲ್ಲರನ್ನು ಕರಸಿದ್ದರು. ಆಗ ಅವರು ನಮ್ಮ ನಾಡಿನ ಹಿರಿಮೆ ಹಳಮೆಗಳನ್ನು ಕೊಂಡಾಡಿ, ನಮ್ಮ ಸಂಸ್ಕೃತಿಯ ಕುರುಹಾಗಿರುವ ಶಾಸನ ಮೊದಲಾದುವನ್ನು ಕಣ್ಣಿಟ್ಟು ಪರೀಕ್ಷಿಸಬೇಕೆಂದೂ, ಪುರಾಣಗಳನ್ನು ವಿಮರ್ಶಿಸಿ ಸತ್ಯಾಂಶ ಗಳನ್ನು ಕಂಡುಕೊಳ್ಳಬೇಕೆಂದೂ, ನಮ್ಮ ಭಾಷೆಗಳನ್ನು ಪರಸ್ಪರ ಹೋಲಿಸಿ ನೋಡಿ ಅಭ್ಯಾಸಮಾಡಬೇಕೆಂದೂ ನಮ್ಮ ಸಂಸ್ಕೃತಿಯನ್ನೂ ಧರ್ಮವನ್ನೂ ಚರಿತ್ರೆಯ ದೃಷ್ಟಿಯಿಂದ ವಿಮರ್ಶಿಸಿ, ಅವುಗಳ ಘನತೆಯನ್ನು ಅರಿತುಕೊಳ್ಳಬೇಕೆಂದೂ ಒತ್ತಿಹೇಳಿದರು.

"ನಮ್ಮ ಜನರೊಡನೆ ಒಂದಾಗಿ ಬೆರೆತು ಶಾಂತಜೀವನ ನಡಸಿ, ತಾವು ಒಲಿದು ನೆಲಸಿದ ಈ ನಾಡಿನಲ್ಲೇ ಕೊಡೈಕ್ಕಾನಲಿನಲ್ಲಿ ಕಣ್ಣುಮುಚ್ಚಿದರು. ಇಡೈಯಂಕುಡಿಯಲ್ಲಿ ಇವರು ಕಟ್ಟಿಸಿದ ಒಂದು ಚರ್ಚು, ಅವರ ಹೆಸರಿನ ಒಂದು ಹಾಸ್ಟೆಲ್ ಮತ್ತು ಒಂದು ವಿದ್ಯಾಶಾಲೆ, ಕೊಡೈಕ್ಕಾನಲಿನಲ್ಲಿ ಕಟ್ಟಿರುವ ಸೆಂಟ್ ಪೀಟರ್ಸ್ ಚರ್ಚು—ಇವಿಷ್ಟೂ ಇವರ ಸ್ಮಾರಕವಾಗಿ ಉಳಿದಿವೆ; ಮತ್ತು ಎಲ್ಲಕ್ಕೂ ದೊಡ್ಡದಾದ ನೆನಪು ಇವರ ದ್ರಾವಿಡಭಾಷಾವರ್ಗ ಸಿದ್ಧಾಂತ."

## ದ್ರಾವಿಡಭಾಷಾವರ್ಗ

"ಪ್ರಪಂಚದ ಭಾಷೆಗಳೆಲ್ಲಾ ಒಂದೇ ಒಂದು ಮೂಲಭಾಷೆಯಿಂದ ಹುಟ್ಟಿಬಂದಿವೆ ಎಂದು ಒಂದು ಭಾವನೆ ಇತ್ತು. ಆ ಮೂಲಭಾಷೆ ಹೀಬ್ರೂ ಎಂದು ಪಾಶ್ಚಾತ್ಯರೂ, ಸಂಸ್ಕೃತ ಎಂದು ನಮ್ಮವರೂ ನಂಬಿದ್ದರು. ಆದರೆ ಪ್ರತಿಯೊಂದು ಭಾಷೆಯನ್ನೂ ಪ್ರತ್ಯೇಕವಾಗಿ ಪರಿಶೀಲಿಸಿ, ಶಬ್ದ ವ್ಯಾಕರಣ ಮೊದಲಾದುವನ್ನು ಪರೀಕ್ಷಿಸಿ ಸುತ್ತುಮುತ್ತಲಿನ ಇತರ ಭಾಷೆಗಳೊಡನೆ ಹೋಲಿಸಿ ಹೋಲಿಕೆ ವ್ಯತ್ಯಾಸಗಳನ್ನು ಗಮನಿಸುತ್ತ ಹೋದಂತೆಲ್ಲ ಬೇರೆಬೇರೆ ಹಲವು ಸ್ವತಂತ್ರ ಭಾಷಾ ಕುಟುಂಬಗಳಿವೆಯೆಂಬ ಸತ್ಯ ಬೆಳಗುತ್ತ ಬಂತು. ಹೀಗೆ ಭಾಷಾಶಾಸ್ತ್ರ ಹುಟ್ಟಿಬಂತು.

"ಪಾಶ್ಚಾತ್ಯರು ಸಂಸ್ಕೃತ ಕಲಿತಮೇಲೆ ಅವರಿಗೆ ಒಂದು ಹೊಸ ದೃಷ್ಟಿ ಮೂಡಿತು. ಗ್ರೀಕ್, ಲ್ಯಾಟಿನ್, ಇಂಗ್ಲಿಷ್, ಫ್ರೆಂಚ್, ಜರ್ಮನ್ ಮೊದಲಾದ ಭಾಷೆಗಳನ್ನೆಲ್ಲ ಹೋಲಿಸಿ ನೋಡಿ ಅವೂ ಸಂಸ್ಕೃತ ಇರಾನಿಯನ್ ಭಾಷೆಗಳೂ ಒಂದೇ ಬುಡಕಟ್ಟಿಗೆ ಸೇರಿದುವೆಂಬುದನ್ನು ಕಂಡುಕೊಂಡರು; ಇದಕ್ಕೆ ಇಂಡೊ-ಯುರೋಪಿಯನ್ ಭಾಷಾವರ್ಗವೆಂದು ಹೆಸರು ಕೊಟ್ಟರು.

"ಭರತಖಂಡದ ಭಾಷೆಗಳೆಲ್ಲ ಸಂಸ್ಕೃತದ ಗುಂಪಿಗೆ ಸೇರಿದುವೆಂಬ ನಂಬಿಕೆ ಇತ್ತು. ಕಾಲ್ಡ್‌ವೆಲ್ಲರು ಕಿಟ್ಟೆಲ್, ಪೋಪ್ ಮೊದಲಾದವರು ಕೂಡಹಾಕಿದ ಅಂಶಗಳನ್ನೆಲ್ಲ ಇಟ್ಟುಕೊಂಡು ಸಂಸ್ಕೃತವನ್ನು ಕಲಿತು, ತುಳು, ತೋಡ, ಬಡಗ ಮೊದಲಾದ ಗ್ರಂಥಸ್ಥವಲ್ಲದ ಉಪಭಾಷೆಗಳನ್ನು ಪರಿಶೀಲಿಸಿ, ಸಾಹಿತ್ಯಭಾಷೆ ವ್ಯವಹಾರದಭಾಷೆ, ಗ್ರಾಮ್ಯಭಾಷೆ—ಎಲ್ಲವನ್ನೂ ಗಮನಿಸುತ್ತ ಇಪ್ಪತ್ತು ವರುಷಕ್ಕಿಂತಲೂ ಹೆಚ್ಚುಕಾಲ ಅಭ್ಯಾಸಮಾಡಿ, ಆಳವಾಗಿ ಆಲೋಚಿಸಿ ತಮಗೆ ತೋರಿದ ಅಭಿಪ್ರಾಯಗಳನ್ನು ಚೆನ್ನಾಗಿ ತೂಗಿ ನೋಡಿ ಪ್ರತಿಯೊಂದು ಸಂದೇಹಕ್ಕೂ ತಕ್ಕ ಸಮಾಧಾನವನ್ನು ಕಂಡುಕೊಂಡು 'ಇಂಡಿಯದ ಭಾಷೆಗಳೆಲ್ಲವೂ ಸಂಸ್ಕೃತಜನ್ಯವಲ್ಲ. ಇಲ್ಲಿ ಸಂಸ್ಕೃತವರ್ಗ, ದ್ರಾವಿಡವರ್ಗ—ಹೀಗೆ ಎರಡು ಸ್ವತಂತ್ರ ಭಾಷಾವರ್ಗಗಳಿವೆ' ಎಂಬ ಸಿದ್ಧಾಂತಕ್ಕೆ ಬಂದರು. ಹೀಗೆ ದ್ರಾವಿಡಭಾಷಾವರ್ಗದ ವಿಚಾರಕ್ಕೆ ತಳಹದಿ ಹಾಕಿದರು. ಇವರ ಈ ವಾದದಲ್ಲಿ ಸಣ್ಣ ಸಣ್ಣ ವಿವರಗಳಲ್ಲಿ ಕೆಲವು ತಪ್ಪಿರಬಹುದು. ಆದರೆ ಮುಖ್ಯ ತತ್ವಗಳು ಮಾತ್ರ ಭದ್ರವಾಗಿವೆ. ಕೆಲವರು ಇನ್ನೂ ಸಂದೇಹಪಡುತ್ತಿದ್ದರೂ ಕೊನೆಯವರೆಗೂ ಉಳಿಯುವಹಾಗಿವೆ.

"ಪ್ರತಿಯೊಂದು ಭಾಷೆಗೂ ಕೆಲವು ವೈಶಿಷ್ಟ್ಯಗಳುಂಟು. ಈ ವಿಶೇಷ ಲಕ್ಷಣಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರತಿಯೊಂದು ಭಾಷೆಯನ್ನೂ ಒಂದಲ್ಲ ಒಂದು ಭಾಷಾವರ್ಗಕ್ಕೆ ಸೇರಿಸಬೇಕಾಗುತ್ತದೆ. ಮುಖ್ಯ ವೈಶಿಷ್ಟ್ಯಗಳು ಮೂರು: (೧) ಅಕ್ಷರ(ಧ್ವನಿ) ಮತ್ತು ಶಬ್ದಕೋಶ, (೨) ವ್ಯಾಕರಣಪ್ರಕ್ರಿಯೆ, (೩) ವಾಕ್ಯರಚನೆ—ಈ ಪ್ರತಿಯೊಂದು ವಿಷಯದಲ್ಲಿಯೂ ಸಂಸ್ಕೃತಕ್ಕೂ, ಕನ್ನಡ, ತಮಿಳು, ತೆಲುಗು, ಮಲೆಯಾಳ ಮೊದಲಾದುವಕ್ಕೂ ಬಹಳ ವ್ಯತ್ಯಾಸವಿದೆ. ಅಲ್ಲದೆ ಕನ್ನಡ ಮೊದಲಾದ ಈ ಭಾಷೆಗಳೆಲ್ಲಕ್ಕೂ ಪರಸ್ಪರ ಸಾಮ್ಯವಿದೆ. (೧) ನಿತ್ಯಗಟ್ಟಳೆಯ ಜೀವನಕ್ಕೆ, ಸಾಮಾನ್ಯ ಬಳಕೆಗೆ ಬೇಕಾದ ಮಾತುಗಳು, ನಾಮಪದಗಳು, ಕ್ರಿಯಾಪದಗಳು, ಸರ್ವನಾಮಗಳು, ಸಂಖ್ಯಾವಾಚಕಗಳು — ಇವುಗಳಲ್ಲೆಲ್ಲ ಸಂಸ್ಕೃತಕ್ಕೂ ಈ ಭಾಷೆಗಳಿಗೂ ಯಾವ ಸಂಬಂಧವೂ ಇಲ್ಲ. ಉದಾ:— ಮನೆ, ಮರ, ಕಣ್ಣು, ಕೈ, ಹುಲಿ, ಗಿಣಿ, ನಾನು, ನೀನು, ಊಟ, ಉಣ್ಣು, ಒಂದು, ಎರಡು ಮೊದಲಾದುವು. (೨) ಆರ್ಯಭಾಷೆಗಳಲ್ಲಿ ಲಿಂಗ ಶಬ್ದವನ್ನನುಸರಿಸುತ್ತದೆ. ದ್ರಾವಿಡ ಭಾಷೆಗಳಲ್ಲಿ ಸಾಮಾನ್ಯವಾಗಿ ಲಿಂಗ ವಿವಕ್ಷೆಯೇ ಇಲ್ಲ. ಇದ್ದಕಡೆ ಅರ್ಥವನ್ನನುಸರಿಸಿ ಮೇಲು ಕೀಳೆಂಬ ವಿಭಾಗವುಂಟು. ಉಯರ್‌ತ್ತಿಣೈ, ಅಹ್ರಿಣೈ ಎಂದು ತಮಿಳಿನಲ್ಲೂ ಮಹಚ್ಛಬ್ದ ಅಮಹಚ್ಛಬ್ದ ಎಂದು ತೆಲುಗಿನಲ್ಲೂ ವಿಭಾಗಿಸುತ್ತಾರೆ. ಕನ್ನಡದಲ್ಲಿ ಈ ವಿಭಾಗ ತೋರಿಸಿಲ್ಲ. ಹಾಗೆಯೇ 'ಬಿಂದು ಪರೀಕ್ಷಿಸಿ ನೋಡಿದ್ದರೆ, ಈ ನಿಯಮ ಕಂಡುಬರುತ್ತಿತ್ತು. ಹೇಳಿರುವುದು ಸಂಸ್ಕೃತವದಂತಕ್ಕೆ' ಎಂದು ಕೇಶಿರಾಜನು ಪ್ರಥಮಾ ವಿಭಕ್ತಿಗೆ ಪ್ರತ್ಯಯ

ಭಾಷಾಮರ್ಯಾದೆಯನ್ನು ಅನುಸರಿಸಿ. ದ್ರಾವಿಡಭಾಷೆಯಲ್ಲಿ ಹಾಗಿಲ್ಲ; ಪ್ರಕೃತಿರೂಪವೇ ಪ್ರಥಮಾ ವಿಭಕ್ತಿ. (೩) ಪದಗಳ ಜೋಡಣೆ, ವಾಕ್ಯರಚನಾಕ್ರಮಗಳಲ್ಲಿಯೂ ಸಂಸ್ಕೃತ ಮೊದಲಾದ ಆರ್ಯಭಾಷೆಗಳ ದಾರಿಯೇ ಒಂದು; ಈ ಭಾಷೆಗಳ ದಾರಿಯೇ ಒಂದು. ಕಾಲಕ್ರಮದಲ್ಲಿ ಹೆಚ್ಚು ನಾಗರಿಕತೆಯ ಸಂಸ್ಕೃತ ಜನರಿಂದ ಎಷ್ಟೋ ಸಹಾಯ ಕನ್ನಡಕ್ಕೆ ದ್ರಾವಿಡಭಾಷೆಗಳಿಗೆ ಆಗಿದೆ. ದ್ರಾವಿಡಭಾಷೆಗಳ ಸಂಪರ್ಕದಿಂದ ಸಂಸ್ಕೃತವೂ ಸ್ವಲ್ಪ ಮಾರ್ಪಟ್ಟಿದೆ. ಹಲವು ದ್ರಾವಿಡ ಶಬ್ದಗಳು ಸಂಸ್ಕೃತಕ್ಕೆ ಹೋಗಿ ಸೇರಿವೆ. ಕುಮಾರಿಲ ಭಟ್ಟರು ಪಾಂಬು, ನಡೆ, ಚೋಱು (ಅನ್ನ) ಮೊದಲಾದ ಶಬ್ದಗಳು ಸಂಸ್ಕೃತಕ್ಕೆ ಬಂದು ಸೇರಿದುವೆಂದು ಹೇಳುತ್ತಾರೆ. ಹಿಂದಿನವರ ಸತ್ಯದೃಷ್ಟಿ ಹೋಗಿ ಬರುಬರುತ್ತ ಅತಿ ಶ್ರದ್ಧೆ ನೆಲಸಿ ವಿಚಾರಕ್ಕೆ ಎಡೆಯಿಲ್ಲದಂತಾಯಿತು. ಸತ್ಯ ಮುಚ್ಚಿಹೋಯಿತು.

"ಕಾಲ್ಡ್‌ವೆಲ್ ಅವರು ಕಷ್ಟಪಟ್ಟು ಸತ್ಯವನ್ನು ಕಂಡು ಹೊಸ ಕಣ್ಣು ತೆರೆಯುವಂತೆ ಮಾಡಿದರು. ಕನ್ನಡ ಕವಿಗಳಲ್ಲಿ ಕನ್ನಡಭಾಷೆಯ, ಜನಜೀವನದ, ಅರ್ಧಸತ್ತ್ವ ಬಂದಿಲ್ಲ—ಸಂಸ್ಕೃತ ಪ್ರಭಾವ ಅತಿಯಾಗಿ. ತಮಿಳರು ತಮ್ಮದನ್ನೇ ಕೂಡಿದ ಮಟ್ಟಿಗೂ ಉಳಿಸಿಕೊಂಡು ಬಂದರು. ಕನ್ನಡದ ನಿಜವಾದ ಸ್ವರೂಪವನ್ನೂ ಚೈತನ್ಯವನ್ನೂ ಮತ್ತೆ ಬೆಳಗುವುದು ನಮ್ಮ ಕರ್ತವ್ಯ. ಕನ್ನಡದ ಬೇರಿನಿಂದ ಹೆಚ್ಚಾಗಿ ಕನ್ನಡ ಚಿಗುರಬೇಕಾಗಿದೆ—ಕನ್ನಡ ಜನ ಸಾಮಾನ್ಯಕ್ಕಾಗಿ."

---

೨. ಕನ್ನಡ ಕೈಪಿಡಿ (ಸಂಪುಟ ೧).—ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯ; ಡೆಮ್ಮಿ ಅ. ಪ. ಪುಟ ೪೪೬; ಬೆಲೆ: ರೂ. ೧-೧೨-೦.

'ಕನ್ನಡ ಕೈಪಿಡಿ'ಯ ಮೊದಲನೆಯ ಆವೃತ್ತಿ ೧೯೨೭ರಲ್ಲಿ ಪ್ರಕಟವಾಯಿತು. ಅದರ ಉದ್ದೇಶ ಸಂಪೂರ್ಣ ಸಫಲವಾಯಿತೆಂಬ ಮಾತಿಗೆ ಭಿನ್ನಾಭಿಪ್ರಾಯಗಳು ಇರಲಾರವು. ಉಚ್ಚ ಪರೀಕ್ಷೆಗಳಿಗೆ ಕನ್ನಡವನ್ನು ಓದುತ್ತಿರುವ ವಿದ್ಯಾರ್ಥಿಗಳಿಗೆ ಅದು ಒಳ್ಳೆಯ ಉಪಯುಕ್ತ ಸಾಧನಗ್ರಂಥವಾಗಿ ಪರಿಣಮಿಸಿತು. ಈಗ ಈ ಉಪಯುಕ್ತಗ್ರಂಥದ ಎರಡನೆಯ ಆವೃತ್ತಿ (೧೯೩೬) ಹೊರಟಿದೆ. ಈ ಆವೃತ್ತಿಯಲ್ಲಿ ಕೆಲವು ಮಾರ್ಪಾಡುಗಳು, ಕೆಲವು ಹೊಸ ವಿಷಯಗಳು ಬಂದಿದ್ದು ಗ್ರಂಥದ ಉಪಯುಕ್ತತೆಯನ್ನು ಇನ್ನೂ ಹೆಚ್ಚಿಸಿವೆ.

ಮೊದಲಿನ ಆವೃತ್ತಿಯಲ್ಲಿದ್ದ (೧) 'ಹಳಗನ್ನಡದ ವ್ಯಾಕರಣ', (೨) 'ಕರ್ನಾಟಕ ಛಂದಸ್ಸು', (೩) 'ಅಲಂಕಾರ' ಎಂಬ ಭಾಗಗಳಲ್ಲದೆ, ಈಗ 'ಕನ್ನಡಭಾಷೆಯ ಚರಿತ್ರೆ' ಎಂಬ ಹೊಸ ಭಾಗವೊಂದು ಪ್ರಕಟವಾಗಿದೆ. 'ಕರ್ನಾಟಕ ಛಂದಸ್ಸು' ಎಂಬ ಭಾಗದಲ್ಲಿ 'ಕನ್ನಡ ಛಂದಸ್ಸಿನ ಚರಿತ್ರೆ' ಎಂಬ ಪ್ರಕರಣ ಹೊಸದಾಗಿ ಸೇರಿಸಲ್ಪಟ್ಟಿದೆ. ವ್ಯಾಕರಣ ವಿಷಯವನ್ನು ಪ್ರಾರಂಭಿಸುವುದಕ್ಕೆ ಮೊದಲು ಕನ್ನಡ ಶಬ್ದರೂಪಗಳ ಪರಿಚಯವಾಗುವಂತೆ, ಕನ್ನಡ ವರ್ಣಮಾಲೆಯ ವಿವೇಚನೆಯನ್ನು ಕೊಡಲಾಗಿದೆ. ವ್ಯಾಕರಣ ಭಾಗದ ಪರಿಶಿಷ್ಟದಲ್ಲಿ ಮೊದಲಿದ್ದ 'ಕರ್ನಾಟಕ ಧಾತುಗಳು', 'ತತ್ಸಮ ತದ್ಭವಗಳು' ಎಂಬ ವಿಷಯಗಳಿಗೆ ಪ್ರತಿಯಾಗಿ ಈಗ ಹಳಗನ್ನಡ ವ್ಯಾಕರಣ ಗ್ರಂಥಗಳ ಸಂಕ್ಷಿಪ್ತ ನಿರೂಪಣೆ ಇದೆ. ಛಂದಸ್ಸಿನ ವಿಭಾಗದಲ್ಲಿ ಕೆಲವು ಪುಟಗಳು ಹೆಚ್ಚಿದ್ದರಿಂದಲೋ ಏನೋ ಅರ್ಥಾಲಂಕಾರ ಪ್ರಕರಣವು ಮೊಟಕಾಗಿದೆ.

ಶುದ್ಧ ಅಂಕಗಣಿತ ದೃಷ್ಟಿಯಿಂದ ನಿರೀಕ್ಷಿಸುವದಾದರೆ ಈಗಿನ ಆವೃತ್ತಿಯಲ್ಲಿ 'ಕನ್ನಡ ಭಾಷೆಯ ಚರಿತ್ರೆ' ಎಂಬ ಭಾಗದ ೯೬ ಪುಟಗಳು ಹೆಚ್ಚಾಗಿವೆ. 'ಕನ್ನಡ

5

ಛಂದಸ್ಸಿನ ಚರಿತ್ರೆ' ಎಂಬ ಪ್ರಕರಣದ ೬೫ ಪುಟಗಳು ಹೆಚ್ಚಾಗಿದ್ದರೂ ಕೂಡ ಅರ್ಥಾಲಂಕಾರ ಪ್ರಕರಣದಲ್ಲಿ ಸುಮಾರು ೫೦, ವ್ಯಾಕರಣ ವಿಭಾಗದಲ್ಲಿ ೧೫ ಪುಟಗಳನ್ನು ಕತ್ತರಿಸಿ 'ಭರ್ತಿ' ಮಾಡಿದಂತಿದೆ. 'ಕರ್ನಾಟಕ ಛಂದಸ್ಸು', 'ಅಲಂಕಾರ ಶಾಸ್ತ್ರ' ಈ ಪ್ರಕರಣಗಳ ಪುಟಗಳು ಮೊದಲಿನಷ್ಟೆ ಇವೆ. 'ಶಬ್ದಾಲಂಕಾರ' ಪ್ರಕರಣದಲ್ಲಿ ಸೂಕ್ಷ್ಮಭೇದಗಳ ಚರ್ಚೆಯನ್ನು ಬಿಟ್ಟುಕೊಟ್ಟು ೨ ಪುಟಗಳನ್ನು ಉಳಿಸಿ ಅಲಂಕಾರಗಳ ಸಂಖ್ಯೆಯ ಚರ್ಚೆಗಾಗಿ ೧ ಪುಟವನ್ನು ಹೆಚ್ಚಿಸಿದ್ದಾಗಿದೆ.

ಈ ಶುದ್ಧ ಅಂಕಗಣಿತವನ್ನು ನೋಡುವಾಗಲೂ ಕೂಡ ಲೇಖಕರು ಈ ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸುವ ದೃಷ್ಟಿಯಿಂದ ಔಚಿತ್ಯಜ್ಞಾನ ತೋರಿಸಿದ್ದಾರೆಂದು ತಿಳಿಯುತ್ತದೆ. ಆದರೂ ಪುಟಗಳನ್ನು ಉಳಿಸುವ ಉದ್ದೇಶದಿಂದ 'ಕರ್ನಾಟಕ ಧಾತುಗಳು', 'ತತ್ಸಮ ತದ್ಭವಗಳು' ಎಂಬ ವಿಭಾಗಗಳನ್ನು ಬಿಟ್ಟಿರುವದಾಗಲಿ, 'ಅರ್ಥಾಲಂಕಾರ' ವಿಭಾಗವನ್ನು ಮೊಟಕು ಮಾಡಿರುವದಾಗಲಿ ಅಷ್ಟೊಂದು ಸರಿಯಲ್ಲವೆಂದು ಹೇಳಬೇಕು. 'ಕನ್ನಡ ಕೈಪಿಡಿ'ಯಂತಹ ಅಭ್ಯಾಸಗ್ರಂಥದಲ್ಲಿ ಶುದ್ಧ ಕನ್ನಡ ಧಾತುಗಳ, ಹಾಗೂ ಕೆಲವು ತತ್ಸಮ ತದ್ಭವಗಳ ಪರಿಚಯ ಬೇಕೆಂದೆನಿಸುತ್ತದೆ. ಇನ್ನು 'ಅರ್ಥಾಲಂಕಾರ ಪ್ರಕರಣವನ್ನು' ಮೊಟಕು ಮಾಡಿದ ವಿಚಾರ: ಮೊದಲಿನ ೬೦ ಅಲಂಕಾರಗಳಿಗೆ ಪ್ರತಿಯಾಗಿ ಇಲ್ಲಿ ೪೯ನ್ನು (ಮಿಶ್ರಾಲಂಕಾರಗಳನ್ನುಳಿದು) ಮಾತ್ರ ಹೇಳಿದೆ. ಹೀಗೆ ಸಂಖ್ಯೆ ಕಡಮೆ ಮಾಡಿದುದು ದೋಷವೇನೂ ಅಲ್ಲ. ಏಕೆಂದರೆ, ವಿಶೇಷ ಮಹತ್ವದವಲ್ಲವೆಂದು ತಿಳಿಯಲಾದ ಕೆಲವು ಅಲಂಕಾರಗಳನ್ನು (ವಿಕಲ್ಪ, ಸಾಮಾನ್ಯ, ಅನ್ಯೋನ್ಯ, ಪೂರ್ವರೂಪಾಲಂಕಾರ, ಕಾವ್ಯಾರ್ಥಪತ್ಯಾಲಂಕಾರ, ಲಲಿತ, ಇತ್ಯಾದಿಗಳನ್ನು) ಇಲ್ಲಿ ಬಿಟ್ಟುಕೊಡಲಾಗಿದೆ. ಆದರೆ ಮೊದಲಿನ ಆವೃತ್ತಿಯಲ್ಲಿ ಲಕ್ಷಣ–ಲಕ್ಷ್ಯಗಳನ್ನು ಹೇಳಿದಮೇಲೆ, ಲಕ್ಷ್ಯದಲ್ಲಿ ಲಕ್ಷಣಗಳು ಹೇಗೆ ಬಂದಿವೆ ಎಂಬುದರ ವಿವರಣೆ ವಿಶೇಷವಾಗಿ ಇರುತ್ತಿತ್ತು. ಈಗಿನ ಗ್ರಂಥದಲ್ಲಿ ಆ ವಿವರಣೆಯನ್ನು ಹೆಚ್ಚಾಗಿ ತೆಗೆದುಹಾಕಲಾಗಿದೆ. ವಿದ್ಯಾರ್ಥಿಗಳು ಅಲಂಕಾರಗಳ ತಿರುಳನ್ನು ಅರಿತುಕೊಳ್ಳುವ ದೃಷ್ಟಿಯಿಂದ ಆ ವಿವರಣೆ ಬೇಕಿತ್ತು ಎಂದು ಕಂಡುಬರುತ್ತದೆ. ಅಲ್ಲದೆ ಪರಸ್ಪರ ಸಾಮ್ಯ-ವೈಷಮ್ಯಗಳಿಂದ ಕೆಲವು ಅಲಂಕಾರಗಳನ್ನು ವಿವೇಚಿಸುವ ಭಾಗ (ಉದಾಹರಣೆ: ಮೊದಲಿನ ೨೪೯ನೆಯ ಪುಟದಲ್ಲಿಯ ಸಮಯೋಗ, ದೀಪಕ, ಆವೃತ್ತಿ ದೀಪಕ, ಪ್ರತಿವಸ್ತೂಪಮಾಲಂಕಾರ– ಇವುಗಳ ತುಲನೆ) ಬಿಟ್ಟುಹೋಗಿದೆ. ಹೀಗಿದ್ದರೂ ಕೂಡ ಈ ಪ್ರಕರಣದ ಉಪಯುಕ್ತತೆ ಹೆಚ್ಚುವಂತಹ ಪ್ರಯತ್ನ ಇಲ್ಲಿದೆ. ಅಲಂಕಾರಗಳ ಲಕ್ಷಣಗಳನ್ನು ಹೇಳುವಾಗ ಸಂಸ್ಕೃತ ಅವತರಣಿಕೆಗಳನ್ನು ಅಡಿಟಪ್ಪಣಿಗಳಲ್ಲಿ ಕೊಡಲಾಗಿದೆ. ಹಾಗೂ ಅಲಂಕಾರಗಳ ವರ್ಗೀಕರಣವು ಹೆಚ್ಚು ಶುದ್ಧವೂ ಸರಳವೂ ಆದ ರೀತಿಯಲ್ಲಿ ಮಾಡಲ್ಪಟ್ಟಿದೆ. ಸಾಮಾನ್ಯ ವೈಶಿಷ್ಟ್ಯಗಳುಳ್ಳ ಅಲಂಕಾರಗಳ ಗುಂಪುಗಳ ಪರಿಚಯವು ಅಲಂಕಾರಗಳನ್ನು ಅರಿತುಕೊಳ್ಳಲಿಕ್ಕೆ ಸಹಾಯಕಾರಿಯಾಗುತ್ತದೆ. ಅಲ್ಲದೆ ಅಲಂಕಾರಗಳ ಲಕ್ಷಣಗಳ ನಿರೂಪಣೆ ಕೆಲವು ಕಡೆ ಮೊದಲಿಗಿಂತ ಹೆಚ್ಚು

ಸ್ಪಷ್ಟವಾಗಿದೆ. (ಉದಾಹರಣೆಗೆಂದು ದೃಷ್ಟಾಂತ ಅಲಂಕಾರವನ್ನು ನೋಡಬೇಕು. ಪ್ರುಟ ಮೊದಲಿನದು ೨೪೫, ಈಗಿನದು ೩೨೦.)

ಒಟ್ಟಿನಮೇಲೆ, "ಅಲ್ಲಲ್ಲಿ ವಿಷಯದಲ್ಲಿಯೂ, ಕ್ರಮದಲ್ಲಿಯೂ ಬದಲಾವಣೆಗಳನ್ನು ಮಾಡಿರುವುದು" ಉಚಿತವೇ ಆಗಿದೆಯೆಂದು ಒಪ್ಪಬೇಕು.

ಇನ್ನು ಹೊಸದಾಗಿ ಸೇರಿಸಲ್ಪಟ್ಟ ವಿಭಾಗಗಳೆಂದರೆ:—(೧) ಕನ್ನಡ ಛಂದಸ್ಸಿನ ಚರಿತ್ರೆ, (೨) ಕನ್ನಡ ಭಾಷೆಯ ಚರಿತ್ರೆ.

'ಕನ್ನಡ ಛಂದಸ್ಸಿನ ಚರಿತ್ರೆ' ಎಂಬ ಪ್ರಕರಣವು ತೆಲುಗು–ತಮಿಳು–ಕನ್ನಡ ಛಂದಸ್ಸುಗಳ ತುಲನಾತ್ಮಕ ವಿಚಾರವನ್ನು ಒಳಗೊಂಡಿದ್ದು, ಅಭ್ಯಾಸಿಗಳಿಗೆ ಹೊಸ ಕ್ಷೇತ್ರವನ್ನು ಒದಗಿಸಿಕೊಡುತ್ತದೆ. ಕನ್ನಡ ಭಾಷೆಯು ಸಂಸ್ಕೃತಜನ್ಯವೆಂದು ನಂಬಿರುವ ಮೂಲಕ ಕನ್ನಡ ಛಂದಸ್ಸಿಗೆ ಸಂಸ್ಕೃತ ಛಂದಸ್ಸೇ ಮೂಲವೆಂಬ ಅಭಿಪ್ರಾಯವನ್ನಿಟ್ಟುಕೊಂಡು, ನಾಗವರ್ಮನಂತಹ ಲಾಕ್ಷಣಿಕರು ಗ್ರಂಥರಚನೆ ಮಾಡಿದ್ದಾರೆ. ಆದರೆ ಈ ಅಭಿಪ್ರಾಯ ತಪ್ಪೆಂದು ಹೇಳಿ ಕನ್ನಡಕ್ಕೆ ತನ್ನದೇ ಆದ ಒಂದು ಛಂದಸ್ಸು ಇದೆ ಎಂಬುದನ್ನು ಇಲ್ಲಿ ತೋರಿಸುವ ಪ್ರಯತ್ನವಿದೆ. "ಈ ಕನ್ನಡ ಛಂದಸ್ಸೇ ನಿಜವಾದ ಕನ್ನಡ ಭಾಷೆಯ, ಕನ್ನಡ ಜನರ, ಛಂದಸ್ಸೆಂದೂ, ಇದು ಜನರಲ್ಲಿ (ಪ್ರಾಯಶಃ ಉಳಿಯದೆ ಹೋದ ಜನಪದ ಸಾಹಿತ್ಯದಲ್ಲಿ) ಪ್ರಚಾರದಲ್ಲಿತ್ತೆಂದೂ, ತೆಲುಗು ತಮಿಳುಗಳೊಡನೆ ಹೋಲಿಸಿ ನೋಡಿದರೆ ಇದೇ ಮುಂದೆ ವೀರಶೈವ ಕವಿಗಳು ಮುಂದಕ್ಕೆ ತಂದ ಛಂದಸ್ಸುಗಳ 'ತಾಯಿ' ಎಂದೂ ಚರಿತ್ರೆಯ ದೃಷ್ಟಿಯಿಂದ ನೋಡತಕ್ಕವರಿಗೆ ಸ್ಪಷ್ಟವಾಗದಿರಲಾರದು" ಎಂಬ ಅಭಿಪ್ರಾಯವನ್ನು ಸಮರ್ಥಿಸುವ ಚರ್ಚೆ ಈ ಭಾಗದಲ್ಲಿ ಬಂದಿದೆ. ಸಂಸ್ಕೃತದ ವೃತ್ತ ಕಂದಗಳನ್ನು ಬಿಟ್ಟು, ಕನ್ನಡದ ಹಾಡು ಮಟ್ಟಗಳಿಂದ ದ್ರಾವಿಡ ಛಂದಸ್ಸಿನ ರಹಸ್ಯದ ವಿಮರ್ಶೆ ಇಲ್ಲಿದೆ.

'ಕನ್ನಡ ಭಾಷೆಯ ಚರಿತ್ರೆ' ಎಂಬ ನಾಲ್ಕನೆಯ ಭಾಗವು ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಮತ್ತು ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರುಗಳಿಂದ ಬರೆಯಲ್ಪಟ್ಟಿದೆ. ಕನ್ನಡ ಭಾಷಾ ಚರಿತ್ರೆಯ ಬಗ್ಗೆ ಇದುವರೆಗೆ ಇದ್ದ ಗ್ರಂಥಗಳಲ್ಲಿ ದ್ರಾವಿಡ ಭಾಷೆಗಳ ತುಲನಾತ್ಮಕ ವಿವೇಚನೆಯೆ ಹೆಚ್ಚಾಗಿದ್ದು, ಕನ್ನಡ ಭಾಷೆಯ ಬಗ್ಗೆ ಇದ್ದ ವಿವೇಚನೆ ಕಡಮೆಯಾಗಿರುತ್ತಿತ್ತು. ಈ ಭಾಗವು ಆ ಕೊರತೆಯನ್ನು ಕೆಲಮಟ್ಟಿಗೆ ತುಂಬುವಂತಿದೆ. ಕೇಶಿರಾಜನ ವ್ಯಾಕರಣವನ್ನು ಮುಖ್ಯವಾಗಿಟ್ಟುಕೊಂಡು, ಬೇರೆ ಬೇರೆ ಭಾಷಾ ಪಂಡಿತರ ಅಭಿಪ್ರಾಯಗಳನ್ನು ಸಮನ್ವಯಿಸಿಕೊಂಡ ನಿರೂಪಣೆ ಇಲ್ಲಿದೆ. ವಿವಾದಾಸ್ಪದವಾಗಿರುವ ಅಭಿಪ್ರಾಯಗಳನ್ನು ಚರ್ಚಿಸಿ ಸಿದ್ಧಾಂತಗಳನ್ನು ಹೇಳುವಲ್ಲಿ ಸುಸ್ಪಷ್ಟತೆ ಸುವ್ಯವಸ್ಥಿತೆಗಳು ಕಂಡುಬರುತ್ತವೆ. ಕನ್ನಡ ಭಾಷೆಯ ಅವಸ್ಥಾಭೇದಗಳು, ವಿಭಕ್ತಿಪ್ರತ್ಯಯಗಳ ಚರಿತ್ರೆ ಮುಂತಾದ ಭಾಗಗಳು ಚೆನ್ನಾಗಿವೆ.

'ಶುದ್ಧಗೆ'ಗಳು ಕನ್ನಡದಲ್ಲಿ ೩೪ ಎಂದು ನಿರ್ಧರಿಸಿದುದು, ಮಹಾಪ್ರಾಣಗಳ ವಿಚಾರದಲ್ಲಿ ಕೇಶಿರಾಜನ ಅಭಿಪ್ರಾಯದ ಖಂಡನೆ, ಸಂಸ್ಕೃತ ಶಬ್ದಗಳನ್ನು (ತತ್ಸಮ,

ತದ್ಭವಗಳನ್ನು) ಅನ್ಯದೇಶ್ಯಗಳು ಎಂದು ಕರೆಯುವುದು—ಇವುಗಳು ಸ್ವತಂತ್ರ ವಿಚಾರ ಬುದ್ಧಿಯ ನಿದರ್ಶನಗಳಾಗಿದ್ದು, ಅವು ಸಮಂಜಸವೆಂದು ತೋರುತ್ತವೆ. ಆದರೆ ಈ ಭಾಗದ ಉಪಯುಕ್ತತೆಯನ್ನು ಹೆಚ್ಚಿಸುವ ದೃಷ್ಟಿಯಿಂದ ಭಾಷಾ ಮಂಡಲಗಳು, ದ್ರಾವಿಡ ಹಾಗೂ ಸಂಸ್ಕೃತಜನ್ಯ ಭಾಷೆಗಳ ವೈಶಿಷ್ಟ್ಯ ವೈಷಮ್ಯಗಳು ಇವುಗಳ ನಿರೂಪಣೆ ಇಲ್ಲಿ ಬಂದಿದ್ದರೆ ನೆಟ್ಟಗಾಗುತ್ತಿತ್ತು. ಕನ್ನಡದಲ್ಲಿ Inclusive ಹಾಗೂ Exclusive ಸರ್ವನಾಮಗಳು ಇಲ್ಲವೆಂದು ಇಲ್ಲಿ (ಪು. ೪೦೨) ಹೇಳಲಾಗಿದೆ. ಆದರೆ ಈ ವಿಚಾರವಾಗಿ ಕೊಂಚ ಹೆಚ್ಚಾಗಿ ಚರ್ಚೆ ಬೇಕಾಗಿತ್ತು. ಅವು ಕನ್ನಡದಲ್ಲಿ ಇವೆಯೆಂದು ಕೀರ್ತಿಶೇಷರಾದ ಆರ್. ನರಸಿಂಹಾಚಾರ್ಯರು ಪ್ರತಿಪಾದಿಸಿದ್ದಾರೆ. ಅದರಂತೆ ಕನ್ನಡದಲ್ಲಿ ಶುದ್ಧವಾದ ವಿಶೇಷಣಗಳು ಇಲ್ಲವೆಂಬ ವಿಚಾರವಾಗಿಯೂ ಕೊಂಚ ವಿವೇಚನೆ ಬಂದಿದ್ದರೆ ನೆಟ್ಟಗಿತ್ತು. ಪುಟ ೫೭೦ರಲ್ಲಿ "ಪ್ರಾಕೃತಭಾಷೆಗಳಲ್ಲೊಂದಾದ ಮರಾಠಿಯನ್ನು ಮಾತನಾಡುವ ಮಹಾರಾಷ್ಟ್ರರ ಸಂಸರ್ಗವು ಕನ್ನಡಿಗರಿಗೆ ಮೊದಲಿನಿಂದಲೂ ಇತ್ತು" ಎಂಬ ವಾಕ್ಯವಿದೆ. ಈ ಹೇಳಿಕೆಯನ್ನು ಸಮರ್ಥಿಸುವುದಕ್ಕೆ ಹೆಚ್ಚಿನ ವಿವೇಚನೆ ಬೇಕಾಗುತ್ತಿದೆ. ಮಹಾರಾಷ್ಟ್ರ, ಮರಾಠಿ ಎಂಬ ಶಬ್ದಗಳ ಅರ್ಥದಲ್ಲಿ ಕೊಂಚ ತೊಡಕು ಇದೆ. ಆದರೆ ಒಟ್ಟಿನಲ್ಲಿ, ಇಲ್ಲಿಯ ಕನ್ನಡ ಭಾಷೆಯ ಚರಿತ್ರೆ (ಸಂಗ್ರಹವಾಗಿ ಅನೇಕ ವಿಷಯಗಳ ವಿವೇಚನೆಯನ್ನೂ ಸಮಂಜಸ ಸಿದ್ಧಾಂತಗಳನ್ನೂ ಒಳಗೊಂಡಿದೆ.

ಈ ಮಹತ್ತ್ವದ ಗ್ರಂಥದ ಆವೃತ್ತಿಯನ್ನು ಮತ್ತೊಮ್ಮೆ ಹೊರಡಿಸುವ ಅವಕಾಶ ದೊರೆಯದೆಹೋಗಲಿಕ್ಕಿಲ್ಲ. ಆದ್ದರಿಂದ ಇದರ ಉಪಯುಕ್ತತೆಯನ್ನು ಹೆಚ್ಚಿಸುವ ದೃಷ್ಟಿಯಿಂದ ಒಂದೆರಡು ಸೂಚನೆಗಳನ್ನು ಇಲ್ಲಿ ಮಾಡಬಹುದು:—

(೧) ಹಳಗನ್ನಡ ವ್ಯಾಕರಣ ಪ್ರಕರಣದಲ್ಲಿ ಅಡಿಟಿಪ್ಪಣಿಗಳಲ್ಲಾಗಲಿ, ಅವಶ್ಯ ಸಂದರ್ಭಗಳಲ್ಲಾಗಲಿ ಹಳಗನ್ನಡ ವ್ಯಾಕರಣ ಸೂತ್ರಗಳ ಅವತರಣಿಕೆಗಳನ್ನು ಕೊಡಬೇಕು.

(೨) ಅರ್ಥಾಲಂಕಾರಗಳ ಸಂಖ್ಯೆಯ ಬಗ್ಗೆ ಭಿನ್ನಾಭಿಪ್ರಾಯಗಳಿರುವುದು ಸರಿಯಷ್ಟೆ. ಆದುದರಿಂದ ಬಹುಶಃ ಎಲ್ಲರೂ ಒಪ್ಪುವ ೩೫ ಅಲಂಕಾರಗಳನ್ನು ಪ್ರತ್ಯೇಕವಾಗಿ ವಿವೇಚಿಸಿ ಉಳಿದವುಗಳಲ್ಲಿ ಮುಖ್ಯವಾದವುಗಳನ್ನು ಸೂಚಿಸಬಹುದು. ಅಥವಾ 'ಕಾವ್ಯಾವಲೋಕನ'ದಲ್ಲಿಯ ಅಲಂಕಾರಗಳ ಸಂಖ್ಯೆ ಹೆಸರುಗಳನ್ನು ಮುಖ್ಯವಾಗಿಟ್ಟುಕೊಂಡು ಇನ್ನುಳಿದ ಕನ್ನಡ ಅಲಂಕಾರ ಗ್ರಂಥಗಳಲ್ಲಿಯ ಅಲಂಕಾರಗಳ ಹೆಸರು ಲಕ್ಷಣ ನಿರೂಪಣೆ ಬೇರೆಯಾಗಿದ್ದಲ್ಲಿ, ಅವುಗಳನ್ನು ತುಲನಾತ್ಮಕ ದೃಷ್ಟಿಯಿಂದ ಸೂಚಿಸಬೇಕು. ಈ ಯೋಜನೆ ವಿದ್ಯಾರ್ಥಿಗಳಿಗೆ ಹೆಚ್ಚು ಸಹಾಯಕಾರಿಯಾಗುವದೆಂದು ಪಾಠಹೇಳುವ ಅನುಭವದಿಂದ ಹೇಳಬಹುದಾಗಿದೆ. 'ಕಾವ್ಯಾವಲೋಕನ' ಬಹು ಜನರಿಗೆ ಒಪ್ಪಿಗೆಯಾದ ಅಲಂಕಾರ ಗ್ರಂಥವಾಗಿದೆ.

ಉಪಯುಕ್ತ ಹಾಗೂ ಮಹತ್ತ್ವದ "ಕನ್ನಡ ಕೈಪಿಡಿ" ಗ್ರಂಥದ ಎರಡನೆಯ ಆವೃತ್ತಿಯನ್ನು ಹೊರಡಿಸಿದ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ

ಅಭಿನಂದನೆಗಳನ್ನು ಅರ್ಪಿಸುವದರ ಜೊತೆಗೆ ಎರಡನೆಯ ಸಂಪುಟವು ಬೇಗನೆ ಬೆಳಕಿಗೆ ಬರಲೆಂಬ ಆಶೆಯನ್ನು ಇಲ್ಲಿ ವ್ಯಕ್ತಪಡಿಸಬೇಕಾಗಿದೆ.

ಎಸ್. ಎಸ್. ಮಾಳವಾಡ

---

**೩. ಹಣಪ್ರಪಂಚ.**—(ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆಯ ಒಂಬತ್ತನೆಯ ಗ್ರಂಥ) ಲೇಖಕರು: ಶ್ರೀಮಾನ್ ವಿ. ಸೀತಾರಾಮಯ್ಯನವರು, ಎಂ.ಎ.; ಕ್ರೌನ್ ಅ. ಪ. ಪು. xiv + ೩೬೬; ಬೆಲೆ: ಕ್ಯಾಲಿಕೊ ಪ್ರತಿ ರೂ. ೧–೮–೦; ಸಾದಾ ಪ್ರತಿ ೦–೧೨–೦.

ಇಂಗ್ಲಿಷಿನಲ್ಲಿ ಅರ್ಥಶಾಸ್ತ್ರಕ್ಕೆ ಸಂಬಂಧಪಟ್ಟ ಹಣಪ್ರಪಂಚವನ್ನು ಕುರಿತು ಬರೆದಿರುವ ಗ್ರಂಥಗಳ ಸಂಖ್ಯೆ ಯುದ್ಧವಾದಂದಿನಿಂದೀಚೆಗೆ ಹೆಚ್ಚು. ನಮ್ಮ ಸಮಾಜದಲ್ಲಿ ನಡೆಯುವ ಕಾರ್ಯಗಳೆಲ್ಲಕ್ಕೂ ಹಣಪ್ರಪಂಚದ ಸಂಬಂಧ ಒಂದಲ್ಲ ಒಂದು ರೀತಿಯಲ್ಲಿ ಇದ್ದೇ ಇದೆ. ಹಣಪ್ರಪಂಚದ ತೊಡಕುಗಳಂತೂ ಹೇಳತೀರದು. ಎಲ್ಲರೂ ಅವಶ್ಯಕವಾಗಿ ತಿಳಿಯಬೇಕಾಗಿರುವ ಹಣಪ್ರಪಂಚದ ಜ್ಞಾನವನ್ನು ಕನ್ನಡಿಗರಾದ ನಮಗೆ ಶ್ರೀಮಾನ್ ವಿ. ಸೀತಾರಾಮಯ್ಯನವರು ಈ ಗ್ರಂಥದಲ್ಲಿ ತಮ್ಮ ಸಹಜವಾದ ಶೈಲಿಯಲ್ಲಿ ನಿರೂಪಿಸಿರುತ್ತಾರೆ.

ಶ್ರೀಮಾನ್ ಸೀತಾರಾಮಯ್ಯನವರ ಪರಿಚಯವನ್ನು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ವಾಚಕರಿಗೆ ಮಾಡಿಕೊಡಬೇಕಾದದ್ದು ಅನಾವಶ್ಯಕ. ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್ಸೆಲರ್ ಆಗಿರುವ ಶ್ರೀಮಾನ್ ಎನ್. ಎಸ್. ಸುಬ್ಬರಾಯರು ಈ ಗ್ರಂಥಕ್ಕೆ ಬರೆದಿರುವ ತಮ್ಮ ಬೆಲೆಯುಳ್ಳ ಮುನ್ನುಡಿಯಲ್ಲಿ ಅವರ ವಿಚಾರವಾಗಿ ಹೀಗೆ ಹೇಳಿರುತ್ತಾರೆ: "ಅರ್ಥಶಾಸ್ತ್ರ, ಕನ್ನಡ ಇವೆರಡರಲ್ಲಿಯೂ ವಿದಿತವಾದ ಯೋಗ್ಯತೆಯುಳ್ಳ ನನ್ನ ಶಿಷ್ಯರೊಬ್ಬರು ಅತ್ಯಂತ ಫಲಕಾರಿಯಾದ ಈ ಸೇವಾಕ್ಷೇತ್ರದ ಕಡೆಗೆ ತಿರುಗಿದುದು ಅರ್ಥಶಾಸ್ತ್ರದಲ್ಲಿ ಪರಿಶ್ರಮಹೊಂದಿರುವ ನನಗೆ ವಿಶೇಷ ತೃಪ್ತಿಯನ್ನುಂಟುಮಾಡುವ ಸಂಗತಿಯಾಗಿದೆ."

ಸಮಾಜದಲ್ಲಿ ಹಣದ ಸಂಚಾರ, ಅದರ ಕಾರ್ಯ ಮತ್ತು ವ್ಯವಸ್ಥೆಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಕುರಿತ ೧೨ ಪ್ರಕರಣಗಳಿವೆ. ಪ್ರತ್ಯೇಕವಾದ ಮೂರು ಅನುಬಂಧಗಳಲ್ಲಿ ಉಪಯುಕ್ತವಾದ ಕೆಲವು ನಕ್ಷೆಗಳೂ, ಅಂಕಿಯ ಪಟ್ಟಿಗಳೂ, ಜ್ಞಾನಪ್ರಚಾರ ಕಾರ್ಯಕ್ಕೆ ಸಾಧಕವಾಗುವ ಅರ್ಥಕೋಶವೂ ಸೇರಿವೆ. ಪೀಠಿಕಾ ಭಾಗದಲ್ಲಿ ಗ್ರಂಥಕರ್ತರು ಗ್ರಂಥದ ವಸ್ತುವಿಷಯವನ್ನು ಹೀಗೆಂದು ತಿಳಿಸಿದ್ದಾರೆ:

ಹಣವೆಂದರೇನು? ಆವಶ್ಯಕತೆ ಉಪಯೋಗಗಳೇನು? ಅಳತೆ ಹೇಗೆ? ಅದನ್ನು ಸಂಗ್ರಹಿಸುವ ಬಗೆ ಯಾವುದು? ಜನಜೀವನದಲ್ಲಿ ಹಣದ ಪ್ರಭಾವದಿಂದ ಯಾವ ಹೆಚ್ಚು ಕಡಮೆಗಳೂ ಮೇಲು ಬೀಳುಗಳೂ ಉಂಟಾಗುವುವು? ಹಣಸಂಗ್ರಹದಲ್ಲಿಯೂ ಹಂಚಿಕೆಯಲ್ಲಿಯೂ ಯಾವ ನಿಯಮಗಳನ್ನು ಅನುಸರಿಸುವುದು ಮೇಲು? ಅದರ ಮೂಲಕ ಕೈಗಾರಿಕೆ, ವ್ಯಾಪಾರ, ಸಂಪದಭಿವೃದ್ಧಿ ಮುಂತಾದುವು ಹೇಗೆ ನಡೆಯುವುವು? ಜನರೂ, ಸಂಸ್ಥೆಗಳೂ, ಸರಕಾರದವರೂ ಹಣಸಂಗ್ರಹ ಕಾರ್ಯದಲ್ಲಿ ಹೇಗೆ ಬೆರೆಯುತ್ತಾರೆ? ಅವರಲ್ಲಿ ಯಾವ ಸಂಬಂಧಗಳು ಉಂಟಾಗುತ್ತವೆ? ಯಾರ ಸ್ಥಾನ ಎಲ್ಲಿ? ಒಟ್ಟು ಸಮಾಜದ ಅಂಗಗಳಕ್ಕೂ ಈ ಎಲ್ಲರ ಕಾರ್ಯಗಳಿಗೂ ಕೆಳೆ ಇದೆಯೆ? ಹಣದ ಉತ್ಪತ್ತಿ ಹಂಚಿಕೆಗಳ

ಪರಿಣಾಮಗಳಲ್ಲಿ ಒಳ್ಳೆಯವನ್ನು ಹೆಚ್ಚಿಸಿ, ಕೆಟ್ಟವನ್ನು ಕಡಮೆ ಮಾಡುವ ಉಪಾಯಗಳಾವುವು? ಹಣದ ಪೇಟೆಯ ಮತ್ತು ಸಂಚಾರದ ವ್ಯವಸ್ಥೆ ಹೇಗಿರಬೇಕು? ಇಂಡಿಯಾ ದೇಶದಲ್ಲಿ ಈಗ ಹಣಸಂಗ್ರಹಸ್ಥಿತಿ ಹೇಗಿದೆ? ಎಂಬ ಸಂಗತಿಗಳಲ್ಲಿ ಕೆಲವನ್ನು ಈ ಪುಸ್ತಕದಲ್ಲಿ ವರ್ಣಿಸಲಾಗುತ್ತದೆ.

ಜನಾಂಗದ ಸರ್ವ ಪುರುಷಾರ್ಥಗಳಿಗೂ ಆರ್ಥಿಕಜ್ಞಾನ ಮತ್ತು ಸಂಪತ್ತು ತಳಹದಿ ಎಂದು ಅರಿತುಕೊಳ್ಳುತ್ತಿರುವ ಈ ಕಾಲದಲ್ಲಿ ಹಣಪ್ರಪಂಚದ ವಿಷಯವನ್ನು ತಿಳಿಗನ್ನಡದಲ್ಲಿ ಪರಿಚಯ ಮಾಡಿಕೊಟ್ಟಿರುವ ಶ್ರೀ॥ ಸೀತಾರಾಮಯ್ಯನವರಿಗೆ ಕನ್ನಡಿಗರು ಚಿರಋಣಿಗಳಾಗಿರಬೇಕು. ಈ ಗ್ರಂಥವು ವಿಶ್ವವಿದ್ಯಾನಿಲಯದ ಗ್ರಂಥಮಾಲೆಗೆ ಗೌರವ ತರತಕ್ಕ ಗ್ರಂಥವೂ ಹೌದು. ಅತಿ ಸುಲಭ ಬೆಲೆಗೆ ದೊರಕುವಂತೆ ಮಾಡಿಕೊಟ್ಟು, ಹಣಪ್ರಪಂಚದ ಜ್ಞಾನವು ಪ್ರಚಾರವಾಗಲು ಸಹಾಯ ಮಾಡಿರುವ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೂ, ಆ ಸಂಸ್ಥೆಯ ಕನ್ನಡ ಪ್ರಕಟನಶಾಖೆಯ ಮುಖ್ಯ ಸಂಪಾದಕರಿಗೂ ನಮ್ಮ ವಂದನೆಗಳು. ಕನ್ನಡಿಗರೆಲ್ಲರೂ ಈ ಗ್ರಂಥವನ್ನು ಓದಿ ಪ್ರಯೋಜನ ಹೊಂದಲೆಂದು ಹಾರೈಸುತ್ತೇವೆ.

ವಿ. ಎಲ್. ಡಿ'ಸೂಜ

---

**೪. ಸಂಪತ್ಸಮೃದ್ಧಿಯ ರಾಜಮಾರ್ಗ.**—ಲೇಖಕರು: ಶ್ರೀಮಾನ್ ಎ. ಎಂ. ಜೋಸೆಫ್ ಅವರು, ಬೆಂಗಳೂರು; ಕ್ರೌನ್ ಅ. ಪ. ಪು. ೭೬; ಬೆಲೆ: ರೂ. ೧-೦-೦.

ಸಂಪತ್ಸಮೃದ್ಧಿಯ ವಿಷಯಕ್ಕೆ ಸಂಬಂಧಪಟ್ಟ ಕೆಲವು ವಿಷಯಗಳನ್ನು ಹಲವು ಇಂಗ್ಲಿಷ್ ಗ್ರಂಥಗಳಿಂದ ಆರಿಸಿ, ಕನ್ನಡಿಗರೂ ಕನ್ನಡ ನಾಡೂ ಸಂಪದ್ಯುಕ್ತವಾಗಬೇಕೆಂಬ ಅಭಿಲಾಷೆಯಿಂದ ಗ್ರಂಥವನ್ನು ರಚಿಸಿರುವುದಾಗಿ ಶ್ರೀ॥ ಎ. ಎಂ. ಜೋಸೆಫ್ ಅವರು ತಮ್ಮ ಮುನ್ನುಡಿಯಲ್ಲಿ ತಿಳಿಸಿರುತ್ತಾರೆ. ಇದಕ್ಕಿಂತ ಸದುದ್ದೇಶ ಬೇರೆ ಯಾವುದು?

ಈ ಗ್ರಂಥದಲ್ಲಿ ಸಂಪದಭಿವೃದ್ಧಿಕಾರ್ಯಕ್ಕೆ ಸಂಬಂಧಪಡುವ ವಿಷಯಗಳು ವರ್ಣಿಸಲ್ಪಟ್ಟಿವೆ. ಸಂಪತ್ತಿನ ಸ್ವರೂಪ, ಉತ್ಪತ್ತಿಕ್ರಮ, ಅದರ ಮೂಲಾಧಾರಗಳು, ಸಂಪತ್ತಿನ ವಿನಿಯೋಗ, ನಾಣ್ಯದ ಶಿಸ್ತು, ಧನನಿಧಿಗಳು, ಹುಂಡಿ ಚಲಾವಣೆ, ಮಿತವ್ಯಯ, ಜಪಾನಿನವರು ಈ ಕಾರ್ಯದಲ್ಲಿ ಮುಂದುವರಿದಿರುವ ಬಗೆ—ಇವೇ ಮೊದಲಾದ ವಿಷಯಗಳನ್ನು ಕುರಿತ ೧೩ ಅಧ್ಯಾಯಗಳುಂಟು. ಆದರೆ ವಿವರಿಸಿರುವ ವಿಷಯಗಳು ಒಂದಕ್ಕೊಂದು ಹೊಂದಿಕೊಂಡಿಲ್ಲವಾದ್ದರಿಂದ, ಗ್ರಂಥಕರ್ತರ ಆಶಯವೇನೆಂದು ತಿಳಿಯುವುದು ಕಷ್ಟಸಾಧ್ಯವಾಗಿದೆ.

ಸಂಪತ್ಸಮೃದ್ಧಿಯ ಮಾರ್ಗಗಳಲ್ಲಿ ಯಾವ ಮಾರ್ಗವು 'ರಾಜಮಾರ್ಗ'ವೆಂದು ಗ್ರಂಥಕರ್ತರು ತಿಳಿದಿರುವರೆಂಬುದನ್ನು ನಮ್ಮ ಮುಂದಿರುವ ಗ್ರಂಥದಿಂದ ಹೇಳಲು ಸಾಧ್ಯವಿಲ್ಲ. ಬಂಡವಾಳದ ಮಾರ್ಗ, ಸಮತಾವಾದಿಗಳ ಮಾರ್ಗ, ರಷ್ಯಾದೇಶದ ಮಾರ್ಗ ಇವೇ ಮೊದಲಾದ ಮಾರ್ಗಗಳ ವಿಮರ್ಶೆ ಈ ಗ್ರಂಥದಲ್ಲಿ ಇದ್ದಿದ್ದರೆ

ಹೆಚ್ಚಿನ ಪ್ರಯೋಜನವಾಗುತ್ತಿತ್ತು. ಸಂಪತ್ಸಮೃದ್ಧಿಯ 'ರಾಜಮಾರ್ಗ'ವನ್ನು ಕುರಿತಿರುವ ಈ ಗ್ರಂಥದಲ್ಲಿ, ವಿಷಯಸುಖವನ್ನು ಅಲ್ಲಗಳೆದು, ವೈರಾಗ್ಯಬೋಧನೆಯ ಆವಶ್ಯಕತೆಯನ್ನು ಸಾರಲು ಲೇಖಕರು ಪ್ರಯತ್ನಪಟ್ಟಿರುತ್ತಾರೆ.

'ರಾಜಮಾರ್ಗ'ವನ್ನು ಕುರಿತು ಹೇಳಿರುವ ಒಂದೆರಡು ವಾಕ್ಯಗಳನ್ನು ಇಲ್ಲಿ ಕೊಟ್ಟಿದೆ:

"....ತಿರ್ಯಗ್ಜಂತುಗಳಿಗಿಂತ ಹೀನನಾಗಿ ವಿಷಯಸುಖಗಳಿಗೋಸ್ಕರ ತನ್ನ ಜೀವವನ್ನು ವ್ಯಯಮಾಡುವುದರಿಂದ ಮನುಷ್ಯನು ದಿವ್ಯಸಂಪದ್ಯುಕ್ತನಾಗುವುದಿಲ್ಲ. ಹೊಸ ಹೊಸ ಶಕ್ತಿಗಳನ್ನು ಪಡೆದಹಾಗೆಲ್ಲಾ ಧರ್ಮಮಾರ್ಗದಲ್ಲಿ ಅವನು ಉತ್ತಮೋತ್ತಮ ಸ್ಥಿತಿಗೇರುತ್ತಿರಬೇಕು. ಹಾಗೆ ಮಾಡಿದರೆ ಆ ಮಾನವನ ಜನ್ಮವು ಸಾರ್ಥಕ."

ಮುನ್ನುಡಿಯಲ್ಲಿ ತಿಳಿಸಿರುವ ಆಕಾಂಕ್ಷೆಗೂ ಈ ಮಾರ್ಗಕ್ಕೂ ಎಷ್ಟು ದೂರ!

ಹಲವು ಸ್ವಾರಸ್ಯವಾದ ಉದಾಹರಣೆಗಳಿಂದಲೂ, ಉಪಯುಕ್ತವಾದ ವಿಷಯಗಳಿಂದಲೂ ಕೂಡಿರುವ ಈ ಗ್ರಂಥವನ್ನು, ಕನ್ನಡಿಗರಮೇಲೆ ಪ್ರೇಮವಿಟ್ಟು ತಿಳಿಗನ್ನಡದಲ್ಲಿ ರಚಿಸಿರುವ ಗ್ರಂಥಕರ್ತರಿಗೆ ನಮ್ಮ ವಂದನೆಗಳು. ಗ್ರಂಥದ ಬೆಲೆಯನ್ನು ಅರ್ಧದಷ್ಟಾದರೂ ತಗ್ಗಿಸಿ, ಹೆಚ್ಚು ಜನ ಓದಲು ಅನುಕೂಲಿಸುವಂತೆ ಮಾಡಿದಲ್ಲಿ, ಗ್ರಂಥಕರ್ತರ ಉದ್ದೇಶವು ಫಲಿಸಲು ಸಾಧಕವಾಗುವುದು.

ಬಿ. ಆರ್. ಸುಬ್ಬರಾವ್

---

**೫. ಮಾಂದಳಿರು.**— ಕವಿಗಳು: ಶ್ರೀ॥ ಪು. ತಿ. ನರಸಿಂಹಾಚಾರ್ಯರು, ಬಿ.ಎ.; ಪ್ರಕಾಶಕರು: ಭಾರತಿ ಸಾಹಿತ್ಯ ಮಂದಿರ, ಬೆಂಗಳೂರು; ಕ್ರೌನ್ ಅ. ಪ. ಪು. vi + ೬೩; ಬೆಲೆ: ೧೨ ಆಣೆ.

ಈ ಕಾವ್ಯಸಂಗ್ರಹದಲ್ಲಿ ಹಲಬಗೆಯ ಕವನಗಳಿವೆ. ಅವುಗಳಲ್ಲಿ ಕೆಲವು ಕೇವಲ ಸೃಷ್ಟಿಸೌಂದರ್ಯವರ್ಣನಾತ್ಮಕವಾದುವುಗಳು; ಬೇರೆ ಕೆಲವು ಪ್ರಾಪಂಚಿಕ ಸ್ಥಿತಿಗತಿಗಳ ಸೂಕ್ಷ್ಮ ಸಮಾಲೋಕನದಿಂದ ಹೃದಯದಲ್ಲಿ ಉದ್ಬುದ್ಧವಾದ ಭಾವನೆಗಳ ಪ್ರಕಟೀಕರಣಗಳು. ವಿಷಯ ವಿಭಾಗವನ್ನೀರೀತಿಯಲ್ಲಿ ಮಾಡಿದರೂ, ಭಾವಸ್ಫೂರ್ತಿಯಲ್ಲಿ ತಾರತಮ್ಯಗಳನ್ನು ಹುಡುಕುವುದು ಕಷ್ಟ. ಎಲ್ಲ ಕವನಗಳೂ ಹೆಚ್ಚು ಕಡಮೆ ಒಂದೇ ಮಟ್ಟಕ್ಕೆ ಏರುವುವು. "ಹಕ್ಕಿ ಹೂಗಳಂತೆ....ಎದ್ದು ನಲಿವ," "ಒಲುಮೆಯ ಕುರುಡಿಗೆ ಬಲಿಯಾದ," "ನಚ್ಚನೂಡಿ ನಂದಿಹೋದ ತಳಿರ ತೊಂಗಲನ್ನು ನೋಡಿ"ದ, ಎಲ್ಲ ಕವಿಭಾವಗಳೂ ಲೋಕದಲ್ಲಿರುವ ಲೋಪದೋಷಗಳನ್ನು ಹೋಗಲಾಡಿಸಿ, ಇಲ್ಲದುದನ್ನು ಅಪೇಕ್ಷಿಸುವ, ನಿರ್ಮಿಸುವ, ಕವನದಿಂದ ಕೂಡಿ ಕಳೆಯೇರಿರುವುವು. ಕವಿಯ ಕಾವ್ಯಕಲೆಯು ಒಂದು ಬಗೆಯ ಹದವನ್ನು ಹೊಂದಿಕೊಂಡಿದೆ; ವಿಶಿಷ್ಟತೆಯನ್ನು ಪಡೆದಿದೆ. ಪ್ರಭಾತಕಾಲದ ಸುಂದರ ಸೃಷ್ಟಿಯನ್ನು ನೋಡಿದ ಆನಂದದ ಉಕ್ಕಿನಲ್ಲಿ, ಮನುಷ್ಯಸ್ವಭಾವದ ನಿಮ್ನಗಾಮಿತ್ವದ ಮರವೆಯುಲ್ಲ. ಹೇಮಾವತಿಯ ತೀರದಲ್ಲಿ, ಜಲಕೇಲೀನಿಮಗ್ನೆಯರಾದ ಬಾಲೆಯರ ಮುಗ್ಧ ವಿಲಾಸಗಳನ್ನು ನೋಡುವಲ್ಲಿ, "ಸಾವು ಸೋಕುವುದೆಲ್ಲರನು" ಎಂದು,

ನದಿಯ ಭೀಕರವಾದ ಹೊನಲಿಗೆ ಆಹುತಿಯಾದ ತಂಗಿ ಜಾನಕಿಯ ನೆನಪಾಗದೆ ಇರುವುದಿಲ್ಲ. ಹಿಮ್ಮಾಗ್ರಿಯ ಮಾಂದಳಿರನ್ನು ಕಂಡು, "ನಿನ್ನ ಬಾಳು ಸಾರ್ಥಬಾಳು—ಸಾವು ಬದುಕಿಗಿಂತ ಮೇಲು" ಎನ್ನುವ ಭಾವೋದ್ರಿಕ್ತ ಕವಿಗೆ, ಕ್ರಾಂತಿಯ ಕಾಲವಲ್ಲಿ, ರಾಜ್ಯವಿಪ್ಲವದ ಕಾಲದಲ್ಲಿ, ಹುತಾತ್ಮರಾಗುವ ಜೀವಿಗಳ ಮಹಿಮೆಯು ಸ್ಮರಣೆಗೆ ಬಂದು ಕಣ್ಣೀರು ಸುರಿಯುತ್ತದೆ. ಸುಖದುಃಖಗಳ ಒಳವ್ಮೆ ಹೊರವ್ಮೆಗಳನ್ನು ಕವಿ ಚೆನ್ನಾಗಿ ಕಂಡಿದ್ದಾನೆ. ಅಳಬೇಕಾದಲ್ಲಿ ಅಳುತ್ತಾನೆ; ನಗಬೇಕಾದಲ್ಲಿ ನಗುತ್ತಾನೆ. ಆದರೆ ಈ ಅನುಭಾವಗಳೊಳಗಣ ವಿಭಾಗಗಳು—ಒಂದರಲ್ಲಿ ಇನ್ನೊಂದು—ಸಂಕರವಾಗಿಯೇ ಇವೆ. ಒಂದರಲ್ಲಿ ಇನ್ನೊಂದು ಪ್ರತಿಧ್ವನಿಸುತ್ತದೆ. ಧ್ವನಿರೂಪವಾಗಿ ಒಂದು ಇನ್ನೊಂದನ್ನು ಒತ್ತಿಕೊಂಡುಬರುವುದು. ಸಲ್ಲಬೇಕಾದ ಎಡೆಗೆ ಸಹಾನುಭೂತಿ ಸಲ್ಲುವುದು ; ಭಾವಪರವಶತೆಯಲ್ಲಿಯೂ ಒಂದು ತೆರದ ಸಂಯಮವಿರುವುದು. 'ಋತದ ಮೊದಲ ಕಣಸು'; 'ಕವಿ'; 'ಹಿಮ್ಮಾಗ್ರಿಯ ಮಾಂದಳಿರು'; 'ಕಾರ್ತೀಕ' ಇತ್ಯಾದಿ ಕವನಗಳನ್ನು ಉದಾಹರಣಾರ್ಥವಾಗಿ ಅವಲೋಕಿಸಬಹುದು.

ಭಾವನೆಯ ಸ್ವಚ್ಛತೆಯೊಂದಿಗೆ, ಪದಪ್ರಯೋಗ ಸ್ವಚ್ಛತೆಯೂ ಮೂಡಿ ಬಂದಿರುವುದು. ಅರ್ಥವನ್ನು ಮರಸುವ ಶಬ್ದಜಾಲದ ಜಂಜಡವು ಎಲ್ಲಿಯೂ ಇಲ್ಲ. ನಾದಮಾಧುರ್ಯವಿದೆ. ಪ್ರಸಾದ, ಸಮತಾ ಎಂಬ ಗುಣಗಳು ಈ ಕವಿಯ ಮುಖ್ಯ ಕಲಾರೇಖೆಗಳಾಗಿವೆ. ಇವುಗಳ ಬೆಡಗನ್ನು ಇಲ್ಲಿ ನೋಡಬಹುದು:

ಕಣ್ಸೋಲಲು ನಿಟ್ಟಿಸುವೀ
ಕಿವಿ ಸೋಲಲು ಲಾಲಿಸುವೀ
ಬಗೆ ಸೋಲಲು ಭಾವಿಸುವೀ
ಭ್ರಾಂತಿಯ ಬಗೆಯೇನ್ಮೆ ?

ಇಂತಹ ಉದಾಹರಣೆಗಳನ್ನೆಷ್ಟೋ ಕೊಡಬಹುದು. ಕವಿ ಅದ್ಯತನನಾದರೂ, ಪ್ರಾಚೀನಪದಪ್ರಯೋಗ ಸಂಪ್ರದಾಯಕ್ಕೆ ಮನಸೋತಂತೆ ತೋರುತ್ತದೆ. (ಉದಾ: ನಿಶ್ಚಲ ಕಿಂಚಿನ್ಮೀಲಿತ ಫಾಲಾಂಬಕ.) ವರ್ಣನೆಗಳಲ್ಲಿ ಅಲ್ಲಲ್ಲಿ ಪುರಾಣ ಛಾಯೆಯೂ ಇದೆ. ಭಾಷಾಪಾಕವನ್ನು ಒಂದು ಹದಕ್ಕೆ ತಂದು, ಅದರಿಂದ ಸಿದ್ಧವಾದ ಸುಖಾನುಭವವನ್ನು ತಾನೂ ಹೊಂದಿ, ಪರರಿಗೂ ಹೊಂದಿಸಬೇಕೆಂಬ ಹಂಬಲುಳ್ಳ ಕವಿಯಿಂದ, ತಪಭಂಗ, ಕಾರ್ತೀಕ, ಉತ್ಸೇಕ (ಔತ್ಸುಕ್ಯಾರ್ಥವಲ್ಲಿ) ಮೊದಲಾದ ಅಶುದ್ಧ ಪ್ರಯೋಗಗಳನ್ನು ನಿರೀಕ್ಷಿಸಲಾಗುವುದಿಲ್ಲ. ಆದಿಪ್ರಾಸ ಅಥವಾ ಅಂತ್ಯಪ್ರಾಸ ಇಲ್ಲದ ಕವನಗಳು ಈ ಸಂಗ್ರಹದಲ್ಲಿಲ್ಲ. ನವೀನ ಛಂದಸ್ಸಿನ ನಿರ್ಮಾಣ ಪ್ರಯತ್ನದಲ್ಲಿ ಕವಿಗಳು ಒಂದು ಸರಿಯಾದ, ಗುರಿ ಮುಟ್ಟಬಲ್ಲ ದಾರಿಯನ್ನು ಹಿಡಿದಿರುವರು. ಆದರೆ ಮಾತ್ರಾಲಾಭಕ್ಕಾಗಿ, ಸ್ವರಗಳನ್ನು ಅಸಮ್ಮತ ರೀತಿಯಲ್ಲಿ ಎಳೆದಾಡುವ ಪದ್ಧತಿ ವಿಮರ್ಶಕನ ಮನಸ್ಸಿಗೆ ಮೆಚ್ಚದು. ರಗಳೆಯೊಂದರ ಪಾದಾರ್ಥವನ್ನಿಲ್ಲಿ ನೋಡಬಹುದು :

ಇದೊ ಪುರಂಧ್ರಿಕಾಮ್ಯವಾದ
ಸೋಪಾನರಮ್ಯವಾದ. . . .

ಇಲ್ಲಿ 'ಸೋ' ಎಂಬುದಕ್ಕೆ ದೀರ್ಘೋಚ್ಚರಣವನ್ನಲ್ಲ, ಪ್ಲುತೋಚ್ಚರಣವನ್ನು ಕೊಡಬೇಕು. ಹಾಗೆ ಓದದಿದ್ದರೆ, ಛಂದೋದೋಷವೊದಗುವುದು. ಛಂದಃ ಸ್ವಾತಂತ್ರ್ಯಕ್ಕೆ ವಿಮರ್ಶಕನ ಒಪ್ಪಿಗೆ; ಉಚ್ಚಾರಣ ಸ್ವಾತಂತ್ರ್ಯವನ್ನು ಈ ರೀತಿಯಲ್ಲಿ ವಹಿಸುವುದಕ್ಕೆ ಹಲವರು ಸಮ್ಮತಿಸಲಾರರು. ಅವಿಕೃತೋಚ್ಚಾರಿತವಾದ ಪದಗಳೂ ಛಂದಸ್ಸೂ ಒಟ್ಟೊಟ್ಟಿಗೆ ಹೆಜ್ಜೆಯಿಟ್ಟರೆ ಹಾಡುಗಳೆಷ್ಟು ಸೊಗಸಾಗವು?

ಉತ್ತಮ ಕವಿತಾ ಪ್ರಕೃತಿಯುಳ್ಳ ಕವಿ ಇನ್ನೂ ಮುಂದಡಿಯಿಡುವ ಸಮಯವನ್ನು ನಾವು ಇದಿರುನೋಡಬಹುದು.

ಕ. ಶಂಕರಭಟ್ಟ

---

೬. **ಪಯಣ.**—ಕವಿಗಳು: ಶ್ರೀ॥ ವಿನಾಯಕರು; ಪ್ರಕಾಶಕರು: ಮನೋಹರ ಗ್ರಂಥಮಾಲೆ, ಧಾರವಾಡ; ಕ್ರೌನ್ ಅ. ಪ. ಪು. ೧೧೬; ಬೆಲೆ: ೧೨ ಆಣೆ.

'ಪಯಣ'ವಿದು ದೊಡ್ಡ ಪಯಣವೇ ಸರಿ. ಕಾಲೂರದ ಊರಿಲ್ಲ; ನೋಡದ ನಾಡಿಲ್ಲ. ವಿಮಲ ಭಾವ ಸಾಮ್ರಾಜ್ಯದಲ್ಲಿ, ಕೆಲವೊಮ್ಮೆ ಕಾಲ್ನಡೆಯಿಂದ ಕವಿ ನಡೆಯುತ್ತಾನೆ. ಕೆಲವೊಮ್ಮೆ ರೆಕ್ಕೆ ಕಟ್ಟಿ ಹಾರುತ್ತಾನೆ. 'ಬಾಳುವೆ', 'ಮೊರೆ', 'ವ್ಯಥೆ', 'ಭೂಮಿತಾಯಿಯ ಹಾಡು', 'ಬಾಡಿಗೆಯ ಎತ್ತು', 'ಓಂ ನಮೋ ಭಗವತೇ!', '—ಗೆ', ಇತ್ಯಾದಿಯಾದ ಕವನಗಳ ಹೆಸರನ್ನು ಓದಿದೊಡನೆ, ಕವಿ ಹೃದಯದ ಉಕ್ಕು ಎಂತಹದೆಂಬುದು ಸ್ವಯಂವೇದ್ಯವಾಗುವುದು. ವಿನಾಯಕರಲ್ಲಿ ಭಾವಸಂಪತ್ತಿಗೆ ಕಡಮೆಯಿಲ್ಲ. ನವನವೋನ್ಮೇಷಶಾಲಿನಿಯಾದ ಬುದ್ಧಿಗೂ ಕೊರತೆಯಿಲ್ಲ. ಆದರೆ ಭಿನ್ನಕಾಲಗಳಲ್ಲಿ ಬರೆಯಲ್ಪಟ್ಟುವುಗಳಾದುದರಿಂದ ಎಲ್ಲ ಕವನಗಳಲ್ಲಿಯೂ ಪರಿಪಕ್ವತೆಯುಂಟೆನ್ನಲಾಗುವುದಿಲ್ಲ. ಏರು ತಗ್ಗುಗಳು ಹಲವು. ಉತ್ತಮ ಕಾವ್ಯಲಕ್ಷಣವಾದ ವ್ಯಂಗ್ಯವು ಧಾರಾಳವಾಗಿದೆ. ಆದರೆ ಕೆಲವೆಡೆ ಸ್ವಚ್ಛ ಸರಳಭಾಷೆಯಿಂದ ಹೊರಹೊಮ್ಮುವ ಭಾವಗಳು, ಅರ್ಥಸ್ಪಷ್ಟತೆಯಿಲ್ಲದೆ ವಾಚಕರ ದಿಗ್ಭ್ರಾಂತಿಗೆ ಕಾರಣವಾಗುತ್ತವೆ. 'ಬಾಳುವೆ' ಎಂಬುದು ಸರಳಗೀತೆಗೆ ಉತ್ತಮೋದಾಹರಣೆ. 'ಚೆಲುವು' ವಿಷಯಬಾಹುಲ್ಯದಿಂದ ಕೂಡಿದೆ; ಈ ಬಾಹುಲ್ಯವೇ ಅಸ್ಪಷ್ಟತಾದೋಷಕ್ಕೆ ಹೇತುವಾಗಿದೆ. ಆದುದರಿಂದ ರಸಾಸ್ವಾದನಕ್ಕೆ ಭಂಗಬರುತ್ತದೆ. ಈ ಕವಿಗಳು ಇನ್ನೂ ಅಭಿವರ್ಧಿಷ್ಣುಸ್ಥಿತಿಯಲ್ಲಿರುವರು. ಉತ್ತಮ ಪ್ರತಿಭಾಂಕುರವಿದೆ. ಆದರೆ ಪದನಾದ ಸಂಸ್ಕಾರ ವಿನ್ನೂ ಬೆಳೆಯಬೇಕು. ಭಾವಗೀತಗಳಲ್ಲಿ ಭಾವಗಭೀರತ್ವವು ಹೇಗೆ ಮುಖ್ಯವೋ ಹಾಗೆಯೇ ಭಾವವ್ಯಂಜಕ ಪದಗುಂಫನವೂ ಮುಖ್ಯವಾದುದು. ಕವಿಯ ಮನಸ್ಸು ಮಾತು ಕೆಲಸಗಳೆಲ್ಲ ಒಂದಾಗಿ ಬೆರೆತಿರುವಲ್ಲಿ ಮಾತ್ರ ಇಂತಹ ಸಿದ್ಧಿ ಲಭಿಸುವುದು. ಈ ಗ್ರಂಥದಿಂದ ಹತ್ತೆಂಟು ಹಾಡುಗಳನ್ನು ಸಂಗ್ರಹಿಸಿದರೆ, ಉತ್ತಮ ಭಾವಗೀತ ಸಂಗ್ರಹವಾಗಬಹುದು. ಪ್ರತಿಯೊಂದು ಪದ್ಯದ ಕೊನೆಯಲ್ಲಿ ರಚನಾಕಾಲವನ್ನು ಸೂಚಿಸಲಾಗಿದೆ. ಆದುದರಿಂದ ಸಮಗ್ರದೃಷ್ಟಿಯಿಂದ ವಿಮರ್ಶೆ ಮಾಡುವುದು ಹಿತವಲ್ಲ.

ಕ. ಶಂಕರಭಟ್ಟ

**೭. ಶಿಲಾಮುಖ.**—ಲೇಖಕರು: ಶ್ರೀ॥ ಎಂ. ವಿ. ಸೀತಾರಾಮಯ್ಯನವರು, ಎಂ.ಎ.; ಪ್ರಕಾಶಕರು: ಭಾರತಿ ಸಾಹಿತ್ಯ ಮಂದಿರ, ಬೆಂಗಳೂರು; ಕ್ರೌನ್ ೧. ಪ. ಪು. ೬+೧೧೦; ಬೆಲೆ: ೧೨ ಆಣೆ.

ಇದು 'ಹಾಥಾರ್ನ್' ಎಂಬ ಆಂಗ್ಲಭಾಷಾ ಗ್ರಂಥಕರ್ತೃವಿನ ಮೂರು ಕಥೆಗಳ ಭಾಷಾಂತರ ಅಥವಾ ರೂಪಾಂತರಗಳ ಸಂಗ್ರಹವಾಗಿದೆ. ಮೂಲ ಗ್ರಂಥಕರ್ತೃ ಕಾದಂಬರೀ ಲೇಖನ ಸಾಮ್ರಾಜ್ಯದಲ್ಲಿ ಅಗ್ರಪಂಕ್ತಿಗೆ ಸೇರಲರ್ಹನೇ ಎಂಬುದು ವಾದಗ್ರಸ್ತವಾದರೂ ಪ್ರಕೃತದ ಕಥೆಗಳಲ್ಲಿ ಕಂಡುಬರುವ ಆತನ ಕಲ್ಪನಾ ಶಕ್ತಿ ಅಸಾಧಾರಣವಾದುದೆಂಬುದನ್ನು ಒಪ್ಪಿಕೊಳ್ಳಬೇಕು. 'ಶಿಲಾಮುಖ' ಎಂಬ ಗ್ರಂಥಾಭಿಧಾನವು ಪ್ರಥಮ ಕಥೆಯ ಹೆಸರಿನಿಂದ ಬಂದುದಾಗಿದೆ. 'ಭಾವಚಿತ್ರಗಳ ಭವಿಷ್ಯವಾಣಿ' ಎಂಬುದು ಎರಡನೆಯ ಕಥೆ. ಮೂರನೆಯದು 'ಪರಿಮಳಾ.' ಸಣ್ಣಕಥೆಗಳೆನ್ನುವಷ್ಟು ಹ್ರಸ್ವವಾದ ಕಥೆಗಳು ಇವಲ್ಲ. ಕಾದಂಬರೀ ಕಕ್ಷೆಯಲ್ಲಿ ಸೇರಲರ್ಹವಾದವುಗಳೂ ಅಲ್ಲ. ಕಥಾವಸ್ತುಗಳಲ್ಲಿ ವಾಸ್ತವಿಕತೆಯ ಅಂಶಗಳು ಅತಿ ಸ್ವಲ್ಪ. ನೀತಿ-ಅನೀತಿಗಳನ್ನು ದ್ಯೋತನಗೊಳಿಸುವುದಕ್ಕೆ ಕಾಗೆ ನರಿಗಳ ಕಥೆಗಳನ್ನು ಹೆಣೆಯುವ ಪದ್ಧತಿಯೂ ಲೋಕದಲ್ಲುಂಟು. ಮಾನವ ಜೀವನವನ್ನೆ ಆಲಂಬನವಾಗಿ ಮಾಡುವುದೂ ಉಂಟು. ಕಾಗೆ ನರಿಗಳ ಕಥೆಗಳಲ್ಲಿ ಎಷ್ಟು ನೀತಿ ತುಂಬಿದ್ದರೂ, ಅವು ಅಸ್ವಾಭಾವಿಕವೆಂದು ಸಕೃದ್ದೃಷ್ಟಿಗೇ ಗೋಚರಿಸದಿರಲಾರದು. ಮಕ್ಕಳು ಕೂಡ ಅವುಗಳನ್ನು ನಂಬುವುದಿಲ್ಲ. ಅವುಗಳ ಸ್ಥಾನಗಳಲ್ಲಿ ಮನುಷ್ಯಪ್ರಾಣಿಗಳು ಎದ್ದು ನಿಂತಲ್ಲಿ, ಅಂತಹ ಕಥೆಗಳಲ್ಲಿ, ಸ್ವಾಭಾವಿಕತೆ-ಅಸ್ವಭಾವಿಕತೆಗಳೆರಡೂ ಒಡಗೂಡಿ ಬರಬಹುದು. ಲೇಖನ ಕಲಾಕರ್ಮದಲ್ಲಿ ಎರಡು ಪರಿಯುಂಟು. ಸ್ವಾಭಾವಿಕ ಭಾವಕ್ರಿಯಾನುಗುಣವಾಗಿ ಪಾತ್ರಗಳನ್ನು ನಿರ್ಮಿಸಿ, ಮಾನವ ಪ್ರಪಂಚದ ಒಂದು ಮಾದರಿಯನ್ನು ತೋರಿಸುವುದು ಒಂದು ಮಾರ್ಗ. ಮಾದರಿಗಳನ್ನು ಮುಂದಿಟ್ಟು ಅವುಗಳಿಂದ ನೀತ್ಯನೀತಿಗಳನ್ನು ಧ್ವನಿತವಾಗಿ ತಿಳಿಸುವುದು ಇನ್ನೊಂದು ಮಾರ್ಗ. ಪ್ರಕೃತದ ಕಥೆಗಳು ದ್ವಿತೀಯ ವರ್ಗಕ್ಕೆ ಸೇರಿದವುಗಳು. ಆದುದರಿಂದಲೆ, ಈ ಕಥೆಗಳಲ್ಲಿ ನಿರೂಪಿಸಲ್ಪಟ್ಟಂತಹ ವ್ಯಕ್ತಿಗಳು ಲೋಕದಲ್ಲಿರಬಹುದೇ ಎಂಬ ಸಂದೇಹವುಂಟಾಗಬಹುದು. ಅನ್ವೇಷಣಕ್ಕೆ ಎಡೆ ದೊರೆಯುವುದು. ಮಾನವ ಸ್ವಭಾವದಲ್ಲಿಯೂ ಅಲ್ಲಿಷ್ಟು ಇಲ್ಲಿಷ್ಟು ಅಂಶಗಳು ಕಥಾಗ್ರಥನದಲ್ಲಿರುವಂತೆಯೇ ಗೋಚರಕ್ಕೆ ಬರಬಹುದು. ಭಿನ್ನದೇಶಗಳಲ್ಲಿರುವ ವಿಷಯಗಳನ್ನು ಏಕತ್ರ ಆರೋಪಿಸುವಲ್ಲಿ, ಬರೆದ ಅಸ್ವಾಭಾವಿಕ ಸಂದರ್ಭ ಸನ್ನಿವೇಶಗಳೊಳಗಡೆಯಲ್ಲಿಯೂ ಸ್ವಾಭಾವಿಕತೆ ಅಲ್ಪಸ್ವಲ್ಪವಾದರೂ ಮಿಂಚದಿರಲಾರದು. ಇಂತಹ ವರ್ಣಚಿತ್ರರಚನೆಯೇ ಈ ಬಗೆಯ ಕಥೆಗಳ ಉದ್ದೇಶವಾಗಿದೆ.

ಪರ್ವತ ಶಿಖರವೊಂದು ಶಿಲಾಮುಖ ಸಾದೃಶ್ಯವನ್ನು ಹೊಂದಿರುವುದು. ಆದುದರಿಂದ ಆ ಪರ್ವತಕ್ಕೆ ಶಿಲಾಮುಖವೆಂಬ ಹೆಸರು. ಅಂತಹ ಮುಖವುಳ್ಳ ವ್ಯಕ್ತಿ, ಅದೇ ಪರ್ವತದ ಕಣಿವೆಯ ನಾಡಿನಲ್ಲಿ ಜನಿಸಿ ಲೋಕ ಕೀರ್ತಿತನಾಗುವನೆಂಬ ಪ್ರವಾದವೇಳುವುದು. ತಾತ್ಕಾಲಿಕವಾಗಿ ಹತ್ತು ಜನರಿಂದ ಹೊಗಳಿಕೆ

ಕೇಳುವವನೇ ಆ ಮಹಾವ್ಯಕ್ತಿಯೆಂದು ಅಲ್ಲಿಯೂ ಮೂಢಜನರು ಭ್ರಮಿಸುತ್ತಾರೆ. ಸತ್ಯಶೋಧಕನಾದ, ಪ್ರಕೃತಿಪೂಜಕನಾದ ಒಬ್ಬ ವ್ಯಕ್ತಿ ಜನರ ಈ ಮೂಢ ವಿಶ್ವಾಸಗಳನ್ನು ಆಗಾಗ ನಿರಸನಮಾಡಿ, ಅಂತಹ ಮಹಿಮನ ಅನ್ವೇಷಣದಲ್ಲಿದ್ದು, ವಿಫಲನಾಗಿ ನರೆಗೂದಲಿನ ಮುದುಕನಾಗುವನು. ಕೊನೆಗೆ ಕವಿಯೊಬ್ಬನು ಇವನ ಕೀರ್ತಿಯನ್ನು ಕೇಳಿ ಇವನಿದ್ದಲ್ಲಿಗೆ ಬರುವನು. ಕವಿಗೆ ಈತನಲ್ಲಿಯೂ, ಈತನಿಗೆ ಕವಿಯಲ್ಲಿಯೂ "ಇವನೆ ಶಿಲಾಮುಖ ಸದೃಶನಾದ ವ್ಯಕ್ತಿ" ಎಂಬ ಭಾವನೆ ಯುಂಟಾಗುವುದು. ಒಬ್ಬನು ಮತ್ತೊಬ್ಬನನ್ನು ಮೆಚ್ಚುತ್ತಾನೆ. ಇದೇ ಈ ಕಥೆಯ ವಸ್ತು. ಜನರ ಮೂಢವಿಶ್ವಾಸಗಳು ಹೇಗೆ ಮೂಡುತ್ತವೆ? ಮಾಯ ವಾಗುತ್ತವೆ? ತಾತ್ವಿಕತ್ವ, ಕವಿತ್ವ ಎಂಬೆರಡು ಧರ್ಮಗಳು ಹೇಗೆ ಸಜಾತೀಯ ವಾಗಿವೆ? ಎಂಬುದನ್ನೀ ಕಥೆ ತೋರಿಸಿಕೊಡುತ್ತದೆ.

ಇದರಂತೆ 'ಭಾವಚಿತ್ರಗಳ ಭವಿಷ್ಯವಾಣಿ', ಕಲಾದೃಷ್ಟಿ, ದಿವ್ಯದೃಷ್ಟಿ ಯೆಂಬುದನ್ನೂ, 'ಪರಿಮಳಾ' ಎಂಬ ಕಥೆ, ತತ್ವಾನ್ವೇಷಕರಾಗಿ, ತತ್ವಸ್ವಾರ್ಥಿ ಗಳಾಗಿ, ನಿಷ್ಠುರ ಜ್ಞಾನಿಗಳಾಗಿರುವ ಮನುಷ್ಯರು ಹೇಗಿರುವರೆಂಬುದನ್ನೂ ತೋರಿಸಿಕೊಡುತ್ತವೆ. ಇಂತಹ ಅಭಿಪ್ರಾಯಗಳಿಗೆ ಉಪಷ್ಟಂಭಕವಾದ ಪಾತ್ರ ಸಂಭಾಷಣಕ್ರಿಯೆಗಳು ಸೇರಿಕೊಂಡು ಮೂರು ಕಥೆಗಳೂ ಮೈಗೊಂಡಿವೆ. ಆದುದ ರಿಂದಲೇ ಕಥೆಯ ಬಹುಭಾಗವು ಉಪನ್ಯಾಸ ರೂಪವನ್ನು ತಳೆದಿದೆ.

ರೂಪಾಂತರಕರ್ತರು ನಮ್ಮ ದೇಶದ ವಾತಾವರಣಕ್ಕೆ ಸರಿಯಾಗಿ ಸನ್ನಿವೇಶ ಗಳನ್ನು ಮಾರ್ಪಡಿಸಿದ್ದಾರೆ. ವಿಷಯಾನುಗುಣವಾಗಿ ಭಾಷೆಯಲ್ಲಿ ಏರು ತಗ್ಗು ಗಳಿವೆ. ಭಾಷೆ ಸಾಮಾನ್ಯ ಶುದ್ಧತೆಯನ್ನೂ ಹೊಂದಿಕೊಂಡಿದೆ. ಈ ಕಥೆ ಗಳನ್ನೋದಿದರೆ, ಇವು ಭಾಷಾಂತರಗಳೆಂದು ಊಹಿಸುವುದು ಅಷ್ಟು ಸುಲಭವಲ್ಲ. ಎಂದಮೇಲೆ ಲೇಖಕರು ತಮ್ಮ ಕಾರ್ಯದಲ್ಲಿ ಸಫಲರಾಗಿರುವರೆಂದು ಹೇಳ ಬೇಕಾಗಿಲ್ಲ.

ಕ. ಶಂಕರಭಟ್ಟ

---

೮. ಚಿತ್ರಾ (ಸಂಪುಟ ೧, ಸಂಚಿಕೆ ೩).—ಸಂಪಾದಕರು: ಶ್ರೀಮತಿ ದ್ವಾರಕಾಬಾಯಿ ಯವರು ಮತ್ತು ಶ್ರೀಯುತ ಗುರುನಾಥ ಜೋಶಿಯವರು; ವಾರ್ಷಿಕ ಚಂದಾ: ರೂ. ೧–೮–೦; ಪ್ರಕಾಶಕರು: ಶಾರದಾ ಎಂಬ್ರಾಯಿಡರಿ ಸ್ಟೋರ್ಸ್, ಬೆಂಗಳೂರು.

ಮಹಿಳೆಯರ ಈ ಹೊಸ ಮಾಸಪತ್ರಿಕೆಗೆ ಸ್ವಾಗತ ಬಯಸಲು ಬಹಳ ಸಂತೋಷಿಸುತ್ತೇವೆ. ಕನ್ನಡದಲ್ಲಿ 'ಸರಸ್ವತಿ'ಯೊಂದನ್ನು ಬಿಟ್ಟರೆ ಮಹಿಳೆಯರಿಗಾಗಿ ಮೀಸಲಾಗಿರುವ ಮಾಸಪತ್ರಿಕೆ ಬೇರೊಂದು ನಮ್ಮ ಗಮನಕ್ಕೆ ಬಂದಿಲ್ಲ. ಈ ಸ್ಥಿತಿ ಯಲ್ಲಿ ಇದನ್ನು ಕನ್ನಡಿಗರೆಲ್ಲರೂ ಅತ್ಯಾದರದಿಂದ ಬರಮಾಡಿಕೊಳ್ಳುವರೆಂದು ನಮ್ಮ ದೃಢವಿಶ್ವಾಸ.

ಪ್ರಸಕ್ತ ಸಂಚಿಕೆಯನ್ನು ಪರಿಶೀಲಿಸಿದ್ದರಲ್ಲಿ, ಪತ್ರಿಕೆಯ ರೀತಿ ಉದ್ದೇಶಗಳು ಆಶಾಜನಕವಾಗಿವೆ. ಪದ್ಧತಿಯಂತೆ ಕಥೆ ಕವನಗಳಿಗೆ ಎಡೆಯಿದೆ; ಇದು ಬಹಳ ಆವಶ್ಯಕವೇ. ನಲಿವನ್ನು ಕೊಡುವ ಜೊತೆಗೆ ತಿಳಿವನ್ನು ಕೊಡುವುದು ಪತ್ರಿಕೆಯ

ಮುಖ್ಯ ಉದ್ದೇಶವಾಗಿರಬೇಕು; 'ಚಿತ್ರಾ' ಇದನ್ನು ಮರೆತಿಲ್ಲ: ಈ ಸಂಚಿಕೆಯಲ್ಲಿ ಬಂದಿರುವ 'ತುರ್ಕಿಸ್ಥಾನದ ಸ್ತ್ರೀಯರು' (ಶ್ರೀಮತಿ ಶಾಂತಾಬಾಯಿ ಮಾಳವಾಡ ರಿಂದ), 'ಕ್ಷಯರೋಗದ ನಿವಾರಣೆಯೂ ಸ್ತ್ರೀಯರೂ' (ಶ್ರೀಮತಿ ಶ್ಯಾಮಲಾ ಬಾಯಿಯವರಿಂದ) ಎಂಬ ಲೇಖನಗಳು ಇದಕ್ಕೆ ಸಾಕ್ಷಿ. ಒಟ್ಟಿನಮೇಲೆ, 'ಮಹಿಳೆಯರಿಗಾಗಿ ಮಹಿಳೆಯರು ಬರೆದ' ಲೇಖನಗಳಿಗೆ ಪ್ರಾಮುಖ್ಯತೆ ಕೊಡಬೇಕೆನ್ನುವುದು 'ಚಿತ್ರಾ'ದ ಉದ್ದೇಶವೆಂಬುದು ಸ್ಪಷ್ಟವಾಗುತ್ತದೆ; ಇದು ಸ್ತುತ್ಯವಾದದ್ದು.

'ಮೇಜಿನ ಬಟ್ಟೆಯ ಚಿತ್ರಗಳು' ಎಂಬ ಭಾಗ ಮಹಿಳೆಯರಿಗೆ ಹೆಚ್ಚು ಆಕರ್ಷಕವಾಗಿರುವುದರಲ್ಲಿ ಸಂದೇಹವಿಲ್ಲ. ಜೊತೆಗೆ, ಇತರ ಕಲೆಗಳನ್ನು ಆದಷ್ಟು ಮಟ್ಟಿಗೆ ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಬೇಕೆಂದು ಸೂಚಿಸಲಿಚ್ಛಿಸುತ್ತೇವೆ.

ಎಂ. ವಿ. ಸೀತಾರಾಮಯ್ಯ

---

**೯. ಜಯಂತಿ.**—(ಮಾಸಪತ್ರಿಕೆ: ವರ್ಷ ೧, ಸಂಚಿಕೆ ೧) ಸಂಪಾದಕರು: ಶ್ರೀ|| ಪಾಟೀಲ ಮಾಧವರಾಯರು ಮತ್ತು ಶ್ರೀ|| ಬೆಟಗೇರಿ ಕೃಷ್ಣಶರ್ಮರವರು; ಡೆಮ್ಮಿ ಆಕಾರ ೪/೧ ೬೮ ಪುಟಗಳು; ವಾರ್ಷಿಕ ಚಂದಾ: ರೂ. ೨–೦–೦.

ಕನ್ನಡ ನಾಡು ದೊಡ್ಡದು. ಈ ನಾಡಿನ ಜನ ಒಂದಾಗಿ ಮುಂದಾಗಬೇಕಾದರೆ ನಾಡಿನಲ್ಲೆಲ್ಲ ತಿಳಿವಳಿಕೆ ಹರಡಬೇಕು; ತಿಳಿವಳಿಕೆಯನ್ನು ಹರಡುವ ಈ ಕೆಲಸದಲ್ಲಿ ಪತ್ರಿಕೆಗಳೂ ಒಂದು ಮುಖ್ಯಸಾಧನ. ನಮ್ಮ ಈ ದೊಡ್ಡ ನಾಡಿನಲ್ಲಿ ಈಗ ಇರುವ ಪತ್ರಿಕೆಗಳ ಜೊತೆಗೆ ಇನ್ನೂ ಹಲವು ಪತ್ರಿಕೆಗಳು ಹುಟ್ಟಿ ಜನದ ಏಳಿಗೆಗೆ ದುಡಿಯಲು ಅವಕಾಶವಿದೆಯೆಂದು ನಿಸ್ಸಂಕೋಚವಾಗಿ ಹೇಳಬಹುದು. ಇಂಥ ಸಂದರ್ಭದಲ್ಲಿ ಒಂದು ಹೊಸ ಧ್ಯೇಯವನ್ನಿಟ್ಟುಕೊಂಡು ಜನ್ಮತಾಳಿರುವ "ಜಯಂತಿ"ಗೆ ಆದರದಿಂದ ಸ್ವಾಗತ ಬಯಸುತ್ತೇವೆ.

"ತರುಣ ಪ್ರಪಂಚದ ವರ್ತಮಾನ ಭವಿಷ್ಯಜ್ಜೀವನಗಳ ಆಶೆ, ಆಕಾಂಕ್ಷೆ, ಸಂಕಲ್ಪ, ಕಾರ್ಯ, ಕಲ್ಪನೆ, ಕನಸು—ಇವುಗಳ ಪ್ರಾತಿನಿಧ್ಯವನ್ನು ಮಾಡಲು 'ಜಯಂತಿ' ನಡು ಬಿಗಿದು ಹೊರಟಿದೆ..... ಹೇಳಿದುದನ್ನೇ ಹೇಳುವ ನಮ್ಮ ಇತಿಹಾಸ ಪುರಾಣಗಳು ಇಂದು ಆ ಕೆಲಸವನ್ನು ಮಾಡಲಾರವು. ಮಧ್ಯಯುಗದ ಕಾವ್ಯನಾಟಕ ಸಾಹಿತ್ಯದಿಂದಲೂ ಆ ಕಾರ್ಯ ಆಗುವಂತಿಲ್ಲ. ಹಿರಿಯರ ಅಡಿಯಲ್ಲಿಯೇ ಅಡಿಯಿಟ್ಟು ಹೊರಟ, ಕಟ್ಟುನಿಟ್ಟುಗಳ ಪಂಜರದಲ್ಲಿ ಸಿಕ್ಕ, ಸಾಂಪ್ರದಾಯಿಕ ಹೊಸಸಾಹಿತ್ಯವೂ ಇಂದಿನ ಜನತೆಯ ಕುರುಡನ್ನು ಕಳೆಯಲಾರದು. 'ಹೊತ್ತು ಹೊತ್ತಿಗೆ ಹೊಸ ಪರಿಯ ಸಿಂಗರ ಬೇಕು!' ಕನ್ನಡ ಸಾಹಿತ್ಯದೇವಿಗೆ ಅಂತಹ 'ಹೊಸ ಪರಿಯ ಸಿಂಗರ'ಗಳನ್ನು ಒದಗಿಸಬೇಕೆಂದು ಜಯಂತಿಯ ಉದ್ದೇಶ" ಎಂದು ಸಂಪಾದಕರು ತಮ್ಮ ಗುರಿಯನ್ನು ವಿವರಿಸಿದ್ದಾರೆ. ಈ ಗುರಿಗೆ ಅನುಸಾರವಾಗಿ ಈ ಮೊದಲನೆಯ ಸಂಚಿಕೆ ಹೊಸ ಪರಿಯ ಹಲವು ಲೇಖನ, ಕಥೆ, ಕವನಗಳನ್ನೊಳಗೊಂಡು, ಚಿತ್ರಮಯವಾಗಿ ಮುದ್ದಾಗಿ ಹೊರಬಂದಿದೆ. ಈ ಪತ್ರಿಕೆ

ಜನರಂಜಕವಾಗಿ, ಉಪಯುಕ್ತವಾಗಿ ನಾಡಿಗೆ ಬಹುಕಾಲ ಸೇವೆ ಸಲ್ಲಿಸಲೆಂದು ಹಾರೈಸುತ್ತೇವೆ.

ಎಲ್. ಗುಂಡಪ್ಪ

---

೧೦. ಅಕ್ಕಮಹಾದೇವಿ.—ಲೇಖಕರು: ಶ್ರೀ|| ರಂ. ಶ್ರೀ. ಮುಗಳಿ, ಎಂ.ಎ., ಬಿ.ಟಿ.; ಪ್ರಕಾಶಕರು: ಶ್ರೀ|| ಜಿ. ಬಿ. ಜೋಶಿ, ಧಾರವಾಡ; ಕ್ರೌನ್ ಅ. ಪ. ಪು. ೮+೫೫; ಬೆಲೆ: ೮ ಆಣೆ.

ಹನ್ನೆರಡನೆಯ ಶತಮಾನದ ಕನ್ನಡ ನಾಡು ಶಿವಶರಣೆಯರ ಮಹಾ ಸಾಮ್ರಾಜ್ಯವಾಗಿತ್ತು. ಆ ನಕ್ಷತ್ರ ತುಂಬಿದ ಆಕಾಶದಲ್ಲಿ ಮಹಾದೇವಿಯಕ್ಕ ಧ್ರುವತಾರೆಯಂತೆ ಮೆರೆಯುತ್ತಿದ್ದಳು. ಆಕೆ ಶೂನ್ಯಸಂಪಾದನಾಕಾರನು ಹೇಳುವಂತೆ "ಭಕ್ತಿಯ ಭಾಗ್ಯ, ಮುಕ್ತಿಯ ತವರ್ಮನೆ, ಶಿವಭಾವ ಸಂಪನ್ನೆ, ಪ್ರಸಾದದ ಮೇರು, ತತ್ವಶಿಖಾಮಣಿ, ಪುಣ್ಯದ ಪುಂಜೆ, ನೈಷ್ಠೆಯ ಕಣಿ, ಸತ್ಯದ ಸದನ, ಶಾಂತಿಯ ನಿಧಿ, ಚಿದಂಬರ ಸಂಯುತೆ, ಸ್ವಾನುಭವದ ಸಾಗರ, ನಿತ್ಯದ ನಿವಾಸೆ" ಆಗಿದ್ದಳು. ತನ್ನ ನಿರ್ಮಲವೂ ಉದ್ಬೋಧಕವೂ ಆದ ಜೀವನದಿಂದ ಸ್ತ್ರೀ ಜನ್ಮಕ್ಕೇ ಒಂದು ಹೆಚ್ಚಿನ ಸ್ಥಾನವನ್ನು ಕಲ್ಪಿಸಿಕೊಟ್ಟಳು. ಭಕ್ತಿ, ಜ್ಞಾನಗಳೆರಡರ ಮೇಳವನ್ನು ಸಾಧಿಸಿ ಕೈವಲ್ಯವನ್ನಾರ್ಜಿಸಿದಳು.

ಇಂತಹ ಮಹಾವ್ಯಕ್ತಿಯ ಚರಿತ್ರೆಯನ್ನು ಹರಿಹರ, ಚಾಮರಸ, ಚೆನ್ನ ಬಸವಾಂಕ, ಕೆಂಚವೀರಣ್ಣೊಡೆಯರೇ ಮೊದಲಾದ ಕವಿಗಳ ಕಾವ್ಯಾರಾಮ ದಿಂದ ಆಯ್ದುಕೊಳ್ಳಬೇಕಾಗಿದೆ. ಇವುಗಳ ಆಧಾರದಿಂದ ಆಕೆಯ ಜೀವನದ ಪ್ರಧಾನ ಘಟ್ಟಗಳನ್ನು ನಿರ್ಣಯಿಸುವುದೂ ಕಷ್ಟವಾಗುತ್ತದೆ. ಕೌಶಿಕನನ್ನು ಮಹಾದೇವಿ ಮದುವೆಯಾದುದು, ದಿಗಂಬರೆಯಾಗಿ ಗೃಹತ್ಯಾಗಮಾಡಿದುದು— ಈ ಎರಡು ಅಂಶಗಳಂತೂ ವಿಶೇಷ ವಾದ ವಿವಾದಗಳಿಗೆ ಕಾರಣವಾಗಿವೆ. ಹರಿಹರ, ಚಾಮರಸ ಇಬ್ಬರೂ ಮಹಾಕವಿಗಳು. ಇಬ್ಬರೂ ತಮಗೆ ಸೂಕ್ತತೋರಿದ ಕಥಾ ರೀತಿಗಳನ್ನು ತಮ್ಮ ಕಾವ್ಯದಲ್ಲಿ ಪ್ರತಿಪಾದಿಸಿದ್ದಾರೆ. ಅಕ್ಕನ ಕಾಲಕ್ಕೆ ಹೆಚ್ಚು ಸಮೀಪವಾಗಿದ್ದ ಚರಿತ್ರೆಯೆಂದರೆ ಹರಿಹರನ ರಗಳೆ. ಇದನ್ನು ಒಪ್ಪಿಕೊಂಡೂ ಗ್ರಂಥಕರ್ತರು—

"ಇದರ ಪ್ರಾಚೀನತೆಯು ಮೇಲಿಂದ ಸತ್ಯತೆಯನ್ನು ನಿರ್ಣಯಿಸುವ ಪ್ರಮಾಣವು ನಮ್ಮ ದೃಷ್ಟಿಯಲ್ಲಿ ಅಷ್ಟು ಸಮರ್ಪಕವಲ್ಲ. ಹರಿಹರ ಅಂತರಂಗ ಚರಿತ್ರವನ್ನೆ ಮುಖ್ಯ ವಾಗಿಟ್ಟುಕೊಂಡು ಬಾಹ್ಯ ಚರಿತ್ರೆಯನ್ನು ತನಗೆ ಬೇಕಾದಂತೆ ಮಾರ್ಪಡಿಸಿಕೊಂಡಿರುವ ನೆಂದು ನಮ್ಮ ಮತ" . . . . "ವಚನಗಳಲ್ಲಿ ಸೂಚಿತವಾದ ಮಹಾದೇವಿಯಕ್ಕನ ಅಂತರಿಕ ಜೀವನ ಹಾಗೂ ಬಾಹ್ಯ ಚರಿತ್ರದ ಕೆಲವಂಶ ಇವಕ್ಕೆ ತಾಕಲಾಡದೆ ಬಹು ಮಟ್ಟಿಗೆ ಸತ್ಯವನ್ನು ಒಳಕೊಂಡಿರುವುದು 'ಪ್ರಭುಲಿಂಗಲೀಲೆ'ಯೆಂದು ನನಗೆ ತೋರುತ್ತದೆ. ಅದನ್ನೇ ನಾನು ಹೆಚ್ಚಾಗಿ ನನ್ನ ನಾಟ್ಯಸಂಪಿಧಾನದಲ್ಲಿ ಬಳಸಿರುವೆನು"

ಎಂದು ಹೇಳಿದ್ದಾರೆ. ಗ್ರಂಥಕರ್ತರ ಮತ, ತೋರಿಕೆಗಳು ಹರಿಹರ, ಚಾಮರಸರ ಕಾವ್ಯಗಳಿಗಿಂತ ಹೆಚ್ಚು ಪ್ರಮಾಣವಾಗುವುದಿಲ್ಲವೆಂದು ನಾವು ಸೂಚಿಸ

ಬೇಕಾಗುತ್ತದೆ. ವೈವಾಹಿಕ ಜೀವನದ ಪೂರ್ಣ ಅನುಭವವನ್ನು ಅಕ್ಕನ ವಚನಗಳು ಸಾರಿ ಸಾರಿ ಹೇಳುತ್ತಿದ್ದರೂ ಗ್ರಂಥಕರ್ತರು—

"ಹರಿಹರ, ಚೆನ್ನಬಸವಾಂಕ, ಕೆಂಚವೀರಣ್ಣೊಡೆಯ ಇವರು ಮದುವೆಗೆ ಸಾಧಕ ಮತವುಳ್ಳವರು. ಚಾಮರಸನೂ ಅವನ ಅನುವಾದಕಾರರೂ ಮದುವೆಯಾಗಲಿಲ್ಲವೆಂಬ ಮತದವರು. ಹೀಗೆ ಮತಭೇದವಿರುವಾಗ ಅಕ್ಕನ ವಚನಗಳನ್ನು ನಿರುಕಿಸಿ ಅವುಗಳ ಧ್ವನಿಯನ್ನು ಮೂಲವಾಗಿಟ್ಟುಕೊಂಡು ಸತ್ಯವನ್ನು ಶೋಧಿಸುವುದಾದರೆ ಅವಳು ಮದುವೆಯಾಗಲಿಲ್ಲವೆಂದೇ ನನ್ನ ತೋರಿಕೆ. ವಚನಗಳಲ್ಲೆಲ್ಲ ಒಂದು ಆಧ್ಯಾತ್ಮ ಶೃಂಗಾರವು ಸತಿಪತಿಭಾವರೂಪದಲ್ಲಿ ಬಂದಿರುವುದು. ಅಲ್ಲಿ ಲೌಕಿಕ ಪತಿಯ ಪ್ರಾಪ್ತಿಯ ಬಗ್ಗೆ ಹೇಯ ಬುದ್ಧಿಯುಳ್ಳವಳಾಗಿ ತಾನು ಹೇಗೆ ತನ್ನ ಅಧಿದೈವವಾದ ಚೆನ್ನಮಲ್ಲಿಕಾರ್ಜುನನನ್ನು ಪ್ರೀತಿಸಿ ಅರಸಿ ಅದ್ಭುತವಾದ ಬಗೆಯಲ್ಲಿ ಅವನನ್ನು ಮದುವೆಯಾದಳೆಂಬುದು ಕನ್ನಡ ನುಡಿಗೆ ಅಪರೂಪವಾಗಿ ವರ್ಣಿತವಾಗಿದೆ"

ಎಂದು ಹೇಳಿದ್ದಾರೆ. ವಚನಗಳಲ್ಲಿ ಕಂಡುಬರುವ ವೈವಾಹಿಕ ವಿಧಿಗಳ ವರ್ಣನದಿಂದಲೂ,

"ಸಂಸಾರ ಸಾಗರದೊಳಗೆ ಬಿದ್ದೆ ನೋಡಾ ನಾನು. ಸಂಸಾರ ನಿಸ್ಸಾರವೆಂದು ತೋರಿದನೆನಗೆ ಗುರು. ಅಂಗವಿಕಾರದ ಸಂಗವ ನಿಲಿಸಿ ಲಿಂಗವನಂಗದ ಮೇಲೆ ಸ್ಥಾಪ್ಯವಮಾಡಿದ ನೆನ್ನ ಗುರು. ಹಿಂದಣ ಜನ್ಮವ ತೊಡೆದು ಮುಂದಣ ಪಥವ ತೋರಿದನೆನ್ನ ಗುರು.."

ಮೊದಲಾದ ವಚನಗಳ ಆಧಾರದಿಂದಲೂ ಅಕ್ಕನಿಗೆ ಮದುವೆಯಾಗಿದ್ದುದು ಮಾತ್ರವಲ್ಲದೆ ದಾಂಪತ್ಯಜೀವನದ ಎಲ್ಲ ಕಷ್ಟಸುಖಗಳ ಅರಿವೂ ಆಗಿತ್ತೆಂದು ನಿಶ್ಚಯಿಸಬಹುದು. ಭವಿಯನ್ನು ಕೂಡಿದಳೆಂದು ಜನ ನಿಂದಿಸಲು—

"ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯ. ಸಮುದ್ರದ ತಡೆಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದಡೆಂತಯ್ಯ. ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ....ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿ ನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು"

ಎಂದು ಸಮಾಧಾನಪಟ್ಟುಕೊಂಡೂ ಇರಬೇಕು. ಹರಿಹರ ಸ್ವಯಂ ಶರಣಸ್ಥಾನಕ್ಕೆ ಸೇರಿದ ಮಹಾಕವಿ. ವೀರಶೈವ ಶರಣ ಶರಣೆಯರ ಬಗ್ಗೆ ನಿಸ್ಸೀಮ ಗೌರವವುಳ್ಳವನು. ಅವನು ಅನಾವಶ್ಯಕವಾಗಿ ಅಕ್ಕನನ್ನು ಭವಿಗೆ ಕಟ್ಟಲು ಪ್ರಯತ್ನಪಡುವುದಕ್ಕೆ ಕಾರಣವಿಲ್ಲ. ಅಕ್ಕನ ಆತ್ಮೋತ್ಕ್ರಾಂತಿಯ ಹಾದಿಯಲ್ಲೊದಗಿದ ಮಹಾ ಎಡರುಗಳಲ್ಲಿ ಮೊದಲನೆಯದು ಅವಳ ವಿವಾಹವೆಂದು ತೋರುವುದಕ್ಕೆ ಹರಿಹರ ವಿವಾಹದ ಪ್ರಸ್ತಾಪವನ್ನೆತ್ತಿದ್ದಾನೆ.

ಇನ್ನು ಅಕ್ಕಮಹಾದೇವಿಯ ನಗ್ನತೆಯ ವಿಚಾರ. ಆಕೆಯ ವಿಚಾರ ಬರೆದಿರುವ ಎಲ್ಲ ಕವಿಗಳೂ ಇದನ್ನು ಒಪ್ಪುತ್ತಾರೆ.' ಅಕ್ಕನೇ ಬರೆದಿರುವ ಯೋಗಾಂಗ ತ್ರಿವಿಧಿಯಲ್ಲಿ—

"ಉಟ್ಟ ಸೀರೆಯ ಸೆಳೆದು ತೊಟ್ಟ ತೊಡಿಗೆಯ ಹರಿದುಬಿಟ್ಟನೋ ನಾನು ಬಿಡುಮುಡಿಯ ಎಲೆ ದೇವ! ಕೊಟ್ಟನೋ ಎನ್ನ ತನುಮನವ"

ಎಂದು ಸ್ಪಷ್ಟವಾಗಿ ಹೇಳಿದ್ದಾಳೆ. ಗ್ರಂಥಕರ್ತರು "ಅಕ್ಕನ ವಚನಗಳನ್ನೇ ನೋಡಿದರೆ ಎಲ್ಲಿಯೂ ನಗ್ನಾವಸ್ಥೆಯ ಉಲ್ಲೇಖವಿಲ್ಲೆಂಬುದು ನಿಜ" ಎಂದು

ಹೇಳಿ "....ಅವಳ ಆಧ್ಯಾತ್ಮಿಕ ಧೈರ್ಯ, ಸಾಹಸ, ಅಸಾಮಯಿಕ ಆಚಾರ ವಿಚಾರ—ಇವುಗಳಿಂದ ನಗ್ನತೆಯು ಅಕ್ಕನಲ್ಲಿ ಅಸಹಜವಲ್ಲವೆಂದು ನಾನು ಬಗೆದಿರುವೆನು. ಅಂತೇ ಈ ನಾಟಕದಲ್ಲಿ ಹಾಗೆ ಅವಳನ್ನು ಚಿತ್ರಿಸಿರುವೆನು" ಎಂದು ಸಮಾಧಾನ ಕೊಟ್ಟದ್ದಾರೆ.

ಒಂದು ದಿನ ಮಹಾದೇವಿ ಕೌಸಿಕದೊರೆಯ ಸಭೆಯಲ್ಲಿ ಮಿನುಗಿ ಮಾಯವಾಗುತ್ತಾಳೆ. ಅರಸು ಕೀಳೋಲೆಯೊಂದನ್ನು ಕಳುಹಿಸಿ ಅವಳನ್ನು ಕರಸಿಕೊಂಡು, "ನೀವೆನಗೆ ಆತನ ಕುರುಹಾಗಿ ಬಂದು ನಿಂದ ಪರಮಗುರುಗಳು" ಎಂದು ಹೇಳುತ್ತಾನೆ. ಊರಿನಲ್ಲಿ ಆಗಲೇ ಈ ಸುದ್ದಿ ಹರಡುತ್ತದೆ. ಅರಸಿಯಾಗೆಂದು ಮಹಾದೇವಿಯನ್ನು ಒಂದು ದಿನ ಕೌಸಿಕನು ಬೇಡುತ್ತಾನೆ. "ನನ್ನೊಡನೆ ಕೀಳು ಗುಡಿಸಲೊಳು ಇರುವುದು, ಅಡವಿಗವಿಯನು ಸೇರುವುದು, ಅರಮನೆಯ ಪರ್ಯಂಕವನು ದಾಸದಾಸಿಯರ ಸೇವೆಯನು ಈ ಎಲ್ಲ ವಿಧ ವಿಧದ ವೈಭವವ ತೊರೆಯುವುದಾದರೆ" ಆಗಲೆನ್ನುತ್ತಾಳೆ. ಕೌಸಿಕನು ಅದಕ್ಕೆ ಸಾಧ್ಯವಿಲ್ಲವೆನ್ನಲು ವಿವಾಹವನ್ನು ಜರಿದು, ವಿವಸ್ತ್ರಳಾಗಿ ಹೊರಟುಹೋಗುತ್ತಾಳೆ. ಕೌಸಿಕನಿಂದ ಆಜ್ಞಪ್ತಳಾದ ಜೋಗಿಣಿಯೊಬ್ಬಳು ತುಂಗಭದ್ರಾತೀರಕ್ಕೆ ಬಂದು ಮಹಾದೇವಿಯ ಪ್ರತಿಜ್ಞೆಯನ್ನು ಭಂಗಮಾಡಲೆತ್ನಿಸಿ ವಿಫಲಳಾಗಿ ಹಿಂದಿರುಗುತ್ತಾಳೆ. ಚೆನ್ನಮಲ್ಲಿಕಾರ್ಜುನನಿಗೆ ಹಂಬಲಿಸುತ್ತ ಅನುಭವಮಂಟಪಕ್ಕೆ ಮಹಾದೇವಿ ಬರುತ್ತಾಳೆ. ಪ್ರಭುದೇವರಿಂದ ಶ್ರೀಶೈಲಕ್ಕೆ ಹೋಗಲಪ್ಪಣೆ ಪಡೆದು ಅಲ್ಲಿಗೆ ತೆರಳಿ ಚೆನ್ನಮಲ್ಲಿಕಾರ್ಜುನ ಘನಲಿಂಗದಲ್ಲಿ ಲಿಂಗೈಕ್ಯವಾಗುತ್ತಾಳೆ— ಇದೇ ಕಥಾವಸ್ತು.

ಹರಿಹರ, ಚಾಮರಸರ ಪ್ರಕಾರ ಕೌಸಿಕ ಮೊದಲು ಮಹಾದೇವಿಯನ್ನು ಕಾಣುವುದು ಅವನು ನಗರ ಪರ್ಯಟನ ಮಾಡುತ್ತಿದ್ದಾಗ. ಈ ಗ್ರಂಥದಲ್ಲಿ ಮಹಾದೇವಿಯೇ ಅರಸನ ಒಡ್ಡೋಲಗಕ್ಕೆ ಹೋಗುತ್ತಾಳೆ. ಅಲ್ಲಿ ಅರಸನಿಗೆ ಮಹಾದೇವಿಯ ಪ್ರಥಮ ದರ್ಶನ ದೊರೆಯುತ್ತದೆ. ನಾಟಕದ ಅಸ್ತಿಭಾರವೇ ಇದರಿಂದ ಅಭದ್ರವಾಗುತ್ತದೆ. ಮಹಾದೇವಿ ಸುಶೀಲೆಯೂ ಕುಲೀನೆಯೂ ಸುಂದರಿಯೂ ಆದ ಹೆಣ್ಣುಮಗಳು. ಅವಳಿಗೆ ಅರಸನ ಒಡ್ಡೋಲಗದಲ್ಲಿ ಏನು ಕೆಲಸ? ಮುಂದೆಯಾದರೂ ಅವಳು ಅರಸನ ಆಣತಿಯೋಲೆಯನ್ನು ಮನ್ನಿಸಿ ಅವನನ್ನು ಕಾಣಲು ಹೋಗುತ್ತಾಳೆ. ಹರಿಹರ, ಚಾಮರಸರ ದೃಷ್ಟಿಯಲ್ಲಿ ಮಹಾದೇವಿ ಅರಸನನ್ನು ಕಾಣಲೊಪ್ಪುವುದು ಅರಸನ ಪ್ರಧಾನಿ, ದಾಸ ದಾಸಿಯರ ಬೆದರುಮಾತುಗಳಿಂದ. "ಅರಸನ ಬಲವೇನು, ನಿನ್ನ ಬಲವೇನು. ಅವನು ಒಲಿದರೆ ನಿನಗೂ ನಿನ್ನ ತಾಯಿತಂದೆಗಳಿಗೂ ಸಕಲ ಸಂಪತ್ತೂ ದೊರೆಯುತ್ತದೆ. ಅವನು ಮುನಿದರೆ ಪ್ರಾಣಹಾನಿಯಾಗುವ ಸಂಭವವಿದೆ" ಎಂದು ಹೆದರಿಸುತ್ತಾರೆ. ಶಿವ ಶರಣಶರಣೆಯರ ಹತ್ಯೆಕ್ಕೆ ಕಾರಣಕಾರಿಯಾಗಲು ಇಷ್ಟಪಡದೆ "ಏನಾಗಿಯಾದೊಡಂ ಭಕ್ತರಂ ರಕ್ಷಿಪುದು, ನಾನಾ ವಿಧಂ ಬಂದು ಶರಣರಂ ಸಲಹುವುದು ಎಂದುಂಟು ಸತ್ಯಂ ಪುರಾತನರ ವಚನ" (ಅ. ಮ. ರ., ಪುಟ ೨೮) ಎಂಬುದನ್ನು ನೆನೆದು ಒಪ್ಪುತ್ತಾಳೆ. ನಾಟಕದಲ್ಲಿ ಅವಳ ವರ್ತನೆ ಸ್ವಚ್ಛಂದವಾಗಿದೆ.

ಗ್ರಂಥಾರಂಭದಲ್ಲಿಯೇ ತಮ್ಮ ದೃಷ್ಟಿಯನ್ನು ಗ್ರಂಥಕರ್ತರು ಕೌಸಿಕನ ಮೇಲೆಯೂ ಚೆಲ್ಲಿದ್ದಾರೆ. ಗ್ರಂಥಕರ್ತರಿಗೆ ಮಹಾದೇವಿ ಶಿವಭಕ್ತಿಯ ಕಣಿ,

ಭಕ್ತಿಯ ಬಿತ್ತು; ಆದರೆ ಕೌಸಿಕನಿಗೆ ಅವಳು ಲೋಕಸುಂದರಿ. ಹರಿಹರ ಹೇಳುವಂತೆ "ಅತಿ ವಿಷಯಿ, ಅತಿ ಕೋಪಿ, ಅತಿ ನಿಷ್ಠುರನ್, ಪಿರಿಯರವರಿವರೆನ್ನನ್, ಮೂರ್ಖನ್" ಎನ್ನುವ ಮಾತು ಸ್ವಲ್ಪ ಉತ್ಪ್ರೇಕ್ಷೆಯಾದರೂ ಸತ್ಯವಾದುದು. ಅಂತಹವನು ಗ್ರಂಥಾರಂಭದಲ್ಲಿಯೇ ಸಹಸ್ರವಂದನೆಗಳನ್ನರ್ಪಿಸಿ, "ನನ್ನ ಜೀವಕ್ಕೆ ಜಗವನ್ನೆಲ್ಲ ತುಂಬಿ ತೇಲಿಸುವ ಸೊಗದ ಸಾಗರವು ಸಾರಿಬಂದಿದೆ.... ನಿಮ್ಮ ನುಡಿ ಕೇಳುವುದೆ ಆತನ (ದೇವರ) ಸೊಲ್ಲು ಕೇಳಿದಂತೆ; ನಿಮ್ಮ ಮೊಗ ಕಾಂಬುದೆ ಆತನ ರೂಪು ಕಂಡಂತೆ; ನಿಮ್ಮಲ್ಲಿ ಆತನನ್ನು ಕಂಡೆನು, ಈಗಲೂ ಕಾಣುತ್ತಿರುವೆನು" ಎಂದು ಹೇಳುತ್ತಾನೆ. ಮಹಾದೇವಿಯ ವಿಚಾರ ತಿಳಿಯುವುದಕ್ಕೆ ಮುಂಚೆಯೇ ಇಷ್ಟೊಂದು ಭಕ್ತಿ ಕೌಸಿಕನ ಮನಸ್ಸಿನಲ್ಲಿ ಹೇಗೆ ಹುಟ್ಟಿತು? ಕೌಸಿಕನಿಗೆ ಮಹಾದೇವಿಯಲ್ಲಿದ್ದುದು ಪ್ರೇಮವೋ, ಮೋಹವೋ, ಭ್ರಮೆಯೋ ಸ್ಪಷ್ಟವಾಗಿಲ್ಲ. ಮಹಾದೇವಿಯ ಸೋಂಕಿನ ಪುಣ್ಯವನ್ನು ಪಡೆದ ಮಂಚದ ಪುಣ್ಯವೂ ತನಗಿಲ್ಲವಲ್ಲಾ ಎಂದು ವಿಷಾದಿಸುವಷ್ಟು ಅವಳಲ್ಲಿ ಅನುರಕ್ತನಾದ ಕೌಸಿಕ ರಾಜ್ಯ, ಕೋಶ, ರಾಜಭೋಗಗಳನ್ನು ಅವಳಿಗಾಗಿ ತೊರೆಯಲು ಹಿಂಜರಿಯುತ್ತಾನೆ. ಅವನ ಒಲವು ಕ್ಷಣಿಕವಾದುದಾದರೆ ಮಹಾದೇವಿಗೂ ಕೌಸಿಕನಿಗೂ ನಡೆದಿರುವ ಸಂಭಾಷಣೆ (ನಾಟಕದಲ್ಲಿ) ಪೊಳ್ಳಾಗುತ್ತದೆ. ಅವನ ಒಲವು ಗ್ರಂಥಕರ್ತರು ಕಲ್ಪಿಸಿರುವಂತೆ ಪ್ರಬಲವಾದುದಾದರೆ ಮಜ್ನನು ರೋಮಿಯೋ ಅವರುಗಳಂತೆ ಕೌಸಿಕ ಯಾನ ತ್ಯಾಗವನ್ನೂ ದೊಡ್ಡದೆಂದು ಭಾವಿಸುತ್ತಿರಲಿಲ್ಲ.

ಕಲ್ಯಾಣಕ್ಕೆ ಬಂದು ಪ್ರಭುದೇವರನ್ನು ಕಂಡುಹೋಗುವ ದೃಶ್ಯದಲ್ಲಿ ಮಹಾದೇವಿಗೂ ಪ್ರಭು, ಬಸವಣ್ಣ, ಕಿನ್ನರಯ್ಯಗಳಿಗೂ ಆದ ಸಂಭಾಷಣೆಯನ್ನು ಶೂನ್ಯಸಂಪಾದನೆಯಿಂದ ಎತ್ತಿ ಬರೆದಿದ್ದಾರೆ. ನಾಟಕದಲ್ಲಿ ಮಹಾದೇವಿ ಅನುಭವ ಮಂಟಪದಲ್ಲಿ ನಿಂತು ಅಲ್ಲಿನ ಗೋಷ್ಠಿಗಳಲ್ಲಿ ಭಾಗವಹಿಸಿದ ವಿಚಾರ ಸೂಚನೆಯೂ ಸಿಕ್ಕುವುದಿಲ್ಲ. ಅನುಭವಮಂಟಪದಲ್ಲಿ ಹಾದು ಶ್ರೀಶೈಲಕ್ಕೆ ಹೊರಟುಹೋಗುತ್ತಾಳೆ. ಮಹಾದೇವಿಯ ಜೀವನದ ಹೆಚ್ಚುಗಾರಿಕೆಯೆಂದರೆ ಅನುಭವಮಂಟಪದಲ್ಲಿ ಅವಳಿಗಿದ್ದ ಸ್ಥಾನ. ಗ್ರಂಥಕರ್ತರು ಅದನ್ನು ಉಪೇಕ್ಷಿಸಿದ್ದಾರೆ.

ಕೊನೆಯಲ್ಲಿ, ಕೌಸಿಕನು ಶಿವನ ಕರುಣೆಗಾಗಿ ಕೈಯೊಡ್ಡಿ ತಿರುಗುವ ತಿರುಕನಾಗಿ ಶ್ರೀಶೈಲಕ್ಕೆ ಬರುತ್ತಾನೆ. "ಈಗೆನ್ನ ಗುರುವಾಗಿ ಭಕುತಿಯನು ನೀಡಿರಿ" ಎಂದು ಬೇಡುತ್ತಾನೆ. ಐತಿಹಾಸಿಕ ದೃಷ್ಟಿಯಿಂದ ಇದಕ್ಕೆ ಆಧಾರವಿಲ್ಲ, ಕಥಾ ದೃಷ್ಟಿಯಿಂದ ಇದು ಅಪ್ರಾಸಂಗಿಕ.

ನಾಟಕಕಾರರಿಗೆ ವಸ್ತು ಹಿಡಿತಕ್ಕೆ ಸಿಕ್ಕಿಲ್ಲ. ಇತಿಹಾಸ, ಕಲ್ಪನೆ ಎರಡೂ ಎಣ್ಣೆ, ನೀರಿನಂತೆ ಬೆರೆತು ಓದುಗರನ್ನು ಸಂಶಯಕೂಪದಲ್ಲಿ ಕೆಡಹುತ್ತದೆ. ಕೆಲವು ಕಡೆ ವಚನಗಳನ್ನು ತರುವುದಕ್ಕೇ ದೃಶ್ಯಗಳನ್ನು ನಿಯೋಜಿಸಿದ್ದಾರೆ; ಮೂರನೆಯ ಅಂಕದ ೧, ೨ನೆಯ ದೃಶ್ಯಗಳಲ್ಲಿಯಂತೂ ವಚನಗಳ ಸುರಿಮಳೆಯಾಗಿಬಿಟ್ಟಿದೆ. ಇದರಿಂದ ವಸ್ತುವಿನ ನಡಗೆ ಭಂಗಹೊಂದಿದೆಯೇ ವಿನಾ ಪೋಷಿತವಾಗಿಲ್ಲ.

"ಈ ನಾಟಕದಲ್ಲಿಯ ಪ್ರೌಢ ವಚನ ಶೈಲಿ, ಹಾಗೂ ಅಕ್ಕನ ನಗ್ನತೆ— ಇವುಗಳಿಂದ ಇದು ರಂಗಭೂಮಿಗಾಗಿ ಬರೆದುದಲ್ಲವೆಂದು ನಾನು ಒಪ್ಪುತ್ತೇನೆ" ಎಂದು ಹೇಳಿದ್ದಾರೆ. ಆ ಕಾರಣಗಳಲ್ಲದೆ, ದೃಶ್ಯಗಳ ಯುಕ್ತನಿಯೋಜನೆಯೂ ಇಲ್ಲದೆ ಗ್ರಂಥವು 'ನಾಟಕ'ವೆನಿಸಿಕೊಳ್ಳಲಾರದಾಗಿದೆ. ೩ನೆಯ ಅಂಕದ ೩ನೆಯ ದೃಶ್ಯವು ಕಲ್ಯಾಣದ ಬೀದಿಯಲ್ಲಿ ಆರಂಭವಾಗುತ್ತದೆ. ಅದೇ ದೃಶ್ಯ ಮುಂದಿನ ಪುಟದಲ್ಲಿ ಬಸವರಾಜದೇವರ ಮನೆಯಾಗುತ್ತದೆ. ೩ನೆಯ ಅಂಕದ ೩ನೆಯ ದೃಶ್ಯ (ಪುಟ ೪೮ರಲ್ಲಿ) ಶ್ರೀಶೈಲಮಾರ್ಗ, (ಪುಟ ೫೧) ಶ್ರೀಶೈಲದ ಬೆಟ್ಟದೆದುರು (ಪುಟ ೫೩) —ಶ್ರೀಶೈಲದ ತೀರಸನಿಯ ಅಕ್ಕ ಬೆಟ್ಟವನ್ನೇರತೊಡಗುವಳು.

ನಾಟಕದ ಶೈಲಿಯನ್ನು ಗ್ರಂಥಕರ್ತರು 'ಪ್ರೌಢ ವಚನ ಶೈಲಿ'ಯೆಂದು ಕರೆದು "ಅವಳ (ಮಹಾದೇವಿಯ) ವಾಙ್ಮಯದಿಂದ ಹೇಗೆ ನನ್ನ ವಾಣಿ ಕುಣಿದಿದೆ ಎಂಬುದನ್ನೂ ನಿಚ್ಚಳವಾಗಿ ಕಾಣಬಲ್ಲರು" ಎಂದು ಹೇಳಿದ್ದಾರೆ. ಗ್ರಂಥಕರ್ತರ ಶೈಲಿಗೆ ಈ ಕೆಲವು ಉದಾಹರಣೆಗಳು ಸಾಕು. "ಚಿಕ್ಕಿಯಂತೆ ಹೊಳೆದು ಚಕ್ಕನೆ ಹೋದಳು". "ಇಂದಿನೋಲಗಕೆ ಇಂದುಕಳೆ ಬಂದಿತವಳಿಂದ". "ಎಮ್ಮರಸ ನಿಜದೇವ, ಈತನಿರೆ ದೇವನೆಲ್ಲಿ? ಎಂದುಸಿರಲು, ಆಕೆ ದಿಗ್ಗೆಂದು ನೆಲಬುಗ್ಗೆ ಯಾಗೆದ್ದು ಗಾಳಿಗಾಲುಗಳಿಂದ ನಡೆದು, ಬಿಗಿದ ಮೊಗದೊಡವಿನಲಿ ನಗೆಯು ಮುಗುಳೊಂದು ಬೆರೆಯೆ 'ದೇವನೆ ಎಲ್ಲರರಸು, ಈ ಅರಸನಿಹ ದೇವನೆಲ್ಲಿ' ಎಂದು ಮುಂತಾಗಿ ಹತ್ತು ನಿಮಿಷದ ಹೊಡೆಮಳೆಯ ಮುತ್ತುಗಳಂತೆ ಮಾತುಗುಳಿ ಸಭೆಯಿಂದ ಮಾಟವಾದಳು". "ದಿನ ದಿನಕು ಮಿಗಿಲು ಕಂಪೊಂದಿ ನಿನಗಾಗಿ ಮಲ್ಲಿಗೆಯ ಗೋಡೆಗಳ ಸಂಪಗೆಯ ಗೋಪುರದ ಮನೆನಿಲಿಸಿ ಜಗಮರೆತು ಇರಲಿಹವು ಇಲ್ಲಿ ಈ ಹೂಗಡಣ". ವಚನಶಾಸ್ತ್ರದ ಶೈಲಿ, ಸರಳರಗಳೆಯ ಶೈಲಿ, ಗದ್ಯಶೈಲಿಗಳ ಕಲಸುಮೇಲೋಗರವು ಇಲ್ಲಿ ಕಂಡುಬರುತ್ತದೆ. ಗ್ರಂಥಕರ್ತರ ಪ್ರಾಸಪ್ರಿಯತೆಯೂ, ಮಾತಿನ ಆಡಂಬರವೂ (Stilted Style) ಬೇಸರಿಕೆಯನ್ನುಂಟುಮಾಡುತ್ತವೆ.

ಗ್ರಂಥದ ಮುದ್ರಣ, ಹೊರ ಹೊದಿಕೆಯ ಮೇಲಣ ಚಿತ್ರದ ಮುದ್ರಣಗಳು ಬಹು ರಮ್ಯವಾಗಿವೆ. ಹೊದಿಕೆಯ ಮೇಲಣ ಚಿತ್ರದಲ್ಲಿ ಅಕ್ಕಮಹಾದೇವಿಯ ದೇಹಾಂಗಗಳ ಪ್ರಮಾಣಕ್ಕೆ ಚಿತ್ರಶಿಲ್ಪಿಯು ಲಕ್ಷ್ಯಕೊಟ್ಟಹಾಗೆ ಕಾಣುವುದಿಲ್ಲ. ಮುಖದ ಭಾವ ಗಂಭೀರವಾಗಿದೆ. ಶಾಂತಿ, ತೃಪ್ತಿಗಳು ಚೆನ್ನಾಗಿ ಮೂಡಿವೆ. ಅಕ್ಕನ ಮುಖದಲ್ಲಿ ಮೂಡಿರುವ ಎಳೆನಗೆಯ ಬೆಳದಿಂಗಳು ಚಿತ್ತಾಕರ್ಷಕವಾಗಿದೆ.

ಶ್ರೀ|| ಮುಗಳಿಯವರ ಆಸೆ ದೊಡ್ಡದು, ಬಯಕೆ ಹಿರಿದು. ಮಹಾದೇವಿಯಕ್ಕನ ಉಜ್ವಲ ಜೀವನವು ಓದುಗರ ಮನದಮೇಲೆ ಅಚ್ಚಳಿಯದಂತೆ ಮೂಡಬೇಕೆಂಬ ಆಸೆಯಿಂದಲೇ ಈ ನಾಟಕ ನಿರ್ಮಾಣಕ್ಕೆ ಕೈಹಾಕಿದ್ದಾರೆ. ಅಕ್ಕಮಹಾದೇವಿಯ ಬಗ್ಗೆ ತಮಗಿರುವ ಅನನ್ಯ ಭಕ್ತಿಯ ಪ್ರತೀಕವಾಗಿರಲೆಂದು ಈ ಕೃತಿಯನ್ನು ಸೃಜಿಸಿದ್ದಾರೆ. ಆದರೆ ಅವರ ಇಷ್ಟಾರ್ಥ ಸಿದ್ಧಿಸಿಲ್ಲವೆಂದು ಬಹಳ ವಿಷಾದದಿಂದ ಹೇಳಬೇಕಾಗಿದೆ.

ಅ. ನ. ಕೃಷ್ಣರಾಯ

# ಸಂಪಾದಕೀಯ ಟಿಪ್ಪಣಿಗಳು

ಪರಿಷತ್ಪತ್ರಿಕೆಯ ಹಿಂದಿನ ಸಂಚಿಕೆಯಲ್ಲಿ (ಪುಟ ೧೫೦) 'ಕರ್ನಾಟಕ' ಎಂಬ ರೂಪದ ಪ್ರಯೋಗವನ್ನು ಕುರಿತು ಪ್ರಸ್ತಾಪಿಸಿರುವುದು ಸರಿಯಷ್ಟೆ. ಈ ವಿಷಯವಾಗಿ ಮಹಾಜನರಲ್ಲಿ ಭಿನ್ನಾಭಿಪ್ರಾಯಗಳಿರ ಬಹುದೆಂಬ ಅಂಶವು ನಮ್ಮ ಗಮನಕ್ಕೆ ಬಂದಿರುವ ಪ್ರಯುಕ್ತ ವಿಮರ್ಶಾತ್ಮಕದೃಷ್ಟಿಯಿಂದ ಪರಿಶೋಧನೆ ನಡಸಿರುವ ಮಹನೀಯರ ಅಭಿಪ್ರಾಯಗಳಿಗೆ ಈ ಪತ್ರಿಕೆ ಯಲ್ಲಿ ಅವಕಾಶ ಕೊಡುವುದು ಯುಕ್ತವೆಂದು ಭಾವಿಸು ತ್ತೇವೆ.

**'ಕರ್ನಾಟಕ' ಎಂಬ ರೂಪವು ಸಾಧುವೇ ಅಲ್ಲವೇ?**

ಈ ಉದ್ದೇಶಕ್ಕನುಸಾರವಾಗಿ ನಮ್ಮ ವಾಚಕರಿಗೆ ಚಿರಪರಿಚಿತರಾದ ಮೈಸೂರಿನ ಶ್ರೀಮಾನ್ ಟಿ. ಎನ್. ಶ್ರೀಕಂಠಯ್ಯನವರೂ, ಬೆಂಗಳೂರಿನ ಶ್ರೀಮಾನ್ ಜಿ. ಪಿ. ರಾಜರತ್ನಂ ಅವರೂ ಸಪ್ರಮಾಣವಾದ ಎರಡು ಲೇಖನ ಗಳನ್ನು ದಯಪಾಲಿಸಿರುತ್ತಾರೆ. ಅವುಗಳನ್ನು ಆದರಪೂರ್ವಕವಾಗಿ ಸ್ವೀಕರಿಸಿ, ಈ ಸಂಚಿಕೆಯಲ್ಲಿ ಪ್ರಕಟಿಸಿರುತ್ತೇವೆ. ಇದರಂತೆಯೇ ಮೈಸೂರು ಸಂಸ್ಥಾನದ ಮತ್ತು ಉತ್ತರ ಕರ್ನಾಟಕದ ಇತರ ಪ್ರಸಿದ್ಧ ಸಾಹಿತಿಗಳೂ, ಪಂಡಿತ ಮಂಡಲಿ ಗಳವರೂ ಇದೇ ವಿಚಾರವನ್ನು ಕುರಿತು ಸಪ್ರಮಾಣವಾದ ಪ್ರೌಢ ಲೇಖನಗಳನ್ನು ದಯಪಾಲಿಸುವುದಾದರೆ ಸಹಜವಾದ ಸಂತೋಷದಿಂದ ಮುಂದಿನ ಸಂಚಿಕೆಗಳಲ್ಲಿ ಪ್ರಕಟಿಸಲು ಉತ್ಸಾಹವುಳ್ಳವರಾಗಿರುತ್ತೇವೆ. ಲೇಖನಗಳು ಆದಷ್ಟು ಸಂಕ್ಷೇಪ ವಾಗಿರಬೇಕು; ಪ್ರಮಾಣಗಳ ಪ್ರತಿಪಾದನೆಯಿಂದ ಸರ್ವಸಮಂಜಸವಾಗಿರಬೇಕು. ವ್ಯಕ್ತಿಖಂಡನೆ ಮುಂತಾದ ಅಪ್ರಕೃತ ವಿಷಯ ಇರಬಾರದು. ಈ ರೀತಿಯ ಲೇಖನಗಳನ್ನು ಕನ್ನಡದ ಅಭಿಮಾನಿಗಳಾದ ಮಹನೀಯರುಗಳು ಪ್ರಕಟನೆಗಾಗಿ ದಯಪಾಲಿಸಿ ಉಪಕಾರಮಾಡುವವರಾದಾರೆಂದು ನಿರೀಕ್ಷಿಸುತ್ತೇವೆ.

ಹಲವು ವರ್ಷಗಳಿಂದೀಚೆಗೆ ದೇಶಭಾಷೆಗಳಲ್ಲಿ ಹೊರಬೀಳುತ್ತಿರುವ ಕಾವ್ಯ ಗಳಲ್ಲಿ ಹೊಸತೆರನಾದ ಒಂದು ಹುರುಪು, ಹೊಸತೆರನಾದ ಒಂದು ಶೈಲಿ, ಹೊಸತೆರನಾದ ಒಂದು ಭಾವವಿಕಾಸ ಮುಂತಾದುವು ತೋರಬರುತ್ತಿರುವುವೆಂಬುದು ಎಲ್ಲರ ಅನುಭವದ ಮಾತಾಗಿದೆ. ಬಹುಕಾಲದಿಂದ ರೂಢಿಗೆ ಬಂದಿದ್ದ ಪ್ರಾಚೀನ ಪದ್ಧತಿಗಳನ್ನು ಮೂಲೆಗೊತ್ತಿ, ಆಧುನಿಕ ಕವಿತೆಗಳಲ್ಲಿ ಒಂದು ನವೀನತೆಯನ್ನು ಕಲ್ಪಿಸುವ ಪ್ರಯತ್ನ ಗಳನ್ನು ನಡೆಯಿಸುತ್ತಿರುವುದು ಅಕ್ಷಮ್ಯವಾದ ಅಪರಾಧ ವೆಂದು ಸಂಪ್ರದಾಯ ಶರಣರಾದ ಅನೇಕ ಮಂದಿ ಮಹನೀಯರು ಅಭಿಪ್ರಾಯಪಟ್ಟಿರುವುದೂ ಉಂಟು. ಇದಕ್ಕೆ ಪ್ರತಿಯಾಗಿ ಆಧುನಿಕ

**ದೇಶಭಾಷೆಗಳೂ, ಸಂಸ್ಕೃತದ ಅನುಸರಣೆಯೂ: ಪೂಜ್ಯ ರವೀಂದ್ರನಾಥ ಠಾಕೂರರ ಅಭಿಪ್ರಾಯ**

ಕವಿತೆಯ ನವೀನತೆ, ವೈವಿಧ್ಯ, ಪ್ರಕೃತಿಸಾಮರಸ್ಯ ಮುಂತಾದ ಉತ್ಕೃಷ್ಟಾಂಶಗಳನ್ನು ಹೃತ್ಪೂರ್ವಕವಾಗಿ ಮೆಚ್ಚಿಕೊಂಡು ಪ್ರತಿಯೊಂದು ದೇಶಭಾಷೆಯೂ ಯಾವುದೊಂದು ಪ್ರಾಚೀನ ಭಾಷೆಗೂ ಅಡಿಯಾಳಾಗಿ ನಿಲ್ಲದೆ ತನ್ನ ವೈಶಿಷ್ಟ್ಯವನ್ನು ತಾನು ಉಳಿಸಿಕೊಳ್ಳುವ ಪ್ರಯತ್ನಮಾಡುವುದು ಪ್ರತಿಯೊಬ್ಬ ಸಾಹಿತ್ಯಾಭಿಮಾನಿಯ ಕರ್ತವ್ಯವಾಗಿರುವುದೆಂದು ಪ್ರತಿಪಾದಿಸುತ್ತಿರುವವರೂ ಉಂಟು.

ಇಂತಹ ಸಂದಿಗ್ಧ ಸನ್ನಿವೇಶದಲ್ಲಿ, ಅನುಸರಣೀಯವಾದ ಮಾರ್ಗ ಯಾವುದೆಂಬ ವಿಚಾರವಾಗಿ, ಇಡೀ ಪ್ರಪಂಚದಲ್ಲಿ ಕವಿಸಾರ್ವಭೌಮರೆಂದು ಪ್ರಖ್ಯಾತರಾಗಿರುವ ಪೂಜ್ಯ ರವೀಂದ್ರನಾಥ ಠಾಕೂರರವರು ಯಾವ ಅಭಿಪ್ರಾಯವನ್ನಿಟ್ಟುಕೊಂಡಿರುವರೆಂಬುದನ್ನು ನಮ್ಮ ವಾಚಕರ ಅವಗಾಹನೆಗೆ ತರಲು ಅಪೇಕ್ಷಿಸುತ್ತೇವೆ. ಇವರು ಇದೇ ಆಗಸ್ಟ್ ತಿಂಗಳ ೬ನೆಯ ತಾರೀಖಿನ ದಿನ ಕಲ್ಕತ್ತಾ ನಗರದ ವಿಶ್ವಭಾರತಿ ವಿದ್ಯಾರ್ಥಿಗಳ ವಂಗೀಯ ಸಾಹಿತ್ಯ ಸಂಘದಲ್ಲಿ ಶ್ರೀಯುತ ಬಂಕಿಮಚಂದ್ರ ಚಟರ್ಜಿಯವರ ಜನ್ಮಶತಮಾನೋತ್ಸವದ ಅಧ್ಯಕ್ಷತೆಯನ್ನು ವಹಿಸಿದ್ದ ಕಾಲದಲ್ಲಿ ಅಪ್ಪಣೆಕೊಡಿಸಿದ ಭಾಷಣದ ಒಂದು ಭಾಗವನ್ನು ಈ ಕೆಳಗೆ ಕೊಟ್ಟಿರುತ್ತೇವೆ:—

"ನೀವುಗಳು ಬಂಕಿಮಚಂದ್ರರ ಯೋಗ್ಯತೆಯನ್ನು ಬಹು ಹಿಂದಿನ ಕಾಲದ ದೃಷ್ಟಿಯಿಂದ ವಿಮರ್ಶಿಸುತ್ತಿರುವ ಪ್ರಯುಕ್ತ ನಿಮ್ಮ ತುಲನೆಯಿಂದ ವಸ್ತುಸ್ಥಿತಿಯನ್ನು ಯಥಾರ್ಥವಾಗಿ ಚಿತ್ರಿಸಲು ಆಗಲಾರದು. ಅವರ ಸಮಕಾಲೀನರಾದ ನಮಗಾದರೋ ಅವರು ಜನತೆಯಮೇಲೆ ಸರ್ವಾನುಸರಣೀಯವಾದ ಪ್ರಭಾವವನ್ನು ಬೀರುವ ಆದರ್ಶ ಪುರುಷರಾಗಿದ್ದರು. ಅವರು ತಮ್ಮ ಜೀವನಪಥವನ್ನು ಯಾವ ರೀತಿ ಅತ್ಯಂತ ಉದಾತ್ತ ರೀತಿಯಲ್ಲಿ ಅನುಸರಿಸುತ್ತಿದ್ದರೋ ಸಾಹಿತ್ಯವನ್ನೂ ಸಹ ಅದೇ ರೀತಿ ಉದಾತ್ತರೀತಿಯಲ್ಲಿ ಅನುಸರಿಸುತ್ತಿದ್ದರು. ಅವರು ಎಷ್ಟೋ ವಿಧಗಳಲ್ಲಿ ಅಗ್ರಗಾಮಿಗಳೂ, ಮಾರ್ಗದರ್ಶಕರೂ ಆಗಿದ್ದರು. ದೇಶಭಾಷಾ ಸಾಹಿತ್ಯಕ್ಕೆ ಸಂಸ್ಕೃತದ ಅನುಸರಣೆ ಇದ್ದಲ್ಲದೆ ನಿರ್ವಾಹವೇ ಇಲ್ಲವೆಂಬ ಅನುಲ್ಲಂಘನೀಯವಾದ ಸಂಪ್ರದಾಯದ ಸಂಕೋಲೆಯನ್ನು ಕಿತ್ತೊಗೆದು, ವಂಗೀಯ ಸಾಹಿತ್ಯದಲ್ಲಿ ನವೀನವಾದೊಂದು ಭಾಷಾಶೈಲಿಯನ್ನೇ ಪ್ರಚಾರಕ್ಕೆ ತಂದರು. ಅಲ್ಲದೆ ಪಾಶ್ಚಿಮಾತ್ಯ ಸಂಸ್ಕೃತಿಯನ್ನೂ, ಅಲ್ಲಿಯ ಸಾಹಿತ್ಯದ ವೈದುಷ್ಯವನ್ನೂ ವಂಗೀಯ ಸಾಹಿತ್ಯದಲ್ಲಿ ಬೆರೆಯಿಸಿ, ನವೀನವಾದೊಂದು ಕಳೆ ಕಟ್ಟುವಂತೆ ಮಾಡಿದರು. ಈ ರೀತಿ ಅನೂಚಾನವಾಗಿ ರೂಢಿಯಲ್ಲಿದ್ದ ಸಂಪ್ರದಾಯವನ್ನು ನಿರಾಕರಿಸಿ ಹೊಸದೊಂದು ದಾರಿಯನ್ನು ಅನುಸರಿಸಿ ಮೊದಲಿಗರೆನಿಸಿಕೊಳ್ಳುವುದು ಸಾಮಾನ್ಯವಾದ ವಿಷಯವಲ್ಲ. ಇದಕ್ಕಾಗಿ ಅವರನ್ನು ಎಷ್ಟು ಶ್ಲಾಘಿಸಿದರೂ ಕಡಮೆಯೇ ಆಗಿರುವುದೆಂದು ಹೇಳಬೇಕು. ಇವರು ಪ್ರಚಾರಕ್ಕೆ ತಂದ 'ವಂಗದರ್ಶನ'ವೆಂಬ ಸಾಹಿತ್ಯಪತ್ರಿಕೆಯಾದರೋ ಆ ಕಾಲದ ಜನರನ್ನು ಮುಗ್ಧರನ್ನಾಗಿ ಮಾಡಿಬಿಟ್ಟಿತು. ಇದರಿಂದ ಆಗಿನ ಜನರಲ್ಲಿ ಮೂಡಿದ ಪರಿಣಾಮವು ಅಭೂತಪೂರ್ವವಾಗಿದ್ದುದಲ್ಲದೆ ಅಂತಹ ಪರಿಣಾಮವು ಇಂದಿನವರೆಗೆ ಬೇರೆ ಯಾವುದರಿಂದಲೂ ಆಗಿಲ್ಲವೆಂದು ಧಾರಾಳವಾಗಿ ಹೇಳಬಹುದು."

**ದೇಶಭಾಷೆಗಳಲ್ಲಿ ಪ್ರಚಾರ ಕಾರ್ಯ— ಮೈಸೂರು ದಿವಾನ್‌ರವರ ಭಾಷಣ: ಮದರಾಸ್ ವಿಶ್ವವಿದ್ಯಾನಿಲಯದಲ್ಲಿ**

ಕಳೆದ ವರ್ಷದ ಪರಿಷತ್ಪತ್ರಿಕೆಯ ಸಂಚಿಕೆಯೊಂದರಲ್ಲಿ ೨೯-೧೦-೧೯೩೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ನಡೆದ ಪಟ್ಟಪ್ರದಾನೋತ್ಸವ ಸಮಾರಂಭದಲ್ಲಿ ಮಾತೃಭಾಷೆಯಿಂದ ಜ್ಞಾನಪ್ರಸಾರಣೆ ಮಾಡುವುದರ ಆವಶ್ಯಕತೆಯನ್ನು ಕುರಿತು ಶ್ರೀಮಾನ್ ಟಿ. ಆರ್. ವೆಂಕಟರಾಮಾಶಾಸ್ತ್ರಿಗಳು ಮಾಡಿದ ಭಾಷಣವನ್ನೂ, ಇದೇ ವಿಚಾರವಾಗಿ ಶ್ರೀಮಾನ್ ಎನ್. ಎಸ್. ಸುಬ್ಬರಾಯರು ೩೦-೯-೧೯೩೭ರಲ್ಲಿ ಅಣ್ಣಾಮಲೇ ನಗರದ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಆ ನಿಲಯದ ಸ್ಥಾಪಕರ ಸ್ಮಾರಕೋತ್ಸವದಲ್ಲಿ ಮಾಡಿದ ಭಾಷಣವನ್ನೂ ಕುರಿತು ಪ್ರಸ್ತಾವಿಸಿರುವುದು ಸರಿಯಷ್ಟೆ.* ಇದೇ ವಿಷಯವನ್ನು ಪುಷ್ಟೀಕರಿಸಿ ಮೈಸೂರು ಸಂಸ್ಥಾನದ ದಿವಾನ್‌ರವರಾದ ಸರ್ ಮಿರ್ಜಾ ಇಸ್ಮಾಯಿಲ್‌ರವರು ೫-೮-೧೯೩೮ರಲ್ಲಿ ನಡೆದ ಮದರಾಸ್ ವಿಶ್ವವಿದ್ಯಾನಿಲಯದ ಪದವೀದಾನ ಸಮಾರಂಭದಲ್ಲಿ ಅಮೋಘವಾದ ಭಾಷಣಮಾಡಿರುತ್ತಾರೆ. ಆ ಭಾಷಣದ ಸಾರಾಂಶವನ್ನು ನಮ್ಮ ವಾಚಕರ ಅವಗಾಹನೆಗಾಗಿ ಈ ಕೆಳಗೆ ಕೊಟ್ಟಿರುತ್ತೇವೆ:—

## ದೇಶಭಾಷೆಗಳ ಪ್ರಾಧಾನ್ಯ

"ಪ್ರಚಾರೋಪನ್ಯಾಸಗಳೂ ಪ್ರಕಟನವೂ ವಿಶ್ವವಿದ್ಯಾನಿಲಯಗಳ ಆಡಳಿತಕ್ಕೆ ಸೇರಿದ ಆಯಾ ಪ್ರದೇಶಗಳಲ್ಲಿರುವ ಜನಗಳ ತಾಯಿನುಡಿಯಲ್ಲಿ ನಡೆಯಬೇಕು. ಆದರೆ ಈಗ ವಿಶ್ವವಿದ್ಯಾನಿಲಯಗಳ ವ್ಯವಹಾರವೆಲ್ಲ ಇಂಗ್ಲಿಷ್ ಭಾಷೆಯಲ್ಲಿ ನಡೆಯುತ್ತಾ ಇದೆ. ಮುಂದೆ ಅನೇಕ ವರ್ಷಗಳವರೆಗಂತೂ, ಅದು ಇಂಗ್ಲಿಷ್ ಭಾಷೆಯಲ್ಲಿ ನಡೆಯುವುದೇ ಆಚರಣೆಯಲ್ಲಿರಬೇಕಾಗಿದೆ. ಓದುಬರೆಹಗಳನ್ನರಿತ ನಮ್ಮ ದೇಶಬಾಂಧವರಲ್ಲಿ ಇಂಗ್ಲಿಷ್ ಭಾಷೆಯನ್ನರಿತವರ ಸಂಖ್ಯೆ ಇನ್ನೂ ಅನೇಕ ವರ್ಷಗಳವರೆಗೂ ತೀರ ಸ್ವಲ್ಪವಾಗಿಯೇ ಇರುವುದರಿಂದ ವಿಶ್ವವಿದ್ಯಾನಿಲಯಗಳವರು ದೇಶಭಾಷೆಗಳಲ್ಲಿ ಉಪನ್ಯಾಸಗಳನ್ನು ಏರ್ಪಡಿಸಿ, ಅವುಗಳನ್ನು ದೇಶಭಾಷೆಗಳಲ್ಲಿ ಅಚ್ಚುಹಾಕಿಸಬೇಕಾದುದು ಮತ್ತಷ್ಟು ಆವಶ್ಯಕ. ಹೀಗೆ ಮಾಡಿದರೆ, ದೇಶಭಾಷೆಗಳಲ್ಲಿ ಜ್ಞಾನಭಂಡಾರವನ್ನು ವೃದ್ಧಿಗೊಳಿಸುವ ಗ್ರಂಥಗಳ ಪಟ್ಟಿ ಒಂದೇಸಮನಾಗಿ ಬೆಳೆದು ಈಗಿನ ವಿಜ್ಞಾನ ಮುಂತಾದ ವಿಚಾರಗಳ ತಿಳಿವಳಿಕೆಯನ್ನು ಜನರ ಅವಗಾಹನೆಗೆ ತರುವ ಗ್ರಂಥಗಳು ಆ ಭಾಷೆಗಳಲ್ಲಿ ಬಹಳ ಕಡಮೆಯಾಗಿರುವ ಕೊರತೆ ಪರಿಹಾರವಾಗಲು ಸಹಾಯವಾಗುತ್ತದೆ. ಅಷ್ಟೇ ಅಲ್ಲ, ದೇಶಭಾಷೆಗಳಲ್ಲಿ ಹೀಗೆ ಗ್ರಂಥರಾಶಿ ಬೆಳೆಯುವುದರಿಂದ ಆ ಭಾಷೆಗಳಲ್ಲಿ ಯಾವ ಭಾವವನ್ನು ಬೇಕಾದರೂ ಸ್ವಲ್ಪವೂ ಊನವಾಗದಂತೆ ಸರಿಯಾಗಿ ವಿವರಿಸುವ ನುಡಿಪಡಿಯೂ ಹೆಚ್ಚಿ ಪದಸಮುದಾಯವು ನಮ್ಮ ಪೂರ್ವಿಕರು ವಿಸ್ಮಯಹೊಂದಬಹುದಾಗಿದ್ದ ಮಟ್ಟಿಗೆ ವೃದ್ಧಿಯಾಗುತ್ತದೆ."

ಮೇಲಿನ ಭಾಷಣದಲ್ಲಿ ಸೂಚಿತವಾಗಿರುವ ಸಲಹೆಗಳನ್ನು ಈಗಾಗಲೇ ಮೈಸೂರು ಸಂಸ್ಥಾನದಲ್ಲಿ ಕಾರ್ಯರೂಪಕ್ಕೆ ತರುತ್ತಿರುವುದಾಗಿದೆ ಎಂಬಂಶವನ್ನು ಈ ಸಂದರ್ಭದಲ್ಲಿ ನಾವು ಸೂಚಿಸಬಹುದು. ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ವಿಜ್ಞಾನವೇ ಮುಂತಾದ ವಿಷಯಗಳಿಗೆ ಸಂಬಂಧಪಟ್ಟ ಉಪನ್ಯಾಸಗಳು

* ಸಂಪುಟ ೨೨, ಸಂಚಿಕೆ ೧-೨, ಪುಟ ೧೨೪-೫.

ಗ್ರಾಮಾಂತರಗಳಲ್ಲಿಯೂ, ಮುಖ್ಯನಗರಗಳಲ್ಲಿಯೂ ಆಗಿಂದಾಗ ನಡೆಯುತ್ತಿವೆ. ನಮ್ಮ ಪರಿಷನ್ಮಂದಿರದಲ್ಲಿಯೂ ಕೂಡ ವಿಜ್ಞಾನವಿಷಯಕವಾದ ಉಪನ್ಯಾಸಗಳು ಕನ್ನಡದಲ್ಲಿ ನಡೆಯುವಂತೆ ಏರ್ಪಾಡು ಮಾಡಿರುವುದಲ್ಲದೆ, ಅಂತಹ ಉಪನ್ಯಾಸಗಳ ಪ್ರಯೋಜನವು ಹಳ್ಳಿಯ ಉಪಾಧ್ಯಾಯರಿಗೂ, ಅವರ ಮೂಲಕ ಗ್ರಾಮಾಂತರದ ಸಾಮಾನ್ಯಜನರಿಗೂ ಲಭಿಸುವ ಏರ್ಪಾಡನ್ನು ಸಹ ಮಾಡಲಾಗಿದೆ. ಅಲ್ಲದೆ ವಿಶ್ವವಿದ್ಯಾನಿಲಯದ ಗ್ರಂಥ ಪ್ರಕಟನ ಶಾಖೆಯ ಮೂಲಕ ವಿಜ್ಞಾನಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಪ್ರಕಟಪಡಿಸುವ ಕಾರ್ಯವನ್ನು ಕೈಗೊಳ್ಳಲಾಗಿದೆ. ಈ ಏರ್ಪಾಡುಗಳೆಲ್ಲವೂ ಇನ್ನೂ ಹೆಚ್ಚಿಗೆ ನಡೆದು ಜನಸಾಮಾನ್ಯದಲ್ಲಿ ಜ್ಞಾನಪ್ರಸಾರಣೆ ಹೆಚ್ಚುತ್ತಾ ಬರಲು ಸಾಧಕವಾಗಲೆಂದು ಹಾರೈಸುತ್ತೇವೆ.

**ದ್ರಾವಿಡ ಸಂಸ್ಕೃತಿಯ ಕಾಲನಿರ್ಣಯ : ೧೪ ಸಾವಿರ ವರ್ಷಗಳ ಹಿಂದೆ**

ದ್ರಾವಿಡ ಸಂಸ್ಕೃತಿ ಅಷ್ಟೇನೂ ಪುರಾತನವಾದದ್ದಲ್ಲವೆಂದು ಮೊನ್ನೆ ಮೊನ್ನೆಯವರೆಗೂ ನಂಬಿಕೆ ಇತ್ತು. ಆದರೆ ಇತ್ತೀಚೆಗೆ ಸಿಂಧೂ ನದಿಯ ಪ್ರದೇಶದಲ್ಲಿ ಪ್ರಾಚ್ಯಲಿಪ್ಯನ್ವೇಷಣಕ್ಕೆ ಸಂಬಂಧಪಟ್ಟ ಸಂಶೋಧನೆಗಳು ನಡೆದು ಮೊಹೆನ್‌ಜೊದಾರೋ ಮತ್ತು ಹರಪ್ಪ ಎಂಬ ಪ್ರಾಚೀನ ನಗರಗಳ ಭಗ್ನಾವಶೇಷಗಳು ಬೆಳಕಿಗೆ ಬರಲಾಗಿ, ಈ ಸಂಸ್ಕೃತಿ ಕನಿಷ್ಠಪಕ್ಷ ೫ ಸಾವಿರ ವರ್ಷಗಳ ಹಿಂದಿನಿಂದ ಇತ್ತೆಂಬುದು ನಿರ್ಧರವಾಯಿತು. ಈ ಗಣನೆಯೂ ಕೂಡ ಬಹಳ ಕಡಮೆಯಾದುದೆಂತಲೂ, ೧೪ ಸಾವಿರ ವರ್ಷಗಳ ಹಿಂದಿನಿಂದ ಈ ಸಂಸ್ಕೃತಿ ಇತ್ತೆನ್ನುವುದು ತಮ್ಮ ಸಂಶೋಧನೆಗಳಿಂದ ಸ್ಥಿರಪಟ್ಟಿರುವುದೆಂತಲೂ ಕೋರ್ಟಾಲಂ ಆನಂದ ಮಿಷನ್ನಿನ ಸ್ಥಾಪಕರಾದ ಸ್ವಾಮಿ ನಿತ್ಯಾನಂದರೆಂಬವರು ಮದರಾಸಿನಲ್ಲಿ ಕಳೆದ ಜೂಲೈ ತಿಂಗಳಿನಲ್ಲಿ ಕೊಟ್ಟ ಉಪನ್ಯಾಸಗಳಲ್ಲಿ ಪ್ರತಿಪಾದಿಸಿರುತ್ತಾರೆ. ಅಲ್ಲದೆ ಈ ಸಂಸ್ಕೃತಿ ೧೪ ಸಾವಿರ ವರ್ಷಗಳ ಹಿಂದೆ ಪೂರ್ವಾರ್ಧಗೋಳಕ್ಕೆಲ್ಲಾ ವ್ಯಾಪಿಸಿದ್ದು ಪರಿಣಾಮವನ್ನುಂಟುಮಾಡಿತ್ತೆಂದೂ, ಆಗ ಆ ಗೋಳದ ಭೂಗರ್ಭಸ್ಥಿತಿ ಈಗಿರುವುದಕ್ಕೆ ವ್ಯತ್ಯಾಸವಾಗಿತ್ತೆಂದೂ ಹೇಳಿರುತ್ತಾರೆ. ಇದಕ್ಕೆಲ್ಲಾ ತಕ್ಕ ಆಧಾರಗಳನ್ನು ಅವರು ಕಳೆದ ೨೦ ವರ್ಷಗಳಿಂದ ಶೇಖರಿಸಿರುವರಂತೆ. ಆದರೂ ಇವರು ಪ್ರಪಂಚವನ್ನೆಲ್ಲಾ ಸುತ್ತಿ ಹೆಚ್ಚಿನ ವಿಷಯಗಳನ್ನು ತಿಳಿದುಕೊಳ್ಳುವ ಕುತೂಹಲವುಳ್ಳವರಾಗಿರುತ್ತಾರೆ. ಈಗಾಗಲೇ ಮೂರು ತಿಂಗಳ ಕಾಲ ಹಿಂದೂಸ್ತಾನದ ಅನೇಕ ಪ್ರಾಂತಗಳಲ್ಲಿ ಸಂಚಾರ ಮಾಡಿ, ಆಯಾ ಪ್ರಾಂತಗಳಲ್ಲಿ ಪ್ರಚಾರದಲ್ಲಿರುವ ಭಾಷೆಗಳನ್ನು ಅಭ್ಯಾಸಮಾಡಿ, ಅಲ್ಲಲ್ಲಿ ದೊರೆಯುವ ಶಾಸನಗಳ ಪ್ರಾಚೀನ ಲಿಪಿಗಳಿಂದ ತಮ್ಮ ಸಂಶೋಧನೆಗಳು ಎಷ್ಟರಮಟ್ಟಿಗೆ ಸ್ಥಿರಪಡಬಹುದೆಂಬುದನ್ನು ಪರಿಶೋಧನೆ ಮಾಡುತ್ತಿರುತ್ತಾರೆ. "ಸಂಶೋಧನಾಯುಗ"ವೆಂದು ಕರೆಯಬಹುದಾದ ಈ ಆಧುನಿಕ ಕಾಲದಲ್ಲಿ ಆಗಿಂದಾಗ ಹೊರಪಡುವ ಅಂಶಗಳಿಂದ ಜನರ ನಂಬಿಕೆಗಳು ಎಷ್ಟೋ ಮಟ್ಟಿಗೆ ಬದಲಾಗುತ್ತಾ ಬರಬೇಕಾಗುವುದಲ್ಲವೆ !

7

ಪ್ರಪಂಚದ ನಾನಾ ಭಾಗಗಳಲ್ಲಿರುವ ಬೇರೆ ಬೇರೆ ಭಾಷೆಗಳಿಗೆ ಸಂಬಂಧಪಟ್ಟ ಕವಿಗಳು, ನಾಟಕಕಾರರು, ಪತ್ರಿಕಾ ಸಂಪಾದಕರು, ಪ್ರಬಂಧ ಲೇಖಕರು,

‘ಪಿ. ಇ. ಎನ್.’ ಕಾಂಗ್ರೆಸ್ಸು ಮೈಸೂರಲ್ಲಿ ನಡೆಯುವುದು : ೧೯೩೫ರಲ್ಲಿ

ಕತೆಗಾರರು — ಮೊದಲಾದ ಸಾಹಿತ್ಯಪ್ರೇಮಿಗಳು ಸೇರಿ ಏರ್ಪಡಿಸಿಕೊಂಡಿರುವ ಸಂಘಕ್ಕೆ ‘ಪಿ. ಇ. ಎನ್.’ ಸಂಘ ವೆಂದು ಹೆಸರಿಟ್ಟುಕೊಂಡಿದ್ದಾರೆ. ಈ ರೀತಿ ಹೆಸರಿಟ್ಟಿರು ವುದು ಮೇಲ್ಕಂಡ ಸಾಹಿತಿಗಳಿಗೆ ಇಂಗ್ಲಿಷ್ ಭಾಷೆಯಲ್ಲಿ ಸೂಚಿಸುವ ಮಾತುಗಳ ಮೊದಲಕ್ಷರಗಳಿಂದ ಎನ್ನುವುದು ಈ ಕೆಳಗಿನ ವಿವರಣೆಯಿಂದ ವಿಶದವಾಗುವುದು:

## P. E. N.

### A World Association of

**P**OETS **P**LAYWRIGHTS **E**DITORS **E**SSAYISTS **N**OVELISTS

ಈ ಸಂಘದ ಶಾಖೆಗಳು ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ಇವೆ. ಇಂಡಿಯಾ ದೇಶದಲ್ಲಿ ಬೊಂಬಾಯಿಯಲ್ಲಿ ಒಂದು ಶಾಖೆ ಇದೆ. ಇದನ್ನು ಸ್ಥಾಪಿಸಿದವರು ಶ್ರೀಮತಿ ಸೋಫಿಯಾ ವಾಡಿಯಾ ಎಂಬ ಸಾಹಿತ್ಯಪ್ರೇಮಿಗಳಾದ ಪ್ರಸಿದ್ಧ ಪಾರಸಿ ಮಹಿಳೆಯರು. ಇವರು ‘ಇಂಡಿಯನ್ ಪಿ. ಇ. ಎನ್.’ ಎಂಬ ಸಾಹಿತ್ಯ ಪತ್ರಿಕೆಗೆ ಸಂಪಾದಕಿಯರಾಗಿದ್ದುಕೊಂಡು, ಇಂಡಿಯಾ ದೇಶದ ಸಮಸ್ತ ದೇಶಭಾಷೆಗಳ ಸಾಹಿತ್ಯವನ್ನೂ ಕುರಿತು ಉತ್ತೇಜಕವಾದ ಲೇಖನಗಳನ್ನು ಬರೆಯುತ್ತಿರುತ್ತಾರೆ. ನಮ್ಮ ಕನ್ನಡ ಸಾಹಿತ್ಯದ ವಿಚಾರವಾಗಿಯೂ ಸಹ ಎಷ್ಟೋಸಾರಿ ಪ್ರಶಂಸಾ ರೂಪವಾದ ಲೇಖನಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸುತ್ತಾ ಬಂದಿರುತ್ತಾರೆ.

ಇಂಡಿಯಾ ದೇಶದ ಈ ಸಂಘಕ್ಕೆ ಪೂಜ್ಯ ರವೀಂದ್ರನಾಥ ಠಾಕೂರರು ಅಧ್ಯಕ್ಷರು ; ಶ್ರೀ॥ ರಮಾನಂದ ಚಟರ್ಜಿಯವರೂ, ಶ್ರೀಮತಿ ಸರೋಜಿನಿ ನಾಯಿಡು ರವರೂ, ಸರ್ ಎಸ್. ರಾಧಾಕೃಷ್ಣನ್‌ರವರೂ ಉಪಾಧ್ಯಕ್ಷರುಗಳು; ಅಲ್ಲದೆ ಸುಮಾರು ಇನ್ನೂರು ಮಂದಿ ನಾನಾ ಭಾಷೆಗಳ ಪ್ರಸಿದ್ಧ ಸಾಹಿತಿಗಳು ಸದಸ್ಯರು. ಈ ಪೈಕಿ ಕರ್ನಾಟಕ ಪ್ರಾಂತಗಳಿಗೆ ಸೇರಿದವರು ಯಾರು ಯಾರೆಂದರೆ:

ಉತ್ತರ ಕರ್ನಾಟಕದಲ್ಲಿ.— ಪ್ರೊಫೆಸರ್ ವಿ. ಕೆ. ಗೋಕಾಕ್‌ರವರು, ಎಂ.ಎ.

ಮೈಸೂರಿನಲ್ಲಿ. — ಶ್ರೀ॥ಗಳಾದ ಎನ್. ಎಸ್. ಸುಬ್ಬರಾಯರು, ಎಂ.ಎ., ಎ. ಆರ್. ವಾಡಿಯಾರವರು, ಬಿ.ಎ., ಎಂ. ಎ. ವೆಂಕಟರಾಯರು, ಎಂ.ಎ.

ಬೆಂಗಳೂರಿನಲ್ಲಿ.— ಶ್ರೀ॥ಗಳಾದ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., ಡಿ. ವಿ. ಗುಂಡಪ್ಪನವರು, ರಾಜಚರಿತವಿಶಾರದ ರಾವ್ ಸಾಹೆಬ್ ಸಿ. ಹಯವದನರಾಯರು, ಬಿ.ಎ., ಬಿ.ಎಲ್., ಮಾಸ್ತಿ ವೆಂಕಟೇಶ ಐಯಂಗಾರ್ಯರು, ಎಂ.ಎ., ಸಿ. ಕೆ. ವೆಂಕಟರಾಮಯ್ಯ ನವರು, ಎಂ.ಎ., ಎಲ್‌ಎಲ್.ಬಿ., ವಿ. ಸೀತಾರಾಮಯ್ಯನವರು, ಎಂ.ಎ.

ಮೇಲ್ಕಂಡ ಸಂಘದ ಸದಸ್ಯರು ವರ್ಷಕ್ಕೊಂದುಸಾರಿ ಪ್ರಪಂಚದ ಯಾವು ದಾದರೊಂದು ಮುಖ್ಯನಗರದಲ್ಲಿ ವಾರ್ಷಿಕ ಸಮ್ಮೇಳನವನ್ನು ನಡಸುವ ವಾಡಿಕೆ ಇಟ್ಟುಕೊಂಡಿದ್ದಾರೆ. ಅದರಂತೆ ಈ ವರ್ಷದ ಸಮ್ಮೇಳನ ಕಳೆದ ಜೂನ್ ತಿಂಗಳಲ್ಲಿ

ಜೆಕೋಸ್ಲೋವೇಕಿಯಾದಲ್ಲಿರುವ ಪ್ರೇಗ್ ಪಟ್ಟಣದಲ್ಲಿ ತುಂಬಾ ಯಶಸ್ವಿಯಾಗಿ ನಡೆಯಿತು. ಸುಮಾರು ಇನ್ನೂರು ಮಂದಿ ಪ್ರತಿನಿಧಿಗಳೂ, ಸದಸ್ಯರೂ ಹಾಜರಿದ್ದರು. ಪಟ್ಟಣವಾಸಿಗಳೆಲ್ಲರೂ ಉತ್ಸವದಲ್ಲಿ ಭಾಗಿಗಳಾಗಿ ಹಬ್ಬವನ್ನಾಚರಿಸಿದರು. ಸರ್ಕಾರದ, ಪೌರಸಭೆಯ ಮತ್ತು ವಿದ್ಯಾಶಾಖೆಯ ಮುಖ್ಯಾಧಿಕಾರಿಗಳೂ ಸಹ ಸಭೆಯವರಿಗೆ ಸ್ವಾಗತವಿತ್ತರು. ನಾಟಕ ಪ್ರದರ್ಶನವೂ, ವಿವಿಧವಿನೋದಗಳೂ ನಡೆದುವು.

ಮುಂದಿನ ವರ್ಷದ ಸಮ್ಮೇಳನ ಸ್ವೀಡನ್‌ನಲ್ಲಿರುವ ಸ್ಟಾಕ್‌ಹೋಂ ನಗರದಲ್ಲಿ ನಡೆಯುವುದಾಗಿದೆ.

೧೯೪೦ನೆಯ ವರ್ಷದ ಸಮ್ಮೇಳನ ಮೈಸೂರು ಸಂಸ್ಥಾನದಲ್ಲಿ ನಡೆಯುವಂತೆ ನಿಷ್ಕರ್ಷೆಯಾಗಿರುವುದು ಸಂತೋಷದ ಸಂಗತಿಯೇ ಸರಿ. ಈ ರೀತಿಯ ನಿರ್ಧಾರಕ್ಕೆ ಮುಖ್ಯ ಕಾರಣರು ಶ್ರೀಮತಿ ಸೋಫಿಯಾ ವಾಡಿಯಾರವರೇ ಆಗಿರುತ್ತಾರೆ. ಇವರ ಪ್ರಯತ್ನ ಸಫಲಗೊಳ್ಳುವುದಕ್ಕೆ ಮೈಸೂರು ಶ್ರೀಮನ್ಮಹಾರಾಜರವರ ನಿಕಟವಾದ ಸಾಹಿತ್ಯಾಭಿಮಾನವೂ, ದಿವಾನ್ ಸರ್ ಮಿರ್ಜಾ ಇಸ್ಮಾಯಿಲ್‌ರವರ ಸರ್ವಸಮತಾದೃಷ್ಟಿಯೂ ಸಹಾಯಕವಾದುವೆಂಬುದರಲ್ಲಿ ಸಂದೇಹವಿಲ್ಲವೆನ್ನುವುದು ಸರ್ ಮಿರ್ಜಾರವರು ಈ ವಿಚಾರವಾಗಿ ಶ್ರೀಮತಿ ಸೋಫಿಯಾ ವಾಡಿಯಾರವರಿಗೆ ಬರೆದು ಕಳುಹಿಸಿದ ಆಹ್ವಾನಪತ್ರದಿಂದ ದೃಢಪಡುವುದು. ಅದು ಈ ರೀತಿ ಇದೆ:—

"The prospect of having amidst us such a distinguished body of writers from all the world over is one that should commend your proposal to our acceptance. I therefore hereby extend, on behalf of His Highness, a most cordial invitation to the members of the P. E. N. to hold their 1940 Congress in the Mysore State."

ಮೇಲ್ಕಂಡ ಸಮ್ಮೇಳನವು ೧೯೪೦ರಲ್ಲಿ ಯಾವ ತಿಂಗಳ ಯಾವ ತಾರೀಖಿನಲ್ಲಿ ನಡೆಯತಕ್ಕದ್ದೆಂಬುದು ಮುಂದೆ ಗೊತ್ತಾಗತಕ್ಕ ವಿಷಯ. ಯಾವಾಗಲಾದರೂ ನಡೆಯಲಿ— ತುಂಬಾ ಯಶಸ್ವಿಯಾಗಿ ನಡೆಯುವಂತೆ ಮೈಸೂರು ಸಂಸ್ಥಾನದ ಮತ್ತು ಕರ್ನಾಟಕದ ಇತರ ಪ್ರಾಂತಗಳ ಸಾಹಿತ್ಯಾಭಿಮಾನಿಗಳು ಸರ್ವ ಪ್ರಯತ್ನಗಳನ್ನೂ ಮಾಡುವವರಾಗಬೇಕೆಂದು ನಾವು ಪ್ರಾರ್ಥಿಸುತ್ತೇವೆ. ಈ ಸಂದರ್ಭದಲ್ಲಿ ನಮ್ಮ ಪರಿಷತ್ತಿನ ರಜತ ಮಹೋತ್ಸವವೂ ಸಹ ೧೯೪೦ರಲ್ಲಿಯೇ ನಡೆಯುವುದಾಗಿದೆ ಎಂಬಂಶವನ್ನು ನಮ್ಮ ವಾಚಕರಿಗೆ ಜ್ಞಾಪಿಸಲಿಚ್ಛಿಸುತ್ತೇವೆ.

ಮೈಸೂರು ನಗರದ ಕರ್ನಾಟಕ ಸಂಘದವರು ಕಳೆದ ವರ್ಷದಲ್ಲಿ ನಡಸಿದ ಕಾರ್ಯಕಲಾಪಗಳ ವಿವರಗಳನ್ನೊಳಗೊಂಡ ವಾರ್ಷಿಕ ವರದಿಯೊಂದು ನಮ್ಮ ಹಸ್ತಗತವಾಗಿದೆ. ಇದನ್ನು ಓದಿ ನೋಡಲಾಗಿ ಸಾಹಿತ್ಯ ದೃಷ್ಟಿಯಿಂದಲೂ, ಜ್ಞಾನಪ್ರಸಾರಣಾ ದೃಷ್ಟಿಯಿಂದಲೂ, ಜನರಂಜನೆಗಾಗಿ ವಿನೋದ ಕಲ್ಪನಾದೃಷ್ಟಿಯಿಂದಲೂ ಈ ಸಂಘದಲ್ಲಿ ಕಳೆದ ವರ್ಷ ಅತ್ಯಂತ ಶ್ಲಾಘನೀಯವಾದ ರೀತಿಯಲ್ಲಿ ಕೆಲಸ ನಡೆದಿರುವುದಾಗಿ ತಿಳಿಯಬಂದಿದೆ. ಉಪನ್ಯಾಸ ಮಾಲೆ, ಭಾರತ ವಾಚನ, ವ್ಯಾಸಂಗ ಗೋಷ್ಠಿ, ರೇಡಿಯೋ ಭಾಷಣ, ಗ್ರಾಮೋದ್ಧಾರಕಾರ್ಯ — ಇವುಗಳೆಲ್ಲವನ್ನೂ ಆಗಿಂದಾಗ

ಮೈಸೂರು ನಗರದ ಕರ್ನಾಟಕ ಸಂಘದ ಕಾರ್ಯಕಲಾಪಗಳು: ೧೯೩೭—೩೮ರಲ್ಲಿ

ಸಂಘದವರು ಏರ್ಪಡಿಸಿದ್ದುದು ಮಾತ್ರವೇ ಅಲ್ಲದೆ ಜಿಲ್ಲಾ ಕರ್ನಾಟಕ ಸಂಘಗಳ ಸಮ್ಮೇಳನವನ್ನೂ, ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಮತ್ತು ಶ್ರೀ ಚಾಮರಾಜೇಂದ್ರ ಒಡೆಯರವರ ಜಯಂತ್ಯುತ್ಸವಗಳನ್ನೂ, ಕನ್ನಡದ ಹಬ್ಬ ವನ್ನೂ ಯಶಸ್ವಿಯಾಗಿ ನಡಸಿರುತ್ತಾರೆ. ಇವುಗಳ ವಿವರಗಳನ್ನು ಈ ಹಿಂದೆಯೇ ನಮ್ಮ ಪರಿಷತ್ಪತ್ರಿಕೆಯಲ್ಲಿ ಪ್ರಕಟಿಸಿ, ಈ ಸಂಘದ ಚಾಲಕರಿಗೆ ನಮ್ಮ ಅಭಿನಂದನಗಳನ್ನು ಸೂಚಿಸಿರುತ್ತೇವೆ.* ಪುನಃ ಇನ್ನೊಂದುಬಾರಿ ನಮ್ಮ ಸಹಜವಾದ ಸಂತೋಷ ವನ್ನು ವ್ಯಕ್ತಪಡಿಸಿ ಸಂಸ್ಥಾನದ ಇತರ ಕರ್ನಾಟಕ ಸಂಘಗಳೂ ಸಹ ಮೈಸೂರು ಸಂಘದ ಮೇಲ್ಪಂಕ್ತಿಯನ್ನನುಸರಿಸಿ ಜನೋಪಯೋಗವಾದ ಸಾಹಿತ್ಯ ಕಾರ್ಯಗಳನ್ನು ಹೆಚ್ಚು ಹೆಚ್ಚಾಗಿ ನೆರವೇರಿಸುತ್ತಾ ಬರುವವರಾಗಲೆಂದು ಹಾರೈಸುತ್ತೇವೆ.

ಇಬ್ಬರು ಕಲಾಭಿಮಾನಿಗಳ ಮತ್ತು ಇಬ್ಬರು ಪರಿಷದಭಿಮಾನಿಗಳ ಮರಣ

ಪರಿಷತ್ಪತ್ರಿಕೆಯ ಕಳೆದ ಸಂಚಿಕೆಯಲ್ಲಿ (ಪುಟ ೧೫೧–೩) ಕನ್ನಡದ ಅಭಿಮಾನಿಗಳಾಗಿದ್ದ ಇಬ್ಬರು ಪ್ರಸಿದ್ಧಪುರುಷರ (ರಾಯಚೂರಿನ ಶ್ರೀಮಾನ್ ಪಿ. ಕಿಷನ್‌ರಾಯರ ಮತ್ತು ಬೆಂಗಳೂರಿನ ಸರ್ ಕೆ. ಪಿ. ಪುಟ್ಟಣ್ಣಶೆಟ್ಟರ)ಮರಣವನ್ನು ಕುರಿತು ಪ್ರಸ್ತಾವಿಸಿದ್ದುದು ಸರಿಯಷ್ಟೆ. ಈ ಸಂಚಿಕೆಯಲ್ಲಿ ಮತ್ತೆ ಇಬ್ಬರು ಕಲಾಭಿಮಾನಿಗಳ ಮತ್ತು ಇಬ್ಬರು ಪರಿಷದಭಿಮಾನಿಗಳ ಮರಣವನ್ನು ಕುರಿತು ಪ್ರಸ್ತಾವಿಸಬೇಕಾದ ಪ್ರಸಂಗವು ಒದಗಿದುದಕ್ಕಾಗಿ ತುಂಬಾ ವಿಷಾದಿಸುತ್ತೇವೆ.

(೧) ಶ್ರೀಮಾನ್ ಮೈಸೂರಿನ ವೀಣೆ ಸುಬ್ಬಣ್ಣನವರು

ಈ ಪೈಕಿ ಮೊದಲನೆಯವರಾದ ಶ್ರೀಮಾನ್ ವೀಣೆ ಸುಬ್ಬಣ್ಣನವರು ಮೈಸೂರು ರಾಜಾಸ್ಥಾನದಲ್ಲಿ ಮಾತ್ರವೇ ಅಲ್ಲದೆ ಇಡೀ ಕರ್ನಾಟಕದಲ್ಲಿ ವೈಣಿಕ ಪ್ರವೀಣರೆಂದು ಪ್ರಖ್ಯಾತರಾಗಿದ್ದರು. ಇಂತಹ ಪ್ರಸಿದ್ಧ ಕಲಾವಿದರ ಮರಣದಿಂದ ಸಂಗೀತ ಕಲೆಗೆ ಅಪಾರವಾದ ನಷ್ಟ ಪ್ರಾಪ್ತವಾಯಿತೆಂದು ಹೇಳಬೇಕು.

(೨) ಕನ್ನಡ ನಟಶ್ರೇಷ್ಠರು ಶ್ರೀಮಾನ್ ಎಚ್. ವೆಂಕೋಬರಾಯರು

ಎರಡನೆಯವರಾದ ಶ್ರೀಮಾನ್ ಎಚ್. ವೆಂಕೋಬರಾಯರು ಸುಮಾರು ೫೫ ವರ್ಷಗಳ ಕಾಲ ಶಿರಹಟ್ಟಿಯ ಮಹಾಲಕ್ಷ್ಮೀ ಪ್ರಾಸಾದಿಕ ನಾಟಕಮಂಡಲಿಯ ಒಡೆಯರಾಗಿದ್ದುಕೊಂಡು, ಅನೇಕ ನಟರಿಗೆ ಆಶ್ರಯ ದಾತರಾಗಿದ್ದು ಕನ್ನಡ ನಾಟಕಕರ್ತರಿಗೆ ಪ್ರೋತ್ಸಾಹ ಕೊಡುವುದರ ಮೂಲಕ ಕನ್ನಡನಾಡಿಗೂ, ಕನ್ನಡ ನಾಟಕ ಪ್ರಪಂಚಕ್ಕೂ ಮಹೋಪಕಾರಮಾಡಿರುತ್ತಾರೆ. ಇವರ ಮರಣದಿಂದ ಇದುವರೆಗಾಗಲೇ ಖಿಲವಾಗುತ್ತಿರುವ ಕನ್ನಡ ನಾಟಕಕಲೆಗೆ ವಿಶೇಷವಾದ ನಷ್ಟವುಂಟಾಯಿತೆನ್ನುವುದರಲ್ಲಿ ಸಂಶಯವಿಲ್ಲ.

* ಸಂಪುಟ ೨೨, ಸಂಚಿಕೆ ೧–೨, ಪುಟ ೧೨೧; ಸಂಚಿಕೆ ೩, ಪುಟ ೨೦೬–೯; ಸಂಪುಟ ೨೩, ಸಂಚಿಕೆ ೧, ಪುಟ ೭೩.

(೩) ಬೆಂಗಳೂರಿನ ಅಡ್ವೋಕೇಟರಾದ ಶ್ರೀಮಾನ್ ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್.

ಮೂರನೆಯವರಾದ ಶ್ರೀಮಾನ್ ಟಿ. ಅಪ್ಪೂರಾಯರು ನಮ್ಮ ಪರಿಷತ್ತಿನ ಆಜೀವ ಸದಸ್ಯರಾಗಿದ್ದುದಲ್ಲದೆ ಕೆಲವುಕಾಲ ಪರಿಷತ್ತಿನ ಕಾರ್ಯದರ್ಶಿಗಳಾಗಿಯೂ, ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರಾಗಿಯೂ ಕೆಲಸ ಮಾಡಿರುತ್ತಾರೆ. ಇವರ ಮರಣದಿಂದ ಉಂಟಾದ ನಷ್ಟಕ್ಕಾಗಿ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ ತಾ॥ ೭–೮–೧೯೩೮ರಲ್ಲಿ ನಡೆದ ಅಧಿವೇಶನದಲ್ಲಿ ಸಂತಾಪ ಸೂಚಕ ನಿರ್ಣಯವೊಂದನ್ನು ಅಂಗೀಕರಿಸಿತು.

(೪) ಮೈಸೂರು ವಿದ್ಯಾಶಾಖೆಯಲ್ಲಿ ಉನ್ನತ ಪದವಿಯಲ್ಲಿದ್ದು ರಿಟೈರ್ ಆಗಿದ್ದ ಶ್ರೀಮಾನ್ ಸಿ. ಕೃಷ್ಣರಾಯರು, ಬಿ.ಎ.

ನಾಲ್ಕನೆಯವರಾದ ಶ್ರೀಮಾನ್ ಸಿ. ಕೃಷ್ಣರಾಯರೂ ಸಹ ನಮ್ಮ ಪರಿಷತ್ತಿನ ಆಜೀವ ಸದಸ್ಯರಾಗಿದ್ದುದಲ್ಲದೆ ಮೈಸೂರು ವಿದ್ಯಾಶಾಖೆಯಲ್ಲಿ ಡೆಪ್ಯುಟಿ ಇನ್‌ಸ್ಪೆಕ್ಟರ್ ಜನರಲ್ ಪದವಿಯಲ್ಲಿದ್ದು ೧೯೧೬ರಲ್ಲಿ ಆ ಪದವಿಯಿಂದ ನಿವೃತ್ತರಾದರು. ಇವರು ಪದವಿಯಲ್ಲಿದ್ದಾಗಲೂ, ನಿವೃತ್ತರಾದನಂತರವೂ ಸಹ ವಿದ್ಯಾಪ್ರಾಚುರ್ಯದ ವಿಷಯದಲ್ಲಿ ವಿಶೇಷ ಆಸಕ್ತಿ ವಹಿಸಿದ್ದರು. ತುಮಕೂರಿನಲ್ಲಿ ಮಕ್ಕಳಿಗಾಗಿ ಮಾಂಟಿಸೋರಿ ಪದ್ಧತಿಯ ಒಂದು ಪಾಠಶಾಲೆಯನ್ನೂ, ದೊಡ್ಡವರಿಗಾಗಿ ಒಂದು ಪುಸ್ತಕ ಭಂಡಾರವನ್ನೂ ಏರ್ಪಡಿಸಿ ಅಲ್ಲಿನ ಪ್ರಜೆಗಳ ಕೃತಜ್ಞತೆಗೆ ಪಾತ್ರರಾಗಿದ್ದರು. ಇಂತಹ ಪ್ರಸಿದ್ಧರಾದ ವಿದ್ಯಾಭಿಮಾನಿಗಳು ೫–೯–೧೯೩೮ರಲ್ಲಿ ತಮ್ಮ ೮೧ನೆಯ ವಯಸ್ಸಿನಲ್ಲಿ ಸ್ವರ್ಗಸ್ಥರಾದುದರಿಂದ ಕನ್ನಡಿಗರಿಗೆ ಒಂದು ದೊಡ್ಡ ನಷ್ಟವುಂಟಾಯಿತೆನ್ನುವುದರಲ್ಲಿ ಸಂದೇಹವಿಲ್ಲ.

ಮೇಲ್ಕಂಡ ಮಹನೀಯರುಗಳ ಮರಣದಿಂದ ಅವರವರ ಕುಟುಂಬವರ್ಗಕ್ಕೆ ಉಂಟಾಗಿರುವ ವಿಯೋಗದುಃಖದಲ್ಲಿ ನಾವೂ ಸಹ ಭಾಗಿಗಳಾಗಿ ನಮ್ಮ ವಾಚಕರ ಪರವಾಗಿ ಹೃತ್ಪೂರ್ವವಾದ ಅನುತಾಪವನ್ನು ಸೂಚಿಸಲಪೇಕ್ಷಿಸುತ್ತೇವೆ.

ವಿಶಾಲ ಕರ್ನಾಟಕ ಪ್ರಕಟನಾಲಯ: ಧಾರವಾಡದಲ್ಲಿ ಒಂದು ಕಂಪೆನಿಯ ಸ್ಥಾಪನೆ

ಯಾವುದೊಂದು ಭಾಷೆಯೇ ಆಗಲಿ ಔನ್ನತ್ಯಕ್ಕೆ ಬರಬೇಕಾದರೆ ಮತ್ತು ಆ ಭಾಷೆಯ ಮೂಲಕ ಜನಸಾಮಾನ್ಯದ ಜ್ಞಾನಪ್ರಸಾರಣ ಕಾರ್ಯವು ನಿರ್ವಿಘ್ನವಾಗಿ ನೆರವೇರಬೇಕಾದರೆ ಆ ಭಾಷೆಯಲ್ಲಿ ಹೊರಬೀಳುವ ವೃತ್ತಪತ್ರಿಕೆಗಳು, ಮಾಸಪತ್ರಿಕೆಗಳು, ಸರಳಶೈಲಿಯ ಗ್ರಂಥಗಳು ಮುಂತಾದುವನ್ನು ಕಾಲಕಾಲಕ್ಕೆ ಅಚ್ಚು ಹಾಕಿಸಿ ಪ್ರಕಟಪಡಿಸುತ್ತಾ ಬರುವುದಕ್ಕೆ ಸಹಾಯಕವಾದ ಒಂದು ಪ್ರಕಟನಾಲಯ ಅಗತ್ಯವೆಂಬುದನ್ನು ಈ ವಿಷಯದಲ್ಲಿ ಅನುಭವವುಳ್ಳ ಸರ್ವರೂ ಒಪ್ಪಲೇಬೇಕು. ಈ ರೀತಿಯ ಪ್ರಕಟನಾಲಯಗಳು ಪಾಶ್ಚಾತ್ಯ ದೇಶಗಳಲ್ಲಿ ವಿಪುಲವಾಗಿರುವುದರಿಂದಲೇ ಅಲ್ಲಿಯ ಭಾಷೆಗಳಲ್ಲಿ ಅಸಂಖ್ಯಾತವಾದ ಗ್ರಂಥಗಳೂ, ವೃತ್ತಪತ್ರಿಕೆಗಳೂ ಪ್ರಕಟ

ವಾಗಿ ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ಹರಡುತ್ತಿರುವುದು. ನಮ್ಮ ಕನ್ನಡ ಭಾಷೆಗೆ ಇಂತಹ ಅನುಕೂಲಗಳಿಲ್ಲದಿರುವುದು ಒಂದು ದೊಡ್ಡ ಕೊರತೆಯೆಂದೇ ಭಾವಿಸಬೇಕು. ಇಂತಹ ಕೊರತೆಯನ್ನು ನಿವಾರಿಸುವ ಉದ್ದೇಶದೊಡನೆ ಧಾರವಾಡದಲ್ಲಿ 'ವಿಶಾಲ ಕರ್ನಾಟಕ ಪ್ರಕಟನಾಲಯ'ವೆಂಬೊಂದು ಕಂಪೆನಿ ಏರ್ಪಡುವುದರಲ್ಲಿರುವುದೆಂದು ಕೇಳಿ ತುಂಬಾ ಸಂತೋಷಿಸುತ್ತೇವೆ. ಕನ್ನಡದಲ್ಲಿ ನೂತನ ವೃತ್ತಪತ್ರಿಕೆಗಳನ್ನು ನಡಸುವುದು, ಉಪಯುಕ್ತವಾದ ಗ್ರಂಥಗಳನ್ನೂ ಮಾಸಪತ್ರಿಕೆಗಳನ್ನೂ ಮುದ್ರಿಸಿ ಪ್ರಕಟಿಸುವುದು—ಇವು ಈ ಕಂಪೆನಿಯ ಉದ್ದೇಶಗಳಾಗಿವೆ. ಅಲ್ಲದೆ ಕ್ಷಿಪ್ರದಲ್ಲಿಯೇ ಅಖಿಲ ಕರ್ನಾಟಕದ ವಿವರಗಳನ್ನೊಳಗೊಂಡ ಡೈರೆಕ್ಟರಿಯನ್ನೂ, ಆ ಪ್ರಾಂತದ ವ್ಯಕ್ತಿ ಪರಿಚಯದ ವಹಿಯನ್ನೂ ಪ್ರಕಟಿಸುವ ನಿರ್ಧರ ಮಾಡಿರುವುದಾಗಿ ಕೇಳುತ್ತೇವೆ. ಹೊಸದಾಗಿ ಆರಂಭವಾಗುವ ಈ ಪ್ರಕಟನಾಲಯಕ್ಕೆ ವಿಶೇಷವಾದ ಶ್ರೇಯಸ್ಸುಂಟಾಗಲೆಂದು ಬಯಸುವುದಲ್ಲದೆ, ಇದರಿಂದ ಕನ್ನಡ ಭಾಷೆಯ ಏಳಿಗೆಗೆ ಪೂರ್ಣಸಹಾಯ ದೊರೆಯುವಂತಾಗಲೆಂದು ಆಶಿಸುತ್ತೇವೆ.

ಈ ಸಂದರ್ಭದಲ್ಲಿ ಸಂತೋಷಪ್ರದವಾದ ಮತ್ತೊಂದು ಅಂಶವನ್ನು ನಮ್ಮ ವಾಚಕರ ಅವಗಾಹನೆಗೆ ತರಲು ಅಪೇಕ್ಷಿಸುತ್ತೇವೆ. ಅದಾವುದೆಂದರೆ, ಪರಿಷನ್ಮಂದಿರದಲ್ಲಿ ಪ್ರತ್ಯೇಕವಾದೊಂದು ಮುದ್ರಣಾಲಯವನ್ನು ಸ್ಥಾಪಿಸಬೇಕೆಂದು ಕಾರ್ಯನಿರ್ವಾಹಕ ಮಂಡಲಿ ಮಾಡಿರುವ ನಿರ್ಧಾರ. ಪರಿಷತ್ತು ಮುಂದೆ ಪ್ರಸ್ತಾವಿಸಿರುವ ವಾರಪತ್ರಿಕೆ, ಗ್ರಂಥ ಪ್ರಕಟನೆ ಮುಂತಾದ ಜನೋಪಯುಕ್ತವಾದ ಕಾರ್ಯಗಳನ್ನು ಸಾಂಗವಾಗಿ ನೆರವೇರಿಸಬೇಕಾದರೆ ಸ್ವಕೀಯ ಮುದ್ರಣಾಲಯ ಇರತಕ್ಕದ್ದು ಅಗತ್ಯವೆಂಬುದನ್ನು ಎಲ್ಲರೂ ಒಪ್ಪಲೇ ಬೇಕು. ಈ ನಿರ್ಧಾರ ಕ್ಷಿಪ್ರದಲ್ಲಿಯೇ ಸಫಲಗೊಂಡು ಪರಿಷತ್ತಿನ ಕಾರ್ಯಗಳು ವಿಸ್ತಾರಗೊಳ್ಳಲು ಸಹಕಾರಿಯಾಗಲೆಂದು ಹಾರೈಸುತ್ತೇವೆ.

**ಪರಿಷನ್ಮಂದಿರದಲ್ಲಿ ಮುದ್ರಣಾಲಯ ಸ್ಥಾಪನೆ**

ಧಾರವಾಡದಿಂದ ಶ್ರೀಮಾನ್ ಆರ್. ಎಸ್. ಹುಕ್ಕೇರಿಕರ್ ಅವರ ಸಂಪಾದಕತ್ವದಲ್ಲಿ ಹೊರಬಿದ್ದಿರುವ 'ಯುನೈಟೆಡ್ ಕರ್ನಾಟಕ' ಎಂಬ ಇಂಗ್ಲಿಷ್ ವಾರಪತ್ರಿಕೆಗೂ, ಬೊಂಬಾಯಿ ನಗರದಿಂದ ಶ್ರೀಮಾನ್ ಅನಂತನಾರಾಯಣ ಮಹಳೆ ಅವರ ಸಂಪಾದಕತ್ವದಲ್ಲಿ ಹೊರಬಿದ್ದಿರುವ 'ಮುಂಬಯಿ ಕನ್ನಡಿಗ' ಎಂಬ ಕನ್ನಡ ವಾರಪತ್ರಿಕೆಗೂ ಹೃತ್ಪೂರ್ವಕವಾದ ಸ್ವಾಗತವನ್ನು ಬಯಸಲಪೇಕ್ಷಿಸುತ್ತೇವೆ.

**'ಯುನೈಟೆಡ್ ಕರ್ನಾಟಕ', 'ಮುಂಬಯಿ ಕನ್ನಡಿಗ' ಎಂಬ ವಾರಪತ್ರಿಕೆಗಳಿಗೆ ಸ್ವಾಗತ**

ಈ ಪೈಕಿ ಇಂಗ್ಲಿಷ್ ಪತ್ರಿಕೆ ಇದೇ ಆಗಸ್ಟ ೭ನೆಯ ತಾರೀಖಿನಿಂದ ಪ್ರಾರಂಭವಾಗಿದೆ. ಇದರ ಉದ್ದೇಶಗಳನ್ನು ಕುರಿತು ಸಂಪಾದಕರು ಈ ರೀತಿ ಹೇಳಿರುತ್ತಾರೆ:—

"ಇಂಡಿಯಾ ದೇಶಕ್ಕೆ ಅಥವಾ ಅದರ ಪೈಕಿ ಯಾವುದಾದರೂ ಪ್ರಾಂತಕ್ಕೆ ಸಂಬಂಧಪಟ್ಟ ಸಮಸ್ಯೆಗಳ ವಿಚಾರವಾಗಿ ಕರ್ನಾಟಕ ಪ್ರಾಂತದವರ ಅಭಿಪ್ರಾಯವೇನೆಂಬುದನ್ನು ವ್ಯಕ್ತಪಡಿಸಲಿಕ್ಕೆ ಒಂದು ಇಂಗ್ಲಿಷ್ ಪತ್ರಿಕೆ ಇರಬೇಕಾದುದು ಅಗತ್ಯ. ಈಗ ಅಂತಹ

ಪತ್ರಿಕೆ ಇಲ್ಲದಿರುವುದರಿಂದ ನಮ್ಮ ಅಭಿಪ್ರಾಯಗಳನ್ನು ಕರ್ನಾಟಕ ಪ್ರಾಂತದ ಹೊರಗಿನ ವರೆಗೆ ಸ್ಪಷ್ಟವಾಗಿ ತಿಳಿಯಪಡಿಸಲು ಸಾಧ್ಯವಿಲ್ಲ. ಅಲ್ಲದೆ ಕರ್ನಾಟಕ ಪ್ರಾಂತಗಳ ಏಕೀಕರಣದ ಪ್ರಶ್ನೆಯ ವಿಚಾರವಾಗಿ ತಪ್ಪು ತಿಳಿವಳಿಕೆಗಳು ಹರಡಲು ಕಾರಣವಾಗಿದೆ. ಕರ್ನಾಟಕಕ್ಕೆ ಸಂಬಂಧಪಟ್ಟ ಅಭಿಪ್ರಾಯಗಳನ್ನಾಗಲಿ, ವರ್ತಮಾನಗಳನ್ನಾಗಲಿ ಮದರಾಸ್, ಬೊಂಬಾಯಿಗಳಲ್ಲಿ ಪ್ರಕಟವಾಗುವ ಪತ್ರಿಕೆಗಳಲ್ಲಿ ಪ್ರಕಟಿಸಲು ತಕ್ಕಷ್ಟು ಅವಕಾಶ ದೊರೆಯುತ್ತಿಲ್ಲ. ಈ ಕಾರಣಗಳಿಂದ ಕರ್ನಾಟಕದವರ ಚಳವಳಿಯ ಬಲಾಬಲಗಳು ಸರ್ಕಾರದ ದೃಷ್ಟಿಗೆ ಸರಿಯಾಗಿ ಬೀಳುತ್ತಿಲ್ಲ. ಕರ್ನಾಟಕಕ್ಕೆ ಸೇರಿದ ಅನೇಕ ಪ್ರಾಂತಗಳಲ್ಲಿ ಜನರ ಮಾತೃಭಾಷೆ ಕನ್ನಡವೇ ಆದರೂ ಇತರ ದೇಶಭಾಷೆಗಳಿಗೆ ಹೆಚ್ಚು ಪ್ರಾಶಸ್ತ್ಯ ದೊರೆಯುತ್ತಿದೆ. ಈ ನ್ಯೂನತೆಗಳನ್ನು ಆದಷ್ಟು ಮಟ್ಟಿಗೆ ನಿವಾರಿಸುವುದು ಅಗತ್ಯವಾದುದರಿಂದ ಈ ಇಂಗ್ಲಿಷ್ ಪತ್ರಿಕೆಯನ್ನು ಹೊರಡಿಸಲಾಗಿದೆ. ಇದರಲ್ಲಿ ಇಂಡಿಯಾ ದೇಶದ ಏಳಿಗೆಗೆ ಸಂಬಂಧಪಟ್ಟ ಎಲ್ಲ ರಾಷ್ಟ್ರೀಯ ಚಳವಳಿಗಳಿಗೆ ಸಂಬಂಧಪಟ್ಟ ಅಂಶಗಳಿಗೂ ಪ್ರೋತ್ಸಾಹವುಂಟು. ಸಾರ್ವಜನಿಕ ವಿಷಯಗಳನ್ನು ಕುರಿತು ಕರ್ನಾಟಕದವರ ಅಭಿಪ್ರಾಯವೇನೆಂಬುದನ್ನು ಇದರಲ್ಲಿ ಪ್ರಕಟಿಸುತ್ತಾ ಬರುವುದಲ್ಲದೆ, ಕಾಂಗ್ರೆಸ್ಸಿನವರು ಹೋರಾಡುತ್ತಿರುವ 'ಪೂರ್ಣಸ್ವರಾಜ್ಯ'ಕ್ಕೆ ಬೆಂಬಲ ಕೊಡಲಾಗುವುದು. ಎಲ್ಲಕ್ಕಿಂತ ಮುಖ್ಯವಾದ ಧ್ಯೇಯ ಕರ್ನಾಟಕದ ಏಕೀಕರಣ. ದೇಶಾಭಿಮಾನಕ್ಕೆ ಚ್ಯುತಿಬಾರದಂತೆ ಈ ಧ್ಯೇಯವನ್ನು ಪರಿಪಾಲಿಸುವುದೇ ಈ ಪತ್ರಿಕೆಯ ಮುಖ್ಯ ಕರ್ತವ್ಯ. ಈ ಕರ್ತವ್ಯವನ್ನು ಸಾಧ್ಯವಾದ ಮಟ್ಟಿಗೆ ನೆರವೇರಿಸಲು ಪ್ರಯತ್ನಿಸುತ್ತೇವೆ. ಕರ್ನಾಟಕದ ಅಭಿಮಾನಿಗಳೆಲ್ಲರೂ ನಮಗೆ ತಕ್ಕ ಬೆಂಬಲ ಕೊಟ್ಟು ಸಹಾಯ ಮಾಡುವವರಾಗಬೇಕು.''

ಕರ್ನಾಟಕದ ಏಕೀಕರಣದ ಧ್ಯೇಯಕ್ಕೆ ನಮ್ಮ ಪೂರ್ಣ ಸಹಾನುಭೂತಿಯುಂಟು. ಈ ಧ್ಯೇಯದ ಸಾಧನೆಯಲ್ಲಿ ಪೂರ್ಣಜಯವನ್ನು ಪಡೆದು ಮೇಲ್ಕಂಡ ಪತ್ರಿಕೆ ಚಿರಕಾಲ ಯಶಸ್ವಿಯಾಗಿ ಬಾಳಲೆಂದು ಆಶಿಸುತ್ತೇವೆ.

ಇನ್ನು 'ಮುಂಬಯಿ ಕನ್ನಡಿಗ' ಎಂಬ ಕನ್ನಡ ವಾರಪತ್ರಿಕೆಯ ಧ್ಯೇಯವೇನೆನ್ನುವುದು ಆ ಪತ್ರಿಕಾ ಸಂಪಾದಕರ ಈ ಕೆಳಗಿನ ಮಾತುಗಳಿಂದ ವ್ಯಕ್ತವಾಗುವುದು:—

"ಕನ್ನಡ ಭಾಷೆ ಮುಂಬಯಿ ಪ್ರಾಂತದ ಮುಖ್ಯ ಭಾಷೆಗಳಲ್ಲೊಂದಾಗಿದ್ದರೂ ಹಾಗೂ ಕನ್ನಡ ಭಾಷೆಯನ್ನಾಡುವ ಜನರು ಈ ಪಟ್ಟಣದಲ್ಲಿ ಬಹು ದೊಡ್ಡ ಪ್ರಮಾಣದಲ್ಲಿ ಇದ್ದಾಗ್ಯೂ ಒಂದಾದರೂ ಕನ್ನಡ ವರ್ತಮಾನಪತ್ರವು ಈ ಪಟ್ಟಣದಲ್ಲಿ ಇಲ್ಲದಿರುವದೆಂದರೆ ಕನ್ನಡಿಗರೆಲ್ಲರಿಗೆ ಕಲಂಕವನ್ನುಂಟುಮಾಡುವ ಸಂಗತಿಯಾಗಿದೆ.

"ಕನ್ನಡ ಓದುಬರಹ ಬಲ್ಲಂಥ ೫೦ ಸಾವಿರ ಕನ್ನಡಿಗರ ವಸತಿ ಈ ಪಟ್ಟಣದಲ್ಲಿ ನೆಲಸಿದೆಯೆಂದು ವಿಶ್ವಸನೀಯ ಆಧಾರಗಳಿಂದ ತಿಳಿದುಬಂದಿದೆ. ಇದರ ಪೈಕಿ ಅರ್ಧದಷ್ಟು ಜನರಿಗಾದರೂ ಕನ್ನಡ ಭಾಷೆಯ ವಿಷಯದಲ್ಲಿ ಪ್ರೇಮಾದರಗಳಿಲ್ಲವೆ? ಅಥವಾ ಹೀಗೆ ಕನ್ನಡಿಗರಮೇಲೆ ದೋಷಾರೋಪಣೆ ಮಾಡುವುದಕ್ಕಿಂತ, ಈ ವರೆಗೆ ಈ ದಿಶೆಯಲ್ಲಿ ಯಾವ ಪ್ರಯತ್ನವೂ ಮಾಡಲ್ಪಟ್ಟಿಲ್ಲವೆಂದು ಹೇಳಬಹುದಲ್ಲವೇ? ಹಾಗಿದ್ದರೆ 'ಮುಂಬಯಿ ಕನ್ನಡಿಗನು' ಮುಂಬಯಿ ಕನ್ನಡಿಗರ ಕಲ್ಯಾಣ ಬಗೆಯಲು, ಅವರ ಸೇವೆ ಮಾಡಲು ಇದೀಗ ಜನ್ಮ ತಾಳಿದ್ದಾನೆ.

"ಕನ್ನಡಿಗರ ಹಾಗೂ ಕನ್ನಡ ವಾಙ್ಮಯದ ಸೇವೆ ಮಾಡಬೇಕೆಂಬ ಹೇರಾಸೆಯಿಂದಲೇ ಹಾಗೂ ಈ ಹೆಗ್ಗುರಿಯನ್ನಿಟ್ಟುಕೊಂಡೇ ಕಾರ್ಯ ಮಾಡಬೇಕೆಂಬ ಉದ್ದೇಶದಿಂದ 'ಮುಂಬಯಿ ಕನ್ನಡಿಗ'ನ ಜನ್ಮವಾಗಿದೆ.

"ಕನ್ನಡಿಗರ ಬೆಂಬಲದಿಂದ ಕನ್ನಡಿಗರ ಸೇವೆಯನ್ನು ಯಥಾಶಕ್ತಿ ಮಾಡಬೇಕೆಂಬ ಹಂಬಲವನ್ನು 'ಮುಂಬಯಿ ಕನ್ನಡಿಗ'ನು ತಾಳಿದ್ದಾನೆ. ಸಧ್ಯದಲ್ಲಿ ವಾರಪತ್ರಿಕೆಯೊಂದು ಜನ್ಮ ತಾಳಿದಾಗ್ಯೂ ತಕ್ಕ ಸಹಾಯ ದೊರೆತರೆ ದೈನಿಕಪತ್ರ ರೂಪದಲ್ಲಿ ಹೊರಡಬೇಕೆಂಬ

ಹವ್ಯಾಸವುಳ್ಳವನಾಗಿದ್ದಾನೆ. ಇಂಥ ಸಹಾಯವನ್ನು ಒದಗಿಸಿಕೊಡುವ ಕಾರ್ಯ ಕನ್ನಡಿಗರನ್ನೇ ಕೂಡಿದೆ.''

'ಕನ್ನಡಿಗರ ಹಾಗೂ ಕನ್ನಡ ವಾಙ್ಮಯದ ಸೇವೆ ಮಾಡಬೇಕೆಂಬ' ಮೇಲ್ಕಂಡ ಪತ್ರಿಕೆಯ ಧ್ಯೇಯವೂ ನಮ್ಮ ಪರಿಷತ್ಪತ್ರಿಕೆಯ ಧ್ಯೇಯವೂ ಏಕಪ್ರಕಾರವೇ ಆಗಿರುವ ಪ್ರಯುಕ್ತ 'ಮುಂಬಯಿ ಕನ್ನಡಿಗ'ನು ದಿನಕ್ರಮದಲ್ಲಿ ಪ್ರವರ್ಧಮಾನನಾಗುತ್ತಾ ಸಮಸ್ತ ಕನ್ನಡದ ಅಭಿಮಾನಿಗಳ ಮೆಚ್ಚಿಕೆಗೆ ಪಾತ್ರನಾಗಿ ದೀರ್ಘಾಯುಷ್ಮಂತನಾಗಿ ಬಾಳಲೆಂದು ಹೃತ್ಪೂರ್ವಕವಾಗಿ ಬಯಸುತ್ತೇವೆ.

**'ಕನ್ನಡ ನುಡಿ' ಎಂಬ ಪರಿಷತ್ತಿನ ವಾರಪತ್ರಿಕೆ**

ಈ ಸಂದರ್ಭದಲ್ಲಿ ನಮ್ಮ ಪರಿಷತ್ತಿನ ಪರವಾಗಿ ಸಾಹಿತ್ಯ ಸಂಸ್ಕೃತಿಗಳಿಗೆ ಸಂಬಂಧಪಟ್ಟ ಒಂದು ಕನ್ನಡ ವಾರಪತ್ರಿಕೆಯನ್ನು ಬರುವ ವಿಜಯದಶಮಿಯ ದಿನ (ತಾ॥ ೪—೧೦—೧೯೩೮) ಪ್ರಾರಂಭಗೊಳಿಸಬೇಕೆಂದು ನಿರ್ಧರವಾಗಿರುವ ಅಂಶವನ್ನು ನಮ್ಮ ವಾಚಕರ ಅವಗಾಹನೆಗೆ ತರಲು ಸಂತೋಷಿಸುತ್ತೇವೆ. ಇದರ ಪ್ರಕಟನೆಯಿಂದ ಕನ್ನಡ ಸಾಹಿತ್ಯ ಸಂಸ್ಕೃತಿಗಳನ್ನು ಕುರಿತ ವಿಷಯಗಳು ಹೆಚ್ಚು ಹೆಚ್ಚಾಗಿ ಜನಸಾಮಾನ್ಯಕ್ಕೆ ತಿಳಿಯುತ್ತಾ ಬರಬೇಕೆಂಬುದೇ ಪರಿಷತ್ತಿನ ಆಶಯ. ಈ ಆಶಯದಿಂದಲೇ ಇದರ ಚಂದಾ ದರ ಒಂದು ಪ್ರತಿಗೆ ೬ ಪೈ, ವಾರ್ಷಿಕ ಚಂದಾ ರೂ. ೧—೮—೦, ಅಂಚೆ ವೆಚ್ಚ ಸೇರಿ ರೂ. ೨—೪—೦. ಈ ಮೇರೆಗೆ ನಿರ್ಧರಿಸಲಾಗಿದೆ. ಇದು ಈ ಭಾಗದಲ್ಲಿ ಅನುಭವಸ್ಥರೂ ಉತ್ಸಾಹಶಾಲಿಗಳೂ ಆದ ಶ್ರೀಮಾನ್ ಅ. ನ. ಕೃಷ್ಣರಾಯರ ಸಂಪಾದಕತ್ವದಲ್ಲಿ ನಡೆಯುತ್ತದೆ. ಕನ್ನಡದ ಅಭಿಮಾನಿಗಳಾದ ಸಮಸ್ತ ಮಹಿಳೆಯರೂ, ಮಹನೀಯರೂ ಈ ಪತ್ರಿಕೆಗೆ ತಮ್ಮ ಉದಾರವಾದ ಸಹಾಯವನ್ನು ನೀಡಿ ಪರಿಷತ್ತಿನ ಉದ್ದೇಶ ಸಫಲವಾಗುವಂತೆ ನೆರವಾಗಬೇಕೆಂದು ಪ್ರಾರ್ಥಿಸುತ್ತೇವೆ.

**ಆದಿಪಂಪನನ್ನು ಕುರಿತ ಮೂರು ಗದ್ಯಗ್ರಂಥಗಳು: ಶ್ರೀಮಾನ್ ಪಂಡಿತ ಮುಳಿಯ ತಿಮ್ಮಪ್ಪಯ್ಯನವರಿಂದ**

ಯಾವನೊಬ್ಬ ಮಹಾಕವಿಯ ಕಾವ್ಯಗಳ ಪೂರ್ಣ ಸ್ವಾರಸ್ಯವನ್ನು ಚೆನ್ನಾಗಿ ಗ್ರಹಿಸಬೇಕಾದರೆ ಅವನ ಜೀವನ ಚರಿತ್ರೆಯನ್ನೂ, ಅವನ ಪ್ರಸಿದ್ಧ ಕವನಗಳ ಸರಳಾನುವಾದವನ್ನೂ ಪೂರ್ವಭಾವಿಯಾಗಿ ತಿಳಿದುಕೊಂಡಿದ್ದರೆ ವಿಶೇಷ ಸಹಾಯವಾಗುವುದರಲ್ಲಿ ಸಂಶಯವಿಲ್ಲ. ಈ ಉದ್ದೇಶಕ್ಕನುಸಾರವಾಗಿ ಕರ್ನಾಟಕ ಸಾಹಿತ್ಯ ಪರಿಷತ್ತಿನವರು ಪಂಪ ಮಹಾಕವಿಯ ಭಾರತ ಗ್ರಂಥದ ಪರಿಷ್ಕೃತ ಮುದ್ರಣವನ್ನು ಪ್ರಕಟಿಸುವ ಸಂದರ್ಭದಲ್ಲಿ ಕವಿಚರಿತ್ರೆ ಮುಂತಾದ ವಿವರಗಳನ್ನೊಳಗೊಂಡ ಉಪೋದ್ಘಾತವನ್ನೂ, ಆ ಗ್ರಂಥದ ಗದ್ಯಾನುವಾದವನ್ನೂ ಸಹ ಪ್ರಕಟಿಸಿರುವರೆಂಬಂಶವು ನಮ್ಮ ವಾಚಕರಿಗೆ ವೇದ್ಯವೇ ಇರಬಹುದು. ಈ ಕಾರ್ಯದಲ್ಲಿ ಶ್ರೀ॥ ಬೆಳ್ಳಾವೆ ವೆಂಕಟನಾರಣಪ್ಪನವರ ಉಪಕಾರ ಚಿರಸ್ಮರಣೀಯವಾಗಿದೆ. ಇದೇ ರೀತಿ ಪಂಪ ಮಹಾಕವಿಯ ಮತ್ತೊಂದು ಪ್ರಸಿದ್ಧ ಕಾವ್ಯವಾದ 'ಆದಿಪುರಾಣ'ದ ವಿಚಾರದಲ್ಲಿಯೂ ಮೂಲಗ್ರಂಥದ ಸಂಗ್ರಹದ ಜೊತೆಗೆ

ವಿಮರ್ಶಾತ್ಮಕವಾದ ಉಪೋದ್ಘಾತ ಮುಂತಾದ ವಿವರಗಳನ್ನೂ ಪ್ರಚುರಪಡಿಸುವ ಪ್ರಯತ್ನವನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನ ಶಾಖೆಯವರು ಕೈಗೊಂಡಿರುತ್ತಾರೆಂದು ಕೇಳುತ್ತೇವೆ.

ಈ ಮಧ್ಯೆ ಇದೇ ಮಹಾಕವಿಯ 'ಆದಿಪುರಾಣ', 'ಭಾರತ' — ಈ ಎರಡೂ ಉದ್ಗ್ರಂಥಗಳ ಗದ್ಯಾನುವಾದವನ್ನೂ, ಕವಿಚರಿತ್ರೆಯನ್ನೂ ಸುಲಭವಾದ ಹೊಸಗನ್ನಡ ಶೈಲಿಯಲ್ಲಿ ಪ್ರಕಟಿಸುವ ಪ್ರಯತ್ನವನ್ನು ಕನ್ನಡದ ಪ್ರಸಿದ್ಧ ಸಾಹಿತಿಗಳಾದ ಮಂಗಳೂರು ಕಾಲೇಜಿನ ಕನ್ನಡ ಪಂಡಿತರು ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರು ಕೈಕೊಂಡಿರುವರೆಂಬ ಸಂಗತಿಯನ್ನು ಕೇಳಿ ತುಂಬಾ ಸಂತೋಷಿಸುತ್ತೇವೆ. ಇವರು ಸ್ವಯಂ ಸುಪ್ರಸಿದ್ಧ ಕನ್ನಡ ಕವಿಗಳು; ನಮ್ಮ ಪರಿಷತ್ತಿನ ಪೂರ್ಣ ಅಭಿಮಾನಿಗಳು; ಪರಿಷತ್ಪತ್ರಿಕೆಯ ಸಂಪಾದಕ ಮಂಡಲಿಯ ಸದಸ್ಯರಲ್ಲೊಬ್ಬರು; ಅಲ್ಲದೆ ೧೯೩೨ನೆಯ ಇಸವಿಯಲ್ಲಿ ಕಾರವಾರದಲ್ಲಿ ನಡೆದ ೧೮ನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಯನ್ನಲಂಕರಿಸಿದ್ದವರು — ಎಂದ ಮೇಲೆ ಇವರು ಪ್ರಕಟಿಸಬೇಕೆಂದು ಉದ್ದೇಶಿಸಿರುವ ಸುಮಾರು ಒಂದು ಸಾವಿರ ಪುಟಗಳಷ್ಟು ಪ್ರಮಾಣದ ಪಂಪ ಮಹಾಕವಿಯನ್ನು ಕುರಿತ ಮೂರು ಗ್ರಂಥಗಳೂ ಕನ್ನಡಿಗರ ಆದರವಿಶ್ವಾಸಗಳಿಗೆ ಪಾತ್ರವಾಗುವುದರಲ್ಲಿ ಸಂಶಯವಿರಲಾರದು. ಇಂತಹ ಶ್ಲಾಘನೀಯವಾದ ಪ್ರಕಟನ ಕಾರ್ಯವನ್ನು ಕೈಕೊಂಡ ಪಂಡಿತ ತಿಮ್ಮಪ್ಪಯ್ಯನವರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುವುದಲ್ಲದೆ, ಇವರ ಪ್ರಯತ್ನ ಪೂರ್ಣ ಸಾಫಲ್ಯಹೊಂದಿ ಇವರು ಇದೇ ರೀತಿಯ ಇತರ ಗ್ರಂಥಗಳ ಪ್ರಕಟನೆಯನ್ನು ಕೈಕೊಳ್ಳುವುದಕ್ಕೆ ತಕ್ಕ ಪ್ರೋತ್ಸಾಹ ದೊರೆಯುವಂತಾಗಲೆಂದು ಹಾರೈಸುತ್ತೇವೆ.

**ಪ್ರೊಫೆಸರ್ ವಿ. ಕೃ. ಗೋಕಾಕರಿಗೆ ಅಭಿನಂದನ**

ಹಲವು ವರ್ಷಗಳಿಂದ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರಾಗಿರುವ ಸುಪ್ರಸಿದ್ಧ ಕನ್ನಡ ಕವಿಗಳೂ, ಗ್ರಂಥಕರ್ತರೂ ಆದ ಪ್ರೊಫೆಸರ್ ವಿ. ಕೃ. ಗೋಕಾಕ, ಎಂ.ಎ. ಅವರು ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ಹೋಗಿರುವುದು ನಮ್ಮ ವಾಚಕರಲ್ಲನೇಕರಿಗೆ ತಿಳಿದಿರಬಹುದು. ಅವರು ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಬಿ.ಎ. ಪರೀಕ್ಷೆಯಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಪ್ರಥಮಶ್ರೇಣಿಯಲ್ಲಿ ಉತ್ತೀರ್ಣರಾಗಿರುವರೆಂದು ತಿಳಿಸಲು ಸಂತೋಷಿಸುತ್ತೇವೆ. ಇವರು ಇಂಗ್ಲೆಂಡಿನಲ್ಲಿರುವಾಗಲೂ ಸಹ ಕನ್ನಡದ ಅಭಿಮಾನವನ್ನು ಬಿಟ್ಟಿಲ್ಲವೆನ್ನುವುದಕ್ಕೆ ಇವರ ಅಲ್ಲಿನ ಅನುಭವಗಳನ್ನು 'ಸಮುದ್ರದಾಚೆಯಿಂದ' ಎಂಬ ಹೆಸರಿನಿಂದ ಧಾರವಾಡದ 'ಮನೋಹರ ಗ್ರಂಥಮಾಲೆ'ಯಲ್ಲಿ ಎರಡು ಭಾಗಗಳಾಗಿ ಪ್ರಕಟಿಸಿರುವುದೇ ನಿದರ್ಶನವಾಗಿದೆ. ಇವರು ತಮ್ಮ ವ್ಯಾಸಂಗವನ್ನು ಪೂರೈಸಿಕೊಂಡು ಸ್ವದೇಶಕ್ಕೆ ಹಿಂದಿರುಗಿದಮೇಲೂ ಕನ್ನಡದ ಅಭಿಮಾನವನ್ನು ಏಕರೀತಿ ಇರಿಸಿಕೊಂಡವರಾಗಿ ಕನ್ನಡಕ್ಕೆ ಇತೋಪ್ಯತಿಶಯವಾದ ಸೇವೆಯನ್ನು ಸಲ್ಲಿಸುತ್ತಾ ಬರಬೇಕೆಂದು ಪ್ರಾರ್ಥಿಸುತ್ತೇವೆ.

ಈ ಸಾರಿಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಬಳ್ಳಾರಿಯಲ್ಲಿ ನಡಸಬೇಕೆಂದು ಅಲ್ಲಿಯ ಜಿಲ್ಲಾ ಕರ್ನಾಟಕ ಸಂಘದವರು ವಿಶ್ವಾಸಪೂರ್ವಕವಾಗಿ ಕಳುಹಿಸಿ

**೨೩ನೆಯ ಕನ್ನಡ ಸಾಹಿತ್ಯ ಸಮ್ಮೇಳನ : ಬಳ್ಳಾರಿಯಲ್ಲಿ**

ಕೊಟ್ಟ ಆಹ್ವಾನವನ್ನು ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ ಅಂಗೀಕರಿಸಿರುತ್ತದೆ ಎಂಬ ಸಂಗತಿಯನ್ನು ತಿಳಿಸಲು ತುಂಬಾ ಸಂತೋಷಿಸುತ್ತೇವೆ. ಈ ಸಮ್ಮೇಳನದ ಸಿದ್ಧತೆಗೆ ಸಂಬಂಧಪಟ್ಟ ಎಲ್ಲ ಕಾರ್ಯಗಳನ್ನೂ ಕೈಕೊಳ್ಳಲು ಪ್ರಭಾವಶಾಲಿಗಳಾದ ಮಹನೀಯರನ್ನೊಳಗೊಂಡ ಒಂದು ಸಾರ್ವಜನಿಕ ಸಮಿತಿ ಈಗಾಗಲೇ ಬಳ್ಳಾರಿಯಲ್ಲಿ ಏರ್ಪಾಟಾಗಿರುವುದಾಗಿ ಕೇಳುತ್ತೇವೆ. ಅವರ ನೇತೃತ್ವದಲ್ಲಿ ಸಿದ್ಧಾಂತವಾಗಬಹುದಾದ ಏರ್ಪಾಡುಗಳ ಫಲವಾಗಿ ಸಮ್ಮೇಳನ ಅಭೂತಪೂರ್ವವಾದ ಯಶಸ್ಸಿನಿಂದಲೂ, ವಿಜೃಂಭಣೆಯಿಂದಲೂ ನಡೆಯುವುದರಲ್ಲಿ ಯಾವ ಸಂಶಯವೂ ಇರಲಾರದು. ಏಕೆಂದರೆ ಅವರು ಕಳೆದ ವರ್ಷದ ಸಮ್ಮೇಳನವನ್ನೇ ತಮ್ಮ ಊರಿನಲ್ಲಿ ನಡಸಬೇಕೆಂಬ ತೀವ್ರಾಕಾಂಕ್ಷೆಯಿಂದ ಅನೇಕ ಸಿದ್ಧತೆಗಳನ್ನು ಮಾಡಿಕೊಂಡಿದ್ದರು. ಆದರೆ ಕಾರಣಾಂತರಗಳಿಂದ ಅವರ ಅಭೀಷ್ಟವನ್ನು ನೆರವೇರಿಸಿಕೊಡಲು ಪರಿಷತ್ತಿಗೆ ಸಾಧ್ಯವಾಗದೆಹೋಯಿತು. ಈ ರೀತಿ ಅನಿರೀಕ್ಷಣೀಯವಾಗಿ ಆಶಾಭಂಗವಾದರೂ ಕೂಡ ಒಂದು ವರ್ಷ ಕಾಲ ಗತಿಸಿದ ಅನಂತರವೂ ಅವರು ಈ ಭಾಗದಲ್ಲಿ ಅವಿಚ್ಛಿನ್ನವೂ, ಅವ್ಯಾಹತವೂ ಆದ ಉತ್ಸಾಹವನ್ನಿರಿಸಿಕೊಂಡಿರುವುದನ್ನು ನೋಡಿದರೆ ಈ ಸಾರಿಯ ಸಮ್ಮೇಳನದಿಂದ ಪೂರ್ಣ ಫಲ ಪ್ರಾಪ್ತಿಯಾಗುವಂತೆ ಸಕಲ ಪ್ರಯತ್ನಗಳನ್ನೂ ಮಾಡಿಯಾರೆಂದು ನಾವು ಖಂಡಿತವಾಗಿಯೂ ನಿರೀಕ್ಷಿಸಬಹುದು.

ಕನ್ನಡ ಸಾಹಿತ್ಯ ಸಮ್ಮೇಳನ ಬಳ್ಳಾರಿ ಜಿಲ್ಲೆಯಲ್ಲಿ ಸೇರುವುದು ಇದು ಮೂರನೆಯ ಸಲ. ಮೊದಲನೆಯ ಸಲ ೧೯೨೦ನೆಯ ಇಸವಿಯ ಮೇ ತಿಂಗಳಿನಲ್ಲಿ ಕರ್ನಾಟಕ ರಾಷ್ಟ್ರದ ಗತವೈಭವದ ಸ್ಮಾರಕವೆಂದು ಹೇಳಬಹುದಾದ ಹೊಸಪೇಟೆಯಲ್ಲಿ ನಡೆಯಿತು. ಆಗ ಸಮ್ಮೇಳನದ ಅಧ್ಯಕ್ಷತೆಯನ್ನು ಶ್ರೀ ರೊದ್ದ ಕೋನೇರರಾವ್ ಶ್ರೀನಿವಾಸರಾಯರು ವಹಿಸಿದ್ದರು. ಅವರು ತಮ್ಮ ಭಾಷಣದಲ್ಲಿ ಕರ್ನಾಟಕ ಪ್ರಾಂತವು ತೆಲುಗು, ಮರಾಠಿ ಮುಂತಾದ ಇತರ ಭಾಷೆಗಳು ಪ್ರಧಾನವಾಗುಳ್ಳ ಅಧಿಕಾರಿಗಳ ಆಡಳಿತಕ್ಕೆ ಸಿಕ್ಕಿಬಿದ್ದ ಕಾರಣದಿಂದ ಕನ್ನಡ ತಲೆಯೆತ್ತುವುದಕ್ಕೇ ಮಾರ್ಗವಿಲ್ಲದೆಹೋಗಿರುವುದನ್ನು ಸ್ಪಷ್ಟೀಕರಿಸಿ ಈ ಭಾಗದಲ್ಲಿ ಕನ್ನಡಿಗರು ಎಚ್ಚೆತ್ತುಕೊಂಡು ತಮ್ಮ ಭಾಷೆಯ ಏಳಿಗೆಗಾಗಿ ಯಾವ ಪ್ರಯತ್ನಗಳನ್ನು ಕೈಕೊಳ್ಳುವುದು ಅವಶ್ಯವೆಂಬುದನ್ನು ವಿಶದೀಕರಿಸಿದರು.* ಎರಡನೆಯ ಸಲದ ಸಮ್ಮೇಳನ ೧೯೨೬ನೆಯ ಇಸವಿಯ ಮೇ ತಿಂಗಳಿನಲ್ಲಿ ಬಳ್ಳಾರಿ ಪಟ್ಟಣದಲ್ಲಿಯೇ ರಾವ್ ಬಹದ್ದೂರ್ ಶ್ರೀ॥ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ. ಅವರ

* 'ಪರಿಷತ್ಪತ್ರಿಕೆ', ಸಂಪುಟ ೫, ಸಂಚಿಕೆ ೨, ಪುಟ ೬೮–೭೫.

ಅಧ್ಯಕ್ಷತೆಯಲ್ಲಿ ನಡೆಯಿತು. ಅವರೂ ಸಹ ತಮ್ಮ ಅಧ್ಯಕ್ಷಭಾಷಣದಲ್ಲಿ ಕರ್ನಾಟಕದ ಗತವೈಭವವನ್ನು ಕುರಿತು ಪ್ರಸ್ತಾವಿಸಿ ಈಚೆಗೆ ಪ್ರಾಪ್ತವಾದ ಅವನತ ಸ್ಥಿತಿಯನ್ನು ಸರಿಪಡಿಸಲು ಕೈಕೊಳ್ಳಬೇಕಾದ ಮಾರ್ಗಗಳನ್ನು ಸೂಚಿಸಿದರು.* ಈಗ ಮೂರನೆಯ ಸಲ ಪುನಃ ಬಳ್ಳಾರಿಯಲ್ಲಿ ಸಮ್ಮೇಳನ ನಡೆಯುವುದು ಒಂದು ವಿಶೇಷವೇ ಸರಿ. ಕರ್ನಾಟಕದ ಏಕೀಕರಣ, ಕರ್ನಾಟಕಕ್ಕೆಲ್ಲಾ ಒಂದು ಪಠ್ಯಪುಸ್ತಕ ಸಮಿತಿ ಮುಂತಾದ ಮಹತ್ವದ ಪ್ರಶ್ನೆಗಳು ಈ ಸಮ್ಮೇಳನದ ಪರ್ಯಾಲೋಚನೆಗೆ ಬರಬಹುದು. ಸರ್ವವಿಧಗಳಿಂದಲೂ ವೈಶಿಷ್ಟ್ಯವನ್ನು ಪಡೆದಿರುವ ಈ ಸಮ್ಮೇಳನಕ್ಕೆ ಎಲ್ಲ ಪ್ರಾಂತಗಳ ಕನ್ನಡಿಗರೂ ದಯಮಾಡಿಸಿ ಅದರ ಕಾರ್ಯಕಲಾಪಗಳಿಗೆ ತಮ್ಮ ಸಹಾನುಭೂತಿಯನ್ನೂ ಬೆಂಬಲವನ್ನೂ ನೀಡಿ, ಸಮ್ಮೇಳನವನ್ನು ಜಯಪ್ರದವನ್ನಾಗಿ ಮಾಡಲು ಸಹಾಯಮಾಡಬೇಕೆಂದು ಪರಿಷತ್ತಿನ ಪರವಾಗಿ ಈ ಮೂಲಕ ಪ್ರಾರ್ಥಿಸಿಕೊಳ್ಳುತ್ತೇವೆ.

ಸಮ್ಮೇಳನದ ಮುಂದಿನ ಕಾರ್ಯಭಾಗಗಳಿಗೆ ಸಂಬಂಧಪಟ್ಟ ವಿವರಗಳನ್ನು ಕುರಿತು ಪರಿಷತ್ ಕಾರ್ಯಾಲಯುದವರೂ, ಸ್ವಾಗತ ಸಮಿತಿಯವರೂ ಆಗಿಂದಾಗ್ಗೆ ಸಮಾಚಾರ ಪತ್ರಿಕೆಗಳನ್ನು ಪ್ರಕಟಪಡಿಸುವವರಾಗಿದ್ದಾರೆ.

---

# ಪ್ರಾಚ್ಯ ಲೇಖನ ಮಾಲೆ

[ಪ್ರಾಚ್ಯ ದೇಶಗಳ, ಮುಖ್ಯವಾಗಿ ಭರತಖಂಡದ, ಭಾಷೆ, ಸಾಹಿತ್ಯ, ಚರಿತ್ರೆ, ಸಂಸ್ಕೃತಿ ಮುಂತಾದುವುಗಳ ಮೇಲೆ ಇತರ ಪತ್ರಿಕೆಗಳಲ್ಲಿ ಈಚೆಗೆ ಪ್ರಕಟವಾಗಿ ಬಂದಿರುವ ಮುಖ್ಯ ಲೇಖನಗಳು]

---

**Annals of the Bhandarkar Oriental Research Institute, Vol. 19, Part II**

1. "Toda Culture Thirty-five Years After: An Acculturation Study"—Mr. M. B. Emeneau.
2. "The Easter Island Script and the Script of Mohenjo Daro"—Rev. H. Heras, S.J., M.A.
   [The author contradicts the theory of Mons. G. de Hévesy that the scripts of the Easter Island, inscribed on wooden tablets discovered there, are similar to and earlier than those of the Mohenjo Daro scripts, and conjectures that the latter might have travelled from India towards the East and says that the similarity is coincidental, as, according to the author, there are instances of signs in both the scripts which are similar in appearance but read quite different meanings.]
3. "Occupations and Professions as seen in the Rāmāyaṇa"—Miss P. C. Dharma, M.A., L.T.
4. "The Date of Śrīkara Bhāshya"—Mr. S. Srikantha Sastri, M.A.
   [The author opines that the *Śrīkara Bhāshya* of Śrīpati Paṇḍita, which is assigned to the 14th century may not be the original *Śrīkara Bhāshya* and infers that it is the work of some unknown author of the last quarter of the 13th century who probably worked on an older Bhāshya attributed to Śrīpati.]

* 'ಪರಿಷತ್ಪತ್ರಿಕೆ', ಸಂಪುಟ ೧೧, ಸಂಚಿಕೆ ೨, ಪುಟ ೮೧–೯೬.

**The Quarterly Journal of the Mythic Society, Vol. 28, No. 4, April 1938**

1. " The Yakśa of the Vedas and Upanishads "—Dr. Ananda K. Coomaraswamy.

   [" . . . .in the scriptural tradition, *Yakśa* is virtually synonymous or coincident in reference with Brahman, Ātman, Puruśa, Mṛtyu, Agni, Prajāpati, Manas, etc., and designates that single spiritual principle which assumes a multiplicity and diversity of aspects by its immanence in all things, being at the same time essentially inaccessible, and at the same time always manifesting, and in this sense recognizable."]

2. " The Aruṇa Praçna and the Atharva Veda "—Mr. N. K. Venkatesam Pantulu, M.A., L.T.
3. " Divinity of Women in Hindu Thought "—Sri. M. R. Lakshamma, B.A.

   [In this article Sri. Lakshamma examines the position held by women in the cultural life of the Hindu Society from the Rig. Vedic period down to modern times and pleads for the improvement of the low status of women, particularly the Śūdra women who form the bulk of the women population.]

4. " Dravidic Sandhi " (Continued from Vol. 28, No. 2, P. 110) —Mr. L. V. Ramaswami Aiyar, M.A., B.L.
5. " Bālacharita Nāṭaka : A Note "—Mr. K. R. Pisharoti.

   [The author points out that *Bālacharita* is the earliest drama so far as the Kēraḷa-nāṭaka-chakra is concerned, and the first to be staged by the Çākyars, according to the technique devised by Kulaśēkhara, the dramatist.]

**The Quarterly Journal of the Mythic Society, Vol. 29, No. 1, July 1938**

1. " History of Devotional Literature in Kannada "—Mr. B. N. Krishnamurthi Sarma, M.A.

   [" The mission of the Dāsas was to educate the masses in the philosophy of Madhvācarya through the medium of Kannada. The earliest Dāsa of whom we have any information is Narahari Tīrtha (c. 1248–1333). But the real founder of the Dāsa-Kūta was Srīpādarāya, the guru of Vyāsarāya. Vyāsarāya had three eminent disciples, Purandara Dāsa, Kanaka Dāsa and Vādirāja. Purandara Dāsa (c. 1500–70) is admittedly the dominating figure in the Dāsa-Kūta. There were a host of others succeeding Vādirāja, and the Dāsa-Kūta is thus to this day a *living force* in Karnāṭaka."]

2. " The Significance of Megalithic Monuments "—Mr. L. A. Krishna Iyer, M.A.

**Indian Culture, Vol. 4, No. 4, April 1938**

1. " Thieme and Pāṇini"—Dr. Batakrishna Ghosh, D.Phil., D. Litt.
2. " Aditi and the Great Goddess "—Mr. Vasudeva S. Agarwala, M.A.
3. " The ' Liṅga Purāna ' (Edited by Jīvānanda Vidyāsāgara, Calcutta, 1805) "—Dr. Rajendra Chandra Hazra, M.A., Ph.D.

   [A manual of the Liṅga-worshippers, inculcating the worship of the Phallic emblem of Śiva ; contains a good number of chapters on Smṛti-topics, mainly religious ; is not the earlier one which was noticed by the *Matsya, Skanda* and *Agni* ; is most probably the result of a destructive recast to which the earlier Purāṇa was subjected. Date: between 600 to 1000 A.D.]

4. " Horse in the Pre-Maurya Art "—Mr. Charu Chandra Das Gupta, M.A.

["The representation of the horse in early Indian art may be traced back to the chalcolithic age and there is no cogent reason to hold the view that the horse which is chiselled on the abacus of the well-known Saranath lion-capital is the earliest representation of this animal in Indian art."]

5. "Mādhva Influence on Bengal Vaishṇavism"—Mr. B. N. Krishnamurti Sarma, M.A.
6. "The Date of the Arthaśāstra"—Mr. Atindra Nath Bose, M.A.
[The author has gathered a few evidences, mostly from the *Arthaśāstra* itself, on the strength of which he disagrees with the 4th century theory of Mr. Vincent Smith and Dr. Shama Sastri and inclines in favour of the 1st century A.D. as the probable date of the *Arthaśāstra*.]
7. "Musical Culture in the Rāmāyaṇa"—Miss P. C. Dharma, M.A.
8. "Internal Security in the Vijayanagara Empire"—Dr. B. A. Saletore, M.A., Ph.D.
9. "Identity of Makkibhaṭṭa, the author of a commentary on Sripati's *Siddhānta-Śēkhara* with Makkibhaṭṭa, the author of a commentary on the *Raghuvaṁśa*"—Mr. P. K. Gode, M.A.
10. "Materials for a Dhātupātha of Indo-Aryan (I)"—Mr. S. M. Katre, M.A., Ph.D.
11. "One Bhāsa Verse and its bearing on the Bhāsa Problem"—Mr. A. D. Pusalkar, M.A., LL.B.
[*Abhinava Bhārati*, a commentary on the *Bharata Nāṭya Śāstra* by Abhinava Gupta, contains one verse from Bhāsa which refers to a Rāma play, and which, in the opinion of the author of this article, appropriately fits in to *Abhishēka* (rather than to *Pratimā*), thus connecting it with Bhāsa.]

**The Journal of the Punjab University Historical Society, Vol. 5, April 1938**

"India's Contribution to World Civilization"—Mr. Lakshman Sarup.

**The Journal of the Royal Asiatic Society of Great Britain & Ireland, July 1938**

"The Earliest Jain Sculptures in Kathiawar"—Mr. H. D. Sankalia.
[Mr. Sankalia identifies some of the figures in the sculptures, discovered at first by Mr. Burgess in Dhank (Kathiawar) and thought by him to be Buddhistic, with the Jaina Tirthankaras and places the sculptures in the early 4th century.]

**The Journal of the Benares Hindu University, Vol. 2, No. 2**

"The Meaning of Veda and the Significance of Vedic Yajñas"—Dr. Radha Kumud Mookerji, M.A., Ph.D.

**The Modern Review, July 1938**

"Why Karnāṭak should be separated"—Mr. V. B. Kulkarni.

**The Modern Review, August 1938**

"An Illustrated Manuscript of the Bhāgavata from Orissa"—Mr. O. C. Ganguly.

**New Indian Antiquary, Vol. 1, No. 1, April 1938**

"Southern India, Arabia and Africa"—Mr. K. A. Nilakanta Sastry.

**Triveni, July 1938**

1. "Bengali Poets of to-day"—Prof. Mohini Mohan Mukherjee.
2. "Recent Tamil Literature"—Mr. M. S. Ramaswami.

**Triveni, August 1938**

" The Case for Karnāṭaka "—Mr. V. B. Kulkarni.

**The Indian P. E. N., Vol. 4, No. 7, July 1938**

1. " Bankim Chandra Chatterji (1838–1894) "—Prof. Priyaranjan Sen.
2. " Saint Vilvamangala "—Rao Sahib Mahakavi Ullur S. Parameswara Aiyar.

**The Jaina Antiquary, Vol. 4, No. 2, September 1938**

" Jaina Literature in Tamil "—Prof. A. Chakravarti, M.A., I.E.S.

[The author briefly traces the origin and growth of the Jaina Dharma in Northern India from the Vedic times, and maintains that the introduction of Jainism in the South must be prior to the 4th century B.C., as against the generally supposed view that the migration of the Jainas to South India began at the time of Bhadrabāhu, guru of Chandra-Gupta Maurya, both of whom are said to have come and settled for some time at Śravaṇa Beḷgoḷa (Mysore State).]

**The Quarterly Journal of the Bharata Itihasa Samshodhaka Mandala (Marathi), Vol. 20, No. 1, July 1938**

" New Light on the meaning of Ślesha, a figure of speech "—Mr. H. M. Nene, M.A., L.T.

[" Sanskrit Rhetoricians define Ślēsha nearly in the same way generally. Bhāmaha gives a slightly different definition. In the oldest Marāṭhī literary works, such as *Jñānēśvarī*, *Vatsaharaṇa*, *Rukmiṇī-Svayaṁvara* Ślēsha as also Upamā, etc., have altogether different characteristics. In this respect the authors of the above works seem to have followed some unknown works on rhetorics."]

**ಪ್ರಬುದ್ಧ ಕರ್ನಾಟಕ — ಸಂಪುಟ ೧೯, ಸಂಚಿಕೆ ೪**

೧. ತಿರುವಾರೂರ ಹಿರಿಮೆ

—ಅನುವಾದಕರು : ಶ್ರೀ॥ ಎಲ್. ಗುಂಡಪ್ಪನವರು, ಎಂ.ಎ.

೨. ಗ್ರೀಕ್ ರುದ್ರ ನಾಟಕ

—ಶ್ರೀ॥ ಕೆ. ವಿ. ರಾಘವಾಚಾರ್ಯರು, ಎಂ.ಎ., ಬಿ.ಟಿ.

೩. ಕೆಲವರು ವಚನಕಾರರು (೨)

—ಶ್ರೀ॥ ಡಿ. ಎಲ್. ನರಸಿಂಹಾಚಾರ್ಯರು, ಎಂ.ಎ.

೪. ಪ್ರಾಚೀನ ಭಾರತೀಯ ಸಂಸ್ಕೃತಿ

—ಶ್ರೀ॥ ಎಸ್. ಶ್ರೀಕಂಠಶಾಸ್ತ್ರಿಗಳು, ಎಂ.ಎ.

[" ಭಾಷಾಪರವಾದ ಆರ್ಯ ದ್ರಾವಿಡ ಎಂಬ ಹೆಸರುಗಳನ್ನು ಜನಾಂಗದ ಪರವಾಗಿ ಪ್ರಯೋಗಿಸುವುದು ಶುದ್ಧ ತಪ್ಪು. ಆರ್ಯ ಜನಾಂಗ, ದ್ರಾವಿಡ ಜನಾಂಗ ಎಂಬ ಭೇದಕ್ಕೆ ಶಾರೀರಕಶಾಸ್ತ್ರದಿಂದ ಯಾವ ಪ್ರಮಾಣವೂ ಕಂಡುಬರುವುದಿಲ್ಲ. ಹರಪ್ಪ ಸಂಸ್ಕೃತಿ ಶುದ್ಧ ಹಿಂದೂ ಸಂಸ್ಕೃತಿಯೆಂಬುದು ಎಲ್ಲರಿಗೂ ಸ್ಪಷ್ಟವಾಗಿದೆ. ಮೊಹೆಂಜೋದಾರೊಗಿಂತಲೂ ಹರಪ್ಪ ಪಟ್ಟಣ ಪ್ರಾಚೀನ. ಅದಕ್ಕಿಂತಲೂ ಆಮ್ರಿ ಮತ್ತು ನಾಲ್ ಸಂಸ್ಕೃತಿಗಳು ಹಿಂದಿನವು. ಆದುದರಿಂದ ಪ್ರಾಚೀನ ಭಾರತ ಸಂಸ್ಕೃತಿ ಕ್ರಿ. ಪೂ. ೭೦೦೦ದ್ದೆಂದು ಖಂಡಿತವಾಗಿ ಹೇಳಬಹುದು.... ಹಿರಾಸರ ದ್ರಾವಿಡ ವಾದವೂ ಕೇವಲ ಊಹಾ ಪ್ರಪಂಚದಲ್ಲಿಯೇ ಇರುವುದೇ ವಿನಾ ನಿರ್ದುಷ್ಟವಾದ ಆಧಾರಗಳು ಸಿಗುವವರೆಗೂ (ಹರಪ್ಪ ಭಾಷೆ) ದ್ರಾವಿಡ ಭಾಷೆಯೆಂದೇ ನಿರ್ದೇಶಿಸುವುದು ಅಸಮಂಜಸವೆಂದು ಹೇಳಬೇಕು."]

**ಜಯಕರ್ನಾಟಕ— ಸಂಪುಟ ೧೩, ಸಂಚಿಕೆ ೭; ಜುಲೈ ೧೯೩೪**

ಇಂದಿನ ಸಾಹಿತ್ಯ

—ಅನುವಾದಕರು: ಶ್ರೀ॥ ಬಿ. ಅಶ್ವತ್ಥನಾರಾಯಣರಾಯರು (ರಾವ್ ಸಾಹೆಬ್ ಮಹೋಪಾಧ್ಯಾಯ ವ್ಯಾಕರಣಾಚಾರ್ಯ ಗಡುಗು ವೆಂಕಟರಾಮ ಮೂರ್ತಿ ಪಂತುಲು ಅವರ ತೆಲುಗು ಲೇಖನದ ಅನುವಾದ).

**ಜಯಕರ್ನಾಟಕ— ಸಂಪುಟ ೧೩, ಸಂಚಿಕೆ ೯; ಸೆಪ್ಟೆಂಬರ್ ೧೯೩೪**

೧. ಕನ್ನಡ ವ್ಯಾಕರಣದಲ್ಲಿಯ ತ್ರಿದೋಷಗಳ ಚರ್ಚೆ

— ಶ್ರೀ॥ ಬೆಂಗೇರಿ ಹುಚ್ಚರಾಯರು, ಎಂ.ಎ., ಬಿ.ಟಿ.

೨. ಸಂಗೀತ ಕಚೇರಿ: ಕನ್ನಡದಲ್ಲಿ— ಶ್ರೀಮತಿ 'ವಸುಂಧರ'

[" ಕನ್ನಡ ನಾಡಿನ ಕೀರ್ತಿ ಬೆಳೆಯಬೇಕಾದರೆ ನಮ್ಮ ನಾಡಿನ ಘನತೆಗೆ ತಕ್ಕಂತೆ 'ಕನ್ನಡ ಸಂಗೀತ ಸಾಹಿತ್ಯವು' ವೃದ್ಧಿಯಾಗಬೇಕು. ಇರುವ ದೇವರ ನಾಮುಗಳಿಗೆಲ್ಲ ಸ್ವರ ಹಾಕಿ ಹಾಡಲು ಅನುಕೂಲಿಸುವಂತೆ ಪ್ರಕಟಿಸಬೇಕು. ಸಂಗೀತಗಾರರು ಮತ್ತಷ್ಟು ಶ್ರಮಪಟ್ಟು ತೆಲುಗು ಸಾಹಿತ್ಯದ ಜೊತೆಗೆ ಹೆಚ್ಚು ಹೆಚ್ಚು ಕನ್ನಡ ಸಾಹಿತ್ಯವನ್ನೂ ಸಂಗ್ರಹಿಸಬೇಕು."]

**ಶರಣ ಸಾಹಿತ್ಯ— ಸಂಪುಟ ೧, ಸಂಚಿಕೆ ೭**

೧. ಕವನ ಕಲೆ—ಕೀರ್ತನಕೇಸರಿ ಶ್ರೀ॥ ಬಿ. ಶಿವಮೂರ್ತಿಶಾಸ್ತ್ರಿಗಳು.

೨. ಜೈನ ಸಂಸ್ಕೃತ ಸಾಹಿತ್ಯ

—ನ್ಯಾಯಾಚಾರ್ಯ ನ್ಯಾಯಭೂಷಣ ಶ್ರೀ॥ ಕೆ. ಭುಜಬಲಿ ಶಾಸ್ತ್ರಿಗಳು.

[ಜೈನಗ್ರಂಥಗಳಲ್ಲಿ ಶ್ರೀ ಕುಂದಕುಂದಾಚಾರ್ಯರ ಗ್ರಂಥಗಳೇ ಸರ್ವ ಪ್ರಾಚೀನವಾಗಿವೆ. ಇವರು ಕ್ರಿ. ಶ. ೧ನೆಯ ಶತಮಾನದವರು. ಕುಂದ ಕುಂದಾಚಾರ್ಯರ ಶಿಷ್ಯರಾದ ಶ್ರೀ ಉಮಾಸ್ವಾತಿಗಳನ್ನು ಜೈನ ಸಂಸ್ಕೃತ ಸಾಹಿತ್ಯದ ಆದಿ ಕವಿಯನ್ನಾಗಿ ಒಪ್ಪುವುದು ಸುಸಂಗತವಾಗಿದೆ. ಅನಂತರ ಕ್ರಮವಾಗಿ ಶ್ರೀ ಸಮಂತಭದ್ರರು, ಶ್ರೀ ಸಿದ್ಧಸೇನರು ಮೊದಲಾದ ನೂರಾರು ಮಂದಿ ಜೈನಾಚಾರ್ಯರು ಜನ್ಮತಾಳಿ ಸಂಸ್ಕೃತ ಸಾಹಿತ್ಯದ ಸೇವೆ ನೆರವೇರಿಸಿರುತ್ತಾರೆ. ಅವರಲ್ಲಿ ಪ್ರಮುಖರಾದ ಬಹುಮಂದಿ ಕರ್ನಾಟಕ ಪ್ರಾಂತೀಯರು ಎಂಬುದು ಸ್ಮರಣಾರ್ಹವಾದ ಸಂಗತಿ.]

೩. ಕನ್ನಡ ಸಾಹಿತ್ಯದಲ್ಲಿ ಹತ್ತನೆಯ ಶತಮಾನವು ("ರತ್ನತ್ರಯಯುಗ")

— ಶ್ರೀ॥ ಜಿ. ಡಿ. ರಾಜಶೇಖರಯ್ಯನವರು, ಬಿ.ಎ. (ಆನರ್ಸ್)

೪. ಲಿಂಗಾಂಗೀ ಧರ್ಮರಹಸ್ಯ

— ಶ್ರೀ॥ ಎಂ. ಎಸ್. ಬಸವಲಿಂಗಯ್ಯನವರು, ಎಂ.ಎ., ಬಿ.ಎಲ್.

೫. ಸಿದ್ಧರಾಮೇಶ್ವರನಿಗೆ ಚೆನ್ನಬಸವೇಶ್ವರನಿಂದ ಶಿವದೀಕ್ಷೆಯಾದುದು ಐತಿಹಾಸಿಕವೇ?— ಎಂಬ ಪ್ರಶ್ನೆಗೆ ಉತ್ತರ.

— ಶ್ರೀ॥ ಜೀರಗೆ ಕೆ. ಬಸವಪ್ಪನವರು, ಬಿ.ಎ.

['ಶರಣ ಸಾಹಿತ್ಯ'ದ ೫ನೆಯ ಸಂಚಿಕೆಯಲ್ಲಿ ಶ್ರೀ॥ ಕಪಟ್ರಾಳ್ ಕೃಷ್ಣರಾಯರು ಶ್ರೀ ಸಿದ್ಧರಾಮೇಶ್ವರನ ಶಿವದೀಕ್ಷೆಯ ವಿಚಾರದಲ್ಲಿ ಎತ್ತಿದ ಚಾರಿತ್ರಕವಾದ ಪ್ರಶ್ನೆಗೆ, "ಶಿವದೀಕ್ಷೆಯಾದುದು ಐತಿಹಾಸಿಕ" ಎಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.]

**ಶರಣ ಸಾಹಿತ್ಯ— ಸಂಪುಟ ೧, ಸಂಚಿಕೆ ೮**

೧. ವೈದಿಕ ಧರ್ಮದ ವ್ಯಾಪಕತೆ
— ಶ್ರೀ॥ ಎಂ. ಜಿ. ನಂಜುಂಡಾರಾಧ್ಯರು.

೨. ವೀರಶೈವರ ಸಾಧನ ಸಂಪತ್ತು
— ಶ್ರೀ॥ ಆಲೂರ ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ.

೩. ಉಪನಿಷತ್ತು ಮತ್ತು ವಚನಶಾಸ್ತ್ರ (೧)
— ಶ್ರೀ॥ ಎಂ. ಡಿ. ಬಸವಪ್ಪನವರು.

೪. ಮಹಾಕವಿ ಕಾಳಿದಾಸ
— ಆಸ್ಥಾನ ಮಹಾವಿದ್ವಾನ್ ಶ್ರೀ॥ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳು.

**ಶರಣ ಸಾಹಿತ್ಯ— ಸಂಪುಟ ೧, ಸಂಚಿಕೆ ೯**

೧. ಮಧ್ಯಕಾಲೀನ ಹಿಂದೂ ಧರ್ಮ
— ಶ್ರೀ॥ ಎಂ. ಜಿ. ನಂಜುಂಡಾರಾಧ್ಯರು.

೨. ಅಕ್ಕಮಹಾದೇವಿಯ ಆಧ್ಯಾತ್ಮಿಕ ಪ್ರಗತಿ
— ಶ್ರೀ॥ ಅ. ನ. ಕೃಷ್ಣರಾಯರು.

೩. ಅಮರಗೊಂಡದ ಮಹಾಕವಿಗಳು
— ಕೀರ್ತನಕೇಸರಿ ಶ್ರೀ॥ ಬಿ. ಶಿವಮೂರ್ತಿಶಾಸ್ತ್ರಿಗಳು.

೪. ಉಪನಿಷತ್ತು ಮತ್ತು ವಚನಶಾಸ್ತ್ರ (೨)
— ಶ್ರೀ॥ ಎಂ. ಡಿ. ಬಸವಪ್ಪನವರು.

೫. ವೀರಶೈವ ಸಾಹಿತ್ಯ
— ಶ್ರೀ॥ ಎಸ್. ಎಸ್. ಮಾಳವಾಡರವರು, ಎಂ.ಎ.

**ಶಿವಾನುಭವ— ಸಂಪುಟ ೧೨, ಸಂಚಿಕೆ ೯**

೧. ಬಸವೇಶ್ವರನ ನೀತಿ ತತ್ತ್ವ
— ಶ್ರೀ॥ ಎಸ್. ವಿ. ಹಂಜಿ ಅವರು, ಬಿ.ಎ.

೨. ಶತಕತ್ರಯವು
— ಶ್ರೀ॥ ಮುರಿಗೆಪ್ಪ ಸಿದ್ದಪ್ಪ ಗುಡ್ಡದ ಅವರು

೩. ಅರುವಿನ ಮಾರಿತಂದೆಗಳ ವಚನಗಳು (ಪು. ೫೭-೬೪)

**ಸದ್ಧರ್ಮ ದೀಪಿಕೆ— ಸಂಚಿಕೆ ೪೪**

೧. ನಿರಂಜನವಂಶ ರತ್ನಾಕರ (ಪು. ೧೨೩-೧೩೪)

೨. ಕರಸ್ಥಲದ ನಾಗಲಿಂಗಯ್ಯನವರ ತ್ರಿವಿಧಿ (೧೭-೩೨)

೩. ಸಿದ್ಧೇಶ್ವರ ತ್ರಿವಿಧಿ (೧-೮)

1234—38 — ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

THE QUARTERLY JOURNAL
OF THE
KANNADA LITERARY ACADEMY

Vol. XXIII] OCTOBER–DECEMBER, 1938 [No. 4

## CONTENTS IN BRIEF

**I. The Works of Kanaka Dāsaru : A Critical Survey :** *By Srimati M. R. Lakshamma, B.A., Mysore.*

This is an essay which received Honourable Mention in the "Bhaskara Rao Memorial Competition" held by the Parishat last year. It deals briefly with the works of Kanaka Dāsaru, a Kannada poet of the 16th century A.D., whose speciality consists in the composing of Devotional Songs which have become popular in every Hindu household in the country.

The works of the poet, as presented by the authoress of the article, are the following : (1) *Mōhana Tarangiṇi*, containing about 2,905 stanzas in the *Sāngatya* metre, a Ballad metre of Kannada, dealing with the sequel-story of the destruction of Kāmadéva ; (2) *Naḷa Çaritre*, the epic-story of Nala and Damayanti, told in simple and beautiful style in the popular Kannada metre Bhāmini Ṣaṭpadi ; (3) *Rāmadhānya Çaritre*, also in Bhāmini Ṣaṭpadi metre, said to be a unique piece of composition in Kannada Literature, which describes how a quarrel arose between *Rice* and *Rāgi* which are the two staple grains in use in this country and how the latter was proved to be superior in worth to the former and how it happened to be the chosen food of Sri Rāma and how in consequence it came to be styled "Rāma Dhānya"; (4) about 188 devotional songs, gathered in a bunch only recently, some of them pouring out the deep-felt yearnings of the heart, some preaching truth and sincerity and condemning hypocrisy, some partly philosophical and partly mystical, and all of them having a lyrical charm about them ; and (5) *Haribhaktisāra*, also a devotional work, describing the greatness of Vishnu and his bountiful mercy.

As pointed out in the Essay, the works of the poet are characterised by a fluent and attractive style, picturesque simles and sincerity of thought, and they have immortalised him as the popular poet that he continues to be even to this day.

**II. Basavéswara :** *By Mr. S. Srikantha Sastri, M.A., Mysore.*

In this short note, the author identifies Bijjaṇa, the Royal master of Basavéswara who is said to be the Founder of the Veerasaiva Religion, with one Bijjarasa (A.D. 1169–1174) of the Sinda Dynasty as against the usual identification of the said Bijjana either with the Bijjala of the Chālukya Dynasty or with the Bijjala of the Kālachūri Dynasty.

**III. Ranna's 'Gadāyuddha' : The date of its composition :** *By Pandit M. Chennakrishnaiya, Bangalore.*

The last stanza of the above work of the ancient Kannada Poet Ranna has some definite clues as to the date of its composition. The late Mahamahopadhyaya R. Narasimhacharya had cleverly inferred the date to be Śaka 905 (*i.e.*, A.D. 983), saying that the exact meaning of the stanza could not be made out. The present author of the Note has attempted to explain the meaning of the stanza and has come to the conclusion that the date of composition as given out therein is Śaka 904 (*i.e.*, 982 A.D.).

**IV. Nālmaṇi Kaḍuku : (Translation)** *By Mr. L. Gundappa, M.A., Bangalore.*

This is a translation in Kannada of the famous Tamil work *Nānmaṇikkaḍigai*, a *Nīti Ṣataka* (One Hundred Moral Sayings) by Viḷambināganār. The work belongs to the third Sangam age of classical Tamil Literature.

**V. Book Reviews and Acknowledgments :** Number of books reviewed : 22 ; Number of books acknowledged : 119.

**VI. Reports from Affiliated Institutions :** The Karnataka Sanghas of : Shimoga ; Tiptur ; Mandya ; Kolar ; Chitaldrug ; Chennarayapatna ; Shiralakoppa ; Rudrapatna ; Government Training College, Mysore ; Anavatti ; Sagar ; Maharani's College, Mysore.

**VII. Editorial Notes :** Achievements of Prince Jayachamaraja Wadiyar who was the recipient of five Gold Medals in the B.A. degree examination of the Mysore University—Conferment of the title of "*Rajascvasakta*" on Prof. B. M. Srikantia, M.A., B.L., and of "*Vidyanidhi*" on Mahamahopadhyaya Siddhanti Sivasankara Sastri, and award of a Public Service Medal to Srimati R. Kalyanamma, by His Highness the Maharaja of Mysore—Celebration of the Sixtieth Birthday of Mahakavi Vallathol, the well-known Kerala Poet—Conferment of the title of "*Mahakavi*" on Sri Chellapilla Venkata Sastri at the Convocation of the Telugu Academy of Higher Learning held in Madras in November last—Conferment of the title of "*Kalaprapurna*" on Sri Jayanti Ramayya Pantulu and Sri Gidugu Venkataramamurti Pantulu as well as on *Mahakavi* Sri Chellapilla Venkata Sastri—Conferment of the honorary degree of "Doctor of Literature" on the Maharaja of Pithapur and the unveiling of the Bronze Statue of the Maharaja of Jaipur at the Andhra University Convocation on 1st December—Unveiling at the Parishat (on 16th December) of the Portrait of the late Prāktanavimarṣaviçakṣaṇa Prāçyavidyāvaibhava Mahāmahopādhyāya Rao Bahadur R. Narasimhacharya, M.A., M.R.A.S.—Condolences at the demise of (1) Srimati Nagamma, M.A., L.T. ; (2) Srimati Kanakalakshamma, M.A. ; (3) Rajasevanipuna S. Shamanna, B.A., Financial Secretary to the Government of Mysore ; and (4) Jagannatha Mahale, Editor of the *Bombay Kannadiga*, a new Kannada Weekly published from Bombay—Demise of Dr. Brajendra Nath Seal who was for some time the Vice-Chancellor of the University of Mysore—Generous help of the Government of Bombay for the promotion of cultural knowledge of the Kannada country : a non-recurring grant of Rs. 8,000 and a recurring grant of Rs. 12,000 sanctioned for research work in "Karnataka Culture" to be carried on under the auspices of the Karnataka College at Dharwar—*History of Kannada Nād* (Country) : to be published by the Parishat next year from out of "H. H. the Yuvaraja's Publication Fund" ; appointment of a Committee of Scholars, *viz.*, Dr. Saletore of Poona, Mr. P. B. Desai of Dharwar, Dr. S. C. Nandimath of Belgaum, Dr. M. H. Krishna of Mysore, Prof. T. S. Venkannaiya of Mysore, and Prof. B. M. Srikantia (*Chairman*), to bring out the publication by May next—Mysore University Senate's decision to start a University Settlement of Graduates in villages for rural uplift work—The rôle of the Karnataka Sanghas : Karnataka Sanghas to serve as centres for the dissemination of knowledge among the common-folk : speech by Sir Mirza M. Ismail at the Karnataka Sangha, Chennarayapatna—Sri. R. R. Diwakar, M.A., LL.B., well-known Kannada literateur of Dharwar, elected Presidernt of the ensuing Kannada Sahitya Sammelan at Bellary—Opening of the Sammelan by H. H. the Raja Saheb of Sandur—Presentation of Address on behalf of the members of the Parishat to Rajasevasakta Prof. B. M. Srikantia at a congratulatory meeting to be held in his honour on the 29th in connection with the Sammelan, under the presidentship of Mr. Benegal Rama Rao, M.A., LL.B.—Unveiling by Mr. M. Venkatesa Iyengar, M.A., of the Portrait of the late Abhinava Kalidasa Basavappa Sastri, famous for his excellent Kannada translation of 'Sākuntala', at a Memorial meeting held in the Parishat hall (on 22–12–1938) under the auspices of the 'Sarana Sahitya Patrika Office', under the presidentship of Mr. F. C. Devaraja Urs—A meeting in honour of *Karnataka Nataka Sarvabhauma* Sri Gubbi Veeranna, versatile actor and proprietor of the 'Gubbi Dramatic Company', arranged by Keertana Kesari B. Sivamurty Sastri, Editor, 'Sarana Sahitya,' and held (on 23–12–1938) in the Parishat hall under the presidentship of Rajakaryaprasakta Rao Bahadur M. Shama Rao, Esq., M.A.—Reorientation of Indian Music : Thoughtful inaugural address by H. H. the Yuvaraja of Mysore at the opening of the 12th Annual Conference of the Music Academy of Madras on 23–12–1938.

*Illustrations :* (1) Rajasevasakta Mr. B. M. Srikantia, (2) Srimati R. Kalyanamma, (3) Siddhanti Sri. Sivasankara Sastri, and (4) The late Mahamahopadhyaya R. Narasimhacharya.



ಸಂಪುಟ ೨೩ ]

## ವಿ ಷ ಯ ಸೂ ಚಿ ಕೆ

[ಸಂಚಿಕೆ ೪



---

# ವಿನಿಮಯ ಪತ್ರಿಕೆ ಮತ್ತು ಪ್ರಕಟನೆಗಳ ಪಟ್ಟಿ

**ತ್ರೈಮಾಸಿಕ ಪತ್ರಿಕೆಗಳು:—** ೧. Journal of the Mythic Society. ೨. Journal of the Andhra Historical Research Society. ೩. Journal of the Bharata Itihasa Samshodhaka Mandala. ೪. Maharashtra Sahitya Parishat Patrika. ೫. The Karnatak Historical Review. ೬. Journal of the Annamalai University. ೭. Journal of the Bombay Branch of the Royal Asiatic Society. ೮. Indian Culture. ೯. Journal of the K. R. Cama Oriental Research Institute. ೧೦. Journal of Indian History. ೧೧. Journal of the International Mediterranean Association. ೧೨. Zeitschrift für Indologie und Iranistik. ೧೩. ಶ್ರೀಮನ್ ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ ಪತ್ರಿಕಾ. ೧೪. ಪ್ರಾಚೀನ ಕರ್ನಾಟಕ. ೧೫. ಪ್ರಬುದ್ಧ ಕರ್ಣಾಟಕ. ೧೬. ವಂಗೀಯ ಸಾಹಿತ್ಯ ಪರಿಷತ್ಪತ್ರಿಕೆ. ೧೭. The Jaina Antiquary (ಜೈನ ಸಿದ್ಧಾಂತ ಭಾಸ್ಕರ). ೧೮. Hindustani. ೧೯. ಹಳ್ಳಿಯ ಆಳು. ೨೦. ಗರಿಕೆ. ೨೧. Annals of the Bhandarkar Oriental Research Institute. ೨೨. The Astrological Magazine.

**ದ್ವೈಮಾಸಿಕ ಪತ್ರಿಕೆಗಳು:—** ೧. Journal of the Bombay University. ೨. ಆಂಧ್ರ ಸಾಹಿತ್ಯ ಪರಿಷತ್ ಪತ್ರಿಕೆ. ೩. ಶಿವಾನುಭವ. ೪. Bulletin of the Museum of Fine Arts.

**ಮಾಸ ಪತ್ರಿಕೆಗಳು:—** ೧. The Mysore Economic Journal. ೨. Jaina Gazette. ೩. The Indian P.E.N. ೪. ಅಧ್ಯಾತ್ಮ ಪ್ರಕಾಶ. ೫. ಆರೋಗ್ಯ ಚಂದ್ರಿಕೆ. ೬. ಜಯಕರ್ನಾಟಕ. ೭. ಮೈಸೂರು ಸಹಕಾರ ಪತ್ರಿಕೆ. ೮. ದಿವ್ಯಜ್ಯೋತಿ. ೯. ಸುಬೋಧ. ೧೦. ಸದ್ಬೋಧ ಚಂದ್ರಿಕೆ. ೧೧. ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ. ೧೨. ಕಾದಂಬರೀ ಸಂಗ್ರಹ. ೧೩. ದೇಶೀಯ ವಿದ್ಯಾಶಾಲಾ ಪತ್ರಿಕೆ. ೧೪. ಮೈಸೂರು ಮಕ್ಕಳು. ೧೫. ಸದ್ಧರ್ಮದೀಪಿಕೆ. ೧೬. ಮಕ್ಕಳ ಪುಸ್ತಕ. ೧೭. ವಿವೇಕಾಭ್ಯುದಯ. ೧೮. ತ್ರಿವೇಣಿ. ೧೯. ಕತೆಗಾರ. ೨೦. ಭಾರತಿ. ೨೧. ಬಡವರ ಬಂಧು. ೨೨. ನಗುವ ನಂದ. ೨೩. ಭಾರತಿ (ತೆಲುಗು). ೨೪. ಕಥಾಕುಂಜ. ೨೫. ವೀರಶೈವ ಚಂದ್ರಿಕೆ. ೨೬. ಸಂಸ್ಕೃತ ಸಾಹಿತ್ಯ ಪರಿಷತ್ಪತ್ರಿಕೆ. ೨೭. ಸರಸ್ವತಿ. ೨೮. ಹಂಸ. ೨೯. ವಿಮಾ ವಾಣಿಜ್ಯ. ೩೦. ವಿದ್ಯಾದಾಯಿನಿ. ೩೧. ವಿವಿಧ ವಿಜ್ಞಾನ ವಿಸ್ತಾರ. ೩೨. ಶರಣ ಸಾಹಿತ್ಯ. ೩೩. ಜಯಂತಿ. ೩೪. ಚಿತ್ರಾ.

**ವಾರ ಪತ್ರಿಕೆಗಳು:—** ೧. ರಾಜಹಂಸ. ೨. ಸ್ವದೇಶಾಭಿಮಾನಿ. ೩. ಕಂಠೀರವ. ೪. ರಾಷ್ಟ್ರಬಂಧು. ೫. ಕರ್ನಾಟಕ ವೈಭವ. ೬. ಶರಣ ಸಂದೇಶ. ೭. ಬಸವರಾಜ. ೮. ಲೋಕಮತ. ೯. ಅರುಣೋದಯ. ೧೦. ಸಂಯುಕ್ತ ಕರ್ನಾಟಕ. ೧೧. ಕರ್ನಾಟಕ ಬಂಧು. ೧೨. ಪ್ರಜಾಮತ. ೧೩. ಜನ್ಮಭೂಮಿ. ೧೪. ವಿಶ್ವಕರ್ಣಾಟಕ. ೧೫. ಅರ್ಥಸಾಧಕ ಪತ್ರಿಕೆ. ೧೬. ವೃತ್ತಾಂತ ಪತ್ರಿಕೆ. ೧೭. ವಿಶ್ವಬಂಧು. ೧೮. ಉದಯ. ೧೯. ಕರ್ನಾಟಕ ಟೈಮ್ಸ್. ೨೦. ತಾಯಿನಾಡು. ೨೧. ಪ್ರಭಾತ. ೨೨. ನವಸಂದೇಶ. ೨೩. United Karnataka.

**ಇತರ ಪ್ರಕಟನೆಗಳು:—** ೧. ಇಂಡಿಯ ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೨. ಮೈಸೂರು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೩. ಹೈದರಾಬಾದು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೪. ಜಯಕರ್ನಾಟಕ ಗ್ರಂಥಮಾಲೆ. ೫. ಮನೋಹರ ಗ್ರಂಥಮಾಲೆ. ೬. ವಿದ್ಯಾರಣ್ಯ ಗ್ರಂಥಮಾಲೆ. ೭. ಪ್ರೇಮ ಗ್ರಂಥಮಾಲೆ. ೮. Indiana. ೯. The Kanara Brotherhood Annual. ೧೦. ಮಿಂಚಿನ ಬಳ್ಳಿ.



ಶ್ರೀ॥ ಜಯಚಾಮರಾಜ ಒಡೆಯರವರು ಮೈಸೂರು ವಿಶ್ವವಿದ್ಯಾನಿಲಯದ ಪದವೀಧರರಾಗುವ ಸಂದರ್ಭದಲ್ಲಿ
ತಮ್ಮ ತೀರ್ಥರೂಪರುಗಳೊಡನೆ ಸಭಾಮಂದಿರಕ್ಕೆ ಬಿಜಮಾಡಿಸುತ್ತಿರುವ ಚಿತ್ರ.



ಶ್ರೀ॥ ಜಯಚಾಮರಾಜ ಒಡೆಯರವರು ಮೈಸೂರು ವಿಶ್ವವಿದ್ಯಾನಿಲಯದ ಘಟಿಕೋತ್ಸವ ಸಮಾರಂಭದಲ್ಲಿ ಪದವೀಧರರಾಗಲಿರುವ ಇತರ ವಿದ್ಯಾರ್ಥಿಗಳ ಜೊತೆಯಲ್ಲಿ ಮಂಡಿಸಿರುವ ಚಿತ್ರ.

# ಕನಕದಾಸರ ಕೃತಿಗಳ ವಿಮರ್ಶೆ*

ಶ್ರೀಮತಿ ಎಂ. ಆರ್. ಲಕ್ಷ್ಮಮ್ಮನವರು, ಬಿ.ಎ., ಮೈಸೂರು

---

## ೧. ಪೀಠಿಕೆ

ಕ್ರಿಸ್ತ ಶಕ ೧೬ನೆಯ ಶತಮಾನದ ಮಧ್ಯಕಾಲದಲ್ಲಿ ಹಲವು ವೀರಶೈವ ಕವಿಗಳು, ಜೈನಕವಿಗಳು, ಹಾಗೂ ವೈಷ್ಣವ ದಾಸರುಗಳು ಕನ್ನಡ ಸಾಹಿತ್ಯ ಮಂದಿರದೊಳಗೆ ತಮ್ಮಿಂದ ನಿರ್ಮಿತವಾದ ಕಲಾಕೃತಿಗಳನ್ನು ತಂದು ಸೇರಿಸಿದರು. ಇಂತಹ ಕವಿಗಳ ಪೈಕಿ ಚೆನ್ನಬಸವಾಂಕ, ಕುಮಾರಚೆನ್ನಬಸವ, ಲಿಂಗ, ಸಿರಿನಾಮ ಧೇಯ, ಗುರುಲಿಂಗವಿಭು, ಕಿಕ್ಕೇರಿಯಾರಾಧ್ಯರೆಂಬ ವೀರಶೈವಕವಿಗಳೂ, ಸಾಳ್ವ, ದೊಡ್ಡಯ್ಯ ಮೊದಲಾದ ಜೈನಕವಿಗಳೂ, ರಾಮಚಂದ್ರಗುರುಶಿಷ್ಯ, ಗಂಗಾಧರ ನೆಂಬ ಬ್ರಾಹ್ಮಣಕವಿಗಳೂ, ರಾಮೇಂದ್ರನೆಂಬ ಕ್ಷತ್ರಿಯಕವಿಯೂ, ಕನಕದಾಸ ನೆಂಬ ಬೇಡರ ಕವಿಯೂ ಮುಖ್ಯರಾಗಿದ್ದರೆಂದು ತಿಳಿಯಬರುತ್ತದೆ. †

ಬೇಡರ ಜಾತಿಯಲ್ಲಿ ಹುಟ್ಟಿ, ಓದು ಬರೆಹಗಳ ಸುಳಿವಿಲ್ಲದ ವಾತಾವರಣದಲ್ಲಿ ಬೆಳೆದು, ಶತಮಾನಗಳ ಕಾಲ ಜನರ ಜ್ಞಾಪಕದಲ್ಲಿ ನೆಲೆಯಾಗಿ ನಿಂತಿರುವ ಕೃತಿಗಳನ್ನು ರಚಿಸಿರುವ ಕನಕದಾಸನು ಅಸಾಮಾನ್ಯನೇ ಸರಿ. ಆತನ ಮಹಿಮೆಯ ಫಲವಾಗಿ, ಆತನ ಅಮೋಘವಾದ ಭಕ್ತಿ ಜ್ಞಾನಗಳ ಕುರುಹಾಗಿ ದೇವರೇ ಆತನಿಗೆ ಪ್ರತ್ಯಕ್ಷ ಒಲಿದಿದ್ದನೆಂದೂ, ಆತನ ಕೃತಿಗಳಿಗೆ ಮನಸೋತು ಉಡುಪಿಯ ಕೃಷ್ಣನ ವಿಗ್ರಹ ಕೂಡ ಆತನ ಕಡೆ ತಿರುಗಿಕೊಂಡಿತೆಂದೂ ಕತೆಗಳು ಹುಟ್ಟಿರುವುದು ಆಶ್ಚರ್ಯವಲ್ಲ. ಹದಿನಾರನೆಯ ಶತಮಾನಾರ್ಧದಿಂದ ಇಪ್ಪತ್ತನೆಯ ಶತಮಾನದ ವರೆಗೂ, ಎಂದರೆ ಸುಮಾರು ನಾನೂರು ವರ್ಷಗಳ ಕಾಲ, ಅವಿಚ್ಛಿನ್ನವಾಗಿ ಜನರ ಮನ್ನಣೆಯನ್ನು ಪಡೆದಿರುವ ಈತನ ಕೃತಿಗಳ ನಿರ್ದೇಶ, ವಿಷಯ ಮತ್ತು ಗುಣಾವ ಗುಣಗಳನ್ನು ಸ್ವಲ್ಪ ಮಟ್ಟಿಗೆ ತಿಳಿಸುವುದು ಈ ಲೇಖನದ ಉದ್ದೇಶವಾಗಿದೆ.

## ೨. ಕೃತಿ ಎಂದರೇನು

'ಕವಿಚರಿತೆ'ಯ ಪ್ರಕಾರ, ಕನಕದಾಸನು ವಿಷ್ಣುಸ್ತುತಿರೂಪವಾದ ಹಲವು ಹಾಡುಗಳನ್ನಲ್ಲದೆ, 'ಮೋಹನತರಂಗಿಣಿ', 'ರಾಮಧಾನ್ಯಚರಿತ್ರೆ', 'ನಳಚರಿತ್ರೆ', 'ಹರಿಭಕ್ತಿಸಾರ' ಎಂಬ ನಾಲ್ಕು ಪದ್ಯಗ್ರಂಥಗಳನ್ನು ರಚಿಸಿರುವನೆಂದು ತಿಳಿಯ ಬರುತ್ತದೆ. "ಕನಕದಾಸರ ಕೃತಿಗಳ ವಿಮರ್ಶೆ" ಇವಿಷ್ಟಕ್ಕೂ ಅನ್ವಯಿಸುವುದೇ

---

* ದಿವಂಗತ ಶ್ರೀ|| ಇ. ಎ. ಭಾಸ್ಕರರಾಯರ ಜ್ಞಾಪಕಸ್ಪರ್ಧೆಯ ಸಂಬಂಧದಲ್ಲಿ ೧೯೩೭ನೆಯ ಇಸವಿಯಲ್ಲಿ ಪರಿಷತ್ತಿಗೆ ಬಂದು ತಲಪಿದ ಪ್ರಬಂಧಗಳ ಪೈಕಿ ಪುರಸ್ಕಾರಯೋಗ್ಯವೆಂದು ಭಾವಿಸಲ್ಪಟ್ಟ ಪ್ರಬಂಧಗಳಲ್ಲೊಂದು.

† 'ಕರ್ನಾಟಕ ಕವಿಚರಿತೆ', ಸಂಪುಟ ೨.

ಅಥವಾ ಅವನ ಪದಗಳಿಗೆ ಮಾತ್ರ ಗಮನ ಕೊಡುವುದೇ ಎಂಬುದೊಂದು ಸಂದೇಹ. 'ಕೃತಿ' ಶಬ್ದ ಜನಸಾಮಾನ್ಯರಲ್ಲಿ ಕೀರ್ತನೆಗೆ (=ಹಾಡು, ಪದಕ್ಕೆ) ಸಮನ್ವಯವಾಗಿಬಿಟ್ಟಿದೆ. ದೀಕ್ಷಿತರ ಕೃತಿಗಳು, ತ್ಯಾಗರಾಜ ಕೃತಿಗಳು ಎಂದು ನಾವು ಮಾತನಾಡುವಾಗ, ನಮ್ಮ ಮನಸ್ಸಿನಲ್ಲಿ 'ಕೃತಿ'ಯೆಂದರೆ ತಾಳ, ರಾಗ, ಲಯಬದ್ಧವಾದ ಹಾಡುಗಳೆಂದೇ ಭಾವನೆ. ಇದು 'ಕೃತಿ' ಶಬ್ದದ ಸಂಕುಚಿತಾರ್ಥ. 'ಕಿಟ್ಟೆಲ್ ನಿಘಂಟು' ತೋರಿಸಿರುವಂತೆ 'ಕೃತಿ' ಶಬ್ದದ ಪ್ರಾಕಾರದಲ್ಲಿ ಪದಗಳು, ಕವಿತೆಗಳು, ಪದ್ಯಕಾವ್ಯಗಳು ಇವೆಲ್ಲಕ್ಕೂ ಎಡೆಯುಂಟು. ಕನಕದಾಸನೇ ತನ್ನ 'ಮೋಹನತರಂಗಿಣಿ'ಯನ್ನು ಕೃತಿಯೆಂದು ಕರೆದಿರುವುದರಿಂದ, ಪದಗಳೊಂದಿಗೆ ಅವನ ಪದ್ಯಕಾವ್ಯಗಳೆಲ್ಲವೂ ವಿಮರ್ಶೆಗೆ ಸೇರಿದುವೆಂದು ಖಚಿತವಾಯಿತು.*

## ೩. ಕನಕದಾಸ ವಿರಚಿತ ಕಾವ್ಯಗಳು

ಇನ್ನುಳಿದ ಪ್ರಶ್ನೆಯೊಂದೇ. ಹಿಂದೆ ಹೇಳಿದ ನಾಲ್ಕು ಪದ್ಯಕಾವ್ಯಗಳೂ ನಿರ್ಧಾರವಾಗಿ ಕನಕದಾಸನವೇ, ಅಲ್ಲವೇ ಎಂಬುದೇ ಆ ಪ್ರಶ್ನೆ. ಆತನು ತನ್ನ ಹೆಸರನ್ನು ಎಲ್ಲದರಲ್ಲೂ ತಿಳಿಸಿಲ್ಲ; ಅಂಕಿತವೂ ಸಮಾನವಾಗಿಲ್ಲ. 'ಮೋಹನತರಂಗಿಣಿ'ಯಲ್ಲಿ ಹಳಗನ್ನಡದ ಪ್ರಭಾವ ಹೆಚ್ಚಾಗಿದೆ. 'ನಳಚರಿತ್ರೆ'ಯದು ತಿಳಿಗನ್ನಡದ ಶೈಲಿ—ಇದು ಖಂಡಿತ ಯಾರದೋ ಆಧುನಿಕ ಕವಿಯದೆಂದು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. 'ಮೋಹನತರಂಗಿಣಿ'ಯಲ್ಲಿ ತಾತಾಚಾರ್ಯ, ರಾಮಾನುಜಾಚಾರ್ಯರನ್ನು ಸ್ತುತಿಸಿರುವ ಕವಿ, 'ಹರಿಭಕ್ತಿಸಾರ' ಮತ್ತು ಪದಗಳಲ್ಲಿ ಮಾಧ್ವಮತ ತತ್ತ್ವಗಳನ್ನೇ ಪ್ರತಿಪಾದಿಸಿರುವುದು ಸಂದೇಹಾಸ್ಪದವಾಗಿ ಕಂಡುಬರುವುದು. ಶೃಂಗಾರ, ಹಾಸ್ಯ, ವೀರರಸಗಳು ಎದ್ದು ಕಾಣುವ 'ಮೋಹನತರಂಗಿಣಿ'ಯನ್ನು ತನ್ನ ನಲ್ಲೆಗೋಸುಗ ರಚಿಸಿದ ಕನಕದಾಸೋತ್ತಮನೂ, 'ಹರಿಭಕ್ತಿಸಾರ', ಹರಿಸಂಕೀರ್ತನೆಗಳಲ್ಲಿ ತನ್ನ ಭಕ್ತಿ, ವೈರಾಗ್ಯ, ದೈನ್ಯಭಾವಗಳನ್ನು ತುಂಬಿ, ದೇವರನ್ನರಸುತ್ತ ಊರೂರು ಅಲೆಯುವ ವಿರಕ್ತ ಸಂನ್ಯಾಸಿಯಂತೆ ಕಂಡುಬರುವ ಕನಕದಾಸನೂ ಒಂದೇ ವ್ಯಕ್ತಿಯೆಂದು ನಂಬಬಹುದೆ? ನಂಬಲಾರದ ಪಕ್ಷದಲ್ಲಿ ನಮ್ಮ ವಿಮರ್ಶೆಗೆ ಯಾವುದು ನಿಲ್ಲತಕ್ಕುದು, ಯಾವುದು ಬಿಡತಕ್ಕುದು?

ಈ ಕೆಳಗಣ ಕಾರಣಗಳಿಂದ ನಾಲ್ಕು ಗ್ರಂಥಗಳೂ ಏಕಕರ್ತೃಕವಾಗಿರಬಹುದು ಎಂದು ದೃಢಪಡುತ್ತದೆ:—

(೧) **ಜನಜನಿತವಾದ ಪ್ರತೀತಿ.**—ಇಂತಹ ವಿಷಯಗಳಲ್ಲಿ ಜನರ ಪ್ರತೀತಿ ಸುಳ್ಳಾಗಲು ಕಾರಣವಿಲ್ಲ.

(೨) **ವಿದ್ವಾಂಸರ ಅಭಿಪ್ರಾಯ.**—ಶ್ರೀ॥ಗಳಾದ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರೂ, ಎಸ್. ಜಿ. ನರಸಿಂಹಾಚಾರ್ಯರೂ ಈ ಪ್ರಶ್ನೆಯನ್ನು ಕೂಲಂಕಷವಾಗಿ ಪರಿಶೋಧಿಸಿ ಎಲ್ಲ ಗ್ರಂಥಗಳೂ ಕನಕದಾಸನವೇ ಎಂದು ಒಪ್ಪಿರುವರು.

* ಕೃತಿವೇಳ್ವ ಕನಕದಾಸೋತ್ತಮು ಕೇಳ್ವವ। ಅತಿ ಸುಜ್ಞಾನವಧೂಟಿ
ಕೃತಿಗೆ ಕರ್ತನು ಕಾಗಿನೆಲೆಯಾದಿಕೇಶವ। ಕೃತಿಯು ಕೇಳ್ದರೆ ಪುಣ್ಯವಹುದು॥

(೩) **ಶೈಲಿಯ ಉತ್ಕೃಷ್ಟತೆ.**— ಕಥಾಸರಣಿಯಲ್ಲಿ ತಡೆಯಿಲ್ಲದ ಓಟ, ಕೃತ್ರಿಮದ ಲೇಶವಿಲ್ಲದ ಆ ಶೈಲಿಯ ಸರಳತೆ ಮತ್ತು ಸ್ಪಷ್ಟತೆ, ನಿರ್ಭೀತವಾದ ಮತದ ಡಂಭಾಚಾರ ಖಂಡನೆ, ಕಣ್ಣಮುಂದೆ ಚಿತ್ರ ನಿಲ್ಲಿಸುವ ಸುಂದರ ಉಪಮೆಗಳು, ಸಣ್ಣತನಕ್ಕೆಲ್ಲೂ ಇಳಿಯದ ಗಂಭೀರಚಿತ್ತವೃತ್ತಿ— ಇವು ಎಲ್ಲದರಲ್ಲೂ ಪ್ರತಿಬಿಂಬಿತವಾಗಿರುವುದರಿಂದ ಕನಕನ ಪ್ರತಿಭೆಯ ಫಲಗಳಿವೆಂದು ತಿಳಿಯಬಹುದು.

ಭಿನ್ನಕರ್ತೃಕವೆಂದು ಆಪಾದಿಸುವ ಕಾರಣಗಳನ್ನು ತೆಗೆದುಕೊಂಡರೆ:—

(೧) **ಅಂಕಿತದ ಪ್ರಭೇದ.**—ಸ್ವಲ್ಪ ವಿವೇಚನೆ ಮಾಡಿದಲ್ಲಿ, ಇದು ಬಿದ್ದು ಹೋಗುತ್ತದೆ. ಕನಕದಾಸನಿಗೆ ಆದಿಕೇಶವ ಅಥವಾ ಚೆನ್ನಿಗರಾಯ ಇಷ್ಟಮೂರ್ತಿ. ಆ ಆದಿಕೇಶವ ಕಾಗಿನೆಲೆಯ ಆದಿಕೇಶವನಾಗಿರಬಹುದು, ಇಲ್ಲವೇ ಬಡದ ಗ್ರಾಮದ ಕೇಶವನಾಗಿರಬಹುದು. ವೇಂಕಟಾದ್ರಿಗಿರಿಯ ಕೇಶವನಾದರೂ ಚಿಂತೆ ಇಲ್ಲ. ವರಪುರ, ಸಿರಿಪುರ, ವರವೇಲಾಪುರ, ಬೇಲಪುರ, ಬೇಲೂರು— ಎಲ್ಲವೂ ಒಂದೇ ಊರಿಗೆ ಅನ್ವಯಿಸುತ್ತವೆಂದು ತೋರುತ್ತದೆ. ಆದುದರಿಂದ ಕನಕನ ಅಂಕಿತ ರೂಪಪ್ರಭೇದವನ್ನು ತಾಳಿದ್ದರೂ, ಅರ್ಥದಲ್ಲಿ ಒಂದೇ.

(೨) **'ಮೋಹನತರಂಗಿಣಿ'ಯಲ್ಲಿ ರಾಮಾನುಜಾಚಾರ್ಯರ ಸ್ತುತಿ.**— ಜನರ ಐತಿಹ್ಯದ ಪ್ರಕಾರ ಕನಕದಾಸನು ಮೊದಲು ರಾಮಾನುಜಭಕ್ತನಾಗಿದ್ದು ಅನಂತರ ಮಾಧ್ವಮತವನ್ನವಲಂಬಿಸಿದನೆಂದು ತಿಳಿದುಬರುವುದರಿಂದ ಸಂದೇಹ ಪರಿಹಾರವಾಗುತ್ತದೆ. ಅಲ್ಲದೆ, 'ಮೋಹನತರಂಗಿಣಿ' ಮೊದಲನೆಯ ಗ್ರಂಥವೆಂದೂ ವ್ಯಕ್ತವಾಗುತ್ತದೆ.

(೩) **'ಮೋಹನತರಂಗಿಣಿ'ಯ ಹಳಗನ್ನಡದ ಶೃಂಗಾರಮಯ ಶೈಲಿ.**— ಕನಕದಾಸನು ಮಿಕ್ಕ ಗ್ರಂಥಗಳನ್ನು, ಅದರಲ್ಲಿಯೂ 'ಹರಿಭಕ್ತಿಸಾರ'ವನ್ನು ಜನ ಸಾಮಾನ್ಯಕ್ಕೆಂದು ಬರೆದಿರುವುದರಿಂದ ಅವು ತಿಳಿಗನ್ನಡದ ಶೈಲಿಯಲ್ಲಿವೆ. ವಿರಕ್ತ ಭಾವನೆಗೆ ವಿಷಾದ ಘಟನೆಯೊಂದು ಕಾರಣವಿರಬೇಕು. ಬಹುಶಃ ಯಾವ ಪತ್ನಿ ಯನ್ನುದ್ದೇಶಿಸಿ ತನ್ನ 'ಮೋಹನತರಂಗಿಣಿ'ಯನ್ನು ಯೌವನದೆಸೆಯಲ್ಲಿ ಬರೆ ದಿದ್ದನೋ ಆ ಪತ್ನಿಯ ವಿಯೋಗವಾಗಿರಬೇಕು. ಅನಂತರ ಕನಕದಾಸನು ಜುಗುಪ್ಸೆ ಪಟ್ಟು, ದಾಸವೃತ್ತಿಯನ್ನವಲಂಬಿಸಿ ವೈರಾಗ್ಯಪ್ರಧಾನವಾದ ಗ್ರಂಥಗಳನ್ನೂ ಪದಗಳನ್ನೂ ರಚಿಸಿರಬೇಕೆಂದು ಊಹಿಸಿದರೆ ತಪ್ಪಾಗದು.

## ೪. ಕನಕದಾಸನ ಕಾವ್ಯಗಳ ಶೈಲಿ

### (೧) 'ಮೋಹನತರಂಗಿಣಿ'

'ಮೋಹನತರಂಗಿಣಿ'ಯನ್ನು ಕನಕದಾಸನು ಸಾಂಗತ್ಯದಲ್ಲಿ ರಚಿಸಿದ್ದಾನೆ. ಇದು ದೊಡ್ಡ ಗ್ರಂಥ; ಇದರಲ್ಲಿ ೨,೯೦೮ ಪದ್ಯಗಳಿವೆ. ಕಾಮದಹನ, ರುಕ್ಮಿಣಿಯಲ್ಲಿ ಪ್ರದ್ಯುಮ್ನನ ಜನನ, ಶಂಬರಾಸುರನ ಮನೆಯಲ್ಲಿ ಅಡಿಗೆಯವಳಾದ ರತಿ ಪ್ರದ್ಯುಮ್ನ ನನ್ನು ಸಾಕಿದುದು, ಶಂಬರಾಸುರ ವಧೆ, ರತಿ ಪ್ರದ್ಯುಮ್ನರ ವಿವಾಹ, ಅನಿರುದ್ಧನ ಜನನ, ಚಿತ್ರಲೇಖೆ ಅನಿರುದ್ಧನಿಗೂ ಉಷೆಗೂ ಸಮಾಗಮವನ್ನು ಮಾಡಿಸಿದುದು,

ಬಾಣಾಸುರ ಕೃಷ್ಣರ ಕಾಳಗ, ಪರಿಸಮಾಪ್ತಿಯಲ್ಲಿ ಉಷೆ ಅನಿರುದ್ಧರ ವಿವಾಹ– ಇಷ್ಟು ಸಂಗತಿಗಳನ್ನೊಳಗೊಂಡ ಕವಿತೆಯನ್ನು "ಕನಕದಾಸೋತ್ತಮ"ನು ತನ್ನ 'ಅತಿಸುಜ್ಞಾನವಧೂಟಿ', 'ಲತಾಂಗಿ', 'ಪ್ರಮದೆ', 'ಕಮಲದಳಾಯತಾಕ್ಷಿ' 'ಸುದತಿ'ಗೆ, ಸ್ವಾತಿಯ ಮಳೆಯ ಪೆರ್ಮನಿ ಚಿಪ್ಪಿನೊಳು ಬಿದ್ದು ಜಾತಿಮುತ್ತಾದಂತೆಯೇ ತನ್ನ ಕವಿತೆ ಅವಳ ಕರ್ಣದೊಳು ಬಿದ್ದು ಖ್ಯಾತಿವೆತ್ತಲೆಂದು ಹೇಳಿದ್ದಾನೆ. ಪ್ರೇಮಮಿಲನದ ಕತೆ, ಶೃಂಗಾರರಸಮಯ ಶೈಲಿ, ಮೇಲಾಗಿ ಮದನನ, ಮದನನಯ್ಯನ, ಮದನಸುತನ, ಮದನಾರಿಯ, ಒಟ್ಟಿನಲ್ಲಿ ಮೋಹದಧಿದೇವತೆಯ ಆದ್ಯಂತವನ್ನೂ ಕುರಿತು ಹಾಡಿದ ಸಾಂಗತ್ಯ. ಇಂತಹ ಬಹುಮಾನವನ್ನು ತನ್ನಿನಿಯಳ ವಶಕ್ಕೆ ಕವಿ ಸಲ್ಲಿಸಿದುದರಲ್ಲಿ ಆಶ್ಚರ್ಯವೇನು? ಪ್ರತಿಯೊಂದು ಸಂಧಿಯ ಮೊದಲಲ್ಲೂ ರಸಿಕಕವಿ ತನ್ನ ಸತಿಯನ್ನು ಹೊಗಳಿ, "ಕತೆಯನ್ನು ಕೇಳೆಂದು" ಒತ್ತಾಯ ಮಾಡುವನು. ಜಾಣತನಕ್ಕೆ ಕೊರತೆಯಿಲ್ಲದ ಅವನ ಪ್ರೇಯಸಿಯೂ ತನ್ನನ್ನು ಸಂತಸಪಡಿಸುವ ಪತಿಯನ್ನು ಕೊಂಡಾಡಿ, ಕತೆಯನ್ನು ಮುಂದುವರಿಸುವಂತೆ ಪ್ರಾರ್ಥಿಸುವಳು. ಮೊದಲನೆಯ ಸಂಧಿಯ ಉತ್ತರಾರ್ಧದಲ್ಲಿ ಈ ಬಗೆಯ ವಾದಗಳನ್ನು ಕಾಣುವೆವು:—

ವಾಣಿಯ ಧವನೆಂಬ ವ್ಯವಹಾರಿ ಪಟ್ಟಿಯ। ಗೋಣಿಯೊಳ್ ತುಂಬಿದ ರತ್ನ
ಓಣಿಯೊಳ್ ಚೆಲ್ಲಿದಂತಿದೆ ನಿನ್ನ ಕೃತಿಯೆಂಬ। ಮಾಣಿಕ ಮನ್ಮಸೋನಾಥ

ಎಂದು ಅವಳು ಪತಿಯನ್ನು ಉಬ್ಬಿಸುವಳು. ಅವನು,

ನಾಡೊಳಗುಳ್ಳ ಜಾಣರು ಜಾಣೆಯರೊಡ। ನಾಡುವ ಸವಿವಾತುಗಳ
ಪಾಡುಗಬ್ಬವ ಪರುಠವಿಸಿದಾ ಬಗೆಯ ನೀ। ನೋಡು ಮಾನಿನಿ ಮುಂದೆಮುಂದೆ

ಎಂದು ಹೆಮ್ಮೆಯಿಂದ ಹೇಳುವನು. ಅದಕ್ಕವಳು ಪರಿಹಾಸ್ಯವಾಗಿ,

ಜೆನಕನೊ ನಿನಗೀ ಮತಿಯಿತ್ತವ ಬ್ರಹ್ಮ। ಜನಕನೊ ವರ ಸರಸ್ವತಿಯೊ
ಸನಕಸನಂದಾದ್ಯರೊ?....

ಎಂದು ಕೀಟಲೆಯಾಡುವಳು.

ಕವಿ ಅವಳಮೇಲಿನ ಪ್ರೇಮವನ್ನು ಎಷ್ಟೆಷ್ಟೋ ಚೆಲ್ವಿನ ಇನಿವಾತುಗಳಿಂದ ತಿಳಿಸುತ್ತಾನೆ:

ಎಲೆ, ಎನ್ನ ಕಣ್ಗೆ ಮಂಗಳವಪ್ಪ ಮಂಗಳರತ್ನೆ, ಕೇಳೆ! — ರೂಢಿಯೊಳತ್ಯಂತ ಸುಗುಣೆ,.... ಕುವಲಯದಳನೇತ್ರೆ, ಬಾಚಿನ್ನ ಭಾಗ್ಯದ ನಿಧಿಯೆಂದೆನಿಪ ಸೀಜೆ, ಇನಿಯಳೆ, ಮಡದಿ, ಕೆಳದಿ, ಎನ್ನ ಹೊನ್ನೆ, ಪೂಗಣ್ಣೆ, ಎನ್ನೆರ್ದೆಯಲರ್ದುಂಬಿ ಕುರುಳಾಂತ ಪೆಣ್ದಲೆ ರನ್ನೆ, ಕೆಂಚೆ, ಕೇವಲ ಜಾಣೆ, ರಹಿತ ಪ್ರಪಂಚೆ, ಹೆಂಗೂಸುಗಳಧಿದೇವಿ, ಮಡದಿಯ ಮುಂಡೆ ಮಾಣಿಕವೆ, ಬನ್ನಣೆಗಾರ್ತಿ, ಏ! ಜಾಣೆವೆಣ್ಣುಗಳಸಿ!— (ಇತರ) ಕಾಮಿನಿಯರ ಕಂಡು ಕಣ್ಣಿಕ್ಕದಂತೆನ್ನ ಚಿತ್ತವನು ಅಕ್ಕೊತ್ತೆಗೊಂಡ ಭಾಮಿನಿ ರನ್ನೆ, ಮಾರನ ಮಂತ್ರದೇವತೆ, ಮತಿವಂತೆ,.... ನನ್ನ ಹಾಡಿಗೆ ದನಿಗುಡು.

ಮುಯ್ಯಿಗೆ ಅವಳಲ್ಲಿಯೂ ಅಕ್ಕರತೆಯ ಮಾತುಗಳಿಗೆ ಕೊರತೆಯಿಲ್ಲ. ಮುಯ್ಯಿ ಸಲ್ಲಿಸುವಳು:

ವೆಂಠಣಿಸಿದ ವಿಷ್ಣುಭಕ್ತನಂದನ, ಕಲಕಂಠ, ಅಧಿಕ ಸುಜಾಣ, ನಿನ್ನ ಮೆಲ್ನುಡಿಗಳ್ಗೆ ಕಿವಿಗುಡದವರಾರು, ಮನ್ನಾಥ? ಕಾಂತ, ನಿನ್ನ ನಾಲಗೆ ಪರಮ

ಪವಿತ್ರ, ಮಾಧವನ ಅಪ್ಪಣೆ ಪಡೆದು ಬಿತ್ತರಿಸುವ (ನಿನ್ನ) ಕೃತಿ ಜೇನುತುಪ್ಪದ ತೊಱೆಯಾಗಲೆಱೆಯಾ. ಪಠಿಸಿದ ಕೃತಿಯಲ್ಲಿ, ಕೃತಿವೇಜಲಮೃತದ ಘಟಿಕೆ ಯಂತಿದೆ ನಿನ್ನ ಕವಿತೆ. ನರಕಂಠೀರವ! ಕರುಣದಿ ತುಟಿಬಿಚ್ಚಿ ಪೇಳು. ಸುಟ್ಟಡರದೆ ಕಾದ ಚಿಲುಪಾಲು; ಮಕ್ಷಿಕೋಚ್ಛಿಷ್ಟವಿಲ್ಲದ ಜೇನುತುಪ್ಪ. ಕಟ್ಟು ಬೀಜದ ಸಕ್ಕರೆಯಿಂದೆ ಸವಿವಾತ ಪೇಳು, ಸಾಕೆನಿಸದು ಎನ್ನ ಕಿವಿಗೆ.

ಅವಳಿಗೆ ಸಂಸ್ಕೃತ ಭಾಷೆಯಲ್ಲಿ ಕವಿತೆಯನ್ನು ರಚಿಸುವನೇನೋ ಎಂಬ ದಿಗಿಲು. ಅದಕ್ಕಾಗಿ ಮುಂಚೆಯೇ ಸಲಹೆ ಕೊಟ್ಟಿರುತ್ತಾಳೆ:

ನಾಣದಳಿಸುವಂತೆ ಮಾಡದಿರಧಿಕ ಸು। ಜಾಣರಜ್ಞಾನಲೋಚನಕೆ
ಕಾಣಬರ್ಪಂತೆ ಕನ್ನಡ ವಾಕ್ಯದೆ ಸೆರೆ। ಜಾಣ ಸತ್ಕೃತಿಯ ವಿಸ್ತರಿಸು

ರುಕ್ಮಿಣೀದೇವಿಯ ಬಳಿ ಮಲಗಿದ್ದ ಎಳಗೂಸು ಮಟಮಾಯವಾದುದನ್ನು ಕೇಳಿ ಸ್ತ್ರೀಸ್ವಭಾವಕ್ಕೆ ತಕ್ಕಂತೆ ಮರುಗುವಳು:

ಕಟಕಟ! ಪುಟ್ಟಿದಾಕ್ಷಣ ಶಿಶು ನೋಡಲ್ಕೆ ಮಟಮಾಯವಾದುದಾಶ್ಚರ್ಯ.

ಒಂದೆಡೆ ರಾತ್ರಿಯ ಕೊನೆಯ ಯಾಮವನ್ನು ಬಣ್ಣಿಸುವಾಗ ಕವಿ—

ಸಾವುದೆ ಸುಖವೆಂದು ಜೀವವ ತೊರೆದ ಚಂದ್ರಮನು, ನಕ್ಷತ್ರ ನಿಶಿವೆಣ್ಣು ಸಾಗಮನವನೆ ಮಾಡಿದುವು; ಮೂಗಾಯ್ತು ಜೊನ್ನವಕ್ಕಿಗಳು

ಎಂದು ಮುಂತಾಗಿ ಹೇಳಲು, ಅವನ ಪತ್ನಿಗೆ ಸ್ವಲ್ಪ ಸಂದೇಹ ಬಂದಿತು. ಅದಕ್ಕೆ ಫಲವಾಗಿ ಅವಳು,

ನಿನ್ನಯ ಸವಿವಾತು ಅರಾದಡು ಕಿವಿಗೊಟ್ಟು ಕೇಳ್ದೊಡೆ ಸಂಸಾರ ಭ್ರಾಂತಿಯ ಬಿಡಿಸುವುದು

ಎನ್ನುವಳು. ಕವಿ—

ಮತ್ಕೃತಿರಸವಜಿತಜಚಬೆಂಚೆ (=ಕೊಳ) ಯೆಂದೆನಬೇಡ. ಶೃಂಗಾರರಸಪೂರ್ಣವದು. ಅಂಚೆ ನಡೆಯಳೆ ವಿಶ್ರಮಿಸೆ

ಎಂದು ಸಂತೈಸುವನು. ಒಮ್ಮೆ ಅವಳು ಅವನ ಪ್ರತಿಭೆಯನ್ನು ಬಗೆಬಗೆಯಲ್ಲಿ ಹೊಗಳಿದರೂ ರುಚಿಸದೆ, "ಏತಕೆನ್ನನು ಕೀರ್ತಿಸಬೇಕು ಸ್ವಾತಂತ್ರ್ಯಬುದ್ಧಿ ಬೇರಿಹುದೆ?" ಎಂದು ವಿರಕ್ತಭಾವನೆಯಿಂದ ಕೇಳುವನು. ಕವಿತೆಯ ಕೊನೆಯಲ್ಲಿ ಕೃಷ್ಣಚರಿತೆಯನ್ನು ಆಸ್ವಾದಿಸಿದುದರಿಂದ, "ಭಾಮೆ ಕೇಳ್ ನಮ್ಮ ದುಷ್ಕರ್ಮ ವಿಚ್ಛೇದನವಾಯ್ತು" ಎಂದು ಪವಿತ್ರಮನದಿಂದ ಮುಕ್ತಾಯಮಾಡುವನು.

ಮುದ್ದಣ ಮನೋರಮೆಯರ ಸಂಭಾಷಣೆಯನ್ನು ಮೆಚ್ಚಿ ಕೊಂಡಾಡು ತಲಿರುವ ನಾವುಗಳು ಮುದ್ದಣನಿಗೆ ನಾನ್ನೂರು ವರ್ಷಗಳ ಹಿಂದೆಯೇ ಈ ಬಗೆಯ ಚೌಕಟ್ಟಿಗೆ ಕನಕದಾಸನು ಮೊದಲಿತ್ತನೆಂಬುದನ್ನು ಮರೆತುಬಿಟ್ಟಿದ್ದೇವೆ. ಮುದ್ದಣ ಮನೋರಮೆಯರದು ಅರಳಿದ ಅಲರಾದರೆ, ಅದರ ಬಿರಿಮೊಗ್ಗನ್ನು ಇಲ್ಲಿ ನಾವು ಕಾಣಬಹುದು.

ಶೈಲಿ ಅಲಂಕಾರಮಯವಾಗಿದೆ. ಹಳಗನ್ನಡದ ಸರಣಿ ಒಂದು ಬಗೆಯ ಇಂಪು, ಓಟ, ಲಾಲಿತ್ಯವನ್ನೊಂದಿಸಿದೆ. ಇಂಪಾದ ಹಳಗನ್ನಡದ ಪದಗಳೆಲ್ಲೆಲ್ಲಿಯೂ ಮಿನುಗುತಿವೆ. ಕುಳಿರುವೆಟ್ಟಿನ ಕುವರಿ, ಪಳಿಕಿನ ಪೆಟ್ಟಿಕೆ, ಅಲರಂಬ, ಡೊಳ್ಳು

ಹೊಟ್ಟೆಗ (ವಿನಾಯಕ), ಮೂಹೊರಡೆ (ಕುಬ್ಜೆ), ಪುಲಿಸನುದುಡುಗೆ, ಬೋನದ ಮನೆ, ತಲೆಗುತ್ತಿ, ಜತ್ತಾಯತ, ದುಕ್ಕಿ— ಇವುಗಳು ನಮ್ಮಲ್ಲಿ ಕುತೂಹಲ ವನ್ನು ಹುಟ್ಟಿಸುವುವು. ಕವಿಯ ಉಪಮೆಗಳು ಅತಿ ಬೆಡಗಿನವು. ಹೊಂಬಣ್ಣದ ಪ್ರದ್ಯುಮ್ನನನ್ನು ಕರ್ಗತ್ತಲೆಯ ನೀರಿನಲ್ಲಿ ಬಿಸುಟುದು, "ಏಣಾಂಕಗಗನದೊಳಿರ್ದು ತಾ ಪುಟ್ಟಿದ ತಾಣವ ನೋಡುವಂದದಲಿ ಕೇಣರಿಲ್ಲದೆ ಕಡಲಿಟಿುವಂತೆ ತೋರು ತಿದ್ದಿತು". ಹಲಸಿನಮರಗಳು, "ಕೆಲರಿಂಗೆ ಬಾಹ್ಯಕರ್ಮದೊಳಿತ್ತು ಯೋಗ್ಯ ರಿಂಗಲಸದೆ ಗುಪಿತದಿಂ ಕುಡುವ ಸುಲಭದಾನಿಯ ಪೋಲ್ತು ಪೆರ್ಗೊನೆಯೊಳು ಒಪ್ಪಿದುವು", "ಕನಸಿನ ಭತ್ತಕೆ ಗೋಣಿಯನಾಂತರಂತೆ!", "ಒಪ್ಪುದು ಬಹುದಲ್ಲದೆ ಮಾಣ್ಪುದೆ ಗಟ್ಟದುಪ್ಪು ನೆಲ್ಲಿಕಾಯ್ಗೆ ?"— ಅದರಂತೆ ಅನಿರುದ್ಧನಿಗೆ ಉಷೆ ಸೇರಿದಳು.

ಹಾಸ್ಯರಸವೂ ಕೂಡ ಅಲ್ಲಲ್ಲಿ ಕವಿತೆಗೆ ಕಳೆಗಟ್ಟುತಿದೆ: ಶಂಬರಾಸುರ ದಡಿಗದಾನವ. ವಿನಾಯಕ ಡೊಳ್ಳುಹೊಟ್ಟೆಗ. ಅವನಿಗೆ ರಣರಂಗದಲ್ಲಿ ಎಂತಹ ಆಪತ್ತೊದವಿತು ಗೊತ್ತೆ? "ಮೂಷಕ ಗರುಡನ ನೋಡಿ ಕಣ್ಗೆಟ್ಟು ತನ್ನೊಡಲ ಜೋಡಿಸಿ ತಿಂದಪನೆಂದುಜಿಕಿ ಹೊತ್ತುಕೊಂಡೋಡಿತು ವಿಘ್ನೇಶ್ವರನ." ಹಾಗೂ ವಿನಾಯಕ ವಾಹನವನ್ನೊದರಿ ರಣರಂಗಕ್ಕೆ ಮರಳಿ ಬರಲು ಹಲಧರ "ಒಕ್ಕಯ್ಯೊಳಾಂತ ಪೇರೊನಕೆಯಿಂದ ಸೊಂಡಿಲು ದಂತಗಳೊಡೆವಂತೆ ಆನೆದಲೆಗನ ಮೇಲೆ ಇಕ್ಕಿದ."

ಬ್ರಾಹ್ಮಣರ ವರ್ಣನೆಯಲ್ಲಿ ಹಾಸ್ಯ: "ತಳಿರುಗಾಸೆಯ ಧೋತ್ರ ಬಹಿರ್ವಾಸ ಮೂಗಿನಿಂದಿಟಿುದ ನಾಮಗಳ ವೈಷ್ಣವರು...." ಪರಮೇಶನೆಂತಹವನೆಂದರೆ "ಕಾವನೆಂದರೆ ಕೊಲ್ವ ಕೊಲ್ವನೆಂದರೆ ಮತ್ತೆ ಕಾವ": ಉದ್ದಾಲಕನ ಹೆಂಡತಿಯ ಲೆಕ್ಕಾಚಾರ !

ನಾರದ ಕೃಷ್ಣನನ್ನು ಶುದ್ಧಾತ್ಮಕ, ಹೆದ್ದೈವ ಎಂದು ಮುಂತಾಗಿ ಸ್ತುತಿಸುವನು. ಅವನ ಅಂತರಂಗ ಕೃಷ್ಣನಿಗೆ ಗೊತ್ತು: "ಬಲ್ಲಿದ ವಾಚಾಳಿ ನಾರದಮುನಿ ನಿನ್ನ ಬೊಲ್ಲೆಯ ಮಾತದಂತಿರಲಿ, ಎಲ್ಲಿಂದ ಬಂದೆ ಸುದ್ದಿಯ ಪೇಳು" ಎನ್ನಲು, ನಾರದ ವಾಚಾಳಿತನವನ್ನು ನಿಲ್ಲಿಸಿ ಸುದ್ದಿಗೆ ಮೊದಲಿಡುವನು.

"ಉತ್ತಮಸಾಹಿತ್ಯ ಜೀವನದ ಪಡಿನೆಳಲಿನಂತೆ" ಎಂದು ಬಲ್ಲವರು ಹೇಳು ತ್ತಾರೆ. ಈ ಸಲ್ಲಕ್ಷಣವನ್ನು 'ಮೋಹನತರಂಗಿಣಿ'ಯಲ್ಲಿ ಹಲವೆಡೆ ಕಾಣಬಹುದು. ಮೀನನ್ನು ಕೊಯ್ಯಬೇಕೆಂದು ಶಂಬರಾಸುರನ ಮನೆಯವರು ರತಿಗೆ ಆಣತಿ ಇತ್ತಾಗ, ಅವಳು ಆ ಬಡಪ್ರಾಣಿಯ ದುರವಸ್ಥೆಗೆ ಹೀಗೆಂದು ಕಣ್ಣೀರುಬಿಡುವಳು:

> ಸಾಗರದೊಳಗಿರ್ದು ಜಲಗನ ಬಲೆಯೊಳಗಾಗ ಬರ್ಪುದೆ ನೀ, ನಿನ್ನ ಭೋಗ ಬೊಗ್ಗಾದುದು.

ಯಾವ ಮಾತೆ ತಾನೆ ಈ ಕೆಳಗಣ ವರ್ಣನೆಯ ನಿಜತೆಗೆ ಆಶ್ಚರ್ಯ ಪಡಳು? ರತಿ ಮಗುವಿನ "ಕೊರಲ ಮೂರೇಖೆಯ ಮಣ್ಣೊಡೆವಳು; ಸಣ್ಣ

ಬೆರಲ ಕೈರೇಖೆಯುಜ್ಜುವಳು ; ತರಳನ ಪುಟ್ಟ ಪಾದದೊಳಿರ್ದ ತಾವರೆಯುಲರನು ನೊಸಲಿಗೊತ್ತುವಳು.'' ವಿಟನಿಂದ ಹಣವನ್ನು ಸೆಳೆಯದಿರಬೇಡವೆಂದು ತಾಯಿ ಎಚ್ಚರಿಕೆ ಕೊಡಲು, ಸುಂದರಿಯಾದ ವಾರವನಿತೆ ಅವಳನ್ನು ಕುರಿತು ಹೇಳಿದ ಮಾತಿದು : "ಪಾಪಿ ! ಸಾಯದೆ ಬದುಕುವರುಂಟೆ? ಪ್ರಾಯವೇನಿದು ನಿತ್ಯವಲ್ಲ ; ಹಣವ ಸುಡು, ಪ್ರಿಯನೊಳಿಹೆ''—ಇದು ಓಮರ್ ಖಯಾಮಿನ ಮಾತುಗಳನ್ನು ನೆನಪಿಗೆ ತರುವುದು. ಆಗತಾನೇ ಮದುಮಕ್ಕಳಾದ ಉಷೆ ಅನಿರುದ್ಧರಿಗೆ ಮುಂದೆ ಹುಟ್ಟುವ ಮಕ್ಕಳಿಗೆ ಹೆಸರೇನಿಡಬೇಕೆಂಬ ಯೋಚನೆ. ಮಗಳು ಹುಟ್ಟಿದ ಪಕ್ಷ ದಲ್ಲಿ ಚಿತ್ರಲೇಖೆಯೆಂದಿಡಬೇಕೆಂದು ಅನಿರುದ್ಧನ ಹವಣಿಕೆ. ಎಳವಯಸ್ಸಿನ ಚಿಗುರಾಸೆಯ ಮಹಿಮೆ ಎಂತಹುದು !

ಊಹನಾಶಕ್ತಿ, ಪಾತ್ರರಚನೆಗಳಲ್ಲಿಯೂ ಕನಕದಾಸನು ಮೇಲ್ಮಟ್ಟವನ್ನೇರಿದ್ದಾನೆ; ಚಿತ್ರಾಂಗದೆ ಅನಿರುದ್ಧನನ್ನು ಕಂಡಾಗ ಮೋಹಗೊಳ್ಳುವುದು, ಅವಳ ನಿಷ್ಕಾಮಪ್ರೇಮ, ಉಷೆಯಲ್ಲಿದ್ದ ಅಸಮಾನವಾದ ಸ್ನೇಹ, ಪ್ರಪಂಚದ ಇರವು ನಡೆವಳಿಗಳಲ್ಲಿದ್ದ ಅಪಾರಜ್ಞಾನ, ತಿಳಿವಳಿಕೆ, ಕಲಾಚಾತುರ್ಯ, ಉದಾರ ಮನಸ್ಸು— ಇವುಗಳೆಲ್ಲವನ್ನೂ ಮೆಚ್ಚಿದರೂ ಅನಿರುದ್ಧನು ಪ್ರತಿಪ್ರೇಮಕ್ಕೆಡೆಯಿಲ್ಲ ದುದರಿಂದ ಅವಳನ್ನು ತಾಯಿಯಂತೆ ಸಂಬೋಧಿಸುವುದು, ಅಷ್ಟರಲ್ಲೇ ಅವಳು ತೃಪ್ತಿಪಟ್ಟು ಸಮಾಧಾನದಿಂದಿರುವುದು ಇವೆಲ್ಲವನ್ನೂ ಕವಿ ಬಹಳ ಜಾಣ್ಮೆಯಿಂದ ಚಿತ್ರಿಸಿದ್ದಾನೆ.

ಕೃತಿಯಲ್ಲಿ ದೋಷಗಳೂ ಇವೆ. ಅನಾವಶ್ಯಕವಾದ, ಅತಿವಿಸ್ತಾರವಾದ ವರ್ಣನೆಗಳು, ಉತ್ಪ್ರೇಕ್ಷೆ, ಅಶ್ಲೀಲತೆ ಇಳಿವ ಶೃಂಗಾರರಸ, ಸೂಳೆಗೇರಿಯ ವರ್ಣನೆ ಮುಂತಾದುವು ಓದುಗರಲ್ಲಿ ಬೇಸರ ಜುಗುಪ್ಸೆಗಳನ್ನುಂಟುಮಾಡುತ್ತವೆ. ಒಟ್ಟಿನಲ್ಲಿ ಕವಿತೆ ಉತ್ತಮವಾಗಿರುವುದರಿಂದ ತಪ್ಪುಗಳು ಗಣನೆಗೆ ಬಾರವು. ಕಪ್ಪು ಕಿಂಚಿತ್ತಿದ್ದರೂ ಚಂದ್ರನ ಸೊಬಗನ್ನು ಹೊಗಳದವರು ಯಾರು ?

## (೨) 'ನಳಚರಿತ್ರೆ'

ಕವಿಯ ಎರಡನೆಯ ಕೃತಿಯಾದ 'ನಳಚರಿತ್ರೆ'ಯದು ಬಹಳ ಸರಳ ಶೈಲಿ. "ಸುಲಿದ ಬಾಳೆಯ ಹಣ್ಣಿನಂದದಿ, ಕಳೆದ ಸಿಗುರಿನ ಕಬ್ಬಿನಂದದಿ, ಅಳಿದ ಉಷ್ಣದ ಹಾಲಿನಂದದಿ'' ಎಂಬೀ ಉಪಮೆ ಇದರ ಶೈಲಿಗೆ ಒಪ್ಪುತ್ತದೆ. ಲಕ್ಷ್ಮೀಶನ 'ಕೊಡೆಯೆಂಬರಾತಪತ್ರವನು' ಮಾದರಿಯ ತೊಡಕು ತೊಡಕಿನ ಶ್ಲೇಷೆಗಳಾಗಲಿ, 'ಚೆನ್ನ ಬಸವಪುರಾಣ'ದಲ್ಲಿರುವಂತೆ ಮಿತಿಯ ಎಲ್ಲೆ ಮೀರಿದ ವರ್ಣನೆಗಳಾಗಲಿ, ತನ್ನ ಜಾಣ್ಮೆಯನ್ನು ನುತಿಸುವ ಹಲವು ಪದ್ಯಗಳಾಗಲಿ ಇದರಲ್ಲಿ ಇಲ್ಲ. ಶೈಲಿಯ ಸರಳತೆ ವಿಷ್ಣು "ದಾಸರ ದಾಸರ ದಾಸರ'', "ಭಂಟನಾಗಿ ಬಾಗಿಲ ಕಾಯಬೇಕೆಂದು'' ಆಸೆಪಡುವ ಕನಕನ ವಿನೀತಭಾವಕ್ಕೆ ತಕ್ಕುದು.

ದಮಯಂತಿ ಹಂಸವನ್ನು ಹಿಡಿಯಲೆಳಸಿದ ಚಿತ್ರವನ್ನು ಎಷ್ಟು ಸರಳವಾಗಿ, ಹೃದಯಂಗಮವಾಗಿ ಚಿತ್ರಿಸಿದ್ದಾನೆ!

ಮೆಲ್ಲಮೆಲ್ಲನಡಿಯಿಡುತ ಕರ। ಪಲ್ಲವವ ಚಾಚಿದಳು ನೂಪುರ
ಘಲ್ಲುಘಲಿರೆನೆ ಹಿಂದು ಹಿಂದಕೆ ಸರಿದುದಾ ಹಂಸ
ನಿಲ್ಲದಂಗೈಸುತ್ತ ಬರಲ। ಲ್ಲಲ್ಲಿಗಡರಿತು ಕುಸುಮಮಯ ನವ
ಮಲ್ಲಿಗೆಯ ಬನದೊಳಗೆ ಹೊಕ್ಕುದು ಹೊದಜಿ ಹೊಸಮೆಳೆಯ

ಓದುತ್ತಿರುವಹಾಗೆಯೇ ದಮಯಂತಿಯು ಮತ್ತು ಹಂಸದ ಚಿತ್ರ ಕಣ್ಣಿಮುಂದೆ ನಿಲ್ಲುವುದು. ಮಲ್ಲಿಗೆಯ ಬನದಲ್ಲಿ ಕುಸುಮಕೋಮಲೆಯಾದ ದಮಯಂತಿ ಮೆಲ್ಲನಡಿಯಿಡುತ್ತ ಬರುತ್ತಿದ್ದಾಳೆ; ಹಾಗೆಯೇ ಚಿಗುರಿನಂತ್ತಿದ್ದ ತನ್ನ ಕೈಯನ್ನು ಹಂಸದೆಡೆಗೆ ನೀಡುತ್ತಿದ್ದಾಳೆ; ಅಷ್ಟು ಮೆಲ್ಲನೆ ಸರಿದರೂ ಪ್ರಯೋಜನವಿಲ್ಲ—ನೂಪುರ ಘಲ್ಲುಘಲ್ಲೆಂದು ಶಬ್ದಮಾಡುತ್ತದೆ; ಆ ನೂಪುರದ ತಾಳಕ್ಕೆ ಸರಿಯಾಗಿ ಹಂಸ ಹಿಂದುಹಿಂದಕೆ ಸರಿಯುತಿದೆ. ಕಲಾಕೋವಿದನ ಕುಂಚಕ್ಕೆ ಎಣೆಯಿಲ್ಲದ ಚಿತ್ರ!

ಇನ್ನು ದಮಯಂತಿಯ ಪ್ರೇಮವೋ! ಪ್ರಥಮ ಸಂದರ್ಶನದ ಸಮಯದಲ್ಲಿ ನಳ ತನ್ನ ಪರಿಚಯವನ್ನು ತಿಳಿಸಲು,

ನಳನೆನಲು ತನು ಪುಳಕಜಲದಲಿ। ಮುಳುಗಿ ಹೊಂಪುಳಿಯಾಗಿ ತನ್ನಯ
ಕೆಳದಿಯರ ಮಱೆಗೊಂಡು ಪರುಷದ ಹೃದಯಭೀತಿಯಲಿ
ತೊಲಗಿದಳು....

ಇಷ್ಟು ಪ್ರೇಮದಿಂದ ವರಿಸಿದ ನಳ ದ್ಯೂತವ್ಯಸನಮಗ್ನನಾಗಿ ರಾಜ್ಯವನ್ನು ಕಳೆದುಕೊಂಡು ತನ್ನನ್ನು "ಎಳೆಯ ಬಾಳೆಯ ಸುಳಿಯನನಲಜ್ವಾಲನ ಹೊಯ್ಲಲಿ ಕಾಱಿಸಿದವೊಲು" ಬಳಲಿಸಿದನು. ಅವಳನ್ನು ಗೊಂಡಾರಣ್ಯದಿಂದ ಸುರಕ್ಷಿತವಾಗಿ ಸಾಗಿಸಿಬಿಟ್ಟು ನಳ ತಾನೆಲ್ಲಿಯಾದರೂ ಹೋಗಬಾರದಿತ್ತೇ? ಇಲ್ಲವೇ ಯಾವುದಾದರೊಂದು ಋಷ್ಯಾಶ್ರಮಕ್ಕೆ ಅವಳನ್ನು ಕೊಂಡೊಯ್ದು ಅನಂತರ ತಾನು ದೇಶಾಂತರ ಹೋಗಬಾರದಿತ್ತೇ? ನಟ್ಟಡವಿಯಲ್ಲಿ, ನಟ್ಟಿರುಳಲ್ಲಿ ಏಕಾಕಿನಿಯನ್ನಾಗಿ ಬಿಟ್ಟು ನಳ ತನ್ನ ದಾರಿ ಹಿಡಿದನು. ಇಷ್ಟಾಗಿಯೂ ದಮಯಂತಿ ಅವನನ್ನು "ಅನಾರ್ಯ" ಎಂದು ಕೂಡ ನಿಂದಿಸಲಿಲ್ಲ. ಇದಕ್ಕೆ ಬದಲು ಅವನ ಸುಗುಣಗಳನ್ನು ಈ ರೀತಿ ಕೊಂಡಾಡಿ ಹಲುಬುವಳು:

ಹಾ ರಮಣ ನಳನೃಪತಿ ಹಾ ರಣಧೀರ ಸದ್ಗುಣಹಾರ ರಿಪುಸಂಹಾರ ನಿತ್ಯೋದ್ಧಾರ
ನಿರ್ಮಳ ಸತ್ಯಸಂಚಾರ....

ಮುಂದೆ ದಮಯಂತಿ ಅರಣ್ಯದಲ್ಲಿ ವರ್ತಕರನ್ನು ಸಂಧಿಸಿದ ಸಮಯದಲ್ಲಿ ಆನೆಗಳ ಹಿಂಡು ಅವರಮೇಲೆ ಎರಗಿದ ಭಯಾನಕ ಸನ್ನಿವೇಶವನ್ನು ಕವಿ ಪ್ರೌಢಿಮೆಯಿಂದ ರಚಿಸಿದ್ದಾನೆ:

.................ಕವಿದು ಕಾಡಾನೆಗಳು ಮಡುವಿಗೆ
ತವಕದಿಂ ನೀರಡಿಸಿ ಬಂದುವು ಗಿರಿಗಳಂದದಲಿ
ಮುರಿದು ತರುಗಳನಿಡುತ ಮೆಳೆಗಳ। ನೊಱಸಿ ಮೆಟ್ಟುತ ಕೋಡಿನಲಿ ಬಲು।
ಮೊಱಡಿಗಳ ಕಿತ್ತಿಡುತ ಸೊಂಡಿಲತೂಗಿ ಮದವೇಱಿ ಕರಿಗಳೈತರೆ....

ಅನಾವಶ್ಯಕವಾದ ಆಡಂಬರದ ಪದಗಳ ತಡೆಯಿಲ್ಲದೆ ಕತೆ ವೇಗದಿಂದೋಡುತಿದೆ. ಓದುಗರ ಮನಸ್ಸು ಬೇಸರಗೊಳಲು ಸಮಯವೇ ದೊರಕದು.

ನಳನ ರೂಪು ಮಾರ್ಪಟ್ಟುದನ್ನು ಕುರಿತು ಕವಿ ಬರೆದ ಪದ್ಯ ಎಲ್ಲರಿಗೂ ಚಿರಪರಿಚಿತವಾಗಿದೆ.—

ದೊಡ್ಡ ಹೊಟ್ಟೆಯ ಗೂನುಬೆನ್ನಿನ। ಅಡ್ಡ ಮೋರೆಯ ಗಂಟುಮೂಗಿನ
ಮೊಣ್ಣ ಕೈಕಾಲುಗಳ ಉದುರಿದ ರೋಮಮೀಸೆಗಳ
ಜಿಡ್ಡುದೇಹದ ಗೊಜ್ಜುಗೊರಲಿನ। ಗಿಡ್ಡ ರೂಪಿನ ಹಜಿಕುಗಡ್ಡದ।
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ

ತಮ್ಮ ಸಂಸಾರವನ್ನು ಒಡಕುಹುಟ್ಟದಂತೆ ಕಾಪಿಡುವುದೇ ಸತಿಯರ ಶ್ರೇಯ. ಅದು ಕೆಟ್ಟುಹೋದರೆ ಅವರ ಹೃದಯ ಎಷ್ಟು ವ್ಯಾಕುಲಿತವಾಗುವುದೆಂಬುದನ್ನು ಹೀಗೆ ತಿಳಿಸಿದ್ದಾನೆ: ದಮಯಂತೀನಳರ ಪುನಸ್ಸಮಾಗಮದ ಮುನ್ನ ಅವಳು—

ಅರಿಗೆರಡೆಣಿಸಿದೆನೊ ಹಿರಿಯರ। ಗಾಜುಗೆಡಿಸಿದೆನೋ ವೃಥಾ ಮು
ನ್ನಾರ ನೋಂಪಿಗಪಾರವಿಘ್ನವ ಮಾಡಿಕೆಡಿಸಿದೆನೊ
ಆರಸಳಲಿಸಿದೆನೊ ತಪೋವ್ರತ। ರಾರ ಜರೆದೆನೊ ತನ್ನ ನಿಜ ಸಂ।
ಸಾರವೀತೆರನಾಯ್ತು ಶಿವ ಶಿವಯೆನುತ ಮಜುಗಿದಳು।

ಒಟ್ಟಿನಲ್ಲಿ 'ಮೋಹನತರಂಗಿಣಿ'ಯೊಂದಿಗೆ 'ನಳಚರಿತ್ರೆ'ಯನ್ನು ಹೋಲಿಸಿ ನೋಡಿದರೆ, ತುಪ್ಪ ಬಸಿಯುವ ಬಗೆ ಬಗೆಯ ಭಕ್ಷ್ಯಗಳಿಂದ ಕೂಡಿದ ರಾಜೋಗರವನ್ನು ತಿಂದು ಅಜೀರ್ಣಹೊಂದಿದವನಿಗೆ, ಮಧುರವಾದ ಹಣ್ಣು, ಜೇನುತುಪ್ಪ, ಹಾಲು, ಒಂದೆರಡು ಭಕ್ಷ್ಯಗಳು ಇಷ್ಟು ಕೂಡಿದ ಹಿತಮಿತವಾದ ಆಹಾರವನ್ನು ಬಡಿಸಿದಂತಾಗುತ್ತದೆ. ಚರಿತ್ರಕಾರನ ದೃಷ್ಟಿಯಿಂದ ಕವಿ ತನ್ನ ಪರಿಚಯವನ್ನು ತಿಳಿಸಿದ್ದರೆ ಉತ್ತಮವಾಗಿತ್ತು; ವಿಮರ್ಶಕನ ದೃಷ್ಟಿಯಿಂದ, ಬಹು ಪುರಾತನವಾಗಿಯೂ ಅತಿಪರಿಚಿತವಾಗಿಯೂ ಇರುವ ನಳನ ಕತೆಯ ಬದಲು ತಾನೇ ಸ್ವತಃ ಕತೆಯೊಂದನ್ನು ನಿರ್ಮಿಸಿ, ಅದನ್ನು ತನ್ನ ಕಾಲದ ಜನಜೀವನದ ಆವರಣದೊಳಗಿಟ್ಟು, ತನ್ನ ಪ್ರತಿಭೆಗೆ ಸಂಪೂರ್ಣಸ್ವಾತಂತ್ರ್ಯವನ್ನು ಕೊಟ್ಟಿದ್ದರೆ ಮತ್ತೂ ಮೇಲಾಗಿರುತ್ತಿದ್ದಿತು. ಆದರೆ ಆತನದು ಸಂಪ್ರದಾಯ, ರೂಢಿ, ಶಾಸ್ತ್ರ, ಕಟ್ಟಳೆ ಇವುಗಳ ಕಾಲ. "ಕಾಲವಾರನು ಬೀಳುಮಾಡದು?"

## (೩) 'ರಾಮಧಾನ್ಯ ಚರಿತ್ರೆ'

ಒಂದು ಕವಿತೆಯಲ್ಲಿ ಮಾತ್ರ ಕನಕದಾಸನು ಸಂಪ್ರದಾಯದ ಕಟ್ಟಳೆಯನ್ನು ಮೀರಿ, ಪ್ರತಿಭೆಗೆ ನಿಜವಾಗಿಯೂ ಅವಕಾಶವನ್ನು ಕೊಟ್ಟು, ಹೊಸ ಕತೆಯೊಂದನ್ನು ಹೆಣೆದಿದ್ದಾನೆ. ಅದರ ಹೆಸರು 'ರಾಮಧಾನ್ಯ ಚರಿತ್ರೆ'; ಅದರಲ್ಲಿರುವ ಪದ್ಯಗಳು ೧೫೬; ಛಂದಸ್ಸು ಭಾಮಿನೀ ಷಟ್ಪದಿ. ಆ ಪದ್ಯಗಳ ಪೈಕಿ ಕವಿಚರಿತಕಾರರು ಬರೆದಿಟ್ಟುಕೊಂಡ ಐದು ಪದ್ಯಗಳ ಹೊರತು, ಮಿಕ್ಕುವೆಲ್ಲಾ ಕನ್ನಡಿಗರಿಗೆ ಸಿಗುವಹಾಗೆಯೇ ಇಲ್ಲ. ಏಕೆಂದರೆ ಅದರ ಲಿಖಿತ ಪ್ರತಿ — ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿದ್ದ ಅದರ ಏಕಮಾತ್ರ ಪ್ರತಿ — ಈಚೆಗೆ ಕಳೆದುಹೋಗಿದೆಯಂತೆ. *ಅಮೂಲ್ಯವಾದ ಈ ಗ್ರಂಥದ ಇನ್ನು ಕೆಲವು ಭಾಗಗಳನ್ನಾದರೂ ಬರೆದುಕೊಳ್ಳುವ ಪುಣ್ಯ ಮತ್ತಾರಿಗೂ

ಲಭಿಸಿರುವಂತೆ ಕಾಣಲಿಲ್ಲ. ಕವಿಚರಿತಕಾರರ ವಿಮರ್ಶೆಯೊಂದೇ ಸದ್ಯದಲ್ಲಿ ನಮಗೆ ಉಳಿದಿರುವುದು.*

"ಇದರಲ್ಲಿ ಕವಿ ರಾಮಧಾನ್ಯದ ಎಂದರೆ ರಾಗಿಯ ಉತ್ಕೃಷ್ಟತೆಯನ್ನು ಬಹಳ ಚಮತ್ಕಾರವಾಗಿ ನಿರೂಪಿಸಿದ್ದಾನೆ. ಈ ಧಾನ್ಯಕ್ಕೆ 'ನರೆದಲೆಗ' ಎಂಬ ಹೆಸರೆಂದೂ, ಇದಕ್ಕೆ ರಾಮದೇವರು 'ರಾಘವ' ಎಂಬ ತಮ್ಮ ಹೆಸರನ್ನು ಇಟ್ಟುದರಿಂದ 'ರಾಗಿ' ಎಂಬ ಹೆಸರು ಪ್ರಸಿದ್ಧಿಗೆ ಬಂದಿತೆಂದೂ ಈ ಗ್ರಂಥದಿಂದ ತಿಳಿಯುತ್ತದೆ."

ಕಥಾಸಾರ ಕವಿಯ ಜಾಣ್ಮೆಯನ್ನು ವ್ಯಕ್ತಗೊಳಿಸುವುದು. "ರಾವಣನ ವಧಾನಂತರ ಶ್ರೀರಾಮ ಋಷಿಗಳ ಆಶ್ರಮಕ್ಕೆ ಬಂದು ಅವರು ಕೊಟ್ಟ ಭಕ್ಷ್ಯಗಳ ರುಚಿಯನ್ನು ನೋಡಿ, ಅವರು ಉಪಯೋಗಿಸಿದ ಧಾನ್ಯಗಳನ್ನು ತರಿಸುವಂತೆ ಹೇಳಿದನು....ಇವುಗಳಲ್ಲಿ ಆವುದು ಶ್ರೇಷ್ಠವೆಂದು ಕೇಳಲು ಒಬ್ಬೊಬ್ಬರು ಒಂದೊಂದನ್ನು ಹೊಗಳುತ್ತಾರೆ. ಆಗ ನರೆದಲೆಗನಿಗೂ, ವ್ರೀಹಿಗೂ ವಾಗ್ವಾದವಾಗುತ್ತದೆ. ಶ್ರೀರಾಮ ಅಯೋಧ್ಯೆಯಲ್ಲಿ ದೇವತೆಗಳನ್ನು ಕರೆಯಿಸಿ, ಇವುಗಳ ವಿಚಾರಣೆಯನ್ನು ಮಾಡುವಂತೆ ಹೇಳಿ, ಎರಡನ್ನೂ ಆರು ತಿಂಗಳು ಸೆರೆಯಿಡಿಸಿ ಹೊರಟುಹೋದನು. ಬಳಿಕ ಗೌತಮ ಅವುಗಳನ್ನು ಕರೆದುಕೊಂಡು ರಾಮಾಸ್ಥಾನಕ್ಕೆ ಹೋಗಲು ಇಂದ್ರನು ವಿಮರ್ಶೆಮಾಡಿ ನರೆದಲೆಗ ಸಾರಹೃದಯವೆಂದೂ, ವ್ರೀಹಿ ನಿಸ್ಸಾರವೆಂದೂ ಹೇಳಿದನು. ಆಗ ಎಲ್ಲರೂ ನರೆದಲೆಗನಿಗೆ ಬಿರುದುಗಳನ್ನು ಕೊಟ್ಟರು..ವ್ರೀಹಿ ನಾಚಿಕೊಂಡು ಶಿರವ ಬಾಗಿಸಿತು. ನರೆದಲೆಗನಿಗೂ, ವ್ರೀಹಿಗೂ ('ನರೆದಲೆಗ' ರಾಗಿಗೆ ಗ್ರಾಮ್ಯವಾದ ಹೆಸರು; 'ವ್ರೀಹಿ' ನೆಲ್ಲಿಗೆ ಸಂಸ್ಕೃತದ ಆಡಂಬರದ ಹೆಸರು) ನಡೆದ ವಾಗ್ವಾದವಿದು:

ವ್ರೀಹಿಯ ಮಾತು

ಕ್ಷಿತಿಯಮರರುಪನಯನದಲಿ ಸು। ವ್ರತ ಸುಭೋಜನಗಳಲಿ ಮಂತ್ರಾ
ಕ್ಷತೆಗಳಲಿ ಶುಭ ಶೋಭನದಲಾರತಿಯ ಬೆಳಗುವಲಿ
ಕ್ರತುಗಳೆಡೆಯೊಳಗಮರನೆಗಳಲಿ। ಪ್ರತಿದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯವಾಗಿಹೆನೆಂದನಾ ವ್ರಿಹಿಗ॥

ಹೊಸಮನೆಯ ಪುಣ್ಯಾರ್ಚನೆಗೆ।....ಹಸುಮಕ್ಕಳಿಗೆ ಸೇಸಿಗೆ
ವಸುಮತೀಶರ ಗರುಡಿಯಲಿ ಶಸ್ತ್ರಾಸ್ತ್ರದರ್ಚನೆಗೆ
ಎಸೆವ ವಿಪ್ರರ ಫಾಲದಲಿ ರಂ। ಜಿಸುತ ಗಂಧಾಕ್ಷತೆಯಹೆನು ಭಾ
ವಿಸಲು ಲೋಕದೊಳಾರು ಸರಿ ತನಗೆಂದನಾ ವ್ರಿಹಿಗ॥

—ಇದು ಟೊಳ್ಳಿನ ಹೆಮ್ಮೆ; ಇನ್ನು ಗಟ್ಟಿಯ ಪ್ರತಿಮಾತು:

ನರೆದಲೆಗನ ಮಾತು

ಸತ್ವಹೀನರ ಬಡವರನು ಕ। ಣ್ಣೆತ್ತಿನೋಡೆ ಧನಾಢ್ಯರನು ಬೆಂ
ಬತ್ತಿ ನಡೆಯುಪೇಕ್ಷೆ ನಿನ್ನದು ಪೇಟಿಲೇನದನು

* 'ಕವಿಚರಿತೆ', ಸಂಪುಟ ೨, ಪುಟಗಳು ೨೪೪-೨೪೦.

ಹೆತ್ತ ಬಾಣತಿಯರಿಗೆ ರೋಗಿಗೆ। ಪಥ್ಯಪಾನದಿ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ

ನಾನು ಕ್ಷಾಮಕಾಲದಲ್ಲಿ ಪ್ರಾಣಿಗಳನ್ನು ಆದರಿಸಿ ಸಲಹುವೆನು. ನಿನ್ನಿಂದಲಾಗಲಿ, ನಿನ್ನ ಬಳಗದಿಂದಾಗಲಿ ಇದು ಸಾಧ್ಯವೆ? ಮತ್ತೂ—

ಸತ್ತವರ ಪ್ರತಿಬಿಂಬ ರೂಪನು। ವಿಸ್ತರಿಸಿ ಪಿತೃನಾಮಗಳ ನಿನ
ಗಿತ್ತು ಮೂವರ ಪೆಸರಿನಲಿ ಕರೆಕರೆದು ದರ್ಭೆಯಲಿ
ನೆತ್ತಿ ನೆತ್ತಿಯ ಬಡಿದು ಕಡೆಯಲಿ। ತುತ್ತನಿಡುವರು ಶಿಶುಗಳಿಗೆ ನೀ
ನೆತ್ತಿದೆಯಲಾ ತನುವ ಸುಡಬೇಕೆಂದ ನರೆದಲೆಗ॥

ಹಾಸ್ಯರಸಮಯವಾದ ವಸ್ತುವಿದರದು; ಆಗಿನ ಜನಜೀವನ, ವಾದವಿವಾದಗಳು, ನ್ಯಾಯತೀರ್ಪುಗಳು, ಆಹಾರವಿಧಾನಗಳು ಇವುಗಳಿಗೆ ಸಂಬಂಧಿಸಿದ ಪದ್ಧತಿಗಳನ್ನು ಪ್ರತಿಬಿಂಬಿಸುವ ಕನ್ನಡಿ. ಇಂತಹ ಕನ್ನಡಿಯನ್ನು ಹೋಗಗೊಟ್ಟ ಅಜಾಗರೂಕತೆಗೆ ಎಷ್ಟು ವ್ಯಸನಪಟ್ಟರೂ ತೀರದು.

## (೪) ಮತ್ತೊಂದು ಕವಿತೆ

ಈತನ ಇನ್ನೊಂದು ಕವಿತೆ ಸ್ವಲ್ಪಮಟ್ಟಿಗೆ ಇದೇ ಜಾತಿಗೆ ಸೇರಿದೆ. "ತಿರುಕ ನೋರ್ವನೂರ ಮುಂದೆ" ಎಂದು ಪ್ರಾರಂಭವಾಗುವ ಕವಿತೆಯನ್ನು ಕೇಳಿ ಅದರ ಸವಿಯನ್ನಾಸ್ವಾದಿಸದವರೇ ಇಲ್ಲ. ಎಳೆಯ ವಯಸ್ಸಿನವರು ಅದರ ಕತೆಗೆ ಮನಸೋಲುತ್ತಾರೆ. ಮುರುಕು ಧರ್ಮಶಾಲೆಯಲ್ಲಿ ಒರಗಿದ ತಿರುಕ ಕನಸು ಕಂಡದ್ದು, ಆವನ ವೈಭವ, ಅವನ ಸಿರಿಸಂಪತ್ತು, ವಿವಾಹ, ಆ ಬಣ್ಣದ ಕನಸುಗಳನ್ನೊಡೆದ ವಿಪತ್ತು—ಇವೆಲ್ಲವೂ ಮನಸ್ಸಿನಲ್ಲಿ ಅಚ್ಚಳಿಯದೆ ನಿಲ್ಲುತ್ತವೆ. ಇಳಿವಯಸ್ಸಾದವರಿಗೆ "ನೋಡಿದೆಯಾ, ನಮ್ಮ ಜನ್ಮವೂ ಕೂಡ ತಿರುಕನ ಕನಸಿನಂತೆ, ಆದುದರಿಂದ ಆಸೆಗಳು ವ್ಯರ್ಥವೆಂದು ನಾವು ಎಚ್ಚತ್ತಿರಬೇಕು" ಎಂಬ ಭಾವನೆ ಒಲೆಯುವುದು. ವಿಮರ್ಶಕರು ಕತೆಯ ಬಂಧದಲ್ಲಿನ ನೈಪುಣ್ಯ, ನಿಜವಾದ ಕನಸಿನಲ್ಲಿರುವಂತಹ ಓಟ, ಸರಪಣಿಯ ಅತ್ಯಾಶ್ಚರ್ಯಕರವಾದ ಸರಳತೆ— ಇವುಗಳಿಗೆ ಮೆಚ್ಚಿ ತಲೆದೂಗುವರು.

## (೫) ಇತರ ಪದಗಳು

ಇನ್ನು ಜನರಿಗೆ ಅತ್ಯಂತ ಪ್ರಿಯವಾಗಿರುವ ಆತನ ಪದಗಳನ್ನು ತೆಗೆದುಕೊಳ್ಳೋಣ. ಏಳು ವರ್ಷದ ಕೆಳಗೆ ಉಡುಪಿಯ ಮಧ್ವಸಿದ್ಧಾಂತ ಗ್ರಂಥಾಲಯದವರು ಕನಕದಾಸರ ಕೀರ್ತನೆಗಳನ್ನು ಶೇಖರಿಸಿ, ಅಚ್ಚು ಹಾಕಿಸಿದ್ದಾರೆ. ಅದರಲ್ಲಿ ಸುಮಾರು ೧೮೮ ಪದಗಳಿವೆ. ಅವುಗಳಲ್ಲಿ ದೇವರ ಸ್ತೋತ್ರರೂಪವಾದ ಪದಗಳು ಸುಮಾರು ೭೦; ಗೋಕುಲಕೃಷ್ಣನ ವೃತ್ತಾಂತವನ್ನು ವಿವರಿಸುವ ಪದಗಳು ಸುಮಾರು ೨೦; ನೀತಿಬೋಧೆ, ನೀತಿವಚನ, ಕವಿಯ ಭಕ್ತಿಭಾವವಿಕಾಸ ಪ್ರಧಾನವಾದ ಗೀತೆಗಳ ಸಂಖ್ಯೆ ೮೩; ಗುಟ್ಟುಗಳು ೧೫. ಈ ಸ್ಥೂಲ ವಿಭಜನೆಯಿಂದ ಪದಗಳ ಸ್ವರೂಪ ಚೆನ್ನಾಗಿ ವ್ಯಕ್ತವಾಗುತ್ತದೆ.

ಸ್ತೋತ್ರಗಳಲ್ಲಿ ಒಂದು ಕೇಶವನ ದಾಸನಾದ ಗಣಪನಿಗೆ, ಏಳೆಂಟು ಹರಿಯ ಬಂಟನಾದ ಆಂಜನೇಯನಿಗೆ ಮತ್ತು ಅವನ ಅವತಾರಸ್ವರೂಪರಾದ ಭೀಮ ಮಧ್ವರುಗಳಿಗೆ, ಒಂದೆರಡು ಭೂಮಿತಾಯಿಗೆ ಬಿಟ್ಟರೆ ಮಿಕ್ಕೆಲ್ಲವೂ ನಾರಾಯಣ, ಕೃಷ್ಣ, ಚೆನ್ನಿಗರಾಯ ಸ್ವರೂಪನಾದ ವಿಷ್ಣುವಿಗೆ ಮೀಸಲಾಗಿವೆ. ದೇವರಲ್ಲಿ ಭಕ್ತನಾದವನು ಆವಾವ ಭಾವನೆಗಳನ್ನು ತಳೆಯಬಹುದೋ, ಅವೆಲ್ಲವನ್ನೂ ದಾಸರು ಹೃದಯಂಗಮವಾಗಿ ಚಿತ್ರಿಸಿದ್ದಾರೆ.* ಅವರಿಗೆ ದೇವನು ತೀರ್ಥಪ್ರಸಾದಗಳನ್ನು ಹಂಚುವ ಸೆಟ್ಟಿ; ಊರೂರು ಸುತ್ತುವ ದಾಸಯ್ಯ; ಭಕ್ತರಿಗೆ ಅಭಯವೀಯುವ ಅನರ್ಘ್ಯವಾದ ಮುತ್ತು, ಕುರಿಹಿಂಡು ಕಾವ ಬೀರೇದೇವರು; ಕಲಿಯುಗದ ಗೌಡ. ಸರ್ವಸ್ವರೂಪನಾದ ಭಗವಂತನನ್ನು ಕನಕದಾಸರು ಒಮ್ಮೊಮ್ಮೆ ಕಪಟದ ಅವಹೇಳನ ಮಾಡುವರು. ಮರುಕ್ಷಣವೇ ತಾಯಿಯ ವಾತ್ಸಲ್ಯವನ್ನು ಬೀರಿಸುವ ಪ್ರೇಮದಿಂದ ಭಗವಂತನ ಹಿತವನ್ನು ವಿಚಾರಿಸಿಕೊಳ್ಳುವರು. ಶೇಷಶಯನ ವಿಗ್ರಹವನ್ನು ನೋಡಿ,

ಯಾಕಿಲ್ಲಿ ಪವಡಿಸಿರುವೆ?
ತನ್ನನೊಡನೆ ಹೋರಿ ಬೆಟ್ಟವನು ಬೆನ್ನಲಿ ಪೊತ್ತು
ರಮಣಿ ಭೂಮಿಯನು ತಂದಾಲಸ್ಯವೋ?
ಅಮರವೈರಿಯ ಕರುಳ ಕಿತ್ತ ಕಡು ಧಾವತಿಯೋ?
ಕ್ಷಮೆಯನಳೆದೀ ಪಾದಕಮಲ ನೊಂದುವೋ?

ಎಂದು ಖತಿಯಿಂದ ಬೆಸಗೊಳುವರು. ಕೆಲವೊಮ್ಮೆ ದೇವರು ಕರುಣಾಹೀನನಂತೆ ತೋರುವನು. ಹಾಗೆಯೇ ತಮ್ಮ ಅಲ್ಪತ್ವದ ಜ್ಞಾಪಕವೂ ಹೊಳೆಯುವುದು. "ನಾನು ಕಡುಪಾಪಿ, ಆದರೆ ನೊಂದಿದ್ದೇನೆ. ಆದುದರಿಂದ ಬಾಗಿಲನು ತೆರೆದು ಸೇವೆಯನು ಕೊಡು, ನನ್ನ ತನು ನಿನ್ನದು, ಜೀವನ ನಿನ್ನದು, ಅನುದಿನದಲಿ ಬಹ ಸುಖದುಃಖ ನಿನ್ನದಯ್ಯ"— ಈ ಒಂದೊಂದು ವಾಕ್ಯವನ್ನೂ ಪದಗಳನ್ನಾಗಿ ಮಾಡಿ ದೇವರಲ್ಲಿ ಮೊರೆಯಿಟ್ಟಿದ್ದಾರೆ.

ಅವರ ಜೀವನದ ಧ್ಯೇಯವನ್ನು "ಬಂಟನಾಗಿ ಬಾಗಿಲ ಕಾಯ್ವೆ" ಎಂಬ ಪದದಲ್ಲಿ ಸ್ಪಷ್ಟಪಡಿಸಿದ್ದಾರೆ. ಅದೇನೆಂದರೆ, ಬದುಕಿರುವವರೆಗೂ ದೇವರನಾಮವನ್ನು ಉಚ್ಚರಿಸುವುದು, ಅವನು ಕೊಡುವ ದುಃಖಗಳನ್ನು ಒಲ್ಲೆನೆನ್ನದೆ ಹಿಂದೆ ಪಡೆದುಬಂದುದೆಲ್ಲವನುಂಡು ತೀರಿಸುವುದು, ಯಾವ ಪ್ರತಿಫಲಕ್ಕೂ ಆಸೆಪಡದೆ ನಿಷ್ಕಾಮಧರ್ಮದಿಂದ ಅವನನ್ನು ಪ್ರೀತಿಸುವುದು. ಇಷ್ಟೇ ಅಲ್ಲ. **ಅವನ ದಾಸರ ದಾಸರ ದಾಸರ ಪದವಿಗೆ ಪ್ರಯತ್ನಿಸುವುದು,** ಎಂದರೆ ಜನಸಾಮಾನ್ಯದ ಸೇವೆಯನ್ನು ಕೈಗೊಳುವುದು, ಮರಣಾನಂತರವೂ ವೈಕುಂಠದ ದಾಸರ ಮನೆಯ ಭಂಟನಾಗಿ ಕಾಯ್ವುದು—ಇದು ಅವರ ಹೇರಾಸೆ, ಜೀವನದ ಹೆಗ್ಗುರಿ.

---

* ಕವಿಯ ಸ್ಥಾನದಿಂದ ಕನಕದಾಸನು ದಾಸರ ಸ್ಥಾನಕ್ಕೇರಿರುವುದರಿಂದಲೂ, ದಾಸರನ್ನು ಏಕವಚನದಲ್ಲಿ ಕರೆವುದು ರೂಢಿಗೆ ಹೊರತಾದುದರಿಂದಲೂ, ಇನ್ನುಮುಂದೆ ಬಹುವಚನವನ್ನು ಉಪಯೋಗಿಸಿದ್ದೇನೆ.

ತಮ್ಮ ಆತ್ಮಶುದ್ಧಿಗೊಂದಕ್ಕೇ ಗಮನಕೊಡದೆ, ಕನಕದಾಸರು ಈಗ ನಾವು ಸಮಾಜಸೇವೆಯೆಂದು ಯಾವುದನ್ನು ಹೆಚ್ಚಾಳಮಾಡುತ್ತೇವೋ ಅದಕ್ಕೂ ಮನ ಕೊಟ್ಟರು. ಮೊದಲು ಆಗಿನ ಕಾಲದ ಕುಂದುಕೊರತೆಗಳನ್ನು ಬಯಲಿಗೆ ತಂದರು. ಮುಕ್ತಿ ದೊರಕಬೇಕಾದರೆ ಪುತ್ರೋತ್ಪತ್ತಿಯಿಂದಲ್ಲ. ಭಕ್ತಿಯೊಂದೇ ಸಾಧನ; ಕುಲಕುಲವೆನ್ನುವುದು ತಪ್ಪು, ಭಕ್ತಿಯಿದ್ದರೆ ಕುಲವೇನು ಮಾಡಲಾಪುದು? ಕೆಸರೊಳು ತಾವರೆ ಪುಟ್ಟಲು ಅದನು ತಂದು ಬಿಸಜನಾಭಗೆ ಅರ್ಪಿಸಲಿಲ್ಲವೆ? ಬರಿಯ ಡಂಭಾಚಾರದಿಂದ ದೇವರು ಒಲಿಯನು, ನೇಮದಿ ಉಪವಾಸ, ಆ ಮಹ ಏಕಾದಶಿ ನಡಸಿದರೂ ಪಕ್ಕಿವಾಹನನ ಲೆಕ್ಕಿಸಿ ಪೊಗಳದೆ ಬರಿಯ ಅಕ್ಕಿಗೆ ತಿರುಗು ವವರಿಗೆ ಭಕ್ತಿ ದೊರೆಯದು. ಉದಯಕಾಲದಲೆದ್ದು ಗಡಗಡ ನಡುಗುತ ನದಿಯಲ್ಲಿ ಮಿಂದೆನೆಂದು ಹಿಗ್ಗುತ, ಒಳಗೆ ಮಾತ್ರ ಮದಮತ್ಸರ ಕ್ರೋಧಗಳನ್ನು ತುಂಬಿಟ್ಟು ಕೊಂಡು ಬದಿಯಲ್ಲಿದ್ದವರಿಗಾಶ್ಚರ್ಯವ ತೋರುವವರಿಗೂ ಭಕ್ತಿ ದೊರೆಯದು.

ಹೀಗೆ ಸಮಾಜಜೀವನದಲ್ಲಿ ಬೇರೂರಿದ್ದ ವಿಷವೃಕ್ಷಗಳನ್ನು ತಮ್ಮಿಂದಾದಷ್ಟು ನಿರ್ಮೂಲಮಾಡಲು ಯತ್ನಿಸಿದನಂತರ, ಕನಕದಾಸರು ಹಲವು ಹಿತವಚನಗಳನ್ನು ಜನರ ಮನದಲ್ಲಿ ಬಿತ್ತಿದ್ದಾರೆ. ಸಂಸಾರವೆಂಬ ಸಾಗರವನ್ನುತ್ತರಿಸಬೇಕಾದರೆ,

> ಆಸೆಯನು ತೊರೆಯಬೇಕು.
> ದಾನಧರ್ಮಗಳನು ಮಾಡಿ ನಿಧಾನಿ ಎನಿಸಿಕೊಳಬೇಕು
> ಹಸಿದು ಬಂದವರಿಂಗೆ ಅಶನವೀಯಲು ಬೇಕು
> ಶಿಶುಗಳಿಗೆ ಪಾಲ್ಬೆಣ್ಣೆಯುಣಿಸಬೇಕು
> ಪಸನಾದ ಭಾಷೆಯನು ಧಾರೆಯೆರೆಯಲುಬೇಕು
> ಪುಸಿಯಾಡದಲೆ ಭಾಷೆ ನಡಸಲೇಬೇಕು

ಇತ್ಯಾದಿ ಹಿತವಚನಗಳು ಅವರ ಪದಗಳಲ್ಲಿ ಅನೇಕವಾಗಿವೆ.

ಎಂದರೆ ಕನಕದಾಸರು ಯಾವಾಗಲೂ ಕಾಂತಾಸಮ್ಮಿತದಿಂದ ಹಿತವಾಗಿ ನೀತಿಬೋಧೆಯನ್ನು ಮಾಡುತ್ತಿದ್ದರೆಂದು ಅರ್ಥವಲ್ಲ. ಮಾನವನ ಡೊಂಕು ಸ್ವಭಾವ ಎಷ್ಟೋವೇಳೆ ಅವರನ್ನು ರೇಗಿಸುತಿದ್ದಿತು. ಆಗ ಅವರು "ಸತ್ಯದ ಧರ್ಮವ ನಿತ್ಯವು ಬೋಧಿಸೆ ಕತ್ತೆಯ ಮನಸಿಗೆ ಸೊಗಸೀತೆ" ಎಂದು ಬೇಸರ ಪಟ್ಟುಕೊಳ್ಳುವರು. "ಹೀನಮಾನವರಿಗೆ" ಜೀವನದ ಕ್ಷಣಭಂಗುರತೆಯನ್ನು ತೋರಿಸಿ, "ಮಲಮಾಂಸ ಮಜ್ಜನದ ದೇಹವಿದು, ನಂಬದಿರು, ಈ ದೇಹ ನಿತ್ಯವಲ್ಲ" ಎಂದು ಪದೇ ಪದೇ ಅಧಿಕಾರವಾಣಿಯಿಂದ ಚುಚ್ಚುವರು. ವಿವೇಕ ವನ್ನು ಶಿಕ್ಷಕನಂತೆ ಕಲಿಸುವುದಕ್ಕೆಂದೇ ಹುಟ್ಟಿದ ಕಾವ್ಯ ಉತ್ತಮವರ್ಗದಿಂದ ಹೊರತಾದ್ದೆಂದೂ, ಜೀವನದ ಭೀಭತ್ಸ ಅಥವಾ ಶೋಕಮಯ ಅಂಶಗಳ ಮೇಲೆಯೇ ಗುರಿಯಿಟ್ಟು ಮನುಷ್ಯರನ್ನು ಆ ಮೂಲಕ ಹೆದರಿಸಿ ಬೆದರಿಸಿ ಭಕ್ತಿ ಮಾರ್ಗಕ್ಕೆಳೆಯುವ ಮತ್ತು ಮಾನವನ ಅಂತಸ್ಸತ್ವದಲ್ಲಿ ಕಿಂಚಿತ್ತೂ ನಂಬಿಕೆ ಯಿಲ್ಲದ ಸಾಹಿತ್ಯ, ಉದಾತ್ತ ಧ್ಯೇಯ, ಹೃದಯವೈಶಾಲ್ಯವನ್ನು ತಾಳದೆಂದೂ, ಈ ಕಾರಣಗಳಿಂದ 'ದಾಸರ ಪದಗಳು' ಉತ್ತಮ ಸಾಹಿತ್ಯವರ್ಗಕ್ಕೆ ಬಲುಮಟ್ಟಿಗೆ ನಿಲುಕವೆಂದೂ ಕೆಲವರು ಹೇಳುತ್ತಾರೆ.

ಆದರೆ ಈ ವಿಷಯದಲ್ಲಿ ಕನಕದಾಸರ ಕಾಲವನ್ನು ಗಣನೆಗೆ ತರುವುದು ಯುಕ್ತ. ಆಗಿನ ದಾಸರುಗಳು ನೀತಿಬೋಧೆಯನ್ನೇ ಮೂಲಧ್ಯೇಯವಾಗಿಟ್ಟು ಕೊಂಡಿದ್ದರು. ಬುದ್ಧನಂತೆ ಕನಕದಾಸರು ಜನರ ಕ್ಷಣಿಕಸುಖ, ಕಷ್ಟಜೀವನ, ಮಿತಿಯಿಲ್ಲದಾಸೆ-ಇವುಗಳನ್ನು ನೋಡಿ ನೋಡಿ ನೊಂದಿದ್ದರು. ಭಕ್ತಿಯೊಂದೇ ಈ ಮೋಹಕ್ಕೆ ಮದ್ದು. ಆದುದರಿಂದ ಸಂಸಾರದ ಕಷ್ಟನಿಷ್ಠುರಗಳನ್ನು ಒತ್ತಿ ತಿವಿದು ಹೇಳಿದರೇನಾದರೂ 'ಮನುವಿನ ಮಕ್ಕಳ'ಲ್ಲಿ ಭಕ್ತಿ ಹುಟ್ಟಬಹುದೋ ಏನೋ ಎಂದು ಅವರಾಸೆ. ನೀತಿಬೋಧೆಯು ಮುದ್ರೆ ತಾಗಿದುದರಿಂದ ಪದಗಳಲ್ಲಿ ಸಾರ ವಿಲ್ಲವೆಂದೂ, ಸಾಹಿತ್ಯದ ರುಚಿಯಿಲ್ಲವೆಂದೂ ಹೇಳಲಾಗದು. ಚಿನ್ನಕ್ಕೋಸುಗ ಅಗೆಯುವ ಬಿಲಗಳಲ್ಲಿ ಹೆಚ್ಚು ಪಾಲು ಕಲ್ಲುಗುಂಡುಗಳೇ ತುಂಬಿವೆ. ಚಿನ್ನ ಎಲ್ಲೋ ಅಲ್ಲಲ್ಲಿ ಹುದುಗಿಕೊಂಡು ಮಿನುಗುವುದು. ಆದರೆ ನಾವು ಆ ಬಿಲವನ್ನು ಚಿನ್ನದ ಗಣಿ ಎನ್ನುತ್ತೇವೆಯೇ ಹೊರತು, ಕಲ್ಲಿನ ಗಣಿ ಎನ್ನುತ್ತೇವೆಯೇ?

## ೫. ನೀತಿಬೋಧೆ

ಕನಕದಾಸರ ನೀತಿಬೋಧೆಯೂ ಹೆಚ್ಚಿನ ಮಹತ್ವವುಳ್ಳುದು. ಅವರು ಭಕ್ತಿಯೋಗಿಗಳು. ತತ್ವಾನ್ವೇಷಣೆಗೋಸುಗ ತನುಮನಗಳನ್ನು ಅರ್ಪಿಸಿದವರು; ಅವರ ಭಕ್ತಿಭಾವ ಸಾಫಲ್ಯದ ಚರಮಸೀಮೆಯನ್ನು ಮುಟ್ಟಿ, ಜ್ಞಾನಯೋಗದ ಶಿಖರದವರೆಗೂ ಸಮಿಾಪಿಸಿತ್ತೆನ್ನುವುದು "ನೀಮಾಯೆಯೊಳಗೋ, ನಿನ್ನೊಳು ಮಾಯೆಯೋ. ನೀ ದೇಹದೊಳಗೋ, ನಿನ್ನೊಳು ದೇಹವೋ" ಎಂಬ ಕೀರ್ತನೆ ಯಿಂದ ವ್ಯಕ್ತವಾಗುವುದು. ಮತ್ತಿತರ ಕೀರ್ತನೆಗಳಲ್ಲಿ ಕನಕದಾಸರು ರಾಮಕೃಷ್ಣ ಪರಮಹಂಸರಂತೆ ಭಕ್ತರೂ ಹೌದು, ಜ್ಞಾನಿಗಳೂ ಹೌದು ಎಂದು ತಿಳಿಯ ಬರುತ್ತದೆ. ವೇಷದ ವೈರಾಗ್ಯದ ವಿಷಯದಲ್ಲಿ ಕಬ್ಬಿಣಕ್ಕಿಂತ ಗಡುಸಾಗಿದ್ದ ಅವರ ಚಿತ್ತ ದೀನರನ್ನೂ, ಅಸಹಾಯರನ್ನೂ, ಸಂಕಟಪಡುವವರನ್ನೂ ನೋಡಿದಾಗ ಜಾಜಿಯ ಹೂವಿಗಿಂತ ಮೃದುವಾಗುತಲಿತ್ತು. ಆಗ ಕರುಣಚಿತ್ತದಿಂದ ಅವರು ಈ ರೀತಿ ಸಮಾಧಾನ ಹೇಳುವರು:

ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಲಹುವನು ಇದಕೆ ಸಂಶಯವೆ?
ಕಲ್ಲೊಳಗಿರುವ ಕ್ರಿಮಿಕೀಟಗಳಿಗೆಲ್ಲ
ಅಲ್ಲೆ ಆಹಾರವನು ತಂದೀವರಾರು?
ಫುಲ್ಲಲೋಚನ ಕಾಗಿನೆಲೆಯಾದಿಕೇಶವನು
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ

ಎಂದು ಆಶಾಜನಕವಾಣಿಯನ್ನು ತಂದೊಡ್ಡುವರು. ಉತ್ತಮಜೀವವೊಂದು ತನ್ನ ಅನುಭವಗಳನ್ನೂ, ಯೋಚನಾಲಹರಿಗಳನ್ನೂ, ನಂಬಿಕೆ ಆಸೆಗಳನ್ನೂ, ಭಾವೋ ದ್ರೇಕಗಳನ್ನೂ ಸುಂದರನುಡಿಯಲ್ಲಿ ಪ್ರತಿಬಿಂಬಿಸಿ ಓದುಗರ ಬುದ್ಧಿ, ಅಂತಃಕರಣ, ಚೈತನ್ಯ ಇವೆಲ್ಲವನ್ನೂ ಒಮ್ಮೆಗೇ ಸೂರೆಗೊಳ್ಳಬಲ್ಲುದಾದರೆ, ಆ ಪ್ರತಿಭೆಯ ಫಲ ಸಾಹಿತ್ಯಕ್ಕೆ ಸೇರಿಲ್ಲವೆಂದು ನಾವು ಹೇಗೆ ಹೇಳಲಾಪೆವು?

"ದಾಸರ ಪದ"ಗಳ ಶೈಲಿ ಉತ್ತಮ ಸಾಹಿತ್ಯಕ್ಕೆ ಅಳವಟ್ಟುದು. ಉದಾತ್ತ ಭಾವಗಳನ್ನು ಸಾಮಾನ್ಯರಿಗೂ ಎಟುಕಿಸುವ ಸರಳತೆ, ಕವಿಯ ಮನಸ್ಸಿನಲ್ಲಿರುವುದನ್ನು ನೇರವಾಗಿ, ಸಹಜವಾಗಿ ವಾಚಕರಿಗೆ ಮುಟ್ಟಿಸುವ ಜಾಣ್ಮೆ ಅದರಲ್ಲಿವೆ. ಶೈಲಿಗೆ ಮೆರುಗು ಕೊಡುವ ಚೆಲ್ವಿನ ಉಪಮೆಗಳು, ಕಳೆಯೇರಿಸುವ ದೃಷ್ಟಾಂತಗಳು, ಮೊನಚಾದ ಮಾತುಗಳು, ವಸ್ತುಸ್ಥಿತಿಗೆ ಅನ್ವಯಿಸುವ ಗಾದೆಗಳು, ಸುಂದರವರ್ಣನೆಗಳು ಎಷ್ಟೋ ಇವೆ.

"ಅಂದವಹ ಸಂಪಿಗೆಯ ಅರಳ ಪರಿಮಳ ಉಂಡು ಮುಂದುವರಿಯದೆ ಬೀಳ್ವ ಮಧುಪನಂತೆ, ಹೂವ ತರುವರ ಮನೆಗೆ ಹುಲ್ಲ ತರುವೆ", ಇಂತಹ ಮುರುಕುಗಳೂ, "ಬಾಗಿಲನು ತೆರೆದು ಸೇವೆಯನು ಕೊಡು", "ತನು ನಿನ್ನದು ಜೀವನ ನಿನ್ನದು", "ನೀಮಾಯೆಯೊ ನಿನ್ನೊಳು ಮಾಯೆಯೋ", "ತಲ್ಲಣಿಸದಿರು ಕಂಡ್ಯ ತಾಳು ಮನವೆ"—ಈ ಪದಗಳೆಲ್ಲವೂ ಮನೋರಂಜಕವಾದ ಸಾಹಿತ್ಯಕ್ಕೆ ಸೇರತಕ್ಕುವು.

ಮಾವನ ಮನೆಯುಲಿರಬಹುದೆ ಕೋವಿದರು ?
ಒಗತನ ಬಿಟ್ಟು ಹೋದಾಗ ಹಾಲಿಗೆ ಹೆಪ್ಪ ಮೊಗೆದಿಕ್ಕುವರಾರುಂಟು ?
ಅಜ್ಞಾನಿಗಳಕೂಡಿ ಅಧಿಕ ಸ್ನೇಹಧಕಿಂತ, ಸುಜ್ಞಾನಿಗಳಕೂಡಿ ಜಗಳವೇ ಲೇಸು.

ಈ ಮಾದರಿಯ ಲೋಕನೀತಿಯನ್ನೊರೆವ ಮೊನೆಮಾತುಗಳು ಕನಕದಾಸರ ಪದಗಳಲ್ಲಿ ತುಂಬಿವೆ.

ಜಲದೊಳಗಿನ ಕಪ್ಪೆ ಜಲದ ಸವಿ ಅರಿಯದೆ,
ಜಲದ ಸುಗಂಧವ ಜಲವರಿಯದೆ,
ನೆಲೆಯ ಕಂಡವರಾರು ನೆಲೆಯಾದಿಕೇಶವನ

ಇದರ ಅರ್ಥ ಮತ್ತು ಸ್ವಾರಸ್ಯಗಳನ್ನು ಕುರಿತು ಎಷ್ಟು ಬೇಕಾದರೂ ಯೋಚಿಸಬಹುದು.

ಪುಣ್ಯಸಂಪಾದನೆಯನ್ನು ಮಾಡದ ಜನುಮವನ್ನು ದಾಸರು "ಅಡವಿಯೊಳು ಕೆರೆ ತುಂಬಿ ಬತ್ತಿದಂತೆ" ಎಂದು ಹೇಳಿದ್ದಾರೆ.

## ೬. ಹಾಸ್ಯರಸ

ಶೈಲಿಯಲ್ಲಿ ಹಾಸ್ಯದ ತೊರೆಯೂ ಅಲ್ಲಲ್ಲಿ ಹರಿವುದು. ತಿರುಪತಿ ವೆಂಕಟರಮಣಸ್ವಾಮಿಯನ್ನು ಲೋಭಿಸೆಟ್ಟಿಗೆ ಹೋಲಿಸಿ ಹಾಸ್ಯಮಾಡಿರುವ ಬಗೆಯನ್ನು ನೋಡಿ:

ಒಡೆದ ಮಡಕೆಯ ತಂದು ಇಡಿದು ನಾಮವ ಮಾಡಿ
ಕೊಡುವೆ ನೀ ಕಾಸಿಗೆ ಒಂದೊಂದನು
ಒಡಲತುಂಬಿ ಮಿಕ್ಕ ಅನ್ನವ ಮಾರಿಸಿ
ಒಡವೆಯ ಘಳಿಸುವ ಕಡುಲೋಭಿ ಸೆಟ್ಟಿ !

ಗೋಪಿಯೊಬ್ಬಳು ತಾನು ಮರೆತು ಮಂಚದಮೇಲೆ ಮಲಗಿದ್ದಾಗ ಕೃಷ್ಣ ಹರಿವ ಹಾವನ್ನು ತಂದು ಅರಿಯದಂತೆ ಬಂದು ಅವಳ ಮುಸುಕಿನೊಳಗಿಟ್ಟು

ಹೋದನೆಂದು ಯಶೋದೆಗೆ ದೂರು ಹೇಳುವಳು. ಅದಕ್ಕೆ ಚದುರ ರಂಗನು ಈ ರೀತಿ ಉತ್ತರ ಕೊಡುವನು :

ಹರಿದಾಡುವ ಹಾವಿನ । ನಾ ಪಿಡಿವರೆ
ತರಳ ನಾ, ತಡೆಗಾರನೆ?
ಪರಕೆಯು ಪೊತ್ತುದ ಒಪ್ಪಿಸದಿದ್ದರೆ
ಗುರುತು ತೋರಲು ಬಂತೇನೋ—

ಋಗ್ವೇದದ ಕಾಲದಿಂದ ನಮ್ಮವರಿಗೆ ಗುಟ್ಟುಗಳೂ, ಚಮತ್ಕಾರದ ಶೈಲಿಯ ಉಪಯೋಗವೂ ಬಲು ಇಷ್ಟ. ನಮಗೆ ಇವು ಅಷ್ಟು ಪ್ರಿಯವಲ್ಲದಿದ್ದರೂ, ಆಗಿನ ಕಾಲದವರಿಗೆ ಮಾತ್ರ ಅದರಲ್ಲಿ ಅಭಿರುಚಿ ಇತ್ತೆಂಬುದನ್ನು ಮರೆಯಕೂಡದು. ಕನಕದಾಸರೂ ತೊಡಕನ್ನು ಕಲ್ಪಿಸುವುದರಲ್ಲಿ ಉತ್ಸಾಹಿಗಳಾಗಿದ್ದಾರೆ. ಅವರ "ಹಲವು ಜೀವನವ ಒಂದೆಲೆ ನುಂಗಿತು" ಎಂಬ ಪದದಲ್ಲಿ, ಹರಿ ಪ್ರಳಯದಲ್ಲಿ ಆಲದೆಲೆಯಮೇಲೆ ಮಲಗಿದ್ದಾಗ ಸಕಲ ಜೀವಗಳೂ ಆತನಲ್ಲಿ ಐಕ್ಯವಾಗಿದ್ದುವು ಎಂದು ಗೂಢಾರ್ಥ. "ಮಗುವಿನ ಮರುಳಿದು ಬಿಡದಲ್ಲ,— ನೀರನು ಕಂಡರೆ ಮುಳುಗುತಿದೆ— ತನ್ನ ಮೋರೆಯ ತೋರದೆ ಓಡುತಿದೆ": ಅಸಂಬದ್ಧವಾಗಿ ಕಾಣಿಸುವ ಈ ಪದ ದಶಾವತಾರಗಳನ್ನು ಮರೆಮಾತಿನಲ್ಲಿ ತಿಳಿಸುತ್ತದೆ.

ಕನಕದಾಸರ ಕೈಚಳಕದ ಇನ್ನೊಂದು ಮಾದರಿ ಇದು—

ಶಿವನ ವಾಜಿಯ ಮಾಡಿದವನ ಸೊಸೆಯ ಕಂದ
ಶಿವನ ತುರುಬಿನಲಿ ಶಿವನ ಕಟ್ಟಿಸಿದಾತ
ಶಿವನೊಳಾಡಿ ತಾ ಶಿವವರ್ಣನಾದಾತ
ಶಿವನ ಬಳಿಗೆ ಪೋಗಿ ಶ್ರೀಮಂತನಾದ ನಾರಾಯಣ.

ನಮಗೆ ಶಿವ, ಶಿವ ಎಂಬ ಶಬ್ದ ನಾಲ್ಕೈದುಸಲ ಕಿವಿಗೆ ಬೀಳುತ್ತದೆಯೇ ಹೊರತು ಮನಸ್ಸಿಗೆ ಅದರ ಅರ್ಥ ಸುಲಭವಾಗಿ ನಾಟುವಂತಿಲ್ಲ.

ರಂಗ ಬಾರೋ
ಅತ್ತಿಗೆ ಮೈದುನ ಬಾರೋ
ಅತ್ತೆಯ ಮಗಳ ಗಂಡ
ಅತ್ತಿಗೆ ಮ್ಯಾಲತ್ತಿಗೆಯ ನಾದಿನಿ ಸೊಸೆಯ ಗಂಡಾ

ಈ ವಿಚಿತ್ರ ಸಂಬಂಧಗಳು ಕೆಲಕಾಲ ಕುಳಿತು ಯೋಚಿಸದೆ ಬಗೆಹರಿಯದು; ಸಾಮಾನ್ಯಜನಕ್ಕಂತೂ ಅವು ಅರ್ಥವಿಲ್ಲದ ಪದಗಳು.

ಕೊನೆಯದಾಗಿ, ಪುರಂದರದಾಸರ ವಿಷಯದಲ್ಲಿ ಹೇಳಿರುವ ಈ ವಾಕ್ಯ ಕನಕದಾಸರ ಕೀರ್ತನೆಗಳಿಗೂ ಸಮಂಜಸವಾಗಿದೆ :

"ಬೇಲೂರು ಶ್ರವಣಬೆಳಗೊಳದ ಶಿಲ್ಪದಂತೆಯೂ, ಕರ್ನಾಟಕದ ಸಂಗೀತ ಮತ್ತು ವೇದಾಂತಶಾಸ್ತ್ರಗಳಂತೆಯೂ, ವಿಜಯನಗರದ ವೈಭವದ ಕುರುಹುಗಳಂತೆಯೂ, ಈ ಕೀರ್ತನೆಗಳು ಜನತೆಯ ಮಾನಸಸರೋವರದಲ್ಲಿ ಅಡಕವಾಗಿ ಜೀವಶಕ್ತಿಯಿಂದ ತುಂಬಿವೆ."

## ೭. 'ಹರಿಭಕ್ತಿಸಾರ'

'ಹರಿಭಕ್ತಿಸಾರ'ದ ೧೧೦ರ ಪದ್ಯಗಳಲ್ಲಿ ಕನಕದಾಸರ ಧಾರ್ಮಿಕ ಸಂಪತ್ತಿಯೆಲ್ಲಾ ಶೇಖರಿತವಾಗಿದೆ. ದೇವರನ್ನು ಮನದಣಿಯ ಬಗೆಬಗೆಯ ವಿಶೇಷಣಗಳಿಂದ

ಸ್ತುತಿಸಿದ್ದಾರೆ. ದೇವರ ಅಪಾರಮಹಿಮೆ, "ಎಷ್ಟು ಮಾಡಲು ಮನ್ನತಾಪಡೆದಷ್ಟೆ" ಎಂಬುದನ್ನೂ ಸುಳ್ಳುಮಾಡಿದ ಆತನ ಕರುಣೆ, ಶರಣುಹೊಕ್ಕವರಲ್ಲಿ ಆತನ ಮಮತೆ; ತನ್ನ (ಕನಕನ) ಅಲ್ಪತ್ವ, ಪರಾಧೀನತೆ; ಮನುಷ್ಯಜೀವನದ ಅಸಹ್ಯತೆ, ನಶ್ವರತೆ; ಸಾವಿನ ನಿಷ್ಕರುಣಕಠೋರತೆ; ಸೃಷ್ಟಿಯ ಉತ್ಪತ್ತಿ (ಮಾಧ್ವಸಂಪ್ರದಾಯದ ಮೇರೆಗೆ); ಎಂಜಲು, ಹೊಲೆ ಇವುಗಳ ತಪ್ಪು ತಿಳಿವಳಿಕೆ, 'ಹರಿಭಕ್ತಿಸಾರ'ದ ಮಹಿಮೆ ;—ಇಲ್ಲಿಗೆ ಮುಗಿಯುವುದು.

'ಹರಿಭಕ್ತಿಸಾರ'ದಲ್ಲಿರುವ ದಾಸರ ಭಕ್ತಿತತ್ವಗಳನ್ನು ಕುರಿತು ಚರ್ಚಿಸುವುದು ಕಠಿಣಸಂಗತಿ. ಮುಖ್ಯವಾಗಿ ಅಪರಿಮಿತಸೌಂದರ್ಯವುಳ್ಳ ಹಲವು ಪದ್ಯಗಳಿವೆ. ಅವುಗಳಲ್ಲಿ ಒಂದೆರಡನ್ನು ಉದ್ಧರಿಸಿ ಲೇಖನವನ್ನು ಮುಗಿಸುತ್ತೇನೆ.

ವೇದಗೋಚರ ವೇಣುನಾದ ವಿ। ನೋದ ಮಂದರ ಶೈಲಧರ ಮಧು
ಸೂದನಾಚ್ಯುತ ಕಂಸದಾನವರಿಪು ಮಹಾಮಹಿಮಾ
ಯಾದವೇಂದ್ರ ಯಶೋದೆನಂದನ। ನಾದಬಿಂದುಕಳಾತಿಶಯ ಪ್ರ
ಹ್ಲಾದ ರಕ್ಷಕವರದ ರಕ್ಷಿಸು ನಮ್ಮನನವರತ

ಇದರ ಲಾಲಿತ್ಯ ಮತ್ತು ಪ್ರಜ್ವಲಿತ ವಿಶೇಷಣಗಳು ನಮ್ಮನ್ನು ಮುಗ್ಧರನ್ನಾಗಿ ಮಾಡುವಂತಿರುವುವು.

ದೀನ ನಾನು ಸಮಸ್ತ ಲೋಕಕೆ। ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆ ಸು। ಜ್ಞಾನ ಮೂರುತಿ ನೀನು ನಿನ್ನ ಸ
ಮಾನರುಂಟೇ, ರಕ್ಷಿಸು ನಮ್ಮನನವರತ

ಭಗವಂತನನ್ನು ಇನ್ನೂ ಮಧುರ ವಚನಗಳಿಂದ ಬೇಡಿಕೊಳ್ಳಲು ಸಾಧ್ಯವುಂಟೇನು? ಭಕ್ತರಲ್ಲದವರಿಗೂ, ದೇವರಲ್ಲಿ ನಂಬಿಕೆ ಅಳಿಸಿಹೋಗುತ್ತಿರುವವರಿಗೂ ಕೂಡ ಇದನ್ನೋದಿದರೆ, ಮೊಳಕಾಲೂರಿ ಭಾರಕರ್ತನಿಗೊಂದು ಸಲ ಕೈಮುಗಿಯೋಣವೆನಿಸುವುದು.

ಗತಿಹೀನರಿಗಾರು ನೀನೇ। ಗತಿಕರುಣಾ ಪತಿಕರಿಸಿ ಕೊಡು ಸ
ದ್ಗತಿಯ ನೀನೇ ದೇವ ನಿನಗಪರಾಧಿ ನಾನಲ್ಲ
ಶ್ರುತಿವಚನವಾಡುವುದು ಸ। ದ್ಗತರ ಸೇವಕನೆಂದು ನಿನ್ನನು
ಮತವಿಡಿದು ನಂಬಿದೆನು ರಕ್ಷಿಸು ನಮ್ಮನನವರತ

'ಎಷ್ಟು ಅಗಣಿತಮಹಿಮನಾದರೂ ಭಗವಂತ ಗತಿಹೀನರ ಪಾಲಕ; ಭಕ್ತರ ಸೇವಕ. ಪರಮಾತ್ಮ ಪ್ರೇಮಮೂರ್ತಿ ಎಂದು ತಿಳಿದೇ ಅನನ್ಯಚಿತ್ತರಾಗಿ ತಮ್ಮ ಸರ್ವಸ್ವವನ್ನೂ ಆತನಲ್ಲಿ ಒಪ್ಪಿಸಿಕೊಡುವರು.

ಭಕ್ತಿಭಾವದ ಗಂಗೆಯೇ 'ಹರಿಭಕ್ತಿಸಾರ'ದಲ್ಲಿ ಗಮಿಸುತ್ತಿದ್ದಾಳೆ. ಸಾಹಿತ್ಯಸೌಂದರ್ಯ ಕೂಡ ಭಕ್ತಿರಾಗಕ್ಕೆ ಮನಸೋತು ಆ ಗಭೀರಪ್ರವಾಹದಲ್ಲಿ ಲೀನವಾಗಿಬಿಟ್ಟಿದೆ. ಭಾವನಾಲಹರಿಯಲ್ಲಿ ಒಂದಾಗಿರುವ ಕಾವ್ಯಸೌಂದರ್ಯವನ್ನೂ ಅದರಲ್ಲಿ ಮುಳುಗಿರುವ ಕಾವ್ಯದೋಷವನ್ನೂ ಬೇರ್ಪಡಿಸುವ ಕೈಬಗೆಹರಿಯದ ಕೆಲಸದಲ್ಲಿ ತೊಡಗುವ ಬದಲು, ಭಕ್ತಿಜ್ಯೋತಿಯಲ್ಲಿ ಬೆಳಗುತ್ತಿರುವ ಕನಕರ ಮೂರ್ತಿಗೆ ನಮ್ರ ಪ್ರಣಾಮಗಳನ್ನರ್ಪಿಸಿ ಹಿಂದಿರುಗುವುದು ಲೇಸು.

2

## ೮. ಉಪಸಂಹಾರ

ಕನಕದಾಸರ ಶೃಂಗಾರಮಯ ಚಿತ್ರಗಳು ಔಚಿತ್ಯದ ಎಲ್ಲೆಯನ್ನು ಮೀರದಿದ್ದಾಗ "ರಸಿಕರ ಕರ್ಣಯುಗ್ಮವ ಪೊಕ್ಕು ಮುದದಿ ಹೃದ್ಬಿಸಜವನಲರಿಸಿ, ಮೈಗೆ ಎಸೆವ ಪುಳಕದೊಸಗೆಯನಿತ್ತು ಶಿರವ ತೂಗಿಸುವುವು" ಅವರ ಭಕ್ತಿತತ್ವ ವಿಷಯಗಳೂ, ಗುಟ್ಟುಗಳೂ, ಹರಿಕೀರ್ತನೆಗಳೂ ಹರಿಶರಣರಿಗೆ ಅಮೃತದ ಘುಟಿಕೆಯಂತಿವೆ. ಅವರ ಸರಳಕವಿತೆಗಳೂ, ನೀತಿವಚನಗಳೂ, ತಲತಲಾಂತರದ ಕನ್ನಡ ಬಾಲಕಬಾಲಕಿಯರಿಗೆ ನೀತಿಯನೊರೆವ ಅರಗಿಳಿಗಳಂತಿವೆ. ಸಿಂಗರದೋಟದ ಸಿರಿಗಂಪ ಸುಜನರ್ಗೆ ತಂಗಾಳಿ ತೆರದೀವ ತೆರದಲ್ಲಿ ಸಿರಿಗನ್ನಡದ ಸೊಂಪನ್ನೂ, ಅದರ ಚೆಲುವಿಕೆ, ಘನಗಾಂಭೀರ್ಯಗಳನ್ನೂ ತಮ್ಮ ಕವಿತೆಗಳಲ್ಲಿ ಬೈತಿಟ್ಟು, ಆ ನಿಧಿಯನ್ನು ನಮಗೆ ಬಿಟ್ಟುಹೋದುದಕ್ಕಾಗಿ ಕನಕದಾಸರಿಗೆ ನಾವು ಚಿರ ಋಣಿಗಳಾಗಿದ್ದೇವೆ.

---

# ಬಸವೇಶ್ವರ

ಶ್ರೀಮಾನ್ ಶ್ರೀಕಂಠಶಾಸ್ತ್ರಿಗಳು, ಎಂ.ಎ., ಮೈಸೂರು

ವೀರಶೈವ ಮತೋದ್ಧಾರಕನಾದ ಶ್ರೀ ಬಸವೇಶ್ವರನ ವಿಷಯವಾಗಿ ಈಚೆಗೆ ಪ್ರಕಟಸಲ್ಪಟ್ಟ ಗ್ರಂಥಗಳಿಂದಲೂ ಶಾಸನಗಳಿಂದಲೂ ಅನೇಕ ನೂತನಾಂಶಗಳು ತಿಳಿದುಬಂದು, ಆತನು ಚಾರಿತ್ರಕ ವ್ಯಕ್ತಿಯೆಂದು ಸ್ಪಷ್ಟವಾಗಿದೆ. ಯಾದವ ಕೃಷ್ಣ ರಾಜನ ಅರ್ಜುನಗಿ ಶಾಸನದಿಂದ ಕ್ರಿಸ್ತ ಶಕ ೧೨೬೦ರಲ್ಲಿ ಬಸವನ ವಂಶದವರು ಗುರುಗಳಾಗಿದ್ದರೆಂದು ತಿಳಿದುಬರುವುದು. ಈ ಶಾಸನಕ್ಕೆ ಹಿಂಧಣ ಮತ್ತು ಸುಮಾರು ಸಮಕಾಲೀನ ಶಾಸನಗಳಲ್ಲಿಯೂ ಬಸವೇಶ್ವರನ ಉಲ್ಲೇಖನೆ ಕಂಡುಬರುತ್ತದೆ.

(೧) ಹಿರಿಯೂರು ಶಾಸನ (*Epigraphia Carnatica*, V, AK, p. 109) ಶಕ ೧೧೭೭ ಆನಂದ ಪುಷ್ಯ ಶುದ್ಧ ೧೧ ಸೋಮವಾರ–ಬಸವಯ್ಯ, ಸಿರಿಯಾಳ, ಬಾಣ, ಉದ್ಭಟ, ಸಿಂಧಬಲ್ಲಾಳ, ದಾಸಿಮು – ಇವರ ಹೆಸರುಗಳು ಕಂಡುಬರುತ್ತವೆ. (ಕ್ರಿ.ಶ. ೧೨೫೫)

(೨) ಅರ್ಜುನಗಿ ಶಾಸನ (*Epigraphia Indica*, XXI, p. 9) ಶಕ ೧೧೮೭ (ಕ್ರಿ. ಶ. ೧೨೬೦)–ಸಂಗನಬಸವ.

(೩) ಚೌಡದಾಮಪುರ ಶಾಸನ (PSOCI. No. 110) ಶಕ ೧೧೮೪. (ಕ್ರಿ.ಶ. ೧೨೫೨) "ಎನೆ ನೆಗಟ್ದ ದ್ವಿಜ ಬಿನ್ನಪಂ ಶಿವ ಜಗಕ್ಕೀ ಮಾರ್ಗಮಂ ತೋರಬೇಕೆಂಳ್ವೆನಲಾಗ ಪ್ರಭು ನಂದಿನಾಥನ ಮೊಗಂ ನೋಡಲ್ಕೆ ಸಂಗಮೇಶನ ಪುತ್ರಂ ಬಸವಯ್ಯಂ ಬಂದಂ."

(೪) ಕಲ್ಲೇದೇವರಪುರ ಶಾಸನ (*Epigraphia Carnatica*, XI, Jl, 30) S. ೧೩೦೧. "ಶಿವಯೋಗಿ ಚಕ್ರವರ್ತಿ ಪ್ರಸಾದದೇವ. . ಶೈವ ಸಂವರ್ಧನ ಪಂಚಮುದ್ರಾಧಾರ ಚಿಕ್ಕ ಕೆಕ್ಕ ಚೆನ್ನ ಹೊನ್ನ ಬಂಕ ಬಸವರಾಜ ಭೋಜಾದಿ ಮರ್ತ್ಯಲೋಕದ ಮಹಾಗಣಾಚಾರ." (ಕ್ರಿ.ಶ. ೧೨೭೯)

(೫) ಮರಡೀಪುರ ಶಾಸನ (*Epigraphia Carnatica*, III, Md. 33) (ಕ್ರಿ.ಶ. ೧೨೮೦) "ಸಿರಿಯಾಳದಾಸವರ್ಮ ಓಹಿಲ ಉದ್ಭಟ ನಂಬಿ ಕುಂಬಾರಗುಂಡ ಅಂಡವಲ ಕರಿಕಾಲ ಚೋಳ ಭೋಗದೇವ ಬಾಣ ಮಯೂರ ಕಾಳಿದಾಸ ಕೇಶಿರಾಜ ದಂಡಾಯಕ ಸುಂಗಿ ಚಲ್ಪಡರಾಯ ಸಂಗನಬಸವಯ್ಯ ಲಿನಿಮಿತಿ ಕೇಶವರಾಜ ಜಗದೇವ ದಣ್ಣಾಯಕ ಏಕಾಂತದ ರಾಮಯ್ಯ, ಸೊನ್ನಲಿಗೆ ರಾಮಯ್ಯ, ಹುಲಿಗೆರೆಯ ಪೊನ್ನಯ್ಯ, ನೆಲುವಿಗೆಯ ಸಾಂತಯ್ಯ." (ಪಂಕ್ತಿ ೧೭)

(೬) *Mysore Archæological Report*, 1933, No. 48, ೨೮ನೆಯ ಮಾರ್ಚಿ ೧೨೫೧. ಹೊಯ್ಸಳ ಸೋಮೇಶ್ವರನು ಕಣ್ಣಾನೂರಿನಲಿದ್ದಾಗ ಕೊಟ್ಟ ಶಾಸನ– "ಕರಸ್ಥಳ ಬಸವಿದೇವ, ಉತ್ತಮಾಂಗದ ಮಲ್ಲಿದೇವ, ತಾನೇಶ್ವರ ಚಾಮಯ್ಯ, ಜಡೆಮಲ್ಲಯ್ಯ, ಪಾಡುವ ಮಲ್ಲಯ್ಯ ನಾಯಕ" ಸ್ಥಾನಪತಿ ಮಾದಿರಾಜ ಗುರುವಿಗೆ ಕೊಟ್ಟ ದತ್ತಿ.

ಈ ಶಾಸನಗಳೆಲ್ಲವೂ ಬಸವನ ಕಾಲಕ್ಕಿಂತಲೂ ಸುಮಾರು ಒಂದು ಶತಾಬ್ದ ಈಚಿನವು. ಇವುಗಳಲ್ಲಿ ಅನೇಕ ಚರಿತ್ರಾನರ್ಹವಾದ ವಿಷಯಗಳು ಒಳಕೊಂಡಿದ್ದರೂ ಕೆಲವು ತಥ್ಯಾಂಶಗಳು ಕಂಡುಬರುವುವು. ಗ್ರಂಥಗಳೂ ಕೂಡ ಎರಡನೆಯ ಪ್ರತಾಪರುದ್ರನ ಸಮಕಾಲೀನರಾದ ಪಾಲ್ಕುರಿಕೆ ಸೋಮ, ಹರೀಶ್ವರರ ಅನಂತರವೇ ಪ್ರಾಮುಖ್ಯ ಹೊಂದಿದುದರಿಂದ, ಬಸವನ ಸಮಕಾಲೀನಗಳಲ್ಲ. ವಚನಗಳಲ್ಲಿ ಬಸವೇಶ್ವರನವೆಂದು ಕಂಡುಬರುವ ವಿಷಯಗಳನ್ನು ಪರಿಶೀಲಿಸಿದಲ್ಲಿ, ಆತನು ಒಬ್ಬ ಚಾಳುಕ್ಯರಾಜನಾದ ಬಿಜ್ಜಳನ ಕಾಲದಲ್ಲಿ ಭಂಡಾರಿಯಾಗಿದ್ದನೆಂದೂ, ಹಣವನ್ನು

ದುರುಪಯೋಗ ಮಾಡಿದನೆಂಬ ಆಪಾದನೆ ಬಂದಿತೆಂದೂ, ಭವಿಯಾದ ಬಿಜ್ಜಳನನ್ನು ಓಲೈಸಿದನೆಂದೂ, ಕಲ್ಯಾಣಕಟಕ ಹಾಳಾಗಿ ಚಾಳುಕ್ಯರಾಜ್ಯ ನಾಶವಾಗುವವರೆಗೂ ಬಸವೇಶ್ವರ ಜೀವಿಸಿದ್ದನೆಂದೂ ಇಷ್ಟು ಮಾತ್ರ ಸ್ಪಷ್ಟವಾಗುವುದು.

ಅಶನೇ ಶಯನೇ ಯಾನೇ. . ಎಂಬ ಶ್ರುತಿಯ ಬಸವಣ್ಣನೋದುವರೆಂಬವರು।
ಭವಿಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯ ಪ್ರಮಥರು॥
(ಮಾಹೇಶ್ವರ ಸ್ಥಳ—೧೮೮)

ಕೂಡಲಸಂಗಮದೇವರುಳ್ಳನಕ ಬಿಜ್ಜಳನ ಭಂಡಾರ ಎನಗೇಕಯ್ಯ। ಆನೀ ಬಿಜ್ಜಳನಿಗಂಜುವನೆ ಅಯ್ಯ। ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡ। ಒಬ್ಬ ಜಂಗಮನಭಿಮಾನದಿಂದ ಚಾಳೋಕ್ಯರಾಯನಾಳಿಕೆ ತೆಗೆಯಿತ್ತು, ಸಂದಿತ್ತು ಕೂಡಲ ಸಂಗಮದೇವ ನಿಮ್ಮ ಕವಳಿಗೆಗೆ॥　　(ಮಾಹೇಶ್ವರ ಸ್ಥಳ—೯೯)

ಪಾಲ್ಕುರಿಕೆ ಸೋಮನೂ ಚಾಳುಕ್ಯರಾಜ್ಯವೆಂದು ಹೇಳುವನೇ ವಿನಾ ಕಾಳಚೂರ್ಯ ಬಿಜ್ಜಳನ ಹೆಸರೇ ಎತ್ತುವುದಿಲ್ಲ.

ಅವನಿಲೋ ಚಾಳುಕ್ಯಲನು ಪೇರು ಪರುನಿ ಕವಿಲೆನು।
ದುಡಿಪಿಂಚ ಕಲ್ಯಾಣಕಟಕ ಮಿಾಡಿತಭಕ್ತಿ।
ಮಹಿಸ್ಮಿತ ಪೆರ್ವಿಪಾಡುಗಾ ಶಪಿಯಿಂಚೆ ಬಸವನ ಮಂತ್ರಿ॥

ಹರೀಶ್ವರನು ಮಂಗಳವೇಢೆಗೆ ಹೋಗಿ ಬಸವನು ಒಂದು ನೌಕರಿಯನ್ನು ಮಾಡಿಕೊಂಡನೆಂದು ಹೇಳುವನೇ ವಿನಾ ಕಲ್ಯಾಣ ವಿಷಯವನ್ನು ಎತ್ತುವದಿಲ್ಲ. 'ಬಸವರಾಜರಗಳೆ', ಪಾಲ್ಕುರಿಕೆ ಸೋಮನ 'ಬಸವಪುರಾಣ', 'ಸಿಂಗಿರಾಜ ಪುರಾಣ', 'ಚೆನ್ನಬಸವಪುರಾಣ', 'ದೇವಾಂಗಪುರಾಣ', 'ಶಿವತತ್ತ್ವ ಚಿಂತಾಮಣಿ'—ಮುಂತಾದ ವೀರಶೈವಗ್ರಂಥಗಳಿಗೂ, ಚಂದ್ರಸಾಗರವರ್ಣಿಯ 'ಬಿಜ್ಜಣರಾಯಪುರಾಣ', ಧರಣೋಜನ 'ಬಿಜ್ಜಳರಾಯ ಚರಿತೆ', 'ಬಿಜ್ಜಳಂಕನ ಚರಿತೆ', 'ಕದಂಬಪುರಾಣ' ಮುಂತಾದ ಜೈನಗ್ರಂಥಗಳಿಗೂ ಮತವೈಷಮ್ಯ ಜನ್ಯವಾದ ಅಂಶಗಳನ್ನು ನಿರಾಕರಿಸಿದರೂ, ಇನ್ನೂ ಅನೇಕ ವಿರುದ್ಧಾಂಶಗಳು ಕಂಡುಬರುವವು. ಕಾಳಚೂರ್ಯ ಬಿಜ್ಜಳನು ಶೈವನು, ಏಕಾಂತದ ರಾಮಯ್ಯನಿಗೆ ದಾನಮಾಡಿದವನು, ಸರ್ವಮತಸಹಿಷ್ಣು, ಕ್ರಿ. ಶ. ೧೧೬೮ರಲ್ಲಿ ರಾಜ್ಯ ತ್ಯಜಿಸಿದನೇ ವಿನಾ* ಕೊಲ್ಲಲ್ಪಡಲಿಲ್ಲ—ಎಂಬುದೂ ಶಾಸನಗಳಿಂದ ಸ್ಪಷ್ಟವಾಗುವದು. ಆದುದರಿಂದ ಕಾಲಚೂರ್ಯ ಬಿಜ್ಜಳನಿಗೂ, ಬಸವೇಶ್ವರನಿಗೂ ಯಾವ ಸಂಬಂಧವೂ ಇರಲಿಲ್ಲವೆಂದು ನಿರ್ಣಯವಾಗುವುದು. ಅಲ್ಲದೆ 'ಶಿವತತ್ತ್ವ ಚಿಂತಾಮಣಿ'ಯಲ್ಲಿ ಹೇಳಿದುದು ನಿಜವಾದರೆ, ಬಸವೇಶ್ವರನು 'ಸಿದ್ಧಾರ್ಥಿ'ಯಲ್ಲಿ (ಕ್ರಿ.ಶ. ೧೧೩೯?) ಹುಟ್ಟಿ, ಬಿಜ್ಜಳನು ಸಾಯುವ ಕಾಲಕ್ಕೆ ಕೇವಲ ೨೮ ವರ್ಷದವನಾಗಿರಬೇಕು. ಮತ್ತು ನಿಜವಾಗಿ ಚಾಳುಕ್ಯರಾಜ್ಯ ಹೋದುದು ನಾಲ್ಕನೆಯ ಸೋಮೇಶ್ವರನ ಮರಣಾನಂತರ (ಜನವರಿ ೧೨೦೦). ಯಾದವ ಜೈತುಗಿ (ಕ್ರಿ. ಶ. ೧೧೯೧-೧೨೧೦) ಹೊಯ್ಸಳ ಇಮ್ಮಡಿ ವೀರಬಲ್ಲಾಳರು ಚಾಳುಕ್ಯರಾಜ್ಯವನ್ನಾಕ್ರಮಿಸಿದರು. ೧೨೦೦ರವರೆಗೂ ಆತನು ಚಾಳುಕ್ಯಕಟಕ ನಾಶವನ್ನೇ ಬಸವೇಶ್ವರನು ನೋಡಿದ್ದಲ್ಲಿ,

* ನದಿಹರಳ ಹಳ್ಳಿಯ ಶಾಸನ ಕ್ರಿ.ಶ. ೧೧೬೮, ಮಾರ್ಚಿ ೨೫ ಸೋಮವಾರದಲ್ಲಿ ಬಿಜ್ಜಳನು ಕಲ್ಯಾಣಿಯನ್ನು ಆಳುತ್ತಿದ್ದನೆಂದೂ ಕೆಲವು ಜೈನರಿಗೆ ದಾನಗಳನ್ನು ಸೋಮಗ್ರಹಣ ಕಾಲದಲ್ಲಿ ಕೊಟ್ಟನೆಂದೂ ಹೇಳುವುದು (M.E.R.E., 58 of 1935).

ಆಳುತ್ತಿದ್ದಿರಬೇಕು. ಇದು ಅಸಂಭವ. ಕಾಳಚೂರ್ಯ ಬಿಜ್ಜಳನನಂತರ ಕಲ್ಯಾಣಿ ಹಾಳಾಯಿತೆಂಬುದಕ್ಕಾವ ಆಧಾರವೂ ಇಲ್ಲ. ಆದುದರಿಂದ, ಒಂದು ವೇಳೆ ಚಾಳುಕ್ಯ ಸಾಮ್ರಾಜ್ಯವೇ ಕಾಲಚೂರ್ಯರದೆಂದು ವಾದಿಸಿದರೂ, ಬಸವೇಶ್ವರ ಕಾಲಚೂರ್ಯ ಬಿಜ್ಜಳನ ಆಸ್ಥಾನದಲ್ಲಿದ್ದಿರಲಾರನು.

ಹಾಗಾದಲ್ಲಿ ಬಸವೇಶ್ವರನು ಯಾವ ಬಿಜ್ಜಳನ ಕಾಲದಲ್ಲಿದ್ದನೆಂಬುದನ್ನು ಚರ್ಚಿಸಬೇಕಾಗಿದೆ. ಬಿಜ್ಜಳನೆಂಬ ಅನೇಕ ವ್ಯಕ್ತಿಗಳು ಶಾಸನಗಳಲ್ಲಿ ಕಂಡು ಬರುವರು. ಪ್ರಕೃತದಲ್ಲಿ ನಮಗೆ ಬೇಕಾದ ಇಬ್ಬರು ಬಿಜ್ಜಣರು ಈ ಕಾಲದ ಶಾಸನ ಗಳಲ್ಲಿ ಕಂಡುಬರುವರು. 'ಹರೀಶ್ವರ ರಗಳೆ'ಯಲ್ಲಿ (IV. 23) "ನೀಂ ಬಿಜ್ಜಳರಾಯ ನಿರ್ಪ ಮಂಗಳವಾಡಕ್ಕೆ ಪೋಗು" ಎಂದು ಹೇಳಿರುವುದರಿಂದ, "ಮಂಗಳ–ಕಲ್ಯಾಣ" ಪರ್ಯಾಯಪದಗಳಾದರೂ, ಚಾಳುಕ್ಯ ರಾಜಧಾನಿಯೇ ಬೇರೆ, ಮಂಗಳವಾಡವೇ ಬೇರೆ ಎಂದು ಸಿದ್ಧವಾಗುವದು.

ರಾಯಮುರಾರಿ ಸೋವಿದೇವನ ನಾಲ್ಕನೆಯ ವರ್ಷದ (ಕ್ರಿ. ಶ. ೧೧೭೧) ಮಡಗಿಹಾಳ ಶಾಸನದಲ್ಲಿ ಒಬ್ಬ ಬಿಜ್ಜನಾಯಕನು ಉಲ್ಲೇಖಿಸಲ್ಪಟ್ಟಿರುವನು (*Epigraphia Indica*, XV, p. 315 ff). ಈ ನಾಳಿಗೆ ಬಿಜ್ಜಯನಾಯಕನು ಚತುರ್ಥ ಕುಲದವನು. ಪ್ರಭುಮಲ್ಲಗೌಡ ಮತ್ತು ಮುದ್ದಿ ಅವ್ವೆಯರ ಮಗನು. ಮಳಯಾಳ ವರಾಳ ಪಾಂಡ್ಯ ದೇಶಗಳನ್ನು ಜಯಿಸಿ ಕಳಚುರಿ ರಾಜ್ಯ ಪ್ರಮುಖ ಪ್ರಧಾನ ರಿಪುರಾಯದಂಡ ಪಡಿಹ, ಸಾಹಸೋತ್ತುಂಗ, ವರ್ಣಕ ಕವಿ, ಕನ್ನಡ ಜಾಣ ಮುಂತಾದ ಬಿರುದುಗಳನ್ನು ಪಡೆದಿದ್ದನು. ಈತನ ರಾಜಧಾನಿ ತರಿಕಾಡು ನಾಡಿನ ಮಂಗಳವಾಡ. ಈ ಮಂಗಳವಾಡದಲ್ಲಿಯೇ †ಬಿಜ್ಜಳನ ಮರಣಕ್ಕೆ ಕಾರಣ ನಾದ ಮಡುವಯ್ಯನೂ ಇದ್ದನು. ('ಶಿವಾನುಭವ', November 1926.)

† ಜಯತೀರ್ಥರ ಜನ್ಮಸ್ಥಳವಾದ ಮಂಗಳವೇಢೆ ಪಂಢರಪುರಕ್ಕೆ ಹನ್ನೆರಡು ಮೈಲಿ ದೂರದಲ್ಲಿದೆ. ಹೊಯ್ಸಳ ಸೋಮೇಶ್ವರನ ರಾಜ್ಯ ಪಂಢರಾಪುರದವರೆಗೂ ಹರಡಿದ್ದಿತು (Bombay Archæological Report, 1897–1898). ಮುಮ್ಮಡಿ ತೈಲನ ಕೆಳಗೆ ಕ್ರಿ. ಶ. ೧೧೫೧–೧೧೫೪ರ ವರೆಗೆ ಬಿಜ್ಜಳನು ತರ್ದವಾಡಿ ಮನ್ನಾಳುತ್ತಿದ್ದಾಗ ಅವನ ಅಧಿಕಾರಿಯಾದ ಮಹಾಪ್ರಧಾನಸೇನಾಧಿಪತಿಯಾದ ಮೈಲಾರದಂಡನಾಯಕನು ಕ್ರಿ. ಶ. ಆಗಸ್ಟ್ ೨೪, ಮಂಗಳವಾರ ೧೧೫೧ರಲ್ಲಿ ವಿಜಯಪುರದ ನರಸಿಂಹದೇವರಿಗೆ ದಾನವನ್ನು ಕೊಟ್ಟನು. (M.E.R., 124 of 1934.) ಅದೇ ವರ್ಷದಲ್ಲಿ (ಶಾ.ಶ. ೧೦೭೩) ಮಂಗಲಿವೇಡೆಯವನಾದ ದೇಶೀಗಣಕ್ಕೆ ಸೇರಿದ ಮಾಣಿಕ್ಯ ಭಟ್ಟಾರಕನಿಗೆ ಕನ್ನಡಿಗೆಯಲ್ಲಿ ಕಟ್ಟಲ್ಪಟ್ಟ ಒಂದು ಬಸದಿಗಾಗಿ ದಾನವು ಕೊಡಲ್ಪಟ್ಟಿತು. (M.E.R., 120 of 1934) ಕ್ರಿ. ಶ. ೧೧೫೪ರಲ್ಲಿ (ಜನವರಿ ೧, ಶುಕ್ರವಾರ) ಚಕ್ರವರ್ತಿಯಾದ ಮುಮ್ಮಡಿ ತೈಲಪನ ಕೆಳಗೆ ಬಿಜ್ಜಭೂಪಾಲಕನು ತರ್ದವಾಡಿ ೧೦೦೦ವನ್ನಾಳುತ್ತಿದ್ದನು. (M.E.R., 130 of 1934.) ಈ ಕಾಲಕ್ಕೆ ಬಿಜ್ಜಳನು ಸ್ವತಂತ್ರನಾಗಿರಲಿಲ್ಲ. ಬಿಜ್ಜಳನನಂತರ ರಾಯಮುರಾರಿ ಸೋವಿದೇವನು ಕ್ರಿ.ಶ. ೧೧೭೩ರಲ್ಲಿ (ಮಂಗಳವಾರ, ಜೂನ್ ೧೨) ಮಂಗಳವಾಡದಲ್ಲಿಯೇ ಆಳುತ್ತಿದ್ದನೆಂದೂ, ಇವನ ಮಹಾ ಮಂಡಲೇಶ್ವರನಾದ ಲಖಿಯದೇವನು ತರ್ದವಾಡಿ ೧೦೦೦ವನ್ನಾಳುತ್ತಿದ್ದು, ತನ್ನ ಅಧಿಕಾರಿಯಾದ ಕೇಶವ ಮಹಾಹಣಿಯು ತಂಬದ ಮೂಲಸ್ಥಾನದೇವರಿಗೆ ಕೊಟ್ಟ ದಾನಕ್ಕೆ ಅನುಮತಿ ಇತ್ತನೆಂದೂ ತಿಳಿದುಬರುವುದು. (M.E.R. 160 of 1934.) ಹೇಮಾದ್ರಿಯು ತನ್ನ ವ್ರತಖಂಡದ ಪ್ರಶಸ್ತಿಯಲ್ಲಿ ಯಾದವರಾಜನಾದ ಹಿನೆಯ ಭಿಲ್ಲಮನು ಶ್ರೀವರ್ಧನ ನಗರವನ್ನು ವಶಮಾಡಿಕೊಂಡು, ಮಂಗಳವೇಷ್ಟಕದ ರಾಜನಾದ ಬಿಲ್ಲಣ (ಬಿಜ್ಜಣ?) ಎಂಬವನನ್ನು ಕೊಂದು, ಹೊಯ್ಸಳರಾಜನನ್ನು ಜಯಿಸಿ, ದೇವಗಿರಿ ರಾಜಧಾನಿಯನ್ನು ಕಟ್ಟಿದನೆಂದು ಹೇಳಿರುವನು. ಇವನೇ ವೀರಬಲ್ಲಾಳನ ಪ್ರತಿಸ್ಪರ್ಧಿಯಾದ ಭಿಲ್ಲಮನು (೧೧೮೭–೧೧೯೧).

ಇದೇ ಕಾಲದಲ್ಲಿ ಮತ್ತೊಬ್ಬ ಬಿಜ್ಜಣನು ರಾಯಮುರಾರಿ ಸೋವಿದೇವನ ಪಾದಪದ್ಮೋಪಜೀವಿಯಾಗಿದ್ದನು (ಕ್ರಿ. ಶ. ೧೧೭೯–೧೧೭೪). ಈತನು ಸಿಂದವಂಶದವನು. ವೀರವಿಕ್ರಮದೇವನ ಸಹೋದರನು. ಕಿಸುಕಾಡು ೭೦, ಬಾಗಡಿಗೆ ೭೦, ಕೆಳವಡಿ ೩೦೦, ನರೆಯಂಗಲ್ ೧೨, ಕರೆವಿಡಿ ೩೦–ಮುಂತಾದ ದೇಶವನ್ನಾಳುತ್ತಿದ್ದ ಮಹಾಮಂಡಲೇಶ್ವರ, ಸಾಹಸೋತ್ತುಂಗ, ಭುಜಬಲಭೀಮ ಮುಂತಾದ ಬಿರುದುಗಳನ್ನು ಹೊಂದಿದ್ದನು (M. E. R., 57 of 1926-7 ; 119 A of 1926–7 ; 31 of 1928). ರಾಯಮುರಾರಿ ಸೋವಿದೇವನ ೭ನೆಯ ವರ್ಷದಲ್ಲಿ, ಈತನ ಅಧಿಕಾರಿಗಳಾದ ಬಲದೇವನಾಯಕ, ಸೂರಟೂರಿನ ದಾಸಿಮಯ್ಯ ಅಮೃತರಾಶಿದೇವರಿಗೆ ದಾನವನ್ನು ಕೊಟ್ಟರು (ಕ್ರಿ. ಶ. ೧೧೭೪). ಈ ಬಲದೇವನಾಯಕನೇ ಬಹುಶಃ ಬಸವೇಶ್ವರನ ಮಾವನಾಗಿದ್ದಿರಬೇಕು. ತರಿಕಾಡು ನಾಡಿನ ಮಂಗಳವೇಡೆ ಕೂಡ ಈ ಸಿಂದ ಬಿಜ್ಜರಸನ ಮೇಲಾಳಿಕೆಯಲ್ಲಿದ್ದುದರಿಂದ ಬಸವೇಶ್ವರನು ಈ ಸಿಂದರಸನ ಆಸ್ಥಾನದವನಾಗಿರಬೇಕೆಂದು ನಿರ್ಧರಿಸಬೇಕು.

---

# ರನ್ನನ 'ಗದಾಯುದ್ಧ' ರಚನಾಕಾಲ

ಶ್ರೀಮಾನ್ ಮಾದನಹಳ್ಳಿ ಚೆನ್ನಕೃಷ್ಣಯ್ಯನವರು, ಬೆಂಗಳೂರು

---

## ಕಾಲನಿರ್ಣಯಕ ಪದ್ಯ

'ಕರ್ಣಾಟಕ ಕಾವ್ಯಮಂಜರಿ' ಮಾಸಪತ್ರಿಕೆಯಲ್ಲಿ ಮುದ್ರಿತವಾಗಿರುವ 'ಗದಾಯುದ್ಧ' ಕಾವ್ಯದ ಪೀಠಿಕೆಯಲ್ಲಿ 'ಕವಿರನ್ನನ ಚರಿತ್ರವು' ಎಂದು ಬರೆದಿರುವುದಷ್ಟೆ. ಅದರ ಪೀಠಿಕೆಯ ೬ನೆಯ ಪುಟದಲ್ಲಿ,

ಶಕಸಮುಗತಿ ಋತುಯುಗ ಶಶಿ
ನಿಕರಾಂಕಂ ಚಿತ್ರಭಾನು ಕಾರ್ತಿಕ ಸಿತ ಸ
ಪ್ತಮಿ.....................
ಸುಕರಂ ಬುಧಸೇವ್ಯಮಾಯ್ತು ರನ್ನನ ಕಾವ್ಯಂ

ಎಂಬ ಅಬದ್ಧವಾದ ಪದ್ಯವಿದೆ. ತಾನು ಮಾಡಿದ ಗ್ರಂಥಗಳ ಹೆಸರುಗಳಲ್ಲಿ ಈ 'ಗದಾಯುದ್ಧ'ದ ಹೆಸರನ್ನು ಹೇಳದೆ ಇರುವುದಕ್ಕೆ ಕಾರಣವೇನೋ ತಿಳಿಯದು ಎಂದು ಅದರ ಸಂಪಾದಕರಾದ ಮ॥ ರಾ॥ ಎಸ್..ಜಿ. ನರಸಿಂಹಾಚಾರ್ಯರು, ಎಂ.ಎ. ರಾಮಾನುಜ ಅಯ್ಯಂಗಾರ್ಯರು ಇವರಿಬ್ಬರೂ ಬರೆದಿರುವರು.

'ಕರ್ಣಾಟಕ ಕವಿಚರಿತೆ'ಯ ಒಂದನೆಯ ಸಂಪುಟ (೧೯೨೪ರಲ್ಲಿ ತಿದ್ದಿದ ಮುದ್ರಣ) ೭೦ನೆಯ ಪುಟದಲ್ಲಿ, "ಈ ಪದ್ಯದ ಅರ್ಥ ವಿಶದವಾಗಿಲ್ಲ. ವರ್ಷ ಸಂಖ್ಯೆಯನ್ನು ನೋಡಿದರೆ ನಾಲ್ಕು ಅಂಕಗಳು ಇರುವಂತೆ ತೋರುತ್ತದೆ. ಶಕವರ್ಷ ಸಾವಿರವೂ ಚಿಲ್ಲರೆಯಾದರೆ 'ಅಜಿತ ಪುರಾಣ'ವನ್ನು ಬರೆದ ಶಕ ೯೧೫ಕ್ಕೂ ಇದಕ್ಕೂ ಸಂಬಂಧವೇ ತೋರುವುದಿಲ್ಲ. 'ಶಶಿ' ಎಂಬುದಕ್ಕೆ ೧ ಎಂಬ ಸಂಕೇತವುಂಟು. ಆದರೆ ಈ ಪದ್ಯದ 'ಶಶಿನಿಕರ' ಎಂಬುದಕ್ಕೆ ಏನರ್ಥವೋ ತಿಳಿಯದು. ಇದರ ಅರ್ಥ ಸುಬದ್ಧಪದ್ಯ ದೊರೆವವರೆಗೆ ನಿಶ್ಚಯಿಸುವುದು ಕಷ್ಟ" ಇತ್ಯಾದಿಯಾಗಿ ದಿವಂಗತ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರು ಶಂಕಿಸಿರುತ್ತಾರೆ. ಈ ಪದ್ಯದ ಸರಿಯಾದ ರೂಪ ಗ್ರಂಥಾಂತ್ಯದಲ್ಲಿ ಈ ರೀತಿ ಇದೆ:

ಶಕಸಮುಗತಿ ಋತುಯುಗ ಶಶಿ
ನಿಕರಾಂಕಂ ಚಿತ್ರಭಾನು......ಕಾ
ರ್ತಿಕ ಸಿತ ಸಪ್ತಮಿ....
ಸುಕರಂ ಬುಧಸೇವ್ಯಮಾಯ್ತು ರನ್ನನ ಕಾವ್ಯಂ

ಇದರಲ್ಲಿ ಎರಡನೆಯ ಪಾದದ ಚುಕ್ಕೆಗಳ ಬದಲಾಗಿ 'ಸಂವತ್ಸರ' ಎಂಬ ನಾಲ್ಕಕ್ಷರಗಳೂ, ಮೂರನೆಯ ಪಾದದ ಕೊನೆಯಲ್ಲಿ 'ಬುಧದಿನ' ಎಂಬ ವಾರದ ಹೆಸರೂ ಇರಬೇಕೆಂದು ತೋರುತ್ತದೆ.

## ಈ ಪದ್ಯದ ಸರಿಯಾದ ಅರ್ಥ

ಶಕಸಮ = ಶಾಲಿವಾಹನ ಶಕದ ಸಂವತ್ಸರಗಳಲ್ಲಿ; ಗತಿ ಋತುಯುಗ ಶಶಿ ನಿಕರಾಂಕಂ—ಗತಿ = ಚತುರ್ಗತಿಗಳ ಸೂಚಕವಾದ ೪ರಿಂದ ಕೂಡಿದ ಋತುಯುಗ

= ಎರಡು ಋತುಗಳ ಎಂದರೆ ನಾಲ್ಕು ತಿಂಗಳುಗಳ, ಶಶಿ = ಚಂದ್ರನ, ನಿಕರ "ನಿಕರಾಂಕರಾಃ = ನಿಕರಾಃ") = ಎಲ್ಲಾ ನಿಶ್ಶೇಷವಾದ ಕಿರಣಗಳ ಒಟ್ಟಿನ, ಅಂಕಂ = ಸಂಖ್ಯೆಯನ್ನುಳ್ಳುದಾದ (೯೦೦).

ಚಂದ್ರನ ಒಂದು ತಿಂಗಳಲ್ಲಿ ಶುಕ್ಲ ಕೃಷ್ಣ ಪಕ್ಷಗಳೆರಡು; ಶುಕ್ಲಪಕ್ಷದ ಒಟ್ಟು ಕಿರಣಗಳು :— (ಪಾಡ್ಯಮಿಯಿಂದ ಪೂರ್ಣಿಮೆ ಪೂರ್ತಿ) ೧ + ೨ + ೩ + ೪ + ೫ + ೬ + ೭ + ೮ + ೯ + ೧೦ + ೧೧ + ೧೨ + ೧೩ + ೧೪ + ೧೫ = ೧೨೦ ಕಿರಣ. ಕೃಷ್ಣ ಪಕ್ಷ ಪಾಡ್ಯಮಿಯಿಂದ ಅಮಾವಾಸ್ಯೆ ಪೂರ್ತಿ :— ೧೪ + ೧೩ + ೧೨ + ೧೧ + ೧೦ + ೯ + ೮ + ೭ + ೬ + ೫ + ೪ + ೩ + ೨ + ೧ + ೦ = ೧೦೫ ಕಿರಣ.

ಒಟ್ಟು ಒಂದು ತಿಂಗಳಿಗೆ ೧೨೦ + ೧೦೫ = ೨೨೫ ಕಿರಣ; ನಾಲ್ಕು ತಿಂಗಳು ಗಳಿಗೆ ೨೨೫ × ೪ = ೯೦೦ ಕಿರಣಗಳು. ಇವು ಚತುರ್ಗತಿ ಸಂಖ್ಯೆಗೂಡಿದರೆ ೪ + ೯೦೦ = ೯೦೪.

ಈ ೯೦೪ ಎಂಬ ಸಂಖ್ಯೆ ನಡೆಯುತ್ತಿರುವ 'ಚಿತ್ರಭಾನು' ಎಂಬ ಸಂವತ್ಸರ= ವರ್ಷದ; ಕಾರ್ತಿಕಸಿತ ಸಪ್ತಮಿ ಬುಧದಿನ = ಕಾರ್ತಿಕ ಶುದ್ಧ ಸಪ್ತಮಿ ಬುಧವಾರ ದಲ್ಲಿ, ರನ್ನನ ಕಾವ್ಯವು, ಸುಕರಂ = ಸುಲಭವಾಗಿ, ಬುಧಸೇವ್ಯಂ ಆಯ್ತು = ವಿದ್ವಾಂಸರು ಸೇವಿಸಲರ್ಹವಾಗುವಂತೆ ಮುಗಿಯಿತು.

———

# ನಾಲ್ಮಣಿ ಕಡುಕು

(ತಮಿಳಿನಿಂದ ಕನ್ನಡಿಸಿದ್ದು)

ಶ್ರೀಮಾನ್ ಎಲ್. ಗುಂಡಪ್ಪನವರು, ಎಂ.ಎ., ಬೆಂಗಳೂರು

---

[ಇದು 'ನಾನ್‌ಮಣಿಕ್ಕಡಿಗೈ' ಎಂಬ ತಮಿಳು ಗ್ರಂಥದ ಅನುವಾದ. 'ನಾನ್ ಮಣಿಕ್ಕಡಿಗೈ' ಸಂಘ ಸಾಹಿತ್ಯಕ್ಕೆ ಸೇರಿದ ಹಳೆಯ ಗ್ರಂಥ. ತಮಿಳಿನಲ್ಲಿ ಮೊದಲ ಸಂಘ, ನಡುವಣ ಸಂಘ, ಕಡೆಯ ಸಂಘ, ಎಂದು ಮೂರು ಸಂಘಗಳು ಪ್ರಸಿದ್ಧವಾಗಿವೆ. ಅವುಗಳಲ್ಲಿ ಇದು ಕಡೆಯ ಸಂಘಕ್ಕೆ ಸೇರಿದ್ದು. ಕಡೆಯ ಸಂಘದ ಗ್ರಂಥಗಳನ್ನು ಪತ್ತುಪಾಟ್ಟು, ಎಟ್ಟುತ್ತೊಗೈ, ಪದಿನೆಣ್‌ಕೀೞ್‌ಕಣಕ್ಕು ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ. 'ನಾನ್‌ಮಣಿಕ್ಕಡಿಗೈ' ಮೂರನೆಯ ಗುಂಪಿಗೆ ಸೇರಿದೆ. ಪ್ರಸಿದ್ಧವಾದ 'ಕುಱಳ್' ಕೂಡ ಈ ಗುಂಪಿನದು.

'ನಾನ್‌ಮಣಿಕ್ಕಡಿಗೈ'ಯನ್ನು ರಚಿಸಿದವನು ವಿಳಂಬಿನಾಗನಾರ್. ಇವನ ಹುಟ್ಟು, ಊರು ಮುಂತಾದ ಯಾವ ಸಂಗತಿಯೂ ತಿಳಿಯದು. ಮಂಗಳ ಶ್ಲೋಕದಲ್ಲಿ ವಿಷ್ಣುವನ್ನು ಪ್ರಾರ್ಥಿಸಿದ್ದಾನೆ.

'ನಾನ್‌ಮಣಿಕ್ಕಡಿಗೈ' ಒಂದು ನೀತಿ ಶತಕ. ಇದರಲ್ಲಿ ಒಟ್ಟು ೧೦೪ ಪದ್ಯಗಳಿವೆ. ಪ್ರತಿ ಪದ್ಯದಲ್ಲಿಯೂ ನಾಲ್ಕು ನಾಲ್ಕು ಮಾತುಗಳಿವೆ. 'ಒಂದೊಂದು ಪದ್ಯವೂ ನಾಲ್ಕು ನಾಲ್ಕು ಹರಳು ಕಟ್ಟಿರುವ ಹತ್ತಕಡುಕಿನಂತೆ' ಎಂದು ಭಾವಿಸಿ ಈ ಹೆಸರಿಟ್ಟಂತೆ ತೋರುತ್ತದೆ.

ಈ ಗ್ರಂಥದಲ್ಲಿ ಯಾವ ಬಗೆಯ ವಿಷಯ ವಿಭಾಗವೂ ಇಲ್ಲ. ಮನಸ್ಸಿಗೆ ಹೊಳೆದಂತೆ ನೀತಿಗಳನ್ನು ಹೇಳುತ್ತ ಹೋಗಿದ್ದಾರೆ. ಪರಿಮೇಲೞಗರು ತಮ್ಮ ಕುಱಳ್ ವ್ಯಾಖ್ಯಾನದಲ್ಲಿ ಈ ಗ್ರಂಥದಿಂದ ಉದಾಹರಿಸಿದ್ದಾರೆ. ಕೆಲವು ಕಡೆ ಅತಿಸಾಮಾನ್ಯವಾದ ಮಾತೂ ಬರುವುದುಂಟು.

ತಮಿಳು ಗ್ರಂಥಗಳಲ್ಲಿ, ಅದರಲ್ಲೂ ಸಂಘ ಕಾಲದ ಗ್ರಂಥಗಳಲ್ಲಿ, ಸಂಸ್ಕೃತದ ಬೆರಕೆ ಬಹಳ ಕಡಮೆ. ನೂರಕ್ಕೆ ಮೂರೊ ನಾಲ್ಕೊ ಇದ್ದರೆ ಹೆಚ್ಚು. ತಮಿಳಿಗೂ ಕನ್ನಡಕ್ಕೂ ತೀರ ಹತ್ತಿರದ ಸಂಬಂಧವಿದೆ. ಎಷ್ಟೋ ಶಬ್ದಗಳು ಎರಡು ಭಾಷೆಗಳಲ್ಲೂ ಒಂದೇ ಆಗಿವೆ. ಮತ್ತೆ ಕೆಲವು ಅಲ್ಪ ಸ್ವಲ್ಪ ಮಾರ್ಪಟ್ಟು ಬೇರೆ ರೂಪ ತಾಳಿವೆ. ಅಚ್ಚ ತಮಿಳಿನಿಂದ ಕನ್ನಡಿಸುವಾಗ ಸ್ವಭಾವವಾಗಿಯೇ ಕನ್ನಡ ಶಬ್ದಗಳು ಹೆಚ್ಚಾಗಿ ನುಗ್ಗಿಬಂದಿವೆ. ಆದರೂ ಮೂಲದೊಡನೆ ಹೋಲಿಸಿದರೆ, ಇಲ್ಲಿ ಸಂಸ್ಕೃತದ ಬೆರಕೆ ಹೆಚ್ಚು ಎನಿಸುತ್ತದೆ. ಸಂಸ್ಕೃತವನ್ನು ಬಿಡಬೇಕೆಂಬ ಸಂಕಲ್ಪವಿಲ್ಲದೆ, ಇರುವ ಕನ್ನಡ ಮಾತುಗಳನ್ನು ಕೂಡಿದ ಮಟ್ಟಿಗೂ ಬಳಸಿಕೊಳ್ಳಬೇಕೆಂಬ ಬಯಕೆಯಿಟ್ಟುಕೊಂಡು ಬರೆದಿದ್ದೇನೆ. ಅಲ್ಲಲ್ಲಿ ಹೊಸ ಮಾತುಗಳು ಬರಬಹುದು; ಮೊದಲ ನೋಟಕ್ಕೆ ಸ್ವಲ್ಪ ತೊಡಕಾಗಿ ಕಾಣಬಹುದು. ಈ ತೊಡಕನ್ನು ಇದಷ್ಟು ಕಡಮೆಮಾಡಬೇಕೆಂದು ಕೆಲವು ಕಡೆ ಸೌಕರ್ಯಕ್ಕಾಗಿ ಸಂಧಿ ಬಿಡಿಸಿಕೊಟ್ಟಿದೆ. ತಾಳ್ಮೆಯಿಂದ ಓದಿದರೆ ತಿಳಿಯಾಗುವುದೆಂದು ನಂಬಿದ್ದೇನೆ.]

ತುಂಬುವೆರೆ ಮಾಯಿಯಾ ಸಿರಿಮೊಗವ ಹೋಲುವುದು.
ಕದಿರೆಸೆವ ನೇಸರ್ ಆ ಚಕ್ರವನು ಹೋಲುವುದು.
ಮುನ್ನೀರ ನೀರ್‌ಬಯಲ ತಾವರೆಯ ದಂಟನಿಂ
ದೊಗೆದ ಮಲರ್ ಮತ್ತವನ ಕಣ್ಣುಗಳ ಹೋಲುವುದು.
ಅಗಸೆ ಹೊಸ ಹೂವು ಬಣ್ಣವನು ಹೋಲುವುದು. (i)

ಪೊಡವಿಯನು ಪೊಡೆಯೊಳಡಗಿಸಿದವನು. ತನ್ನ ಮೂರ್
ಅಡಿಯಿಂದ ಮೂಜಗವನಳೆದವನು. ಅಂದಾಕ
ಳಂಜಿಕೆಯು ಕಳೆಯಲ್ಕೆ ಕುಂದವೆತ್ತಿದವನ್. ಆ
ಬಲ್ಗೊಂಟಿಯುರುಮೆಯನು ಮುರಿದ ಕಟ್ಬಾಳು. (ii)

ಎಳ್ಳೆಣಿಸದಿರದೆಂದುಮ್ ಇಳಿವರೆಂದು. ಏನುಮಂ
ಕೊಳ್ಳದಿರು ಕೊಳ್ಳದರ ಕೈಮೇಲದಾಗೆ. – ಮನ
ಸುಡುವೊಡಂ ಕನಲದಿರು ಕಿರುಕುಲದೆ ಪುಟ್ಟಿದರೊಳ್.
ಆಡದಿರು ಮೇಣಾಡತಗದುವನು ಮುಡುಕಿ. ॥ ೧ ॥

ಹರೆಯು ದನಿ ಪಡೆ ಬಾಳದಶುಣನ್ಮೃಗ. ತಮ್ಮ ಮನ
ಕೊರೆಪಡಲು ಬಾಳರಾ ಹಿರಿಯರ್. ಇಡಿದಡವಿಯಲಿ
ಬಿದಿರ್ ಅಕ್ಕಿ ಮೂಡಲಳಿವುದು. ತನಗೆ ತಗದ ನುಡಿ
ಯೊದಗೆ ಸಂಪನ್ನ ತಾನ್ ಬಾಳನಾ ಬಳಿಕ. ॥ ೨ ॥

ತೊಳೆದು ಮಣಿಗುಣವನರಿವರು. ಮುನ್ನ ಜೀನಿಟ್ಟು
ಮೇಲೇರಿ ಕುದುರೆಗುಣವರಿಯುವರು. ಮಾಸಳಿಯೆ
ಸುಟ್ಟರಿವರಾ ಹೊನ್ನಿನೊಳ್ಗುಣವ ಕಾಣ್ಬವರು.
ಕೆಟ್ಟರಿವರಂತು ಕೆಳೆಯರು ತರುವ ಸುಖವ. ॥ ೩ ॥

ಕಳ್ಳಿಯೊಡಲೊಳಗಗಿಲು ಹುಟ್ಟುವುದು. ಮೃಗದೊಡಲೊಳ್
ಒಳ್ಳೆ ಕಸ್ತೂರಿ ಹುಟ್ಟುವುದು. ಪೆರ್ಗಡಲೊಳಗೆ
ಬಲ್‌ಬೆಲೆಯ ಮುತ್ತುಗಳು ಹುಟ್ಟುವುವು. ಯಾರರಿವರ್
ಒಳ್ಳೆಯವ ಹುಟ್ಟುವಾ ಕುಲದ ನೆಲೆಯ? ॥ ೪ ॥

ಕಲ್ಲಿನಲಿ ಹುಟ್ಟುವುದು ಕದಿರುಮಣಿ. ಕಾದಲೆಯ
ಸೊಲ್ಲಿನಲಿ ಹುಟ್ಟುವುದು ಮಿಗಿಲು ಮದ. – ಮೆಲುಪಾದ
ಕರುಣೆಯಲಿ ಹುಟ್ಟುವುದು ಅರದ ನಿರಿ. ಎಲ್ಲವೂ
ಪುರುಳಿನಲಿ ಹುಟ್ಟಬಿಡುವುನು ತಪ್ಪದೆ. ॥ ೫ ॥

ಸಿರಿಯುಹುದು ಕರೆಯಿಲ್ಲದಾಚರಣೆ. ಹಿರಿಯದೊಂ
ದರನಹುದು ಸರಿದಾರಿಯಲಿ ನಡೆಯೆ. – ಒರ್ವನನು
ಕಳೆಗೊಂಡು ಕಡೆಗಣಿಸೆ ಕೊಲೆಯುಹುದು. ಹೊಲೆಯಹುದು
ತಲೆಯ ತಗ್ಗಿಸಿ ನಡೆವುದಾಗದರ ಮುಂದೆ. ॥ ೬ ॥

ಕಳ್ವಮೆಂಬರಿಗಿಲ್ಲ ನಿದ್ದೆ. ಕಾದಲೆಯಲ್ಲಿ
ಮನಮನೊಲ್ದಿಟ್ಟರಿಗಮಿಲ್ಲ ನಿದ್ದೆ. – ಒಳ್ಳಿದಹ
ಪುರುಳ ಕೂಡಿಸುವರಿಗೆ ನಿದ್ದೆಯಿಲ್ಲಾ ಪುರುಳ
ಕಾಯ್ದುಕೊಂಡಿರುವರಿಗಮಿಲ್ಲ ನಿದ್ದೆ. ॥ ೭ ॥

ತಿಳಳ

ಕಲ್ತರಿಗೆ ಕಳೆದುದರ ಕೊರಗು ತೋರದು. ಒಂದನ್
ಒಲ್ದು ಪಡೆದಿರುವರಿಗೆ ತೋರದಾ ಎಡರ ತೊಡರ್.
ಅಲ್ಲದುದನರಿತರಿತು ಬಯಸುವಗೆ ತೋರದರನ್.
ಎಲ್ಲವೂ ಮುನಿವವಗೆ ತೋರದೆಯೆ ಕೆಡುಗು. ॥ ೮ ॥

ನೆಲಕೆ ಭೂಷಣ ನೆಲ್ಲು ಕಬ್ಬುಗಳು. ತುಂಬಿರುವ
ಕೊಳಕೆ ಭೂಷಣ ಕಂಪಿನರಳ್ದಾವರೆ. – ಪೆಣ್ತನಕೆ
ಸಲುವ ಭೂಷಣ ಲಜ್ಜೆ. ತನಗೆ ಭೂಷಣ ತನ್ನ
ಬಳಿವಿಡಿದು ಬೆಂಬಿಡದೆ ಬರುವ ತನ್ನರವು. ॥ ೯ ॥

ಕಂಬದಲಿ ಕಟ್ಟುವರು ಕಳಿರ. ಕೆರಳುಡಗಿಸುತ
ಮಂತ್ರದಲಿ ಕಟ್ಟುವರು ಮಾನಾಗನನ್.– ಕುತ್ತಿ
ಕೋಳದಲಿ ಕಟ್ಟುವರು ಕೀಳನನು. ನಯದಿಂದ
ಸಂಪನ್ನರಾದವರ ಕಟ್ಟಿಹಾಕುವರು. ॥ ೧೦ ॥

ಕೀಳ್ಗೈಮೆಗಳನೆಣಿಸಿ ಕನಲದಿರಬೇಕವರ
ನಲ್ಗೈಮೆಗಳನಳಿಸಿ ಮರೆಯದಿರಬೇಕು. – ಅಂತೆ
ತೊರೆಯಬೇಕೊಡಲ ಕೋಪವ. ತನ್ನ ಸಂಪದವನ್
ಅಳಿವ ಕಾರ್ಯವನೊಡನೆ ಕೈಬಿಡಲೆಬೇಕು. ॥ ೧೧ ॥

ಹಲ್ಲಿಂದ ನೋಯಿಪುವು ಹಾವುಗಳು. ಗೂಳಿಗಳು
ಕೋಡಿಂದ ನೋಯಿಪುವು ಕೆಣಕಿದರನು. – ತಾವೊಲ್ದು
ಮುನಿಸಿಂದ ನೋಯಿಪರು ಮಡದಿಯರು. ಮುನಿಜನರು
ತಪಸಿಂದ ತರುವರೊಡನೆಯೆ ನೋವನು. ॥ ೧೨ ॥

ಹರೆ ಲೇಸು ಶ್ರುತಿಗೂಡದಾ ವೀಣೆಯಿಂದ. ನಿರಿ
ಹೆಣ್ಣೆ ಲೇಸೊಳ್ಗುಣವ ತೊರೆದ ಗಂಡಿಂದ. – ಅಂತೆ
ಹದವನಳಿದೂಟದಿಂದಾ ಹಸಿವೆ ಲೇಸು. ಒಲ್ದಿ
ರಳಿದ ಬರಿ ಬಾಳಿಂದ ಬೆಂಕಿ ಪುಗೆ ಲೇಸು. ॥ ೧೩ ॥

ಸಿರಿಯ ಪಾತಿಯಲಿ ಕೊಡುಗೈತನವು ಬೆಳೆಯುವುದು.
ಇನಿನುಡಿಯ ಪಾತಿಯಲಿ ಬಂಧುಕುಲ ಬೆಳೆಯುವುದು.
ನಿಷ್ಕರುಣೆ ಕೂಪದಲಿ ಕಡುಸೊಲ್ಲು ಮೂಡುವುದು.
ಬಡತನದ ಕುಳಿಯೊಳೊಗೆಯುವುದೆರೆವ ಪಾಡು. ॥ ೧೪ ॥

ಬಿರುನುಡಿಯ ಬಯಸುವೊಡೆ ಬೇಡು. ಮೇಣೀ ನೆಲದೆ
ಚಿರವಿಹುದ ಬಯಸುವೊಡೆ ಹೆಸರ ಗಳಿಸು. – ತನ್ನೊಡನೆ
ಬರುವುದನು ಬಯಸೆ ನಲ್ಲರನೆಸಗು. ಗೆಲ್ಲುವುದ
ಬಯಸುವೊಡೆ ಕೋಪವನು ಕೂಡೆ ಬಿಡು ನೀನು. ॥ ೧೫ ॥

ಕಡಲ ಪೋಳ್ವರು ಹಡಗನುಳ್ಳವರು. ಮಾರಾಂತ-
ಪಡೆಯೊಡ್ಡ ನೆಗೆಗುದುರೆಯೊಡೆಯರೊಡೆಯುವರು.–ತಪದ
ಕಡಲ ಕಡಹಾಯುವನು ತನ್ನೊಡೆಯನಾವವನು.
ದಾಟಿಬಿಡುವನು ಸಭೆಯ ಕಡಲ ಕಲ್ತವನು. ॥ ೧೬ ॥

ಸುಳ್ಳೆ ಕೊನೆ ನಣ್ಪಿಂಗೆ. ಮುಪ್ಪೆ ಕೊನೆ ಯೌವನದ
ಲುಳ್ಳ ಬಲು ಚೆಲ್ವಿಂಗೆ. ತೂಕವಿಲ್ಲದೆ ಮಿಕ್ಕ
ಮೀರುನಡೆ ಕೊನೆ ಸಿರಿಗೆ. ತಂತಮ್ಮ ತಗುಮೆಯೇ
ಮುಡಿವಹುದು ಜೀವಿಗಳಿಗೆ. ॥ ೧೭ ॥

ಮನೆಯೇಳ್ಗೆ ಸಲ್ವೆಂಡಿರ್. ಒಡಗಿ ಬಹ ಕದನಕ್ಕೆ
ಮಿಗಿಲೇಳ್ಗೆ ಕೆನ್ನೀರ ಕಳದೊಳಗೆ ನುರಿತವನು.
ನಾಡೇಳ್ಗೆ ನಲ್ಲಸಿವನೆಂಬ ದೊರೆ. ಕೇಡೇಳ್ಗೆ
ಕೆಳೆಯರೆಲ್ಲರು ಕೂಡೆ ಕೈಬಿಡುವುದು. ॥ ೧೮ ॥

ಪಡೆದ ಗಂಡನು ಕದಲೆ ಮಡದಿ ತಾನ್ ಕದಲುವಳು.
ಅರಿತವನು ಕದಲೆ ತಾನ್ ಪುರುಳು ಕದಲುವುದು.–ಹಬ್ಬಿ
ದೀ ನಾಡು ಕದಲಲಾ ದೊರೆಯಾಳ್ಕೆ ಕದಲುವುದು.
ಹಾಡು ವಾದ್ಯದ ಕಟ್ಟು ಸಡಿಲೆ ಕದಲುವುದು. ॥ ೧೯ ॥

ಮನೆ ಹಾಳು ಚೆಲುವೊಗದಳಿಲ್ಲದಿರುವುದು. ನಡೆವ
ದೆಸೆ ಹಾಳು ನಣ್ಪುಳ್ಳರಿಲ್ಲದಿಹುದು.–ತಾನಿರುವ
ಸಭೆ ಹಾಳು ಮುತ್ತವರು ಬಂದಲ್ಲಿ ಸೇರದುದು.
ತಾ ಹಾಳು ಕಲ್ತರಿವದಿಲ್ಲದೊಡಲು. ॥ ೨೦ ॥

ಒಗ್ಗಟ್ಟದಿಲ್ಲದಿರೆ ಬಲ್ಮೆ ಮುರಿಯುವುದು. ಸಟೆ
ಕೆಡಿಸುವುದು ಹೊನ್ನ ಹೋಲುವ ಮೈಯನು.–ಹೊಯ್ದ
ಗಡಿಗೆ ತಗ್ಗಿಸುವುದಾ ಹಾಲ ಸವಿಯನು. ಕೂಡ
ಬಾರದವರೊಡಗೂಡೆ ಕೆಡಿಸುವುದು ಕುಲವ. ॥ ೨೧ ॥

ಹೊಗಳ ತರುವುದು ಹುಸಿಯದಾ ನಡತೆ. ಒಬ್ಬರನು
ಸಾರದೆಯೆ ಮೀರಿ ನಡೆವುದು ಹೆಡ್ಡು.–ಕಾಣದಿಹ
ಕುರುಡರಂತೆಸಗುವುದು ಮತಿಮರುಳು. ಕತ್ತಲೆಯ
ಕಳೆದು ತಿಳಿಗಣ್ಣರಾಗಿಸುವುದಾ ತಿಳಿವು. ॥ ೨೨ ॥

ಕೆಣಕಿದರು ಸೈರಿಸುವುದಾನೆ. 'ಅಮ್ಮಾ!' ಎಂದು
ಬಳಿಗೆ ಮಗುವೋಡುವುದು ತಾಯ್ ಬಡಿದೊಡಂ.–ನಣ್ಪಿಗರು
ಸಿಟ್ಟನೊಳಮೆಸಗರುರೆ ನಡುಗಿಸುವ ಗೈಮೆಗಳನ್.
ಒಡಗೂಡಿ ಪುದುವಾಳರಾಗದವರೆಂದುಂ. ॥ ೨೩ ॥

ನಗೆಯೊಳ್ಪದೇರುವುದು ನಣ್ಪುಳ್ಳರಲಿ. ಮೆರೆವ
ಸಭೆಯೊಳ್ಪದೊಲ್ಮೆಯುಳ್ಳವರೊಳೇರುವುದು.– ಓಟ
ದಾ ತೇರಿನೊಳ್ಪು ಸಾರಥಿಯಿಂದಲೇರುವುದು.
ಊರೊಳ್ಪು ಅದನುಳ್ಳನಿಂದಾಗಿ ಬಹುದು ॥ ೧೪ ॥

ಅಂಜುವುದು ಬಂದರದಕಂಜದಿರು. ತನಗೊಪ್ಪು
ವುವನುಳಿಯದಿರು ಬಾಳಿನಳವೆಲ್ಲ.– ಮನವರಿದು
ಪಕ್ಷಪಾತಕೆ ಬೀಳದಿರು ಪುರುಳ ಪೆರುವೊಡಂ.
ನೋಡದಿರು ನಂಟರಿಗೆ ಬಿಟ್ಟ ಕೆಲಸವನು. ॥ ೧೫ ॥

ಕೊಲಲೆಂದು ಜೀವಿಗಳ ಸಾಕುವುದು ತಪ್ಪಹುದು.
ಬೆಲೆಕೊಟ್ಟು ನೆವದಿಂದಲಡಗುಣಲು ತಪ್ಪಹುದು.
ನುಡಿಯಬಾರದ ಸೊಲ್ಲ ನುಡಿಯುಲದು ತಪ್ಪಹುದು.
ಕಡಿದು ಕೊಲ್ಲುವುವದುವೆ ದೊಡ್ಡ ತಪ್ಪಹುದು. ॥ ೧೬ ॥

ದೊರೆಯಿಂದ ಬಾಳುವುದು ಕುಲವೆಲ್ಲ. ತಾಯ ಮೊಲೆ
ಹಾಲಿಂದ ಬಾಳುವುದು ಹಸುಳೆಯೆಲ್ಲ.– ಬಾಂಬನಿಯ
ಸಾಲಿಂದ ಬಾಳುವುದು ಲೋಕವೆಲ್ಲ. ಈ ಲೋಕ
ದಳಿವಿಂದ ನಲಿನಲಿದು ತಣಿವುದಾ ಮೃತ್ಯು. ॥ ೧೭ ॥

ಕಲಿಕಲಿಯೆ ಕಳಿಯುವುದು ಮೊದ್ದತನ. ಮೊದ್ದತನ
ಕಳಿಕಳಿಯೆ ಪುಲ್ಲರಿವು ತೀರಿ ನಿಜ ತೋರುವುದು.
ನಿಜ ತೋರೆ ತತ್ತ್ವದಾ ಮಾರ್ಗ ಮಿಗೆ ಹರಡುವುದು.
ಆ ಮಾರ್ಗ ಇಲ್ಲಿ ಈ ಲೋಕದಲಿ ಕೀರ್ತಿಯನು
ನಿರಿಸಿ ಮೇಣಲ್ಲಿ ಮೇಲ್‌ಲೋಕ ಪುಗಿಸುವುದು. ॥ ೧೮ ॥

ಕುಳಿ ಬಿದ್ದ ಬಳಿ ನೀರು ನಿಲ್ಲುವುದು. ಹಲವು ಜನ
ಹಳಿದ ಬಳಿ ಪಾಪ ನಿಲ್ಲುವುದು.– ಮಿಗೆ ತಡೆದು
ಹೋಗಬೇಡೆಂದ ಬಳಿ ನಿಲ್ಲುವುದು ಕಾಮು. ತನ
ಗೊಂದೊದಗಿದಂದರಿವು ನೆರವು ನಿಲ್ಲುವುದು. ॥ ೧೯ ॥

ಸಿರಿಗಿಂತ ಬಲವಾದುದಿಲ್ಲ. ಒರ್ವಗೆ ತನ್ನ
ಕಲ್ಪಿಯಿಂ ಮಿಗಿಲು ಪಡಪಿಲ್ಲ. ಎಲ್ಲದರೊಳುಂ
ಇಲ್ಲಮೆಗೆ ಮಿಗಿಲಾದ ಕೊರಗಿಲ್ಲ. ಇಲ್ಲೆನದ
ಬಲ್ಮೆಯಿಂ ಮಿಗಿಲಾದ ಬಲ್ಮೆಯಿಲ್ಲ. ॥ ೨೦ ॥

ಹೊಗೆಬಿತ್ತಿನಲಿ ಬೆಂಕಿ ತೋರುವುದು. ಮೇಲಾದ
ನಗೆಬಿತ್ತಿನಲಿ ತೋರುವುದು ಹಿಗ್ಗು.– ಹಗೆತನವು
ಮನವೆಂಬ ಬಿತ್ತಿನಲಿ ಮೊಳೆಯುವುದು. ಮೊಳೆತ ಮೇಲ್
ದುಃಖಕ್ಕೆ ಬಿತ್ತಾಗಿಬಿಡುವುದೊಡನೆ. ॥ ೨೧ ॥

ಮುಂದುಗಾಣಿಕೆಯಿರದ ಪೆಣ್ ಕುತ್ತಕೆಣೆ. ಲೋಕ
ದೊಂದಲಂಕಾರ ತಾನರ್ತಿಯುಳ್ಳವನು.– ಪಯಿರ
ಹುಲ್ಲುಕಳೆಯಂತಹನು ಹುಲ್ಲರಿವಿನಾ ಗುಂಡು.
ಕಲ್ಲಹನು ಕರಗದಿಹ ಮನವ ತಳೆದವನು. ॥ ೩೨ ॥

ಪಾರ್ವನಿಂ ಮೇಲಾದ ಹುಟ್ಟಿಲ್ಲ. ಏನೇನ
ಗೈದೊಡಂ ತಾಯಿಂದ ಮಿಗಿಲಾದ ತವರಿಲ್ಲ.
ಸಂಪತ್ತಿಗೆಣೆಯನಿಪ ಸೊಗಸಿಲ್ಲ. ಎಣಿಸಲಾ
ಎಳಮೆಗೆಣೆವರ್ಪುದದು ಬೇರೊಂದುಮಿಲ್ಲ. ॥ ೩೩ ॥

ಕಬ್ಬಿಣದಿ ಕಬ್ಬಿಣವ ಸೀಳುವರು. ಒಳ್ ನೀರ
ಕುಡಿದವರು ನೀರಿಂದ ಬಾಯ್ತೊಳೆವರು.– ಆರಯ್ಯಲ್
ಅರಿದರಿಂದರಿದುವನು ಕೊಳ್ಳುವರು. ಹಿರಿಯುವರು
ಹಿರಿದಾದ ಕಾರ್ಯಗಳ ಸಾಧಿಸುವರು. ॥ ೩೪ ॥

ಅರಸರೆಡೆಯಲಿ ಬಲ್ಮೆಯಾನಂದ ತೋರುವುದು.
ಇಲ್ಲದರಿಗೀವಲ್ಲಿ ಅರನಲಿವು ತೋರುವುದು.
ಆಣತಿಯ ಸಂತೋಷ ಬಡವರಲಿ ತೋರುವುದು.
ಮದ್ದಾನೆಯಾನಂದ ಊರ ಮೊಳಗಿಪುದು. ॥ ೩೫ ॥

ಕಪ್ಪಿಂದ ಕಣ್ಮಲರು ಚಿಗುರುವುದು. ಕಾರಿರುಳಿ
ನೆಣ್ಣೆಯಿಂ ಚಿಗುರುವುದು ಚಿಗಿವ ಸೊಡರು.– ಮಳೆ ಮೋಡ
ಮೊಳಗುತಿರೆ ಚಿಗುರುವುದು ಕುರುಗಿನೆಲೆ. ನಣ್ಪಿಗರ
ಬಳಕೆಯಿಂ ತಣಿದು ಚಿಗುರುವರು ಮೇಲವರು. ॥ ೩೬ ॥

ನಗೆಯಿನಿದು ನಣ್ಪುಳ್ಳರೊಗ್ಗಿನಲಿ. ಹಣಗಳಿಕೆ
ತಾಳಿನಿದು ಕೈ ಮುಟ್ಟಿ ಕೊಡುವರಲ್ಲಿ.– ಒಳ್ ಬಗೆಯ
ಹೆಣ್ಣಿನಿದು ಆದರದಿ ಸೇವಿಸಲು. ಹಾಡಿನಿದು
ಹಾಡಿನೊಳ್ಪರಿವರೆದುರಿನಲಿ. ॥ ೩೭ ॥

ಬಯ್ತಿಡುವವಂಗೆ ಗತಿ ತಲೆ ಮರಸಿಕೊಳ್ಳುವುದು.
ಬೇಡುವಗೆ ಗತಿ ಎಂದು ಮಿಾವವನು.– ಕರಗದಾ
ಕಲ್ಮನಮೆ ಹರಡಿರುವ ಸೈನ್ಯಕ್ಕೆ ಗತಿ. ಅಡಗ
ತಿನ್ನದುದೆ ಗತಿ ಸರ್ವ ಜೀವಿಗಳಿಗೆ. ॥ ೩೮ ॥

ಕಂಡುದನೆ ಮಾಡುವರು ಕೆಲಸಿಗರು. ಉಂಟೆಂದು
ಕೇಳ್ದುದನೆ ಮಾಡುವರು ಹೊಲಬರಿವರು.– ತಾವ್ ಮೆಚ್ಚಿ
ದಿನಿಯುವನೆ ಮಾಡುವರು ತುಂಬಿದರು. ಮುನಿಯದರು
ನೆನೆದುದನೆ ಮಾಡುವಳು ಸಿರಿದೇವಿ ತಾನು. ॥ ೩೯ ॥

ನಿಲ್ಲದೈಸಿರಿ ಕುಲದ ಭೇದವಲಿ. ಪೆರ್ಬಲದ
ಮೃತ್ಯು ನುಂಗದು ಪೇಳ್ದುದೆಲ್ಲ ಗೈದು.– ಆರ್ಪಿಂದ
ಮರಸೆಯುಂ ಮರೆಯಾಗದಾ ಕಾಮು. ಆಳ್ಕೆ ಬಗೆ
ಎರೆಯನಿರ್ದಾ ಬಗೆಯೆ ನೆಲಸಿ ನಿಲ್ಲುವುದು. ॥ ೪೦ ॥

ಹುಟ್ಟೆ ಬರುವಂದು ತೊಲಗೆಂದರೂ ತೊಲಗದುಸಿರ್.
ಸಾವಂದು ನಿಲ್ಲೆಂದರೂ ನಿಲ್ಲದಿನಿತು.– ಲಕ್ಷ್ಮಿ
ಯೊಲಿದಂದು ಸಿರಿ ತಾನೆ ಹೆಚ್ಚುವುದು. ಕೆಡುವಂದು
ಕಂಡವೂ ಕಾಣದೆಯೆ ಕೆಟ್ಟಳಿವುವು. ॥ ೪೧ ॥

ಪ್ರೋರಿರದೆ ಬಾಡುವುದು ಕಲಿಯೊಳ್ಪು. ಕೆಳಗಿಳಿದ
ಬೇರುಡಿಯೆ ಬಾಡುವುದು ಮರವೆಲ್ಲ.– ನೀರ್ ಪಾಯ್ವ
ಮಡ ಬತ್ತೆ ಬಾಡುವುದು ನೀಳ್ ನೆಯ್ದಲ್. ಪಡೆ ಮುರಿಯೆ
ನಾಡಿನೊಡೆಯರ ಮೇಲ್ಮೆ ಕೂಡೆ ಬಾಡುವುದು. ॥ ೪೨ ॥

ಆಗದವರೆಂಬವರು ನಣ್ಪಿರದರಾರಾರ್ಗಂ.
ಕಾದಲರು ಎಂಬವರು ತಗುವೆಯುಳ್ಳರ್.– ಮೇಲಾದ
ತಂದೆಯೆಂಬವನುಪಾಧ್ಯಾಯ. ಮತ್ತಾ ತಾಯಿ
ಯೆಂದೆಂಬುದದು ಹಿಂದೆ ತಾನ್ ಗೈದ ಕರ್ಮ. ॥ ೪೩ ॥

ಸಿರಿ ಕೆಡುವುದೊಡನೆ ನಾಣ್ಗೆಡಲು. ನಿರಿವಿಡಿದೈದು
ವೈದರಿಂ ತಾನೆ ಕೆಡುವುದು ಕರ್ಮ.– ಹುಸಿಯದಾ
ಬೆಳೆ ಕೆಡುಗು ನೀರಾರೆ ಪಚ್ಚೆಪಯಿರಿಗೆ. ಮತ್ತೆ
ಗುಣಮಾರೆ ಕೆಳೆಯರಾ ಕೆಳೆ ತಾನೆ ಕೆಡುಗು. ॥ ೪೪ ॥

ಉಪಕಾರ ಸಾವುದುಪಕಾರವರಿಯದರಲ್ಲಿ.
ಆದರಿಪರಿಲ್ಲದೆಡೆ ಬಿರ್ದು ಸಾವನ್.– ಪೊರ್ದುಗೆಯ
ಇನಿವಾಡು ಸಾಯುವುದು ಪಾಡರಿಯದವರಲ್ಲಿ.
ಮುನಿಸು ಸಾವುದು ಪ್ರಣಯವರಿಯದವರಲ್ಲಿ. ॥ ೪೫ ॥

ಕಂಪು ತಾನೊರೆಯುವುದು ಮಲರಿರವ. ತಾನ್ ನುಡಿದ
ಮಾತೊರೆವುದಾಯೆಸಕದೊಳ್ಪನ್.– ಆರಯ್ಕೆಲ್
ಒಳಗೆ ತುಂಬಿದ ಕೆಟ್ಟತನವ ಮನವೊರೆಯುವುದು.
ಮನದೊಳಗ ವೊಗದವೋಲ್ ಮುನ್ನೊರೆವುದಿಲ್ಲ. ॥ ೪೬ ॥

ಮಳೆಯಿಲ್ಲದಿರಲುಳಿವು ಮಾನೆಲದವರಿಗಿಲ್ಲ.
ಮಳೆಯೊ, ತಪವುಳ್ಳರಿಲ್ಲದೆ ಇಲ್ಲ. ತಪಸು ತಾನ್
ಇಲ್ಲ ಅರಸಿಲ್ಲದಿರೆ. ಆರಯ್ಕೆಲರಸನುಂ
ಮನೆಬಾಳ್ಕೆಯವರಿಲ್ಲದಿರಲು ತಾನಿಲ್ಲ. ॥ ೪೭ ॥

ಬಿರಿಮುಗುಳಿನಿಂದ ಮಲರ್ವಾಲೆ ತುರುಗುವುದದರ
ನರುಗಂಪಿನಿಂದ ಬಂಡುಣಿ ತುರುಗಿ ಬಹವು.– ತಮ್ಮ
ಕರೆಯಿಲ್ಲದಾ ಕರ್ಮದಿಂದ ಜನ ಪೆರ್ಚುವರು.
ಪರಿಪರಿಯ ನನೆಗಳಿಂ ಪೆರ್ಚುವುದು ಜೇನು. ॥ ೪೮ ॥

ಹಿರಿಮೆಬಗೆಯರಿಗರಿದು ಹಗೆಗೊಳ್ಳುದೆಂದಿಗಂ.
ಹುಟ್ಟಿದರಿಗರಿದು ಜೊತೆ ತೊರೆದು ಬಾಳುವುದು.– ಕಡು
ಜಿಪುಣಗರಿದಹುದು ಕೊಟ್ಟುಣ್ಣಲ್. ಎರೆದರಿಗೊಂದ
ನಿಲ್ಲೆಂದು ನುಡಿಯಲರಿದೆಂಥವರಿಗಂ. ॥ ೪೯ ॥

ಉಣವು ಸುಡುವುದು ಕುತ್ತದೊಡಲ ಸೇರಲು ಕೂಡೆ.
ನುಡಿ ಸುಡುವುದರಿವು ತಾನಿಲ್ಲದರನು.– ಮಿತಿಗೊಳದ
ಮುನ್ನಿನಾ ಕರ್ಮವೊರ್ವನ ಸುಡುವುದರಸ ತಾ
ನಿಟ್ಟ ಸೇನೆಯೆ ಸುಡುವುದೊಳ್ಪುಗೆಡಲವನನ್. ॥ ೫೦ ॥

ಕಳೆಯತಕ್ಕುದು ಹೆರರ ಹಳಿಯುವುದು. ನಲವಿಂದ
ನೆನೆಯತಕ್ಕುದು ನೆಲಸಿ ನಿಲ್ವ ಮಾತು.– ಒಳಗರಿದು
ಕೈಕೊಳ್ಳತಕ್ಕುದರಸಿರಿ. ಹಲವು ಗ್ರಂಥಗಳನ್
ಆರೈದು ಪಡೆಯತಕ್ಕುದು ಹಿರಿಯ ಪುರುಳು. ॥ ೫೧ ॥

ಹೊಳೆ ತನ್ನೊಳಡಗುತಿಹ ಕೊಳವುಂಟು. ಪೆರ್ಮೆಯಾ
ದೊರೆಗಳುಂ ಕೆಳೆಗೊಳ್ವ ಕುಲವುಂಟು.– ಪಳಮೆನಡೆ
ವೇದಗಳ್ಗೆಣೆಯಪ್ಪ ಹಾಡುಂಟು. ಬೇಳ್ವಿಗಳಿ
ಗೆಣೆಯೆನ್ನಬಹುದಾದ ದಾನಂಗಳುಂಟು. ॥ ೫೨ ॥

ಎತ್ತುಳ್ಳನೊಕ್ಕಲಿಗ. ಪಗೆಗೊಳ್ಳದವ ಪಾರ್ವನ್.
ಒಂದೆ ತೊಡೆಯಿಂದ ಗೆಲ್ಲುವುದು ಕೋಳಿ.– ರೂಪದೊಡ
ನರಿವುಳ್ಳವಳೆ ನಾಡೆ ಮನೆಬಾಳ್ಕೆ ಪೆಣ್. ಸೇನೆ
ತೊರೆಯದೊಡನಿರುವವನೆ ಸೇನಾಪತಿ. ॥ ೫೩ ॥

ಆನೆಯುಳ್ಳರು ಕನಲೆ ನಲಿಯುವರು. ಮೇಣರಸರ್
ಉರುಜವದ ಕುದುರೆಯೊಲಿದೇರುವರು.– ದುಂಡೋಲೆ
ನಲ್ಲೆಯರ ನಾಣ್ ಕಂಡು ನಲ್ಲವರು ನಲಿಯುವರು.
ನಲ್ಲವರನ್ ಅಲ್ಲದವರೊಲಿಯೆ ಕೇಡಹುದು. ॥ ೫೪ ॥

(i) ಕಣ್ಣಿಂದ ಮಿಗಿಲಂಗವಿಲ್ಲ. ಗಂಡನಿಗಿಂತ
ಹತ್ತಿರದ ನಂಟ ಬೇರೊಬ್ಬನಿಲ್ಲ.– ಮಕ್ಕಳಿಂ
ದೊಳ್ಪುಮಿಗೆ ಹಿತವಾದ ಪುರುಳಿಲ್ಲ. ಆರಯ್ಯೆ
ಪೆತ್ತವಳಿಂ ಮಿಗಿಲಾದ ದೇವರಿಲ್ಲ.

(ii) ಕಣ್ಣಿಂದ ಮಿಗಿಲಂಗವಿಲ್ಲ. ಆ ಕಲ್ಪಿಯಿಂ
ನುಣ್ಣಿದಹುದೆಂಬ ಪುರುಳಿಲ್ಲ. ಗಂಡಸಿಗಿಂತ
ಹತ್ತಿರದ ನಂಟ ಬೇರಿಲ್ಲ. ಪೆತ್ತವಳಿಗೆಣೆ
ಯೆಣಿಸುವೊಡದಾವ ದೇವರುಮಿಲ್ಲ. ॥ ೫೫ ॥

ಕಲ್ತರನ್ನರೆ ಕಲ್ತವರ ಕೆಳೆಯರ್. ಮರುಕ ತಾ
ನಿಲ್ಲದರು ಹಗೆಯನ್ನರೆ. ಹಗೆಯು ಸೇರಿದರಿದ್ದು
ದಿದ್ದಂತೆ ನುಡಿಯುದವರ್. ಒಳಗಡಗಿ ಹಾವಿರುವ
ಹುತ್ತಿನಂಥವರೆ ಆ ಹುಲ್ಲರಿವಿನವರು. ॥ ೫೬ ॥

ಮೇಲಾದವರು ಮೇಲು ಕರ್ಮಗಳ ಪಡೆಯುವರು.
ಬೇಡವಾದವರು ಪಡೆಯುವರು ಬೇಡದುವನ್.– ಹುಟ್ಟಿ
ನರುಮೆಯುರದಿಂದ ಸುಖ ಪಡೆಯುವರು ಹುಟ್ಟುವವರ್.
ಆರೈಯೆ ತೂರೆವವರು ಸ್ವರ್ಗದವರು. ॥ ೫೭ ॥

ಎಂದುಮೊಳವಾ ಬಾನ ಚುಕ್ಕಿಗಳುಮಿಚ್ಚೊಡರುಂ.
ಎಂದುಮಾ ಬೇಸೆಯುಂ ಗೈಮೆಯುಂ.– ಎಂದೆಂದು
ಮಿರುವರಾ ಕೊಡುವರುಂ ಕೊಳ್ವರುಂ. ಲೋಕದಲಿ
ಹುಟ್ಟುವರುಮಂತೆ ಸಾವರುಮೆಂದು ಮೊಳರು. ॥ ೫೮ ॥

ಇನಿದುಣ್ಬನೆಂಬವನುಸಿರ್ಕೊಲ್ಲದುಣ್ಬವನು.
ಮುನಿಸಿಂಗೆ ಗುರಿಯಹನು ಮೊಗಮುದುರಿ ಬಾಳುವನು.
ಒಂಟಿಯೆನಿಸುವನ್ ಎಸಗಿದುಪಕಾರವಿಲ್ಲದವನ್.
ಇನಿಯನೆನಿಸುವನು ತಾನಾರಿಗೆಂದಾದೊಡಂ
ಮುನಿಯದಿಹ ಹಿರಿನಡತೆಯುವನು. ॥ ೫೯ ॥

ಇತ್ತುಣ್ಬವನು ಹೆಸರ ನೆಟ್ಟಪನು. ಹೆರಕೈಯ
ತುತ್ತುಣ್ಬವನು ಮಡಕೆಯಿಂದೆಣಿಕೆಗೊಳ್ವನ್.– ತಿಳಿಯೆ
ನಗೆಯುಹುದು ಕೆಳೆಯಿಲ್ಲದವರ ಬಳಿ ಸಾರುವುದು.
ಪಗೆಯುಹುದು ಪಾಡರಿಯದವನ ಬೇಡುವುದು. ॥ ೬೦ ॥

ನೆಯ್ ಸಿಡಿಸೆ ಬೆಂಕಿಯುರಿಯೇಳುವುದು. ಬಳಿ ಸಾರಿ
ಹೊಗಳೆ ವರವೀಯುವರು ದೇವರ್ಕಳು.– ಕೊಟ್ಟಗೆಯ
ತೆರೆದು ಕರುವೂಡಿಸಲು ಕರೆವಾವು ನಲಿಯುವುದು.
ಆದರದಿನ್ ಊಟವಿಡೆ ಬಿರ್ದು ನಲಿಯುವನು. ॥ ೬೧ ॥

ಪಳಿಯಿಲ್ಲಮೆಯನವನ ಮಕ್ಕಳಲಿ ಕಾಣುವುದು.
ಕೆಳೆಯಿಲ್ಲಮೆಯನು ಕೇಡಿನಲರಿವುದು.– ಪುರುಳುಗಳ
ನೆರತೆಯಿಂ ಸಿರಿತನವನರಿಯುವುದು. ಹೊಗಳಿಂದ
ಕೈಮುಗಿಯದವರ್ಗಳುಂ ಕೈಮುಗಿವರು. ॥ ೬೨ ॥

ನೋಡುವೊಡೆ ಕಣ್ಣೊಳಂ ಕಾವಲಪ್ಪುದು. ಪೆಣ್ಗೆ
ರೂಪಮಿಲ್ಲದೆ ಮೇಲ್ಮೆಯಿಹುದುಮುಂಟು.–ಕೆಲವೇಳೆ
ನಾಡುಗಳೊಳಂ ನಲ್ಲವೆನಿಸುವೆಡೆಯುಂಟರಿಯೆ
ಪಾಡುಳ್ಳ ಹಾಡುಂಟು ಹಾಡುಗಳೊಳಂ. ॥ ೬೩ ॥

ಬತ್ತಿಯುರಿಯನು ಕಂಡು ಕೈಮುಗಿಯುವರು. ಚಿಗಿವ
ಸೌದೆಯುರಿಯನು ಕಂಡು ಕಡೆಗಣಿಪರ್.–ಮನೆಯೊಳಗೆ
ಕಲಿಯದೆಯೆ ಮುತ್ತವನ ಕೈಬಿಡುವರ್. ಕಲ್ತವನ
ಎಳವೆಯನು ಮೆಚ್ಚಿ ಕೊಂಡಾಡುವುದು ಲೋಕ. ॥ ೬೪ ॥

ಹಣಗಾರ ತಾನ್ ಬಯಸಿತಾಗುವುದು. ಬಿತ್ತಿನಲಿ
ಹೊರ್ವೊಳಕೆ ನೀರಿದ್ದರಾಗುವುದು.–ಸಂಪತ್ತು
ಸಿರಿದೇವಿ ನೋಡಿದೊಡನಾಗುವುದು. ಮುತ್ತವಳು
ನೊಂದಳೆನೆ ಕೆಡುವುದಾಕ್ಷಣವೆ. ॥ ೬೫ ॥

ಅಡಗುಂಡು ಹುಲಿ ಬಣ್ಣವೇರುವುದು. ನೀರ್ನೆಲದ
ಹುಲ್ಲಿಂದ ನಲಿಯುವುವು ಕಾಲ್ನಡೆಗಳು.–ನೆಲ್ಲಿನ್
ಅಕ್ಕಿಯಿಂ ನಲಿಯುವರು ಕೀಳುಗಳು. ಮೇಲವರು
ತಂತಮ್ಮ ಮರ್ಯಾದೆಯಿಂದ ನಲಿಯುವರು. ॥ ೬೬ ॥

ಮೊದಲೆ ಹೊಳೆಯುವುದು ಕೇಡೆಂಬುದಾರ್ಸೈವರಿಗೆ.
ಬಳಿಕ ತೋರುವುದು ಮುನ್ನರಿಯದರಿಗೆ.–ಆವುದುಂ
ಆಸೆಯಹುದದನ್ ಅಡೆದವರ ಮನಕೆ. ಆಸೆ ತಾನ್
ಇಲ್ಲದವರೆಸಗುವಾ ಗೈಮೆ ಕೆಡದು. ॥ ೬೭ ॥

ಪುರುಳಿಲ್ಲದರೆ ಮೇಲು ಪುರುಳಿದ್ದು ಬಳಸದರಿನ್.
ಬರಿಯರೇ ಮೇಲು ಬಯ್ತಿಟ್ಟಿರುವರಿನ್.–ಕೆರಳಿದ್ದು
ಬೈವರಿಂ ಬೈಗುಳವ ತಾಳಿಕೊಳ್ವರೆ ಮೇಲು.
ಗೈವರಿಂ ಗೈದುದನು ಕೆಡಿಸದರು ಮೇಲು. ॥ ೬೮ ॥

ಮಗ ಬೆಳಗಿಸುವನು ತಂದೆಯ ಗುಣವನ್. ಒರ್ವನಾ
ಮೊಗ ನುಡಿವುದೊಳನೆಲಸಿದಾ ಬಯಕೆಯನ್.–ಅಗಲ ನೀರ್
ಕೊಳದಾಳವನು ಹೊಕ್ಕನೊರೆಯುವನು. ಆ ಪರಿಯೆ
ನೆಲದ ಪರಿಯನು ಮಳೆಯೆ ಬೆಳಗುವುದು ತಾನು. ॥ ೬೯ ॥

ಎಡೆಯೊಳಿತು ಪಲರ್ ಅಲ್ಲಿ ನೆಲಸುವೊಡೆ. ಒರ್ವನಾ
ಮತಿಯೊಳಿತು ಮಾಸಳಿಯೆ ಕಲಿಯುವೊಡೆ.–ಕೂರ್ ಕೊಂಬಿ
ನೆತ್ತಿಂದ ತುರುವಿಂಡು ಕಳೆಯೇರುವುದು. ತಾನು
ಕೊಡುವನ್ನದಿಂದ ಮನೆ ಕಳೆಯೇರುತಿಹುದು. ॥ ೭೦ ॥

ಏರಿದನ ಬಗೆಯುದಹುದೇರ್ಗುದುರೆ. ಕೈಕೊಂಡ
ನಳವಿನಾ ಬಗೆಯುದಹುದರಗೈಮೆ.– ತೋಡಿರುವ
ಕೊಳಕೆ ತಕ್ಕಷ್ಟುಹುದು ತೂಬಗಲ. ತಂತಮ್ಮ
ಪರಮಾನವಿದ್ದಷ್ಟು ಬಾಳುವರ ಬದುಕು. ॥ ೭೧ ॥

ಯುಗ ವರ್ಷದೆಣಿಕೆಯಿಂದಾದುದಾ ಯಾಮಮುಂ
ಗಳಿಗೆಗಳ ನಡೆಯಿಂದ ತಾನ್ ನಡೆದುದು.– ತಡಮಾಡ
ದರಿತವರ ಬಳಿ ಕಲ್ತರ್ ಅರಿತವರು. ಬೆಳ್ಪರಿವಿ
ನವರು ಬಿಸಿನುಡಿಗಳಿಂ ಸುಖಪಡೆದರು. ॥ ೭೨ ॥

ಕಲ್ತವನು ತಳರೆ ಮತ್ತೇಳುವನು. ಕಲಿಯದಿಹ
ಮಡೆಯ ಬಿದ್ದೊಡೆ ಕಾಲು ಮುರಿಯುವುದು.– ತಾನೊಂದು
ನ್ಯೆಯೊಳೆಸಗಿದುದೆಲ್ಲ ಮುಂದೆ ಸಾಧನವೆಣಿಸೆ
ತಿಳಿಯರಿವು ಹುಸಿಯದಿಹ ಬಿತ್ತದಾಗುವುದು. ॥ ೭೩ ॥

ದೇವರ್ಕಳನ್ನರರಿತವರು. ದೇವರ್ಕಳಾ
ನಂಟರನ್ನರು ತಾವದೊಂದೂರಲಿರುವವರು.
ನಂಟರೊಳ್ ಪೆತ್ತರನ್ನರು ಆದರದೆ ನಡೆವರ್.
ಕಲ್ತರನ್ನರು ನೋಡೆ ಕಲ್ತವರ ಕೆಳೆಯರ್. ॥ ೭೪ ॥

ಹುಟ್ಟಡಗುವುದು ಸುಳ್ಳು ಹುಟ್ಟಿದೊಡನೆಯೆ. ವೈದ್ಯ
ಹೇಳಿಂದ ಒಡನೆ ಕುತ್ತವನೊರೆವುದು.– ನಲ್ಲವರು
ಬಿಡುವುದೆಂದೊಡನೆ ಬಿಡುವುದು. ಬಾಧ್ಯನಾದವನು
ಕೊಡುವುದೆಂದೊಡನೆಯೇ ಪಾಲು ಹಂಚುವುದು. ॥ ೭೫ ॥

ನಾಲಗೆಯಿನರಿವರಿನಿ ಸವಿಗಳನು. ಮೂಗಿಂದ
ಮೂಸಿ ತಾವರಿವರೆಲ್ಲಾ ಮಲರ್ಗಳಂ.– ನೋಟವಿಹ
ಕಣ್ಣಿಂದ ಕಾಣುವರು ಚೆಲುವುಗಳನ್. ಒಡನಿದ್ದು
ಮನದಿನರಿವರು ಮನದಲುಳ್ಳೆಣಿಕೆಗಳನು. ॥ ೭೬ ॥

ಸಾಯದುಳಿಯುವುವಿಲ್ಲ ಹುಟ್ಟಿದುಸಿರಿಗಳಲ್ಲಿ.
ತವದೆ ನಿಲ್ಲುವುವಿಲ್ಲ ಬಲ್ಮೆಗಳಲಿ.– ಮುಪ್ಪುಗೊಳ
ದೆಳಮೆಯನು ತಳೆದವರುಮಿಲ್ಲ. ಸಂಪತ್ತಿನಲಿ
ಕೇಡಿಲ್ಲದಂತೆ ಮುನ್ನಡೆದವರುಮಿಲ್ಲ. ॥ ೭೭ ॥

ನುಡಿವ ನುಡಿಯಿಂದರಿವರೊಬ್ಬನನು. ತಿಳಿಸಿಂದ
ನೀರಿಂದ ಮಡುವಿನಿರವರಿವರ್. ಆರೆಡೆಯೊಳಂ
ನಡೆವ ನಡೆವಳಿಯಿಂದ ಸಂಪನ್ನತೆಯನರಿವರ್.
ಒಡಲ ಹಿಗ್ಗಿಂದ ಕಳ್ಳುಂಡುದರಿಯುವರು. ॥ ೭೮ ॥

ನಾಲಗೆಯೆ ಅಲ್ಲವೇ ನಣ್ಪ ಪರಿವುದು? ಪುಡೆಯ
ಬಿಡುವನಲ್ಲವೆ ಅಪ್ಪಿ ಬಿಗಿದೊಡಂ? ಪೇರಾಸೆ
ತೊಡುರ್ವುದಲ್ಲವೆ ಹಲವು ಶಾಸ್ತ್ರಗಳ ಬಲೆಯಲ್ಲಿ?
ಕೆಡಿಪುದಲ್ಲವೆ ನೋಡೆ ಹಗೆ ತೊಡುವ ನಿಶ್ಚಯಂ? ॥ ೭೯ ॥

ಕೊಡುವೊಡನ್ನವ ಕೊಡುಗೆ. ಬಿಡುವೊಡುಸಿರೊಡ ಬಂದ
ಕಂದು ಕರೆಗಳ ಬಿಡುಗೆ. ಕೈಯ ಹಿಡಿದೆತ್ತುವೊಡೆ
ಬಡವರಹ ಬಂಧುಗಳ ಮೇಲೆತ್ತುಗೆ.– ಕೆಡಿಸುವೊಡೆ
ಕಡು ಕೋಪವನು ಬಿಡದೆ ಕೆಡಿಸುಗಾಕ್ಷಣವೆ. ॥ ೮೦ ॥

ಚೆಲುವುಮೆಳಮೆಯ ಸೊಬಗುಮುಳಿಯುವುದು ಬಡತನದೊಳ್.
ಕುಲಮುಮೊಳ್ಮನೆತನಮುಮುಳಿಯುವುದು ಕಲ್ಲಮೆಯೊಳ್.
ನೆರತೆಯಿಲ್ಲದ ಕೊಳದ ಕೆಳಗೆ ನೆಲ್ ಅಳಿಯುವುದು.
ಬಲು ಭಾರ ಹೇರುಗಳ ಕೆಳಗಳಿವುದೆತ್ತು. ॥ ೮೧ ॥

ನಲ್ಲವರ್ಗೆ ತಮ್ಮೂರೆಂದೂರಿಲ್ಲ. ನಲ್ ನಿರಿಯೊಳ್
ನಡೆವರ್ಗೆ ತಮ್ಮೂರೆಂದೂರಿಲ್ಲ. ಅಲ್ಲದಾ
ಕೀಳರ್ಗೆ ತಮ್ಮೂರೆಂದೂರಿಲ್ಲ. ಇಡುಗಂಟೆ
ನೊಡೆಯರ್ಗೆ ತಮ್ಮೂರದೊಂದುಮಿಲ್ಲ. ॥ ೮೨ ॥

ಕಲಿಯದವರಿಗೆ ತಮ್ಮ ಬಾಯ ಮಾತೇ ಮೃತ್ಯು.
ಮೆಲ್ಲಿದಹ ಬಾಳೆಗೋ ತಾನ್ ಪೆತ್ತ ಕಾಯ್ ಮೃತ್ಯು.
ಅಲ್ಲದುದ ಗೈವರಿಗೆ ಅರ ಮೃತ್ಯು. ಮೃತ್ಯುವೇ
ಮನೆಬಾಳ್ಕೆಯಲಿ ಹೊಲ್ಲ ನಡತೆಗೊಂಡವಳು. ॥ ೮೩ ॥

ನೀರಿಂದ ಹುಲಿಸುಗೊಳ್ಳುವುದು ಬೆಳೆನೆಲ. ನೀರ
ಮೇಲೆ ಬಹ ಪರದದಿಂ ಪಾಡಹುದು ಪಟ್ಟಣಂ.
ಕೊಂಡಾಳ್ವ ನಾಡಿನಿಂದೇಳ್ಗೆವಡೆವರು ದೊರೆಗಳ್.
ಕುಣಿತದಿಂ ಮೇಳ ಪಾಡೆಯ್ದುಬಹುದು. ॥ ೮೪ ॥

ಒಂದಕುತ್ಸಾಹಿಪುದು ಪೆಂಡಿರೊಳ್ನಡೆಯೆಂದುಂ.
ಅರದಲುತ್ಸಾಹಿಪುದು ಪಾರ್ವರೊಳ್ಪಗೆ. ಹೆರರ
ನಾಡ ಕೊಳ್ವುದು ದೊರೆಗಳೊಳ್ಗೈಮೆ. ಕೇಡಿಗು
ತ್ಸಾಹಮದು ಕೆಳೆತೊರೆದು ಕೈಬಿಡುವುದು. ॥ ೮೫ ॥

ಕಳದೆಯಿರಬೇಕು ಕಡಿದಹ ಕೇಡು ಬಹುದರಿಂ.
ತಳ್ಳದಿರಬೇಕು ಮಿಗೆ ತಗುಮೆಯುಳ್ಳವುಗಳಂ.
ಕೆಳೆಗೊಳ್ಳದಿರಬೇಕು ಕಿರಿಯರೊಡನೆಣಿಸೆ ಹಗೆ
ಗೊಳ್ಳದಿರಬೇಕು ತಾನಾರೊಡನೆಯುಂ. ॥ ೮೬ ॥

ಪೆರ್ಚಿಪುದು ನೇಹಿಗರನಿನಿಮೆಯಿಂ ಮೇಲೆತ್ತಿ.
ತುಳಿಯುವುದು ಹಗೆಗಳನು ಕಾಲವರಿದೆರಗಿ ತಾನ್.
ಬಿಡುವುದಾರಾರೊಡನೆಯಾದೊಡಂ ಉಣ್ಬುದನು.
ತಡೆಯುವುದು ಸಲ್ಲದೆಡೆ ಬಿಡದೆ ಕೋಪವನು. ॥ ೮೭ ॥

ಸೋಂಬತನ ಕೆಡುವರಲಿ ನೆಲಸುವುದು. ಕೆಟ್ಟತನ
ಕಾವುವನು ಕಾಯುದವರೆಡೆ ನಿಲ್ವುದು.– ಕಾದಲನ
ಮೇಣ್ ನಾಣೆನೆಲ್ಲೆಯಲಿ ನಿಲ್ಲುವರು ನಲ್ವೆಂಡಿರ್.
ನಟ್ಟು ಕಟ್ಟಿದ ಕಂಬದೆಡೆ ನಿಲ್ವುದಾನೆ. ॥ ೮೮ ॥

ವೇದವನರಿಯುವರು ತಣ್ಮನದ ಪಾರ್ವರು. ನೀತಿ
ಯೊಡನೆ ಗೆಲ್ವುದನರಿವರರಸರ್ಕಳೆಂದೆಂದುಂ.
ಮಣಿವುದಾಭರಣ ಗುಣಸಂಪನ್ನರಿಗೆ. ಪತಿಯು
ನುಳಿದಿತರ ದೇವತೆಗೆ ಮಣಿಯಳಾ ಹೆಣ್ಣು. ॥ ೮೯ ॥

ಪಟ್ಟಲ್ಲಿ ಪಟ್ಟಿಹಳು ನಲ್ಗುಣದ ಮಡದಿ. ಕಾ
ದಿಟ್ಟೊಡಂ ನೆನೆದಂತೆ ನಡೆವಳೊಲವಿಲಿ. ಎಡರ್
ಅಡಸೆಯುಂ ಹೋದೆಡೆಯೆ ಹೋಗುವುದು ಕಾಮ. ಮು
ಚ್ಚಿಟ್ಟೊಡಂ ಕೊಲೆ ಬಹುದು ಕೊಂದವನ ಮೇಲೆ. ॥ ೯೦ ॥

ಕೆಚ್ಚು ಹೆಚ್ಚಿದೊಡಾರ್ಪು ಹೆಚ್ಚುವುದು. ಹಾಲ್ನುಡಿಯ
ರಿನಿನೋಟ ಹೆಚ್ಚಿದೊಡೆ ನಂಟು ಹೆಚ್ಚುವುದು.– ತುಂಬಿ
ಮೆಲ್ಗರುಣೆ ಹೆಚ್ಚಲ್ ಅರ ಹೆಚ್ಚುವುದು. ಕಡುಗೈಮೆ
ಕೀಳತನ ಹೆಚ್ಚಿದೊಡೆ ಹೆಚ್ಚುವುದು ಪಾಪ. ॥ ೯೧ ॥

ಎಳಮೆಯಾ ಕಾಲಕ್ಕೆ ಕಲ್ಲಮೆಯೆ ಕುಂದಹುದು.
ಸಿರಿಯಿಲ್ಲದಂದು ಕೊಡುಗೈತನವೆ ಕುಂದಹುದು.
ನಂಟರಿರದಂದು ಕೋಪಿಸಲು ಕುಂದಹುದು. ತವರ್
ಅಲ್ಲದರ ಕೈಯನ್ನವುಣಲು ಕುಂದಹುದು. ॥ ೯೨ ॥

ಕೊಲೆಯದೆಲ್ಲೆಡೆಯೊಳಂ ಕೆಟ್ಟುದೇ. ಮಕ್ಕಳನು
ಕಲಿಸದೆಯೆ ಬೆಳೆಯ ಬಿಡೆ ಕೆಟ್ಟುದೇ.– ಮಡದಿಯರ
ಚೆಲುವು ನಾಣ್ಗೆಟ್ಟು ನಿಲೆ ಕೆಟ್ಟುದೇ. ಕೈಕೊಂಡ
ನಡೆವಳಿಯನಳಿದುಬಿಡೆ ಕುಲ ಕೆಟ್ಟುದೇ. ॥ ೯೩ ॥

ಆಚಾರಮೆಂಬುದೇ ಕಲ್ಪಿ. ಅರನೊಡವೆರೆದ
ಭೋಗ ಪಡೆವುದೆ ಪುರುಳ್. ಯಾರೊಡನೆಯಾದೊಡಂ
ದಾಕ್ಷಿಣ್ಯಮಿಲ್ಲದಿಹುದಾಳ್ಕೆ. ಜನರೊಳ್ಪನೊಳ
ಗಾರೈದು ತಿಳಿದಾಳ್ವುದರಸಾಳ್ಕೆ ರೀತಿ. ॥ ೯೪ ॥

ಕಳ್ಳಿನಾತಂಕವರಿಯುವನು ಕಳ್ಳುಣಿ. ನೀರಿ
ನಾತಂಕವರಿಯುವುದು ಚಾತಕವು.– ನೆರೆಯುವಾ
ಸಂಕಟವ ಪಲಪೆಂಡಿರಾಣ್ಮನರಿವನು. ಪುರುಳ
ಕಾದಿಡುವ ಸಂಕಟವ ಕಳ್ಳನರಿಯುವನು. ॥ ೯೫ ॥

ಕರೆಸೊಲ್ಲು ನಯವಿಲ್ಲದರ ಬಾಯಲುದಿರುವುದು.
ಮರೆಸೊಲ್ಲು ಸತ್ತರೂ ಕಲ್ತವರ ಬಾಯ್ಗೆ ಬರದು.
ಕೇಡ ಹರಡುವ ಸೊಲ್ಲ ಸಂಪನ್ನರಾಡರ್. ಆ
ಮರೆಸೊಲ್ಲು ಕೀಳ್ಜನರ ಬಾಯಲುದಿರುವುದು. ॥ ೯೬ ॥

ಚೆಲುವೆಯರ ಮುಂದೆ ಸೊಬಗಿಲ್ಲದರು ಪಾಡಿಲ್ಲ.
ತುಂಬು ಸಭೆಯಲಿ ಕಲಿಯದವನಿರಲು ಪಾಡಿಲ್ಲ.
ಕಲಿತವನದಾವನೂ ಪಾಡಿಲ್ಲದವನಹನು
ಕಲಿಯದರ ಮಡೆಯರಾ ನಡುವೆ ತಾನಿರಲು. ॥ ೯೭ ॥

ಮಣಿ ಮಾಸು ಕವಿದೊಡಂ ಕಾಂತಿಗುಂದದು. ಬೆಳಗಿ
ತೊಳೆದೊಡಂ ಕಬ್ಬಿಣಕೆ ಮತ್ತೆ ಕರೆ ಹಬ್ಬುವುದು.
ಪಾಶದಲಿ ಬಿಗಿದು ಮಿಗೆ ತಿಳಿಪೆಯುಂ ಕೀಳ್ ಅವನು
ತನ್ನ ಕೊಳೆತನವ ತೋರಿಸದೆ ಬಿಡನು. ॥ ೯೮ ॥

ಎಣಿಕೆ ತಾನ್ ಸಂಪನ್ನರರಿದೆಂದು ಬಿಡದಿಹುದು.
ಹುಣ್ಣು ತಾನ್ ಹಗೆಗಳನು ಕೂಡಿ ಬಾಳುವುದು.– ಸಜ್ಜು
ವೀಣೆ ತಾನ್ ಕೆಳೆಯವರ ಗದರುನುಡಿ. ಹಾಳು ತಾನ್
ಗುಣವುಳ್ಳ ಮಡದಿಯವಳಿಲ್ಲದ ಮನೆ. ॥ ೯೯ ॥

ಕಿರಿದಾಗೆ ಕೆರೆ ನೀರು ಕೊರೆಯಾಗುವುದು. ಮನೆಯ
ವರಮಾನ ಕಿರಿದಾಗೆ ಪೆಣ್ ಅಮರುವಳ್.– ಮುನ್ ಗೈದ
ತಪಸು ಕಿರಿದಾಗೆ ಮೇಲಮರುವುದು ಕರ್ಮ. ತನ್
ಆರ್ಪು ಕಿರಿದಾಗೆ ಹಗೆ ಮೇಲಮರುವನ್. ॥ ೧೦೦ ॥

ಬೈದುದರಿನಪ್ಪುದಾ ಪಳಿಪೆಸರು. ವಂದನೆಯ
ಗೈದುದರಿನಪ್ಪುದೊರ್ವಗೆ ತುಂಬು ನಂಟು.– ಗಳಿಕೆ
ಪುರುಳಿನಿಂದಪ್ಪುದುರು ಭೋಗ ತಾನ್. ಮನಕರಗು
ವರುಳಿನಿಂದಪ್ಪುದಾ ಅರಸು. ॥ ೧೦೧ ॥

ಎಲ್ಲವನುಮರಿದವನದೊರ್ವನೂ ಇಲ್ಲ. ಮೇಣ್
ಏನೊಂದುಮರಿಯದವನೊರ್ವನೂ ಇಲ್ಲ.– ಅಂತೆ
ಗುಣಮಿರದೆ ಬರಿದೋಷವುಳ್ಳನೊರ್ವನುಮಿಲ್ಲ.
ಸಂದೇಹಮಿಲ್ಲಮೆನೆ ಕಲ್ತವನುಮಿಲ್ಲ. ॥ ೧೦೨ ॥

ವ್ಮನೆಗೆ ಹಿರಿಬೆಳಕು ನಲ್ಮಡದಿಯರು. ನುಡದಿಯರಿ
ಗೆಣಿಸೆ ಗುಣ ತುಂಬಿರುವ ನಲ್ಮಕ್ಕಳು.– ಮನಕಿನಿಯ
ಕಾದಲಿನ ಮಕ್ಕಳಿಗೆ ಕಲ್ಪಿಯೇ. ಕಲ್ಪಿಗಂ
ಓದಿನಲಿ ಮಿಗೆ ಪೊಗಳುತುಂಬಿದಾರ್ಪೈವು. ॥ ೧೦೩ ॥

ಇನಿನುಡಿಗಳಿಂದ ಕೆಳೆಯಪ್ಪುದಿನಿಮೆಯನುಳಿದ
ಕಡುನುಡಿಗಳಿಂದ ಮನ ಕದಡಪ್ಪುದು.– ಮೆಲ್ನುಡಿಯ
ನಾಲಗೆಯಿನಪ್ಪುದರುಳ್ಮನ. ಅರುಳ್ಮನದಿಂದ
ಬೀಳಿರದ ಬಿಡುಗಡೆಯೆ ಬಹುದು. ॥ ೧೦೪ ॥

———

# ಗ್ರಂಥ ವಿಮರ್ಶೆ ಮತ್ತು ಸ್ವೀಕಾರ

---

೧. **ಪ್ರಾಥಮಿಕ ವಿದ್ಯಾಭ್ಯಾಸ ಪದ್ಧತಿಗಳು.**—ಲೇಖಕರು : ಶ್ರೀಮಾನ್ ಎಂ. ವೆಂಕೋಬಾಚಾರ್ಯರು, ಬಿ.ಎ., ಬಿ.ಟಿ., ವಿದ್ಯಾಭ್ಯಾಸದ ಇಲಾಖೆ, ಮೈಸೂರು ; ಪ್ರಕಾಶಕರು : ಗ್ರಂಥಕರ್ತರು ; ಕ್ರೌನ್ ಅ. ಪ ಪು. xvi + ೨೬೮ ; ಬೆಲೆ :

ಈ ಪುಸ್ತಕದ ಲೇಖಕರು ಈಗಾಗಲೇ "ಸಂಸ್ಕಾರ ಮತ್ತು ವಿದ್ಯಾಭ್ಯಾಸ", "ನವೀನ ವಿದ್ಯಾಭ್ಯಾಸ ಮತ್ತು ಆಧುನಿಕ ಶಿಕ್ಷಣಪದ್ಧತಿಗಳು" ಮೊದಲಾದ ಪುಸ್ತಕಗಳನ್ನು ಕನ್ನಡದಲ್ಲಿ ಬರೆದು ಕನ್ನಡಿಗರಿಗೆ ಪರಿಚಿತರಾಗಿದ್ದಾರೆ. ವಿದ್ಯಾಭ್ಯಾಸದಲ್ಲಿ ಮುಂದುವರಿದ ದೇಶಗಳ ಪ್ರಾಥಮಿಕವಿದ್ಯಾಭ್ಯಾಸ ಪದ್ಧತಿಗಳ ತಿಳಿವನ್ನು ಕನ್ನಡಿಗರಿಗೆ ಒದಗಿಸಲು ಪ್ರಯತ್ನಿಸಿರುವ ಈ ಪುಸ್ತಕ ಸರಿಯಾದ ಕಾಲಕ್ಕೆ ಹೊರಬಿದ್ದಿದೆ. ಈ ಪುಸ್ತಕದ ಮುನ್ನುಡಿಯಲ್ಲಿ, ಮೈಸೂರು ಮಹಾರಾಜಾ ಕಾಲೇಜಿನ ಎಡ್ಯುಕೇಷನ್ ಪ್ರೊಫೆಸರ್ ಆಗಿರುವ ಡಾಕ್ಟರ್ ಎಂ. ಸಿದ್ದಲಿಂಗಯ್ಯನವರು ತಿಳಿಸಿರುವಂತೆ, ನಮ್ಮ ದೇಶದಲ್ಲಿ ಜನರಿಗೆ ವಿದ್ಯಾಭ್ಯಾಸದ ವಿಷಯದಲ್ಲಿಯೂ, ಅದರ ಪ್ರಚಾರದ ವಿಷಯದಲ್ಲಿಯೂ ಆಸಕ್ತಿ ದಿನೇದಿನೇ ಹೆಚ್ಚುತ್ತಿದೆ; ಈಗೀಗ ಜನರು ವಿದ್ಯಾಭ್ಯಾಸದ ಬೆಲೆಯನ್ನು ಅರಿತು ಅದಕ್ಕೆ ಬೇಕಾದ ಅನುಕೂಲಗಳನ್ನು ಹೊಂದಲು ಆತುರಗೊಂಡಿದ್ದಾರೆ. ಅಲ್ಲದೆ, ಪ್ರಾಥಮಿಕಶಾಲೆಗಳ ಮೇಲ್ವಿಚಾರಣೆ ಮತ್ತು ಆಡಳಿತಗಳು ಸ್ಥಳೀಯ ಅಧಿಕಾರಿಗಳಿಗೆ ವಹಿಸಲ್ಪಡುತ್ತಿವೆ. ಇಂತಹ ಸಮಯದಲ್ಲಿ ಬರೆದಿರುವ ಈ ಪುಸ್ತಕ ಜನರಿಗೆ, ಅದರಲ್ಲಿಯೂ ಸ್ಥಳೀಯ ಅಧಿಕಾರಿಗಳಿಗೆ, ಪ್ರಾಥಮಿಕ ವಿದ್ಯಾಭ್ಯಾಸದ ವಿಷಯದಲ್ಲಿ ಇತರ ದೇಶಗಳು ಹೇಗೆ ಮುಂದುವರಿದಿವೆ ಎಂಬುದನ್ನು ತಿಳಿಸಲು ಸಹಕಾರಿಯಾಗಿದೆ.

ಗ್ರಂಥಕರ್ತರು ಈ ಪುಸ್ತಕವನ್ನು ಆರು ಭಾಗಗಳಾಗಿ ವಿಭಾಗಮಾಡಿ, ಒಂದೊಂದು ಭಾಗದಲ್ಲಿಯೂ ಒಂದೊಂದು ದೇಶದಲ್ಲಿ ಎಂದರೆ ಇಂಗ್ಲೆಂಡ್, ಅಮೆರಿಕ, ಜರ್ಮನಿ, ಡೆನ್ಮಾರ್ಕ್, ಜಪಾನ್, ಇಂಡಿಯಾ— ಮೊದಲಾದ ದೇಶಗಳಲ್ಲಿ ಪ್ರಚಾರದಲ್ಲಿರುವ ಪ್ರಾಥಮಿಕ ವಿದ್ಯಾಭ್ಯಾಸಕ್ರಮವನ್ನು ವಿವರಿಸಿರುತ್ತಾರೆ. ಒಂದೊಂದು ಭಾಗದಲ್ಲಿಯೂ ಆಯಾ ದೇಶದ ಪ್ರಾಥಮಿಕ ವಿದ್ಯಾಭ್ಯಾಸಕ್ರಮದ ಪೂರ್ವಚರಿತ್ರೆಯನ್ನು ಸಂಕ್ಷೇಪವಾಗಿ ಸೂಚಿಸಿ, ಅನಂತರ ಅಲ್ಲಿನ ಪ್ರಾಥಮಿಕಶಾಲೆಗಳ ಉದ್ದೇಶ, ಸಂವಿಧಾನ, ಪಾಠದ ಪಟ್ಟಿ ಮತ್ತು ವೇಳಾಪತ್ರಿಕೆ, ಪಠ್ಯಪುಸ್ತಕಗಳು, ಬಾಲಕರ ಹಾಜರಿ ಮತ್ತು ಬಲಾತ್ಕಾರ ವಿದ್ಯಾಭ್ಯಾಸದ ಕಾನೂನು, ಉಪಾಧ್ಯಾಯರ ವೇತನ ಮತ್ತು ಅವರ ಸ್ಥಾನಮಾನಗಳು, ಸ್ಥಳೀಯ ಅಧಿಕಾರಿಗಳ ಆಡಳಿತ ಇವೇ ಮೊದಲಾದ ಅನೇಕ ವಿಷಯಗಳನ್ನು ಅಂಕಿ ಅಂಶಗಳ ಸಹಾಯದಿಂದ ತಿಳಿಸಿರುತ್ತಾರೆ.

ಶ್ರೀಮಾನ್ ವೆಂಕೋಬಾಚಾರ್ಯರು ವಿಶೇಷ ಮುತವರ್ಜಿ ವಹಿಸಿ ಈ ವಿಚಾರದಲ್ಲಿ ಇಂಗ್ಲಿಷ್ ಭಾಷೆಯಲ್ಲಿರುವ ಪುಸ್ತಕಗಳ ಸಹಾಯದಿಂದ ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ಸಂಗ್ರಹಿಸಿದ್ದಾರೆ. ವಿಷಯಸಂಗ್ರಹಣ ಇಷ್ಟು ಪೂರ್ಣವಾಗಿದ್ದರೂ ಅವುಗಳನ್ನು ಪ್ರತಿಪಾದಿಸುವುದರಲ್ಲಿ ಸರಿಯಾದ ಕ್ರಮವನ್ನು ಅನುಸರಿಸಿರುವಹಾಗೆ ಕಾಣುವುದಿಲ್ಲ.

ಪ್ರಾಥಮಿಕವಿದ್ಯಾಭ್ಯಾಸ ಪದ್ಧತಿಗಳ ವಿಷಯವಾಗಿ ಚರ್ಚಿಸುವಾಗ ಇತರ ದರ್ಜೆಯ ವಿದ್ಯಾಭ್ಯಾಸದ ವಿಷಯಗಳನ್ನು ಸೇರಿಸುವುದು ಅನಾವಶ್ಯಕ ಎಂದು ತೋರುತ್ತದೆ. ಉದಾಹರಣೆಗಾಗಿ: ಕಸಬಿನ ವಿದ್ಯೆ, ವಯಸ್ಕರ ವಿದ್ಯಾಭ್ಯಾಸ, ಟೆಕ್ನಿಕಲ್ ಮತ್ತು ಕೈಗಾರಿಕೆ ಶಿಕ್ಷಣ, ವಾಣಿಜ್ಯವಿದ್ಯಾಭ್ಯಾಸ, ಡೆನ್ಮಾರ್ಕಿನ ವಯಸ್ಕರ ಹೈ ಸ್ಕೂಲು ಮತ್ತು ಸ್ಥಳೀಯ ವ್ಯವಸಾಯದ ಶಾಲೆಗಳು, ಇಂಗ್ಲೆಂಡಿನ ಕೇಂದ್ರ ಶಾಲೆಗಳು, ವಿಶ್ವವಿದ್ಯಾನಿಲಯದ ಟ್ರೈನಿಂಗ್ ಶಾಖೆಗಳು, ಮೊಧಲಾದ ವಿಷಯಗಳನ್ನು ಈ ಪುಸ್ತಕದಲ್ಲಿ ಸೇರಿಸದೆ, ಪ್ರಾಥಮಿಕ

ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟ ವಿಷಯಗಳನ್ನೇ ವಿವರವಾಗಿ ಚರ್ಚಿಸಿದ್ದರೆ ಈ ಪುಸ್ತಕದ ಪ್ರಯೋಜನ ಇನ್ನೂ ಹೆಚ್ಚುತ್ತಿತ್ತೆಂದು ತೋರುತ್ತದೆ.

ಹೀಗೆ ಅನಾವಶ್ಯಕವಾದ ಅನೇಕ ವಿಷಯಗಳನ್ನು ಹೇಳುವಲ್ಲಿ, ಪುಸ್ತಕ ಬಹಳ ದೊಡ್ಡದಾಗುತ್ತದೆ ಎಂಬ ಭಯದಿಂದಲೋ ಏನೋ, ಕೆಲವು ವಿಷಯಗಳ ಪ್ರತಿಪಾದನೆ ಸರಿಯಾಗಿ ತಿಳಿಯುವಂತಿಲ್ಲ. ಈ ಬಗ್ಗೆ ಒಂದೆರಡು ಉದಾಹರಣೆಗಳನ್ನು ಕೊಡಬಹುದಾದರೆ, ಇಂಗ್ಲೆಂಡಿನ "ಪ್ರೊವೈಡೆಡ್" ಮತ್ತು "ನಾನ್‌ಪ್ರೊವೈಡೆಡ್" ಶಾಲೆಗಳು (ಪುಟ ೮), ಅಮೆರಿಕದ "ಟವನ್" ಮತ್ತು "ಟೌರ್ನ ಷಿಪ್ಪು"ಗಳು (ಪುಟ ೯೬) ಇವುಗಳ ವಿಷಯ ಈ ಪುಸ್ತಕವನ್ನು ಮಾತ್ರವೇ ಓದುವವರಿಗೆ ಗೊತ್ತಾಗುವಹಾಗಿಲ್ಲ.

ಮತ್ತೊಂದು ವಿಷಯ: ಇಂಗ್ಲೆಂಡಿನ ಪರೀಕ್ಷೆಗಳ ವಿಷಯವಾಗಿ ಗ್ರಂಥಕರ್ತರು ಬರೆದಿರುವುದಿದು.— "ಕೇಂದ್ರ ಶಾಲೆಗಳ ಬಾಲಕಬಾಲಿಕೆಯರಿಗೋಸ್ಕರ ಒಂದು ಸ್ಪರ್ಧೆಯ ಪರೀಕ್ಷೆಯನ್ನು ಏರ್ಪಡಿಸಿರುತ್ತಾರೆ; ಅದು ಅವರ ಹನ್ನೊಂದನೆಯ ವಯಸ್ಸಿನಲ್ಲಿ ನಡೆಯುತ್ತದೆ. ೧೫ನೆಯ ವಯಸ್ಸಿನಲ್ಲಿ ಒಂದು ಪ್ರಸಿದ್ಧ ಪರೀಕ್ಷೆ ನಡೆಯುತ್ತದೆ ಇದಕ್ಕೆ ಮೊದಲನೆಯ ಶಾಲೆಯ ಪರೀಕ್ಷೆಯೆಂದು ಹೆಸರು."— ಇದು ಇಂಗ್ಲೆಂಡಿನ ಪರೀಕ್ಷೆಗಳ ವಿಚಾರವಾಗಿ ನಿಜಾಂಶವನ್ನು ತಿಳಿಸುವಹಾಗಿಲ್ಲ.

ಇವೆಲ್ಲಾ ಸಣ್ಣವಿಷಯಗಳು. ಒಟ್ಟಿನಲ್ಲಿ ಈ ಪುಸ್ತಕ ಕನ್ನಡಿಗರಿಗೆ ಉಪಯುಕ್ತವಾದುದು ಎಂಬುದನ್ನು ಪುನಃ ಹೇಳಬೇಕಾಗಿಲ್ಲ. ಶ್ರೀಮಾನ್ ವೆಂಕೋಬಾಚಾರ್ಯರು ವಿಶೇಷ ಉತ್ಸಾಹಶಾಲಿಗಳು, ಕನ್ನಡಭಾಷಾಪ್ರೇಮಿಗಳು. ಇವರ ಈ ಹೊಸ ಪ್ರಯತ್ನ ಅಭಿನಂದನೀಯವಾದುದು.

ಸಿ. ರಂಗಾಚಾರ್

---

೨. **ಸರ್ವಲಕ್ಷಣಸಂಗ್ರಹ.**—ಸಂಗ್ರಾಹಕರು: ಶ್ರೀ॥ ಭಿಕ್ಷು ಗೌರೀಶಂಕರ ಅವರು; ಪ್ರಕಾಶಿಕೆಯರು: ಶ್ರೀಮತಿ ಮುನಭರೀ ದೇವಿಯವರು, ಪುತ್ರೀಗ್ರಾಮ, ಪತ್ರಾಲಯ–ಭವಾನಿಖೇರ, ಹಿಸ್ಸಾರ್; ಕ್ರೌನ್ ೧/೩೨ ರ ಆಕಾರ; ಪುಟ ೧೫೮; ಬೆಲೆ: ೪ ಆಣೆ.

ವೇದ ವೇದಾಂಗ ದರ್ಶನಗಳೇ ಮೊದಲಾದ ಸಂಸ್ಕೃತ ಸಾಹಿತ್ಯದ ವಿವಿಧ ಗ್ರಂಥಗಳಲ್ಲಿ ಪೂರ್ವಾಚಾರ್ಯರು ನಿರೂಪಿಸಿರುವ ಲಕ್ಷಣ–ಗೂಢಾರ್ಥ–ಸಿದ್ಧಾಂತಗಳನ್ನೆಲ್ಲ ಒಕ್ಕಡೆ ಕೂಡಿಸಿ ರಚಿಸಿರುವ ಈ ಪುಟ್ಟ ಪುಸ್ತಕ, ಸಂಸ್ಕೃತ ವಿದ್ಯಾರ್ಥಿಗಳಿಗೆಲ್ಲಾ ಬಹಳ ಪ್ರಯೋಜನಕರವಾಗಿದೆ. ಶಾಸ್ತ್ರವ್ಯಾಸಂಗಿಗಳಿಗಂತೂ ಇದು ಒಂದು ನಿಧಿಯೆಂದು ಹೇಳಬಹುದು.

ಇದರಲ್ಲಿ ಸುಮಾರು ೩,೨೩೧ ಲಕ್ಷಣಗಳು ಸಂಗ್ರಹೀತವಾಗಿವೆ. ಈ ಲಕ್ಷಣಗಳನ್ನು ಬೇಕಾದಾಗ ಹುಡುಕುವ ಕೆಲಸ ಬಹಳ ತೊಡಕಿನದು. ಶ್ರೀ ಗೌರೀಶಂಕರ ಭಿಕ್ಷುಗಳು ಬೇಸರಿಸದೆ ಈ ಲಕ್ಷಣಸಂಗ್ರಹಕಾರ್ಯವನ್ನು ಮಾಡಿ ಸಂಸ್ಕೃತ ವಿದ್ಯಾರ್ಥಿಗಳಿಗೆ ದೊಡ್ಡ ಉಪಕಾರ ಮಾಡಿದ್ದಾರೆ. ಇದರ ಪ್ರಕಟನಕಾರ್ಯವನ್ನು ಮಾಡಿರುವ ಶ್ರೀಮತಿ ಮುನಭರೀದೇವಿಯವರಂತೂ ಎಲ್ಲರ ಕೃತಜ್ಞತೆಗೂ ಪಾತ್ರರು. ಒಟ್ಟಿನಮೇಲೆ ಸಂಸ್ಕೃತ ಭಾಷಾಭಿಮಾನಿಗಳೆಲ್ಲರೂ ಅಕ್ಕರೆಯಿಂದ ಓದಬೇಕಾದ ಗ್ರಂಥವಿದು.

ಎಂ. ಎಸ್. ಸುಬ್ರಹ್ಮಣ್ಯ ಶಾಸ್ತ್ರೀ

---

೩. **ಶ್ರೀ ಶಿವಾನಂದ ಸರಸ್ವತೀ ಸ್ವಾಮಿಗಳ ಅಧ್ಯಾತ್ಮ ಸೂಕ್ತಿಮಂಜರಿ.**—ಅನುವಾದಕರು: ಶ್ರೀ॥ ವೈ. ಸುಬ್ಬರಾಯರು; ಪ್ರಕಾಶಕರು: ಅಧ್ಯಾತ್ಮ ಕಾರ್ಯಾಲಯ, ಬೆಂಗಳೂರು; ಡೆಮ್ಮಿ ೮. ಪ. ಪುಟ: ೬೭; ಬೆಲೆ: ೬ ಆಣೆ.

ಶ್ರೀ॥ ಸುಬ್ಬರಾಯರು ಅಧ್ಯಾತ್ಮವಿದ್ಯೆಯ ಪರಿಚಯಮಾಡಿಕೊಳ್ಳಬಯಸುವ ಕನ್ನಡಿಗರಿಗೆ ತಿಳಿಗನ್ನಡದಲ್ಲಿ ಅದನ್ನು ಬಹು ಸುಲಭವಾಗಿ ತಿಳಿಸಿಕೊಡಲು ಹಲವು ಗ್ರಂಥಗಳನ್ನು ಬರೆದಿರುವುದಲ್ಲದೆ, 'ಅಧ್ಯಾತ್ಮ ಪ್ರಕಾಶ' ಎಂಬ ಮಾಸಪತ್ರಿಕೆಯನ್ನು ನಡೆಸುತ್ತಿರುವುದು ಎಲ್ಲರಿಗೂ ತಿಳಿದೇ ಇದೆ.

ಶ್ರೀಯುತರು ಇದೀಗ, "My Magazine of India" ಕಾರ್ಯಾಲಯದವರು ಪ್ರಕಟಿಸಿರುವ ಶ್ರೀ ಶಿವಾನಂದಸ್ವಾಮಿಗಳ "Spiritual Lessons" ಎಂಬ ಸೂಕ್ತಿಮಾಲೆಯ ಒಂದು ಭಾಗವನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ್ದಾರೆ. ಇದರಲ್ಲಿ ಅಧ್ಯಾತ್ಮ ವಿಚಾರ ತುಂಬಿ ತುಳುಕುತ್ತಿದೆ. ಮಹಾತ್ಮರ, ಅದರಲ್ಲಿಯೂ ತಪಸ್ಸಿನಿಂದ ಅಪೂರ್ವಾನುಭವವನ್ನು ಪಡೆದವರ, ವಚನ (ಸೂಕ್ತಿ)ಗಳು ಜಿಜ್ಞಾಸುಗಳಾದ ಓದುಗರ ಮನಸ್ಸಿಗೆ ಶಾಂತಿಯನ್ನುಂಟು ಮಾಡದಿರವು. ಶ್ರೀ ಸ್ವಾಮಿಗಳೇ ಹೇಳುವಂತೆ, ಈ ಪುಸ್ತಕದಲ್ಲಿ "ಕರ್ಮ, ಭಕ್ತಿ, ರಾಜ ಯೋಗ, ಜ್ಞಾನಯೋಗ– ಈ ವಿಷಯಗಳನ್ನು ಕುರಿತ ಅನೇಕ ಆಧ್ಯಾತ್ಮಿಕ ಉಪದೇಶಗಳಿರುತ್ತವೆ. ಇವು ಸಾಧಕರಿಗೆ ತುಂಬ ಉಪಯೋಗಕರವಾಗಿರುತ್ತವೆ. ಈ ಸಂಕ್ಷಿಪ್ತ ಉಪದೇಶಗಳಿಂದ ಅನೇಕರಿಗೆ ಸ್ಫೂರ್ತಿಯುಂಟಾಗಿರುತ್ತದೆ. ತಾವೂ ಯಾವುದಾದರೊಂದು ಸಾಧನವನ್ನು ಕೈಕೊಳ್ಳಬೇಕೆಂಬ ಬುದ್ಧಿಯುಂಟಾಗುತ್ತದೆ. ಇವು ಆಧ್ಯಾತ್ಮಿಕ ತೃಷ್ಣೆಯಿಂದ ಕೂಡಿ ಬಳಲುತ್ತಿದ್ದ ಎಷ್ಟೋ ಜೀವರಿಗೆ ಮನಶ್ಶಾಂತಿಯನ್ನೂ, ಸಂತೋಷವನ್ನೂ ತಂದು ಕೊಟ್ಟಿರುತ್ತದೆ" ಎಂಬ ಮಾತುಗಳು ಸುಳ್ಳಾಗಲಾರವು. ಆದರೆ, ಶ್ರೀ ಸ್ವಾಮಿಗಳೇ ಹೇಳುವಂತೆ, ಅಧ್ಯಾತ್ಮ ವಿಚಾರವು ಕೇವಲ ಗ್ರಂಥಪಾಠದಲ್ಲಿ ಪರ್ಯಾವಸಾನವಾಗಬಾರದು. ಸ್ವಪ್ರಯತ್ನದಿಂದ ಸಾಧನೆಮಾಡಿಯೇ ಇದರ ಸವಿಯನ್ನು ಕಂಡುಕೊಳ್ಳಬೇಕು. ಆದರೂ, ನಮ್ಮ ಜನ ಈ ಗ್ರಂಥವನ್ನು ಓದಿ ಅರಗಿಸಿಕೊಂಡರೆ, ಶಾಂತಿಸಂತೋಷಗಳನ್ನು ಪಡೆದೇ ಪಡೆಯುವರೆಂದು ಹೇಳಬಹುದು. ಆದ್ದರಿಂದ ಎಲ್ಲ ಕನ್ನಡಿಗರೂ ಈ ಗ್ರಂಥವನ್ನು ಓದಿ ಆನಂದಿಸಲೆಂದು ಆಶಿಸುತ್ತೇನೆ.

ಎಂ. ಎಸ್. ಸುಬ್ರಹ್ಮಣ್ಯ ಶಾಸ್ತ್ರೀ

---

೪. ಪಂಚಾಮೃತಂ.— ಲೇಖಕರು : ವಿದ್ವಾನ್ ಕೆ. ವಿ. ಕೃಷ್ಣಭಟ್ಟರು ; ಸರಕಾರಿ ಕಲಾಶಾಲೆ, ಮಂಗಳೂರು ; ಪ್ರಕಾಶಕರು : ಶ್ರೀ॥ ಹುರುಳಿ ಭೀಮರಾಯರು, ಸರಸ್ವತಿ ಪ್ರಿಂಟಿಂಗ್ ವರ್ಕ್ಸ್, ಮಂಗಳೂರು ; ಕ್ರೌನ್ ಅ. ಪ. ಪುಟ : ೧೪೬ ; ಬೆಲೆ : ೧೨ ಆಣೆ.

ಈ ಸಣ್ಣ ಪುಸ್ತಕದಲ್ಲಿ ಶ್ರೀಮಾನ್ ಕೃಷ್ಣಭಟ್ಟರು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಎಂಟು ಗದ್ಯಲೇಖನಗಳೂ, ಹತ್ತು ಕವನಗಳೂ ಸೇರಿವೆ. ಗದ್ಯಪ್ರಬಂಧಗಳಲ್ಲಿ ಎರಡು ಸಾಹಿತ್ಯವಿಮರ್ಶೆಗೆ ಸಂಬಂಧಿಸಿದವು; ಎರಡು ವ್ಯಾಕರಣ ವಿಚಾರದವು; ಇನ್ನೆರಡು ಹಾಸ್ಯಪ್ರಬಂಧಗಳು; ಒಂದು ಕನ್ನಡ ಸಾಹಿತ್ಯಚರಿತ್ರೆಯ ವಿಷಯವಾದದ್ದು; ಇನ್ನೊಂದು ನಮ್ಮ ಸಮಾಜದಲ್ಲಿ ವಾಡಿಕೆಯಾಗಿರುವ ಶಾರದಾಪೂಜೆಯನ್ನು ಕುರಿತದ್ದು. ಕವನಗಳೆಲ್ಲಾ ಭಾವಗೀತೆಗಳು.

ವಿಮರ್ಶೆ, ವ್ಯಾಕರಣ, ಛಂದಸ್ಸು, ಸಾಹಿತ್ಯಚರಿತ್ರೆ, ಮತಪದ್ಧತಿ, ಈ ನಾನಾ ವಿಷಯಗಳಲ್ಲಿ ಆಸಕ್ತಿಯನ್ನೂ ಸ್ವಲ್ಪ ತಿಳಿವಳಿಕೆಯನ್ನೂ ಉಂಟುಮಾಡುವಹಾಗೆ ಬರೆಯಬೇಕಾದರೆ, ಶ್ರೀ॥ ಕೃಷ್ಣಭಟ್ಟರಿಗೆ ಸಾಹಿತ್ಯ ಮತ್ತು ಸಮಾಜ ವಿಷಯಗಳಲ್ಲಿ ಎಷ್ಟು ಪರಿಶ್ರಮವಿದೆ ಎಂದು ಗೊತ್ತಾಗುತ್ತದೆ. ನಾನಾ ವಿಷಯಗಳನ್ನು ಕುರಿತು ವಿಚಾರಪೂರ್ವಕವಾಗಿಯೂ ಅಧಿಕಾರಯುತವಾಗಿಯೂ ಬರೆಯುವುದು ನುರಿತ ಸಾಹಿತಿಗಳಿಗೇ ಕಷ್ಟ. ಹೀಗಿರುವಾಗ, ಕನ್ನಡಿಗರಿಗೆ ತಮ್ಮ ಮೊದಲ ಕಾಣಿಕೆಯಾಗಿ ಅರ್ಪಿಸಿರುವ ಈ ಪುಸ್ತಕದಲ್ಲಿ ಅಲ್ಲಲ್ಲಿ ಸ್ವಲ್ಪ ಅಪೂರ್ಣತೆ, ಅಪಕ್ವತೆ ಕಂಡುಬಂದರೆ ಏನೂ ಆಶ್ಚರ್ಯವಲ್ಲ. ಛಂದಸ್ಸು, ಭಾಷೆಗೂ ವ್ಯಾಕರಣನಿಯಮಗಳಿಗೂ ಇರಬೇಕಾದ ಸಂಬಂಧ—ಇವು ಈಗಿನ ನಮ್ಮ ಸ್ಥಿತಿಯಲ್ಲಿ ಬಹು ಮುಖ್ಯವಾದ ಪ್ರಶ್ನೆಗಳು. ಶ್ರೀ॥ ಕೃಷ್ಣಭಟ್ಟರು ಈ ವಿಷಯಗಳನ್ನು ಕುರಿತು ಬರೆದಿರುವ ಲೇಖನಗಳು ಕೇವಲ ಸಮಸ್ಯೆಗಳನ್ನು ಸೂಚಿಸುತ್ತವೆಯೇ ಹೊರತು, ಅವುಗಳನ್ನು ಆಮೂಲಾಗ್ರವಾಗಿ ಶೋಧಿಸಿ ಯಾವುದು ಸರಿಯಾದ ದಾರಿ, ಯಾವುದು ತಪ್ಪು ಎಂದು ನಿಶ್ಚಯಿಸಿ ಹೇಳುವುದಿಲ್ಲ. ಈ ವಿಷಯಗಳನ್ನು ಇನ್ನೂ ದೀರ್ಘಕಾಲ ವ್ಯಾಸಂಗಮಾಡಿ ಒಂದೊಂದನ್ನೂ ಕುರಿತು ಬೇರೆ ಪುಸ್ತಕಗಳನ್ನೇ ಬರೆದರೆ ಕನ್ನಡ ವಾಙ್ಮಯಕ್ಕೆ ಶ್ರೀಮಾನ್ ಕೃಷ್ಣಭಟ್ಟರು ದೊಡ್ಡ ಉಪಕಾರ ಮಾಡಿದಹಾಗಾಗುತ್ತದೆ.

ಈ ಪುಸ್ತಕದಲ್ಲಿ ಓದುವುದಕ್ಕೆ ಅತ್ಯಂತ ಹಿತವಾದ ಪ್ರಬಂಧಗಳೆಂದರೆ ಹಾಸ್ಯರೂಪವಾದ 'ಅಭಿನವ ಮಹಾಕವಿ,' 'ಕೆಪ್ಪಯ್ಯಶಾಸ್ತ್ರಿ ಯಾನೆ ಇಮ್ಮಡಿಯ ಕಾಳಿದಾಸ' ಈ ಎರಡು. ಪಾಶ್ಚಾತ್ಯ ಸಾಹಿತ್ಯಗಳಲ್ಲಿ ಪ್ರಸಿದ್ಧಿಯಾಗಿರುವ 'ಪ್ರಹಸನ ವಾಙ್ಮಯ' (Satirical Literature) ಕನ್ನಡದಲ್ಲಿ ಇನ್ನೂ ಬೆಳೆದಿಲ್ಲ. ಈ ಎರಡು ಪ್ರಬಂಧಗಳೂ ಆ ಮಾರ್ಗವನ್ನನುಸರಿಸಿ, ಹಾಸ್ಯದ ಸಹಾಯದಿಂದ ಜನರ ತಪ್ಪುಗಳ ಕಡೆಗೆ ದೃಷ್ಟಿಯನ್ನು ಎಳೆಯುತ್ತವೆ. ಇದೇ ಮಾರ್ಗದಲ್ಲಿ ಮುಂದುವರಿದು ಶ್ರೀ॥ ಕೃಷ್ಣಭಟ್ಟರು ಬೇರೆ ಬೇರೆ ವಿಷಯಗಳನ್ನೂ ಕುರಿತು ಬರೆಯಬಹುದು.

ಪುಸ್ತಕದ ಶೈಲಿ ಒಟ್ಟಿನಮೇಲೆ ಸರಳವಾಗಿದೆ. ಅನಾವಶ್ಯಕವಾಗಿ ಅಲ್ಲಲ್ಲಿ ಕಷ್ಟವಾದ ಸಂಸ್ಕೃತ ಪ್ರಯೋಗಗಳು ಬಂದಿವೆ. ಅವುಗಳನ್ನು ಬಿಡುವುದು ಒಳ್ಳೆಯದು.

ಇನ್ನು ಕವನಗಳ ವಿಚಾರ: ಭಾವಾತಿಶಯದಿಂದ ವಿಧಿಯಿಲ್ಲದೆ ಕವಿಯ ಮುಖದಿಂದ ತಾನೇತಾನಾಗಿ ಹೊರಬಿದ್ದ ಮಾತೇ ಉತ್ತಮ ಕವನವಾಗುವುದು. ವಾಲ್ಮೀಕಿಯ ವಿಷಯವಾಗಿ ಬರೆದಿರುವ ಪ್ರಬಂಧದಲ್ಲಿ ಶ್ರೀ॥ ಕೃಷ್ಣಭಟ್ಟರೇ ಇದನ್ನು ತಿಳಿಸಿರುವರು. ಬೇಡನು ಗಂಡುಹಕ್ಕಿಯನ್ನು ಕೊಂದು ಹೆಣ್ಣಿಗೆ ಉಂಟುಮಾಡಿದ ವಿರಹಯಾತನೆಯನ್ನು ನೋಡಿದ ಕೂಡಲೆ ವಾಲ್ಮೀಕಿಮಹರ್ಷಿಗಳ ಬಾಯಿಂದ ಉತ್ತಮ ಶ್ಲೋಕವೊಂದು ಹೊರಬಿತ್ತು. ಅದೇ ಧಾಟಿಯಲ್ಲೇ ರಾಮಾಯಣವನ್ನೆಲ್ಲಾ ಬರೆದರು. ರಾಮಾಯಣದ ಪಙ್ಕ್ತಿ ಪಙ್ಕ್ತಿಯಲ್ಲೂ ಈ ಸಂಕಟದ ಪ್ರತಿಧ್ವನಿ ಇದ್ದೇ ಇದೆ. ಶ್ರೀ॥ ಕೃಷ್ಣಭಟ್ಟರ ಯಾವ ಕವನವೂ ಇಂಥಾ ಒಳಗಿನ ಸ್ಫೂರ್ತಿಯ ಪ್ರೇರಣೆಯಿಂದ ಬರೆದಹಾಗೆ ಕಾಣುವುದಿಲ್ಲ. ಮನಸ್ಸಿಗೆ ನಾಟುವಂಥ ಗದ್ಯಶೈಲಿಯಲ್ಲಿ ಬರೆಯುವ ಶಕ್ತಿಯನ್ನು ಪಡೆದಿರುವ ಲೇಖಕರು ಪದ್ಯಗಳನ್ನು ಬರೆಯುವ ಗೋಜಿಗೇಕೆ ಹೋಗಬೇಕು? ಅದನ್ನು ಬಿಟ್ಟು ಇನ್ನೂ ಹೆಚ್ಚಾಗಿ ಗದ್ಯದಲ್ಲಿ ಬರೆಯುವುದು ಒಳ್ಳೆಯದಾಗಿ ಕಾಣುತ್ತದೆ. ಬಿ. ಎಸ್. ರಾಮರಾವ್

---

೫. **ಹಗಲುಗನಸುಗಳು.**—ಲೇಖಕರು: ಶ್ರೀ॥ ಎ. ಎನ್. ಮೂರ್ತಿರಾಯರು, ಎಂ.ಎ.; ಪ್ರಕಾಶಕರು: ಕರ್ನಾಟಕ ಸಂಘ, ಶಿವಮೊಗ್ಗ; ಕ್ರೌನ್ ಅ. ಪ. ಪುಟ: ೯೦; ಬೆಲೆ:

ಈ ಸಣ್ಣ ಪುಸ್ತಕದಲ್ಲಿ ಹಿಂದೆಯೇ ಬೇರೆ ಬೇರೆ ಪತ್ರಿಕೆಗಳಲ್ಲಿ ಅಚ್ಚಾದ ಏಳು ಪ್ರಬಂಧಗಳಿವೆ. ಸುಸಂಸ್ಕೃತರೂ, ವಿದ್ಯಾವಿನೀತರೂ, ಪ್ರತಿಭಾಶಾಲಿಗಳೂ ಆದ ಸ್ನೇಹಿತರೊಡನೆ 'ಹರಟೆ ಹೊಡೆ'ಯುತ್ತಿದ್ದರೆ ಯಾವ ಅನುಭವವಾಗುತ್ತದೆಯೋ ಅದೇ ಅನುಭವ ಈ ಪುಸ್ತಕವನ್ನು ಓದುವುದರಿಂದ ಉಂಟಾಗುತ್ತದೆ. ಪ್ರಬಂಧಗಳ ವಿಷಯಗಳೆಲ್ಲಾ ಎಲ್ಲರಿಗೂ ಪರಿಚಯವಾಗಿರುವವೇ. ಆದರೆ ಅವುಗಳನ್ನು ನೋಡುವ ದೃಷ್ಟಿ, ಚಿತ್ರಿಸುವ ರೀತಿ, ಸಾಮಾನ್ಯವಾದ ಅನುಭವದಿಂದ ಅಸಾಮಾನ್ಯವಾದ ಭಾವಕಲ್ಪನೆ—ಇವು ಶ್ರೀ॥ ಮೂರ್ತಿರಾಯರಿಗೆ ಸೇರಿವೆ.

ಪ್ರಬಂಧಗಳು ನಿತ್ಯಜೀವನದಲ್ಲಿ ನೋಡಬಹುದಾದ ಬೇರೆಬೇರೆ ವಿಷಯಗಳನ್ನು ಕುರಿತಿದ್ದರೂ ಅವುಗಳಲ್ಲಿ 'ಪ್ರೇಮ' ವಿಷಯವಾದುವೇ ಹೆಚ್ಚು. ತರುಣದಂಪತಿಗಳ ಸರಳ ಪ್ರೇಮದ ವಿಮಲಚಿತ್ರ ಎಲ್ಲಕ್ಕೂ ಹಿನ್ನೆಲೆಯಾಗಿ ನಿಂತಿದೆ. ಎಲ್ಲಕ್ಕೂ ಲಲಿತೆ ನಾಯಕಿ ಎನ್ನಬಹುದು. ಹಿಂದೂ ಸಮಾಜದ ಕಟ್ಟಿನಲ್ಲಿ ತಿಳಿಯೂ ಸಹಜವೂ ನಯವೂ ಆದ ಪ್ರೇಮಕ್ಕೆ ಎಡೆಯಿಲ್ಲವೆನ್ನುವವರು ಈ ಪುಸ್ತಕವನ್ನು ಓದಬೇಕು.

ಶ್ರೀ॥ ಮೂರ್ತಿರಾಯರ ಶೈಲಿ ವಿಷಯಕ್ಕೆ ತಕ್ಕಂತಿದೆ. ಭಾವಕ್ಕೆ ತಕ್ಕಂತೆ ಏರುತ್ತದೆ, ಇಳಿಯುತ್ತದೆ. ಗಂಭೀರವಾದ ಸನ್ನಿವೇಶಕ್ಕೆ ಗಂಭೀರ, ಹಾಸ್ಯಕ್ಕೆ ಹಗುರ, ಕತೆ ಹೇಳುವಾಗ ಸರಳ. ಅವರ 'ತುರುಫ್ ಎಲೆ' ಎಂದರೆ ಪ್ರೇಮಸನ್ನಿವೇಶಗಳನ್ನು ಕೆಲವೇ ಮಾತಿನಿಂದ ಸೂಚಿಸಿ, ಓದುವವರು ತಮ್ಮ ಪ್ರತಿಭೆಗೆ ತಕ್ಕಂತೆ ಚಿತ್ರಕಟ್ಟಿಕೊಳ್ಳುವುದಕ್ಕೆ ಬಿಟ್ಟುಬಿಡುವುದು. ಅದರ ಸವಿ ಓದಿದರೇ ಗೊತ್ತು.

ಇಂಥ ಸಾಹಿತ್ಯ ನಮ್ಮ ಭಾಷೆಯಲ್ಲಿ ಹೆಚ್ಚು ಹೆಚ್ಚಾಗಿ ಬೆಳೆಯಲಿ.

ಬಿ. ಎಸ್. ರಾಮರಾವ್

---

೬. **ದಿನಚರಿ ಧ್ಯಾನ ಅಥವಾ ಸದ್ಭಾವ ರತ್ನಾಕರ.**—ಲೇಖಕರು : ಶ್ರೀ॥ ಡಿ. ಆರ್. ಚೆನ್ನೇಗೌಡರು (ಚೆನ್ನಿಗರಾಯ); ಪ್ರಕಾಶಕರು : ಶ್ರೀರಾಮಕೃಷ್ಣ ಪುಸ್ತಕ ಭಂಡಾರ, ಬಸವನಗುಡಿ, ಬೆಂಗಳೂರು ; ಕ್ರೌನ್ ಅ. ಪ. ಪುಟ : ೨೦೦; ಬೆಲೆ : ರೂ. ೧–೮–೦.

ಮಹಾಪುರುಷರ ಗ್ರಂಥಗಳನ್ನು ಓದುವಾಗ ಧ್ಯಾನಕ್ಕೆ ಯೋಗ್ಯವೆಂದು ಕಂಡ ವಾಕ್ಯಗಳನ್ನು ಸಂಗ್ರಹಿಸಿ, ಜನವರಿಯಿಂದ ಡಿಸೆಂಬರ್ ಕೊನೆಯವರೆಗೂ ದಿನಕ್ಕೊಂದು ಭಾಗವನ್ನು ಧ್ಯಾನಮಾಡುವುದಕ್ಕೆ ಅನುಕೂಲವಾಗುವಹಾಗೆ ೩೬೫ ಉತ್ತಮ ವಚನಗಳನ್ನು ಈ ಪುಸ್ತಕದಲ್ಲಿ ಅಡಕಮಾಡಿದ್ದಾರೆ. ಶ್ರುತಿ, ಸ್ಮೃತಿ, ವೇದ, ರಾಮಾಯಣ, ಬೈಬಲ್, ಭಾಗವತ, ಕೊರಾನ್, ಗೀತೆ ಇವುಗಳಿಂದಲೂ, ಬುದ್ಧದೇವ, ಶಂಕರಾಚಾರ್ಯ, ರಾಮಕೃಷ್ಣ ಪರಮಹಂಸ, ಥಾಮಸ್ ಎ. ಕೆಂಪಿಸ್, ಮಹಾತ್ಮ ಗಾಂಧಿ, ಟಾಲ್‌ಸ್ಟಾಯ್, ವಿವೇಕಾನಂದ, ಕಾರ್ಲೈಲ್ ಮತ್ತು ಇನ್ನೂ ಅನೇಕ ಮಹಾಪುರುಷರ ಕೃತಿಗಳಿಂದಲೂ ವಚನಗಳನ್ನು ಶ್ರೀ॥ ಚೆನ್ನೇಗೌಡರು ಬಹಳ ವಿವೇಚನೆಯಿಂದ ಆರಿಸಿದ್ದಾರೆ. ಪುಸ್ತಕದ ಯಾವ ಪುಟವನ್ನು ತೆಗೆದರೂ ಮನಸ್ಸನ್ನು ನೇರವಾಗಿ ಹೊಗುವ ಉತ್ತಮ ಭಾವಗಳು ಸಿಕ್ಕುತ್ತವೆ.

ಗ್ರಂಥಕರ್ತರು ಅಚ್ಚುಮಾಡಿಸಿರುವ ಕ್ರಮದಲ್ಲಿಯೇ ದಿನಕ್ಕೊಂದರಂತೆ ಈ ವಚನಗಳನ್ನು ಧ್ಯಾನಮಾಡುವುದು ಮನಸ್ಸಿಗೆ ಒಪ್ಪಲೂ ಆರದು. ಹಾಗೆ ಧ್ಯಾನಮಾಡುವುದರಿಂದ ಮನಸ್ಸಿನ ಮೇಲೆ ಉತ್ತಮವಾದ ಪರಿಣಾಮವೂ ಆಗಲಾರದು. ಆದರೆ ಎಂಥಾ ಸಮಯದಲ್ಲೂ ಓದುವವರ ಮನೋವೃತ್ತಿಗೆ ಅನುಗುಣವಾದ ಉದಾತ್ತಭಾವವುಳ್ಳ ವಾಕ್ಯ ಈ ಪುಸ್ತಕದಲ್ಲಿ ಸಿಕ್ಕುತ್ತದೆ. ಅದನ್ನು ಓದಿದರೆ ಮನಸ್ಸಿಗೆ ಶಾಂತಿಯೂ ಸಮಾಧಾನವೂ ದೊರೆಯುತ್ತವೆ.

ಕೇವಲ ದಿನಕ್ಕೊಂದರಂತೆ ಜೋಡಿಸುವುದು ಒಂದು ರೀತಿ ; ವಾಕ್ಯಗಳ ಅರ್ಥವನ್ನೂ ಸಂದರ್ಭವನ್ನೂ ಅನುಸರಿಸಿ ವಿಂಗಡಿಸುವುದು ಇನ್ನೊಂದು ರೀತಿ. ಈ ಎರಡನೆಯ ಮಾರ್ಗವನ್ನು ಅನುಸರಿಸಿ ಮತತತ್ವ, ದೇವರ ಸ್ವರೂಪ, ಪ್ರಾರ್ಥನೆಯ ಅರ್ಥ, ಸಂಯಮ, ನಡತೆ, ಸಂಪತ್ತೆಂದರೇನು, ಗೃಹಸ್ಥಾಶ್ರಮ ಧರ್ಮ ಮುಂತಾದ ಬೇರೆಬೇರೆ ಅಧ್ಯಾಯಗಳಲ್ಲಿ ಆಯಾ ವಚನಗಳನ್ನು ಸೇರಿಸಿದ್ದರೆ ಒಂದೊಂದು ವಿಷಯವಾಗಿಯೂ ನಾನಾ ಮಹಾಪುರುಷರ ಅಭಿಪ್ರಾಯಗಳು ಹೇಗಿವೆ ಎಂಬುದು ತಿಳಿಯುತ್ತಿತ್ತು. ಓದುವವರೂ ತಮ್ಮ ಮನೋವೃತ್ತಿಗೆ ತಕ್ಕ ಅಧ್ಯಾಯವನ್ನು ತೆಗೆದು ಓದಿ, ಧ್ಯಾನಮಾಡಲು ಅನುಕೂಲವಾಗುತ್ತಿತ್ತು.

ಬಿ. ಎನ್. ರಾಮರಾವ್

---

೭. **ಭಗವಾನ್ ಮಹಾವೀರ.**—ಬರೆದವರು: ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರು ; ಪ್ರಕಾಶಕರು : ಗ್ರಂಥಕರ್ತರು ; ಕ್ರೌನ್ ಅ. ಪ. ಪುಟ ೩೧ ; ಬೆಲೆ : ೪ ಆಣೆ.

ಪ್ರಾಕೃತ ಸಾಹಿತ್ಯಸೌಂದರ್ಯದ, ಅದರಲ್ಲಿಯೂ ಪಾಲಿ ಸಾಹಿತ್ಯಸೌಂದರ್ಯದ, ಆಸ್ವಾದವನ್ನು ಕನ್ನಡಿಗರಿಗೆ ದೊರಕಿಸಿಕೊಡಬೇಕೆಂದು ಪರಿಶ್ರಮಪಡುತ್ತಿರುವ ಶ್ರೀ॥ ಜಿ. ಪಿ. ರಾಜರತ್ನಂ ಅವರು ಜೈನ ಪುರಾಣಗಳನ್ನು ಓದಬೇಕೆಂಬ ಅಭಿಲಾಷೆಯುಳ್ಳ ಜೈನೇತರರಿಗೆ ನೆರವಾಗಬೇಕೆಂದು ಈ ಪುಸ್ತಕವನ್ನು ಬರೆದಿದ್ದಾರೆ. ಇದರಲ್ಲಿ ಇನ್ನೂ ಒಂದು ಉದ್ದೇಶ ಸಾರ್ಥಕವಾಗಿದೆ. ನಿಜಸಾಹಿತಿಗಳು ಜಾತಿ–ಮತಗಳ ಬಗ್ಗೆ ಸಹಿಷ್ಣುಗಳಾಗಿರುತ್ತಾರೆ; ಅವರಲ್ಲಿ ಮತಮತಾಂತರಗಳ ಬಗ್ಗೆ ಅನಾದರವಿಲ್ಲ. ತೀರ್ಥಂಕರರೂ, ಬುದ್ಧನೂ, ಶಂಕರಾಚಾರ್ಯರೂ, ರಾಮಾನುಜಾಚಾರ್ಯರೂ, ಬಸವಣ್ಣನವರೂ, ಮಧ್ವಾಚಾರ್ಯರೂ ಅಷ್ಟೇ ಪ್ರಭಾವಶಾಲಿಗಳೆಂದು ಅವರ ಭಾವನೆ. ತೀರ್ಥಂಕರರು ಸಮವಸರಣದಲ್ಲಿ ಧರ್ಮೋಪದೇಶ ಮಾಡಿದುದನ್ನು ಓದುತ್ತಿರುವಾಗ ಅವರು ಆ ಧರ್ಮದಲ್ಲಿ ತಾದಾತ್ಮ್ಯಗೊಳ್ಳುತ್ತಿರುವಂತೆ ಬಸವಣ್ಣನವರ ವಚನಗಳನ್ನೋದುವಾಗ ಷಟ್ಸ್ಥಲಸಿದ್ಧಾಂತದಲ್ಲಿ ತನ್ಮಯರಾಗುವರು ಎಂಬ ಅವರ ಮನೋವೃತ್ತಿಯನ್ನು ಈ ಚಿಕ್ಕ ಹೊತ್ತಗೆಯ ಮೂಲಕ ಓದುಗರ ನಿದರ್ಶನಕ್ಕೆ ತಂದುಕೊಟ್ಟಿದ್ದಾರೆ.

ಆರಂಭದಲ್ಲಿ ತೀರ್ಥಂಕರರ ಭವಾವಳಿ, ಪಂಚಕಲ್ಯಾಣಗಳು, ಇಪ್ಪತ್ತುನಾಲ್ಕು ತೀರ್ಥಂಕರರು, ಗರ್ಭಾವತಾರದಲ್ಲಿ ಷೋಡಶ ಸ್ವಪ್ನಗಳು ಮುಂತಾದ ವಿಷಯಗಳನ್ನು ಸಂಕ್ಷೇಪವಾಗಿಯೂ, ಎಲ್ಲ ತೀರ್ಥಂಕರರನ್ನೂ ಅನ್ವಯಿಸುವಂತೆ ಬಹು ಮಟ್ಟಿಗೆ ವ್ಯಾಪಕವಾಗಿಯೂ ಹೇಳಿದ್ದಾರೆ. ಆ ತರುವಾಯ ಮಹಾವೀರಸ್ವಾಮಿಯ ಜನ್ಮಕಲ್ಯಾಣ, ಪರಿನಿಷ್ಕ್ರಮಣಕಲ್ಯಾಣ, ತಪಸ್ಸು, ಕೇವಲಜ್ಞಾನಕಲ್ಯಾಣ, ಸಮವಸರಣ, ಗೌತಮ ಗಣಧರ, ಮೋಕ್ಷಕಲ್ಯಾಣ ಮುಂತಾದ ವಿಷಯಗಳು ಯಥಾವತ್ತಾಗಿ ಬಂದಿವೆ. ಈ ವಿಷಯಗಳು ಉಳಿದ ತೀರ್ಥಂಕರರ ಚರಿತ್ರೆಗಳಿಗೆ ಸಾಮಾನ್ಯವಾಗಿವೆ.

ಪಾರಿಭಾಷಿಕಶಬ್ದ ಮತ್ತು ತತ್ವಭಿನ್ನತೆ—ಇವೆರಡರ ಮೂಲಕ ಬಹು ಗಡುಚಾಗಿರುವ ಜೈನಪುರಾಣಗಳನ್ನು ಓದುವುದು ಕಷ್ಟವಾಗಿತ್ತು. ಈ ಪುಸ್ತಕದ ಸಹಾಯದಿಂದ ತೀರ್ಥಂಕರರ ಚರಿತ್ರೆಗಳು ಇದೇ ರೂಪದವಾಗಿರಬೇಕು. ಆ ಪುರಾಣಗಳು ಮತ್ತೆ ಮತ್ತೆ ಅವೇ ವಿಷಯಗಳನ್ನು ಒತ್ತಿ ಹೇಳುತ್ತಿರುವುದರಿಂದ ಅವುಗಳ ಸ್ವರೂಪ ಇದೇ ಮಾದರಿಯಂತಿರಬೇಕು ಎಂಬ ಕಲ್ಪನೆ ಹೊಳೆಯುವಂತೆ, ಈ ಪುಟ್ಟ ಹೊತ್ತಗೆಯನ್ನು ರಚಿಸಿರುವರು. ಇದು ಜೈನೇತರರಿಗೆ ಬಹು ಮಟ್ಟಿಗೆ ಉಪಯುಕ್ತವಾಗಬೇಕೆಂದು ಪಾರಿಭಾಷಿಕಶಬ್ದಗಳನ್ನು ತೀರ ಕಡಮೆ ಉಪಯೋಗಿಸಿದಂತೆ ಗ್ರಂಥಕಾರರು ಪ್ರವೇಶದಲ್ಲಿ ತಾವೇ ಹೇಳಿದ್ದಾರೆ. ಇಂತಹ ಪುಸ್ತಕದ ಆವಶ್ಯಕತೆ ಬಹಳವಾಗಿದ್ದಿತು. ಆ ಕೊರತೆಯನ್ನು ಶ್ರೀ॥ ರಾಜರತ್ನಂ ಅವರು ತುಂಬಿಕೊಟ್ಟಿದ್ದಾರೆ. ಈ ರೀತಿಯಾಗಿ ಉಪಯುಕ್ತಕಾರ್ಯಗಳನ್ನು ಕೈಕೊಂಡು ಕೊನೆಗಾಣಿಸುತ್ತಿರುವ ಶ್ರೀ॥ ರಾಜರತ್ನಂ ಅವರನ್ನು ಅಂತಃಕರಣಪೂರ್ವಕವಾಗಿ ಅಭಿನಂದಿಸುವೆವು.

ಗ್ರಂಥದಲ್ಲಿ ಕೆಲವು ದೋಷಗಳಿರುವುದೂ ಉಚಿತವೆಂದು ತೋರುತ್ತದೆ. ದೋಷಗಳಿರದಿದ್ದರೆ ವಿಮರ್ಶಕನು ಅದನ್ನು ಆರಂಭದಿಂದ ಅಂತ್ಯದವರೆಗೆ ಕೊಂಡಾಡಿದಂತಾಗುತ್ತದೆ. ಮೈಸೂರು, ಮದ್ರಾಸು ಪ್ರಾಂತಗಳಲ್ಲಿ ಪ್ರಕಟವಾಗುತ್ತಿರುವ ಗ್ರಂಥಗಳಲ್ಲಿ ಕಂಡುಬರುವ ಸಾಮಾನ್ಯದೋಷವೆಂದರೆ ಸಮಸ್ತಪದಗಳನ್ನು ಬಿಡಿಬಿಡಿಯಾಗಿ ಬರೆಯುವುದು. ಆ ದೋಷ ಇಲ್ಲಿಯೂ ಕಂಡುಬರುತ್ತಿದೆ. ಉದಾ:

ಕೇವಲ ಜ್ಞಾನ ಕಲ್ಯಾಣ (ಪುಟ ೮), ಪಶ್ಚಿಮ ತೀರ್ಥಂಕರ ಮಹಾವೀರ ಸ್ವಾಮಿ (ಪುಟ ೧೦), ಅನೇಕ ದೇವ ಮನುಷ್ಯರು (ಪುಟ ೨೨).—ಇವುಗಳನ್ನು ಕೂಡಿಸಿ ಬರೆದರೆ ವ್ಯಾಕರಣನಿಯಮಗಳನ್ನು ಅನುಸರಿಸಿದಂತಾಗುತ್ತದೆ. ಸಮಸ್ತಪದಗಳನ್ನು ಕೂಡಿಸಿ ಬರೆದ ಉದಾಹರಣೆಗಳಿವೆ. ಉದಾ: ಗರ್ಭಕಲ್ಯಾಣ (ಪುಟ ೭), ಋಷಭಸ್ವಾಮಿ (ಪುಟ ೧೦), ಪ್ರಖ್ಯಾತಜ್ಞಾತವಂಶೀಯನೂ (ಪುಟ. ೧೪), ಪ್ರಿಯಕಾರಿಣೀದೇವಿ (ಪುಟ ೧೫), ಕೇವಲಜ್ಞಾನೋತ್ಪತ್ತಿಯಿಂದ (ಪುಟ ೨೫).

ಅಪ್ಪಣೆಯ ಮೇರೆ (ಪುಟ ೭), ಹೋಗವೊಲ್ಲರು (ಪುಟ ೨೦), ಪಡಕೊಂಡನು (ಪುಟ ೨೨), ಈ ಪ್ರಯೋಗಗಳು ಸಾಧುವಲ್ಲ. ಪುನರ್ಮುದ್ರಣದ ಕಾಲಕ್ಕೆ ಇವುಗಳನ್ನು ಸರಿಪಡಿಸಬಹುದೆಂದು ಕೋರುತ್ತೇವೆ.

ಒಟ್ಟಾರೆ ಹೊತ್ತಗೆ ಚಿಕ್ಕದಾದರೂ ವಿದ್ಯಾರ್ಥಿಗಳಿಗೂ, ಇತರರಿಗೂ, ಜೈನರಿಗೂ, ಜೈನೇತರರಿಗೂ ಸರಿಯಾಗಿ ಉಪಯುಕ್ತವಾಗಿದೆಯೆಂದು ಅಭಿಮಾನದಿಂದ ಹೇಳುತ್ತೇವೆ.

ಕೆ. ಜಿ. ಕುಂದಣಗಾರ್

---

೮. **ಶ್ರೀ ಗೋಮಟೇಶ್ವರ.**—ಬರೆದವರು: ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರು; ಪ್ರಕಾಶಕರು: ಗ್ರಂಥಕರ್ತರು; ಕ್ರೌನ್ ಅ. ಪ. ಪುಟ ೬೦; ಬೆಲೆ: ೧ ರೂ.

ಗೋಮಟೇಶ್ವರ ಪ್ರತಿಮೆ ಪ್ರಪಂಚದಲ್ಲಿಯೇ "ಉದಾತ್ತವಾಗಿ ಮನವೊಪ್ಪಿಸುವ" ಮೂರ್ತಿಯೆಂದು ಹೆಸರುವಾಸಿಯಾಗಿ ಕರ್ನಾಟಕದಲ್ಲಿ ಸುಮಾರು ಒಂದು ಸಾವಿರ ವರುಷಗಳವರೆಗೆ ಪ್ರತಿಮಾಯೋಗದಿಂದ ಶ್ರವಣಬೆಳುಗೊಳದ ದೊಡ್ಡಬೆಟ್ಟದಮೇಲೆ ನಿಂತಿದ್ದರೂ

ಅದರ ಮಹತ್ವವನ್ನು ತೋರಿಸಿಕೊಡುವ ಸ್ವತಂತ್ರಪುಸ್ತಕಗಳು ಕನ್ನಡದಲ್ಲಿರಲಿಲ್ಲ. ಪಾಶ್ಚಿಮಾತ್ಯರು ಅದರ ವೈಭವವನ್ನು ತೋರಿಸಿಕೊಟ್ಟಮೇಲೆ ನಮ್ಮ ಕಣ್ಣುಗಳು ತೆರೆಯುತ್ತಲಿವೆ. ಕನ್ನಡಿಗರ ಉದಾಸೀನತೆಯ ಉದಾಹರಣೆ ಇದೊಂದು. ಶ್ರೀ॥ ರಾಜರತ್ನಂರವರು ಕನ್ನಡಿಗರಿಗೆ ಬಂದಿರುವ ಬರುತ್ತಿರುವ ಕುಂದನ್ನು ಪ್ರಸ್ತುತ ಪುಸ್ತಕ ಬರೆದು ಕೆಲಮಟ್ಟಿಗೆ ದೂರ ಮಾಡಿದ್ದಾರೆ.

ಶ್ರೀ॥ ರಾಜರತ್ನಂ ಅವರು ಮೂರ್ತಿಯ ಸೌಂದರ್ಯಕ್ಕೆ ಮೆಚ್ಚಿ ಅದರಲ್ಲಿಯೇ ತಲ್ಲೀನರಾಗಿಹೋಗಿರುವುದರಿಂದ ತಮ್ಮ ಸೌಂದರ್ಯಾನುಭವವನ್ನು ಆರಂಭದಲ್ಲಿ ಮೂರ್ತಿಯ ವರ್ಣನೆಯಲ್ಲಿ ವ್ಯಕ್ತಗೊಳಿಸಿದ್ದಾರೆ. ಆ ಮಾತುಗಳು ಅಂತಃಕರಣದ ಆಳದಿಂದ ಹೊರ ಬಿದ್ದಿರುವುದರಿಂದ ನೇರವಾಗಿ ಅಂತಃಕರಣವನ್ನು ಮುಟ್ಟಿ, ಆನಂದದ ತಂತುಗಳನ್ನು ಮಿಾಟಿ, ಮೆಚ್ಚುಗೆಯಿಂದ ತಲೆದೂಗುವಂತೆ ಮಾಡುತ್ತವೆ.

ಆ ತರುವಾಯ ಗೋಮಟೇಶ್ವರನ – ಬಾಹುಬಲಿ ಸ್ವಾಮಿಯ – ಚರಿತ್ರೆಯನ್ನು ಆದಿಪಂಪನ 'ಆದಿಪುರಾಣ'ದಿಂದ ಸಂಗ್ರಹಿಸಿದ್ದಾರೆ. ಆದರೆ ಅಲ್ಲಿ ಅದು ಪ್ರಮಾಣ ಮಿಕ್ಕು ಹೋಗಿದೆ. 'ಜೈನ ತೀರ್ಥಂಕರರು' ಎಂಬ ಪ್ರಕರಣವನ್ನು ಎತ್ತಿದುದು ಅಪ್ರಸ್ತುತವಾಗಿದೆ. 'ಮೊದಲ ತೀರ್ಥಂಕರ ಋಷಭನಾಥ, ಮೊದಲ ಚಕ್ರೇಶ್ವರ ಭರತ' ಎಂಬ ಪ್ರಕರಣಗಳನ್ನು ಇನ್ನೂ ಸಂಕ್ಷೇಪವಾಗಿ ಹೇಳುತ್ತ 'ಪುರುಷೂನು ಬಾಹುಬಲಿ' ಎಂಬ ಪ್ರಕರಣದಲ್ಲಿ ಅವುಗಳನ್ನು ಒಳಗುಮಾಡಿಕೊಂಡಿದ್ದರೆ ಒಳಿತಾಗುತ್ತಿತ್ತು. ಆದಿನಾಥ ಆದಿ ತೀರ್ಥಂಕರ, ಭರತ ಆದಿಚಕ್ರವರ್ತಿ ಎಂಬ ಕಲ್ಪನೆಯಿಂದ ಅವರ ಚರಿತ್ರೆಗಳನ್ನು ತುಸು ವಿಸ್ತಾರವಾಗಿ ಬರೆದಿರುವರೋ ಏನೋ !

ಬಾಹುಬಲಿ ವಿಗ್ರಹದ ಮಹಿಮೆಯನ್ನು ಗ್ರಂಥಕಾರರು ಬಹು ಸ್ಪಷ್ಟವಾಗಿ ತೋರಿಸಿದ್ದಾರೆ. ಭರತ ಹಿರಿಯ ಅಣ್ಣನಾದರೂ ಮುಂಬರುವ ತೀರ್ಥಂಕರರ ಪ್ರತಿಮೆಗಳನ್ನು ಪಂಚರತ್ನಗಳಿಂದ ಮಾಡಿಸಿ ಪ್ರತಿಷ್ಠಿಸುವಾಗ ಶ್ರೀ ಬಾಹುಬಲಿಸ್ವಾಮಿಯವರ ಮಹಿಮೆಗೆ ಮೆಚ್ಚಿ ತಲೆದೂಗಿ, ೫೨೫ ಬಿಲ್ಲು ಪ್ರಮಾಣದ ಅವರ ಪ್ರತಿಮೆಯನ್ನು (ತಮ್ಮನೆಂದು ಅಭಿಮಾನದಿಂದಲ್ಲ) ಮಾಡಿಸಿ ಪೊದನಪುರದಲ್ಲಿ ನಿಲ್ಲಿಸಿದನು. ಆದರೆ ಕುಕ್ಕುಟಸರ್ಪಗಳು ಅಲ್ಲಿ ಅನೇಕಾನೇಕವಾಗಿ ತುಂಬಿಕೊಂಡುದರಿಂದ, ಆ ವಿಗ್ರಹದರ್ಶನ ಯಾರಿಗೂ ಆಗುವಂತಿರಲಿಲ್ಲ. ಚಾವುಂಡರಾಯನಿಗೂ ಅದು ಸಾಧ್ಯವಾಗಲಿಲ್ಲ. ಆದುದರಿಂದ ಆತನು ಈ ಮೂರ್ತಿಯನ್ನು ಮಾಡಿಸಿದನು. ಅಂತೆಯೇ ಚಾಮುಂಡರಾಯನ ಚರಿತ್ರೆ ಮುಂದೆ ಕ್ರಮಪ್ರಾಪ್ತ.

೪೯ನೆಯ ಪುಟದಲ್ಲಿ "ಚಾವುಂಡರಾಯ ಕನ್ನಡದಲ್ಲಿ ಮಾತ್ರವಲ್ಲ. ಸಂಸ್ಕೃತ ಪ್ರಾಕೃತಗಳಲ್ಲಿಯೂ ಪಂಡಿತನಾಗಿದ್ದನು. 'ಚಾವುಂಡರಾಯ ಪುರಾಣ'ದಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳುವ ಸಂಸ್ಕೃತ ಪ್ರಾಕೃತಗಳಲ್ಲಿ ಬರೆದ ಶ್ಲೋಕಗಳೇ ಇದಕ್ಕೆ ಸಾಕ್ಷಿ" ಎಂದು ಹೇಳಿದೆ. ಈ ಅಭಿಪ್ರಾಯವನ್ನು ಕರ್ನಾಟಕ ಸಾಹಿತ್ಯ ಪರಿಷತ್ತು ಪ್ರಕಟಿಸಿದ "ಚಾವುಂಡರಾಯ ಪುರಾಣಂ (ಆದಿ ಪುರಾಣಂ)" ಎಂಬ ಪುಸ್ತಕದ ಪೀಠಿಕೆಯಲ್ಲಿ ಶ್ರೀ॥ ಆರ್. ರಘುನಾಥರಾಯರು ವ್ಯಕ್ತಗೊಳಿಸಿದ್ದಾರೆ. ಚಾವುಂಡರಾಯ ಆಯಾ ಭಾಷೆಗಳಲ್ಲಿ ಪ್ರವೀಣನಾಗಿದ್ದಿರಬಹುದು. ಆದರೆ 'ಚಾವುಂಡರಾಯ ಪುರಾಣ'ದೊಳಗೆ ಉದಹರಿಸಿದ ಕೆಲವು ಸಂಸ್ಕೃತ ಪದ್ಯಗಳು ಮತ್ತು ಪ್ರಾಕೃತ ಗಾಹೆಗಳು ಅನ್ಯಕರ್ತೃಕಗಳೆಂದು ಈಗ ಸಿದ್ಧವಾಗಿದೆ.

ಗೋಮಟೇಶ್ವರನಿಗೆ ಸಂಬಂಧಿಸಿದ ಕೆಲವು ಕತೆಗಳನ್ನು ಸಮಯಾನುಸಾರವಾಗಿ ಶ್ರೀ॥ ರಾಜರತ್ನಂ ಅವರು ಹೇಳಿದ್ದಾರೆ. ಆ ಮುಂದೆ 'ಗೊಮ್ಮಟ' ಶಬ್ದದ ವ್ಯುತ್ಪತ್ತಿಯನ್ನು ಹೇಳಿದುದು ಸಮಂಜಸವಾಗಿಲ್ಲೆಂದು ತೋರುತ್ತದೆ. 'ಮನ್ಮಥ' ಶಬ್ದ ಪ್ರಾಕೃತದ ಮುಖಾಂತರವಾಗಿ ಕನ್ನಡದಲ್ಲಿ ಬರುವಾಗ 'ಗುಮ್ಮಹ, ಗುಮ್ಮಟ, ಗೊಮ್ಮಟ, ಗೋಮಟ' ಎಂದಾಯಿತೆಂದು ಮೊದಲು ಶ್ರೀ॥ ಎಂ. ಗೋವಿಂದ ಪೈ ಅವರು ಸೂಚಿಸಿದರು. ಅದನ್ನೇ ಗ್ರಂಥಕಾರರು ಅನುಸರಿಸಿದ್ದಾರೆ. ಆದರೆ ಪ್ರಾಕೃತದಲ್ಲಿ 'ಮನ್ಮಥ'

ಶಬ್ದವು 'ವಮ್ಮಹ' ಎಂದಾಗುತ್ತಿದೆಯೆಂದು ಪ್ರಾಕೃತಪಂಡಿತರು ಹೇಳುತ್ತಾರೆ. ಅದು 'ಗುಮ್ಮಹ' ಎಂದಾಗುವುದಕ್ಕೆ ಆಧಾರವೇ ಇಲ್ಲವೆಂದು ಅವರ ಅಭಿಪ್ರಾಯ.

ಮೂರನೆಯ ಭಾಗದಲ್ಲಿ ಶ್ವೇತಾಂಬರ ಜೈನಸಂಪ್ರದಾಯದೊಳಗಿನ ಬಾಹುಬಲಿಯ ಕತೆ ಕೊಡಲಾಗಿದೆ. ಅದು ಉಚಿತವೇ. ಯಾಕೆಂದರೆ, ಜೈನಸಮಾಜದಲ್ಲಿ ಶ್ವೇತಾಂಬರ, ದಿಗಂಬರ ಎಂಬ ಎರಡು ಮುಖ್ಯ ಪಂಗಡಗಳಿವೆ. ಅವರವರ ಆಚಾರ ವಿಚಾರ, ಧಾರ್ಮಿಕದೃಷ್ಟಿ ಇವುಗಳನ್ನು ಅನುಸರಿಸಿ ಪುರಾಣಗಳಲ್ಲಿ ಮಾಡಿಕೊಂಡ ವ್ಯತ್ಯಾಸಗಳನ್ನು ಕಂಡುಹಿಡಿಯುವುದು ಯೋಗ್ಯವೆಂದೇ ಹೇಳಬೇಕಾಗುತ್ತದೆ. ಒಟ್ಟಾರೆ ಈ ಗ್ರಂಥವನ್ನು ಬರೆದು ಕನ್ನಡಿಗರಿಗೆ ಒಳನೋಟವುಂಟಾಗುವಂತೆ ಪ್ರಯತ್ನಿಸಿದ ಬಗ್ಗೆ ಶ್ರೀ॥ ರಾಜರತ್ನಂ ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

ಭಾಷೆಯ ದೃಷ್ಟಿಯಿಂದ ಅಲ್ಲಲ್ಲಿ ಕೆಲವು ದೋಷಗಳು ಕಂಡುಬರುತ್ತವೆ. ಅವುಗಳನ್ನು ಕೆಳಗೆ ತೋರಿಸಲಾಗಿದೆ:

'ಕೇವಲಜ್ಞಾನ ಕಲ್ಯಾಣ (ಪುಟ ೧೮), ಪರಿನಿರ್ವಾಣ ಮಹೋತ್ಸವ (ಪುಟ ೧೯), ಗಂಗಕುಲ ಚೂಡಾಮಣಿ (ಪುಟ ೪೫), ಬ್ರಹ್ಮಕ್ಷತ್ರ ಕುಲ (ಪುಟ ೪೬), ಸಮರ ಧುರಂಧರ (ಪುಟ ೪೭), ಸಮ್ಯಕ್ತ್ವ ರತ್ನಾಕರ (ಪುಟ ೪೮), ದೇವ ಮಾನವರ (ಪುಟ ೮೦)' ಮುಂತಾದ ಸಮಸ್ತಪದಗಳನ್ನು ಬಿಡಿಬಿಡಿಯಾಗಿ ಬರೆದಿರುವುದು ಸಾಧುವಲ್ಲ. ಸಮಸ್ತ ಪದಗಳನ್ನು ಕೂಡಿಸಿ ಬರೆದ ಉದಾಹರಣೆಗಳೂ ಅಲ್ಲಲ್ಲಿ ಕಂಡುಬರುತ್ತವೆ. ಉದಾ: ಗಂಗಕುಲಾಬ್ಧಿಚಂದ್ರ (ಪುಟ ೪೫), ಬ್ರಹ್ಮಕ್ಷತ್ರಕುಲದಲ್ಲಿ (ಪುಟ ೪೬), ವೀರಮಾರ್ತಾಂಡ (ಪುಟ ೪೭).

'ಬರೆದನಂತರ (ಪುಟ ೧೧), ಸಮುದ್ರಗಳವರೆಗಾಗಲಿ (ಪುಟ ೩೭), ದಿಗ್ವಿಜಯದನಂತರ (ಪುಟ ೮೫)' ಎಂಬ ಪದಪ್ರಯೋಗಗಳಲ್ಲಿ ಅಚ್ಚಿನದೋಷವು ಕಂಡುಬರುತ್ತದೆ.

'ದಿಗ್ವಿಜಯವನ್ನು ಕೈಕೊಂಡನು. ಕೈಕೊಂಡು ಮಾಗಧ..........ಅರಸುಗಳನ್ನು ತನಗೆ ಎರಗಿಸಿ......' 'ದೇವತೆಗಳು ಭೀತರಾದರು. ಭೀತರಾಗಿ ಲೋಕವನ್ನು ನಾಶಮಾಡುವ......' ಎಂಬ ಪ್ರಯೋಗಗಳಲ್ಲಿ ಶಬ್ದಸಾಮಗ್ರಿಯ ಶೈಥಿಲ್ಯ ಕಂಡುಬರುತ್ತದೆ.

'ಅದುಮಬಲ್ಲನೇ (ಪುಟ ೭೬), ಕರುಬುವವನಲ್ಲ (ಪುಟ ೮೪), ನಾಚುಗೆಯಾಯಿತು (ಪುಟ ೮೭)' ಮುಂತಾದ ಪ್ರಯೋಗಗಳು ಉತ್ತರ ಕರ್ನಾಟಕದವರಿಗೆ ಅಪರಿಚಿತವಾಗಿವೆ.

ಪುನರ್ಮುದ್ರಣದಲ್ಲಿ ಈ ದೋಷಗಳನ್ನು ದೂರಮಾಡಬೇಕೆಂದು ಗ್ರಂಥಕಾರರಿಗೆ ನಮ್ಮ ಸೂಚನೆ.

ಕೆ. ಜಿ. ಕುಂದಣಗಾರ್

---

೯. **ಭಾರತೀಯ ನವಜನ್ಮ.**—ಪ್ರಕಾಶಕರು: ಅರವಿಂದ ಗ್ರಂಥಮಾಲೆ, ಹಲಸಂಗಿ, ಬಿಜಾಪುರ ಜಿಲ್ಲಾ; ಸಂಪಾದಕರು: ಶ್ರೀ॥ 'ಮಧುರಚೆನ್ನ' ಅವರು; ಮುದ್ರಣಕಾರರು: 'ದಿ ಬಾಗಲಕೋಟ ಪ್ರಿಂಟಿಂಗ್ ವರ್ಕ್ಸ್'; ಕ್ರಾನ್ ೮೪ ಪುಟ; ಬೆಲೆ: ೧೨ ಆಣೆ.

ಈ ಗ್ರಂಥವನ್ನು ಕನ್ನಡದಲ್ಲಿ ಅನುವಾದಿಸಿದವರು ಕನ್ನಡದೇವಿಯ ಭಕ್ತರೊಳಗೆ ಒಬ್ಬರಾದ ಶ್ರೀ॥ ದತ್ತರಾವ್ ಬೇಂದ್ರೆಯವರು. ಅಮೌಲ್ಯವಾದ ಮೂಲಲೇಖನೆಂದರೆ ಮಹರ್ಷಿ ಅರವಿಂದರದೇ. ಶ್ರೀ॥ ಕಜಿನ್ಸ್ ಮಹಾಶಯರು ಇಂಗ್ಲಿಷಿನಲ್ಲಿ ಬರೆದ 'ರಿನೇಯ್ಸಾನ್ಸ್ ಇನ್ ಇಂಡಿಯಾ' ಎಂಬ ಪುಸ್ತಕದ ವಿಮರ್ಶೆಯಾಗಿ ಶ್ರೀ॥ ಅರವಿಂದರು ಇಂಗ್ಲಿಷ್‌ನಲ್ಲಿ ಆ ಮೂಲಲೇಖವನ್ನು ಬರೆದರಂತೆ. ಇಡೀ ಭರತಖಂಡದ ಚೈತನ್ಯರೂಪವಾದ ಸಂಸ್ಕೃತಿಯೇ ತಮ್ಮ ಜೀವನವಾಗಿರುವ ಮಹರ್ಷಿಗಳ ಅಂತರಂಗದಿಂದ ಕೈಗೆ ಹರಿದು ರೂಪುಗೊಂಡ ಅತ್ಯಮೌಲ್ಯ ಲೇಖವಾಗಿರಬೇಕದು. ಅದನ್ನು ಓದಿ ಮನನಮಾಡಿಕೊಳ್ಳುವ ಭಾಗ್ಯವೋ ಪುಣ್ಯವೋ ನಮಗಾಗಲಿಲ್ಲ. ಹಾಗೆಂದಮೇಲೆ, ಪ್ರಕೃತದ ಅನುವಾದವನ್ನು ಸರಿಯಾಗಿ ವಿಮರ್ಶಿಸಲು ನಾವು ಹೇಗೆ ಸಮರ್ಥರಾಗಬೇಕು? ವಾಸ್ತವಿಕಸ್ಥಿತಿಯನ್ನು

ಸೂಚಿಸಿದಮೇಲೆ ಇದು ಔಪಚಾರಿಕವಲ್ಲ ಎನ್ನಬೇಕಾಗಿಲ್ಲ. ಆದರೆ ನಮ್ಮ ಶ್ರೀ॥ ಬೇಂದ್ರೆಯವರೆಂದರೆ ಆದಿಯಿಂದಲೂ ತಾತ್ವಿಕ ಚಿತ್ತವೃತ್ತಿಯವರು; ಶ್ರೀ॥ ಅರವಿಂದರ ಸ್ವತಂತ್ರವಾದ ತಾತ್ವಿಕ ವಿಚಾರ ಪ್ರವಾಹ ತರಂಗದಲ್ಲಿ ಮುಳುಗಿ ಮೂಡುತ್ತಾ ಇರುವವರು; ಕನ್ನಡ ನಾಡಿನೊಳಗಿನ ಆಧುನಿಕ ಕವಿಪ್ರಮುಖರೊಳಗೂ ಒಬ್ಬರು. ಆ ವಿಶ್ವಾಸದಿಂದ ಶ್ರೀ॥ ಬೇಂದ್ರೆಯವರ ಈ ಅನುವಾದ ಆ ಮೂಲಲೇಖದ ಸಾರವನ್ನು ಸಂಪೂರ್ಣವಾಗಿ ಒಳಕೊಂಡಿರಲೇಬೇಕೆಂದು ನಂಬುತ್ತೇವೆ. ಶ್ರೀ॥ ಬೇಂದ್ರೆಯವರೇ ತಮ್ಮ ಮುನ್ನುಡಿಯ ೨ನೆಯ ಪುಟದಲ್ಲಿ ಮಹರ್ಷಿಗಳವರ ಶೈಲಿಯ ಮಹಿಮೆ, ವಾಕ್ಯರಚನಾಚಾತುರ್ಯಗಳನ್ನು ಸೂಚಿಸಿ, ಅವುಗಳ ಬಿಗಿತದಿಂದಾಗಿ ಅವರ ಭಾವನಾತತ್ವವನ್ನು ಸವಿವುದೆಂದರೆ ಸಾಮಾನ್ಯವಲ್ಲ ಎನ್ನುತ್ತಾರೆ. ಪ್ರಕೃತದ ಅನುವಾದ ಆ ಮಾತು ಔಪಚಾರಿಕವಲ್ಲವೆಂಬುದನ್ನೂ ಅನುವಾದಕರ ಸಂಸ್ಕೃತಿಯ ಹುರುಳನ್ನೂ ಸೂಚಿಸುತ್ತಿದೆ.

ಇಂಥ ಗ್ರಂಥಗಳ ಅನುವಾದದಲ್ಲಿ ಭಾಷೆ ಕ್ಲಿಷ್ಟವಾಯಿತು, ವಾಕ್ಯ ದೀರ್ಘವಾಯಿತು ಎಂದು ಮೊದಲಾಗಿ ಆರೋಪಗಳನ್ನು ಹೊರಿಸಲಿಕ್ಕೆ ತಕ್ಕಂತೆ ಕನ್ನಡನುಡಿ ಸಿದ್ಧವಾಗಿಲ್ಲ ಎನ್ನಬೇಕಾಗಿದೆ. ಈ ಲೇಖವನ್ನು ನಾವು ಸರಿಯಾಗಿ ಓದಿದ್ದೇವೆ. ಅದರಿಂದ ವಿಮರ್ಶೆಯಾಗಿ ಸಂಪಾದಕ ಮತ್ತು ಪ್ರಕಾಶಕರ ಪ್ರಸ್ತಾವನೆಯೊಳಗಿನ ಈ ಮಾತನ್ನೇ ಒಂದಿಷ್ಟು ಒದವಿಸಿ ಆಡುತ್ತೇವೆ.—'ಅದೇನೆಂದರೆ, ಕನ್ನಡನಾಡಿನಲ್ಲಿ ಅರವಿಂದರ ತತ್ವಗಳನ್ನು ಉಂಡು ಉಸುರಿ, ಬಿತ್ತಿ ಬೆಳೆದ ಮೊದಲಿಗರೆಂದರೆ ಗೆಳೆಯ ಬೇಂದ್ರೆಯವರೇ. ಹೀಗಿರುವುದರಿಂದ ಕನ್ನಡತಾಯಿಗೆ ಶ್ರೀ॥ ಅರವಿಂದರ ಮೊಟ್ಟಮೊದಲಿನ ಅವಳ ಈ ಮುದ್ದುಕುವರನಿಂದಲೇ ಅರ್ಪಿತವಾಗ ತಕ್ಕದ್ದು ನ್ಯಾಯವಲ್ಲವೇ?'. ಇದು ಪ್ರಸ್ತಾವನಾಕಾರರ ಮಾತೇ. '....ನ್ಯಾಯ' ಎಂದು ನಿಲ್ಲಿಸಿ, ಆ ಮೇಲಿನ 'ಅಲ್ಲವೇ?' ಎಂಬ ಪ್ರಶ್ನೆಯನ್ನು ಕಿತ್ತುಹಾಕುವುದು ಮಾತ್ರ ನಮ್ಮ ಬದಲಾವಣೆ.

ಮುಳಿಯ ತಿಮ್ಮಪ್ಪಯ್ಯ

---

೧೦–೧೧. **ಭಕ್ತಿ ಸುಮಾಂಜಲಿ ಮತ್ತು ಪೂಮಾಲೆ.**—ಲೇಖಕರು: ಪಂಡಿತ ಶ್ರೀ॥ ಪರಿಮಿ ಪದ್ಮನಾಭಯ್ಯನವರು; ಮುದ್ರಣಕಾರರು: ಸುಬೋಧ ಮುದ್ರಣಾಲಯ, ಬೆಂಗಳೂರು; ಕ್ರೌನ್ ಆಕಾರ ಪುಟ: ೧೮, ೨೩; ಬೆಲೆ: ೪ ಆಣೆ.

ಕವಿಗಳು ಮುನ್ನುಡಿಯಲ್ಲಿ ಸೂಚಿಸುವಂತೆ, ಈ ಎರಡು ಕಾವ್ಯಗಳೊಳಗೆ ಒಂದು ಇಪ್ಪತ್ತೆರಡು ವರ್ಷಗಳ ಹಿಂದೆ 'ಶ್ರೀ ಕೃಷ್ಣಸ್ತುತಿ ಮುಕ್ತಾವಳಿ'ಯಲ್ಲಿ ಪ್ರಕಾಶವಾದ 'ಭಕ್ತಿಸುಮಾಂಜಲಿ'; ಇನ್ನೊಂದು ಕಳೆದ ವರ್ಷ 'ಸುಬೋಧ' ಮಾಸಪತ್ರಿಕೆಯಲ್ಲಿ ಪ್ರಕಟವಾದ 'ಪೂಮಾಲೆ.'

ಇದರಲ್ಲಿ ಸಂಸ್ಕೃತದಿಂದ ಅನುವಾದಿಸಿದ ಮತ್ತು ಸ್ವತಂತ್ರವಾದ ನೀತಿಬೋಧಕ-ಭಕ್ತಿಪೋಷಕ ಪದ್ಯಗಳಿವೆ. ಮೊದಲಿನ 'ಸುಮಾಂಜಲಿ' ಎಲ್ಲವೂ ಅಕ್ಷರಗಣಬದ್ಧ ವೃತ್ತಗಳಿಂದ ತುಂಬಿದುದಾದರೆ, ಮತ್ತಿನ 'ಪೂಮಾಲೆ'ಯೊಳಗೆ ಹಾಡುಗಳೂ ಇವೆ. ಶೈಲಿ ಸರಳವಾಗಿದೆ. 'ಸುಮಾಂಜಲಿ'ಯೊಳಗೆ, ಕಡೆಯ 'ತಿದ್ದುಪಡಿ'ಯಲ್ಲಿಯೂ ತೋರದ ಕೆಲವು ಗಣಾಕ್ಷರ ದೋಷಗಳು ತೋರುತ್ತಿವೆ:—

(೧) ಪದ್ಯ ೪೬, ಹಂತಿ ೩.—'ಬಿಟ್ಟು ನಿರಂತರಂ ಸುಕೃತ ದುಷ್ಕೃತದಾಫಲಮಂ ಪರಮಾತ್ಮನೊಳ್' ಅಂತ್ಯ ಪದ 'ಪರಾತ್ಮನೊಳ್' ಎಂದಾಗದಿದ್ದರೆ ಅಕ್ಷರವೊಂದು ಹೆಚ್ಚಾಗುವುದು.

(೨) ಪ. ೫೯, ಹಂತಿ ೨.—'ಜ್ವಲಸದ್ಭಕ್ತಿಸಿತಾಂತಮಾಗಳುಮ ದೊಂದಿರ್ಕೆ ಮಚ್ಚಿತ್ತದೊಳ್'. ಇಲ್ಲಿ 'ಮದೊಂದೊಂದಿರ್ಕೆ' ಎಂದಿರದಿದ್ದರೆ ಒಂದು ಗುರ್ವಕ್ಷರ ಕಡಮೆ.

(೩) ಪ. ೬೫, ಹಂತಿ ೨.—'ಪರನಾರೀಸ್ತನದದ್ರಿಯೊಳ್ ಕುಣಿಗುಮಂತೆತ್ತೆಲುಂ ಪಾರುಗುಂ' ಇಲ್ಲಿ 'ಮಂತೆತ್ತೆತ್ತಲುಂ' ಎಂದಾಗದಿದ್ದರೆ ಏಕ ಲಘು ನ್ಯೂನತೆ.

(೪) ಪ. ೭೩, ಹಂತಿ ೪.—'ಸ್ಫುಟರೂಪಂಬೆತ್ತು ದೈತ್ಯಾಧಮನ ಪಿಳಿದು – ಪ್ರಹ್ಲಾದನಂತಾದ ದೇವಾ' 'ಪಿಳಿದು – ಪ್ರ....' ಎಂಬಲ್ಲಿ ಹಿಂದಿನ ವಿವೇಚಕಿಗಳಿಗೆ ಶಿಥಿಲವಾಗಿ ತೋರಬಹುದು.

(೫) ಪ. ೮, ಹಂತಿ ೪.—'ವಿದ್ಯಾಯುಕ್ತನೆನಿಪ್ಪವೊಲ್ ಕರುಣೆಸೆನ್ನಂ ವಾಸುದೇವಾಪ್ಪಯಾ'. ಇಲ್ಲಿ 'ವಿದ್ಯಾಸಂಯುಕ್ತ....' ಎಂದಾಗದಿದ್ದರೆ ಒಂದು ಗುರ್ವಕ್ಷರಕ್ಕೆ ನ್ಯೂನತೆಯಾಗುತ್ತಿದೆ:

ಆದರೆ ನಾವೆಂದಂತೆ ತಿದ್ದಿದರೆ ಪ್ರಾಸಾಕ್ಷರಭಂಗವೂ ತಲೆದೋರುವುದು. ಆದರಿಂದ ಈ ದೋಷವನ್ನು ಕವಿಗಳೇ ಮಾರ್ಪಡಿಸಿಕೊಳ್ಳಬೇಕೆಂದು ಸೂಚನೆ.

(೬) ಪ. ೪೦, ಪಂಕ್ತಿ ೩.— 'ಅರ್ಥಿಪ್ಪಂತು ದಶಂಗಳಂ' ಎಂಬಲ್ಲಿ 'ದಂಶಂಗಳಂ' ಎಂದು ತಿದ್ದಿ ಮಾರ್ಪಡಿಸಿಕೊಳ್ಳಬೇಕು.

ಇದಲ್ಲದೆ ಶಾಬ್ದಿಕ ಆರ್ಥಿಕಗಳಾದ ಕೆಲವು ನ್ಯೂನತೆಗಳೂ ತೋರುತ್ತಿವೆ ಎನ್ನಬಹುದು. ಪದ್ಯ ೯ ಪಂಕ್ತಿಯೊಂದರಲ್ಲಿ 'ದುರ್ದುರಿತ ವಿಶೋಪ..' ಎಂದಿದೆ. ಪದ್ಯ ೨೯, ಪಂಕ್ತಿ ೪, 'ಸುನಿಗಮಾಂತ' ಎಂದಿದೆ. 'ದುರ್–ಸು' ಮೊದಲಾದ ವ್ಯರ್ಥೋಪಸರ್ಗಗಳೆಂದರೆ, ಕಾವ್ಯಕ್ಕೆ ಉಪಸರ್ಗಗಳೇ ಸರಿ. ಅವುಗಳಿಗೆ ಸರಿಯಾದ 'ಕರಂ–ವಲಂ' ಮೊದಲಾದ ಕನ್ನಡದ ನಿರರ್ಥಕ ಪದಗಳು ಅಲ್ಲಲ್ಲಿ ತೋರುತ್ತಿವೆ. ಅವಾದರೂ ಹಾಗಿರಲಿ; ಪದ್ಯ ೭೩, ಪಂಕ್ತಿ ೧ರಲ್ಲಿ 'ಒಸೆಯೆಯ ಪೆಂಡಿರಂ ಪುಡುಕೆ ಸಾಸವಗೈದೆನೆನುತ್ತ ವಾಯುಜಂಗೆ' ಎಂದಿದೆ. ವಾಯುಜನು 'ಪೆಂಡಿರಂ ಪುಡುಕೆ ಸಾಸವ'ನ್ನೆಸಗಿದ್ದನೆ? ಹೆಂಡತಿಯಾದ ಸೀತೆಯೊಬ್ಬಳನ್ನೇ ಹುಡುಕಲು ವಾಯುಜನೆಸಗಿದ ಸಾಹಸವೇನೋ ನಮಗೆ ಗೊತ್ತಿದೆ. ಈ ಬಹುತ್ವದಿಂದ ಶ್ರೀರಾಮನ 'ಅನುಕೂಲ ನಾಯಕತ್ವ'ದಲ್ಲಿಯೂ ಕೆಸರನ್ನೆರಚಿದಂತಾಗದೆ? ಪದ್ಯ ೮೩, ಪಂಕ್ತಿ ೧ರಲ್ಲಿ 'ಉರಗನನುರ್ಜಿ ಕೊಂದು ಮಡುವಿಂಗುರಿ ಸೇವ್ಯತೆಯಿತ್ತೆ' ಎಂದೂ ತೋರುತ್ತಿದೆ. ಶ್ರೀ ಕೃಷ್ಣನು ಕಾಳಿಯನೆಂಬ ಉರಗನನ್ನು ಶಿಕ್ಷಿಸಿ ಬೋಧಿಸಿ ಬೇರೆ ಕಡೆಗೆ ಕಳುಹಿಸಿದ ಕತೆ ಮಾತ್ರವೇ ನಮಗೆ ಗೊತ್ತಿರುವುದು.

ಹೀಗೆ ಕೆಲವು ನ್ಯೂನತೆ–ದೋಷಗಳು ತೋರಿದರೂ ಕಾವ್ಯದೊಳಗೆ ಒಂದು ಕಾಂತಿ ಇದೆ ಎನ್ನಬಹುದು. ಅಂತೂ ಅದು ಜನಾದರಕ್ಕೆ ಪಾತ್ರವಾಗಿದೆ.

ಮುಳಿಯ ತಿಮ್ಮಪ್ಪಯ್ಯ

---

೧೨. **ಗುರುದಕ್ಷಿಣೆ.**—ಲೇಖಕರು: ಮಲ್ಲೇಶ್ವರಂ ಹೈಸ್ಕೂಲಿನ ಸೀನಿಯರ್ ಕನ್ನಡ ಪಂಡಿತರಾದ ಮಾದನಹಳ್ಳಿ ಶ್ರೀ॥ ಚೆನ್ನಕೃಷ್ಣಯ್ಯನವರು; ಮುದ್ರಣಕಾರರು: ಜಿ. ಬಿ. ಸುಬ್ಬಯ್ಯ ಅಂಡ್ ಸನ್ಸ್, ಡೆಮ್ಮಿ ಆಕಾರದ ಪುಟ ೫೪; ಬೆಲೆ: ೮ ಆಣೆ.

ಇದಕ್ಕೆ 'ಮಾತೃಭಾಷಾನುಪೂರಣಂ' ಎಂಬ ಇನ್ನೊಂದು ಹೆಸರೂ ಇದೆ. ಕೃತಿಯ ಆದಿಯಲ್ಲಿ ವಿಷಯಸೂಚಿ, ಪ್ರಸ್ತಾವನೆ, ಮುನ್ನುಡಿಯ ತಳಹದಿ, ವಾಚಕರಿಗೆ ಸೂಚನೆ ಎಂಬವುಗಳಿವೆ. ಪುಸ್ತಕದ ಆದಿಯಲ್ಲಿ ಲೇಖಕರು ಷಡಕ್ಷರದೇವನ

'ತಿಳಿದಸಿತನನುಭವಿಸಿ ನೆರೆ। ತಿಳಿಯದುದಂ ತಿಳಿದರಿಂದೆ ತಿಳಿವುದು ಕೃತಿಯೊಳ್
ಪೊಳೆವರ್ಥಮನದನೆ ಖಳಂ। ತಿಳಿಯದೆ ತಾಂ ಪಳಿಯೆ ಪಳಿಗೆ ಪಕ್ಕಾಗಿರನೇ'

ಎಂಬ ಪದ್ಯವನ್ನು ಎತ್ತಿಕೊಟ್ಟಿದ್ದಾರೆ. ಈ ಪದ್ಯ ಎರಡೆಡೆಯಲ್ಲಿ ತೋರುತ್ತಿದೆ. ಇದನ್ನು ನೋಡಿದೊಡನೆ ವಿಮರ್ಶಿಸುವುದಾದರೂ ಹೇಗೆ ಎಂಬ ಸಂಶಯವಾಯಿತು. '.... ತಿಳಿಯದೆ' ವಿಮರ್ಶೆಗೆ ತೊಡಗಿ 'ಪಳಿ'ದು ತಾನೇ 'ಪಳಿಗೆ ಪಕ್ಕಾ'ಗುವುದಷ್ಟೇ ಅಲ್ಲ; ವೃಥಾ 'ಖಳ'ನಾಗುವುದೂ ಯಾಕೆ? ಎಂಬುದೇ ಆ ಸಂಶಯಕ್ಕೆ ಕಾರಣ. ಆದರೆ 'ಸಾಹಿತ್ಯ ಪರಿಷತ್ತಿನ ವಿಮರ್ಶೆಗಾಗಿ ಗ್ರಂಥಕರ್ತನಿಂದ ಅರ್ಪಿಸಲ್ಪಟ್ಟಿದೆ' ಎಂದು ಒಳಗೆ ಕೈಬರಹದಲ್ಲಿದೆ. ಪರಿಷತ್ತಿನವರ ಅಪ್ಪಣೆಯೂ ಇದೆ. ಆದರಿಂದ ಈ ಒಂದು ಮಾತು.

ಇದಕ್ಕೆ 'ಗುರುದಕ್ಷಿಣೆ–ಮಾತೃಭಾಷಾನುಪೂರಣ' ಎಂಬ ಹೆಸರುಗಳು ಹೇಗೆ ಸಾರ್ಥಕಗಳು ಎಂಬುದನ್ನು ಲೇಖಕರು ಪ್ರಯತ್ನಪಟ್ಟು ವಿಸ್ತರಿಸಿದ್ದಾರೆ. ಅದನ್ನು ತಿಳಿಯಬೇಕಾದರೆ ವಾಚಕರು ಅವರ ಪ್ರಸ್ತಾವನೆಯನ್ನೇ ಓದಿಕೊಳ್ಳಬೇಕು. ಯಾಕೆಂದರೆ, ಪುಸ್ತಕದೊಳಗೆ ಅಡಕವಾಗಿರುವ ವಿಷಯವೆಂದರೆ, 'ಸನಾತನಧರ್ಮದ ಉಪನ್ಯಾಸ', ಅವರು ರಚಿಸಿದ ಕೆಲವು ಸಂಸ್ಕೃತ–ಕನ್ನಡ ಪದ್ಯಗಳು, ಲೇಖಕರು ಯಾತ್ರೆ ಮಾಡಿದಾಗ ಬರೆದ 'ಕಾಶೀಯಾತ್ರಾ ಪ್ರಕರಣ ಮಾರ್ಗಕ್ರಮಣ ಪಟ್ಟಿಕೆ' ಎಂಬ ಡೈರಿ, ಇನ್ನು ಕೆಲವು ಸ್ತುತಿಪದ್ಯಗಳು. ಇವುಗಳೊಳಗೆ ಕೆಲವು ಚಿತ್ರಕವಿತೆಗಳೂ ಇವೆ. ಇವುಗಳಿಂದ, ಈ ಕೃತಿಗೆ ಅವರಿತ್ತ ಹೆಸರುಗಳು ಹೇಗೆ ಸಾರ್ಥಕಗಳೆಂಬುದು ನಮಗಿನ್ನೂ ಮಂದಟ್ಟಾಗಲಿಲ್ಲ. ಇವರ ಉಪನ್ಯಾಸದೊಳಗೆ ಆದಿಯಲ್ಲಿ ದೇವತಾಪ್ರಾರ್ಥನಾರೂಪ ಪದ್ಯಗಳೇ ಹಲವು. ಆಮೇಲೆ

ಸುಜನಸ್ತುತಿ, ಅಶ್ವತ್ಥವೃಕ್ಷಸ್ತುತಿ ಮೊದಲಾದುವುಗಳೂ ಕೆಲವು ಪುಟಗಳಲ್ಲಿವೆ. ಆಮೇಲೆ ಕರ್ತವ್ಯಗಳಲ್ಲಿ ಮೂರು ಭೇದಗಳನ್ನು ಹೇಳಿ, ಆಧಾರಗಳೊಡನೆ ಅವುಗಳನ್ನು ವಿವರಿಸುತ್ತಾರೆ. ಇವರ ಮಾತಿನ ರೀತಿಯನ್ನರಿತುಕೊಳ್ಳಲಿಕ್ಕಾಗಿ ಈಯೊಂದು ದೃಷ್ಟಾಂತ:

'ಮನುಷ್ಯರಲ್ಲಿ ಹುಲಿಯ ವೇಷದ ಕತ್ತೆಗಳಂತಹರೂ, ಕತ್ತೆಯ ವೇಷದ ಹುಲಿಗಳಂತಹರೂ, ಸ್ವಭಾವವಾದ ಹುಲಿಗಳಂತೆಯೇ ಇರುವವರೂ, ಸ್ವಭಾವವಾದ ಕತ್ತೆಗಳಂತೆಯೇ ಇರುವವರೂ ಇರುವುದರಿಂದ ಹೊರಗಣ ವೇಷ, ವಸ್ತ್ರ, ನಟನೆ, ಚಟುವಟಿಕೆಯ ಮಾತು, ಮೌನ, ಇವುಗಳಿಂದಲೇ ಒಬ್ಬರ ಯೋಗ್ಯತೆಯನ್ನು ನಿರ್ಣಯಿಸಿಕೊಳ್ಳಬಾರದು.' (ಪುಟ ೧೫)

ಇವರ ಪದ್ಯರಚನಾವೈಖರಿಯನ್ನು ಊಹಿಸಿಕೊಳ್ಳಲಿಕ್ಕಾಗಿ ಈ ದೃಷ್ಟಾಂತ:

ಕಂದ॥ 'ಕೇ ಸುಬ್ಬರಾಯರಭಿನವ
ಭೂಸುರವಿಭು ವಿದುರಪುರದಮುಲ್ಲಾ ಪರ್ ಸಿ।
ರ್ದೋಷಿಗಳಾರ್ಯರ್ಸುಪೋಷಿಗ
ಳೈಸ್ಯೆ ಬುಧತೋಷಣಾನುಭಾಷಣರೆಸೆವರ್॥' (ಪು. ೩)

ಮುಳಿಯ ತಿಮ್ಮಪ್ಪಯ್ಯ

---

೧೪. ಮಹಾವೀರನ ಮಾತು ಕತೆ.—(ಶ್ವೇತಾಂಬರ ಸಿದ್ಧಾಂತದಿಂದ) ಲೇಖಕರು: ಶ್ರೀಮಾನ್ ಜಿ.ಪಿ. ರಾಜರತ್ನಂ, ಎಂ.ಎ. ಅವರು; ಪ್ರಕಾಶಕರು: ಶಾಕ್ಯ ಸಾಹಿತ್ಯ ಮಂಟಪ, ಮಲ್ಲೇಶ್ವರ, ಬೆಂಗಳೂರು; ಡೆಮ್ಮಿ ಅಷ್ಟಪತ್ರ ಪುಟ ೧೩೨; ಬೆಲೆ: ರೂ. ೧-೮-೦.

ಜೈನರ ವಾಙ್ಮಯ ವಿಶಾಲವಾಗಿದ್ದು ಹಲವು ಭಾಷೆಗಳಲ್ಲಿ ಉಪಲಬ್ಧವಾಗಿದೆ. ಕನ್ನಡಿಗರಿಗೆ ವಿಶೇಷತಃ ದಿಗಂಬರ ಜೈನರ ವಾಙ್ಮಯವೇ ಪರಿಚಿತವಾಗಿರುತ್ತದೆ. ಯಾಕೆಂದರೆ ಕನ್ನಡನಾಡಿನ ಕೂಡ ನಿಕಟಸಂಬಂಧ ಬಂದುದು ದಿಗಂಬರ ಜೈನರದು. ಶ್ವೇತಾಂಬರರ ಆಗಮಗಳೆಂಬ ಪ್ರಾಚೀನ ಗ್ರಂಥಗಳು ಪ್ರಾಕೃತಭಾಷೆಯಾದ ಅರ್ಧಮಾಗಧಿಯಲ್ಲಿ ರಚಿತವಾಗಿವೆ. ಭಾರತೀಯ ಭಾಷಾಶಾಸ್ತ್ರದ ದೃಷ್ಟಿಯಿಂದಲೂ, ಜೈನ ತತ್ತ್ವಜ್ಞಾನದ ದೃಷ್ಟಿಯಿಂದಲೂ, ಆಯಾ ಕಾಲದ ಸಮಾಜದ ಇತಿಹಾಸದ ದೃಷ್ಟಿಯಿಂದಲೂ ಈ ಗ್ರಂಥಗಳು ಒಳ್ಳೇ ಮಹತ್ತ್ವವುಳ್ಳವಾಗಿವೆ. ದಿಗಂಬರರು ಈ ಗ್ರಂಥಗಳನ್ನು ಒಪ್ಪುವದಿಲ್ಲ, ಆದರೂ ಪ್ರಮುಖ ದಿಗಂಬರ ಗ್ರಂಥಗಳಲ್ಲಿಯೂ, ಇವುಗಳಲ್ಲಿಯೂ ಎಷ್ಟೋ ಮಹತ್ತ್ವದ ಸಾಮ್ಯಸ್ಥಾನಗಳಿವೆ.

ಭಗವಾನ್ ಮಹಾವೀರ ಭಾರತೀಯ ಮಹಾವಿಭೂತಿಗಳಲ್ಲಿ ಒಬ್ಬನು: ಜೈನರಿಗಂತೂ ಚರಮ ತೀರ್ಥಂಕರನು. ಆತನ ಜೀವನವಿಷಯದ ಕೆಲವು ಸಂಗತಿಗಳು ಮೇಲಿನ ಆಗಮದ ಆಚಾರಾಂಗ, ಕಲ್ಪಸೂತ್ರ ಮೊದಲಾದ ಗ್ರಂಥಗಳಲ್ಲಿ ದೊರೆಯುತ್ತವೆ. ಆ ಮಹತ್ತ್ವದ ಭಾಗಗಳನ್ನೇ ಶ್ರೀಯುತ ರಾಜರತ್ನಂ ಅವರು ಈ ಹೊತ್ತಗೆಯಲ್ಲಿ ಕನ್ನಡಿಸಿರುತ್ತಾರೆ ಮತ್ತು ಮುಂದೆ 'ಉತ್ತರಾಧ್ಯಯನ'ವೆಂಬ ಗ್ರಂಥದಿಂದ ಕೆಲವು ಅಧ್ಯಾಯಗಳನ್ನು ಭಾಷಾಂತರಿಸಿರುತ್ತಾರೆ. 'ಸೂತ್ರಕೃತಾಂಗ'ದಿಂದ ವೀರಸ್ತುತಿಯ ಅಧ್ಯಾಯವನ್ನೂ ಕೊಟ್ಟಿರುತ್ತಾರೆ.

ನನ್ನ ಅರಿಕೆಯ ಮಟ್ಟಿಗೆ ಜೈನಾಗಮ (ಶ್ವೇತಾಂಬರ)ದ ಕನ್ನಡ ಭಾಷಾಂತರವಾದುದು ಇದೇ ಮೊದಲನೆಯ ಪ್ರಯತ್ನ: ಅದರ ಶ್ರೇಯಸ್ಸು ಸುಪ್ರಸಿದ್ಧ ಕನ್ನಡ ಲೇಖಕರಾದ ಶ್ರೀ॥ ರಾಜರತ್ನಂ ಅವರದು. ವೈರಾಗ್ಯರಸಪೂರ್ಣವಾದ ಮತ್ತು ನೀತಿತತ್ತ್ವಗಳನ್ನು ಅರುಹುವ ಅಧ್ಯಾಯಗಳನ್ನೇ ಅವರು ನೋಡಿ ಆರಿಸಿದ್ದಾರೆ ಮತ್ತು ಅವರ ಭಾಷಾಂತರವಾದರೂ ಒಳಿತಾಗಿದೆ.

ಅನುಬಂಧದಲ್ಲಿ ಕೊಟ್ಟಿರುವ 'ಜೈನಧರ್ಮ ಪರಿಚಯ' ಕನ್ನಡಿಗರಿಗೆ ಒಳ್ಳೆಯ ಉಪಯುಕ್ತವಾಗಿದೆ. ಕಿರಿದರಲ್ಲಿ ಹಿರಿದಾದ ಜೈನತತ್ತ್ವಗಳ ರೂಪರೇಖೆ ಅಲ್ಲಿ ದೊರೆಯುತ್ತದೆ.

ಈ ಭಾಗದಲ್ಲಿ ಕೆಲವು ವಾಕ್ಯಗಳು ಮಾತ್ರ ಸಂಶಯಾಸ್ಪದವಾಗಿವೆ. "ಈ ಐದು ತೆರದ ಜ್ಞಾನಗಳಲ್ಲಿ ಮೊದಲ ಮೂರು ಜ್ಞಾನಗಳೂ ಇಂದ್ರಿಯಗಳನ್ನು ಅವಲಂಬಿಸಿರುವದರಿಂದ" (ಪುಟ ೧೦೫) "ಮೀನು ಓಡಿಯಾಡುವುದಕ್ಕೆ ನೀರು ಹೇಗೆ ಅತ್ಯಗತ್ಯವೋ ಪುದ್ಗಲ ದೊಡನೆ ಸೇರಿದ ಜೀವ ಓಡಿಯಾಡುವುದಕ್ಕೆ ಧರ್ಮ ಹಾಗೆ" (ಪುಟ ೧೧೪) ಅಸ್ತಿಕಾಯದ ವ್ಯಾಖ್ಯೆ (ಪುಟ ೧೧೦) "ಉಪಾಸಕರು ಹದಿನಾಲ್ಕು ದಿನಗಳಿಗೊಮ್ಮೆ ಉಪವಾಸ ಮಾಡಬೇಕು. ಇದೇ ಪ್ರೋಷಧ" (ಪುಟ ೧೨೧), ಇತ್ಯಾದಿ.

ಶ್ರೀ॥ ರಾಜರತ್ನಂ ಅವರ ಲೇಖನಶೈಲಿ ಲಲಿತವಾಗಿದೆ ಮತ್ತು ಅವರು ಭಾಷಾಂತರದ ಮೇಲೂ ಒಳ್ಳೆಯ ಕಷ್ಟಪಟ್ಟಿದ್ದಾರೆ. ಕಡೆಯ ಎರಡು ಸೂಚಿಗಳು ಸಂದರ್ಭಕ್ಕೆ ಅವಶ್ಯವಾದ ಸಾಧನಗಳು. ಕನ್ನಡಿಗರು ಈ ಪುಸ್ತಕವನ್ನು ಅಗತ್ಯ ಓದಬೇಕೆಂದು ನಾವು ಕೋರುತ್ತೇವೆ.

ಆ. ನೇ. ಉಪಾಧ್ಯೆ

---

೧೪. **ವೀರಪಥಿಕ.**—ಕವಿಗಳು: ಶ್ರೀ॥ ಪಿ. ಧೂಲಾ ಅವರು; ಪ್ರಕಾಶಕರು: ಅರವಿಂದ ಗ್ರಂಥ ಮಾಲೆ, ಹಲಸಂಗಿ; ಕ್ರೌನ್ ಅ. ಪ. ಪು: ೪೦; ಬೆಲೆ: ೬ ಆಣೆ.

ಇದು ಹಲಸಂಗಿಯ ಅರವಿಂದ ಗ್ರಂಥಮಾಲೆಯ 'ಕಾಣಿಕೆಯ ಕಮಲ'. ಇದರಲ್ಲಿ ಶ್ರೀ॥ ಪಿ. ಧೂಲಾ ಇವರ ಕೆಲವು ಬಿಡಿ ಕವಿತೆಗಳೂ 'ಅರಬ್ಬಿಯದ ಅಭಿಮನ್ಯು' ಎಂಬ ದೊಡ್ಡ ಕಥನ ಕವನವೂ ಸೇರಿವೆ. ಶ್ರೀ॥ ಧೂಲಾ ಅವರ ಪರಿಚಯರೂಪವಾದ ಒಂದು ಮುನ್ನುಡಿಯನ್ನು ಶ್ರೀ॥ 'ಮಧುರ ಚೆನ್ನರೂ' ಇದಕ್ಕೆ ಬರೆದಿರುವರು. 'ಕವಿಕಾಡಹಕ್ಕಿ' ಎಂಬ ಹೆಸರಿನಲ್ಲಿ ಶ್ರೀ॥ ಧೂಲಾ ಇವರ ಸಾಹಿತ್ಯ ಅಲ್ಲಲ್ಲಿ ಪ್ರಕಟವಾಗಿದ್ದರೂ ಈಗ ಹೊರಬಿದ್ದ 'ವೀರಪಥಿಕ'ವೇ ಪುಸ್ತಕರೂಪದಲ್ಲಿ ಅವರ ಮೊದಲ ಪ್ರಕಟನೆ.

ಕನ್ನಡ ಎಂದಿನಿಂದಲೂ ಬಣ್ಣಬಣ್ಣದ ಹಕ್ಕಿಯಂತೆ ವಿವಿಧ ಸಂಸ್ಕೃತಿಗಳ ಆಗರ ವಾಗಿದೆ. ಇಂದೂ ಆ ವೈವಿಧ್ಯ ಹೊರಸೂಸಬೇಕಾಗಿದೆ. ಅದರಲ್ಲಿ ಶ್ರೀ॥ ಧೂಲಾ ಅವರೂ ತಮ್ಮ ಬಣ್ಣವನ್ನು ಬೆರಸುತ್ತಿರುವರು. ಮುಸ್ಲಿಂ ಸಂಸ್ಕೃತಿಯ ಉತ್ತಮಾಂಶಗಳನ್ನು ತಮ್ಮ ಜೀವನದಲ್ಲಿ ತಂದುಕೊಂಡು ಕನ್ನಡಕ್ಕೆ ಸಲ್ಲಿಸುವ ಮನೀಷೆ ಅವರಲ್ಲಿ ಪ್ರಬಲವಾಗಿದೆ. ಅದರ ಫಲವಾಗಿ 'ಅರಬ್ಬಿಯದ ಅಭಿಮನ್ಯು' ಎಂದು ಹೆಸರಿಟ್ಟು ಅವರು 'ವೀರಕಾಸೀಮು'ನ ಚರಿತ್ರ ಕವನವನ್ನು ಬರೆದಿರುವರು. ಇದರ ಶೈಲಿ–ಛಂದಸ್ಸುಗಳಲ್ಲಿ ವೈಷಮ್ಯ, ಶೈಥಿಲ್ಯ ಗಳು ತೋರಿದ್ದರೂ ಒಟ್ಟಿನಲ್ಲಿ ಇದರ ಗತಿಯಲ್ಲಿ ಬೆಡಗಿದೆ. ಕವಿ ದ್ವಿಪದಿಯ ಎರಡೂ ಪ್ರಾಸಗಳನ್ನೂ ಎಷ್ಟೋ ಸಹಜವಾಗಿ ಕಟ್ಟಿರುವನು. ಕವಿಯ ವ್ಯಕ್ತಿತ್ವ ಮುಖ್ಯವಾಗಿ ಈ ಸಂಗ್ರಹದ ಭಾವಗೀತಗಳಲ್ಲಿ ಒಡಮೂಡಿದೆ. ಒಬ್ಬ ಆಧ್ಯಾತ್ಮಿಕ ಸಾಧಕನ ಹಾಗೂ ಸ್ವಪ್ನಜೀವಿಯ ಅನುಭವಗಳು ಈ ಗೀತಗಳಲ್ಲಿ ಅಡಕವಾಗಿವೆ. ಇವುಗಳ ಆರ್ತ ಆಕಾಂಕ್ಷೆ ನಿಸ್ಸಂಶಯವಾದರೂ ಭಾವಗೀತೆಯ ಪುಷ್ಟಿ ಕಾಣಬರುವುದಿಲ್ಲ. ಭಾಷೆ ಅಲ್ಲಲ್ಲಿ ಕುಂಟುತ್ತದೆ. ಅನಾವಶ್ಯಕವಾಗಿ ಒಂದೇ ಅರ್ಥದ ಶಬ್ದಗಳು ತಿರುತಿರುಗಿ ಬಂದಿವೆ. ಸ್ವಪ್ನದಲ್ಲಿ ಹಾಗೂ ಎಚ್ಚರದಲ್ಲಿ ಕಂಡ ಕೆಲವು ದಿವ್ಯ ಅನುಭವಗಳು ಇಲ್ಲಿಯ ಕೆಲವು ಗೀತಗಳಿಗೆ ವಿಶಿಷ್ಟವೈಭವ ವನ್ನು ಕೊಟ್ಟಿವೆ. 'ಅಂತರಾರಾಮು' ಎಂಬ ಕವನ ಈ ಬಗೆಯದು. ಆದರೆ ಇಲ್ಲಿಯೂ ಭಾಷೆಯು ವಾಹಕ ಸಾಕಷ್ಟು ನೆರವಾಗಿಲ್ಲ. ಹಾಗೂ ಅನುಭವದ ಆಳದ ಬಗ್ಗೆ ಕವಿ ಯಾವಾಗಲೂ ಎಚ್ಚರದಿಂದ ಇರಬೇಕೆಂದು ಅರಿಯಬೇಕು.

ಶ್ರೀ॥ ಧೂಲಾ ಇವರು ತಮ್ಮ ಅನುಭವವನ್ನೂ ಕನ್ನಡದ ಅಭ್ಯಾಸವನ್ನೂ ಪರಿಪಾಕಕ್ಕೆ ಒಯ್ದು ಒಳ್ಳೆಯ ಹಾಡುಗಾರರಾಗಲಿ ಎಂದು ನಾವು ಬಯಸುತ್ತೇವೆ.

ರಂ. ಶ್ರೀ. ಮುಗಳಿ

---

**೧೫. ಕಾಡುಮಲ್ಲಿಗೆ.**—ಲೇಖಕರು : ಶ್ರೀ|| ಸಿ. ಕೆ. ನಾಗರಾಜರಾಯರು; ಕ್ರೌನ್ ಅ. ಪ. ಪುಟ ೬೨; ಬೆಲೆ : ೮ ಆಣೆ.

ಇದು ಐದು ಸ್ವತಂತ್ರ ಸಣ್ಣ ಕತೆಗಳ ಸಂಗ್ರಹ. ಇದಕ್ಕೆ ನುರಿತ ಸಾಹಿತಿಗಳಾದ ಶ್ರೀ|| ಸಿ. ಕೆ. ವೆಂಕಟರಾಮಯ್ಯನವರು ಮುನ್ನುಡಿಯನ್ನು ಬರೆದಿರುವರು. ಇಲ್ಲಿಯ ಕತೆಗಳು ಆರಂಭಪ್ರಯತ್ನಗಳಾದರೂ ಇವುಗಳಲ್ಲಿ ಕತೆಗಾರನ ಮೂಲಶಕ್ತಿ ಒಡೆದು ಕಾಣುತ್ತಿದೆ. ಜೀವನದ ದುಃಖ ಈ 'ಕಾಡುಮಲ್ಲಿಗೆ'ಯ ಐದು ಎಸಳುಗಳಲ್ಲಿ ಐದು ಬಗೆಯಾಗಿ ನಿಂತಿರುವುದು. ಸನ್ನಿವೇಶರಚನೆ, ಸಂಕೇತನಿರ್ಮಾಣ, ಸಂವಾದಗಳಲ್ಲಿ ಒಂದು ಹೊಸತನವೂ, ಹುಮ್ಮಸೂ ತೋರಿವೆ. ವಿವಿಧ ಸಮಸ್ಯೆಗಳಿಂದ ತುಂಬಿದ ಇಂದಿನ ಸಮಾಜವನ್ನು ವಿಂಗಡಿಸಿ ತೋರುವುದಕ್ಕೆ ಸಣ್ಣ ಕತೆಯಂಥ ಬೇರೆ ಸಾಧನವಿಲ್ಲ. ಸಣ್ಣ ವಿಷಯವೂ ಕಲಾವಿದನ ದೊಡ್ಡ ಹೃದಯಕ್ಕೆ ತಾಕಿ ಒಂದು ಸುಂದರವಾದ ಸ್ವಯಂಪೂರ್ಣರೂಪವನ್ನು ತಾಳುವುದು. ಇದರಲ್ಲಿ ಸಣ್ಣಕತೆಯ ದೊಡ್ಡಸ್ತಿಕೆಯಿದೆ: ಸಣ್ಣದೂ ದೊಡ್ಡದಾಗಿ ತೋರಬೇಕು. ಈ ದೃಷ್ಟಿಯಿಂದ ನೋಡಿದರೆ 'ಕಾಡುಮಲ್ಲಿಗೆ'ಯೆಂಬ ಮೊದಲ ಕತೆ ಸ್ತುತ್ಯವಾದುದು. ಆದರೆ ಅದರಲ್ಲಿ ಇನ್ನಿಷ್ಟು ಬೆಳೆವಣಿಗೆ ಬೇಕು, ತಾಳ್ಮೆ ತೂಕ ಬೇಕು. ಹೊಲೆಯನನ್ನು ಎತ್ತಿಹಿಡಿಯಲಿಕ್ಕೆ ಹೋಗಿ ಭಾಗವತರನ್ನು ತೀರ ಸುಧಾರಕರನ್ನಾಗಿ ಮಾಡಕೂಡದು. ಸಾವಿನಿಂದಲೇ ದುರಂತಚಿತ್ರ ಪೂರ್ಣವಾಗುವದೆಂಬ ಕಲಾಸಮಯ ಕತೆಯನ್ನು ಅವಸರದಲ್ಲಿ ಕೊನೆಗಾಣಿಸಿದೆ. 'ಇನ್ನೆಲ್ಲಿಯ ರಿಪೇರಿ' ಎಂಬ ಕತೆ ನಿರುದ್ಯೋಗ ಜೀವನದ ದುಃಖಮಯ ಚಿತ್ರ. ಕತೆಯ ರಚನೆಯಲ್ಲಿಯೂ ಕೊನೆಯ ಮಾತುಗಳಲ್ಲಿಯೂ ಆ ಜೀವನದ ಕೊರಗು ಸರಿಯಾಗಿ ಮೂಡಿದೆ. ಆದರೂ ಆಶೆ–ನಿರಾಶೆಗಳ ತೂಗಾಟ ಇನ್ನಿಷ್ಟು ಕ್ರಮಬದ್ಧವಾಗಿ ತೋರಿದ್ದರೆ ಕತೆಗೆ ಕಳೆಯೇರುತ್ತಿತ್ತು. ಉಳಿದ ಕತೆಗಳಲ್ಲಿ ಗುಣಗಳ ಜೊತೆಗೆ ರಚನೆಯ ಸುದೀರ್ಘತೆಯಾಗಲಿ ಅವಸರವಾಗಲಿ ಕೊರತೆಯನ್ನು ಉಂಟುಮಾಡುತ್ತದೆ. ಸಂಭಾಷಣ–ಸ್ವಗತಗಳು ಅಲ್ಲಲ್ಲಿ ಸಣ್ಣ ಕತೆಯ ಅಳತೆ ಮೀರಿ ಬೆಳೆದು ನಿಂತಿವೆ. ಸಂಸ್ಕೃತಪದದೋಷಗಳೂ ಹಣಿಕಿವೆ. ಕತೆಗಾರರು ತಮ್ಮ ಕಲೆಯನ್ನು ಹೆಚ್ಚು ಹೆಚ್ಚಾಗಿ ಬಳೆಯಿಸಿಕೊಂಡು ಕನ್ನಡ ಸಾಹಿತ್ಯಕ್ಕೆ ಮೇಲ್ಮೆ ತರಲೆಂದು ನಾವು ಹಾರೈಸುತ್ತೇವೆ.

ರಂ. ಶ್ರೀ. ಮುಗಳಿ

---

**೧೬. ಪ್ರೇಮಯೋಗಿನಿ.**—ಲೇಖಕರು : ಶ್ರೀ ಸಿ. ಕೆ. ನಾಗರಾಜರಾಯರು, ಬೆಂಗಳೂರು; ಫೂಲ್ಸ್‌ಕ್ಯಾಪ್ ೧/೮ ಆಕಾರದ ಪುಟ ೬೦ ; ಬೆಲೆ : ೪ ಆಣೆ.

ಇತರ ಪ್ರಾಂತಗಳ ಸಾಹಿತ್ಯರತ್ನಗಳನ್ನು ಕನ್ನಡಿಸುವ ಪರಂಪರೆ ಹೊಸಗನ್ನಡದಲ್ಲಿ ಬೆಳೆಯುತ್ತಿದೆ. ಇದು ನಿಜವಾಗಿ ಸುಚಿಹ್ನವೇ. ಆದರೆ ಕನ್ನಡಿಸುವುದಕ್ಕೆ ಎತ್ತಿದ ಕೃತಿಗಳು ಸಾಮಾನ್ಯವಾಗಿ 'ಸಾಹಿತ್ಯರತ್ನ'ಗಳೇ ಇರಬೇಕು. ಈ ವಿಷಯದಲ್ಲಿ ಆಯ್ಕೆಯ ವಿವೇಕ ತಪ್ಪಿದರೆ ಬೆಳೆಯುವ ಕನ್ನಡಕ್ಕೆ ಹೊರಗಿನ ಕೊಳೆಯನ್ನು ಕೂಡಿಸಿದಂತೆ ಆಗಬಹುದು. ಪ್ರಸಿದ್ಧವ್ಯಕ್ತಿಗಳ ಹೆಸರಿನ ಮೇಲಿಂದ ಅವರ ಎಲ್ಲ ಕೃತಿಗಳೂ ಪ್ರಸಿದ್ಧವೆಂದು ತಿಳಿಯಲಿಕ್ಕೆ ಬಾರದು.

ಸದ್ಯದ ಚಿಕ್ಕ ಕಾದಂಬರಿ ಬಂಗಾಲಿಯ ಪ್ರಖ್ಯಾತಲೇಖಕರಾದ ಶ್ರೀ ಶರಚ್ಚಂದ್ರರ 'ಅನುಪಮಕಾ ಪ್ರೇಮ್' ಎಂಬ ಕಾದಂಬರಿಯ ಅನುವಾದವಾಗಿದೆ. ಅನುಪಮೆಯ ಪ್ರೇಮಜೀವನ ಸಮಾಜರೂಢಿಯ ಚಕ್ರದಲ್ಲಿ ಸಿಕ್ಕಿ ತೊಳಲಾಡಿದ ಬಗೆಯೇ ಇದರ ಸಂವಿಧಾನದ ಮೂಲಸೂತ್ರ. ಸಂವಿಧಾನದಲ್ಲಿ ಒಂದು ಕರುಣವಿದ್ದರೂ ಅದಕ್ಕೆ ಹೆಚ್ಚಿನ ಹೊಸ ಕಳೆಯಿಲ್ಲ. ಸ್ವಭಾವಪೋಷಣೆಯಲ್ಲಿ ಸಂವಿಧಾನದ ಕೂಡ ಹೊಂದಿಹೋಗುವ ತಾಳ್ಮೆಯಿಲ್ಲ. ಸುರೇಶನನ್ನು ಕಂಡು ಒಮ್ಮೆಯೂ ಮಾತನಾಡಿಸದ ಅನುಪಮೆ ಅವನ ಮೇಲಿನ ಪ್ರೇಮದಿಂದ ಮಂಚದ ಕಾಲನ್ನೂ ಅಪ್ಪಿಕೊಂಡು ಅರಚುತ್ತಾಳೆ. ಅವಳ ತಂದೆ ಜಗದ್ಬಂಧುಬಾಬು, ಅನುಪಮೆಯ ಮದುವೆಯ ದಿನ ವರನಾದ ಸುರೇಶ

...ಹೋದದ್ದರಿಂದ ಅಂದೇ ಮದುವೆ ನಡೆಯದಿದ್ದರೆ ತನ್ನ ಜಾತಿ ಹೋಗುವುದೆಂದು ಒಬ್ಬ ಮುದುಕನಿಗೆ ಅವಳನ್ನು ಕಟ್ಟುವನು. ಆ ಮುದುಕ ಸತ್ತಮೇಲೆ ಅನುಪಮ ವಿಧವೆ ಯಾಗಲು 'ವಿವಾಹಕ್ಕೂ ಧರ್ಮಕ್ಕೂ ಯಾವ ಸಂಬಂಧವೂ ಇಲ್ಲ' ಎಂದು ಅವಳ ಪುನರ್ವಿವಾಹಕ್ಕೆ ಮನಸ್ಸು ಮಾಡುವನು. ಇವೆಲ್ಲ ಕಥೆಯ ಗುಣಕ್ಕೆ ಕೊರತೆ ತರುವುವು. ...ಟ್ಟನಲ್ಲಿ 'ಅನುಪಮೆಯ ಪ್ರೇಮ'ವೇ ಈ ಕಥೆಯ ಸ್ವಾರಸ್ಯವುಳ್ಳ ಭಾಗವಾದರೂ ಅವಳು 'ಪ್ರೇಮಯೋಗಿನಿ' ಎನ್ನುವಂಥ ಕೈವಾಡ ಇಲ್ಲಿಲ್ಲ. ಅನುವಾದಕಾರರು ಬಹುಮಟ್ಟಿಗೆ ಸಹಜವಾದ ಹಾಗೂ ಕನ್ನಡದ ಹುಟ್ಟಿಗೆ ಒಪ್ಪುವ ಶೈಲಿಯಲ್ಲಿ ಇದನ್ನು ಕನ್ನಡಿಸಿರುವರು. ಆದರೂ ಕ್ವಚಿತ್ತಾಗಿ ಕೃತ್ರಿಮತೆ ಮೂಡಿದೆ. ಶ್ರೀ॥ ಶರಚ್ಚಂದ್ರರ ಇನ್ನೂ ಕೆಲವು ಕಾದಂಬರಿಗಳನ್ನು ಕನ್ನಡಿಸಬೇಕೆಂದು ಇವರಿಗೆ ಬಯಕೆ ಇದೆ. ಹಾಗೆ ಮಾಡುವಲ್ಲಿ ಗುಣ ಶ್ರೇಷ್ಠವಾದವುಗಳನ್ನೇ ಆಯ್ದು ಕನ್ನಡಕ್ಕೆ ನೀಡಬೇಕೆಂದು ನಮ್ಮ ಬೇಡಿಕೆ.

ರಂ. ಶ್ರೀ. ಮುಗಳಿ

---

೧೭. ಸಂಸ್ಕೃತ ನಾಟಕ.— (ಮೈಸೂರ ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ–೧೦) ಲೇಖಕರು : ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ.; ಕ್ರೌ. ಅ. ಪು. xxiv +೨೯೪; ಬೆಲೆ: ಕ್ಯಾಲಿಕೊ ರೂ. ೧–೪–೦; ಸಾದಾ ರೂ. ೦–೧೨–೦.

ಸಂಸ್ಕೃತ ನಾಟ್ಯದ ಹುಟ್ಟು–ಬೆಳವಣಿಗೆ, ಲಕ್ಷ್ಯ–ಲಕ್ಷಣ ಇವುಗಳನ್ನನುಲಕ್ಷಿಸಿ "ಈ ವಿಷಯಕ್ಕೆ ಸಂಬಂಧಪಟ್ಟ ಅನೇಕ ಗ್ರಂಥಗಳನ್ನೂ ವಿದ್ಯುತ್ ಪತ್ರಿಕೆಗಳಲ್ಲಿ ಚೆದರಿರತಕ್ಕ ಅಸಂಖ್ಯಾತ ಲೇಖನಗಳನ್ನೂ ಪರಿಶೀಲಿಸಿ, ಸಂಸ್ಕೃತ ನಾಟಕಗಳನ್ನೆಲ್ಲಾ ಪರಾಮರ್ಶಿಸಿದ ತಮ್ಮ ಸ್ವಂತ ಅನುಭವವನ್ನು ಸೇರಿಸಿ, ಈ ಸಣ್ಣ ಪುಸ್ತಕದಿಂದ, ಕನ್ನಡದಲ್ಲಿ ಮೊದಲನೆಯ ಸಾರಿ, ಭಾರತೀಯ ಸಾಹಿತ್ಯದ ನಾಯಕರತ್ನ (?)ದಂತಿರುವ ಒಂದು ಭಾಗದ ವಿಚಾರವಾಗಿ" (ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ಮುನ್ನುಡಿ) ಬರೆದ ಗ್ರಂಥವಿದು.

ವಿಷಯವಿಸ್ತಾರದಿಂದಲೂ ನಿರೂಪಣಪದ್ಧತಿಯಿಂದಲೂ ಇದನ್ನು ಅತ್ಯಂತ ಸಂಗ್ರಾಹ್ಯವೆನಿಸುವಂತಹ ಗ್ರಂಥವೆಂದು ಹೇಳಬಹುದು. ಮೊದಲನೆಯ ಭಾಗದಲ್ಲಿ (ಪುಟಗಳು ೧-೫೩) ಹಳೆಯ ಲಕ್ಷಣಗ್ರಂಥಗಳನ್ನೂ ಪಾಶ್ಚಾತ್ಯಸಾಹಿತಿಗಳ ವಿಮರ್ಶಾಗ್ರಂಥಗಳನ್ನೂ ಅನುಸರಿಸಿ, ಸಂಸ್ಕೃತನಾಟಕದ ಸ್ವರೂಪ ಮತ್ತು ಉತ್ಪತ್ತಿಗಳನ್ನು ಗ್ರಂಥಕರ್ತರು ವಿವರಿಸಿದ್ದಾರೆ; ಎರಡನೆಯ ಭಾಗದಲ್ಲಿ (ಪುಟಗಳು ೫೪–೧೬೪) ವಿಶ್ವಸಾಹಿತ್ಯದಲ್ಲಿ ಸ್ಥಾನವನ್ನು ಪಡೆದ ಕೆಲವು ಸಂಸ್ಕೃತ ಕವಿಗಳ ನಾಟಕಗಳನ್ನು ವಿಮರ್ಶಿಸಿದ್ದಾರೆ; ಮೂರನೆಯ ಭಾಗದಲ್ಲಿ (ಪುಟಗಳು ೧೬೫–೨೪೦) ಸಂಸ್ಕೃತ ನಾಟ್ಯದ ಲಕ್ಷಣಬದ್ಧರೀತಿಯಲ್ಲಿ ಬರೆದ ಮಧ್ಯಮ ತರಗತಿಯ ನಾಟಕಗಳನ್ನು ವಿಮರ್ಶಿಸಿದ್ದಾರೆ; ನಾಲ್ಕನೆಯ ಭಾಗದಲ್ಲಿ (ಪುಟಗಳು ೨೪೧-೨೮೨) ಅವನತಿಕಾಲದ ನಾಟಕಗಳನ್ನೂ ಹತ್ತು ತರದ ರೂಪಕಗಳನ್ನೂ ಕಾಣಿಸಿದ್ದಾರೆ. ಕೊನೆಯ ಭಾಗದಲ್ಲಿ ಇದುವರೆಗೆ ತಿಳಿದುಬಂದಿರುವ ಎಲ್ಲ ಸಂಸ್ಕೃತ ನಾಟಕಗಳ ಅಕಾರಾದಿಯನ್ನು (Index) ಕೊಟ್ಟದ್ದಾರೆ. ಇದಲ್ಲದೆ ಪ್ರತಿಯೊಂದು ಭಾಗದ ಕೊನೆಗೆ ಪ್ರಮಾಣಗ್ರಂಥಗಳ ಪಟ್ಟಿಯನ್ನು ಕೊಟ್ಟದ್ದಾರೆ.

ಹೀಗೆ ವಿದ್ಯಾರ್ಥಿಗಳಿಗೂ, ಕನ್ನಡದ ಹೊರತಾಗಿ ಇನ್ನೊಂದು ಭಾಷೆಯನ್ನು ಅರಿಯದವರಿಗೂ ಅತ್ಯಂತ ಉಪಯುಕ್ತವೆನಿಸುವ, ಕನ್ನಡಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದಲೂ ಸಂಗ್ರಾಹ್ಯವೆನಿಸುವ ಈ ಗ್ರಂಥ ಸಣ್ಣದೆಂದು ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಮುನ್ನುಡಿಯಲ್ಲಿ ಒಪ್ಪಿದ್ದಾರೆ; ಆದರೂ ಇಷ್ಟು ಸಣ್ಣದಾಗಬಾರದಿತ್ತೆಂದು ನಮಗೆ ಹೇಳಬೇಕೆನಿಸುವುದು. ಪ್ರತಿಯೊಂದು ಪುಟದಲ್ಲಿಯೂ ಕಂಡುಬರುವ ಲೇಖಕರ ಯೋಗ್ಯತೆಯನ್ನು ನೋಡಿದರೆ ನಾವು ವಂಚಿತರಾದೆವಲ್ಲ ಎಂದು ವ್ಯಥೆಪಡುವಂತಿದೆ; ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು ವಿಷಯಪಾಂಡಿತ್ಯವನ್ನು ಪಡೆದವರಿದ್ದಾರೆ. 'ತಮ್ಮ ಸ್ವಂತ ಅನುಭವ'ವನ್ನು ಇನ್ನೂ ಹೆಚ್ಚಾಗಿ ಸೇರಿಸಿದ್ದರೆ ಸಮರ್ಪಕವಾಗಬಹುದಿತ್ತು. ಸದ್ಯದ ವಿವೇಚನೆಯಲ್ಲಿ

ಬೇರೆ ಬೇರೆ ಪಂಡಿತರ ಅಭಿಪ್ರಾಯಗಳ ಪಟ್ಟಿಯೇ ಎದ್ದು ಕಂಡುಬರುವುದು. ಇದಲ್ಲದೆ ಹಳೆಯ ಲಕ್ಷಣಗ್ರಂಥಗಳ 'ಸಂಗ್ರಹ'ದ ಜೊತೆಗೆ ಸಂಸ್ಕೃತ ನಾಟಕದ ಬೆಳವಣಿಗೆಯ ವಿಮರ್ಶಾತ್ಮಕ ಇತಿಹಾಸವನ್ನು ಕೊಡಬಹುದಾಗಿತ್ತು. ಮೂರನೆಯದಾಗಿ, ವಿಶಾಲ ಮತ್ತು ವಿಮರ್ಶಾತ್ಮಕ ದೃಷ್ಟಿಯಿಂದ ಬರೆದ ಗ್ರಂಥದಲ್ಲಿ ಆಯಾ ನಾಟಕಗಳ ಕಥಾವಸ್ತುವಿನ ಸಾರಾಂಶವನ್ನು ಕಡಮೆ ಮಾಡಬಹುದಾಗಿತ್ತು. (೩ನೆಯ ಮತ್ತು ೪ನೆಯ ಭಾಗಗಳಲ್ಲಿ ನಾಟಕಗಳ ಕಥಾವಸ್ತು ೨೫ ಪುಟಗಳಷ್ಟಿದೆ.)

ಕೆಲವೆಡೆ ಗ್ರಂಥಕರ್ತರು ಬೇರೆ ಬೇರೆ ಪಂಡಿತರ ಅಭಿಪ್ರಾಯಗಳನ್ನು ಹೊಂದಿಸುವ ಉದ್ದೇಶದಿಂದಲೇ ಪ್ರಯಾಸಪಟ್ಟಂತಿದೆ. "ಸಂಸ್ಕೃತ ನಾಟಕ ಆರ್ಯಸಂಸ್ಕೃತಿಯಲ್ಲಿಯೇ ಜನಿಸಿತೆಂದೂ, ಆದರೆ ಅದರ ಬೆಳವಣಿಗೆಯ ಸ್ಥಿತಿಯಲ್ಲಿ ಗ್ರೀಕ್ ನಾಟಕಗಳ ಪ್ರಭಾವ ಅದರ ಮೇಲೆ ಬಿದ್ದಿರಬಹುದೆಂದೂ ಪ್ರತಿಪಾದಿಸಿದ ಹಾಗಾಯಿತು" (ಪು. ೪೭). ಈ ವಿಧಾನವನ್ನು ಪೋಷಿಸುವಂತಹ ಚರ್ಚೆಯನ್ನಾಗಲಿ, ಕಾರಣಗಳನ್ನಾಗಲಿ ಸಮರ್ಪಕವಾಗಿ ಎಲ್ಲಿಯೂ ತೋರಿಸಿಲ್ಲ. ಕೊನೆಗೆ ಶ್ರೀಮಾನ್ ಶ್ರೀಕಂಠಯ್ಯನವರ ಮುನ್ನುಡಿಯಲ್ಲಿ ಒಂದು ಮಾತಿಗೆ ನಮ್ಮ ಆಕ್ಷೇಪವಿದೆ ಎಂದು ಹೇಳಲೇಬೇಕೆನಿಸುವುದು : "ಸಂಸ್ಕೃತ ನಾಟಕ ರಾಜಾಸ್ಥಾನಗಳಲ್ಲಿ ವ್ಯವಹಾರದಲ್ಲಿ ಬಿಟ್ಟುಹೋಗಿದ್ದ ಭಾಷೆಯಲ್ಲಿ (ಮುಖ್ಯವಾಗಿ) ಆಡುವ ಭಾಷೆಯನ್ನು ಬಿಟ್ಟು ಕಲಿತ ಭಾಷೆಯಲ್ಲಿ ಬರೆದ ಕವಿಗಳಿಂದ....ಉತ್ಪನ್ನವಾದದ್ದು. ಗ್ರೀಕ್ ಇಂಗ್ಲಿಷ್ ನಾಟಕಗಳಂತೆ ಇದು ಸಾರ್ವಜನಿಕ ನಾಟಕಶಾಲೆಯಲ್ಲಿ, ಜನಾಂಗ ಸಂಪರ್ಕದಲ್ಲಿ, ಬೆಳೆದಹಾಗೆ ಕಾಣುವುದಿಲ್ಲ" (ಪು. viii). ಭರತನಾಟ್ಯಶಾಸ್ತ್ರದಲ್ಲಿ ಕಾಣಿಸಿದ ನಾಟಕದ ಉತ್ಪತ್ತಿಯ ಸಾಂಪ್ರದಾಯಿಕ ಕತೆ ಮೇಲಿನ ಅಭಿಪ್ರಾಯ ತಪ್ಪೆಂದು ತೋರಿಸುವುದು; ಅಂದಿನ ಸಮಾಜ—ಇತಿಹಾಸಗಳ ನಿಜವಾದ ಮಾಹಿತಿ ಇದುವರೆಗೆ ಸಿಕ್ಕಿಲ್ಲವಾದ್ದರಿಂದಲೂ ಈ ಅಭಿಪ್ರಾಯ ಅಸಮಂಜಸವೆನಿಸುವುದು.

ಸೊಗಸಾದ ಗ್ರಂಥ ಇನ್ನೂ ಸೊಗಸೆನಿಸಬೇಕಾಗಿತ್ತೆಂಬ ದೃಷ್ಟಿಯಿಂದಲೇ ನಾವು ಈ ಮಾತನ್ನು ಹೇಳುತ್ತಿರುವುದು. ಇತಿಹಾಸದ ದೃಷ್ಟಿಯಿಂದ ಕನ್ನಡದ ವಿದ್ಯಾರ್ಥಿಗೆ ಸಂಸ್ಕೃತದ ಅಭ್ಯಾಸ ಅತ್ಯಗತ್ಯವಾದುದರಿಂದ ಇಂತಹ ಗ್ರಂಥಗಳು ನಮಗೆ ಇನ್ನೂ ಬೇಕು. ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು ಹೀಗೆಯೇ ನಮ್ಮನ್ನು ಇನ್ನೂ ಹೆಚ್ಚೆನಿಸುವ ಋಣಭಾರದಲ್ಲಿರಿಸಲೆಂದು ಆಶೆ.

ಆರ್. ವಿ. ಜಾಗೀರದಾರ

---

೧೮. ಸಂಧ್ಯಾರಾಗ.— ಮನೋಹರ ಗ್ರಂಥಮಾಲೆಯ ೩೧ನೆಯ ಕುಸುಮ (ಸ್ವತಂತ್ರ ಸಾಮಾಜಿಕ ಕಾದಂಬರಿ); ಬರೆದವರು : ಶ್ರೀ॥ ಅ. ನ. ಕೃಷ್ಣರಾಯರು ; ಬೆಲೆ : ರೂ. ೧.

ಈ ಕಾದಂಬರಿಯ ಹೆಸರು ಒಂದು ದೃಷ್ಟಿಯಿಂದ ಅನ್ವರ್ಥಕವಾಗಿದೆ. ಕನ್ನಡ ಕಾದಂಬರೀ ಸಾಹಿತ್ಯದ ಸಂಧ್ಯಾರಾಗ ಇಲ್ಲಿದೆ ಎಂದು ಹೇಳಬಹುದು. ವರ್ಣನೆಗಳಿಂದ ತುಂಬಿ ತುಳುಕಿ, ಕ್ಷಣಕ್ಷಣಕ್ಕೆ ಬಯಲಾಟದ ಸೂತ್ರಧಾರನಂತೆ ಹಣಿಕಿಕ್ಕಿ ಕಾದಂಬರೀಕಾರನೇ ಕತೆಯನ್ನು ಹೇಳುವ ಶೈಲಿ ಹಳೆಯದಾಯಿತು, ಅಸಮರ್ಪಕವೆನಿಸತೊಡಗಿತು; ಪಾತ್ರಗಳ ಮುಖವಾಗಿಯೇ ಕತೆಯನ್ನು ಬೆಳೆಯಿಸುವ ಹೊಸ ಶೈಲಿ ಬೇಕಾಗಿದೆ. ಹಳೆಯದು ಹೋಗಿ ಹೊಸದು ಬರುವುದೆಂದು ಸೂಚಿಸಲು ಸಮರ್ಥವಾದುದರಿಂದಲೇ ಈ ಕಾದಂಬರಿಯಲ್ಲಿ ಸಂಧ್ಯಾರಾಗವಿದೆ ಎಂದು ಹೇಳಿದ್ದು.

ಇಲ್ಲಿ ಕತೆ ಇಲ್ಲ; ಕತೆಗೆ ಮಹತ್ವವೇ ಇಲ್ಲ. ಸ್ವಭಾವ ಚಿತ್ರದ (Character study) ಮಾದರಿ ಇದು. ಕಾದಂಬರಿಯನ್ನು ಮುಗಿಸಿದಾಕ್ಷಣ ರಾಯರು, ಮೀನಾಕ್ಷಿ, ರಾಮಚಂದ್ರ, ಲಕ್ಷ್ಮಣ ಮೊದಲಾದವರು ತೀರ ಪರಿಚಿತರಂತೆ ನಮ್ಮ ಕಣ್ಣುಕಟ್ಟಿ ನಿಲ್ಲುವರು. ಇದಲ್ಲದೆ ಕೆಲವರಂತೂ ನಮ್ಮ ಕಣ್ಣೆದುರಿನಲ್ಲಿಯೇ ಹುಟ್ಟಿ, ಬೆಳೆದು, ಮೂರ್ತಗೊಳ್ಳುವರು. 'ಅಲ್ಲಿ ('ಉದಯರಾಗ' ಎಂಬ ಕಾದಂಬರಿಯಲ್ಲಿ) ಕಲಾವಿದ ಕಲೆಯನ್ನು ಆಶ್ರಯಿಸುತ್ತಾನೆ;

ಇಲ್ಲಿ ಕಲೆ ಕಲಾವಿದನನ್ನು ಆಶ್ರಯಿಸುತ್ತದೆ' ಎಂದು ಗ್ರಂಥಕರ್ತೃಕರು ಮುನ್ನುಡಿಯಲ್ಲಿ ಹೇಳಿದ್ದಾರೆ. ಈ ಮಾತು ನಿಜ; ಅದಕ್ಕಾಗಿಯೇ 'ಸಂಧ್ಯಾರಾಗ'ದಲ್ಲಿ ಮೀನಾಕ್ಷಿಯೇ ಕಲಾವಿದೆ ಎಂದು ನಮ್ಮ ಅಭಿಪ್ರಾಯ. ಅವಳು ನಿರ್ಮಲವಾದ ಹೃದಯ, ನಿಸ್ವಾರ್ಥದ ಅಂತಃಕರಣ, ವಿಶಾಲವಾದ ದೃಷ್ಟಿ—ಇವುಗಳಿಂದ ಕೂಡಿದವಳು. ಸೃಷ್ಟಿಯನ್ನು ಮೈಗೂಡಿಸಿಕೊಳ್ಳುವ ಪ್ರಾಣಿಸಹಜವೃತ್ತಿ ಅವಳದು. ಇಷ್ಟಾದರೂ ತನ್ನ ಯೋಗ್ಯತೆಯನ್ನು ತಾನೇ ಅರಿಯದ ಮಹಾನುಭಾವತ್ವ ಆಕೆಯಲ್ಲಿದೆ. ಈ ದೃಷ್ಟಿಯಿಂದ ಮಗನಾದ ಲಕ್ಷ್ಮಣನಿಗಿಂತ ಹೆಚ್ಚಿನ ಯೋಗ್ಯತೆಯ ಕಲಾವಿದೆ ಈಕೆ ಎನಬಹುದು.

ಕಾದಂಬರಿಯಲ್ಲಿ ಅನೇಕ ಸೊಗಸಿನ ಸನ್ನಿವೇಶಗಳಿವೆ. ಕಲಾವಿದೆ ಮೀನಾಕ್ಷಿಯ ಮಗನಾದ ಲಕ್ಷ್ಮಣನೂ ಕಲಾವಿದ; ಸಂಸ್ಕಾರವಿಲ್ಲದ ಸಾವಿತ್ರಮ್ಮನ ಮಗ ರಾಮಚಂದ್ರ ಅಸಂಸ್ಕೃತ, ಸ್ವಾರ್ಥಪ್ರೇರಿತ. ಮೀನಾಕ್ಷಿ-ಸಾವಿತ್ರಮ್ಮ ಇವರ ತುಲನೆಯ ಚಿತ್ರ, ರಾಮಚಂದ್ರ-ಲಕ್ಷ್ಮಣರ ಪರಸ್ಪರ ವಿರುದ್ಧ ಜೀವನಚಿತ್ರ ಇವುಗಳ ಕಲ್ಪನೆಯನ್ನು ಚೆನ್ನಾಗಿ ಮಾಡಿಕೊಟ್ಟಿದ್ದಾರೆ. ಈ ಎರಡು ದ್ವಂದ್ವ ಚಿತ್ರಗಳನ್ನಿಟ್ಟುಕೊಂಡುದಕ್ಕೆ ಒಮ್ಮೊಮ್ಮೆ ಕಾದಂಬರಿ ಇದಕ್ಕೆ ಚಿಕ್ಕದಿರಬೇಕಾಗಿತ್ತು ಎನಿಸುವುದು, ಒಮ್ಮೊಮ್ಮೆ ಇನ್ನೂ ದೊಡ್ಡದಿರಬೇಕಾಗಿತ್ತು ಎನಿಸುವುದು. ಮೀನಾಕ್ಷಿಯ ಕತೆ ಒಂದು, ಲಕ್ಷ್ಮಣನದೊಂದು—ಹೀಗೆ ಎರಡು ಕತೆಗಳಿಗೆ ಸಾಕಷ್ಟು ಅವಕಾಶ, ಇಲ್ಲಿ ದೊರೆತಿಲ್ಲ; ಒಂದರಿಂದ ಇನ್ನೊಂದಕ್ಕೆ ಅವಸರವಾದಂತಿದೆ.

ಸ್ವಭಾವಚಿತ್ರಕ್ಕೆ ಸಮರ್ಪಕವಾದ ಮಾದರಿ ಇದು. ಶೈಲಿ ಸುಲಭವಾಗಿದೆ, ಅಸಂಬದ್ಧತೆ ಇಲ್ಲವೇ ಇಲ್ಲ. 'ಜೀವಂತ ವ್ಯಕ್ತಿಗಳನ್ನು ಅನುಸರಿಸಿಲ್ಲ' ಎಂದು ಗ್ರಂಥಕರ್ತರು ಮುನ್ನುಡಿಯಲ್ಲಿ ಹೇಳಿದ್ದಾರೆ. ಕಾದಂಬರಿಯಲ್ಲಿ ಪಾತ್ರಗಳು ಸಜೀವವೆನಿಸುವ ಅನುಭವ ಆ ಮಾತನ್ನು ಸಮರ್ಥಿಸುತ್ತದೆ. ಓದಬೇಕು, ಓದತೊಡಗಿದರೆ ಮುಗಿಸಲೇಬೇಕು ಎನಿಸುವುದು. ಶ್ರೀ॥ ಅ. ನ. ಕೃಷ್ಣರಾಯರು ತರುಣ ಸಾಹಿತಿಗಳು. ಆದುದರಿಂದ ಕನ್ನಡ ಸಾಹಿತ್ಯಕ್ಕೆ ಇನ್ನೂ ಅನೇಕ ಗ್ರಂಥಗಳನ್ನು ಇವರು ಒದಗಿಸಬಲ್ಲರು ಎಂಬುದು ಅತ್ಯಂತ ಆನಂದದ ಮಾತು.

ಸ್ವತಂತ್ರ ಕಾದಂಬರಿಗಳನ್ನು ಪ್ರಕಟಿಸುವ ಗಟ್ಟಿಗತನಕ್ಕಾಗಿ 'ಮನೋಹರ ಗ್ರಂಥಮಾಲೆ'ಯ ಸಂಚಾಲಕರಿಗೆ ನಾವು ಋಣಿಯಾಗಿದ್ದೇವೆ. ಕಳೆದ ೫-೬ ವರ್ಷಗಳಿಂದ ಈ ಗ್ರಂಥಮಾಲೆಯ 'ಸತ್ಯಾಗ್ರಹ' ಬುದ್ಧಿಯಿಂದಲೇ ಕನ್ನಡ ಸಾಹಿತ್ಯಕ್ಕೆ ಅನೇಕ ಸ್ವತಂತ್ರ ಕತೆ-ಕಾದಂಬರಿಗಳು ದೊರೆತಿವೆ. ಆದರೂ ಸಂಚಾಲಕರಿಗೆ ನಮ್ಮದೊಂದು ಬೇಡಿಕೆ ಇದೆ: ಗ್ರಂಥದ ಮುದ್ರಣದೋಷಗಳನ್ನು ಪಿಡುಗಿನಂತೆಂದು ತಿಳಿದು ತಪ್ಪಿಸಲೇಬೇಕು. ಸಾಮಾನ್ಯವಾಗಿ ಪ್ರತಿಯೊಂದು ಪುಟದಲ್ಲಿಯೂ ಒಂದು ಮುದ್ರಣದೋಷ ಕಣ್ಣುಚುಚ್ಚುವುದು. ಇಷ್ಟೇಕೆ ತೀರ ಮೊದಲನೆಯ ಸಾಲಿನಲ್ಲಿಯೇ (Inner Title page) '೩೧ನೆಯ ಕುಸಮ' ಎಂದು ಬಿದ್ದಿದೆ. ೫-೬ ವರ್ಷಗಳಲ್ಲಿಯೇ 'ಕುಸುಮ' ಈ ಸ್ಥಿತಿಗೆ ಬರಬಾರದಾಗಿತ್ತು.

ಆರ್. ವಿ. ಜಾಗೀರದಾರ

---

೧೯. ಹುಚ್ಚು ಬೆಳದಿಂಗಳಿನ ಹೂಬಾಣಗಳು.—ಲೇಖಕರು: ಶ್ರೀ॥ ಪ. ರಮಾನಂದರಾಯರು; ಪ್ರಕಾಶಕರು: ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ; ಪುಟ ಸು. ೨೪೦; ಬೆಲೆ: ರೂ. ೧-೮-೦.

ಪುಸ್ತಕದ ಹೆಸರೇ ಸೂಚಿಸುವಂತೆ ಈ ಗ್ರಂಥ ಕನ್ನಡಕ್ಕೆ ಹೊಸದೇ ಆಗಿದೆ. ಶ್ರೀ॥ ರಮಾನಂದರಾಯರ ಹಾಸ್ಯಲೇಖನಗಳಿಗೆ ಶ್ರೀ॥ ಟ. ಮುಕುಂದರಾಯರೆಂಬ ಚಿತ್ರಕಾರರಿಂದ ಹಾಸ್ಯಚಿತ್ರಗಳ ಜೊತೆ ದೊರೆತ ಈ ಲೇಖನಸಂಗ್ರಹ ಸಂಗ್ರಾಹ್ಯವಾಗಿದೆ. ಹಿಲೇರ್ ಬೆಲಾಕ್‌ರ ಲೇಖನಗಳು, ಜಿ. ಕೆ. ಚೆಸ್ಟರ್‌ಟನ್ನರ ಹಾಸ್ಯಚಿತ್ರಗಳೊಂದಿಗೆ ಪ್ರಕಟ ವಾಗಿ ಜನಪ್ರಿಯವಾಗಿರುವಂತೆ, ಪ್ರಸ್ತುತ ಪುಸ್ತಕವೂ ಆಗುವದೆಂದು ಆಶಿಸಬಹುದಾಗಿದೆ.

...ವಿನೋದಸಾಹಿತ್ಯ ಕನ್ನಡದಲ್ಲಿ ಇಲ್ಲವೆಂದೇ ಹೇಳಬೇಕು. ಪ್ರಾಚೀನಸಾಹಿತ್ಯದಲ್ಲಿ ಅದಕ್ಕೆ ಎಡೆಯಿರಲಿಲ್ಲ. ಹೊಸ ಸಾಹಿತ್ಯದಲ್ಲಿ ಆ ಒಂದು ರೂಪಕ್ಕೇ ಲಕ್ಷ್ಯಪೂರೈಸಿದವರು ಇಲ್ಲ. ಹರಟೆಯಮಲ್ಲರ ಕೆಲವು ಲೇಖನಗಳು ಮಾತ್ರ ಈ ಮಾತಿಗೆ ಅಪವಾದ. ಶ್ರೀ॥ ಶ್ರೀರಂಗರ ಸಾಮಾಜಿಕ ನಾಟಕಲೇಖನಗಳಲ್ಲಿ, ಶ್ರೀ॥ ಬೇಂದ್ರೆಯವರ ಕೆಲವು ಹರಟೆಗಳಲ್ಲಿ, ಶ್ರೀ॥ ಕಾರಂತರ ವಿಡಂಬನ ಬರೆಹಗಳಲ್ಲಿ ಮಾತ್ರ ವಿನೋದಸಾಹಿತ್ಯ ಸ್ವಲ್ಪ ಕಂಡುಬರುತ್ತದೆ. ಶ್ರೀ॥ ಪ. ರಮಾನಂದರು ಮಾತ್ರ ಈ ರೂಪವನ್ನೇ ತಮ್ಮ ಗುರಿಯಾಗಿಟ್ಟುಕೊಂಡು ಅದರಲ್ಲಿ ಅನೇಕ ಪ್ರಯೋಗಗಳನ್ನು ಮಾಡಿನೋಡಿ ಯಶಸ್ವಿಯಾಗಿದ್ದಾರೆ. ಅವರ 'ನನ್ನ ಭಾವ', 'ರಮೇಶ' ಎಂಬ ಬರೆಹಗಳಲ್ಲಿ ಹಾಸ್ಯದ ಬುದ್ಬುದ ತರಂಗದ ಪರಿಚಯ ಕನ್ನಡವಾಚಕರಿಗೆ ಈ ಮೊದಲೇ ಆಗಿತ್ತು. ಬಿಡಿಯಾಗಿ ದೊರೆಯದ ಅವರ ಲೇಖನಗಳನ್ನು ಸಂಗ್ರಹಿಸಿ 'ಮನೋಹರ ಗ್ರಂಥ ಮಾಲೆ'ಯವರು ಉಪಯುಕ್ತಕಾರ್ಯ ಮಾಡಿದ್ದಾರೆಂದು ಹೇಳಬೇಕು. ಆದರೆ ಹೀಗೆ ಮಾಡುವಾಗ ಗ್ರಂಥ ದೊಡ್ಡದಾಗಬೇಕೆಂಬ ಉದ್ದೇಶವನ್ನು ಮಾತ್ರವೇ ಇಟ್ಟುಕೊಳ್ಳದೆ ಕೆಲವು ಒಳ್ಳೆಯ ನಗೆಚಿತ್ರಗಳನ್ನಷ್ಟೇ ಪ್ರಕಟಿಸಬೇಕಾಗಿತ್ತು. ಏಕೆಂದರೆ, ಲೇಖಕರೇ "ಇವುಗಳನ್ನೆಲ್ಲ ಬರೆಹಗಳೆಂದು ಕರೆಯುವ ಬದಲಾಗಿ ಕೇವಲ ಪ್ರಯೋಗಗಳೆಂದು ಕರೆಯುವದು ಒಳಿತು" ಎಂದು ಹೇಳಿದ್ದಾರೆ. ಅಲ್ಲದೆ ಅನೇಕ ವರುಷಗಳ ಹಿಂದೆ ಅವು ಬರೆಯಲ್ಪಟ್ಟವೆ. ಆದ್ದರಿಂದ ಒಳ್ಳೆಯವುಗಳನ್ನಷ್ಟೇ ಆರಿಸಿಕೊಂಡು ಸಂಗ್ರಹಮಾಡ ಬಹುದಾಗಿತ್ತು. ಈ ದೃಷ್ಟಿಯಿಂದ ನೋಡಿದಾಗ ಬಣಗುಹಾಸ್ಯದ 'ಪತ್ತೆದಾರನ ಸೂಕ್ಷ್ಮಬುದ್ಧಿ', ಹಾಗೂ ಹಾಸ್ಯವೇ ಕಂಡುಬಾರದ 'ವಿವೋಚನೆ', 'ಚಿನ್ನದ ತೊಟ್ಟಿಲು', ಪ್ರಯೋಗರೂಪವಾಗಿರುವ 'ಶ್ರೀನಿವಾಸನ ಅಕೃತ್ಯ' ಎಂಬ ಲೇಖನಗಳನ್ನು ಸಂಗ್ರಹದಲ್ಲಿ ಬಿಡಬಹುದಾಗಿತ್ತು.

"ಈ ಪ್ರಯೋಗಗಳೆಲ್ಲ ಬರೇ ಪ್ರಯೋಗಗಳಾಗಿಯೇ ಉಳಿದಿವೆ. ಅಲ್ಲದೆ ಸಾಹಿತ್ಯದ ಹೊರಗಿನ ಅಂಚನ್ನು ಕೂಡ ಮುಟ್ಟಲಿಲ್ಲವೆಂದು ನಾನೇ ಚೆನ್ನಾಗಿ ಅರಿತಿದ್ದೇನೆ" ಎಂದು ಲೇಖಕರು ಸೌಜನ್ಯದಿಂದ ಸೂಚಿಸಿದ್ದರೂ ಕೂಡ ಅವರ ಪ್ರಯೋಗಗಳು ಉಪಯುಕ್ತ ವಾಗಿವೆಯೆಂದೇ ಹೇಳಬೇಕು; ಮತ್ತು ಮುನ್ನುಡಿಕಾರರಾದ ಶ್ರೀ॥ ಬೇಂದ್ರೆಯವರು ಹೇಳಿದ "ಶ್ರೀ॥ ಪ. ರಮಾನಂದರಾಯರ, ಪರಮಾನಂದಕರವಾದ ಈ ಬರೆಹಗಳು ಕೇವಲ ಪ್ರಯೋಗ ಗಳು ಎಂದು ಯಾರೂ ಒಪ್ಪಲಾರರು. ಅಲ್ಲಿಯ ನಗೆಯಲ್ಲಿ ಹೊಸತನವಿದೆ; ನವೀನ ದೃಷ್ಟಿ ಯಿದೆ" ಎಂಬ ಮಾತನ್ನು ಒಪ್ಪಬೇಕಾಗುತ್ತದೆ. ಆದರೆ 'ಶೈಲಿಯಲ್ಲಿ ಹಿಡಿತವಿದೆ' ಎಂಬ ಮಾತನ್ನು ಸಂಪೂರ್ಣವಾಗಿ ಅನುಮೋದಿಸಲಾಗದು.

ಈ ಸಂಗ್ರಹದಲ್ಲಿಯ ಮೊದಲನೆಯ 'ಕೊಡೆಯ ವಿಚಾರ' ಎಂಬ ಹಾಸ್ಯದ ಹರಟೆ ಅಂತಹ ಜಾತಿಯ ಲೇಖನಕ್ಕೆ ಒಂದು ಆದರ್ಶವಾಗಿದೆ. ಲೇಖಕರ ಇಂತಹ ಪ್ರಬಂಧಗಳ ಸಂಗ್ರಹ ಹೊರಡುವದಾದರೆ ವಾಚಕರಿಗೆ ಹೆಚ್ಚಾದ ಉಪಕಾರವಾದೀತು. ಇಂಗ್ಲಿಷರಲ್ಲಿ ಹಿಲೇರ್ ಬೆಲಾಕ್, ಚೆಸ್ಟರಟನ್ ಇಂತಹರ ಹರಟೆಗಳ ಮಾದರಿ ಇಲ್ಲಿದೆ. ಈ ಪುಸ್ತಕದಲ್ಲಿ 'ಹರಿ ಕಮತನ ನೆನಪು' ವಾಚಕರಿಗೆ ಮರೆಯಲಾರದು. ನಾಗಣ್ಣನ ಪಾತ್ರವಂತೂ ವಾಚಕರ ಗೆಳೆಯನಾಗಿ ಎಂದಿಗೂ ಉಳಿಯಬಹುದು. ಹೀಗೆ ಒಂದೇ ಪಾತ್ರದ ಸುತ್ತಲೂ ಹೆಣೆಯುವ ಲೇಖನಗಳು ಅಡಿಸನ್, ಸ್ಟೀಲ್, ಗೋಲ್ಡ್‌ಸ್ಮಿತ್ತರ ಬರೆಹಗಳಂತೆ ಮನೋರಂಜಕವಾಗ ಬಹುದು. 'ಹರಿಕಮತನ ನೆನಪಿ'ನಲ್ಲಿಯ ಬಕಾರದ ಶಬ್ದಸಂಗ್ರಹವು ಗಮನಾರ್ಹ ವಾಗಿದೆ. 'ಅಂಕುಡೊಂಕು ಸಂಕಪಾಲ' ಎಂಬ ಲೇಖನದ ಹೆಸರಿನಲ್ಲಿಯೇ ತೋರುವ ಹಾಸ್ಯ ಹಾಗೆಯೇ ಹರಿದುಬಂದಿದೆ. 'ಚಿಕ್ಕರಾಮು ಅಜ್ಜಿಗೆ ಹೇಳಿದ ಕಥೆ', 'ಆತ್ಮಹತ್ಯೆ' ಇವುಗಳಲ್ಲಿಯ ವಿಡಂಬನೆ ಪರಿಹಾಮಕಾರಿಯಾಗಿದೆ. ಅಂತು ಶ್ರೀ॥ ರಮಾನಂದರಾಯರು ಕನ್ನಡ ಓದುಗರಿಗೆ ವಿನೋದದ ಊಟವನ್ನೇರ್ಪಡಿಸಿದ್ದು, ಶ್ರೀ॥ ಟ. ಮುಕುಂದರಾಯರ ಹಾಸ್ಯಚಿತ್ರಗಳು ಊಟದಲ್ಲಿ ಉಪ್ಪಿನಕಾಯಿಗಳಂತೆ ರುಚಿಕರವಾಗಿವೆ. ಪುಸ್ತಕದ ಹೊದಿಕೆಯ ಮೇಲೂ ಅರ್ಥಪೂರ್ಣವಾದ ಚಿತ್ರವಿದೆ.

ಶಿಗಳ

ಇಂತಹ ವಿನೋದದ ಊಟ, ಉಪ್ಪಿನಕಾಯಿಗಳನ್ನು 'ಮನೋಹರ ಗ್ರಂಥಪ್ರಕಾಶನ ಸಮಿತಿ'ಯವರು ಇನ್ನಿಷ್ಟು ಬಡಿಸಲೆಂದು ಆಶಿಸಬೇಕಾಗಿದೆ.

ಎಸ್. ಎಸ್. ಮಾಳವಾಡ

---

೨೦. ಪಾವನ ಪಾವಕ.—ಪ್ರಕಾಶಕರು : ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ ; ಪುಟ ಸು. ೯೫; ಬೆಲೆ :

ಈ ಪುಸ್ತಕದಲ್ಲಿ 'ಜಡಭರತ'ರು ತಾವು ಕಂಡ ನಾಲ್ಕು ಕನಸುಗಳನ್ನು ಹೇಳಿದ್ದಾರೆ. ಪ್ರೊ॥ ಮುಗಳಿಯವರು ಆ ನಾಲ್ಕು ಕನಸುಗಳನ್ನು ದೃಶ್ಯರೂಪಕ್ಕೆ ಇಳಿಸಿದ್ದಾರೆ. ಶ್ರೀ॥ ಬೇಂದ್ರೆಯವರೂ ಹಾಗೂ ಮುಗಳಿಯವರೂ 'ಸ್ವಪ್ನಶಾಸ್ತ್ರ'ವನ್ನು ಕುರಿತು ಹಿನ್ನುಡಿ ಮುನ್ನುಡಿಗಳನ್ನು ಬರೆದಿದ್ದಾರೆ. ಹೀಗೆ ಮೂವರು ಲೇಖಕರ ಫಲವೇ ಈ ಪುಸ್ತಕ. ಅಂತೆಯೇ ಈ ಪುಸ್ತಕಕ್ಕೆ ಒಂದು ವಿಶಿಷ್ಟರೂಪವಿಲ್ಲ.

ಈ ಪುಸ್ತಕದ ವಿಶಿಷ್ಟರೂಪ, ಹಾಗೂ ಅಸ್ಪಷ್ಟ ಕನಸಿನ ಗಡಚು ವಿಚಾರ—ಇವುಗಳು ಕನ್ನಡ ವಾಚಕರಿಗೆ ರುಚಿಸದೆ ಹೋಗಬಹುದು.

'ಜಡಭರತ'ರ ಕನಸುಗಳು ಗಂಭೀರವೂ ಅರ್ಥಪೂರ್ಣವೂ ಆಗಿವೆ. ವಾಸ್ತವ ಪ್ರಪಂಚವನ್ನು ಮರೆಯಿಸಿ ಬೇರೊಂದು ಪ್ರಪಂಚದಲ್ಲಿ ವಿಹರಿಸುವ ಸೌಲಭ್ಯ ಕನಸುಗಳಿಗೆ ಇರುವದರಿಂದ, ಅವು ಅದ್ಭುತರಮ್ಯವೇ ಆಗುತ್ತವೆ. ಪ್ರಸ್ತುತ ಸ್ವಪ್ನಗಳಲ್ಲಿ ಉದಾತ್ತ ಸಂದೇಶದ ಜೊತೆ ಕೂಡಿರುವುದು ಒಂದು ವಿಶೇಷ. 'ಜಡಭರತ'ರು ತಮ್ಮ ನಾಲ್ಕು ಕನಸುಗಳನ್ನು ಸುಮಾರು ೨೦ ಪುಟಗಳಲ್ಲಿ ಹೇಳಿದ್ದಾರೆ. ಶ್ರೀ॥ ಮುಗಳಿಯವರು ಅವುಗಳನ್ನು ಸುಮಾರು ೪೦ ಪುಟಗಳಲ್ಲಿ ದೃಶ್ಯರೂಪಕ್ಕೆ ತಿರುಗಿಸಿದ್ದಾರೆ. ಅವರು ಕವಿಗಳೂ ಆಗಿರುವದರಿಂದ ದೃಶ್ಯರಚನೆ ಸುಂದರವೇ ಆಗಿದೆ. ಈ ದೃಶ್ಯಗಳಲ್ಲಿ ಗದ್ಯ, ಸರಳ ರಗಳೆಗಳು ಉಪಯೋಗಿಸಲ್ಪಟ್ಟಿವೆ. ಅಲ್ಲದೆ ಅದ್ಭುತರಮ್ಯವಾದ ಕಥಾನಕವನ್ನು ವಿವರಿಸುವಾಗ, ಸ್ಥಳ, ವೇಳೆ– ಇವುಗಳ ವಿಶೇಷವಾದ ಅಂತರವನ್ನೂ ಸನ್ನಿವೇಶಗಳ ಬೆಳವಣಿಗೆಯನ್ನೂ ಸೂಚಿಸಲಿಕ್ಕೆ ಅನೇಕಸಲ 'ರಂಗನಿರ್ದೇಶ'ವನ್ನು ಹೆಚ್ಚಾಗಿ ಬರೆಯಬೇಕಾಗಿದೆ. ಹೀಗೆ ಹೆಚ್ಚಾಗಿ ಬರುವ ರಂಗನಿರ್ದೇಶಗಳು ನಾಟಕದ ಓಟಕ್ಕೆ ತೊಡಕೇ ಸರಿ. ಆದ್ದರಿಂದ ಲೇಖಕರು ದೃಶ್ಯರೂಪಕ್ಕಿಂತ ಕಥನ ಕವನಗಳ (Narrative Poems) ರೂಪವನ್ನು ಆರಿಸಿಕೊಂಡಿದ್ದರೆ ಒಳ್ಳೆಯದಾಗಬಹುದಾಗಿತ್ತು. ಹಾಗೂ ಬೇರೊಬ್ಬರ ಕನಸುಗಳನ್ನು ತಾವು ಹೇಳಬೇಕಾಗಿದೆ. ಆದ್ದರಿಂದ ಮುನ್ನುಡಿಯಲ್ಲಿ ಅವರು ಹೇಳಿದ 'ಇಂಥಾ ಸ್ವಪ್ನದೃಶ್ಯಗಳು ಭಾವಗೀತೆಗಳಂತೆ ನಾಟಕಕಾರನ ಜೀವನವನ್ನು ರೂಪಿಸುತ್ತವೆ' ಎಂಬ ಮಾತು ಅರ್ಥಹೀನವಾಗುತ್ತದೆ.

ಮುನ್ನುಡಿ, ಹಿನ್ನುಡಿಗಳು ಅರ್ಥಪೂರ್ಣವೂ ಉಪಯುಕ್ತವೂ ಆಗಿವೆ. ಕನಸೆಂದರೇನು, ಅದರ ಅರ್ಥವೇನು ಎಂಬ ಸಮಸ್ಯೆ, ಹಾಗೂ ಸುಪ್ರಸಿದ್ಧ ಮನಶ್ಶಾಸ್ತ್ರಜ್ಞನಾದ ಫ್ರಾಯಿಡನ ಸಿದ್ಧಾಂತ, ಹಾಗೂ ಕನಸು, ಕಲಾ ಪ್ರಪಂಚಗಳ ಸಂಬಂಧ— ಇವುಗಳನ್ನು ಶ್ರೀ॥ ಮುಗಳಿಯವರು ಚೆನ್ನಾಗಿ ಪ್ರತಿಪಾದಿಸಿದ್ದಾರೆ. ಆದರೆ ಪಾರಿಭಾಷಿಕ ಶಬ್ದಗಳ ಉಪಯೋಗದಲ್ಲಿ ಅಸ್ಪಷ್ಟತೆ ಅನಿವಾರ್ಯವಾದಂತಿದೆ. ಈ ಲೇಖನವೂ ಹಾಗೂ ಶ್ರೀ॥ ಬೇಂದ್ರೆಯವರ 'ಸ್ವಪ್ನವಿಜ್ಞಾನ'ವೆಂಬ ಹಿನ್ನುಡಿಯೂ ಸ್ವತಂತ್ರ ಲೇಖನಗಳಾಗಲು ಯೋಗ್ಯವಾಗಿವೆ. ಅವರು ಪೌರ್ವಾತ್ಯ, ಪಾಶ್ಚಾತ್ಯ ತಾತ್ತ್ವಿಕರ ವಿಚಾರಗಳನ್ನು ಸಮಾಲೋಚಿಸಿ, ಸ್ವಪ್ನ ಜ್ಞಾನನೇತ್ರಗಳಲ್ಲಿ ಒಂದೆಂದು ಉಪಯುಕ್ತವಾಗಿ ಹೇಳಿದ್ದಾರೆ. ಆದರೆ ಫ್ರಾಯಿಡನ ಸಿದ್ಧಾಂತ ಕೇವಲ 'ಕಾಮಪ್ರಮೇಯ'ವೆಂದು ಹೇಳುವಾಗ ಅದು 'ಕೇವಲ ಲೈಂಗಿಕ'ವೆಂದೇ ಅರ್ಥಮಾಡುವದು ತಪ್ಪಾಗುವದು.

ಹೊಸಗನ್ನಡದ ಪ್ರಯೋಗಶಾಲೆಯಲ್ಲಿ 'ಪಾವನ ಪಾವಕ'ವೆಂಬ ಪುಸ್ತಕದ ಈ ಹೊಸ 'ಮಿಶ್ರಣ'ದ ಸ್ಥಾನವನ್ನು ಈಗಲೇ ನಿರ್ಧರಿಸಲಾಗದು.

ಎಸ್. ಎಸ್. ಮಾಳವಾಡ

---

೨೧. **ಸಣ್ಣ ಕತೆಗಳು.**—ಪ್ರಕಾಶಕರು : ಕರ್ನಾಟಕ ಸಂಘ, ಚೆನ್ನರಾಯಪಟ್ಟಣ ; ಪುಟ ೫೬ ; ಬೆಲೆ : ರೂ. ೦—೩—೩ (?).

ಚೆನ್ನರಾಯಪಟ್ಟಣದ ಕರ್ನಾಟಕ ಸಂಘದವರು ಏರ್ಪಡಿಸಿದ್ದ ಕಥಾಸ್ಪರ್ಧೆಯಲ್ಲಿಯ ನಾಲ್ಕು ಉತ್ತಮವಾದ ಕಥೆಗಳನ್ನು ಸಂಘದವರು ಅಚ್ಚುಕಟ್ಟಾಗಿ ಪ್ರಕಟಿಸಿ ಕನ್ನಡ ಸಾಹಿತ್ಯಾಚಾರ್ಯರಾದ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ವರ್ಧಂತ್ಯುತ್ಸವದ ನೆನಪಿಗಾಗಿ ಸಮರ್ಪಿಸಿದ ಕಾಣಿಕೆಯಿದು. ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಸಣ್ಣ ಕಥಾರೂಪ ಹೆಚ್ಚಾದ ವೈಶಾಲ್ಯವನ್ನೂ ಪ್ರಾಶಸ್ತ್ಯವನ್ನೂ ಪಡೆದಿದೆ. ಆದುದರಿಂದ ಈಗ ಬರುತ್ತಿರುವ ಕಥಾಸಂಗ್ರಹಗಳ ಮಟ್ಟ ಉಚ್ಚತರಗತಿಯದಲ್ಲದಿದ್ದರೆ ಅಂತಹವು ಜನರಿಗೆ ರುಚಿಸಲಾರವು.

ಈ ಸಂಗ್ರಹದಲ್ಲಿ ಮೊದಲನೆಯ ಕಥೆಯಲ್ಲಿ ಗಂಡನನ್ನೂ ಮಗುವನ್ನೂ ಕಳೆದುಕೊಂಡ ಹೆಣ್ಣುಮಗಳೊಬ್ಬಳು 'ಯಾರಿಗೋಸ್ಕರ ಬದುಕಬೇಕು' ಎಂದು ಜೀವವನ್ನು ಬಿಟ್ಟ ದುರಂತಚಿತ್ರವಿದೆ. ಲೇಖಕರಾದ ಶ್ರೀ॥ ಸಿ. ಕೃಷ್ಣರು ಕಥೆಯನ್ನು ಸಹಜವಾಗಿ ಬೆಳೆಯಿಸಿಕೊಂಡುಹೋಗಿದ್ದರೂ ಅದು ಆಕರ್ಷಕವಾಗಿಲ್ಲ. ಅವರವೇ ಆದ 'ಹೆತ್ತೊಡಲು' ಎಂಬ ಕಥೆಯಲ್ಲಿ ಉತ್ಸುಕತೆಯನ್ನು ಹೆಚ್ಚಿಸುವ ಕಥಾನಿರೂಪಣೆಯಿದೆ. ತನ್ನ ಮಗುವನ್ನು ಪ್ರೀತಿಸುತ್ತಿದ್ದ ನೆರೆಮನೆಯ ಗೃಹಸ್ಥನ ವಿಚಾರದಲ್ಲಿ ವಿಧವೆಯೊಬ್ಬಳು ತೋರಿದ ಗೌರವವನ್ನು ಆ ಗೃಹಸ್ಥನ ಪತ್ನಿ ತಪ್ಪಾಗಿ ಭಾವಿಸಿದುದು; ಕೊನೆಗೆ ನಿಜಸ್ಥಿತಿಯನ್ನರಿತು ಪಶ್ಚಾತ್ತಾಪ ಹೊಂದಿದುದು—ಈ ಕಥೆಯ ವಸ್ತು. ಮೂರನೆಯದಾದ 'ಕರಾಳಸರ್ಪ' ಎಂಬ ಕಥೆ ವಿಸ್ಮಯಜನಕವಾಗಿದೆ. ಆದರೆ ಅದರಲ್ಲಿ ಸ್ವಾಭಾವಿಕತೆಯಾಗಲಿ, ಸಣ್ಣಕತೆಗೆ ಅವಶ್ಯ ಬೇಕಾಗುವ 'ಬಿಗು' ವಾಗಲಿ ಕಂಡುಬರುವುದಿಲ್ಲ. ಅದರ ಲೇಖಕರಾದ ಶ್ರೀ॥ ಯೋಗ ಅವರು ಹೃದಯ ಕರಗುವ ರೀತಿಯಲ್ಲಿ ಬಡವ ಚಂದ್ರಪ್ಪನ ಕಳವಳವನ್ನೂ, ಕಲ್ಲುಹೃದಯದ ಡಾಕ್ಟರ್ ರಂಗರಾಯನ ಜಂಭ ಹಾಗೂ ಆತನ ಕನಿಕರಸ್ಥಿತಿಯನ್ನೂ "ಒಂದೆಡೆ ಡೋಲಿಯಲ್ಲಿ ಪ್ರಾಣಬಿಡುತ್ತಿರುವ ಬಾಲಕ, ಮತ್ತೊಂದೆಡೆ ಸ್ವಸುಖಾಪೇಕ್ಷಿಗಳ ಮರೆತ"ವನ್ನೂ ಚೆನ್ನಾಗಿ ಚಿತ್ರಿಸಿದ್ದಾರೆ. ಕೊನೆಯದಾದ 'ಬಾಳು' ಎಂಬ ಕಥೆಯಲ್ಲಿ ಹಳ್ಳಿಯ ಹುಡುಗಿಯೊಬ್ಬಳು ಒಬ್ಬನ ಮೋಸಕ್ಕೆ ಒಳಗಾಗಿ ಮುಂಬಯಿಗೆ ಹೋಗಿ ಅಲ್ಲಿ ಅನಿವಾರ್ಯವಾಗಿ ಹೀನಜೀವನವನ್ನು ನಡೆಯಿಸಿ ಕೊನೆಗೆ ಊರಕಡೆಗೆ ಹೊರಟು ಜೀವ ನೀಗಿದ ದುರಂತಚಿತ್ರವಿದೆ. ಆ ಕಥೆ ಹೀಗೆ ಮುಗಿಯುತ್ತದೆ: "ಎದೆಯೊಡೆಯುವ ನೋಟವನ್ನು ನೋಡಿ ಸಹಿಸಲಾರದೆ ಬೈಗಿನ ನೇಸರು ಅಸ್ತಗಿರಿಯ ಅಂಚಿನಲ್ಲಿ ಮರೆಯಾದನು." ಕಥಾಲೇಖಕರಾದ ಶ್ರೀ॥ ಶ್ರೀನಿವಾಸಯ್ಯಂಗಾರ್ಯರು ರಮ್ಯವಾದ, ಹೃದಯಸ್ಪರ್ಶಿಯಾದ ವರ್ಣನೆಗಳನ್ನು ಕೊಡಬಲ್ಲರು. "ಪಡುವೆಟ್ಟಿನ ಕೋಡುಗಲ್ಲಿನಮೇಲೆ ನೇಸರು ನಿಂತು ತಿರೆಯೆಡೆಗೆ ತನ್ನ ಬಗೆಬಗೆಯ ರಾಗಜಾಲವನ್ನು ಬೀಸಿದ್ದನು. ಅವನ ಎಳೆಯ ಕಿರಣಗಳು ಕಮಲು ಕುಳಿತಿದ್ದೆಡೆಗೆ ಹರಿದು ಅವಳ ನುಣ್ಗದಪುಗಳಮೇಲೆ ಆಡುತ್ತಿದ್ದವು. ದಂಡೆಯಲ್ಲಿದ್ದ ಮರಗಳಲ್ಲಿ ಇಂಚರದ ಹಕ್ಕಿಗಳು ಮರೆಮರೆತು ಹಾಡತೊಡಗಿದ್ದವು. ಸುತ್ತ ಬಹುದೂರದವರೆಗೂ ಕಣ್ಗೊಳಿಸುವ ಹಚ್ಚಹಸುರಿನ ಬಯಲು. ಮೆಲು ಮೆಲನೆ ಬೀಸುವ ತಮ್ಮೆಲರು"—ಇಂತಹ ವರ್ಣನೆಗಳು ಸುಂದರವಾಗಿದ್ದರೂ ಶುದ್ಧ ಸಣ್ಣ ಕಥಾಸ್ವರೂಪಕ್ಕೆ ಅವು ಅನಾವಶ್ಯಕವೆಂದು ತೋರಬಹುದು.

ಈ ಪುಸ್ತಕದಲ್ಲಿಯ 'ದೊಡ್ಡದಾದ ಕಣ್ಣುಗಳು' (ಪು. ೧೨), 'ಕಣ್ಣೀರುಗಳುದುರಿದವು' (ಪು. ೧೬), 'ಅವರ ನಿಷ್ಕಲ್ಮಷವಾದ ಹೃದಯಕ್ಕಾಗಿ ನನ್ನ ಅಶ್ರುಗಳಿಂದ ಅಭಿನಂದಿಸುತ್ತೇನೆ'

(ಪು. ೧೯), 'ಆಳುಗಳೆಲ್ಲಾ ಏಳಿಸಲ್ಪಟ್ಟರು' (ಪು. ೩೫), ಎಂಬ ಪ್ರಯೋಗಗಳನ್ನು ಸುಧಾರಿಸಿಕೊಂಡರೆ ಹಾಗೂ 'ಇರುಕಿಸಿ' (ಪು. ೩೬), 'ತಣಿಗೆ' (ಪು. ೩೧) ಎಂಬ ಪ್ರಾದೇಶಿಕ ಪ್ರಯೋಗಗಳನ್ನು ಬಿಟ್ಟರೆ ಒಳ್ಳೆಯದು.

ಎಸ್. ಎಸ್. ಮಾಳವಾಡ

---

೨೨. ಕರ್ನಾಟಕ ಒಕ್ಕಲುತನದ ಪ್ರದರ್ಶನದ ದಿಗ್ದರ್ಶನವು.—ಬೆಳಗಾವಿಯ 'ಗ್ರಾಮಸೇವಕ' ಪತ್ರಿಕೆಯ ವಿಶೇಷಸಂಚಿಕೆ.

ಇದರಲ್ಲಿ ಇದೇ ವರ್ಷದ ಜನವರಿ ತಿಂಗಳಲ್ಲಿ ಬೆಳಗಾವಿಯಲ್ಲಿ ನಡೆದ ಒಕ್ಕಲುತನದ ಪ್ರದರ್ಶನವನ್ನು ಕುರಿತ ವಿವರಗಳು ಅಡಗಿರುವುದು ಮಾತ್ರವೇ ಅಲ್ಲದೆ, ಗ್ರಾಮಪುನರುದ್ಧರಣ ಕಾರ್ಯಕ್ಕೆ ಮೂಲಾಧಾರವೆನಿಸಿಕೊಂಡಿರುವ ರೈತನ ಕಲ್ಯಾಣಕ್ಕೆ ಬೇಕಾಗುವ ಅನೇಕ ವಿಷಯಗಳಿಗೆ ಸಂಬಂಧಪಟ್ಟ ತಿಳಿವಳಿಕೆಗಳೂ ಸಹ ಸುಲಭಶೈಲಿಯಲ್ಲಿ ಸೇರಿಸಲ್ಪಟ್ಟಿವೆ. ಇವುಗಳನ್ನು ನಮ್ಮ ನಾಡಿನ ರೈತರು ಚೆನ್ನಾಗಿ ಮನನಮಾಡಿಕೊಂಡು ಆಚರಣೆಗೆ ತರುವ ಪ್ರಯತ್ನ ಮಾಡಿದ್ದೇ ಆದರೆ, ದೇಶೋನ್ನತಿಗೆ ಸಹಾಯಕವಾಗುವುದರಲ್ಲಿ ಯಾವ ಸಂಶಯವೂ ಇರಲಾರದು. ಇಷ್ಟೊಂದು ಮಹತ್ವದ ವಿಷಯಗಳನ್ನು ಪಂಡಿತಪಾಮರ ರಂಜನೆಯಾಗುವ ಶೈಲಿಯಲ್ಲಿ ಸಂಗ್ರಹಿಸಿ ಬರೆದಿರುವ ಶ್ರೀಮಾನ್ ಈಶ್ವರ ಸಣಕಲ್ಲ ಅವರೂ, ಅವುಗಳನ್ನೆಲ್ಲ ದೊಡ್ಡದೊಂದು ಪುಸ್ತಕರೂಪದಲ್ಲಿ ಅಚ್ಚುಹಾಕಿಸಿ, ತಮ್ಮ ಪತ್ರಿಕೆಯ ವಿಶೇಷಸಂಚಿಕೆಯಾಗಿ ಪ್ರಕಟಿಸಿ ಉಪಕಾರಮಾಡಿರುವ ಶ್ರೀಮಾ‌ನ್ ಎಸ್. ವ್ಹಿ. ಅಷ್ಟಣಗಿಯವರು, ಬಿ.ಎ., ಎಲ್‌ಎಲ್.ಬಿ. ಮತ್ತು ಶ್ರೀಮಾನ್ ಡಿ. ಎಸ್. ಪರಮಾಜರವರು, ಎಂ.ಎ., ಎಲ್‌ಎಲ್.ಬಿ. — ಇವರುಗಳೂ ಸಹ ದೇಶಾಭಿಮಾನಿಗಳಾದ ಸಮಸ್ತ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿರುತ್ತಾರೆ. ಹಳ್ಳಿಯ ಜನರ ಜೀವನವನ್ನು ಉತ್ತಮಗೊಳಿಸುವ ಕಾರ್ಯದಲ್ಲಿ ನಿರತರಾಗಿರುವ ಸಮಸ್ತರಿಗೂ ಈ ಪುಸ್ತಕದಿಂದ ವಿಶೇಷ ಪ್ರಯೋಜನ ಲಭಿಸುವುದರಲ್ಲಿ ಸಂಶಯವಿಲ್ಲ. ಬೇಕೆಂದ ವಿಷಯವನ್ನು ಥಟ್ಟನೆ ಹುಡುಕಿ ತೆಗೆಯಲನುಕೂಲಿಸುವಂತೆ ವಿವರವಾದ ವಿಷಯಾನುಕ್ರಮಣಿಕೆಯನ್ನು ಸೇರಿಸಿದ್ದರೆ ಪುಸ್ತಕದ ಉಪಯುಕ್ತತೆ ಮತ್ತಷ್ಟು ಹೆಚ್ಚುತ್ತಿತ್ತು.

ಡಿ. ಸಿ. ಸುಬ್ಬರಾಯಪ್ಪ

---

## ೧೯೩೪ನೆಯ ಏಪ್ರೆಲ್ ತಿಂಗಳಿಂದ ನವೆಂಬರು ಕೊನೆಯವರೆಗೆ

### (i) ಪರಿಷತ್ತಿಗೆ ವಿಮರ್ಶೆಗಾಗಿ ಬಂದ ಪುಸ್ತಕಗಳು

(೧) ಶ್ರೇಷ್ಠ ಶರಣೆ ಶ್ರೀ ಮಹಾದೇವಿಯಕ್ಕನ ಲಾವಣಿ.—ಶ್ರೀ॥ ಚಂದ್ರಶೇಖರ
ದೇವರು, (೨) ಭಗವಾನ್ ಮಹಾವೀರ.—ಶ್ರೀ॥ ಜಿ. ಪಿ. ರಾಜರತ್ನಂ ಅವರು, ಎಂ.ಎ.,
(೩) ಭಕ್ತಿಯೋಗ.—(ಅನುವಾದಕರು) ಶ್ರೀ॥ ವೈ. ಸುಬ್ಬರಾಯರು, (೪) ಗ್ರಹಚಾರ
ಅಥವಾ ಮ್ಯಾನೇಜರ್-ಮುಕುಂದ್, (೫) ವಿಧಿ ಅಥವಾ ಮದೋನ್ಮತ್ತ ಜಗದೀಶ.-ಶ್ರೀ॥
ಬಿ. ಎಸ್. ರಾಮಸ್ವಾಮಿ ಐಯಂಗಾರ್ಯರು, (೬) ರುಗ್ಣಶಯ್ಯೆ.—ಶ್ರೀ॥ ಕೆ. ಗೋಪಾಲ
ಕೃಷ್ಣರಾಯರು, ಬಿ.ಎ., (೭) ಭಾಸುಡು—ಶ್ರೀ॥ ಕೆಳಾಂಬಿ ರಾಘವಾಚಾರ್ಯರು,
(೮) ವ್ಯಾಮೋಹ—ಶ್ರೀ॥ ಬಿ. ಎಸ್. ರಾಮಸ್ವಾಮಿ ಐಯಂಗಾರ್ಯರು, (೯) ಸಂಗೀತ
ತಾರಾವಳಿ—ಶ್ರೀ॥ ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ., (೧೦) ಹಿಂದು-
ಯುನಾನಿ ಅನುಭವ ವೈದ್ಯರತ್ನ.—ಶ್ರೀ॥ ಬಿ. ಆರ್. ಗೋವಿಂದರಾಜುಲು ನಾಯ್ಡು ಅವರು,
(೧೧) ಪ್ರೇಮಯೋಗಿನಿ—ಶ್ರೀ॥ ಸಿ. ಕೆ. ನಾಗರಾಜಾರಾಯರು, (೧೨) ಸಣ್ಣ ಕತೆಗಳು
(ಬೇರೆಬೇರೆ ಲೇಖಕರಿಂದ)—ಪ್ರಕಾಶಕರು: ಕರ್ನಾಟಕ ಸಂಘ, ಚೆನ್ನರಾಯಪಟ್ಟಣ, (೧೩)
ವಿಜ್ಞಾನ.—ಗ್ರಂಥಕರ್ತರು: ಶ್ರೀ॥ ಜಿ. ಹನುಮಂತರಾಯರು, ಎಂ.ಎ., ಪ್ರಕಾಶಕರು:

ಕರ್ನಾಟಕ ಸಂಘ, ಶಿವಮೊಗ್ಗ–ಅವರಿಂದ, (೧೪) **ಮಿಂಚಿದ ಮಹಿಳೆಯರು** (ಮಿಂಚಿನ ಬಳ್ಳಿ ಗ್ರಂಥಮಾಲೆ).—ಸಂಪಾದಕರು: ಶ್ರೀ॥ ಬುರ್ಲಿ ಬಿಂದುಮಾಧವ ಅವರಿಂದ, (೧೫) **'ಮೋಪಾಸಾ'ನ ಕಥೆಗಳು.**— ಅನುವಾದಕರು: ಶ್ರೀ॥ ಗೋವಿಂದ ಚುಳಕಿ ಅವರಿಂದ, (೧೬) **ಬೆಲ್ಲಾ ಹಿಟ್ಟು,** (ಕತೆಗಾರರು: 'ವಸಂತ')— ಪ್ರಕಾಶಕರು: ಧಾರವಾಡದ ಮನೋಹರ ಗ್ರಂಥಮಾಲೆಯವರಿಂದ, (೧೭) **ಮಹಾಪೂರ**–(ಲೇಖಕರು: ಕುಲಕರ್ಣಿ ಶೇಷಗಿರಿರಾಯರು) ಮನೋಹರ ಗ್ರಂಥಮಾಲೆಯವರಿಂದ, (೧೮) **ಹುಚ್ಚು ಬೆಳದಿಂಗಳಿನ ಹೂಬಾಣಗಳು.**—(ಲೇಖಕರು: ಶ್ರೀ॥ ಪಿ. ರಮಾನಂದ ಅವರು) ಮನೋಹರ ಗ್ರಂಥಮಾಲೆಯವರಿಂದ, (೧೯) **ಸಂಧ್ಯಾರಾಗ**—(ಲೇಖಕರು: ಶ್ರೀ॥ ಅ. ನ. ಕೃಷ್ಣರಾಯರು) ಮನೋಹರ ಗ್ರಂಥಮಾಲೆಯವರಿಂದ, (೨೦) **ಉಪನಿಷತ್ತಿನ ಕಥೆಗಳು.**—(ಅನುವಾದಕರು: ಶ್ರೀ॥ ಕೆ. ಸಂಪದ್ಗಿರಿರಾಯರು, ಎಂ.ಎ.) ಪ್ರಕಾಶಕರು: ಶ್ರೀ॥ ನಿಟ್ಟೂರು ಶ್ರೀನಿವಾಸರಾಯರು, ಸತ್ಯಶೋಧನ ಪುಸ್ತಕ ಭಂಡಾರ, ಬೆಂಗಳೂರು ಅವರಿಂದ, (೨೧) **ಕವಿ ಕನಕದಾಸರು.**—ಶ್ರೀ॥ ಕಟ್ಟಿ ಶೇಷಾಚಾರ್ಯರು, (೨೨) **ಅಮಾತ್ಯನಂದಿನಿ**—ಶ್ರೀ॥ "ಭಾರತೀಸುತ," (೨೩) **ಭೌತಶಾಸ್ತ್ರದ ಪ್ರಥಮ ಪಾಠಗಳು** (ಭಾಗ ೧ ಮತ್ತು ಭಾಗ ೨).—ಶ್ರೀ॥ ಸಿ. ಎಸ್. ಶ್ರೀನಿವಾಸರಾಯರು, ಬಿ.ಎ., ಬಿ.ಟಿ., (೨೪) **ಗ್ರೀಕ್ ಪುರಾಣದ ಅದ್ಭುತ ರಮ್ಯ ಕತೆಗಳು**—ಪ್ರಕಾಶಕರು: ಪ್ರೇಮ ಪ್ರಕಟನಾಲಯ, ಧಾರವಾಡ ಅವರಿಂದ, (೨೫) **ಜೀವನ ಪ್ರಭಾತ.**—'ವಿಮಾವಾಣಿಜ್ಯ'ದ ವ್ಯವಸ್ಥಾಪಕ– ಸಂಪಾದಕರಿಂದ, (೨೬) **ಕಾನೂರು ಸುಬ್ಬಮ್ಮ ಹೆಗ್ಗಡತಿ** (೪) ಭಾಗಗಳು: ಲೇಖಕರು—ಶ್ರೀ॥ ಕೆ. ವಿ. ಪುಟ್ಟಪ್ಪನವರು, ಎಂ.ಎ.)– ಪ್ರಕಾಶಕರು: ಕಾವ್ಯಾಲಯ, ಶಿವಮೊಗ್ಗ–ಅವರಿಂದ, (೨೭) **ಪ್ರತಿಜ್ಞಾ ಯೌಗಂಧರಾಯಣ**– ಶ್ರೀ॥ ಎಲ್. ಗುಂಡಪ್ಪನವರು, ಎಂ.ಎ., (೨೮) **ಚಿತ್ರದುರ್ಗ.**—ಶ್ರೀ॥ ಹುಲ್ಲೂರು ಶ್ರೀನಿವಾಸ ಜೋಯಿಸರಿಂದ, (೨೯) **ನಮ್ಮೂರ ನಡತೆ**—ಶ್ರೀ॥ ಕೃಷ್ಣಪಾಟೀಲ ಅವರಿಂದ, (೩೦) **Founders of Vijayanagar** (By Mr. S. Srikantaiya, B.A., B.L, M.R.A.S.) From the Mythic Society, Bangalore, (೩೧) **ವೇದಪರಿಚಯ.**—(ಲೇಖಕರು: ವಿದ್ಯಾವಾಚಸ್ಪತಿ ಶ್ರೀ॥ ಶಂಭುಲಿಂಗ ಶಿವಾಚಾರ್ಯರು) ವಿದ್ಯಾವಾಚಸ್ಪತಿಗಳ ಗ್ರಂಥಾಲಯದ ಕಾರ್ಯದರ್ಶಿಗಳಿಂದ, (೩೨) **ಹಳ್ಳಿಯ ಹಾಡುಗಳು.**—(ಸಂಗ್ರಾಹಕರು: ಶ್ರೀ॥ ಬಿ. ಎನ್. ರಂಗಸ್ವಾಮಿಯವರು ಮತ್ತು ಶ್ರೀ॥ ಗೊರೂರು ರಾಮಸ್ವಾಮಿ ಐಯಂಗಾರ್ಯರು) ಪ್ರಕಾಶಕರು: ಗೊರೂರಿನ ರೈತಜ್ಞಾನ ಪ್ರಚಾರ ಮಂಡಲಿ ಅವರಿಂದ.

## (ii) ಪರಿಷತ್ತಿಗೆ ಬಂದಿರುವ ಇತರ ಪುಸ್ತಕ ಪ್ರಕಟನೆಗಳು

(೧) **ಹರಿಹರದೇವ.**— ಪ್ರಕಾಶಕರು: ರಾಜಾರಾಮ್ ಕಾಲೇಜಿನ ಕರ್ನಾಟಕ ಸಂಘದಿಂದ, (೨) **ಯೋಗ ಮಕರಂದ** (ಪ್ರಥಮ ಭಾಗ).— ಶ್ರೀ॥ ಟ. ಕೃಷ್ಣಮಾಚಾರ್ಯರಿಂದ, (೩) **ವಿಜ್ಞಾನ.**– ಶಿವಮೊಗ್ಗ ಕರ್ನಾಟಕ ಸಂಘದವರಿಂದ, (೪) **ಸ್ವಂತ ಜೀವನೋಪಾಯ**—ಕಿರಿಯರ ಪ್ರಪಂಚ, ಉಡುಪಿ ಅವರಿಂದ, (೫) **ಕೆನೆಹಾಲು,** (೬) **ಪರಮಾತ್ಮ ಬೋಧೆ,** (೭) **ಕೋದಂಡನ ಉಪನ್ಯಾಸಗಳು,** (೮) **ಸರಪಣಿ,** (೯) **ಚೆನ್ನಮ್ಮ.** —ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರಿಂದ, (೧೦) **ನಮ್ಮ ಉಡುಪಿ,** (೧೧) **ಧರ್ಮಸಂಕಟ.**—ಶ್ರೀ॥ ಕೊರಡ್ಕಲ್ ಶ್ರೀನಿವಾಸರಾಯರಿಂದ, (೧೨–೧೬) **ರೈತನ ಜೀವನ, ಕಳೆದ ಬಾಳು, ಮೇಲ್ಪಂಕ್ತಿ, ಇಂಗ್ಲಿಷ್ ಕವಿಕಾಣಿಕೆ, ಸರ್ ಜಗದೀಶ್ ಚಂದ್ರ ಬೋಸರು** (ಗ್ರಂಥ ಪ್ರದರ್ಶನದ ಕಾಲದಲ್ಲಿ ಬಂದವು).— ಶ್ರೀ॥ ಡಿ. ಆರ್. ರಾಮಯ್ಯನವರಿಂದ, (೧೭–೨೨) **ಪವಿತ್ರ ಜೀವನ, ಬಂಧನದ ಆಚೆ, ಸನ್ಯಾಸಿ, ಪೂರ್ಣಯೋಗ, ಬೆಳಗು, ಹೇಗಾದರೇನು.**— ಪ್ರಕಾಶಕರು: ಅರವಿಂದ ಗ್ರಂಥಮಾಲೆ, ಹಲಸಂಗಿ ಅವರಿಂದ, (೨೩) **ಮೈಸೂರು ಪ್ರಜಾಪ್ರತಿನಿಧಿಸಭೆಯ ನಡೆವಳಿಕೆಗಳು.**—ಮೈಸೂರು ಸರಕಾರದಿಂದ, (೨೪) **ಕೊಪಣ-ಕೊಪ್ಪಳ.** — ಕೊಪ್ಪಳದ ಕರ್ನಾಟಕ

ಸಂಘದವರಿಂದ, (೨೫) ಅದ್ವೈತ ಸಿದ್ಧಿಃ.—ಮೈಸೂರು ಓರಿಯಂಟಲ್ ಲೈಬ್ರೆರಿಯಿಂದ, (೨೬) ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಜಯಂತ್ಯುತ್ಸವದ ಕೈಪಿಡಿ.—ಜಯಂತ್ಯುತ್ಸವದ ಸಮಿತಿಯ ಅಧ್ಯಕ್ಷರಿಂದ, (೨೭) ೧೯೩೯ನೆಯ ಇಸವಿಯ ಮಿಡಲ್ ಸ್ಕೂಲ್ ಮತ್ತು ಅಪ್ಪರ್ ಪ್ರೈಮರಿ ಪರೀಕ್ಷೆಗಳಿಗೆ ಗೊತ್ತಾದ ಕನ್ನಡ ಗ್ರಂಥಗಳು, (೨೮) ೧೯೩೯ನೆಯ ಇಸವಿಯು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಗೊತ್ತಾದ ಕನ್ನಡ ಪದ್ಯಸಂಗ್ರಹ.—ಮೈಸೂರು ಸಂಸ್ಥಾನದ ವಿದ್ಯಾಭ್ಯಾಸದ ಇಲಾಖೆಯಿಂದ, (೨೯) ಅಷ್ಟಾವಕ್ರ ಗೀತ.— ಶ್ರೀ॥ ವಿದ್ವಾನ್ ವೈ. ಚಂದ್ರಶೇಖರ ಶಾಸ್ತ್ರಿ, ಎಂ.ಎ. ಅವರಿಂದ, (೩೦) Report on the Administration of Mysore,—ಮೈಸೂರು ಸರಕಾರದವರಿಂದ, (೩೧) Archæological Survey of Mysore: Annual Report, 1936 — ಡಾ॥ ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್.(ಲಂಡನ್) ಅವರಿಂದ, (೩೨) ಸಂಗೀತ ತಾರಾವಳಿ.—ಶ್ರೀ॥ ಬೆನಗಲ್ ರಾಮರಾವ್, ಎಂ.ಎ., ಎಲ್.ಎಲ್.ಬಿ. ಅವರಿಂದ, (೩೩) ಶ್ರೀಷ್ಟಶರಣೆ ಮಹದೇವಿಯಕ್ಕನ ಲಾವಣಿ.—ಶ್ರೀ॥ ಚಂದ್ರಶೇಖರದೇವರು ಅಡ್ನೂರು ಅವರಿಂದ, (೩೪) ಸಣ್ಣ ಕತೆಗಳು.—ಚೆನ್ನರಾಯಪಟ್ಟಣದ ಕರ್ನಾಟಕ ಸಂಘದವರಿಂದ, (೩೫) ಸರೋಜ ನಳಿನಿ.—ಬೆಂಗಳೂರಿನ ಕರ್ನಾಟಕ ಪ್ರಕಟನಾಲಯದವರಿಂದ, (೩೬) ಬುದ್ಧ ಗೀತಾವಳಿ—ಬೆಂಗಳೂರಿನ ವಿಶ್ವಬುದ್ಧ ಸಂಘದವರಿಂದ; (೩೭–೩೮) ನಾಣ್ನುಡಿ, ಬಾಲಗೀತೆ.— ಶ್ರೀ॥ ಕುಲಕರಣಿ ಪ್ರಹ್ಲಾದ ಅವರಿಂದ, (೩೯) ಸ್ವತಂತ್ರ ಜೀವನೋಪಾಯ.— (೪೦–೪೩) ನಾಡ ಕಥೆಗಳು,— ಹೆಂಡ್ತಿ ಗಂಡನಾದರೆ, ಸನ್ಯಾಸಿಯ ಸೋಗಿನಲ್ಲಿ, ಪುರುಷವಧು.— ಉಡುಪಿಯ ಕಿರಿಯರ ಪ್ರಪಂಚದವರಿಂದ, (೪೪) ಗಣೇಶನ ಕಥೆ.— ಶ್ರೀ॥ ದೇವುಡು ಅವರಿಂದ, (೪೫) ಒಂದೇ ತಿಂಗಳಲ್ಲಿ ಇಂಗ್ಲಿಷ್.—ಪಾದೂರು ವಾಸುದೇವ ಉಪಾಧ್ಯಾಯ, ಬಿ.ಎ., ಎಲ್.ಎಲ್.ಬಿ. ಅವರಿಂದ, (೪೬) ಮಹಾಕಾರುಣಿಕ ಶ್ರೀ ಬಸವಣ್ಣನವರು.— ಪ್ರಕಾಶಕರು: ಶ್ರೀ॥ ಡಿ. ಎಸ್. ಚಂದ್ರಪ್ಪನವರಿಂದ, (೪೭) ಸರ್ ಸಿ. ವಿ. ರಾಮನ್ ಅವರ ಜೀವನಚರಿತ್ರೆ.—ಶ್ರೀ॥ ಎಸ್. ಎನ್. ಲೋಕನಾಥ್ ಅವರಿಂದ (ಗ್ರಂಥಪ್ರದರ್ಶನ ಸಮಯದಲ್ಲಿ ಬಂದದ್ದು); (೪೮) ಆತ್ಮನಿವೇದನ.—ಶ್ರೀ॥ ಎಸ್. ಎಸ್. ಹೇರಲಗಿಯವರಿಂದ (ಗ್ರಂಥಪ್ರದರ್ಶನ ಕಾಲದಲ್ಲಿ ಬಂದದ್ದು), (೪೯) ಹೊಸಕನ್ನಡ ಪಾಠಮಾಲೆ.— ಪ್ರಕಾಶಕರು: ಯು. ಆರ್. ಶೆಣೈ ಅಂಡ್ ಸನ್ಸ್ ಅವರಿಂದ (ಗ್ರಂಥಪ್ರದರ್ಶನ ಕಾಲದಲ್ಲಿ ಬಂದದ್ದು), (೫೦) ಮದಾಲಸೋಪಾಖ್ಯಾನ.— ಶ್ರೀ॥ ಪೌರಾಣಿಕ ಸಾಲಿಗ್ರಾಮ ಶ್ರೀಕಂಠಶಾಸ್ತ್ರೀ ಅವರಿಂದ, (೫೧–೫೩) ಕಾಣ್ವತ್ರಿಕಾಲಸಂಧ್ಯಾ, ಶ್ರೀ ಬ್ರಹ್ಮಾನಂದ ಮಹಾರಾಜರು, ಶ್ರೀ ಕಣ್ವಮಠ ಚರಿತ್ರಾಮೃತ.—ವಿದ್ಯಾರಣ್ಯ ಗ್ರಂಥಮಾಲಾ ಅವರಿಂದ (ಗ್ರಂಥಪ್ರದರ್ಶನ ಕಾಲದಲ್ಲಿ ಬಂದವು), (೫೪) ಹಳ್ಳಿಯ ರಾಣಿ ಅಥವಾ ಸಾಣೆಹಿಡಿಯದ ವಜ್ರ.—ಶ್ರೀಮತಿ ಸುಂದರಮ್ಮ ನೆಲ್ಲೀಕಾಯಿ ಅವರಿಂದ, (೫೫) ಕಾಂಗ್ರೆಸ್ ಸುವರ್ಣ ಮಹೋತ್ಸವ ಸಂಚಿಕೆ.—'ವಿಶ್ವಕರ್ಣಾಟಕ'ದ ಸಂಪಾದಕರಿಂದ, (೫೬) ವಿದೇಶೀಯ ಲೋಕೋಪಕಾರಿಗಳು.—ಶ್ರೀ॥ ಎಲ್. ಸ್ವಾಮಿರಾವ್, ಬಿ.ಎ. ಅವರಿಂದ, (೫೭) ಕನ್ನಡ ಸಚಿತ್ರ ಕುಮಾರ ಸಂಭವಸಾರ.—ಶ್ರೀ॥ ಬಸವರಾಜ ಶಾಸ್ತ್ರೀ ಮಲ್ಲಿನಾಥ ಶಾಸ್ತ್ರೀ ಕೋಡಿಕೊಪ್ಪಮಠ ಅವರಿಂದ, (೫೮) ಶೂರ ಸುಭಾಸ್ ಚಂದ್ರ ಬೋಸ, (೫೯) ಗ್ರಾಮೋದ್ಯೋಗ ಆಂದೋಲನ.—ಶ್ರೀ॥ ಪಾಟೀಲ ಕಲ್ಲನಗೌಡರು, ಬಿ.ಎ. ಅವರಿಂದ, (ಗ್ರಂಥಪ್ರದರ್ಶನಕಾಲದಲ್ಲಿ ಬಂದವು), (೬೦) ಹರಿಜನಾಭ್ಯುದಯ.—ಹಾಸನ ಹರಿಜನ ಸೇವಕ ಸಂಘದವರಿಂದ, (೬೧) ಶ್ರೀ ಪುರಂದರ ಗುರು ಮಹೋತ್ಸವ.—ನಂಜನಗೂಡು ಕರ್ನಾಟಕ ಸಂಘದವರಿಂದ (ಗ್ರಂಥಪ್ರದರ್ಶನಕಾಲದಲ್ಲಿ ಬಂದದ್ದು), (೬೨) ತೌಳವ ಸ್ವಾತಂತ್ರ್ಯ—ಶ್ರೀ॥ ಬೇಕಾಲ ರಾಮನಾಯಕ ಅವರಿಂದ (ಗ್ರಂಥಪ್ರದರ್ಶನಕಾಲದಲ್ಲಿ ಬಂದದ್ದು), (೬೩) ಬಾಲಶಿಕ್ಷೆ.—ಬ್ಯಾಸೆಲ್ ಮಿಶ್ಯನ್ ಬುಕ್ ಡಿಪೋ, ಮಂಗಳೂರು ಅವರಿಂದ, (೬೪) ನಾಗಮಹಾಶಯ—ಬೆಂಗಳೂರು ಶ್ರೀ ರಾಮಕೃಷ್ಣಾಶ್ರಮ ಮಠದವರಿಂದ, (೬೫) The Karnataka

Historical Conference (Sixth Session): Presidential Address.— ಬೆಂಗಳೂರು ಪ್ರೆಸ್ ಅವರಿಂದ, (೬೬) ಚಿಕ್ಕಮಕ್ಕಳ ಸಲ್ಲಾಪ ಅಥವಾ ಕನ್ನಡ ಸಜೀವ ಬಾಲಬೋಧೆ— ಶ್ರೀ॥ ಎನ್. ಸಿದ್ದಲಿಂಗಪ್ಪ ಅವರಿಂದ, (೬೭) ಮಂಗಲಾಚರಣ.—ಶ್ರೀ॥ ರಾವತ್ ಚತುರ್ಭುಜದಾಸ್ ಚತುರ್ವೇದಿ ಅವರಿಂದ, (೬೮) ಯುಗಾದಿ.—ಶ್ರೀ॥ "ವಾಸುದೇವ" ಅವರಿಂದ, (೬೯) ಭಗವಾನ್ ಕುಸುಮಹರನಾಥ—ಶ್ರೀ॥ ಎಂ. ಕೃಷ್ಣರಾವ್ ಅವರಿಂದ, (೭೦) ಆರ್ಯಧರ್ಮ ತತ್ವಜ್ಞಾನ—ಶ್ರೀ॥ ಎಂ. ಬಿ. ಬಾಗಿ ಅವರಿಂದ, (೭೧–೭೯) ವೇದಗಳ ಮಹತ್ವ, ವೈದಿಕಧರ್ಮದ ಮಹತ್ವ, ಶ್ರಾದ್ಧನಿರ್ಣಯ (ಪ್ರಥಮ ಭಾಗ), ಶಂಕರ ರಾಮಾನುಜ ಮತ್ತು ದಯಾನಂದ, ಸಂಸ್ಕಾರ ಶ್ರೀ ಕೃಷ್ಣಸಂದೇಶ, ಸ್ವಮಂತ ವ್ಯಾಮಂತವ್ಯಪ್ರಕಾಶಃ, ಪೂಜಾರಹಸ್ಯ, ಜಾತಿಭೇದ ವಿಚಾರ, ಪರಮಾತ್ಮನ ದರ್ಶನ.— ಮಂಗಳೂರಿನ ವೈದಿಕಧರ್ಮ ಪ್ರಚಾರ ಸಂಘದವರಿಂದ. (೮೦) ಸಿರಿನಂಜುಂಡ ಶತಕ.— ನಂಜನಗೂಡು ಸದ್ವೈದ್ಯಶಾಲಾ ಮುದ್ರಣಾಲಯದವರಿಂದ; (೮೧) ಸಿರಿನೋಂಪಿ.—ಶ್ರೀ॥ ವಿ. ಶ್ರೀರಂಗಾಚಾರ್ಯರಿಂದ, (೮೨–೮೭) ಸಂಗೀತಾಮೃತಸಾರ.— (ಗ್ರಂಥಕರ್ತರು: ಶ್ರೀ॥ ವೈ. ವಿ. ವೆಂಕಟಗಿರಿಯಪ್ಪನವರು), ಕನ್ನಡ ಪ್ರಥಮ ವ್ಯಾಕರಣ, ೧೯೩೮ನೆಯ ಇಸವಿಯಲ್ಲಿ ನಡೆದ ವಿದುರಾಶ್ವತ್ಥದ ಗಲಭೆಯ ವಿಚಾರಣಾ ಸಮಿತಿಯವರ ವರದಿ, ಮೈಸೂರು ಪ್ರಜಾಪ್ರತಿನಿಧಿ ಸಭೆಯ ನಡವಳಿಕೆಗಳು, ೧೯೩೭ನೆಯ ಇಸವಿಯ VIನೆಯ ನಂಬರಿನ ಆಕ್ಟು, ಚರಿತ್ರೆಯ ಮಹಾಪುರುಷರು.—ಗೌರ್ನಮೆಂಟ್ ಸೆಂಟ್ರಲ್ ಬುಕ್ ಡಿಪೊ, ಬೆಂಗಳೂರು.

---

# ಅಂಗಸಂಸ್ಥೆಗಳ ವರದಿಗಳು

---

## ಕರ್ನಾಟಕ ಸಂಘ, ಶಿವಮೊಗ್ಗ

೬-೫-೧೯೩೮: "ಲಾವಣಿಗಳ ಹಾಡುಗಾರಿಕೆ".— ಶ್ರೀ॥ ಎನ್. ವಿಷಕಂಠರಾಯರಿಂದ.

೨೮-೫-೧೯೩೮: "ಕಾವ್ಯ ವಾಚನ" (ಶಿಶು ಸಾಹಿತ್ಯ).— ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ., ಶ್ರೀ॥ ಎ ಲಕ್ಷ್ಮಣರಾವ್ ಹೊಯಿಸಳ, ಬಿ.ಎ. ಅವರುಗಳಿಂದ.

೨೭-೬-೧೯೩೮: "ಬಂಕಿಮಚಂದ್ರಚಟ್ಟೋಪಾಧ್ಯಾಯರ ಜನ್ಮದಿನ ಶತಮಾನೋತ್ಸವ"— ಅಧ್ಯಕ್ಷರು:—ಆಸ್ಥಾನ ಮಹಾವಿದ್ವಾನ್ ಪಂಡಿತ ವೇ॥ ಬ್ರ॥ ಶ್ರೀ॥ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳು. ಉಪನ್ಯಾಸಗಳು: (೧) "ಬಂಕಿಮಚಂದ್ರರ ಜೀವನ ಚರಿತ್ರೆ".— ಶ್ರೀ॥ ಕೂಡಲಿ ಚಿದಂಬರಂ ಅವರು, ಬಿ.ಎ., ಎಲ್‌ಎಲ್.ಬಿ., (೨) "ವೆಂಕಟಾಚಾರ್ಯರ ಬಂಗಾಳಿ ಕಾದಂಬರಿಗಳು".—ಶ್ರೀ॥ ಎಚ್. ಶ್ರೀನಿವಾಸ ರಾಯರು, ಬಿ.ಎ., ಬಿ.ಎಲ್.

೧೭-೭-೧೯೩೮: ಉಪನ್ಯಾಸ—"ವಾರ್ಧಾ ಶಿಕ್ಷಣಕ್ರಮ".—ಶ್ರೀ॥ ಸುಬ್ಬಣ್ಣಾಚಾರ್ಯರು, ಬಿ.ಎಸ್‌ಸಿ., ಬಿ.ಟಿ. ಅವರಿಂದ. ಅಧ್ಯಕ್ಷರು: ಶ್ರೀ॥ ಎಚ್. ಲಿಂಗಪ್ಪನವರು, ಬಿ.ಎ., ಎಲ್‌ಎಲ್.ಬಿ.

೬-೮-೧೯೩೮: ಚರ್ಚಾಕೂಟ—"ವಾರ್ಧಾ ಶಿಕ್ಷಣಕ್ರಮವು ದೇಶದ ಹಿತಕ್ಕೆ ವಿರೋಧವೂ, ಆಚರಣೆಗೆ ತರಲು ಅಸಾಧ್ಯವೂ ಆಗಿದೆ".— ಅಧ್ಯಕ್ಷರು: ಶ್ರೀ॥ ಮಾಲೂರು ಸುಬ್ಬರಾವ್, ಬಿ.ಎ., ಎಲ್‌ಎಲ್.ಬಿ. ಅವರು; ವಿಷಯ ಪ್ರತಿಪಾದಿಸಿದವರು: ಶ್ರೀ॥ ಗಳಾದ (೧) ಎಚ್. ಲಿಂಗಪ್ಪ, ಬಿ.ಎ., ಎಲ್‌ಎಲ್.ಬಿ. ಅವರು, (೨) ಬಿ. ಆರ್. ಪುಟ್ಟನಂಜಪ್ಪನವರು, ಎಂ.ಎ., ಎಲ್‌ಎಲ್.ಬಿ.; ವಿರೋಧಿಸಿದವರು: ಶ್ರೀ॥ ಗಳಾದ (೧) ಬಿ. ಸುಬ್ಬಣ್ಣಾಚಾರ್ಯರು, ಬಿ.ಎಸ್‌ಸಿ., ಬಿ.ಟಿ.; (೨) ಎಚ್. ಸಿದ್ದಯ್ಯನವರು, ಬಿ.ಎ., ಎಲ್‌ಎಲ್.ಬಿ.

ಸುಮಾರು ೨೦ ಜನ ಚರ್ಚೆಯಲ್ಲಿ ಭಾಗವಹಿಸಿದ್ದರು; ಮೂರೂವರೆ ಗಂಟೆಯ ಕಾಲ ಚರ್ಚೆ ನಡೆದು ವಿಷಯ ಬಹುಮತದಿಂದ ಬಿದ್ದುಹೋಯಿತು.

೧೦-೮-೩೮ರಿಂದ ೧೨-೮-೩೮ರ ವರೆಗೆ (ಮೂರು ದಿನ ಸಂಜೆ): ನಾಲ್ಕನೆಯ ವ್ಯಾಖ್ಯಾನ ಮಾಲೆ: "ರಾಜ್ಯಪದ್ಧತಿಗಳು" ಎಂಬ ವಿಷಯವಾಗಿ ಉಪನ್ಯಾಸಗಳು: ಶ್ರೀ॥ ವಿ. ಸೀತಾರಾಮಯ್ಯ, ಎಂ.ಎ. ಅವರಿಂದ.

೯-೯-೩೮: ಉಪನ್ಯಾಸ— "ಕನ್ನಡ ಮಾತು"—ಶ್ರೀ॥ ತಿರುಮಲೆ ತಾತಾಚಾರ್ಯ ಶರ್ಮ ಅವರಿಂದ.

೩೦-೯-೩೮: "ಕನ್ನಡ ನಾಡಹಬ್ಬ".— ಅಧ್ಯಕ್ಷರು: ಶ್ರೀ॥ ಕೆ. ವಿ. ಪುಟ್ಟಪ್ಪನವರು, ಎಂ.ಎ.; ಕಾರ್ಯವಿವರ: (೧) ಪ್ರಾರ್ಥನೆ, (೨) ನೃತ್ಯಗೀತ— ಶಿಶುವಿಹಾರದ ಮಕ್ಕಳಿಂದ, (೩) ಅಧ್ಯಕ್ಷರ ಪ್ರಾರಂಭಭಾಷಣ, (೪) "ನವರಾತ್ರಿ ಹಬ್ಬ" (ಉಪನ್ಯಾಸ) — ಶ್ರೀ॥ ಬಿ. ಎನ್. ರಾಘವಯ್ಯ, ಬಿ.ಎ., ಬಿ.ಎಲ್. ಅವರಿಂದ, (೫) ಶಿವಶರಣರ ಮತ್ತು ಹರಿದಾಸರ ಕೀರ್ತನೆಗಳ ಹಾಡುಗಾರಿಕೆ— ಶ್ರೀ॥ ವಿದ್ವಾನ್ ಬಿ. ಶೇಷಪ್ಪನವರು, ಶ್ರೀ॥ ಮುನಿಯಾಜಿರಾಯರು ಅವರುಗಳಿಂದ.

೧-೧೦-೧೯೩೮: "ಕನ್ನಡ ನಾಡಹಬ್ಬ". ಕಾರ್ಯವಿವರ: ಬೆಳಗ್ಗೆ:—"ಕಾವ್ಯವಾಚನ".— ಸ್ಥಳೀಯ ಲೇಖಕರಾದ, ಶ್ರೀ॥ ಗಳಾದ ಎಸ್. ಎಸ್. ವೀರಪ್ಪನವರು, ಬಿ.ಎಸ್‌ಸಿ. (ಆನರ್ಸ್), ಎಂ. ಆರ್. ರಾಮಯ್ಯನವರು, ಬಿ.ಎ., ಸಿ. ಎಸ್. ಶ್ರೀನಿವಾಸ ಮೂರ್ತಿಗಳು, ಎಸ್. ಕೃಷ್ಣಮೂರ್ತಿಗಳು—ಇವರುಗಳಿಂದ. ಕಾವ್ಯವಾಚನ:—

"ಗದುಗಿನ ಭಾರತ", "ಬಸವರಾಜ ದೇವರ ರಗಳೆ":– ಶ್ರೀ॥ ಎಚ್. ಆರ್. ಮಾಧವರಾಯರಿಂದ. ಸಂಜೆ:–(೧) ಸಂಗೀತ: ಶ್ರೀಮತಿ ಶಾರದಮ್ಮನವರಿಂದ, (೨) ಉಪನ್ಯಾಸ: "ಬೈಲಾಟಗಳು".– ಶ್ರೀ॥ ಎಸ್. ಎಸ್. ವೀರಪ್ಪನವರು, ಬಿ.ಎಸ್‌ಸಿ. (ಆನರ್ಸ್), (೩) ಉಪನ್ಯಾಸ: "ಕನ್ನಡಿಗರ ಧಾರ್ಮಿಕ ಜೀವನ".– ಶ್ರೀ॥ ಜಿ. ಗುರುನಂಜಯ್ಯ, ಬಿ.ಎ., ಬಿ.ಎಲ್. ಅವರಿಂದ, (೪) ಅಧ್ಯಕ್ಷರ ಭಾಷಣ.

೭–೧೦–೧೯೩೮: ಕಾವ್ಯವಾಚನ: "ಶ್ಮಶಾನ ಕುರುಕ್ಷೇತ್ರ".–ಶ್ರೀ॥ ಕೆ. ವಿ. ಪುಟ್ಟಪ್ಪ, ಎಂ.ಎ. ಅವರಿಂದ.

ನಾಡಹಬ್ಬದಲ್ಲಿ ಬಂದ ರೂ. ೮ ಗಳ ಕಾಣಿಕೆಯನ್ನು ಪರಿಷತ್ತಿನ ಶಾಶ್ವತನಿಧಿಗೆ ಕಳುಹಿಸಲಾಯಿತು. ಕಳೆದ ಮೇ ತಿಂಗಳಿನಲ್ಲಿ ಆನವಟ್ಟಿಯಲ್ಲಿ ಪರಿಷತ್ತಿನ ಆಶ್ರಯದಲ್ಲಿ ನಡೆದ "ವಸಂತ ಸಾಹಿತ್ಯೋತ್ಸವ"ದ ಏರ್ಪಾಟಿನಲ್ಲಿ ಸಹಕರಿಸಿದ್ದಲ್ಲದೆ, ಆ ಉತ್ಸವಕ್ಕೆ ೨೫ ರೂ. ಗಳ ಸಹಾಯದ್ರವ್ಯ ಕೊಡಲಾಯಿತು. ಶ್ರೀ॥ ಜಿ. ಹನುಮಂತರಾವ್, ಎಂ.ಎ. ಅವರ "ವಿಜ್ಞಾನ" ಎಂಬ ಗ್ರಂಥವನ್ನು ಸಂಘದ ಪ್ರಕಟನೆಯನ್ನಾಗಿ ತೆಗೆದುಕೊಳ್ಳಲಾಗಿದೆ. ಶ್ರೀ॥ ದ. ರಾ. ಬೇಂದ್ರೆ, ಎಂ.ಎ. ಅವರ "ನಾದಲೀಲೆ" ಸದ್ಯದಲ್ಲಿಯೇ ಹೊರಬೀಳಲಿದೆ. ಸಂಘದ ಪುಸ್ತಕಭಂಡಾರಕ್ಕೆ ಈಚೆಗೆ ೬೫ ಗ್ರಂಥಗಳು ಸೇರಿವೆ; ಈಗ ಗ್ರಂಥಭಂಡಾರದಲ್ಲಿ ಒಟ್ಟು ೯೩೪ ಪುಸ್ತಕಗಳು ಇವೆ. ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯವರು ದಿವಂಗತ ಶ್ರೀ॥ ಬಿ. ವೆಂಕಟಾಚಾರ್ಯರ ಭಾವಚಿತ್ರವನ್ನು ಸಂಘಕ್ಕೆ ದಾನಮಾಡಿ ಪ್ರೋತ್ಸಾಹಿಸಿರುತ್ತಾರೆ.

ಎಸ್. ವಿ. ಕೃಷ್ಣಮೂರ್ತಿರಾವ್,
ಗೌರವ ಕಾರ್ಯದರ್ಶಿ.

---

## ಕರ್ನಾಟಕ ಸಂಘ, ತಿಪಟೂರು

೧೮–೪–೧೯೩೮: ಉಪನ್ಯಾಸ.–"ಪಂಪಭಾರತದ ಕರ್ಣ".–ಶ್ರೀ॥ ಪಂ. ವಿ. ಶ್ರೀರಂಗಾಚಾರ್ಯರಿಂದ.–ಅಧ್ಯಕ್ಷರು: ಶ್ರೀ॥ ಸಿ. ಸುಬ್ಬರಾಯರು, ಎಂ.ಎ. (ಆನರ್ಸ್).

೧೩–೬–೧೯೩೮, ೧೪–೬–೧೯೩೮:–ಮೈಸೂರು ವಿಶ್ವವಿದ್ಯಾನಿಲಯದ ಉಪಾಧ್ಯಾಯ ಸಂಘದವರಿಂದ ಉಪನ್ಯಾಸಗಳು.

೧೩–೬–೧೯೩೮: (೧) ಉಪಕ್ರಮ ಭಾಷಣ: ಡಾ॥ ಎಂ. ಎಚ್. ಕೃಷ್ಣ, ಎಂ.ಎ., ಡಿಲಿಟ್. ಅವರಿಂದ; (೨) "ಕಾಳಿದಾಸ"– ಶ್ರೀ॥ ಎನ್. ಶಿವರಾಮ ಶಾಸ್ತ್ರಿ, ಎಂ.ಎ. ಅವರಿಂದ; (೩) "ವಯಸ್ಸಿಗೂ ವ್ಯಾಧಿಗಳಿಗೂ ಸಂಬಂಧವುಂಟೆ?"– ಡಾ॥ ಡಿ. ಶಾಮಣ್ಣ, ಬಿ.ಎ., ಎಂ.ಬಿ.ಬಿ.ಎಸ್. ಅವರಿಂದ.

೧೪–೬–೧೯೩೮: (೧) "ಬ್ರಾಹ್ಮಣ ಕವಿಗಳು"– ಶ್ರೀ॥ ಕೆ. ವೆಂಕಟರಾಮಪ್ಪ, ಎಂ.ಎ. ಅವರಿಂದ; (೨) "ಮಾರ್ಕಸ್ ಆರಿಲಿಯಸ್".–ಶ್ರೀ॥ ಎನ್. ಕಸ್ತೂರಿ, ಎಂ.ಎ., ಬಿ.ಎಲ್. ಅವರಿಂದ; (೩) "ಔಷಧಶಾಸ್ತ್ರದ ಬೆಳವಣಿಗೆ"– ಡಾ॥ ಜಿ. ಎಸ್. ರಘುನಾಥರಾವ್, ಬಿ.ಎಸ್‌ಸಿ., ಎಂ.ಬಿ.ಬಿ.ಎಸ್., ಡಿ.ಪಿ.ಎಚ್. ಅವರಿಂದ.

೪–೭–೧೯೩೮: ಚರ್ಚೆ–ವಿಷಯ: "ಪಾಶ್ಚಾತ್ಯ ಸಂಸರ್ಗದಿಂದ ಭರತಖಂಡವು ಅಭಿವೃದ್ಧಿಗೆ ಬರುತ್ತಿದೆ"– ಸೂಚಕರು: ಶ್ರೀ॥ ಕೆ. ವಿ. ಸೂರ್ಯನಾರಣಪ್ಪನವರು, ಬಿ.ಎಸ್‌ಸಿ.; ವಿರೋಧಕರು: ಶ್ರೀ॥ ಡಿ. ಎಂ. ಶಂಕರಪ್ಪನವರು.

೫–೮–೧೯೩೮: ಉಪನ್ಯಾಸ– "ರಾಘವಾಂಕನ ಹರಿಶ್ಚಂದ್ರಕಾವ್ಯ"–ಶ್ರೀ॥ ಪಂ. ವಿ. ಶ್ರೀರಂಗಾಚಾರ್ಯರಿಂದ; ಅಧ್ಯಕ್ಷರು.– ಶ್ರೀ॥ ಡಿ. ಎಸ್. ಮಲ್ಲಪ್ಪನವರು.

೧೨–೮–೧೯೩೮: ಉಪನ್ಯಾಸ– "ಕ್ರಾಂತಿದೀಪ" ಶ್ರೀ॥ ಟಿ. ಎನ್. ಮಹದೇವಯ್ಯ, ಬಿ.ಎಸ್‌ಸಿ. ಅವರಿಂದ; ಅಧ್ಯಕ್ಷರು: ಶ್ರೀ॥ ಬಿ. ನಂಜಪ್ಪನವರು.

೧೯-೮-೧೯೩೮; ೨೦-೮-೧೯೩೮: ಉಪನ್ಯಾಸಗಳು—(೧) "ಕನ್ನಡ ಸಾಹಿತ್ಯದಲ್ಲಿ ವಚನಕಾರರ ಸ್ಥಾನ"; (೨) "ಶರಣ ಸಾಹಿತ್ಯ".—ಶ್ರೀ॥ ಮಂಜಪ್ಪ ಹಾರ್ಡೀಕರ್ ಅವರಿಂದ. ಅಧ್ಯಕ್ಷರು: ಶ್ರೀಮಾನ್ ಟ. ಎಸ್. ಮಲ್ಲಪ್ಪನವರು, ಬಿ.ಎ., ಎಲ್‌ಎಲ್.ಬಿ.

೨೪-೮-೧೯೩೮: "ಕಾವ್ಯವಾಚನ"— ಶ್ರೀ॥ ವೇ॥ ಟ. ರುದ್ರಪ್ಪ ಶಾಸ್ತ್ರಿಗಳಿಂದ; ಅಧ್ಯಕ್ಷರು: ಶ್ರೀ॥ ಬಿ. ನಂಜಪ್ಪನವರು.

೨-೯-೧೯೩೮: ಉಪನ್ಯಾಸ— "ತತ್ವಜ್ಞಾನ ಮತ್ತು ಜೀವನಮಾರ್ಗ".—ಶ್ರೀ॥ ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳಿಂದ. ಅಧ್ಯಕ್ಷರು: ಶ್ರೀ॥ ಎಚ್. ಪಿ. ರಾಮಣ್ಣನವರು, ಬಿ.ಎ., ಬಿ.ಟ.

೯-೯-೧೯೩೮: ಉಪನ್ಯಾಸ—"ಪುರಜನರ ಜವಾಬ್ದಾರಿ".—ಶ್ರೀ॥ ಎ. ಟ. ಶ್ಯಾಮಾಚಾರ್, ಬಿ.ಎಸ್‌ಸಿ. ಅವರಿಂದ. ಅಧ್ಯಕ್ಷರು: ಶ್ರೀ॥ ಡಿ. ಎಸ್. ಸುಬ್ಬರಾವ್, ಬಿ.ಎ., ಎಲ್‌ಎಲ್.ಬಿ. ಅವರು.

೧೬-೯-೧೯೩೮: ಉಪನ್ಯಾಸ—"ನವೀನ ಭರತಖಂಡಕ್ಕೆ ಭಗವದ್ಗೀತೆಯ ಸಂದೇಶ".—ರಂಗನಾಥಾನಂದ ಸ್ವಾಮಿಯವರಿಂದ. ಅಧ್ಯಕ್ಷರು: ಶ್ರೀ॥ ಡಿ. ಎಸ್. ಮಲ್ಲಪ್ಪನವರು.

೧೪-೧೦-೧೯೩೮: ಉಪನ್ಯಾಸ— "ಇಂದಿನ ಬರಹದ ಮತ್ತು ಬಳಕೆಯ ಕನ್ನಡ".—ಶ್ರೀ॥ ಎಂ. ಎಸ್. ಚೆನ್ನಕೇಶವಯ್ಯ, ಬಿ.ಎ. ಅವರಿಂದ.

ವಿ. ಶ್ರೀರಂಗಾಚಾರ್,
ಕಾರ್ಯದರ್ಶಿ.

---

## ಕರ್ನಾಟಕ ಸಂಘ, ಮಂಡ್ಯ

ಈ ವರ್ಷದ ಪ್ರಾರಂಭದಲ್ಲಿ ಶ್ರೀ॥ ಗಳಾದ ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟ. ಅವರೂ, ಬಿ. ವಿ. ಕೃಷ್ಣನ್, ಬಿ.ಎ., ಬಿ.ಎಲ್. ಅವರೂ ಸಂಘದ ಕಾರ್ಯದರ್ಶಿಗಳಾಗಿ ಚುನಾಯಿತರಾಗಿರುತ್ತಾರೆ.

೨೮-೯-೧೯೩೮: "ಗಾಂಧಿ ಜಯಂತಿ"—ಉಪನ್ಯಾಸಕರು: ಶ್ರೀ॥ಗಳಾದ ಮಹಾಬಲರಾಯರು, ಬೀರಪ್ಪನವರು, ಶಾಮಣ್ಣನವರು.—ಅಧ್ಯಕ್ಷರು: ಶ್ರೀ॥ ಸಿ. ಟ. ನರಸಿಂಹ ಅಯ್ಯಂಗಾರ್ಯರು.

೧೧-೧೦-೧೯೩೮: ಉಪನ್ಯಾಸ.— "ರೈತನ ಸಾಲ, ಅದರ ಕಾರಣ ಮತ್ತು ನಿವಾರಣೋಪಾಯಗಳು"—ಶ್ರೀ॥ ಎಂ. ಜಿ. ಮೇಕ್ರಿ, ಬಿ.ಎ., ಎಲ್‌ಎಲ್.ಬಿ. ಅವರು. ಅಧ್ಯಕ್ಷರು: ಶ್ರೀ॥ ಕೆ. ವಿ. ಶ್ರೀನಿವಾಸಾಚಾರ್ಯರು.

೧೫-೧೦-೧೯೩೮: ಉಪನ್ಯಾಸ— "ಮುದ್ದಣನ 'ರಾಮಾಶ್ವಮೇಧ'"— ಶ್ರೀ॥ ಮಹಾಬಲರಾಯರಿಂದ.

ಜಿ. ವೆಂಕಟಸುಬ್ಬಯ್ಯ,
ಬಿ. ವಿ. ಕೃಷ್ಣನ್,
ಗೌರವ ಕಾರ್ಯದರ್ಶಿಗಳು.

೨೬-೧೦-೧೯೩೮

---

## ಕರ್ನಾಟಕ ಸಂಘ, ಕೋಲಾರ

೨-೬-೧೯೩೮: ಉಪನ್ಯಾಸ—"ಶ್ರೀಮದ್ಭಗವದ್ಗೀತೆ"—ಉಡುಪಿಯ ಪುತ್ತಿಗೆಯ ಮಠದ ಶ್ರೀ॥ ಶ್ರೀಸ್ವಾಮಿಗಳಿಂದ.

೨೯-೬-೧೯೩೮: ಎಲ್ಲ ಸದಸ್ಯರ ವರ್ಷದ ಸಭೆ—ಅಧ್ಯಕ್ಷರು: ಶ್ರೀ॥ ಟ. ಶ್ರೀನಿವಾಸಾಚಾರ್ಯರು.

೭–೮–೯೯೩೮ ಉಪನ್ಯಾಸ :–"ಶಿಕ್ಷಣವಿಚಾರದಲ್ಲಿ ಸುಧಾರಣೆಗಳು"–ಶ್ರೀ॥ ಕೆ. ಸಂಪದ್ಗಿರಿರಾಯರಿಂದ.

೨೫–೮–೯೯೩೮ : ಕೀರ್ತನ : "ಈಶ್ವರಾನುಗ್ರಹ"–ಕೀರ್ತನಕೇಸರಿ ಶ್ರೀ॥ ಬಿ. ಶಿವಮೂರ್ತಿ ಶಾಸ್ತ್ರಿಗಳಿಂದ.

೨೬–೧೦–೯೯೩೮ : ಉಪನ್ಯಾಸ–"ದಾಸ ಸಾಹಿತ್ಯ"–ಶ್ರೀ॥ ಬೇಲೂರು ಕೇಶವದಾಸರಿಂದ.

ಸಿ. ವಿ. ಗುರುರಾಜಾಚಾರ್ಯ,
ಎಂ. ವೆಂಕಟಕೃಷ್ಣಪ್ಪ,
ಗೌರವ ಕಾರ್ಯದರ್ಶಿಗಳು.

---

## ಕರ್ನಾಟಕ ಸಂಘ, ಚಿತ್ರದುರ್ಗ

೩೧–೧–೯೯೩೮ : "ಪುರಂದರದಾಸರ ಪುಣ್ಯದಿನ"–ಅಧ್ಯಕ್ಷರು : ಶ್ರೀ॥ ಎನ್. ಭೀಮರಾಯರು– ವಿವರ :–(೧) "ದಾಸರ ಜೀವನಚರಿತ್ರೆ" ಶ್ರೀ॥ ಎಚ್. ವೆಂಕೋಬರಾಯರು ; (೨) "ಪುರಂದರದಾಸರೂ ಕನ್ನಡ ಸಾಹಿತ್ಯವೂ"– ಶ್ರೀ॥ ಟಿ. ಎಸ್. ರಾಮಸ್ವಾಮಯ್ಯನವರು ; (೩) "ದಾಸವಚನಾಮೃತ"–ಶ್ರೀ॥ ಆರ್. ರಾಮಚಂದ್ರರಾಯರು, ಎಂ.ಎ., ಬಿ.ಟಿ. ; (೪) "ದಾಸರ ಪದಗಳು"– ಶ್ರೀ॥ ಸಿ. ರಂಗಯ್ಯನವರು.

೪–೩–೯೯೩೮ : "ರಾಜಶೇಖರವಿಲಾಸ"– ಶ್ರೀ॥ ಪರಮಿ ವೆಂಕಟಸುಬ್ಬಯ್ಯನವರಿಂದ; ಅಧ್ಯಕ್ಷರು : ಶ್ರೀ॥ ಎಲ್. ಅಬ್ದುಲ್ ಅಜೀಜ್‌ಖಾನ್‌ರವರು, ಎಂ.ಎಸ್‌ಸಿ., ಬಿ.ಟಿ.

೧೦–೩–೯೯೩೮ : "ಲಾವಣಿ"–ಹಾಡಿದವರು : ಶ್ರೀ॥ ಬ್ರಹ್ಮಾನಂದ ಲಾವಣೀ ಗೂಳೇಶರು.

೧–೪–೯೯೩೮ : "ಭಾರತವಾಚನ" (ಗದುಗಿನ ಭಾರತ : ಭೀಷ್ಮಪರ್ವ) ಶ್ರೀ॥ ಎಸ್. ಜಿ. ಬಿಂದೂರಾಯರಿಂದ.

೯–೪–೯೯೩೮ : ಉಪನ್ಯಾಸ–"ನಾಗಚಂದ್ರ ಚಿತ್ರಿಸಿರುವ ರಾವಣ"–ಶ್ರೀ॥ ಎಚ್. ಎಂ. ಶಂಕರನಾರಾಯಣರಾವ್, ಎಂ.ಎ. ಅವರಿಂದ.

೨೪–೯–೯೯೩೮ರಿಂದ ೪–೧೦–೯೯೩೮ರ ವರೆಗೆ : "ನಾಡಹಬ್ಬ"–ವಿವರ : (೧) ೨೪–೯–೯೯೩೮ : ಹರಿಕಥೆ–"ಶ್ರೀಕೃಷ್ಣ"–ಕೀರ್ತನಕೇಸರಿ ಶ್ರೀ॥ ಬೇಲೂರು ಕೇಶವದಾಸರು ; (೨) ೨೫–೯–೯೯೩೮ : "ಕಾಳಿದಾಸನ ಮೇಘದೂತ"– ಶ್ರೀ॥ ಪಿ. ವಿ. ನರಸಿಂಗರಾಯರು, ಎಂ.ಎ. ; (೩) ೨೬–೯–೯೯೩೮ : "ಆಧುನಿಕ ಕವಿತಾ ವಾಚನ"–ಶ್ರೀ॥ ಹೊಯಿಸಳರು ; (೪) ೨೭–೯–೯೯೩೮ : "ಲಾವಣಿಗಳು" ಶ್ರೀ॥ ಸಿ. ಬಸಪ್ಪನವರು ; (೫) ೨೮–೯–೯೯೩೮ : "ದ್ರಾವಿಡ ವೈಷ್ಣವ ಗೀತೆಗಳು"–ಶ್ರೀ॥ ಪಿ. ಎಂ. ಸೋಮಸುಂದರನ್‌ರವರು, ಎಂ.ಎ., ಎಲ್.ಟಿ.

(೬) ೨೯–೯–೯೯೩೮ : ಭಾರತವಾಚನ 'ಜೈಮಿನಿ ಭಾರತ' (ಮಯೂರಧ್ವಜ) }
(೭) ೩೦–೯–೯೯೩೮ : ಭಾರತವಾಚನ (ಜೈಮಿನಿ ಭಾರತ : "ಚಂದ್ರಹಾಸ") } ಗಮಕಿಗಳು : ಶ್ರೀ॥ ಎಸ್. ಜಿ. ಬಿಂದೂರಾಯರು.

(೮) ೧–೧೦–೯೯೩೮ : ಭಾರತವಾಚನ ('ಗದುಗಿನ ಭಾರತ') : ಸರ್ಪಾಸ್ತ್ರ ಪ್ರಯೋಗ ; ಗಮಕಿಗಳು : ಶ್ರೀಮಾನ್ ಎ. ಎನ್. ಸದಾಶಿವರಾಯರು, ಬಿ.ಎ.

(೯) ೨೧–೧೦–೧೯೩೮: ಭಾರತವಾಚನ–'ಗದುಗಿನ ಭಾರತ': 'ಬಕಾಸುರನ ವಧೆ'
(೧೦) ೩–೧೧–೧೯೩೮: ಭಾರತವಾಚನ ('ಗದುಗಿನ ಭಾರತ': 'ಜರಾಸಂಧವಧೆ')
(೧೧) ೪–೧೧–೧೯೩೮: ಭಾರತವಾಚನ 'ಗದುಗಿನ ಭಾರತ': 'ಸುಭದ್ರಾಕಲ್ಯಾಣ'
} ಗಮಕಿಗಳು: ಶ್ರೀ॥ ಎಸ್. ಜಿ. ಬಿಂದೂರಾಯರು.

೩–೧೦–೧೯೩೮: ಉಪನ್ಯಾಸ—"ಸಾಹಿತ್ಯದಲ್ಲಿ ನವಚೇತನ".—ಶ್ರೀ॥ ಪರಮಿ ಪದ್ಮನಾಭಯ್ಯನವರಿಂದ.

೨೨–೧೦–೧೯೩೮ರಿಂದ ೨೪–೧೦–೧೯೩೮ರ ವರೆಗೆ: "ಕರ್ನಾಟಕೋತ್ಸವ"— ವಿವರ: ತಾ॥ ೨೨–೧೦–೧೯೩೮:— (೧) "ನಾಡದೇವಿಯ ಸ್ತುತಿ"—ಶ್ರೀ॥ ಸಿ. ರಂಗಯ್ಯನವರು; (೨) "ತಲಕಾಡಿನ ಗಂಗರು"—ಶ್ರೀ॥ ಎ. ಎಸ್. ಸದಾಶಿವರಾಯರು, ಬಿ.ಎ.; (೩) "ನಿತ್ಯಾತ್ಮಕ ಶುಕಯೋಗಿಯ ಭಾಗವತವಾಚನ" ('ನರಕಾಸುರ ವಧೆ')—ಶ್ರೀ॥ ಎಸ್. ಜಿ. ಬಿಂದೂರಾಯರು.

೨೩–೧೦–೧೯೩೮: "ವಿಜಯನಗರ ಸಾಮ್ರಾಜ್ಯ"— ಶ್ರೀ॥ ಟಿ. ನಂಜುಂಡ ಶಾಸ್ತ್ರಿಗಳು, ಎಂ.ಎ.

೨೪–೧೦–೧೯೩೮:— (೧) "ಕರ್ನಾಟಕದ ಏಕೀಕರಣ"— ಶ್ರೀ॥ ಟಿ. ಎಸ್. ರಾಮಸ್ವಾಮಯ್ಯನವರು; (೨) "ಕನ್ನಡ ಕೀರ್ತನೆಗಳು"—ಶ್ರೀ॥ ಸಿ. ರಂಗಯ್ಯನವರು.

ಉಂತಕಲ್ ಶ್ರೀನಿವಾಸರಾವ್,
ಬಿ. ಕೆ. ರಾಮಚಂದ್ರರಾವ್,
ಗೌರವ ಕಾರ್ಯದರ್ಶಿಗಳು.

---

## ಕರ್ನಾಟಕ ಸಂಘ, ಚೆನ್ನರಾಯಪಟ್ಟಣ

೦–೫–೧೯೩೮: ಉಪನ್ಯಾಸ—ಶ್ರೀ॥ ಕೆ. ವಿ. ನಾರಾಯಣರಾಯರು, ಶ್ರೀ॥ ಆರ್. ಅನಂತರಾಮಯ್ಯನವರು—ಇವರುಗಳಿಂದ.

೧೫–೫–೧೯೩೮: ಉಪನ್ಯಾಸ—"ಕಾಳಿದಾಸ ಕವಿ".—ಶ್ರೀ॥ ವಿ. ಜಿ. ಕುಲಕರ್ಣಿ, ಎಂ.ಎ., ಎಲ್‌ಎಲ್.ಬಿ. ಅವರಿಂದ.

೨೭–೬–೧೯೩೮: ಚರ್ಚಾಗೋಷ್ಠಿ—ವಿಷಯ: "ಪೌರಾಣಿಕನಾಟಕಗಳಿಗೆ ಇದು ಕಾಲವಲ್ಲ"; ಅಧ್ಯಕ್ಷರು: ಶ್ರೀ॥ ಕೆ. ಕೃಷ್ಣಸ್ವಾಮಯ್ಯಂಗಾರ್ಯರು, ಎಂ.ಎ., ಬಿ.ಟಿ.

೧೦–೭–೧೯೩೮: ಉಪನ್ಯಾಸ—"ಸಂಸ್ಕೃತ ಸಾಹಿತ್ಯದಲ್ಲಿ ಸೌಂದರ್ಯ"—ವಿದ್ವಾನ್ ಕೆ. ಸೀತಾರಾಮ ಶಾಸ್ತ್ರಿಗಳಿಂದ.

೨೬–೭–೧೯೩೮: ಗ್ರಾಮ ಪುನರುಜ್ಜೀವನ ಕಾರ್ಯ— ಈ ತಾಲ್ಲೂಕಿನ 'ಎಲಿಯೂರು' ಗ್ರಾಮದಲ್ಲಿ—ಕಾರ್ಯಕ್ರಮ: ಉಪನ್ಯಾಸ, ಕಾವ್ಯವಾಚನ, ಜನಪದಸಾಹಿತ್ಯ ವಾಚನ ಮುಂತಾದುವು; ಅಧ್ಯಕ್ಷರು: ಶ್ರೀ॥ ಎಸ್. ವಿ. ಶ್ರೀನಿವಾಸನ್, ಬಿ.ಎ. ಅವರು.

೧೪–೮–೧೯೩೮: (ರಾತ್ರಿ) ನಾಟಕಾಭಿನಯ—"ಮಂಡೋದರಿ".

೨೩–೮–೧೯೩೮: ಉಪನ್ಯಾಸ—"ಭಾಷೆ ಮತ್ತು ಜೀವನದ-ಉನ್ನತಿ".—ಶ್ರೀ॥ ತಿ. ತಾ. ಶರ್ಮರವರಿಂದ.

೨೫–೯–೧೯೩೮: "ಕನ್ನಡದ ಹಬ್ಬ".—ಕಾರ್ಯಕ್ರಮ: ಉಪನ್ಯಾಸ, ಮೆರವಣಿಗೆ, ಕಾವ್ಯವಾಚನ, ವಿವಿಧ ವಿನೋದಗಳು ಮುಂತಾದುವು.

೧೪–೧೦–೧೯೩೮: ಸದಸ್ಯರ ಷಾಣ್ಮಾಸಿಕ ಅಧಿವೇಶನ.

ವ್ಯಾಸಂಗಗೋಷ್ಠಿ: ಪ್ರತಿ ಗುರುವಾರವೂ ಸಂಜೆ ವ್ಯಾಸಂಗಗೋಷ್ಠಿಯಿದೆ. ಈವರೆಗೆ 'ಪಂಪರಾಮಾಯಣ', ಭವಭೂತಿಯ 'ಉತ್ತರರಾಮ ಚರಿತ್ರೆ', ಅಡಿಸನ್ ಕವಿಯ 'ಕವರ್ಲೀ ಪೇಪರ್ಸ್', ನೀಲಕಂಠ ದೀಕ್ಷಿತರ 'ಅನ್ಯಾಪದೇಶ ಶತಕ'—ಇವು ನಡೆದಿವೆ.

ಗೀತಾವ್ಯಾಸಂಗ: ಸದಸ್ಯರ ಇಷ್ಟದಂತೆ ವ್ಯಾಸಂಗಗೋಷ್ಠಿಯ ದಿನ ಭಗವದ್ಗೀತೆಯ ಪಾಠವನ್ನು ನಡಸಲಾಗುತ್ತಿದೆ.

ಸಿ. ಆರ್. ಶ್ರೀನಿವಾಸ ಅಯ್ಯಂಗಾರ್,
ಸಿ. ಟಿ. ರಾಮಕೃಷ್ಣಶೆಟ್ಟಿ,
ಗೌರವ ಕಾರ್ಯದರ್ಶಿಗಳು.

---

## ಕರ್ನಾಟಕ ಸಂಘ, ಶಿರಾಳಕೊಪ್ಪ

೫–೨–೧೯೩೮: ಸಂಘದ ದ್ವಿತೀಯ ವಾರ್ಷಿಕೋತ್ಸವ—ಅಧ್ಯಕ್ಷರು: ಶ್ರೀ॥ ಎಸ್. ಎಸ್. ಮಾಳವಾಡರವರು, ಎಂ.ಎ.; ಕಾರ್ಯವಿವರ:—ಉಪನ್ಯಾಸ: "ಸಾಹಿತ್ಯದಲ್ಲಿ ನಾಟಕದ ಸ್ಥಾನ"—ಶ್ರೀ॥ ಕುಕ್ಕೆ ಸೀತಾರಾಮ ಶಾಸ್ತ್ರಿ, ಬಿ.ಎ., ಎಲ್ಎಲ್.ಬಿ. ಅವರಿಂದ. ಕಾವ್ಯವಾಚನ—ಶ್ರೀ॥ ಮುಳಲಿ ನರಸಿಂಹಭಟ್ಟರಿಂದ: ಸ್ವಂತ ಕವನಗಳ ವಾಚನ—"ಪ್ರಭುಲಿಂಗ ಲೀಲೆ"—ಶ್ರೀ॥ ಮೆರವಣಿಗೆ ಮುರಿಗೆಪ್ಪನವರಿಂದ; ಲಾವಣಿಗಳು—ಶ್ರೀ॥ ಸಿ. ಎನ್. ಶ್ರೀನಿವಾಸಮೂರ್ತಿಗಳಿಂದ; ರಾತ್ರಿ: ನಾಟಕ—"ಜಲಂಧರ".

೧೯–೨–೧೯೩೮: ಉಪನ್ಯಾಸ.—"ಕುಮಾರವ್ಯಾಸನ ಕನ್ನಡ"—ಶ್ರೀ॥ ಎಸ್. ವಿ. ರಂಗಣ್ಣನವರು, ಎಂ.ಎ.

೨೭–೬–೧೯೩೮: ಉಪನ್ಯಾಸ—"ರೈತರ ಸಾಹಿತ್ಯ"—ಶ್ರೀ॥ ಮೂಗೂರು ಮಲ್ಲಪ್ಪನವರಿಂದ; ಕಾವ್ಯವಾಚನ: ಶ್ರೀ॥ ಸೊರಬದ ಸುಬ್ಬರಾವ್, ಬಿ.ಎ., ಬಿ.ಟಿ. ಅವರಿಂದ. ಅಧ್ಯಕ್ಷರು: ಸಾಂಬಶಿವರಾವ್ ನಾಯುಡು ಅವರು, ಬಿ.ಎ.

೩೦–೭–೧೯೩೮: ಉಪನ್ಯಾಸಗಳು: (೧) "ಕನ್ನಡ ಜೈನಕವಿಗಳು."—ಶ್ರೀ॥ ಎಂ. ಅಲಸಿಂಗರಾಚಾರ್ಯರು, ಎಂ.ಎ., ಬಿ.ಟಿ. ಅವರಿಂದ; (೨) ದಿವಂಗತ ಸರ್ ಕೆ. ಪಿ. ಪುಟ್ಟಣ್ಣಶೆಟ್ಟರವರು"—ಶ್ರೀ॥ ಎಂ. ಓಂಕಾರಯ್ಯನವರಿಂದ; (೩) "ದಿವಂಗತ ವೀಣೆ ಸುಬ್ಬಣ್ಣನವರು"—ಶ್ರೀ॥ ಸೊರಬದ ಸುಬ್ಬರಾವ್, ಬಿ.ಎ., ಬಿ.ಟಿ. ಅವರಿಂದ. ಕಾವ್ಯವಾಚನ: "ಕನ್ನಡದ ಬಾವುಟ"—ಶ್ರೀ॥ ಸೊರಬದ ಸುಬ್ಬರಾವ್, ಬಿ.ಎ., ಬಿ.ಟಿ. ಅವರಿಂದ; ಅಧ್ಯಕ್ಷರು: ಶ್ರೀ॥ ಎಂ. ಅಲಸಿಂಗರಾಚಾರ್ಯರು, ಎಂ.ಎ., ಬಿ.ಟಿ.

೧೭–೮–೧೯೩೮: ಉಪನ್ಯಾಸ: "ಕರ್ನಾಟಕ ಸಂಗೀತ"—ಶ್ರೀ॥ ಮೃತ್ಯುಂಜಯ ಗವಾಯಿಯವರಿಂದ. ಅಧ್ಯಕ್ಷರು: ಶ್ರೀ॥ ಟಿ. ಎಂ. ಈಶ್ವರಯ್ಯನವರು.

೨೬–೮–೧೯೩೮: ಉಪನ್ಯಾಸ— "ಕರ್ನಾಟಕ ಸಂಗೀತ"— ಶ್ರೀ॥ ಗಾನಕುಶಲ ಗುರುಶಾಂತಯ್ಯ ಗವಾಯಿ, ಮುದುವೀರಪ್ಪ ಅವರುಗಳಿಂದ. ಅಧ್ಯಕ್ಷರು: ಸಂಘದ ಅಧ್ಯಕ್ಷರು.

೩೦–೮–೧೯೩೮: ಉಪನ್ಯಾಸ—"ಹರೀಶ್ವರ ಕವಿ"—ಶ್ರೀ॥ ಪಂಡಿತ ಎಸ್. ಕರಿಬಸವಯ್ಯನವರಿಂದ; ಕಾವ್ಯವಾಚನ—ಶ್ರೀ॥ ಗಳಾದ ಕುಂಸಿ ಹುಚ್ಚಾಚಾರ್ಯರು ಮತ್ತು ಶ್ರೀಹರಿ ಅವರಿಂದ.—ಅಧ್ಯಕ್ಷರು: ಶ್ರೀ॥ ಚೆನ್ನಮಲ್ಲಿಕಾರ್ಜುನ ಅವರು.

೨೩–೯–೧೯೩೮: ಉಪನ್ಯಾಸ (ಸಚಿತ್ರ)— "ಪ್ಲೇಗು ಜಾಡ್ಯ ಮತ್ತು ನಮ್ಮ ಆಹಾರ"—ಶ್ರೀ॥ ಈ. ಅನಂತರಾವ್, ಬಿ.ಎಸ್‌ಸಿ., ಎಂ.ಬಿ.ಬಿ.ಎಸ್. ಅವರಿಂದ.

೬–೧೦–೧೯೩೮: "ಕನ್ನಡ ಹಬ್ಬ"—ಉಪನ್ಯಾಸಗಳು—(೧) "ಹಿಂದಿನ ಕನ್ನಡದ ಸೊಬಗು".—ಶ್ರೀ॥ ಟಿ. ಎಂ. ಈಶ್ವರಯ್ಯನವರಿಂದ; (೨) "ಇಂದಿನ ಕನ್ನಡದ ಸೊಬಗು"—ಶ್ರೀ॥ ಗಿರಿಮಾಜಿಯವರಿಂದ; ಕಾವ್ಯವಾಚನ.—ಶ್ರೀ॥ಗಳಾದ ಶ್ರೀಹರಿ ಅವರು, ಬಿ. ಎಂ. ಮಹದೇವಯ್ಯನವರು ಮತ್ತು ಶಾಲಾಬಾಲಕರಿಂದ. ಅಧ್ಯಕ್ಷರು: ಶ್ರೀ॥ ಸೊರಬದ ಸುಬ್ಬರಾಯರು, ಬಿ.ಎ., ಬಿ.ಟಿ.

೨೧–೧೦–೧೯೩೮: ಉಪನ್ಯಾಸ—"'ಶ್ರೀ'ಯವರ ಕನ್ನಡದ ಸೇವೆ"—ಶ್ರೀ॥ ಸೊರಬದ ಸುಬ್ಬರಾಯರಿಂದ; "ಭಾರತವಾಚನ"—ಶ್ರೀ॥ ಚಳ್ಳಕೆರೆ ರಂಗಪ್ಪನವರಿಂದ.

ಶ್ರೀಹರಿ,
ಗೌರವ ಕಾರ್ಯದರ್ಶಿ.

## ಕರ್ನಾಟಕ ಸಂಘ, ರುದ್ರಪಟ್ಟಣ

೧೦–೪–೧೯೩೮: ಉಪನ್ಯಾಸ—"ಕನ್ನಡದ ಅಭಿವೃದ್ಧಿ"—ಶ್ರೀ॥ ಆರ್. ಎನ್. ಲಕ್ಷ್ಮೀಕಾಂತಯ್ಯನವರಿಂದ. ಅಧ್ಯಕ್ಷರು: ಶ್ರೀ॥ ಆರ್. ಆರ್. ವೆಂಕಟರಾಮಯ್ಯನವರು.

೨೫–೪–೧೯೩೮: ಉಪನ್ಯಾಸ—"ಮಕ್ಕಳಿಗೆ ಬೋಧನಾಕ್ರಮ".— ಶ್ರೀ॥ ಆರ್. ಎಚ್. ವೆಂಕಟರಾಮಯ್ಯನವರಿಂದ; ಅಧ್ಯಕ್ಷರು: ಶ್ರೀ॥ ರು. ಶ್ರೀ. ಸುಬ್ಬಣ್ಣನವರು.

೧–೫–೧೯೩೮: ಉಪನ್ಯಾಸ— "ಭಾಷಾಸಮಸ್ಯೆ"— ಶ್ರೀ॥ ಆರ್. ಎನ್. ಸೂರ್ಯನಾರಾಯಣ, ಎಂ.ಎ. ಅವರಿಂದ.

೩೧–೫–೧೯೩೮: ಭಾರತವಾಚನ.—ಶ್ರೀ॥ ಶೀಗೋಳು ಶಿವರಾಮಯ್ಯನವರಿಂದ.

೪–೬–೧೯೩೮: ಶ್ರೀಯುತಪ್ರಾರ್ಥನಾ ಸಭೆ— ನಮ್ಮನ್ನಾಳುವ ಶ್ರೀಮನ್ಮಹಾರಾಜರವರ ವರ್ಧಂತೀ ಪ್ರಯುಕ್ತ.

೧೧–೬–೧೯೩೮: ಭಾರತವಾಚನ—ಶ್ರೀ॥ ಮರೂರು ಕೇಶವಯ್ಯನವರಿಂದ.

೩೦–೬–೧೯೩೮: ಭಾರತವಾಚನ— ಶ್ರೀ॥ ಬಿ. ದೇವರಯ್ಯನವರಿಂದ.

೧೬–೭–೧೯೩೮: ಪುರಾಣಶ್ರವಣ.— ಪಂಡಿತ ಆರ್. ಕೆ. ಕೃಷ್ಣಶಾಸ್ತ್ರಿಗಳಿಂದ.

೧೭–೮–೧೯೩೮: ಉಪನ್ಯಾಸ— "ಭಗವದ್ಗೀತೆಯಲ್ಲಿ ಕರ್ಮಯೋಗ"— ಪಂಡಿತ ಶ್ರೀ॥ ಆರ್. ಕೆ. ಕೃಷ್ಣಶಾಸ್ತ್ರಿಗಳು.

೧೩–೯–೧೯೩೮: ಉಪನ್ಯಾಸ—"ಕನ್ನಡ ಪ್ರಚಾರದಿಂದ ರೈತರಿಗೆ ಆಗತಕ್ಕ ಪ್ರಯೋಜನ" —ಶ್ರೀ॥ ಆರ್. ಎನ್. ಲಕ್ಷ್ಮೀಕಾಂತಯ್ಯನವರಿಂದ.

೧೫–೧೦–೧೯೩೮: ಅಭಿನಂದನೆ— ಕರ್ನಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರೂ, ವಿದ್ವನ್ಮಣಿಗಳೂ, ಕನ್ನಡ ನುಡಿಯ ಸೇವಕರೂ ಆದ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರಿಗೆ ಆಳುವ ಮಹಾಸ್ವಾಮಿಯವರು "ರಾಜಸೇವಾಸಕ್ತ" ಎಂಬ ಬಿರುದಾಂಕಿತವನ್ನು ದಯಪಾಲಿಸಿರುವುದಕ್ಕಾಗಿ ಹೃತ್ಪೂರ್ವಕವಾದ ಅಭಿನಂದನೆಗಳು.

ಆರ್. ಎನ್. ಲಕ್ಷ್ಮೀಕಾಂತಯ್ಯ,
ಸಿ. ಎಸ್. ಕೃಷ್ಣಪ್ಪ,
ಗೌರವ ಕಾರ್ಯದರ್ಶಿಗಳು.

---

## ಕರ್ನಾಟಕ ಸಂಘ, ಗೌರ್ನಮೆಂಟ್ ಟ್ರೈನಿಂಗ್ ಕಾಲೇಜು, ಮೈಸೂರು

೩–೯–೧೯೩೮: ಸಂಘದ ಮೊದಲನೆಯ ಸಭೆ.—ಅಧ್ಯಕ್ಷರು: ಆಸ್ಥಾನ ವಿದ್ವಾನ್ ವೈ. ಚಂದ್ರಶೇಖರಶಾಸ್ತ್ರಿಗಳು, ಎಂ.ಎ. ಈ ಮೊದಲನೆಯ ಅಧಿವೇಶನದಲ್ಲಿ ಸಂಘದ ಅಧಿಕಾರಿಗಳ ಮತ್ತು ಕಾರ್ಯನಿರ್ವಾಹಕ ಸಮಿತಿಯ ಸದಸ್ಯರ ಚುನಾವಣೆ ಆಯಿತು.

೬–೯–೧೯೩೮: ವರ್ಷದ ಆರಂಭಭಾಷಣ.— ಪ್ರೊ॥ ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಅವರಿಂದ; ಅಧ್ಯಕ್ಷರು: ಶ್ರೀ॥ ಎಂ. ಜಿ. ಮೇಕ್ರಿ, ಬಿ.ಎ., ಎಲ್‌ಎಲ್.ಬಿ. ಅವರು. ಈ ಸಂಘದ ಸ್ಥಾಪಕರೂ ಉಪಾಧ್ಯಕ್ಷರೂ ಆಗಿದ್ದು, ಸಂಘಕ್ಕಾಗಿ ಬಹಳ ದುಡಿದಿರುವ ಆಸ್ಥಾನ ವಿದ್ವಾನ್ ಶ್ರೀ॥ ವೈ. ಚಂದ್ರಶೇಖರಶಾಸ್ತ್ರೀ, ಎಂ.ಎ. ಅವರು ಇಲ್ಲಿಂದ ಬೆಂಗಳೂರು ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿ ವರ್ಗವಾಗಿರುವ ಪ್ರಯುಕ್ತ ಅವರನ್ನು ಅಭಿನಂದಿಸಲು ಸಂಘದ ಮೂರನೆಯ ಸಭೆ ಸೇರಿತ್ತು. ಸಂಘದ ಅಧ್ಯಕ್ಷರಾದ ಶ್ರೀ॥ ಆರ್. ಕೆ. ಸಂಗಮೇಶ್ವರನ್, ಎಂ.ಎ., ಎಲ್.ಟಿ. ಅವರು ಸಭಾಧ್ಯಕ್ಷತೆ ವಹಿಸಿದ್ದರು.

ಪಂಡಿತ ಬಿ. ಚೆನ್ನಕೇಶವಯ್ಯ,
ಎಸ್. ಪಿ. ಪದ್ಮಣ್ಣ,
ಗೌರವ ಕಾರ್ಯದರ್ಶಿಗಳು.

## ಕರ್ನಾಟಕ ಸಂಘ, ಆನವಟ್ಟಿ

೩೧–೧–೧೯೩೮: "ಪುರಂದರದಾಸರ ಪುಣ್ಯದಿನ"– ಅಧ್ಯಕ್ಷರು: ಶ್ರೀ॥ ಸಿ. ಆರ್. ಕೃಷ್ಣಪ್ಪನವರು. ಉಪನ್ಯಾಸ–"ಪುರಂದರದಾಸರವರ ಜೀವನಚರಿತ್ರೆ"– ಶ್ರೀ॥ ಮೂಗೂರು ಹನುಮಂತಾಚಾರ್ಯರು.

೩–೪–೧೯೩೮: "ವಾರ್ಷಿಕೋತ್ಸವ".–ಅಧ್ಯಕ್ಷರು: ಶ್ರೀ॥ ಎಸ್. ವಿ. ಕೃಷ್ಣಮೂರ್ತಿಯವರು, ಬಿ.ಎಸ್‌ಸಿ., ಎಲ್‌ಎಲ್.ಬಿ. ಕಾವ್ಯವಾಚನ–"ರನ್ನನ ಪದಗಳು"– ಶ್ರೀ॥ ಗು. ಕೃ. ನಾಡಿಗೇರ್ ಅವರು; "ಪ್ರಭುಲಿಂಗಲೀಲೆ".–ಶ್ರೀಮಾನ್ ಮೆರವಣಿಗೆ ಮುರಿಗೆಪ್ಪನವರು; "ರಾಮಾಶ್ವಮೇಧ".– ಶ್ರೀ॥ ಕೆ. ಚಿದಂಬರಂ ಅವರು, ಬಿ.ಎ., ಎಲ್‌ಎಲ್.ಬಿ.; "ಕೋಳೂರು ಕೊಡುಗೂಸು".– ಶ್ರೀ॥ ಎನ್. ಎಂ. ವೀರಭದ್ರಯ್ಯನವರು. ಲಾವಣಿ–"ಬ್ರಹ್ಮಾಂಡದ ತತ್ತ್ವ".–ಶ್ರೀ॥ ವೀರಭದ್ರಪ್ಪನವರು.

೧೪–೫–೧೯೩೮: ಉಪನ್ಯಾಸಗಳು: ಡಾಕ್ಟರ್ ಜಿ. ವಿ. ಶ್ರೀನಿವಾಸಾಚಾರ್ಯರ ಅಧ್ಯಕ್ಷತೆಯಲ್ಲಿ– "ಲಲಿತಕಲೆ".– ಶ್ರೀ॥ ಕೆ. ನಾರಾಯಣರಾಯರು, "ಸಿರಿಕನ್ನಡನಾಡು".– ಶ್ರೀ॥ ಅನಂತರಾಮಯ್ಯನವರು, "ಏಕೀಕರಣ".– ಬೆಂಗಳೂರು ಸೆಂಟ್ರಲ್ ಕಾಲೇಜಿನ ಬಿ.ಎಸ್‌ಸಿ. ವಿದ್ಯಾರ್ಥಿಗಳು. ಕಾವ್ಯವಾಚನ: "ಸೀತಾವನವಾಸ" (ಜೈಮಿನಿ ಭಾರತ).–ಶ್ರೀ॥ ಕೆ. ನಾರಾಯಣರಾಯರು.

೨೫–೬–೧೯೩೮ರಿಂದ ೨೭–೬–೧೯೩೮ರ ವರೆಗೆ ಕರ್ನಾಟಕ ಸಾಹಿತ್ಯ ಪರಿಷತ್ತಿನ ವಸಂತ ಸಾಹಿತ್ಯೋತ್ಸವ–

ಪ್ರಾರಂಭೋತ್ಸವ: ಬೊಂಬಾಯಿ ಪಾರ್ಲಿಮೆಂಟರಿ ಸೆಕ್ರಿಟರಿಯವರಾದ ಶ್ರೀ॥ ಟಿ. ಆರ್. ನೇಶ್ವಿಯವರಿಂದ. ಉಪನ್ಯಾಸಕರು ಮುಂತಾದವರು: ಶ್ರೀ॥ ಗಳಾದ ಬಿ. ಎಂ. ಶ್ರೀಕಂಠಯ್ಯನವರು, ಸಂಪತ್ಕುಮಾರಾಚಾರ್ಯರು, ವಿ. ಸೀತಾರಾಮಯ್ಯನವರು, ಲಕ್ಷ್ಮಣರಾವ್ ಹೊಯ್ಸಳರು, ಪಿ. ಶ್ರೀನಿವಾಸರಾಯರು, ಗುರುನಾಥ ಕೃಷ್ಣ ನಾಡಿಗೇರ್ ಅವರು, ಮೂಗೂರು ಹನುಮಂತಾಚಾರ್ಯರು, ಎಚ್. ಆರ್. ಮಾಧವರಾಯರು, ಎಸ್. ವಿ. ಕೃಷ್ಣಮೂರ್ತಿಯವರು, ಜಿ. ವಿ. ಶ್ರೀನಿವಾಸಾಚಾರ್ಯರು, ಅಬ್ದುಲ್ ಅಜೀಜ್‌ಖಾನ್‌ರವರು, ಜಿ. ಪಿ. ರಾಜರತ್ನಂರವರು, ಎಸ್. ಸುಬ್ಬರಾಯರು, ಎಚ್. ಲಿಂಗಪ್ಪನವರು, ಕೂಡಲಿ ಚಿದಂಬರಂ ಅವರು, ಶಿವರಾಮ ಕಾರಂತರು, ಎಸ್. ನರಸಿಂಹಾಚಾರ್ಯರು, ಬಿ. ಆರ್. ಪುಟ್ಟನಂಜಪ್ಪನವರು. ನಾಟಕಗಳು–(೧) "ಸಾವಿನ ಸಮಸ್ಯೆ"–ಶಿಕಾರಿಪುರದ ಸಂಘದವರಿಂದ, (೨) "ಯಮುನ ಸೋಲು", "ಶಾಮಣ್ಣನ ಸಾಹಸ"–ಸೊರಬದ "ಸೋದರ ಸಂಘ"ದವರಿಂದ.

೨–೧೦–೧೯೩೮: "ಗಾಂಧೀಜಿಯವರ ಜಯಂತಿ"– ಅಧ್ಯಕ್ಷರು: ಶ್ರೀ॥ ಎಚ್. ವಿ. ಮಂಗಳಮೂರ್ತಿಯವರು.

೨೪–೧೦–೧೯೩೮: "ನಾಡಹಬ್ಬ" (ದ್ವಿತೀಯ ವರ್ಷ) – ಅಧ್ಯಕ್ಷರು: ಡಾಕ್ಟರ್ ಜಿ. ವಿ. ಶ್ರೀನಿವಾಸಾಚಾರ್ಯರು.

### ಕಾರ್ಯವಿವರ:

ಸ್ವಾಗತಪದ್ಯ: ಮ॥ ರಾ॥ ಮೂಗೂರು ಹನುಮಂತಾಚಾರ್ಯರು.

ಅಭಿನಂದನೆಗಳು.–ಆಳುವ ಮಹಾಸ್ವಾಮಿಯವರಿಂದ (i) "ರಾಜಸೇವಾಸಕ್ತ" ಎಂಬ ಬಿರುದನ್ನು ಪಡೆದಿರುವ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರಿಗೆ, (ii) "ಸೇವಾಪದಕ" ಪಡೆದಿರುವ ನಮ್ಮ ಸಂಘಾಧ್ಯಕ್ಷರಾದ ಶ್ರೀ॥ ಎಣ್ಣೆಕೊಪ್ಪದ ಪಟೇಲ್ ಮಲ್ಲಿಕಾರ್ಜುನಪ್ಪಗೌಡರಿಗೆ, (iii) "ಸೇವಾಪದಕ" ಪಡೆದಿರುವ ಶ್ರೀ॥ ಗುರುನಾಥಕೃಷ್ಣ ನಾಡಿಗೇರ್ ಅವರಿಗೆ.

ಉಪನ್ಯಾಸ: ''ಸಮತಾಭಾವ''–ಶ್ರೀ॥ ಸಿ. ಧರಣಪ್ಪನವರಿಂದ; ''ನಾಡಹಬ್ಬ''–ಶ್ರೀ॥ ಮೂಗೂರು ಹನುಮಂತಾಚಾರ್ಯರಿಂದ.

ಕವನ ಪಠನ: ''ನಮ್ಮ ನಾಡು ಎಂಥಾದ್ದು''–ಶ್ರೀ॥ ಮೂಗೂರು ಹನುಮಂತಾಚಾರ್ಯರಿಂದ.

೨೫–೧೦–೧೯೩೮ ಮೂಗೂರು ಹನುಮಂತಾಚಾರ್ಯ,
ಗೌರವ ಕಾರ್ಯದರ್ಶಿ.

---

## ಕರ್ನಾಟಕ ಸಂಘ, ಸಾಗರ

೧–೧–೧೯೩೮; ೨–೧–೧೯೩೮: ಭಾರತವಾಚನ–ಶ್ರೀ॥ ಕೆ. ಕೃಷ್ಣರಾಯರಿಂದ.

೨೦–೧–೧೯೩೮: ಉಪನ್ಯಾಸ–''ನಮ್ಮ ವಿದ್ಯಾಭ್ಯಾಸಕ್ರಮದಲ್ಲಿ ಸಂಗೀತದ ಸ್ಥಾನ''–ಶ್ರೀ॥ ಎಚ್. ಯೋಗಾನರಸಿಂಹಂ, ಎಂ.ಎ. ಅವರಿಂದ.

೨೨–೧–೧೯೩೮: ಉಪನ್ಯಾಸ–''ಮುದ್ದಣನ ರಾಮಾಶ್ವಮೇಧ''–ಶ್ರೀ॥ ಎಂ. ಮಹಾಬಲರಾವ್, ಬಿ.ಎ., ಎಲ್ಎಲ್.ಬಿ. ಅವರಿಂದ.

೧೮–೨–೧೯೩೮: ಉಪನ್ಯಾಸ–''ಸತ್ತುಬದುಕಿದ ಅಶ್ವತ್ಥಾಮ''–ಶ್ರೀ॥ ಎಸ್. ವಿ. ರಂಗಣ್ಣ, ಎಂ.ಎ. ಅವರಿಂದ; ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ೫೫ನೆಯ ವರ್ಷ ವರ್ಧಂತಿಯ ಆಚರಣಾ ಸಭೆಗೆ ಅಭಿನಂದನ ಸಂದೇಶ.

೧೮–೩–೧೯೩೮: ಉಪನ್ಯಾಸ–''ಶ್ರೀ ಭಗವದ್ಗೀತಾ ವಿಚಾರ''–ಶ್ರೀ॥ ವೆಂಕಟರಾಮ ಶಾಸ್ತ್ರಿಗಳಿಂದ.

೧೯–೩–೧೯೩೮: ಸಂಗೀತ ಕಚೇರಿ–ಶ್ರೀ॥ಗಳಾದ ಬಿ. ಪರಶುರಾಮಪ್ಪನವರು, ಶ್ರೀನಿವಾಸ ಮೂರ್ತಿಗಳು, ಅನಂತರಾಯರು–ಇವರುಗಳಿಂದ.

೨೧–೩–೧೯೩೮: ಕಾವ್ಯವಾಚನ–ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರಿಂದ.

೨೨–೩–೧೯೩೮: ಉಪನ್ಯಾಸ–''ಕನ್ನಡದ ಕುಡಿ.''–ಶ್ರೀ॥ ಜಿ. ಪಿ. ರಾಜರತ್ನಂ, ಎಂ.ಎ. ಅವರಿಂದ.

೧೮–೯–೧೯೩೮: ಉಪನ್ಯಾಸ–(ಕಾವ್ಯವಾಚನಸಹಿತ) ''ಆಧುನಿಕ ಕನ್ನಡ ಕವಿತೆಗಳು''–ಶ್ರೀ॥ ಎಸ್. ವಿಷ್ಣುಭಟ್ಟ, ಬಿ.ಎ., ಎಲ್ಎಲ್.ಬಿ. ಅವರಿಂದ.

೨೩–೧೦–೧೯೩೮ ಎಂ. ಅಲಸಿಂಗರಾಚಾರ್,
ಗೌರವ ಕಾರ್ಯದರ್ಶಿ.

---

## ಕರ್ನಾಟಕ ಸಂಘ, ಮಹಾರಾಣಿ ಕಾಲೇಜು, ಮೈಸೂರು

೩–೮–೧೯೩೮: ಪ್ರಾರಂಭೋತ್ಸವ–ಅಧ್ಯಕ್ಷರು: ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ.; ಭಾಷಣಕಾರರು: ಡಾ॥ ಎ. ಎನ್. ನರಸಿಂಹಯ್ಯನವರು, ಎಂ.ಎ., ಎಲ್.ಟಿ., ಪಿಎಚ್.ಡಿ.; ವಿಷಯ–''ಕನ್ನಡದ ಹಬ್ಬುಗೆ, ಬೆಳವಣಿಗೆ''

೧೮–೮–೧೯೩೮: ಚರ್ಚಾಸಭೆ: ವಿಷಯ–''ಹೆಂಗಸು ಮನೆಯ ಆಳು'' (ಮಸೂದೆಗೆ ವಿರೋಧವಾಗಿ ಬಹುಮತ ದೊರೆಯಿತು).

೨೨–೮–೧೯೩೮: ಚರ್ಚಾಸಭೆ: ವಿಷಯ–''ಮಹಾರಾಣಿ ಕಾಲೇಜಿನ ಬಿ.ಎ. ತರಗತಿಗಳು ಬೆಂಗಳೂರಿಗೆ ಹೋಗಬೇಕು'' (ಮಸೂದೆಗೆ ವಿರೋಧವಾಗಿ ಬಹುಮತ ಬಂದಿತು).

ಎಂ. ಡಿ. ತಂಗಮ್ಮ,
ಗೌರವ ಕಾರ್ಯದರ್ಶಿ.

# ಸಂಪಾದಕೀಯ ಟಿಪ್ಪಣಿಗಳು

---

ಪರಿಷತ್ಪತ್ರಿಕೆಯ ಕಳೆದ ಸಂಚಿಕೆ ಪ್ರಕಟವಾದಂದಿನಿಂದೀಚೆಗೆ ಕನ್ನಡಿಗರಿಗೆ ಹೆಮ್ಮೆಯನ್ನುಂಟುಮಾಡುವ ಹಲವು ಸಂತೋಷದ ಸುದ್ದಿಗಳು ನಮ್ಮ ಕಿವಿಗೆಬಿದ್ದಿರುವುವನ್ನು ಈ ಸಂಚಿಕೆಯಲ್ಲಿ ನಮ್ಮ ವಾಚಕರ ಅವಗಾಹನೆಗೆ ತರಲು ಸಂತೋಷಿಸುತ್ತೇವೆ.

**ಮೈಸೂರು ಯುವರಾಜ ಕುಮಾರರ ದಿಗ್ವಿಜಯ**

ಇವುಗಳ ಪೈಕಿ ಅಗ್ರಪ್ರಶಂಸೆಗೆ ಅರ್ಹವಾದುದು ನಮ್ಮ ಪರಿಷತ್ತಿನ ಪೂಜ್ಯ ಅಧ್ಯಕ್ಷರವರಾದ ಶ್ರೀಮದ್ಯುವರಾಜರವರ ಕುಮಾರಕಂಠೀರವರಾದ ಶ್ರೀ ಜಯಚಾಮರಾಜ ಒಡೆಯರವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ನಡೆದ ಈ ವರ್ಷದ ಬಿ.ಎ. ಪರೀಕ್ಷೆಯಲ್ಲಿ ಪ್ರಥಮಶ್ರೇಣಿಯಲ್ಲಿ ಉತ್ತೀರ್ಣರಾಗಿ ಪದವೀಧರರೆನ್ನಿಸಿಕೊಂಡು ಕಳೆದ ಅಕ್ಟೋಬರ್ ತಿಂಗಳಲ್ಲಿ ನಡೆದ ಘಟಿಕೋತ್ಸವದಲ್ಲಿ ಐದು ಸುವರ್ಣಪದಕಗಳನ್ನು ಪಡೆದ ವಿಚಾರ. ರಾಜಮನೆತನದವರಲ್ಲಿ ಈ ರೀತಿಯ ಅಸಾಧಾರಣಪ್ರಶಸ್ತಿಯನ್ನು ಪಡೆಯುವುದು ಭರತಖಂಡದಲ್ಲಿ ಮಾತ್ರವೇ ಅಲ್ಲದೆ ಇಡೀ ಪ್ರಪಂಚದ ಚರಿತ್ರೆಯಲ್ಲಿಯೇ ಅಪರೂಪವೆಂಬುದರಲ್ಲಿ ಸಂಶಯವಿಲ್ಲ. ಇಂತಹ ಮೇಧಾವಿಗಳಾದ ಯುವರಾಜ ಕುಮಾರರನ್ನು ಪಡೆದಿರುವ ಮೈಸೂರು ಪ್ರಜೆಗಳೇ ಧನ್ಯರು. ಇವರು ತಮ್ಮ ಪೂಜ್ಯ ತೀರ್ಥರೂಪರವರಂತೆಯೇ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಪೂರ್ಣಸಹಾನುಭೂತಿಯನ್ನು ಪ್ರದರ್ಶಿಸುತ್ತಿರುವುದು ಸ್ತೋತ್ರಾರ್ಹವಾದ ಸಂಗತಿ. ಇವರಿಗೆ ಶ್ರೀ ಚಾಮುಂಡೇಶ್ವರಿ ದೀರ್ಘಾಯುರಾರೋಗ್ಯೈಶ್ವರ್ಯಾದಿಗಳನ್ನು ದಯಪಾಲಿಸಿ, ಇವರು ಮೈಸೂರು ರಾಜವಂಶಕ್ಕೆ ತಿಲಕಪ್ರಾಯರಾಗಿ ಬಳೆದು ಪ್ರಜಾಕ್ಷೇಮೈಕತತ್ಪರರಾಗುವಂತೆ ಕರುಣಿಸಲೆಂಬುದಾಗಿ ಪ್ರಾರ್ಥಿಸುತ್ತೇವೆ.

**ಪ್ರಸಿದ್ಧರಾದ ಮೂವರು ಕನ್ನಡಸಾಹಿತಿಗಳಿಗೆ ರಾಜಮನ್ನಣೆ**

ಕರ್ತವ್ಯನಿಷ್ಠರಾದ ಸರ್ಕಾರದಧಿಕಾರಿಗಳಿಗೂ, ಲೋಕಸೇವಾತತ್ಪರರೂ ಧರ್ಮಪ್ರವರ್ತಕರೂ ಆದ ಗಣ್ಯಪ್ರಜೆಗಳಿಗೂ ವರ್ಷೇವರ್ಷೇ ಆಯಾ ಸಂದರ್ಭಕ್ಕನುಗುಣವಾದ ಪ್ರಶಸ್ತಿಗಳನ್ನು ದಯಪಾಲಿಸಿ ಗೌರವಿಸುವುದು ಮೈಸೂರು ಮಹಾರಾಜರವರ ಆಸ್ಥಾನದಲ್ಲಿ ಹಲವು ವರ್ಷಗಳಿಂದ ನಡೆದುಬಂದಿರುವ ವಾಡಿಕೆಯಾಗಿದೆಯಷ್ಟೆ. ಅದರಂತೆ ಕಳೆದ ದಸರಾ ಮಹೋತ್ಸವ ಪ್ರಯುಕ್ತವಾದ ದರ್ಬಾರಿನಲ್ಲಿ ನಮ್ಮ ಶ್ರೀಮನ್ಮಹಾರಾಜರವರು ಹಲವು ಮಂದಿ ಮಹಿಳೆಯರಿಗೂ ಮಹನೀಯರಿಗೂ ಪ್ರಶಸ್ತಿಗಳನ್ನೂ, ಸೇವಾಪದಕಗಳನ್ನೂ ಉಚಿತ ಮರ್ಯಾದೆಗಳೊಡನೆ ದಯಪಾಲಿಸಿದರು. ಈ ಪೈಕಿ ಮೂವರು ನಮ್ಮ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ನೆರವಾಗಿರುವವರಿಗೆ ಸಂಬಂಧಪಟ್ಟುವುಗಳಾದ



ಮೈಸೂರು ಶ್ರೀಮನ್ಮಹಾರಾಜರವರಿಂದ
"ರಾಜಸೇವಾಸಕ್ತ" ಎಂಬ ಪ್ರಶಸ್ತಿಯನ್ನು ಪಡೆದ
**ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.**

ಪಡಿಯಚ್ಚು ಕೊಟ್ಟವರು: ಸಂಪಾದಕರು, 'ಕನ್ನಡ ನುಡಿ', ಬೆಂಗಳೂರು



ಮೈಸೂರು ಶ್ರೀಮನ್ಮಹಾರಾಜರವರಿಂದ
"ಪ್ರಥಮ ವರ್ಗದ ಸುವರ್ಣ ಸೇವಾಪದಕ"ವನ್ನು ಪಡೆದ
**ಶ್ರೀಮತಿ ಆರ್. ಕಲ್ಯಾಣಮ್ಮನವರು**

ಪ್ರಯುಕ್ತ ಅವುಗಳನ್ನು ಕುರಿತು ಇಲ್ಲಿ ಸೂಕ್ಷ್ಮವಾಗಿ ಪ್ರಸ್ತಾವಿಸಲಪೇಕ್ಷಿಸುತ್ತೇವೆ.

ಈ ಪೈಕಿ ಪರಿಷತ್ತಿನ ಉಪಾಧ್ಯಕ್ಷರೂ, ಪರಿಷತ್ಪತ್ರಿಕೆಯ ಸಂಪಾದಕ ಮಂಡಲಿಯ ಅಧ್ಯಕ್ಷರೂ, 'ಉದ್ಧಾರಕ' ವರ್ಗದ ಸದಸ್ಯರೂ ಆದ ಶ್ರೀ॥ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರಿಗೆ "ರಾಜಸೇವಾಸಕ್ತ" ಎಂಬ ಪ್ರಶಸ್ತಿ ಲಭಿಸಿದುದು ಅನ್ವರ್ಥವೂ, ಉಚಿತವೂ ಆಗಿರುವುದಲ್ಲದೆ ಕನ್ನಡಿಗರಲ್ಲಿ ಅಪಾರವಾದ ಸಂತೋಷವನ್ನು ಹುಟ್ಟಿಸಿರುತ್ತದೆ. ಇವರು ಕನ್ನಡದ ಏಳಿಗೆಗಾಗಿ ಹಲವು ವರ್ಷಗಳಿಂದ ಸಲ್ಲಿಸಿರುವ ಮತ್ತು ಈಗಲೂ ಸಲ್ಲಿಸುತ್ತಿರುವ ಸೇವೆ ಕರ್ನಾಟಕ ಭಾಷೋನ್ನತಿಯ ಇತಿಹಾಸದಲ್ಲಿ ಶಾಶ್ವತಗೊಳಿಸಲ್ಪಡಲು ತಕ್ಕುದಾಗಿರುವುದೆನ್ನುವುದರಲ್ಲಿ ಯಾವ ಸಂದೇಹವೂ ಇರಲಾರದು. ಇವರಂತೆ ಕನ್ನಡದ ಮೇಲ್ಮೆಗಾಗಿ ತನು ಮನ ಧನಗಳನ್ನು ಸಮರ್ಪಿಸಿರುವವರು ಬೇರೊಬ್ಬರಿಲ್ಲವೆಂದು ಧಾರಾಳವಾಗಿ ಹೇಳಬಹುದು.

(೧) ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರಿಗೆ "ರಾಜಸೇವಾಸಕ್ತ" ಎಂಬ ಪ್ರಶಸ್ತಿ

ಶ್ರೀ॥ ಶ್ರೀಕಂಠಯ್ಯನವರಂತೆಯೇ ಉಭಯಭಾಷಾವಿಶಾರದರಾದ ಬ್ರಹ್ಮಶ್ರೀ ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳಿಗೆ ಅವರ ವಿದ್ಯಾವೈದುಷ್ಯಕ್ಕನುಗುಣವಾದ "ವಿದ್ಯಾನಿಧಿ" ಎಂಬ ಪ್ರಶಸ್ತಿಯನ್ನು ನಮ್ಮ ಶ್ರೀಮನ್ ಮಹಾರಾಜರವರು ದಯಪಾಲಿಸಿರುವುದು ವಿದ್ಯಾಭಿಮಾನಿಗಳಾದ ಸರ್ವರಿಗೂ ಸಂತೋಷಪ್ರದವಾಗಿರುತ್ತದೆ. ಇವರಿಗೆ ಈ ಹಿಂದೆಯೇ ಸಾರ್ವಭೌಮ ಸರ್ಕಾರದವರಿಂದ "ಮಹಾಮಹೋಪಾಧ್ಯಾಯ" ಎಂಬ ಪ್ರಶಸ್ತಿ ಲಭಿಸಿರುವುದರಿಂದ ಈಗ ಮೈಸೂರು ಮಹಾರಾಜರ ಆಸ್ಥಾನದಲ್ಲಿಯೂ ಒಂದು ಘನತರವಾದ ಪ್ರಶಸ್ತಿ ದೊರೆತದ್ದು ಚಿನ್ನಕ್ಕೆ ಒಪ್ಪವಿಟ್ಟಂತೆ ಆಯಿತೆನ್ನುವುದರಲ್ಲಿ ಸಂದೇಹವಿಲ್ಲ. ಇವರು ಮದರಾಸ್ ಪಟ್ಟಣದ ಕ್ರಿಶ್ಚಿಯನ್ ಕಾಲೇಜಿನಲ್ಲಿಯೂ, ಪ್ರೆಸಿಡೆನ್ಸಿ ಕಾಲೇಜಿನಲ್ಲಿಯೂ ಕನ್ನಡದ ಅಧ್ಯಾಪಕರಾಗಿದ್ದು ಪ್ರೌಢವಿದ್ಯಾರ್ಥಿಗಳಿಗೆ ಉಪಯೋಗಕರವಾದ ಅನೇಕ ಕನ್ನಡ ಗ್ರಂಥಗಳನ್ನು ರಚಿಸಿ ೧೯೩೧ರಲ್ಲಿ ನಿವೃತ್ತರಾದರು. ಅಲ್ಲಿಂದ ಎರಡು ವರ್ಷಗಳನಂತರ ೧೯೩೩ರಲ್ಲಿ ಬಿಜಾಪುರದಲ್ಲಿ ನಡೆದ ಕರ್ನಾಟಕ ಸಾಹಿತ್ಯ ಸಮ್ಮೇಳನದ ೧೯ನೆಯ ಅಧಿವೇಶನದ ಅಧ್ಯಕ್ಷಪದವಿಯನ್ನಲಂಕರಿಸಿ ಸ್ಫೂರ್ತಿದಾಯಕವಾದ ಭಾಷಣವನ್ನು ಅಪ್ಪಣೆ ಕೊಡಿಸಿದರು. ಇವರಿಗೀಗ ಮೂರಿಪ್ಪತ್ತು, ಮೇಲೆ ಹದಿನಾಲ್ಕು ವರ್ಷ ವಯಸ್ಸಾಗಿದ್ದರೂ ಕೂಡ ಆರೋಗದೃಢಕಾಯರಾಗಿ ಬೆಂಗಳೂರು ನಗರದ ಬಸವನಗುಡಿಯ ಬಳಿ ಇರುವ "ಮೌಂಟ್ ಜಾಯ್" (ಆನಂದಗಿರಿ) ಎಂಬ ದೇವಮಂದಿರದಲ್ಲಿ

(೨) ಬ್ರಹ್ಮಶ್ರೀ ಸಿದ್ಧಾಂತಿ ಶಿವಶಂಕರಶಾಸ್ತ್ರಿಗಳಿಗೆ "ವಿದ್ಯಾನಿಧಿ" ಎಂಬ ಪ್ರಶಸ್ತಿ

ನೆಲಸಿರುವ ಶ್ರೀ ಕುಮಾರಸ್ವಾಮಿಯ ದೇವಾಲಯದಲ್ಲಿ ಪೂಜಾನಿರತರಾಗಿ ಕಾಲ ಯಾಪನೆ ಮಾಡುತ್ತಿದ್ದಾರೆ.

**(೩) ಶ್ರೀಮತಿ ಆರ್. ಕಲ್ಯಾಣಮ್ಮನವರಿಗೆ ಪ್ರಥಮವರ್ಗದ ಸುವರ್ಣ ಸೇವಾಪದಕ**

ಹಲವು ವರ್ಷಗಳಿಂದ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯೆಯರಾಗಿದ್ದುಕೊಂಡು ಕನ್ನಡದ ಪುರೋವೃದ್ಧಿಯಲ್ಲಿ ಆಸಕ್ತಿವಹಿಸಿ ಸಾಹಿತ್ಯಸೇವೆ ಮಾಡುತ್ತಿರುವ, 'ಸರಸ್ವತಿ' ಮಾಸಪತ್ರಿಕೆಯ ಸಂಪಾದಕಿಯರಾದ ಮತ್ತು ಬಹು ಕಾಲದಿಂದ ಸಮಾಜ ಸಂಸ್ಕರಣ ಕಾರ್ಯಗಳಲ್ಲಿಯೂ, ಪ್ರಜಾಸೇವೆಯಲ್ಲಿಯೂ ನಿರತರಾಗಿ ಅನೇಕ ಸಾರ್ವಜನಿಕ ಸಂಸ್ಥೆಗಳಲ್ಲಿ ಸದಸ್ಯೆಯರಾಗಿದ್ದುಕೊಂಡು ಕಾರ್ಯಕಲಾಪಗಳನ್ನು ನಡಸುತ್ತಿರುವ ಶ್ರೀಮತಿ ಆರ್. ಕಲ್ಯಾಣಮ್ಮನವರಿಗೆ ನಮ್ಮ ಶ್ರೀಮನ್ ಮಹಾರಾಜರವರಿಂದ ಪ್ರಥಮವರ್ಗದ ಸುವರ್ಣಸೇವಾಪದಕ ಲಭಿಸಿದುದು ಸಾಹಿತ್ಯ ಸೇವೆ, ಪ್ರಜಾಸೇವೆಗಳನ್ನು ಕೈಕೊಳ್ಳಲು ನಮ್ಮ ಮಹಿಳೆಯರು ಮುಂದಾಳುಗಳಾಗಿ ಬರುವುದಕ್ಕೆ ಉತ್ತೇಜಕವಾಯಿತೆಂದು ಹೇಳಬಹುದು. ಇವರು ಈಗಾಗಲೇ ಬೆಂಗಳೂರಿನಂತಹ ಪ್ರಸಿದ್ಧನಗರದ ಪ್ರಧಾನ ಪೌರಸಭೆಯಲ್ಲಿ ಇದುವರೆಗೆ ಯಾವ ಸ್ತ್ರೀಯರಿಗೂ ಲಭ್ಯವಾಗದೆ ಇದ್ದ ಉಪಾಧ್ಯಕ್ಷಿಣೀ ಪದವಿಯಲ್ಲಿರುವುದು ಮಾತ್ರವೇ ಅಲ್ಲದೆ ದಂಡಾಧಿಕಾರ ನ್ಯಾಯಸ್ಥಾನದ ನ್ಯಾಯವಿಮರ್ಶಾ ಕಾರ್ಯದಲ್ಲಿ ಭಾಗ ವಹಿಸುತ್ತಿರುವರು. ಈಚೆಗೆ ಇವರು 'ಅಖಿಲ ಕರ್ನಾಟಕ ಮಕ್ಕಳ ಕೂಟ' ಒಂದನ್ನು ಸ್ಥಾಪಿಸಿ ಭಾವೀಪ್ರಜೆಗಳಾದ ಮಕ್ಕಳನ್ನು ಸನ್ಮಾರ್ಗಗಾಮಿಗಳಾಗುವಂತೆ ತಿದ್ದುವ ವಿಚಾರದಲ್ಲಿ ಅನುಸರಿಸಬೇಕಾದ ಕಾರ್ಯಕ್ರಮಗಳನ್ನು ಪ್ರದರ್ಶನ ಮಾಡಿ ತೋರಿಸುವ ಸಾಹಸಕಾರ್ಯವನ್ನು ಕೈಗೊಂಡಿರುತ್ತಾರೆ.

**ಮೇಲ್ಕಂಡ ಮೂವರು ಸಾಹಿತಿಗಳಿಗೆ ಅಭಿನಂದನೆ**

ಈ ರೀತಿ ಶ್ಲಾಘನೀಯವಾದ ರೀತಿಯಲ್ಲಿ ಸಾಹಿತ್ಯಸೇವೆ, ಲೋಕಸೇವೆಗಳಲ್ಲಿ ನಿರತರಾಗಿ ರಾಜಮನ್ನಣೆಯನ್ನು ಪಡೆದಿರುವ ಶ್ರೀಮತಿ ಆರ್. ಕಲ್ಯಾಣಮ್ಮನವರಿಗೂ, ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರಿಗೂ, ಬ್ರಹ್ಮಶ್ರೀ ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳಿಗೂ ನಮ್ಮ ವಾಚಕರ ಪರವಾಗಿ ಹೃತ್ಪೂರ್ವಕವಾದ ಅಭಿನಂದನಗಳನ್ನು ಸಮರ್ಪಿಸುವುದಲ್ಲದೆ ಇವರುಗಳಿಂದ ದೇಶದ ಕಲ್ಯಾಣಕ್ಕಾಗಿ ಇತೋಪ್ಯತಿಶಯವಾದ ಸೇವೆ ಇನ್ನುಮುಂದೆಯೂ ನಡೆಯುವಂತೆ ಸರ್ವಶಕ್ತನಾದ ಪರಮೇಶ್ವರನು ಇವರಿಗೆ ಆಯುರಾರೋಗ್ಯೈಶ್ವರ್ಯಾದಿಗಳನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ. ಇವರೆಲ್ಲರ ಭಾವಚಿತ್ರಗಳನ್ನೂ ಈ ಸಂಚಿಕೆಯಲ್ಲಿ ಕೊಟ್ಟಿದೆ.

ಕನ್ನಡ ನಾಡಾದ ಮೈಸೂರಿನಲ್ಲಿ ಕನ್ನಡದ ಪ್ರಸಿದ್ಧ ಸಾಹಿತಿಗಳಿಗೆ ರಾಜಮನ್ನಣೆ ದೊರೆತಂತೆಯೇ ಮಲೆಯಾಳ ಮತ್ತು ಆಂಧ್ರ ಪ್ರಾಂತಗಳಲ್ಲಿ ಅಲ್ಲಿಯ ಮಹಾ ಕವಿಗಳಿಗೆ ಲೋಕಮನ್ನಣೆ ದೊರೆತಿರುವುದು ಸಂತೋಷದ ಸಮಾಚಾರ. ಮಲೆ



ಮೈಸೂರು ಶ್ರೀಮನ್ಮಹಾರಾಜರವರಿಂದ
"ವಿದ್ಯಾನಿಧಿ" ಎಂಬ ಪ್ರಶಸ್ತಿಯನ್ನು ಪಡೆದ
ಶ್ರೀ॥ ಸಿದ್ಧಾಂತಿ ಶಿವಶಂಕರಶಾಸ್ತ್ರಿಗಳು

ಪಡಿಯಚ್ಚು ಕೊಟ್ಟವರು : ಸಂಪಾದಕರು, 'ಆಸ್ಟ್ರಾಲಾಜಿಕಲ್ ಮ್ಯಾಗಜಿನ್', ಬೆಂಗಳೂರು



ಪ್ರಾಕ್ತನ ವಿಮರ್ಶ ವಿಚಕ್ಷಣ ಮಹಾಮಹೋಪಾಧ್ಯಾಯ ರಾವ್ ಬಹದ್ದೂರ್

**ದಿವಂಗತ ಆರ್. ನರಸಿಂಹಾಚಾರ್ಯರು**

ಎಂ.ಎ., ಎಂ.ಆರ್.ಎ.ಎಸ್.

(ಇವರ ಭಾವಚಿತ್ರದ ಅನಾವರಣೋತ್ಸವ ಪರಿಷನ್ಮಂದಿರದಲ್ಲಿ
ತಾ॥ ೧೬–೧೨–೧೯೩೮ರಲ್ಲಿ ನಡೆಯಿತು.)

ಪಡಿಯಚ್ಚು ಕೊಟ್ಟವರು :
ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು

**ಕೇರಳೀಯ ಮತ್ತು ಆಂಧ್ರ ಮಹಾಕವಿಗಳಿಗೆ ಸನ್ಮಾನ**

ಯಾಳದ ಮಹಾಕವಿಗಳಾದ ಶ್ರೀ॥ ವಳ್ಳತ್ತೋೞ್‌ರವರ ಷಷ್ಠ್ಯಬ್ದಪೂರ್ತಿ ಸಮಾರಂಭವನ್ನು ಆ ಪ್ರಾಂತದ ಸಾಹಿತ್ಯಪ್ರೇಮಿಗಳು ಕಳೆದ ನವೆಂಬರ್ ತಿಂಗಳಿನಲ್ಲಿ ತುಂಬಾ ವಿಜೃಂಭಣೆಯಿಂದ ನೆರವೇರಿಸಿದರೆಂದು ಕೇಳುತ್ತೇವೆ. ಇವರು ತಮ್ಮ ಮಾತೃಭಾಷೆಯಾದ ಮಲೆಯಾಳದಲ್ಲಿ ವರಕವಿಗಳೆನ್ನಿಸಿಕೊಂಡು ಉತ್ಕೃಷ್ಟ ಕವನಗಳನ್ನು ರಚಿಸಿ ಆ ಭಾಷೆಯ ಸಾಹಿತ್ಯಕ್ಕೆ ಉನ್ನತಸ್ಥಾನ ಲಭ್ಯವಾಗಲು ನೆರವಾಗಿರುತ್ತಾರೆ. ಮತ್ತು ಕೇರಳಕ್ಕೆ ವಿಶಿಷ್ಟವಾದ ಕಥಕಳಿ ಕಲೆಯನ್ನು ಪುನರುಜ್ಜೀವನಗೊಳಿಸಿ ಪ್ರಪಂಚದ ವಿದ್ವನ್ಮಂಡಲಿಗಳಲ್ಲೆಲ್ಲಾ ಭಾರತಕ್ಕೆ ಪ್ರಾಶಸ್ತ್ಯವನ್ನು ತಂದಿದ್ದಾರೆ. ಇಂತಹ ಪ್ರಸಿದ್ಧ ಕವಿಗಳಿಗೆ, ಕಲಾಕೋವಿದರಿಗೆ ಜನರು ಗೌರವ ತೋರಿಸಿರುವುದನ್ನು ನೋಡಿದರೆ ದೇಶಭಾಷಾ ಸಾಹಿತ್ಯಕ್ಕೂ ಕಲೆಗೂ ಕಾಲಮಹಿಮೆಯಿಂದ ಎಷ್ಟರಮಟ್ಟಿನ ಪ್ರಾಧಾನ್ಯ ಲಭಿಸುವಂತಾಯಿತೆನ್ನುವುದು ವಿಶದವಾಗುತ್ತದೆ.

ಇದೇ ರೀತಿ ಆಂಧ್ರಮಹಾಕವಿಗಳಿಗೆ ಪ್ರಶಸ್ತಿಗಳನ್ನು ಕೊಡುವುದಕ್ಕಾಗಿ ಮದರಾಸು ಪಟ್ಟಣದಲ್ಲಿ ನೆಲಸಿರುವ ತ್ರಿಲಿಂಗ ಮಹಾವಿದ್ಯಾಪೀಠವೆಂಬ ಆಂಧ್ರ ಸಾಹಿತ್ಯ ಸಂಸ್ಥೆಯಲ್ಲಿ (Telugu Academy of Higher Learning) ಘಟಿಕೋತ್ಸವ ಸಮಾರಂಭ ಇದೇ ನವಂಬರ್ ತಿಂಗಳ ೧೭ನೆಯ ತಾರೀಖಿನಲ್ಲಿ ನಡೆಯಿತೆಂದು ಕೇಳುತ್ತೇವೆ. ಈ ಉತ್ಸವದಲ್ಲಿ ಮದರಾಸು ಶಾಸನ ಸಭೆಯ ವಕ್ತೃಗಳಾದ ಶ್ರೀ॥ ಸಾಂಬಮೂರ್ತಿಯವರ ಅಧ್ಯಕ್ಷತೆಯಲ್ಲಿ ಶ್ರೀ॥ ಚೆಲ್ಲಪಿಳ್ಳಾ ವೆಂಕಟಶಾಸ್ತ್ರಿಗಳಿಗೆ 'ಮಹಾಕವಿ' ಎಂಬ ಪ್ರಶಸ್ತಿ ಕೊಡಲ್ಪಟ್ಟಿತು. ಆಗ ರಾಜರಿಗೆ ಕಿರೀಟಧಾರಣೆಯಾಗುವಂತೆ ಇವರಿಗೂ ಪುಷ್ಪಕಿರೀಟಧಾರಣೆಯಾಯಿತು. ಇದೇ ರೀತಿ ನಮ್ಮ ಕನ್ನಡದ ಮಹಾಕವಿಗಳಿಗೂ ಕಿರೀಟಧಾರಣೆ ಆಗಬಾರದೇಕೆ?

**ಸಾಹಿತ್ಯಾಭಿಮಾನಿಗಳಿಗೂ, ಮಹಾಕವಿಗಳಿಗೂ ಮನ್ನಣೆ: ಆಂಧ್ರ ವಿಶ್ವವಿದ್ಯಾನಿಲಯದ ಘಟಿಕೋತ್ಸವದಲ್ಲಿ**

ಮೇಲ್ಕಂಡ ಘಟಿಕೋತ್ಸವದಲ್ಲಿ ಗೌರವವನ್ನು ಪಡೆದ ಮಹಾಕವಿ ವೆಂಕಟಶಾಸ್ತ್ರಿಗಳಿಗೂ, ಅವರಂತೆಯೇ ಕಲಾವಿದರಾದ ಶ್ರೀ॥ ಜಯಂತಿ ರಾಮಯ್ಯ ಪಂತುಲು ಮತ್ತು ರಾವ್ ಸಾಹೆಬ್ ಗಿಡುಗು ವೆಂಕಟ ರಾಮಮೂರ್ತಿ ಪಂತುಲು— ಇವರಿಬ್ಬರಿಗೂ ಸಹ ಇದೇ ಡಿಸೆಂಬರ್ ತಿಂಗಳ ೧ನೆಯ ತಾರೀಖಿನಲ್ಲಿ ನಡೆದ ಆಂಧ್ರ ವಿಶ್ವವಿದ್ಯಾನಿಲಯದ ಘಟಿಕೋತ್ಸವ ಸಮಾರಂಭದಲ್ಲಿ "ಕಲಾಪ್ರಪೂರ್ಣ" ಎಂಬ ಪ್ರಶಸ್ತಿ ಕೊಡಲ್ಪಟ್ಟಿತೆಂದು ಕೇಳಿ ಸಂತೋಷಿಸುತ್ತೇವೆ.

ಇದೇ ಸಂದರ್ಭದಲ್ಲಿ ಆಂಧ್ರ ಸಾಹಿತ್ಯ ಪರಿಷತ್ತಿನ ಸ್ಥಾಪನೆಗೆ ಮೂಲ ಕಾರಣರೂ, ಆಂಧ್ರಭಾಷಾ ನಿಘಂಟಿನ ರಚನೆಗೆ ಮುಖ್ಯಸಹಾಯಕರೂ ಆದ ಪಿಟ್ಟಾಪುರಂ ಮಹಾರಾಜರವರಿಗೆ "ಡಿ.ಲಿಟ್." (ಡಾಕ್ಟರ್ ಆಫ್ ಲಿಟರೇಚರ್)

ಎಂದರೆ ಸಾಹಿತ್ಯಪಾರಂಗತರೆಂಬ ಗೌರವಪ್ರಶಸ್ತಿ ಕೊಡಲ್ಪಟ್ಟದ್ದರಿಂದ ಮೇಲ್ಕಂಡ ಘಟಿಕೋತ್ಸವ ಚಿರಸ್ಮರಣೀಯವಾಗಿರುತ್ತದೆ.

**ವಿದ್ಯಾಭಿಮಾನಿಗಳ ಜ್ಞಾಪಕಾರ್ಥವಾದ ಸ್ಮಾರಕ: ಜಯಪುರದ ಮಹಾರಾಜರ ಲೋಹ ಪ್ರತಿಮೆ**

ಇದೇ ಘಟಿಕೋತ್ಸವದ ಸಂದರ್ಭದಲ್ಲಿ ನಡೆದ ಮತ್ತೊಂದು ವಿಶೇಷಾಂಶ ಯಾವುದೆಂದರೆ, ಜಯಪುರದ ಮಹಾರಾಜರವರ ಬ್ರಾಂಜ್ ಲೋಹ ಪ್ರತಿಮೆಯ ಅನಾವರಣೋತ್ಸವವನ್ನು ಮಹಾಕವಯಿತ್ರಿ ಶ್ರೀಮತಿ ಸರೋಜಿನೀದೇವಿಯವರು ನೆರವೇರಿಸಿದುದು. ಈ ಮಹಾರಾಜರು ಸ್ವಯಂ ಪ್ರಸಿದ್ಧಸಾಹಿತಿಗಳೂ, ಮಹಾಕವಿಗಳೂ ಆಗಿ ಪೂರ್ಣವಿದ್ಯಾಭಿಮಾನಿಗಳೆಂದು ಪ್ರಖ್ಯಾತರಾಗಿರುವರು. ಇವರು ಆಂಧ್ರ ವಿಶ್ವವಿದ್ಯಾನಿಲಯಕ್ಕೆ ವರ್ಷಕ್ಕೆ ಒಂದು ಲಕ್ಷ ರೂಪಾಯಿನಂತೆ ಸಹಾಯದ್ರವ್ಯ ಕೊಡುತ್ತಾ ಬಂದ ಪ್ರಯುಕ್ತ, ಆ ವಿದ್ಯಾಪೀಠ ನಿರಾತಂಕವಾಗಿ ಸ್ಥಾಪಿತವಾಗಿ ಪ್ರವರ್ಧಮಾನಕ್ಕೆ ಬರಲು ಸಾಧಕವಾಯಿತು. 'ಕಾಲೇಜ್ ಆಫ್ ಸೈನ್ಸ್ ಅಂಡ್ ಟೆಕ್ನಾಲಜಿ' ಎಂಬ ವಿಜ್ಞಾನ ಮತ್ತು ಕೈಗಾರಿಕೆಗಳಿಗೆ ಸಂಬಂಧಪಟ್ಟ ಶಾಲೆಯೊಂದನ್ನು ಇವರು ತಮ್ಮ ಸ್ವಂತ ವೆಚ್ಚದಿಂದ ಸ್ಥಾಪಿಸಿದ್ದರಿಂದ, ವಿಜ್ಞಾನ ಮತ್ತು ಕಲೆಗಳ ಅಭ್ಯಾಸಕ್ಕೆ ತುಂಬಾ ಉತ್ತೇಜನಕೊಟ್ಟಂತಾಯಿತು. ಇಂತಹ ಮಹನೀಯರ ಔದಾರ್ಯವನ್ನು ಆಂಧ್ರ ಪ್ರಾಂತದ ಮಹಾಜನರು ಸ್ಥಿರಗೊಳಿಸಿರುವುದನ್ನು ನೋಡಿದರೆ ಭರತಖಂಡದ ನಾನಾ ಭಾಗಗಳಲ್ಲಿ ಸಾಹಿತ್ಯೋಪಾಸಕರಿಗೆ ಎಷ್ಟರಮಟ್ಟಿನ ಮನ್ನಣೆ ದೊರೆಯುತ್ತಲಿರುವುದೆನ್ನುವುದಕ್ಕೆ ಮತ್ತೊಂದು ನಿದರ್ಶನ ದೊರೆತಂತಾಯಿತು. ಈ ರೀತಿ ಕಲಾವಿದರಿಗೂ, ಸಾಹಿತ್ಯಾಭಿಮಾನಿಗಳಿಗೂ ಆಂಧ್ರ ಪ್ರಾಂತದಲ್ಲಿ ಗೌರವಪುರಸ್ಕಾರಗಳು ಲಭ್ಯವಾದಂತೆಯೇ ಕರ್ನಾಟಕ ಪ್ರಾಂತದಲ್ಲಿಯೂ ಸಹ ಲಭ್ಯವಾಗುತ್ತಾ ಬರಲೆಂದು ಹಾರೈಸುತ್ತೇವೆ.

**ಪರಿಷನ್ಮಂದಿರದಲ್ಲಿ ದಿವಂಗತ ಶ್ರೀ॥ ಆರ್. ನರಸಿಂಹಾಚಾರ್ಯರ ಭಾವಚಿತ್ರದ ಅನಾವರಣೋತ್ಸವ**

ಕರ್ನಾಟಕ ವಿದ್ವನ್ಮಂಡಲಿಯಲ್ಲಿ ಅಗ್ರಗಣ್ಯರೂ, ಸುಪ್ರಸಿದ್ಧ ಕನ್ನಡ ಸಾಹಿತಿಗಳೂ, ಪರಿಷತ್ತಿನ ಪ್ರತಿಷ್ಠಾಪಕರಲ್ಲಿ ಒಬ್ಬರೂ ಆಗಿದ್ದು ನಾನಾವಿಧವಾಗಿ ಭಾಷಾ ಸೇವೆಯನ್ನು ಮಾಡಿ ಪ್ರಖ್ಯಾತರಾಗಿದ್ದ ಪ್ರಾಕ್ತನ ವಿಮರ್ಶ ವಿಚಕ್ಷಣ, ಪ್ರಾಚ್ಯವಿದ್ಯಾವೈಭವ, ಮಹಾಮಹೋಪಾಧ್ಯಾಯ, ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರು ಕೀರ್ತಿಶೇಷರಾಗಿ ಇಂದಿಗೆ ಸುಮಾರು ಎರಡು ವರ್ಷಗಳಾದವು. ಆದರೂ ಇದುವರೆಗೆ ಇವರದೊಂದು ಭಾವಚಿತ್ರ ಪರಿಷನ್ಮಂದಿರದಲ್ಲಿ ಕಂಗೊಳಿಸುತ್ತಿರುವ ಕನ್ನಡ ಸಾಹಿತ್ಯಾಭಿಮಾನಿಗಳ ಭಾವಚಿತ್ರಗಳ ಪಂಕ್ತಿಯಲ್ಲಿ ಸೇರದೆ ಇದ್ದುದು ಒಂದು ದೊಡ್ಡ ಕೊರತೆಯಾಗಿದ್ದಿತು. ಇವರದೊಂದು ಅಂದವಾದ ಭಾವಚಿತ್ರವನ್ನು ಇವರ ಕುಮಾರರಾದ ಶ್ರೀ॥ ತಿರುನಾರಣಯ್ಯಂಗಾರ್ಯರು ಪರಿಷತ್ತಿಗೆ ಒದಗಿಸಿಕೊಟ್ಟು ಈ ಕೊರತೆಯನ್ನು

ನಿವಾರಿಸಿದುದು ಸಂತೋಷದ ಸಂಗತಿ. ಈ ಭಾವಚಿತ್ರದ ಅನಾವರಣ ಮಹೋತ್ಸವ ಇದೇ ಡಿಸೆಂಬರ್ ೧೬ನೆಯ ತಾರೀಖಿನಲ್ಲಿ ಕನ್ನಡ ಸಾಹಿತ್ಯಕ್ಕೆ ವೃದ್ಧಪಿತಾಮಹ ರೆನಿಸಿದ ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಶ್ರೀ॥ ಎಂ. ಶಾಮರಾವ್, ಎಂ.ಎ. ಅವರ ಅಧ್ಯಕ್ಷತೆಯಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಶ್ರೀ॥ ಗಳಾದ ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು, ಆರ್. ಆಳ್ವಾರ್ ಅಯ್ಯಂಗಾರ್ಯರು, ಎಂ.ಎ., ನರಸಿಂಹಾಚಾರ್ಯರು ಮತ್ತು ಎಂ. ಸಿ. ಕೃಷ್ಣಸ್ವಾಮಯ್ಯಂಗಾರ್ಯರು ದಿವಂಗತರ ಭಾಷಾಸೇವೆಯನ್ನು ನಾನಾಮುಖವಾಗಿ ಪ್ರಶಂಸಿಸಿದರು. ಇನ್ನುಮುಂದೆ ಪರಿಷನ್ಮಂದಿರವನ್ನಲಂಕರಿಸುವ ಈ ಭಾವಚಿತ್ರದ ಅವಲೋಕನದಿಂದ ಕನ್ನಡತಾಯ ಮಕ್ಕಳು ಇವರ ಮೇಲ್ಪಂಕ್ತಿಯನ್ನನುಸರಿಸಿ ಭಾಷಾಸೇವೆಯಲ್ಲಿ ನಿರತರಾಗುವಂತೆ ಉತ್ತೇಜನ ಉಂಟಾಗಲೆಂದು ಹಾರೈಸುತ್ತೇವೆ.

**ಕರ್ನಾಟಕ ಸಂಸ್ಕೃತಿಯ ಪರಿಶೋಧನೆಗಾಗಿ ಬೊಂಬಾಯಿ ಸರಕಾರದವರ ಸಹಾಯ**

ಕರ್ನಾಟಕ ಸಂಸ್ಕೃತಿಯ ಪರಿಶೋಧನೆ ಇದುವರೆಗೆ ಒಮ್ಮುಖವಾಗಿ ನಡೆಯಲು ಅವಕಾಶವಿಲ್ಲದೆ ಇದ್ದ ಪ್ರಯುಕ್ತ, ವಿಶಾಲ ಕರ್ನಾಟಕದಲ್ಲಿ ಈ ಸಂಸ್ಕೃತಿಗೆ ಸಂಬಂಧ ಪಟ್ಟ ಶಾಸನಗಳೇ ಮುಂತಾದ ಆಧಾರಗಳನ್ನು ಶೇಖರಿಸಿ ಒಂದು ಚರಿತ್ರೆಯನ್ನು ಬರೆಯಲು ಅವಕಾಶವಿಲ್ಲದೆ ಇದ್ದಿತು. ಈ ಕೊರತೆಯನ್ನು ನಿವಾರಿಸುವ ಉದ್ದೇಶ ದಿಂದ ಬೊಂಬಾಯಿ ಸರಕಾರದವರು ಧಾರವಾಡದ ಕರ್ನಾಟಕ ಕಾಲೇಜಿಗೆ ಮೊತ್ತದ ೮ ಸಾವಿರ ರೂಪಾಯಿ ಗಳ ಮತ್ತು ವರ್ಷ ವರ್ಷವೂ ಸಲ್ಲುವ ೧೨ ಸಾವಿರ ರೂಪಾಯಿಗಳ ಸಹಾಯದ್ರವ್ಯವನ್ನು ಮಂಜೂರುಮಾಡಿರುವರೆಂದೂ, ಈ ಸಂಬಂಧ ದಲ್ಲಿ ಕಾರ್ಯಯೋಜನೆಯನ್ನು ಸಿದ್ಧಗೊಳಿಸಲು ಒಂದು ಸಮಿತಿ ಏರ್ಪಾಟಾಗಿದೆಯೆಂದೂ ಕೇಳಿ ಸಂತೋಷಿಸುತ್ತೇವೆ. ಇದರ ಫಲವಾಗಿ ಕರ್ನಾಟಕ ಸಂಸ್ಕೃತಿಯ ಪರಿಶೋಧನೆ ಸಾಂಗವಾಗಿ ನಡೆಯುವಂತಾಗಲೆಂದು ಹಾರೈಸುತ್ತೇವೆ. ಪರಿಷತ್ತೂ ಈ ಕಾರ್ಯಸಾಧನೆಗಾಗಿ ಕೆಲವು ಸೂಚನೆಗಳನ್ನು ಕಳುಹಿಸಿಕೊಟ್ಟಿದೆ.

**ಪರಿಷತ್ತಿನ ಮುಂದಿನ ವರ್ಷದ ಪ್ರಕಟನೆ: 'ಕನ್ನಡ ನಾಡಿನ ಚರಿತ್ರೆ'**

ಕನ್ನಡದಲ್ಲಿ ವಿಜ್ಞಾನವಿಷಯಕವಾದ ಗ್ರಂಥಗಳನ್ನು ಬರಸಿ ಪ್ರಕಟಿಸಬೇಕೆಂಬ ಉದ್ದೇಶದಿಂದ ಪರಿಷತ್ತಿನ ಪೂಜ್ಯ ಅಧ್ಯಕ್ಷರವರಾದ ಮೈಸೂರು ಶ್ರೀಮದ್ಯುವ ರಾಜರವರು ೧೯೨೬ರಲ್ಲಿ ೨,೫೦೦ ರೂಪಾಯಿಗಳ ಸಹಾಯ ದ್ರವ್ಯವನ್ನು ದಯಪಾಲಿಸಿದ್ದರಷ್ಟೆ. ಈ ಉದ್ದೇಶಕ್ಕನುಸಾರ ವಾಗಿ ಪರಿಷತ್ತು ೧೯೩೧ರಲ್ಲಿ ಶ್ರೀ॥ ಎನ್. ವೆಂಕಟೇಶ ಅಯ್ಯಂಗಾರ್, ಬಿ.ಎ. ಅವರಿಂದ "ಜ್ಯೋತಿರ್ವಿನೋದಿನಿ" ಎಂಬ ಗ್ರಂಥವನ್ನು ಬರಸಿ ಪ್ರಕಟಿಸಿತು. ಅಲ್ಲಿಂದೀಚೆಗೆ ವಿಜ್ಞಾನವಿಷಯಕ ಗ್ರಂಥಗಳನ್ನು ಪ್ರಕಟಿಸುವ ಕಾರ್ಯವನ್ನು ಮೈಸೂರು ವಿದ್ಯಾಭ್ಯಾಸದ ಇಲಾಖೆಯವರೂ ವಿಶ್ವವಿದ್ಯಾನಿಲಯದ ಅಧಿಕಾರಿಗಳೂ ಕೈಕೊಂಡಿರುವ ಪ್ರಯುಕ್ತ ಪರಿಷತ್ತು 'ಕನ್ನಡನಾಡಿನ ಚರಿತ್ರೆ'ಯನ್ನು ಬರಸಿ ಪ್ರಕಟಪಡಿಸುವುದು

ಆವಶ್ಯಕವೆಂದು ಭಾವಿಸಿ ಈ ಬದಲಾವಣೆಗೆ ಶ್ರೀಮದ್ಯುವರಾಜರವರ ಅನುಮತಿಯನ್ನು ಪಡೆದು ಕಾರ್ಯಾರಂಭ ಮಾಡಿರುವುದು ಕನ್ನಡಿಗರೆಲ್ಲರಿಗೂ ಸಂತೋಷದ ಸಂಗತಿಯಾಗಿದೆ. ಗ್ರಂಥವನ್ನು ಆರು ಭಾಗಗಳಾಗಿ ವಿಂಗಡಿಸಿ, ಒಂದೊಂದು ಭಾಗದ ರಚನೆಗೂ ಆಯಾ ವಿಷಯದಲ್ಲಿ ನಿಷ್ಣಾತರಾದ ವಿದ್ವಾಂಸರನ್ನು ಈ ಕೆಳಗೆ ಕಂಡ ರೀತಿಯಲ್ಲಿ ನಿಯಮಿಸಲಾಗಿದೆ:

(೧) ರಾಜಕೀಯ ಮತ್ತು ಆನುವಂಶಿಕ ಚರಿತ್ರೆ; ತಾತ್ಕಾಲಿಕ ಭೂವಿರಣೆ ಮತ್ತು ಜನಸಂಖ್ಯೆ ಇವುಗಳ ಸಮೇತ .. ಡಾ॥ ಸಾಲ್ತೊರೆ ಅವರು.
(೨) ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆ .. ಶ್ರೀ॥ ಪಿ. ಬಿ. ದೇಸಾಯಿಯವರು.
(೩) ಧಾರ್ಮಿಕ ಚರಿತ್ರೆ .. .. ಡಾ॥ ನಂದೀಮಠ ಅವರು.
(೪) ಭಾಷೆಯ ಮತ್ತು ಸಾಹಿತ್ಯದ ಚರಿತ್ರೆ .. ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರು.
(೫) ಕಲೆಯ ಚರಿತ್ರೆ .. .. ಡಾ॥ ಎಂ. ಎಚ್. ಕೃಷ್ಣರವರು.
(೬) ಪೀಠಿಕೆ ಮತ್ತು ಉಪಸಂಹಾರ .. ರಾಜಸೇವಾಸಕ್ತ ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು.

ಸಾಧ್ಯವಾದರೆ ಗ್ರಂಥವನ್ನು ಬರುವ ಮೇ ತಿಂಗಳಲ್ಲಿ ನಡೆಯುವ ವಸಂತ ಸಾಹಿತ್ಯೋತ್ಸವದ ಸಮಯಕ್ಕೆ ಪ್ರಕಟಿಸುವ ಏರ್ಪಾಡು ಮಾಡಬೇಕೆಂದು ನಿಶ್ಚಯವಾಗಿದೆ. ಸಮಿತಿಯ ಉದ್ದೇಶ ನಿರ್ವಿಘ್ನವಾಗಿ ನೆರವೇರಲೆಂದು ಮನಃಪೂರ್ವಕವಾಗಿ ಹಾರೈಸುತ್ತೇವೆ.

**ಮೈಸೂರಿನ ಪದವೀಧರರ ಗ್ರಾಮ ವಸತಿಯ ಏರ್ಪಾಡು**

ವಿಶ್ವವಿದ್ಯಾನಿಲಯಗಳಲ್ಲಿ ವಿದ್ಯಾರ್ಜನೆಮಾಡಿ ಪದವೀಧರರಾಗುವವರಿಂದ ಗ್ರಾಮಾಂತರದಲ್ಲಿ ವಾಸಮಾಡುವ ಸಾಮಾನ್ಯಜನರಿಗೆ ಪ್ರಯೋಜನ ಉಂಟಾಗಬೇಕಾದರೆ ಅಂತಹ ಪದವೀಧರರು ಗ್ರಾಮಗಳಿಗೇ ಹೋಗಿ ನೆಲಸಿ ತಾವು ಕಲಿತಿರುವ ವಿದ್ಯೆಯ ಮುಖ್ಯಾಂಶಗಳನ್ನು ಅಲ್ಲಿಯ ಜನರಿಗೆ ಬೋಧಿಸಿ, ಅದರಂತೆ ತಾವು ನಡೆದು ತೋರಿಸಿದಲ್ಲದೆ ಆಗಲಾರದು. ಒಂದು ದೇಶದ ಪುರೋವೃದ್ಧಿಗೆ ಆ ದೇಶದ ಗ್ರಾಮಾಭಿವೃದ್ಧಿಯೇ ತಳಹದಿಯಾದ ಪ್ರಯುಕ್ತ ಗ್ರಾಮಗಳ ಅಭಿವೃದ್ಧಿಗೆ ಸಂಬಂಧಪಟ್ಟ ಏರ್ಪಾಡುಗಳಿಗೆ ಹೆಚ್ಚು ಗಮನ ಕೊಡತಕ್ಕದ್ದು ರಾಜನೀತಿಜ್ಞರ ಕರ್ತವ್ಯವಾಗಿರುತ್ತದೆ. ಈ ತತ್ತ್ವಕ್ಕನುಸಾರವಾಗಿ ಮೈಸೂರು ವಿಶ್ವವಿದ್ಯಾನಿಲಯದ ಸಂಬಂಧದಲ್ಲಿ ಪದವೀಧರರ ಗ್ರಾಮ ವಸತಿಯ (University Settlement) ಏರ್ಪಾಡೊಂದನ್ನು ಜಾರಿಗೆ ತರತಕ್ಕದ್ದು ಯುಕ್ತವೆಂಬ ನಿರ್ಧಾರ ಇದೇ ನವೆಂಬರ್ ತಿಂಗಳಲ್ಲಿ ನಡೆದ ಸೆನೆಟ್ ಸಭೆಯಲ್ಲಿ ಅನುಮೋದಿತವಾಯಿತೆಂದು ಕೇಳಿ ಸಂತೋಷಿಸುತ್ತೇವೆ. ಈ ಏರ್ಪಾಡು ಕ್ಷಿಪ್ರದಲ್ಲಿಯೇ ಕಾರ್ಯಕಾರಿಯಾಗಿ ಪರಿಣಮಿಸಿ ದೇಶಾಭ್ಯುದಯಕ್ಕೆ ಸಹಕಾರಿಯಾಗಲೆಂದು

ಹಾರೈಸುತ್ತೇವೆ. ಈ ಚರ್ಚೆಯಲ್ಲಿ ಶ್ರೀ॥ ಭೂಪಾಳಂ ಚಂದ್ರಶೇಖರಯ್ಯನವರು ಕನ್ನಡದಲ್ಲಿಯೇ ಮಾತನಾಡಿದರೆಂಬುದು ಪ್ರಶಂಸಾರ್ಹವಾದ ವಿಷಯ.

ಇದೇ ನವೆಂಬರ್ ತಿಂಗಳಿನಲ್ಲಿ ಮೈಸೂರು ಸಂಸ್ಥಾನದ ದಿವಾನ್‌ರವರಾದ ಸರ್ ಮಿರ್ಜಾ ಇಸ್ಮಾಯಿಲ್ ಸಾಹೇಬರು ಹಾಸನ ಡಿಸ್ಟ್ರಿಕ್ಟಿನಲ್ಲಿ ಪ್ರವಾಸ ಮಾಡಿದಾಗ

**ಕರ್ನಾಟಕ ಸಂಘಗಳ ಕರ್ತವ್ಯ: ಮೈಸೂರು ದಿವಾನ್‌ರವರ ಉಪದೇಶ**

ಚೆನ್ನರಾಯಪಟ್ಟಣದ ಕರ್ನಾಟಕ ಸಂಘದ ಕಾರ್ಯ ಕಲಾಪಗಳನ್ನು ಪರಾಮರ್ಶಿಸಿ ಇಂತಹ ಸಂಘಗಳು ಕೈಕೊಳ್ಳಬೇಕಾದ ಕರ್ತವ್ಯವನ್ನು ಕುರಿತು ಈ ರೀತಿ ಅಪ್ಪಣೆ ಕೊಡಿಸಿದರು:

"ಕನ್ನಡ ಭಾಷೆಯ ಏಳಿಗೆಗಾಗಿ ಕೆಲಸ ಮಾಡುತ್ತಿರುವ ದಕ್ಷತೆಯುಳ್ಳ ಸಂಸ್ಥೆಗಳಲ್ಲಿ ನಿಮ್ಮದೂ ಒಂದು. ನಿಮ್ಮ ಸಂಘ ನಾನಾ ರೀತಿಗಳಲ್ಲಿ ಸಾಹಿತ್ಯಸೇವೆ ಮಾಡುತ್ತಿರುವುದನ್ನು ಕೇಳಿ ನಾನು ತುಂಬ ಹರ್ಷಿಸುತ್ತೇನೆ. ಇಂಥ ಸಂಘಗಳು ನಾಡಿನಲ್ಲೆಲ್ಲ ಅರಿವಿನ ಬೆಳಕನ್ನು ಹರಡುವ ಸಂಸ್ಥೆಗಳಾಗಬಹುದಾಗಿದೆ. ಈಗ ಆ ಬಗೆಯ ಕೆಲಸವೇನೋ ನಡೆಯುತ್ತಿದೆ. ಆದರೂ ಇನ್ನೂ ಹೆಚ್ಚು ಕೆಲಸ ನಡೆಯಬೇಕು. ನಮ್ಮ ದೇಶದಲ್ಲಿ ತಿಳಿವಳಿಕೆ ಬಹಳ ಕಡಮೆ. ನಮ್ಮಲ್ಲಿ ಹಲವರಿಗೆ ಸಾಹಿತ್ಯದಲ್ಲಿಯೂ ಚರಿತ್ರೆಯಲ್ಲಿಯೂ ಪರಿಶ್ರಮವಿಲ್ಲ. ಹಲವರಿಗೆ ಅವ ರವರ ಮತದ ವಿಚಾರಗಳೇ ಗೊತ್ತಿಲ್ಲ. ವಿಜ್ಞಾನದ ತಿಳಿವಳಿಕೆಯಂತೂ ಇನ್ನೂ ಕಡಮೆ. ಮೇಲೆ ವಿಮಾನಗಳು ಹಾರಾಡಿದರೆ ನೋಡಿ ನೋಡಿ ಹಿಗ್ಗುತ್ತೇವೆ. ಹಿಗ್ಗೋಣ. ಆದರೆ ಅಷ್ಟು ಜನರನ್ನು ಕೂಡಿಸಿಕೊಂಡು ವಿಮಾನವು ಹಕ್ಕಿಯಂತೆ ಹಾರುವುದು ಹೇಗೆಂಬುದರ ವಿವರ ನಮ್ಮಲ್ಲಿ ಎಷ್ಟು ಜನರಿಗೆ ಗೊತ್ತುಂಟು? ವಿಜ್ಞಾನವಿಚಾರಗಳ ತಿಳಿವಳಿಕೆಯನ್ನೂ, ಇತರ ಬಗೆಬಗೆಯ ವಿಚಾರಗಳ ತಿಳಿವಳಿಕೆಯನ್ನೂ ಉಪನ್ಯಾಸ ಮುಂತಾದುವುಗಳ ಮೂಲಕ ಜನರಲ್ಲಿ ಹರಡಬೇಕು. ಆ ಕೆಲಸ ಈಗ ನಡೆಯುತ್ತಿದೆ. ಅದು ಇನ್ನೂ ಹೆಚ್ಚಾಗಿ ನಡೆಯ ಬೇಕೆಂಬುದು ನನ್ನ ಆಶೆ."

ಮೇಲ್ಕಂಡ ಉಪದೇಶವನ್ನು ಆದಷ್ಟು ಮಟ್ಟಿಗೆ ಕಾರ್ಯಕಾರಿಯಾಗಿ ಮಾಡಲು ಎಲ್ಲ ಕರ್ನಾಟಕ ಸಂಘಗಳೂ ದೃಢಪ್ರಯತ್ನ ಮಾಡಬೇಕೆಂಬುದೇ ನಮ್ಮ ಆಶಯ.

ಪರಿಷತ್ಪತ್ರಿಕೆಯ ಕಳೆದ ಸಂಚಿಕೆಯಲ್ಲಿ (ಪುಟ ೨೪೬–೮) ಇಬ್ಬರು ಕಲಾಭಿ ಮಾನಿಗಳ ಮತ್ತು ಇಬ್ಬರು ಪರಿಷದಭಿಮಾನಿಗಳ ಮರಣವನ್ನು ಕುರಿತು ಪ್ರಸ್ತಾವಿ

**ಕನ್ನಡದ ಅಭಿಮಾನಿಗಳಾಗಿದ್ದ ಇಬ್ಬರು ಮಹಿಳೆಯರ ಮತ್ತು ಇಬ್ಬರು ಮಹನೀಯರ ಮರಣ**

ಸಿದ್ದುದು ಸರಿಯಷ್ಟೆ. ಈ ಸಂಚಿಕೆಯಲ್ಲಿ ಕನ್ನಡದ ಅಭಿಮಾನಿಗಳಾಗಿದ್ದ ಬೇರೆ ನಾಲ್ವರು ಕನ್ನಡದ ಅಭಿಮಾನಿಗಳ ಮರಣವನ್ನು ಕುರಿತು ಪ್ರಸ್ತಾವಿಸಬೇಕಾದ ಪ್ರಸಂಗ ಒದಗಿದುದಕ್ಕಾಗಿ ತುಂಬಾ ವಿಷಾದಿಸುತ್ತೇವೆ. ಈ ಪೈಕಿ ಇಬ್ಬರು ಮಹಿಳೆಯರು; ಉಳಿದ ಇಬ್ಬರು ಮಹನೀಯರು.

ಇವರಲ್ಲಿ ಮೊದಲನೆಯವರಾದ ಶ್ರೀಮತಿ ಟಿ. ಕನಕಲಕ್ಷ್ಮಮ್ಮ, ಎಂ.ಎ. ಅವರು ಮೈಸೂರು ಮಹಾರಾಣಿ ಕಾಲೇಜಿನಲ್ಲಿ ಇಂಗ್ಲಿಷ್ ಭಾಷೆಯ ಅಧ್ಯಾಪಕ ರಾಗಿದ್ದು ನಾಟಕಕಲೆಗೆ ತುಂಬಾ ಪ್ರೋತ್ಸಾಹಕೊಡುತ್ತಿದ್ದರು. ಎರಡನೆಯ ವರಾದ ಶ್ರೀಮತಿ ನಾಗಮ್ಮ, ಎಂ.ಎ., ಎಲ್.ಟಿ. ಅವರು ಮೈಸೂರು ಮಹಾರಾಣಿ

ಹೈ ಸ್ಕೂಲಿನಲ್ಲಿ ಹೆಡ್ ಮಿಸ್ಟ್ರೆಸ್‌ರವರಾಗಿದ್ದು ನಮ್ಮ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯಲ್ಲಿ ಕೆಲಕಾಲ ಸದಸ್ಯೆಯರಾಗಿದ್ದರು.

ಮೂರನೆಯವರಾದ ಮೈಸೂರು ಸರಕಾರದ ಫೈನಾನ್‌ಷಿಯಲ್ ಸೆಕ್ರಿಟರಿ ರಾಜಸೇವಾನಿಪುಣ ಶ್ರೀ॥ ಎಸ್. ಶಾಮಣ್ಣ, ಬಿ.ಎ. ಅವರು ಪರಿಷತ್ತಿನ ಆಜೀವ ಸದಸ್ಯರಾಗಿ ಕನ್ನಡದ ಅಭಿಮಾನವನ್ನು ವ್ಯಕ್ತಪಡಿಸಿದ್ದರು. ನಾಲ್ಕನೆಯವರಾದ ಶ್ರೀ॥ ಜಗನ್ನಾಥ ಮಹಾಲೇ ಅವರು 'ಮುಂಬಯಿ ಕನ್ನಡಿಗ' ಎಂಬ ವಾರಪತ್ರಿಕೆಯ ಉತ್ಥಾಪಕರಾಗಿದ್ದು ಕನ್ನಡ ಭಾಷೆಯ ಏಳಿಗೆಯಲ್ಲಿ ತುಂಬಾ ಉತ್ಸಾಹ ವಹಿಸಿದ್ದರು.

ಮೇಲ್ಕಂಡ ಮಹಿಳೆಯರ ಮತ್ತು ಮಹನೀಯರ ಮರಣದಿಂದ ಅವರವರ ಕುಟುಂಬವರ್ಗಕ್ಕೆ ಪ್ರಾಪ್ತವಾಗಿರುವ ವಿಯೋಗದುಃಖದಲ್ಲಿ ನಾವೂ ಸಹ ಭಾಗಿಗಳಾಗಿ ನಮ್ಮ ವಾಚಕರ ಪರವಾಗಿ ಹೃತ್ಪೂರ್ವಕವಾದ ಅನುತಾಪವನ್ನು ಸೂಚಿಸಲು ಅಪೇಕ್ಷಿಸುತ್ತೇವೆ.

**ಡಾ॥ ಬ್ರಜೇಂದ್ರನಾಥ ಸೀಲರವರ ಮರಣ**

ಇದೇ ಸಂದರ್ಭದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಹತ್ತು ವರ್ಷಗಳ ಕಾಲ ವೈಸ್-ಚಾನ್ಸೆಲರ್ ಪದವಿಯನ್ನು ಅಲಂಕರಿಸಿದ್ದು ಆ ನಿಲಯದ ಬೆಳವಣಿಗೆಗೆ ನಾನಾವಿಧವಾಗಿ ಸಹಾಯಮಾಡಿದ್ದ ಡಾಕ್ಟರ್ ಬ್ರಜೇಂದ್ರನಾಥ ಸೀಲರವರು ಸ್ವರ್ಗಸ್ಥರಾದರೆಂಬ ವಿಷಯವನ್ನು ನಮ್ಮ ವಾಚಕರ ಅವಗಾಹನೆಗೆ ತರಲು ತುಂಬಾ ವಿಷಾದಿಸುತ್ತೇವೆ. ಇವರ ಮರಣದಿಂದ ವಿದ್ವತ್ ಪ್ರಪಂಚಕ್ಕೆ ಒಂದು ಅಪಾರವಾದ ನಷ್ಟ ಉಂಟಾಯಿತೆನ್ನಬಹುದು.

**ಬಳ್ಳಾರಿ ಸಮ್ಮೇಳನದ ಅಧ್ಯಕ್ಷರು: ಶ್ರೀ॥ ದಿವಾಕರ ರಂಗರಾಯರು**

ಇದೇ ಡಿಸೆಂಬರ್ ೨೯, ೩೦, ೩೧ನೆಯ ತಾರೀಖುಗಳಲ್ಲಿ ಬಳ್ಳಾರಿಯಲ್ಲಿ ನಡೆಯಲಿರುವ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಶ್ರೀ॥ ದಿವಾಕರ ರಂಗರಾಯರು, ಎಂ.ಎ., ಎಲ್‌ಎಲ್.ಬಿ. ಅವರು ಚುನಾಯಿತರಾಗಿರುವುದು ಸಂತೋಷದ ಸಂಗತಿ. ಇವರು ಸುಪ್ರಸಿದ್ಧ ಕನ್ನಡ ಸಾಹಿತಿಗಳು. ಅಲ್ಲದೆ ಪ್ರಖ್ಯಾತ ರಾಜಕಾರಣ ಪಟುಗಳು. ಭಾಷಾಪ್ರಾಂತ ನಿರ್ಮಾಣವೇ ಮೊದಲಾದ ಮುಖ್ಯಪ್ರಶ್ನೆಗಳು ಪರ್ಯಾಲೋಚನೆಗೆ ಬರುವ ಈ ಸಮಯದಲ್ಲಿ ಪ್ರತಿಭಾಶಾಲಿಗಳಾದ ಇಂತಹ ಮಹನೀಯರ ನೇತೃತ್ವ ಸಮ್ಮೇಳನಕ್ಕೆ ದೊರೆತದ್ದರಿಂದ ಕಾರ್ಯಕಲಾಪಗಳು ಗುರಿಹಿಡಿದು ಸುಲಲಿತವಾಗಿ ನಡೆಯಲು ಸಾಧಕವಾದಂತಾಯಿತು. ಇವರ ಅಧ್ಯಕ್ಷತೆಯಲ್ಲಿ ಸಮ್ಮೇಳನ ಪೂರ್ಣ ಯಶಸ್ವಿಯಾಗಿ ನಡೆಯಲೆಂದು ಹಾರೈಸುತ್ತೇವೆ.

ಮೇಲ್ಕಂಡ ಸಮ್ಮೇಳನದ ಪ್ರಾರಂಭೋತ್ಸವವನ್ನು ಸಂಡೂರು ಸಂಸ್ಥಾನಾಧೀಶ್ವರರಾದ ಶ್ರೀಮಂತ ರಾಜಾಸಾಹೇಬರವರು ನೆರವೇರಿಸಲು ಒಪ್ಪಿರುವುದು ಸಮ್ಮೇಳನ ಜಯಪ್ರದವಾಗಿ ನಡೆಯುವುದಕ್ಕೆ ಶುಭ ಸೂಚನೆ ಎಂತಲೇ ಭಾವಿಸಬೇಕು. ಅಲ್ಲದೆ ಸ್ವಾಗತ ಮಂಡಲಿಯ ಅಧ್ಯಕ್ಷತೆಯನ್ನು ಶ್ರೀ॥ ವೈ. ನಾಗೇಶ ಶಾಸ್ತ್ರಿಗಳೂ, ಕವಿಗೋಷ್ಠಿಯ ಅಧ್ಯಕ್ಷತೆಯನ್ನು ಶ್ರೀ॥ ಜಿ. ಪಿ. ರಾಜರತ್ನಂ ಅವರೂ, ನಾಟಕ ಗೋಷ್ಠಿಯ ಅಧ್ಯಕ್ಷತೆಯನ್ನು ಶ್ರೀ॥ ಶಿವರಾಮ ಕಾರಂತರೂ, ಅದರ ಪ್ರಾರಂಭಕಾರ್ಯವನ್ನು ಶ್ರೀ॥ ಆರ್. ವಿ. ಜಾಗಿರದಾರರೂ ವಹಿಸಿಕೊಂಡಿರುವುದರಿಂದ ಸಮ್ಮೇಳನಕ್ಕೆ ಸಂಬಂಧಪಟ್ಟ ಎಲ್ಲ ಕಾರ್ಯಗಳೂ ಸುಲಲಿತವಾಗಿ ನಡೆಯುವುವೆಂಬುದರಲ್ಲಿ ಯಾವ ಸಂದೇಹವೂ ಇರಲಾರದು. ಎಂದಿನಂತೆ ಸಮ್ಮೇಳನದ ವಿವರಗಳನ್ನು ಮುಂದಿನ 'ವಿಶೇಷ ಸಂಚಿಕೆ'ಯಲ್ಲಿ ಕೊಡಲಾಗುವುದು.

**ಸಮ್ಮೇಳನದ ಪ್ರಾರಂಭೋತ್ಸವ: ಸಂಡೂರು ರಾಜಾ ಸಾಹೇಬರವರಿಂದ**

ಮೈಸೂರು ಶ್ರೀಮನ್ಮಹಾರಾಜರವರಿಂದ "ರಾಜಸೇವಾಸಕ್ತ" ಎಂಬ ಪ್ರಶಸ್ತಿಯನ್ನು ಪಡೆದ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರಿಗೆ ಮೈಸೂರು ಬೆಂಗಳೂರು ನಗರಗಳಲ್ಲಿಯೂ, ಮೈಸೂರು ಸಂಸ್ಥಾನದ ಬೇರೆ ಕೆಲವು ಪ್ರದೇಶಗಳಲ್ಲಿಯೂ ಸಹ ವೈಯಕ್ತಿಕವಾಗಿಯೂ, ಸಾರ್ವಜನಿಕ ಸಂಸ್ಥೆಗಳ ಪರವಾಗಿಯೂ ಈಗಾಗಲೇ ಅಭಿನಂದನೆಗಳನ್ನು ಸಮರ್ಪಿಸಿರುವುದು ಸರಿಯಷ್ಟೆ. ಈಗ ಬಳ್ಳಾರಿಯಲ್ಲಿ ನಡೆಯುವ ಸಮ್ಮೇಳನದಲ್ಲಿ ನಮ್ಮ ಸಾಹಿತ್ಯ ಪರಿಷತ್ತಿನ ಅಖಿಲ ಕರ್ನಾಟಕ ಸದಸ್ಯರ ಪರವಾಗಿ ಅವರಿಗೆ ಒಂದು ಅಭಿನಂದನ ಪತ್ರಿಕೆಯನ್ನು ಯಥೋಚಿತವಾದೊಂದು ಸ್ಮಾರಕದ ಸಮೇತ ಸಮರ್ಪಿಸಬೇಕೆಂದು ನಿರ್ಧರವಾಗಿರುವುದನ್ನು ಕೇಳಿ ಸಂತೋಷಿಸುತ್ತೇವೆ. ಅಭಿನಂದನ ಸಭೆ ಇದೇ ಡಿಸೆಂಬರ್ ೨೯ನೆಯ ತಾರೀಖು ಗುರುವಾರ ಸಾಯಂಕಾಲ ಶ್ರೀ॥ ಬೆನಗಲ್ ರಾಮರಾಯರ ಅಧ್ಯಕ್ಷತೆಯಲ್ಲಿ ನಡೆಯುವುದಾಗಿದೆ. ಸಾಹಿತ್ಯಾಭಿಮಾನಿಗಳಾದ ಸಮಸ್ತರೂ ಸಭೆಗೆ ದಯಮಾಡಿಸಿ ಸಭೆ ಯಶಸ್ವಿಯಾಗಿ ನಡೆಯಲು ನೆರವಾಗುವರೆಂದು ನಿರೀಕ್ಷಿಸುತ್ತೇವೆ.

**ಪರಿಷತ್ತಿನ ಪರವಾಗಿ ಅಭಿನಂದನ ಪತ್ರಿಕೆ: ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಿಗೆ**

ಸಂಸ್ಕೃತದ 'ಶಾಕುಂತಲ' ನಾಟಕವನ್ನು ಅತ್ಯುತ್ಕೃಷ್ಟವಾದ ರೀತಿಯಲ್ಲಿ ಕನ್ನಡಕ್ಕೆ ಪರಿವರ್ತನೆಮಾಡಿ ಶ್ರೀ ಚಾಮರಾಜ ಒಡೆಯರವರಿಂದ 'ಅಭಿನವಕಾಳಿದಾಸ' ಎಂಬ ಪ್ರಶಸ್ತಿಯನ್ನು ಪಡೆದು ಕನ್ನಡ ಸಾಹಿತ್ಯದಲ್ಲಿ ಚಿರಪ್ರಸಿದ್ಧರೆನಿಸಿದ್ದ ಶ್ರೀ॥ ಬಸವಪ್ಪ ಶಾಸ್ತ್ರಿಗಳು ದಿವಂಗತರಾಗಿ ಎಷ್ಟೋ ವರುಷಗಳು ಗತಿಸಿಹೋಗಿದ್ದಾಗ್ಯೂ ಇದು ವರೆಗೂ ಅವರ ಭಾವಚಿತ್ರವೊಂದು ಪರಿಷನ್ಮಂದಿರವನ್ನು ಅಲಂಕರಿಸದೆ ಇದ್ದುದು ಒಂದು ದೊಡ್ಡ ಕೊರತೆಯಾಗಿದ್ದಿತು. ಈ ಕೊರತೆಯನ್ನು

**ದಿವಂಗತ ಶ್ರೀ॥ ಬಸವಪ್ಪ ಶಾಸ್ತ್ರಿಗಳ ಭಾವಚಿತ್ರದ ಅನಾವರಣೋತ್ಸವ**

ಬೆಂಗಳೂರಿನ ಡಿಸ್ಟ್ರಿಕ್ಟ್ ಜಡ್ಜರವರಾದ ಶ್ರೀ॥ ಜಿ. ಪರಮಶಿವಯ್ಯನವರು ಮೊನ್ನೆ ತಾನೇ ನಿವಾರಿಸಿದುದು ಕನ್ನಡದ ಅಭಿಮಾನಿಗಳಿಗೆಲ್ಲ ಸಂತೋಷಪ್ರದವಾದ ಅಂಶವಾಗಿದೆ.

ಅವರು ಪರಿಷತ್ತಿಗೆ ದಾನವಾಗಿ ಕೊಟ್ಟ ದಿವಂಗತರ ದಿವ್ಯವಾದ ಭಾವಚಿತ್ರದ ಅನಾವರಣೋತ್ಸವವನ್ನು ವಿಜೃಂಭಣೆಯಿಂದ ನಡಸಲು ಶ್ರೀ॥ ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು ಇದೇ ಡಿಸೆಂಬರ್ ೨೨ನೆಯ ತಾರೀಖು ಗುರುವಾರ ಸಂಜೆ ಪರಿಷನ್ಮಂದಿರದಲ್ಲಿ ಒಂದು ಸಭೆಯನ್ನು ಏರ್ಪಡಿಸಿದ್ದರು. ಅನೇಕ ವರ್ಷಗಳ ಕಾಲ ನಮ್ಮ ಶ್ರೀಮದ್ಯುವರಾಜರವರ ಆಪ್ತಕಾರ್ಯದರ್ಶಿಗಳಾಗಿದ್ದ ಶ್ರೀ॥ ಎಫ್. ಸಿ. ದೇವರಾಜ ಅರಸರವರು ಈ ಸಭೆಯ ಅಧ್ಯಕ್ಷತೆ ವಹಿಸಿದ್ದರು. ಶ್ರೀ॥ ಮಾಸ್ತಿ ವೆಂಕಟೇಶ ಐಯಂಗಾರ್ಯರು ದಿವಂಗತರ ಭಾವಚಿತ್ರವನ್ನು ಅನಾವರಣ ಮಾಡಿದ್ದಲ್ಲದೆ, ಶ್ರೀ॥ ಗಳಾದ ಸಿ. ಕೆ. ವೆಂಕಟರಾಮಯ್ಯನವರು, ಜಿ. ಶಾಂತವೀರಪ್ಪನವರು, ಟಿ. ಎನ್. ಚೆನ್ನಪ್ಪನವರು, ಎಸ್. ರಾಮಚಂದ್ರರಾಯರು ಮತ್ತು ಅ. ನ. ಕೃಷ್ಣರಾಯರು ದಿವಂಗತರ ಕವಿತಾಶಕ್ತಿ, ವಿದ್ವತ್ತು ಮುಂತಾದ ವಿಚಾರವನ್ನು ಕುರಿತು ಭಾಷಣಗಳನ್ನು ಮಾಡಿದರು. ಅಲ್ಲದೆ ಶ್ರೀಮತಿ ಲಲಿತಮ್ಮನವರೂ, ಗಮಕ ವಿದ್ವಾನ್ ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್ಯರೂ ದಿವಂಗತರ ಕಾವ್ಯಭಾಗಗಳನ್ನು ವಾಚನಮಾಡಿದರು.

ಇದೇ ರೀತಿ ಇನ್ನೂ ಹಲವು ಕನ್ನಡ ವಿದ್ವನ್ಮಣಿಗಳ ಭಾವಚಿತ್ರಗಳು ಪರಿಷನ್ಮಂದಿರವನ್ನು ಅಲಂಕರಿಸಬೇಕಾಗಿದೆ. ಈ ಭಾಗದಲ್ಲಿ ಕನ್ನಡದ ಅಭಿಮಾನಿಗಳು ನೆರವಾಗಿ ಪರಿಷತ್ತಿನ ಆಶಯವನ್ನು ಸಫಲಗೊಳಿಸುವವರಾದಾರೆಂದು ನಿರೀಕ್ಷಿಸುತ್ತೇವೆ.

**ನಾಟಕ ಸಾರ್ವಭೌಮ ಶ್ರೀ॥ ಗುಬ್ಬಿ ವೀರಣ್ಣನವರಿಗೆ ಸತ್ಕಾರ**

ನಾಟಕ ಸಾರ್ವಭೌಮ, ವಿನೋದರತ್ನಾಕರ ಮುಂತಾದ ಬಿರುದುಗಳನ್ನು ಪಡೆದು ಕನ್ನಡದ ರಂಗಭೂಮಿಯನ್ನು ಬಹು ಉನ್ನತಸ್ಥಿತಿಗೆ ತಂದು ಪ್ರಖ್ಯಾತರಾಗಿರುವ ಶ್ರೀ॥ ಗುಬ್ಬಿ ವೀರಣ್ಣನವರಿಗೆ ಸನ್ಮಾನಮಾಡುವ ಉದ್ದೇಶದಿಂದ ಇದೇ ಡಿಸೆಂಬರ್ ೨೩ನೆಯ ತಾರೀಖು ಶುಕ್ರವಾರ ಸಾಯಂಕಾಲ ಶ್ರೀ॥ ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು ಪರಿಷನ್ಮಂದಿರದಲ್ಲಿ ಒಂದು ಸತ್ಕಾರ ಸಭೆಯನ್ನು ಏರ್ಪಡಿಸಿದ್ದರು. ಈ ಸಭೆಗೆ ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಶ್ರೀ॥ ಎಂ. ಶಾಮರಾಯರು ಅಧ್ಯಕ್ಷತೆ ವಹಿಸಿದ್ದುದಲ್ಲದೆ, ಶ್ರೀ॥ ಗಳಾದ ಬೆನಗಲ್ ರಾಮರಾಯರೂ, ಅ. ನ. ಕೃಷ್ಣರಾಯರೂ ಶ್ರೀ॥ ವೀರಣ್ಣನವರ ಅಭಿನಯಕೌಶಲ್ಯ, ಹೃದಯವೈಶಾಲ್ಯ ಮುಂತಾದ ಗುಣಗಳನ್ನು ಪ್ರಶಂಸಿಸಿ ಭಾಷಣಮಾಡಿದರು. ಧಾರವಾಡದ 'ಪ್ರೇಮ ಗ್ರಂಥಮಾಲೆ'ಯ ಸಂಪಾದಕರಾದ ಶ್ರೀ॥ ಶ್ರೀನಿವಾಸ ಕುಲಕರ್ಣಿಯವರು ಹಿಂದೀ ಕನ್ನಡ ಸಮಸ್ಯೆಗೆ ಸಂಬಂಧಪಟ್ಟ ಒಂದು ನಾಟಕವನ್ನು ಏಕಪಾತ್ರಾಭಿನಯದಿಂದ

ಪ್ರದರ್ಶಿಸಿದರು. ಅನಂತರ ಶ್ರೀ|| ವೀರಣ್ಣನವರು ತಮಗೆ ಮಾಡಿದ ಸತ್ಕಾರಕ್ಕಾಗಿ ವಂದನೆಗಳನ್ನು ಸಮರ್ಪಿಸುತ್ತಾ ಕಳೆದ ಐವತ್ತು ವರ್ಷಗಳಿಂದ ಕನ್ನಡ ರಂಗ ಭೂಮಿಯ ಬೆಳವಣಿಗೆಯ ವಿಚಾರವಾಗಿ ತಾವು ಕೈಗೊಂಡ ಸಾಹಸೋದ್ಯಮಗಳನ್ನು ಹೃದಯಂಗಮವಾಗಿ ಚಿತ್ರಿಸಿ ಭಾಷಣಮಾಡಿದರು.

**ಮೈಸೂರಿನ ಶ್ರೀಮದ್ಯುವರಾಜರವರ ಭಾಷಣ: ಮದರಾಸಿನ ಸಂಗೀತ ಸಮ್ಮೇಳನದಲ್ಲಿ**

ಸಂಗೀತಕಲೆಗೆ ಮೈಸೂರು ಸಂಸ್ಥಾನ ಮುಖ್ಯ ಆವಾಸಸ್ಥಾನವೆಂಬುದೂ, ಮೈಸೂರು ರಾಜಮನೆತನದವರು ಈ ಕಲೆಗೆ ಪ್ರಧಾನ ಆಶ್ರಯದಾತರೆಂಬುದೂ ನಿರ್ವಿವಾದವಾದ ವಿಷಯ. ಈ ವಿಷಯವನ್ನು ಮನವರಿಕೆಗೊಂಡು ಮದರಾಸಿನ ಸಂಗೀತ ಸಮ್ಮೇಳನದ ಅಧಿಕಾರಿಗಳು ಇದೇ ಡಿಸೆಂಬರ್ ೨೩ನೆಯ ತಾರೀಖು ಶುಕ್ರವಾರ ಸಾಯಂಕಾಲ ನಡೆದ ದ್ವಾದಶ ವಾರ್ಷಿಕ ಸಮ್ಮೇಳನಕ್ಕೆ ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರನ್ನು ಅಧ್ಯಕ್ಷರಾಗಿ ಚುನಾಯಿಸಿದ್ದರು. ಆ ಕಾಲದಲ್ಲಿ ಮಹಾಸ್ವಾಮಿಯವರು ತಮ್ಮ ಪಾಶ್ಚಾತ್ಯ ದೇಶ ಸಂಚಾರದ ಅನುಭವಗಳನ್ನೊಳಗೊಂಡ ಸ್ಫೂರ್ತಿದಾಯಕವಾದ ಭಾಷಣವನ್ನು ಅಪ್ಪಣೆ ಕೊಡಿಸಿದರು. ಅವರ ಭಾಷಣದ ಸಾರಾಂಶವನ್ನು ಈ ಕೆಳಗೆ ಕೊಟ್ಟಿದೆ:

"ಸಂಗೀತ ಜನಜೀವನದ ಒಂದು ಆನಂದ. ಆದಕಾರಣ ಗಾಯನಕಲೆಯಲ್ಲಿ ಹೊಸ ಮಾರ್ಗ, ಹೊಸ ವಿಷಯಗಳು ಬೇಕು. ಹಳೆಯ ಸಂಪ್ರದಾಯಗಳನ್ನು ಮಾರ್ಪಡಿಸಿ ಹೊಸ ವಿಷಯಗಳಮೇಲೆ ಕೃತಿಗಳನ್ನು ರಚಿಸಬೇಕು. ರಮ್ಯವಾಗಿರುವ ಪ್ರಕೃತಿ ಸೌಂದರ್ಯ ವನ್ನು ವರ್ಣಿಸಬೇಕು. ಗಿರಿಕಾನನಗಳ ಸೊಬಗು, ಜಲಪಾತಗಳ ಭವ್ಯವೈಭವದ ಸೊಗಸು, ಅಡವಿಗಳಲ್ಲಿ ನಲಿದಾಡುವ ಪ್ರಾಣಿಗಳ ಜೀವನ, ಗ್ರಾಮಾಂತರಗಳ ರಮಣೀಯತೆ, ಮುದ್ದು ಮಕ್ಕಳ ಅಕೃತ್ರಿಮವಾದ ನಲಿವು, ದೇಶವಾತ್ಸಲ್ಯ, ಸನ್ಮಿತ್ರರ ಸಹಜ ಸ್ನೇಹ, ಚರಿತ್ರ ಪ್ರಸಿದ್ಧ ರಾದ ಅಂಶಪುರುಷರ ಪ್ರಶಂಸೆ– ಇವೇ ಮೊದಲಾದ ಸೃಷ್ಟಿಯ ಮತ್ತು ಜನಜೀವನದ ಮಹತ್ವ ವಿಷಯಗಳನ್ನು ಸಂಗೀತ ಕೃತಿಗಳಲ್ಲಿ ರಚಿಸಬೇಕು. ಅಲ್ಲದೆ ಕಬೀರದಾಸ, ತುಕಾರಾಂ ಮೊದಲಾದ ಭಕ್ತಾಗ್ರಣಿಗಳು ಹಾಡಿ ಜನರನ್ನು ತಣಿಸಿರುವ ಜನಪದಸಾಹಿತ್ಯ ವನ್ನು ಶೋಧಿಸಿ ತೆಗೆದು ಅಭಿವೃದ್ಧಿಗೊಳಿಸಬೇಕು. ವಿಶ್ವಕಲೆಗಳಲ್ಲಿ ಭಾರತೀಯ ಸಂಗೀತ ಕಲೆಗೂ ಒಂದು ಗಣ್ಯವಾದ ಸ್ಥಾನವನ್ನು ಕಲ್ಪಿಸುವುದಕ್ಕೆ ನಿರಂತರವೂ ಪ್ರಯತ್ನಿಸಬೇಕು."

ಸಂಗೀತಕಲೆಗೆ ಆಶ್ರಯದಾತರಾದ ಶ್ರೀಮದ್ಯುವರಾಜರವರ ಮೇಲ್ಕಂಡ ಸಲಹೆಗಳನ್ನು ಕಾರ್ಯರೂಪಕ್ಕೆ ತರಲು ಆ ಕಲೆಯ ಅಭಿಮಾನಿಗಳಾದ ಸಮಸ್ತರೂ ಪ್ರಯತ್ನಪಡುವವರಾಗಲೆಂದು ಹಾರೈಸುತ್ತೇವೆ.



1642—38.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# ಸಂಪಾದಕ ಮಂಡಲಿ, ೧೯೩೪

ಶ್ರೀ॥ ಗಳಾದ (೧) ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಅಧ್ಯಕ್ಷರು), (೨) ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ., (೩) ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., (೪) ಅ. ನ. ಕೃಷ್ಣರಾಯರು, (೫) ಕೆ. ಜಿ. ಕುಂದಣ ಗಾರರು, ಎಂ.ಎ., (೬) ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ., (೭) ಸರ್ವದರ್ಶನತೀರ್ಥ ವಿದ್ವಾನ್ ವೈ. ನಾಗೇಶಶಾಸ್ತ್ರಿಗಳು, (೮) ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರು, (೯) ಆರ್. ಎಸ್. ಮುಗಳಿಯವರು, ಎಂ.ಎ., ಬಿ.ಟಿ., (೧೦) ವಿ. ಕೆ. ಗೋಕಾಕರು, ಎಂ.ಎ., (೧೧) ಎಸ್. ಎಸ್. ಮಾಳವಾಡರವರು, ಎಂ.ಎ., (೧೨) ಬಿ. ಎಸ್. ಕುಶಾಲಪ್ಪನವರು, ಬಿ.ಎ., ಬಿ.ಇಡಿ., (೧೩) ಡಿ. ಕೆ. ಭೀಮಸೇನರಾಯರು, ಎಂ.ಎ., (೧೪) ವಿ. ಜಿ. ಕುಲಕರ್ಣಿಯವರು, ಎಂ.ಎ., ಎಲ್‌ಎಲ್.ಬಿ., (೧೫) ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., (೧೬) ವಿ. ಬಿ. ನಾಯಕರು, ಎಂ.ಎ., ಎಲ್‌ಎಲ್.ಬಿ., (೧೭) ಡಿ. ಸಿ. ಸುಬ್ಬರಾಯಪ್ಪನವರು, ಬಿ.ಎ., ಬಿ.ಎಲ್. (ವ್ಯವಸ್ಥಾಪಕರು ಮತ್ತು ಪತ್ರಿಕಾ ಸಂಪಾದಕರು)

## ಪ್ರಾಂತೀಯ ಸಹಕಾರಿಗಳು

ಶ್ರೀ॥ ಗಳಾದ (೧) ವಿದ್ವಾನ್ ಎಚ್. ಚೆನ್ನಕೇಶವಯ್ಯಂಗಾರ್ಯರು, ಎಂ.ಓ.ಎಲ್., ಮದರಾಸು, (೨) ಆರ್. ಎಸ್. ಮುಗಳಿಯವರು, ಎಂ.ಎ., ಬಿ.ಟಿ., ಸಾಂಗಲಿ, (೩) ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರು, ಮಂಗಳೂರು, (೪) ಸರ್ವದರ್ಶನ ತೀರ್ಥ ವಿದ್ವಾನ್ ವೈ. ನಾಗೇಶಶಾಸ್ತ್ರಿಗಳು, ಬೆಳಗಾಂವಿ, (೫) ಕೆ. ಜಿ. ಕುಂದಣಗಾರರು, ಎಂ.ಎ., ಕೊಲ್ಲಾಪುರ, (೬) ಬಿ.ಎಸ್. ಕುಶಾಲಪ್ಪನವರು, ಬಿ.ಎ., ಬಿ.ಇಡಿ., ಮಡಿಕೇರಿ.

---

# ಪ್ರಬುದ್ಧ ಕರ್ಣಾಟಕ

## ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪತ್ರಿಕೆ

ವಿನಾಯಕನ ಹಬ್ಬ, ದೀಪಾವಳಿಯ ಹಬ್ಬ, ಸಂಕ್ರಾಂತಿಯ ಹಬ್ಬ, ಕಾಮನ ಹಬ್ಬ—ಈ ಹಬ್ಬಗಳ ಹೊತ್ತಿಗೆ 'ಪ್ರಬುದ್ಧ ಕರ್ಣಾಟಕ'ವು ವರ್ಷಕ್ಕೆ ನಾಲ್ಕುಸಲ ಹೊರಡುತ್ತದೆ. ಕವನ, ಕಥೆ, ಪ್ರಬಂಧ, ವಿಮರ್ಶೆಗಳನ್ನೂ ಚರಿತ್ರೆ, ವಿಜ್ಞಾನ ಶಾಸ್ತ್ರ, ಸಾಹಿತ್ಯ, ಕಲೆಗಳನ್ನು ಕುರಿತ ಲೇಖನಗಳನ್ನೂ ಪ್ರಕಟಿಸಿ, ನಮ್ಮ ಜನರಿಗೆ ಆಧುನಿಕ ಮತ್ತು ಪ್ರಾಚೀನ ಸಂಸ್ಕೃತಿಗಳ ಪರಿಚಯವನ್ನು ಮಾಡಿಕೊಡುವುದೇ ಈ ಪತ್ರಿಕೆಯ ಉದ್ದೇಶ.

**ವಾರ್ಷಿಕ ಚಂದಾ (ಅಂಚೆ ವೆಚ್ಚ ಸೇರಿ)**

| | | | |
|---|---|---|---|
| ಚಂದಾದಾರರಿಗೆ | .. | .. | ರೂ. ೨-೦-೦ |
| ವಾಚನಾಲಯ ಮುಂತಾದ ಸಂಸ್ಥೆಗಳಿಗೆ | | .. | ,, ೩-೦-೦ |
| ವಿದ್ಯಾರ್ಥಿಗಳಿಗೆ ಮಾತ್ರ | .. | .. | ,, ೧-೮-೦ |

ಚಂದಾ ಹಣವನ್ನು ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರರವರಿಗೆ ಪಾವತಿಮಾಡಬೇಕು. ಪತ್ರ ವ್ಯವಹಾರವನ್ನೆಲ್ಲ ಈ ಕೆಳಗಿನ ವಿಳಾಸದೊಂದಿಗೆ ಮಾಡಬೇಕು.—

**ಸಂಪಾದಕ**, 'ಪ್ರಬುದ್ಧ ಕರ್ಣಾಟಕ,' ಯೂನಿವರ್ಸಿಟಿ ಲೈಬ್ರೆರಿ, ಮೈಸೂರು.

# ಕರ್ನಾಟಕ ಸಾಹಿತ್ಯ ಪರಿಷತ್ತು

---

## ಮಹಾಪೋಷಕರು

ಮೈಸೂರು ಸಂಸ್ಥಾನದ ಶ್ರೀಮನ್ ಮಹಾರಾಜರವರಾದ
ಕರ್ನಾಟಕ ಸಿಂಹಾಸನಾಧೀಶ್ವರ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್
ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಸ್ವಾಮಿಗಳವರು

---

## ಕಾರ್ಯನಿರ್ವಾಹಕ ಮಂಡಲಿ, ೧೯೩೮

### ಪೋಷಕರು ಮತ್ತು ಅಧ್ಯಕ್ಷರು

ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾದ
ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ.
ಮಹಾಸ್ವಾಮಿಯವರು

### ಉಪಾಧ್ಯಕ್ಷರು

ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.

### ಗೌರವ ಕಾರ್ಯದರ್ಶಿಯವರು

ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್.ಎಲ್.ಬಿ.

### ಗೌರವ ಕೋಶಾಧ್ಯಕ್ಷರು

ಶ್ರೀಮಾನ್ ವಿ. ಸೀತಾರಾಮಯ್ಯನವರು, ಎಂ.ಎ.

### ಸದಸ್ಯರುಗಳು

**ಮೈಸೂರು ಪ್ರಾಂತ.**— ಶ್ರೀ॥ ಗಳಾದ (೧) ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., (೨) ಎಸ್. ವಿ. ರಂಗಣ್ಣನವರು, ಎಂ.ಎ., (೩) ಟಿ. ಎನ್. ಶ್ರೀಕಂಠಯ್ಯನವರು, ಎಂ.ಎ., (೪) ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., (೫) ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ.- (೬) ಡಿ. ಸಿ. ಸುಬ್ಬರಾಯಪ್ಪನವರು, ಬಿ.ಎ., ಬಿ.ಎಲ್., (೭) ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿಗಳು, (೮) ಶ್ರೀಮತಿ ಆರ್. ಕಲ್ಯಾಣಮ್ಮನವರು, (೯) ಅ. ನ. ಕೃಷ್ಣರಾಯರು, (೧೦) ಪಿ. ಶ್ರೀನಿವಾಸರಾಯರು, ಎಂ.ಎಸ್‌ಸಿ., (೧೧) ಎಂ. ನರಸಿಂಹಮೂರ್ತಿಗಳು, ಬಿ.ಎ., (೧೨) ಟಿ. ಟಿ. ಶರ್ಮರವರು, (೧೩) ಡಾ॥ ಎಂ. ಎ. ಸಂಪತ್ಕುಮಾರನ್, ಎಂ.ಎ., ಪಿಎಚ್.ಡಿ. ಅವರು (ಅರಮನೆಯ ಪರವಾಗಿ).

**ಬೊಂಬಾಯಿ ಪ್ರಾಂತ.**—ಶ್ರೀ॥ ಗಳಾದ (೧) ಡಿ. ಆರ್. ಬೇಂದ್ರೆಯವರು, ಎಂ.ಎ., (೨) ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು, (೩) ಸಾಲಿ ರಾಮಚಂದ್ರರಾಯರು, (೪) ಎಸ್. ಎಸ್. ಮಾಳವಾಡರವರು, ಎಂ.ಎ., (೫) ವಿ. ಬಿ. ನಾಯಕರವರು, ಎಂ.ಎ., ಎಲ್‌ಎಲ್.ಬಿ., (೬) ಟಿ. ಡಿ. ಶಿವಲಿಂಗಯ್ಯನವರು, (೭) ಆರ್. ಬಿ. ಪೋತ್ದಾರರವರು, ಬಿ.ಎ., (೮) ಆರ್. ವಿ. ಜಾಗಿರದಾರರವರು, ಎಂ.ಎ. (ಲಂಡನ್), (೯) ಶ್ರೀ ಬಸವಲಿಂಗಸ್ವಾಮಿಗಳು.

**ಮದರಾಸು ಪ್ರಾಂತ.**— ಶ್ರೀ॥ ಗಳಾದ (೧) ವೈ. ಮಹಾಬಲೇಶ್ವರಪ್ಪನವರು, (೨) ವಿದ್ವಾನ್ ಕೆ. ಶಂಕರಭಟ್ಟರು, (೩) ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ.

**ಹೈದರಾಬಾದು ಪ್ರಾಂತ.**— ಶ್ರೀ॥ ಗಳಾದ (೧) ಡಿ. ಕೆ. ಭೀಮಸೇನರಾಯರು, ಎಂ.ಎ., (೨) ರೆವರೆಂಡ್ ನಾನಪ್ಪ ದೇಸಾಯಿಯವರು.

**ಉತ್ತರ ಕರ್ನಾಟಕ ಪ್ರಾಂತ.**— ಶ್ರೀ॥ ಗಳಾದ (೧) ಕೆ. ಜಿ. ಕುಂದಣಗಾರರು, ಎಂ.ಎ., (೨) ಆರ್. ಎಸ್. ಮುಗಳಿಯವರು, ಎಂ.ಎ., ಬಿ.ಟಿ.

**ಕೊಡಗು ಪ್ರಾಂತ.**—(೧) ಶ್ರೀ॥ ಬಿ. ಎಸ್. ಕುಶಾಲಪ್ಪನವರು, ಬಿ.ಎ., ಬಿ.ಇಡಿ.

---

1642—38.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

